ಯಾರ ಪ್ರೇರಣೆ ಇಲ್ಲದಿದ್ದರೆ
ಅಲಿಮಾರಿ ಪ್ರವಾದಿಯ ಸೃಷ್ಟಿ
ಅಸಂಭವವಾಗುತ್ತಿತ್ತೋ ಆ ಹಿಂದೀ
ಪ್ರಕಾಶನ ಕ್ಷೇತ್ರದ ಭೀಷ್ಮಪಿತಾಮಹರಾದ
ದಿವಂಗತ ಶ್ರೀ ನಾಥೂರಾಮ್ ಪ್ರೇಮಿ ಇವರಿಗೆ

# ಮುನ್ನುಡಿ

ಸೋಲರಿಯದ ಕಥಾಶಿಲ್ಪಿ ಶರತ್‌ಚಂದ್ರರ ಜೀವನ ಚರಿತ್ರೆಯನ್ನು ನಾನು ಒಂದಲ್ಲ ಒಂದು ದಿನ ಬರೆಯಬೇಕಾಗಿ ಬರುತ್ತದೆಂದು ಎಂದೂ ಯೋಚಿಸಿಯೂ ಇರಲಿಲ್ಲ. ಇದು ನನ್ನ ವಿಷಯವೇ ಆಗಿರಲಿಲ್ಲ. ಆದರೆ, ಅನಿರೀಕ್ಷಿತವಾಗಿ ಇಂಥ ಒಂದು ಕ್ಷೇತ್ರದಿಂದ ನನಗೆ ಸೂಚನೆ ಬಂದಾಗ, ಅನಿವಾರ್ಯವಾಗಿ ನಾನು ಅದನ್ನು ಒಪ್ಪಿಕೊಳ್ಳಬೇಕಾಗಿ ಬಂತು. ಮುಂಬಯಿಯ 'ಹಿಂದೀ ಗ್ರಂಥ ರತ್ನಾಕರ' ಸಂಸ್ಥೆಯ ಒಡೆಯರಾದ ಶ್ರೀ ನಾಥೂರಾಮ್ ಪ್ರೇಮಿ ಅವರು ಶರತ್ ಸಾಹಿತ್ಯದ ಅಧಿಕೃತ ಅನುವಾದವನ್ನು ಹಿಂದಿಯಲ್ಲಿ ಪ್ರಕಟಿಸಿದ್ದಾರೆ. ಈ ಮಾಲೆಯಲ್ಲಿ ಶರತ್‌ಚಂದ್ರರ ಒಂದು ಜೀವನ ಚರಿತ್ರೆಯೂ ಪ್ರಕಟಿತವಾಗಬೇಕೆಂಬುದು ಅವರ ಇಚ್ಛೆಯಾಗಿತ್ತು. ಅವರು ಯಶಪಾಲ್ ಜೈನ್ ಅವರೊಂದಿಗೆ ಈ ವಿಷಯದ ಬಗ್ಗೆ ಚರ್ಚಿಸಿದ್ದರು. ಲೇಖಕನ ರೂಪದಲ್ಲಿ ನನ್ನ ಹೆಸರು ಅದು ಹೇಗೆ ಮುಂದೆ ಬಂತೋ ನನಗೆ ತಿಳಿಯದು. ಯಶಪಾಲ್ ಅವರ ಒತ್ತಾಯದ ಮೇಲೆ ಒಮ್ಮೆಗೇ ಈ ಕೆಲಸಕ್ಕೆ ಕೈ ಹಚ್ಚಿದೆ ಎಂದೇನೂ ಅಲ್ಲ, ಆದರೆ ಕೊನೆಗೆ ಇದಕ್ಕೆ ಕೈ ಹಚ್ಚಲೇಬೇಕಾಯಿತು ಎಂಬುದು ನಿಜ. ಶರತ್‌ಚಂದ್ರರ ಬಗೆಗಿನ ನನ್ನ ಮೆಚ್ಚಿಕೆಯೇ ಇದಕ್ಕೆ ಮುಖ್ಯ ಕಾರಣವಾಗಿತ್ತು. ಅವರ ಸಾಹಿತ್ಯವನ್ನು ಓದಿದಾಗ, ಅವರ ಬಾಳಿನ ಬಗ್ಗೆ - ಅದರಲ್ಲಿಯೂ ಶ್ರೀಕಾಂತ ಮತ್ತು ರಾಜಲಕ್ಷ್ಮಿಯರ ಬಗ್ಗೆ - ಹೆಚ್ಚಿನ ವಿವರಗಳನ್ನು ಅರಿಯಬೇಕೆಂಬ ಆಸೆ ತೀವ್ರವಾಗಿ ಪರಿಣಮಿಸಿತ್ತು. ಬಹುಶಃ ಆ ಇಚ್ಛೆ ಪೂರೈಸುವಂಥ ಅವಕಾಶ ಇದಾಗಿತ್ತು. ಬಂಗಾಳಿ ಸಾಹಿತ್ಯದಲ್ಲಿ ಕೆಲವಾದರೂ ಅಧಿಕೃತ ಜೀವನ ಚರಿತ್ರೆಗಳು ಖಂಡಿತವಾಗಿಯೂ ಪ್ರಕಟವಾಗಿರಬೇಕೆಂದು ಯೋಚಿಸಿದ್ದೆ. ಲೆಕ್ಕ ವಿಲ್ಲದಷ್ಟು ಲೇಖನಗಳು ಮತ್ತು ಸಂಸ್ಮರಣಗಳು ಇದ್ದಿರಬೇಕೆಂದೂ ಭಾವಿಸಿದ್ದೆ. ಅಲ್ಲಿಂದಲೇ ಸಾಮಗ್ರಿಯನ್ನೂ ಸಂಗ್ರಹಿಸಿ ಈ ಪುಟ್ಟ ಜೀವನ ಚರಿತ್ರೆಯನ್ನು ಬರೆಯಬಹುದು ಎಂದೂ ಆಲೋಚಿಸಿದ್ದೆ. ಆದರೆ ಹುಡುಕಿ ನೋಡಿದಾಗ ಅಧಿಕೃತವಾದ ಜೀವನ ಚರಿತ್ರೆಗಳಿರಲಿ, ನಿಜವಾದ ಅರ್ಥದಲ್ಲಿ ಜೀವನ ಚರಿತ್ರೆ ಎಂದು ಕರೆಯಬಹುದಾದಂಥ ಯಾವೊಂದು ಗ್ರಂಥವೂ ಬಂಗಾಳಿ ಭಾಷೆಯಲ್ಲಿ ಇಲ್ಲವೆಂಬುದು ಗೊತ್ತಾಯಿತು. ಅವರ ಬಾಳಿನ ಬಗೆಗಿನ ಕಲ್ಪಿತ ಕಥೆಗಳಿಗೇ ಜೀವನ ಚರಿತ್ರೆಯ ರೂಪವನ್ನು ಕೊಟ್ಟಿರುವಂಥ ಅನೇಕ ಪುಸ್ತಕಗಳೇನೋ ಹೊರ ಬಂದಿದ್ದುವು. ಆದರೆ, ಅವುಗಳಲ್ಲಿ ಶರತ್‌ಚಂದ್ರರ ನಿಜವಾದ ರೂಪ ಹೊರಬರುವುದರಲ್ಲಿ, ಅದು ಮತ್ತಷ್ಟು ಜಟಿಲವಾಗಿಬಿಟ್ಟದೆ.

ಇತ್ತ ಅಲ್ಲಿ-ಅಲ್ಲಿ ಅನ್ವೇಷಣೆ ಮಾಡತೊಡಗಿದೆ. ಮುಂದುವರಿದಂತೆಲ್ಲಾ ಗೋಜಲುಗಳಲ್ಲಿ ಸಿಕ್ಕಿಕೊಳ್ಳುತ್ತಲೇ ಹೋದೆ. ಹುಡುಕಿ-ಹುಡುಕಿ ಅವರ

ಸಮಕಾಲೀನರಾಗಿದ್ದ ವ್ಯಕ್ತಿಗಳನ್ನು ಭೇಟಿ ಮಾಡಿದೆ. ಬಿಹಾರ, ಬಂಗಾಳ, ಬರ್ಮಾ - ಎಲ್ಲ ಜಾಗಗಳಿಗೂ ಹೋಗಿಬಂದೆ. ಆದರೆ ಎಲ್ಲಿಯೂ ಉತ್ಸಾಹವನ್ನು ಮೂಡಿಸುವಂಥ ಸ್ಥಿತಿ ಕಣ್ಣಿಗೆ ಬೀಳಲಿಲ್ಲ.

ಬಹುಮಟ್ಟಿಗೆ ಎಲ್ಲ ಗೆಳೆಯರೂ, "ಶರತ್‌ಚಂದ್ರರ ಜೀವನ ಚರಿತ್ರೆಯನ್ನು ನೀವು ಬರೆಯಲಾರಿರಿ. ಶರತ್‌ಚಂದ್ರರ ಜೀವನ ಚರಿತ್ರೆಯನ್ನು ಬರೆಯುವುದು ಅಸಾಧ್ಯ ಎಂದು ನಿಮ್ಮ ಮುನ್ನುಡಿಯಲ್ಲಿ ಹೇಳಿಬಿಡಿ" ಎಂದರು.

"ಹೋಗಲಿ ಬಿಡಪ್ಪ, ಓದುಗರಿಗೆ ನೀವು ಕೊಡಬಹುದಾಗಿರುವಂಥದೇನು ತಾನೆ ಅವರ ಬಾಳಿನಲ್ಲಿತ್ತು? ಶುದ್ಧಾಂಗವಾಗಿ ಸ್ವಚ್ಛಂದವಾಗಿದ್ದಂಥ ವ್ಯಕ್ತಿಯ ಬಾಳು ಯಾರಿಗಾದರೂ ಅನುಕರಣೀಯವಾಗುತ್ತದೆಯೆ ?" ಎಂದು ಹೇಳಿದಂಥ ವ್ಯಕ್ತಿಗಳೂ ಇದ್ದರು.

"ಅವರ ಬಗ್ಗೆ ನಮಗೆ ತಿಳಿದಿರುವಂಥದು ನಮ್ಮಲ್ಲಿಯೇ ಇರಲಿ. ಅದನ್ನು ತಿಳಿದುಕೊಂಡು ಇತರರಿಗೆ ಆಗಬೇಕಾದುದೇಸಿದೆ? ಇರಲಿ ಬಿಡಪ್ಪ, ಅದರಿಂದ ಏನಾದೀತು ?" ಎಂದವರೂ ಇದ್ದರು.

ಒಬ್ಬರಂತೂ ತುಂಬ ಕೋಪಾವಿಷ್ಟರಾಗಿಬಿಟ್ಟಿದ್ದರು. ಪರಿದ ಧ್ವನಿಯಲ್ಲಿ "ಇದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಿ. ಅವರ ಬಗ್ಗೆ ನಾನು ಏನೂ ಹೇಳುವುದಿಲ್ಲ" ಎಂದಿದ್ದರು. ಮತ್ತೊಬ್ಬ ವ್ಯಕ್ತಿಯ ತಿರಸ್ಕಾರಕ್ಕೆ ಮೇರೆಯೇ ಇರಲಿಲ್ಲ. ಗಾಂಧೀಜಿ ಮತ್ತು ಶರತ್‌ಚಂದ್ರರನ್ನು ಕುರಿತು ನಾನೊಂದು ಲೇಖನವನ್ನು ಬರೆದಿದ್ದೆ. ಅದನ್ನೇ ಎತ್ತಿಕೊಂಡು ಅವರು ಹೀಗೆಂದಿದ್ದರು "ಛೀ ನೀವು ಆ ದುಷ್ಟನನ್ನು ಗಾಂಧೀಜಿಯವರೊಂದಿಗೆ ಹೋಲಿಸಿಬಿಟ್ಟಿದ್ದೀರಲ್ಲ!"

ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದ ವ್ಯಕ್ತಿಯೊಬ್ಬರು ಮುಗುಳ್ನಗುತ್ತ ಹೀಗೆಂದಿದ್ದರು: "ಏಕೆ ಅಷ್ಟೊಂದು ಒದ್ದಾಡುತ್ತೀರಿ? ನಾಲ್ಕಾರು ಗೂಂಡಾಗಳ ಬದುಕನ್ನು ನೋಡಿಬಿಟ್ಟರೆ, ಶರತ್‌ಚಂದ್ರರ ಜೀವನ ಚರಿತ್ರೆ ಸಿದ್ಧಪಡಿಸಿ ಬಿಡಬಹುದು."

ಈ ಬಗೆಯ ಪ್ರತಿಕ್ರಿಯೆಗಳಿಗೆ ಕೊನೆ ಎಂಬುದೇ ಇರಲಿಲ್ಲ. ಆದರೆ, ಇವು ನನ್ನ ಹಾದಿಯಿಂದ ನನ್ನನ್ನು ಹಿಮ್ಮೆಟ್ಟುವಂತೆ ಮಾಡುವುದಕ್ಕೆ ಬದಲಾಗಿ, ಈ ಸವಾಲನ್ನು ಅಂಗೀಕರಿಸಲೇಬೇಕೆಂಬ ಪ್ರೇರಣೆಯನ್ನು ನೀಡುತ್ತಿದ್ದುವು. 1959ರಲ್ಲಿ ನಾನು ನನ್ನ ಈ ಯಾತ್ರೆಯನ್ನು ಆರಂಭಿಸಿದ್ದೆ. ಈಗ 1973.'ಅಲೆಮಾರಿ ಪ್ರವಾದಿ'ಯನ್ನು ಬರೆದು ಮುಗಿಸಲು ನನಗೆ ಹದಿನಾಲ್ಕು ವರ್ಷಗಳೇ ಹಿಡಿದಿವೆ. ನಾನು ಲೇಖನಿಯಿಂದಲೇ ಬದುಕುವ ವ್ಯಕ್ತಿಯಾಗಿರುವುದರಿಂದ ಕಾಲ ಮತ್ತು ಹಣ - ಇವೆರಡೂ ನನ್ನ ಪಾಲಿಗೆ 'ಅರ್ಥ'ಪೂರ್ಣ ಸಂಗತಿಗಳಾಗಿದ್ದುವು. ಆದರೆ, ಮುಂದುವರಿದಂತೆಲ್ಲ ನನಗೆ ಈ ಕೆಲಸದಲ್ಲಿ ಆಸಕ್ತಿ ಮೂಡತೊಡಗಿತು. ನಾನು ಮಾಡಿರುವುದನ್ನು ಪೂರ್ಣಶ್ರದ್ಧೆಯಿಂದ ಮಾಡಿದ್ದೇನೆ ಎಂದು ಇಂದು ನಾನು ಅಧಿಕೃತವಾಗಿ ಹೇಳಬಲ್ಲೆ. ಈ ಕೆಲಸ ಮಾಡುವುದರಲ್ಲಿ ನನಗೆ ತುಂಬ ಆನಂದವೂ ಲಭಿಸಿದೆ. ಈ ಶ್ರದ್ಧೆ ಮತ್ತು ಈ ಆನಂದ-ಇವೇ ನಿಜವಾದ ಅರ್ಥದಲ್ಲಿ ನನಗೆ ದೊರೆತಿರುವ ಸಂಭಾವನೆ.

ನನಗಿಂತಲೂ ಹಿಂದೆ ಬಂಗಾಳದ ಒಂದಿಬ್ಬರು ಗೆಳೆಯರು ಈ ಕ್ಷೇತ್ರದಲ್ಲಿ ಕೆಲಸ

ಮಾಡಿದ್ದಾರೆ. ಅದರಲ್ಲಿ ಅತ್ಯಂತ ಪ್ರಾಮಾಣಿಕವಾದ ಕೆಲಸ ಗೋಪಾಲಚಂದ್ರರಾಯ್ ಅವರದು. ತುಂಬ ಶ್ರಮವಹಿಸಿ ಅವರು ಶರತ್‌ಚಂದ್ರರ ಜೀವನವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಅಗತ್ಯವಾದ ಸಾಮಗ್ರಿಯನ್ನು ಕಲೆಹಾಕುವ ಸ್ತುತ್ಯಕಾರ್ಯವನ್ನು ಮಾಡಿದ್ದಾರೆ. ನಾನು ಮೊದಲ ಹಂತದ ಕೆಲಸವನ್ನು, 1965ರ ಹೊತ್ತಿಗೆ ಮುಗಿಸಿದ್ದೆ. ಆಗತಾನೇ ಅವರು ಬರೆದ ಗ್ರಂಥ ಸರಣಿಯ ಮೊದಲ ಭಾಗ ಪ್ರಕಟವಾಗಿತ್ತು. ಇದರಲ್ಲಿ ಶರತ್‌ಚಂದ್ರರ ಜೀವನ ಚರಿತ್ರೆ ಹಾಗೂ ಅದಕ್ಕೆ ಸಂಬಂಧಿಸಿದ ಸ್ವಲ್ಪ ಹೆಚ್ಚಿನ ಸಾಮಗ್ರಿ ಇದೆ. ಅವರ ಕೆಲಸದೊಂದಿಗೆ ನನ್ನ ಕೆಲಸವನ್ನು ತೂಗಿನೋಡುವ ಕೆಲಸಕ್ಕೆ ನಾನು ಕೈಹಾಕಬಯಸುವುದಿಲ್ಲ. ನನಗಿಂತಲೂ ಬಹಳ ಹಿಂದಿನಿಂದಲೇ ಅವರು ಈ ಬಗ್ಗೆ ಕೆಲಸ ಮಾಡುತ್ತಿದ್ದರು. ನಮ್ಮಿಬ್ಬರು ಸಾಮರ್ಥ್ಯ ಮತ್ತು ದೃಷ್ಟಿಗಳಲ್ಲಿ ತುಂಬ ಅಂತರವಿದೆ.

ಅವರು ಬಂಗಾಳಿಗಳು ಹಾಗೂ ಅವರಿಗೆ ಶರತ್‌ಚಂದ್ರರ ಸಂಪರ್ಕವೂ ದೊರೆತಿತ್ತು. ಇದಕ್ಕೆ ತದ್ವಿರುದ್ಧವಾಗಿ ನಾನು ಬಂಗಾಳಿಯೂ ಅಲ್ಲ; ಶರತ್‌ಚಂದ್ರರನ್ನು ಕಣ್ಣಾರೆ ಕಾಣುವ ಸೌಭಾಗ್ಯವೂ ನನಗೆ ದೊರೆತಿರಲಿಲ್ಲ. ಬಂಗಾಳಿ ಭಾಷೆಯೂ ನನಗೆ ಚೆನ್ನಾಗಿ ಬರುವುದಿಲ್ಲ. ಆದ್ದರಿಂದ ನಾನು ಭೇಟಿ ಮಾಡಿದ ವ್ಯಕ್ತಿಗಳಲ್ಲಿ ಹೆಚ್ಚಿನವರಿಗೆ ಹೊರಗಿನ ಒಬ್ಬ ವ್ಯಕ್ತಿ ಶರತ್‌ಚಂದ್ರರ ಜೀವನ ಚರಿತ್ರೆಯ ಬಗ್ಗೆ ಇಷ್ಟೊಂದು ಒದ್ದಾಡುತ್ತಿರುವುದು ಆಶ್ಚರ್ಯವಾಗಿ ಕಂಡಿದೆ.

ಈ ಸಂಗತಿ ಅವರ ಮೇಲೆ ಪ್ರಭಾವ ಬೀರಿತು ಹಾಗೂ ಅವರೆಲ್ಲ ತುಂಬ ಪ್ರಾಮಾಣಿಕವಾಗಿ ನನಗೆ ನೆರವು ನೀಡಿದ್ದಾರೆ. ಕೆಲವರು ಉಪೇಕ್ಷೆಯ ದೃಷ್ಟಿಯಿಂದಲೂ ನೋಡಿದರು. ಆದರೆ, ಇಂಥವರ ಸಂಖ್ಯೆ ಅಷ್ಟು ಹೆಚ್ಚಾಗಿ ಇರಲಿಲ್ಲ. ಅದರಲ್ಲಿಯೂ ನನ್ನ ಅನ್ವೇಷಣೆಯು ಮೊದಲ ಸುತ್ತಿನಲ್ಲಿ ಮಾತ್ರವೇ ಹೀಗಾಯಿತು. ಮುಂದೆ ಕಾಲ ಕಳೆಯುತ್ತ ಬಂದಂತೆ, ನನ್ನ ವಿಷಯದಲ್ಲಿ ಅವರ ವಿಶ್ವಾಸವೂ ಹೆಚ್ಚುತ್ತ ನಡೆಯಿತು. ಹಾಗಾಗದೆ ಇದ್ದರೆ, ಈ ಕೆಲಸ ಪೂರೈಸುವುದು ಸಾಧ್ಯವಿತ್ತೆ?

ಇಷ್ಟಾಗಿಯೂ ಅಡಚಣೆಗಳಿಗೆ ಕೊನೆ ಎಂಬುದೇ ಇರಲಿಲ್ಲ. ಕೆಲವು ಗೆಳೆಯರು ಸಾಕಷ್ಟು ವಿಚಾರಗಳನ್ನು ತಿಳಿಸಿದರೂ, ಅವನ್ನು ಪ್ರಮಾಣೀಕರಿಸಲು ಒಪ್ಪಲಿಲ್ಲ. "ನಮ್ಮ ಹೆಸರನ್ನು ಉಲ್ಲೇಖಿಸದೆ, ನಿಮಗೆ ಬೇಕಾದ ರೂಪದಲ್ಲಿ ಇದನ್ನು ಬಳಸಿಕೊಳ್ಳಬಹುದು" ಎಂದು ಹೇಳಿದರು.

ಶರತ್‌ಚಂದ್ರರ ಬಾಯಿಂದ ಅಂತಿಂಥ ಮಾತುಗಳನ್ನೇನಾದರೂ ಹೇಳಿಸಿದರೆ ಅಥವಾ ಮನಸ್ಸಿಗೆ ಬಂದದ್ದೇನಾದರೂ ಬರೆದುಬಿಟ್ಟರೆ, ಅದರ ಪರಿಣಾಮ ಕೆಟ್ಟದ್ದೂ ಆಗಬಹುದು. ಯಾರೂ ನನ್ನನ್ನು ಕ್ಷಮಿಸುವುದಿಲ್ಲ ಎಂದು ನನಗೆ ಎಚ್ಚರಿಕೆ ನೀಡಿದಂಥ ಗೆಳೆಯರೂ ಇದ್ದರು. ತಾವೇ ಸ್ವತಃ ಶರತ್‌ಚಂದ್ರರ ಜೀವನ ಚರಿತ್ರೆಯನ್ನು ಬರೆಯಬೇಕೆಂದುಕೊಂಡಿದ್ದಂಥ ಗೆಳೆಯರೂ ಇದ್ದರು. ಆದರೆ ಅವರಲ್ಲಿ ಹೆಚ್ಚಿನವರಾರೂ ಈ ಕೆಲಸವನ್ನು ಮಾಡದೆ ಹೋದದ್ದು ವಿಷಾದದ ಸಂಗತಿ. ಇಷ್ಟಾಗಿಯೂ, ಹಾಗೆ ಮಾಡಿದ ಕೆಲವರಿಂದ ಒಂದಲ್ಲ ಒಂದು ರೂಪದಲ್ಲಿ ಒಂದಿಷ್ಟು ಪ್ರಾಮಾಣಿಕ ಸಾಮಗ್ರಿಯಾದರೂ ಹೊರಬಂದಿತು. ಅದರಿಂದ ನನಗೂ ಲಾಭವಾಯಿತು.

ಅವರನ್ನು ನಿಜವಾಗಿಯೂ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿದ್ದಂಥ ಅವರ ಕೆಲವು ಸಮಕಾಲೀನವರನ್ನೂ ನಾನು ಭೇಟಿ ಮಾಡಿದೆ. ರಂಗೂನಿನ ಒಬ್ಬ ವ್ಯಕ್ತಿ ನನ್ನೊಡನೆ ಹೀಗೆಂದು ಹೇಳಿದ್ದರು: "ಅವರು ಒಬ್ಬ ಹೆಂಗಸಿನೊಂದಿಗೆ ಇರುತ್ತಿದ್ದರು. ಅವರ ಹತ್ತಿರ ತುಂಬ ಕಡಿಮೆ ಜನ ಹೋಗುತ್ತಿದ್ದರು. ನಾನು ಅವರ ನೆರಮನೆಯವನಾಗಿದ್ದೆ. ಆದರೆ, ನಾನೆಂದೂ ಅವರ ಕೊಠಡಿಯಲ್ಲಿ ಕಾಲಿರಿಸಿರಲಿಲ್ಲ. ಅವರು ಅಫೀಮು ಸೇವಿಸುತ್ತಿದ್ದರು ಹಾಗೂ ಮದ್ಯಪಾನ ಮಾಡುತ್ತಿದ್ದರು. ಅವರು ಒಂದು ಬಗೆಯ ಕೀಳು ಜೀವನ ನಡೆಸುತ್ತಿದ್ದರು. ನಾನು ಯಾವಾಗಲೂ ಅವರಿಂದ ತಪ್ಪಿಸಿಕೊಳ್ಳುತ್ತಿದ್ದೆ."

ಈ ಪ್ರತಿಕ್ರಿಯೆ ಈ ಒಬ್ಬ ವ್ಯಕ್ತಿಯದು ಮಾತ್ರವಾಗಿರಲಿಲ್ಲ. ಅನೇಕರು ಅವರ ಬಗ್ಗೆ ಇದೇ ರೀತಿ ಯೋಚಿಸುತ್ತಿದ್ದರು ಹಾಗೂ ಅವರ ಬಗ್ಗೆ ಇದೇ ತಿಳಿವಳಿಕೆಯನ್ನಿರಿಸಿಕೊಂಡಿದ್ದರು. ಆದರೆ, ಅವರ ಬಳಿಗೆ ಹೋಗಿ, ಅವರ ನಿಜವಾದ ಸ್ವರೂಪವನ್ನು ಕಂಡುಕೊಂಡಿದ್ದಂಥ ವ್ಯಕ್ತಿಗಳೂ ಇದ್ದರು. ಅವರ ಮೂಲಕವಾಗಿಯೇ ಒಂದು ಹಂತದವರೆಗೂ ಅವರನ್ನು ಅರಿತುಕೊಳ್ಳುವುದು ನನಗೆ ಸಾಧ್ಯವಾಯಿತು. ಊಹಾಪೋಹಗಳು ಮತ್ತು ಕಿಂವದಂತಿಗಳಿಂದ ತುಂಬಿದ್ದ ಅವರ ಜೀವನವನ್ನು ಸಂಪೂರ್ಣವಾಗಿ ಅರಿತುಕೊಳ್ಳುವುದು ಅಸಂಭವವೆಂದೇ ತೋರುತ್ತದೆ. ಆದರೆ, ಅವರ ಹತ್ತಿರ ಇದ್ದವರು ನಿಜವಾಗಿಯೂ ಅವರನ್ನು ಅರ್ಥಮಾಡಿಕೊಂಡಿದ್ದರೆ ? ಅವರಿಗೆ ತುಂಬ ಹತ್ತಿರವಾಗಿದ್ದಂಥ ಅನೇಕ ವ್ಯಕ್ತಿಗಳು ಅವರ ಬಗ್ಗೆ ಸಂಪೂರ್ಣವಾಗಿ ಪರಸ್ಪರ ವಿರುದ್ಧವಾದಂಥ ಸಂಗತಿಗಳನ್ನು ತಿಳಿಸಿದ್ದಾರೆಂಬುದೂ ನನ್ನ ಅನುಭವಕ್ಕೆ ಬಂದಿದೆ. ಸ್ವತಃ ಅವರ ಮಾವಂದಿರೂ, ಬಾಲ್ಯದ ಗೆಳೆಯರೂ ಆಗಿದ್ದ ಸುರೇಂದ್ರನಾಥ ಗಂಗೋಪಾಧ್ಯಾಯರು ಅವರ ಬಗ್ಗೆ ಬರೆದಿರುವ ಎರಡು ಪುಸ್ತಕಗಳಲ್ಲಿ ಪರಸ್ಪರ ವಿರುದ್ಧವಾಗಿರುವಂಥ ಸಂಗತಿಗಳಿವೆ. ಶರತ್‌ಚಂದ್ರ ಎಂಬ ಹೆಸರಿನ ವ್ಯಕ್ತಿ ಈ ದೇಶದಲ್ಲಿ ಹುಟ್ಟಿಯೇ ಇಲ್ಲ, ಯಾರೋ ಕೆಲವು ಅಜ್ಞಾತ ಲೇಖಕರು ಸ್ವತಃ ಕೆಲವು ಕಾದಂಬರಿಗಳನ್ನು ಬರೆದು, ಅವುಗಳನ್ನು ಶರತ್‌ಚಂದ್ರ ಎಂಬ ಹೆಸರಿನಲ್ಲಿ ಹೊರತಂದಿದ್ದಾರೆ ಎಂದು ಯಾರಾದರೂ ನನಗೆ ಸವಾಲು ಹಾಕಬಹುದೆಂದು ಆಗಾಗ್ಗೆ ಅನ್ನಿಸುತ್ತಿತ್ತು.

ವ್ಯಕ್ತಿಯಾಗಿ ಶರತ್‌ಚಂದ್ರರ ಸ್ವಭಾವ ತುಂಬ ಜಟಿಲವಾಗಿತ್ತು ಎಂಬ ಭಾವನೆ ನಿಜವೇ. ಹೌದು. ಸಾಮಾನ್ಯ ಮಾತುಕತೆಗಳಲ್ಲಿ ಅವರು ತಮ್ಮ ಮನೋಭಾವಗಳನ್ನು ಅಡಗಿಸಿಡುವ ಪ್ರಯತ್ನ ಮಾಡುತ್ತಿದ್ದರು ಹಾಗೂ ಇದಕ್ಕಾಗಿ ಅವರು ಸ್ವಕಪೋಲಕಲ್ಪಿತ ಕಥೆಗಳನ್ನು ಕಟ್ಟುತ್ತಿದ್ದರು. ಅವರ ಸುತ್ತ ಅದೆಷ್ಟು ಅಪವಾದಗಳು ಅದೆಷ್ಟು ಸೋಗಿನ ಸಂಗತಿಗಳು, ಅದೆಷ್ಟು ತಪ್ಪು ಕಲ್ಪನೆಗಳು ಹೆಣೆದುಕೊಂಡು ಬಿಟ್ಟಿದ್ದುವು! ಇದಕ್ಕೆ ಅವರ ಕೊಡುಗೆಯೂ ಕಮ್ಮಿಯಾಗಿರಲಿಲ್ಲ. ಅವರು ಮೊದಲ ದರ್ಜೆಯ ಗೋಷ್ಠಿಕಾರರಾಗಿದ್ದರು. ಗಂಟೆಗಟ್ಟಲೆ ಅವರು ಕತೆಗಳನ್ನು ಹೇಳುತ್ತ ಇದ್ದರು. ಈ ಘಟನೆ ನಿಮ್ಮ ಜೀವನದಲ್ಲಿಯೇ ನಡೆಯಿತೇನು ಎಂದು ಯಾರಾದರೂ ಅವರನ್ನು ಪ್ರಶ್ನಿಸಿದರೆ, "ಇಲ್ಲ, ಇಲ್ಲ, ಕಥೆ ಹೇಳುತ್ತಿದ್ದೇನೆ, ಇದೆಲ್ಲ ಬರಿಯ ಕಥೆ, ಮಿಥ್ಯೆ, ಸಂಪೂರ್ಣ ಸತ್ಯವಲ್ಲ" ಎಂದು ಹೇಳುತ್ತಿದ್ದರು.

ಅಷ್ಟೇ ಅಲ್ಲ, ಒಂದೇ ಘಟನೆಯನ್ನು ಎಷ್ಟೆಷ್ಟು ಸಲ ವರ್ಣಿಸುತ್ತಿದ್ದರೋ ಅಷ್ಟಷ್ಟು ಸಲವೂ ಅದಕ್ಕೆ ಹೊಸಹೊಸ ರೂಪಗಳನ್ನು ಕೊಡುತ್ತಿದ್ದರು. "ಅಣ್ಣಯ್ಯ, ಈ ಘಟನೆಯನ್ನು ನಿನ್ನೆ ಬೇರೊಂದು ರೂಪದಲ್ಲಿ ಹೇಳಿದ್ದಿರಲ್ಲ!" ಎಂದು ಯಾರಾದರೂ ಪ್ರಶ್ನಿಸಿದರೆ, ಅವರು ಕೋಪಗೊಂಡು "ಘಟನೆ ನನಗೆ ಸಂಬಂಧಿಸಿದ್ದು. ಅದನ್ನು ಹೇಗೆ ಬೇಕೋ ಹಾಗೆ ಹೇಳುವ ಹಕ್ಕು ನನಗಿದೆ" ಎಂದು ಹೇಳುತ್ತಿದ್ದರು.

ಯಾವ ವಿಧಿಗೆ ಅನುಗುಣವಾಗಿಯಾದರೂ ನಡೆದಿರಲಿ, ಅವರು ಎರಡು ಮದುವೆ ಮಾಡಿಕೊಂಡಿದ್ದರು. ಅವರ ಎರಡನೆಯ ಹೆಂಡತಿ ಹಿರಣ್ಮಯೀ ದೇವಿಯವರು ಅವರು ತೀರಿಕೊಂಡ ಸುಮಾರು 22ವರ್ಷಗಳ ಬಳಿಕ[1] ತೀರಿಕೊಂಡರು. ಆಕೆ ಅವರ ಕಾನೂನು ಸಮ್ಮತ ಉತ್ತರಾಧಿಕಾರಿಣಿಯಾಗಿದ್ದರು. ಆದರೆ, ಅವರು ಬದುಕಿದ್ದಷ್ಟು ದಿವಸವೂ ಜನರು ಅವರು ಅವಿವಾಹಿತರಾಗಿದ್ದರೆಂದೇ ಭಾವಿಸುತ್ತಿದ್ದರು. (ಈಗಲೂ ಹಾಗೆಯೇ ಭಾವಿಸಿದ್ದಾರೆ.) ಸಭೆ-ಸಮಾರಂಭಗಳಲ್ಲಿ 'ಬಾಲ ಬ್ರಹ್ಮಚಾರಿ' ಎಂದೇ ಅವರನ್ನು ಪರಿಚಯಿಸಲಾಗುತ್ತಿತ್ತು. ಅನೇಕ ವದಂತಿಗಳು ಹರಡಿಕೊಂಡಿದ್ದುವು. ಆದರೆ, ಒಮ್ಮೆಯೂ ನಿಜ ಸ್ಥಿತಿಯನ್ನು ಸ್ಪಷ್ಟಪಡಿಸುವ ಪ್ರಯತ್ನವನ್ನು ಅವರು ಮಾಡಲಿಲ್ಲ. ಬರ್ಮಾದಿಂದ ಹಿಂದಿರುಗಿದ ಅವರ ಮಿತ್ರರೊಬ್ಬರು ಕಲ್ಕತ್ತಾದ ಒಂದು ಸಭೆಯಲ್ಲಿ ಸ್ವತಃ ಈ ಮಾತನ್ನು ಕೇಳಿದಾಗ ಆಶ್ಚರ್ಯ ಚಕಿತರಾಗಿ "ನೀವು ಹೀಗೆಲ್ಲ ಆಗಲು ಏಕೆ ಅವಕಾಶ ಕೊಡುತ್ತೀರಿ ?" ಎಂದು ಅವರನ್ನು ಕೇಳಿದ್ದರು.

ಶರತ್‌ಚಂದ್ರರು ನಕ್ಕು ಹೀಗೆಂದಿದ್ದರು: "ಇಂಥದನ್ನು ಕೇಳಿದರೆ ಖುಷಿಯಾಗುತ್ತದೆ."

ಸ್ವತಃ ಅವರೇ ಹೀಗೆ ಬರೆದಿದ್ದಾರೆ: "ನನ್ನ ಹಿಂದಿನ ಜೀವನದ ಬಗ್ಗೆ ನಾನು ತುಂಬ ಉದಾಸೀನನಾಗಿದ್ದೇನೆ. ಅದರ ಬಗ್ಗೆ ಅನೇಕ ಬಗೆಯ ವದಂತಿಗಳು ಹರಡಿ ಕೊಳ್ಳುತ್ತಿವೆ ಎಂಬುದು ನನಗೆ ಗೊತ್ತು. ಅವು ನನ್ನ ನಿರ್ಲಿಪ್ತ ಆಲಸ್ಯವನ್ನು ಒಂದು ಬಿಂದುವಿನಷ್ಟೂ ಅಲುಗಿಸಲಾರವು. 'ಈ ಸುಳ್ಳಿಗೆ ನೀವೇಕೆ ಪ್ರತಿಭಟನೆ ತೋರುವುದಿಲ್ಲ' ಎಂದು ಶುಭಚಿಂತಕರು ಆಗಾಗ್ಗೆ ಉದ್ವಿಗ್ನರಾಗಿ ನನ್ನನ್ನು ಕೇಳುತ್ತಿರುತ್ತಾರೆ. 'ಅದು ಸುಳ್ಳು ಎಂದಾದರೆ, ಅದನ್ನು ನಾನೇನೂ ಪ್ರಚಾರ ಮಾಡಿಲ್ಲ. ಆದ್ದರಿಂದ, ಅದನ್ನು ಖಂಡಿಸುವ ಹೊಣೆಯೂ ಅವರಿಗೇ ಸೇರಿದ್ದು. ಹಾಗೆ ಮಾಡಬೇಕೆಂದು ಅವರಿಗೇ ತಿಳಿಸಿ' ಎಂದು ನಾನು ಅವರಿಗೆ ಹೇಳುತ್ತಿರುತ್ತೇನೆ."

ಅವರು ತಮ್ಮ ಜೀವನದ ಕಥೆಯನ್ನು ಅದೆಷ್ಟು ಗುಪ್ತವಾಗಿ ಇರಿಸಿದ್ದರೆಂದರೆ ಅವರ ಹತ್ತಿರದ ಹಾಗೂ ತೀರ ಅಂತರಂಗದ ಬಂಧುಗಳಿಗೂ ಏನೊಂದೂ ಗೊತ್ತಾಗುತ್ತಿರಲಿಲ್ಲ. ಕವಿ ನರೇಂದ್ರದೇವ್ ಮತ್ತು ಅವರ ಪತ್ನಿ ಕವಯಿತ್ರಿ ರಾಧಾರಾನಿ ದೇವಿಯರ ಮನೆಯಲ್ಲಿ ಶರತ್‌ಚಂದ್ರರು ಬಹಳಷ್ಟು ಕಾಲ ಕಳೆಯುತ್ತಿದ್ದರು. ಆದರೆ, ಅವರ ಜೀವನದ ಬಗ್ಗೆ ಯಾವುದೇ ವಿಶೇಷ ಸಾಮಗ್ರಿಯನ್ನು ಕಲೆ ಹಾಕುವುದು ಅವರಿಗೆ ಸಾಧ್ಯವಾಗಲಿಲ್ಲ. ಅವರ ಹತ್ತಿರದ ಗೆಳೆಯರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯರ ಸ್ಥಿತಿಯೂ ಇದೇ ಆಗಿತ್ತು. ಶರತ್‌ಚಂದ್ರರ ಬಗ್ಗೆ ಅವರೂ

---

1. ಆಗಸ್ಟ್ 31, 1960

ಯಾವುದೇ ಖಚಿತವಾದ ಮಾಹಿತಿಯನ್ನು ಒದಗಿಸಲಾರದೆ ಹೋಗಿದ್ದರು. ಜನರು ತುಂಬ ಗಂಭೀರವಾಗಿ ಅವರ ಹಿಂದಿನ ಜೀವನದ ಬಗ್ಗೆ ಪ್ರಶ್ನಿಸಿದರೆ, ಅವರು ಹೀಗೆಂದು ಹೇಳುತ್ತಿದ್ದರು: "ನೋಡಿ, ಲೇಖಕನ ವೈಯಕ್ತಿಕ ಜೀವನದ ಬಗ್ಗೆ ತಲೆಕೆಡಿಸಿಕೊಳ್ಳುವುದರಿಂದ ದೊರೆಯುವ ಪ್ರಯೋಜನವಾದರೂ ಏನು ? ಅವನು ಲೇಖಕನಾಗಿರುವುದರಿಂದ, ತನ್ನ ಬಾಳಿನ ಎಲ್ಲ ಸಂಗತಿಗಳನ್ನೂ ಬಯಲು ಮಾಡಬೇಕು ಎಂದರೆ ಏನು ಅರ್ಥ ? ಅವನ ಕೃತಿಗಳ ಮೂಲಕ ಅವನ ಪರಿಚಯ ಎಷ್ಟು ದೊರೆಯುತ್ತದೆಯೋ ಅಷ್ಟರಿಂದಲೇ ಸಂತೃಪ್ತರಾಗುವುದು ಉಚಿತ. ಅದೇ ಲೇಖಕನ ನಿಜವಾದ ಪರಿಚಯ. ಲೇಖಕನ ವೈಯಕ್ತಿಕ ಜೀವನ ಮತ್ತು ಲೇಖಕನಾಗಿ ಅವನ ಜೀವನ - ಇವೆರಡೂ ಒಂದೇ ಆಗಿರುವುದಿಲ್ಲವೆಂದು ನಾನು ಹೇಳುವುದು ಈ ಕಾರಣಕ್ಕಾಗಿಯೇ. ಎಷ್ಟರ ಮಟ್ಟಿಗೆ ನನ್ನ ಕೃತಿಗಳಲ್ಲಿ ನನ್ನನ್ನು ನಾನು ವ್ಯಕ್ತಪಡಿಸಿಕೊಂಡಿದ್ದೇನೋ ಅಷ್ಟು ಮಾತ್ರವೇ ನಾನು ಎಂದು ಅರ್ಥ ಮಾಡಿಕೊಳ್ಳಬೇಕು. ಓದುಗರಿಗೆ ನನ್ನ ಅಷ್ಟು ಪರಿಚಯವೇ ಸಾಕು."

"ಒಂದು ದಿನ ನಾನೂ ಇರುವುದಿಲ್ಲ. ನೀವೂ ಇರುವುದಿಲ್ಲ. ಜನ ನನ್ನ ವೈಯಕ್ತಿಕ ಜೀವನದ ಬಗ್ಗೆ ಏನನ್ನೂ ತಿಳಿದುಕೊಳ್ಳುವ ಇಚ್ಛೆಯನ್ನು ಕೋರುವುದಿಲ್ಲ. ಆಗ, ನಾನು ಬರೆದ ಯಾವುದಾದರೂ ಕೃತಿ ಉಳಿದಿದ್ದರೆ, ಅದರ ಬಗ್ಗೆ ಚರ್ಚೆ ನಡೆಸುತ್ತಾರೆಯೇ ಹೊರತು ನನ್ನ ನಡತೆಯ ಬಗ್ಗೆ ಅಲ್ಲ."

ಇಂದು ಅವರ ಬಾಳಿನ ಬಗ್ಗೆ ತಿಳಿದುಕೊಳ್ಳಲು ಜನ ಎಷ್ಟು ಆಸಕ್ತರಾಗಿದ್ದಾರೆ ಹಾಗೂ ಅದೆಂಥೆಂಥ ಸ್ವಕಪೋಲಕಲ್ಪಿತ ಸಂಗತಿಗಳನ್ನು ಹರಡಿಬಿಟ್ಟಿದ್ದಾರೆ ಎಂಬುದನ್ನು ಮುಂಗಾಣುವುದು ಅವರಿಗೆ ಸಾಧ್ಯವಾಗಿದ್ದರೆ ಅದೆಷ್ಟು ಚೆನ್ನಾಗಿರುತ್ತಿತ್ತು! ಸುಳ್ಳು ಮತ್ತು ಸತ್ಯಗಳ ನಡುವೆ ಯಾವುದೇ ಅಂತರವಿಲ್ಲದಂತಾಗಿಬಿಟ್ಟಿದೆ. ಇವೇ ಮಾತುಗಳನ್ನು ಕೇಳಿದ್ದರೆ, "ಆದ್ದರಿಂದಲೇ ನಾನು ಸಾಯಬಯಸುವುದಿಲ್ಲ" ಎಂದು ಕವಿ ಗುರು ರವೀಂದ್ರನಾಥರು ಹೇಳಿಬಿಡುತ್ತಿದ್ದರು.

"ಶರತ್, ನಿನ್ನ ಆತ್ಮಕಥೆಯನ್ನು ಬರೆದುಬಿಡು" ಎಂದು ರವೀಂದ್ರರೂ ಒಮ್ಮೆ ಅವರೊಂದಿಗೆ ಹೇಳಿದ್ದರಂತೆ. ಆಗ ಅವರು ಈ ರೀತಿ ಉತ್ತರಿಸಿದ್ದರಂತೆ. "ಗುರುದೇವರೆ, ನಾನು ಇಷ್ಟು ದೊಡ್ಡ ಮನುಷ್ಯನಾಗುತ್ತೇನೆ ಎಂದುಕೊಂಡಿದ್ದರೆ ನಾನು ಬೇರೆ ಬಗೆಯ ಬಾಳನ್ನೇ ಬದುಕುತ್ತಿದ್ದೆ."

ಇದು ವ್ಯಂಗ್ಯವೂ ಆಗಿರಬಹುದು. ಕಟುಸತ್ಯವೂ ಆಗಿರಬಹುದು. ಆದರೆ, ಬಾಲ್ಯ ಮತ್ತು ಯೌವನ ಕಾಲಗಳಲ್ಲಿ ತಾವು ನಡೆಸಬೇಕಾಗಿ ಬಂದಂಥ ಬಾಳಿನ ಬಗ್ಗೆ ಅವರಿಗೆ ಸಮಾಧಾನವಿರಲಿಲ್ಲ ಎಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಅವರು ತೀರ ಕೆಳಗಿನ ಕೂಪದಿಂದ ಮೇಲೆದ್ದು ಬಂದಿದ್ದವರು. ಮೊದಲ ದಿನಗಳಲ್ಲಿ ಅವರು ಯಾವ ಬಗೆಯ ಬಡತನ, ಅಪಮಾನ ಮತ್ತು ಉಪೇಕ್ಷೆಗಳನ್ನು ಸಹಿಸಿಕೊಳ್ಳಬೇಕಾಗಿ ಬಂದಿತೋ, ಆದರಿಂದ ಅದರಲ್ಲಿದ್ದ ಕಲಾವಿದ ಸಂಪುಷ್ಟನಾದರೂ, ಅವರ ಬಾಳು ಹಾಳಾಗಿ ಬಿಟ್ಟಿತು. ತಾವು ಅಲೆಮಾರಿ ಜೀವನವನ್ನು ನಡೆಸಿದ್ದು, ಹೆಂಡ ಕುಡುಕರಾದದ್ದು, ಅಮಲಿನಲ್ಲಿ ಮುಳುಗಿರುತ್ತಿದ್ದುದು, ವೇಶ್ಯೆಯರ ನಡುವೆ ಇರುತ್ತಿದ್ದುದು, ನಾನಾ ಬಗೆಯ ವಾಸ್ತವಿಕ ಮತ್ತು ಅವಾಸ್ತವಿಕ ಪ್ರೇಮಪ್ರಕರಣಗಳಲ್ಲಿ

ಸಿಲುಕಿಕೊಂಡಿದ್ದುದು - ಇವುಗಳ ಬಗ್ಗೆ ಬಾಳಿನ ಸಂಜೆಯಲ್ಲಿ ಅವರಿಗೇನಾದರೂ ವಿಷಾದ ಉಂಟಾಗಿತ್ತೆ?

ಬಹುಶಃ ಅವರಿಗೆ ವಿಷಾದವಾಗಿತ್ತು. ಆದ್ದರಿಂದಲೇ ಅವರು ಗುರುದೇವ ರವೀಂದ್ರರಿಗೆ ಅಂಥ ಉತ್ತರವನ್ನು ಕೊಟ್ಟಿದ್ದರು. ಒಂದು ಪ್ರಸಂಗದಲ್ಲಿ ಅವರು ಹೀಗೆಂದು ಕೂಡ ಹೇಳಿದ್ದರು: "ನಾನು ಆತ್ಮಕಥೆಯನ್ನು ಬರೆಯಲಾರೆ. ಏಕೆಂದರೆ, ನಾನು ಅಂಥ ಸತ್ಯವಾದಿಯೂ ಅಲ್ಲ; ಆತ್ಮಕಥೆಯ ಲೇಖಕನಿಗೆ ಇರಬೇಕಾದಂಥ ಧೈರ್ಯವೂ ನನಗಿಲ್ಲ."

ಶರತ್‌ಚಂದ್ರರ ವ್ಯಕ್ತಿತ್ವ ಮತ್ತು ಸಾಹಿತ್ಯದ ಸರಿಯಾದ ಮೌಲ್ಯಮಾಪನ ಈ ವಿರೋಧಾಭಾಸಗಳ ಮತ್ತು 'ಸಣ್ಣತನ'ಗಳ ಒಳಗೆ ಇಣುಕಿ ನೋಡುವುದರ ಮೂಲಕ ಸಾಧ್ಯವಾಗುತ್ತದೆಯೇ ಹೊರತು, ಮನುಷ್ಯನನ್ನು ದೇವತೆ ಅಥವಾ ದಾನವ ಎಂದು ಭಾವಿಸಿಕೊಂಡು - ಅಂದರೆ, ಪ್ರಚಲಿತ ಪ್ರವೃತ್ತಿಯ ಮೂಲಕವಲ್ಲ ಎಂಬುದು ಇದರಿಂದ ಸ್ಪಷ್ಟವಾಗುವುದಿಲ್ಲವೇನು? ಬಹುಶಃ ಈ ಕಾರಣದಿಂದಾಗಿಯೇ ಮರಾಠಿ ಮಿತ್ರರೊಬ್ಬರು ಲೇಖಕನಿಗೆ ಹೀಗೆ ಎಚ್ಚರಿಕೆ ನೀಡಿರುವಂತೆ ತೋರುತ್ತದೆ. "ಶರತ್‌ಚಂದ್ರರ ಜೀವನ ಚರಿತ್ರೆಯನ್ನು ಬರೆಯಹೊರಡಲು ಮುಂಬರುವ ಲೇಖಕರು, ಅವರು ಮನುಷ್ಯನ ಒಳ್ಳೆಯ ಮತ್ತು ಕೆಟ್ಟಗುಣಗಳಿಗೆ ಅತೀತರೇನೂ ಆಗಿರಲಿಲ್ಲವೆಂಬುದನ್ನು ಕೊನೆಯದಾಗಿ ನೆನಪಿನಲ್ಲಿಟ್ಟುಕೊಂಡಿರಬೇಕಾಗುತ್ತದೆ."

ಜೀವನ ಚರಿತ್ರೆಯನ್ನು ಬರೆಯುವುದು ಖಂಡಿತವಾಗಿಯೂ ಕಷ್ಟದ ಕೆಲಸ. ಹಾಗೆ ನೋಡಿದರೆ, ಅವರು ಕೆಲವೊಂದು ಅದ್ಭುತ-ಅಸಾಧಾರಣ ಘಟನೆಗಳ ಹಾಗೂ ಕ್ರಾಂತಿಕಾರಿ ಆಲೋಚನೆಗಳ ಸಮುಚ್ಚಯವೆಂಬಂತೆ ಕಾಣುತ್ತದೆ. ಯಾರದಾದರೂ ಜೀವನವನ್ನು ಅರ್ಥಮಾಡಿಕೊಳ್ಳಬೇಕಾದರೆ ಕೆಲವು ಮಹತ್ವಪೂರ್ಣ ಘಟನೆಗಳು ಖಂಡಿತವಾಗಿಯೂ ಅಗತ್ಯವಾಗುತ್ತವೆ; ಆದರೆ, ಅದು ಅನಿವಾರ್ಯವೇನೂ ಅಲ್ಲ, ಅನಿವಾರ್ಯವಾಗಿ ಬೇಕಾಗುವುದು ಆ ಘಟನೆಗಳ ಹಾಗೂ ಆಲೋಚನೆಗಳ ಹಿಂದಿನ ಪ್ರೇರಣೆಯ ಸ್ರೋತ್ರ ಅಥವಾ ಮೂಲ ಯಾವುದು ಎಂಬುದು. ಕಣ್ಣಿಗೆ ಕಾಣುವುದಷ್ಟೇ ಸತ್ಯವಾಗಿರುವುದಿಲ್ಲ. ಸತ್ಯವನ್ನು ಕಂಡುಕೊಳ್ಳಲು ಆಳಕ್ಕೆ ಇಳಿಯಬೇಕಾಗುತ್ತದೆ. ಹಾಗೆ ಇಳಿಯುವುದಕ್ಕೆ, ಶ್ರದ್ಧೆ ಅಗತ್ಯವಾಗುವಂತೆ ತಟಸ್ಥತೆಯೂ ಅಗತ್ಯವಾಗುತ್ತದೆ, ಶ್ರದ್ಧೆಗಿಂತಲೂ ಹೆಚ್ಚಾಗಿ ತಟಸ್ಥತೆ ಬೇಕಾಗುತ್ತದೆ. ಇದು ಉಳಿದುದೆಲ್ಲಕ್ಕಿಂತಲೂ ಹೆಚ್ಚಿನ ಅಗತ್ಯವೆನಿಸಿಕೊಳ್ಳುತ್ತದೆ. ಇತ್ತ, "ವ್ಯಕ್ತಿಯ ಜೊತೆಗೆ ಉಂಡು-ತಿಂದು, ಎದ್ದು-ಕುಳಿತು, ಮಾತು-ಕತೆ ಆಡಿ ಮಾಡಿರುವಂಥವನು ಮಾತ್ರವೇ ಜೀವನ ಚರಿತ್ರೆಯನ್ನು ಬರೆಯಬಲ್ಲ" ಎಂದು ಡಾ. ಜಾನ್‌ಸನ್ ಹೇಳಿಯೇ ಇದ್ದಾರೆ.

ಇದು ಉಪಯುಕ್ತವಾಗಬಹುದು. ಆದರೆ, ಅನಿವಾರ್ಯವೇನೂ ಅಲ್ಲ. ಇಂಥ ಸೌಭಾಗ್ಯ ದೊರೆಯದೆ ಇರುವಂಥ ವ್ಯಕ್ತಿಯ ಶ್ರದ್ಧೆಯನ್ನು ಶಂಕಿಸುವುದಕ್ಕೆ ಸೂಕ್ತವಾದ ಕಾರಣಗಳೇನೂ ಕಾಣಿಸುವುದಿಲ್ಲ. ಬದಲಾಗಿ, ತಟಸ್ಥತೆ ಹೆಚ್ಚುವ ಸಂಭವವೇ ಹೆಚ್ಚಾಗಿರುತ್ತದೆ. ಅಂತರ ವಸ್ತುನಿಷ್ಠ ದೃಷ್ಟಿಯನ್ನು ತಂದುಕೊಡುವಲ್ಲಿ ಸಹಾಯಕವೇ ಆಗುತ್ತದೆ.

ಒಬ್ಬ ವಿದ್ವಾಂಸ ಎಲ್ಲಿಯೋ ಒಂದು ಕಡೆ ಹೀಗೆಂದು ಹೇಳಿದ್ದಾನೆ: "ಅಭಿವ್ಯಕ್ತಿ ಕಲಾತ್ಮಕವಾಗಿರದೆ ಇದ್ದರೆ ಹಾಗೂ ಬರವಣಿಗೆಯಲ್ಲಿ ಲೇಖಕನ ವ್ಯಕ್ತಿತ್ವ ಪ್ರತಿಫಲಿತವಾಗಿರದೆ ಇದ್ದರೆ ಜೀವನ ಚರಿತ್ರೆ ಬರಿಯ ಇತಿಹಾಸ ಮಾತ್ರವಾಗಿ ಬಿಡುತ್ತದೆ. ಅದು ತಟಸ್ಥ ನೆಲೆಯಲ್ಲಿ ನಿಂತು ಬಿಚ್ಚು ಮನಸ್ಸಿನಿಂದ ನಡೆಸಿದ ವ್ಯಕ್ತಿ-ವಿಶೇಷದ ಅಧ್ಯಯನವಾಗುತ್ತದೆ.

"ಜೀವನ ಚರಿತ್ರೆ ಎಂದರೇನು ? ಅನುಭವಗಳ ಶೃಂಖಲಾಬದ್ಧವಾದ ಕಲಾತ್ಮಕ ಸಂಚಯನ ಅದು. ಯಾವ ಘಟನೆಗಳಲ್ಲಿ ಸಂವೇದನೆಯು ಆಳವಾಗಿರುತ್ತದೆಯೋ, ಭಾವನೆಗಳನ್ನು ಕಲಕಿಬಿಡುವಂಥ ಶಕ್ತಿ ಯಾವ ಘಟನೆಗಳಲ್ಲಿ ಇರುತ್ತದೆಯೋ ಅಂಥ ಘಟನೆಗಳನ್ನು ಮಾತ್ರವೇ ಇಲ್ಲಿ ಹೆಣೆಯಲಾಗುತ್ತದೆ. ಯಾವುದೇ ನೀತಿ, ತರ್ಕ ಅಥವಾ ದರ್ಶನದಿಂದ ಪ್ರಭಾವಿತನಾಗಿ ಲೇಖಕ ಈ ಘಟನೆಗಳನ್ನು ಕಲೆಹಾಕುವುದಿಲ್ಲ. ಮುಳುಗು ಹಾಕುವವನಂತೆ ಆತ ಜೀವನ ಸಾಗರದಲ್ಲಿ ಮುಳುಗಿ ಎದ್ದು ಮುತ್ತುಗಳನ್ನು ಆರಿಸುತ್ತಾನೆ. ಪ್ರಬಲವಾದ ಹಾಗೂ ನಿಜವಾದ ಸಂವೇದನೆಯೇ ಸದಾ ಆ ಮುತ್ತಾಗಿರುತ್ತದೆ. ಶ್ರೇಷ್ಠ ಜೀವನ ಚರಿತ್ರಕಾರ ಕಾಲ, ದೇಶ, ವ್ಯಕ್ತಿ ಮತ್ತು ಘಟನೆಗಳ ಮೇರೆಯನ್ನು ತೊಡೆದುಹಾಕಿ ಸೌಂದರ್ಯದಲ್ಲಿ ಅನುಭೂತಿಯನ್ನು ವಿಶ್ಲೇಷಿಸುತ್ತಾನೆ. ವಿಶುದ್ಧ ಕಲೆ ಮತ್ತು ಮಾನದಂಡಗಳ ನಡುವೆ ಸಮತೋಲನೆ ಮತ್ತು ಸಾಮಂಜಸ್ಯಗಳನ್ನು ಸಾಧಿಸುತ್ತಾನೆ."

'ಅಲೆಮಾರಿ ಪ್ರವಾದಿ' ಈ ಒರೆಗಲ್ಲಿನಲ್ಲಿ ಎಷ್ಟರಮಟ್ಟಿಗೆ ಚೊಕ್ಕ ಚಿನ್ನವಾಗಿ ಹೊರಬರುತ್ತದೆಂಬುದು ನನಗೆ ಗೊತ್ತಿಲ್ಲ. ಆದರೆ, ಪೂರ್ಣ ಆತ್ಮವಿಶ್ವಾಸದಿಂದ ಇಷ್ಟು ಮಾತ್ರ ಹೇಳಬಲ್ಲೆ. ನನಗೆ ಕಲೆ ಕೈತಪ್ಪಿ ಹೋಗಿರಬಹುದು. ಆದರೆ, ಶ್ರದ್ಧೆಯನ್ನೆಂದೂ ಕೈ ಬಿಟ್ಟಿಲ್ಲ, ಸತತವಾಗಿ ಸಬಲವೂ ಸತ್ಯವೂ ಆದ ಸಂವೇದನೆಯ ಕ್ಷಣಗಳನ್ನು ಆರಸುವ ಪ್ರಯತ್ನ ಮಾಡಿದ್ದೇನೆ. ಸಾಹಿತಿಯ ಜೀವನ ಅವನ ಸಾಹಿತ್ಯವೇ ಆಗಿರುತ್ತದೆ ಎಂದು ಅನೇಕರು ಭಾವಿಸಿದ್ದಾರೆ. ಈ ಹಿಂದೆ ನಾನು ಉದ್ಧರಿಸಿದ ಮರಾಠೀ ಮಿತ್ರರು ಹೀಗೆಂದು ಬರೆದಿದ್ದಾರೆ. "ನಮ್ಮ ಪ್ರಯತ್ನಗಳ ಧ್ಯೇಯ ಸತ್ಯನಿಷ್ಠ ಸಾಮಗ್ರಿಯನ್ನು ಅರಸುವುದೇ. ಆದರೆ, ಆ ಪ್ರಯತ್ನ ಸ್ವಲ್ಪಮಟ್ಟಿಗೆ ಹಾಸ್ಯಾಸ್ಪದವೂ ಆಗುತ್ತದೆ. ಅವರು ಎಲ್ಲಿ ಹುಟ್ಟಿದರು, ಎಲ್ಲಿ ತೀರಿಕೊಂಡರು, ರಂಗೂನಿನಲ್ಲಿ ಎಲ್ಲಿ ವಾಸವಾಗಿದ್ದರು, ಈ ಲೋಕದಲ್ಲಿ ಯಾವ ಯಾವ ಹೆಣ್ಣಿನ ರೂಪದ ದೇವತೆಗಳು ಅವರ ಜೊತೆಗೂಡಿ ನಡೆದರು, ಊಟ-ತಿಂಡಿಗಳಿಗೆ ಏನು ಏರ್ಪಾಟು ಮಾಡಿಕೊಂಡಿದ್ದರು, ಆರೋಗ್ಯದ ಕಡೆಗೆ ಅವರೇಕೆ ಗಮನವನ್ನೇ ಕೊಡಲಿಲ್ಲ. ಯಾರಿಂದಲೂ ಯಾವುದೇ ಬಗೆಯ ನೆರವನ್ನೇಕೆ ಅವರು ಬಯಸಲೇ ಇಲ್ಲ ಹಾಗೂ ಎಲ್ಲರಿಗೂ ನೆರವಾಗುವ ಸಲುವಾಗಿ ತಮ್ಮ ಸರ್ವಸ್ವವನ್ನು ಅವರೇಕೆ ಸೂರೆಗೊಟ್ಟರು - ಇಂಥ ಅನೇಕ ಪ್ರಶ್ನೆಗಳಿಗೆ ಅವರ ಕೃತಿಗಳಲ್ಲಿ ನಮಗೆ ಉತ್ತರ ದೊರೆಯದೆ ಹೋದರೆ, ಬೇರೆಲ್ಲಿ ದೊರೆತೀತು ?"

ಜೇಬುನ್ನೀಸಾಳ ಮಾತುಗಳಲ್ಲಿ ಶರತ್‌ಚಂದ್ರರೂ ಇವೇ ಮಾತುಗಳನ್ನು ಹೇಳಿದ್ದಾರೆ:

"ದರ್ ಸಖುನ್ ಪಿನ್ಹಾ ಶುದಮ್ ಮಾನಿಂದೇ ಬೂ ದರ್-ಬರ್ಗೇಗುಲ್,
ಹರ್ ಕಿ ದೀದನ್ ಮೇಲ್ ದಾರದ್ ದರ್ ಸಖುನ್ ಮೀನದ್ ಬರಾ"

(ಪರಿಮಳ ಹೂವಿನ ದಳಗಳಲ್ಲಿ ಅಡಗಿರುವಂತೆ ನಾನೂ ನನ್ನ ಕವಿತೆಗಳನ್ನು ವ್ಯಾಪಿಸಿಕೊಂಡಿದ್ದೇನೆ. ನನ್ನನ್ನು ಕಾಣಲು ಬಯಸಿರುವವರು, ನನ್ನ ಕಾವ್ಯಗಳಲ್ಲಿ ನನ್ನನ್ನು ಕಂಡುಕೊಳ್ಳಲಿ.)

"ಮೇರಾ ಹರ್ ಶೇರ್ ಹ್ಯೆ ಅಖ್ತರ್ ಮೇರೀ ಜಿಂದಾ ತಸ್ವೀರ್,
ದೇಖನೇ ವಾಲೋ ನೇ ಹರ್ ಲಫ್ಜ್ ಮೇಂ ದೇಖಾ ಹ್ಯೆ ಮುಝೋ"[1]

ಅವರ ಸಾಹಿತ್ಯ ಮಹತ್ತರವಾದುದೆಂಬುದರಲ್ಲಿ ಅನುಮಾನವೇನೂ ಇಲ್ಲ, ಆದರೆ, ಅವರ ಜೀವನ ಅದಕ್ಕಿಂತಲೂ ಕಡಿಮೆ ಮಹತ್ವದ್ದೇನೂ ಆಗಿರಲಿಲ್ಲ. ಮನೆಮನೆಯಲ್ಲೂ ಅವರ ಸಾಹಿತ್ಯವನ್ನು ಜನರು ಪ್ರೀತ್ಯಾದರಗಳಿಂದ ಓದಿದರು. ಇಂಥ ದೇಶವ್ಯಾಪಿ ಗೌರವದ ಹಿಂದೆ, ಆ ಸಾಹಿತ್ಯವನ್ನು ಸೃಷ್ಟಿಸಿದ ವ್ಯಕ್ತಿ ತಮ್ಮ ಸ್ವಂತ ದುಃಖವನ್ನು ಅಡಗಿಸಿಟ್ಟು, ನಗುನಗುತ್ತ ದಿನಗಳೆದರು. ವಾವೆಯಲ್ಲಿ ಅವರ ಮಾವನವರೂ ಚಿರಕಾಲದ ಗೆಳೆಯರೂ ಆಗಿದ್ದ ಸುರೇಂದ್ರನಾಥ ಗಂಗೋಪಾಧ್ಯಾಯ ಅವರು ಹೀಗೆಂದು ಬರೆದಿದ್ದಾರೆ: "ಶರತ್‌ಚಂದ್ರರು ಸಾಹಿತ್ಯದ ಮೂಲಕ ಆತ್ಮಪ್ರಕಾಶವನ್ನು ಸಾಧಿಸಿದ್ದಾರೆ; ಪ್ರತ್ಯೇಕವಾಗಿ ಅವರ ಜೀವನ ಚರಿತ್ರೆ ಲಭ್ಯವಾಗಿಲ್ಲ ಎಂದು ಹೇಳಲಾಗಿದೆ. ಆದರೆ, ಶರತ್‌ಚಂದ್ರರು ತಮ್ಮ ಸಾಹಿತ್ಯದಲ್ಲಿಯೇ ತಮ್ಮನ್ನು ಅಡಗಿಸಿಕೊಂಡಿದ್ದಾರೆ."

ಶರತ್‌ಚಂದ್ರರು ತಮ್ಮ ಸಾಹಿತ್ಯದಲ್ಲಿ ತಮ್ಮನ್ನು ಅಡಗಿಸಿಕೊಂಡಿರುವುದು ಮಾತ್ರವಲ್ಲ, ನಿಜ ಜೀವನದಲ್ಲಿಯೂ ತಮ್ಮನ್ನು ಅಡಗಿಸಿಡುವ ಪ್ರಯತ್ನವನ್ನು ಸತತವಾಗಿ ಮಾಡಿಕೊಂಡೇ ಬಂದಿದ್ದಾರೆ. ಪ್ರಸಿದ್ಧಿಗೆ ಅವರು ಯಾವಾಗಲೂ ಬೆನ್ನು ತಿರುಗಿಸಿಯೇ ಇದ್ದರು. ಬರೆಯುತ್ತ ಇದ್ದರೂ, ಪ್ರಕಟಣೆಯ ಬಗ್ಗೆ ಅವರೆಂದೂ ಒತ್ತಾಯಪಡಿಸಲಿಲ್ಲ. 'ಸ್ವಾರ್ಥಿ'ಗಳಾಗಿದ್ದ ಅವರ ಗೆಳೆಯರು, ಅವರಿಗೆ ಅರಿವಿಲ್ಲದಂತೆಯೇ ಅವರನ್ನು ಕತ್ತಲೆಯಿಂದ ಹೊರಗೆಳೆಯದೆ ಹೋಗಿದ್ದರೆ ಹಾಗೂ ಅವರ ಪ್ರತಿಭೆ ಅಂದಿನ ಸಾಹಿತ್ಯ ಜಗತ್ತನ್ನು ಅಲ್ಲೋಲಕಲ್ಲೋಲವಾಗಿಸದೆ ಹೋಗಿದ್ದರೆ, ಅವರು ಬಹುಶಃ ರಂಗೂನಿನಲ್ಲಿಯೇ ತಮ್ಮ ದೇಶಬಾಹಿರ ಜೀವನವನ್ನು ಕೊನೆಗಾಣಿಸಿ ಬಿಡುತ್ತಿದ್ದರು. ಆದರೆ, ಅವರು ಬರವಣಿಗೆಯನ್ನು ಖಂಡಿತವಾಗಿಯೂ ಮುಂದುವರಿಸಿಕೊಂಡು ಬರುತ್ತಿದ್ದರು ಎಂಬುದು ನಿಜ. ಇಳಾಚಂದ್ರ ಜೋಶಿಯವರ ಮಾತಿನಲ್ಲಿ, ಹೀಗೆಂದೂ ಹೇಳಬಹುದಾಗಿದೆ: "ಕೆಲವು ರಹಸ್ಯಮಯ ಮನಃಪ್ರವೃತ್ತಿಗಳಿಂದಾಗಿ, ಅವರು ತಮ್ಮ ಜೀವಮಾನದಲ್ಲಿಯೇ ತಮಗೆ ದೊರೆಯಬಹುದಾಗಿದ್ದ ಖ್ಯಾತಿಯಿಂದ ತಪ್ಪಿಸಿಕೊಂಡು ಓಡುತ್ತಿದ್ದರು. ತಾವು ತೀರಿಕೊಂಡ ಬಳಿಕ ಪ್ರಕಟವಾಗಲೆಂದು ಹಾಗೂ ಒಬ್ಬ ತೀರಿಕೊಂಡ ಲೇಖಕನ

---

1. "ನನ್ನ ಒಂದೊಂದು ನುಡಿಯಲ್ಲೂ
ಅಡಗಿಹುದು ನನ್ನ ಜೀವಂತ ಚಿತ್ರ
ನನ್ನ ಒಂದೊಂದು ಪದದಲ್ಲೂ
ಕಾಣಬಲ್ಲವರು ನನ್ನನ್ನ ಕಂಡಿಹರು." -ಅನುವಾದಕನ ಅಡಿಟಿಪ್ಪಣಿ

ಕೃತಿಗಳ ಒಳಗಿನಿಂದ ಮಾತನಾಡುವ ಮಹಾನ್ ಆತ್ಮ ಒಬ್ಬ ಲೇಖಕರ ಮನಸ್ಸನ್ನೂ ಸೂರೆಗೊಳ್ಳಲಿ ಎಂದೇ ಅವರು ಬರೆಯುತ್ತ ಬಂದಿದ್ದರು."

ಈ ಪ್ರವೃತ್ತಿಯನ್ನು ಕೀಳರಿಮೆ ಎಂದೂ ವರ್ಣಿಸಬಹುದು, ವೈರಾಗ್ಯಶೀಲ ಮನೋಭಾವವೆಂದೂ ಹೇಳಬಹುದು. ಇದು ಬಾಳಿನ ಮೊದಲಲ್ಲಿ ಅವರು ಕಂಡುಂಡ ಬಡತನ ಮತ್ತು ಅಪಮಾನಗಳ ಬಗೆಗಿನ ಅಂತರ್ಮುಖಿ ಪ್ರತಿಕ್ರಿಯೆಯೂ ಆಗಿದ್ದಿರಬಹುದು. ಆದರೆ, ಈ ಕಾರಣಗಳಿಂದಾಗಿಯೇ ಅವರ ಜೀವನ ಚರಿತ್ರೆಯನ್ನು ಬರೆಯಹೊರಟವನ ಕೆಲಸ ಅದೆಷ್ಟು ದುಷ್ಕರವಾಗಿಬಿಟ್ಟದೆ! ಆದರೆ, ಈ ಸವಾಲೇ ಅವರ ಪ್ರಬಲ ಶಕ್ತಿಯೂ ಆಗಿಬಿಟ್ಟದೆ ಎಂಬುದೂ ನಿಜ. ಹೀಗಾಗಿ, ಈ ಸಾಮಗ್ರಿಯನ್ನು ಒಂದುಗೂಡಿಸಲು ನನಗೆ 14-15 ವರ್ಷಗಳ ಅವಧಿ ಏಕೆ ಬೇಕಾಯಿತು ಎಂಬುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಇಷ್ಟಾಗಿಯೂ ನಾನು ಕಂಡುಕೊಂಡಿರುವುದು ಸಂಪೂರ್ಣ ಸತ್ಯವೆಂದು ಆತ್ಮವಿಶ್ವಾಸದಿಂದ ಹೇಳಬಹುದಾಗಿದೆಯೆ ?

ಖಂಡಿತವಾಗಿಯೂ ನಾನು ಹಾಗೆಂದು ಹೇಳಲಾರೆ. ಇದಕ್ಕೆ ವಿರುದ್ಧವಾಗಿ, ಯಾರಾದರೂ ನಾನು ಬರೆದಿರುವುದೆಲ್ಲ ಸುಳ್ಳು ಎಂದು ಹೇಳಿದರೆ, ಅದನ್ನು ನಾನು ಖಂಡಿಸಲಾರೆ.

ಕಲೆಗೆ ಸತ್ಯ ಸಂಪೂರ್ಣ ಆದರ್ಶವಾಗಿರದೆ ಹೋಗಬಹುದು. ಆದರೆ, ಜೀವನ ಚರಿತ್ರೆಯನ್ನು ಬರೆಯುವುದು ಈ ದೃಷ್ಟಿಯಿಂದ ವಿಜ್ಞಾನಕ್ಕೆ ಹೆಚ್ಚು ಹತ್ತಿರವಾಗುತ್ತದೆ. ಅದಕ್ಕೆ ಸತ್ಯವೇ ಆದರ್ಶವಾಗಿರುತ್ತದೆ. ಆದರೆ, ಈ ಮೊದಲೇ ಹೇಳಿರುವಂತೆ ಘಟನೆಯಷ್ಟೇ ಸತ್ಯವಲ್ಲ. ಬಾಳಿನಲ್ಲಿ ಅದಕ್ಕೆ ತನ್ನದೇ ಆದ ಮಹತ್ವವಿದೆ ಎಂಬುದು ನಿಜ. ಆದರೆ, ಅದಕ್ಕಿಂತಲೂ ಮಹತ್ವದ್ದೆಂದರೆ ಘಟನೆಯ ಹಿಂದಿರುವ ಪ್ರೇರಣೆ. ಆ ಪ್ರೇರಣೆಯೇ ಸತ್ಯ. ಭ್ರಾಮಕ ಮತ್ತು ಅಭ್ರಾಮಕ ಘಟನೆಗಳ ಹಿಂದಿರುವ ಸತ್ಯವನ್ನು ಕಂಡುಕೊಳ್ಳಬೇಕೆಂದೇ ನಾನು ಅಷ್ಟೊಂದು ಕಾಲವನ್ನು ಅದಕ್ಕೆ ವಿನಿಯೋಗಿಸಿದ್ದೇನೆ. ಇದರಿಂದಾಗಿ ಘಟನೆಗಳನ್ನು ಮೀರಿ ನಿಂತಿರುವ ನಿಜವಾದ ಶರತ್‌ಚಂದ್ರರ ವ್ಯಕ್ತಿತ್ವವನ್ನು ಓದುಗರ ಮುಂದೆ ಇರಿಸುವುದು ಸಾಧ್ಯವಾದೀತು ಎಂದು ನಂಬಿದ್ದೆ. ಇದೆಲ್ಲ ಹೇಗೆ ಮತ್ತು ಯಾವ ರೂಪದಲ್ಲಿ ಸಾಧ್ಯವಾಯಿತು ಎಂಬುದನ್ನು ನಾನು ಹೇಳಲಾರೆ 'ಆರನೆಯ ಪ್ರಜ್ಞೆ' ಎಂದು ಯಾವುದನ್ನು ಕರೆಯುತ್ತೇವೋ ಬಹುಶಃ ಅದೇ ನನಗೆ ನೆರವಾಗಿದೆ. ಶರತ್‌ಚಂದ್ರರೊಡನೆ ಒಂದಲ್ಲ ಒಂದು ರೂಪದಲ್ಲಿ ಸಂಪರ್ಕ ಪಡೆದಿದ್ದ ವ್ಯಕ್ತಿಗಳನ್ನು ಹೆಚ್ಚಾಗಿ ಕಂಡೆ. ಅವರು ಅಥವಾ ಅವರ ಕಾದಂಬರಿಗಳ ಪಾತ್ರಗಳು ವಾಸವಾಗಿದ್ದಂಥ ಎಲ್ಲ ಸ್ಥಳಗಳಿಗೂ ನಾನು ಹೋಗಿಬಂದೆ. ಅವರು ಬದುಕಿದ್ದಂಥ ವಾತಾವರಣದಲ್ಲಿ ನನ್ನ ಮನಸ್ಸನ್ನು ತೊಡಗಿಸಿಕೊಳ್ಳುವ ಪ್ರಯತ್ನ ಮಾಡಿದೆ. ಬಹುಶಃ ಈ ಪ್ರಯತ್ನದ ಫಲವಾಗಿ ನಾನೊಂದು ಚಿತ್ರವನ್ನು ಕೊಡುವಲ್ಲಿ ಯತ್ಕಿಂಚಿತ್ ಸಫಲನಾಗಿದ್ದೇನೆ. ಈ ಚಿತ್ರ ಶರೀರ-ರಚನಾ-ವಿಜ್ಞಾನದ (ಅನಾಟಮಿ) ದೃಷ್ಟಿಯಿಂದ ಸರಿಯಲ್ಲದಿರಬಹುದು. ಆದರೆ, ಅದರ ಹಿಂದಿರುವ ಚೇತನ ತತ್ವವನ್ನು ಅರ್ಥಮಾಡಿಕೊಳ್ಳುವಲ್ಲಿ ಖಂಡಿತವಾಗಿಯೂ ನೆರವಾಗುತ್ತದೆ.

ಶರತ್‌ಚಂದ್ರರ ಚಾರಿತ್ರ್ಯದ ಬಗ್ಗೆ ಸಮಾಜದಲ್ಲಿ ಉಂಟಾಗಿದ್ದ ತಪ್ಪು ಕಲ್ಪನೆಯ ಬಗ್ಗೆ ಚರ್ಚಿಸುವುದು ಅಸಂಗತವೇನೂ ಆಗಲಾರದು. ಕಲಾವಿದನ ಚಾರಿತ್ರ್ಯ ಸಾಮಾನ್ಯ ವ್ಯಕ್ತಿಯ ಚಾರಿತ್ರ್ಯಕ್ಕಿಂತ ಒಂದಲ್ಲ ಒಂದು ರೂಪದಲ್ಲಿ ಭಿನ್ನವಾಗಿಯೇ ಇರುತ್ತದೆ. ಇತ್ತ ಶರತ್‌ಚಂದ್ರರಂತೂ ಬಾಲ್ಯದಿಂದಲೂ ಬಡತನ ಮತ್ತು ಅಪಮಾನಗಳ ವಾತಾವರಣದಲ್ಲಿಯೇ ಬಾಳಿದರು. ಇಂಥ ವಾತಾವರಣದಲ್ಲಿರುವ ವ್ಯಕ್ತಿ ಅದಕ್ಕೆ ವಿರುದ್ಧವಾಗಿ ಕ್ರಾಂತಿಯ ಕಹಳೆಯನ್ನು ಮೊಳಗಿಸುತ್ತಾನೆ ಅಥವಾ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಅವರ ಹೃದಯಾಂತರಾಳದಲ್ಲಿ ಮಲಗಿದ್ದ ಸಾಹಿತಿ ಮೊದಲ ಮಾರ್ಗವನ್ನು ಆಯ್ದುಕೊಳ್ಳುವಂತೆ ಅವರಿಗೆ ಪ್ರೇರಣೆ ನೀಡಿದ. ಆದ್ದರಿಂದಲೇ, ಅವರು ಅಂದಿನ ಸಮಾಜದ ಕಠೋರ ವಿಧಿ-ವಿಧಾನಗಳನ್ನು, ರೀತಿ-ನೀತಿಗಳನ್ನು ಒಪ್ಪಲು ನಿರಾಕರಿಸಿದರು. ಸದಾಚಾರದ ಪ್ರಚಲಿತ ಮಾನ ದಂಡಗಳ ಮೇಲೆ ಆಘಾತವನ್ನೆಸಗುತ್ತ, ಯಥಾಸ್ಥಿತಿವಾದಿಗಳ ಮುಖಂಡರ ದೃಷ್ಟಿಯಲ್ಲಿ 'ಅನನುಕರಣೀಯ'ವಾಗಿದ್ದಂಥ ಕಾರ್ಯಗಳನ್ನೇ ಅವರು ಮಾಡಿದರು. ಹೀಗಾಗಿ ಅವರಿಗೆ 'ಚರಿತ್ರಹೀನ'ನೆಂಬ ಬಿರುದು ಬರದೆ ಇದ್ದಿದ್ದರೆ ಅದೀಗ ಆಶ್ಚರ್ಯದ ಸಂಗತಿಯಾಗುತ್ತಿತ್ತು.

ಅವರು ತಮ್ಮ ಸಾಹಿತ್ಯದಲ್ಲಿ ವೇಶ್ಯೆಯರಿಗೆ ಮತ್ತು ದುರಾಚಾರಿಣಿಯರಿಗೆ ಉನ್ನತ ಸ್ಥಾನವನ್ನು ಕೊಟ್ಟರು ಹಾಗೂ ಅಂದಿನ ಸಾಮಾಜಿಕ ಮೌಲ್ಯಗಳಿಗೆ ಎದುರಾಗಿ ಮತ್ತೆ ಮತ್ತೆ ಪ್ರಶ್ನಾರ್ಥಕ ಚಿಹ್ನೆಗಳನ್ನು ಹಾಕಿದರು. ಸತೀತ್ವವೇ ನಾರೀತ್ವವಲ್ಲ ಎಂದು ಅವರು ಘೋಷಿಸಿದರು. ಆದರೆ, ಎಲ್ಲಿಯೂ, ಒಂದು ಕ್ಷಣದ ಮಟ್ಟಿಗೂ ಅವರು ಉಚ್ಛೃಂಖಲತೆಗೆ ಆಸರೆಯನ್ನು ನೀಡಲಿಲ್ಲ. "ನನ್ನ ಕೃತಿಯ ಮೂಲಕ ನಾನು ಮನುಷ್ಯನಿಗೆ ಅಪಮಾನ ಮಾಡಬಯಸುವುದಿಲ್ಲ. ಗಂಡಾಗಲೀ ಹೆಣ್ಣಾಗಲೀ ಜಾರಿದ ಮೇಲೆ ಮತ್ತೆ ಮತ್ತೆ ಮೇಲೆದ್ದು ನಿಲ್ಲುವ ಹಾದಿ ಎಲ್ಲರಿಗೂ ತೆರೆದಿರಬೇಕು" ಎಂದೇ ಅವರು ಹೇಳಿದರು.

ಹೃದಯವನ್ನು ಗೆಲ್ಲುವುದರಲ್ಲಿ ಅವರು ನಂಬಿಕೆಯನ್ನಿರಿಸಿಕೊಂಡಿದ್ದರು. ಗೆಲ್ಲುವವನು ಹೀನ ಜಾತಿಯವನೇ ಅಥವಾ ವಿಜಾತೀಯನೇ, ವಿಧರ್ಮೀಯನೇ ಅಥವಾ ವಿದೇಶೀಯನೇ ಅಥವಾ ಅಪಮಾರ್ಗಿಯೇ ಅಥವಾ ದುಶ್ಚಾರಿತ್ರ್ಯದವನೇ ಎಂಬುದನ್ನು ಅವರು ಬೆದಕಿ ನೋಡಬಯಸುತ್ತಿರಲಿಲ್ಲ. ಹೃದಯವನ್ನು ಗೆಲ್ಲುವಂಥ ಮಹಾಕಾರ್ಯವನ್ನು ಮಾಡಬಲ್ಲವನು ಅಪಮಾರ್ಗಿಯಾಗಲೀ ದುಶ್ಚಾರಿತ್ರ್ಯದವ ನಾಗಲೀ ಆಗಿರುವುದು ಸಾಧ್ಯವಿಲ್ಲ. ಅಂತೆಯೇ, ವಾಸ್ತವಿಕ ಜೀವನವನ್ನು ನೋಡಬಯಸುವವನು ಶುಚಿತ್ವ-ಅಶುಚಿತ್ವಗಳ ಗೊಂದಲದಲ್ಲಿ ಸಿಕ್ಕಿಕೊಳ್ಳುವುದಿಲ್ಲ. ಈ ಅರಿವಿನಿಂದಾಗಿಯೇ ಗಾರ್ಕಿ, ಟಾಲ್‌ಸ್ಟಾಯ್ ಮತ್ತು ಶೇಕ್ಸ್‌ಪಿಯರ್ ಅವರು ಶುಚಿತ್ವದ ಗೊಂದಲಕ್ಕೆ ಸಿಕ್ಕಿಕೊಳ್ಳಲಿಲ್ಲ. ಆದ್ದರಿಂದಲೇ ಶರತ್‌ಚಂದ್ರರು ಕೆಳವರ್ಗದವರೆಂದೂ ಪತಿತರೆಂದೂ ಹೇಳಲಾಗಿದ್ದಂಥ ವ್ಯಕ್ತಿಗಳ ನಡುವೆ ಹೋಗಿ ವಾಸ ಮಾಡಿದರು ಹಾಗೂ ಕುಲೀನತೆಯನ್ನು ಮೀರಿ ನಿಂತು, ಸದಾ ಚಿರವ್ರಾತ್ಯರಾಗಿಯೇ ಉಳಿದರು. ಕುಲೀನ ಸಮಾಜದಲ್ಲಿ ಪ್ರವೇಶವನ್ನು ಪಡೆಯಬೇಕೆಂಬ ಆಲೋಚನೆಯನ್ನು ಅವರು ಇರಿಸಿಕೊಳ್ಳಲಿಲ್ಲ.

ಅವರು ಮದ್ಯಪಾನ ಮಾಡುತ್ತಿದ್ದರು. ಮುಂದೆ ಅದನ್ನು ಬಿಟ್ಟುಬಿಟ್ಟರು. ಆದರೆ ಆ ಬಳಿಕವೂ ಬಂದು-ಹೋಗುವವರ ದೃಷ್ಟಿಗೆ ಬೀಳುವಂತೆ ಒಂದು ಖಾಲಿ ಶೀಷೆಯನ್ನು ಎದ್ದು ಕಾಣುವಂಥ ಜಾಗದಲ್ಲಿ ಇರಿಸಿದ್ದರು. ಅಫೀಮು ಸೇವಿಸುವುದನ್ನು ಪ್ರದರ್ಶಿಸುವ ಯಾವುದೇ ಅವಕಾಶವನ್ನೂ, ಅವರು ಕಳೆದುಕೊಳ್ಳುತ್ತಿರಲಿಲ್ಲ. ಅವರು ಸಾಕಿಕೊಂಡಿದ್ದ ನಾಯಿಯೂ ನೋಡಲು ಮಾತ್ರ ಭಯಂಕರವಾಗಿರಲಿಲ್ಲ. ಎಲ್ಲ ಬಗೆಯ ಉತ್ತಮ ಸಂಸ್ಕಾರಗಳಿಂದಲೂ ಅದು ನೂರು ಯೋಜನದಷ್ಟು ದೂರದಲ್ಲಿತ್ತು. ಅದನ್ನು ಅವರು ಹಾಗೆ ಸಾಕಿ, ಬೆಳೆಸಿದ್ದರು. ಅಷ್ಟೇ ಅಲ್ಲ, ತಮ್ಮ ಏಕೈಕ ಪುತ್ರನೋ ಎಂಬಂತೆ ಅದನ್ನು ಅತಿಯಾಗಿ ಪ್ರೀತಿಸುತ್ತಿದ್ದರು, ಬಗೆಬಗೆಯಾಗಿ ಆ ಪ್ರೀತಿಯನ್ನೇ ತೋರುತ್ತಿದ್ದರು. ಕುಲೀನ ಸಮಾಜವನ್ನು ಕೀಳಾಗಿ ಕಾಣುವುದರಲ್ಲಿ ಅವರಿಗೆ ನಿಜವಾಗಿಯೂ ಆನಂದ ಉಂಟಾಗುತ್ತಿತ್ತು.

ಸ್ತ್ರೀಯರ ಬಗೆಗಿನ ಅವರ ವೈಯಕ್ತಿಕ ಸಂಬಂಧಗಳ ಬಗ್ಗೆಯೂ ಅದೆಷ್ಟೋ ಅತಿಶಯೋಕ್ತಿಪೂರ್ಣ ಕಥೆಗಳು ಹುಟ್ಟಿಕೊಂಡು ಬಿಟ್ಟಿದೆ. ಅವರು ಯೋಗಿ ಯತಿಯೇನೂ ಆಗಿರಲಿಲ್ಲ. ಅಂತೆಯೇ ಕಾಮಿ ಅಥವಾ ದುಶ್ಚಾರಿತ್ರ್ಯದ ವ್ಯಕ್ತಿಯೂ ಆಗಿರಲಿಲ್ಲ. ಒಬ್ಬ ಕಲಾವಿದನಂತೆ ಅವರು ರೊಮ್ಯಾಂಟಿಕ್ ಪ್ರವೃತ್ತಿಯನ್ನು ಮಾತ್ರ ಮೆರೆದಿದ್ದರು. ಬಂಧುಗಳು, ಸಮಾಜ ಮತ್ತು ಮಿತ್ರರು ಸಹ ಅವರಿಗೆ ತಮ್ಮ ಮನೆಯ ಬಾಗಿಲನ್ನು ಮುಚ್ಚಿಬಿಟ್ಟಾಗ, ಅವರು ಕುಲೀನರೆನ್ನಿಸಿಕೊಂಡವರು ಹಗಲಿನ ಬೆಳಕಿನಲ್ಲಿ ಎಡೆತಾಕದಿರುವಂಥ ಎಡೆಗಳಲ್ಲಿ ಹೋಗಿ ನೆಲೆಸಿದ್ದರು. ಸಮಾಜದ ಎಲ್ಲ ವರ್ಗಗಳ ನಾರಿಯರೊಂದಿಗೆ ಅವರ ಸಂಬಂಧಗಳು ಸಹಜವೂ ಆತ್ಮೀಯವೂ ಆಗಿದ್ದುವು. ತಮ್ಮ ಪ್ರಸಿದ್ಧಿಯ ಸ್ವರ್ಣಕಾಲದಲ್ಲಿಯೂ ಅವರೆಂದೂ ಆ ಮಹಿಳೆಯರ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡು ಹೋಗುತ್ತಿರಲಿಲ್ಲ. ಅವರು ಅವರೆಲ್ಲರಿಗೂ ಸಹಜಭಾವದಿಂದ ತಮ್ಮ ಸಾಹಿತ್ಯದಲ್ಲಿ ಮಾನವೀಯ ಗೌರವಾದರಗಳನ್ನು ನೀಡಿದರು. ಆದ್ದರಿಂದಲೇ ಅವರ ವಿಷಯದಲ್ಲಿ ಆ ಮಹಿಳೆಯರೆಲ್ಲರೂ ಅಗಾಧ ಭಕ್ತಿಗೌರವಗಳನ್ನಿಟ್ಟುಕೊಂಡಿದ್ದರು; ಅವರತ್ತ ಆಕರ್ಷಿತರಾಗುತ್ತಿದ್ದರು. ಕಥೆ ಹೇಳುವ ಅವರ ರೀತಿ ಅವರಿಗೆ ಮೋಡಿ ಹಾಕಿತ್ತು. ಅವರ ಆಲೋಚನೆಗಳನ್ನು ಅನುಷ್ಠಾನಕ್ಕೆ ತರಲು ಅವರು ತಮ್ಮ ಪ್ರಾಣಗಳನ್ನು ಪಣವಾಗಿ ಒಡ್ಡಲೂ ಸಿದ್ಧರಾಗಿದ್ದರು. ಈ ಕಾರಣದಿಂದಾಗಿಯೇ ಅನೀತಿಯ ಪ್ರಚಾರಕರೆಂಬುದಾಗಿ ಅವರ ಬಗ್ಗೆ ನಡೆದ ಅಪಪ್ರಚಾರ ಉತ್ತುಂಗ ಸ್ಥಿತಿಯನ್ನೂ ತಲುಪಿತ್ತು. ಅವರನ್ನು ಇದ್ದಿಲಿಗಿಂತಲೂ ಕಪ್ಪೆಂದು ಸಿದ್ಧಪಡಿಸುವ ಸಲುವಾಗಿ ಅದೆಷ್ಟು ಕಥೆಗಳನ್ನು ಕಟ್ಟಿ ಹೇಳಿದರೋ ಏನೋ. ಆಶ್ಚರ್ಯದ ಸಂಗತಿಯೆಂದರೆ ಇಂಥ ಕಥೆಗಳನ್ನು ಕಟ್ಟಿ ಹೇಳುವುದಕ್ಕೆ ಅವರೇ ಸಲ್ಲಿಸಿದ ಕಾಣಿಕೆಯೂ ಕಡಿಮೆಯಾಗಿರಲಿಲ್ಲ. ಪರಸ್ಪರ ವಿರುದ್ಧವಾದ ಮಾತುಗಳನ್ನು ಹೇಳುವುದಕ್ಕೂ ಅವರು ಹಿಂದೆಗೆಯುತ್ತಿರಲಿಲ್ಲ. "ಸ್ತ್ರೀ ಸಮುದಾಯದ ವಿಷಯದಲ್ಲಿ ನಾನೆಂದೂ ಉಚ್ಛೃಂಖಲವಾಗಿ ವರ್ತಿಸಿಲ್ಲ; ಈಗಲೂ ವರ್ತಿಸುತ್ತಿಲ್ಲ" ಎಂದು ಒಬ್ಬ ಗೆಳೆಯನೊಂದಿಗೆ ಹೇಳಿದರೆ, ಒಂದೂವರೆ ವರ್ಷಗಳವರೆಗೆ ತಾವೊಬ್ಬ ಅಗಸಗಿತ್ತಿಯೊಂದಿಗೆ ಪ್ರೇಮ ವ್ಯವಹಾರವನ್ನು ಇಟ್ಟುಕೊಂಡಿದ್ದುದಾಗಿ ಇನ್ನೊಬ್ಬ ಗೆಳೆಯನಿಗೆ ಬರೆದೂ ಬಿಡುತ್ತಿದ್ದರು. ಅವರ ಇಡೀ ಬಾಳು ಇಂಥ ಅಸಾಂಗತ್ಯಗಳಿಂದ

ಹಾಗೂ ಪರಸ್ಪರ ವಿರುದ್ಧವಾದ ಸಂಗತಿಗಳಿಂದ ಇಡಿಕಿರಿದಿತ್ತು. ವಿಶಿಷ್ಟ ಸಂದರ್ಭ ಮತ್ತು ಪೂರ್ವಾಪರ ಸಂಬಂಧಗಳನ್ನು ಅರಿತುಕೊಳ್ಳದೆ ಅದರ ಸರಿಯಾದ ಅರ್ಥವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಸಂದರ್ಭದಿಂದ ಪ್ರತ್ಯೇಕಿಸಿಬಿಟ್ಟರೆ ಅದಕ್ಕೆ ಯಾವುದೇ ಅರ್ಥವೂ ಇರುವುದಿಲ್ಲ. ಆ ಸಂದರ್ಭವನ್ನು ತಿಳಿದುಕೊಳ್ಳಬೇಕಾದರೆ ಅವರ ಇಡೀ ಜೀವನದ ಹಿನ್ನೆಲೆಯನ್ನು ಅರಿತುಕೊಳ್ಳಬೇಕಾಗುತ್ತದೆ. ಸಮಾಜದ ವಿಷಯದಲ್ಲಿ ಸೇಡು ತೀರಿಸಿಕೊಳ್ಳಬೇಕೆಂಬ ಭಾವನೆ ಅವರ ಮನಸ್ಸಿನಲ್ಲಿ ಆಳವಾಗಿ ಬೇರುಬಿಟ್ಟದಂತೆ ತೋರುತ್ತದೆ. ಇಲ್ಲವಾದಲ್ಲಿ ಯಾರೇ ಆದರೂ ನಾಚಿಕೆಯಿಂದ ತಲೆತಗ್ಗಿಸಬೇಕಾಗುವಂಥ ಯಾವ ವಿಶಿಷ್ಟ ಸಂಗತಿಯೂ ಅವರ ಚಾರಿತ್ರ್ಯದಲ್ಲಿ ಮನೆ ಮಾಡಿಕೊಂಡಿರಲಿಲ್ಲ. ಹಾಗೇನಾದರೂ ಇದ್ದಿದ್ದರೆ, ಅವರು ಇಂಥ ಮಾತನ್ನು ಹೇಳಲು ಸಾಧ್ಯವಾಗುತ್ತಿತ್ತೆ: "ನನ್ನ ಬಾಳು ಅಂತಿಮವಾಗಿ ಒಂದು ಕಾದಂಬರಿಯೇ. ಆ ಬಾಳಿನಲ್ಲಿ ನಾನು ಏನೆಲ್ಲ ಮಾಡಿರಬಹುದು. ಆದರೆ, ಕೀಳು ಕೆಲಸವನ್ನೆಂದೂ ಮಾಡಿಲ್ಲ. ಸಾಯುವಾಗ ನಾನು ಸ್ವಚ್ಛವಾಗಿರುವ ಪುಟವನ್ನೇ ಬಿಟ್ಟು ಹೋಗುತ್ತೇನೆ. ಅದರಲ್ಲಿ ಎಲ್ಲಿಯೂ ಮಸಿಯ ಒಂದು ಚಿತ್ತು ಸಹ ಇರುವುದಿಲ್ಲ.

"ಅನೀತಿಯ ಪ್ರಚಾರಕ್ಕಾಗಿ ನಾನು ಲೇಖನಿಯನ್ನು ಹಿಡಿದಿಲ್ಲ. ಮನುಷ್ಯನ ಅಂತರಾಳದಲ್ಲಿ ಅಡಗಿರುವ ಮಾನವತೆಯನ್ನು, ಎಲ್ಲರೂ ಕಾಣಲಾಗದ ಆ ಹಿರಿಮೆಯನ್ನು ನಾನಾ ರೂಪಗಳಲ್ಲಿ ಚಿತ್ರಿಸಿ ಸಾದರಪಡಿಸಿದ್ದೇನೆ."

ಸೋಲರಿಯದ ಕಥಾಶಿಲ್ಪಿ ಶರತ್‌ಚಂದ್ರರು ರಾಜನೀತಿಯ ಕ್ಷೇತ್ರದಲ್ಲಿಯೂ ಸಕ್ರಿಯವಾಗಿ ಸಹಕರಿಸಿದ್ದರು ಎಂಬುದು ಹೆಚ್ಚು ಜನರಿಗೆ ಗೊತ್ತಿಲ್ಲ. ಅವರು ತಮ್ಮ ದೇಶವನ್ನು ಪ್ರೀತಿಸುತ್ತಿದ್ದರು. ಸಾಹಿತಿಗಳೇ ನಾಡಿನ ಬಿಡುಗಡೆಯ ಆಂದೋಳನದಲ್ಲಿ ಪಾಲ್ಗೊಳ್ಳದಿದ್ದರೆ, ಬೇರೆ ಯಾರು ತಾನೇ ಪಾಲ್ಗೊಂಡಾರು ಎಂಬುದು ಅವರ ನಿಲುವಾಗಿತ್ತು. ಅವರ ಬಾಳಿನ ಈ ಮುಖವನ್ನು ಬೆಳಗಲು ನಾನು ಎಲ್ಲ ಪ್ರಯತ್ನವನ್ನೂ ಮಾಡಿದ್ದೇನೆ. ಆಗಬಹುದಾಗಿದ್ದಂತೆ ಇಲ್ಲಿಯೂ ಅನೇಕ ಸಂಗತಿಗಳು ತುಂಬ ವಿವಾದಾಸ್ಪದವಾಗಿವೆ. ಆದರೆ, ಇವೆಲ್ಲಕ್ಕಿಂತಲೂ ವಿವಾದಾಸ್ಪದವಾಗಿರುವ ಸಂಗತಿ ಎಂದರೆ ಬಂಗಾಳಿ ಸಾಹಿತ್ಯದಲ್ಲಿನ ಅವರ ಸ್ಥಾನಕ್ಕೆ ಸಂಬಂಧಿಸಿದುದು. ಅವರು ಎಂದೂ ಸಾಹಿತಿಯಾ[illegible] ಇಲ್ಲ. ಅವರು ಅಲೆಮಾರಿಗಳ, ದುರಾಚಾರಿಗಳ ಮತ್ತು ವೇಶ್ಯೆಯರ ವಕ್ತಾರರಾಗಿದ್ದರು ಎಂಬುದು ಕೆಲವರ ನಿಲುವಾಗಿತ್ತು. ಅವರು ಹೊಸದೇನನ್ನೂ ಕೊಡಲಿಲ್ಲ. ಬಂಕಿಮಚಂದ್ರರ ಮತ್ತು ರವೀಂದ್ರರ ಎಂಜಲನ್ನೇ ತಮ್ಮ ಪಾತ್ರಗಳ ಮೂಲಕ ಸುಂದರವಾಗಿ ಮುಂದಿರಿಸಿದ್ದಾರೆ, ಹೇಳುವ ರೀತಿಯಷ್ಟೇ ಬೇರೆಯಾಗಿದೆ ಎಂಬುದು ಇನ್ನು ಕೆಲವರ ಅಭಿಪ್ರಾಯವಾಗಿದೆ. ಮತ್ತೆ ಕೆಲವರು ಅವರಿಗೆ ಇಷ್ಟು ಶ್ರೇಯಸ್ಸನ್ನು ಕೊಡಬಯಸುವುದಿಲ್ಲ. ಅಷ್ಟೇ ಅಲ್ಲ, ಭಾಷೆಯನ್ನು ಹಾಳುಗೆಡವಿದ ಆರೋಪವನ್ನು ಅವರ ಮೇಲೆ ಹೊರಿಸುತ್ತಾರೆ. ಆದರೆ, ಅವರು ತೀರಿಕೊಳ್ಳುವುದಕ್ಕೆ ಹದಿನೈದು ತಿಂಗಳ ಹಿಂದೆ ಸ್ವತಃ ಕವಿ ಗುರು ರವೀಂದ್ರನಾಥರು ಅವರ ಬಗ್ಗೆ ಹೇಳಿದ್ದ ಮಾತುಗಳು ಈ ಎಲ್ಲ ಅಭಿಪ್ರಾಯಗಳನ್ನೂ ಸುಳ್ಳಾಗಿಸಿಬಿಡುತ್ತವೆ.

ಶರತ್‌ಚಂದ್ರರು ರವೀಂದ್ರನಾಥರನ್ನು ಸದಾ ತಮ್ಮ ಗುರುಗಳೆಂದೇ ಭಾವಿಸಿದ್ದರು.

ಅನೇಕ ಸಲ ಭಿನ್ನಾಭಿಪ್ರಾಯಗಳು ಉಂಟಾದುವು, ಪರಸ್ಪರ ಅಂದು ಆಡುವಂಥ ಸ್ಥಿತಿಯೂ ಉಂಟಾಯಿತು. ಆದರೆ, ಕೊನೆಗೆ ಅವರಿಬ್ಬರೂ ಪರಸ್ಪರರ ಪ್ರತಿಭೆಯನ್ನು ಗೌರವಿಸಿದರು. ಅವರು ಹಾಗೆಯೇ ಮಾಡಬೇಕಾಗಿತ್ತು. ವ್ಯಾಸರ ಅನಂತರ ಭಾರತದಲ್ಲಿ ಹುಟ್ಟಿದ ಸರ್ವಶ್ರೇಷ್ಠ ಕವಿ ಎಂಬುದಾಗಿ ರವೀಂದ್ರನಾಥರನ್ನು ಶರತ್‌ಚಂದ್ರರು ಹಾಡಿಹೊಗಳಿದರೆ, ರವೀಂದ್ರನಾಥರೂ ಮತ್ತೆ ಮತ್ತೆ ಶರತ್‌ಚಂದ್ರರ ಕಥಾ ಸಾಹಿತ್ಯದ ವೈಶಿಷ್ಟ್ಯಗಳನ್ನು ಸಾರಿ ಹೇಳಿ ಅಭಿನಂದಿಸಿದರು. ತಾವೇ ಏರ್ಪಡಿಸಿದ್ದ ಅವರ ಷಷ್ಠಿಪೂರ್ತಿಯ ಸಂದರ್ಭದಲ್ಲಿ[1] ಸ್ವತಃ ಅವರೇ ಹೀಗೆಂದು ಹೇಳಿದ್ದರು: "ಖಗೋಳ ವಿಜ್ಞಾನಿ ಅಸೀಮ ಆಕಾಶದಲ್ಲಿ ಮುಳುಗಿ ನಾನಾರಶ್ಮಿ ಸಮೂಹಗಳಿಂದ ನಿರ್ಮಿತವಾಗಿರುವ ನಾನಾ ಜಗತ್ತುಗಳನ್ನು ಆವಿಷ್ಕರಿಸುತ್ತಾನೆ. ಇವು ಅನೇಕ ಕಕ್ಷೆಗಳ ಮಾರ್ಗವಾಗಿ ತೀವ್ರ ವೇಗದಿಂದ ಅವತರಿಸುತ್ತಿರುತ್ತವೆ. ಶರತ್‌ಚಂದ್ರರ ದೃಷ್ಟಿ ಬಂಗಾಳಿ ಹೃದಯದ ರಹಸ್ಯದಲ್ಲಿ ಮುಳುಗಿ ಹೋಗಿದೆ. ಸುಖದಲ್ಲಿ, ದುಃಖದಲ್ಲಿ, ಮಿಲನದಲ್ಲಿ, ವಿರಹದಲ್ಲಿ ಬಂಗಾಳಿಗಳು ತಮ್ಮನ್ನು ತಾವೇ ಪ್ರತ್ಯಕ್ಷವಾಗಿ ಕಂಡುಕೊಳ್ಳುವಂತೆ, ಇವುಗಳಲ್ಲೆಲ್ಲ ಮೈದಳೆದಿರುವ ಅಪೂರ್ವ ವೈಶಿಷ್ಟ್ಯವನ್ನು ಅವರು ಪರಿಚಯಿಸಿಕೊಟ್ಟಿದ್ದಾರೆ. ಇತರ ಲೇಖಕರು ಅನೇಕರ ಪ್ರಶಂಸೆಯನ್ನು ಗಳಿಸಿದ್ದಾರೆ. ಆದರೆ, ಜನಸಾಮಾನ್ಯರ ಹೃದಯದ ಆತಿಥ್ಯವನ್ನು ಅವರಂತೆ ಪಡೆದವರು ಇನ್ನೊಬ್ಬರಿಲ್ಲ. ಇದು ವಿಚಿತ್ರ ಸಂಗತಿಯೇನೂ ಅಲ್ಲ, ಇದೇ ಪ್ರೀತಿ, ಅನಾಯಾಸವಾಗಿ ಅವರು ಗಳಿಸಿರುವ ಈ ಅದ್ಭುತ ಯಶಸ್ಸು ನಾನೂ ಅವರ ವಿಷಯದಲ್ಲಿ ಹೊಟ್ಟೆಕಿಚ್ಚು ಪಡುವಂತೆ ಮಾಡಿದೆ. ನಿಮ್ಮನ್ನು ಸಂಪೂರ್ಣವಾಗಿ ಬೆಳಕಿಗೆ ತಂದವನು ನಾನು ಎಂದು ಹೇಳಿಕೊಳ್ಳಬಹುದಾಗಿದ್ದರೆ, ಇಂದು ಶರತ್‌ಚಂದ್ರರ ಅಭಿನಂದನ ಸಮಾರಂಭದಲ್ಲಿ ನಾನು ವಿಶೇಷ ಅಭಿಮಾನಪಟ್ಟುಕೊಳ್ಳಬಹುದಾಗಿತ್ತು. ಆದರೆ, ಅವರು ಯಾರದೇ ಹಸ್ತಾಕ್ಷರವನ್ನೊಳಗೊಂಡ ಅಥವಾ ಯಾರೇ ಬರೆದುಕೊಟ್ಟ ಪರಿಚಯಪತ್ರಕ್ಕಾಗಿ ಬಾಯಿಬಿಟ್ಟುಕೊಂಡು ಕುಳಿತಿರಲಿಲ್ಲ. ಇಂದು ಅವರ ಅಭಿನಂದನೆ ನಮ್ಮ ನಾಡಿನ ಮನೆಮನೆಗಳಲ್ಲಿ ಮಾರ್ಮೊಳಗುತ್ತಿದೆ. ಅವರು ಬಂಗಾಳೀ ವೇದನೆಯ ಕೇಂದ್ರದಲ್ಲಿ ತಮ್ಮ ವಾಣಿಯಿಂದ ಸ್ಪಂದನೆಯನ್ನು ಮೂಡಿಸಿದ್ದಾರೆ. ಸಾಹಿತ್ಯದಲ್ಲಿ ಉಪದೇಶಕನಿಗಿಂತಲೂ ಸ್ರಷ್ಟಾರನ ಸ್ಥಾನ ತುಂಬ ಹಿರಿದಾಗಿರುತ್ತದೆ. ಚಿಂತನ ಶಕ್ತಿಯ ವಿತರ್ಕವಲ್ಲ. ಕಲ್ಪನಾಶಕ್ತಿಯ ಪೂರ್ಣದೃಷ್ಟಿ ಮಾತ್ರವೇ ಸಾಹಿತ್ಯದಲ್ಲಿ ಶಾಶ್ವತ ಗೌರವದ ಸ್ಥಾನದಲ್ಲಿ ನೆಲೆಗೊಳ್ಳುತ್ತದೆ. ಕವಿಯ ಆಸನದಲ್ಲಿ ಕುಳಿತಿರುವ ನಾನು ವಿಶೇಷವಾಗಿ ಆ ಸ್ರಷ್ಟಾರರಾಗಿರುವ ಶರತ್‌ಚಂದ್ರರಿಗೆ ಮಾಲಾರ್ಪಣೆ ಮಾಡುತ್ತೇನೆ. ಅವರು ಶತಾಯುವಾಗಿ ಬಂಗಾಳಿ ಸಾಹಿತ್ಯವನ್ನು ಸಮೃದ್ಧಗೊಳಿಸಲಿ!

"ನನ್ನ ಬಾಲ್ಯದಲ್ಲಿ ಬಂಕಿಮಚಂದ್ರರ ಅಭ್ಯುದಯದಲ್ಲಿ ಬಂಗಾಳಿ ಸಾಹಿತ್ಯದಲ್ಲಿ ಒಂದು ಹೊಸ ಭಾವನೆ ಉಕ್ಕಿ ಹರಿದುದನ್ನು ಕಂಡಿದ್ದೆ. ಭಗೀರಥನಂತೆ ಬಂಕಿಮಚಂದ್ರರು ಹೊತ್ತು ತಂದ ಹೊಸ ಸಾಹಿತ್ಯ ಬಂಗಾಳದ ಶ್ರೀಸಾಮಾನ್ಯನ ಅಂತರ್ಯವನ್ನು ಮುಟ್ಟಿತು. ಅವರು ಗೌರವಪೂರ್ವಕವಾಗಿ ಅವರನ್ನು

1 ಅಕ್ಟೋಬರ್, 11, 1936

ತಮ್ಮವರೆಂದು ಸ್ವೀಕರಿಸಿದರು. ಅಂದಿನ ತರುಣರ ಮತ್ತು ಯುವಕರ ಮೇಲೆ ಮಾತ್ರವಲ್ಲದೆ ಅಡುಗೆಯ ಮನೆಯ ಅಂಗನೆಯರ ಮೇಲೂ ಬಂಕಿಮ ಸಾಹಿತ್ಯದ ಹೊಸಗಾಳಿ ಬೀಸಿತು. ನಿಂದನೆ ಮತ್ತು ಪ್ರತಿಭಟನೆಯ ವಿಷಯದಲ್ಲಿ ವಿರೋಧಿಗಳು ಯಾವುದೇ ಕೊರೆಯನ್ನೂ ಉಳಿಸಲಿಲ್ಲ. ಏಕೆಂದರೆ, ಬಂಕಿಮ ಸಾಹಿತ್ಯ ಅದೆಲ್ಲವನ್ನೂ ನುಂಗಿ ನೀರು ಕುಡಿದು ತನ್ನನ್ನು ನೆಲೆಗೊಳಿಸಿಕೊಂಡಿತು. ನನ್ನ ವೃದ್ಧಾಪ್ಯದಲ್ಲಿ ಶರತ್‌ಚಂದ್ರರ ಅಭ್ಯುದಯದಲ್ಲಿ ನಾನು ಮತ್ತೆ ಅದೇ ಪ್ರಕ್ರಿಯೆಯನ್ನು ಕಂಡೆ. ಕಥಾಸಾಹಿತ್ಯಕ್ಕೆ ಸಂಬಂಧಿಸಿದಂತೆ ಶರತ್‌ಚಂದ್ರರು ಬಂಗಾಳಿ ಸಾಹಿತ್ಯಕ್ಕೆ ಹೊತ್ತು ತಂದಂಥ ವಸ್ತು ಬಂಗಾಳದ ಜನಸಾಮಾನ್ಯರ ಆಂತರ್ಯವನ್ನು ತಟ್ಟಿತು. ಅವರ ನಿಗೂಢತಮ ವೇದನೆಯ ತಲದ ಮೇಲೆಯೇ ಅದು ಆಘಾತವನ್ನೆಸಗಿತು. ಆದ್ದರಿಂದಲೇ, ಬಂಗಾಳದ ಎಲ್ಲ ಜನರೂ ಶರತ್‌ಚಂದ್ರರ ಸಾಹಿತ್ಯವನ್ನು ತಮ್ಮದೆಂದು ಅಂಗೀಕರಿಸಿದರು...."

ಯಾರೋ ಒಬ್ಬರು ಹೀಗೆ ಹೇಳಿದ್ದಾರೆ: "ಬಂಗಾಳದಲ್ಲಿನ ನವಜಾಗೃತಿಯ ವೈತಾಲಿಕರಾಗಿದ್ದವರು ರಾಮಮೋಹನರಾಯ್ ಅವರು. ಮಧ್ಯಾಹ್ನದ ಚಾರಣ ರಾದವರು ಬಂಕಿಮಚಂದ್ರರು. ಅದು ಪರಿಣತಿಯನ್ನು ಕಂಡದ್ದು ರವೀಂದ್ರರ ಸಾಹಿತ್ಯದಲ್ಲಿ. ಶರತ್‌ಚಂದ್ರರು ಇದೇ ರವೀಂದ್ರ ಯುಗದ ಉಜ್ವಲ ನಕ್ಷತ್ರವಾಗಿದ್ದರು. ಬಂಕಿಮರು ದೇವತೆಯ ಉಪಾಸಕರು, ರವೀಂದ್ರರಲ್ಲಿ ಅತೀಂದ್ರಿಯ ಅನುಭೂತಿಯಿದೆ; ಆದರೆ, ಶರತ್‌ಚಂದ್ರರು ನೆಲದ ಮಣ್ಣುಹುಡಿಯನ್ನೇ ಮಹಿಮಾ ಮಯವಾಗಿಸಿದರು. ಅವರು ಬಂಗಾಳದ ತಮ್ಮದೇ ಆದ ಭಾಷೆಯನ್ನು ಬಳಸಿದರು, ತಮ್ಮ ನಿರಂಕುಶ ಮನಸ್ಸಿನ ಪರಿಚಯ ಮಾಡಿಕೊಟ್ಟರು. ಅವರ ವಾಸ್ತವತಾವಾದದಲ್ಲಿ-ಅದನ್ನು ವಾಸ್ತವವತಾವಾದ ಎನ್ನುವುದಾದರೆ - ಸಂವೇದನೆಯ ಹಾಗೂ ಕರುಣಾಪೂರ್ಣ ಚಿತ್ತದ ಸಂಸ್ಪರ್ಶವಿದೆ."

ಸಾಹಿತ್ಯಿಕ ಬಂಧುಗಳು ಮಾತ್ರವಲ್ಲದೆ ರಾಜಕಾರಣಿಗಳು, ವಿಜ್ಞಾನಿಗಳು, ಕಾನೂನು ತಜ್ಞರು ಹಾಗೂ ಧರ್ಮತತ್ವ ವೇತ್ತರುಗಳು ಕೂಡ ಸಹಜ ಭಾವದಿಂದ ಮೆಚ್ಚಿಕೊಂಡಿರುವಂಥ ಸಾಹಿತಿಗಳ ಸಂಖ್ಯೆ ಈ ನಾಡಿನಲ್ಲಿ ತುಂಬ ಕಡಿಮೆಯಾಗಿದೆ. ಎಲ್ಲರ ಮೆಚ್ಚಿಕೆಯನ್ನು ಗಳಿಸಿದ್ದಂಥ ವಿರಳ ಸಾಹಿತಿಗಳಲ್ಲಿ ಶರತ್‌ಚಂದ್ರರೂ ಒಬ್ಬರಾಗಿದ್ದರು. ಅರವಿಂದರ ಅಂತರ್‌ಭೇದಿ ದೃಷ್ಟಿ ಅವರನ್ನು ಗುರುತಿಸಿತ್ತು. ಎಲ್ಲರ ಭಾವನೆಗಳಿಗೆ ದನಿಗೊಟ್ಟಂತೆ ಅವರು ಹೀಗೆಂದು ಹೇಳಿದ್ದಾರೆ: "ಶರತ್‌ಚಂದ್ರರ ಕೃತಿಗಳಲ್ಲಿ ಅವರ ವ್ಯಾಪಕವಾದ ಮೇಧಾಶಕ್ತಿಯ, ಮಾನವರ ಮತ್ತು ವಸ್ತುಗಳ ಸೂಕ್ಷ್ಮ ಹಾಗೂ ಯಥಾರ್ಥ ಪರ್ಯವೇಕ್ಷಣೆ ಹಾಗೂ ನೋವು ಮತ್ತು ಸಂಕಟಗಳ ವಿಷಯದಲ್ಲಿ ಸಹಾನುಭೂತಿಯಿಂದ ಕೂಡಿರುವ ಹೃದಯದ ಅಚ್ಚಳಿಯದ ಮುದ್ರೆ ಇದೆ. ಅವರು ಅದೆಷ್ಟು ಹೆಚ್ಚು ಸಂವೇದನಶೀಲರಾಗಿದ್ದಾರೆಂದರೆ ಅವರಿಗೆ ಈ ಲೋಕದಲ್ಲಿ ಶಾಂತಿ ದೊರೆಯುವುದಾದರೂ ಹೇಗೆ ಸಾಧ್ಯ ಎಂದೆನ್ನಿಸುತ್ತದೆ. ಅವರ ದೃಷ್ಟಿಯೂ ಬಹುಶಃ ಅಷ್ಟೇ ಸೂಕ್ಷ್ಮವಾಗಿದೆ. ಅವರ ಮನಸ್ಸು ತುಂಬ ನಿರ್ಮಲವಾಗಿದೆ. ಅವರ ಹೃದಯ ತುಂಬ ಉದಾತ್ತ ಪ್ರಕೃತಿಯಾಗಿದೆ.

ಬಂಕಿಮಚಂದ್ರರು ಹೊಸ ಯುಗದ ಸಂದೇಶವನ್ನೇನೂ ಕೊಡಲಿಲ್ಲ, ಎಂದಲ್ಲ.

ಆದರೆ, ಅವರು ಮೂಲತಃ ಸಂಸ್ಕಾರಶೀಲ ಶಿಲ್ಪಿಯಾಗಿದ್ದರು. ಸಾಮಾನ್ಯ-ಸಹಜ ಮಾನವನ ಮೇಲೆ ಅವರು ಆದರ್ಶ-ಮಹತ್ತರ ಮಾನವನನ್ನು ನೆಲೆಗೊಳಿಸಿದರು. ತಪ್ಪೆಸಗಿದ ಮಾನವನಿಗೆ ಅವರು ಕಠೋರ ಶಿಕ್ಷೆಯನ್ನು ವಿಧಿಸಿದರು. ಪರಂಪರೆಯನ್ನು ಅವರು ಪವಿತ್ರವಾದುದೆಂದು ಭಾವಿಸಿದ್ದರು. ಪಾಪದ ಬಗ್ಗೆ ಅವರಿಗೆ ತಿರಸ್ಕಾರದ ಭಾವನೆಯಿತ್ತು. ಶರತ್‌ಚಂದ್ರರೂ ಪಾಪವನ್ನೂ ಪ್ರಚಾರ ಮಾಡಿಕೊಂಡು ಹೊರಟವರಲ್ಲ, ಪರಂಪರೆಯ ಬಗ್ಗೆಯೂ ಅವರಿಗೆ ತಿರಸ್ಕಾರದ ಭಾವನೆ ಇರಲಿಲ್ಲ. ಆದರೆ ಅವರು ಮನುಷ್ಯನನ್ನು ಪ್ರೀತಿಸುವುದು ಮನುಷ್ಯನೆಂಬ ಕಾರಣಕ್ಕಾಗಿಯೇ ಹೊರತು, ದೇವತೆಯೆಂಬ ಕಾರಣಕ್ಕಾಗಿಯಲ್ಲ. ಯಾವುದೇ ಶಾಸ್ತ್ರ ಶ್ಲೋಕ, ಮಂತ್ರ, ತಂತ್ರ ಮನುಷ್ಯನಿಗಿಂತ ದೊಡ್ಡದಲ್ಲ. ಅವರ ಪಾತ್ರಗಳಿಗೆ ತಮ್ಮದೇ ಆದ ವೈಶಿಷ್ಟ್ಯಗಳಿವೆಯಾದರೂ, ಅವೆಲ್ಲ ಇದೇ ನೆಲದ ಮೂಳೆ-ಮಾಂಸಗಳಿಂದ ಆಗಿರುವ ಬೊಂಬೆಗಳು, ಭಯಂಕರ ಭಾವುಕತೆಯಿದ್ದರೂ ತದ್ವಿರುದ್ಧವಾದ ಚಿತ್ತವೃತ್ತಿಗಳ ಸಂಘರ್ಷ ಶರತ್‌ಚಂದ್ರರಲ್ಲಿ ಕಂಡುಬರುವಂತೆ ಬಂಕಿಮ ಸಾಹಿತ್ಯದಲ್ಲಿ ಕಾಣದೊರೆಯುವುದಿಲ್ಲ.

ರವೀಂದ್ರನಾಥರು ಯಾವ ನವಯುಗಕ್ಕೆ ಸೂತ್ರಧಾರರಾಗಿದ್ದರೋ, ಅದರಲ್ಲಿ ಮಣ್ಣಿನ ವಾಸನೆ ನೆಲೆಗೊಳ್ಳುವಂತೆ ಮಾಡಿ ಶರತ್‌ಚಂದ್ರರು ಅದನ್ನು ಮನೆಮನೆಗೂ ತಲುಪಿಸಿಬಿಟ್ಟರು. ರವೀಂದ್ರನಾಥರ ಕಥಾಸಾಹಿತ್ಯದಲ್ಲಿ ಘಟನೆಗಳು ವ್ಯಾಖ್ಯಾನದ ಹೊರೆಯ ಕೆಳಗೆ ಹೂತು ಹೋಗುತ್ತವೆ. ವಿವರಣೆಯ ಮೇಲೆ ವಿಶ್ಲೇಷಣೆಯ ಆಧಿಪತ್ಯ ಕಾಣದೊರೆಯುತ್ತದೆ. ಆದರೆ, ಶರತ್‌ಚಂದ್ರರು ಹೇಳುವ ರೀತಿ ಸುಮಧುರವಾಗಿದೆ, ಸಹಜವಾಗಿದೆ ಹಾಗೂ ಸರಳವಾಗಿದೆ. ಅವರು ಎಲ್ಲಿಯೂ ತಮ್ಮನ್ನು ಜೀವನದಿಂದ ಪ್ರತ್ಯೇಕಿಸಿಕೊಳ್ಳುವುದಿಲ್ಲ. ಆ ಜೀವನ ಒಮ್ಮೆಗೆ ತ್ಯಾಗದಿಂದ ಉಜ್ವಲವಾಗಿದೆ ಹಾಗೂ ಸ್ವಾರ್ಥದಿಂದ ನೊಂದಿದೆ; ಅನುಭೂತಿಯಿಂದ ಗಂಭೀರವಾಗಿದೆ; ವಿಧಿ-ನಿಷೇಧಗಳಿಂದ ಹಾಗೂ ಸಂಸ್ಕಾರಗಳಿಂದ ಕ್ಲಿಷ್ಟವಾಗಿಬಿಟ್ಟಿದೆ. ಬುದ್ಧಿಯಲ್ಲ, ತರ್ಕವಲ್ಲ, ಅಪೂರ್ವ ಸಹಾನುಭೂತಿಯಿಂದ ದೈನ್ಯ ಮತ್ತು ಸಂಸ್ಕಾರ ಪೀಡಿತವಾಗಿರುವ ಹಾಗೂ ವಿಧಿ-ನಿಷೇಧಗಳಿಂದ ನಿರ್ಯಾತಿತವಾಗಿಬಿಟ್ಟಿರುವ ನಮ್ಮ ನೈಜ ಜೀವನವನ್ನು ನಮ್ಮ ಹೃದಯದ ಹತ್ತಿರಕ್ಕೆ ತಂದುಬಿಟ್ಟಿದೆ.

ಸಂಸ್ಕೃತದಿಂದ ಮುಕ್ತವಾದ ಸಹಜವಾಗಿ ಬಾಗಿ ಬಳುಕುವ ಹಾಗೂ ಸಲೀಲವಾಗಿ ಹರಿಯುವ ಭಾಷೆ ಉತ್ತರಾಧಿಕಾರದ ಆಸ್ತಿ ಎಂಬಂತೆ ರವೀಂದ್ರರಿಂದ ಅವರಿಗೆ ದೊರೆತಿತ್ತು. ರವೀಂದ್ರರು ಬಂಕಿಮಚಂದ್ರರ ಭಾಷೆಯನ್ನು ಸರಳವೂ ಸಹಜವೂ ಆಗಿಸಿದ್ದರು. ಶರತ್‌ಚಂದ್ರರು ಅದನ್ನು ಮತ್ತಷ್ಟು ತಿಳಿಯಾಗುವಂತೆ ಮತ್ತು ಹೃದಯಸ್ಪರ್ಶಿಯಾಗುವಂತೆ ಮಾಡಿದರು. ಜೀವನದ ಸಣ್ಣಪುಟ್ಟ ನೋವು-ನಲಿವುಗಳನ್ನು ತೆರೆದು ಹೇಳುವ ಶಕ್ತಿ ಆ ಭಾಷೆಗೆ ಲಭಿಸಿತ್ತು. ಶರತ್‌ಚಂದ್ರರು ಅದಕ್ಕೆ ವ್ಯಾಪಕತೆ ಮತ್ತು ಆಳದೊಂದಿಗೆ ಅದ್ಭುತವೆನ್ನಬಹುದಾದಂಥ ಸಹಜತೆಯನ್ನು ನೀಡಿ, ಅದನ್ನು ತಮ್ಮದಾಗಿಸಿಕೊಂಡರು. ಅವರ ಭಾಷೆಯಲ್ಲಿ 'ಬೈಬಲ್'ನ ಭಾಷೆಯಲ್ಲಿ ಕಾಣುವಂಥ ಸರಳತೆ ಇದೆ. ಈ ಸರಳತೆ ಅವರ ಬಾಳಿನಲ್ಲಿಯೇ ಹಾಸು ಹೊಕ್ಕಾಗಿಬಿಟ್ಟಿತ್ತು. ಮಿಥ್ಯಾಡಂಬರಗಳಿಂದ ದೂರವಾಗಿ, ತಮ್ಮ ಅನುಭವವನ್ನೇ

ಆಧಾರವಾಗಿಸಿಕೊಂಡು ಅವರು ಸರಳತೆ ಮತ್ತು ಸಾಮಾನ್ಯತೆಯ ಶಕ್ತಿಯಿಂದೊಡಗೂಡಿದಂಥ ಅಭಿನವ ಶೈಲಿಯನ್ನೇ ಕಂಡುಕೊಂಡರು.

ರವೀಂದ್ರರು ಮಾನವೀಯ ಘಟನೆಗಳನ್ನು ವಿಶ್ವ ಪ್ರಕೃತಿಯೊಂದಿಗೆ ಬೆರೆಸಿ ನೋಡುತ್ತಿದ್ದರು. ಅವರ ಅಂತರ್ದ್ವಂದ್ವ ನಿರ್ವ್ಯಕ್ತಿಕವಾದುದು. ಅವರ ಪಾತ್ರಗಳು ಆಲೋಚನೆಗಳ ಮಾನವೀಯ ಸಂಸ್ಕರಣವೆಂಬಂತಿವೆ. ಅವರ ಗುರಿ ದೇಶಾತೀತ-ಕಾಲಾತೀತ ಮಾನವ. ಇದಕ್ಕೆ ತನ್ನದೇ ಆದ ಬೆಲೆಯಿದ್ದರೂ, ಇದು ಮನುಷ್ಯನ ಹಸಿವನ್ನು ತಣಿಸಲಾರದು. ಬಾಳಿನ ವಾಸ್ತವಿಕ ಸುಖ-ದುಃಖಗಳನ್ನೇನೂ ಅವರು ನಿರಾಕರಿಸಲಿಲ್ಲ. ಆದರೆ, ದುಃಖವನ್ನು ಮೀರಿ ನಿಂತ ಮಹತ್ತರವಾದ ಬದುಕಿನ ಹಾಣೆಯಷ್ಟೇ ಅವರ ಕೃತಿಗಳಲ್ಲಿ ವ್ಯಕ್ತವಾಯಿತು. ರವೀಂದ್ರರು ಏನು ಸಾಧಿಸಿದ್ದರೋ ಅದನ್ನು ಶರತ್‌ಚಂದ್ರರು ಮುಂದುವರಿಸಿದರು. ರವೀಂದ್ರರು ಅಂದಿಮ ಸಾಮಾಜಿಕ ನಿಯಮಗಳಿಗೆ ಹೊರತಾದ ಅನೇಕ ವಿಷಯಗಳನ್ನು ಉದಾಹರಣೆಗೆ, ವಿಧವೆಯ ಪ್ರೇಮಾಭಿಲಾಷೆಯಂಥ ವಿಷಯವನ್ನು ಸಹಜ ವಾದುದೆಂದು ಹೇಳಿ ಸುಮ್ಮನಾಗಿಬಿಟ್ಟರು, ಆದರೆ, ಶರತ್‌ಚಂದ್ರರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸಮಾಜದ ಎದುರಿಗೆ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿಬಿಟ್ಟರು. ಪ್ರೀತಿಹೀನ, ಧರ್ಮಹೀನ, ಕ್ಷಮಾಹೀನ ಸಮಾಜವನ್ನು ಅವರು ಮತ್ತೆ ಮತ್ತೆ ಹೀಗೆಂದು ಪ್ರಶ್ನಿಸಿದರು: "ನಿಮ್ಮಿಂದ ಏನಾದರೂ ಮಾನವೀಯ ಕಲ್ಯಾಣ ಸಾಧಿತವಾಗಿದೆಯೇ ?"

ಶರತ್‌ಚಂದ್ರರ ಪಾತ್ರಗಳೂ ಅಸಾಮಾನ್ಯವಾದುವು. ಆದರೆ ಅವಕ್ಕೆ ಸಮಾಂತರವಾಗಿರುವಂಥ ವ್ಯಕ್ತಿಗಳನ್ನು ಸಮಾಜದಲ್ಲಿ ಕಾಣಬಹುದಾಗಿದೆ. ಅವಕ್ಕೂ ದೈನಂದಿನ ಜೀವನಕ್ಕೂ ಹೊಂದಾಣಿಕೆಯೇ ಇಲ್ಲ ಎಂಬಂತೇನೂ ತೋರುವುದಿಲ್ಲ. ಏಕೆಂದರೆ, ಅವುಗಳ ಹಿಂದೆ ಅವುಗಳನ್ನೇ ಸೃಷ್ಟಿಸಿದ ಸಾಹಿತಿಯ ಅನುಭವದ ಅಸೀಮ ಕೋಶವೇ ಇದೆ. ಅವುಗಳ ಮೌಲಿಕತೆಯನ್ನು ನಿರಾಕರಿಸುವುದು ದುರಾಗ್ರಹ ಮಾತ್ರವಾಗುತ್ತದೆ. ರವೀಂದ್ರ ಯುಗದಲ್ಲಿ ಆ ಮಹಾ ವಟವೃಕ್ಷದ ನೆರಳಿನಲ್ಲಿ, ತಮ್ಮ ಪ್ರತಿಭೆಯಿಂದ ತಮ್ಮ ಸ್ಥಾನವೊಂದನ್ನು ನಿರ್ಮಿಸಿಕೊಂಡಿದ್ದು ಮಾತ್ರವಲ್ಲದೆ, ಇಡೀ ದೇಶವನ್ನೇ ತಮ್ಮತ್ತ ಸೆಳೆದುಕೊಂಡಿದ್ದು ಕಡಿಮೆ ಅಭಿನಂದನೀಯವಾದ ಸಂಗತಿಯೇನು ? ಅವರ ಸಾಹಿತ್ಯದ ಕ್ಷೇತ್ರ ಸೀಮಿತವಾಗಿದೆ ಎಂಬುದು ನಿಜ. ಆದರೆ, ಅದು ಅಪೂರ್ವವೂ ಆಗಿದೆ. ಪ್ರೇಮವನ್ನು ಚಿತ್ರಿಸುವಲ್ಲಿ ಅವರು ತಮ್ಮ ಅದ್ಭುತ ಸೃಜನಾತ್ಮಕ ಶಕ್ತಿಯನ್ನು ಪರಿಚಯಿಸಿಕೊಡುತ್ತಾರೆ. ಅವರ ಮೇಲೆ 'ಚರಿತ್ರಹೀನ'ನೆಂಬ ಆರೋಪವನ್ನು ಬೇಕಾದರೆ ಹೊರಿಸಬಹುದು, ಹೊರಿಸಲಾಗಿದೆ. ಆದರೆ, ಅದರ ಚಿತ್ರಣದಲ್ಲಿ ಎಲ್ಲಿಯೂ ಅಶ್ಲೀಲತೆ ಎಂಬುದು ಹುಡುಕಿನೋಡಿದರೂ ಸಿಕ್ಕುವುದಿಲ್ಲ. ಅಲ್ಲಿ ನಮಗೆ ಕಾಣದೊರೆಯುವುದು ಅದ್ಭುತವಾದ ಸಂಯಮ. ಈ ಸಂಯಮವೇ ಶರತ್‌ಚಂದ್ರರ ವೈಶಿಷ್ಟ್ಯ; ಅಷ್ಟೇ ಅಲ್ಲ, ಅದು ತನಗೆ ತಾನೇ ಅದ್ವಿತೀಯವಾದುದು. ಇಳಾಚಂದ್ರ ಜೋಶಿಯವರ ಮಾತುಗಳಲ್ಲಿ ಹೇಳಬೇಕೆಂದರೆ, "ಅವರಲ್ಲಿ ರವೀಂದ್ರನಾಥರ ಬೌದ್ಧಿಕ ಎತ್ತರವಾಗಲೀ ವ್ಯಾಪಕತೆಯಾಗಲೀ ಇಲ್ಲ, ಅವರ ತಲಸ್ಪರ್ಶೀ ರಹಸ್ಯಾನುಭೂತಿಯ ಆ ನಿಗೂಢತೆ ಮತ್ತು ನಿಬಿಡತೆಯೂ ಇಲ್ಲ.

ಆದರೆ, ಅವರಲ್ಲಿ ಒಂದು ದೊಡ್ಡ ವೈಶಿಷ್ಟ್ಯವಿದೆ. ಅದು ಇತರರಿಗೆ ಸುಲಭವಾಗಿ ದೊರೆಯುವಂಥದಲ್ಲ. ಬಾಳನ್ನು ಸರಳ, ಸುಸ್ಪಷ್ಟ ಹಾಗೂ ತೊಡಕಿಲ್ಲದ ದೃಷ್ಟಿಯಿಂದ ನೋಡಿ, ಅದರ ಸಾರ್ಥಕತೆಯಲ್ಲಿ ಸಹಜವೆಂಬಂತೆ ಮುಳುಗಿ ಎದ್ದು, ಯಾವುದೇ ಬಗೆಯ ಬೌದ್ಧಿಕ ದೊಂಬರಾಟದಲ್ಲಿ ತೊಡಗದೆ ಅದರ ನಿಜ ಸ್ವರೂಪವನ್ನು ಹೃದಯಂಗಮವಾಗಿಸಿಕೊಂಡು, ಯಾವುದೇ ಬಗೆಯ ಕೃತ್ರಿಮ ಕಾವ್ಯಕೌಶಲದಿಂದ ಆ ನಿಜಸ್ವರೂಪವನ್ನು ನಿರೂಪಿಸಲು ಹೆಣಗದೆ ಕೇವಲ ತಮ್ಮ ಸಹಜ ಅಂತರಾನುಭೂತಿಯ ನೆರವಿನಿಂದ ಅದನ್ನು ಚಿತ್ರಿಸಿ, ಅದರಲ್ಲಿ ಅಡಗಿರುವ ಮಾರ್ಮಿಕತೆ ತನ್ನಿಂದ ತಾನೇ ಅರಳಿ ನಿಲ್ಲುವಂತೆ ಮಾಡಿರುವುದೇ ಆ ವೈಶಿಷ್ಟ್ಯ. ಇಂಥ ಮಹಾವರ ಅವರಿಗೆ ದೊರೆತಿದೆ. ಇದು ಸಾಮಾನ್ಯವಾಗಿ ಮಹಾಮಹಾ ಲೇಖಕರಿಗೂ ಸುಲಭವಾಗಿ ದೊರೆಯುವಂಥದಲ್ಲ."

ಅನುಭವದ ಮಾರ್ಮಿಕತೆ ಮತ್ತು ಪ್ರಾಣಶಕ್ತಿ - ಈ ಎರಡು ಗುಣಗಳ ಮಟ್ಟಿಗೆ ಹೇಳಬೇಕೆಂದರೆ, ಇವೆರಡೂ ಅವರಿಗೆ ಸಂಪೂರ್ಣವಾಗಿ ಕರಗತವಾಗಿದ್ದುವು.

ಸಾಮ್ಯ-ವೈಷಮ್ಯಗಳ ಇನ್ನೂ ಅನೇಕ ಅಂಶಗಳನ್ನು ಅರಸಬಹುದೆಂಬುದು ನಿಜ. ಆದರೆ, ನಿಜವಾದ ಸಂಗತಿ ಇಷ್ಟು-ಬಂಕಿಮಚಂದ್ರರು, ರವೀಂದ್ರರು ಹಾಗೂ ಶರತ್‌ಚಂದ್ರರು ತಮ್ಮ ತಮ್ಮ ಎಡೆಗಳಲ್ಲಿ ಅಪ್ರತಿಮರಾಗಿರುವಂಥವರು ಹಾಗೂ ಅನಿವಾರ್ಯವಾಗಿರುವಂಥವರು. ಪರಂಪರೆಯ ಕೊಂಡಿಗಳೆಂಬಂತೆ ಅವರು ಪರಸ್ಪರ ಸೇರಿಕೊಂಡಿದ್ದಾರೆ. ಮುಂಬರುವ ಪ್ರತಿಯೊಬ್ಬ ಲೇಖಕನಂತೆ ಶರತ್‌ಚಂದ್ರರೂ ತಮ್ಮ ಈ ಇಬ್ಬರು ಪೂರ್ವವರ್ತೀ ಮಹಾ ಲೇಖಕರಿಗೆ ಋಣಿಯಾಗಿದ್ದಾರೆ. ರವೀಂದ್ರರಿಗಂತೂ ಅವರು ಪರಮಶಿಷ್ಯರು. ರವೀಂದ್ರರು ಇಲ್ಲದೆ ಹೋಗಿದ್ದರೆ, ಶರತ್‌ಚಂದ್ರರೂ ಇರುತ್ತಿರಲಿಲ್ಲ.

ಶರತ್‌ಚಂದ್ರರೂ ಇದ್ದಾರೆ. ಆ ಕಾರಣದಿಂದಾಗಿಯೇ ಅವರು 'ಅಲೆಮಾರಿ ಪ್ರವಾದಿ'ಯೂ ಆಗಿದ್ದಾರೆ. ಇದು ಕೇವಲ ನನ್ನ ದುಡಿಮೆಯ ಫಲಮಾತ್ರ ವಾಗಲಾರದು. ಅದೆಷ್ಟು ಮಂದಿಯ ವಿಚಾರ ಸೌರಭ ಹಾಗೂ ಸ್ನೇಹಸ್ಪರ್ಶ ಇದಕ್ಕೆ ಜೀವಶಕ್ತಿಯನ್ನು ಧಾರೆ ಎರೆದಿವೆಯೋ ಏನೋ. ಅನುಬಂಧದಲ್ಲಿ ಅವರುಗಳ ಹೆಸರನ್ನು ಉಲ್ಲೇಖಿಸಿದ್ದೇನೆ. ಅವರ ಬಗ್ಗೆ ಕೃತಜ್ಞತೆಯನ್ನು ತೋರಲು ಆಗುವುದೇ ಇಲ್ಲ. ಪ್ರೀತಿಯ ಅರ್ಘ್ಯವನ್ನಷ್ಟೇ ಅವರಿಗೆ ಸಮರ್ಪಿಸಬಹುದು.

ಶರತ್‌ಚಂದ್ರರ ಪ್ರಾರಂಭಿಕ ಜೀವನವನ್ನು ಅರಿತುಕೊಳ್ಳಲು ನೆರವಾಗಿರುವ ಅವರ ಮಾವಂದಿರೂ ಗೆಳೆಯರೂ ಆದ ಸುರೇಂದ್ರನಾಥ ಗಂಗೋಪಾಧ್ಯಾಯ ಅವರಿಗೆ ನಾನು ವಿಶೇಷವಾಗಿ ಋಣಿಯಾಗಿದ್ದೇನೆ. ನಾನು ಬರೆದಿರುವುದೆಲ್ಲ ಬಹುಶಃ ಅವರ ಮಾತುಗಳೇ. ನಾನು ಅವಕ್ಕೆ ಒಂದು ಪರಿಷ್ಕೃತ ರೂಪವನ್ನು ಕೊಟ್ಟಿದ್ದೇನೆ, ಅಷ್ಟೇ. ಅಂತೆಯೇ, ಅವರ ಬರ್ಮಾ ಪ್ರವಾಸದ ಕಥೆಗಾಗಿ ನಾನು ತುಂಬ ಋಣಿಯಾಗಿರುವ ಒಬ್ಬ ವ್ಯಕ್ತಿ ಎಂದರೆ ಯೋಗೇಂದ್ರನಾಥ ಸರ್ಕಾರ್ ಅವರು. ಗಿರೀಂದ್ರನಾಥ ಸರ್ಕಾರ್ ಮತ್ತು ಸತೀಶ ಚಂದ್ರ ದಾಸಗುಪ್ತ ಅವರ ಕೊಡುಗೆಯೂ ಕಮ್ಮಿ ಏನಲ್ಲ. ಈ ಎಲ್ಲ ವ್ಯಕ್ತಿಗಳ ಕೃತಿಗಳ ಬುನಾದಿಯ ಮೇಲೆಯೇ 'ಅಲೆಮಾರಿ ಪ್ರವಾದಿ'ಯ ಮೊದಲ ಎರಡು ಭಾಗಗಳ ಭವನ ನಿಂತಿದೆ. ಅವರ ರಾಜಕೀಯ ಜೀವನದ ಬಗ್ಗೆ

ಎಲ್ಲಕ್ಕಿಂತಲೂ ಹೆಚ್ಚು ಸಾಮಗ್ರಿ ದೊರೆತಿರುವುದು ಶಚೀನಂದನ ಚಟ್ಟೋಪಾಧ್ಯಾಯ ಅವರ ಪುಸ್ತಕದಿಂದ.

ಹೀಗೆ ಈ ಪುಸ್ತಕದಲ್ಲಿ ಸಂಕಲಿಸಿರುವ ಸಾಮಗ್ರಿಗೆ ಮೂರು ಪ್ರಮುಖ ಆಕರಗಳಿವೆ. ಒಂದನೆಯದು ಶರತ್‌ಚಂದ್ರರೊಂದಿಗೆ ಒಂದಲ್ಲ ಒಂದು ರೂಪದಲ್ಲಿ ಸಂಬಂಧ-ಸಂಪರ್ಕ ಹೊಂದಿದ್ದ ಅನೇಕ ವ್ಯಕ್ತಿಗಳೊಂದಿಗೆ ನಡೆಸಿದ ಸಂದರ್ಶನಗಳು, ಎರಡನೆಯದು, ಅವರ ಸಮಕಾಲೀನರಾಗಿದ್ದ ಗೆಳೆಯರು ಬರೆದಿರುವ ಲೇಖನಗಳು ಮತ್ತು ಸಂಸ್ಮರಣಗಳು, ಮೂರನೆಯದು, ಅವರ ಕೃತಿಗಳಲ್ಲಿ ಅಲ್ಲಿ ಇಲ್ಲಿ ಚೆದರಿದಂತೆ ಹರಡಿಕೊಂಡಿರುವ ಹಾಗೂ ಅವರ ಬಾಳಿನೊಂದಿಗೆ ನೇರವಾದ ಸಂಬಂಧವನ್ನು ಹೊಂದಿರುವಂಥ ಕೆಲವು ಭಾಗಗಳು ಮತ್ತು ಪ್ರಸಂಗಗಳು. ಇಷ್ಟೊಂದು ಅರಿವು ಮೂಡಿದ ಬಳಿಕ, ಅವರನ್ನು ಕಂಡುಕೊಳ್ಳುವುದು ಕಷ್ಟವಾಗಲಿಲ್ಲ.

ಪುಸ್ತಕವನ್ನು ಆದಷ್ಟೂ ಹೆಚ್ಚು ಪ್ರಾಮಾಣಿಕ ಅಥವಾ ಅಧಿಕೃತವಾಗಿರುವ ಸಲುವಾಗಿ ನಾನು ಈ ವಿವರಣೆಗಳನ್ನು ಯಥಾಶಕ್ತಿ ಉಪಯೋಗಿಸಿಕೊಂಡಿದ್ದೇನೆ. ಜೀವಿಸಿರುವ ವ್ಯಕ್ತಿಗಳಲ್ಲಿ ನಾನು ತುಂಬ ಋಣಿಯಾಗಿರುವುದು ಸುಪರಿಚಿತ ಪ್ರವಾಸಿಗಳೂ, ಸ್ವನಾಮಧನ್ಯರೂ ಆಗಿರುವ ಉಮಾಪ್ರಸಾದ ಮುಖರ್ಜಿ ಅವರಿಗೆ. ಅವರು ಆತ್ಮೀಯತೆಯಿಂದ ನನ್ನನ್ನು ಅಂಗೀಕರಿಸಿದರು; ತಾವು ಜೋಪಾನವಾಗಿರಿಸಿಕೊಂಡಿದ್ದ ಶರತ್‌ಚಂದ್ರರ ಬಗೆಗಿನ ಎಲ್ಲ ಸಾಮಗ್ರಿಯೂ ನನಗೆ ಸುಲಭವಾಗಿ ದೊರೆಯುವಂತೆ ಮಾಡಿದರು. ಅವರ ಸ್ನೇಹಭಾಗ್ಯ ದೊರೆತ ಆ ಒಂದೊಂದು ದಿನವನ್ನೂ ನೆನೆಸಿಕೊಳ್ಳುವುದು ಕೂಡ ಅದರ ಮಹತ್ತ್ವವನ್ನು ಕಡಿಮೆಯಾಗಿಸುವ ಕಾರ್ಯವೇ. ಇದೇ ರೀತಿ, ಗಂಗೋತ್ರಿಯ ನಿವಾಸಿಗಳೂ, ಸುಪರಿಚಿತ ಪ್ರವಾಸಿಗಳೂ ಹಾಗೂ ಛಾಯಾಗ್ರಾಹಕನೂ ಆದ ಸ್ವಾಮಿ ಸುಂದರಾನಂದರು ನನ್ನೊಡನೆ ಸಂಚರಿಸಿ ಅನೇಕ ಚಿತ್ರಗಳನ್ನು ಸುಲಭ ಲಭ್ಯವಾಗಿಸಿದರು. ಇದಕ್ಕಾಗಿ ನಾನು ಆ ಸಂನ್ಯಾಸಿಗೆ ಹೇಗೆ ವಂದನೆ ಸಲ್ಲಿಸಲು ಸಾಧ್ಯ? ಅವರಿಗೆ ನಮಸ್ಕಾರ ಮಾಡಬಲ್ಲೆನೇ ಹೊರತು, ಬೇರೇನು ಮಾಡಲೂ ಸಾಧ್ಯವಿಲ್ಲ.

ಇಬ್ಬರು ನನ್ನ ವಿಷಯದಲ್ಲಿ ವಿಶೇಷವಾದ ಕೃಪೆಯನ್ನು ತೋರಿದ್ದು, ಅವರಿಬ್ಬರೂ ಪ್ರವಾಸಿಗಳೇ ಆಗಿರುವುದು ಆಕಸ್ಮಿಕ ಮಾತ್ರವೆ? ಶರತ್‌ಚಂದ್ರರ ಬಾಳಿನ ಬಹುಭಾಗವೂ 'ಐಶ್ವರ್ಯಸಂಪನ್ನ ಪ್ರವಾಸ'ದ (ಮಹಿಮಾಯುಕ್ತ ಅಲೆಮಾರಿತನದ) ಕಥೆಯೇ ಆಗಿದೆ.

ಹೇಳಬಾರದಾಗಿದ್ದ ಅನೇಕ ಸಂಗತಿಗಳನ್ನು ಹೇಳಿಬಿಟ್ಟಿದ್ದೇನೆ. ಆದರೆ, ಹಾಗೆ ಮಾಡುವುದು ನನ್ನ ರಚನಾ ಪ್ರಕ್ರಿಯೆಯನ್ನು ಸ್ಪಷ್ಟಪಡಿಸುವುದಕ್ಕೆ ಅಗತ್ಯವೇ ಆಗಿತ್ತು. ಇಷ್ಟಾಗಿಯೂ, ನನ್ನಿಂದ ಧೃಷ್ಟತೆಯೇನಾದರೂ ಆಗಿದ್ದರೆ, ವಿದ್ವಾಂಸರ ಸಮುದಾಯ ಸ್ವಭಾವ ಸಹಜವಾದ ತನ್ನ ಉದಾರತೆಯಿಂದ ನನ್ನನ್ನು ಕ್ಷಮಿಸುವರೆಂದು ನಂಬಿದ್ದೇನೆ.

ಕೊನೆಯದಾಗಿ, ದಿವಂಗತ ನಾಥೂರಾಮ ಪ್ರೇಮಿ ಅವರಿಗೆ ಪ್ರಣಾಮಗಳನ್ನು ಸಲ್ಲಿಸಬಯಸುತ್ತೇನೆ. ಅವರಿಂದಾಗಿಯೇ 'ಅಲೆಮಾರಿ ಪ್ರವಾದಿ'ಯ ಸೃಷ್ಟಿ

ಸಾಧ್ಯವಾಯಿತು. ಇದು ಮುಗಿಯುವ ಮೊದಲೇ ಅವರು ತೀರಿಕೊಂಡಿದ್ದು ನನಗೆ ವಿಷಾದವನ್ನುಂಟು ಮಾಡಿದೆ. ಆದರೆ, ಕೊನೆಗಾದರೂ ಅವರ ಇಚ್ಛೆ ನೆರವೇರಿತಲ್ಲ ಎಂಬುದು ನನಗೆ ಸಂತೋಷವನ್ನೂ ತಂದಿದೆ. ಅವರ ಪುಣ್ಯ ಸ್ಮೃತಿಗೆ ನನ್ನ ಈ ಯತ್ಕಿಂಚಿತ್ ಪ್ರಯತ್ನವನ್ನು ಸಮರ್ಪಿಸಿದ್ದೇನೆ.

ವಿಷ್ಣು ಪ್ರಭಾಕರ್

# ಎರಡನೆಯ ಆವೃತ್ತಿಯ ಮುನ್ನುಡಿ

ಮೊದಲ ಆವೃತ್ತಿ ಸುಮಾರು ಇಪ್ಪತ್ತು ತಿಂಗಳ ಅವಧಿಯಲ್ಲಿ ಇಲ್ಲವಾಯಿತು. ಈ ಸಂಗತಿ ಶರತ್‌ಚಂದ್ರರ ವಿಷಯದಲ್ಲಿ ಹಿಂದೀ ಮಾತನಾಡುವ ಜನರು ಇರಿಸಿಕೊಂಡಿರುವ ಶ್ರದ್ಧೆಯನ್ನು ಪರಿಚಯಿಸಿಕೊಡುತ್ತದೆ. ಅದರಲ್ಲಿಯೂ, ಇಂದಿನ ತುಟ್ಟಿಯ ಅವಧಿಯಲ್ಲಿ ನಲವತ್ತೈದು ರೂಪಾಯಿಗಳಿಗೆ ಸ್ವಲ್ಪವಾದರೂ ಅರ್ಥ ಇದೆಯೆಂಬುದು ಇದಕ್ಕೆ ಕಾರಣ.

ಎರಡನೆಯ ಆವೃತ್ತಿಯಲ್ಲಿ ಹೆಚ್ಚಿನ ಬದಲಾವಣೆಗಳನ್ನೇನೂ ಮಾಡಿಲ್ಲ. ಆದರೆ, ಬೆರಳಚ್ಚಿನ, ಅಚ್ಚಿನ ಹಾಗೂ ಬೇರಾವುದೇ ಮೈಮರೆವಿನ ಕಾರಣದಿಂದಾಗಿ ಉಳಿದು ಹೋಗಿದ್ದ ತಪ್ಪುಗಳನ್ನು ಸರಿಪಡಿಸಿದೆ. ಅಲ್ಲಲ್ಲಿ ಬಂದಿದ್ದ ಕೆಲವು ಉದ್ಧರಣಗಳನ್ನು ತೆಗೆದು ಹಾಕಿದೆ ಅಥವಾ ಅವುಗಳ ಗಾತ್ರವನ್ನು ಕಡಿಮೆಯಾಗಿಸಿದೆ. ಮಹಾತ್ಮ ಗಾಂಧೀಜಿಯವರ ಬಗ್ಗೆ ಶರತ್‌ಚಂದ್ರರು ಬರೆದಿದ್ದ ಲೇಖನವನ್ನು ಅನುಬಂಧದಲ್ಲಿ ಕೊಡಲಾಗಿದೆ. ಹೀಗೆಲ್ಲ ಮಾಡಿರುವುದರಿಂದ ಮೂರನೆಯ ಭಾಗದ 'ಹೊರೆ'ಯ ಬಗೆಗಿನ ದೂರು ಸ್ವಲ್ಪ ಕಮ್ಮಿಯಾಗುತ್ತದೆ ಎಂದು ಭಾವಿಸಬಹುದಾಗಿದೆ.

ಇದು ಶರತ್‌ಚಂದ್ರರ ಜನ್ಮ ಶತಾಬ್ದಿಯ ವರ್ಷ. ಅವರ ಜೀವನದ ಬಗ್ಗೆ ಕೆಲವಾದರೂ ಹೊಸ ಸಂಗತಿಗಳು ಹೊರಬರಬಹುದೆಂದು ಭಾವಿಸಿದ್ದೆ. ಆದರೆ, ಈ ಆವೃತ್ತಿ ಅಚ್ಚಿಗೆ ಹೋಗುವವರೆಗೆ, ಈ ಪುಸ್ತಕದ ಮೇಲೆ ಪ್ರಭಾವ ಬೀರುವಂಥ ಯಾವುದೇ ವಿಶೇಷ ಸಂಗತಿ ನನ್ನ ಕಣ್ಣಿಗೆ ಬೀಳಲಿಲ್ಲ. ಉಲ್ಲೇಖಿಸಬಹುದಾದಂಥ ಕೆಲವು ಮಾತುಗಳೇನೋ ಕಣ್ಣಿಗೆ ಬಿದ್ದಿವೆ.

1925ರ ಸುಮಾರಿನಲ್ಲಿ ಮಹದೇವ ದೇಸಾಯಿ ಅವರು ಮೊಟ್ಟಮೊದಲಿಗೆ ಶರತ್‌ಚಂದ್ರರ ಕೆಲವು ಕೃತಿಗಳನ್ನು ಗುಜರಾತಿ ಭಾಷೆಗೆ ಅನುವಾದಿಸಿದ್ದರಷ್ಟೆ. ಮಹಾತ್ಮ ಗಾಂಧೀಜಿಯವರ ಸೂಚನೆಯ ಮೇರೆಗೆ ಅವರು ಹಾಗೆ ಮಾಡಿದ್ದರು ಎಂಬುದು ಅಂಥ ಒಂದು ವಿಚಾರ. 'ಬಿರಾಜ್ ಬಹೂ' 'ಬಿಂದೋ ಕಾ ಲಲ್ಲಾ', 'ರಾಮೇರ್ ಸುಮತಿ' ಹಾಗೂ 'ಮಂಝಲೀ ದೀದೀ' - ಇವೇ ಆ ಕೃತಿಗಳು.

ಎರಡನೆಯ ಮಾತು ಅವರ ಗೀತ ರಚನೆಗೆ ಸಂಬಂಧಿಸಿದ್ದು. ಅವರ ಇಂಪಾದ ಕಂಠದ ಬಗ್ಗೆ ಈ ಪುಸ್ತಕದಲ್ಲಿಯೂ ಸಾಕಷ್ಟು ವಿಸ್ತಾರವಾಗಿ ಚರ್ಚಿಸಿದೆ. ಆದರೆ, ಅವರು ರಚಿಸಿದ್ದ ಯಾವುದಾದರೂ ಒಂದು ಗೀತ ಇದ್ದಿರಬಹುದು ಎಂಬ ಬಗ್ಗೆ ಪ್ರಮಾಣ ಭೂತವಾದ ತಿಳಿವಳಿಕೆ ನನಗೆ ಇರಲಿಲ್ಲ. 'ಷೋಡಶೀ' ನಾಟಕದಲ್ಲಿ ಬರುವ ಈ ಗೀತವನ್ನು ಅವರೇ ರಚಿಸಿದ್ದಾರೆಂದು ಸತ್ಯೇಶ್ವರ ಮುಖೋಪಾಧ್ಯಾಯ ಅವರು ತಮ್ಮ 'ಸುರ್-ಪಿಯಾರೀ ಶರತ್‌ಚಂದ್ರ' ಎಂಬ ಲೇಖನದಲ್ಲಿ ('ದಿಗಂತ' ದೆಹಲಿ, ಡಿಸೆಂಬರ್ 1975) ವಾದಿಸಿದ್ದಾರೆ.

ತೋರ್ ಪಾಬಾರ್ ಸಮಯ್ ಛಿಲ್ ಜಖನ್
ಓರೇ ಅಬೋಧ್ ಮನ್,
ಮರಣ್ ಖೇಲಾರ್ ನೇಶಾಯ್ ಮೇತೇ
ರಃಲಿ ಅಚೇತನ್
ಓರೇ ಅಬೋಧ್ ಮನ್
ತಖನ್‌ಛಿಲ್ ಮಣಿ, ಛಿಲ್ ಮಾಣಿಕ್
ಪಥೇರ್ ಧಾರೆ
ಏಖನ್ ಡೂಬಲ್ ತಾರಾ ದಿನೇರ್ ಶೇಷೇ
ವಿಷಮ್ ಅಂಧಕಾರೇ
ಆಜ್ ಮಿಥ್ಯೇ ಜೋ ತೋರ್ ಖೋಜಾ ಖೂಂಜಿ
ಮಿಥ್ಯೇ ಚೋಖೇರ್ ಜಲ್
ತಾರೇ ಕೋಥಾಯ್ ಪಾಬಿ ಬಲ್?
ತೋರ್ ಆತಲ್ ತಲೇ ತಲಿಯೇ ಗೇಲ್
ಶೇಷ್ ಸಾಧನಾರ್ ಧನ್
ಓರೇ ಅಬೋಧ್ ಮನ್

ಹಿರಣ್ಮಯೀ ದೇವಿಯವರ ವಿವಾಹದ ಬಗ್ಗೆ ಮತ್ತೊಮ್ಮೆ ವಿವಾದ ಎದ್ದಿದೆ. ಆದರೆ, 'ಉಯಿಲಿ'ನಲ್ಲಿ ಅವರಿಗೆ ಪತ್ನಿಯ ಸ್ಥಾನ ದೊರೆತಿದೆ. ಇದಾದ ಬಳಿಕ, ಈ ವಿವಾದಕ್ಕೆ ಹೆಚ್ಚಿನ ಅರ್ಥವೇನೂ ಉಳಿದಿಲ್ಲ.

ಕ್ರಾಂತಿಕಾರಿಗಳಿಗೆ ಅವರು ಮುಕ್ತ ಮನಸ್ಸಿನಿಂದ ಆರ್ಥಿಕ ನೆರವು ನೀಡುತ್ತಿದ್ದರೆಂಬುದಕ್ಕೆ ಇನ್ನೂ ಕೆಲವು ಆಧಾರಗಳು ದೊರೆತಿವೆ.

'ಅಭಿಮಾನ'ವನ್ನು ಓದಿ ಒಬ್ಬ ಯುವಕ ಅವರನ್ನು ಕೊಲ್ಲಲು ಮುಂದಾಗಿದ್ದ.

ಈ ಯುವಕ ಬ್ರಾಹ್ಮ ಸಮಾಜಕ್ಕೆ ಸೇರಿದವನಾಗಿದ್ದಿರಬೇಕೆಂದು ಗೋಪಾಲ ಚಂದ್ರರಾಯ್ ಅವರು ಊಹಿಸಿದ್ದಾರೆ. ಏಕೆಂದರೆ 'ಅಭಿಮಾನ'ದಲ್ಲಿ ಒಬ್ಬ ಬ್ರಾಹ್ಮ ಮಹಿಳೆ ವಿವಾಹಿತಳಾಗಿದ್ದರೂ, ಪತಿಯನ್ನು ತ್ಯಜಿಸಿ ಬೇರೊಂದು ಮದುವೆ ಮಾಡಿಕೊಳ್ಳುತ್ತಾಳೆ. ಇದಕ್ಕೆ ಆಧಾರವಾಗಿರುವ 'ಇಸ್ಟಲೀನ್' ಕಾದಂಬರಿಯಲ್ಲಿಯೂ ಇಂಥದೇ ಕಥೆಯಿದೆ.

ಇನ್ನೂ ಕೆಲವು ಸಂಗತಿಗಳು ಹೊರಬಂದಿವೆ. ಆದರೆ, ಅವುಗಳಲ್ಲಿ ಒಂದು ಮಾತ್ರ ಮಹತ್ವಪೂರ್ಣವಾಗಿದೆ. ನಿರುಪಮಾ ದೇವಿಯವರು ಅವರಿಗೆ ಪತ್ರ ಬರೆದು ವಿಧವೆಯರ ನಡತೆಯ ಬಗ್ಗೆ ಟೀಕೆ ಮಾಡಬಾರದೆಂದು ಕೋರಿದ್ದರು. ಶರತ್‌ಚಂದ್ರರು, "ನಿನ್ನ ಮನಸ್ಸಿಗೆ ಆಘಾತವನ್ನುಂಟು ಮಾಡುವಂಥದ್ದೇನನ್ನೂ ಬರೆಯುವುದಿಲ್ಲ" ಎಂದು ಆಕೆಗೆ ಮಾತುಕೊಟ್ಟಿದ್ದರು.

ಇನ್ನೊಂದು ವಿಚಾರವನ್ನು ಉಲ್ಲೇಖಿಸುವುದು ಅನುಚಿತವಾಗಲಾರದು. ನನ್ನ ವಿಮರ್ಶಕ ಮಿತ್ರರು 'ಅಲೆಮಾರಿ ಪ್ರವಾದಿ'ಯನ್ನು ಸ್ವಾಗತಿಸಿರುವಂತೆಯೇ ಅದರಲ್ಲಿನ ಕೆಲವು ಅರೆಕೊರೆಗಳ ಬಗ್ಗೆಯೂ ಸೂಚಿಸಿದ್ದಾರೆ. ಕೆಲವು ಸಲಹೆಗಳನ್ನೂ ಕೊಟ್ಟಿದ್ದಾರೆ. ಆ ದಿಕ್ಕಿನಲ್ಲಿ ಏನು ಮಾಡಬಹುದಾಗಿತ್ತೋ ಅದನ್ನೆಲ್ಲ ಕೃತಜ್ಞತಾ

ಭಾವದಿಂದ ಮಾಡಿದ್ದೇನೆ. ಮಾಡಲು ಆಗದೆ ಇರುವುದರ ಬಗ್ಗೆ ನಾನು ಹಟಮಾರಿತನವನ್ನೇನೂ ತೋರಿಲ್ಲ, ನನ್ನ ಅಸಾಮರ್ಥ್ಯವೇ ಅದಕ್ಕೆ ಕಾರಣವಾಗಿದೆ. ಅವುಗಳಲ್ಲಿ ತುಂಬ ಪ್ರಮುಖವಾದುದೆಂದರೆ ಅಂಥ ವಿಚಾರಗಳಿಗೆ ಪ್ರಾಮಾಣಿಕತೆ ಅಥವಾ ಅಧಿಕೃತತೆ ಇಲ್ಲದಿದ್ದುದು. ಕೆಲವು ವಿಚಾರಗಳಲ್ಲಿ ಭಿನ್ನಾಭಿಪ್ರಾಯವೂ ಇದೆ. ಹಾಗೂ ಇದು ಸ್ವಾಭಾವಿಕವೂ ಹೌದು. ಮೂರನೆಯ ಆವೃತ್ತಿ ಹೊರಬರುವ ಹೊತ್ತಿಗೆ ಈ ಮಬ್ಬು ಇನ್ನಷ್ಟು ತಿಳಿಯಾದೀತು, ಇಷ್ಟಾಗಿಯೂ ವ್ಯಕ್ತಿಯಾಗಿ ಶರತ್‌ಚಂದ್ರರ ಮೇಲೆ ಅಥವಾ ಸಾಹಿತಿಯಾಗಿ ಶರತ್‌ಚಂದ್ರರ ಮೇಲೆ ಪ್ರಭಾವ ಬೀರುವಂಥ ಯಾವೊಂದು ಸಂಗತಿಯೂ ಈ ಕ್ಷಣದವರೆಗೆ ನನ್ನ ಕಣ್ಣಿಗೆ ಬಿದ್ದಿಲ್ಲವೆಂಬ ಮಾತನ್ನು ನಾನು ಒತ್ತಿ ಹೇಳಬಯಸುತ್ತೇನೆ.

'ಅಲೆಮಾರಿ ಪ್ರವಾದಿ'ಯನ್ನು ರಚಿಸಿದ ಅವಧಿಯಲ್ಲಿ ಅದೆಂತೆಂಥ ಕಷ್ಟಗಳನ್ನು ನಾನು ಎದುರಿಸಬೇಕಾಗಿ ಬಂತೆಂಬುದರ ಒಂದು ಇಣುಕು ನೋಟವನ್ನು ಮೊದಲ ಆವೃತ್ತಿಯ ಮುನ್ನುಡಿಯಲ್ಲಿ ಕೊಟ್ಟಿದ್ದೇನೆ. ಬಹುಶಃ ಅದು ಸಾಲದಾಗಿತ್ತು ಎಂದು ತೋರುತ್ತದೆ. ಆದರಿಂದ ನನ್ನ ವಿಮರ್ಶಕರು ಮತ್ತು ಓದುಗರು ಸಂತುಷ್ಟರಾಗಲಾರದೆ ಹೋಗಿದ್ದಾರೆ. ಎಲ್ಲ ವಿಚಾರಗಳನ್ನು ಚರ್ಚಿಸುವುದು, ಹಲವಾರು ಕಾರಣಗಳಿಂದ ಈಗಲೂ ಸಾಧ್ಯವಾಗಲಾರದು. ಆದರೆ, ಒಂದು ವಿಚಾರವನ್ನು ಮಾತ್ರ ನಾನು ಉಲ್ಲೇಖಿಸಲೇಬೇಕೆಂದು ಇಚ್ಛಿಸಿದ್ದೇನೆ. ಶರತ್‌ಚಂದ್ರರ ಜೀವನ ಕ್ರಮ ಅದೆಷ್ಟು ತೊಡಕಾಗಿ ಬಿಟ್ಟಿದೆ, ಅದೆಷ್ಟು ವಿಶೃಂಖಲವಾಗಿ ಬಿಟ್ಟಿದೆ ಎಂದರೆ ಅವುಗಳಲ್ಲಿ ಪೂರ್ವಾಪರಗಳನ್ನು ಗೊತ್ತುಪಡಿಸಿಕೊಳ್ಳುವುದು ಹಾಗೂ ಅವುಗಳ ಅನುಕ್ರಮವನ್ನು ನಿರ್ಧರಿಸುವುದು ತುಂಬ ದುಸ್ಸಾಧ್ಯವಾದ ಕಾರ್ಯಗಳಾಗಿವೆ. ಯಾವ ಘಟನೆ ಎಂದು ನಡೆಯಿತು, ಹೇಗೆ ನಡೆಯಿತು, ಯಾವಾಗ ಎಲ್ಲಿ ಇದ್ದರು, ಎಷ್ಟು ದಿವಸಗಳವರೆಗೆ ಇದ್ದರು, ಯಾವ ಭಾಷಣವನ್ನು ಎಂದು ಮಾಡಿದರು, ಖಚಿತವಾಗಿ ಏನೇನು ಹೇಳಿದರು - ಇವುಗಳ ಬಗೆಗಿನ ಯಾವುದೇ ದಾಖಲೆಯೂ ಎಲ್ಲಿಯೂ ಲಭ್ಯವಾಗಿಲ್ಲ. ಇರುವುದು ತುಂಬ ವಿಶೃಂಖಲವಾಗಿದೆ. ಆ ವಿವರಗಳನ್ನು ಅರಸಿಕೊಂಡು ವರ್ಷಗಟ್ಟಲೆ ನಾನು ಅಲ್ಲಿ-ಇಲ್ಲಿ ಅಲೆಯಬೇಕಾಗಿ ಬಂದಿದೆ. ಜ್ಯೋತಿಷಿಗಳನ್ನು ಆಶ್ರಯಿಸಿದೆ, ವಿಶ್ವವಿದ್ಯಾನಿಲಯಗಳ ಕ್ಯಾಲಂಡರುಗಳನ್ನು ನೋಡಿದೆ, ಶಾಲಾ-ಕಾಲೇಜುಗಳ ರಿಜಿಸ್ಟರುಗಳನ್ನು ತಿರುವಿಹಾಕಿದೆ, ಹಳೆಯ-ಕಾಗದ-ಪತ್ರಗಳನ್ನು ಹುಡುಕಿ ನೋಡಿದೆ - ಇಷ್ಟೆಲ್ಲ ಮಾಡಿದ ಮೇಲೆ ಅದಕ್ಕೆ ಒಂದು ರೂಪ ಬಂತು.

ಭಾಗಲ್ಪುರದಿಂದ ಅವರು ಎಂದು ಓಡಿಹೋದರು ಎಂಬುದರ ಬಗ್ಗೆ ಸ್ವಲ್ಪಮಟ್ಟಿಗೆ ಖಚಿತವಾದ ಮಾಹಿತಿ ದೊರೆತದ್ದು ಭಾಗಲ್ಪುರದಲ್ಲಿಯೇ ರಚಿತವಾದ ಹಾಗೂ ಕೈ ಬರಹದ ಪತ್ರಿಕೆಯಲ್ಲಿ ಪ್ರಕಟವಾದ ಜುಲೈ 1901ರ ಒಂದು ಕೃತಿ ಕಣ್ಣಿಗೆ ಬಿದ್ದಾಗಲೇ, 1902 ಡಿಸೆಂಬರ್ ತಿಂಗಳ ಕೊನೆಯಲ್ಲಿ ಅವರು ಗೋವಿಂದಪುರದಲ್ಲಿದ್ದ ತಮ್ಮ ಸೋದರಿಯ ಮನೆಯಿಂದ ಮಾವ ಗಿರೀಂದ್ರನಾಥರಿಗೆ ಬರೆದ ಪತ್ರ, ಅವರ ಪುತ್ರ ಅಮಲ ಕುಮಾರ ಗಂಗೂಲಿಯವರ ಸೌಜನ್ಯದಿಂದಾಗಿ, ದೆಹಲಿಯಲ್ಲಿ 1973ರಲ್ಲಿ ನನಗೆ ದೊರೆಯಿತು. ಅದು ಸಿಕ್ಕಿದ್ದರಿಂದ ಅನೇಕ ದಿನಾಂಕಗಳು ತಾವಾಗಿಯೇ

ಸರಿಹೋಗಿಬಿಟ್ಟುವು. ಅವರು ಬರ್ಮಾದಿಂದ ಯಾವಾಗ ಹಿಂದಿರುಗಿದರೆಂಬುದನ್ನು ಊಹೆ ಮತ್ತು ಇತರ ಪ್ರಮಾಣಗಳ ಆಧಾರದ ಮೇಲೆ ಗೊತ್ತುಪಡಿಸಿದ್ದೇನೆ. ಇತ್ತ ಲೇಖಕರೊಬ್ಬರು ಈ ದಿನಾಂಕದ ಬಳಿಕ ಹಲವಾರು ದಿನಗಳ ತರುವಾಯ ಅವರು ರವೀಂದ್ರನಾಥರನ್ನು ರಂಗೂನಿನಲ್ಲಿ ಭೇಟಿಯಾಗಿದ್ದಂತೆ ಚಿತ್ರಿಸಿದ್ದಾರೆ.

1894ರ ಡಿಸೆಂಬರ್‌ನಲ್ಲಿ ಅವರು ಮೆಟ್ರಿಕ್ ಪರೀಕ್ಷೆಯನ್ನು ಪಾಸು ಮಾಡಿದರು ಎಂದು ಬಹುಶಃ ಅವರ ಜೀವನ ಚರಿತ್ರಕಾರರೆಲ್ಲರೂ ಬರೆದಿದ್ದಾರೆ. ಆದರೆ, ಈ ದಿನಾಂಕವನ್ನು ನಾನು ಒಪ್ಪಿಕೊಳ್ಳಲಾರದೆ ಹೋದೆ. ವಿಶ್ವವಿದ್ಯಾನಿಲಯಕ್ಕೆ ಹೋಗಿ ಅಲ್ಲಿಯ ಕ್ಯಾಲೆಂಡರನ್ನು ಪರಿಶೀಲಿಸಿದಾಗ 1894ರ ಫೆಬ್ರುವರಿ ತಿಂಗಳ 12ರ ಸೋಮವಾರದಿಂದ ಪರೀಕ್ಷೆಗಳು ಆರಂಭಗೊಂಡಿದ್ದುವು ಎಂಬುದು ಗೊತ್ತಾಯಿತು. ತೀರ ತಡವಾಗಿ ಎಂದರೆ 1894ರ ಏಪ್ರಿಲ್ ತಿಂಗಳಿನಲ್ಲಿಯಾದರೂ ಪರೀಕ್ಷೆ ಫಲಿತಾಂಶ ಪ್ರಕಟವಾಗಿದ್ದಿರಬೇಕು. ಆದರೆ ಅದು ಕ್ಯಾಲೆಂಡರ್‌ನಲ್ಲಿ ಅಚ್ಚಾದದ್ದು ಆ ವರ್ಷದ ಡಿಸೆಂಬರ್ ತಿಂಗಳಲ್ಲಿ. ಅದನ್ನೇ ನೋಡಿ ಎಲ್ಲರೂ ಡಿಸೆಂಬರ್ 1894ರಲ್ಲಿ ಅವರು ಮೆಟ್ರಿಕ್‌ನಲ್ಲಿ ಉತ್ತೀರ್ಣರಾದರೆಂದು ಭಾವಿಸಿಕೊಂಡುಬಿಟ್ಟರು. ಇದು ನಿಜವೇ ಆಗಿದ್ದರೆ, ಆ ವರ್ಷವೇ ಅವರಿಗೆ ಕಾಲೇಜಿನಲ್ಲಿ ಪ್ರವೇಶ ದೊರೆಯುವುದಾದರೂ ಹೇಗೆ ಸಾಧ್ಯವಾಗುತ್ತಿತ್ತು?

ಬಂಗಾಳಿಗಳು ಬಂಗಾಬ್ದವನ್ನೇ ಬಳಸುತ್ತಾರೆಂಬುದು ನಿಜ. ಆದ್ದರಿಂದ, ಈ ದಿನಾಂಕಗಳನ್ನು ಇಸ್ವೀ ವರ್ಷಕ್ಕನುಗುಣವಾಗಿ ಹೇಗೆ ಬದಲಾಯಿಸುವುದು ಎಂಬುದೂ ಒಂದು ಸಮಸ್ಯೆಯಾಗಿ ನನ್ನ ಮುಂದೆ ನಿಂತಿತು. ಹಳೆಯ ಪಂಚಾಂಗಗಳನ್ನೇ ಹುಡುಕಿಕೊಂಡು ಅನೇಕ ಗೆಳೆಯರನ್ನು ಹಾಗೂ ಪುಸ್ತಕಾಲಯ ಗಳನ್ನು ಎಡತಾಕಬೇಕಾಯಿತು. ತಾರೀಖುಗಳಿಗೂ ತಮ್ಮದೇ ಆದ ಮಹತ್ವ ವಿರುವುದರಿಂದ ಹೀಗೆ ಮಾಡಬೇಕಾಯಿತು. (ಜ್ಯೋತಿಷ ಶಾಸ್ತ್ರದಲ್ಲಿ ನಂಬಿಕೆ ಇರುವಂಥವರಿಗೆ ಇದು ಚೆನ್ನಾಗಿ ಗೊತ್ತು.)

ಈ ಬಗೆಯ ಅಸಾಂಗತ್ಯಗಳಿಗೆ ಕೊನೆ ಎಂಬುದೇ ಇಲ್ಲ. ಈ ಅಸಾಂಗತ್ಯಗಳು ವ್ಯಕ್ತಿಯಾಗಿ ಶರತ್‌ಚಂದ್ರರ ಮೇಲೆ ಯಾವುದೇ ಪ್ರಭಾವ ಬೀರುವುದಿಲ್ಲ ಎಂಬುದರ ಬಗ್ಗೆ ಅನುಮಾನವೇನೂ ಇಲ್ಲ. ಅವರು ಯಾವಾಗ ಎಲ್ಲಿ ಇದ್ದರು, ಯಾವಾಗ ಎಲ್ಲಿಗೆ ಹೋದರು - ಇವುಗಳಿಗೆ ಅಂತಿಮವಾಗಿ ಯಾವುದೇ ಮಹತ್ವವಿಲ್ಲವೆಂಬುದು ನಿಜ. ಆದರೆ, ಜೀವನ ಕ್ರಮವನ್ನು ಅರ್ಥಮಾಡಿಕೊಳ್ಳುವುದಕ್ಕೆ ಇವು ಅಗತ್ಯ ವಾಗುತ್ತವೆ.

ನನ್ನ ಮುನ್ನುಡಿಯಲ್ಲಿ ನಾನು 'ಆರನೆಯ ಪ್ರಶ್ನೆ'ಯ ಬಗ್ಗೆ ಹೇಳಿದ್ದೇನೆ. ಭ್ರಾಂತಿ ಮತ್ತು ಅಭ್ರಾಂತಿಗಳನ್ನೇ ಮೀರಿನಿಂತ ನಿಜವಾದ ಶರತ್‌ಚಂದ್ರರನ್ನು ಕಂಡು ಕೊಳ್ಳುವಲ್ಲಿ ಅದು ಎಷ್ಟರಮಟ್ಟಿಗೆ ಉಪಯುಕ್ತವಾಗುತ್ತದೆಯೋ ಅಷ್ಟರಮಟ್ಟಿಗೆ ಅದು ಸ್ವತಃ ಘಟನೆಗಳ ಪ್ರಾಮಾಣಿಕತೆಯನ್ನು ನಿರ್ಧರಿಸುವಲ್ಲಿ ಉಪಯುಕ್ತವಾಗಿ ಪರಿಣಮಿಸುವುದಿಲ್ಲ.

'ಆವಾರಾ ಮಸೀಹಾ' (ಅಲೆಮಾರಿ ಪ್ರವಾದಿ) ಎಂಬ ಹೆಸರಿನ ಬಗ್ಗೆಯೂ ಸಾಕಷ್ಟು ಊಹಾಪೋಹಗಳೆದ್ದಿವೆ. ನಾನು ಕಲ್ಪಿಸಿಕೊಂಡಿರದಿದ್ದಂಥ ಅನೇಕ ಅರ್ಥಗಳನ್ನೂ

ಅದಕ್ಕೆ ಆರೋಪಿಸಲಾಗಿದೆ. ಈ ಹೆಸರಿನ ಮೂಲಕ, ಅಲೆಮಾರಿಯಾಗಿದ್ದ ಒಬ್ಬ ಹುಡುಗ ಕೊನೆಗೆ ನೊಂದ ಮಾನವತೆಯ ಮಹಾಪ್ರವಾದಿ ಹೇಗೆ ಆದ ಎಂಬುದನ್ನಷ್ಟೇ ನಾನು ಹೇಳಲು ಬಯಸಿದ್ದೆ. ಬಹುತೇಕ ಮಿತ್ರರು ಈ ಹೆಸರನ್ನು ಒಪ್ಪಿಕೊಂಡಿದ್ದಾರೆ ಎಂಬುದು ನನಗೆ ಸಂತೋಷವನ್ನು ತಂದಿದೆ.

ಕೊನೆಯಲ್ಲಿ, ಇನ್ನೊಂದು ಮಾತನ್ನು ನಾನು ಸ್ಪಷ್ಟ ಪಡಿಸಬೇಕು. 'ಅಲೆಮಾರಿ ಪ್ರವಾದಿ'ಯಲ್ಲಿ ನಿರೂಪಿಸಿರುವ ಯಾವುದೇ ಘಟನೆಯೂ ಸ್ವಕಪೋಲ ಕಲ್ಪಿತವಾದುದಲ್ಲ. ಎಷ್ಟರಮಟ್ಟಿನ ಹಾಗೂ ಎಂಥ ತಿಳಿವಳಿಕೆ ನನಗೆ ದೊರೆಯಿತೋ ಅಷ್ಟನ್ನೇ ನಾನು ಬರೆಹರೂಪಕ್ಕೆ ಇಳಿಸಿದ್ದೇನೆ. ಪ್ರಥಮ ಪುರುಷದಲ್ಲಿ ಶರತ್‌ಚಂದ್ರರ ಬಾಯಲ್ಲಿ ಆಡಿಸಿರುವ ಮಾತುಗಳೆಲ್ಲವನ್ನೂ ಆಯಾ ಪ್ರಸಂಗಗಳಿಗೆ ಸಾಕ್ಷಿಯಾಗಿದ್ದಂಥ ಮಿತ್ರರ ಸಂಸ್ಮರಣ ಬರೆಹಗಳಿಂದ ತೆಗೆದುಕೊಂಡಿದ್ದೇನೆ. ಸಾಧ್ಯವಿದ್ದಷ್ಟು ಮಟ್ಟಿಗೂ ಅವರ ಭಾಷೆಯನ್ನೇ ಬಳಸಿದ್ದೇನೆ. ಪ್ರಾಮಾಣಿಕತೆಯ ದೃಷ್ಟಿಯಿಂದ, ಒಂದೆರಡು ಕಡೆಗಳಲ್ಲಿ ಅವರ ಕೃತಿಗಳಲ್ಲಿ ಬಂದಿರುವ ಅಂಥವೇ ಪ್ರಸಂಗಗಳ ವರ್ಣನೆಯ ನೆರವನ್ನು ಪಡೆದುಕೊಂಡಿದ್ದೇನೆ. ಆದರೆ, ತೀರ ವಿರಳವಾಗಿ ಮಾತ್ರ ಹೀಗೆ ಮಾಡಿದ್ದೇನೆ. ನಾನು ಸ್ವಾತಂತ್ರ್ಯವನ್ನೇನಾದರೂ ತೆಗೆದುಕೊಂಡಿದ್ದರೆ, ಅದು ಅನುವಾದಕನಾದವನು ತೆಗೆದುಕೊಳ್ಳಬಹುದಾಗಿರುವಷ್ಟು ಸ್ವಾತಂತ್ರ್ಯವನ್ನು ಮಾತ್ರ.

ಬಯಸಿದ್ದಂತೆಯೇ ಎಂದೂ ಆಗುವುದಿಲ್ಲ. ಆದರೆ ಅನೇಕ ಅಸಂಗತಿಗಳು ಮತ್ತು ವಿಸಂಗತಿಗಳು ಇದ್ದರೂ ನನ್ನ ಗೆಳೆಯರು - ಅದರಲ್ಲಿಯೂ ಬಂಗಾಳಿ ಮಿತ್ರರು - ನನ್ನ ಈ ಕಿರು ಪ್ರಯತ್ನಕ್ಕೆ ತೋರಿರುವ ಸ್ವಾಗತ ನನ್ನ ಉತ್ಸಾಹವನ್ನು ಹೆಚ್ಚಿಸಿದೆ. ಅವರಿಗೆ ಕೃತಜ್ಞತೆಯ ಭಾವದಿಂದ ನಮಿಸುತ್ತೇನೆ. ಶರತ್‌ಚಂದ್ರರ ವಿಷಯದಲ್ಲಿ ಮತ್ತೊಮ್ಮೆ ಕವಿ ನಜರುಲ್ ಅವರ ಮಾತುಗಳನ್ನು ಬಳಸಿ ಗೌರವವನ್ನು ಸೂಚಿಸುತ್ತ ತಲೆಬಾಗುತ್ತೇನೆ:

ಅವಮಾನನಾರ್ ಅತಲ್ ಗಹರೇ ಯೇ ಮಾನುಷ್ ಛಿಲೋ ಲುಕಾಯೇ
ಶರತ್‌ಚಾಂದೇರ್ ಜ್ಯೋತ್ಸ್ನಾ ತಾದೇರ್ ದಿಲೋ ರಾಜಪಥ್ ದಿಖಾಯೇ

—ವಿಷ್ಣು ಪ್ರಭಾಕರ್

# ಅನುಕ್ರಮಣಿಕೆ

## ಮೊದಲ ಭಾಗ: ಹಾದಿ ತಪ್ಪಿದವನು



## ಎರಡನೆಯ ಭಾಗ: ಹಾದಿಯ ಹುಡುಕಾಟ

5. ಚಿತ್ರಣ
6. ಇಷ್ಟು ಸುಂದರ ಚಿತ್ರಣವನ್ನು ಮಾಡಿದವರಾರು ?
7. ಪ್ರೇರಣೆಯ ಮೂಲಗಳು
8. ಮೋಕ್ಷದಾಳಿಂದ ಹಿರಣ್ಮಯಿಯವರೆಗೆ
9. ಗೃಹ ದಾಹ
10. ಇನ್ನು ಮೇಲೆ ಮತ್ತೆ ಬರೆಯುತ್ತೇನೆ
11. ರಾಮೇರ್ ಸುಮತಿ ಶರತೇರ್ ಸುಮತಿ
12. ಸೃಷ್ಟಿಯ ಆವೇಶ
13. 'ಚರಿತ್ರ ಹೀನ' ಕ್ರಿಯೇಟಿಂಗ್ ಅಲಾರ್ಮಿಂಗ್ ಸೆನ್ಸೇಷನ್
14. 'ಭಾರತ ವರ್ಷ'ದಲ್ಲಿ 'ಬಿರಾಜ್‌ಬಹೂ'
15. ಗೆದ್ದ ರಾಜಕುಮಾರ
16. ಹೊಸ ಹೊಸ ಪರಿಚಯಗಳು
17. 'ಗ್ರಾಮೀಣ ಸಮಾಜ' ಮತ್ತು ಅಲೆಮಾರಿ ಶ್ರೀಕಾಂತ
18. ದಾರಿಯ ಅನ್ವೇಷಣೆ ಕೊನೆಗೊಂಡಿತು.

**ಮೂರನೆಯ ಭಾಗ: ಹಾದಿಯ ಕೊನೆ**

1. 'ಅವನು' ಇಂದ 'ಅವರು'
2. ಸೃಜನಶೀಲತೆಯ ಸ್ವರ್ಣಯುಗ
3. ಅಲೆಮಾರಿ ಶ್ರೀಕಾಂತನ ಸಂಪತ್ತು
4. ದೇಶದ ಬಿಡುಗಡೆಯ ವ್ರತ
5. ಸ್ವಾತಂತ್ರ್ಯದ ರಕ್ತಕಮಲ
6. ಅಲುಗದ ದೀಪಶಿಖೆ
7. ಮುಖಾಮುಖಿಯಲ್ಲಿ ಹೃದಯ ವಿನಿಮಯ
8. ರಾಜನೀತಿಯ ಅರಿವಿನ ಸಾಹಿತ್ಯ
9. ಬರೆಯುವ ನೋವು
10. ಸಮುದಾಯದ ನಡುವೆ
11. ಅಲೆಮಾರಿ ಬದುಕಿನ ಸೆಳೆತ
12. 'ನಾವು ಆತನನ್ನು ಕೊನೆಗಾಣಿಸಿದೆವು'
13. 'ಫಥೇರ್‌ದಾಬೀ'
14. ರೂಪನಾರಾಯಣ ನದಿಯ ವೈಶಾಲ್ಯ
15. ಹಳ್ಳಿಗಾಡಿನ ಶರತ್‌ಚಂದ್ರ

## ಮೊದಲ ಭಾಗ

# ಹಾದಿ ತಪ್ಪಿದವನು

ಯಾವುದೋ ಕಾರಣದಿಂದಾಗಿ ಶಾಲೆಗೆ ಅರ್ಧ ದಿವಸ ರಜ ದೊರೆತಿತ್ತು. ಮನೆಗೆ ಹಿಂದಿರುಗಿದ ಗಂಗೂಲಿ ಕುಟುಂಬದ ಮೊಮ್ಮಗನಾದ ಶರತ್ ತನ್ನ ಮಾವನಾದ ಸುರೇಂದ್ರನಿಗೆ ಹೇಳಿದ "ಏಳು ಹಳೆಯ ತೋಟದಲ್ಲಿ ಸುತ್ತಾಡಿಕೊಂಡು ಬರೋಣ."

ಅದು ಸುಡುಬೇಸಗೆಯ ಕಾಲವಾಗಿತ್ತು. ಹೂವು-ಹಣ್ಣುಗಳು ಎಲ್ಲಿಯೂ ಕಣ್ಣಿಗೆ ಬೀಳುತ್ತಿರಲಿಲ್ಲ. ಆದರೆ ನಿಬಿಡವಾದ ನೆರಳಿನಲ್ಲಿ ಕುಳಿತು ನಿಶ್ಶಬ್ದತೆಯಲ್ಲಿ ಕಾಲ ಕಳೆಯುವುದು ತುಂಬ ಇಷ್ಟವಾಗುತ್ತಿತ್ತು. ತಾನು ಇನ್ನು ಇಲ್ಲಿಂದ ಹೊರಟು ಹೋಗುತ್ತೇನೆಂಬ ಸಂಗತಿ ಶರತ್‌ನ ಮನಸ್ಸಿಗೆ ತುಂಬ ನೋವನ್ನುಂಟು ಮಾಡಿತ್ತು. ಆದರೆ ಅವನು ಇದನ್ನು ಯಾರೊಡನೆಯೂ ಹೇಳಿಕೊಳ್ಳಲಿಲ್ಲ. ಮೌನವಾಗಿ ಸುರೇಂದ್ರರೊಡನೆ ಅವನು ಮನೆಯಿಂದ ಹೊರಹೊರಟ. ವಾವೆಯಲ್ಲಿ ಮಾವನಾಗಿದ್ದರೂ, ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ಅವರಿಬ್ಬರ ನಡುವೆ ಗೆಳೆತನದ ಬಂಧನ ಕ್ರಮೇಣ ಆಳವಾಗುತ್ತ ಬಂದಿತ್ತು.

ತೋಟವನ್ನು ತಲುಪಿ ಮರಗಳ ಬಳಿ ಸುತ್ತಾಡುತ್ತ ಬಹುಶಃ ಮಾನಸಿಕವಾಗಿ ಅವನು ತನ್ನ ಮಾವನಿಂದ ಬೀಳ್ಕೊಡತೊಡಗಿದ. ಇನ್ನು ಹಿಂದಿರುಗಿ ಬರಲು ಸಾಧ್ಯವಾಗುತ್ತದೆಯೋ ಇಲ್ಲವೋ ಎಂದು ಬಹುಶಃ ಅವನು ಯೋಚಿಸುತ್ತಿದ್ದ. ಮತ್ತೆ ತನ್ನ ಸ್ವಭಾವಕ್ಕನುಗುಣವಾಗಿ, ಇದ್ದಕ್ಕಿದ್ದಂತೆಯೇ ಹಾರಿ ಮರವೊಂದರ ಕೊಂಬೆಯನ್ನೇರಿ ಕುಳಿತು ಮಾತನಾಡತೊಡಗಿದ. ಈ ಮಾತುಗಳಿಗೆ ಕೊನೆಯೇ ಇರಲಿಲ್ಲ. ಅವುಗಳಿಗೆ ಯಾವುದೇ ಸೂತ್ರವೂ ಇರಲಿಲ್ಲ. ಅಗಲಿಕೆಯ ದುಃಖವನ್ನು ಅಡಗಿಸಿ ಇಡುವ ಸಲುವಾಗಿ ಅವನು ಏನಾದರೂ ಮಾತನಾಡುತ್ತಿರಲು ಇಚ್ಛಿಸುತ್ತಿದ್ದ. ಅವನು ಹೇಳಿದ. "ನೀನು ಚಿಂತೆ ಮಾಡಬೇಡ ನಾವು ಮತ್ತೆ ಭೇಟಿಯಾಗೋಣ ನಡುನಡುವೆ ನಾನು ಬರುತ್ತಲೇ ಇರುತ್ತೇನೆ."

"ಬರುತ್ತೀಯಾ ?"

"ಏಕೆ ಬರುವುದಿಲ್ಲ ?" ಭಾಗಲಪುರವೇನು ನನಗೆ ಕಡಮೆ ಇಷ್ಟವೆ ? ಸ್ನಾನಘಟ್ಟದ ಮುರಿದ ಸ್ತೂಪದ ಮೇಲಿನಿಂದ ಗಂಗೆಗೆ ಹಾರುವುದು ಅದೆಷ್ಟು ಸಂತೋಷವನ್ನುಂಟುಮಾಡುತ್ತದೆ. ಆ ದಡದಲ್ಲಿರುವ ವನವನ್ನು ನಾನು ಮರೆಯಬಲ್ಲೆನೆ! ಅದು ನನ್ನನ್ನು ಕರೆಯುತ್ತದೆ. ನಾನು ಓಡಿ ಬರುತ್ತೇನೆ."

ಮತ್ತೆ ದೀರ್ಘ ನಿಃಶ್ವಾಸದೊಂದಿಗೆ ಹೇಳಿದ: "ಓಹ್! ಈ ಬಾಗಲಪುರ ಎಷ್ಟು

ಪ್ರಿಯವಾದ ಜಾಗ! ನೋಡುತ್ತಾ ಇರು. ಮತ್ತೆ ನಾನು ಖಂಡಿತವಾಗಿಯೂ ಬರುತ್ತೇನೆ."

ಎರಡು ಕ್ಷಣಗಳವರೆಗೆ ಇಬ್ಬರಲ್ಲಿ ಯಾರೊಬ್ಬರೂ ಮಾತನಾಡಲಿಲ್ಲ. ಆಮೇಲೆ ಇದ್ದಕ್ಕಿದ್ದಂತೆಯೇ ಶರತ್ ಹೇಳಿದ: "ಮರ ಹತ್ತುವುದಂತೂ ಮಹಾ ಅನಿವಾರ್ಯ. ಯಾವುದೋ ಕಾಡಿನಲ್ಲಿ ಹೋಗುತ್ತಿದ್ದೇವೆ ಎಂದಿಟ್ಟುಕೊ. ಇದ್ದಕ್ಕಿದ್ದಂತೆ ಸಂಜೆಯ ಕತ್ತಲು ಕವಿಯತೊಡಗುತ್ತದೆ. ನಾಲ್ಕು ಕಡೆಗಳಲ್ಲೂ ಕಾಡು ಪ್ರಾಣಿಗಳ ಊಳಿಡುವ ಧ್ವನಿ ಕೇಳಿಬರತೊಡಗುತ್ತದೆ. ಆಗ ಮರ ಹತ್ತಲು ಬರದಿದ್ದರೆ ಮಹಾ ವಿಪತ್ತೇ...."

ಸುರೇಂದ್ರ ಕೇಳಿದ: "ಅಲ್ಲಿಂದೇನಾದರೂ ಬಿದ್ದರೆ...

ಶರತ್ ಹೇಳಿದ: "ಬಿದ್ದು ? ಯಾಕೆ ಬೀಳುತ್ತೀಯಾ ?"

ಅವನು ಇನ್ನೂ ಮೇಲಕ್ಕೆ ಹತ್ತಿದ. ಬಟ್ಟೆಯ ನೆರವಿನಿಂದ ಮರದ ಒಂದು ದಪ್ಪಕೊಂಬೆಗೆ ತನ್ನ ಸೊಂಟವನ್ನು ಕಟ್ಟಿ ಬಿಗಿದು, ಕಾಲು ಚಾಚಿದ. "ಹೀಗೆ ಮಲಗಿಕೊಂಡು ರಾತ್ರಿಯನ್ನು ಕಳೆಯಬಹುದು" ಎಂದ.

ಶರತ್ ಸುಮಾರು ಮೂರು ವರ್ಷಗಳಿಂದ ಅಜ್ಜನ ಮನೆಯಲ್ಲಿ ವಾಸವಾಗಿದ್ದ. ಇದಕ್ಕೆ ಮೊದಲೂ ತನ್ನ ತಾಯಿಯ ಜೊತೆಯಲ್ಲಿ ಅನೇಕ ಸಲ ಬಂದಿದ್ದ. ಅವನ ತಾಯಿ ಮೊಟ್ಟಮೊದಲ ಸಲ ಅವನನ್ನು ಅಲ್ಲಿಗೆ ಕರೆತಂದಿದ್ದಾಗ ಅಜ್ಜ-ಅಜ್ಜಿಯರು ಅವನ ಮೇಲೆ ಹಣ ಮತ್ತು ಒಡವೆಗಳ ಸುರಿಮಳೆ ಕರೆದಿದ್ದರು. ಅಜ್ಜ ಕೇದಾರನಾಥರು ಅವನ ಸೊಂಟಕ್ಕೆ ಚಿನ್ನದ ಉಡಿದಾರವನ್ನು ಕಟ್ಟಿ ಅವನನ್ನು ಎತ್ತಿಕೊಂಡಿದ್ದರು. ಆ ಕುಟುಂಬದಲ್ಲಿ ಅವನು ಈ ತಲೆಮಾರಿನ ಮೊದಲ ಗಂಡುಮಗುವಾಗಿದ್ದನಲ್ಲವೆ!

ಆದರೆ, ಮೂರು ವರ್ಷಗಳ ಹಿಂದಿನ ಆ ಬರವಿನ ಬಗೆಯೇ ಬೇರೆಯಾಗಿತ್ತು. ಅವನ ತಂದೆ ಮೋತಿಲಾಲರು ವಿಭಿನ್ನ ಬಗೆಯ ಸ್ವಭಾವದ ಕನಸುಗಾಣುವ ವ್ಯಕ್ತಿಯಾಗಿದ್ದರು. ಬಾಳುವೆಯ ಯಾವ ವೃತ್ತಿಯೂ ಅವರನ್ನು ಕಟ್ಟಿಹಾಕಲಾರದೆ ಹೋಯಿತು. ಎಲ್ಲ ಕಡೆಗಳಲ್ಲೂ ಆಕ್ಷೇಪಕ್ಕೆ ಗುರಿಯಾಗಿ ಅವರು ಮತ್ತೆ ಮತ್ತೆ ಕೆಲಸವನ್ನು ಹುಡುಕುತ್ತಿದ್ದರು. ಕೆಲಸ ದೊರೆತರೂ ಅವರ ಕಲ್ಪನಾಶೀಲವಾದ ಮನಸ್ಸು ಮತ್ತು ದಾಸ್ಯದ ಬಂಧನ-ಇವುಗಳ ನಡುವೆ ಯಾವುದೇ ಸಾಮಂಜಸ್ಯ ಏರ್ಪಡುತ್ತಿರಲಿಲ್ಲ. ಕೆಲವು ದಿವಸಗಳವರೆಗೆ ಅದರಲ್ಲಿ ಮನಸ್ಸಿಟ್ಟು ದುಡಿದರೂ, ಇದಕ್ಕಿದ್ದಂತೆ ಒಂದು ದಿನ ಹಿರಿಯ ಅಧಿಕಾರಿಯೊಡನೆ ಜಗಳವಾಡಿ ಆ ಕೆಲಸವನ್ನು ಬಿಟ್ಟುಬಿಡುತ್ತಿದ್ದರು. ಆಗೆಲ್ಲ ಓದುವುದರಲ್ಲಿ ಮಗ್ನರಾಗುತ್ತಿದ್ದರು ಅಥವಾ ಕಾವ್ಯರಚನೆಯಲ್ಲಿ ತೊಡಗುತ್ತಿದ್ದರು. ಕಥೆ, ಕಾದಂಬರಿ, ನಾಟಕ - ಇವನ್ನೆಲ್ಲ ಬರೆಯುವ ಪ್ರವೃತ್ತಿ ಅವರದಾಗಿತ್ತು. ಚಿತ್ರಕಲೆಯಲ್ಲಿಯೂ ಅವರಿಗೆ ಆಸಕ್ತಿ ಇತ್ತು.

ಸೌಂದರ್ಯಪ್ರಜ್ಞೆಯೂ ಅವರಲ್ಲಿ ಕಡಿಮೆಯಾಗಿರಲಿಲ್ಲ. ಸುಂದರವಾದ ಲೇಖನಿಗೆ ಹೊಸ ನಿಬ್ಬನ್ನು ಹಾಕಿ, ಉತ್ತಮವಾದ ಕಾಗದದ ಮೇಲೆ ಮುತ್ತಿನಂಥ ಅಕ್ಷರಗಳಲ್ಲಿ ತಮ್ಮ ರಚನೆಯನ್ನು ಪ್ರಾರಂಭಿಸುತ್ತಿದ್ದರು. ಆದರೆ, ಆರಂಭ ಎಷ್ಟು ಮಹತ್ವಪೂರ್ಣವಾಗಿರುತ್ತಿತ್ತೋ, ಅಂತ್ಯ ಅಷ್ಟೇ ಮಹತ್ವರಹಿತವಾಗಿರುತ್ತಿತ್ತು. ಬಹುಶಃ ಅಂತ್ಯ ಅನಿವಾರ್ಯವೆಂಬುದನ್ನು ಅವರ ಮನಸ್ಸು ಅಂಗೀಕರಿಸಲೇ

ಇಲ್ಲವೇನೋ. ಮಧ್ಯದಲ್ಲಿಯೇ ಕೈಬಿಟ್ಟು ಬೇರೊಂದು ಹೊಸ ರಚನೆಯನ್ನು ಆರಂಭಿಸುತ್ತಿದ್ದರು. ಬಹುಶಃ ಅವರ ಆದರ್ಶವೇ ತುಂಬ ಎತ್ತರದ್ದಾಗಿರುತ್ತಿತ್ತು ಅಥವಾ ಕೊನೆಯನ್ನು ತಲುಪುವ ಸಾಮರ್ಥ್ಯವೇ ಅವರಲ್ಲಿ ಇರುತ್ತಿರಲಿಲ್ಲ. ಅವರು ತಮ್ಮ ಯಾವುದೇ ರಚನೆಯನ್ನೂ ಎಂದು ಪೂರ್ಣಗೊಳಿಸಲಿಲ್ಲ. ಒಮ್ಮೆ ಮಕ್ಕಳಿಗಾಗಿ ಅವರು ಭಾರತದ ದೊಡ್ಡ ಭೂಪಟವೊಂದನ್ನು ಸಿದ್ಧಪಡಿಸತೊಡಗಿದರು. ಆದರೆ, ಆಗಲೇ ಅವರ ಮನಸ್ಸಿನಲ್ಲಿ ಪ್ರಶ್ನೆಯೊಂದು ಉದ್ಭವಿಸಿತು. ಈ ಭೂಪಟದಲ್ಲಿ ಹಿಮಾಲಯದ ಹಿರಿಮೆಯನ್ನು ಯಥಾವತ್ತಾಗಿ ನಿರೂಪಿಸಲು ಸಾಧ್ಯವಾದೀತೆ? ಇಲ್ಲ, ಸಾಧ್ಯವಾಗಲಾರದು. ಅಷ್ಟೆ. ಆ ಕೆಲಸ, ಯಾವ ರೀತಿಯಲ್ಲೂ ಮುಂದುವರಿಯಲಾರದೆ ಹೋಯಿತು.

ಹೀಗೆ ಮೋತೀಲಾಲರ ಕಲಾಸಾಧನೆಯೆಲ್ಲ ವ್ಯರ್ಥತೆಯಲ್ಲಿಯೇ ಸಾಫಲ್ಯವನ್ನು ಕಂಡಿತು. ತಮ್ಮ ಕುಟುಂಬದ ಪಾಲನೆ-ಪೋಷಣೆ ಅವರಿಗೆ ಅಸಾಧ್ಯವಾಗಿ ಪರಿಣಮಿಸಿತು. ಇದನ್ನು ಕಂಡು ಶರತ್‌ನ ತಾಯಿ ಭುವನಮೋಹಿನಿ ಮೊದಲು ತನ್ನ ಗಂಡನಿಗೆ ಸಾಕಷ್ಟು ಹೇಳಿ ನೋಡಿದಳು. ಆಮೇಲೆ ತನ್ನ ತಂದೆ ಕೇದಾರನಾಥರ ಆಶ್ರಯವನ್ನು ಬೇಡಿ, ಒಂದು ದಿನ ಎಲ್ಲರನ್ನೂ ಕರೆದುಕೊಂಡು ಭಾಗಲಪುರಕ್ಕೆ ಬಂದಳು. ಮೋತೀಲಾಲರು ಮತ್ತೊಮ್ಮೆ ಮನೆ-ಅಳಿಯನಾಗಿ ಇರತೊಡಗಿದರು.

## 2

ಭಾಗಲಪುರಕ್ಕೆ ಬಂದಮೇಲೆ ಶರತ್‌ನನ್ನು ದುರ್ಗಾಚರಣ ಎಂ.ಇ. ಸ್ಕೂಲಿನ ಶಿಷ್ಯವೃತ್ತಿ ತರಗತಿಗೆ ಸೇರಿಸಲಾಯಿತು. ಅಜ್ಜ ಶಾಲೆಯ ಕಾರ್ಯದರ್ಶಿಯಾಗಿದ್ದರು. ಹೀಗಾಗಿ, ಹುಡುಗ ಎಲ್ಲಿಯವರೆಗೆ ಓದಿದ್ದಾನೆ, ಏನು ಮಾಡಿದ್ದಾನೆ ಎಂಬುದನ್ನು ವಿಚಾರಿಸಿಕೊಳ್ಳುವ ಗೋಜಿಗೆ ಯಾರೂ ಹೋಗಲಿಲ್ಲ. ಇದುವರೆಗೆ ಅವನು ಓದಿದ್ದುದು 'ಬೋಧೋದಯ'ವನ್ನು ಮಾತ್ರ. ಇಲ್ಲಿ 'ಸೀತಾ-ವನವಾಸ' 'ಚಾರುಪಾಠ', 'ಸದ್ಭಾವ ಸದ್ಗುರು' ಮತ್ತು 'ಪ್ರಕಾಂಡ ವ್ಯಾಕರಣ' ಇವುಗಳನ್ನೆಲ್ಲ ಓದಬೇಕಾಗಿ ಬಂತು. ಇದು ಬರಿಯ ಓದು ಮಾತ್ರವಾಗಿರಲಿಲ್ಲ. ಪ್ರತಿದಿನ ಸ್ವತಃ ಗುರುಗಳ ಎದುರಿಗೆ ನಿಂತು ಪರೀಕ್ಷೆಗೆ ಒಳಗಾಗಬೇಕಾಗಿತ್ತು. ಆದ್ದರಿಂದ, ಬಾಲಕ ಶರತ್‌ಗೆ ಸಾಹಿತ್ಯದ ಮೊದಲ ಪರಿಚಯ ಆದದ್ದು ಕಣ್ಣೀರಿನ ಮಾಧ್ಯಮದ ಮೂಲಕವೇ ಎಂದು ನಿಸ್ಸಂಕೋಚವಾಗಿ ಹೇಳಬಹುದಾಗಿದೆ. ಮನುಷ್ಯನಿಗೆ ದುಃಖವನ್ನುಂಟು ಮಾಡುವುದಕ್ಕಿಂತ ಬೇರೆಯಾದ ಯಾವುದೇ ಉದ್ದೇಶ ಸಾಹಿತ್ಯಕ್ಕೆ ಇರಬಹುದು ಎಂದು ಆಗ ಯೋಚಿಸಲೂ ಅವನಿಗೆ ಸಾಧ್ಯವಾಗುತ್ತಿರಲಿಲ್ಲ. ಆದರೆ, ತರಗತಿಯಲ್ಲಿ ತಾನು ಬಹಳ ಹಿಂದೆ ಬಿದ್ದಿದ್ದೇನೆಂಬುದನ್ನು ಅವನು ಬಹುಬೇಗ ಅರಿತುಕೊಂಡ. ಈ ವಿಚಾರ ಅವನಿಗೆ ಸಹ್ಯವಾಗುತ್ತಿರಲಿಲ್ಲ. ಆದ್ದರಿಂದ ಅವನು ಶ್ರಮವಹಿಸಿ ಓದಲಾರಂಭಿಸಿದ. ನೋಡು-ನೋಡುತ್ತಿದ್ದಂತೆಯೇ ಅನೇಕರನ್ನು ಅವನು ಹಿಂದೆ ಹಾಕಿದ. ಒಳ್ಳೆಯ ಮಕ್ಕಳಲ್ಲಿ ಅವನೂ ಒಬ್ಬನೆಂದು ಪರಿಗಣಿಸುವಂತಾಯಿತು.

ಅಜ್ಜಂದಿರಲ್ಲಿ ಅನೇಕ ಸೋದರರಿದ್ದರು ಹಾಗೂ ಅವರೆಲ್ಲ ಆ ಸಂಯುಕ್ತ

ಕುಟುಂಬದಲ್ಲಿ ಒಟ್ಟಿಗೇ ವಾಸಿಸುತ್ತಿದ್ದರು. ಆದ್ದರಿಂದ ಸೋದರಮಾವಂದಿರ ಹಾಗೂ ಚಿಕ್ಕಮ್ಮಂದಿರ ಸಂಖ್ಯೆ ಸಾಕಷ್ಟೇ ಇತ್ತು. ಅವರಲ್ಲಿ ಚಿಕ್ಕ ತಾತ ಅಘೋರನಾಥರ ಮಗ ಮಣೇಂದ್ರ ಅವರ ಸಹಪಾಠಿಯಾಗಿದ್ದ. ಇವರಿಬ್ಬರಿಗೂ ಮನೆಯಲ್ಲಿ, ಪಾಠ ಹೇಳಲು ತಾತ ಅಕ್ಷಯಪಂಡಿತರನ್ನು ಗೊತ್ತು ಮಾಡಿದ್ದರು. ಅವರು ಯಮರಾಜರ ಸೋದರನಂತೆ ಇದ್ದರು. ಗುರುವಿನ ದೊಣ್ಣೆಯಲ್ಲಿಯೇ ವಿದ್ಯೆ ಬೀಡುಬಿಟ್ಟಿರುತ್ತ ದೆಂಬುದು ಅವರ ನಂಬಿಕೆಯಾಗಿತ್ತು. ಆದ್ದರಿಂದ ನಡುನಡುವೆ ಸಿಂಹ ಗರ್ಜನೆಯ ಜೊತೆಗೆ ಅಳುವಿನ ಕರುಣಾಪೂರ್ಣ ಧ್ವನಿಯೂ ಕೇಳಿಬರುತ್ತಿತ್ತು.

ಈ ವಿದ್ಯಾಭ್ಯಾಸದ ಅವಧಿಯಲ್ಲಿ ತುಂಟಾಟಿಕೆಯೂ ಕಡಿಮೆಯಾಗಿರಲಿಲ್ಲ. ಇಲ್ಲಿಯೂ ಶರತ್ ಅಗ್ರಗಣ್ಯನಾಗಿಯೇ ಇದ್ದ. ಒಂದು ದಿನ ಎಣ್ಣೆಯ ದೀಪದ ಸುತ್ತಲೂ ಕುಳಿತುಕೊಂಡು ಎಲ್ಲ ಮಕ್ಕಳೂ ಓದುತ್ತಿದ್ದರು. ಅಂಗಳದಲ್ಲಿ, ದಪ್ಪನೂಲಿನ ಪಟ್ಟಿನ ಮಂಚದ ಮೇಲೆ ಮೈಚಾಚಿ ಮಲಗಿಕೊಂಡು ತಾತ ಇವರು ಓದುವುದನ್ನು ಕೇಳುತ್ತಿದ್ದರು. ಇದ್ದಕ್ಕಿದ್ದಂತೆ ಅವರು ಕೇಳಿದರು: "ಹಳೇ ಪಾಠವನ್ನೇ ಯಾಕೆ ಗಟ್ಟಿ ಮಾಡುತ್ತಾ ಇದ್ದೀರಿ? ಇವತ್ತು ಹೊಸ ಪಾಠ ಓದಲಿಲ್ಲವೇನು?"

"ಇಲ್ಲ!"

"ಏಕೆ?"

"ಮೇಷ್ಟ್ರು ಬರಲಿಲ್ಲ. ಅವರಿಗೆ ಜ್ವರ ಬಂದುಬಿಟ್ಟದೆ."

ಸರಿ ತಾತ ಮನೆಯ ಆಳು ಮುಶಾಯಿಗೆ ಕೂಗು ಹಾಕಿದರು. "ಮುಶಾಯೀ, ಲಾಟೀನು ಹತ್ತಿಸು. ಮೇಷ್ಟ್ರಿಗೆ ಜ್ವರ ಬಂದಿದೆಯಂತೆ. ಅವರನ್ನು ನೋಡಿಕೊಂಡು ಬರಬೇಕು."

ಅವರು ಶಾಲೆಯ ಕಾರ್ಯದರ್ಶಿ ಮಾತ್ರವೇ ಆಗಿರಲಿಲ್ಲ. ಸಮಾಜದ ಮುಖಂಡರೂ ಆಗಿದ್ದರು. ಮನುಷ್ಯರೊಡನೆ ಯಾವ ರೀತಿ ವರ್ತಿಸಬೇಕೆಂಬುದಕ್ಕೆ ಅವರನ್ನು ಆದರ್ಶವೆಂದು ಪರಿಗಣಿಸಲಾಗಿತ್ತು. ಅವರು ಹೊರಟಕೂಡಲೇ ಶರತ್ ಘೋಷಿಸಿದ: "ಕ್ಯಾಟ್ ಈಸ್ ಔಟ್, ಲೆಟ್ ಮೌಸ್ ಪ್ಲೇ." (ಬೆಕ್ಕು ಹೊರಗೆ ಹೋಗಿದೆ, ಇಲಿಗಳು ಇನ್ನು ಆಡಲಿ)

ಡಾನ್ಸ್ ಲಿಟ್ಲ್ ಬೇಬಿ, ಡಾನ್ಸ್ ಅಪ್ ಹೈ
ನೆವರ್ ಮೈಂಡ್ ಬೇಬಿ, ಮದರ್ ಈಸ್ ನೈ
ಕ್ರೋ ಅಂಡ್ ಕೆಪಾರ್, ಕೆಪಾರ್ ಅಂಡ್ ಕ್ರೋ
ದೇರ್ ಲಿಟ್ಲ್ ಬೇಬಿ, ದೇರ್ ಯೂ ಗೋ
ಅಪ್ ಟು ದಿ ಸೀಲಿಂಗ್, ಅಪ್ ಟು ದಿ ಗ್ರೌಂಡ್
ಬ್ಯಾಕ್‌ವರ್ಡ್ ಅಂಡ್ ಫಾರ್ವರ್ಡ್, ರೌಂಡ್ ಅಂಡ್ ರೌಂಡ್
ಡಾನ್ಸ್ ಲಿಟ್ಲ್ ಬೇಬಿ, ಅಂಡ್ ಮದರ್ ವಿಲ್ ಸಿಂಗ್,
ಮೆರಿಲಿ-ಮೆರಿಲಿ, ಡಿಂಗ್-ಡಿಂಗ್-ಡಿಂಗ್.

ಉತ್ಸಾಹಿ ಬಾಲಕನೊಬ್ಬ ಈ ಕೊನೆಯ ಪಂಕ್ತಿಯ ಅನುವಾದವನ್ನು ಕೂಡಲೇ ಮುಂದಿರಿಸಿದ 'ನಲಿವಿಂದ, ನಲಿವಿಂದ ತಕ ಧಿನ ಧಿನ್."

ಒಂದು ದಿನ ಎಲ್ಲಿಂದಲೋ ಹಾರಿ ಬಂದ ಬಾವಲಿಯೊಂದು ಮಕ್ಕಳ ತಲೆಯ

ಮೇಲೆ ಸುತ್ತತೊಡಗಿತು. ತಾತ ಮಲಗಿದ್ದುದರಿಂದ ಚಿಕ್ಕಮಾವ ದೇವಿಯೂ ನಿದ್ದೆ ಹೋಗಿದ್ದ. ಹೀಗಿರುವಾಗ ಉಳಿದ ಮಕ್ಕಳು ಮಾತ್ರವೇ ಓದುವುದಾದರೂ ಹೇಗೆ ಸಾಧ್ಯ? ಬಾವಲಿಯನ್ನು ನೋಡಿ ಮಣಿ ಮತ್ತು ಶರತ್‌ರ ಕೈ ಕೆರೆಯತೊಡಗಿತು. ದೊಣ್ಣೆಗಳನ್ನೆತ್ತಿಕೊಂಡು ಅವರು ಅದನ್ನು ಹಿಡಿಯಲು ಹೊರಟರು. ಆಗ ನಡೆದ ಯುದ್ಧದ ಕೋಲಾಹಲದಲ್ಲಿ ಬಾವಲಿಯೇನೋ ಕಾಡಿನ ಮೂಲಕ ಹಾರಿ ಎಲ್ಲಿಗೋ ಹೋಯಿತು; ಆದರೆ ದೊಣ್ಣೆಯ ಏಟು ಬಿದ್ದದ್ದು ದೀಪಕ್ಕೆ. ದುಪಟಿಯ ಮೇಲೆ ಎಣ್ಣೆಯನ್ನು ಹರಡುತ್ತ ಅದು ಬಿದ್ದು ಆರಿಹೋಯಿತು. ಇದನ್ನು ಕಂಡು ಮಣಿ ಮತ್ತು ಶರತ್ ಇಬ್ಬರೂ ಸದ್ದಿಲ್ಲದೆ ಅಲ್ಲಿಂದ ಪಲಾಯನ ಮಾಡಿದರು. ತಾತನಿಗೆ ಎಚ್ಚರವಾಯಿತು. ನೋಡಿದರೆ, ಗಾಢವಾದ ಕತ್ತಲೆ ಆವರಿಸಿಕೊಂಡಿದೆ. "ಮುಶಾಯಿ, ಮುಶಾಯಿ!" ಎಂದು ಅವರು ಕೂಗು ಹಾಕಿದರು.

ಮುಶಾಯಿ ಓಡೋಡಿ ಬಂದ - "ಬುದ್ಧಿ!"

"ದೀಪ ಯಾಕೆ ಆರಿ ಹೋಯಿತು?"

ಬೆಂಕಿ ಕಡ್ಡಿಯನ್ನು ಗೀರಿ ಮುಶಾಯಿ ನೋಡಿದ: ಅಲ್ಲಿ ಮಣಿಯಾಗಲೀ, ಶರತ್ ಆಗಲೀ ಇಲ್ಲ. ದೇವಿ ಮಾತ್ರ ಆಳವಾದ ನಿದ್ದೆಯಲ್ಲಿ ಮುಳುಗಿದ್ದಾನೆ ಹೇಳಿದ: "ಮಣಿ ಮತ್ತು ಶರತ್ ಊಟ ಮಾಡಲು ಹೋಗಿದ್ದಾರೆ. ದೇವಿ ದೀಪವನ್ನು ಬೀಳಿಸಿದ್ದಾನೆ."

ಈ ಅಪರಾಧಕ್ಕೆ ಕ್ಷಮೆಯೇ ಇಲ್ಲ. ಕೇದಾರನಾಥರು ದೇವಿಯನ್ನು ಕಿವಿ ಹಿಡಿದು ಎಬ್ಬಿಸಿದರು. "ಇವನನ್ನು ಎಳೆದುಕೊಂಡು ಹೋಗಿ ಕುದುರೆ ಲಾಯದಲ್ಲಿ ಕೂಡಿಹಾಕು" ಎಂದು ಮುಶಾಯಿಗೆ ಹೇಳಿದರು.

ಮಾರನೆಯ ದಿನ ಮಾವನನ್ನು ಪ್ರಸನ್ನಗೊಳಿಸಲು ಭಾರಿ ಲಂಚವನ್ನೇ ತೆರಬೇಕಾಯಿತು. ಆದರೆ ದೇವಿಯ ಮೇಲೆ ಸರಸ್ವತಿಯ ಕೃಪೆ ಕಡಿಮೆಯಾಗಿಯೇ ಇತ್ತು. ಶರತ್‌ರ ದೊಡ್ಡ ಮಾವ ಠಾಕುರ್‌ದಾಸ್ ಎಲ್ಲ ಮಕ್ಕಳ ವಿದ್ಯಾಭ್ಯಾಸದ ಮೇಲ್ವಿಚಾರಣೆ ಮಾಡುತ್ತಿದ್ದರು. ಗಂಗೂಲಿ ಕುಟುಂಬದ ಸಾಂಪ್ರದಾಯಿಕತೆ ಮತ್ತು ಕಠೋರತೆಗಳ ನಿಜವಾದ ಪ್ರತಿನಿಧಿ ಅವರಾಗಿದ್ದರು. ಒಂದು ದಿವಸ ಹೀಗಾಯಿತು. ಮೋತೀಲಾಲರು ಮಕ್ಕಳೊಡನೆ ಗಂಗಾ ನದಿಯ ದಡದಲ್ಲಿ ಸಂಚರಿಸುತ್ತಿದ್ದರು. ಇದ್ದಕ್ಕಿದ್ದಂತೆ ಠಾಕುರ್‌ದಾಸ್ ಅಲ್ಲಿ ಕಾಣಿಸಿಕೊಂಡರು. ಅವರ ದೃಷ್ಟಿಯಲ್ಲಿ ಇದು ಅಕ್ಷಮ್ಯ ಅಪರಾಧವಾಗಿತ್ತು. ಕೂಡಲೇ ಪರೀಕ್ಷೆಗೆ ಹಾಜರಾಗಬೇಕೆಂದು ಅವರು ಮಕ್ಕಳಿಗೆ ಅಪ್ಪಣೆ ಮಾಡಿದರು. ಹೇಗೋ ಶರತ್ ಮತ್ತು ಮಣಿ ಇದರಿಂದ ಮುಕ್ತರಾದರು. ಆದರೆ ಜಗನ್ನಾಥ ಶಬ್ದದ ಸಂಧಿಯನ್ನು ಬಿಡಿಸುವಾಗ ಮಣಿ 'ಜಗದ್ +ನಾಥ' ಎಂದು ಬಿಡಿಸಿದ.

ಬೆನ್ನಿನ ಮೇಲೆ ಚಾಟಿಯ ಏಟುಗಳನ್ನು ತಿನ್ನುವುದು ಮಾತ್ರ ಈ ಅಪರಾಧಕ್ಕೆ ತಕ್ಕ ಶಿಕ್ಷೆಯಾಗಿರಲಿಲ್ಲ. ಲಾಯದಲ್ಲಿಯೂ ಕೂಡಿಹಾಕಲಾಗುತ್ತಿತ್ತು. ಆದರೆ ಈ ಯಾವ ಸಂಗತಿಗಳೂ ಶರತ್‌ನ ಮೇಲೆ ಪ್ರಭಾವ ಬೀರುತ್ತಿರಲಿಲ್ಲ. ಎಷ್ಟರಮಟ್ಟಿಗೆ ಅವನು ನಿರ್ಲಕ್ಷ್ಯದಿಂದ ಇದ್ದ ಎಂದರೆ ಶಾಲೆಯಲ್ಲಿಯೂ ತುಂಟತನವನ್ನೆಸಗಲು ಅವನು ಹಿಂದೆಗೆಯುತ್ತಿರಲಿಲ್ಲ. ಆಗಿಂದಾಗ್ಗೆ ಅಲ್ಲಿಯ ಗಡಿಯಾರ ವೇಳೆಯನ್ನು ಮೀರಿ ಮುಂದೋಡಿ ಬಿಡುತ್ತಿತ್ತು. ಅದನ್ನು ಸರಿಪಡಿಸಿ ನಡೆಸುವ ಹೊಣೆಯೇನೋ ಅಕ್ಷಯ

ಪಂಡಿತರ ಮೇಲಿತ್ತು. ಆದರೆ, ಎರಡು ಘಂಟೆ ಪಟ್ಟು ಹಿಡಿದು ಕುಳಿತು ಕೆಲಸ ಮಾಡಿದ ಮೇಲೆ ಹೊಗೆಸೊಪ್ಪನ್ನು ಅಗಿಯುವ ಆಸೆಯಾಗುತ್ತಿದ್ದುದು ಸಹಜವೇ ಆಗಿತ್ತು. ಆಗ ಅವರು ಶಾಲೆಯ ನೌಕರನಾದ ಜಗುವಾನ ವೀಳ್ಯದ ಅಂಗಡಿಯಲ್ಲಿ ಹಾಜರಾಗುತ್ತಿದ್ದರು. ಈ ಹೊತ್ತಿನಲ್ಲಿಯೇ ಶರತ್‌ನ ಪ್ರೇರಣೆಯಿಂದ ಇತರ ವಿದ್ಯಾರ್ಥಿಗಳು ಗಡಿಯಾರವನ್ನು ಹತ್ತು ನಿಮಿಷದಷ್ಟು ಮುಂದೆ ತಳ್ಳಿಬಿಡುತ್ತಿದ್ದರು. ಹಲವು ದಿವಸಗಳವರೆಗೆ ಅವರ ಈ ಕಳ್ಳತನವನ್ನು ಯಾರೂ ಪತ್ತೆ ಹಚ್ಚದಿದ್ದಾಗ ಅವರ ಈ ಸಾಹಸ ಮತ್ತಷ್ಟು ಹೆಚ್ಚಿತು. ಅವರ ಗಡಿಯಾರವನ್ನು ಅರ್ಧ ಘಂಟೆಯಷ್ಟು ಮುಂದೆ ತಳ್ಳತೊಡಗಿದರು. ಇದಾದ ಮೇಲೆ ಒಮ್ಮೊಮ್ಮೆ ಗಡಿಯಾರ ಒಂದು ಘಂಟೆಯಷ್ಟು ಮುಂದೆ ಹೋಗಿ ಬಿಡುತ್ತಿತ್ತು. ಒಮ್ಮೆ ಮೂರು ಘಂಟೆಯಾಗಿದ್ದಾಗ ಈ ಗಡಿಯಾರ ನಾಲ್ಕು ಘಂಟೆಯನ್ನು ತೋರಿಸುತ್ತಿತ್ತು. ಪಾಲಕರ ಮನಸ್ಸಿನಲ್ಲಿ ಸಂದೇಹ ಮೂಡತೊಡಗಿತು. ಆದರೆ "ನಾನೇ ಸ್ವತಃ ಗಡಿಯಾರವನ್ನು ನೋಡಿಕೊಳ್ಳುತ್ತೇನಲ್ಲ" ಎಂದು ಪಂಡಿತರು ಅವರಿಗೆ ಉತ್ತರ ಕೊಟ್ಟರು.

ಉತ್ತರವನ್ನೇನೋ ಅವರು ಕೊಟ್ಟರು. ಆದರೆ ಅವರ ಮನಸ್ಸಿನಲ್ಲಿಯೂ ಸಂದೇಹ ಮೂಡಿತ್ತು. ಆದ್ದರಿಂದ, ಸದ್ದಿಲ್ಲದೆ ಈ ರಹಸ್ಯವನ್ನು ಪತ್ತೆ ಹಚ್ಚಲು ಅವರು ಪ್ರಯತ್ನಿಸಿದರು. ಒಂದು ದಿವಸ ಹೊತ್ತಿಗೆ ಮುಂಚಿತವಾಗಿಯೇ ವೀಳ್ಯದ ಅಂಗಡಿಯಿಂದ ಅವರು ಹಿಂದಿರುಗಿದರೆ ಅಲ್ಲಿ ಕಂಡದ್ದಾದರೂ ಏನು ? ಒಬ್ಬರ ಭುಜದ ಮೇಲೆ ಒಬ್ಬರಂತೆ ಹತ್ತಿ ನಿಂತು ಮಕ್ಕಳು ಗಡಿಯಾರವನ್ನು ಮುಂದೆ ತಳ್ಳುತ್ತಿದ್ದಾರೆ. ಒಮ್ಮಲೇ ಅವರು ಗರ್ಜಿಸಿದರು. ಎಲ್ಲ ಹುಡುಗರೂ ಒಂದೇ ಒಂದು ನಿಮಿಷದಲ್ಲಿ ಅಲ್ಲಿಂದ ಓಡಿಹೋದರು. ಆದರೆ, ಒಳ್ಳೆಯ ಹುಡುಗನಂತೆ ಅಭಿನಯಿಸುತ್ತ ಶರತ್ ಮಾತ್ರ ಅಲ್ಲಿಯೇ ಕುಳಿತಿದ್ದ. ಈ ಇಡೀ ನಾಟಕದ ನಿರ್ದೇಶಕ ಅವನೇ ಎಂಬುದು ಪಂಡಿತರಿಗೆ ಎಂದೂ ಗೊತ್ತಾಗಲೇ ಇಲ್ಲ. "ಪಂಡಿತರೆ, ನಿಮ್ಮ ಪಾದವನ್ನು ಮುಟ್ಟಿ ಹೇಳುತ್ತೇನೆ, ನನಗೇನೂ ಗೊತ್ತಿಲ್ಲ. ನಾನು ಮನಸ್ಸಿಟ್ಟು ಉತ್ತರವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಿದ್ದೆ" ಎಂದು ಅವನು ಹೇಳಿದ.

ಆಗಿನ ಅವನ ಮುಖಭಂಗಿಯನ್ನು ನೋಡಿದರೆ ಯಾರು ತಾನೆ ನಂಬದಿರಲು ಸಾಧ್ಯವಾಗುತ್ತಿತ್ತು ? ಮೇರೆ ಇಲ್ಲದ ತನ್ನ ಸಾಹಸ ಹಾಗೂ ಬುದ್ಧಿವಂತಿಕೆಗಳಿಂದ ಮನೆಯಲ್ಲಿ ಹೇಗೆ ಅವನು ಮಾವಂದಿರ ತಂಡಕ್ಕೆ ನಾಯಕನಾಗಿದ್ದನೋ ಹಾಗೆಯೇ ಶಾಲೆಯಲ್ಲಿಯೂ ವಿದ್ಯಾರ್ಥಿಗಳ ಮುಖಂಡತ್ವದ ಹೊಣೆಯೂ ಅನಾಯಾಸವಾಗಿಯೇ ಅವನ ಹೆಗಲ ಮೇಲೆ ಬಂದು ಕುಳಿತಿತ್ತು.

ಅವನ ಆಸಕ್ತಿಗಳೂ ಅನೇಕವಾಗಿದ್ದುವು - ಉದಾಹರಣೆಗೆ, ಪಶು-ಪಕ್ಷಿಗಳನ್ನು ಸಾಕುವುದು ಹಾಗೂ ತೋಟಗಾರಿಕೆ. ಆದರೆ ಇವುಗಳೆಲ್ಲೆಲ್ಲ ತುಂಬ ಮುಖ್ಯ ವಾಗಿದ್ದುದು ಚಿಟ್ಟೆಯ ಉದ್ಯೋಗ. ಬಗೆಬಗೆಯಾದ ಬಣ್ಣ ಹಾಗೂ ರೂಪದ ಅನೇಕ ಚಿಟ್ಟೆಗಳನ್ನು ಅವನು ಮರದ ಪೆಟ್ಟಿಗೆಯಲ್ಲಿ ತುಂಬಿ ಇಟ್ಟಿದ್ದ. ತುಂಬ ಎಚ್ಚರಿಕೆಯಿಂದ ಅವನು ಅವುಗಳನ್ನು ನೋಡಿಕೊಳ್ಳುತ್ತಿದ್ದ. ಅವುಗಳ ಅಭಿರುಚಿಗೆ ಅನುಗುಣವಾಗಿ ಅವನು ಅವುಗಳ ಊಟಕ್ಕೂ ವ್ಯವಸ್ಥೆ ಮಾಡುತ್ತಿದ್ದ. ಅವುಗಳ ಯುದ್ಧವನ್ನೂ ಅವನು ಪ್ರದರ್ಶಿಸುತ್ತಿದ್ದ. ಈ ಪ್ರದರ್ಶನದಿಂದಾಗಿಯೇ ಅವನ ಗೆಳೆಯರೆಲ್ಲರೂ ಅವನಿಗೆ

ನೆರವಾಗುವುದರ ಮೂಲಕ ತಮ್ಮನ್ನು ತಾವೇ ಧನ್ಯರೆಂದು ಭಾವಿಸುತ್ತಿದ್ದರು. ಈ ತಂಡದಲ್ಲಿ ಆ ಕುಟುಂಬದ ಮಕ್ಕಳು ಅಥವಾ ಇತರ ದೊಡ್ಡ ದೊಡ್ಡ ಮನೆಗಳ ಮಕ್ಕಳು ಮಾತ್ರವಲ್ಲದೆ ಮನೆಯ ಕೆಲಸಗಾರರ ಮಕ್ಕಳೂ ಸೇರಿದ್ದರು. ಅವರ ನಡುವೆ ಯಾವುದೇ ಬಗೆಯ ಭೇದ-ಭಾವವನ್ನೂ ಎಣಿಸುತ್ತಿರಲಿಲ್ಲ. ಈ ಮಕ್ಕಳೂ ಅವನನ್ನು ಸಂತೋಷಗೊಳಿಸುವುದರ ಮೂಲಕ ತಾವು ಕೃತಾರ್ಥರಾದೆವೆಂದು ಭಾವಿಸುತ್ತಿದ್ದರು.

ತನ್ನ ತೋಟದಲ್ಲಿ ಅವನು ಅನೇಕ ಬಗೆಯ ಹೂವಿನ ಗಿಡಗಳನ್ನು ಲತಾ ಗುಲ್ಮಗಳನ್ನೂ ನೆಟ್ಟಿದ್ದ. ಋತುವಿಗೆ ಅನುಗುಣವಾಗಿ ಜಾಜಿ, ಮಲ್ಲಿಗೆ, ಚಂದ್ರಮಲ್ಲಿಗೆ, ಚೆಂಡುಹೂ, ಮೊದಲಾದುವೆಲ್ಲ ಅರಳಿ ನಿಲ್ಲುತ್ತಿದ್ದುವು. ಮುಖಂಡನ ಜೊತೆಗೆ ಉಳಿದ ಮಕ್ಕಳೂ ಅವನ್ನು ನೋಡಿ ಗದ್ಗದರಾಗುತ್ತಿದ್ದರು. ಈ ತೋಟದ ಮಧ್ಯೆ ಹಳ್ಳವೊಂದನ್ನು ತೋಡಿ ಅವನು ಒಂದು ಕೊಳವನ್ನೂ ನಿರ್ಮಿಸಿದ್ದ. ಅದರ ಮೇಲೆ ಒಡೆದ ಗಾಜಿನ ಆವರಣವನ್ನೂ ಅವನು ಏರ್ಪಡಿಸಿದ್ದ. ಸಾಮಾನ್ಯವಾಗಿ ಅದರ ಮೇಲೆ ಮಣ್ಣನ್ನು ಲೇಪಿಸಿರುತ್ತಿದ್ದ. ಆದರೆ ವಿಶಿಷ್ಟ ವ್ಯಕ್ತಿಗಳು ಯಾರಾದರೂ ಅದನ್ನು ನೋಡಲು ಬಂದರೆ, ಮಣ್ಣನ್ನು ತೊಡೆದು ಹಾಕಿ ಅವರನ್ನು ಚಕಿತಗೊಳಿಸುತ್ತಿದ್ದ.

ಆದರೆ, ತಾತಂದಿರಿಗೆ ಈ ಬಗೆಯ ಕೆಲಸಗಳು ಇಷ್ಟವಾಗುತ್ತಿರಲಿಲ್ಲ. ಹೀಗಾಗಿ, ಅವರ ಕಣ್ಣು ತಪ್ಪಿಸಿಯೇ ಈ ಎಲ್ಲ ಕೆಲಸಗಳನ್ನು ಮಾಡಬೇಕಾಗುತ್ತಿತ್ತು. ಮಕ್ಕಳಿಗೆ ಇರುವುದು ಓದುವ ಹಕ್ಕು ಮಾತ್ರ ಎಂಬುದು ಆ ಹಿರಿಯರ ಭಾವನೆಯಾಗಿತ್ತು. ಪ್ರೀತಿ, ವಿಶ್ವಾಸ ಮತ್ತು ಆಟಗಳಿಂದ ಅವರ ಜೀವನ ಹಾಳಾಗುತ್ತದೆ, ಶಾಲೆಗೆ ಹೋಗುವ ಮುನ್ನ ಬೆಳಗಿನ ಹೊತ್ತು ಗಟ್ಟಿಯಾಗಿ ಅರಚುತ್ತ ಓದುತ್ತಿರಬೇಕು, ಸಂಜೆ ಶಾಲೆಯಿಂದ ಹಿಂದಿರುಗಿದ ಮೇಲೆ ರಾತ್ರಿ ಊಟ ಮಾಡುವವರೆಗೆ ಚಂಡೀ ಮಂಟಪದಲ್ಲಿ ದೀಪದ ಸುತ್ತಲೂ ಕುಳಿತುಕೊಂಡು ಪಾಠವನ್ನು ಅಭ್ಯಾಸ ಮಾಡಬೇಕು, ಇದೇ ಗುರುಗಳ ಪ್ರೀತಿಯನ್ನು ಗಳಿಸುವ ರಹಸ್ಯ ಎಂದು ಅವರು ನಂಬಿದ್ದರು. ಈ ನಿಯಮವನ್ನು ಉಲ್ಲಂಘಿಸಿದವರಿಗೆ, ಅವರ ವಯಸ್ಸಿಗೆ ಅನುಗುಣವಾಗಿ ಶಿಕ್ಷೆ ವಿಧಿಸಲಾಗುತ್ತಿತ್ತು. ಯಾವಾಗ, ಯಾರು ಘಂಟೆಗಳವರೆಗೆ ಒಂಟಿಕಾಲದಲ್ಲಿ ನಿಂತು ಕಣ್ಣೀರು ಸುರಿಸಬೇಕಾಗುತ್ತದೆಂಬುದು ಯಾರಿಗೂ ಗೊತ್ತಿರುತ್ತಿರಲಿಲ್ಲ. ಈ ಶಿಸ್ತಿನ ನಡುವೆ ಆಟಪಾಟಗಳಿಗೆ ಅವಕಾಶ ಮಾಡಿಕೊಳ್ಳುವುದು ಅವರಿಗೆ ತುಂಬ ಕಷ್ಟವಾಗಿತ್ತು. ಆದರೆ, ಕಣ್ಣಿಗೆ ಮಣ್ಣೆರಚುವ ಕಲೆಯಲ್ಲಿ ಶರತ್ ನಿಷ್ಣಾತನಾಗಿದ್ದ.

ಶಿಷ್ಯವೃತ್ತಿ[1] ಪರೀಕ್ಷೆಯಲ್ಲಿ ಉತ್ತೀರ್ಣನಾದ ಬಳಿಕ ಅವನು ಇಂಗ್ಲಿಷ್ ಶಾಲೆಗೆ ಸೇರಿದ. ಆಗಲೂ ಅವನ ಪ್ರತಿಭೆ ಕೊಂಚವೂ ಕಡಿಮೆಯಾಗಲಿಲ್ಲ. ಶಾಸ್ತ್ರಗಳಲ್ಲಿ ಸಮುದ್ರಯಾನ ನಿಷಿದ್ಧವಾಗಿದ್ದಂತೆಯೇ ಗಾಳಿಪಟ ಹಾರಿಸುವುದೂ ಗಂಗೂಲಿಗಳ ಕುಟುಂಬದಲ್ಲಿ ವರ್ಜಿತವಾಗಿತ್ತು. ಆದರೆ ಶರತ್ ಇದ್ದನಲ್ಲ! ಅವನಿಗೆ ಗಾಳಿಪಟ

---

1. 1887ನೆಯ ಇಸವಿ. ಆಗ ಶಿಷ್ಯವೃತ್ತಿ ಶಾಲೆಗಳಿರುತ್ತಿದ್ದುವು. ಅವುಗಳಲ್ಲಿ ಆರನೆಯ ತರಗತಿಯೇ ಕೊನೆಯ ಹಂತವಾಗಿರುತ್ತಿತ್ತು. ಅಂದು ಶಿಷ್ಯವೃತ್ತಿ (ಅಥವಾ ವಿದ್ಯಾರ್ಥಿವೇತನ) ಎಂಬುದಕ್ಕೆ ಇಂದಿನ ಅರ್ಥ ಇರಲಿಲ್ಲ.

ಹಾರಿಸುವುದು, ಬುಗುರಿ ಆಡಿಸುವುದು, ಗೋಲಿ ಆಟ ಆಡುವುದು ಹಾಗೂ ಚಿನ್ನಿ-ದಾಂಡು ಆಟ - ಇವೇ ಮೊದಲಾದ ನಿಷಿದ್ಧ ಆಟಗಳು ತುಂಬ ಪ್ರಿಯವಾಗಿದ್ದುವು. ನೀಲ ಆಕಾಶದಲ್ಲಿ ನರ್ತಿಸುತ್ತಿರುವ ಅವನ ಗಾಳಿಪಟವನ್ನು ಕಂಡು ತಂಡದ ಇತರ ಸದಸ್ಯರ ಹೃದಯಗಳು ಕುಣಿದಾಡುತ್ತಿದ್ದುವು. ಗಾಜಿನ ಸರಿಯ ಲೇಪವನ್ನು ಹೊಂದಿರುತ್ತಿದ್ದ ಅವನ ಗಾಳಿಪಟದ ದಾರ ವಿಶ್ವವಿಜಯಿಯಾಗಿರುತ್ತಿತ್ತು. ಅವನು ಎಂಥ ಕೌಶಲವನ್ನು ಮೆರೆಯುತ್ತಿದ್ದನೆಂದರೆ ಎದುರಾಳಿಯ ಗಾಳಿಪಟ ಕತ್ತರಿಸಿ ಹೋಗಿ ಭೂಮಿಗೆ ಬಂದು ಬೀಳುತ್ತಿತ್ತು. ಗಾಳಿಯಲ್ಲಿ ಬುಗುರಿಯನ್ನು ಆಡಿಸಿ ಅದನ್ನು ಸರಕ್ಕನೆ ಅಂಗೈ ಮೇಲೆ ತೆಗೆದುಕೊಳ್ಳುತ್ತಿದ್ದುದನ್ನು ನೋಡಿ ಅವನ ಜೊತೆಗಾರರು ಮುಗ್ಧರಾಗುತ್ತಿದ್ದರು.

ತೋಟದಿಂದ ಹಣ್ಣುಗಳನ್ನು ಕದ್ದುತರುವ ಕಲೆಯಲ್ಲಿಯೂ ಅವನ ಕೌಶಲ ಕಡಿಮೆಯೇನೂ ಆಗಿರಲಿಲ್ಲ. ತೋಟದ ಒಡೆಯರಿಗೆ ಅನುಮಾನ ಉಂಟಾಗುತ್ತಿತ್ತು. ಮರದಲ್ಲಿ ಬಿಟ್ಟಿರುವ ಸೀಬೆ ಹಣ್ಣುಗಳು ಎಷ್ಟು ಎಂಬುದನ್ನೂ ಅವರು ಎಣಿಸಿಕೊಂಡಿರುತ್ತಿದ್ದರು. ಆದರೆ, ಅವರು ಚಾಪೆಯಡಿ ತೂರಿದರೆ, ಶರತ್ ರಂಗೋಲಿಯಡಿ ಸರಿಯುತ್ತಿದ್ದ. ಅವನ ತೀಕ್ಷ್ಣ ಬುದ್ಧಿಯ ಎದುರು ತೋಟದ ಒಡೆಯರ ಉಪಾಯಗಳೆಲ್ಲ ವ್ಯರ್ಥವಾಗುತ್ತಿದ್ದುವು. ಅಪ್ಪಿ-ತಪ್ಪಿ ಸಿಕ್ಕಿಬಿದ್ದರೆ ವೀರರಂತೆ ಶಿಕ್ಷೆಯನ್ನೂ ಸ್ವೀಕರಿಸುತ್ತಿದ್ದ. ಕಥಾಶಿಲ್ಪಿ ಶರತ್‌ಚಂದ್ರರ ದೇವದಾಸ, ಶ್ರೀಕಾಂತ, ದುರ್ದಾಂತರಾಮ ಹಾಗೂ ಸವ್ಯಸಾಚಿ ಮೊದಲಾದ ಪ್ರಸಿದ್ಧ ಪಾತ್ರಗಳೆಲ್ಲ ಈ ಕಲೆಯಲ್ಲಿ ಪರಿಣತರೇ. ದುರ್ದಾಂತ ರಾಮನಿಗೆ ಇದ್ದಂತೆ, ನರಾಯಣಿಯಂಥ ಅತ್ತಿಗೆಯೊಬ್ಬಳು ಅವನಿಗೂ ಇದ್ದಳೋ ಇಲ್ಲವೋ ತಿಳಿಯದು. ಆದರೆ ಕಳ್ಳತನದ ದೂರು ಬಂದಾಗ ಅವನ ತಾಯಿ ಆ ಕಪ್ಪುಮುಸುಡಿಯವನಿಗೆ ಒಂಟಿ ಕಾಲಿನಲ್ಲಿ ನಿಂತಿರುವ ಶಿಕ್ಷೆ ವಿಧಿಸಿರಬಹುದು ಹಾಗೂ ಅದಕ್ಕೆ ವಿರೋಧವನ್ನು ತೋರುತ್ತಿದ್ದರೂ ಅವನು ಅದನ್ನು ಅಂಗೀಕರಿಸಿರಬಹುದು ಎಂಬುದರಲ್ಲಿ ಅನುಮಾನವಿಲ್ಲ.

ಅವನು ಮೋಜುಗಾರನಾಗಿದ್ದ. ಕ್ರಾಂತಿಕಾರಿ ಎಂದೂ ಆತನನ್ನು ಕರೆಯಬಹುದು. ಆದರೆ ಯಾವ ದೃಷ್ಟಿಯಿಂದಲೂ ಅವನು ದುರಾಚಾರಿಯಾಗಿರಲಿಲ್ಲ. ಆ ಕಾಲದ ಅಳತೆಗೋಲಿನ ದೃಷ್ಟಿಯಿಂದ ಅವನಿಗೆ ಈ ಬಿರುದು ದೊರೆತಿರಬಹುದಾದರೂ ಅದು ಸರಿಯಲ್ಲ. ತಂದೆಯಂತೆಯೇ ಅವನಲ್ಲಿಯೂ ಸಾಕಷ್ಟು ಪ್ರಮಾಣದಲ್ಲಿ ಸೌಂದರ್ಯಪ್ರಜ್ಞೆ ಮನೆ ಮಾಡಿಕೊಂಡಿತ್ತು. ತನ್ನ ಓದಿನ ಕೋಣೆಯನ್ನು ತುಂಬ ಚೆನ್ನಾಗಿ ಅಲಂಕರಿಸಿರುತ್ತಿದ್ದ. ಕುರ್ಚಿ ಒಂದು ಸುಂದರವಾದ ಮುಕ್ಕಾಲುಮಣೆ, ಒಂದು ಮುಚ್ಚಿದ ಡೆಸ್ಕ್, ಅದರಲ್ಲಿ ಪುಸ್ತಕಗಳು, ಎಕ್ಸರ್‌ಸೈಜ್ ಪುಸ್ತಕಗಳು, ಲೇಖನಿ ಮತ್ತು ಮಸಿ ಕುಡಿಕೆ - ಇವನ್ನೆಲ್ಲ ಚೆನ್ನಾಗಿ ಜೋಡಿಸಿರುತ್ತಿದ್ದ. ಅವನ ಪುಸ್ತಕಗಳು ಯಾವಾಗಲೂ ಹೊಚ್ಚ ಹೊಸವೆಂಬಂತೆ ಇರುತ್ತಿದ್ದುವು. ಅಭ್ಯಾಸ ಪುಸ್ತಕಗಳನ್ನು ಅವನೇ ಎಷ್ಟು ಕ್ರಮಬದ್ಧವಾಗಿ ಹಾಗೂ ಕಲಾತ್ಮಕವಾಗಿ ಬರೆದಿರುತ್ತಿದ್ದನೆಂದರೆ ಅವು ಕಣ್ಣಿಗೊತ್ತಿಕೊಳ್ಳುವಂತೆ ಇರುತ್ತಿದ್ದವು.

ಸ್ವಭಾವದಿಂದಲೇ ಅವನು ಅಪರಿಗ್ರಹಿಯಾಗಿದ್ದ. ದಿನವಿಡೀ ತಾನು ಗೆದ್ದ ಗೋಲಿ ಹಾಗೂ ಬುಗುರಿಗಳನ್ನು ಸಂಜೆ ಸಣ್ಣ ಮಕ್ಕಳಿಗೆ ಹಂಚಿಕೊಟ್ಟು ಬಿಡುತ್ತಿದ್ದ. ಹೀಗೆ

ಕೊಡುವುದರಲ್ಲಿ ಅವನಿಗೆ ಆನಂದ ಉಂಟಾಗುವಂತೆ ತೋರುತ್ತಿತ್ತು. ಇದು ತಾನು ಕೊಡುತ್ತಿದ್ದೇನೆಂಬ ಅಭಿಮಾನದ ಆನಂದವಾಗಿರದೆ ಹೊರೆಯನ್ನು ಕಳಚಿಕೊಂಡ ಆನಂದವಾಗಿರುತ್ತಿತ್ತು. ನಿದ್ದೆ ಮತ್ತು ಆಹಾರಗಳ ಮೇಲೂ ಅವನಿಗೆ ಹಿಡಿತವಿತ್ತು. ಬಾಲ್ಯದಿಂದಲೂ ಅವನು ಅಲ್ಪಾಹಾರಿಯಾಗಿದ್ದ. ವಯಸ್ಸಿಗೆ ಬಂದ ಮೇಲೆ ಕಥಾಶಿಲ್ಪಿ ಶರತ್‌ಚಂದ್ರರ 'ಹಿರಿಯ ಸೊಸೆ ('ಬಡೀ ಬಹೂ') ಎಲ್ಲಕ್ಕಿಂತಲೂ ಹೆಚ್ಚಾಗಿ ಈ ಕಾರಣಕ್ಕಾಗಿಯೇ ತುಂಬ ಚಿಂತಿತಳಾಗಿರುತ್ತಿದ್ದಳು.

ಇಂಗ್ಲಿಷ್ ಶಾಲೆಯಲ್ಲಿ ಓದುತ್ತಿದ್ದಾಗ ಅವನಿಗೆ ತನ್ನ ಶರೀರದ ಬಗ್ಗೆ ವಿಶೇಷ ಗಮನವಿರುತ್ತಿತ್ತು. ಅಜ್ಜನ ಮನೆಯ ಉತ್ತರ ದಿಕ್ಕಿನಲ್ಲಿ ಗಂಗಾ ನದಿಯ ಮೇಲುಭಾಗದಲ್ಲಿ ಒಂದು ಬಹು ದೊಡ್ಡ ಹಾಗೂ ಕೆಟ್ಟ ಹೆಸರನ್ನು ಪಡೆದಿದ್ದ ಮನೆ ಇತ್ತು. ಹಿಂದೊಮ್ಮೆ ಬಹು ದೊಡ್ಡ ಕುಟುಂಬವೊಂದು ಅಲ್ಲಿ ವಾಸವಾಗಿತ್ತು. ಆದರೆ, ದುರದೃಷ್ಟವಶಾತ್ ಒಂದಾದ ಮೇಲೆ ಒಂದರಂತೆ ಹಲವು ಸಾವುಗಳು ಉಂಟಾದುದರಿಂದ ಅವರು ಆ ಮನೆಯನ್ನು ಬಿಟ್ಟು ಹೊರಟುಹೋಗಿದ್ದರು. ಅನಂತರದಲ್ಲಿ ಅದು ಬಹು ದಿನಗಳವರೆಗೆ ಭೂತಗೃಹವಾಗಿ ಉಳಿದಿತ್ತು. ಪಾಲಕರ ಕಣ್ಣು ತಪ್ಪಿಸಿ, ಶರತ್ ಇದೇ ಮನೆಯ ಅಂಗಳದಲ್ಲಿ ಕುಸ್ತಿಯ ಕಣವನ್ನು ಏರ್ಪಡಿಸಿದ. ಗುಂಡುಗಳನ್ನು ಎತ್ತಿ ಎಸೆಯುವ ಅಭ್ಯಾಸಕ್ಕಾಗಿ ಗಂಗೆಯ ಗರ್ಭದಿಂದ ಗುಂಡು ಆಕಾರದ ಕಲ್ಲುಗಳನ್ನು ಎತ್ತಿ ತಂದರು. ಆದರೆ 'ಪ್ಯಾರಲಲ್ ಬಾರ್'ನ ವ್ಯವಸ್ಥೆ ಮಾಡಲು ಸಾಧ್ಯವಾಗಲಿಲ್ಲ. ಹಣದ ಅಭಾವ ಇತ್ತಲ್ಲ. ಬಹಳಷ್ಟು ಯೋಚಿಸಿ ಶರತ್ ಆದೇಶ ನೀಡಿದ: "ಬೊಂಬಿನ 'ಬಾರ'ನ್ನು ಸಿದ್ಧಪಡಿಸಿ."

ಸರಿ, ಸಂಜೆಯ ನಸುಕಿನಲ್ಲಿ ನಾಲ್ಕೈದು ಮಂದಿ ಹುಡುಗರು ಬಿದುರಿನ ಗಳುಗಳನ್ನು ಕಡಿದುಕೊಂಡು ಬರಲು ಹೊರಟರು. ಪೊದೆಗಳು ಮತ್ತು ಮೆಳೆಗಳಲ್ಲಿ ಉಜ್ಜ-ತರಚಿ ಆದದ್ದರಿಂದ ಕೈಕಾಲುಗಳೆಲ್ಲ ರಕ್ತಸಿಕ್ತವಾಗಿ ಬಿಟ್ಟುವು. ಆದರೇನು? ಅಂದಿನ ರಾತ್ರಿಯೇ 'ಪ್ಯಾರಲಲ್ ಬಾರ್' ಸಿದ್ಧವಾಗಿ ಬಿಡಬೇಕೆಂದು ಮುಖಂಡ ಆಜ್ಞಾಪಿಸಿರಲಿಲ್ಲವೆ! ಅಂತೆಯೇ ಅದು ಸಿದ್ಧವಾಯಿತು. ಮಾರನೇಯ ದಿವಸ ಮಧ್ಯಾಹ್ನದವರೆಗೆ ಹುಡುಗರು ಆನಂದದಿಂದ ಅದರಲ್ಲಿ ತೂಗಾಡುತ್ತಿದ್ದರು. ಆದರೆ, ಗದ್ದಲವೆಬ್ಬಿಸುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿತ್ತು. ಮನೆಯವರಿಗೆ ಗೊತ್ತಾಗದಿರಲಿ ಎಂದು, ಮನೆಗೆ ಹಿಂದಿರುಗುವಾಗ ಅವರೆಲ್ಲ ಪ್ರಾಣರಕ್ಷೆಯ ಮಂತ್ರವನ್ನು ಜಪಿಸುತ್ತ ಬರುತ್ತಿದ್ದರು. ಆದರೆ ಒಂದು ದಿವಸ ಏನಾಯಿತೆಂದರೆ ಬಿದ್ದುಬಿಟ್ಟದ್ದರಿಂದ ಒಬ್ಬ ಹುಡುಗನಿಗೆ ಪೆಟ್ಟು ಬಿತ್ತು. ಇದಾದ ಮೇಲೆ ಏನಾಯಿತು ಎಂಬುದನ್ನು ಊಹಿಸಿಕೊಳ್ಳುವುದು ಕಷ್ಟ-ಸಾಧ್ಯವೇನೂ ಅಲ್ಲ.

ಈಜುವುದರಿಂದ ಶರೀರ ಗಟ್ಟಿಮುಟ್ಟಾಗುತ್ತದೆ ಎಂಬುದು ಅವನ ನಂಬಿಕೆಯಾಗಿತ್ತು. ಗಂಗಾನದಿ ಮನೆಯ ಹತ್ತಿರದಲ್ಲಿಯೇ ಇತ್ತು. ಆದರೆ ಆಗಾಗ್ಗೆ ಮುನಿಸಿಕೊಂಡು ಅದು ದೂರ ಹೋಗಿಬಿಡುತ್ತಿತ್ತು. ಆ ವರ್ಷ ಹೀಗೆಯೇ ಆಯಿತು. ನಡುನಡುವೆ ಚಿಕ್ಕಪುಟ್ಟ ಗುಂಡಿಗಳಾದುವು ಹಾಗೂ ಅವುಗಳಲ್ಲಿ ಕೆಂಪು ನೀರು ತುಂಬಿಕೊಂಡಿತು. ಆ ಕೆಂಪು ನೀರಿನಲ್ಲಿ ಸ್ನಾನ ಮಾಡುವ ಬಯಕೆಯನ್ನು ಶರತ್ ಹೇಗೆತಾನೆ ಹತ್ತಿಕ್ಕಿಕೊಂಡಾನು! ಮಣಿ ಮಾವನನ್ನು ಜೊತೆಗೆ ಕರೆದುಕೊಂಡು

ಒಂದು ದಿನ ಅವನು ಅದಕ್ಕೆ ಜಿಗಿದ. ಆದರೆ ಅವನ ದೌರ್ಭಾಗ್ಯವೇ ಎನ್ನಬೇಕು, ಅಂದು ಹೊತ್ತಲ್ಲದ ಹೊತ್ತಿನಲ್ಲಿ ಅಜ್ಜ ಅಘೋರನಾಥರು ಮನೆಗೆ ಹಿಂದಿರುಗಿದರು. ಮಣಿಕಾಣದೆ ಇದ್ದಾಗ ಅವರು ಕೇಳಿದರು - "ಮಣಿ ಎಲ್ಲಿ ?"

ಯಾರೋ ಹೇಳಿದರು: "ಮಣಿ ಮತ್ತು ಶರತ್ ಹಳ್ಳದಲ್ಲಿ ಸ್ನಾನ ಮಾಡಲು ಹೋಗಿದ್ದಾರೆ."

ಆ ಕ್ಷಣ ಅಘೋರನಾಥರು ಗರ್ಜಿಸಿದ್ದನ್ನು ಕೇಳಿ ಎಲ್ಲರೂ ಹೆದರಿದರು. ಅವರ ಈ ಭಯ ಅಕಾರಣವಾದುದೇನೂ ಆಗಿರಲಿಲ್ಲ. ಹುಡುಗರಿಬ್ಬರೂ ಸ್ನಾನ ಮಾಡಿ ಸಂತೋಷವಾಗಿ ಮನೆಗೆ ಹಿಂದಿರುಗಿದ ಕೂಡಲೇ ಚಿಕ್ಕ ತಾತ ಸಿಂಹದಂತೆ ಗರ್ಜಿಸುತ್ತ ಮಣಿಯ ಮೇಲೆ ಎರಗಿದರು. ಒಬ್ಬರಾದ ಮೇಲೆ ಒಬ್ಬರಂತೆ ಮನೆಯ ಹೆಂಗಸರೆಲ್ಲ ಅವನನ್ನು ರಕ್ಷಿಸಲು ಯತ್ನಿಸಿದರು. ಆದರೂ ಅವನ ಸ್ಥಿತಿ ಎಷ್ಟು ಚಿಂತಾಜನಕ ವಾಗಿದ್ದಿತೆಂದರೆ ಸುಧಾರಿಸಿಕೊಳ್ಳಲು ಅವನಿಗೆ ಐದಾರು ದಿನಗಳೇ ಹಿಡಿದುವು. ಆದರೆ ಆ ಕ್ಷಣದ ಬಳಿಕ ಶರತ್ ಅಲ್ಲೆಲ್ಲೂ ಕಾಣಲೇ ಇಲ್ಲ. ಮೂರನೆಯ ದಿವಸ ತಾತ ಕುದುರೆಯನ್ನೇರಿ ತಮ್ಮ ಕೆಲಸದ ಮೇಲೆ ಹೊರಟ ಬಳಿಕವೇ ಅವನು ಕಾಣಿಸಿಕೊಂಡ. ಮಾವಂದಿರು ಆಶ್ಚರ್ಯದಿಂದ ಕೇಳಿದರು: "ನೀನೆಲ್ಲಿ ಹೋಗಿದ್ದಯೋ ?"

ಶರತ್ ಉತ್ತರಿಸಿದ: "ನಾನು ಉಗ್ರಾಣದಲ್ಲಿದ್ದೆ."

"ಏನು ತಿನ್ನುತ್ತಿದ್ದೆ ?"

"ನೀವೆಲ್ಲ ಏನು ತಿನ್ನುತ್ತಿದ್ದಿರೋ ಅದನ್ನೇ."

"ಯಾರು ಕೊಡುತ್ತಿದ್ದರು ?"

"ಚಿಕ್ಕ ಅಜ್ಜಿ."

ಚಿಕ್ಕ ತಾತ ಮಣಿಯನ್ನು ಹೊಡೆಯುತ್ತಿದ್ದಾಗ ಚಿಕ್ಕ ಅಜ್ಜಿಯ ಸಲಹೆಯಂತೆ ಶರತ್ ಮನೆಯಲ್ಲಿ ಹೋಗಿ ಅಡಗಿಕೊಂಡಿದ್ದ.

ಅವನಿಗೆ ಆಟಪಾಟಗಳಲ್ಲಿ ಎಷ್ಟು ಆಸಕ್ತಿ ಇತ್ತೋ ಓದಿನಲ್ಲಿಯೂ ಅಷ್ಟೇ ಆಸಕ್ತಿ ಇತ್ತು. ಅವನು ಶಾಲೆಯ ಪುಸ್ತಕಗಳನ್ನು ಮಾತ್ರವೇ ಓದುತ್ತಿರಲಿಲ್ಲ. ತಂದೆಯ ಸಂಗ್ರಹಾಲಯದಲ್ಲಿ ಯಾವ ಪುಸ್ತಕ ಕೈಗೆ ಸಿಕ್ಕಿದರೂ ಎಲ್ಲರ ಕಣ್ಣು ತಪ್ಪಿಸಿ ಅದನ್ನು ಓದಿ ಹಾಕಿಬಿಡುತ್ತಿದ್ದ. ಒಂದು ದಿವಸ ಅಲ್ಲಿ ಅವನಿಗೆ ಇಡೀ ಜಗತ್ತಿನ ವಿಷಯಗಳ ವಿವರಣೆಯನ್ನೊಳಗೊಂಡಿದ್ದಂಥ ಒಂದು ಪುಸ್ತಕ ಅವನ ಕೈಗೆ ಸಿಕ್ಕಿತು. ಅದಕ್ಕೆ ಇದ್ದ ಹೆಸರು 'ಸಂಸಾರ ಕೋಶ' (ವಿಶ್ವಕೋಶ). ತೊಂದರೆ ಎದುರಾದಾಗ ಗುರುಗಳ ದಂಡನೆಯಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂಬುದಕ್ಕೆ ಸಂಬಂಧಿಸಿದ ಒಂದು ಮಂತ್ರವೂ ಅದರಲ್ಲಿತ್ತು. ತನ್ನ ಎಲ್ಲ ಜೊತೆಗಾರರಿಗೂ ಅವನು ಈ ಮಂತ್ರವನ್ನು ಕಲಿಸಿಕೊಟ್ಟ. ಆ ಮಂತ್ರ ಇದಾಗಿತ್ತು: "ಓಮ್, ಹ್ಯಂ, ಡ್ಯೂಂ, ದ್ಯೂಂ, ರಕ್ಷ ರಕ್ಷ ಸ್ವಾಹಾ."

ಗುರುಗಳ ದಂಡನೆಯಿಂದ ತಪ್ಪಿಸಿಕೊಳ್ಳುವುದಕ್ಕೆ ಸಂಬಂಧಿಸಿದ ಮಂತ್ರ ಮಾತ್ರವಲ್ಲ, ಹಾವುಗಳನ್ನು ವಶಪಡಿಸಿಕೊಳ್ಳುವ ಮಂತ್ರವೂ ಅವನಿಗೆ ಅದರಲ್ಲಿ ಸಿಕ್ಕಿತ್ತು. ಅದನ್ನು ಪರೀಕ್ಷಿಸಬೇಕೆಂಬ ಆತುರ ಶರತ್‌ನಲ್ಲಿ ತುಂಬಿಕೊಂಡಿತ್ತು. ಕೆಲವು ದಿವಸಗಳ ಹಿಂದೆ ಹಾವೊಂದು ಅವನನ್ನು ಕಚ್ಚಿಯೂ ಇತ್ತು. ತುಂಬ ಕಷ್ಟದಿಂದ

ಆಗ ಅವನ ಜೀವ ಉಳಿದುಕೊಂಡಿತ್ತು. ಆದ್ದರಿಂದ ಜನಮೇಜಯನಂತೆ ನಾಗಯಜ್ಞವನ್ನು ಆಚರಿಸಲು ಅವನು ತುಂಬ ಉತ್ಸುಕನಾಗಿದ್ದ. ಒಂದು ಮೊಳದುದ್ದ ಇರುವ ಬಿಲ್ವ ವೃಕ್ಷದ ಬೇರನ್ನು ಯಾವುದೇ ವಿಷ ಸರ್ಪದ ಹೆಡೆಯ ಬಳಿ ಇರಿಸಿದರೆ ಸಾಕು ಒಂದೇ ಒಂದು ಕ್ಷಣದಲ್ಲಿ ಆ ಸರ್ಪ ತಲೆಬಾಗಿಸಿ ನಿರ್ಜೀವವಾಗಿ ಬಿಡುತ್ತದೆ ಎಂದು ಆ ವಿಶ್ವಕೋಶದಲ್ಲಿ ಹೇಳಲಾಗಿತ್ತು.

ತುಂಬ ಉತ್ಸಾಹದಿಂದ ಅವನು ಬಿಲ್ವವೃಕ್ಷದ ಬೇರನ್ನು ಹುಡುಕಿ ತೆಗೆದ. ಹಾವುಗಳಿಗೆ ಕೊರತೆ ಏನೂ ಇರಲಿಲ್ಲ. ಆದರೆ ಅಂದು ಅವುಗಳಿಗೆ ಈ ಮಂತ್ರದ ಸುದ್ದಿ ತಿಳಿದುಬಿಟ್ಟಿತ್ತೋ ಏನೋ. ಆದ್ದರಿಂದ ಬಹಳವಾಗಿ ಹುಡುಕಿದರೂ ಯಾವೊಂದು ಹಾವು ಸಿಕ್ಕಲಿಲ್ಲ. ಕೊನೆಗೆ ಒಂದು ಸೀಬೆಯ ಮರದ ಕೆಳಗೆ ಕಸಕಡ್ಡಿಯ ರಾಶಿಯ ಕೆಳಗೆ ಕೃಷ್ಣ ಸರ್ಪದ ಒಂದು ಮರಿ ಇದ್ದುದು ಪತ್ತೆಯಾಯಿತು. ಸಂತೋಷದಿಂದ ತುಂಬಿ ತುಳುಕುತ್ತ ಶರತ್ ತನ್ನ ತಂಡದೊಡನೆ ಅಲ್ಲಿಗೆ ಹೋಗಿ ತಲುಪಿದ. ಅದನ್ನು ಹೊರಗೆ ಹೊರಡಿಸುವ ಸಲುವಾಗಿ ರೇಗಿಸತೊಡಗಿದ. ಬಾಲಕರ ಈ ಅತ್ಯಾಚಾರದಿಂದ ಸಿಟ್ಟಿಗೆದ್ದ ಆ ಹಾವಿನ ಮರಿ ತನ್ನ ಹೆಡೆಯನ್ನೆತ್ತಿತ್ತು. ಶರತ್ ಈ ಕ್ಷಣಕ್ಕಾಗಿ ಕಾದು ನಿಂತಿದ್ದ. ಆ ಕ್ಷಣವೇ ಮುಂದೆ ನುಗ್ಗಿ ಬಿಲ್ವದ ಬೇರನ್ನು ಅದರ ಮುಂದೆ ಇರಿಸಿದ. ಕೂಡಲೇ ಆ ಹಾವು ತಲೆತಗ್ಗಿಸಿ ಎಲ್ಲರ ಕ್ಷಮೆಯನ್ನು ಕೋರುತ್ತದೆಂಬುದು ಅವರ ನಂಬಿಕೆಯಾಗಿತ್ತು. ಆದರೆ ಅದು ತೇಜೋವಿಹೀನ ವಾಗುವುದಿರಲಿ, ಮತ್ತೆ ಮತ್ತೆ ಆ ಬೇರಿಗೆ ಅಪ್ಪಳಿಸತೊಡಗಿತು. ಇದನ್ನು ಕಂಡು ಹುಡುಗರೆಲ್ಲ ಭಯಗೊಂಡರು. ಆಗ ಮಣಿಮಾವ ಎಲ್ಲಿಂದಲೋ ಒಂದು ದೊಣ್ಣೆಯನ್ನೆತ್ತಿಕೊಂಡು ಬಂದು ಸನಾತನ ರೀತಿಯಲ್ಲಿಯೇ ಆ ಹಾವಿನ ಮರಿಯನ್ನು ಸಂಹರಿಸಿದ. ಅಲ್ಲಿಯವರೆಗೆ ಶರತ್‌ಗೆ 'ವಿಲಾಸಿ'ಯ 'ಮೃತ್ಯುಂಜಯ'ನ ಭೇಟಿಯಾಗಿರಲಿಲ್ಲವೆಂದು ತೋರುತ್ತದೆ. ಬೇರನ್ನು ತೋರಿಸುವುದಕ್ಕೆ ಮೊದಲು ಇನ್ನೊಂದು ಕೆಲಸವನ್ನೂ ಮಾಡಿರಬೇಕಾಗುತ್ತದೆ. "ಬೇರನ್ನೂ ತೋರಿಸಿ ಯಾವ ಹಾವನ್ನು ಓಡಿಸಬೇಕೋ ಅದರ ಮೂತಿಗೆ ನಾವು ಕಾದ ಕಬ್ಬಿಣದ ಸರಳಿನಿಂದ ನಾಲ್ಕಾರು ಬಾರಿ ಬರೆಕೊಟ್ಟರೆ, ಆಮೇಲೆ ಅದಕ್ಕೆ ಬೇರನ್ನಾದರೂ ತೋರಿಸಿ ಸಾಧಾರಣವಾದ ಸರಳನ್ನಾದರೂ ತೋರಿಸಿ, ಓಡಿಹೋಗಿ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುವುದಷ್ಟೇ ಅದಕ್ಕೆ ಹೊಳೆಯುತ್ತದೆ." 'ಶ್ರೀಕಾಂತ' ಮತ್ತು 'ವಿಲಾಸಿ' ಮೊದಲಾದ ತಮ್ಮ ಕೃತಿಗಳಲ್ಲಿ ಕಥಾಶಿಲ್ಪಿ ಶರತ್‌ಚಂದ್ರರು ಈ ವಿದ್ಯೆಯ ಒಳ್ಳೆಯ ವಿವರಣೆ ನೀಡಿದ್ದಾರೆ.

ಈ ತುಂಟಾಟಗಳ ಮಧ್ಯೆ ಆಗಾಗ್ಗೆ ಈ ಮುಖಂಡ ಗೈರುಹಾಜರಾಗುವುದೂ ಗೋಚರಿಸುತ್ತಿತ್ತು. "ಶರತ್ ಎಲ್ಲಿ ಹೋದ ?" ಎಂಬ ಪ್ರಶ್ನೆ ಏಳುತ್ತಿತ್ತು.

"ಇಲ್ಲಿಯೇ ಇದ್ದನಲ್ಲ"

"ಎಲ್ಲಿದ್ದ ?"

ಅವನು ಎಲ್ಲಿಯೂ ಸಿಕ್ಕುತ್ತಿರಲಿಲ್ಲ. ಹುಡುಕಿ ಹುಡುಕಿ ಎಲ್ಲರೂ ಸುಸ್ತಾಗಿ ಕುಳಿತಾಗ ಎಲ್ಲಿಂದಲೋ ಸ್ವತಃ ಅವನೇ ಬಂದು ಹಾಜರಾಗುತ್ತಿದ್ದ. ಮಕ್ಕಳು ಅವನನ್ನು ಮುತ್ತಿಕೊಳ್ಳುತ್ತಿದ್ದರು; ಪ್ರಶ್ನಿಸುತ್ತಿದ್ದರು:

"ಎಲ್ಲಿ ಹೊರಟು ಹೋಗಿದ್ದ."

"ತಪೋವನಕ್ಕೆ."

"ಆ ತಪೋವನ ಎಲ್ಲಿದೆ ? ನಮಗೂ ತೋರಿಸು."

ಆ ತಪೋವನ ಎಲ್ಲಿದೆ ಎಂಬುದನ್ನು ಅವನು ಯಾರಿಗೂ ತಿಳಿಸಲಿಲ್ಲ. ಆದರೆ ಸುರೇಂದ್ರ ಮಾವನಿಗೂ ಅವನಿಗೂ ತುಂಬ ಹೊಂದಾಣಿಕೆ ಇತ್ತು. ಬಹುಶಃ ಸುರೇಂದ್ರನೂ ಅವನ ತಾಯಿಯ ಎದೆಹಾಲನ್ನು ಕುಡಿದಿದ್ದ ಎಂಬುದೇ ಇದಕ್ಕೆ ಕಾರಣವಾಗಿದ್ದಿರಬಹುದು. ಅವನಿನ್ನೂ ತುಂಬ ಚಿಕ್ಕವನಾಗಿದ್ದಾಗಲೇ ಅವನ ತಾಯಿಗೆ ಮತ್ತೊಂದು ಮಗುವಾಗುವ ಸಂಭವ ತಲೆದೋರಿತ್ತು. ಇತ್ತ ಶರತ್‌ನ ಚಿಕ್ಕ ತಮ್ಮ ಶೈಶವದಲ್ಲಿಯೇ ಕೊನೆಯುಸಿರನ್ನೆಳೆದಿದ್ದ. ಆಗ ಅವನ ತಾಯಿ ಸುರೇಂದ್ರನಿಗೆ ತನ್ನ ಎದೆಯ ಹಾಲನ್ನು ನೀಡಿ ಸಾಕಿದ್ದಳು. ಆದ್ದರಿಂದ ತುಂಬ ಒತ್ತಾಯಪಡಿಸಿದ ಮೇಲೆ ಒಂದು ದಿನ ಅವನು ತನ್ನ ಜೊತೆಯಲ್ಲಿ ಅವನನ್ನು ತಪೋವನಕ್ಕೆ ಕರೆದುಕೊಂಡು ಹೋದ. ಹೋಗುವ ಮೊದಲು ಅವನು ಸುರೇಂದ್ರನಿಗೆ ಹೀಗೆಂದು ಹೇಳಿದ: "ನಾನು ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ. ಆದರೆ ಸೂರ್ಯ, ಗಂಗಾನದಿ ಹಾಗೂ ಹಿಮಾಲಯದ ಮೇಲೆ ಆಣೆ ಇಟ್ಟು 'ಬೇರೆ ಯಾರಿಗೂ ಈ ಜಾಗವನ್ನು ತೋರಿಸುವುದಿಲ್ಲ' ಎಂದು ಹೇಳು"

ಸುರೇಂದ್ರ ಹೇಳಿದ: "ಸೂರ್ಯನ ಮೇಲೆ ಆಣೆ ಇಟ್ಟು ನಾನು ಹೇಳುತ್ತೇನೆ; ಇನ್ನು ಯಾರಿಗೂ ನಾನು ಈ ಜಾಗವನ್ನು ತೋರಿಸುವುದಿಲ್ಲ."

"ಗಂಗೆಯ ಮೇಲೆ ಆಣೆ ಇಟ್ಟು ಹೇಳುತ್ತೇನೆ, ಇನ್ನು ಯಾರಿಗೂ ನಾನು ಈ ಜಾಗವನ್ನು ತೋರಿಸುವುದಿಲ್ಲ."

"ಹಿಮಾಲಯದ ಮೇಲೆ ಆಣೆ ಇಟ್ಟು ಹೇಳುತ್ತೇನೆ; ಇನ್ನು ಯಾರಿಗೂ ನಾನು ಈ ಜಾಗವನ್ನು ತೋರಿಸುವುದಿಲ್ಲ."

"ಈಗ ನಡಿ."

ಘೋಷರ ಕುಟುಂಬದ ಮನೆಯ ಉತ್ತರ ದಿಕ್ಕಿನಲ್ಲಿ ಗಂಗಾನದಿಗೆ ತೀರ ಹತ್ತಿರದಲ್ಲಿಯೇ ಒಂದು ಕೋಣೆಯ ಕೆಳಗೆ, ಬೇವು ಮತ್ತು ಕವಳಿ ಗಿಡಗಳು ಆ ಜಾಗವನ್ನು ಆವರಿಸಿಕೊಂಡು ಕತ್ತಲೆ ಕವಿಯುವಂತೆ ಮಾಡಿದ್ದುವು. ನಾನಾ ಲತೆಗಳು ಆ ಜಾಗವನ್ನು ನಾಲ್ಕೂ ಕಡೆಗಳಿಂದಲೂ ಮುಚ್ಚಿಬಿಟ್ಟಿದ್ದುದರಿಂದ ಮನುಷ್ಯರು ಅಲ್ಲಿಗೆ ಪ್ರವೇಶಿಸುವುದೇ ತುಂಬ ಕಷ್ಟದ ಕೆಲಸವಾಗಿತ್ತು. ತುಂಬ ಎಚ್ಚರಿಕೆಯಿಂದ ಒಂದೆಡೆ ಲತೆಗಳನ್ನು ಬದಿಗೆ ಸರಿಸಿ ಶರತ್ ಅದರ ಒಳಗೆ ನುಗ್ಗಿದ. ಅಲ್ಲಿ ಸ್ವಚ್ಛವಾಗಿದ್ದ ಸ್ವಲ್ಪ ಜಾಗವಿತ್ತು. ಹಸಿರು ಲತೆಗಳ ನಡುವಿನಿಂದ ಸೂರ್ಯನ ಉಜ್ವಲ ಕಿರಣಗಳು ಫಳಫಳಗುಟ್ಟುತ್ತ ಒಳನುಗ್ಗುತ್ತಿದ್ದುವು. ಅವುಗಳಿಂದಾಗಿ ಸ್ನಿಗ್ಧ ಹಸಿರು ಬೆಳಕು ಹರಡಿಕೊಂಡಿತ್ತು. ನೋಡಿದೊಡನೆಯೇ ಕಣ್ಣುಗಳಿಗೆ ತಂಪೆರೆದಂತಾಯಿತು ಹಾಗೂ ಮನಸ್ಸು ಗದ್ಗದಗೊಂಡು ಯಾವುದೋ ಕನಸಿನ ಲೋಕವನ್ನು ಸೇರಿತು. ಅಲ್ಲಿ ದೊಡ್ಡದಾದ ಕಲ್ಲೊಂದನ್ನು ಇರಿಸಲಾಗಿತ್ತು. ಅದರ ಮೇಲೆ ಕುಳಿತು ಶರತ್ ಸುರೇಂದ್ರನನ್ನು ಕರೆದ: "ಬಾ !"

ಸುರೇಂದ್ರ ಹೆದರುತ್ತ ಹೆದರುತ್ತ ಹತ್ತಿರ ಹೋಗಿ ಕುಳಿತ. ಕೆಳಗೆ ತೀಕ್ಷ್ಣಧಾರೆಯ

ಗಂಗೆ ಹರಿಯುತ್ತಿತ್ತು. ಆ ದಡದ ದೂರದ ದೃಶ್ಯ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಮೆಲ್ಲಮೆಲ್ಲಗೆ ಬೀಸಿಕೊಂಡು ಬರುತ್ತಿದ್ದ ತಂಗಾಳಿಯ ಮೃದುವಾದ ಅಲೆಗಳು ಮೈಯಲ್ಲಿ ರೋಮಾಂಚನವನ್ನುಂಟು ಮಾಡುತ್ತಿದ್ದುವು. ಸುರೇಂದ್ರ ಮುಗ್ಧನಾಗಿ ಹೇಳಿದ: "ಈ ಜಾಗವೇನೋ ತುಂಬ ಸುಂದರವಾಗಿದೆ."

ಶರತ್ ಹೇಳಿದ: "ಹೌದು. ಈ ಜಾಗದಲ್ಲಿ ಬಂದು ಕೂಡುವುದು ನನಗೆ ತುಂಬ ಇಷ್ಟವಾಗುತ್ತದೆ. ಏನೇನು ನಾನು ಯೋಚಿಸುತ್ತೇನೆ ಎಂಬುದೂ ನನಗೆ ಗೊತ್ತಿಲ್ಲ. ದೊಡ್ಡ ದೊಡ್ಡ ಮಾತುಗಳೆಲ್ಲ ಇಲ್ಲಿಯೇ ಮನಸ್ಸಿನಲ್ಲಿ ಸುಳಿಯುತ್ತವೆ."

ಸುರೇಂದ್ರ ಹೇಳಿದ: "ತಪೋವನಕ್ಕೇ ಬಂದಿದ್ದೇನೆ ಎಂದು ನನಗೆ ನಿಜವಾಗಿಯೂ ಅನ್ನಿಸುತ್ತಿದೆ. ಈ ಸಲ ಅಂಕ ಗಣಿತದಲ್ಲಿ ನಿನಗೆ ಹೇಗೆ ನೂರಕ್ಕೆ ನೂರರಷ್ಟು ಅಂಕಗಳು ಬಂದುವು ಎಂಬುದು ಇಂದು ನನಗೆ ಅರಿವಾಗಿದೆ."

ಈ ಪವಿತ್ರ ಮೌನ ಏಕಾಂತದಲ್ಲಿ ಅವನು ಅದೆಷ್ಟು ಸಾರಿ ಬಂದು ಕುಳಿತಿದ್ದಿರಬಹುದೋ ಏನೋ. ದೂರದಿಂದ ಬರುವ ಮಕ್ಕಳ ತುಂಟಾಟಗಳ ಧ್ವನಿ ಗಂಗೆಯ ಕಲಕಲ ಧ್ವನಿಯೊಂದಿಗೆ ಬೆರೆತು ಒಂದು ರಹಸ್ಯಮಯ ವಾತಾವರಣವನ್ನು ನಿರ್ಮಿಸುತ್ತಿದ್ದಿರಬೇಕು. ಪ್ರಕೃತಿಯ ಸೌಂದರ್ಯ ಅವನ ಬಳಲಿದ ತನು-ಮನಗಳನ್ನು ಮೃದುವಾಗಿ ತಡವಿದ್ದಿರಬೇಕು. ಆಗ ಅವನು ಮನಸ್ಸಿನಲ್ಲಿಯೇ ಹೀಗೆ ಪ್ರತಿಜ್ಞೆ ಮಾಡಿರಬೇಕು - "ಸೂರ್ಯ, ಗಂಗೆ ಮತ್ತು ಹಿಮಾಲಯಗಳ ಆಣೆಯಾಗಿ, ನಾನು ಜೀವನವಿಡೀ ಸೌಂದರ್ಯದ ಉಪಾಸನೆಯಲ್ಲಿ ತೊಡಗಿರುತ್ತೇನೆ, ಜೀವನವಿಡೀ ಅನ್ಯಾಯಕ್ಕೆ ವಿರುದ್ಧವಾಗಿ ಹೋರಾಡುತ್ತೇನೆ, ಎಂದಿಗೂ ಕೀಳು ಕೆಲಸಕ್ಕೆ ಕೈಹಾಕುವುದಿಲ್ಲ." ಮನೆಯಲ್ಲಿ ಏಕಾಂತವಿಲ್ಲವೆಂಬುದೂ ಅವನಿಗೆ ಅನುಭವಕ್ಕೆ ಬಂದಿರಬೇಕು. ಅತ್ಯಲ್ಪ ಧ್ವನಿಯೂ ಮನಸ್ಸಿನಲ್ಲಿ ಪ್ರತಿಧ್ವನಿಯನ್ನು ಸೃಷ್ಟಿಸುತ್ತದೆ ಹಾಗೂ ಅಲ್ಲಿ ಮೂಡುತ್ತಿರುವ ಚಿತ್ರವನ್ನು ಮಸುಕು ಮಸುಕಾಗಿಸಿ ಬಿಡುತ್ತದೆ..... ಹೀಗಾಗಿಯೇ ಅವನು ಈ ತಪೋವನವನ್ನು ಹುಡುಕಿಕೊಂಡಿರಬೇಕು.

ಆದರೆ, ಅಂಕ ಗಣಿತದಲ್ಲಿ ಮಾತ್ರವೇ ಅವನು ನೂರಕ್ಕೆ ನೂರರಷ್ಟು ಅಂಕಗಳನ್ನು ಪಡೆದಿರಲಿಲ್ಲ, ಇಂಗ್ಲಿಷ್ ಶಾಲೆಯ ಮೊದಲ ವರ್ಷದಲ್ಲಿ ಅವನು ಪರೀಕ್ಷೆಯಲ್ಲಿ ಮೊದಲ ಸ್ಥಾನವನ್ನೂ ಪಡೆದಿದ್ದ. ಇದರ ಪರಿಣಾಮವಾಗಿ ಶಿಷ್ಯವೃತ್ತಿ ಪರೀಕ್ಷೆಯಲ್ಲಿ ಉತ್ತೀರ್ಣನಾದ ಮೇಲೆ, ಇಂಗ್ಲಿಷ್ ಅಭ್ಯಾಸಕ್ಕಾಗಿ ಅವನು ಕೆಳಗಿನ ತರಗತಿಗೆ ಸೇರಿಕೊಳ್ಳಬೇಕಾಗಿ ಬಂತು. ಆದ್ದರಿಂದ, ಉಳಿದ ವಿಷಯಗಳು ಅವನಿಗೆ ತುಂಬ ಸುಲಭವಾಗಿ ಪರಿಣಮಿಸಿದುವು. ಮಧ್ಯದಲ್ಲಿಯೇ ಅವನು ಒಂದು ವರ್ಷ ದಾಟಿ ಮೇಲಿನ ತರಗತಿಗೆ ಬಂದು ಸೇರಿದ. ಈ ಎಲ್ಲ ಸಂಗತಿಗಳಿಂದಾಗಿ ಒಂದೆಡೆ ಗೆಳೆಯರ ನಡುವೆ ಅವನ ಹಿರಿಮೆ ಹೆಚ್ಚಿತು, ಇತ್ತ ಗುರುಗಳಿಗೂ ಅವನ ವಿಷಯದಲ್ಲಿ ನಂಬಿಕೆ ಮೂಡಿತು.

ಶಾಲೆಯಲ್ಲಿ ಒಂದು ಚಿಕ್ಕ ಗ್ರಂಥ ಭಂಡಾರವೂ ಇತ್ತು. ಅಲ್ಲಿಂದಲೇ ಪುಸ್ತಕಗಳನ್ನು ಎರವಲು ಪಡೆದು ಅವನು ಆ ಯುಗದ ಪ್ರಸಿದ್ಧ ಲೇಖಕರ ಕೃತಿಗಳನ್ನು ಓದಿ ಮುಗಿಸಿದ. ಸಂಧಿಕಾಲದ ಆ ಅವಧಿಯಲ್ಲಿ ಕರ್ತಾರರಂತಿದ್ದ ಹಿರಿಯರು ಚಂಡೀ ಮಂಟಪದಲ್ಲಿ ಕುಳಿತು ಪಗಡೆಯ ಆಟದ ಬಗ್ಗೆ ಗದ್ದಲವನ್ನೆಬ್ಬಿಸುತ್ತಿದ್ದರೆ, ಕಿಶೋರ

ವಯಸ್ಕರು ಕದ್ದು ಕಾಣದಂತೆ ಬಂಕಿಮರ ಮತ್ತು ರವೀಂದ್ರರ ಕೃತಿಗಳ ಪುಟಗಳನ್ನು ತಿರುವಿ ಹಾಕುತ್ತಿದ್ದರು. ಆದರೆ, ಶರತ್ ಕೇವಲ ಓದುತ್ತಿದ್ದುದು ಮಾತ್ರವಲ್ಲ; ಅದನ್ನು ಅರ್ಥಮಾಡಿಕೊಳ್ಳುವ ಹಾಗೂ ನೆರೆಹೊರೆಯ ವಾತಾವರಣದ ಸೂಕ್ಷ್ಮ ಅಧ್ಯಯನ ಮಾಡುವ ಸಹಜ ಪ್ರತಿಭೆಯೂ ಅವನಲ್ಲಿತ್ತು. ಅವನು ಪ್ರತಿಯೊಂದು ವಸ್ತುವನ್ನೂ ಹತ್ತಿರದಿಂದ ನೋಡುತ್ತಿದ್ದ.

ಅಂದು ನಿವೃತ್ತ ಅಧ್ಯಾಪಕರಾಗಿದ್ದ ಅಘೋರನಾಥ ಅಧಿಕಾರಿಯವರು ಸ್ನಾನಕ್ಕಾಗಿ ಗಂಗೆಯ ಸ್ನಾನಘಟ್ಟದತ್ತ ಹೋಗುತ್ತಿದ್ದರು. ಬಟ್ಟೆಗಳನ್ನು ಹಿಡಿದುಕೊಂಡು ಅವರ ಹಿಂದೆಹಿಂದೆ ಶರತ್ ನಡೆದು ಬರುತ್ತಿದ್ದ. ಬಿದ್ದುಹೋಗಿದ್ದ ಮನೆಯೊಂದರ ಒಳಗಿನಿಂದ ಮೆಲ್ಲಗೆ ಅಳುತ್ತಿದ್ದ ಒಬ್ಬ ಹೆಂಗಸಿನ ಕರುಣಾಪೂರ್ಣ ಧ್ವನಿ ಕೇಳಿಬಂತು. ಅಧಿಕಾರಿ ಮಹಾಶಯರು ಬೆಚ್ಚಿ ನಿಂತರು. "ಇದಾರು ಅಳುತ್ತಿದ್ದಾರೆ? ಅವಳಿಗೆ ಏನಾಗಿದೆ?" ಎಂದು ಕೇಳಿದರು.

ಶರತ್ ಉತ್ತರಿಸಿದ: "ಮುಶಾಯೀ ಮಾಸ್ತರೆ, ಈಕೆಯ ಗಂಡ ಕುರುಡನಾಗಿದ್ದ. ಅವರಿವರ ಮನೆಗಳಲ್ಲಿ ಕೆಲಸ ಮಾಡಿ ಇವಳು ಅವನ ಹೊಟ್ಟೆಗೆ ಹಾಕುತ್ತಿದ್ದಳು. ನಿನ್ನೆ ರಾತ್ರಿ ಅವಳ ಆ ಕುರುಡ ಗಂಡ ತೀರಿಕೊಂಡ. ಅವಳು ತುಂಬ ದುಃಖಿತಳಾಗಿದ್ದಾಳೆ. ಈ ದುಃಖಿಗಳು ದೊಡ್ಡ ಮನುಷ್ಯರಂತೆ ತೋರಿಕೆಗಾಗಿ ಜೋರುಜೋರಾಗಿ ಅಳುವುದಿಲ್ಲ. ಅವಳ ಅಳು ದುಃಖದಿಂದ ವಿದೀರ್ಣವಾದ ಆತ್ಮದ ಆಕ್ರಂದನವಾಗಿರುತ್ತದೆ. ಮುಶಾಯೀ ಮಾಸ್ತರೆ, ಇದು ನಿಜವಾದ ಅಳು."

ಕಿರಿಯ ವಯಸ್ಸಿನ ಬಾಲಕ ಅಳುವನ್ನು ಇಷ್ಟು ಸೂಕ್ಷ್ಮವಾಗಿ ವಿವೇಚಿಸಿದ್ದನ್ನು ನೋಡಿ ಅಘೋರನಾಥರು ಆಶ್ಚರ್ಯಚಕಿತರಾದರು. ಅವರು ಕಲ್ಕತ್ತೆಯಲ್ಲಿ ವಾಸಿಸುತ್ತಿದ್ದರು. ಹಿಂದಿರುಗಿದ ಮೇಲೆ ಅವರು ತಮ್ಮ ಮಿತ್ರರೊಬ್ಬರೊಡನೆ ಈ ಘಟನೆಯನ್ನು ಚರ್ಚಿಸಿದರು. ಆ ಮಿತ್ರರು ಹೀಗೆ ಹೇಳಿದರು: "ಅಳುವಿನ ಅನೇಕ ರೂಪಗಳನ್ನು ಗುರುತಿಸಬಲ್ಲವನು ಸಾಮಾನ್ಯ ಬಾಲಕನಲ್ಲ. ದೊಡ್ಡವನಾದ ಮೇಲೆ ಅವನು ಖಂಡಿತವಾಗಿಯೂ ಮಾನಸಿಕ ವರ್ತನೆಯ ಕ್ಷೇತ್ರದಲ್ಲಿ ಪ್ರಸಿದ್ಧನಾಗುತ್ತಾನೆ."

ಆದರೆ, ಗಂಗೂಲಿಗಳ ಕುಟುಂಬದಲ್ಲಿ ಈ ಸಹಜ ಪ್ರತಿಭೆಯನ್ನು ಗುರುತಿಸುವಂಥವರು ಯಾರೂ ಇರಲಿಲ್ಲ. ಈ ಭಯಂಕರ ಆದರ್ಶವಾದೀ ಕುಟುಂಬದಲ್ಲಿ ಹೊಸಯುಗದ ಹವೆಯ ಅಲ್ಪಸ್ವಲ್ಪ ಪ್ರಭಾವಕ್ಕೆ ಒಳಗಾಗಿದ್ದ ವ್ಯಕ್ತಿ ಒಬ್ಬರು ಮಾತ್ರವೆ. ಕೇದರನಾಥರ ನಾಲ್ಕನೆಯ ಸೋದರರಾಗಿದ್ದ ಅಮರನಾಥರೇ ಆ ವ್ಯಕ್ತಿಯಾಗಿದ್ದರು. ಮೋಜಿನ ಮನೋಧರ್ಮದ ವ್ಯಕ್ತಿಯಾಗಿದ್ದ ಅವರು ಹಾರಿವಾಳಗಳನ್ನು ಸಾಕುತ್ತಿದ್ದರು. ಆ ಯುಗದಲ್ಲಿ ಅವರು ಕನ್ನಡಿ, ಬಾಚಣಿಗೆ ಮತ್ತು ಬ್ರಷ್ ಮೊದಲಾದುವನ್ನೆಲ್ಲ ಬಳಸುತ್ತಿದ್ದರು. ಕೂದಲನ್ನು ಬಿಟ್ಟದ್ದುದೂ ಆಂಗ್ಲ ಫ್ಯಾಶನ್ನಿನ ಮಾದರಿಯಲ್ಲಿಯೇ. ಮನೆಯ ಮಕ್ಕಳು ಅವರ ಈ ವೇಷ ಭೂಷಣಗಳನ್ನು ನೋಡಿ ಮುಗ್ಧರಾಗಿದ್ದರು. ಅವರು ಹೀಗೆ ಮುಗ್ಧರಾಗಲು ಮತ್ತೊಂದು ಕಾರಣವೂ ಇತ್ತು. ಕಛೇರಿಯಿಂದ ಹಿಂದಿರುಗಿದ ಕೂಡಲೇ ಪ್ರತಿದಿನವೂ ಅವರು ಮಕ್ಕಳಿಗೆ ಏನನ್ನಾದರೂ ಕೊಡುತ್ತಿದ್ದರು. ಅದು ಪೆಪ್ಪರಮೆಂಟ್ ಅಥವಾ ಅಂಥದೇ ಇನ್ನಾವುದಾದರೂ ತಿನ್ನುವ ವಸ್ತುವಾಗಿರುತ್ತಿತ್ತು. ಆದರೆ ಈ ಕಾರಣದಿಂದಲೇ

ಹಿರಿಯ ಅಣ್ಣಂದಿರೆಲ್ಲ ಅವರ ವಿಷಯದಲ್ಲಿ ಅಸಂತುಷ್ಟರಾಗಿದ್ದರು. ಈ ಕಾರಣಕ್ಕಾಗಿಯೇ ಒಂದು ದಿನ ಅವರು ಪಿಳ್ಳೆಜುಟ್ಟನ್ನು ಬಿಟ್ಟು ಉಳಿದ ಎಲ್ಲ ಕೂದಲನ್ನೂ ತೆಗೆಸಬೇಕಾಗಿ ಬಂತು.

ಓದುವುದರಲ್ಲಿಯೂ ಅವರ ಆಸಕ್ತಿ ಕಡಮೆಯೇನೂ ಆಗಿರಲಿಲ್ಲ. ಅವರ ಮೂಲಕವಾಗಿಯೇ ಬಂಕಿಮಚಂದ್ರರ 'ಬಂಗದರ್ಶನ'ಕ್ಕೆ ಗಂಗೂಲಿಗಳ ಕುಟುಂಬ ದಲ್ಲಿ ಪ್ರವೇಶ ದೊರೆತಿತ್ತು. ಈ 'ಬಂಗದರ್ಶನ' ಬಂಗಾಳಿ ಸಾಹಿತ್ಯದಲ್ಲಿ ಹೊಸ ಯುಗದ ಪ್ರತೀಕವಾಗಿತ್ತು. ಗಂಗೂಲಿಗಳ ಹಾಲೀ ನಗರದಿಂದ ಬಂಕಿಮಚಂದ್ರರ 'ಕಾಂತಾಲಪಾಡಾ' ದೂರವಾಗಿಯೇನೂ ಇರಲಿಲ್ಲ. ಆ ಹಳ್ಳಿಯ ಒಬ್ಬ ಹೆಣ್ಣು ಈ ಕುಟುಂಬದ ಸೊಸೆಯಾಗಿ ಬಂದಿದ್ದಳು. ಆದರೆ 'ಹಿತ್ತಲ ಗಿಡ ಮದ್ದಲ್ಲ' ಎಂಬಂತೆ ಆಗಿತ್ತು. ಬಂಕಿಮಚಂದ್ರರಿಗೆ ಇಲ್ಲಿ ಸ್ವಲ್ಪವೂ ಗೌರವವಿರಲಿಲ್ಲ. ನವಯುಗದ ಸಂದೇಶವನ್ನು ಹೊತ್ತು ತಂದಿದ್ದವರು ಅವರಾಗಿದ್ದುದರಿಂದ, ಈ ಸಂಪ್ರದಾಯನಿಷ್ಠ ಕುಟುಂಬದಲ್ಲಿ ಅವರ ಬಗ್ಗೆ ಏನಾದರೂ ಭಾವನೆ ಇದ್ದಿತೆಂದರೆ ಅದು ಕೇವಲ ಅಗೌರವದ ಭಾವನೆ, ಅಷ್ಟೆ. ಆದರೂ, ಅಮರನಾಥರು ಕದ್ದು ಕಾಣದಂತೆ 'ಬಂಗದರ್ಶನ'ವನ್ನು ತರುತ್ತಿದ್ದರು. ಅವರಿಂದ ಅದು ಭುವನಮೋಹಿನಿಯ ಮೂಲಕ ಮೋತೀಲಾಲರ ಬಳಿಗೆ ತಲುಪುತ್ತಿತ್ತು; ಅಲ್ಲಿಂದ ಅದು ಕುಸುಮ ಕಾಮಿನಿಯ ಸಭಾಂಗಣವನ್ನು ಸೇರುತ್ತಿತ್ತು.

ದೌರ್ಭಾಗ್ಯದಿಂದ ಅಮರನಾಥರು ಬಹಳಕಾಲ ಬದುಕಲಿಲ್ಲ. ಮಕ್ಕಳನ್ನು ಅಪಾರವಾದ ದುಃಖದಲ್ಲಿ ಮುಳುಗಿಸಿ ಚಿಕ್ಕ ವಯಸ್ಸಿನಲ್ಲಿಯೇ ಅವರು ಸ್ವರ್ಗವಾಸಿಗಳಾಗಿಬಿಟ್ಟರು. ಅವರ ಸಾವಿನಿಂದುಂಟಾದ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ತುಂಬಿದವರೆಂದರೆ ಮೋತೀಲಾಲರು ಮತ್ತು ಕುಸುಮಕಾಮಿನಿ. ಕುಸುಮಕಾಮಿನಿ ಎಲ್ಲರಿಗಿಂತಲೂ ಕಿರಿಯತಾತನವರಾಗಿದ್ದ ಅಘೋರನಾಥರ ಪತ್ನಿಯಾಗಿದ್ದರು. ಶಿಷ್ಯವೃತ್ತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಆಕೆ ಸ್ವತಃ ಈಶ್ವರಚಂದ್ರ ವಿದ್ಯಾಸಾಗರರ ಕೈಯಿಂದಲೇ ಪಾರಿತೋಷಕವನ್ನು ಪಡೆದಿದ್ದರು. ಹಿಂದಿನಿಂದಲೂ ನಡೆದುಬಂದಿರುವಂತೆ ಅಂದೂ ಅಡಿಗೆ ಮನೆಯ ಕೆಲಸಗಳಲ್ಲಿ ಮುಳುಗಿ ಏಳುವುದು ಹಾಗೂ ಮನೆಮಾರು ಮತ್ತು ಮಕ್ಕಳ ಯೋಗಕ್ಷೇಮದ ಇತರ ಕೆಲಸಗಳನ್ನು ನೋಡಿಕೊಳ್ಳುವುದಷ್ಟೇ ಹೆಂಗಸರ ಮುಖ್ಯ ಕೆಲಸಗಳಾಗಿದ್ದುವು. ಹಾಗೂ ಸ್ವಲ್ಪ ಸಮಯ ಉಳಿಯಿತೆಂದರೆ ಬಾಳ್ವೆಯನ್ನು ಜೀವಂತವಾಗಿರಿಸುವುದಕ್ಕಾಗಿ ಜಗಳ ವಾಡುವುದು ಅಥವಾ ನಿದ್ದೆ ಮಾಡುವುದು, ಮತ್ತೆ ಎದ್ದ ಮೇಲೆ ಇತರರನ್ನು ನಿಂದಿಸುವುದರಲ್ಲಿ ಆನಂದವನ್ನು ಸವಿಯುವುದು - ಇವಿಷ್ಟೇ ಅವರ ಕೆಲಸ ಗಳಾಗಿದ್ದುವು. ಆದರೆ, ಇದನ್ನೆಲ್ಲ ಮಾಡುವುದು ಕುಸುಮಕಾಮಿನಿಗೆ ಸಾಧ್ಯವಿರಲಿಲ್ಲ. ಅಡಿಗೆ ಮನೆಯ ಕೆಲಸದ ಪಾಳಿ ತನ್ನದಾಗಿರದ ದಿನಗಳಂದು ಅವರ ಕೂಡುಕೋಣೆಯಲ್ಲಿ (ಅಥವಾ ಮಾಳಿಗೆಯ ಮೇಲೆ) ಚಿಕ್ಕಪುಟ್ಟ ಗೋಷ್ಠಿಯೊಂದು ಸೇರುತ್ತಿತ್ತು. ಅದರಲ್ಲಿ ಆಕೆ ಸ್ವತಃ 'ಬಂಗದರ್ಶನ'ವನ್ನು ಮಾತ್ರವಲ್ಲದೆ 'ಮೃಣಾಲಿನಿ', 'ವೀರಾಂಗನಾ', 'ಪ್ರಜಾಂಗನಾ', 'ಮೇಘನಾಥವಧ' ಮತ್ತು 'ನೀಲದರ್ಪಣ'ದಂಥ ಕೃತಿಗಳನ್ನು ಓದಿ ಹೇಳುತ್ತಿದ್ದರು. ಆಕೆಯ ಧ್ವನಿ ಮತ್ತು ಓದುವ ಶೈಲಿ ಎಷ್ಟು

ಹೃದಯಸ್ಪರ್ಶಿಯಾಗಿರುತ್ತಿತ್ತೆಂದರೆ ಎಲ್ಲರೂ ಪ್ರತಿಮೆಗಳಂತೆ ನಿಶ್ಚಲರಾಗಿ ಕುಳಿತು ಕೇಳುತ್ತಿದ್ದರು. ಆಶ್ಚರ್ಯ ಮತ್ತು ಆದರದ ಭಾವನೆಗಳಿಂದ ತುಂಬಿ ತುಳುಕುತ್ತಿದ್ದ ಬಾಲಕ ಶರತ್ ಯೋಚಿಸುತ್ತಿದ್ದ - ಲೇಖಕ ಅದೆಂಥ ಅಸಾಮಾನ್ಯ ವ್ಯಕ್ತಿ! ಆಗಲೇ ತಾನೂ ಲೇಖಕನಾಗಬೇಕು ಎಂಬ ಭಾವನೆ ಅವನ ಮನಸ್ಸಿನಲ್ಲಿ ಸುಳಿಯದೇ ಹೋಗಿದ್ದಿರಬಹುದು. ಆದರೆ ಲೇಖಕ ಮನುಷ್ಯನಿಗಿಂತಲೂ ಮೇಲು ಮಟ್ಟದವನು ಎಂದು ಅವನು ಖಂಡಿತವಾಗಿಯೂ ಭಾವಿಸಿದ್ದ. ಇದು ಅವನ ಉಪಾರ್ಜನೆಯ ಅವಧಿಯಾಗಿತ್ತೇ ಹೊರತು ಲೇಖಕನಾಗುವ ಅವಧಿಯಲ್ಲ. ಈ ಗೋಷ್ಠಿಯಲ್ಲಿ ಅವನಿಗೆ ಸಾಹಿತ್ಯದ ಮೊದಲ ಪಾಠ ಆಯಿತು. ಮುಂದೆ ಅನೇಕ ದಿನಗಳ ಬಳಿಕವೇ 'ಬಂಗದರ್ಶನ'ದಲ್ಲಿ 'ಕಣ್ಣಿನ ಕಿರಕಿರಿ' ಎಂಬ ಕವಿ ಗುರು ರವೀಂದ್ರರ ಯುಗಾಂತರಕಾರೀ ರಚನೆಯನ್ನು ಅವನು ಓದಿದ್ದು. ಅದನ್ನು ಓದಿದ ಮೇಲೆ ಆ ಕಿಶೋರ ಹೃದಯಕ್ಕೆ ಅದೆಷ್ಟರಮಟ್ಟಿನ ಆಳವಾದ ಆನಂದಾನುಭೂತಿ ಉಂಟಾಯಿ ತೆಂದರೆ ಅವನು ಅದನ್ನು ಯಾರೊಡನೆಯೂ ಹೇಳಿಕೊಳ್ಳಲಾರದೆ ಹೋದ, ಹಾಗೂ ಅದನ್ನು ಜೀವನವಿಡೀ ಮರೆಯಲಾರದೆಯೂ ಹೋದ. ಇದುವರೆಗೂ ಅವನ ಮನಸ್ಸು ಭೂತ-ಪ್ರೇತಗಳ ಕಥೆಗಳಿಂದ ಮಾತ್ರವೇ ಆತಂಕಕ್ಕೊಳಗಾಗಿತ್ತು. ಈ ಹೊಸ ಜೀವನದರ್ಶನ ಆತನನ್ನು ಜ್ಯೋತಿ ಹಾಗೂ ಸೌಂದರ್ಯದ ಒಂದು ಹೊಸ ಮಾಯಾಲೋಕಕ್ಕೆ ಕೊಂಡೊಯ್ದಿತು. "ನಾನು ಪುಷ್ಕಿನ್ನನಿಂದ ಬಹಳಷ್ಟು ಕಲಿಯಬಲ್ಲೆ; ಆತನೇ ನನಗೆ ತಂದೆ; ಆತನೇ ನನಗೆ ಗುರು" ಎಂದು ಟಾಲ್‌ಸ್ಟಾಯ್ ಪುಷ್ಕಿನ್‌ನ ಕೃತಿಗಳನ್ನು ಓದಿದ ಬಳಿಕ ಉದ್ಗರಿಸಿದ್ದಂತೆ ಬಹುಶಃ ಶರತ್ ಕೂಡಾ ನಾನು ಅವರಿಂದ ಸಾಕಷ್ಟು ಕಲಿಯಬಲ್ಲೆ. ಇಂದಿನಿಂದ ಅವರೇ ನನ್ನ ಗುರುಗಳು ಎಂದು ಉದ್ಗರಿಸಿದ್ದಿರಬಹುದು.

ಶರತ್‌ಚಂದ್ರರು ನಿಜವಾಗಿಯೂ ಜೀವನದ ಕೊನೆಯ ಗಳಿಗೆಯವರೆಗೆ ಅವರನ್ನು ತಮ್ಮ ಗುರುವೆಂದು ಭಾವಿಸಿದ್ದರು.

ವಾಸ್ತವವಾಗಿ ಮಣಿ-ಶರತ್‌ರ ಅಧ್ಯಯನದ ಆದಿಪರ್ವ ಆರಂಭವಾದದ್ದೇ ಕುಸುಮ ಕಾಮಿನಿಯ 'ಪಾಠಶಾಲೆ'ಯಲ್ಲಿ. ಪಠ್ಯಪುಸ್ತಕಗಳ ಅಧ್ಯಯನ ಮುಗಿದ ಮೇಲೆ ಸಾಹಿತ್ಯದ ಸರದಿ ಬರುತ್ತಿತ್ತು. ಶೈಶವದಿಂದ ಹಿಡಿದು ಯೌವನಾರಂಭದವರೆಗೆ ಅಧ್ಯಯನದ ಈ ಕ್ರಮಕ್ಕೆ ಯಾವುದೇ ರೀತಿಯಲ್ಲಿಯೂ ಭಂಗ ಉಂಟಾಗಲಿಲ್ಲ. ಸೋಲರಿಯದ ಕಥಾಶಿಲ್ಪಿ ಶರತ್‌ಚಂದ್ರರನ್ನು ರೂಪಿಸುವಲ್ಲಿ ಕುಸುಮಕಾಮಿನಿ ಯಿಂದ ದೊರೆತ ಕಾಣಿಕೆಯನ್ನು ಎಂದೂ ಮರೆಯಲಾಗುವುದಿಲ್ಲ.

ಇದ್ದಕ್ಕಿದ್ದಂತೆ ಒಂದು ದಿನ ಈ ಗೋಷ್ಠಿಯಲ್ಲಿ ಕ್ರಾಂತಿಯುಂಟಾಯಿತು. ಬೇರೊಂದು ಹೊಸ ಮೂಲದಿಂದ ಹರಿದು ಬಂದು; 'ಪ್ರಕೃತಿಯ ಸೇಡು' (ಪ್ರಕೃತಿರ್ ಪ್ರತಿಶೋಧ್) ಎಂಬ ರವೀಂದ್ರರ ಕವಿತೆ ಅಲ್ಲಿ ತನ್ನ ಧ್ವನಿಯನ್ನು ಮೊಳಗಿಸಿತು. ಓದಿದವರು ಅದೇ ಕುಟುಂಬಕ್ಕೆ ಸೇರಿದ ಒಬ್ಬ ವ್ಯಕ್ತಿ. ಆತ ಹೊರಗೆ ಕುಳಿತು ಓದಿದ್ದರು. ಈ ಕುಟುಂಬದಲ್ಲಿ ವರ್ಜ್ಯವೆಂದು ಭಾವಿಸಲಾಗಿದ್ದ ಸಂಗೀತ ಮತ್ತು ಕಾವ್ಯಗಳ ಬಗೆಗೆ ಆತನಿಗೆ ಆಸಕ್ತಿ ಇತ್ತು. ಆ ಕವಿತೆಯನ್ನೇ ಓದಿ ಹೇಳುವ ಸಲುವಾಗಿ ಆ ಬಂಧು ಆ ಕುಟುಂಬದ ಎಲ್ಲ ನಾರಿಯರನ್ನೂ ಒಂದು ಕಡೆ ಕಲೆ ಹಾಕಿದ್ದರು.

ಯಾರಿಗೆ ಎಷ್ಟು ಅರ್ಥವಾಯಿತೋ ಗೊತ್ತಿಲ್ಲ; ಆದರೆ, ಶರತ್‌ನ ಕಣ್ಣುಗಳು ಹನಿಯಾಡಿದುವು. ಅದನ್ನು ಮರೆಮಾಚಲೆಂದು ಅವನು ಎದ್ದು ಹೊರಗೆ ಹೊರಟುಹೋದ.

## 3

ತಾತನ ಈ ಕುಟುಂಬದಲ್ಲಿ ಹೆಚ್ಚು ಕಾಲ ಇರುವುದು ಶರತ್‌ಗೆ ಸಾಧ್ಯವಾಗಲಿಲ್ಲ. ಅವರ ತಂದೆ ಕನಸುಗಾರರಾಗಿದ್ದುದು ಮಾತ್ರವಲ್ಲ, ಅವರಲ್ಲಿ ಇನ್ನೂ ಅನೇಕ ದೋಷಗಳಿದ್ದುವು. ಅವರು ಹುಕ್ಕಾ ಕುಡಿಯುತ್ತಿದ್ದರು. ದೊಡ್ಡವರಾಗಿದ್ದರೂ ಮಕ್ಕಳೊಡನೆ ಸಮಾನರೆಂಬಂತೆ ವರ್ತಿಸುತ್ತಿದ್ದರು. ಅವರ ತುಂಟಾಟಗಳಿಗೆ ಅವರು ಸದಾ ಅಪರೋಕ್ಷವಾಗಿಯೇ ನೆರವಾಗುತ್ತಿದ್ದರು. ಅವರಲ್ಲಿ ಯಾರಿಗಾದರೂ 'ಉಗ್ರಾಣದಲ್ಲಿ ಕೂಡಿ ಹಾಕುವ' ಶಿಕ್ಷೆ ವಿಧಿಸಿದಾಗ, ಇವರು ಸದ್ದಿಲ್ಲದೆ ಹೋಗಿ ಅವರಿಗೆ ಊಟ ಕೊಟ್ಟು ಬರುತ್ತಿದ್ದರು. ಅವರಿಗೆ ಅಲ್ಲಿಂದ ಬಿಡುಗಡೆಯಾದಾಗ ಅವರಿಗೆ ಹೂವಿನ ಹಾರವನ್ನು ಹಾಕಿ, ಅವರನ್ನು ಸಂತೋಷಪಡಿಸುತ್ತಿದ್ದರು. ಅವರು ಮಾಡಿಕೊಟ್ಟಿದ್ದ ನಾನಾ ಬಗೆಯ ಕಾಗದದ ಆಟದ ಸಾಮಾನುಗಳು ಮಕ್ಕಳಿಗೆ ತುಂಬ ಪ್ರಿಯವಾಗಿದ್ದುವು. ತುಂಬ ಆಸ್ಥೆಯಿಂದ ಸ್ಲೇಟು ಮತ್ತು ಪೆನ್ಸಿಲ್ ತೆಗೆದುಕೊಂಡು ಸುಂದರವಾಗಿ ಅಕ್ಷರಗಳನ್ನು ಬರೆಯುವುದನ್ನು ಅಭ್ಯಾಸ ಮಾಡಿಸುತ್ತಿದ್ದರು. ಅವರಿಗಾಗಿ ಗಂಗಾಸ್ನಾನದ ಏರ್ಪಾಟನ್ನೂ ಮಾಡುತ್ತಿದ್ದರು. ಗಂಗೆಗೆ ಜಿಗಿಯುವುದು ಎಂಥ ಆನಂದದ ಸಂಗತಿ ಎಂಬುದು ಮಕ್ಕಳಿಗೆ ಮಾತ್ರವೇ ಗೊತ್ತು. ಹೀಗಾಗಿಯೇ ಅವರು ಮಕ್ಕಳಿಗೆ ಮರುಭೂಮಿಯಲ್ಲಿನ ಹಸಿರಿನಂತೆ ಆಗಿದ್ದರು. ಅವರ ಸಂವೇದನಾಶೀಲತೆಗೆ ಮೇರೆಯೇ ಇರಲಿಲ್ಲ.

ಮೊದಲೇ ಮನೆ-ಅಳಿಯ, ಮೇಲಾಗಿ ಕಠಿಣವಾದ ಶಿಸ್ತಿಗೆ ಹೆಸರಾದ ಕುಟುಂಬದಲ್ಲಿ ಇಂಥ ವರ್ತನೆ - ಈ ಕಾರಣಗಳಿಂದಾಗಿ ಅಲ್ಲಿ ಅವರ ಸ್ಥಿತಿ ಅಷ್ಟೇನೂ ಚೆನ್ನಾಗಿರಲಿಲ್ಲ. ಅವರ ಸ್ವತಂತ್ರ ವ್ಯಕ್ತಿತ್ವವೆಂಬುದು ನಿರ್ನಾಮವಾಗಿಬಿಟ್ಟಿದೆಯೋ ಎಂಬಂತೆ ತೋರುತ್ತಿತ್ತು. ಅವರ ತನುಮನಗಳನ್ನೆಲ್ಲ ಯಾರಾದರೂ ಕೊಂಡು ಕೊಂಡು ಬಿಟ್ಟಿದ್ದಾರೋ ಎಂಬಂತಿತ್ತು. ತಮ್ಮದೆಂದು ಹೇಳಿಕೊಳ್ಳಬಹುದಾದಂಥದ್ದೇನೂ ಅವರ ಬಳಿ ಇರಲೇ ಇಲ್ಲ. 'ಕಾಶೀನಾಥ' ಎಂಬ ಕಥೆಯಲ್ಲಿ ಕಾಶೀನಾಥನೂ ಮನೆ-ಅಳಿಯನಾಗಿ ಇರುತ್ತಾನೆ. ಅವನಿಗೂ ಮಾನಸಿಕ ಸುಖವೆಂಬುದಿಲ್ಲ. "ಕೆಲವೊಮ್ಮೆ ಅವನಿಗೆ, ಇದ್ದಕ್ಕಿದ್ದಂತೆ ಯಾರೋ ತನ್ನನ್ನು ಬಿಸಿ ನೀರಿನ ಕಡಾಯಿಯಲ್ಲಿ ಅದ್ದಿಬಿಟ್ಟಂತೆ, ಎಲ್ಲರೂ ಸೇರಿ ಪರಸ್ಪರ ಸಮಾಲೋಚಿಸಿ ತನ್ನ ಶರೀರವನ್ನು ಕೊಂಡುಕೊಂಡು ಬಿಟ್ಟಿದ್ದಂತೆ, ಈಗ ಅದು ತನ್ನದಲ್ಲವೇ ಅಲ್ಲವೇನೋ ಎಂಬಂತೆ ಅನುಭವವಾಗುತ್ತಿತ್ತು."

ಇಷ್ಟಾಗಿಯೂ ದಿನಗಳು ಹೇಗೋ ಕಳೆಯುತ್ತಿದ್ದುವು. ಇದ್ದಕ್ಕಿದ್ದಂತೆ ಒಂದು ದುರ್ಘಟನೆ ನಡೆಯಿತು. ಕೇದಾರನಾಥರ ಪತ್ನಿಯಾದ ವಿಂಧ್ಯವಾಸಿನೀ ದೇವಿ ಟಾಂಗಾದಲ್ಲಿ ಎಲ್ಲಿಗೋ ಹೊರಟಿದ್ದರು. ಅದು ಮಗುಚಿಕೊಂಡಿತು.[1] ಅವರಿಗೆ

1. 1888

ಸಾಕಷ್ಟು ಪೆಟ್ಟಾಯಿತು. ತುಂಬ ಪ್ರಯತ್ನ ನಡೆಸಿದರೂ ಭಾಗಲಪುರದಲ್ಲಿ ಅವರ ಆರೋಗ್ಯ ಸುಧಾರಿಸಲಿಲ್ಲ. "ಅವರನ್ನು ಕಲ್ಕತ್ತೆಗೆ ಕರೆದುಕೊಂಡು ಹೋಗಿ" ಎಂದು ವೈದ್ಯರು ಹೇಳಿದರು.

ಇದು ಸಾಕಷ್ಟು ಖರ್ಚಿನ ವಿಚಾರವಾಗಿತ್ತು ಹಾಗೂ ಅಷ್ಟು ಹೊತ್ತಿಗೆ ಕುಟುಂಬದ ಹಣಕಾಸಿನ ಪರಿಸ್ಥಿತಿ ಹದಗೆಟ್ಟಿತ್ತು. ಸೋದರರು ಪ್ರತ್ಯೇಕವಾಗಿ ವಾಸಿಸತೊಡಗಿದ್ದರು. ಅವರಲ್ಲಿ ಅಮರನಾಥರು ತೀರಿಕೊಂಡಿದ್ದರು. ಅವರ ಮಗಳು ವಿವಾಹಯೋಗ್ಯಳಾಗಿದ್ದಳು. ತಂದೆಯಿಲ್ಲದ ಮಗಳ ಮದುವೆ ತಡವಾಗಿ ಆಗುವುದಾದರೆ ಅಪವಾದಗಳು ಹುಟ್ಟಿಕೊಳ್ಳುವ ಭಯವೂ ಇರುತ್ತದೆ. ಕೇದಾರನಾಥರು ಏನು ಮಾಡಬೇಕು ? ಒಂದು ದಿನ ಅವರು ಮೋತೀಲಾಲರನ್ನು ಕರೆದು ಹೀಗೆ ಹೇಳಿದರು: "ಇನ್ನು ನೀನು ಇಲ್ಲಿರುವುದು ಸಾಧ್ಯವಾಗಲಾರದು. ದೇವಾನಂದಪುರಕ್ಕೆ ಹೋಗಿ ಏನಾದರೂ ಕೆಲಸ ಮಾಡಲು ಪ್ರಯತ್ನಿಸು."

ಮೋತೀಲಾಲರು ಅವರ ಮಾತನ್ನು ಕೇಳಿದರು; ಭುವನಮೋಹಿನಿಯೂ ಕೇಳಿಸಿಕೊಂಡರು. ಬೇರೆ ದಾರಿಯೇ ಇರಲಿಲ್ಲ. ದೂರು-ಗೀರು ಹೇಳಬಹುದಾಗಿದ್ದರೂ ಆಕೆ ಯಾರೊಂದಿಗೆ ಹೇಳಿಯಾರು ಹಾಗೂ ಹೇಗೆ ಹೇಳಿಯಾರು ? ಹೀಗಾಗಿ, ಒಂದು ದಿನ ಶರತ್ ಮತ್ತೆ ದೇವಾನಂದಪುರಕ್ಕೆ ಹಿಂದಿರುಗಿದ್ದ.

ಆದರೆ ಹೀಗೆ ಹಿಂದಿರುಗುವ ಮೊದಲು ಗಂಗೂಲೀ ಕುಟುಂಬದ ನೆರೆಯಲ್ಲಿದ್ದ ಮಜೂಮದಾರರ ಕುಟುಂಬದ ರಾಜೂವಿನ ಪರಿಚಯ ಅವನಿಗೆ ಉಂಟಾಗಿತ್ತು. ಆ ಪರಿಚಯವೂ ಅಷ್ಟು ಸುಲಭವಾಗಿ ಆಗಿರಲಿಲ್ಲ. ಅದರ ಹಿಂದೆ ಸ್ಪರ್ಧೆ ಹಾಗೂ ಪ್ರತಿಸ್ಪರ್ಧೆಗಳ ಸಾಕಷ್ಟು ದೊಡ್ಡ ಇತಿಹಾಸವೇ ಇತ್ತು.

ಶ್ಯಾಮಲವರ್ಣದ, ಆರೋಗ್ಯಪೂರ್ಣ ಮುಖದ ಆಜಾನುಬಾಹುವಾದ, ಮುಖದ ಮೇಲೆ ಸಿಡುಬಿನ ಸಾಮಾನ್ಯ ಕಲೆಗಳನ್ನುಳ್ಳ, ಮೈಯಲ್ಲಿದ್ದ ಶಕ್ತಿಯಷ್ಟೇ ಹೃದಯದಲ್ಲಿ ಸಾಹಸವನ್ನು ತುಂಬಿಕೊಂಡಿದ್ದ ಈ ರಾಜೇಂದ್ರನಾಥ ಅಥವಾ ರಾಜುವಿನ ತಂದೆ ರಾಮರತನ್ ಮಜೂಮದಾರರು ಜಿಲ್ಲಾ ಎಂಜಿನಿಯರ್ ಆಗಿ ಭಾಗಲಪುರಕ್ಕೆ ಬಂದಿದ್ದರು. ಆದರೆ, ಭಿನ್ನಾಭಿಪ್ರಾಯ ಉಂಟಾದುದರಿಂದ ಕೆಲಸಕ್ಕೆ ರಾಜೀನಾಮೆ ಕೊಡುವಲ್ಲಿ ತಡವೇನೂ ಆಗಲಿಲ್ಲ. ಗಂಗೂಲಿಗಳ ಮನೆಯ ಹತ್ತಿರದಲ್ಲಿಯೇ ಅವರ ಮನೆಯೂ ಇತ್ತು. ಅಕ್ಕಪಕ್ಕದ ಭೂಮಿಗೆ ಸಂಬಂಧಿಸಿದಂತೆ ಎರಡೂ ಕುಟುಂಬಗಳ ನಡುವೆ ವೈಮನಸ್ಯವೂ ಇತ್ತು. ಆಗ ಅಲ್ಲಿ ದಟ್ಟವಾದ ಕಾಡಿತ್ತು. ತಾಯಿತಂದೆಯರ ಶಿಸ್ತಿನ ಕಟ್ಟೆಗೊಳಗಾಗಿದ್ದ ಬಾಲಕರು ಇದೇ ಕಾಡಿನಲ್ಲಿ ಶರಣನ್ನು ಅರಸುತ್ತಿದ್ದರು. ಧೂಮಪಾನ ಮಾಡುವುದು, ಗಾಂಜಾ ಸೇದುವುದು ಮತ್ತು ಚರಸ್‌ನಂಥ ಮಾದಕ ಪದಾರ್ಥದ ಸೇವನೆ, ಇವುಗಳ ಜೊತೆಗೆ ಎಮ್ಮೆಗಳ ಹಾಲನ್ನು ಕದ್ದು ಮೈಕಟ್ಟನ್ನು ಅಭಿವೃದ್ಧಿಗೊಳಿಸುವುದು - ಇವೇ ಮೊದಲಾದ ಕಾರ್ಯಗಳು ಇಲ್ಲಿ ನಿರಂತರವಾಗಿ ನಡೆಯುತ್ತಿದ್ದುವು.

ರಾಮರತನ್ ಮಜೂಮದಾರರು ತಮ್ಮ ಏಳುಜನ ಮಕ್ಕಳಿಗಾಗಿ ಏಳು ಉಪ್ಪರಿಗೆ ಮನೆಗಳನ್ನು ಕಟ್ಟಿಸಿದ್ದರು. ಆದರೆ ಅವರ ಕುಟುಂಬದಲ್ಲಿ ಬಳಕೆಯಲ್ಲಿದ್ದ ಕೆಲವು

ಆಚರಣೆಗಳನ್ನು ಪುರಾತನ ಸಂಪ್ರದಾಯದ ಬಂಗಾಳೀ ಸಮಾಜ ಎಂದೂ ಕ್ಷಮಿಸುವ ಸಂಭವವೇ ಇರಲಿಲ್ಲ - ಅವರು ಪಿಂಗಾಣಿ ತಟ್ಟೆಗಳಲ್ಲಿ ಊಟ ಮಾಡಿಬಿಡುತ್ತಿದ್ದರು; ಮುಸಲ್ಮಾನ್ ಸೇವಕರ ಕೈಯಿಂದ ಗಾಜಿನ ಲೋಟದಲ್ಲಿ ನೀರು ತೆಗೆದುಕೊಂಡು ಕುಡಿದುಬಿಡುತ್ತಿದ್ದರು, ತಮ್ಮನ ವಿಧವಾ ಪತ್ನಿಯೊಡನೆ ಮಾತನಾಡಲು ಅವರಿಗೆ ಯಾವ ಅಭ್ಯಂತರವೂ ಇರಲಿಲ್ಲ. ಅವರು ಕಾಲುಚೀಲಗಳನ್ನು ಧರಿಸುತ್ತಿದ್ದರು; ಗಡ್ಡ ಬಿಡುತ್ತಿದ್ದರು. ಕ್ಲಬ್ಬಿಗೆ ಹೋಗುತ್ತಿದ್ದರು, ತಮ್ಮ ಮಾತುಕತೆಗಳಿಗೆ ತತ್ವಶಾಸ್ತ್ರದ ಲೇಪ ಕೊಡುತ್ತಿದ್ದರು.

ತಂದೆಯ ಸ್ವತಂತ್ರ್ಯ ಮನೋವೃತ್ತಿಯ ಪರಂಪರೆಯನ್ನು ರಾಜು ಅದರ ಕೊನೆ ಮೇರೆಯವರೆಗೆ ತಲುಪಿಸಿ ಬಿಟ್ಟಿದ್ದ. ಗಾಳಿಪಟದ ಸ್ಪರ್ಧೆಯಲ್ಲಿ ಶರತ್‌ನಂತೆ ಅವನೂ ಪಾರಂಗತನಾಗಿದ್ದ. ಆದ್ದರಿಂದ ಸಹಜವಾಗಿಯೇ ಇಬ್ಬರೂ ಒಬ್ಬರು ಮತ್ತೊಬ್ಬರನ್ನು ಸೋಲಿಸುವ ಆಸೆಯನ್ನೇ ಇಟ್ಟುಕೊಂಡಿರುತ್ತಿದ್ದರು. ರಾಜುವಿಗೆ ಹಣದ ಬಲವಿತ್ತು. ಗಾಳಿಪಟಕ್ಕಾಗಿ ತುಂಬ ಬೆಲೆಬಾಳುವ ಸಾಮಾನು ಸರಂಜಾಮುಗಳನ್ನು ಹೊಂದಿಸುವುದು ಅವನಿಗೆ ಕಷ್ಟವೇನೂ ಆಗುತ್ತಿರಲಿಲ್ಲ. ಆದರೆ ಶರತ್‌ನ ಬಳಿ ದುಡ್ಡು ಎಲ್ಲಿಂದ ಬರಬೇಕು ? ಅವನ ತಂಡದವರು ಬಾಟಲಿನ ಗಾಜನ್ನು ಮೈದಾ ಹಿಟ್ಟಿನಂತೆ ನುಣ್ಣಗೆ ಅರೆದು, ಅದಕ್ಕೆ ಅನೇಕ ಪರಿಕರಗಳನ್ನು ಬೆರೆಸಿ ಗಾಳಿಪಟದ ದಾರವನ್ನು ಸಿದ್ಧಪಡಿಸಿದರು. ಅಂದು ಶನಿವಾರವಾಗಿತ್ತು. ಸಂಜೆಯಾದೊಡನೆಯೇ ಶರತ್‌ನ ಗುಲಾಬಿ ಬಣ್ಣದ ಗಾಳಿಪಟ ಮನಬಂದ ದಿಕ್ಕಿನಲ್ಲಿ ಹಾರಿಹೊರಟಿತು. ಅದೇ ಹೊತ್ತಿಗೆ ಒಂದು ಬಿಳಿಯ ಗಾಳಿಪಟ ನಿಧಾನವಾಗಿ ಅದರ ಹತ್ತಿರ ಬರುತ್ತಿರುವುದು ಕಂಡಿತು. ಇದು ರಾಜೂವಿನ ಗಾಳಿಪಟವಾಗಿತ್ತು. ಸರಿ ದ್ವಂದ್ವಯುದ್ಧ ಆರಂಭವಾಯಿತು. ಪಟ್ಟಿನ ಮೇಲೆ ಪಟ್ಟಿನ ಹೋರಾಟ ನಡೆಯತೊಡಗಿತು. ಎರಡೂ ತಂಡಗಳು ತಮ್ಮ ತಮ್ಮ ತಂಡದ ಜಯಕ್ಕಾಗಿ ತುದಿಗಾಲ ಮೇಲೆ ನಿಂತಿದ್ದುವು. 'ಅದು ಹೊಡೆಯಿತು.' 'ಅದು ಕತ್ತರಿಸಿತು' ಎಂಬ ಕಿವಿಗಡಚಿಕ್ಕುವ ಧ್ವನಿಗಳು ಎಲ್ಲರನ್ನೂ ಡೋಲಾಯಮಾನಗೊಳಿಸುತ್ತಿದ್ದುವು. ಇದ್ದಕ್ಕಿದ್ದಂತೆ ಬಿಳಿಯ ಗಾಳಿಪಟ ಕತ್ತರಿಸಿಹೋಗಿ ಅಲ್ಲಿ ಇಲ್ಲಿ ತತ್ತರಿಸುತ್ತ ನೆಲದತ್ತ ಬರುತ್ತಿರುವುದು ಜನರಿಗೆ ಕಂಡಿತು. ಇನ್ನು ಹೇಳುವುದೇನು ? ಶರತ್‌ನ ತಂಡದ ಸಂತೋಷಕ್ಕೆ ಮೇರೆಯೇ ಇರಲಿಲ್ಲ. ಅತ್ತ ರಾಜು ಅದೇ ಕ್ಷಣದಲ್ಲಿ ಗಾಳಿಪಟದ ಎಲ್ಲ ಸಾಮಾನು-ಸರಂಜಾಮುಗಳನ್ನೂ ಗಂಗೆಗೆ ಅರ್ಪಿಸಿಬಿಟ್ಟ.

ಆದರೆ, ಈ ಸ್ಪರ್ಧೆ ಹಾಗೂ ಹೋರಾಟಗಳ ನಡುವೆಯೂ ಅವರು ಕ್ರಮೇಣ ಒಬ್ಬರು ಇನ್ನೊಬ್ಬರತ್ತ ಆಕರ್ಷಿತರಾಗುತ್ತ ನಡೆದಿದ್ದರು. ಅಪರಿಮಿತ ಸಾಹಸ, ಅಪೂರ್ವ ಪ್ರತ್ಯುತ್ಪನ್ನಮತಿ ಹಾಗೂ ಎಲ್ಲ ಕಾರ್ಯಗಳಲ್ಲಿಯೂ ವಿಜಯವನ್ನು ಸಾಧಿಸುವ ಮನೋಧರ್ಮ - ಇವುಗಳಿಂದ ರಾಜು ಅಸಾಮಾನ್ಯ ಪ್ರವೃತ್ತಿಯ ಬಾಲಕನಾಗಿದ್ದ. ಶರತ್‌ನ ಸ್ಥಿರ, ಧೀರ ಹಾಗೂ ಶಾಂತ ಬುದ್ಧಿ ಬಾಲಕರ ಕೋಟೆಯ ಬಲವಾದ ಗೋಡೆಗಳನ್ನು ದಾಟಿಬಂದು ಅವನನ್ನು ಆಶ್ಚರ್ಯಚಕಿತನನ್ನಾಗಿಸುತ್ತಿತ್ತು. ಅವನೊಡನೆ ಗೆಳೆತನವನ್ನು ಸ್ಥಾಪಿಸಿಕೊಳ್ಳಬೇಕೆಂದು ರಾಜು ಕಾತರನಾಗಿರುತ್ತಿದ್ದ.

ಕೊನೆಗೆ ಒಂದು ದಿನ ಎಲ್ಲ ವಿಘ್ನಗಳನ್ನೂ, ಅಡ್ಡಿಗಳನ್ನು ಮೆಟ್ಟಿ ನಿಂತು ಇಬ್ಬರು ಕಿಶೋರ ವಯಸ್ಕರೂ ಒಂದಾದರು. ವಯಸ್ಸಿನಲ್ಲಿ ಹಿರಿಯನಾಗಿದ್ದ ರಾಜು

ಬಹುಬೇಗ ಶರತ್‌ನ ಎಲ್ಲ ದುಸ್ಸಾಹಸಪೂರ್ಣ ಕಾರ್ಯಗಳಿಗೂ ಸಲಹೆಗಾರನಾಗಿ ಪರಿಣಮಿಸಿದ. ಸಂಗೀತ ಮತ್ತು ಅಭಿನಯದ ಬಗೆಗೆ ಇಬ್ಬರಿಗೂ ಇದ್ದ ಸಮಾನ ಪ್ರೀತಿ ಆ ಇಬ್ಬರ ಗೆಳೆತನಕ್ಕೆ ನೆರವಾದ ಮತ್ತೊಂದು ಕಾರಣವಾಯಿತು. ಶರತ್‌ನ ಕಂಠ ತುಂಬ ಮಧುರವಾಗಿತ್ತು.

ಈ ಗೆಳೆತನದ ಬಗ್ಗೆ ಅವನಿಗೆ ಮತ್ತೆ ಮತ್ತೆ ಎಚ್ಚರಿಕೆ ದೊರೆತಿರಬಹುದು. ಆದರೆ ಅಂದಿನ ಸದಾಚಾರ ಮತ್ತು ಶಿಸ್ತು ಅವನನ್ನು ಎಂದಾದರೂ ಕಟ್ಟಿಹಾಕುವಷ್ಟು ಸಮರ್ಥವಾಗಿತ್ತೆ? ಅವನಿಗೆ ಪ್ರೇರಣೆ ಹಾಗೂ ಒತ್ತಾಸೆಯ ಒಂದೆರಡು ಮಾತುಗಳನ್ನಾದರೂ ಹೇಳುವಂಥ ಒಬ್ಬ ವ್ಯಕ್ತಿಯೂ ಆ ಕುಟುಂಬದ ಹಿರಿಯರಲ್ಲಿ ಇರಲಿಲ್ಲ. ಈ ಕಾಲವೇ ಜೀವನದ ಸರ್ವತೋಮುಖ ವಿಕಾಸದ ಕಾಲವೆಂದು ಭಾವಿಸುತ್ತಾರೆ. ಹೀಗಾಗಿ, ಇದಕ್ಕಾಗಿ ಅವನು ಕುಟುಂಬದ ಹೊರಗೆ ಪ್ರೇರಣಾಸ್ರೋತ್ರವನ್ನು ಅರಸಿದುದು ಸ್ವಾಭಾವಿಕವೇ ಆಗಿತ್ತು. ಏಕೆಂದರೆ ವ್ಯಕ್ತಿಗೆ ಹಿರಿತನಕ್ಕೇರುವಂಥ ಅವಕಾಶವನ್ನು ಕಲ್ಪಿಸಿಕೊಡುವಂಥ ಆ ಗುಣಗಳು ಅವನಲ್ಲಿ ಮೊದಲಿನಿಂದಲೂ ಇದ್ದುವು.

## 4

ಮೋತೀಲಾಲ ಚಟ್ಟೋಪಾಧ್ಯಾಯರು ಇಪ್ಪತ್ತನಾಲ್ಕು ಪರಗಣ ಜಿಲ್ಲೆಯ ಕಾಂಚನಪಾಡಾದ ಬಳಿಯ ಮಾಮೂದಪುರದ ನಿವಾಸಿಯಾಗಿದ್ದರು. ಅವರ ತಂದೆ ವೈಕುಂಠನಾಥ ಚಟ್ಟೋಪಾಧ್ಯಾಯರು ಪ್ರತಿಷ್ಠಿತ ಸಂಪ್ರದಾಯಸ್ಥ ಕುಟುಂಬದ ಸ್ವತಂತ್ರ ಮನೋಧರ್ಮದ ಹಾಗೂ ಅಂಜಿಕೆಯರಿಯದ ವ್ಯಕ್ತಿಯಾಗಿದ್ದರು. ಅದು ಪ್ರಬಲರೂ ದರ್ಪಿಷ್ಟರೂ ಆದ ಜಮೀನುದಾರರ ಅತ್ಯಾಚಾರಗಳ ಯುಗವಾಗಿತ್ತು. ಆದರೆ ಅವರು ಯಾರಿಗೂ ಅಂಜಿ ನಡೆದವರಲ್ಲ. ಅವರು ಎಂದೂ ಜನರ ಪಕ್ಷವನ್ನೇ ವಹಿಸಿದರು. ಆದ್ದರಿಂದಲೇ ಒಂದು ದಿನ ಅವರು ಜಮೀನುದಾರರ ಕೋಪಕ್ಕೆ ತುತ್ತಾದರು. ಜಮೀನುದಾರನೊಬ್ಬ ಅವರನ್ನು ಕರೆಸಿ ಯಾವುದೋ ಒಂದು ಮೊಕದ್ದಮೆಯಲ್ಲಿ ಸಾಕ್ಷಿ ಹೇಳುವಂತೆ ಸೂಚಿಸಿದನಂತೆ. "ನಾನು ಹೇಗೆ ಸಾಕ್ಷಿ ಹೇಳಲಿ? ಅದರ ಬಗ್ಗೆ ನನಗೆ ಏನೇನೂ ಗೊತ್ತಿಲ್ಲ" ಎಂದು ಅವರು ಉತ್ತರ ಕೊಟ್ಟರು.

ಜಮೀನುದಾರ ಹೇಳಿದ: "ಸಾಕ್ಷಿ ಹೇಳುವುದಕ್ಕೆ, ಗೊತ್ತಿರಬೇಕಾದ ಅಗತ್ಯವೇನೂ ಇಲ್ಲ."

ಇಂದು ಸುಳ್ಳು ಸಾಕ್ಷಿ ಹೇಳಲಾಗುತ್ತಿದೆ. ಅಂದೂ ಹೇಳಲಾಗುತ್ತಿತ್ತು. ಆದರೆ ವೈಕುಂಠನಾಥರು ಸ್ಪಷ್ಟವಾಗಿಯೇ ತಿರಸ್ಕರಿಸಿದರು. ಪ್ರಬಲನೂ ದರ್ಪಿಷ್ಟನೂ ಆದ ಜಮೀನುದಾರ ಕೋಪಗೊಂಡ.

ಬೇರಾವುದೋ ಕಾರಣವೂ ಇದ್ದಿರಬಹುದು. ಒಂದು ದಿನ ಅವರು ಮನೆಯಿಂದ ಇದ್ದಕ್ಕಿದ್ದಂತೆ ನಾಪತ್ತೆಯಾದರು. ಮೋತೀಲಾಲರು ಆಗಿನ್ನೂ ತುಂಬ ಚಿಕ್ಕವರಾಗಿದ್ದರು. ಮಗುವನ್ನು ಎದೆಗೆ ಒತ್ತಿಕೊಂಡು ವೈಕುಂಠನಾಥರ ಪತ್ನಿ ರಾತ್ರಿಯಿಡೀ ಗಂಡನ ದಾರಿ ಕಾಯುತ್ತ ಇದ್ದರು. ಆದರೆ ಅವರು ಹಿಂದಿರುಗಲೇ

ಇಲ್ಲ. ಬೆಳಕು ಹರಿಯುತ್ತಿದ್ದಂತೆ ಒಬ್ಬಾತ ಬಂದು ಹೇಳಿದ: "ಅಮ್ಮಾ ಅಮ್ಮಾ ಅನರ್ಥವಾಯಿತು. ವೈಕುಂಠನಾಥರನ್ನು ಯಾರೋ ಕೊಂದು ಹಾಕಿದ್ದಾರೆ. ಸ್ನಾನಘಟ್ಟದಲ್ಲಿ ಅವರ ಹೆಣ ಬಿದ್ದಿದೆ."

ಆಕೆಯ ಬಾಯಿಂದ ಸದ್ದೇ ಹೊರಹೋಯಿತೇನೋ, ಹತಪ್ರಭಳೂ ವಿಮೂಢಳೂ ಆಗಿದ್ದ ಅವಳು ಮಗನನ್ನು ಮತ್ತಷ್ಟು ಬಲವಾಗಿ ಎದೆಗೆ ಒತ್ತಿಕೊಂಡಳು. ಮಾತನಾಡಲಾಗಲೀ ಮೂರ್ಛೆಹೋಗಲಾಗಲೀ ಅವಳಿಗೆ ಸಾಧ್ಯವಾಗಲಿಲ್ಲ. ಜಮೀನುದಾರನ ಭಯ ಎಷ್ಟಿತ್ತೆಂದರೆ ಅವಳು ಬೊಬ್ಬೆ ಹಾಕಿ ಅಳುವುದೂ ಸಾಧ್ಯವಿರಲಿಲ್ಲ. ಹಾಗೆ ಮಾಡಿದ್ದರೆ ಮಗನ ಜೀವಕ್ಕೂ ಎಳ್ಳು-ನೀರು ಬಿಟ್ಟಂತಾಗುತ್ತಿತ್ತು. ಊರಿನ ಹಿರಿಯರ ಮತ್ತು ವೃದ್ಧರ ಸಲಹೆಯಂತೆ ಆಕೆ ಬೇಗ ಬೇಗ ಗಂಡನ ಅಂತ್ಯಕ್ರಿಯೆಯನ್ನು ನೆರವೇರಿಸಿ ರಾತ್ರೋರಾತ್ರಿ ದೇವಾನಂದಪುರದಲ್ಲಿದ್ದ ತನ್ನ ಅಣ್ಣನ ಬಳಿಗೆ ಹೋದಳು.

ಸ್ವಲ್ಪ ದೊಡ್ಡವರಾದ ಮೇಲೆ ಮೋತೀಲಾಲರ ಮದುವೆ ಭಾಗಲಪುರದ ಕೇದಾರನಾಥ ಗಂಗೋಪಾಧ್ಯಾಯರ ಎರಡನೆಯ ಮಗಳಾಗಿದ್ದ ಭುವನಮೋಹಿನಿ ಯೊಂದಿಗೆ ನಡೆಯಿತು. ಅಂದಿನ ಅನೇಕ ಬಂಗಾಳಿಗಳಂತೆ ಕೇದಾರನಾಥರ ತಂದೆ ರಾಮಧನ ಗಂಗೋಪಾಧ್ಯಾಯರು ಘೋರ ದಾರಿದ್ರ್ಯದಿಂದ ಬೇಸತ್ತು, ಜೀವಿಕೆಯನ್ನು ಅರಸುತ್ತ, ಹಾಲೀ ನಗರದಿಂದ ಇಲ್ಲಿಗೆ ಬಂದು ನೆಲೆಸಿದ್ದರು. ಅವರು ತುಂಬ ಪ್ರತಿಭಾವಂತರೂ ಪರಿಶ್ರಮಶೀಲರೂ ಆಗಿದ್ದುದರಿಂದ ಸರ್ಕಾರದಲ್ಲಿ ಮೇಲಿನ ಹಂತದ ಸ್ಥಾನವನ್ನು ತಲುಪಲು ತಡವಾಗಲಿಲ್ಲ. ಮುಂದೆ ಐಶ್ವರ್ಯ ಮತ್ತು ಗೌರವಗಳೆರಡೂ ಮುಕ್ತರೂಪದಲ್ಲಿ ಅವರನ್ನು ಒಲಿದುವು. ಆದರೆ, ಅಂದು ಮದುವೆಗೆ ಐಶ್ವರ್ಯದ ಅಗತ್ಯವೇನೂ ಇರಲಿಲ್ಲ. ಅಗತ್ಯವಾಗಿದ್ದುದು ಕುಲೀನತೆ ಮತ್ತು ಮನೆತನದ ಮರ್ಯಾದೆ. ಮೋತೀಲಾಲರು ಸದ್ವಂಶದ ಕುಲೀನ ಸಂತಾನ ಎಂಬುದನ್ನು ತಿಳಿದೇ ಕೇದಾರನಾಥರು ಅವರಿಗೆ ತಮ್ಮ ಮಗಳನ್ನು ಕೊಟ್ಟರು. ಅವರ ಬಳಿ ಇದ್ದುಕೊಂಡೇ ಮೋತೀಲಾಲರು ಮೆಟ್ರಿಕ್ ಪರೀಕ್ಷೆ ಪಾಸು ಮಾಡಿದರು.[1] ಅಲ್ಲಿಂದ ಮುಂದಕ್ಕೆ ಓದಲು ಅವರು ಪಟ್ನಾ ಕಾಲೇಜಿಗೆ ಹೋದರು. ಚಿಕ್ಕಮ್ಮನ ಕಡೆಯಿಂದ ಮಾವನಾಗಿದ್ದ ಅಘೋರನಾಥರು ಅವರ ಸಹಪಾಠಿಯಾಗಿದ್ದರು. ಆದರೆ, ಇಬ್ಬರ ಸ್ವಭಾವದಲ್ಲಿ ಸ್ವಲ್ಪವೂ ಸಮಾನತೆ ಇರಲಿಲ್ಲ. ಮೋತೀಲಾಲರು ಅತಿಯಾದ ದಾರಿದ್ರ್ಯದಲ್ಲಿ ಬೆಳೆದುಬಂದಿದ್ದರು; ಆದರೆ ತಾಯಿ ಅವರನ್ನು ತುಂಬ ಪ್ರೀತಿಸುತ್ತಿದ್ದರು. ಹೀಗಾಗಿ, ಬಾಲ್ಯದಲ್ಲಿ ಅವರಿಗೆ ಸರಿಯಾದ ಮಾರ್ಗದರ್ಶನ ದೊರೆಯಲಿಲ್ಲ. ಅವರಿಗೆ ಓದಿ-ಬರೆಯುವುದರಲ್ಲಿ ತುಂಬ ಆಸಕ್ತಿ ಇತ್ತು. ಆದರೆ, ಅದಕ್ಕಿಂತಲೂ ಹೆಚ್ಚಿನ ಆಸಕ್ತಿ ಇದ್ದುದು ಕಲ್ಪನೆಗಳಲ್ಲಿ ಮುಳುಗಿ ಇರುವುದರಲ್ಲಿ. "ಕಲ್ಪನೆಯ ಮಡಿಲಲ್ಲಿ ತಲೆಯಿಟ್ಟು ಮಲಗಲು ನನ್ನನ್ನು ಬಿಡಿ. ಈ ಪ್ರಪಂಚ ಯಾವುದರ ಪ್ರತಿಬಿಂಬವಾಗಿದೆಯೋ ಆ ಪ್ರಪಂಚವನ್ನು ನಾನು ನೋಡಬಯಸುತ್ತೇನೆ" - ಮೋತೀಲಾಲರ ಸ್ವಭಾವ ಈ ಬಗೆಯದಾಗಿತ್ತು.

---

1 1873 - ಮೂರನೆಯ ದರ್ಜೆ

ಇದಕ್ಕೆ ವಿರುದ್ಧವಾಗಿ ಅಘೋರನಾಥರು ಸಂಪ್ರದಾಯಸ್ಥರೂ, ಚೊಕ್ಕ ಸ್ವಭಾವದವರೂ, ಸ್ಪಷ್ಟವಾದಿಗಳೂ ಆಗಿದ್ದರು. ಇಂಥ ಸ್ಥಿತಿಯಲ್ಲಿ ಕಲ್ಪನಾಪ್ರಿಯರಾಗಿದ್ದ ಮೋತೀಲಾಲರೊಂದಿಗೆ ಘನಿಷ್ಠ ಸ್ನೇಹ ಏರ್ಪಡುವುದಾದರೂ ಹೇಗೆ ಸಾಧ್ಯ ? ಕಾಲೇಜಿನಲ್ಲಿಯೂ ಅವರು ಬಹಳ ಕಾಲದವರೆಗೆ ಉಳಿಯಲಾರದೆ ಹೋದರು. ದೇವಾನಂದಪುರಕ್ಕೆ ಹಿಂದಿರುಗಿ ಯಾವುದೋ ಕೆಲಸವನ್ನು ಹಿಡಿದರು. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಯಾವುದೇ ಕೆಲಸ ಸಿಕ್ಕುವುದು ಆ ದಿನಗಳಲ್ಲಿ ತುಂಬ ಕಷ್ಟವಾಗಿತ್ತು. ಮಾವ ತಮ್ಮ ಮನೆಯ ಹತ್ತಿರದಲ್ಲಿಯೇ ಅವರಿಗೆ ಸ್ವಲ್ಪ ಜಮೀನನ್ನು ನೀಡಿದ್ದರು. ಸ್ವಲ್ಪ ಹಣ ಜೋಡಿಸಿ ಅವರು ಅಂಗಳ ಸಹಿತವಾಗಿ ಎರಡು ಕೋಣೆಗಳ ಒಂದು ಉಪ್ಪರಿಗೆಯ, ದಕ್ಷಿಣ ದಿಕ್ಕಿಗೆ ಅಭಿಮುಖವಾಗಿದ್ದ ಒಂದು ಚೆನ್ನಾದ ಮನೆಯನ್ನು ಕಟ್ಟಿಕೊಂಡರು. ಅದರಲ್ಲಿ ಇದ್ದುಕೊಂಡೇ ಅವರು ತಮ್ಮ ಮನೆವಾರ್ತೆಯನ್ನು ನಡೆಸತೊಡಗಿದರು.

ಮೋತೀಲಾಲರ ತಾಯಿ ಸಾಹಸೀ ಸದ್ಗೃಹಿಣಿಯಾಗಿದ್ದರು. ಅವರ ಪತ್ನಿ ಶಾಂತ ಪ್ರಕೃತಿಯ, ನಿರ್ಮಲ ಚಾರಿತ್ರ್ಯದ ಹಾಗೂ ಉದಾರ ಸ್ವಭಾವದ ಮಹಿಳೆಯಾಗಿದ್ದರು. ಆಕೆ ಸುಂದರಿಯಾಗಿರಲಿಲ್ಲ. ಆದರೆ ವೈಡೂರ್ಯಮಣಿಯಂತೆ ಅಂತರ್ಯ ರೂಪದ ದೃಷ್ಟಿಯಿಂದ ಖಂಡಿತವಾಗಿಯೂ ಆಕೆ ರೂಪಸಿಯಾಗಿದ್ದರು. ಅವರ ಸಹಜ ಪಾತಿವ್ರತ್ಯ ಹಾಗೂ ಪ್ರೇಮಗಳ ನೆರಳಿನಲ್ಲಿ ಕನಸುಗಾರರೂ, ಯಾಯಾವರ ಸ್ವಭಾವದವರೂ ಆದ ಪತಿಯ ಮನೆವಾರ್ತೆ ನಡೆಯತೊಡಗಿತು. ಇಲ್ಲಿಯೇ 15 ಸೆಪ್ಟೆಂಬರ್ 1876ರಂದು, ಇದಕ್ಕೆ ಹೊಂದಿಕೆಯಾಗುವ ವಂಗಾಬ್ದದ 31ಭಾದ್ರ 1283ರ ಆಶ್ವಿನ ಕೃಷ್ಣಾ ದ್ವಾದಶಿಯಂದು, 1933ರ ಸಂವತ್ ವರ್ಷದಲ್ಲಿ, 1898ರ ಶಕ ಸಂವತ್ಸರದಲ್ಲಿ, ಶುಕ್ರವಾರದಂದು ಸಂಜೆ ಗಂಡು ಮಗುವೊಂದು ಹುಟ್ಟಿತು. ಅದು ತನ್ನ ತಂದೆ-ತಾಯಿಗಳಿಗೆ ಎರಡನೆಯ ಮಗುವಾಗಿತ್ತು. ನಾಲ್ಕು ವರ್ಷಗಳ ಹಿಂದೆ ಅನಿಲಾ ಎಂಬ ಹೆಸರಿನ ಸೋದರಿಯೊಬ್ಬಳು ಹುಟ್ಟಿದ್ದಳು. ತಂದೆತಾಯಿಗಳು ತುಂಬ ಆಸೆಯಿಂದ ಮಗುವಿಗೆ 'ಶರತ್‌ಚಂದ್ರ'ನೆಂದು ಹೆಸರಿಟ್ಟರು.

ದೇವಾನಂದಪುರ ಬಂಗಾಳದ ಒಂದು ಸಾಧಾರಣ ಹಳ್ಳಿ. ಹಸಿರು ತುಂಬಿದ, ನಳನಳಿಸುವ, ಕೆರೆ-ಕೊಳಗಳಿಂದಲೂ, ತೆಂಗು ಮತ್ತು ಬಾಳೆಯ ಗಿಡಗಳಿಂದಲೂ ತುಂಬಿದ್ದ ಹಳ್ಳಿ ಅದಾಗಿತ್ತು. ನವಾಬರ ಆಡಳಿತದಲ್ಲಿ ಇದು ಫಾರಸಿ ಭಾಷೆಯ ಅಧ್ಯಯನ ಕೇಂದ್ರವಾಗಿತ್ತು. ನೂರೈವತ್ತು ವರ್ಷಗಳ ಹಿಂದೆ ರಾಯಗುಣಾಕರ ಕವಿ ಭಾರತ ಚಂದ್ರ ರಾಯ್ ಫಾರಸೀ ಭಾಷೆಯ ಅಧ್ಯಯನಕ್ಕಾಗಿ ಇಲ್ಲಿ ತಮ್ಮ ಕಿಶೋರಾವಸ್ಥೆಯ ಅವಧಿಯನ್ನು ಕಳೆದಿದ್ದರು. ಹಿಂದಿನ ಸಪ್ತಗ್ರಾಮಗಳಲ್ಲಿ ಇದೂ ಒಂದೆಂದು ಪರಿಗಣಿತವಾಗಿತ್ತು. ಆಗ ಇದು ಸಮೃದ್ಧಗ್ರಾಮವೂ ಆಗಿದ್ದಿರಬಹುದು. ಭಾರತ ಚಂದ್ರರ ಕಾಲದಲ್ಲಿ ಹರೀರಾಮ ರಾಯ್ ಮತ್ತು ರಾಮಚಂದ್ರ ದತ್ತ ಮುನ್ಷಿ ಈ ಹಳ್ಳಿಯಲ್ಲಿ ಓದಿಸಿ ಬರೆಸುವ ಕೆಲಸ ಮಾಡುತ್ತಿದ್ದರು. ಇವರ ಬಳಿಯಲ್ಲಿಯೇ ಅವರು ಫಾರಸೀ ಭಾಷೆಯನ್ನು ಅಭ್ಯಾಸ ಮಾಡಿದ್ದರು ಹಾಗೂ ಸ್ವತಃ ಎರಡು ಪದ್ಯಗಳನ್ನು ಬರೆದು ಇವರನ್ನು ಅಮರರಾಗಿಸಿದ್ದರು. ಆ ಪದ್ಯಗಳು ಇವು:

ಏ ತಿನ ಜನಾರ ಕಥಾ, ಪಾಂಚಾಲೀ ಪ್ರಬಂಧೇ ಗಾಥಾ
ಬುದ್ಧಿ ರೂಪ ಕೈಲ ನಾನಾ ಜನ್ಯಾ
ದೇವಾನಂದಪುರ ಗ್ರಾಮ ದೇವೇರ ಆನಂದ ಧಾಮ
ಹೀರಾರಾಮ ರಾಯೇರ ವಾಸನಾ
ದೇವೇರ ಆನಂದ ಧಾಮ, ದೇವಾನಂದಪುರ ನಾಮ
ತಾಹೇ ಅಧಿಕಾರೀ ರಾಮ ರಾಮಚಂದ್ರ ಮುಂಶೀ
ಭಾರತೇ ನರೇಂದ್ರರಾಯ, ದೇಶೇ ಜಾರ ಯಶ ಗಾಯ
ಹೋಯೋ ಮೋರೇ ಕೃಪಾದಾಯ ಪಡಾಇಲ ಪಾರಸೀ[1]

ಇದೇ ಹಳ್ಳಿಯಲ್ಲಿ ಅತ್ಯಂತ ದಾರಿದ್ರ್ಯದ ಸ್ಥಿತಿಯಲ್ಲಿ ಶರತ್‌ನ ಬಾಲ್ಯಕಾಲ ಆರಂಭವಾಯಿತು. ತಾಯಿ ಮನೆವಾರ್ತೆಯನ್ನು ಹೇಗೆ ನಡೆಸುತ್ತಿದ್ದರೋ ಏನೋ. ಗಂಡ ಎಂಥವನೆಂಬುದು ಆಕೆಗೆ ಗೊತ್ತಿತ್ತು. ಆತನ ಬಗ್ಗೆ ಆರೋಪ-ದೂಷಣೆಗಳನ್ನು ಮಾಡುವುದೂ ವ್ಯರ್ಥ, ಮನೆಯ ಮರ್ಯಾದೆಯನ್ನು ಉಳಿಸಿಕೊಂಡಿರುವುದೇ ಅರ್ಥಪೂರ್ಣ ವರ್ತನೆ ಎಂದು ಆಕೆ ತೀರ್ಮಾನಿಸಿದ್ದುದು; ಆಕೆ ಎಂದೂ ಒಡವೆಗಳನ್ನಾಗಲೀ, ಬೆಲೆಬಾಳುವ ಬಟ್ಟೆಗಳನ್ನಾಗಲೀ ಕೇಳಲಿಲ್ಲ. ಬಹುಶಃ ಆತ್ಮಸಮರ್ಪಣೆಯೇ ಆಕೆ ನೀಡಿದ ವರದಕ್ಷಿಣೆ. ಭಾಗಲಪುರದಲ್ಲಿದ್ದಾಗ ಚಿಕ್ಕಪ್ಪಂದಿರ-ದೊಡ್ಡಪ್ಪಂದಿರ ಆ ದೊಡ್ಡ ಕುಟುಂಬದಲ್ಲಿ ಎಲ್ಲ ತಾಯಂದಿರ ಮಕ್ಕಳನ್ನೂ ತನ್ನ ಮಡಿಲಿನಲ್ಲಿ ಅಡಗಿಸಿಕೊಂಡು ಅವರ ಪಾಲನೆ-ಪೋಷಣೆಗಳ ಮೇಲ್ವಿಚಾರಣೆ ಮಾಡುವ ಹೊಣೆ ಆಕೆಯದೇ ಆಗಿತ್ತು. ಯಾರು ಯಾವಾಗ ಬರುತ್ತಾರೆ ? ಯಾರು ಯಾವಾಗ ಹೋಗುತ್ತಾರೆ ? ಯಾರು ಯಾವಾಗ ಏನನ್ನು ತಿನ್ನಬೇಕು ? - ಇಂಥ ಅಸಂಖ್ಯ ಪ್ರಶ್ನೆಗಳನ್ನು ಬಗೆಹರಿಸುವಲ್ಲಿ ಆಕೆಗೆ ಉಸಿರಾಡಲೂ ಬಿಡುವು ದೊರೆಯುತ್ತಿರಲಿಲ್ಲ. ಸದಾಕಾಲವೂ ಇದೇ ಧ್ವನಿ ಮೊಳಗುತ್ತಿತ್ತು: "ಭುವನ್ ಎಲ್ಲಿ! ಓ ಭುವನ್ ಮಗು ಭುವನ್!"

ಮೋತೀಲಾಲರು ಆಕಾಶದಲ್ಲಿ ಹಾರಾಡುವ ಬಣ್ಣದ ಗಾಳಿಪಟದಂತಿದ್ದರು. ಒಂದೇ ಸಮನೆ ಸುತ್ತುತ್ತಿರುವ ಚಕ್ರದಂತೆ ಸರಳ ಸ್ವಭಾವದ ಮಹಿಳೆಯಾಗಿದ್ದರು, ಭುವನ ಮೋಹಿನಿ. ಆಕೆಯ ಕೋಮಲ ಹೃದಯ ಯಾರಿಗೇ ದುಃಖವುಂಟಾದರೂ ಮರುಗುತ್ತಿತ್ತು, ಕರಗಿಹೋಗುತ್ತಿತ್ತು. ಆದ್ದರಿಂದ ಎಲ್ಲರೂ ಆಕೆಯನ್ನು ಪ್ರೀತಿಸುತ್ತಿದ್ದರು. ಹಿರಿಯರು ಆಕೆಯ ಸೇವಾ ಪರಾಯಣತೆಯನ್ನು ಕಂಡು ಮುಗ್ಧರಾಗುತ್ತಿದ್ದರು. ಕಿರಿಯರು ಆಕೆಯ ಮಾತೃಸ್ನೇಹಕ್ಕಾಗಿ ಹಾತೊರೆಯುತ್ತಿದ್ದರು. ಶರತ್ ಸಾಹಿತ್ಯವನ್ನು ಹುಡುಕಿದರೆ ಇಂಥ ಅನೇಕ ಪಾತ್ರಗಳು ದೊರೆತಾವು. ತಾಯಿಯ ಋಣವನ್ನೂ ತೀರಿಸುವಲ್ಲಿ ಕತೆಗಾರ ಶರತ್ ಕೊಂಚವೂ ಕೃಪಣತೆಯನ್ನು ತೋರಲಿಲ್ಲ. ಆದರೆ ಎಷ್ಟೇ ಸರಳ ಹಾಗೂ ಉದಾರ ಮನೋಧರ್ಮದ ಹೆಣ್ಣಾದರೂ ಗಂಡನ ಅಕರ್ಮಣ್ಯತೆ ಆಕೆಯ ಹೃದಯಕ್ಕೆ ಘಾಸಿಯನ್ನುಂಟು ಮಾಡಿಯೇ

---

1 ಇದರ ಹಾಗೂ ಈ ಜೀವನ ಚರಿತ್ರೆಯಲ್ಲಿ ಬರುವ ಇತರ ಬಂಗಾಳಿ ಉದ್ಧರಣಗಳ ಅನುವಾದಕ್ಕೆ ನೋಡಿ: ಅನುಬಂಧ 1 - ಅನುವಾದಕನ ಅಡಿಟಿಪ್ಪಣಿ.

ತೀರುತ್ತದೆ. ಭುವನ ಮೋಹಿನಿ ಅನೇಕ ಸಂದರ್ಭಗಳಲ್ಲಿ ಕ್ಷುಬ್ಧರಾಗುತ್ತಿದ್ದರು. ಆಗೆಲ್ಲ ಮೋತೀಲಾಲರು ಮಾತಿಲ್ಲದೆ ಮನೆಯಿಂದೆದ್ದು ಹೊರಟುಬಿಡುತ್ತಿದ್ದರು ಹಾಗೂ ಬಹಳ ಹೊತ್ತಿನವರೆಗೆ ಹೊರಗೇ ಇದ್ದುಬಿಡುತ್ತಿದ್ದರು - 'ಶುಭದಾ'ದಲ್ಲಿನ ಹಾರಾನ್ ಬಾಬೂವಿನಂತೆ.

## 5

ಶರತ್‌ಗೆ ಐದು ವರ್ಷವಾದಾಗ ವಿದ್ಯುಕ್ತವಾಗಿ ಅವನನ್ನು ಪ್ಯಾರೀ (ಬಂದೋಪಾಧ್ಯಾಯ) ಪಂಡಿತರ ಪಾಠಶಾಲೆಗೆ ಸೇರಿಸಲಾಯಿತು. ಶರತ್ ತುಂಟಾಟ ಎಂಬುದಕ್ಕೆ ಅನ್ವರ್ಥವಾಗಿದ್ದ. ಪ್ರತಿದಿನವೂ ಒಂದಲ್ಲ ಒಂದು ಹಗರಣವನ್ನು ಸೃಷ್ಟಿಸಿಯೇ ಅವನು ಮನೆಗೆ ಹಿಂದಿರುಗುತ್ತಿದ್ದ. ಅವನು ದೊಡ್ಡವನಾಗುತ್ತ ಬಂದಂತೆ ಅವನ ತುಂಟಾಟಗಳೂ ಹೆಚ್ಚುತ್ತ ಹೋದುವು. ಒಂದು ದಿವಸ ಚಾಪೆಯ ಮೇಲೆ ಕುಳಿತಿದ್ದಂತೆಯೇ ಅವನು ನೋಡಿದ - ಪಂಡಿತರು ಚಿಲುಮೆಗೆ ಹೊಗೆಸೊಪ್ಪನ್ನು ತುಂಬಿ ಎಲ್ಲಿಗೋ ಹೋಗಿಬಿಟ್ಟಿದ್ದಾರೆ ಸರಿ. ಇವನು ತನ್ನ ಜಾಗದಿಂದ ಎದ್ದು ಚಿಲುಮೆಯಿಂದ ಹೊಗೆಸೊಪ್ಪನ್ನು ತೆಗೆದು ಅದರ ಬದಲಿಗೆ ಇಟ್ಟಿಗೆಯ ಚೂರುಗಳನ್ನು ತುಂಬಿದ. ಹಿಂದಿರುಗಿದ ಬಳಿಕ ಪಂಡಿತರು ಚಿಲುಮೆಗೆ ಕಡ್ಡಿಗೀರಿಟ್ಟು ಹುಕ್ಕಾಬಾಯಲ್ಲಿರಿಸಿಕೊಂಡು ಗುಡುಗುಡಾಯಿಸತೊಡಗಿದರು. ಆದರೆ ಹೊರಗೆ ಹೊಗೆಯೇ ಬರುತ್ತಿಲ್ಲ. ಅನೇಕ ಸಲ ಪ್ರಯತ್ನಿಸಿದರೂ ಏನೂ ಉಪಯೋಗವಾಗಲಿಲ್ಲ. ಆಗ ಚಿಲುಮೆಯನ್ನು ಬಗ್ಗಿಸಿ ನೋಡಿದರೆ ಅದರಲ್ಲಿ ಹೊಗೆಸೊಪ್ಪಿಗೆ ಬದಲಾಗಿ ಇಟ್ಟಿಗೆಯ ಚೂರುಗಳಿವೆ. ಇದು ಯಾರೋ ಒಬ್ಬ ವಿದ್ಯಾರ್ಥಿಯ ಕೆಲಸವೆಂದು ಅವರಿಗೆ ಅರ್ಥವಾಯಿತು. ಕೋಪಗೊಂಡು ಅವರು ಪ್ರಶ್ನಿಸಿದರು. "ನಿಜ ಹೇಳಿ, ಚಿಲುಮೆಯಲ್ಲಿ ಇಟ್ಟಿಗೆಯ ಚೂರುಗಳನ್ನು ತುರುಕಿದವರು ಯಾರು ?"

ಕೆಲವು ಕ್ಷಣಗಳವರೆಗೆ ಯಾರೂ ಏನೂ ಮಾತನಾಡಲಿಲ್ಲ. ಆದರೆ, ಪಂಡಿತರು ಕೋಪದಿಂದ ಮತ್ತೆ ಮತ್ತೆ ಗರ್ಜಿಸತೊಡಗಿದಾಗ, ಭಯದಿಂದಾಗಿ ಹುಡುಗನೊಬ್ಬ ಶರತ್‌ನ ಹೆಸರನ್ನು ಹೇಳಿಬಿಟ್ಟ. ಹೆಸರನ್ನು ಕೇಳಿದೊಡನೆಯೇ ಪಂಡಿತರು ಕೈಯಲ್ಲಿ ಬೆತ್ತವನ್ನೆತ್ತಿಕೊಂಡು ಥಳಿಸಲು ಅವನತ್ತ ನುಗ್ಗಿದರು. ಇದನ್ನು ನೋಡಿದ ಶರತ್ ಕೂಡಲೇ ಅಲ್ಲಿಂದ ಹಾರಿದ. ಹೋಗುವಾಗ, ತನ್ನ ಹೆಸರು ಹೇಳಿದ ಹುಡುಗನಿಗೆ ಒದ್ದು ಹೋಗುವುದನ್ನೇನೂ ಅವನು ಮರೆಯಲಿಲ್ಲ. ಅವನು ಬಿದ್ದ. ಪಂಡಿತರು ಅವನನ್ನು ಎಬ್ಬಿಸತೊಡಗಿದರು. ಅಷ್ಟರಲ್ಲಿ ಶರತ್ ಅಲ್ಲಿಂದ ಮಂಗಮಾಯವಾಗಿದ್ದ.

ಕೋಪದಿಂದ ನಡುಗುತ್ತಿದ್ದ ಪಂಡಿತರು ಶರತ್‌ನ ಮನೆಗೆ ಹೋದರು. ಅವನ ಕಥೆಯನ್ನು ಕೇಳಿದ ತಾಯಿಯ ಕೋಪವೂ ಮೇರೆ ಮೀರಿತು. ಮನೆಗ ಹಿಂದಿರುಗಿದ ಮೇಲೆ ಆಕೆ ಶರತನನ್ನು ಚೆನ್ನಾಗಿ ಥಳಿಸಿದರು. ಮಧ್ಯೆ ಮಧ್ಯೆ ತಮ್ಮ ಕೆನ್ನೆಗೂ ಹೊಡೆದುಕೊಂಡು ಆಕೆ ಹೀಗೆನ್ನುತ್ತಿದ್ದರು. "ಈ ಹುಡುಗ ಏನು ಮಾಡುತ್ತಾನೆ? ಇವನು ಮುಂದುವರಿಯುವುದಾದರೂ ಹೇಗೆ?....." ಆದರೆ, ಅತ್ತೆ ಆಕೆಗೆ ಸಮಾಧಾನ ಹೇಳುತ್ತಿದ್ದರು: "ಭುವನ್, ಅವನಿಗೆ ಹೊಡೆಯಬೇಡ. ಒಂದಲ್ಲ ಒಂದು

ದಿವಸ ಅವನ ಬುದ್ಧಿ ನೆಟ್ಟಗಾಗುತ್ತದೆ. ಅವನು ತುಂಬ ದೊಡ್ಡ ಮನುಷ್ಯನಾಗುತ್ತಾನೆ. ಆ ದಿನ ನೋಡಲು ನಾನೇನೋ ಇರುವುದಿಲ್ಲ. ಆದರೆ, ನೀನು ನೋಡಿಕೊ: ನನ್ನ ಮಾತು ಸುಳ್ಳಾಗುವುದಿಲ್ಲ."

ಪಂಡಿತರು ಯಾವಾಗ ತನ್ನ ಬಳಿಗೆ ದೂರು ತೆಗೆದುಕೊಂಡು ಬಂದರೂ, ಅವರಿಗೂ ತುಂಬ ಶಾಂತಭಾವದಿಂದ ಆಕೆ ಇದೇ ಸಮಾಧಾನ ಹೇಳುತ್ತಿದ್ದರು: "ಪಂಡಿತರೆ, ನ್ಯಾಡಾ[1] ಸ್ವಲ್ಪ ಧೂರ್ತನೇನೋ ಆಗಿಬಿಟ್ಟದ್ದಾನೆ. ದೊಡ್ಡವನಾದ ಮೇಲೆ ನಿಜವಾಗಿಯೂ ಒಳ್ಳೆಯವನಾಗುತ್ತಾನೆ."

ಸ್ವತಃ ಪಂಡಿತರೂ ಅನೇಕ ಸಲ ಅವನ ತುಂಟಾಟಗಳನ್ನು ಕಂಡೂ ಕಾಣದಂತೆ ಇದ್ದು ಬಿಡುತ್ತಿದ್ದರು. ಮೊದಲನೆಯದಾಗಿ, ಅವನು ಓದಿನಲ್ಲಿ ತುಂಬ ಚುರುಕಾಗಿದ್ದ. ಎರಡನೆಯದಾಗಿ, ಅವನು ತಮ್ಮ ಮಗ ಕಾಶೀನಾಥನ ಪರಮಮಿತ್ರನಾಗಿದ್ದ. ಕಾಶೀನಾಥ ಅದೇ ಶಾಲೆಯಲ್ಲಿ ಓದುತ್ತಿದ್ದ. ಅವನ ಗೆಳೆಯನೊಬ್ಬನ ಸೋದರಿಯೂ ಅದೇ ಶಾಲೆಯಲ್ಲಿ ಓದುತ್ತಿದ್ದಳು. ಶರತ್‌ಗೂ ಅವಳಿಗೂ ಹೇಗೆ ಗೆಳೆತನ ಉಂಟಾಯಿತೋ ಗೊತ್ತಿಲ್ಲ. ಸಾಮಾನ್ಯವಾಗಿ ಅವರಿಬ್ಬರೂ ಜೊತೆಯಾಗಿ ಸುತ್ತಾಡುವುದು ಕಾಣಸುತ್ತಿತ್ತು. ಪರಸ್ಪರ ಅವರು ಎಷ್ಟು ಇಷ್ಟಪಡುತ್ತಿದ್ದರೋ ಅಷ್ಟೇ ಜಗಳವೂ ಆಡುತ್ತಿದ್ದರು. ನದಿ ಅಥವಾ ಕೊಳದಲ್ಲಿ ಮೀನು ಹಿಡಿಯುವುದು ದೋಣಿಯನ್ನು ತೆಗೆದುಕೊಂಡು ನದಿಯಲ್ಲಿ ಸುತ್ತಾಡುವುದು, ತೋಟದಿಂದ ಹಣ್ಣುಗಳನ್ನೇ ಕದಿಯುವುದು, ಗಾಳಿಪಟದ ಪರಿಕರಗಳನ್ನು ಸಿದ್ಧಪಡಿಸುವುದು, ಕಾಡಿನಲ್ಲಿ - ಉಪವನಗಳಲ್ಲಿ ಅಲೆದಾಡುವುದು - ಈ ಬಗೆಯ ಬಾಲೋಚಿತ ಕಾರ್ಯಗಳಲ್ಲಿ ಆ ಹುಡುಗಿ ಶರತ್‌ನ ಜೊತೆಗಾರ್ತಿಯಾಗಿದ್ದಳು. ಅವಳ ನಿಜವಾದ ಹೆಸರೇನು ಎಂಬುದು ಯಾರಿಗೂ ತಿಳಿಯದು. ಆದರೆ ಅನುಕೂಲದ ದೃಷ್ಟಿಯಿಂದ ಎಲ್ಲರೂ ಆಕೆಯನ್ನು ಧೀರೂ ಎಂದು ಕರೆಯುತ್ತಿದ್ದರು.

ಧೀರುವಿಗೆ ವಿಶೇಷವಾದ ಒಂದು ಆಸಕ್ತಿ ಇತ್ತು. ಕವಳಿ ಹೂಗಳ ಋತು ಕಾಲಿಟ್ಟಿತೆಂದರೆ ಅವಳು ಅದರ ಹಾರವನ್ನು ತಯಾರು ಮಾಡಿ ಅದನ್ನು ಶರತ್‌ಗೆ ಕಾಣಿಕೆಯಾಗಿ ಕೊಡುತ್ತಿದ್ದಳು. ಹೂಮಾಲೆಯನ್ನು ಅರ್ಪಿಸುವುದರ ಅರ್ಥ ಏನೆಂಬುದು ಬಹುಶಃ ಅಲ್ಲಿಯ ತನಕ ಆಕೆಗೆ ಗೊತ್ತಿದ್ದಿರಲಾರದು. ಆದರೆ ಒಂದಲ್ಲ ಒಂದು ದಿನ ಕಾಲದೇವತೆ ಅವರಿಬ್ಬರಿಗೂ ಈ ರಹಸ್ಯವನ್ನು ತಿಳಿಸಿಕೊಟ್ಟಿರಬಹುದು. ಹಾಗೆ ನೋಡಿದರೆ, ಅವರಿಬ್ಬರ ಸಂಬಂಧ ಕಡಿಮೆ ರಹಸ್ಯಮಯವಾಗಿಯೇನೂ ಇರಲಿಲ್ಲ. ಬೇಸಿಗೆಯ ದಿನಗಳಲ್ಲಿ ಒಂದು ದಿವಸ ಹೀಗಾಯಿತು - ಶರತ್ ದೇವದಾಸನಂತೆ ಪಾಠಶಾಲೆಯ ಕೊಠಡಿಯ ಒಂದು ಮೂಲೆಯಲ್ಲಿ ಹರಿದ ಚಾಪೆಯ ಮೇಲೆ ಕುಳಿತಿದ್ದ. ಸ್ಲೇಟನ್ನು ಕೈಯಲ್ಲಿ ಹಿಡಿದು ಅವನು ಒಮ್ಮೆ ಕಣ್ಣು ತೆರೆಯುತ್ತಿದ್ದ, ಒಮ್ಮೆ ಕಣ್ಣುಮುಚ್ಚುತ್ತಿದ್ದ, ಒಮ್ಮೆ ಆಕಳಿಸುತ್ತಿದ್ದ. ಕೊನೆಗೆ ಅವನು ತುಂಬ ಚಿಂತನಶೀಲನೂ ಆಗಿ ಪರಿಣಮಿಸಿದ. ಇಂಥ ಹೊತ್ತು ಹುಕ್ಕಾ ಕುಡಿದುಕೊಂಡು ಸುತ್ತಾಡುವುದಕ್ಕೇ ಯೋಗ್ಯ ಎಂದು ಅವನು ತೀರ್ಮಾನಿಸಿದ. ಸರಿ ಕ್ಷಣಮಾತ್ರದಲ್ಲಿ ಅವನಿಗೆ ಉಪಾಯ ಹೊಳೆಯಿತು. ಪಾಠಶಾಲೆಯಲ್ಲಿ ಅದು ತಿಂಡಿತಿನ್ನುವ ಬಿಡುವಿನ

1. ಶರತ್‌ಗೆ ಮನೆಯಲ್ಲಿ ಬಳಕೆಯಲ್ಲಿದ್ದ ಹೆಸರು.

ಸಮಯವಾಗಿತ್ತು. ಹುಡುಗರು ಬಗೆಬಗೆಯಾದ ಆಟಗಳನ್ನು ಆಡುತ್ತ ಗದ್ದಲವನ್ನೆಬ್ಬಿಸುತ್ತಿದ್ದರು. ಅವನು ತುಂಟನಾಗಿದ್ದುದರಿಂದ ಅವರಿಗೆ ಮಾತ್ರ ಬಿಡುವು ಕೊಟ್ಟಿರಲಿಲ್ಲ. ಪಾಠಶಾಲೆಯಿಂದ ಒಮ್ಮೆ ಹೊರಬಂದನೆಂದರೆ ಮತ್ತೆ ಅವನು ಅಲ್ಲಿಗೆ ಹಿಂದಿರುಗುತ್ತಿರಲಿಲ್ಲ. ಆ ತರಗತಿಯ ಪ್ರಮುಖ ವಿದ್ಯಾರ್ಥಿಯಾಗಿದ್ದ ಭೋಲೂ ಎಂಬುವನ ಮೇಲ್ವಿಚಾರಣೆಯಲ್ಲಿ ಅವನು ಓದುತ್ತ ಕುಳಿತಿರಬೇಕೆಂದು ಆಜ್ಞೆ ಮಾಡಲಾಗಿತ್ತು.

ಅವನು ನೋಡಿದ, ಪಂಡಿತರು ನಿದ್ರಿಸುತ್ತಿದ್ದಾರೆ. ಮುರಿದ ಬೆಂಚಿನ ಮೇಲೆ ತಾನೇ ಅಧ್ಯಾಪಕನೋ ಎಂಬಂತೆ ಭೋಲೂ ಕುಳಿತಿದ್ದಾನೆ. ಅವನು ಸದ್ದಿಲ್ಲದೆ ಸ್ಲೇಟನ್ನು ತೆಗೆದುಕೊಂಡು ಅವನ ಬಳಿಗೆ ಹೋಗಿ ಹೇಳಿದ: "ಈ ಲೆಕ್ಕ ನನಗೆ ಅರ್ಥವಾಗುತ್ತಿಲ್ಲ."

ಭೋಲೂ ಗಂಭೀರನಾಗಿ ಹೇಳಿದ: 'ನಿನ್ನ ಸ್ಲೇಟ್ ತಾ. ನೋಡೋಣ"

ಭೋಲೂ ಜೋರುಜೋರಾಗಿ ಹೇಳುತ್ತ ಪ್ರಶ್ನೆಗೆ ಉತ್ತರವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತ ಇದ್ದಾಗಲೇ ಇನ್ನೊಂದು ಘಟನೆ ನಡೆಯಿತು. ಇದ್ದಕ್ಕಿದ್ದಂತೆ ಭೋಲು ಬಳಿಯಲ್ಲಿಯೇ ರಾಶಿ ಹಾಕಿದ್ದ ಸುಣ್ಣದ ರಾಶಿಯಲ್ಲಿ ಹೋಗಿ ಬಿದ್ದ. ಇತ್ತ ಶರತ್ ನಾಪತ್ತೆಯಾಗಿದ್ದ. ಇದನ್ನು ನೋಡಿ ಜೋರಾಗಿ ಚಪ್ಪಾಳೆ ತಟ್ಟುತ್ತಾ ಧೀರೂ ನಗತೊಡಗಿದಳು. ಆಗಲೇ ಪಂಡಿತರೂ ಎಚ್ಚೆತ್ತರು. ಭೋಲುವಿನ ರೂಪ ಆಗ ನೋಡಿಯೇ ಆನಂದಿಸುವಂಥದ್ದಾಗಿತ್ತು. ಅಡಿಯಿಂದ ಮುಡಿಯವರೆಗೆ ಸುಣ್ಣದಲ್ಲಿ ಅದ್ದಿ ತೆಗೆದಂತಿದ್ದ ಅವನು ಭೂತದಂತೆ ಕಾಣಿಸುತ್ತಿದ್ದ. ಏನು ಮಾಡಿದರೂ ಅವನು ಅಳು ನಿಲ್ಲಿಸುವಂತಿರಲಿಲ್ಲ. ಪರಿಸ್ಥಿತಿ ಏನೆಂಬುದನ್ನು ಅರ್ಥಮಾಡಿಕೊಳ್ಳಲು ಪಂಡಿತರಿಗೆ ತಡವಾಗಲಿಲ್ಲ. "ಆ ಹಾದರಗಿತ್ತಿ ಮಗ ನಿನ್ನನ್ನು ತಳ್ಳಿ ಓಡಿಹೋದ ಅಲ್ಲವೆ" ಎಂದರು.

ಭೋಲೂ ಹೇಗೆ ಹೇಗೋ ಹೇಳಿದ: "ಆಂ..... ಆಂ!"

ಆಗ ಶರತ್‌ನನ್ನು ಹುಡುಕುವುದಕ್ಕೆ ನಡೆದ ಗದ್ದಲ ಯಾವುದೇ ಒಂದು ಸಣ್ಣಪುಟ್ಟ ಸೈನ್ಯದ ಆಕ್ರಮಣಕ್ಕಿಂತ ಯಾವುದೇ ರೀತಿಯಲ್ಲೂ ಕಡಿಮೆಯಾಗಿರಲಿಲ್ಲ. ಬಗೆಬಗೆಯಾಗಿ ಮಾತುಗಳನ್ನಾಡುತ್ತ ಹುಡುಗರು ಅವನನ್ನು ಹುಡುಕುತ್ತಿದ್ದರು. ಆದರೆ ಯಾರಿಗೂ ಅವನನ್ನು ಹಿಡಿಯಲು ಆಗಲಿಲ್ಲ. ತನ್ನ ಹತ್ತಿರ ತಲುಪಲು ಪ್ರಯತ್ನಿಸಿದವರ ಮೇಲೆ ಅವನು ಇಟ್ಟಿಗೆಯ ಚೂರುಗಳನ್ನು ಎಸೆಯುತ್ತಿದ್ದ.

ಧೀರೂ ಇದೆಲ್ಲವನ್ನೂ ನೋಡುತ್ತಿದ್ದಳು. ಈಗ ಶರತ್ ಎಲ್ಲಿಗೆ ಹೋಗಿದ್ದಾನೆಂಬುದೂ ಅವಳಿಗೆ ಗೊತ್ತಿತ್ತು. ಸ್ವಲ್ಪ ಹೊತ್ತಿನ ಬಳಿಕ ಅವಳು ಸೆರಗಿನಲ್ಲಿ ಬುರುಗನ್ನು ಕಟ್ಟಿಕೊಂಡು ಜಮೀನುದಾರರ ಮಾವಿನ ತೋಟವನ್ನು ಹೊಕ್ಕಳು. ಹತ್ತಿರ ಹೋಗಿ ನೋಡಿದರೆ, ಶರತ್ ಅಲ್ಲಿ ಕುಳಿತು ಹುಕ್ಕಾ ಕುಡಿಯುತ್ತಿದ್ದಾನೆ. ಅವಳನ್ನು ನೋಡಿದ ಕೂಡಲೇ ಹೇಳಿದ: "ತಾ. ಏನು ತಂದಿದ್ದೀಯೆ ?"

ಹೀಗೆ ಹೇಳುತ್ತ ಹೇಳುತ್ತ ಅವಳ ಸೆರಗನ್ನು ಬಿಚ್ಚಿ ಬುರುಗನ್ನು ತಿನ್ನತೊಡಗಿದ. ಅವನು ಅದನ್ನು ತಿನ್ನುತ್ತ ಇದ್ದ. ಧೀರೂ ಪಂಡಿತರ ಕಥೆಯನ್ನು ಹೇಳುತ್ತ ಇದ್ದಳು.

ಇದ್ದಕ್ಕಿದ್ದಂತೆಯೇ ಅವನು ಕೇಳಿದ: "ನೀರು ತಂದಿದ್ದೀಯಾ ?"

ಧೀರೂ ಹೇಳಿದಳು: "ನೀರನ್ನೇನೂ ನಾನು ತಂದಿಲ್ಲ."ಶರತ್ ಕೋಪಿಸಿಕೊಂಡು ಹೇಳಿದ: "ಹಾಗಾದರೆ ಈಗ ಹೋಗಿ ತೆಗೆದುಕೊಂಡು ಬಾ."

ಧೀರೂವಿಗೆ ಇದು ಸರಿಕಾಣಲಿಲ್ಲ. "ಈಗ ನನಗೆ ಹೋಗಲು ಆಗುವುದಿಲ್ಲ. ನೀನೇ ಹೋಗಿ ಕುಡಿದುಕೊಂಡು ಬಾ" ಎಂದಳು.

"ನಾನು ಇಲ್ಲಿಂದ ಹೊರಗೆ ಹೋಗಲು ಸಾಧ್ಯವಾಗುವುದಿಲ್ಲ. ನೀನೇ ಹೋಗಿ ತೆಗೆದುಕೊಂಡು ಬಾ."

ಧೀರೂ ಮೇಲೇಳಲಿಲ್ಲ. ಶರತ್ ಕೋಪಿಸಿಕೊಂಡು ಮತ್ತೆ ಹೇಳಿದ: "ನಾನು ಹೇಳುತ್ತಾ ಇದ್ದೇನೆ. ಹೋಗು"

ಧೀರೂ ಆಗಲೂ ಸುಮ್ಮನಿದ್ದಳು. ಆಗ ಶರತ್ ಅವಳ ಬೆನ್ನಿಗೆ ಒಂದು ಗುದ್ದುಹಾಕಿದ. "ಹೋಗುತ್ತೀಯೋ ಇಲ್ಲವೋ ?" ಎಂದು ಕೇಳಿದ.

ಧೀರೂ ಅಳತೊಡಗಿದಳು. ಒಮ್ಮೆಗೇ ಎದ್ದು ನಿಂತು ಹೇಳಿದಳು: "ನಾನು ಈಗಲೇ ಹೋಗಿ ನಿಮ್ಮ ಅಮ್ಮನಿಗೆ ಎಲ್ಲವನ್ನೂ ಹೇಳಿಬಿಡುತ್ತೇನೆ. ನೀನು ಹುಕ್ಕಾ ಕುಡಿಯುತ್ತಿದ್ದೀಯೇ ಎಂಬುದನ್ನು ಹೇಳಿಬಿಡುತ್ತೇನೆ."

"ಹೇಳಿಕೋ, ಹೋಗಿ ಸಾಯಿ !"

ಅಂದು ಮತ್ತೆ ಶರತ್ ತಾಯಿಯ ಕೈಯಲ್ಲಿ ಏಟು ತಿನ್ನಬೇಕಾಯಿತು. ಧೀರೂಗೆ ಮತ್ತೆ ಏಟು ಬಿತ್ತು. ಆದರೆ ಇದರಿಂದ ಅವರ ಸ್ನೇಹಕ್ಕೆ ಯಾವ ಭಂಗವೂ ಬರಲಿಲ್ಲ. ಅದು ಒಂದೇ ಸಮನೆ ಗಾಢವಾಗುತ್ತ ನಡೆದಿತ್ತು. ಬಹು ದಿನಗಳ ಬಳಿಕ ತನ್ನ ಬಾಲ್ಯಕಾಲದ ಈ ಗೆಳತಿಯನ್ನು ಆಧಾರವಾಗಿರಿಸಿಕೊಂಡು ಶರತ್ ತನ್ನ ಅನೇಕ ಕಾದಂಬರಿಗಳ ನಾಯಿಕೆಯರನ್ನು ಸೃಷ್ಟಿಸಿದ. 'ದೇವದಾಸ್' ಕಾದಂಬರಿಯ ಪಾರ್ವತಿ, 'ಬಡೀ ದೀದಿ'ಯ ಮಾಧವಿ, 'ಶ್ರೀಕಾಂತ'ದ ರಾಜಲಕ್ಷ್ಮಿ-ಇವರೆಲ್ಲ ಧೀರೂವಿನ ವಿಕಸಿತ ಹಾಗೂ ವಿರಾಟ್ ರೂಪಗಳೇ. ಅದರಲ್ಲಿಯೂ 'ದೇವದಾಸ್'ನಲ್ಲಿಯಂತೂ ತನ್ನ ಬಾಲ್ಯ ಜೀವನವನ್ನೇ ಅವನು ಎರಕಹೊಯ್ದಿರುವಂತೆ ತೋರುತ್ತದೆ.

ಒಂದರ ಮೇಲೆ ಒಂದರಂತೆ ದಿನಗಳು ಕಳೆಯುತ್ತ ನಡೆದಿದ್ದುವು. ಈ ಹುಡುಗ-ಹುಡುಗಿಯರ ಆಮೋದ-ಪ್ರಮೋದಗಳಿಗೆ ಯಾವುದೇ ಮಿತಿಯೂ ಇರಲಿಲ್ಲ. ದಿನವಿಡೀ ಬಿಸಿಲಿನಲ್ಲಿ ಅಲ್ಲಿಇಲ್ಲಿ ಅಲೆದಾಡುತ್ತಿದ್ದರು. ಸಂಜೆ ಮನೆಗೆ ಬಂದು ಏಟು ತಿನ್ನುತ್ತಿದ್ದರು. ರಾತ್ರಿ ನಿಶ್ಚಿಂತರೂ ನಿರುದ್ವಿಗ್ನರೂ ಆಗಿ ನಿದ್ರಿಸುತ್ತಿದ್ದರು. ಮಾರನೆಯ ದಿವಸ ಬೆಳಕು ಹರಿದೊಡನೆ ಮತ್ತೆ ಓಡುತ್ತಿದ್ದರು. ಸಂಜೆ ಮತ್ತೆ ಬಯ್ಗುಳನ್ನೂ ಏಟುಗಳನ್ನೂ ತಿನ್ನುತ್ತಿದ್ದರು. ಮೂರನೆಯ ದಿವಸ, ನಾಲ್ಕನೆಯ ದಿವಸ, ಮತ್ತೆ ಮತ್ತೆ ಇದೇ ಕಥೆಯ ಪುನರಾವರ್ತನೆಯಾಗುತ್ತಿತ್ತು. ಇವರಿಗೆ ಬೇರಾವ ಜೊತೆಗಾರರೂ ಇರಲಿಲ್ಲ. ಅದರ ಅಗತ್ಯವೂ ಇರಲಿಲ್ಲ. ಇಡೀ ಹಳ್ಳಿಯಲ್ಲಿ ಉಪದ್ರವವನ್ನೆಸಗುತ್ತ ಅಲೆದಾಡಲು ಇವರಿಬ್ಬರೇ ಸಾಕಾಗಿತ್ತು.

ನಡುನಡುವೆ ಮೀನು ಹಿಡಿಯುವುದು ಹಾಗೂ ದೋಣಿಯನ್ನು ನಡೆಸುತ್ತ ದಿನಗಳೆಯುವುದು - ಇವುಗಳ ಜೊತೆಗೆ ಶರತ್ ಯಾತ್ರಾ ತಂಡಗಳ ಜೊತೆ ಸೇರಿ ಅವರ 'ಸೇವೆ'ಯಲ್ಲಿ ತೊಡಗುತ್ತಿದ್ದ. ತನ್ನ ಮಧುರ ಕಂಠದಿಂದಾಗಿ ಅವನು ಅವರಿಗೆ

ತುಂಬ ಉಪಯುಕ್ತನಾಗುತ್ತಿದ್ದ. ಆದರೆ ಇದರಿಂದಲೂ ಮನಸ್ಸು ಬೇಸರಗೊಂಡಾಗ ಭುಜದ ಮೇಲೆ ಅಂಗವಸ್ತ್ರವನ್ನು ಹಾಕಿಕೊಂಡು ಹೊರಟುಬಿಡುತ್ತಿದ್ದ. ಹೀಗೆ ಹೊರಡುವುದು 'ವಿಶ್ವಕವಿ'ಯ ಕಾವ್ಯದ ನಿರುದ್ದೇಶಪೂರ್ಣ ಯಾತ್ರೆಯಾಗಿರುತ್ತಿರಲಿಲ್ಲ. ಇದು ಸ್ವಲ್ಪ ಬೇರೆ ಬಗೆಯದೇ ಆಗಿರುತ್ತಿತ್ತು. ಅದೂ ಪೂರ್ಣಗೊಂಡಾಗ, ಒಂದು ದಿವಸ ಪೆಟ್ಟುತಿಂದ ತನ್ನ ಕಾಲುಗಳನ್ನು ಹಾಗೂ ಬಳಲಿ ನಿರ್ಜೀವದಂತಾಗಿದ್ದ ದೇಹವನ್ನು ಹೊತ್ತು ಮನೆಗೆ ಹಿಂದಿರುಗುತ್ತಿದ್ದ. ಅಲ್ಲಿಯ 'ಸತ್ಕಾರ' ಕೊನೆಗೊಂಡ ಮೇಲೆ ಮತ್ತೆ ಪಾಠಶಾಲೆಗೆ ಹೋಗುವ ಕ್ರಮ ಆರಂಭಗೊಳ್ಳುತ್ತಿತ್ತು. ಅಲ್ಲಿ ಮತ್ತೊಮ್ಮೆ 'ಸತ್ಕಾರ' ನಡೆಯುತ್ತಿತ್ತು. ಅದಾದ ಮೇಲೆ, ಮತ್ತೆ 'ಬೋಧೋದಯ' ಹಾಗೂ 'ಪದ್ಯಪಾಠ'ಗಳಲ್ಲಿ ಮನಸ್ಸನ್ನು ತೊಡಗಿಸುವ ಪ್ರಯತ್ನ ನಡೆಯುತ್ತಿತ್ತು. ದುಷ್ಟ ಸರಸ್ವತಿ ಭುಜವನ್ನೇರಿ ಕುಳಿತುಕೊಳ್ಳುತ್ತಿದ್ದಳು. ಶಿಷ್ಯತ್ವ ಮತ್ತೆ ಶುರುವಾಗುತ್ತಿತ್ತು. ಮತ್ತೆ ಮನೆ ಬಿಟ್ಟೋಡುತ್ತಿದ್ದ.

ಒಂದು ದಿವಸ ಸರಸ್ವತಿ ನದಿಯ ಘಟ್ಟವನ್ನು ತಲುಪಿದಾಗ ಎದುರಿಗೆ ದೋಣಿಯೊಂದು ನಿಂತಿತ್ತು. ಸರಿ, ಅದರಲ್ಲಿ ಹೋಗಿಕುಳಿತು, ಅದನ್ನು ನಡೆಸುತ್ತ ಮೂರು-ನಾಲ್ಕು ಮೈಲಿ ದೂರದಲ್ಲಿದ್ದ ಕೃಷ್ಣಪುರವೆಂಬ ಹಳ್ಳಿಗೆ ಹೋಗಿ ಸೇರಿದ. ಅಲ್ಲಿ ರಘುನಾಥ ಬಾಬಾನ ಪ್ರಸಿದ್ಧ ಮಂಡಳಿ ಇತ್ತು. ಅಲ್ಲಿಗೆ ಹೋಗಿ ಕೀರ್ತನೆಗೆ ಹಾಜರಾದ. ರಾತ್ರಿಯಾಯಿತು. ಹಿಂದಿರುಗಲು ಸಾಧ್ಯವಾಗಲಿಲ್ಲ. ಮಾರನೆಯ ದಿವಸ ಅಲ್ಲಿ-ಇಲ್ಲಿ ಹುಡುಕುತ್ತ, ಅವನನ್ನು ಕರೆದೊಯ್ಯಲು ಸ್ವತಃ ಮೋತೀಲಾಲರೇ ಅಲ್ಲಿಗೆ ಬಂದರು. ಆದರೆ, ಇದು ಒಂದು ದಿವಸದ ಅನಾಯಾಸ ಯಾತ್ರೆಯಾಗಿರಲಿಲ್ಲ. ಇದು ಯಾವುದೋ ಒಂದು ದೊಡ್ಡ ಯಾತ್ರೆಯ ನಾಂದಿ ಮಾತ್ರವಾಗಿತ್ತು. ಒಮ್ಮೊಮ್ಮೆ ಒಂಟಿಯಾಗಿ, ಒಮ್ಮೊಮ್ಮೆ ಗೆಳೆಯರ ಜೊತೆ ಅಲ್ಲಿಗೆ ಹೋಗಿ ಬಂದು ಮಾಡುವುದು ನಡೆದೇ ಇತ್ತು.

ಈ ದಿನಗಳಲ್ಲಿಯೇ ಸಿದ್ಧೇಶ್ವರ ಭಟ್ಟಾಚಾರ್ಯ ಎಂಬುವರು ಆ ಹಳ್ಳಿಯಲ್ಲಿ ಹೊಸ ಬಂಗಾಳಿ ಶಾಲೆಯೊಂದನ್ನು ತೆರೆದರು. ಇಲ್ಲಿಯಾದರೂ ಮನಸ್ಸಿಟ್ಟು ಓದಿಯಾನು ಎಂದು ಅವನನ್ನು ಈ ಶಾಲೆಗೆ ಸೇರಿಸಿದರು. ಆದರೆ ಅವನ ಕಾರ್ಯಕ್ರಮದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ವರ್ಷ ಅಗೋ-ಇಗೋ ಎನ್ನುವಲ್ಲಿ ಕಳೆದುಹೋಯಿತು. ಆಗ ಇದ್ದಕ್ಕಿದ್ದಂತೆ ಮೋತೀಲಾಲರಿಗೆ 'ಡೇಹರಿ ಆನ್‌ಸೋನ್'ನಲ್ಲಿ ಒಂದು ಕೆಲಸ ಸಿಕ್ಕಿತು. ತಂದೆಯ ಜೊತೆಯಲ್ಲಿ ಸ್ವಲ್ಪ ಕಾಲ ಅವನೂ ಅಲ್ಲಿದ್ದ. ಆದರೆ ಆಟಪಾಠಗಳಲ್ಲಿಯೇ ಕಾಲವೆಲ್ಲ ಕಳೆದುಹೋಯಿತು. ಅಲ್ಲಿ ಒಂದು ಕಾಲುವೆಯಿತ್ತು. ಅದರ ದಡದಲ್ಲಿ ಅಲೆದು ಮಾಗಿದ ಹಣ್ಣುಗಳನ್ನು ಸಂಗ್ರಹಿಸುತ್ತಿದ್ದ ಅಥವಾ ಬಲೆ ಬೀಸಿ ಓತಿಕ್ಯಾತಗಳನ್ನೂ ಹಿಡಿಯುತ್ತಿದ್ದ ಅಥವಾ ಸ್ನಾನಘಟ್ಟದ ಬಳಿ ಹೋಗಿ ಕುಳಿತು ಕಲ್ಪನೆಗಳ ಜಾಲದಲ್ಲಿ ಮುಳುಗಿರುತ್ತಿದ್ದ. ಈ ಎಲ್ಲ ಬಗೆಯ ತುಂಟಾಟಗಳ ನಡುವೆಯೂ, ಅಂತರ್ಮುಖಿಯಾಗುವ ಅವನ ಪ್ರವೃತ್ತಿ ಒಂದೇ ಸಮನೆ ಪ್ರಗತಿಯನ್ನು ಸಾಧಿಸುತ್ತ ನಡೆದಿತ್ತು. ತನ್ನ ಈ ಅಲ್ಪಕಾಲದ ಡೇಹರಿ ಪ್ರವಾಸವನ್ನು ಅವನು ಎಂದೂ ಮರೆಯಲಾರದೆ ಹೋದ. ಈ ನಗಣ್ಯ ಸ್ಥಾನವನ್ನೂ ಅವನು 'ಗೃಹದಾಹ'ದಲ್ಲಿ ಮುಂದೆ ಅಮರಗೊಳಿಸಿದ.

ದೇವಾನಂದಪುರಕ್ಕೆ ಹಿಂದಿರುಗಿದ ಮೇಲೆ ಅವನಿಗೆ ಮತ್ತೊಂದು ಆಸಕ್ತಿ ಅಂಟಿಕೊಂಡಿತು. ಆಸಕ್ತಿ ಮೊದಲು ಇದ್ದಿತು. ಆದರೆ ಅದು ಈಗ ಗೀಳು ಅಥವಾ ಚಟದ ಮೇರೆಯನ್ನೂ ತಲುಪಿತು. ಸರಸ್ವತಿ ನದಿ ಸಣ್ಣದಾದ ಆಳವಿಲ್ಲದ ನದಿ. ಪಾತ್ರವೂ ಬಹಳ ವಿಶಾಲವಾಗಿಲ್ಲ. ನೀರು ಸೊಂಟಕ್ಕಿಂತ ಮೇಲೇರುವುದಿಲ್ಲ. ಸಾಮಾನ್ಯವಾಗಿ ಅದರಲ್ಲಿ ಪಾಚಿ ತುಂಬಿಕೊಂಡಿರುತ್ತದೆ. ಪಾಚಿ ಇಲ್ಲದೆ ತೆರವಾಗಿರುತ್ತಿದ್ದಂಥ ಜಾಗಗಳಲ್ಲಿ ಸಣ್ಣಸಣ್ಣ ಮೀನುಗಳು ಆಟವಾಡುತ್ತಿರುತ್ತವೆ. ಇಂಥಲ್ಲಿ ಶರತ್ ಗಾಳಕ್ಕೆ ಹಿಟ್ಟಿನ ಉಂಡೆಯನ್ನು ಕಟ್ಟಿ, ಅದನ್ನು ನೀರಿನಲ್ಲಿ ಇಳಿಯಬಿಟ್ಟು ಕುಳಿತಿರುತ್ತಿದ್ದ. ಒಂದು ದಿವಸ ತನ್ನ ಮೊಹಲ್ಲಾದ ನಯನ ಬಾಗ್ದಿ ಅಜ್ಜಿಯ ಬಳಿಗೆ ಬಂದು ಹೀಗೆ ಹೇಳುತ್ತಿದ್ದುದನ್ನು ಕೇಳಿದ: "ತಾಯಿ ನನಗೆ ಐದು ರೂಪಾಯಿ ಕೊಡಿ. ನಿಮ್ಮ ಮೊಮ್ಮಗನಿಗೆ ಹಾಲು ಹಾಕಿ ಅದನ್ನು ತೀರಿಸುತ್ತೇನೆ. ಒಂದು ಒಳ್ಳೆಯ ಹಸುವನ್ನು ತರಬೇಕೆಂದಿದ್ದೇನೆ. ವಸಂತ ಪುರದಲ್ಲಿ ನನ್ನ ಸೋದರ ಬಂಧುವೊಬ್ಬ ಇದ್ದಾನೆ. ಅವನು ನನಗೆ ಹೇಳಿ ಕಳುಹಿಸಿದ್ದಾನೆ."

ಅಜ್ಜಿ ಆವನಿಗೆ ಐದು ರೂಪಾಯಿಕೊಟ್ಟರು. ಅವನು ಅವರಿಗೆ ನಮಸ್ಕಾರ ಮಾಡಿ ಹೊರಟುಹೋದ. ಆಗಲೇ ಶರತ್ ಮನಸ್ಸಿನಲ್ಲಿ ಆಲೋಚನೆಯೊಂದು ಮಿಂಚಿತು. ಗಾಳವನ್ನು ತಯಾರಿಸಲು ಬೇಕಾಗುವ ಒಳ್ಳೆಯ ಬಿದಿರು ಅಲ್ಲಿ ಸಿಕ್ಕುತ್ತದೆಂದು ಅವನು ಕೇಳಿದ್ದ. ಸರಿ, ಸದ್ದು ಮಾಡದೆ ಅವನು ನಯನ ಬಾಗ್ದಿಯ ಹಿಂದೆ ಹಿಂದೆ ನಡೆಯತೊಡಗಿದ. ಒಂದು ಮೈಲಿ ದೂರ ನಡೆದ ಮೇಲೆ ಬಾಗ್ದಿ ಅವನನ್ನು ನೋಡಿದ. ಅವನು ತುಂಬ ಕೋಪಿಸಿಕೊಂಡ, ಆಮಿಷವನ್ನೂ ತೋರಿದ. ಆದರೆ ಇದಾವುದೂ ಶರತ್‌ನ ಮೇಲೆ ಪ್ರಭಾವ ಬೀರಲಿಲ್ಲ. ಆಗ ಬಲವಂತವಾಗಿ ಅವನನ್ನು ಎಳೆದುಕೊಂಡು ಅಜ್ಜಿಯ ಬಳಿಗೆ ಬಂದು ಹೇಳಿದ: "ರಸ್ತೆ ಚೆನ್ನಾಗಿಲ್ಲ, 'ಅಪಾಯ'ವಿದೆ. ಹೊತ್ತಿಗೆ ಸರಿಯಾಗಿ ಹಿಂದಿರುಗಲು ಸಾಧ್ಯವಾಗದೆ ಇದ್ದರೆ, ನಾನು ಹಸುವನ್ನು ನೋಡಿಕೊಳ್ಳಲೋ ಇವನನ್ನು ನೋಡಿಕೊಳ್ಳಲೋ, ನೀವೇ ಹೇಳಿ."

'ಅಪಾಯ' ಇರುವ ವಿಚಾರ ಅಜ್ಜಿಗೂ ಗೊತ್ತಿತ್ತು. "ನೀನು ಹೋಗಕೂಡದು. ಕದ್ದೇನಾದರೂ ನೀನು ಹೋದರೆ, ಮೇಷ್ಟರಿಗೆ ಹೇಳುತ್ತೇನೆ" ಎಂದೂ ಆಕೆ ಶರತ್‌ನನ್ನು ಬೆದರಿಸಿದರು.

ನಯನ್ ಹೊರಟುಹೋದ. ಕೊಳದಲ್ಲಿ ಸ್ನಾನ ಮಾಡಿಕೊಂಡು ಬರುವ ನೆಪ ಹೂಡಿ, ಮೈಗೆ ಎಣ್ಣೆಯನ್ನು ಬಳಿದುಕೊಳ್ಳುತ್ತ, ಭುಜದ ಮೇಲೆ ಅಂಗವಸ್ತ್ರವನ್ನು ಹಾಕಿಕೊಂಡು ಅವನು ಮನೆಯಿಂದ ಹೊರಬಿದ್ದ. ನದಿಯ ತೀರದಲ್ಲಿಯೇ ನಡೆದು ಕಾಡುಮೇಡುಗಳನ್ನು ಹಾಗೂ ಮಾವು ಮತ್ತು ಹಲಸಿನ ತೋಟಗಳನ್ನು ದಾಟುತ್ತ ಎರಡು-ಎರಡೂವರೆ ಮೈಲಿಗಳಷ್ಟು ದೂರ ಓಡುತ್ತಲೇ ಸಾಗಿದ. ಹಳ್ಳಿಯ ಕಚ್ಚಾರಸ್ತೆ ಗ್ರ್ಯಾಂಡ್ ಟ್ರಂಕ್ ರಸ್ತೆಯನ್ನು ಹೋಗಿ ಸೇರುವ ಎಡೆಯನ್ನು ತಲುಪಿ, ಅಲ್ಲಿಯೇ ಕಾದು ನಿಂತ, ಸ್ವಲ್ಪ ಕಾಲದ ಬಳಿಕ ಬಾಗ್ದಿಯೂ ಅಲ್ಲಿಗೆ ಬಂದು ತಲುಪಿದ. ಅಲ್ಲಿ ಶರತ್‌ನನ್ನು ನೋಡಿ ಅವನ ಮುಖದ ಕಾಂತಿ ಮಸುಳಿತು. ಆದರೆ, ಈಗ ಹಿಂದಿರುಗುವುದು ಸಾಧ್ಯವಿರಲಿಲ್ಲ. ನಕ್ಕು ಹೇಳಿದ: "ಒಳ್ಳೆಯದು ದೇವರೆ, ಇನ್ನು ಹೆಜ್ಜೆ ಹಾಕಿ, ಹಣೆಯಲ್ಲಿ ಏನು ಬರೆದಿದೆಯೋ ನೋಡೋಣ."

ವಸಂತಪುರವನ್ನು ತಲುಪಿದ ಮೇಲೆ ಬಾಗ್ದಿಯ ಸೋದರತ್ತೆ ಅವನನ್ನು ಚೆನ್ನಾಗಿ ನೋಡಿಕೊಂಡಳು. ಬಾಗ್ದಿಗೆ ಹಸು ದೊರೆಯಿತು. ಬಾಲಕ ಶರತ್‌ಗೆ ಬಿದುರಿನ ಒಳ್ಳೆಯ ಸೆಳೆಗಳು ದೊರೆತುವು. ಸೋದರತ್ತೆ ಹಣವನ್ನೂ ಹಿಂದಿರುಗಿಸಿದಳು. ಹಿಂದಿರುಗುವ ಹೊತ್ತಿಗೆ ಸೂರ್ಯ ಮುಳುಗಿದ್ದ. ಎರಡು ಹರದಾರಿಯಷ್ಟೂ ದೂರ ನಡೆದಿರಲಿಲ್ಲ. ಆಗಲೇ ಚಂದ್ರಮೂಡಿ ಬಂದ. ದಾರಿಯಲ್ಲಿ ಇಕ್ಕೆಲಗಳಲ್ಲಿಯೂ ಅರಳಿಯ ಮತ್ತು ಆಲದ ಮರಗಳಿದ್ದುವು. ಅವು ಮೇಲೇರಿದಂತೆ ಪರಸ್ಪರ ಎಷ್ಟು ಚೆನ್ನಾಗಿ ಹೆಣೆದುಕೊಂಡಿದ್ದುವೆಂದರೆ ರಸ್ತೆಯಲ್ಲಿ ನಿಬಿಡವಾದ ಕತ್ತಲು ಕವಿದುಕೊಂಡಿತ್ತು. ಅವರು ಕಚ್ಚಾ ರಸ್ತೆಯನ್ನು ತಲುಪಿದಾಗ ಪೊದೆಗಳು ಹಾಗೂ ಮೆಳೆಗಳಿಂದ ಕೂಡಿದ್ದ ಆ ಕಾಡು ಮತ್ತಷ್ಟು ನಿಬಿಡವಾಗಿ ಪರಿಣಮಿಸಿತ್ತು. ಈ ಕಾಡಿನಲ್ಲಿಯೇ ದರೋಡೆಕಾರರು ಅಡಗಿಕೊಂಡಿದ್ದು ಮನುಷ್ಯರನ್ನು ಸದೆಬಡಿದು ಹೂತುಹಾಕಿಬಿಡುತ್ತಿದ್ದರು. ಪೊಲೀಸರು ಅತ್ತ ಮುಖವನ್ನೂ ಹಾಕುತ್ತಿರಲಿಲ್ಲ. ಹಳ್ಳಿಯವರೂ ದೂರುಕೊಡಲು ಹೋಗುತ್ತಿರಲಿಲ್ಲ. ಏಕೆಂದರೆ ಪೊಲೀಸರ ಬಳಿಗೆ ಹೋಗುವುದೆಂದರೆ ಕಷ್ಟಕ್ಕೆ ಆಹ್ವಾನ ನೀಡಿದಂತೆಯೇ ಎಂಬ ಪಾಠವನ್ನೂ ಅವರು ಕಲಿತಿದ್ದರು. ಹುಲಿಯ ಕೈಗೆ ಸಿಕ್ಕರೂ ಅದೃಷ್ಟವಶಾತ್ ಪ್ರಾಣ ಉಳಿಯಬಹುದು. ಆದರೆ ಪೊಲೀಸರ ಬೆನ್ನಿಗೆ ಬಿದ್ದರೆ ಅದೂ ಉಳಿಯುವುದಿಲ್ಲ ಎಂಬುದು ಅವರಿಗೆ ಗೊತ್ತಿತ್ತು. ಈ ಎಡೆಯನ್ನು ತಲುಪಿದ ಮೇಲೆ, ಇದ್ದಕ್ಕಿದ್ದಂತೆ ಸ್ವಲ್ಪ ದೂರದಲ್ಲಿ ಚೀತ್ಕಾರ ಹಾಗೂ ಲಾಠಿಗಳ ಸುರಿಮಳೆಯ ಸದ್ದು ಕೇಳಿ ಬಂತು. ಆಮೇಲೆ ನಿಶ್ಶಬ್ದತೆ ಆವರಿಸಿಕೊಂಡಿತು. "ಬಡಪಾಯಿಯ ಕಥೆ ಮುಗಿದುಹೋಯಿತು. ಈಗ ಇನ್ನಷ್ಟು ಎಚ್ಚರಿಕೆಯಿಂದ ನಾವು ಮುನ್ನಡೆಯಬೇಕು" ಎಂದು ಬಾಗ್ದಿ ಹೇಳಿದ.

ಬಾಲಕ ಶರತ್ ಭಯದಿಂದ ನಡುಗತೊಡಗಿದ. ಉಸಿರಾಡುವುದೂ ಅವನಿಗೆ ಕಷ್ಟವಾಯಿತು. ಧೂಳು-ಗಾಳಿಯಿಂದಾಗಿ ಏನೂ ಕಾಣಸುತ್ತಿರಲಿಲ್ಲ. ಅಷ್ಟರಲ್ಲಿಯೇ ಇದ್ದಕ್ಕಿದ್ದಂತೆ ಯಾರೋ ಓಡಿದ ಸದ್ದು ಕೇಳಿಸಿತು. ನಯನ ಬಾಗ್ದಿ ಕೂಗಿ ಹೇಳಿದ: "ಎಚ್ಚರಿಕೆ. ಜ್ಞಾಪಕ ಇರಲಿ. ಬ್ರಾಹ್ಮಣ ಪುತ್ರ ನನ್ನೊಂದಿಗೆ ಇದ್ದಾನೆ. ಯಾರಾದರೂ ಬಡಿಗೆ ಬೀಸಿದರೆ ನಿಮ್ಮಲ್ಲಿ ಒಬ್ಬನನ್ನೂ ಜೀವಂತವಾಗಿ ಬಿಡುವುದಿಲ್ಲ."

ಎಲ್ಲಿಂದಲೂ ಯಾವ ಉತ್ತರವೂ ದೊರೆಯಲಿಲ್ಲ. ಸ್ವಲ್ಪ ಮುಂದೆ ಹೋಗಿ, ತಾವು ಚೀತ್ಕಾರವನ್ನು ಕೇಳಿದ್ದ ಆ ವ್ಯಕ್ತಿ ಯಾರೆಂಬುದನ್ನು ನೋಡಿದರು. ಬಡಪಾಯಿ ಯಾವನೋ ಒಬ್ಬ ಜೋಗಿಯಾಗಿದ್ದ. ಏಕನಾದ ವಾದ್ಯವನ್ನು ನುಡಿಸಿ ಭಿಕ್ಷೆ ಬೇಡುತ್ತಿದ್ದ. ನಯನ ಬಾಗ್ದಿಗೆ ಇದನ್ನು ಸಹಿಸಲು ಸಾಧ್ಯವಾಗಲಿಲ್ಲ. ಕೋಪಗೊಂಡು ಹೇಳಿದ: "ಏ ನರಕದ ಹುಳುಗಳೇ, ವ್ಯರ್ಥವಾಗಿ ನೀವು ಒಬ್ಬ ವೈಷ್ಣವ ಜೋಗಿಯ ಪ್ರಾಣವನ್ನು ತೆಗೆದಿದ್ದೀರಿ. ನಿಮ್ಮನ್ನೂ ಇದೇ ರೀತಿ ಕೊಂದು ಹಾಕಬೇಕೆಂದೆನ್ನಿಸುತ್ತಿದೆ."

ಈ ಸಲ ಮರದ ಮರೆಯಿಂದ ಯಾರೋ ಒಬ್ಬ ಉತ್ತರ ಕೊಟ್ಟ: "ಧರ್ಮ-ಕರ್ಮಗಳ ಮಾತು ಹಾಗಿರಲಿ. ಜೀವ ಉಳಿಸಿಕೊಳ್ಳಬೇಕೆಂದಿದ್ದರೆ ಇಲ್ಲಿಂದ ಓಡು."

"ಹಾದರಕ್ಕೆ ಹುಟ್ಟಿದವರೇ, ಹೇಡಿಗಳೆ, ನಾನು ಓಡುತ್ತೇನೆಯೆ, ನಿಮಗೆ ಹೆದರಿಕೊಂಡು!"

ಹೀಗೆಂದು ಹೇಳಿ, ಕಚ್ಚೆಯ ಮಡಿಕೆಯಿಂದ ರೂಪಾಯಿಗಳನ್ನು ತೆಗೆದು, ಅವುಗಳನ್ನು ಠಣಠಣ ಎಂದು ಸದ್ದುಮಾಡುತ್ತ ಹೇಳಿದ: "ನೋಡಿ, ನನ್ನ ಬಳಿ ರೂಪಾಯಿಗಳಿವೆ. ಧೈರ್ಯ ಇದ್ದರೆ ಹತ್ತಿರ ಬಂದು ಅವುಗಳನ್ನು ತೆಗೆದುಕೊಂಡು ಹೋಗಿ. ನಾನು ನಯನ ಬಾಗ್ದಿ."

ಯಾರೂ ಉತ್ತರ ಕೊಡಲಿಲ್ಲ. ಬಾಯಿ ತುಂಬ ಅವರನ್ನು ಬಯ್ದು ಅವನು ಮತ್ತೆ ಹೇಳಿದ: "ಯಾಕ್ರೋ, ಬರುತ್ತೀರೋ, ನಾನು ಮನೆಗೆ ಹೋಗಲೋ ?"

ಆಗಲೂ ಯಾವ ಉತ್ತರವೂ ಬರಲಿಲ್ಲ. ದಾರಿಯಲ್ಲಿ ಒಂದೆರಡು ಬಡಿಗೆಗಳು ಬಿದ್ದಿದ್ದುವು. ನಯನ್ ಬಾಗ್ದೀ ಅವುಗಳನ್ನೆತ್ತಿಕೊಂಡ. ಸ್ವಲ್ಪ ದೂರ ಅವನು ಹೋಗಿಯೂ ಹೋದ, ಆದರೆ ಮತ್ತೆ ಹೇಳಿದ "ಇಲ್ಲ ತಮ್ಮ, ವೈಷ್ಣವನ ಹತ್ಯೆ ಆಗಿರುವುದನ್ನು ನೋಡಿಯೂ ಆ ಹಂತಕರಿಗೆ ಶಿಕ್ಷೆ ನೀಡದೆ ಮುಂದೆ ಹೋಗಲು ನನ್ನಿಂದ ಆಗುವುದಿಲ್ಲ."

ಬಾಲಕ ಶರತ್ ಕೇಳಿದ: "ಏನು ಮಾಡುತ್ತೀಯೆ ?"

ಅವನು ಹೇಳಿದ: "ಅಲ್ಲ ಒಬ್ಬ ಪಾಪಿಯನ್ನೂ ನಾನು ಹಿಡಿಯಲಾರೆನೆ ? ಆಗ ನಾವಿಬ್ಬರೂ ಸೇರಿ ದೊಣ್ಣೆಯಿಂದ ಬಡಿದು ಬಡಿದು ಅವನನ್ನು ಸಾಯಿಸೋಣ."

ಬಡಿದು ಸಾಯಿಸುವ ಕಲ್ಪನೆಯಿಂದ ಸಂತೋಷಗೊಂಡ ಬಾಲಕ ತುಂಬ ಪ್ರಸನ್ನಚಿತ್ತನಾದ. "ನಯನ್, ನೀನು ಅವನನ್ನು ಬಲವಾಗಿ ಹಿಡಿದುಕೊಂಡಿರು. ನಾನೊಬ್ಬನೇ ಅವನನ್ನು ಬಡಿದು ಸಾಯಿಸಿ ಬಿಡುತ್ತೇನೆ. ಎಲ್ಲಿಯಾದರೂ ನನ್ನ ಬಿದಿರ ಸೆಳೆ ಮುರಿದುಹೋದರೆ ?"

ನಯನ್ ನಗುತ್ತ ಹೇಳಿದ: "ಬಿದಿರ ಸೆಳೆಯಿಂದ ಹೊಡೆದರೆ ಸಾಯುವುದಿಲ್ಲ ತಮ್ಮ, ಈ ಬಡಿಗೆ ತೆಗೆದುಕೊ."

ಒಂದು ಬಲವಾದ ಬಡಿಗೆಯನ್ನು ಅವನು ಶರತ್‌ನ ಕೈಗೆಕೊಟ್ಟ. ಅಷ್ಟು ಹೊತ್ತಿಗೆ ಇವರು ಹೊರಟುಹೋಗಿರಬೇಕೆಂದು ದರೋಡೆಕಾರರು ಭಾವಿಸಿದ್ದರು. ಆದ್ದರಿಂದ ಆ ಜೋಗಿಯನ್ನು ಶೋಧಿಸಿ ನೋಡಲು ಅವರು ಅಲ್ಲಿಗೆ ಬಂದರು. ನಯನ್ ಮರದ ಮರೆಯಲ್ಲಿ ನಿಂತುಕೊಂಡ. ದರೋಡಕೋರರಲ್ಲಿ ಒಬ್ಬ ಅವನನ್ನು ನೋಡಿಬಿಟ್ಟ. ಅವನು ಕೂಗಿ ಹೇಳಿದ: "ಯಾರದು, ಅಲ್ಲಿ ನಿಂತಿರುವುದು ?"

ಅವನ ಕೂಗನ್ನು ಕೇಳಿ ಎಲ್ಲರೂ ಓಡಿಹೋದರು. ಆದರೆ ಅವನು ಮಾತ್ರ ಸಿಕ್ಕಿಬಿದ್ದ. ನಯನ್ ಅವನನ್ನು ಕಟ್ಟಿಹಾಕಿ ಬಾಲಕನ ಬಳಿಗೆ ಎಳೆದುಕೊಂಡು ಬಂದ. ಅವನು ಒಂದೇ ಸಮನೆ ಅಳುತ್ತಿದ್ದ. ಮುಖಕ್ಕೆ ಅವನು ಕಪ್ಪು ಬಣ್ಣವನ್ನು ಬಳಿದು ಕೊಂಡಿದ್ದ. ನಡುನಡುವೆ ಸುಣ್ಣದ ಬೊಟ್ಟುಗಳನ್ನು ಇಟ್ಟುಕೊಂಡಿದ್ದ. ನಯನ್ ಅವನನ್ನು ರಸ್ತೆಯ ಮೇಲೆ ಮಲಗಿಸಿ ಬಲವಾಗಿ ನಾಲ್ಕು ಒದೆತಗಳನ್ನು ಒದ್ದ. ಆಮೇಲೆ ಶರತ್‌ಗೆ ಹೇಳಿದ: "ಈಗ ಸರಿಯಾಗಿ ನೋಡಿ ಬಡಿಗೆಯಿಂದ ಬಾರಿಸು."

ಬಾಲಕನ ಕೈ-ಕಾಲುಗಳು ನಡುಗುತ್ತಿದ್ದುವು. ಬಿಳಿಚಿಕೊಂಡು ಅವನು ಹೇಳಿದ: "ಈ ಕೆಲಸ ನನ್ನಿಂದ ಆಗುವುದಿಲ್ಲ."

ನಯನ್ ಹೇಳಿದ: "ನಿನ್ನಿಂದ ಆಗುವುದಿಲ್ಲವೆ ? ಸರಿ, ನಾನೇ ಇವನ ಕಥೆ ಮುಗಿಸಿ ಬಿಡುತ್ತೇನೆ."

ಕೋರಿಕೆಯ ಧ್ವನಿಯಲ್ಲಿ ಶರತ್ ಹೇಳಿದ: 'ಬೇಡ, ಬೇಡ ನಯನ್. ಅವನನ್ನು ಕೊಲ್ಲಬೇಡ."

ಎರಡುಮೂರು ದಿನಗಳಿಂದ ಅನ್ನದ ಮುಖವನ್ನೂ ಕಾಣದಿದ್ದ ಆ ಮನುಷ್ಯ ಆ ಹೊತ್ತಿಗೆ ಸತ್ತು ಹೋದವನಂತೆಯೇ ನೆಲದ ಮೇಲೆ ಮಲಗಿದ್ದ. ನಯನ್ ಬಗ್ಗಿ ಅವನ ಮೂಗಿನ ಬಳಿ ಕೈಯಿಟ್ಟು ನೋಡಿ ಹೇಳಿದ: "ಇಲ್ಲ, ಸತ್ತಿಲ್ಲ, ಮೂರ್ಛೆ ಹೋಗಿದ್ದಾನೆ. ನಡಿ ತಮ್ಮ ನಾವೂ ಮನೆಗೆ ಹೋಗೋಣ."

## 6

ಮೂರು ವರ್ಷಗಳವರೆಗೆ ಭಾಗಲಪುರದಲ್ಲಿ ಅಜ್ಜನ ಮನೆಯಲ್ಲಿದ್ದ ಬಳಿಕ ಅವನು ಮತ್ತೆ ದೇವಾನಂದಪುರಕ್ಕೆ ಹಿಂದಿರುಗಬೇಕಾಯಿತು. ಮತ್ತೆ ಮತ್ತೆ ಸ್ಥಳ ಬದಲಾವಣೆ ಆಗುತ್ತಿದ್ದುದರಿಂದ ಓದು-ಬರೆಹಕ್ಕೆ ತುಂಬ ಅಡ್ಡಿಯುಂಟಾಗುತ್ತಿತ್ತು. ಅಲೆದಾಟವೂ ಹೆಚ್ಚುತ್ತಿತ್ತು. ಆದರೆ ಅನುಭವಗಳು ಕಡಿಮೆಯೇನೂ ಆಗುತ್ತಿರಲಿಲ್ಲ. ಭಾಗಲಪುರ ದಲ್ಲಿದ್ದಾಗ ಬಗೆಬಗೆಯಾದ ತುಂಟಾಟಗಳಲ್ಲಿ ತೊಡಗಿದ್ದರೂ, ಒಳ್ಳೆಯ ಹುಡುಗನಾಗುವ ಸಲುವಾಗಿ ಶರತ್ ಸದಾ ಪ್ರಯತ್ನಿಸುತ್ತಿದ್ದ. ಓದಿನಲ್ಲಿಯೂ ಅವನು ತುಂಬ ಚತುರನಾಗಿದ್ದ. ಗಂಗೂಲಿಪರಿವಾರದ ಕಠೋರ ಶಿಸ್ತಿಗೆ ವಿರುದ್ಧವಾಗಿ ಅವನ ಹೃದಯದಲ್ಲಿ ಕ್ರಾಂತಿಯ ಭಾವನೆ ಎಚ್ಚರಗೊಳ್ಳುತ್ತಿತ್ತು. ಆದರೆ ನಾನು ಯಾರಿಗೂ ಕಡಿಮೆಯಾಗುವುದಿಲ್ಲ ಎಂಬ ನಿರ್ಧಾರ ಅಥವಾ ಕಡಿಮೆಯಾಗಬಾರದು ಎಂಬ ಬಯಕೆಯೂ ಅವನಲ್ಲಿ ತುಂಬ ಪ್ರಬಲವಾಗಿಯೇ ಇತ್ತು. ಆದ್ದರಿಂದ ಅಂತಿಮವಾಗಿ ಒಳ್ಳೆಯ ಹುಡುಗನೆಂಬ ರೂಪದಲ್ಲಿಯೇ ಅವನ ಪರಿಗಣನೆ ಆಗುತ್ತಿತ್ತು. ಈ ಎಲ್ಲ ತುಂಟಾಟಗಳ ನಡುವೆಯೂ, ಏಕಾಂತದಲ್ಲಿ ಕುಳಿತು ಆತ್ಮಚಿಂತನೆಯಲ್ಲಿ ತೊಡಗುವುದು ಅವನಿಗೆ ಎಂದೂ ಪ್ರಿಯವಾಗಿತ್ತು. ಚಿಂತನೆಯ ಈ ಕ್ಷಣಗಳಲ್ಲಿ ಅನೇಕ ಕಥಾನಾಯಕರು ಅವನ ಮನದಲ್ಲಿ ಮೂಡಿದರು. ಬರೆಯುವ ಪ್ರಯತ್ನವನ್ನೂ ಅವನು ಮಾಡಿದ.

ಅವನು ಸುಂದರನಾಗಿಯೇನೂ ಇರಲಿಲ್ಲ. ಕಣ್ಣುಗಳನ್ನು ಬಿಟ್ಟರೆ ಬೇರಾವ ವಿಶೇಷತೆಯೂ ಅವನಲ್ಲಿ ಇರಲಿಲ್ಲ. ಆದರೆ, ಕಣ್ಣುಗಳ ಈ ಕಾಂತಿ ಎದುರಿಗೆ ಇರುವವರನ್ನೂ ಕಟ್ಟಿ ಹಾಕುತ್ತಿತ್ತು. ಬಣ್ಣ ಕಪ್ಪಿನ ಕಡೆಗೇ ಸರಿಯುತ್ತಿತ್ತು. ಶರೀರವೂ ತುಂಬ ರೋಗಿಷ್ಠವಾಗಿಯೇ ಇತ್ತು. ಆದರೆ ಜಿಂಕೆಯಂತೆ ಓಡುವಷ್ಟರ ಮಟ್ಟಿಗೆ ಅವನ ಕಾಲುಗಳು ಬಲವಾಗಿದ್ದುವು. ಬೆಕ್ಕಿನಂತೆ ಮರಗಳನ್ನೇರಿ ಬಿಡುತ್ತಿದ್ದ. ಬುದ್ಧಿಯೂ ತೀಕ್ಷ್ಣವಾಗಿತ್ತು. ಆದರೆ ಗೊತ್ತುಗುರಿಯಿಲ್ಲದ ಕಠೋರ ಶಿಸ್ತಿನಿಂದಾಗಿ ಅದು ಹೆಚ್ಚಾಗಿ ಬಳಕೆಗೆ ಬರುತ್ತಿದ್ದುದು ದಾರಿತಪ್ಪಿದಂಥ ವರ್ತನೆಗಳಲ್ಲಿಯೇ.

ದೇವಾನಂದಪುರಕ್ಕೆ ಹಿಂದಿರುಗಿದ ಮೇಲೆ ಈ ದಾರಿತಪ್ಪಿದಂಥ ವರ್ತನೆಗಳು ಮತ್ತಷ್ಟು ಹೆಚ್ಚಿದುವು. ಶಿಸ್ತು ಎಂಬುದೇನೂ ಇಲ್ಲಿ ಇರಲೇ ಇಲ್ಲ. ಹೇಗೋ ಹುಗಲೀ ಶಾಖೆಯ ಶಾಲೆಯಲ್ಲಿ ನಾಲ್ಕನೆಯ ತರಗತಿಗೆ ಸೇರಿಕೊಂಡಿದ್ದ.[1] ಪೂರ್ತಿ ಎರಡು

1. 1889 ಅಥವಾ 1890 ಈಗಿನ ಏಳನೆಯ ತರಗತಿ.

ಹರದಾರಿಗಳಷ್ಟು ದೂರ ನಡೆದು ಶಾಲೆಗೆ ಬರಬೇಕಾಗುತ್ತಿತ್ತು. ತೀರ ಕೆಟ್ಟ ರಸ್ತೆ ಬೇರೆ-ಬೇಸಿಗೆಯಲ್ಲಿ ಧೂಳೋ, ಧೂಳು; ಮಳೆಗಾಲದಲ್ಲಿ ಕೆಸರೋ ಕೆಸರು. ಬಡತನ ಎಷ್ಟಿತ್ತೆಂದರೆ ಸುಲಭವಾಗಿ ಶಾಲೆಯ ಶುಲ್ಕವನ್ನೂ ಹೊಂದಿಸಲು ಸಾಧ್ಯವಾಗುತ್ತಿರಲಿಲ್ಲ. ಒಡವೆಗಳನ್ನು ಮಾರಿ ಹಾಕಿದರೂ ಮನೆಯನ್ನು ಒತ್ತೆ ಇಟ್ಟರೂ ಆ ದಾರಿದ್ರ್ಯ ಮಾತ್ರ ನಾಮಾವಶೇಷವಾಗಲಿಲ್ಲ. ಹೊಟ್ಟೆ ಹೊರೆಯಲೇ ಬೇಕಾಗಿತ್ತಲ್ಲ! ಹೇಗೋ ಅವನು ಮೊದಲ ಶ್ರೇಣಿಯ[1]ವರೆಗೆ ಬಂದು ತಲುಪಿದ್ದ. ಆದರೆ ಈ ಹೊತ್ತಿಗಾಗಲೇ ತಂದೆಯ ಮೇಲೆ ಸಾಲದ ಹೊರೆ ಅತಿಯಾಗಿ ಕುಳಿತಿತ್ತು. ಅವರು ಶಾಲೆಯ ಶುಲ್ಕವನ್ನು ಕಟ್ಟಲು ವ್ಯವಸ್ಥೆ ಮಾಡಲಾರದೆ ಹೋದರು. ಶುಲ್ಕವನ್ನು ಕಟ್ಟದೆ ಶಾಲೆಗೆ ಹೋಗುವುದಾದರೂ ಹೇಗೆ ಸಾಧ್ಯ ? ಮೊದಮೊದಲು ಅವನು ಯಾರಾದರೊಬ್ಬ ಗೆಳೆಯನ ಮನೆಯಲ್ಲಿ ಒಂದು ಹಿಡಿಯಷ್ಟು ಅನ್ನ ತಿಂದು, ಶಾಲೆಯ ಹಾದಿಯಲ್ಲಿದ್ದ ಮರಗಳ ಬುಡದಲ್ಲಿ ತುಂಟಹುಡುಗರ ಸಹವಾಸದಲ್ಲಿ ದಿನಗಳೆಯುತ್ತಿದ್ದ. ಕ್ರಮೇಣ ಆ ಹುಡುಗರ ತಂಡದ ಮುಖಂಡನೂ ಆದ. ವಿದ್ಯೆ ಹಿಂದುಳಿಯಿತು; ಇಬ್ಬಾಯ ಚೂರಿ ಅವನ ಕೈಗೆ ಬಂದಿತು; ಅದನ್ನಿಟ್ಟುಕೊಂಡು ಹಗಲೂ-ರಾತ್ರಿ ಅವನು ಅಲೆದಾಡುತ್ತಿದ್ದ. ಆದರ ಭಯದಿಂದಾಗಿ ಅವನ ತಂಡದ ಸದಸ್ಯರ ಸಂಖ್ಯೆ ತೀವ್ರಗತಿಯಲ್ಲಿ ಹೆಚ್ಚುತ್ತ ನಡೆದಿತ್ತು.

ಬೇರೆಯವರಿಗೆ ಸೇರಿದ ತೋಟಗಳಲ್ಲಿ ಅವನು ಹೂ-ಹಣ್ಣುಗಳನ್ನು ಕದಿಯತೊಡಗಿದ್ದ. ಆದರೆ ಅವನು ಸ್ನೇಹಿತರಿಗೆ ಮತ್ತು ಬಡವರಿಗೆ ಹಂಚಿಬಿಡುತ್ತಿದ್ದ. ಬೇರೆಯವರ ಕೊಳಗಳಲ್ಲಿ ಮೀನು ಹಿಡಿಯುವ ಅವನ ಆ ಹಿಂದಿನ ಅಭ್ಯಾಸ ಈಗ ಮತ್ತಷ್ಟು ಬೆಳೆದಿತ್ತು. ಕೆಲವೇ ದಿನಗಳಲ್ಲಿ ನೆರೆಹೊರೆಯ ಜನರೆಲ್ಲ ಅವನಿಂದಾಗಿ ಬೇಸರಗೊಂಡರು. ಆದರೆ ಅವನನ್ನು ಹಿಡಿದು ದಂಡಿಸುವಷ್ಟು ಸಾಮರ್ಥ್ಯ ಅವರಲ್ಲಿ ಯಾರಲ್ಲಿಯೂ ಇರಲಿಲ್ಲ. ಇದಕ್ಕೆ ಕಾರಣವೇನೆಂದರೆ ಮೊದಲನೆಯದಾಗಿ ಅವನು ಹಣ್ಣು ಮತ್ತು ಮೀನುಗಳನ್ನು ಬಿಟ್ಟು ಬೇರಾವುದೇ ವಸ್ತುವಿಗೂ ಕೈಹಾಕುತ್ತಿರಲಿಲ್ಲ. ಎರಡನೆಯದಾಗಿ, ಅವನ ಈ ಲೂಟಿಯನ್ನು ಆಧರಿಸಿಯೇ ಅನೇಕ ಬಡವರು ಬದುಕುತ್ತಿದ್ದರು. ಹಳ್ಳಿಗಳಲ್ಲಂತೂ ಬಡವರ ಸಂಖ್ಯೆಯೇ ಹೆಚ್ಚಾಗಿರುತ್ತದೆ. ಇವರಲ್ಲಿಯೇ ಒಬ್ಬ ವ್ಯಕ್ತಿ ಬಹು ದಿನಗಳಿಂದ ಕಾಯಿಲೆ ಬಿದ್ದಿದ್ದ. ಆದರೆ ಬಡತನದಿಂದಾಗಿ ಚಿಕಿತ್ಸೆಗೆ ಸರಿಯಾದ ವ್ಯವಸ್ಥೆ ಮಾಡಿಕೊಳ್ಳುವುದು ಅವನಿಗೆ ಸಾಧ್ಯವಿರಲಿಲ್ಲ. ಕೊನೆಗೆ ಅವನು ಈ ತಂಡಕ್ಕೆ ಶರಣುಹೋಗಬೇಕಾಯಿತು. ಕೂಡಲೇ ಅವರು ಬಹುಸಂಖ್ಯೆಯಲ್ಲಿ ಮೀನುಗಳನ್ನು ಹಿಡಿದು ತಂದರು; ಅವುಗಳನ್ನು ಮಾರಿ ಆವನ ಚಿಕಿತ್ಸೆಗೆ ವ್ಯವಸ್ಥೆ ಮಾಡಲಾಯಿತು. ಉಪೇಕ್ಷಿತರೂ, ಆಶ್ರಯರಹಿತರೂ ಆದ ರೋಗಿಗಳಿಗೆ ಅವರು ಯಥಾಶಕ್ತಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಅನೇಕ ಕತ್ತಲ ರಾತ್ರಿಗಳಲ್ಲಿ ಕಂದೀಲನ್ನೂ ದೊಡ್ಡ ಲಾಠಿಯನ್ನೂ ಹಿಡಿದುಕೊಂಡು ಮೈಲಿಗಟ್ಟಲೆ ನಡೆದು ಅವರು ಪೇಟೆಯಿಂದ ಔಷಧಿಯನ್ನು ತಂದಿದ್ದರು. ವೈದ್ಯರನ್ನು ಕರೆದುಕೊಂಡು ಬಂದಿದ್ದರು. ಹೀಗಾಗಿ, ಅಲ್ಲಿ ಕೆಲವರು

---

1. ಈಗಿನ ಹತ್ತನೆಯ ತರಗತಿ.

ಇವರ ಬಗ್ಗೆ ಬೇಸರಗೊಂಡಿದ್ದರೂ ಬಹುಪಾಲು ಜನ ಮನಸ್ಸಿನಲ್ಲಿಯೇ ಇವರನ್ನು ಪ್ರೀತಿಸುತ್ತಲೂ ಇದ್ದರು.

ಶರತ್ ಕಳ್ಳನಾಗಿರಲಿಲ್ಲ. ಮನೆಯಲ್ಲಿ ಅಸಾಧ್ಯ ದಾರಿದ್ರ್ಯವಿದ್ದರೂ ತನಗಾಗಿ ಅವನು ಎಂದೂ ಚಿಂತಿಸಲಿಲ್ಲ. ವಾಸ್ತವವಾಗಿ ಅವನು ರಾಬಿನ್ ಹುಡ್‌ನಂತೆ ದುಸ್ಸಾಹಸಿಯೂ, ಪರೋಪಕಾರಿಯೂ ಆಗಿದ್ದ. ನಡುರಾತ್ರಿಯ ನಿಬಿಡ ಅಂಧಕಾರದಲ್ಲಿ ಮನುಷ್ಯರಿರಲಿ, ನಾಯಿಯೂ ಹೊರಬರಲು ಹೆದರುತ್ತಿದ್ದರೆ, ಅವನು ಸದ್ದಿಲ್ಲದೆ ಮೊದಲೇ ಗೊತ್ತುಪಡಿಸಿಕೊಂಡಿದ್ದ ತೋಟ ಅಥವಾ ಕೊಳಕ್ಕೆ ಹೋಗಿ ತನ್ನ ಕೆಲಸವನ್ನು ಮುಗಿಸಿಕೊಂಡು ಹಿಂದಿರುಗಿಬರುತ್ತಿದ್ದ. ಈ ಶುಭಕಾರ್ಯದಲ್ಲಿ ಅವನಿಗೆ ಅನೇಕ ಗೆಳೆಯರು ನೆರವಾಗುತ್ತಿದ್ದರು. ಆದರೆ, ಅವರಲ್ಲೆಲ್ಲ ಮುಖ್ಯನಾಗಿದ್ದವನು ಸದಾನಂದ.

ಸರೋವರದ ದಡದಲ್ಲಿದ್ದ ತೋಟದ ಹತ್ತಿರದಲ್ಲಿದ್ದ ಒಂದು ಎತ್ತರವಾದ ದಿಣ್ಣೆಯ ಮರೆಯಲ್ಲಿ ಆಳವಾದ ಹಳ್ಳವೊಂದಿತ್ತು. ಇದೇ ಅವರ ನೆಲೆಯಾಗಿತ್ತು. ಲೂಟಿ ಮಾಡಿದ ವಸ್ತುಗಳನ್ನೆಲ್ಲಾ ಅವರು ಇಲ್ಲಿಯೇ ಇಡುತ್ತಿದ್ದರು. ಹೊಗೆಸೊಪ್ಪು ಸೇದುವ ಸಲುವಾಗಿ ಬಳಸುವ ಉಪಕರಣವೂ ಇಲ್ಲಿಯೇ ಇತ್ತು. ಈ ತಂಡದ ಇರುಸು-ಮುರಿಸು ತುಂಬ ಹೆಚ್ಚಿದಾಗ, ಶರತ್‌ನೊಂದಿಗೆ ಇನ್ನೆಂದೂ ಸೇರಬಾರದೆಂದು ಸದಾನಂದನ ಪಾಲಕರು ಅವನಿಗೆ ಅಪ್ಪಣೆ ಮಾಡಿದರು. ಆದರೆ, ಬೆರೆಯುವ ಜೀವಿಗಳು ನಿಷೇಧವನ್ನೆಂದಾದರೂ ಲೆಕ್ಕಿಸುತ್ತವೆಯೆ? ಹಾವೂ ಸಾಯಬೇಕು, ದೊಣ್ಣೆಯೂ ಮುರಿಯಬಾರದು - ಇಂಥ ಒಂದು ಉಪಾಯವನ್ನು ಅವರು ಪತ್ತೆ ಹಚ್ಚಿದರು. ಸದಾನಂದನ ಮನೆಯ ಛಾವಣಿಗೆ ಅಂಟಿದಂತೆ ಒಂದು ದೊಡ್ಡ ಮರವಿತ್ತು. ಅದನ್ನು ಹತ್ತಿ ಶರತ್ ಛಾವಣಿಯನ್ನು ಸೇರುತ್ತಿದ್ದ. ಅಲ್ಲಿ ಇಬ್ಬರೂ ಮನತಣಿಯುವವರೆಗೂ ಚದುರಂಗದ ಆಟವನ್ನು ಆಡುತ್ತಿದ್ದರು. ಆಮೇಲೆ ರಾತ್ರಿಯ ಸಾಹಸಕ್ಕೆ ಹೊರಡುತ್ತಿದ್ದರು. ಎಲ್ಲ ಕೆಲಸವನ್ನೂ ಮುಗಿಸಿದ ಮೇಲೆ ಹುಡುಗರಿಬ್ಬರೂ ಸಭ್ಯ ಬಾಲಕರಂತೆ ತಮ್ಮ ತಮ್ಮ ಮನೆಗಳಿಗೆ ಹೋಗಿ ನಿದ್ರಿಸುತ್ತಿದ್ದರು. ಯಾವುದಾದರೂ ಒಂದು ಕೆಲಸ ಮಾಡಿಬಿಡಬೇಕೆಂಬ ಇಚ್ಛೆ ಯಾವಾಗಲಾದರೂ ಅವನ ಮನಸ್ಸಿನಲ್ಲಿ ಪ್ರಬಲವಾಗಿ ಮೂಡಿತೆಂದರೆ ಆಗ ಅವನ ಶಾರೀರಿಕ ಮತ್ತು ಮಾನಸಿಕ ಶಕ್ತಿಗಳು ಹೇಗೆ ಪುಟಿದೇಳುತ್ತಿದ್ದುವೆಂಬುದು ಆಶ್ಚರ್ಯವನ್ನುಂಟುಮಾಡುತ್ತಿತ್ತು.

ನಡುನಡುವೆ ಬೆಸ್ತರ ದೋಣಿಯನ್ನು ತೆಗೆದುಕೊಂಡು ಒಮ್ಮೊಮ್ಮೆ ಒಂಟಿಯಾಗಿ, ಒಮ್ಮೊಮ್ಮೆ ತನ್ನ ಗೆಳೆಯರ ಜೊತೆಯಲ್ಲಿ ಕೃಷ್ಣಪುರದಲ್ಲಿನ ರಘುನಾಥ ದಾಸ ಗೋಸ್ವಾಮಿಯವರ ಮಂಡಲಿಯಲ್ಲಿ ಭಾಗವಹಿಸುವುದನ್ನು ಅವನು ಮರೆತಿರಲಿಲ್ಲ. ಇಲ್ಲಿಯೇ ಎಲ್ಲಿಯೋ ಗೌಹರ್ ಎಂಬ ಅವನ ಗೆಳೆಯ ವಾಸಿಸುತ್ತಿದ್ದ. 'ಶ್ರೀಕಾಂತ'ದ ನಾಲ್ಕನೆಯ ಭಾಗದ ಆ ಅರೆಹುಚ್ಚ ಕವಿ ಕೀರ್ತನೆಯನ್ನೂ ಮಾಡುತ್ತಿದ್ದ. ಅಲ್ಲಿದ್ದ ಯಾವಳಾದರೂ ಒಬ್ಬ ವೈಷ್ಣವಿಗೆ ಕಮಲಲತಾ ಎಂಬ ಹೆಸರಿತ್ತೋ ಏನೋ ತಿಳಿಯದು. ಆದರೆ, ಕಿಶೋರ ಜೀವನದ ಈ ಚಿತ್ರಗಳು ಅವನ ಹೃದಯದಲ್ಲಿ ಶಾಶ್ವತ ರೂಪದಲ್ಲಿ ಅಂಕಿತಗೊಂಡುವು ಹಾಗೂ ಮುಂದೆ ಸಾಹಿತ್ಯಸೃಷ್ಟಿಗೆ ಆಧಾರವಾಗಿ

ಪರಿಣಮಿಸಿದುವು ಎಂಬುದಂತೂ ನಿಜ. ಇಂಥ ಎಷ್ಟು ಚಿತ್ರಗಳನ್ನು ಅವನು ತನ್ನ ಪುಸ್ತಕಗಳಲ್ಲಿ ಚಿತ್ರಿಸಿದ್ದಾನೋ ತಿಳಿಯದು.

'ಶ್ರೀಕಾಂತ'ದ ನಾಲ್ಕನೆಯ ಭಾಗದಲ್ಲಿ ಕಥಾಶಿಲ್ಪಿ ಶರತ್‌ಚಂದ್ರ ಚಟ್ಟೋಪಾಧ್ಯಾಯ ಹೀಗೆ ಬರೆದಿದ್ದಾರೆ: "ನೇರವಾದ ರಸ್ತೆಯನ್ನು ಬಿಟ್ಟು, ಕಾಡು-ಮೇಡುಗಳಲ್ಲಿ ಈ ಹಾದಿ ಆ ಹಾದಿಗಳಲ್ಲಿ ಅಲೆದಾಡುತ್ತ, ನಿಲ್ದಾಣಕ್ಕೆ ಹೋಗುತ್ತಿದ್ದೆ - ಪಾಠಶಾಲೆಗೆ ಹೋಗಿಬರುವಾಗ ಹೇಗೆ ಮಾಡುತ್ತಿದ್ದೆನೋ ಬಹುಮಟ್ಟಿಗೆ ಹಾಗೆಯೇ ಈಗಲೂ ಮಾಡುತ್ತಿದ್ದೆ. ನಡೆಯುತ್ತಿದ್ದಂತೆ ಒಮ್ಮೆಲೇ ಹೀಗನಿಸಿತು: ಈ ರಸ್ತೆಗಳೆಲ್ಲ ಚಿರಪರಿಚಿತವಾದುವೇ - ಎಷ್ಟೋ ದಿನಗಳವರೆಗೆ, ಅದೆಷ್ಟೋ ಬಾರಿ ಈ ರಸ್ತೆಗಳಲ್ಲಿ ಹೋಗಿ ಬಂದು ಮಾಡಿದ್ದೇನೋ ಎಂದು ತೋರುತ್ತಿತ್ತು. ಮೊದಲು ಅವು ದೊಡ್ಡವಾಗಿದ್ದುವು. ಆದರೆ ಈಗೇಕೋ ಕಿರಿದೂ, ಸಂಕೀರ್ಣವೂ ಆಗಿಬಿಟ್ಟಿದೆ. ಅರೆ, ಇದೇನು, ಇದು ಖಾನ್‌ಗಳ ಕುಟುಂಬದ ಕೊಲೆಗಡುಕ ತೋಟ. ಅರೆ, ಅದೇ ಹೌದು. 'ಇದೋ ನಾನು ನನ್ನದೇ ಆದ ಹಳ್ಳಿಯ ದಕ್ಷಿಣ ದಿಕ್ಕಿನ ಮೊಹಲ್ಲಾದ ಅಂಚಿನಲ್ಲಿಯೇ ಹೋಗುತ್ತಿದ್ದೇನೆ' ಹೊಟ್ಟೆನೋವಿನ ಕಾಟದಿಂದಾಗಿ ಅವನು ಯಾವಾಗ ಈ ಹುಣಸೆಮರದ ಮೇಲಿನ ಕೊಂಬೆಗೆ ಹಗ್ಗವನ್ನು ಹಾಕಿ ಆತ್ಮಹತ್ಯೆ ಮಾಡಿಕೊಂಡಿದ್ದನೋ ತಿಳಿಯದು. ನಿಜವೋ ಸುಳ್ಳೋ ತಿಳಿಯದು. ಬಹುಶಃ ಹಾಗೂ ಎಲ್ಲ ಹಳ್ಳಿಗಳಲ್ಲಿರುವಂತೆ ಇಲ್ಲಿಯೂ ಇದು ಜನ ಶ್ರುತಿ ಅಥವಾ ಹೇಳಿ-ಕೇಳಿದ ಸಂಗತಿಯಾಗಿದ್ದಿರಬಹುದು. ಮರ ರಸ್ತೆಯ ಅಂಚಿನಲ್ಲಿದೆ. ಬಾಲ್ಯದಲ್ಲಿ ಇದು ಕಣ್ಣಿಗೆ ಬಿದ್ದೊಡನೆಯೇ ಮೈಯಲ್ಲಿ ಮುಳ್ಳುಗಳೇಳುತ್ತಿದ್ದುವು. ಕಣ್ಣುಮುಚ್ಚಿಕೊಂಡು ಒಂದೇ ಓಟದಲ್ಲಿ ಈ ಸ್ಥಳವನ್ನು ದಾಟಿ ಮುಂದೆ ಹೋಗಬೇಕಾಗಿ ಬರುತ್ತಿತ್ತು.

"ಮರ ಹಾಗೆಯೇ ಇದೆ. ಈ ಕೊಲೆಗಡುಕ ಮರದ ಕಾಂಡ ಬೆಟ್ಟದಂತಿದೆಯೆಂದೂ ತುದಿ ಆಕಾಶಕ್ಕೆ ಹೋಗಿ ತಾಗಿದೆಯೆಂದೂ ಆಗ ಅನ್ನಿಸುತ್ತಿತ್ತು. ಆದರೆ, ಇಂದು ಅದನ್ನು ನೋಡಿದರೆ ಆ ಬಡಪಾಯಿ ಮರದಲ್ಲಿ ಹೆಮ್ಮೆಪಡುವಂಥದ್ದೇನೂ ಇರಲಿಲ್ಲ. ಇತರ ಹುಣಿಸೆಮರಗಳು ಹೇಗಿರುತ್ತವೆಯೋ ಹಾಗೆಯೇ ಇದೂ ಇದೆ. ಜನರ ಹಿತವಾದ ಗ್ರಾಮದ ಒಂದು ಕಡೆಯಲ್ಲಿ ಏಕಾಕಿಯಾಗಿ ನಿಶ್ಶಬ್ದವಾಗಿ ನಿಂತಿದೆ. ಬಾಲ್ಯದಲ್ಲಿ ಯಾವುದು ನನ್ನನ್ನು ಸಾಕಷ್ಟು ಹೆದರಿಸಿತ್ತೋ ಅದೇ ಇಂದು ಅನೇಕ ವರ್ಷಗಳ ಬಳಿಕ ಆದ ಈ ಮೊದಲ ಸಾಕ್ಷಾತ್ಕಾರದಲ್ಲಿ ಬಂಧುವಿನಂತೆ ಕಣ್ಣು ಮಿಟುಕಿಸಿ ಹಾಸ್ಯ ಮಾಡುತ್ತಿದೆ: 'ಓ ನನ್ನ ಬಂಧು, ಹೇಳು, ಹೇಗಿದ್ದೀಯೆ? ಭಯವಾಗುವುದಿಲ್ಲ ತಾನೆ?'

"ನಾನು ಹತ್ತಿರ ಹೋಗಿ ತುಂಬ ಸ್ನೇಹದಿಂದ ಅದರ ಮೈಮೇಲೆ ಕೈಯಾಡಿಸಿದೆ. ಮನಸ್ಸಿನಲ್ಲಿಯೇ ಹೇಳಿದೆ - ಚೆನ್ನಾಗಿದ್ದೇನೆ, ಸೋದರ, ಭಯ ಏಕಾದೀತು. ನೀನು ನನ್ನ ಬಾಲ್ಯದ ನೆರೆಯವನಲ್ಲವೆ?.... ನನಗೆ ಆತ್ಮೀಯನಲ್ಲವೆ?

"ಸಂಜೆಯ ಬೆಳಕು ಆರುತ್ತ ಬರುತ್ತಿತ್ತು. ಬೀಳ್ಕೊಳ್ಳುತ್ತ ನಾನು ಹೇಳಿದೆ - 'ಅದೃಷ್ಟ ಚೆನ್ನಾಗಿತ್ತು. ಆಕಸ್ಮಿಕವಾಗಿ ಭೇಟಿಯಾಯಿತು. ನಾನಿನ್ನು ಬರುತ್ತೇನೆ. ಬಂಧು'!"

ಇದು ಈ ದಿನಗಳ ಚಿತ್ರವೇ. 'ಮುನ್ಶಿಗಳ ಕುಟುಂಬದ ಕೊಲೆಗಡುಕ ತೋಟ'

ಇಲ್ಲಿ 'ಖಾನ್‌ಗಳ ಕುಟುಂಬದ ಕೊಲೆಗಡುಕ ತೋಟ'ವಾಗಿದೆ ಅಷ್ಟೆ. ಈ ಪಂಕ್ತಿಗಳನ್ನು ಬರೆಯುವಾಗ ಅವನ ಬಾಲ್ಯವೇ ಜೀವಂತವಾಗಿ ಅವನ ಕಣ್ಣುಗಳ ಮುಂದೆ ಕಾಣಿಸಿಕೊಂಡಿರಬೇಕು.

ಕಥೆ ಕಟ್ಟಿ ಹೇಳುವ ಅವನ ಹುಟ್ಟಿನಿಂದ ಬಂದ ಪ್ರತಿಭೆಯೂ ಈಗ ಚೆನ್ನಾಗಿ ಚಿಗುರೊಡೆಯ ತೊಡಗಿತ್ತು. ಹದಿನೈದನೆಯ ವರ್ಷದ ಹೊತ್ತಿಗಾಗಲೇ ಅವನು ಈ ಕಲೆಯಲ್ಲಿ ಪಾರಂಗತನಾಗಿದ್ದ. ಅವನ ಖ್ಯಾತಿ ಊರಿನಲ್ಲೆಲ್ಲ ಹರಡಿತ್ತು. ಬಹುಶಃ ಈ ಕಾರಣದಿಂದಾಗಿಯೇ ಸ್ಥಳೀಯ ಜಮೀನುದಾರರಾಗಿದ್ದ ನವಗೋಪಾಲದತ್ತ ಮುನ್ಷಿಯವರು ಅವನನ್ನು ತುಂಬ ಪ್ರೀತಿಸುತ್ತಿದ್ದರು. ಆಗ ಇವರ ಮಗ ಅತುಲಚಂದ್ರ ಕಲ್ಕತ್ತೆಯಲ್ಲಿ ಎಂ.ಎ. ತರಗತಿಯಲ್ಲಿ ಓದುತ್ತಿದ್ದ. ಕಥೆ ಕಟ್ಟಿ ಹೇಳುವ ಶರತ್‌ನ ಈ ಕಲೆ ಅವನಿಗೂ ತುಂಬ ಮೆಚ್ಚಿಕೆಯಾಗಿತ್ತು. ಶರತ್‌ನನ್ನು ಅವನು ತಮ್ಮನಂತೆ ಪ್ರೀತಿಸುತ್ತಿದ್ದ. ಆಗಿಂದಾಗ್ಗೆ 'ಥಿಯೇಟರ್' (ಸಿನಿಮಾ) ತೋರಿಸುವ ಸಲುವಾಗಿ ಅವನು ಶರತ್‌ನನ್ನು ಕಲ್ಕತ್ತೆಗೆ ಕರೆದುಕೊಂಡು ಹೋಗುತ್ತಿದ್ದ ಹಾಗೂ "ನೀನು ಇಂಥ ಕಥೆಗಳನ್ನು ಬರೆದರೆ ಆಗ ನಾನು 'ಥಿಯೇಟರ್' ತೋರಿಸಲು ನಿನ್ನನ್ನು ಕರೆದುಕೊಂಡು ಹೋಗುತ್ತೇನೆ" ಎನ್ನುತ್ತಿದ್ದ.

ತೋರಿಸಿದ ಮೇಲೆ ಹೇಳುತ್ತಿದ್ದ: "ಸರಿ ನೀನು ಇದರ ಕಥೆಯನ್ನು ಬರೆಯಬಲ್ಲೆಯಾ ?"

ಶರತ್ ಎಷ್ಟು ಉತ್ಕೃಷ್ಟವಾದ ಕಥೆ ಬರೆಯುತ್ತಿದ್ದನೆಂದರೆ ಅತುಲ ಆಶ್ಚರ್ಯಚಕಿತನಾಗಿ ಬಿಡುತ್ತಿದ್ದ.

ಹೀಗೆ ಬರೆಯುತ್ತ ಬರೆಯುತ್ತ ಒಂದು ದಿನ ಅವನು ಸ್ವಂತ ಕಥೆಗಳನ್ನು ಬರೆಯತೊಡಗಿದ. ಎಂದು, ಎಷ್ಟು ಹೊತ್ತಿಗೆ ಎಲ್ಲಿ ಕುಳಿತು ಅವನು ಬರೆಯತೊಡಗಿದ ಎಂಬುದು ಯಾರಿಗೂ ತಿಳಿಯದು. ಆದರೆ ಆ ಕಥೆಗೆ ಅವನು ಕೊಟ್ಟಿದ್ದ ಹೆಸರು 'ಕಾಶೀನಾಥ' ಎಂಬುದು. ಕಾಶೀನಾಥ ಮತ್ತು ಶರತ್ ಒಬ್ಬನೇ ಗುರುವಿನ ಶಿಷ್ಯರಾಗಿದ್ದರು. ಅವನನ್ನೇ ನಾಯಕನನ್ನಾಗಿಸಿಕೊಂಡು ಅವನು ಕಥೆ ಬರೆಯಲು ಆರಂಭಿಸಿದ್ದ. ಆದರೆ ಅವನು ಹೆಸರಿಗೆ ಮಾತ್ರ ನಾಯಕನಾಗಿದ್ದ. ಕಾಶೀನಾಥನ ರೂಪವರ್ಣಗಳು ಬಹುಶಃ ಹಾಗೆಯೇ ಇದ್ದಿರಬಹುದು. ಆದರೆ ಮನೆ-ಅಳಿಯನ ಸ್ಥಿತಿ ಹೇಗಿರುತ್ತದೆಂಬುದನ್ನು ಅವನು, ತನ್ನ ತಂದೆ ಮಾವನ ಮನೆಯಲ್ಲಿದ್ದುದನ್ನು ನೋಡಿಯೇ ತಿಳಿದುಕೊಂಡಿದ್ದ. ಉಳಿದ ಕಥಾವಸ್ತುವಿಗೂ ಅವನು ನೋಡಿದ್ದ ಅಥವಾ ಕೇಳಿದ್ದ ಯಾವುದೋ ಘಟನೆ ಆಧಾರವಾಗಿದ್ದಿರಬಹುದು. ಆಗ ಅದೊಂದು ಸಣ್ಣಕಥೆಯಾಗಿತ್ತು. ಆಮೇಲೆ ಭಾಗಲಪುರದಲ್ಲಿ ಅವನು ಅದನ್ನು ಮತ್ತೆ ತಿದ್ದಿ ಬರೆದ. 'ಕಾಕಾಬಾಸಾ' ಮತ್ತು 'ಕೋರೇಲ್ ಗ್ರಾಮ' ಎಂಬ ಇನ್ನೆರಡೂ ಕಥೆಗಳೂ ಇದೇ ಕಾಲದಲ್ಲಿ[1] ಅವನ ತಲೆಯಲ್ಲಿ ಮೂಡಿದ್ದುವು. ಅವನು ಇನ್ನೂ ಕೆಲವು ಕಥೆಗಳನ್ನು ಬರೆದಿದ್ದಿರಬಹುದು. ಆದರೆ ಕಾಲನ ಕ್ರೂರದೃಷ್ಟಿಗೆ ಬೀಳದೆ ತಪ್ಪಿಸಿಕೊಂಡು ಉಳಿದು ಬಂದಿರುವುವು ಇವೇ ಕೆಲವು ಹೆಸರುಗಳು.

---

1 1893.

ಸೂಕ್ಷ್ಮ ಪರಿಶೀಲನೆಯ ಪ್ರವೃತ್ತಿ ಬಾಲ್ಯದಿಂದಲೂ ಅವನಲ್ಲಿತ್ತು. ಏನನ್ನೇ ನೋಡಿದರೂ ಆಳವಾಗಿ ಅದರ ಒಳಹೊಕ್ಕು ನೋಡುವ ಪ್ರಯತ್ನ ಮಾಡುತ್ತಿದ್ದ. ಈ ಅರಿವೇ ಅವನಿಗೆ ಪ್ರೇರಣೆಯಾಗಿ ಪರಿಣಮಿಸುತ್ತಿತ್ತು. ಹಳ್ಳಿಯಲ್ಲಿ ಬಾಲವಿಧವೆಯಾದ ಬ್ರಾಹ್ಮಣನ ಮಗಳೊಬ್ಬಳಿದ್ದಳು. ನೀರೂ ಎಂಬುದು ಅವಳ ಹೆಸರು. ಮೂವತ್ತೆರಡು ವರ್ಷ ವಯಸ್ಸಾಗುವವರೆಗೆ ಅವಳ ನಡತೆಗೆ ಯಾವ ಕಳಂಕವೂ ಅಂಟಿರಲಿಲ್ಲ. ಸುಶೀಲೆ, ಪರೋಪಕಾರಿಣಿ, ಧರ್ಮಶೀಲೆ ಹಾಗೂ ಸಂಪ್ರದಾಯಸ್ಥೆ ಎಂಬುದಾಗಿ ಅವಳು ಪ್ರಸಿದ್ಧಳಾಗಿದ್ದಳು. ರೋಗದಲ್ಲಿ ಸೇವೆ ಸಲ್ಲಿಸಲು, ದುಃಖ ಕಾಲದಲ್ಲಿ ಸಮಾಧಾನವನ್ನು ನೀಡಲು, ದಾರಿದ್ರ್ಯದಲ್ಲಿ ಸಹಾಯ ನೀಡಲು, ಅಗತ್ಯವಾದರೆ ಮನೆಗೆಲಸದವಳಂತೆ ದುಡಿಯಲೂ ಅವಳು ಹಿಂದೆಗೆಯುತ್ತಿರಲಿಲ್ಲ. ಅವಳಿಂದ ಒಂದಲ್ಲ ಒಂದು ರೂಪದಲ್ಲಿ ನೆರವನ್ನು ಪಡೆಯದೆ ಇದ್ದ ಒಂದೇ ಒಂದು ಮನೆಯೂ ಆ ಹಳ್ಳಿಯಲ್ಲಿ ಇರಲಿಲ್ಲ. ಶರತ್ ಅವಳನ್ನು 'ಅಕ್ಕ' ಎಂದು ಕರೆಯುತ್ತಿದ್ದ. ಅವಳೂ ಅವನನ್ನು ತುಂಬ ಪ್ರೀತಿಸುತ್ತಿದ್ದಳು. ಎಷ್ಟಾದರೂ ಇಬ್ಬರೂ ಪರದುಃಖಕಾತರರ ಜಾತಿಗೇ ಸೇರಿದ್ದವರಲ್ಲವೆ!

ಈ ಅಕ್ಕ ತನ್ನ ಮುವ್ವತ್ತೆರಡನೆ ವಯಸ್ಸಿನಲ್ಲಿ ಆಕಸ್ಮಿಕವಾಗಿ ಒಮ್ಮೆ ಕಾಲುಜಾರಿದಳು. ಹಳ್ಳಿಯ ಸ್ಟೇಷನ್ನಿನ ವಿದೇಶಿ 'ಮಾಸ್ಟರ'ನೊಬ್ಬ ಅವಳ ಬಾಳನ್ನು ಕಳಂಕಗೊಳಿಸಿ ಎಲ್ಲಿಗೋ ಓಡಿಹೋಗಿಬಿಟ್ಟ. ಆಗ ಆ ಹಳ್ಳಿಯವರು ಅವಳ ಆ ಎಲ್ಲ ಉಪಕಾರ, ಸೇವೆ-ಓಡಾಟ ಎಲ್ಲವನ್ನೂ ಮರೆತು ಬಿಟ್ಟರು. ಹೃದಯಹೀನರಾದ ಆ ಜನರು ಅವಳನ್ನು ಬಹಿಷ್ಕರಿಸಿದರು. ಅವಳೊಡನೆ ಮಾತುಕತೆ ಆಡುವುದನ್ನೂ ನಿಲ್ಲಿಸಿದರು. ಒಮ್ಮೆಗೇ ಆ ಬಡಪಾಯಿ ಅಸಹಾಯಕಳಾದಳು. ದಿನೇದಿನೇ ಆರೋಗ್ಯವೂ ಕೆಡತೊಡಗಿತು. ಅವಳು ಸಾವಿನ ಸನಿಹಕ್ಕೂ ಬಂದಿದ್ದಳು. ಈ ಸ್ಥಿತಿಯಲ್ಲಿಯೂ ಅವಳ ಬಾಯಿಗೆ ಒಂದು ಹನಿ ನೀರು ಹಾಕಲು ಯಾರೂ ಬರಲಿಲ್ಲ. ಅವಳೂ ಎಂದೂ ಅಲ್ಲಿ ಇರಲೇ ಇಲ್ಲವೇನೋ ಎಂಬಂತೆ ಒಬ್ಬರೂ ಅವಳ ಮನೆಯ ಬಾಗಿಲಿಗೆ ಬಂದು ಇಣುಕಿಯೂ ನೋಡಲಿಲ್ಲ.

ಅಲ್ಲಿಗೆ ಹೋಗಕೂಡದೆಂದು ಶರತ್‌ಗೂ ಆಜ್ಞೆ ಮಾಡಲಾಗಿತ್ತು. ಆದರೆ ಎಂದಾದರೂ ಅವನು ಯಾವುದೇ ಆಜ್ಞೆಯನ್ನಾದರೂ ಪರಿಪಾಲಿಸಿದ್ದಾನೆಯೆ? ರಾತ್ರಿಯ ಹೊತ್ತು ಯಾರಿಗೂ ಕಾಣದಂತೆ ಅವನು ಅವಳನ್ನು ನೋಡಲು ಹೋಗುತ್ತಿದ್ದ. ಅವಳ ಕೈ ಕಾಲುಗಳನ್ನು ಒತ್ತುತ್ತಿದ್ದ. ಎಲ್ಲಿಂದಲೋ ಒಂದೆರಡು ಹಣ್ಣುಗಳನ್ನು ತಂದು ಅವಳಿಗೆ ತಿನ್ನಿಸಿ ಬರುತ್ತಿದ್ದ. ತನ್ನ ಹಳ್ಳಿಯ ಜನರು ತನಗೆ ಈ ಬಗೆಯ ಪೈಶಾಚಿಕ ಶಿಕ್ಷೆಯನ್ನು ವಿಧಿಸಿದ್ದರೂ, ನೀರೂ ಎಂದೂ ಯಾರ ವಿರುದ್ಧವಾಗಿಯೂ ದೂರಿಯೂ ಇರಲಿಲ್ಲ. ತನ್ನ ನಾಚಿಕೆಗೇಡಿನ ಕೆಲಸದ ಬಗ್ಗೆ ಅವಳ ವ್ಯಥೆ ಮೇರೆಯರಿಯದಂತಿತ್ತು. ತಾನು ತಪ್ಪಿತಸ್ಥಳೆಂದು ಅವಳು ಒಪ್ಪಿಕೊಂಡಿದ್ದಳು ಹಾಗೂ ಆ ಶಿಕ್ಷೆಯನ್ನು ಅವಳು ನಗುನಗುತ್ತ ಅಂಗೀಕರಿಸಿದ್ದಳು. ಅವಳ ದೃಷ್ಟಿಯಲ್ಲಿ ಅದು ನ್ಯಾಯವೇ ಆಗಿತ್ತು.

ತನ್ನ ತಪ್ಪಿಗೆ ಅವಳು ತಾನೇ ಶಿಕ್ಷೆಯನ್ನು ವಿಧಿಸಿಕೊಂಡಿದ್ದಳೆಂಬುದನ್ನು ಚಿಂತಾತುರವಾಗಿದ್ದ ಶರತ್‌ನ ಮನಸ್ಸು ಅರ್ಥಮಾಡಿಕೊಂಡಿತ್ತು. ಹಳ್ಳಿಯ ಜನರು

ಆದಕ್ಕೆ ನೆಪ ಮಾತ್ರವಾಗಿದ್ದರು. ಅವಳು ಅವರನ್ನು ಕ್ಷಮಿಸಿ ಬಿಟ್ಟಿದ್ದಳು. ಆದರೆ ತನ್ನನ್ನು ಮಾತ್ರ ಕ್ಷಮಿಸಿಕೊಂಡಿರಲಿಲ್ಲ.

ಅವಳು ಸತ್ತಾಗ ಯಾರೂ ಅವಳ ಹೆಣವನ್ನೂ ಮುಟ್ಟಲಿಲ್ಲ. ಭಂಗಿಗಳು ಅವಳ ಹೆಣವನ್ನು ಕಾಡಿನಲ್ಲಿ ಎಸೆದುಬಂದರು. ನಾಯಿ-ನರಿಗಳು ಅದನ್ನು ಕಿತ್ತುತಿಂದುವು.

'ವಿಲಾಸಿ' ಕಥೆಯ ಕಾಯಸ್ಥ ಮೃತ್ಯುಂಜಯ ಹಾವಾಡಿಗನಾದುದನ್ನೂ ಅವನು ಇಲ್ಲಿಯೇ ನೋಡಿದ್ದ. ಅವನೂ ಇವನ ಶಾಲೆಯಲ್ಲಿಯೇ ಓದುತ್ತಿದ್ದ. ಆದರೆ ಮೂರನೆಯ ತರಗತಿಯಿಂದ ಮುಂದಕ್ಕೆ ಹೋಗಲು ಅವನಿಗೆ ಆಗಿರಲಿಲ್ಲ. ಚಿಕ್ಕಪ್ಪನೊಬ್ಬನನ್ನು ಬಿಟ್ಟರೆ ಅವನಿಗೆ ಬೇರೆ ಯಾರೂ ಇರಲಿಲ್ಲ. ಆದರೆ, ಈ ಚಿಕ್ಕಪ್ಪನೇ ಅವನಿಗೆ ಪರಮಶತ್ರುವಾಗಿದ್ದ. ಅವನ ದೊಡ್ಡ ತೋಟದ ಮೇಲೆ ಅವನು ಕಣ್ಣಿಟ್ಟಿದ್ದ. ಅವನು ಸತ್ತರೆ ಸಾಕು, ಪೀಡೆ ಕಳೆಯುತ್ತದೆ ಎಂದು ಅವನು ಭಾವಿಸಿದ್ದ. ಆದ್ದರಿಂದ, ಅವನು ರೋಗಕ್ಕೆ ತುತ್ತಾದರೂ ಅವನು ಎಲ್ಲಿದ್ದಾನೆಂದು ಕೂಡ ಅವನು ಕಣ್ಣೆತ್ತಿ ನೋಡಲಿಲ್ಲ. ಒಬ್ಬ ಜಾದೂಗಾರ ಹಾಗೂ ಅವನ ಮಗಳು ಅವನನ್ನು ಉಪಚರಿಸಿ ಕಾಪಾಡದಿದ್ದರೆ ಅವನು ಒದ್ದಾಡಿ ಒದ್ದಾಡಿ ಸತ್ತೇ ಹೋಗುತ್ತಿದ್ದ. 'ವಿಲಾಸಿ' ಎಂಬುದು ಈ ಹುಡುಗಿಯ ಹೆಸರು. ಈ ಸೇವೆ, ಉಪಚಾರಗಳ ಸಂದರ್ಭದಲ್ಲಿ ಆವಳು ಅವನಿಗೆ ತೀರಹತ್ತಿರದವಳಾಗಿ ಪರಿಣಮಿಸಿದಳು. ಅವರು ಎಷ್ಟು ಹತ್ತಿರ ಬಂದರೆಂದರೆ ಅವನು ಅವಳನ್ನು ಪತ್ನಿಯ ರೂಪದಲ್ಲಿಯೂ ಅಂಗೀಕರಿಸಿದ. ಆದರೆ ಸಮಾಜದ ಗುತ್ತಿಗೆದಾರರು ಇದನ್ನೆಲ್ಲ ಹೇಗೆ ಸಹಿಸಿಯಾರು ? ಅವರು ಮೃತ್ಯುಂಜಯನನ್ನು ಸಮಾಜದಿಂದ ಹೊರಹಾಕಿದರು. ಆದರೆ, ಮೃತ್ಯುಂಜಯನೇನೂ ಇದರ ಬಗ್ಗೆ ಚಿಂತಿಸಲಿಲ್ಲ. ಅವನನ್ನು ಅಪಮಾನಗೊಳಿಸಿದರು, ಹೊಡೆದು-ಬಡಿದು ಮಾಡಿದರು. ಆದರೆ ಅವನ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಲಿಲ್ಲ. ವಿಲಾಸಿಯನ್ನೂ ಮನೆಯಿಂದ ಹೊರಹಾಕಲಿಲ್ಲ. ಅವಳೊಡನೆ ಅವನು ದೂರದ ಕಾಡಿನಲ್ಲಿ ಹೋಗಿ ವಾಸ ಮಾಡಲಾರಂಭಿಸಿದ. ಅಲ್ಲಿಯೇ ಇದ್ದು, ಅವನು ಹಾವುಗಳನ್ನು ಹಿಡಿದು ಹೊಟ್ಟೆ ಹೊರೆಯತೊಡಗಿದ. ತಲೆಯ ಮೇಲೆ ಕಾವಿ ಬಣ್ಣದ ಮುಂಡಾಸು, ಉದ್ದುದ್ದನೆಯ ಕೂದಲು, ಮೀಸೆ, ಗಡ್ಡ, ಕೊರಳಿನಲ್ಲಿ ರುದ್ರಾಕ್ಷಿಯ ಮತ್ತು ಗಾಜಿನ ಮಣಿಗಳ ಮಾಲೆಗಳು - ಇವನನ್ನು ನೋಡಿ, ಇವನು ಕಾಯಸ್ಥ ಕುಲದ ಮೃತ್ಯುಂಜಯನೆಂದು ಯಾರಾದರೂ ಹೇಳಲು ಸಾಧ್ಯವಿತ್ತೇ ?

ಶರತ್ ಕದ್ದು ಕಾಣದಂತೆ ಅವನ ಬಳಿ ಹೋಗುತ್ತಿದ್ದ. ಹಾವು ಹಿಡಿಯುವುದು, ವಿಷ ಇಳಿಸುವ ಮಂತ್ರ ಇವನ್ನೆಲ್ಲ ಅವನು ಇವನಿಂದಲೇ ಕಲಿತ. ಒಂದು ದಿನ ಒಂದು ವಿಷಸರ್ಪವನ್ನು ಹಿಡಿಯುವಾಗ ಮೃತ್ಯುಂಜಯ ಎಚ್ಚರ ತಪ್ಪಿದ. ನಾಗರಹಾವು ಅವನನ್ನು ಕಚ್ಚಿತು. ಅವನನ್ನು ಉಳಿಸುವ ಎಲ್ಲ ಪ್ರಯತ್ನಗಳೂ ವ್ಯರ್ಥವಾದುವು. ಏಳು ದಿವಸಗಳವರೆಗೆ ಮೌನವಾಗಿದ್ದ ಬಳಿಕ ವಿಲಾಸಿ ಆತ್ಮಹತ್ಯೆ ಮಾಡಿಕೊಂಡಳು.

ಅನೇಕ ವರ್ಷಗಳ ಬಳಿಕ ಕಥಾಶಿಲ್ಪಿ ಶರತ್‌ಚಂದ್ರರು ಹೀಗೆ ಬರೆದರು: "ವಿಲಾಸಿಯನ್ನು ಯಾರು ಅಪಹಾಸ್ಯ ಮಾಡಿದ್ದರೋ ಅವರೆಲ್ಲ ಸಭ್ಯರೂ,

ಗೃಹಸ್ಥರೂ, ಸಾಧ್ವಿ ಗೃಹಿಣಿಯರೂ ಆಗಿದ್ದರೆಂಬುದನ್ನು ನಾನು ಬಲ್ಲೆ. ಅವರಿಗೆ ಅಕ್ಷಯಸ್ವರ್ಗ ಹಾಗೂ ಸತೀಲೋಕ ದೊರೆಯುತ್ತದೆಂಬುದೂ ನನಗೆ ಗೊತ್ತು. ಆದರೆ ಆ ಹಾವಾಡಿಗರ ಹುಡುಗಿ ಸಂಕಟಪಡುತ್ತಿದ್ದ ಹಾಗೂ ಹಾಸಿಗೆ ಹಿಡಿದಿದ್ದ ಆ ರೋಗಿಯನ್ನು ಕಣಕಣವಾಗಿ ಬದುಕಿಸಿದಳಲ್ಲ! ಆ ಅವಧಿಯಲ್ಲಿನ ಆಕೆಯ ಹಿರಿಮೆಯ ಒಂದು ಕಣವನ್ನೂ ಬಹುಶಃ ಇದುವರೆಗೆ ಅವರಲ್ಲಿ ಯಾರೂ ಕಣ್ಣಾರೆ ಕಂಡಿಲ್ಲ. ಮೃತ್ಯುಂಜಯ ತುಂಬ ತುಚ್ಛ ವ್ಯಕ್ತಿಯೇ ಆಗಿದ್ದಿರಬಹುದು. ಆದರೆ ಅವನ ಹೃದಯವನ್ನು ಗೆದ್ದು, ಅದರ ಮೇಲೆ ತನ್ನ ಆದಿಪತ್ಯವನ್ನು ಸ್ಥಾಪಿಸಿದ ಆ ಆನಂದವೇನೂ ತುಚ್ಛವಾದುದಾಗಿರಲಿಲ್ಲ. ಅವಳ ಆ ಸಂಪತ್ತು ಸಾಮಾನ್ಯವಾದುದಾಗಿರಲಿಲ್ಲ..... ಶಾಸ್ತ್ರಗಳ ಪ್ರಕಾರ ಅವಳು ಖಂಡಿತವಾಗಿಯೂ ನರಕಕ್ಕೇ ಹೋಗಿದ್ದಾಳೆ. ಅವಳು ಎಲ್ಲಿಗಾದರೂ ಹೋಗಿರಲಿ, ನಾನು 'ಹೋಗುವ' ಸಮಯ ಬಂದಾಗ ನಾನು ಇಷ್ಟಾದರೂ ಹೇಳಬಲ್ಲೆ - ಅಂತಹುದೇ ಯಾವುದಾದರೂ ಒಂದು ನರಕಕ್ಕೇ ಹೋಗುವ ಪ್ರಸ್ತಾಪ ಬಂದರೆ, ಅದರಿಂದ ನಾನು ಹಿಮ್ಮೆಟ್ಟುವುದಿಲ್ಲ."[1]

ಇಂಥ ದೃಶ್ಯಗಳಿಗೆ ಕೊನೆಯೇ ಇರಲಿಲ್ಲ. ಇವುಗಳನ್ನೆಲ್ಲ ನೋಡಿ ಅವನು ಯೋಚಿಸಿದ - ಮನುಷ್ಯನಲ್ಲಿ ಅಡಗಿರುವ ಆ ದೇವನಿಗೆ ಮನುಷ್ಯ ತನ್ನ ಕೈಯಾರೆ ಹೇಗೆ ಇಂಥ ತಿರಸ್ಕಾರವನ್ನೆಸಗುತ್ತಾನೆ? ಇಂಥ ಪ್ರಶ್ನೆಗಳೇ ಅವನ ಪರಿಶೀಲನ ಶಕ್ತಿಗೆ ತೀವ್ರತೆಯನ್ನು ತಂದುಕೊಟ್ಟುವು. ಸಂವೇದನೆಯನ್ನು ಸಮನಿಸಿದುವು. ಈ ಸಂವೇದನೆಯೇ ಅವನನ್ನು ಕತೆಗಾರನನ್ನಾಗಿಸಿತು.

ಇನ್ನೊಂದು ಮಾರ್ಗದಿಂದಲೂ ಅವನಿಗೆ ಕಥೆ ಬರೆಯಲು ಪ್ರೇರಣೆ ದೊರೆಯಿತು. ಯಾರಿಗೂ ಕಾಣದಂತೆ ಅವನು ತನ್ನ ತಂದೆಯ ಮುರಿದ ಬೀರುವನ್ನು ತೆರೆದು, 'ಹರಿದಾಸನ ಗುಪ್ತ ಮಾತುಗಳು' ಮತ್ತು 'ಭವಾನೀ ಪಾಠ'ದಂಥ ಪುಸ್ತಕಗಳನ್ನು ಎಂದೋ ಓದಿ ಮುಗಿಸಿದ್ದ. ಇವು ಶಾಲೆಯ ಪಠ್ಯಪುಸ್ತಕಗಳೇನೂ ಆಗಿರಲಿಲ್ಲ. ಇವೆಲ್ಲ 'ಕೆಟ್ಟ ಹುಡುಗರಿಗೆ ಯೋಗ್ಯವಾದ, ಓದಬಾರದ ಪುಸ್ತಕಗಳು' - ಹೀಗೆಂದೇ ಅವನಿಗೆ ಹೇಳಲಾಗಿತ್ತು. ಆದ್ದರಿಂದ ಕದ್ದೇ ಅವನ್ನು ಓದಬೇಕಾಗಿತ್ತು. ಅವನು ತಾನು ಮಾತ್ರವೇ ಅವನ್ನು ಓದುತ್ತಿರಲಿಲ್ಲ. ತನ್ನ ಗೆಳೆಯರಿಗೂ ಅವನ್ನು ಓದಿ ಹೇಳುತ್ತಿದ್ದ. ಆ ಬಳಿಕ ಮನಸ್ಸಿನಲ್ಲಿಯೇ ಹೊಸ ಕಥಾವಸ್ತುಗಳನ್ನು ಕಲ್ಪಿಸುತ್ತಿದ್ದ.

ಈ ಮುರಿದಿದ್ದ ಬೀರುವಿನಲ್ಲಿಯೇ ತನ್ನ ತಂದೆ ಬರೆದಿದ್ದ ಅಪೂರ್ಣ ಕಥೆಗಳನ್ನು ಹುಡುಕಿ ತೆಗೆದಿದ್ದ. ಅವನು ಕುತೂಹಲದಿಂದ ಓದಲು ಆರಂಭಿಸುತ್ತಿದ್ದ. ಆದರೆ ಕೊನೆಯವರೆಗೆ ತಲುಪುವ ಯಾವ ಮಾರ್ಗವನ್ನೂ ತಂದೆ ಅವುಗಳಲ್ಲಿ ಬಿಟ್ಟಿರಲಿಲ್ಲ. ಬೇಸರಗೊಂಡು ಅವನು ಹೇಳುತ್ತಿದ್ದ. "ಅಪ್ಪ, ಇದನ್ನೇಕೆ ನೀವು ಪೂರ್ಣ ಗೊಳಿಸುವುದಿಲ್ಲ? ಪೂರ್ಣಗೊಳಿಸಿದ್ದರೆ ಅದು ಹೇಗಾಗುತ್ತಿತ್ತು?"

ಆಗ ಅವನು ತನ್ನ ಮನಸ್ಸಿನಲ್ಲಿಯೇ ಅದರ ಅಂತ್ಯವನ್ನು ಕಲ್ಪಿಸಿಕೊಂಡ ಹಾಗೂ ಹೀಗೆ ಯೋಚಿಸಿದ: ನನಗೆ ಈ ಕತೆಯನ್ನು ಬರೆಯಲು ಸಾಧ್ಯವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು.

---

1 'ಶರತ್ ಸಾಹಿತ್ಯ' ಭಾಗ 5 ಪು. 121 ('ವಿಲಾಸಿ' ಕಥೆ)

ತಂದೆಯ ಈ ಅಪೂರ್ಣತೆಯೂ ಅವನಿಗೆ ಪ್ರೇರಕಶಕ್ತಿಯಾಗಿ ಪರಿಣಮಿಸಿತು.

ಅರಿವನ್ನು ಪಡೆದುಕೊಳ್ಳಲು ಆಗತ್ಯವಾದ ಮಾರ್ಗಗಳ ಕೊರತೆಯೇನೂ ಅವನಿಗೆ ಇರಲಿಲ್ಲ. ಮನೆಯಲ್ಲಿನ ಘೋರ ದಾರಿದ್ರ್ಯ ಮತ್ತೆ ಮತ್ತೆ ಮನೆಬಿಟ್ಟು ಓಡಿಹೋಗುವಂತೆ ಅವನನ್ನು ಪ್ರೇರಿಸುತ್ತಿತ್ತು. ಯಾತ್ರಾತಂಡಗಳ ಜೊತೆಯಲ್ಲಿ ಮಾತ್ರವಲ್ಲದೆ, ಆಗಿಂದಾಗ್ಗೆ ಅವನು ಅಕಾರಣವಾಗಿಯೇ ಮನೆಬಿಟ್ಟು ಹೊರಡುತ್ತಿದ್ದ. ಒಂದು ದಿವಸ ಸುವಿಖ್ಯಾತ ಸಾಲಿಸಿಟರ್ ಗಣೇಶಚಂದ್ರ ಅವರು ಎಲ್ಲಿಂದಲೋ ಕಲ್ಕತ್ತೆಗೆ ಹಿಂದಿರುಗುತ್ತಿದ್ದರು. ತಮ್ಮ ಬೋಗಿಯಲ್ಲಿ ಹದಿಮೂರು-ಹದಿನಾಲ್ಕು ವರ್ಷ ವಯಸ್ಸಿನ ಹುಡುಗನೊಬ್ಬ ಹತ್ತಿ ಬಂದಿದ್ದುದನ್ನು ಅವರು ಕಂಡರು. ಬಟ್ಟೆ-ಬರೆಗಳನ್ನು ನೋಡಿದರೆ ತುಂಬ ಬಡಕುಟುಂಬಕ್ಕೆ ಸೇರಿದವನಂತೆ ತೋರುತ್ತಿತ್ತು. ತುಂಬ ಪ್ರೀತಿಯಿಂದ ಅವರು ಅವನನ್ನು ಹತ್ತಿರಕ್ಕೆ ಕರೆದರು. ಅವನ ಜೊತೆಯಲ್ಲಿ ಮಾತನಾಡತೊಡಗಿದರು. ಆ ಹುಡುಗ ತಮ್ಮ ಗೆಳೆಯನೊಬ್ಬನ ಸಂಬಂಧಿಕನೆಂಬುದು ಗೊತ್ತಾಯಿತು. ಕ್ರಾಂತಿಕಾರಿಗಳಾಗಿದ್ದ ಬಿಪಿನ್ ಬಿಹಾರಿ ಗಂಗೂಲಿಯವರ ತಂದೆ ಅಕ್ಷಯನಾಥರೇ ಅವರ ಆ ಮಿತ್ರರಾಗಿದ್ದರು. ಅವರು ವಾವೆಯಲ್ಲಿ ಶರತ್‌ನ ತಾತನವರಾಗಿದ್ದರು. ಕಲ್ಕತ್ತೆಯನ್ನು ತಲುಪಿದ ಮೇಲೆ ಗಣೇಶ ಚಂದ್ರರು ಶರತ್‌ನನ್ನು ಅಕ್ಷಯ ಚಂದ್ರರ ಮನೆಗೆ ಕಳುಹಿಸಿದರು.

ದೇವಾನಂದಪುರದಲ್ಲಿದ್ದಾಗ ಮತ್ತೊಮ್ಮೆ ಅವನು ದೀರ್ಘಪ್ರಯಾಣವನ್ನು ಕೈಗೊಂಡ. ಈ ಬಾರಿ ಅವನು ಗುರಿಯಾಗಿ ಇರಿಸಿಕೊಂಡಿದ್ದುದು ಜಗನ್ನಾಥ ಪುರಿಯನ್ನು. ಈ ಪ್ರಯಾಣ ಅನಾಯಾಸವಾದುದಾಗಲೀ, ಅಕಾರಣವಾದುದಾಗಲೀ ಆಗಿರಲಿಲ್ಲ. ಒಂದು ಕುಟುಂಬದೊಡನೆ ಇವರಿಗೆ ತುಂಬ ಆತ್ಮೀಯ ಪರಿಚಯವಿತ್ತು. ಆ ಕುಟುಂಬದ ಒಡತಿ ವಯಸ್ಸಿನಲ್ಲಿ ಶರತ್‌ಗಿಂತ ತುಂಬ ದೊಡ್ಡವರಾಗಿದ್ದರು ಹಾಗೂ ಶರತ್‌ನ ಬಗ್ಗೆ ಆಕೆಗೆ ತುಂಬ ಪ್ರೀತಿ ಇತ್ತು. ಇದ್ದಕ್ಕಿದ್ದಂತೆ ಆಕೆ ರೋಗಗ್ರಸ್ತರಾದರು. ಆಕೆಯ ಗಂಡ ಎಲ್ಲಿಯೋ ತುಂಬ ದೂರದ ಊರಿನಲ್ಲಿ ಕೆಲಸ ಮಾಡುತ್ತಿದ್ದರು. ತನ್ನ ಸ್ವಭಾವದಂತೆ, ಬಾಲಕ ಶರತ್ ತನು-ಮನುಗಳಿಂದ ಆಕೆಯ ಸೇವೆಯಲ್ಲಿ ತೊಡಗಿದ್ದ. ಆಗ ನಡೆದ ಒಂದು ಘಟನೆಯಿಂದ ಅವನು ಆಕೆಯನ್ನು ತಪ್ಪಾಗಿ ತಿಳಿದ. ಆಗ ಅವನ ಮನಸ್ಸಿಗೆ ಎಷ್ಟು ನೋವಾಯಿತೆಂದರೆ ಅವನು ಮನೆಬಿಟ್ಟು ಹೊರಟ.

ನಡೆದು ನಡೆದು ಅವನ ಮೈ ಬಳಲಿತು. ಊಟಕ್ಕೆ ಯಾವ ವ್ಯವಸ್ಥೆಯೂ ಇರಲಿಲ್ಲ. ತಂಗಲುಯಾವ ಸುಖ-ಸೌಲಭ್ಯಗಳೂ ಇರಲಿಲ್ಲ. ಇದರ ಪರಿಣಾಮವಾಗಿ ಅವನು ತೀವ್ರ ಜ್ವರಕ್ಕೆ ಗುರಿಯಾದ. ಒಂದು ಮರದ ಕೆಳಗೇ ಆಶ್ರಯವನ್ನು ಪಡೆಯುವುದು ಅನಿವಾರ್ಯವಾಯಿತು. ಆ ಹೊತ್ತಿಗೆ ಸರಿಯಾಗಿ ವಿಧವೆಯೊಬ್ಬಳು ಆ ಕಡೆ ಬಂದಳು. ಬಹುಶಃ ಅವನು ನೀರನ್ನು ಕೇಳಿದ್ದಿರಬೇಕು ಅಥವಾ ನರಳುತ್ತ ಇದ್ದಿರಬೇಕು. ಆಕೆ ಕೂಡಲೇ ಅವನ ಬಳಿಗೆ ಹೋದಳು. ಮುಟ್ಟಿದರೆ, ಕಾದ ತವದ ಮೇಲೆ ಕೈ ಇಟ್ಟಂತೆ ಆಯಿತು. ಕರುಣೆಯಿಂದ ಕರಗಿದ ಆಕೆ ಹೇಳಿದಳು: "ಅಯ್ಯೋ ದೇವರೆ, ನಿನಗೆ ತುಂಬ ಜ್ವರ ಬಂದಿದೆ."

ಆಕೆ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಅನೇಕ

ದಿವಸಗಳವರೆಗೆ, ಮಮತೆಯಿಂದ ಕೂಡಿದ ಆಕೆಯ ಸೇವೆ-ಶುಶ್ರೂಷೆ ಲಭ್ಯವಾದ ಬಳಿಕವೇ ಜ್ವರದಿಂದ ಅವನಿಗೆ ಮುಕ್ತಿ ದೊರೆಯಿತು. ಆದರೆ, ಆಗ ಅವನು ಇನ್ನೊಂದು ಬಗೆಯ ಇಬ್ಬಂದಿಗೆ ಸಿಕ್ಕಿ ಹಾಕಿಕೊಂಡ. ಆ ವಿಧವೆಗೆ ಒಬ್ಬ ಮೈದುನ ಹಾಗೂ ಒಬ್ಬ ಭಾವನೆಂಟ ಇದ್ದರು. ಆಕೆ ತನ್ನವಳಾಗಿ ಇರಬೇಕೆಂಬುದು ಮೈದುನನ ಇಚ್ಛೆಯಾಗಿತ್ತು. ಆಕೆಯ ಮೇಲೆ ತನಗೆ ಅಧಿಕಾರವಿದೆಯೆಂಬುದು ಭಾವ-ನೆಂಟನ ಭಾವನೆಯಾಗಿತ್ತು. ಯಾರ ಬಳಿ ಇರುವುದೂ ಆಕೆಗೆ ಇಷ್ಟವಿರಲಿಲ್ಲ. ಒಂದು ದಿನ ದುಃಖಿತಳಾಗಿ ಅವಳು ಶರತ್‌ನೊಂದಿಗೆ ಹೇಳಿದಳು: "ನೀನು ಈಗ ಆರೋಗ್ಯವಾಗಿದ್ದೀಯೆ. ನಡಿ, ನಾನೂ ನಿನ್ನೊಡನೆ ಬರುತ್ತೇನೆ."

ಬೇರೆಲ್ಲಿಗಾದರೂ ಹೋಗಬೇಕೆಂದು ಅವಳು ಸದ್ದಿಲ್ಲದೆ ಅವನ ಹಿಂದೆ ಹೊರಟಳು. ಹೀಗೆ ಹೊರಡುವುದರ ಹಿಂದೆ ಇದ್ದುದು ಕೇವಲ ಬಿಡುಗಡೆಯ ಬಯಕೆ. ಆದರೆ, ಅವರಿಬ್ಬರೂ ಇನ್ನೂ ಸ್ವಲ್ಪ ದೂರವೂ ಹೋಗಿರಲಿಲ್ಲ. ಅಷ್ಟರಲ್ಲಿಯೇ ಆ ವಿಧವೆಯ ಇಬ್ಬರು ಪ್ರೇಮಿಗಳೂ ಅಲ್ಲಿಗೆ ಬಂದು ತಲುಪಿದರು. ಅವರು ಯಾರನ್ನೂ, ಏನನ್ನೂ ಕೇಳಲಿಲ್ಲ. ತೃಪ್ತಿಯಾಗುವವರೆಗೂ ಶರತ್‌ಗೆ ಹೊಡೆದರು; ಬೊಬ್ಬೆ ಹಾಕುತ್ತಿದ್ದ ವಿಧವೆಯನ್ನು ವಾಪಸು ಕರೆದುಕೊಂಡು ಹೋದರು.

ಆಮೇಲೆ ಅವಳ ಗತಿ ಏನಾಯಿತು ಎಂಬುದು ಶರತ್‌ಗೆ ಎಂದೂ ಗೊತ್ತಾಗಲಿಲ್ಲ. ಆದರೆ, ಪರಸ್ಪರ ವಿರೋಧಿಗಳಾದರೂ ಲುಚ್ಚಾ-ಲಫಂಗಾಗಳಲ್ಲೂ ಒಮ್ಮತ ವಿರುತ್ತದೆಬುದು ಅವನಿಗೆ ಅರಿವಾಯಿತು; ಒಳ್ಳೆಯ ಜನರು ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಒಬ್ಬರಿಂದೊಬ್ಬರು ಬೇರೆಯಾಗಿಯೇ ಇರುತ್ತಾರೆ ಎಂಬುದೂ ಅವನಿಗೆ ಗೊತ್ತಾಯಿತು. ಕಥಾಶಿಲ್ಪಿ ಶರತ್‌ಚಂದ್ರರ ಪ್ರಸಿದ್ಧ ಕಾದಂಬರಿ 'ಚರಿತ್ರಹೀನ'ಕ್ಕೆ ಈ ಘಟನೆಗಳೇ ಆಧಾರವಾಗಿ ಪರಿಣಮಿಸಿದುವು. ಈ ಕಾಲದಲ್ಲಿಯೇ ಅದರ ರೂಪರೇಷೆಗಳು ಅವರ ತಲೆಯಲ್ಲಿ ಮೂಡಿದುವು.

ಅವನು ಜಗನ್ನಾಥ ಪುರಿಯ ಮಾರ್ಗದಲ್ಲಿ ಮುಂದೆ ನಡೆದ. ಮುಂದೆ ಹಳ್ಳಿಹಳ್ಳಿಯಲ್ಲೂ ಆತಿಥ್ಯವನ್ನು ಪಡೆದು, ಅವನು ಮನೆಗೆ ಹಿಂದಿರುಗಿದಾಗ ಅವನ ಮುಖ ಎಷ್ಟು ವಿಕೃತವಾಗಿದ್ದಿತೆಂದರೆ ಅವನನ್ನು ಗುರುತಿಸಲೂ ಸಾಧ್ಯವಾಗುತ್ತಿರಲಿಲ್ಲ. ಪ್ರಸಿದ್ಧ ಗಣಿತಶಾಸ್ತ್ರಜ್ಞರಾಗಿದ್ದ ಪಿ. ಬಸು ಅವರ ಮನೆಯಲ್ಲಿ ಅವನು ಆಶ್ರಯಪಡೆದಿದ್ದನೆಂದು ಹೇಳಲಾಗಿದೆ.

ಒಂದೆರಡು ಬಾರಿ ಕಳ್ಳರ ಮತ್ತು ದರೋಡಕಾರರ ತಂಡದಲ್ಲಿಯೂ ಸಿಕ್ಕಿಕೊಂಡಿದ್ದನೆಂದು ಹೇಳಲಾಗಿದೆ. ವಾಸ್ತವವಾಗಿ ಅವನು ತುಂಬ ದುಸ್ಸಾಹಸಿಯಾಗಿದ್ದುದರಿಂದ ಅವನ ಬಗೆಗೆ ನಾನಾ ಬಗೆಯ ಕಥೆಗಳು ಹುಟ್ಟಿಕೊಂಡಿದ್ದುವು. ತನ್ನ ಮನಸ್ಸಿನ ಮಾತನ್ನು ಯಾರೊಡನೆಯೂ ಹೇಳದೆ ಇರುವುದೇ ಅವನ ಸ್ವಭಾವವಾಗಿತ್ತು. ಆದರೆ ನಟನೆ ಮಾಡುವುದು ಅವನಿಗೆ ಚೆನ್ನಾಗಿ ಬರುತ್ತಿತ್ತು. ಸುಳ್ಳನ್ನು ನಿಜದ ತಲೆಯ ಮೇಲೆ ಹೊಡೆದಂತೆ ಹೇಳುವ ಕಲೆಯಲ್ಲಿ ಅವನು ನಿಷ್ಣಾತನಾಗಿದ್ದ.

ಈ ಎಲ್ಲ ಅರಿವಿಗೆ ಕುಟುಂಬದ ಸ್ಥಿತಿಯೇ ಹಿನ್ನೆಲೆಯಾಗಿತ್ತು. ಈಗಂತೂ ಅದು ತುಂಬ ಕೆಟ್ಟುಹೋಗಿತ್ತು. ಅಜ್ಜ ತೀರಿಕೊಂಡಿದ್ದರು. ಅವರು ಇದ್ದವರೆಗೆ ಹೇಗೋ

ಕುಟುಂಬದ ಗೌರವವನ್ನು ಕಾಪಾಡಿಕೊಂಡು ಬರುತ್ತಿದ್ದರು. ಆದರೆ ಈಗ ಎಲ್ಲರ ಎದುರಿಗೂ ಬಹು ದೊಡ್ಡ ಶೂನ್ಯವೇ ಎದ್ದು ನಿಂತಿತ್ತು. ಸಾಲ ದೊರೆಯುವುದಕ್ಕೂ ಒಂದು ಮಿತಿ ಇರುತ್ತದೆ. 'ಶುಭದಾ' ಕಾದಂಬರಿಯ ಸೋದರತ್ತೆ ಕೃಷ್ಣಾಳಂತೆ ಖಂಡಿತವಾಗಿಯೂ ಯಾರಾದರೂ ಒಬ್ಬರು ಹೀಗೆ ಹೇಳಿದ್ದಿರಬಹುದು: "ಏನಾದರೂ ವ್ಯವಸ್ಥೆ ಮಾಡಬೇಕೆಂದು, ಏನಾದರೂ ಸ್ವಲ್ಪ ಸಂಪಾದಿಸಬೇಕೆಂದು ನಿಮ್ಮ ಅಪ್ಪನಿಗೆ ಹೇಳು. ಇಲ್ಲದೆ ಹೋದರೆ, ದುಃಖಿಯೂ ಬಡವಳೂ ಆದ ನಾನು ದುಡ್ಡು ಕಾಸನ್ನೇನೂ ಕೊಡಲಾರೆ."

ಹೀಗೆ, ದಾರಿದ್ರ್ಯ ಮತ್ತು ಅಪಮಾನಗಳನ್ನು ಸಹಿಸಿಕೊಳ್ಳುವ ಅವನ ತಾಯಿಯ ತಾಳ್ಮೆಯೂ ಮೇರೆಯನ್ನು ದಾಟಿಹೋಗಿತ್ತು. ಆದರೆ ಹೋಗುವುದಾದರೂ ಆಕೆ ಎಲ್ಲಿಗೆ ಹೋಗಬೇಕು ? ಆಕೆಯ ತಂದೆ-ತಾಯಿಯರು[1] ಎಂದೋ ಸ್ವರ್ಗವಾಸಿಗಳಾಗಿ ಬಿಟ್ಟಿದ್ದರು. ಕುಟುಂಬ ಹರಿದು ಹಂಚಿಹೋಗಿತ್ತು. ಸೋದರರ ಹಣಕಾಸಿನ ಸ್ಥಿತಿ ಕೊಂಚವೂ ಉತ್ಸಾಹ ಜನಕವಾಗಿರಲಿಲ್ಲ. ಆದರೂ, ದೇವಾನಂದ ಪುರದಲ್ಲಿರುವುದು ಆಕೆಗೆ ಸಾಧ್ಯವಾಗದೆ ಹೋದಾಗ, ಹೆದರಿಕೊಂಡೇ ಆಕೆ ತನ್ನ ಕಿರಿಯ ಚಿಕ್ಕಪ್ಪ ಅಘೋರನಾಥರಿಗೆ ಕಾಗದ ಬರೆಸಿದರು. "ಹೊರಟು ಬಾ" ಎಂದು ಅಘೋರನಾಥರು ಉತ್ತರ ಬರೆದರು.

ಶರತ್ ಮತ್ತೆ ದೇವಾನಂದಪುರಕ್ಕೆ ಹಿಂದಿರುಗಲಿಲ್ಲ. ಇಲ್ಲಿ ಅವನ ಬಾಳುವೆಯೆಲ್ಲ ಘೋರ ದಾರಿದ್ರ್ಯ ಮತ್ತು ಅಭಾವಗಳಲ್ಲೇ ಕಳೆದಿತ್ತು. ತಾಯಿ ಮತ್ತು ಅಜ್ಜಿಯ ರಕ್ತ ಮತ್ತು ಕಣ್ಣೀರಿನಿಂದ ಈ ಹಳ್ಳಿಯ ಹಾದಿಗಳು ಮತ್ತು ಸ್ನಾನ ಘಟ್ಟಗಳು ತೊಯ್ದಿವೆ. ಕಥಾಶಿಲ್ಪಿ ಶರತ್‌ಚಂದ್ರರು 'ಶುಭದಾ'ದಲ್ಲಿ ಚಿತ್ರಿಸಿರುವ ದಾರಿದ್ರ್ಯದ ಭಯಂಕರ ಚಿತ್ರದ ಹಿಂದೆ ಖಂಡಿತವಾಗಿಯೂ ಅವನ ಈ ಅನುಭವ ಅಡಗಿದೆ. ಈ ಯಾತನೆಯ ಅಡಿಪಾಯದಲ್ಲಿಯೇ ಅವನ ಸಾಹಿತ್ಯಸಾಧನೆಗೆ ಬೀಜಾರೋಪಣವಾಯಿತು. ಹೋರಾಟ ಮತ್ತು ಕಲ್ಪನೆಯ ಮೊಟ್ಟಮೊದಲ ಪರಿಚಯ ಅವನಿಗೆ ಆದುದೂ ಇಲ್ಲಿಯೇ. ಈ ಹಳ್ಳಿಯ ಋಣದಿಂದ ಅವನು ಎಂದಿಗೂ ಮುಕ್ತನಾಗಲಾರದೆ ಹೋದ.

## 7

ಶರತ್ ಭಾಗಲಪುರಕ್ಕೆ ಹಿಂದಿರುಗಿದಾಗ[2] ಅವನ ಹಿಂದಿನ ಜೊತೆಗಾರರೆಲ್ಲ ಪ್ರವೇಶಿಕಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರು.[3] ಅವನಿಗೆ ಶಾಲೆಯಲ್ಲಿ ಪ್ರವೇಶ ದೊರೆಯುವುದೂ ಕಷ್ಟವಾಗಿತ್ತು. ದೇವಾನಂದಪುರದ ಶಾಲೆಯಿಂದ ವರ್ಗಾವಣೆ ಪ್ರಮಾಣ ಪತ್ರವನ್ನು ತರಲು ಅವನ ಬಳಿ ಹಣವಿರಲಿಲ್ಲ. ಶಾಲೆಗೆ ಸೇರದಿದ್ದರೆ ಆ ವರ್ಷ ಪರೀಕ್ಷೆ ತೆಗೆದುಕೊಳ್ಳುವುದೂ ಸಾಧ್ಯವಾಗುತ್ತಿರಲಿಲ್ಲ. ಅದೃಷ್ಟವಶಾತ್ ಆ ಶಾಲೆಯ ಅಧ್ಯಾಪಕರಲ್ಲಿ ಒಬ್ಬರಾಗಿದ್ದ ಶ್ರೀ ಪಾಂಚ್‌ಕೌಡೀ ಬಂದೋಪಾಧ್ಯಾಯರ

---

1 ತಾಯಿ: 1891ರಲ್ಲಿ; ತಂದೆ: 1892ರ ಜನವರಿ 1 ರಂದು.

2 1893

3 ಇಂದಿನ ಹತ್ತನೆಯ ತರಗತಿ

ತಂದೆ ಶ್ರೀ ಬೇಣೀಮಾಧವ ಬಂದೋಪಾಧ್ಯಾಯರು ಶರತ್‌ನ ಅಜ್ಜನ ಮಿತ್ರರಾಗಿದ್ದರು. ಈ ಸಂಬಂಧದಿಂದಾಗಿಯೇ ಅವನು ಪಾಂಚ್‌ಕೌಡೀ ಬಾಬೂಗಳನ್ನು 'ಮಾವ' ಎಂದು ಕರೆಯುತ್ತಿದ್ದ. ಮುಖ್ಯೋಪಾಧ್ಯಾಯರಾಗಿದ್ದ ಚಾರುಚಂದ್ರ ಬಸು ಅವರೂ ತುಂಬ ಒಳ್ಳೆಯ ಸ್ವಭಾವದ ಮನುಷ್ಯರಾಗಿದ್ದರು. ಈ ಜನರ ಕೃಪೆಯಿಂದಾಗಿಯೇ ಅವನಿಗೆ ಹೇಗೋ ಪ್ರವೇಶ ದೊರೆಯಿತು. ದೇವಾನಂದ ಪುರದಲ್ಲಿ ಅವನ ತುಂಟಾಟಗಳಿಗೆ ಕೊನೆಯೇ ಇರಲಿಲ್ಲ. ಆದರೆ ಇಲ್ಲಿ ಎದುರಿಸಬೇಕಾಗಿ ಬಂದ ಸವಾಲಿನಿಂದಾಗಿ ಅವನು ಸಂಪೂರ್ಣವಾಗಿ ಬದಲಾಗಿಬಿಟ್ಟ. ತನ್ನನ್ನು ಇತರರಿಗಿಂತ ಕೀಳು ಎಂದು ಭಾವಿಸುವುದು ಅವನ ಸ್ವಭಾವಕ್ಕೇ ವಿರುದ್ಧವಾದ ಸಂಗತಿಯಾಗಿತ್ತು. ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ಸಲುವಾಗಿ ರಾತ್ರಿಯೆಲ್ಲ ಜಾಗರಣೆ ಮಾಡಿ ಓದಲಾರಂಭಿಸಿದ. ನಿದ್ದೆಯನ್ನು ದೂರ ವಾಗಿಸುವುದಕ್ಕಾಗಿ ಚೆನ್ನಾಗಿ ಕಾಫಿ ಕುಡಿಯತೊಡಗಿದ.

ಅವನ ಹಳೆಯ ಸ್ನೇಹಿತರೆಲ್ಲ ಮತ್ತೆ ಅವನ ಬಳಿ ಮುತ್ತಿಕೊಂಡರು. ಅವರಲ್ಲಿ ಎಲ್ಲರಿಗಿಂತಲೂ ಮುಖ್ಯನಾಗಿದ್ದವನೆಂದರೆ ರಾಜೂ. ಬಹುಬೇಗ ಅವನು ಇನ್ನೊಬ್ಬ ಹೊಸ ಗೆಳೆಯನನ್ನು ಸಂಪಾದಿಸಿಕೊಂಡ. ಅವನ ಹೆಸರು ನೀಲ. ಅವರ ನೆರವಿನಿಂದ ಅವನು ತನ್ನ ಬಾಳಿಗೆ ವ್ಯವಸ್ಥಿತ ರೂಪವನ್ನು ಕೊಟ್ಟ. ಅವನಿಗಾಗಿ ರಾಜೂ ದೇವದಾರು ಮರದ ಪೆಟ್ಟಿಗೆಯೊಂದನ್ನು ಪುಸ್ತಕಗಳನ್ನಿಡುವ ಬೀರುವಾಗಿ ಪರಿವರ್ತಿಸಿ ಕೊಟ್ಟ. ಮೂರುಕಾಲಿನ ಒಂದು ಮುರಿದಿದ್ದ ಕುರ್ಚಿಯನ್ನೂ, ಇಂತಹುದೇ ಒಂದು ಮೇಜನ್ನೂ ಅವನಿಗಾಗಿ ಸರಿಪಡಿಸಿಕೊಟ್ಟ. ಮಂಚದ ಮೇಲಿನ ಹಾಸಿಗೆಯ ದರಿದ್ರತೆಯನ್ನು ಮರೆಮಾಚುವ ಸಲುವಾಗಿ ಅವನು ಹೊದ್ದುಕೊಳ್ಳುವ ತನ್ನ ದುಪ್ಪಟಿಯನ್ನು ಅದರ ಮೇಲೆ ಹಾಸಿಯೇ ಇರುತ್ತಿದ್ದ. ಅದರ ಕೆಳಗೆ ಒಂದು ಹುಕ್ಕಾ ಇರುತ್ತಿತ್ತು. ಮಂಚದ ಮಧ್ಯದಿಂದ ತಲೆದಿಂಬಿನ ಬಳಿ ಅದರ ಕೊಳವೆ ಹಾದು ಬರುವಂತೆ ಮಾಡಿಕೊಂಡು, ಕದ್ದುಕದ್ದು ಅವನು ಅದನ್ನು ಕುಡಿಯುತ್ತಿದ್ದ. ಸುರೇಂದ್ರನಾಥರು ಹೀಗೆ ಬರೆದಿದ್ದಾರೆ: "ಇಡೀ ರಾತ್ರಿ ದೀಪ ಉರಿಯುವುದಕ್ಕೆ ಅಗತ್ಯವಾಗುವಷ್ಟು ಎಣ್ಣೆಯನ್ನೂ ಅವನ ತಾಯಿ ಒದಗಿಸಲು ಅಸಮರ್ಥಳಾಗಿದ್ದಳು. ಗೆಳೆಯರು ಮೋಂಬತ್ತಿ ಕೊಟ್ಟು ಹೋಗುತ್ತಿದ್ದರು. ಅವರ ಕೃಪೆಯಿಂದಲೇ ಅವನಿಗೆ ಪುಸ್ತಕಗಳೂ ದೊರೆಯುತ್ತಿದ್ದುವು. ಒಂದು ಮೂಲೆಯಲ್ಲಿ ಅಗ್ಗಿಷ್ಟಿಕೆ ಇರುತ್ತಿತ್ತು. ತಗಡಿನ ಒಂದು ಸಣ್ಣ ಕೆಟಲ್ ಇರುತ್ತಿತ್ತು. ಒಂದು ಸಣ್ಣ ಹೂಜಿ ಮತ್ತು ಅದರ ಮೇಲೆ ಮುಚ್ಚಲು ಒಂದು ಸಣ್ಣ ಗಾಜಿನ ಲೋಟ ಇರುತ್ತಿತ್ತು. ಅವನ ಬಳಿ ಇದ್ದ ಭೌತಿಕ ಸಂಪತ್ತೆಲ್ಲ ಇಷ್ಟೆ. ಆದರೆ, ಈ ದೈನ್ಯಸ್ಥಿತಿ ಅವನ ಮನಸ್ಸನ್ನು ಕೀಳಾಗಗೊಡಲಿಲ್ಲ. ಆದ್ದರಿಂದ ಅವನ ವಿದ್ಯಾಸಮರದ ಮುನ್ನಡೆ ರಾಜಕುಮಾರನ ಮುನ್ನಡೆಯಂತೆಯೇ ಸಾಗುತ್ತಿತ್ತು. ನೀಲ ಬಂದು, ಹೊಗೆಸೊಪ್ಪು ತುಂಬಿ ಹೇಳುತ್ತಿದ್ದ: "ಕುಡಿ!"

ಗೆಳೆಯರಿಬ್ಬರೂ ಹುಕ್ಕಾ ಕುಡಿಯುತ್ತಾ ಹರಟೆ ಕೊಚ್ಚುತ್ತಿದ್ದರು ಅಥವಾ ಮತ್ತೆ ಓದಲು ತೊಡಗುತ್ತಿದ್ದರು. ಒಂದು ದಿನ ನೀಲ ಬೆಳಿಗ್ಗೆ ಬಹಳ ಮುಂಚಿತವಾಗಿಯೇ ಅವನನ್ನು ಭೇಟಿಯಾಗಲು ಬಂದ. ಕಿಟಕಿಯಿಂದ ಇಣುಕಿ ನೋಡಿದಾಗ ಅವನು ಕಂಡದ್ದಾದರೂ ಏನು ? ಶರತ್ ನಿದ್ದೆ ಹೋಗುತ್ತ ಮಲಗಿದ್ದಾನೆ, ದುಪಟಿಯ ಮೇಲೆ

ರಕ್ತ ಹರಡಿಕೊಂಡಿದೆ. ಭಯದಿಂದ ಅವನು ಕೂಗು ಹಾಕಿದ: "ಶರತ್, ಏ ಶರತ್!"

ಕಣ್ಣುಗಳಲ್ಲಿ ಇನ್ನೂ ನಿದ್ದೆ ತುಂಬಿಕೊಂಡಿತ್ತು. ಮಲಗಿದ್ದುಕೊಂಡೇ ಶರತ್ ಹೇಳಿದ: "ಒಳಗೆ ಬಾ"

ನೀಲ ಕೇಳಿದ: "ಹುಷಾರಿಲ್ಲವೇನು ?"

"ಹೌದು."

"ರಕ್ತ ವಾಂತಿಯಾಯಿತೆ ?"

"ಹೋಗೋ, ಹುಚ್ಚ"

"ಹಾಗಾದರೆ ನಿನ್ನ ಬಟ್ಟೆಗಳ ಮೇಲೆ ಈ ರಕ್ತ ಎಲ್ಲಿಂದ ಬಂತು ?"

ಚಕಿತನಾಗಿ ಎದ್ದು ಶರತ್ ನೋಡಿಕೊಂಡ. ನಿಜವಾಗಿಯೂ ಅಲ್ಲಿ ರಕ್ತ ಹರಡಿತ್ತು. ಹೇಳಿದ: "ಇದೆಲ್ಲ ಆ ಮುಂಗುಸಿಯ ಕೆಲಸ. ಇವತ್ತು ಮತ್ತೆ ಅದು ಇಲಿಯನ್ನು ಭೇಟಿಯಾಡಿದೆ."

ಆದರೆ, ಒಳಗೆ ಬಂದು ನೀಲ ಅಲ್ಲಿಇಲ್ಲಿ ಕಣ್ಣಾಡಿಸಿ ನೋಡಿ ಭಯಚಕಿತನಾಗಿ ನಿಂತ. "ಏ ಶರತ್ ನಿನ್ನ ಅದೃಷ್ಟ ಚೆನ್ನಾಗಿತ್ತು. ನಿನ್ನ ಆ ಮುಂಗುಸಿ ಕೃಷ್ಣ ಸರ್ಪವನ್ನು ಕೊಂದುಹಾಕಿದೆ."

ಸರಿ, ಮುಂದಾದುನ್ನು ಕೇಳಬೇಕೆ? ಮನೆಮನೆಯಲ್ಲೂ ಕೋಲಾಹಲ ಉಂಟಾಯಿತು. ಭುವನಮೋಹಿನಿ ಮನಸಾದೇವಿಯ ಪ್ರಸಾದವನ್ನು ಹಂಚಿದಳು. ಎಲ್ಲರೂ ಪ್ರಸಾದವನ್ನು ತೆಗೆದುಕೊಂಡು ಆದ ಮೇಲೆ ಶರತ್ ಹೇಳಿದ: "ಅಮ್ಮ ನನ್ನ ಪ್ರಾಣ ಉಳಿಸಿದವರನ್ನು ನೀನು ವಿಚಾರಿಸಿಕೊಳ್ಳಲೇ ಇಲ್ಲವಲ್ಲ ?"

ತಾಯಿ ಹೇಳಿದಳು: "ನೀಲನಿಗೆ ಕೊಟ್ಟಾಯಿತಲ್ಲ"

"ನೀಲ ಹಾವನ್ನು ಕೊಂದನೇನು ?"

"ಅಯ್ಯೋ ದೇವರೆ, ನಾನು ಮರೆತೇ ಬಿಟ್ಟೆನಲ್ಲ!" ತಾಯಿ ಹೀಗೆಂದು ಹೇಳಿ, ಹಾಲು ಮತ್ತು ಬಾಳೆಹಣ್ಣು ಬೆರೆಸಿ ಮುಂಗುಸಿಗೆ ಕೊಡಲು ಮುಂದಾದಳು. ಶರತ್ ಹೇಳಿದ: "ಅಮ್ಮ ಮುಂಗುಸಿ ಬಾಳೆಹಣ್ಣು ತಿನ್ನುತ್ತದೆಯೆ ? ಅದಕ್ಕೆ ಮೀನು ಬೇಕು."

ತಾಯಿ ಆ ಕ್ಷಣವೇ ಮುಂಗುಸಿಗೆ ಹಾಲು-ಮೀನು ದೊರೆಯುವಂತೆ ಏರ್ಪಾಡು ಮಾಡಿದಳು.

ಶರತ್‌ನ ವಿದ್ಯಾಭ್ಯಾಸಕ್ಕೆ ಮತ್ತೊಂದು ಅಡ್ಡಿಯೂ ಇತ್ತು. ಹೊತ್ತಿಗೆ ಸರಿಯಾಗಿ ಅವನಿಗೆ ಎಚ್ಚರವೇ ಆಗುತ್ತಿರಲಿಲ್ಲ. ಸದ್ದಿಲ್ಲದೆ ಒಂದು ದಿವಸ ನೀಲ ದೊಡ್ಡ ಗಡಿಯಾರವೊಂದನ್ನು ತೆಗೆದುಕೊಂಡು ಬಂದ. ಶರತ್‌ನ ಕಣ್ಣುಗಳಲ್ಲಿ ನೀರಾಡಿತು. ಕೇಳಿದ "ನೀಲ ನೀನೇಕೆ ನನ್ನನ್ನು ಇಷ್ಟೊಂದು ಪ್ರೀತಿಸುತ್ತೀಯೇ ?"

"ಅದೇಕೋ ? ಹೇಳಲಾರೆ. ಎಲ್ಲರೂ ಇದೇ ಪ್ರಶ್ನೆ ಕೇಳುತ್ತಾರೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯನ್ನು ಏಕೆ ಪ್ರೀತಿಸುತ್ತಾನೋ ಗೊತ್ತಿಲ್ಲ."

ಶರತ್ ಹೇಳಿದ: "ನಿನ್ನ ಹೃದಯ ತುಂಬ ಕೋಮಲವಾಗಿದೆ. ಇತರರ ದುಃಖವನ್ನು ಕಂಡು ನೀನು ನಿನ್ನ ಮನದಾಳದಲ್ಲೇ ಕರಗಿಹೋಗುತ್ತೀಯೆ. ನೀನು ಇತರರಂತಲ್ಲ. ಅವತ್ತು ನೀನು ನನಗೆ ಮಾತ್ರ ಬಾದಾಮಿ ಹಣ್ಣನ್ನು ಕೊಟ್ಟೆ ? ಬೇರೆಯವರಿಗೆ ಏಕೆ ಕೊಡಲಿಲ್ಲ ? ನಿಜವಾದ ಸಂಗತಿ ಇದು. ನಿನ್ನೊಳಗೆ ಹೆಣ್ಣಿನಂಥ ಕೋಮಲವಾದ ಮನಸ್ಸಿದೆ."

ಕೋಪವನ್ನು ಅಭಿನಯಿಸುತ್ತ ನೀಲ ಹೇಳಿದ: "ಲೇ ಪಿಶಾಚಿ, ದುಷ್ಟ, ನನ್ನನ್ನು ಹೆಂಗಸು ಅನ್ನುತ್ತೀಯಾ ?"

ಗೆಳೆಯರಿಬ್ಬರೂ ನಕ್ಕರು. ನೀಲನಿಗೂ ಚೆನ್ನಾಗಿ ಹಾಡಲು ಬರುತ್ತಿತ್ತು. ಅವನ ಬಳಿ ವಾದ್ಯವೊಂದು ಇತ್ತು. ಪರೀಕ್ಷೆ ಮುಗಿದ ಮೇಲೆ ಶರತ್ ಅವನನ್ನು ತನ್ನ ಮನೆಗೆ ಕರೆದುಕೊಂಡು ಬಂದ. ಮಕ್ಕಳನ್ನು ಕೂಡಿಹಾಕಲು ಬಳಸುತ್ತಿದ್ದ ಆ ಕೋಣೆಯನ್ನೇ ಶರತ್ ಈಗ ಸಂಗೀತ ಶಾಲೆಯಾಗಿಸಿಕೊಂಡ. ಒಂದು ದಿನ ಬೆಳಗಾಗುತ್ತಿದ್ದಂತೆಯೇ ಆ ಮನೆಯಿಂದ ಸಂಗೀತದ ಸ್ವರ ಮೊಳಗುತ್ತಿದ್ದುದನ್ನು ಕೇಳಿ ಹುಡುಗರ ಹಾಗೂ ಹುಡುಗಿಯರ ಹೃದಯಗಳು ಹುಚ್ಚೆದ್ದು ಕುಣಿದುವು. ಸುರೇಂದ್ರನಾಥ ಬಾಗಿಲು ಬಡಿದಾಗ ಶರತ್ ಹೊರಗೆ ಬಂದು ಹೇಳಿದ: "ಬೇಗ ಬಾ. ಚಿಕ್ಕಜ್ಜ ಎಲ್ಲಿಯಾದರೂ ಬಂದುಬಿಟ್ಟರೆ ಕಷ್ಟವಾಗುತ್ತದೆ."

ಸುರೇಂದ್ರ ಒಳಗೆ ಬಂದು, ಪಲ್ಲಂಗದ ಮೇಲೆ ಕುಳಿತುಕೊಂಡ. ಶರತ್ ನಿಧಾನವಾಗಿ ವಾದ್ಯವನ್ನು ಬಾರಿಸುತ್ತ ಹಾಡತೊಡಗಿದ. "ಮಥುರಾವಾಸಿನೀ ಮಧುರಾವಾಸಿನೀ"

ಕೆಲವು ಕ್ಷಣಗಳವರೆಗೆ ಮಂತ್ರಮುಗ್ಧನಾಗಿದ್ದ ಬಳಿಕ ಸುರೇಂದ್ರ ಕೇಳಿದ: "ಶರತ್, ಇದು ಯಾರ ವಾದ್ಯ... ?"

"ನನ್ನದು !"

"ಕೊಂಡುಕೊಂಡೆಯಾ ?"

"ಇಲ್ಲ."

"ಅಂದರೆ ?"

"ನೀಲ ಕೊಟ್ಟಿದ್ದಾನೆ."

"ನಿನಗೇ ಕೊಟ್ಟುಬಿಟ್ಟಿದ್ದಾನಾ ?"

"ಕಲಿತುಕೊಳ್ಳುವುದಕ್ಕೆ ಕೊಟ್ಟಿದ್ದಾನೆ."

ಇಷ್ಟು ಹೇಳಿದ ಬಳಿಕ ಶರತ್ ಆ ವಾದ್ಯವನ್ನು ಕತ್ತಲಲ್ಲಿ ಅಡಗಿಸಿ ಇಟ್ಟು ಹೇಳಿದ: "ಯಾರಿಗೂ ಹೇಳಬೇಡ. ನಿನಗೂ ಕಲಿಸಿಕೊಡುತ್ತೇನೆ."

ನೀಲ ಶರತ್‌ನನ್ನು ತುಂಬ ಪ್ರೀತಿಸುತ್ತಿದ್ದ. ಆದರೆ, ಅವನು ಬಹಳ ಕಾಲ ಬದುಕಲಾರದೆ ಹೋದ. ಅವನು ಪೊಲೀಸ್ ಇಲಾಖೆಯಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದ. ಇದಕ್ಕಿದ್ದಂತೆ ಒಂದು ದಿನ ಅವನಿಗೆ ಕಾಲರಾ ಸೋಂಕು ತಗುಲಿ ಅವನು ತೀರಿಕೊಂಡ. ಶಾಶ್ವತವಾದ ಅಗಲಿಕೆಯ ಮರ್ಮಾಂತಕ ವೇದನೆ ಎಂದರೇನು ಎಂಬುದು ಶರತ್‌ಗೆ ಅಂದು ಮೊದಲ ಬಾರಿಗೆ ಅನುಭವಕ್ಕೆ ಬಂದಿತು.[1]

ಪರೀಕ್ಷೆ ಹತ್ತಿರ ಬರುತ್ತಿತ್ತು. ಆದರೆ ಎದುರಾಗುತ್ತಿದ್ದ ತೊಂದರೆಗಳಿಗೆ ಕೊನೆಯೇ ಇರಲಿಲ್ಲ. ದೊಡ್ಡ ಮಾವ ಠಾಕುರ್‌ದಾಸರ ಮಗಳಿಗೆ ಕಪ್ಪು ಜ್ವರ ಬಂದಿತು. ತನ್ನ ಎಂದಿನ ಸ್ವಭಾವದಂತೆ ಶರತ್ ಎಲ್ಲವನ್ನೂ ಮರೆತು ಆಕೆಯ ಉಪಚಾರದಲ್ಲಿ ಮಗ್ನನಾದ. ಆದರೆ, ಆಕೆ ಉಳಿಯಲಿಲ್ಲ. ಆಗ ಶರತ್‌ಗೆ ಎಷ್ಟು ದುಃಖವಾಯಿತೆಂದರೆ, ಅವನು ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ಬಗ್ಗೆಯೇ ಸಂದೇಹ ಉಂಟಾಯಿತು.

---

1 ಶರತ್ ಪರಿಚಯ: ಸುರೇಂದ್ರನಾಥ

ಪರೀಕ್ಷಾ ಶುಲ್ಕವನ್ನು ಹೊಂದಿಸಿಕೊಳ್ಳುವ ಪ್ರಶ್ನೆಯೂ ಇತ್ತು. ಹೀಗಾಗಿ, ಭುವನಮೋಹಿಸಿಯ ಚಿಂತೆಗೆ ಪಾರವೇ ಇಲ್ಲದಂತಾಯಿತು. ಕಛೇರಿಯ ಒಂದಿಷ್ಟು ಹಣವನ್ನು ನುಂಗಿ ಹಾಕಿದ್ದನೆಂಬ ಆರೋಪದ ಮೇಲೆ ಹಿರಿಯ ಅಣ್ಣ ಠಾಕುರ್‌ದಾಸರ ಮೇಲೆ ಆ ದಿನಗಳಲ್ಲೇ ಮೊಕದ್ದಮೆ ನಡೆಯುತ್ತಿತ್ತು. ಕೊನೆಗೆ ಅವರು ದೋಷ ಮುಕ್ತರಾಗಿ ಹೊರಬಂದರಾದರೂ, ವೆಚ್ಚಕ್ಕೆ ಮಿತಿಯೇ ಇಲ್ಲದಂತಾಗಿತ್ತು. ಕಿರಿಯಣ್ಣ ವಿಪ್ರದಾಸರ ಆದಾಯ ತುಂಬ ಕಡಿಮೆಯಾಗಿತ್ತು. ಅವರ ಮೇಲೆ ಇಡೀ ಕುಟುಂಬದ ಹೊಣೆಗಾರಿಕೆ ಬಿದ್ದಿತ್ತು. ಆದರೂ, ಧೈರ್ಯ ಮಾಡಿ ಭುವನ ಮೋಹಿನಿ ಅವರಿಗೇ ಈ ವಿಚಾರವನ್ನು ಹೇಳಿದಳು. ಆಗ ಅವರೆಂದರು: "ಮನೆಯಲ್ಲಂತೂ ಬಿಡಿಗಾಸೂ ಇಲ್ಲ. ಎಲ್ಲಿಂದಲಾದರೂ ಸಾಲ ತರಬೇಕು."

ಆ ದಿನಗಳಲ್ಲಿ ಖಂಜನಪುರದ ಗುಲ್ಜಾರೀಲಾಲನ ಮನೆ ಸಾಲ ದೊರೆಯುವ ಕೇಂದ್ರವಾಗಿತ್ತು. ಸ್ಥೂಲಕಾಯದ, ಕಪ್ಪುಬಣ್ಣದ ಆ ಗಿರವಿದಾರ ಭಾಗಲಪುರದ ಶೈಲಾಕ್ ಎಂದೇ ಪ್ರಸಿದ್ಧನಾಗಿದ್ದ. ವಿಪ್ರದಾಸರು ಸರ್ಕಾರಿ ನೌಕರಿಯಲ್ಲಿದ್ದರು. ಅವರಿಂದ ಹಣವನ್ನು ಹಿಂದಕ್ಕೆ ಪಡೆಯುವುದು ಕಷ್ಟದ ಕೆಲಸವೇನೂ ಆಗಿರಲಿಲ್ಲ. ಆದರೆ, ಬಡ್ಡಿಯ ಬಗ್ಗೆ ಗುಲ್ಜಾರಿಲಾಲ್ ಸಾಕಷ್ಟು ಚೌಕಾಶಿ ಮಾಡಿದ. ಕೊನೆಗೆ ರೂಪಾಯಿಗೆ ತಿಂಗಳೊಂದಕ್ಕೆ ನಾಲ್ಕು ಪೈಸೆ ದರದಲ್ಲಿ ಬಡ್ಡಿ ಕೊಡಬೇಕೆಂದು ತೀರ್ಮಾನಕ್ಕೆ ಬರಲಾಯಿತು. ಈ ಹಣದ ನೆರವಿನಿಂದಲೇ ಶರತ್ ಪರೀಕ್ಷೆಗೆ[1] ಕುಳಿತುಕೊಳ್ಳಲು ಸಾಧ್ಯವಾಯಿತು.

ಇದಾದ ಮೇಲೆ ಅವನು ಮುಕ್ತನಂತಾದ. ಅವನ ಹೆಚ್ಚು ಕಾಲವೆಲ್ಲ ರಾಜುವಿನ ಜೊತೆಯಲ್ಲಿ ಕಳೆದುಹೋಗತೊಡಗಿತು. ರಾಜು ಈಗ ಓದಿ-ಬರೆಯುವುದನ್ನು ಬಿಟ್ಟು, ಮರದ ಕಾರ್ಖಾನೆಯೊಂದರಲ್ಲಿ ಕೆಲಸ ಕಲಿಯುತ್ತಿದ್ದ. ಮುತ್ತಿನಂಥ ಅಕ್ಷರಗಳನ್ನು ಬರೆಯಬಲ್ಲವನಾಗಿದ್ದ ಅವನು ಮರದ ಸುಂದರ ವಸ್ತುಗಳನ್ನು ನಿರ್ಮಿಸಬಲ್ಲವನಾಗಿದ್ದ. ಅವನ ವ್ಯಕ್ತಿತ್ವವೇ ಅದ್ಭುತವಾಗಿತ್ತು. ಒಂದೆಡೆ ಅವನಲ್ಲಿ ಪರಾಕ್ರಮ ಇದ್ದಂತೆ, ಇನ್ನೊಂದೆಡೆ ಕೊಳಲನ್ನೂದುವ ಕಲೆಯಲ್ಲಿಯೂ ಅವನು ನಿಷ್ಣಾತನಾಗಿದ್ದ. ಕಂಠಸ್ವರ ಅದೆಷ್ಟು ಮಧುರವಾಗಿತ್ತು! ಹಾರ್ಮೋನಿಯಮ್, ಕ್ಲಾರಿನೆಟ್ - ಇವನ್ನೆಲ್ಲ ಚೆನ್ನಾಗಿ ನುಡಿಸುತ್ತಿದ್ದ. ಅಭಿನಯದ ಅಸಾಮಾನ್ಯ ಪ್ರತಿಭೆಯೂ ಅವನಲ್ಲಿ ಮನೆಮಾಡಿಕೊಂಡಿತ್ತು. ಅನೇಕ ಜನ ಅವನ ಬಗ್ಗೆ ಅನೇಕ ಬಗೆಯ ಮಾತುಗಳನ್ನು ಆಡುತ್ತಿದ್ದರು. ಆದರೆ, ಅವನು ಪ್ರತಿಭಾವಂತರ ಮನೆತನದಲ್ಲಿ ಹುಟ್ಟಿದ್ದ. ಹೀಗಾಗಿ, ಪ್ರತಿಭೆ ಅವನನ್ನು ತೆರೆದ ತೋಳುಗಳಿಂದ ವರಿಸಿತ್ತು. ಆದ್ದರಿಂದ ಯಾವುದೇ ಒಂದು ಕ್ಷೇತ್ರದಲ್ಲಿ ಹೆಚ್ಚು ಕಾಲ ತಂಗಿರುವುದು ಅವನಿಗೆ ಹಿಡಿಸುತ್ತಿರಲಿಲ್ಲ. ನಾನಾ ಅನುಭವಗಳಲ್ಲಿ, ನಾನಾ ಪ್ರಯೋಗಗಳಲ್ಲಿ ಅವನಿಗೆ ಅಭಿರುಚಿಯಿತ್ತು. ಗಾಂಜಾ, ಮದ್ಯ ಮತ್ತು ವೇಶ್ಯೆಯರ ಸಂಪರ್ಕದಲ್ಲಿಯೇ ಇದ್ದರೂ, ಅವನ ಅಂತಃಕರಣ ಗಂಗಾಜಲದಂತೆ ನಿರ್ಮಲವಾಗಿತ್ತು. ಅವನು ದುಷ್ಟನೇನೂ ಆಗಿರಲಿಲ್ಲ, ಆದರೆ, ದುಸ್ಸಾಹಸಿಯಾಗಿದ್ದ. ಅವನು ಯೋಗದಲ್ಲಿ ಆನಂದದಲ್ಲಿ ಮುಳುಗಿರುತ್ತಿದ್ದ - ಗಂಗಾಜಲ ಎಲ್ಲವನ್ನೂ ಪವಿತ್ರೀಕರಿಸಿಬಿಡುವಂತೆ.

---

1 ಈ ಪರೀಕ್ಷೆ 1894ರ ಫೆಬ್ರವರಿ 12ರ ಸೋಮವಾರದಂದು ಪ್ರಾರಂಭವಾಯಿತು.

ಅವನಿಗೆ ತನ್ನದೇ ಆದ ದೋಣಿಯೊಂದಿತ್ತು. ಅದರಲ್ಲಿಯೇ ಅವನು ಸಂಚರಿಸುತ್ತಿದ್ದ. ಕೆಲವೊಮ್ಮೆ ಕಗ್ಗತ್ತಲ ರಾತ್ರಿಯಾಗಿರುತ್ತಿತ್ತು. ಕೆಲವೊಮ್ಮೆ ಗಂಗೆ ಅತಿಯಾಗಿ ತುಂಬಿ ಹರಿಯುತ್ತಿದ್ದಳು - ಆಗಲೂ ಅವನು ಶರತ್‌ನನ್ನು ಹಿಡಿದುಕೊಂಡು ಹೇಳುತ್ತಿದ್ದ: "ನಡಿ, ದೋಣಿಯಲ್ಲಿ ಸಂಚರಿಸಿಬಿಡೋಣ." ಶರತ್‌ಗೆ ಹೆದರಿಕೆಯಾಗುತ್ತಿತ್ತು. ಆದರ, ರಾಜೂ ಅವನ ಗುರುವಾಗಿದ್ದನಲ್ಲವೆ? ಬೇಡವೆಂದು ಅವನಿಗೆ ಹೇಳುವುದಾದರೂ ಹೇಗೆ ಸಾಧ್ಯವಾದೀತು?

ಹಿಂದಿನ ವರ್ಷ ಕಾಲ್ಚೆಂಡಿನ ಮೈದಾನದಲ್ಲಿ ಗಲಭೆಯಾಗಿತ್ತು. ಆಗ ಲಾಠಿಯ ಪ್ರಾಬಲ್ಯದ ಮೇಲೆ ರಾಜುವಿನ ತಂಡ ಎದುರಾಳಿಗಳನ್ನು ಸೋಲಿಸಿತ್ತು. ಆ ಗಲಭೆಯಲ್ಲಿ ಶರತ್‌ನ ಪ್ರಾಣ ಸಂಕಟಕ್ಕೆ ಸಿಲುಕಿತ್ತು. ರಾಜೂ ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬರದೆಹೋಗಿದ್ದರೆ ಏನೂ ಬೇಕಾದರೂ ಆಗಿಹೋಗಬಹುದಾಗಿತ್ತು. ಅವನಿಗೆ ಹಾವು ಕಚ್ಚಿದ್ದಾಗಲೂ ಅಷ್ಟೆ. ಅವನೇ ಬಿರುಗಾಳಿಯಂತೆ ತನ್ನ ದೋಣಿಯನ್ನು ಗಂಗೆಯಲ್ಲಿ ನಡೆಸಿಕೊಂಡು ವೈದ್ಯನನ್ನು ಕರೆತರಲು ಧಾವಿಸಿದ್ದ. ಹೀಗಾಗಿ, ರಾಜುವಿನ ಬಗ್ಗೆ ಶರತ್‌ನ ಕೃತಜ್ಞತೆಗೆ ಯಾವುದೇ ಮೇರೆಯೂ ಇರಲಿಲ್ಲ. ಸರಿ, ಆ ಭೀಷಣ ಪ್ರವಾಹದ ಗಂಗೆಯಲ್ಲಿ ತಮ್ಮ ಪುಟ್ಟ ದೋಣಿಯನ್ನು ತೇಲಿಬಿಟ್ಟು, ಮುಂದೆ ಮುಂದೆ ಸಾಗಿ ದ್ವೀಪವೊಂದನ್ನು ಸೇರುತ್ತಿದ್ದರು. ಅಲ್ಲಿಂದ ಗಂಗೆ ದಿಕ್ಕನ್ನು ಬದಲಾಯಿಸಿ, ಪೂರ್ವದಿಂದ ಉತ್ತರದತ್ತ ಹರಿಯತೊಡಗುತ್ತಿದ್ದಳು. ಅಲ್ಲಿಯೇ ಅಂಬಿಗರು ಮೀನು ಹಿಡಿಯುತ್ತಿದ್ದರು. ಅವರೆಲ್ಲ ತುಂಬ ಬಲಶಾಲಿಗಳೂ, ಒಗ್ಗಟ್ಟಿನಿಂದ ಇರುವವರೂ ಆಗಿದ್ದರು. ಒಂದು ದಿನ ರಾಜೂ ಹೇಳಿದ: "ಇವತ್ತು ಮೀನು ಕದಿಯೋಣ, ನಡಿ."

"ಒದೆ ತಿನ್ನುತ್ತೀಯೆ"

ರಾಜೂ ಹೇಳಿದ: "ಚಿಂತೆಯಿಲ್ಲ ಒದೆಯನ್ನೇ ತಿನ್ನೋಣ, ಏಳು."

ಅವರಿಬ್ಬರೂ ಅದೇ ದ್ವೀಪವನ್ನು ಸೇರಿದರು. ಸ್ವಲ್ಪ ಹೊತ್ತು ಮೀನು ಹಿಡಿಯುವ ನಾಟಕ ಆಡಿದರು. ಅನಂತರ ಮೀನುಗಾರರು ನಿದ್ದೆ ಹೋದ ಮೇಲೆ ಸದ್ದಿಲ್ಲದೆ ಎದ್ದು ಬಂದು ಹತ್ತು ಹನ್ನೆರಡು ಸೇರಿನಷ್ಟು ಮೀನುಗಳನ್ನು ಲಪಟಾಯಿಸಿಬಿಟ್ಟರು. ಆ ಹೊತ್ತಿಗೆ ಸರಿಯಾಗಿ ಇದ್ದಕ್ಕಿದ್ದಂತೆ ಮೀನುಗಾರರೂ ಎದ್ದುಬಿಟ್ಟರು. ಅವರಿಬ್ಬರೂ ದೋಣಿಯನ್ನೆಳೆದುಕೊಂಡು ಓಡಿದರು. ಅಲ್ಲಿಯೇ ಸಿಕ್ಕ ತೊಗರಿಯ ಹೊಲದಲ್ಲಿ ನುಗ್ಗಿದರು. ಆಳ ಕಡಿಮೆಯಾಗಿದ್ದುದರಿಂದ ದೋಣಿಯಿಂದ ಇಳಿದು ಅದನ್ನು ಎಳೆದುಕೊಂಡು ಹೋಗತೊಡಗಿದರು. ಅಲ್ಲಿ ದೊಡ್ಡದೊಡ್ಡ ಹಾವುಗಳು ಇದ್ದುವು. ರಾಜೂ ಇದ್ದಕ್ಕಿದ್ದಂತೆ ಬೆಚ್ಚಿಬಿದ್ದಾಗ ಶರತ್ ಕೇಳಿದ: "ಏನಾಯ್ತು ಅಣ್ಣಯ್ಯ?"

ರಾಜೂ ಉತ್ತರಿಸಿದ: "ಏನೂ ಇಲ್ಲ! ಹಾವುಗಳು!"

ಶರತ್ ಒಮ್ಮೆಗೇ ಭಯದಿಂದ ನಡುಗಿದ. ಕೇಳಿದ: "ಹಾವುಗಳೇ!"

ರಾಜೂ ನಕ್ಕು ಹೇಳಿದ: "ಯಾಕೆ ಹೆದರುತ್ತೀಯೋ? ಹಾವು ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುತ್ತದೆ. ನಾವು ನಮ್ಮ ಪ್ರಾಣವನ್ನು ರಕ್ಷಿಸಿಕೊಳ್ಳುತ್ತೇವೆ. ಇದೇ ಲೋಕದ ನಿಯಮ."

ತಪ್ಪು ಮಾಡಿದಾಗ ಅವನಿಂದ ಶಿಕ್ಷೆಗೆ ಒಳಗಾಗುವುದನ್ನು ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ. ಅನ್ಯಾಯಕ್ಕೆ ವಿರುದ್ಧವಾಗಿ ಎದೆ ಸೆಟೆದು ನಿಂತುಕೊಳ್ಳುವುದು

ವಾಸ್ತವವಾಗಿ ಅವನ ಸ್ವಭಾವವೇ ಆಗಿತ್ತು. ಆಗಿನ್ನೂ ನಲ್ಲಿಗಳು ಬಂದಿರಲಿಲ್ಲ. ಕುಲಸ್ತ್ರೀಯರು ಮತ್ತು ಹೆಣ್ಣು ಮಕ್ಕಳು ನದಿಗೆ ಬಂದು ನೀರು ತುಂಬಿಕೊಂಡು ಹೋಗುತ್ತಿದ್ದರು. ಸ್ನಾನ, ಪೂಜೆ ಮೊದಲಾದ ಕೆಲಸಗಳನ್ನು ಅಲ್ಲಿಯೇ ಮಾಡುತ್ತಿದ್ದರು. ಅವರಿಗಾಗಿಯೇ ಪ್ರತ್ಯೇಕ ಸ್ನಾನಘಟ್ಟವಿತ್ತು. ಆದರೂ ಆಗಾಗ್ಗೆ ಅನಪೇಕ್ಷಿತರಾದ ಕೆಲವು ವ್ಯಕ್ತಿಗಳು ಅಲ್ಲಿ ತಲೆ ಹಾಕುತ್ತಿದ್ದರು. ಅವರ ಅಸಭ್ಯ ಚೆಲ್ಲಾಟಗಳು ಹೆಂಗಸರಿಗೆ ತುಂಬ ಕಿರಿಕಿರಿಯನ್ನುಂಟು ಮಾಡುತ್ತಿದ್ದುವು. ಹೀಗೆಯೇ ಒಂದು ದಿನ ಕೆಲವು ವ್ಯಕ್ತಿಗಳು ಅಲ್ಲಿಗೆ ಬಂದು ಹಾಸ್ಯ-ಕುಚೋದ್ಯ ಮಾಡುತ್ತ ಒಬ್ಬರ ಮೇಲೊಬ್ಬರು ನೀರೆರಚತೊಡಗಿದರು. ಯಾರೂ ಅವರನ್ನು ಅಡ್ಡಿಪಡಿಸಲಿಲ್ಲ. ಇದ್ದಕ್ಕಿದ್ದಂತೆ ರಾಜೂ ಆಕಡೆ ಬಂದ. ಅವನು ಈ ದೃಶ್ಯವನ್ನು ನೋಡಿದ. ಒಂದೇ ಒಂದು ಮಾತನ್ನು ಅವನು ಆಡಲಿಲ್ಲ. ಕೂಡಲೇ ಒಬ್ಬನ ಬಳಿಗೆ ಹೋಗಿ ಅವನ ಅಂಗವಸ್ತ್ರವನ್ನು ಕಸಿದುಕೊಂಡು, ಅದನ್ನೇ ಅವನ ಕೊರಳಿಗೆ ಸುತ್ತಿ ನೀರು ಇನ್ನೂ ಆಳವಾಗಿದ್ದ ಕಡೆಗೆ ಎಳೆದುಕೊಂಡು ಹೋಗಿ ಅಲ್ಲಿ ಅವನನ್ನು ಮುಳುಗು ಹಾಕಿಸತೊಡಗಿದ. ಹತಪ್ರಭನಾದ ಆ ವ್ಯಕ್ತಿ ಅಂಗಲಾಚುತ್ತ ಹೇಳಿದ: "ಕ್ಷಮಿಸಿಬಿಡು, ಅಣ್ಣಯ್ಯ, ಕ್ಷಮಿಸಿಬಿಡು, ಕೈಮುಗಿಯುತ್ತೇನೆ."

"ಇನ್ನೊಂದು ಸಲ ಇಲ್ಲಿಗೆ ಬರುತ್ತೀಯಾ ?"

"ಇಲ್ಲ, ಇಲ್ಲ, ಈ ಕಡೆ ಕಾಲು ಸಹ ಹಾಕುವುದಿಲ್ಲ."

"ದೇವರ ಮೇಲೆ ಆಣೆ ಇಟ್ಟು ಹೇಳು."

"ದೇವರ ಮೇಲೆ ಆಣೆ ಇಟ್ಟು ಹೇಳುತ್ತೇನೆ. ಮತ್ತೆ ಈ ಕಡೆ ಬರುವುದಿಲ್ಲ."

"ಹೋಗು, ಕ್ಷಮಿಸಿದ್ದೇನೆ."

ಮೋಕ್ಷದಾ ಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದರು. ತುಂಬ ಕಡಿಮೆ ಸಂಬಳ ದೊರೆಯುತ್ತಿತ್ತು. ಹೀಗಾಗಿ, ಪಾಠ ಹೇಳುವುದರ ಜೊತೆಗೆ ಬೇರೆ ಇತರ ಕೆಲಸಗಳನ್ನು ಮಾಡಬೇಕಾಗುತ್ತಿತ್ತು. ಇದರ ಪರಿಣಾಮವಾಗಿ ಮನೆಗೆ ಹಿಂದಿರುಗುವುದು ತುಂಬ ತಡವೇ ಆಗುತ್ತಿತ್ತು. ಒಮ್ಮೆ ಸಂಜೆಯ ಮಬ್ಬುಗತ್ತಲಿನಲ್ಲಿ ಅವರು ಮನೆಗೆ ಹಿಂದಿರುಗುತ್ತಿದ್ದರು. ಹಿಂದಿನಿಂದ ಬರುತ್ತಿದ್ದ ಆಂಗ್ಲ ಸಾಹೇಬನ ಕುದುರೆಯ ಗಾಡಿಯ ಗೊರಸಿನ ಸದ್ದು ಅವರಿಗೆ ಕೇಳಿಸಿತು. ಮರುಕ್ಷಣವೇ ತಮ್ಮ ಬೆನ್ನಿನ ಮೇಲೆ ಚಾಟಿ ಏಟಿನ ಸುರಿಮಳೆಯಾಗುತ್ತಿದ್ದ ಅನುಭವ ಅವರಿಗಾಯಿತು. ನೋವಿನಿಂದ ಒದ್ದಾಡುತ್ತ ಅವರು ಹಿಂದಿರುಗಿ ನೋಡಿದರೆ, ಅಷ್ಟು ಹೊತ್ತಿಗಾಗಲೇ ಆ ಸಾಹೇಬನ ಗಾಡಿ ಕತ್ತಲಲ್ಲಿ ಕರಗಿ ಹೋಗಿತ್ತು. ತಮ್ಮ ಯಾವ ತಪ್ಪಿಗಾಗಿ ಹೀಗೆ ಶಿಕ್ಷೆ ವಿಧಿಸಲಾಯಿತೆಂಬುದೂ ಅವರಿಗೆ ಗೊತ್ತಾಗಲಿಲ್ಲ.

ಒಂದಲ್ಲ ಹಲವು ಬಾರಿ ಹೀಗೆಯೇ ಆಯಿತು. ಅವರ ಮನಸ್ಸಿನಲ್ಲಿ ಗ್ಲಾನಿ ತುಂಬಿಕೊಂಡಿತು. ಈ ಬಗೆಯ ಅತ್ಯಾಚಾರಗಳ ವಿಷಯದಲ್ಲಿ ಸೇಡುತೀರಿಸಿಕೊಳ್ಳುವ ಹೊಣೆಯನ್ನು ರಾಜು ವಹಿಸಿಕೊಳ್ಳುತ್ತಾನೆಂಬುದು ಅವರಿಗೆ ಇದ್ದಕ್ಕಿದ್ದಂತೆ ನೆನಪಾಯಿತು. ಅವರು ಅವನ ಬಳಿಗೆ ಹೋಗಿ, ಬೆನ್ನಿನ ಮೇಲೆ ಆಗಿದ್ದ ರಕ್ತದ ಕಲೆಗಳನ್ನು ತೋರಿಸಿದರು. ಅವರ ಕಥೆಯನ್ನು ಕೇಳಿದ ಮೇಲೆ ರಾಜು ಇಷ್ಟು ಮಾತ್ರ ಹೇಳಿದ: "ಮೋಕ್ಷದಾಮಾಸ್ತರೆ, ತಾವು ಮನೆಗೆ ಹೋಗಿ, ನಾಳೆ ರಜಾ ಹಾಕಿಬಿಡಿ.

ಏನಾಯಿತು ಎಂಬುದು ನಾಡಿದ್ದು ನಿಮಗೇ ಗೊತ್ತಾಗುತ್ತದೆ."

ಮಾರನೆಯ ದಿವಸ ಸಂಜೆ ಏನಾಯಿತು ಅಂದರೆ ರಾಜು ಮತ್ತು ಶರತ್ ಒಂದು ದೊಡ್ಡ ಹಗ್ಗ ತೆಗೆದುಕೊಂಡು ತಮ್ಮ ತಂಡದೊಂದಿಗೆ ಆ ಮಬ್ಬುಗತ್ತಲಿನ ಹಾದಿಯ ಬಳಿಗೆ ಬಂದು ಸೇರಿದರು. ಆ ಹಾದಿಯ ಮೂಲಕವೇ ಆ ಸಾಹೇಬ ಪ್ರತಿದಿನವೂ ಕ್ಲಬ್ಬಿಗೆ ಹೋಗುತ್ತಿದ್ದ. ಹೊತ್ತಿಗೆ ಸರಿಯಾಗಿ, ಅವನ ಗಾಡಿ ಬರುತ್ತಿರುವ ಸದ್ದು ಕೇಳಿ ಬಂತು. ತನ್ನ ಸಂಗಡಿಗರ ನೆರವಿನಿಂದ ರಾಜು ಆ ಹಗ್ಗವನ್ನು ಹಾದಿಯ ಎರಡೂ ಬದಿಗಳಲ್ಲಿದ್ದ ಎರಡು ಮರಗಳಿಗೆ ಸೇರಿಸಿ ಬಿಗಿದು ಕಟ್ಟಿದ. ಕನಸಿನಲ್ಲೂ ಆ ಸಾಹೇಬ ಈ ಸಂಭವವನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಅವನು ತನ್ನ ಅದೇ ದೊಡ್ಡಸ್ತಿಕೆಯ ಗಾಂಭೀರ್ಯದೊಂದಿಗೆ ಬರುತ್ತಿದ್ದ. ಕುದುರೆ ಹಗ್ಗಕ್ಕೆ ಸಿಕ್ಕಿಕೊಂಡಿತು. ಕ್ಷಣ ಮಾತ್ರದಲ್ಲಿ ಆ ಸಾಹೇಬ ರಸ್ತೆಗೆ ಎಸೆಯಲ್ಪಟ್ಟ. ರಾಜು ಇದೇ ಅವಕಾಶಕ್ಕಾಗಿ ಕಾದಿದ್ದ. ಮನಸ್ಸಿಗೆ ತೃಪ್ತಿಯಾಗುವವರೆಗೂ ಆ ಸಾಹೇಬನನ್ನು ಬಡಿದು, ಹೇಳಿದ: "ಇನ್ನೆಂದಾದರೂ ನಿರಪರಾಧಿ ದಾರಿಹೋಕರನ್ನು ದಂಡಿಸುತ್ತೀಯಾ ?"

"ಇಲ್ಲ, ಇನ್ನೆಂದೂ ಹಾಗೆ ಮಾಡುವುದಿಲ್ಲ!"

" 'ಕ್ಷಮಿಸಿ' ಎಂದು ಹೇಳು."

"ಕ್ಷಮಿಸಿ."

"ಸರಿ, ಮನೆಗೆ ಹೊರಡು."

ಸಾಹೇಬ ಸದ್ದಿಲ್ಲದೆ ಅಲ್ಲಿಂದ ಹೊರಟುಹೋದ. ಅವನಿಗೆ ಅದೆಷ್ಟು ಅಪಮಾನವಾದಂತೆ ಆಯಿತು ಎಂದರೆ ಭಾಗಲಪುರದಲ್ಲಿಯೇ ಇರುವುದು ಅವನಿಗೆ ಸಾಧ್ಯವಾಗದೆ ಹೋಯಿತು. ವರ್ಗಮಾಡಿಸಿಕೊಂಡು ಬೇರೆಲ್ಲಿಗೋ ಅವನು ಹೊರಟುಹೋದ.[1]

ಮಾಘಮಾಸದಲ್ಲಿ ಭಾಗಲಪುರದಲ್ಲಿ ಭಯಂಕರ ಚಳಿಯಾಗುತ್ತಿತ್ತು. ಬಂಗಾಳಿ ಶಾಲೆಯ ಪಂಡಿತರ ಪತ್ನಿ ಆ ಅವಧಿಯಲ್ಲಿಯೇ ತೀರಿಕೊಂಡಿದ್ದರು. ಸ್ವತಃ ಪಂಡಿತರ ಆರೋಗ್ಯವೂ ಸರಿ ಇರಲಿಲ್ಲ. ಅವರ ಮಗ ತುಂಬ ಚಿಕ್ಕವನಾಗಿದ್ದ. ಈಗ ದಹನ ಕ್ರಿಯೆ ನಡೆಯುವುದಾದರೂ ಹೇಗೆ? ಶಾಲೆಯೊಂದರ ಮುಖ್ಯೋಪಾಧ್ಯಾಯ ರೊಬ್ಬರು ಇಂಥ ಸಂದರ್ಭಗಳಲ್ಲಿ ಇಂಥ ಜನರಿಗೆ ನೆರವಾಗಲು ಸದಾ ಸಿದ್ಧವಾಗಿರುತ್ತಿದ್ದರು. ಅವರಿಗೆ ಸುದ್ದಿ ತಿಳಿದಕೂಡಲೇ ತಮ್ಮ ಅನುಚರರ ತಂಡವನ್ನೇ ಕರೆದುಕೊಂಡು ಶವದಹನ ವ್ಯವಸ್ಥೆ ಮಾಡುವ ಸಲುವಾಗಿ ಅವರು ಅಲ್ಲಿ ಹಾಜರಾದರು. ಅನುಚರರ ಈ ತಂಡ ರಾಜು ಮತ್ತು ಶರತ್ ಅವರ ತಂಡವೇ ಆಗಿತ್ತು. ಅಂದು ಅಮಾವಾಸ್ಯೆಯ ರಾತ್ರಿಯಾಗಿತ್ತು. ಆಕಾಶದಲ್ಲಿ ಮೋಡಗಳು ತುಂಬಿಕೊಂಡಿದ್ದುವು. ಶ್ಮಶಾನ ಎರಡು ಹರದಾರಿಗಳಷ್ಟು ದೂರದಲ್ಲಿತ್ತು. ಶವಯಾತ್ರೆ ಆರಂಭಗೊಂಡಿತೋ ಇಲ್ಲವೋ, ಮಳೆಯ ಹನಿಗಳು ಟಪಟಪನೆ ಉದುರ ತೊಡಗಿದುವು. ಆಗ ಲಾಟೀನು ಸಹ ಸುಲಭವಾಗಿ ಸಿಕ್ಕುತ್ತಿರಲಿಲ್ಲ. ತೂತು ಮಾಡಿದ ಮಡಕೆಯಲ್ಲಿ ಇಟ್ಟಿದ್ದ ಎಣ್ಣೆಯ ದೀಪವೇ ದಾರಿ ತೋರುತ್ತಿತ್ತು. ಬೇಗ ಬೇಗ ಹೆಜ್ಜೆ

---

1 ಈ ಕಥೆ ಅನೇಕ ರೂಪಗಳಲ್ಲಿ ಪ್ರಚಾರದಲ್ಲಿದೆಯಾದರೂ ಮೂಲತಃ ಇದು ಸತ್ಯ ಸಂಗತಿ.

ಹಾಕುತ್ತ 'ಹರಿ ಹರಿ' ಎಂದು ಹೇಳುತ್ತ ಅವರು ಮುಂದೆ ಮುಂದೆ ಸಾಗುತ್ತಿದ್ದರು. ಮಳೆ ಮತ್ತಷ್ಟು ಜೋರಾಯಿತು. ನೋಡುನೋಡುತ್ತಿದ್ದಂತೆಯೇ ದಾರಿ ಹಾಗೂ ನದಿಯ ಘಟ್ಟಗಳೆಲ್ಲ ನೀರಿನಲ್ಲಿ ಮುಳುಗಿಹೋದುವು. ಹೊತ್ತುಕೊಂಡಿದ್ದ ಹೆಣವೂ ಭಾರವಾಗಿ ಬಿಟ್ಟಿತು. ಹೆಣವನ್ನು ಹುಣಸೆಮರದ ಕೆಳಗೆ ಇರಿಸಿ, ಸ್ವಲ್ಪವಾದರೂ ವಿಶ್ರಾಂತಿ ಪಡೆಯಬೇಕೆಂದು ಯೋಚಿಸಿದರು.

ಆ ಹೊತ್ತಿಗೆ ಸರಿಯಾಗಿ ಆಲಿಕಲ್ಲುಗಳೂ ಬೀಳತೊಡಗಿದುವು. ಕುಳಿತಿರುವುದು ಅಸಾಧ್ಯವಾಗಿ ಪರಿಣಮಿಸಿತು. ಈಗ ಹೆಣವನ್ನೇನು ಮಾಡುವುದು? ಅದನ್ನು ಒಂಟಿಯಾಗಿ ಬಿಟ್ಟು ಹೋಗುವುದಾದರೂ ಹೇಗೆ? ರಾಜೂ ಹೇಳಿದ: "ನೀವೆಲ್ಲ ಹೋಗಬಹುದು. ನಾನು ಇಲ್ಲಿರುತ್ತೇನೆ."

ಬಹಳ ಹೊತ್ತಿನ ತರುವಾಯ ಮಳೆ ನಿಂತ ಮೇಲೆ ಅವರೆಲ್ಲ ಹಿಂದಿರುಗಿದರು. ಹೆಣ ಹಾಗೆಯೇ ಇತ್ತು. ಆದರೆ ರಾಜುವೇ ಪತ್ತೆ ಇಲ್ಲ. ಆಸಾಮಿ ನಮಗೆಲ್ಲ ಕೈಕೊಟ್ಟು ಹೊರಟುಹೋಗಿದ್ದಾನೆ ಎಂದು ಅವರೆಲ್ಲ ಭಾವಿಸಿದರು. ಅವರು ಇನ್ನೂ ಯಾವುದೇ ತೀರ್ಮಾನಕ್ಕೆ ಬರುವುದರ ಒಳಗಾಗಿ, ಹೆಣ ಅತ್ತಿತ್ತ ಚಲಿಸುತ್ತಿರುವುದನ್ನೇ ಕಂಡರು. ಒಮ್ಮೆಗೇ ಚೀತ್ಕರಿಸುತ್ತ ಅವರೆಲ್ಲ ಅಲ್ಲಿಂದ ಓಡಿದರು. ಸ್ವಲ್ಪ ದೂರ ಹೋಗಿ ನಿಂತು, ಜನಿವಾರವನ್ನು ಕೈಯಲ್ಲಿ ಹಿಡಿದುಕೊಂಡು 'ರಾಮ ರಾಮ' ಎಂದು ಜಪಿಸುತ್ತ ನಿಂತರು. ಹೆಣ ನಿಧಾನವಾಗಿ ಅಲುಗಾಡುತ್ತಲೇ ಇತ್ತು. ಆಮೇಲೆ ಅದು ಎದ್ದು ನಿಲ್ಲುತ್ತಿರುವಂತೆಯೂ ತೋರಿತು. 'ರಾಮ-ರಾಮ' ಎಂಬ ಸ್ವರಘೋಷ ಮತ್ತಷ್ಟು ತೀವ್ರವಾಯಿತು. ಅದರ ಜೊತೆಗೇ ಹೆಣವೂ ಎದ್ದು ಕುಳಿತುಬಿಟ್ಟಿತು.

"ಓಡಿ, ಓಡಿ" ಎಂದು ಅರಚುತ್ತ ಅವರೆಲ್ಲ ಓಡತೊಡಗಿದರು. ಆದರೆ, ಜೋರಾದ ನಗುವಿನ ಸದ್ದನ್ನು ಕೇಳಿ ಹಿಂದಿರುಗಿ ನೋಡಿದರೆ ಅವರು ಕಂಡದ್ದಾದರೂ ಏನು? ಜೋರಾಗಿ ನಗುತ್ತ ಪ್ರೇತ ವಸ್ತ್ರದ ಒಳಗಿನಿಂದ ರಾಜೂ ಹೊರಬರುತ್ತಿದ್ದಾನೆ.

ಶಾಭಾಷ್ ಮಗನೆ! ನೂರು ಕಾಲ ಬಾಳು! ಇದೀಗ ಗಂಡಸಿನ ಕೆಲಸ!

ರಾಜುವಿನ ಈ ಬಗೆಯ ದುಸ್ಸಾಹಸದ ಕಾರ್ಯಗಳ ಕರಾರುವಾಕ್ಕಾದ ದಾಖಲೆಗಳು ಯಾರ ಬಳಿಯೂ ಇಲ್ಲ. ಆದರೆ ರಾಬಿನ್ ಹುಡ್‌ನಂಥವನ ವ್ಯಕ್ತಿತ್ವವೂ ಇವನ ವ್ಯಕ್ತಿತ್ವದೆದುರು ಕಳೆಗುಂದಿಬಿಡುತ್ತದೆ ಎಂಬುದು ನಿಜ. ಅವನ ಮೇರೆಯರಿಯದ ಈ ಸಾಹಸಗಳಿಗೆ ಬುನಾದಿಯಾಗಿದ್ದುದು ಸದಾ ಕಾಲದಲ್ಲಿಯೂ ಜಾಗೃತವಾಗಿರುತ್ತಿದ್ದ ಅವನ ದಯೆ ಮತ್ತು ಕರುಣೆಯ ಭಾವನೆಗಳು. ಕಷ್ಟದಲ್ಲಿರುವವರಿಗೆ ಅವನು ಗೆಳೆಯನಾಗಿರುತ್ತಿದ್ದ. ದುಷ್ಟರಾಗಿದ್ದವರಿಗೆ ಅವನು ಸಾಕ್ಷಾತ್ ಯಮನೇ ಆಗಿರುತ್ತಿದ್ದ. ಅವನಿಗೆ ಸಾವಿನ ಭಯವಿರಲಿಲ್ಲ. ಆದ್ದರಿಂದಲೇ ಅವನ ವೇಣುವಾದನ ಪ್ರವೃತ್ತಿ ಹಾಗೂ ಸನ್ಯಾಸ ಮನೋಭಾವಗಳೆರಡೂ ತುತ್ತತುದಿಯನ್ನೇ ತಲುಪಿದ್ದುವು.

ಮುಂದೆ ಕತೆಗಾರ ಶರತ್‌ಚಂದ್ರರು ಮಕ್ಕಳಿಗಾಗಿ ಬರೆದ ಕಥೆಗಳಿಗೆ ಇವು ಹಾಗೂ ಇಂಥವೇ ಇತರ ಘಟನೆಗಳು ಆಧಾರವಾಗಿದ್ದುವು. ಈ ಘಟನೆಗಳೇ ಅವರ ಗೋಷ್ಠಿಯ ಹರಟೆಗಳಲ್ಲಿಯೂ ಬಂದಿವೆ. ಅವರು ಹೀಗೆ ಬರೆದಿದ್ದಾರೆ: "ರಾಜು ಅಷ್ಟೇನೂ ಓದಿ ಬರೆದವನಲ್ಲ. ಆದರೆ ಅವನಲ್ಲಿ ಅನಂತ ಗುಣಗಳು ಮನೆ ಮಾಡಿಕೊಂಡಿದ್ದುವು. ಆ ವಯಸ್ಸಿನಲ್ಲಿಯೇ ಈ ಬಗೆಯ ಉನ್ನತ ಆದರ್ಶ

ಗಳನ್ನಿರಿಸಿಕೊಂಡಿದ್ದ ವ್ಯಕ್ತಿಯನ್ನು ನನ್ನ ಜೀವಮಾನದಲ್ಲಿಯೇ ನಾನು ಕಾಣಲಿಲ್ಲ."

ದುಸ್ಸಾಹಸಗಳಲ್ಲಿ ಶರತ್ ಕೂಡ ಯಾರಿಗೂ ಕಮ್ಮಿಯಾಗಿರಲಿಲ್ಲ. ರಾಜುವಿನ ಒಡನಾಟದಿಂದಾಗಿ ಅವನು ಮತ್ತಷ್ಟು ನಿರ್ಭಯನೂ, ದುರ್ದಮನೀಯನೂ ಆಗಿ ಪರಿಣಮಿಸಿದ್ದ. ಆ ದಿನಗಳಲ್ಲಿ ಭಾಗಲಪುರದಲ್ಲಿ ಕಳ್ಳತನ ಹಾಗೂ ದರೋಡೆಗಳು ಅತಿಯಾಗಿ ನಡೆಯುತ್ತಿದ್ದುವು. ಎಲ್ಲ ಜನರೂ ಎಚ್ಚರಿಕೆಯಿಂದಿರುತ್ತಿದ್ದರು. ರಾತ್ರಿಯ ಹೊತ್ತು ಆಯುಧಗಳನ್ನು ತಮ್ಮ ಬಳಿ ಇರಿಸಿಕೊಂಡೇ ನಿದ್ರಿಸುತ್ತಿದ್ದರು. ಆಗ ರಾಜುವಿನ ಸೋದರರಲ್ಲಿ ಒಬ್ಬರಾದ ಮಣೀಂದ್ರನಾಥ ಎಂಬುವರು ಕಾಲೇಜಿನಲ್ಲಿ ಓದುತ್ತಿದ್ದರು..ವಿಶ್ವವಿದ್ಯಾನಿಲಯದಲ್ಲಿ ಪರೀಕ್ಷೆಗಳು ನಡೆಯುತ್ತಿದ್ದುವು. ರಾತ್ರಿ ಬಹಳ ಹೊತ್ತಿನವರೆಗೆ ಎಚ್ಚರವಾಗಿದ್ದು ಓದಿಕೊಳ್ಳಬೇಕಾಗುತ್ತಿತ್ತು. ಗಂಗೆಯ ದಡದಲ್ಲಿದ್ದ ವಟವೃಕ್ಷಕ್ಕೆ ತೀರ ಹತ್ತಿರದಲ್ಲಿಯೇ ಅವರ ಕೋಣೆ ಇತ್ತು. ಸುತ್ತಮುತ್ತ ಬಿದಿರಿನ ಮೆಳೆಗಳ ಕಾಡು ಆವರಿಸಿಕೊಂಡಿತ್ತು. ಅದರಲ್ಲಿ ಭಯಂಕರವಾದ ಹಾವುಗಳೂ, ಕರಡಿಗಳೂ ತುಂಬಿಕೊಂಡಿದ್ದುವು. ಒಂದು ರಾತ್ರಿ ಓದುತ್ತ ಇದ್ದಾಗ, ಇದ್ದಕ್ಕಿದ್ದಂತೆ ಕಿಟಕಿಯ ಬಳಿ ಏನೋ ಸದ್ದಾಗುತ್ತಿದ್ದುದು ಮಣೀಂದ್ರನಾಥರಿಗೆ ಕೇಳಿಸಿತು. ಅವರು ಮೈಯೆಲ್ಲ ಕಣ್ಣಾಗಿ ಕುಳಿತರು. ಮನುಷ್ಯನ ತಲೆ ಮೇಲೆದ್ದು ಬರುತ್ತಿರುವಂತೆ ಅವರಿಗೆ ಕಂಡಿತು. ತನ್ನನ್ನು ಅಡಗಿಸಿಕೊಳ್ಳಲೂ ಅವನು ಪ್ರಯತ್ನಿಸುತ್ತಿರುವಂತೆ ತೋರಿತು. ತತ್‌ಕ್ಷಣವೇ ಅವರು ಬಂದೂಕವನ್ನು ಕೈಗೆತ್ತಿಕೊಂಡು ನಿಂತರು. ಇನ್ನೇನು ಅವರು ಗುಂಡು ಹಾರಿಸಬೇಕೆಂದಿದ್ದಾಗ ಯಾರೋ ಕೂಗಿ ಹೇಳಿದಂತಾಯಿತು: "ಏ ಮಣಿ, ಇದೇನು ಮಾಡುತ್ತ ಇದ್ದೀಯೆ ? ಗುಂಡು ಹಾರಿಸಬೇಡ. ನಾನು ಕಣೋ."

"ನಾನು ಅಂದರೆ ಯಾರೋ ?"

"ನಾನು, ಶರತ್."

ಸೀಳಿದರೂ ರಕ್ತ ಬರದಷ್ಟರ ಮಟ್ಟಿಗೆ ಮಣೀಂದ್ರ ಬಿಳಿಚಿಕೊಂಡರು. ಹತಪ್ರಭರಾಗಿ ಅವರು ನೋಡುತ್ತಲೇ ನಿಂತುಬಿಟ್ಟರು. ಕೆಲವು ಕ್ಷಣಗಳು ಕಳೆದ ಬಳಿಕ ಹೇಳಿದರು: "ಅಯ್ಯೋ ದೇವರೇ! ಇಷ್ಟು ಮುಂಚಿತವಾಗಿ ಭಯಂಕರವಾದ ಈ ಕಾಡಿನಲ್ಲಿ ನೀನೇನು ಮಾಡುತ್ತ ಇದ್ದೆಯೋ ?"

"ಏನೂ ಇಲ್ಲ. ನಿನ್ನನ್ನು ಹೆದರಿಸಬೇಕೆಂದು ಬಂದಿದ್ದೆ."

ಆಗಿನ್ನೂ ರಾತ್ರಿ ಎರಡು ಘಂಟೆ ಆಗಿತ್ತು. ವಿಷದ ಹಾವುಗಳ ಚಿಂತೆಯಾಗಲೀ, ಭಯಂಕರವಾದ ಕರಡಿಗಳ ಹೆದರಿಕೆಯಾಗಲೀ ಅವನನ್ನು ಕಾಡಿಯೇ ಇರಲಿಲ್ಲ.

ದುಸ್ಸಾಹಸದ ಕ್ಷೇತ್ರದಲ್ಲಿ ಶರತ್ ರಾಜುವಿನ ಸಂಗಡಿಗನಾಗಿದ್ದ. ಆದರೆ ಸಾಹಿತ್ಯದ ಕ್ಷೇತ್ರದಲ್ಲಿ ಅವನ ಸಂಗಡಿಗರಾಗುವಂಥವರು ಯಾರೂ ಅವನಿಗಿನ್ನೂ ದೊರೆತಿರಲಿಲ್ಲ. ಈ ರಹಸ್ಯ ಕೆಲವರಿಗೇನೋ ಗೊತ್ತಿತ್ತು ಎಂಬುದು ನಿಜ. ಅವನು ತಲೆಯ ಮೇಲೆ ಬೆಳೆಸಿಕೊಂಡಿದ್ದ ಉದ್ದುದ್ದನೆಯ ಕೇಶರಾಶಿಯನ್ನು ಕಂಡು ಅವರು ಹೀಗೆನ್ನುತ್ತಿದ್ದುದೂ ಉಂಟು: "ಅವನು ಹೀಗೇಕೆ ಕೂದಲು ಬಿಟ್ಟಿದ್ದಾನೆ ಎಂದರೆ ರವೀಂದ್ರನಾಥ ಠಾಕೂರರಂತೆ ಅವನೂ ಕವಿಯಾಗಬಯಸುತ್ತಾನೆ."

ಆ ಹೊತ್ತಿಗಾಗಲೇ ರವೀಂದ್ರನಾಥರು ಕವಿಗಳಾಗಿ ಖ್ಯಾತನಾಮರಾಗಿದ್ದರು. ಸಾಹಿತ್ಯ ಕ್ಷೇತ್ರದಲ್ಲಿ ಯಾರಾದರೂ ಕಾಲಿರಿಸುವುದೆಂದರೆ ಅದರ ಅರ್ಥ

ರವೀಂದ್ರನಾಥರಂತೆಯೇ ಆಗುವುದು ಎಂಬಂತಾಗಿತ್ತು. ಬಂಕಿಮರ ಗ್ರಂಥಗಳೆಲ್ಲವನ್ನೂ ಶರತ್ ಆ ಹೊತ್ತಿಗಾಗಲೇ ಓದಿ ಮುಗಿಸಿದ್ದ. ಕಾದಂಬರಿಯ ಕ್ಷೇತ್ರದಲ್ಲಿ ಇದರಿಂದ ಆಚೆಗೆ ಸಾಧಿಸಬಹುದಾಗಿರುವಂಥದ್ದೂ ಇದೆ ಎಂಬುದನ್ನು ಕಲ್ಪಿಸಿಕೊಳ್ಳುವುದೂ ಅಂದು ಅವನಿಗೆ ಸಾಧ್ಯವಿರಲಿಲ್ಲ.

'ಬಾಸಾ ಯಾ ಕಾಕಬಾಸಾ' ಎಂಬ ಹೆಸರಿನ ಮೊದಲ ಕಾದಂಬರಿಯನ್ನು ಅವನು ಬರೆದು ಮುಗಿಸಿದ್ದ.[1] ಯಾರಿಗೂ ಕಾಣದಂತೆ ಕದ್ದುಕುಳಿತು ಅದನ್ನು ಬರೆಯುತ್ತಿದ್ದುದನ್ನು ಮಾವ ಸುರೇಂದ್ರನಾಥರು ಮಾತ್ರ ಗಮನಿಸಿದ್ದರು. ಗಂಟೆಗಟ್ಟಲೆ ಅದೆಲ್ಲಿಂದ ಬಂದು ಅದೆಲ್ಲಿಗೆ ಹೋಗುತ್ತಿದ್ದರೋ ತಿಳಿಯದು; ಆದರೆ, ಅವನ ಬರವಣಿಗೆ ಮಾತ್ರ ನಿಲ್ಲುತ್ತಿರಲಿಲ್ಲ. ಇಷ್ಟಾಗಿಯೂ ಆಮೇಲೆ ಆ ಕೃತಿ ಅವನಿಗೆ ಹಿಡಿಸಲಿಲ್ಲ. ತಂದೆಯಂತೆಯೇ ಅವನು ಇದನ್ನು ಮತ್ತೆ ಓದಿದ. ಯೋಚಿಸಿದ: ಇದು ರವೀಂದ್ರನಾಥರ ಕೃತಿಯಂತೆ ಆಗಿದೆಯೆ ?

ಇಲ್ಲ, ಹಾಗೆ ಆಗಿಲ್ಲ.

ಹಾಗಾದರೆ ಇದು ವ್ಯರ್ಥ. ಬರೆದರೆ ರವೀಂದ್ರರಂತೆ ಬರೆಯಬೇಕು. ಇಲ್ಲವಾದರೆ ಬರೆಯಲೇಬಾರದು.

ಮತ್ತೊಂದು ದಿನ ಅವನು ಅದನ್ನು ಹರಿದು ಎಸೆದ. 'ಕಾಶೀನಾಥ' ಕೂಡ ಇನ್ನೂ ಆ ಮಟ್ಟಕ್ಕೆ ಬಂದಿರಲಿಲ್ಲ. ಅದಕ್ಕೆ ಅವನು ನೀಳ್ಗತೆಯ ರೂಪ ಕೊಡಬೇಕೆಂದು ಇಚ್ಛಿಸಿದ್ದ. 'ಕೋರೇಲ ಗ್ರಾಮ' ಎಂಬ ಕಥೆಯನ್ನೂ ದೇವಾನಂದಪುರದಲ್ಲಿಯೇ ಆರಂಭಿಸಿದ್ದ. ಆದರೆ ಆ ರೂಪದಲ್ಲಿ ಅದು ಎಂದೂ ಬೆಳಕಿಗೆ ಬರಲೇ ಇಲ್ಲ. ಬರೆಯಬೇಕೆಂಬ ಬಯಕೆ ಒಂದೇ ಸಮನೆ ತೀವ್ರವಾಗುತ್ತ ಬರುತ್ತಿತ್ತು. ಒಳಗಿಂದೊಳಗೇ ಮನಸ್ಸಿನಲ್ಲಿ ಒಂದು ಬಗೆಯ ಬಯಕೆ ಮೇಲೇಳುತ್ತಿತ್ತು. ಈ ಲೋಕದಲ್ಲಿ ನಾವು ಕಂಡು-ಕೇಳುವ ಬಗೆಬಗೆಯಾದ ಸಂಗತಿಗಳಿಗೆ ಯಾವುದಾದರೂ ಒಂದು ರೂಪವನ್ನು ಕೊಡಲು ಸಾಧ್ಯವಿಲ್ಲವೆ ? ಮೊದಮೊದಲು ಅವನು ಅಲ್ಲಿಂದ ಇಲ್ಲಿಂದ ಕದ್ದು ಬರೆಯುತ್ತಿದ್ದ. ಅನುಭವವಿಲ್ಲದೆ ಇದ್ದುದರಿಂದ ಚೆನ್ನಾಗಿ ಏನನ್ನೂ ಬರೆಯಲು ಆಗುತ್ತಿರಲಿಲ್ಲ. ಆದರೆ, ಬಾಳಿನ ಪಾಠಶಾಲೆಯಲ್ಲಿ ಬಗೆಬಗೆಯಾದ ಕೊರತೆಗಳಿಂದಾಗಿ ಅರಿವು-ಅನುಭವಗಳು ಆಗುತ್ತ ಬರತೊಡಗಿದಂತೆ ಅವನ ಲೇಖನಿಯಲ್ಲೂ ಶಕ್ತಿ ತುಂಬಿಕೊಳ್ಳುತ್ತ ಹೋಯಿತು.

ಕಥೆಗಳನ್ನು ಕಲ್ಪಿಸಿ ಹೇಳುವ, ಹುಟ್ಟಿನಿಂದ ಬಂದಿದ್ದ ಅವನ ಪ್ರತಿಭೆ ಒಂದೇ ಸಮನೆ ಪ್ರಗತಿಯನ್ನು ಸಾಧಿಸುತ್ತ ನಡೆದಿತ್ತು. ಇತರ ಗೆಳೆಯರು ಕಾಲ್ಚೆಂಡಿನ ಆಟದಲ್ಲಿ ಪಾಲ್ಗೊಳ್ಳುತ್ತಿದ್ದರೆ, ಆ ಚಿಕ್ಕ ವಯಸ್ಸಿನಲ್ಲಿಯೇ ಅವನು ಸಣ್ಣಪುಟ್ಟ ಮಕ್ಕಳನ್ನು ತನ್ನ ಸುತ್ತ ಕಲೆ ಹಾಕಿಕೊಂಡು, ಒಂದಾದ ಮೇಲೆ ಒಂದರಂತೆ ಕಥೆಗಳನ್ನು ಹೇಳುತ್ತ ಅವರನ್ನು ಮಂತ್ರಮುಗ್ಧರನ್ನಾಗಿಸುತ್ತಿದ್ದ. ನಡುನಡುವೆ ಅವರನ್ನು ಕೇಳುತ್ತಿದ್ದ: "ಹೇಗಿದೆಯೇ ಕಥೆ ?"

ಆ ಬಡಪಾಯಿ ಮಕ್ಕಳಿಗೆ ಏನಾದರೂ ಅರ್ಥವಾಗುತ್ತಿತ್ತೋ ಇಲ್ಲವೋ ಯಾರಿಗೆ ಗೊತ್ತು. ಆದರೆ ಅದಮ್ಯ ಸಾಹಸಿಯೂ ಕಥಾ ವಿದ್ಯಾವಿಶಾರದನೂ ಆದ ಅವನಿಗೆ

---

1. 1894

ಹೀಗೆಂದೇ ಹೇಳುತ್ತಿದ್ದರು: "ತುಂಬ ಚೆನ್ನಾಗಿದೆ ಕಣಣ್ಣ."

ಶ್ರೀಕಾಂತನ ವಿಷಯದಲ್ಲಿಯೂ ರಾಜಲಕ್ಷ್ಮಿ ಹೀಗೆಯೇ ಹೇಳುತ್ತಿದ್ದಳು: "ಇದರಲ್ಲಿ ಆಶ್ಚರ್ಯವೇನು ಬಂತು, ಆನಂದ! ತನ್ನ ಮನಸ್ಸಿನಲ್ಲಿ ಮೂಡುತ್ತಿದ್ದ ಮಾತುಗಳನ್ನು ಅದುಮಿ ಹಿಡಿಯುತ್ತ ಹಿಡಿಯುತ್ತ ಹಾಗೂ ಕಥೆಗಳನ್ನು ಕಲ್ಪಿಸಿ ಹೇಳುತ್ತ ಹೇಳುತ್ತ ಈ ವಿದ್ಯೆಯಲ್ಲಿ ಅವನು ಪೂರ್ಣ ರೂಪದಲ್ಲಿ ಮಹಾಮಹೋಪಾಧ್ಯಾಯನೇ ಆಗಿಬಿಟ್ಟಿದ್ದಾನೆ."[1]

## 8

ದುಸ್ಸಾಹಸದ ಈ ಕಾರ್ಯಗಳ ಹಾಗೂ ಸಾಹಿತ್ಯ ಸೃಷ್ಟಿಯ ಪ್ರಯತ್ನಗಳ ನಡುವೆ ಪ್ರವೇಶಿಕಾ ಪರೀಕ್ಷೆಯ ಫಲಿತಾಂಶ ಯಾವಾಗಲೋ ಪ್ರಕಟವಾಗಿತ್ತು.[2] ಎಲ್ಲ ಅಡೆತಡೆಗಳ ನಡುವೆಯೂ ಅವನು ಎರಡನೆಯ ದರ್ಜೆಯಲ್ಲಿ ಉತ್ತೀರ್ಣನಾಗಿದ್ದ. ಈಗ ಅವನು ಕಾಲೇಜಿನ ಮೆಟ್ಟಿಲು ಹತ್ತಬೇಕಾಗಿತ್ತು. ಆದರೆ, ಎಂದಿನಂತೆ ಶುಲ್ಕವನ್ನು ಕಟ್ಟುವ ಪ್ರಶ್ನೆ ಮತ್ತೆ ಅಡ್ಡಿಯಾಗಿ ಎದುರು ನಿಂತಿತು. ಪ್ರವೇಶ ಪರೀಕ್ಷೆಯ ಶುಲ್ಕವನ್ನೇ ಕಟ್ಟಲಾರದ ವ್ಯಕ್ತಿ ಹೇಗೆ ತಾನೆ ಕಾಲೇಜಿನ ವೆಚ್ಚವನ್ನು ಭರಿಸಿಯಾನು? ಆದರೆ, ತನ್ನ ಮಗ ದೊಡ್ಡ ಮನುಷ್ಯನಾಗಬೇಕೆಂಬುದು ಅವನ ತಾಯಿಯ ಬಯಕೆಯಾಗಿತ್ತು. ಹೀಗಾಗಿ, ಆಕೆ ಎಲ್ಲರ ಎದುರೂ ಕೈಚಾಚಿದಳು. ಕೊನೆಗೆ ಚಿಕ್ಕಜ್ಜಿ ಕುಸುಮಕಾಮಿನಿ ಶರತ್‌ನ ನೆರವಿಗೆ ಬಂದಳು. ತನ್ನ ಗಂಡನೊಡನೆ ಸಮಾಲೋಚಿಸಿ, ಅವಳು ಅವನನ್ನು ಮನೆಯ ಚಿಕ್ಕ ಮಕ್ಕಳಿಗೆ ಪಾಠ ಹೇಳುವ ಕೆಲಸಕ್ಕೆ ನೇಮಿಸಿದಳು. ಇದಕ್ಕೆ ಪ್ರತಿಯಾಗಿ ಕಾಲೇಜಿನ ಶುಲ್ಕ ಮತ್ತು ಪುಸ್ತಕಗಳನ್ನು ಕೊಳ್ಳುವುದಕ್ಕೆ ಅಗತ್ಯವಾದಷ್ಟು ಹಣ ದೊರೆಯುವಂತಾಯಿತು. ಈ ಮಾವಂದಿರಿಗೆ ಪಾಠ ಹೇಳಿಕೊಟ್ಟ ಬಳಿಕ, ಅವನು ತನ್ನ ಪಾಠಗಳನ್ನು ಓದಿಕೊಳ್ಳುತ್ತಿದ್ದ. ನಡುರಾತ್ರಿ ಮೀರಿ ಹೋಗುತ್ತಿತ್ತು. ಬೆಳಿಗ್ಗೆ ಮುಂಚಿತವಾಗಿ ಏಳುವುದಂತೂ ಅವನಿಗೆ ಎಂದೂ ಪ್ರಿಯವಾದ ಸಂಗತಿಯಾಗಿರಲಿಲ್ಲ.

ಒಮ್ಮೆ ಕಾಲೇಜಿನ ಮೊದಲ ವರ್ಷದಲ್ಲಿ ವಿಜ್ಞಾನದ ಬಗೆಗಿನ ಪರೀಕ್ಷೆ ನಡೆಯಲಿತ್ತು. ಹಿಂದಿನ ದಿನ ರಾತ್ರಿ ಅವನು ತನ್ನೆಲ್ಲ ವಿದ್ಯಾರ್ಥಿಗಳನ್ನೂ ಕರೆದು ಹೇಳಿದ: "ನಾಳೆ ನನಗೆ ಪರೀಕ್ಷೆ ಇದೆ. ನಾನು ಓದಬೇಕೆಂದು ಇಚ್ಛಿಸಿದ್ದೇನೆ. ಇವತ್ತು ರಾತ್ರಿ ನನಗೆ ತೊಂದರೆ ಕೊಡಬೇಡಿ. ಏನು ಕೇಳಬೇಕಾಗಿದ್ದರೂ ನಾಳೆ ಬೆಳಿಗ್ಗೆ ಬಂದು ಕೇಳಿ."

ವಿದ್ಯಾರ್ಥಿಗಳು ಹೊರಟುಹೋದರು. ಅವನು ವಿಜ್ಞಾನದ ದಪ್ಪದಪ್ಪ ಪುಸ್ತಕಗಳನ್ನು ಇಟ್ಟುಕೊಂಡು ಓದಲು ಕುಳಿತ. ಕಿಟಕಿ ಬಾಗಿಲುಗಳನ್ನೆಲ್ಲ ಮುಚ್ಚಿಬಿಟ್ಟ. ಮಾರನೆಯ ದಿವಸ ಬೆಳಿಗ್ಗೆ ವಿದ್ಯಾರ್ಥಿಗಳ ತಂಡ ಗೊತ್ತುಪಡಿಸಿದ್ದ ಸಮಯಕ್ಕೆ ಸರಿಯಾಗಿ ಹಾಜರಾಯಿತು. ನೋಡಿದರೆ, ಇನ್ನೂ ದೀಪ ಉರಿಯುತ್ತಲೇ ಇದೆ.

---

1 'ಶ್ರೀಕಾಂತ್' - ನಾಲ್ಕನೆಯ ಅಧ್ಯಾಯ

2 1894

ಶರತ್ ತದೇಕಚಿತ್ತನಾಗಿ ಓದುವುದರಲ್ಲಿ ಮಗ್ನನಾಗಿದ್ದಾನೆ. ಮಕ್ಕಳು ಬಂದ ಸದ್ದನ್ನು ಕೇಳಿ ಅವನು ಬೆಚ್ಚಿಬಿದ್ದ ಹಾಗೂ ಕೋಪದಿಂದ ಗದರಿಸಿದ: "ಇವತ್ತು ರಾತ್ರಿ ನನಗೆ ತೊಂದರೆ ಕೊಡಬೇಡಿ ಎಂದು ಅದೆಷ್ಟು ಸಾರಿ ನಿಮಗೆ ಹೇಳಿದ್ದ? ನಾಳೆ ನನಗೆ ಪರೀಕ್ಷೆ ಇದೆ, ನಿಮಗೆ ಈಗ ಪಾಠ ಹೇಳಿಕೊಡಲು ನನಗೆ ಆಗುವುದಿಲ್ಲ ಎಂದು ಹೇಳಿರಲಿಲ್ಲವೆ? ಆದರೆ, ನೀವು ನನ್ನ ಮಾತು ಕೇಳುವಂತೆಯೇ ತೋರುವುದಿಲ್ಲ."

ವಿದ್ಯಾರ್ಥಿಗಳು ವಿಸ್ಮಿತರಾಗಿ, ಚಕಿತರಾಗಿ ಒಬ್ಬರು ಇನ್ನೊಬ್ಬರನ್ನು ನೋಡತೊಡಗಿದರು. ಆ ಮಾವಂದಿರಲ್ಲಿ ಒಬ್ಬ ಹೇಗೋ ಧೈರ್ಯಮಾಡಿ ಹೇಳಿದ: "ನೆನ್ನೆ ರಾತ್ರಿ ತಾನೆ ನೀವು ಹಾಗೆ ಹೇಳಿದ್ದುದು? ಈಗಾಗಲೇ ಬೆಳಕು ಹರಿದಿದೆ."

ಶರತ್ ಕೂಡಲೇ ಎದ್ದು ಕಿಟಕಿಯನ್ನು ತೆರೆದರೆ, ಮುಂಜಾನೆಯ ಹೊಂಬಿಸಿಲು ಕೋಣೆಯನ್ನೆಲ್ಲ ತುಂಬಿಕೊಂಡಿತು. ಓದಿನ ಬಗೆಗಿನ ಶ್ರದ್ಧೆ ಆಸಕ್ತಿಗಳು ಹೀಗಿದ್ದುದರಿಂದಲೇ ವಿಜ್ಞಾನದ ಪ್ರಶ್ನೆಪತ್ರಿಕೆಗೆ ಅವನು ಬರೆದಿದ್ದ ಉತ್ತರಗಳನ್ನು ನೋಡಿ ಸ್ವತಃ ಅಧ್ಯಾಪಕರೇ ಆಶ್ಚರ್ಯಚಕಿತರಾಗಿದ್ದರು. ಶರತ್ ಈ ಉತ್ತರಗಳನ್ನು ಬರೆದಿರಬಹುದೆಂದು ಅವರಿಗೆ ನಂಬಲು ಸಾಧ್ಯವೇ ಆಗಿರಲಿಲ್ಲ. ಬಹುಶಃ ಪುಸ್ತಕದಿಂದ ಇವನು ಉತ್ತರಗಳನ್ನು ಕಾಪಿ ಹೊಡೆದಿರಬೇಕೆಂದು ಅವರು ಭಾವಿಸಿದರು.

ಶರತ್‌ನನ್ನು ಕರೆಸಿ, ಅವನಿಗೆ ಹೊಸ ಪ್ರಶ್ನ ಪತ್ರಿಕೆಯನ್ನು ಸಿದ್ಧಪಡಿಸಿಕೊಟ್ಟು ಹೇಳಿದರು: "ಈ ಪ್ರಶ್ನೆಗಳಿಗೆ ಉತ್ತರವನ್ನು ಬರೆದುಕೊಡು."

ಈ ಬಾರಿ ವಾಚಿಕವಾಗಿಯೇ ಆ ಎಲ್ಲ ಪ್ರಶ್ನೆಗಳಿಗೂ ಉತ್ತರಗಳನ್ನು ಹೇಳಿ ಅವನು ಅಧ್ಯಾಪಕರು ಬೆರಗಾಗುವಂತೆ ಮಾಡಿದ. ಅವನ ನೆನಪಿನ ಶಕ್ತಿ ನಿಜಕ್ಕೂ ಅಸಾಧಾರಣವಾಗಿತ್ತು. ಆದರೆ, ಕ್ರಮೇಣ ರಾಜುವಿನೊಡನೆ ಅವನ ಸಂಪರ್ಕ ಹೆಚ್ಚುತ್ತ ನಡೆದಿತ್ತು. ನೋಡು-ನೋಡುತ್ತಿದ್ದಂತೆಯೇ ಅದೇ ಮುಖ್ಯವಾಗಿ ಪರಿಣಮಿಸಿ, ಉಳಿದ ಎಲ್ಲ ಚಟುವಟಿಕೆಗಳೂ ಹಿನ್ನೆಲೆಗೆ ಸರಿದುಬಿಟ್ಟುವು. ಮೀನುಗಳ್ಳತನದಲ್ಲಿ ಹಾಗೂ ಕಷ್ಟದಲ್ಲಿರುವವರಿಗೆ ನೆರವಾಗುವುದರಲ್ಲಿ ಅವನು ಹೆಚ್ಚುಹೆಚ್ಚಾಗಿ ಆಸಕ್ತಿ ತೋರತೊಡಗಿದ. ಹಾಡುಗಾರಿಕೆ ಮತ್ತು ವಾದ್ಯಗಳನ್ನು ನುಡಿಸುವ ಬಗೆಗಿನ ಗೀಳು ಎಷ್ಟು ಹೆಚ್ಚಾಯಿತೆಂದರೆ ಈ ಅಲೆದಾಟ ಮತ್ತು ಸಂಚಾರಿ ನಾಟಕ ಕಂಪೆನಿಗಳ ಒಡನಾಟದಲ್ಲಿ ರಾತ್ರಿಯ ಬಹುಭಾಗ ಕಳೆದುಹೋಗುತ್ತಿತ್ತು. ಇದೆಲ್ಲ ಆದಮೇಲೆ ನಡುರಾತ್ರಿಯಲ್ಲಿ ಓದಲು ಕುಳಿತುಕೊಳ್ಳುತ್ತಿದ್ದ. ಇದನ್ನೆಲ್ಲ ಕಂಡು ಅವನ ತಾಯಿಗೆ ತುಂಬ ದುಃಖವಾಯಿತು. ಆದರೆ, ಈ ಸಂಗತಿ ಅವನ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. ಒಳ್ಳೆಯ ವಿದ್ಯಾರ್ಥಿ ಎಂದು ಅವನು ಗಳಿಸಿದ್ದ ಖ್ಯಾತಿ ಕ್ರಮೇಣ ಕಡಿಮೆಯಾಗತೊಡಗಿತು.

ಈ ಹೊತ್ತಿಗೆ ಸರಿಯಾಗಿ ಅವನ ತಾಯಿಯೂ ತೀರಿಕೊಂಡಳು.[1] ಈ ಸರಳಜೀವಿ ಸತಿ-ತಾಯಿ ಕನಸುಗಾರನೂ ಕೆಲಸಕ್ಕೆ ಬಾರದವನೂ ಆದ ತನ್ನ ಗಂಡನ ಕುಟುಂಬವನ್ನು ಅದು ಹೇಗೆ ಕಾಪಾಡಿಕೊಂಡು ಬಂದಳು ಎಂಬುದನ್ನು

1. ನವೆಂಬರ್ 1895

ಮಾತುಗಳಲ್ಲಿ ವಿವರಿಸಿ ಹೇಳುವುದು ಅಸಾಧ್ಯವಾಗುತ್ತದೆ. ತುಂಬಿದ ಶ್ರೀಮಂತ ಕುಟುಂಬದ ಹೆಣ್ಣು ಮಗಳಾಗಿದ್ದರೂ, ಗೃಹಿಣಿಯಾಗಿ ಆಕೆಯೆಂದೂ ಸುಖಪಡಲಿಲ್ಲ. ಆಕೆಯ ಇಡೀ ಬಾಳು ಆ ಕುಟುಂಬದ ಹೊಟ್ಟೆ ಹೊರೆಯುವುದರಲ್ಲಿಯೇ ತೇದು ಹೋಯಿತು. ಅದೃಷ್ಟದಲ್ಲಿ ನಂಬಿಕೆ ಇರಿಸಿರುವ ಪತಿವ್ರತೆಯಾದ ಹಿಂದೂ ನಾರಿಯಂತೆ, ಆಕೆ ಒಂದೊಂದಾಗಿ ತನ್ನೆಲ್ಲ ಒಡವೆಗಳನ್ನ ಮಾರಿಬಿಟ್ಟಳು; ಮತ್ತೆ ಮತ್ತೆ ತನ್ನ ತಂದೆ ಹಾಗೂ ಚಿಕ್ಕಪ್ಪ-ದೊಡ್ಡಪ್ಪಂದಿರ ಮುಂದೆ ಕೈಚಾಚಿದಳು. ತನ್ನ ಮಗ ಹೇಗಾದರೂ ದೊಡ್ಡ ಮನುಷ್ಯ ಎನ್ನಿಸಿಕೊಳ್ಳುವಂತಾಗಲಿ ಎಂದೇ ಆಕೆ ಇಷ್ಟೆಲ್ಲ ಮಾಡಿದಳು. ಮೇರೆಯರಿಯದ ಒಲವಿನಿಂದ ಮಗನನ್ನು ಬಳಿಯಲ್ಲಿ ಕುಳ್ಳಿರಿಸಿ ಅದೆಷ್ಟು ಬಾರಿ, “ಶರತ್, ನನ್ನ ಕಂದ! ನೀನೆಷ್ಟೇ ತುಂಟಾಟ ಮಾಡಿದರೂ, ನೀನು ಒಳ್ಳೆಯವನೆಂದು ನನಗೆ ಗೊತ್ತು. ನೀನು ಮನಸ್ಸಿಟ್ಟು ಓದು. ನಾನು ನಿನಗೆ ನೆರವಾಗುತ್ತೇನೆ” ಎಂದು ಹೇಳಿದ್ದಳೋ ಏನೋ. ಆದರೆ, ಬಾಳಿನ ಕೊನೆಯ ದಿನಗಳಲ್ಲಿ ಆಕೆಯ ಈ ಆಸೆಯೂ ಕ್ಷೀಣಿಸತೊಡಗಿತು. ಆಕೆ ಅಕಾಲದಲ್ಲಿಯೇ ಮುದುಕಿಯಂತಾಗಿ ಬಿಟ್ಟಿದ್ದಳು. ಕೊನೆಗೆ ಎಲ್ಲ ದಿಕ್ಕುಗಳಿಂದಲೂ ಚಿಂತೆಗಳು ದುಃಖಗಳು ಬಂದು ಆಕೆಯ ಮೇಲೆ ಕವಿದುಕೊಂಡಾಗ, ಆಕೆ ತನ್ನ ಕೊನೆಯುಸಿರನ್ನೆಳೆದಳು.

ಆಕೆಯ ಅಸಂತೋಷ ಕುದಿದೆದ್ದಂಥ ಕ್ಷಣಗಳೂ ಆಕೆಯ ಬಾಳಿನಲ್ಲಿ ಕಾಣಿಸಿಕೊಂಡಿದ್ದುವು. ತನ್ನ ಗಂಡನನ್ನು ಆಕೆ ಅಂದು-ಆಡಿದ್ದೂ ಉಂಟು. ಆದರೆ, ತನ್ನ ಆ ಆತ್ಮರತ-ಮುಗ್ಧ, ಕೆಲಸಕ್ಕೆ ಬಾರದ ಕನಸುಗಾರ ಪತಿಯನ್ನು ಹಿಂದೂ ನಾರಿಯಂತೆ ಆಕೆ ತುಂಬ ಪ್ರೀತಿಯಿಂದಲೇ ಕಾಣುತ್ತಿದ್ದಳು. ಶುಭದಾ ಕೂಡ ಇದೇ ಮಾತನ್ನು ಹೇಳುತ್ತಾಳೆ: “ಗಂಡನಿಂದ ಅವಳು ಒಂದು ದಿನವೂ ಸುಖವನ್ನು ಕಾಣಲಿಲ್ಲ. ಅಂಥ ಸುಖವನ್ನು ಕಂಡ ನೆನಪಂತೂ ಅವಳಿಗಿಲ್ಲ. ಆದರೂ ಆ ತನ್ನ ಪತಿಗೆ ಊಟ-ಉಪಚಾರ ಮಾಡಿ ಬಡಿಸುವುದರಲ್ಲಿ ತನಗೆ ಅದೆಷ್ಟು ಸಂತೋಷ, ಅದೆಂಥ ತೃಪ್ತಿ ದೊರೆಯುತ್ತದೆ ಎಂಬುದು ಅವಳಿಗೆ ಸರಿಯಾಗಿ ಅರಿವಾಗುತ್ತಿರಲಿಲ್ಲ. ಸಂತೋಷದಿಂದಾಗಿ ಅವಳ ಕಣ್ಣಂಚಿನಲ್ಲಿ ನೀರು ತುಂಬಿಕೊಳ್ಳುತ್ತಿತ್ತು.

ಭುವನಮೋಹಿನಿಯೂ ಹೀಗೆಯೇ ಪ್ರೇಮಾರ್ದ್ರಹೃದಯಿಯಾಗಿದ್ದಳು. ಇಡೀ ಶರತ್ ಸಾಹಿತ್ಯ ಈ ಪ್ರೇಮಾರ್ದ್ರ ಹೃದಯದ ಮುಕ್ತ ಪ್ರವಾಹದಿಂದ ಬೆಳಗಿದೆ. ತಾಯಿ ಎನ್ನುವ ಮಾತಿನಲ್ಲಿ ಅದೆಷ್ಟು ಕೋಮಲತೆ, ಅದೆಷ್ಟು ತ್ಯಾಗ, ಅದೆಷ್ಟು ವಾತ್ಸಲ್ಯ ಮತ್ತು ಮಹತ್ತರವಾದ ಹೊಣೆಗಾರಿಕೆ ಅಡಗಿದೆಯೋ ಅದಕ್ಕೆ ಮೂರ್ತರೂಪವನ್ನು ಕೊಡುವುದರಲ್ಲಿಯೇ ಆಕೆ ತನ್ನೆಲ್ಲ ಶಕ್ತಿಯನ್ನು ಬರಿದು ಮಾಡಿಬಿಟ್ಟಳು. ಆದರೆ, ಆಕೆಯ ವಾತ್ಸಲ್ಯದಲ್ಲಿ ಇನ್ನೊಂದು ವೈಶಿಷ್ಟ್ಯವೂ ಇತ್ತು. ಅದು ಪ್ರಕಟವಾಗುತ್ತಿದ್ದುದು ತನ್ನ ಹೊಟ್ಟೆಯಲ್ಲಿ ಹುಟ್ಟಿದ್ದವರ ವಿಷಯದಲ್ಲಿ ಮಾತ್ರವೇ ಅಲ್ಲ; ನಾರಾಯಣಿ, ವಿಶ್ವೇಶ್ವರಿ, ಹೇಮಾಂಗಿನಿ, ಬಿಂದೋ ಮೊದಲಾದವರ ವಿಷಯದಲ್ಲಿ ತೋರುವಂತೆಯೇ, ಸನ್ಮಾನ-ಸ್ಥಾನೀಯರಾದರೂ ತನ್ನ ಮಕ್ಕಳಲ್ಲದವರ ವಿಷಯದಲ್ಲಿಯೂ ಅಜಸ್ರಧಾರೆಯಾಗಿ ಹರಿಯುತ್ತಿತ್ತು.

ಭುವನಮೋಹಿನಿ ತನ್ನ ತಂದೆಯ ಮನೆಯಲ್ಲಿಯೂ ಜೀವನವಿಡೀ ಇದೇ ರೀತಿ

ನಡೆದುಕೊಂಡಿದ್ದಳು. ಈ ಕಾರಣದಿಂದಾಗಿಯೇ ತಾನೆಷ್ಟೇ ತುಂಟಾಟಗಳಲ್ಲಿ ತೊಡಗಿದ್ದರೂ, ಶರತ್‌ಗೆ ತನ್ನ ತಾಯಿಯ ಬಗ್ಗೆ ತುಂಬ ಪ್ರೀತಿಯಿತ್ತು. ಪ್ರವೇಶಿಕಾ ಪರೀಕ್ಷೆಯಲ್ಲಿ ಉತ್ತೀರ್ಣನಾದ ಬಳಿಕ ಆ ತಾಯಿ ಶರತ್‌ನೊಂದಿಗೆ ಹೀಗೆಂದಿದ್ದಳು: "ನಾನು ತಾರಕೇಶ್ವರಕ್ಕೆ ಹೋಗಬೇಕಾಗಿದೆ. ನಿನ್ನ ಮುಡಿ ಕೊಡುವುದಾಗಿ ನಾನು ಹರಕೆ ಹೊತ್ತಿದ್ದ."

ಶರತ್ ತುಂಬ ಆಸೆಯಿಂದ ಉದ್ದವಾಗಿ ಕೂದಲನ್ನು ಬೆಳೆಸಿಕೊಂಡಿದ್ದ. ಅವನ್ನು ಕತ್ತರಿಸಬೇಕಾಗುತ್ತದೆಂಬ ಕಲ್ಪನೆಯೇ ಅವನನ್ನು ನಡುಗಿಸಿಬಿಟ್ಟಿತು. ತನ್ನ ರೂಪ ಹೇಗಾಗಿ ಬಿಡುತ್ತದೆ ? ಆ ಬೋಳು ತಲೆ, ಅಬ್ಬಾ ? ಇಲ್ಲ, ಇಲ್ಲ, ತಾನು ಕೂದಲನ್ನು ತೆಗೆಸಿಕೊಳ್ಳುವುದಿಲ್ಲ. ತಾನು ಅಂಥ ಆಸ್ತಿಕನೇನೂ ಅಲ್ಲ!

ತಾಯಿ ಹೇಳಿದಳು: "ಸರಿ, ನೀನೇನೂ ಮುಡಿಕೊಡಬೇಡ. ನಾನು ಬೇರೆ ಏನಾದರೂ ವ್ಯವಸ್ಥೆ ಮಾಡುತ್ತೇನೆ."

"ಏನು ಮಾಡುತ್ತೀಯೆ ?"

"ನಾಯಿಂದನನ್ನು ಕರೆಸಿ, ನನ್ನ ಕೂದಲನ್ನೇ ತೆಗೆಸಿ ಕಳಿಸಿಕೊಡುತ್ತೇನೆ."

ಇನ್ನೊಂದು ಮಾತನ್ನೂ ಆಡದೆ, ಅದೇ ದಿನ ರಾತ್ರಿ ಶರತ್ ತಾರಕೇಶ್ವರಕ್ಕೆ ಪ್ರಯಾಣ ಮಾಡಿದ.

ಮೋತೀಲಾಲರಿಗೆ ಭುವನಮೋಹಿನಿಯಂಥ ಒಡನಾಡಿಯೂ ಸಹ ಧರ್ಮಿಣಿಯೂ ದೊರೆಯದೆ ಹೋಗಿದ್ದರೆ, ಅವರು ಬಹಳ ಕಾಲ ಬದುಕಿರುತ್ತಿರಲಿಲ್ಲ. ಸುರೇಂದ್ರನಾಥರು ಹೀಗೆ ಬರೆದಿದ್ದಾರೆ: "ಮಧ್ಯಾಹ್ನ ಕಳೆದಿದೆ. ಶರದೃತುವಿನ ಬೆಳಕು ಮತ್ತಷ್ಟು ಕಾಂತಿಹೀನವಾಗಿದೆ. ದಾರದ ನೆರವಿನಿಂದ ಹೇಗೋ ಕನ್ನಡಕವನ್ನು ಕಣ್ಣಿನ ಮೇಲೆ ಇರಿಸಿಕೊಂಡು ಪುಸ್ತಕವನ್ನು ಓದುವುದರಲ್ಲಿ ಮೋತೀಲಾಲ್ ಮಗ್ನವಾಗಿದ್ದಾರೆ. ಎಷ್ಟು ಹೊತ್ತಿನಿಂದ ಈ ಕಾರ್ಯ ನಡೆಯುತ್ತಿದ್ದೆಯೋ, ಯಾರಿಗೆ ಗೊತ್ತು ? ತಾನಾಗಿಯೇ ಭುವನಮೋಹಿನಿ ಹುಕ್ಕಾ ಸಿದ್ಧಪಡಿಸಿ ಅವರ ಬಳಿ ತಂದಿರಿಸುತ್ತಾಳೆ. ಕೃತಜ್ಞತೆಯಿಂದ ಗದ್ಗದರಾಗಿ ಮೋತಿಲಾಲ್ ಕೇಳುತ್ತಾರೆ: "ಹುಕ್ಕಾ ಎಳೆಯಬೇಕೆಂದು ನನಗೆ ಅನಿಸಿದೆ ಎಂಬುದು ನಿನಗೆ ಹೇಗೆ ಗೊತ್ತಾಯಿತು ?"

ಅರ್ಧೋನ್ಮೀಲಿತ ನಯನಗಳಲ್ಲಿ ಆದರದ ಭಾವನೆಯನ್ನು ತುಂಬಿ ಪತಿಯನ್ನು ನೋಡುತ್ತ ಭುವನಮೋಹಿನಿ ಹೇಳುತ್ತಾಳೆ: 'ಹೇಗೆ ಗೊತ್ತಾಗುತ್ತದೆ ಎಂಬುದು ಸ್ವತಃ ನನಗೇ ಗೊತ್ತಿಲ್ಲ.'

ಉತ್ಸಾಹ ತುಂಬಿ ಬಂದು ಮೋತೀಲಾಲ್ ಹೇಳುತ್ತಾರೆ: 'ಸರಿ, ಒಂದು ದೀಪವನ್ನಾದರೂ ತಂದುಕೊಡು.'

ಭುವನಮೋಹಿನಿ ಉತ್ತರಿಸುತ್ತಾಳೆ: 'ಇಡೀ ದಿನ ತಲೆ ಚಚ್ಚಿಕೊಂಡು ಓದುತ್ತಲೇ ಇರುತ್ತೀರಿ. ಈಗ ಸ್ವಲ್ಪ ಹೊತ್ತು ಹೊರಗೆ ಹೋಗಿ ಅಡ್ಡಾಡಿಕೊಂಡು ಬನ್ನಿ.'

ಸರಿ, ಇಚ್ಛೆಯಿಲ್ಲದಿದ್ದರೂ ಆಗ ಮೋತೀಲಾಲರು ಓಡಾಡಿಕೊಂಡು ಬರಲು ಹೊರಡುತ್ತಿದ್ದರು.

ಶರತ್ ಅಲ್ಲದೆ ಮನೆಯಲ್ಲಿ ಅವನ ಇಬ್ಬರು ತಮ್ಮಂದಿರಾದ ಪ್ರಭಾಸ್ ಮತ್ತು

ಪ್ರಕಾಶ್ ಹಾಗೂ ತಂಗಿ ಸುಶೀಲಾ ಉರ್ಫ್ ಮುನಿಯಾ ಇದ್ದರು. ಈ ತಂಗಿಯ ಹೆರಿಗೆಯಲ್ಲಿಯೇ ತಾಯಿ ಸಾವನ್ನಪ್ಪಿದ್ದಳು. ಅಕ್ಕ ಅನಿಲಾಳ ಮದುವೆಯಾಗಿತ್ತು. ಹೆಂಡತಿ ಸತ್ತ ಮೇಲೆ, ಈ ಚಿಕ್ಕಪುಟ್ಟ ಮಕ್ಕಳನ್ನು ಕಟ್ಟಿಕೊಂಡು ಮೋತೀಲಾಲರು ಹೆಳವನಂತಾಗಿ ಬಿಟ್ಟಿದ್ದರು. ಅನೇಕ ಕಾರಣಗಳಿಂದಾಗಿ ಅತ್ತೆಯ ಮನೆಯಲ್ಲಿರುವುದೂ ಸಾಧ್ಯವಿರಲಿಲ್ಲ. ಕತೆಗಾರ ಶರತ್ 'ದೇವದಾಸ್'ನಲ್ಲಿ ಹೀಗೆ ಬರೆದಿದ್ದಾರೆ: 'ಬಹುದಿನಗಳಿಂದ ಅವನು ತನ್ನ ಮಾವನ ಮನೆಯಲ್ಲಿರುತ್ತಿಲ್ಲ. ಅಲ್ಲಿ ಅವನಿಗೆ ಯಾವ ರೀತಿಯಿಂದಲೂ ಮನಸ್ಸಿಗೆ ಸಮಾಧಾನವಿರುವುದಿಲ್ಲ' ಮೋತೀಲಾಲರು ಈಗ ಖಂಜನಪುರದಲ್ಲಿ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ವಾಸಮಾಡತೊಡಗಿದರು. ಮಾವನ ಮನೆಯಲ್ಲಿದ್ದಾಗಲೂ ಅವರು ಬೇರೆ ಎಂಬಂತೆಯೇ ಇರುತ್ತಿದ್ದರು. ಆದರೆ, ಈಗಂತೂ ಅವರು ಅವರಿಂದ ದೂರ ಹೊರಟುಹೋದರು. ಇದುವರೆಗೂ ಹಣಗಳಿಸುವ ವಿದ್ಯೆಯನ್ನು ಕಲಿಯದಿದ್ದ ಅವರು ಆ ಕುಟುಂಬವನ್ನು ಸಾಕುವುದಾದರೂ ಹೇಗೆ ಸಾಧ್ಯವಿತ್ತು? ಹೀಗಾಗಿ, ಆ ವಿಕಟ ಸಮಸ್ಯೆ ಅವರನ್ನು ಮತ್ತಷ್ಟು ಹತಾಶರನ್ನಾಗಿಸಲು ಮಾತ್ರವೇ ಸಮರ್ಥವಾಯಿತು.

ಭುವನಮೋಹಿನಿಯ ಸಾವು ಮೋತಿಲಾಲರನ್ನು ಎದೆಗೆಡಿಸಿದ್ದು ಮಾತ್ರವಲ್ಲ, ಶರತ್‌ನ ಲೋಕವನ್ನೇ ಸಿಡಿಸಿಬಿಟ್ಟಿತು. 'ನನ್ನ ತಾಯಿ ಇನ್ನಷ್ಟು ಕಾಲ ಬದುಕಿದ್ದರೆ ನನ್ನ ಬಾಳು ಬಹಳ ಸುಂದರವಾಗಬಹುದಿತ್ತು. ನಾನು ಅಷ್ಟೋ ಇಷ್ಟೋ ಓದಿ ಬರೆದು ಮಾಡಿದ್ದರೆ, ಅದೆಲ್ಲ ಆಕೆಯ ಒತ್ತಾಯ ಮತ್ತು ಪ್ರಯತ್ನಗಳಿಂದಾಗಿಯೇ ಸಾಧ್ಯವಾಗಿತ್ತು. ಆಕೆಯ ಅಕಾಲದ ಸಾವಿನಿಂದಾಗಿ ನನ್ನ ಲೋಕವೇ ಸಿಡಿದು ಒಡೆದುಹೋಯಿತು.'[1]

**9**

ಶರತ್‌ಚಂದ್ರರು ಹುಟ್ಟಿದ ಕಾಲ ನಾಲ್ಕು ದಿಕ್ಕುಗಳಲ್ಲಿಯೂ ಜಾಗೃತಿ ಮತ್ತು ಪ್ರಗತಿ ಸಾಧಿತವಾಗುತ್ತಿದ್ದ ಕಾಲ. 1857ರ ಸ್ವಾತಂತ್ರ್ಯ ಸಂಗ್ರಾಮದ ವೈಫಲ್ಯ ಹಾಗೂ ಸರ್ಕಾರದ ತೀವ್ರ ದಮನಕಾರಿ ಕ್ರಮಗಳಿಂದಾಗಿ, ಸ್ವಲ್ಪಮಟ್ಟಿನ ಶೈಥಿಲ್ಯ ಕಂಡು ಬಂದಿತ್ತೆಂಬುದು ನಿಜ. ಆದರೆ ಅದು ಬಿರುಗಾಳಿ ಬೀಸುವ ಮೊದಲು ಕಂಡುಬರುವ ಶಾಂತಿಯಂತಿತ್ತು. ಬಹುಬೇಗ ಮತ್ತೆ ಕ್ರಾಂತಿಯ ಧ್ವನಿ ಮೊಳಗತೊಡಗಿತು. ಸಾಹಿತ್ಯದಲ್ಲಿ ಈ ಧ್ವನಿಯ ಮೊಟ್ಟಮೊದಲು ಅಭಿವ್ಯಕ್ತಿಯನ್ನು ಪಡೆದದ್ದು ಬಂಕಿಮಚಂದ್ರರ 'ಆನಂದ ಮಠ'ದಲ್ಲಿ. ಈ ಕಾದಂಬರಿಯೇ ಆಧುನಿಕ ಬಂಗಾಳಕ್ಕೆ ಜನ್ಮ ನೀಡಿತು ಹಾಗೂ ಕಾಲಾಂತರದಲ್ಲಿ ಬಂಗಾಳ ಇಡೀ ದೇಶಕ್ಕೇ ಪ್ರೇರಣೆಯ ಕೇಂದ್ರವಾಗಿ ಪರಿಣಮಿಸಿತು. ಆದರೆ, ಈ ವೈಫಲ್ಯದಿಂದಾದ ತತ್‌ಕ್ಷಣದ ಪರಿಣಾಮವೆಂದರೆ ರಾಜಕೀಯ ಏಳುಬೀಳುಗಳತ್ತಣಿಂದ ಜನರ ಗಮನ ದೂರ ಹರಿದು ಸಾಮಾಜಿಕ ಕ್ರಾಂತಿಯತ್ತ ಸರಿಯಿತು. ಸಾಮಾಜಿಕ ಕ್ರಾಂತಿಯಾಗದ

---

1'ಶರತ್ ಪರಿಚಯ': ಸುರೇಂದ್ರನಾಥ, 168

ಹೊರತು ರಾಜಕೀಯ ಕ್ರಾಂತಿ ಸಫಲವಾಗುವುದಿಲ್ಲವೆಂಬ ಸತ್ಯ ಈಗ ಸ್ಪಷ್ಟವಾದಂತಾಗಿತ್ತು. ಹೀಗಾಗಿ 19 ನೆಯ ಶತಮಾನದ ಉತ್ತರಾರ್ಧದಲ್ಲಿ ಇಡೀ ದೇಶದಲ್ಲಿ ಸಾಮಾಜಿಕ ಕ್ರಾಂತಿಯ ಕರೆ ಮೊಳಗಿತು. ಬಹುಬೇಗ ಅದರ ವೇದಿಕೆಯಲ್ಲಿ ಕ್ರಾಂತಿಯ ಹಲವಾರು ಮಾನಸಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಉತ್ತರಾಧಿಕಾರಿಗಳು ಕಾಣಿಸಿಕೊಳ್ಳತೊಡಗಿದರು. ಒಬ್ಬರಾದ ಮೇಲೆ ಒಬ್ಬರಂತೆ ಈ ಉತ್ತರಾಧಿಕಾರಿಗಳು ಮಾನಸಿಕ ಸ್ವಾತಂತ್ರ್ಯದ ಯಾವ ಬೀಜವನ್ನು ಬಿತ್ತಿದರೋ ಅದರಿಂದ ನಾಡಿನ ಚೇತನಕ್ಕೆ ಹಾದಿಯೊಂದು ದೊರೆತಂತಾಯಿತು. ಅದು ನಾನಾ ರೂಪಗಳಲ್ಲಿ ತನ್ನ ಅಸ್ತಿತ್ವವನ್ನು ತೋರಿಸತೊಡಗಿತು.

ಈ ಕ್ಷೇತ್ರದಲ್ಲಿಯೂ ಬಂಗಾಳ ಎಲ್ಲ ಪ್ರಾಂತ್ಯಗಳಿಗಿಂತಲೂ ಮುಂದೆ ಇತ್ತು. ರಾಜಾ ರಾಮಮೋಹನರಾಯ್ ಅವರನ್ನು ಭಾರತೀಯ ರಾಷ್ಟ್ರೀಯತೆಯ ಜನಕನೆಂದು ಪರಿಗಣಿಸಲಾಗಿದೆ. ಆದರೆ, ಮೊಟ್ಟಮೊದಲು ಅವರ ದೃಷ್ಟಿ ಧರ್ಮದತ್ತಲೇ ಸೆಳೆಯಲ್ಪಟ್ಟಿತ್ತು. ಇದಕ್ಕೆ ಕಾರಣವೇನೆಂಬುದನ್ನು ಅರಸುವುದು ಕಷ್ಟವಲ್ಲ. ಆ ದಿನಗಳಲ್ಲಿ ಪಾಶ್ಚಾತ್ಯ ನಾಗರಿಕತೆ ಮತ್ತು ಸಂಸ್ಕೃತಿಗಳ ಪ್ರಭಾವ ಉಂಟಾದದ್ದು ಆಡಳಿತಗಾರರಿಗಿಂತ ಹೆಚ್ಚಾಗಿ ವಿದೇಶೀ ಪಾದ್ರಿಗಳಿಂದಾಗಿಯೇ. ಬಂಗಾಳ ಈ ಪಾದ್ರಿಗಳ ಪ್ರಮುಖ ಕೇಂದ್ರವಾಗಿತ್ತು. ಮೊದಲಿಗೆ ಅವರಿಗೆ ಅಂಥ ಸ್ವಾಗತವೇನೂ ದೊರೆಯಲಿಲ್ಲ. ಆದರೆ, ಅವರಿಂದಾಗಿಯೇ ನಮ್ಮ ನಾಡಿನಲ್ಲಿ, ಅದರಲ್ಲಿಯೂ ಬಂಗಾಳದಲ್ಲಿ, ಸಾಮಾಜಿಕ ಚೇತನದ ಉತ್ಥಾನ ಮತ್ತು ವಿಕಾಸ ಸಾಧಿತವಾಯಿತು ಎಂಬುದರಲ್ಲಿ ಅನುಮಾನವೇನೂ ಇಲ್ಲ.

ಈ ಚೇತನವನ್ನುಂಟುಮಾಡುವುದು ಅವರ ಧ್ಯೇಯವೇನೂ ಆಗಿರಲಿಲ್ಲ. ಆದರೆ, ತಮ್ಮ ಧರ್ಮದ ಪ್ರಚಾರವನ್ನು ಕೈಗೊಳ್ಳುವ ಸಲುವಾಗಿ ಶಿಕ್ಷಣ ಹಾಗೂ ಸುಧಾರಣೆಗಳಿಗೆ ಸಂಬಂಧಿಸಿದ ಕೆಲಸಗಳನ್ನೂ ಅವರು ಮಾಡಲೇಬೇಕಾಗಿ ಬಂದಿತು. ತಮ್ಮ ಧರ್ಮದ ಹಿರಿಮೆಯನ್ನು ಸಾರುವ ಸಲುವಾಗಿ ಅವರು ಹಿಂದೂ ಧರ್ಮದ ನ್ಯೂನತೆಗಳನ್ನು ಎತ್ತಿ ಆಡುತ್ತಿದ್ದರು. ಇದಕ್ಕೆ ಪ್ರತಿಕ್ರಿಯೆ ಎಂಬಂತೆ ವಿವೇಕಶಾಲಿಗಳಾದ ಜನರ ಮನಸ್ಸಿನಲ್ಲಿ ಹೊಸ ಭಾವನೆ ಜಾಗ್ರತವಾಯಿತು; ತಮ್ಮ ಧರ್ಮದಲ್ಲಿಯೇ ಸುಧಾರಣೆಗಳನ್ನು ಸಾಧಿಸುವ ಪ್ರಶ್ನೆಯೂ ಅನಾಯಾಸವಾಗಿಯೇ ಮುಂದೆ ಬಂದಿತು. ಆಗ ಧರ್ಮವೇ ವ್ಯಕ್ತಿ ಮತ್ತು ಸಮಾಜಗಳ ಮೂಲ ಆಧಾರವಾಗಿತ್ತು. ಅದನ್ನು ಬಿಟ್ಟು ಸಮಾಜ ಸುಧಾರಣೆಯನ್ನು ಸಾಧಿಸುವ ಕಲ್ಪನೆಯನ್ನಿರಿಸಿಕೊಳ್ಳುವುದೂ ಸಾಧ್ಯವಿರಲಿಲ್ಲ. ಆದ್ದರಿಂದ ರಾಜಾ ರಾಮಮೋಹನರಾಯರು ಧರ್ಮಸುಧಾರಣೆಯತ್ತ ಗಮನಹರಿಸಿದರು. ನಿರಾಕಾರ ಬ್ರಹ್ಮದ ಸಾಧನೆ, ಏಕೇಶ್ವರವಾದ ಹಾಗೂ ಅದ್ವೈತ ವಾದವನ್ನು ಹಿಂದೂ ಧರ್ಮದ ಶುದ್ಧ ರೂಪವೆಂದು ಸಾರಲು ಅವರು ಪ್ರಯತ್ನಿಸಿದರು. ಈ ಉದ್ದೇಶದಿಂದಾಗಿಯೇ ಅವರು 'ಆತ್ಮೀಯ ಸಭಾ'[1] ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಭೆಯಲ್ಲಿ ಧಾರ್ಮಿಕ ಚರ್ಚೆಗಳನ್ನು ಮಾತ್ರವಲ್ಲದೆ, ಜಾತಿಭೇದ-ಸಮಸ್ಯೆ, ಸಹಮರಣ, ಕುಲೀನ ಪದ್ಧತಿ,

1. 1815

ಸಹಭೋಜನ, ನಿಷಿದ್ಧ ಖಾದ್ಯ-ಸಮಸ್ಯೆ, ಬಾಲವಿಧವೆಯರ ಸಮಸ್ಯೆ, ಬಹುವಿವಾಹ ಹಾಗೂ ಸಹಗಮನ ಇವೇ ಮೊದಲಾದ ಕೆಟ್ಟ ಸಾಮಾಜಿಕ ಪದ್ಧತಿಗಳನ್ನೂ ಚರ್ಚೆಗೆ ತೆಗೆದುಕೊಳ್ಳಲಾಗುತ್ತಿತ್ತು. ಸಮಾಜ ಸುಧಾರಣೆಗೆ ನಾಂದಿಯಾದದ್ದು ಇದರಿಂದಲೇ, ಮುಂದೆ ಇದು ಇಡೀ ಭಾರತವನ್ನೇ ವ್ಯಾಪಿಸಿಕೊಂಡಿತು ಹಾಗೂ ಬ್ರಹ್ಮ ಸಮಾಜ, ಪ್ರಾರ್ಥನಾ ಸಮಾಜ, ಆರ್ಯ ಸಮಾಜ ಥಿಯೋಸಫಿ ಮೊದಲಾದ ಸಂಸ್ಥೆಗಳ ರೂಪವನ್ನು ಪಡೆದುಕೊಂಡಿತು. ಸ್ವಾಮಿ ವಿವೇಕಾನಂದರ ಗುರು ರಾಮಕೃಷ್ಣ ಪರಮಹಂಸರ ಜೀವನ ದೃಷ್ಟಿಯೂ ಸೇರಿದಂತೆ, ಇವೆಲ್ಲ ಈ ಕಾಲದ ಮಹಾಪ್ರಯಾಣಗಳು.

ರಾಜಾ ರಾಮಮೋಹನ ರಾಯರು ತೀರಿಕೊಂಡ ನಲವತ್ತ ಮೂರು ವರ್ಷಗಳ ತರುವಾಯ ಶರತ್ ಜನ್ಮ ತಳೆದಿದ್ದ. ಅವನು ದಾರಿತಪ್ಪಿದವನಾಗಿ ಹಾದಿಯನ್ನರಸುತ್ತ ಅಲೆದಾಡುತ್ತಿದ್ದಾಗ ಹಾಗೂ ಅವನ ಸಾಹಿತ್ಯಿಕ ಸಾಧನೆ ಪ್ರೇಮದ ವೇದನೆಯ ಒಳಗಿನಿಂದ ಹೊರಬರುತ್ತಿದ್ದಾಗ, ಬಹುಮಟ್ಟಿಗೆ ಇತರ ಎಲ್ಲ ಸುಧಾರಕರೂ ಸ್ವರ್ಗವಾಸಿಗಳಾಗಿ ಬಿಟ್ಟಿದ್ದರು. ಆದರೆ, ಅವರು ಬೆಳಗಿದ್ದ ಬೌದ್ಧಿಕ ಸ್ವಾತಂತ್ರ್ಯ, ದೇಶಪ್ರೇಮ ಮತ್ತು ಸಮಾಜ ಸುಧಾರಣೆಯ ಜ್ಯೋತಿ ಕಣ್ಣುಕುಕ್ಕುವಂತೆ ಹತ್ತಿಕೊಂಡು ಉರಿಯುತ್ತಿತ್ತು. ಈ ಮಹಾಮಂಥನದ ಪ್ರಭಾವ ಜೀವನದ ಎಲ್ಲ ಅಂಗಗಳ ಮೇಲೂ ಆಗತೊಡಗಿತ್ತು. ಪಂಡಿತ ಈಶ್ವರಚಂದ್ರ ವಿದ್ಯಾಸಾಗರ್ ಅವರು ಬಹುಶಃ ಎಲ್ಲರಿಗಿಂತಲೂ ಮೊದಲೇ ಭಾರತೀಯ ಮಹಿಳೆಯರ ಕಷ್ಟಗಳನ್ನು ದೂರ ಮಾಡುವ ಸಲುವಾಗಿ ಖಚಿತವಾದ ಒಂದು ಹೆಜ್ಜೆಯನ್ನಿಟ್ಟಿದ್ದರು. ವಿಧವಾ ವಿವಾಹಕ್ಕೆ ಅವರು ನೀಡಿದ ಸಮರ್ಥನೆ ಅವರು ಈ ಕ್ಷೇತ್ರದಲ್ಲಿ ಎಸಗಿದ ಬಹು ದೊಡ್ಡ ಕಾರ್ಯ. ಬಹುವಿವಾಹ ಹಾಗೂ ಕುಲಿನತೆಯ ಪದ್ಧತಿಗಳ ಮೇಲೂ ಅವರು ಪ್ರಹಾರ ಮಾಡಿದರು. ಆದರೆ ವೈಚಾರಿಕ ಚಿಂತನೆಗಿಂತ ಹೆಚ್ಚಾಗಿ ಇದರಿಂದ ಬೇರಾವ ಪರಿಣಾಮವೂ ಉಂಟಾಗಲಿಲ್ಲ. ಇತ್ತ, ಸ್ವಲ್ಪ ಕಾಲದವರೆಗೆ ಪ್ರತಿಕ್ರಿಯೆ ಪ್ರಬಲವಾಗಿಯೇ ಇತ್ತು. ಆದರೆ, ಬ್ರಹ್ಮ ಸಮಾಜ ಮಹಿಳೆಯರ ಶಿಕ್ಷಣ ಹಾಗೂ ಮಹಿಳಾ ಸ್ವಾತಂತ್ರ್ಯದ ವಿಚಾರಗಳನ್ನು ಒತ್ತಿ ಹೇಳಿದ್ದರಿಂದ ಸಾಮಾಜಿಕ ಅನಾಚರಣೆಗಳು ಸ್ವತಃ ಖಂಡನೆಗೆ ಒಳಗಾಗತೊಡಗಿದುವು. ಈ ಆಂದೋಳನದ ಪರಿಣಾಮವಾಗಿಯೇ ಪೌರವಿವಾಹ ಕಾಯ್ದೆ ರೂಪುಗೊಂಡಿತು[1] ಹಾಗೂ ಮಹಿಳೆಯ ಸ್ವತಂತ್ರ ವ್ಯಕ್ತಿತ್ವಕ್ಕೆ ಅಂಗೀಕಾರವೂ ದೊರೆಯಿತು.

ಬಂಗಾಳದಲ್ಲಿ ಹೊಸ ಭಾವನೆಗಳನ್ನು ಹುಟ್ಟು ಹಾಕುವುದರಲ್ಲಿ ಹಿಂದೂ ಕಾಲೇಜ್ ಪ್ರಮುಖ ಪಾತ್ರ ವಹಿಸಿತ್ತು. ಶರತ್ ಹುಟ್ಟುವುದಕ್ಕೆ ಅರವತ್ತು ವರ್ಷಗಳಿಗೂ ಮೊದಲೇ[2] ಅದು ಸ್ಥಾಪಿತವಾಗಿದ್ದಿತಾದರೂ, ಕಾಲಾನುಕ್ರಮದಲ್ಲಿ ಅದು ಬಂಗಾಳದಲ್ಲಿ ಪಾಶ್ಚಾತ್ಯವಿದ್ಯೆ ಮತ್ತು ಶಿಕ್ಷಣದ ಪ್ರಮುಖ ಕೇಂದ್ರವಾಗಿ ಪರಿಣಮಿಸಿತ್ತು. ಈ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಹೆನ್ರಿ ಡಿ ರೋಸಿಯೋ ಅವರು ತುಂಬ ಧೈರ್ಯದಿಂದ ವಿದ್ಯಾರ್ಥಿಗಳಿಗೆ ಬೇಕನ್, ರೂಸೋ ಹಾಗೂ ಥಾಮಸ್

---

1. 1872
2. 1816

ಪೇಯ್ನ್‌ನಂಥ ನವಯುಗದ ದ್ರಷ್ಟಾರರನ್ನು ಪರಿಚಯಿಸಿಕೊಟ್ಟರು. ಜೊತೆಗೆ, 'ಅಕಾಡೆಮಿಕ್ ಅಸೋಸಿಯೇಷನ್ನ'ನ್ನು ಸ್ಥಾಪಿಸಿ ದಾರ್ಶನಿಕ, ಸಾಮಾಜಿಕ ಹಾಗೂ ರಾಜಕೀಯ ವಿಷಯಗಳನ್ನು ಕುರಿತ ವಿಚಾರ-ವಿಮರ್ಶೆಗಳನ್ನು ಆರಂಭಿಸಿದರು. ಈ ಸಂಸ್ಥೆಗೆ ಪ್ರಾಣ ಸ್ವರೂಪರಾಗಿದ್ದ ವ್ಯಕ್ತಿಗಳು 'ಯಂಗ್-ಬಂಗಾಲ್' (ತರುಣ ಬಂಗಾಳಿಗಳು) ಎಂಬ ಹೆಸರಿನಿಂದ ಪ್ರಸಿದ್ಧರಾದರು ಹಾಗೂ ಸಂಪ್ರದಾಯವಾದಿಗಳಿಗೆ ಆತಂಕಪ್ರಾಯರಾದರು. ಈ ಯುವಕರಲ್ಲಿ ಒಂದೆಡೆ ಸ್ವತಂತ್ರ ಚಿಂತನೆ ಹಾಗೂ ಪ್ರಗತಿಯ ಜ್ಯೋತಿ ಬೆಳಗಿದಂತೆಯೇ ಇನ್ನೊಂದೆಡೆ ಪಾಶ್ಚಾತ್ಯರ ಕೆಟ್ಟ ಸಂಸ್ಕಾರಗಳೂ ಎಡೆ ದೊರಕಿಸಿಕೊಂಡಿದ್ದುವು ಎಂದು ಹೇಳಿದಲ್ಲಿ ಅದು ಅತಿಶಯೋಕ್ತಿಯೇನೂ ಆಗಲಾರದು. ಅವರಲ್ಲಿ ಕೆಲವರು ಕ್ರೈಸ್ತರಾಗಿ ಮತಾಂತರಗೊಂಡರು. ಈ ಯುವಕರು ಅದೆಷ್ಟು ಉತ್ಸಾಹಶಾಲಿಗಳಾಗಿದ್ದರೆಂದರೆ ಅವರು ಮದ್ಯಪಾನ ಮಾಡಲೂ ಆರಂಭಿಸಿದರು. ತಾವು ತಮ್ಮ ತಂದೆ-ತಾಯಿಗಳಿಗಿಂತಲೂ ಪ್ರಗತಿ ಶೀಲರು ಹಾಗೂ ಭಿನ್ನರಾದವರು ಎಂಬುದನ್ನು ತಮ್ಮ ತಂದೆ-ತಾಯಿಗಳಿಗೆ ತೋರಿಸಿಕೊಡುವುದಕ್ಕಾಗಿ ಅವರು ಹೀಗೆ ಮಾಡುತ್ತಿದ್ದರು. ಮದ್ಯಪಾನದ ಈ ಪ್ರವೃತ್ತಿಯನ್ನು ಬಹುಕಾಲದವರೆಗೆ ಪ್ರಗತಿಯ ಲಕ್ಷಣವೆಂದು ಪರಿಗಣಿಸಲಾಗಿತ್ತು. ಮೈಯಿಂದ ಭಾರತೀಯರಾಗಿ ಮನಸ್ಸಿಂದ ಆಂಗ್ಲರಾಗಿದ್ದ ಈ ವ್ಯಕ್ತಿಗಳ ಬಗ್ಗೆ ಅಸಮಾಧಾನವೇನೂ ಕಮ್ಮಿಯಾಗಿರಲಿಲ್ಲ. ಆ ಕಾಲದ ವರ್ತಮಾನ ಪತ್ರಿಕೆಯೊಂದರ ಸಂಪಾದಕ ಹೀಗೆ ಬರೆದಿದ್ದ: "ಹಿಂದೂ ಕಾಲೇಜಿನಲ್ಲಿ ಹೊಸ ಬಗೆಯ ಮನುಷ್ಯರಿಗೆ ಅಡಿಪಾಯ ಹಾಕಲಾಗುತ್ತಿದೆಯೇನು ? ಹಿಂದೂ ಕಾಲೇಜಿನ ವತಿಯಿಂದ ಸಮಾಜದ ಧಾರ್ಮಿಕ ಭಾವನೆಗಳಿಗೆ ಉಂಟಾಗಿರುವಷ್ಟು ಆಳವಾದ ಆಘಾತದ ಶೇಕಡಾ ಒಂದರಷ್ಟು ಆಘಾತವಾದರೂ ಮಿಶನರಿಗಳ ಆಂದೋಲನದಿಂದ ಉಂಟಾಗಿ ದೆಯೆ ?"

ಇದಕ್ಕೆ ಪ್ರತಿಕ್ರಿಯೆ ಎಂಬಂತೆಯೂ ಭಾರತದಲ್ಲಿ ನವ ಉತ್ಥಾನದ ಅಲೆ ಎದ್ದಿತು. ಇದನ್ನು 'ಪುನರ್ ಜಾಗರಣವಾದ' ಅಥವಾ ಪುನರುಜ್ಜೀವನ ಎಂದರೆ ಸತ್ಯಕ್ಕೆ ಅನ್ಯಾಯವನ್ನೆಸಗಿದಂತೆ ಆಗುತ್ತದೆ. ವಾಸ್ತವವಾಗಿ ಇದು ಸತ್ಯಗಳ ಮರುಹುಟ್ಟೇ ಆಗಿತ್ತು. ಈ ಕ್ರಾಂತಿ ಹೊಸ ಯುಗದ ಪ್ರತೀಕವಾಗಿತ್ತು ಹಾಗೂ ಬಂಗಾಳ ಇದರಲ್ಲಿ ಅಗ್ರಗಾಮಿಯಾಗಿತ್ತು. ಮೊದಲನೆಯದಾಗಿ, ಕಲ್ಕತ್ತಾ ಆಂಗ್ಲ ವಿದ್ಯಾಭ್ಯಾಸದ ಬಹು ದೊಡ್ಡ ಕೇಂದ್ರವಾಗಿತ್ತು. ಎರಡನೆಯದಾಗಿ, ಭಾವುಕ ಪ್ರವೃತ್ತಿಯಿಂದಾಗಿ ಬಂಗಾಳಿ ಗಳಲ್ಲಿ ಪ್ರಭಾವಶಾಲಿ ಭಾಷಣಕಾರರು ಹಾಗೂ ಲೇಖಕರಾಗುವಂಥ ಸಾಮರ್ಥ್ಯವಿತ್ತು. ಈಶ್ವರಚಂದ್ರ ವಿದ್ಯಾಸಾಗರ, ಬಂಕಿಮಚಂದ್ರ ಚಟ್ಟೋಪಾಧ್ಯಾಯ, ಮೈಖೇಲ್ ಮಧುಸೂದನದತ್ತ ಹಾಗೂ ಕುಮಾರಿ ತೋರುದತ್ತ ಅವರಂಥ ಕೆಲವರನ್ನು ಈ ಕ್ಷೇತ್ರದಲ್ಲಿ ಹೆಸರಿಸಿದರೆ ಸಾಕಾಗುತ್ತದೆ.

ಆದರೆ, ಈ ಆಂದೋಳನಗಳು ಜನತೆಯ ಮನಸ್ಸಿನ ಒಳಗಿನಿಂದ ಮೂಡಿ ಬಂದಿದ್ದಂಥವಾಗಿರಲಿಲ್ಲ. ಹೀಗಾಗಿ, ವ್ಯಾವಹಾರಿಕ ರೂಪದಲ್ಲಿ ಸಮಾಜದ ಒಂದು ಸಣ್ಣ ಭಾಗ ಮಾತ್ರವೇ ಇವುಗಳಿಂದ ಆಂದೋಲಿತವಾಯಿತು; ಉಳಿದ ಭಾಗಗಳು ಹಳೆಯ ಸಂಪ್ರದಾಯಗಳಿಗೇ ಅಂಟಿಕೊಂಡಿದ್ದುವು. ಸುಧಾರಕ ತಂಡದೊಡನೆ

ಸೇರಿಕೊಂಡಂಥ ವ್ಯಕ್ತಿಗಳನ್ನು ಜಾತಿಯಿಂದ ಹೊರಹಾಕಿ ಅಪಮಾನಗೊಳಿಸುವ ಪ್ರಯತ್ನವನ್ನು ಸಂಪ್ರದಾಯವಾದಿಗಳು ನಡೆಸಿದ್ದರು.

ಬಿಹಾರದಲ್ಲಿ ಸುಧಾರಣೆ ಈ ಧ್ವನಿ ಮೊಳಗಿದ್ದು ಬಹಳ ತಡವಾಗಿ. ಅಲ್ಲಿ ನೆಲೆಸಿದ್ದ ಬಂಗಾಳಿಗಳ ಒಂದು ಅಲ್ಪಸಂಖ್ಯಾತ ವರ್ಗ ಮಾತ್ರವೇ ಈ ಆಂದೋಳನಗಳಲ್ಲಿ ಆಸಕ್ತಿ ವಹಿಸಿತು. ಆ ಬಂಗಾಳಿ ಮರ್ಯಾದಸ್ಥ ಕುಟುಂಬಗಳಿಗೆ ಸೇರಿದ ಹುಡುಗಿಯರು ಓದುವ ಸಲುವಾಗಿ ಪಾಠಶಾಲೆಗಳಿಗೆ ಹೋಗುವುದನ್ನು ಕಂಡು ಬಿಹಾರಿಗಳು ಕೋಪಗೊಳ್ಳುತ್ತಿದ್ದರು. "ಈ ಬಂಗಾಳಿ ಹುಡುಗಿಯರನ್ನು ಬಿಡಿ! ಬಂಗಾಳಿಗಳಿಗೆ ಯಾವ ಜಾತಿಯೂ ಇಲ್ಲ, ಮೀನು ಮಾಂಸ ಎಲ್ಲ ತಿನ್ನುತ್ತಾರೆ! ಹುಡುಗಿಯರನ್ನು ಹೊರಗೂ ಕಳಿಸುತ್ತಾರೆ" ಎಂದೆಲ್ಲ ಅನ್ನುತ್ತಿದ್ದರು.

ಸ್ವತಃ ಬಂಗಾಳಿ ಸಮಾಜದಲ್ಲಿಯೇ ಸುಧಾರಣೆಗಳನ್ನು ತುಂಬ ಒಳ್ಳೆಯ ದೃಷ್ಟಿಯಿಂದ ನೋಡದಿರುವಂಥವರೂ ಸಾಕಷ್ಟು ಸಂಖ್ಯೆಯಲ್ಲಿದ್ದರು. ಆ ಸಮಾಜವೂ ಕುರುಡು ನಂಬಿಕೆಗಳಿಂದ ಕೆಟ್ಟ ಸಂಸ್ಕಾರಗಳಿಂದ ಆವೃತವಾಗಿತ್ತು. ವಿಧವಾವಿವಾಹ, ಜಾತಿ ಪದ್ಧತಿ, ಕುಲೀನತೆ, ಧಾರ್ಮಿಕ ಆಡಂಬರಗಳು ಇವೇ ಮೊದಲಾದ ವಿಷಯಗಳಲ್ಲಿ ಜನರ ಭಾವನೆಗಳು ತುಂಬ ಇಕ್ಕಟ್ಟಾದ ವಲಯಕ್ಕೆ ಸೀಮಿತವಾಗಿಬಿಟ್ಟಿದ್ದುವು. ಪ್ರಭುಪಾದ ಶ್ರೀ ಹರಿದಾಸ ಗೋಸ್ವಾಮಿಯವರ ಮಾತುಗಳಲ್ಲಿ ಹೇಳಬೇಕೆಂದರೆ "ವಿಧವೆಯೊಬ್ಬಳು ಇಲ್ಲದೆ ಇರುವಂಥ ಕುಟುಂಬಗಳಲ್ಲಿ ಸದಾಚಾರದೊಂದಿಗೆ ದೇವರ ಸೇವೆಯೇ ಮೊದಲಾದ ಕಾರ್ಯಗಳು ಚೆನ್ನಾಗಿ ನಡೆಯುವುದು ಕಷ್ಟ. ಆದ್ದರಿಂದ ಗೃಹಸ್ಥಾಶ್ರಮದಲ್ಲಿ ವಿಧವೆಯ ಅಗತ್ಯವೂ ಇದೆ. ಇದು ಭಗವಂತನ ಅಪೂರ್ವ ಸೃಷ್ಟಿ ಹಾಗೂ ವಿಶಿಷ್ಟ ದಾನ. ಈ ಮಾತು ಸುಲಭವಾಗಿ ತಲೆಗೆ ಇಳಿಯುವುದೇ ಇಲ್ಲ."

ಹೀಗಾಗಿ, ಪುನರುಜ್ಜೀವನದ ವಿಚಾರದಲ್ಲಿ ನಂಬಿಕೆಯನ್ನಿರಿಸಿಕೊಂಡಿದ್ದಂಥ ವ್ಯಕ್ತಿಗಳನ್ನು ಕೆಟ್ಟ ದೃಷ್ಟಿಯಿಂದ ನೋಡಲಾಗುತ್ತಿತ್ತು. ಹೆಚ್ಚೆಹೆಚ್ಚಗೂ ನಾರಿಯರು ಅಪಮಾನಕ್ಕೊಳಗಾಗಬೇಕಾಗುತ್ತಿತ್ತು. ಮನೆಯ ಕೋಣೆಯೊಂದರಲ್ಲಿ ಅವರು ಮುದುರಿಕೊಂಡು ಕುಳಿತಿರುತ್ತಿದ್ದರು. ಗಂಡಸರ ನೆರಳಿನ ಸಂಪರ್ಕ ಮಾತ್ರದಿಂದಲೇ ಅವರು ಕಳಂಕಿತರಾಗಿಬಿಡುತ್ತಿದ್ದರು. ಮತ್ತೊಂದು ಕಡೆ, ಕುಲೀನತೆ ಅವರ ಬಾಳಿನ ಅಭಿಶಾಪವಾಗಿಬಿಟ್ಟಿತ್ತು. ಅನೇಕ ಕಾರಣಗಳಿಂದ ಮದುವೆಯಾಗದೆ ಉಳಿದಂಥ ಹುಡುಗಿಯರನ್ನು ಸ್ವಲ್ಪ ಹಣ ಪಡೆದ ಕುಲೀನ ಅಡುಗೆಯವರು ಹಸೆಮಣೆಯ ಮೇಲೆ ಕುಳಿತು 'ದಡ ಸೇರಿಸಿ' ಬಿಡುತ್ತಿದ್ದರು. ಬೈತಲೆಯಲ್ಲಿ ಕುಂಕುಮವನ್ನು ತುಂಬಿಕೊಂಡ ಈ 'ಸಧವೆ'ಯರು ಕೊನೆಗಾಣದ ಪತಿ ನಿರೀಕ್ಷೆಯಲ್ಲಿ ಇಡೀ ಜೀವಮಾನವನ್ನೇ ಕಳೆಯುತ್ತಿದ್ದರು. ಒಂದೆಡೆ ಸಂಪ್ರದಾಯಗಳ ಬಗೆಗಿನ ಭಯ ಹಾಗೂ ಇನ್ನೊಂದೆಡೆ ಧರ್ಮದ ವಾರಸುದಾರರು - ಇವರ ನಡುವೆ ಸಿಕ್ಕಿಕೊಂಡ ಜನಸಾಮಾನ್ಯರು ಭ್ರಾಂತರಾಗತೊಡಗಿದ್ದರು.

ಸಮುದ್ರಯಾನ ಮಾಡುವುದೂ ಪಾಪವಾಗಿತ್ತು. ತಮ್ಮನ ಹೆಂಡತಿಯೊಡನೆ ಮಾತನಾಡುವುದೂ ಪಾಪವಾಗಿತ್ತು. ನೃತ್ಯ, ಸಂಗೀತ, ನಾಟಕ, ಕ್ಲಬ್ಬು, ಪಾರ್ಟಿ ಇವೆಲ್ಲ ಪಾಪಗಳೇ ಆಗಿದ್ದುವು. ಭಾಗಲಪುರದಲ್ಲಿ ನೆಲೆಸಿದ್ದ ಬಂಗಾಳಿಗಳು ಬಿಹಾರದ

ಮುಂಗೇರ್ ಮೊದಲಾದ ಇತರ ನಗರಗಳಲ್ಲಿದ್ದ ಬಂಗಾಳಿಗಳಿಗಿಂತ ಹೆಚ್ಚು ಸಂಪ್ರದಾಯ ಶರಣರಾಗಿದ್ದರು. ಮೇಲಾಗಿ, ಈ ವರ್ಗಕ್ಕೆ ನೇತಾರರಾಗಿದ್ದವರು ಶರತ್‌ನ ಚಿಕ್ಕಜ್ಜ ಕೇದಾರನಾಥ ಗಂಗೋಪಾಧ್ಯಾಯರು, ಶಾಸ್ತ್ರಸಮ್ಮತವಾದ ನಡೆ-ನುಡಿಗಳು ಅವರಿಗೆ ತುಂಬ ಪ್ರಿಯವಾಗಿದ್ದುವು. ಅವುಗಳನ್ನು ಅವರು ಚಾಚೂತಪ್ಪದೆ ಪರಿಪಾಲಿಸುತ್ತಿದ್ದರು ಹಾಗೂ ಇತರರೂ ಪರಿಪಾಲಿಸುವಂತೆ ಮಾಡುತ್ತಿದ್ದರು. ಆದರೆ, ಆಂಗ್ಲ ವಿದ್ಯಾಭ್ಯಾಸದ ಪರಿಣಾಮವಾಗಿ ಸ್ವತಂತ್ರ ಚಿಂತನೆಯ ಪ್ರವೃತ್ತಿ ಆಗಲೇ ಕಾಲಿರಿಸಿ ಆಗಿತ್ತು. ಹಳೆಯ ಆಚಾರ ಸಂಹಿತೆಗಳು ಪ್ರಭಾವಹೀನವಾಗಿ ಪರಿಣಮಿಸತೊಡಗಿದ್ದುವು. ಆದರೆ ಹೊಸದರ ರೂಪ ಇನ್ನೂ ಸ್ಪಷ್ಟವಾಗಿರಲಿಲ್ಲ. ಹೀಗಾಗಿ, ಅರಾಜಕತೆಯ ಈ ವಾತಾವರಣದಲ್ಲಿ ಬಂಗಾಳಿ ಸಮಾಜ ಎರಡು ತಂಡಗಳಲ್ಲಿ ಹಂಚಿಹೋಗಿತ್ತು.

## 10

ಶರತ್ ಎರಡನೆಯ ಸಲ ಭಾಗಲಪುರಕ್ಕೆ ಹಿಂದಿರುಗಿದಾಗ ಈ ಗುಂಪುಗಾರಿಕೆ ತುತ್ತ ತುದಿಯನ್ನು ತಲುಪಿತ್ತು. ಸಂಪ್ರದಾಯವಾದಿ ವ್ಯಕ್ತಿಗಳನ್ನು ವಿರೋಧಿಸಿ ನಿಂತ ಗುಂಪಿಗೆ ನೇತಾರರಾಗಿದ್ದವರು ರಾಜಾ ಶಿವಚಂದ್ರ ಬಂದೋಪಾಧ್ಯಾಯ ಬಹಾದುರ್ ಅವರು. ಬಡತನದ ತೆಕ್ಕೆಯಲ್ಲಿದ್ದ ಕುಟುಂಬದಲ್ಲಿಯೇ ಹುಟ್ಟಿದ್ದರೂ ತಮ್ಮ ತೀಕ್ಷ್ಣ ಬುದ್ಧಿ ಹಾಗೂ ಅಧ್ಯವಸಾಯದ ಬಲದ ಮೇಲೆ ಕೆಲವೇ ದಿನಗಳಲ್ಲಿ ಅವರು ಉನ್ನತ ಸ್ಥಾನವನ್ನು ಗಳಿಸಿಕೊಂಡಿದ್ದರು. ಕಾನೂನಿನ ಕ್ಷೇತ್ರದಲ್ಲಿ ಅವರು ಸಾಟಿಯಿಲ್ಲದಂಥವ ರಾಗಿದ್ದರು. ಹದಿನೈದು-ಇಪ್ಪತ್ತು ವರ್ಷಗಳ ಅವಧಿಯಲ್ಲಿ ಅವರು ಸಾಕಷ್ಟು ಹಣವನ್ನು ಸಂಪಾದಿಸಿದ್ದು ಮಾತ್ರವಲ್ಲದೆ, ಸರ್ಕಾರದಿಂದ 'ರಾಜಾ' ಎಂಬ ಪ್ರಶಸ್ತಿಯನ್ನು ಗಳಿಸಿದ್ದರು. ಅವರ ಸಾರೋಟಿನ ಜೊತೆಯಲ್ಲಿ ಹಿರಿದ ಕತ್ತಿಯನ್ನು ಹಿಡಿದುಕೊಂಡಿದ್ದಂಥ ಅಶ್ವಾರೋಹಿ ಸಿಪಾಯಿಗಳು ಬರುತ್ತಿದ್ದರು. ಪ್ರತಿಯೊಂದು ಶುಭಕಾರ್ಯದಲ್ಲಿ ಅವರ ಸಹಕಾರ ಇದ್ದೇ ಇರುತ್ತಿತ್ತು. ಅವರು ತುಂಬ ಉದಾರಿಗಳೂ ಆಗಿದ್ದರು.

ಒಮ್ಮೆ ಅವರಿಗೆ ಮಾನಸಿಕ ಅನಾರೋಗ್ಯ ಉಂಟಾಗಿತ್ತಂತೆ. ಈ ಕಾರಣದಿಂದಾಗಿಯೇ ಆರೋಗ್ಯ ಸುಧಾರಣೆಗಾಗಿ ಅವರು ಯೂರೋಪಿಗೆ ಹೋಗಿದ್ದರು. ಆದರೆ, ಅಲ್ಲಿಂದ ಹಿಂದಿರುಗಿ ಬಂದಾಗ, ಬಂಗಾಳಿ ಸಮಾಜ ಅವರನ್ನು ಜಾತಿಯಿಂದ ಹೊರಹಾಕಿತು. ಇದು ಎಲ್ಲಿಯವರೆಗೆ ಹೋಗಿ ಮುಟ್ಟಿತೆಂದರೆ, ಯಾರದಾದರೂ ಮನೆಗೆ ಅವರನ್ನು ಆಹ್ವಾನಿಸಿದ್ದರೆ, ಅವರು ಬಂದೊಡನೆಯೇ ಇತರ ಆಹ್ವಾನಿತರು ಆಸನವನ್ನು ಬಿಟ್ಟೆದ್ದು ಅಲ್ಲಿಂದ ಹೊರಟುಹೋಗುತ್ತಿದ್ದರು. ಈ ಬಹಿಷ್ಕಾರ ಆಂದೋಳನದ ಮುಂದಾಳುಗಳಲ್ಲಿ ಶರತ್‌ನ ಅಜ್ಜ ಕೇದಾರನಾಥರೂ ಸೇರಿದ್ದರು. ವಿದೇಶಕ್ಕೆ ಹೋಗಿ ರಾಜಾ ಸಾಹೇಬರು ತಮ್ಮ ಬ್ರಾಹ್ಮಣತ್ವವನ್ನು ವಿಸರ್ಜಿಸಿ ಬಿಟ್ಟಿದ್ದಾರೆಂಬುದು ಅವರ ಮೇಲೆ ಇವರು ಹೊರಿಸಿದ್ದ ಆರೋಪ. ಮೊದಮೊದಲು ರಾಜಾ ಶಿವಚಂದ್ರರೂ ಸಮಾಜಕ್ಕೆ ಅವಹೇಳನವನ್ನುಂಟು ಮಾಡಲು ಇಚ್ಛಿಸಿರಲಿಲ್ಲ. ಒಂದಲ್ಲ ಒಂದು ರೂಪದಲ್ಲಿ ಪ್ರಾಯಶ್ಚಿತ್ತ

ಮಾಡಿಕೊಳ್ಳಲೂ ಅವರು ಸಿದ್ಧರಾಗಿದ್ದರು. ಆದರೆ, ಅನೇಕ ಕಾರಣಗಳಿಂದಾಗಿ ಅವರಿಗೆ ಇದರಲ್ಲಿ ಯಶಸ್ಸು ದೊರೆಯಲಿಲ್ಲ. ಆಗ ಅವರು ಹಿಂದೂ ಸಮಾಜದ ಸಂಕೀರ್ಣತೆ ಮತ್ತು ಅವೈಚಾರಿಕತೆಯ ವಿರುದ್ಧ ಹೋರಾಟ ನಡೆಸಬೇಕೆಂದು ದೃಢವಾದ ನಿರ್ಧಾರವನ್ನು ಕೈಗೊಂಡರು. ಎರಡೂ ಗುಂಪುಗಳ ನಡುವೆ ಈರ್ಷ್ಯೆ ಮತ್ತು ದ್ವೇಷಗಳ ಅಗ್ನಿ ಭುಗಿಲೇಳತೊಡಗಿತು. ಈ ಬೆಂಕಿ ಅದೆಷ್ಟು ಪ್ರಬಲವಾಗಿತ್ತೆಂದರೆ ಒಂದು ಕಾಲದಲ್ಲಿ ಇಡೀ ಸಮಾಜವೇ ಅದರಿಂದ ಜರ್ಜರಿತವಾಗಿಬಿಟ್ಟದ್ದಿತು. ಗಂಗೋಪಾಧ್ಯಾಯರ ಕುಟುಂಬದ ಮನೆಯ ಬಳಿಯಲ್ಲಿಯೇ ಬಂದೋಪಾಧ್ಯಾಯರ ಕುಟುಂಬದ ಮನೆಯೂ ಇದ್ದಿತು. ಇಬ್ಬರು ನೆರೆಹೊರೆಯವರಲ್ಲಿ ಈ ಬಗೆಯ ಭಿನ್ನಾಭಿಪ್ರಾಯ ಇದ್ದುದು ಸಮಾಜದಲ್ಲಿ ತೀವ್ರತರವಾದ ಕೋಲಾಹಲವನ್ನುಂಟು ಮಾಡಿತು. ಕೆಲವರು ಕೇದಾರನಾಥರ ಬಳಿ ಹೋಗಿ ಗುಂಪುಗೂಡಿ, ಹಿಂದೂ ಧರ್ಮದ ಗೌರವವನ್ನು ಹಾಡಿ ಹೊಗಳುತ್ತಿದ್ದರೆ ಇನ್ನು ಕೆಲವರು ರಾಜಾ ಶಿವಚಂದ್ರರ ಗುಂಪಿನೊಡನೆ ಒಂದುಗೂಡಿ ಸಂಪ್ರದಾಯವಾದಿಗಳ ಸಂಕೀರ್ಣ ಮನೋಭಾವವನ್ನು ಹೀಗಳೆಯುತ್ತಿದ್ದರು.

ಗಂಗೂಲಿ ಕುಟುಂಬದ ಬಾಲಕರು ಮತ್ತು ತರುಣರಿಗೆ ಆ ಮನೆಗೆ ಹೋಗದಂತೆ ನಿಷೇಧವನ್ನು ವಿಧಿಸಲಾಗಿತ್ತು. ಆದರೆ, ಆಗಾಗ್ಗೆ ಈ ನಿಷೇಧವನ್ನು ಕಡೆಗಣಿಸಲಾಗುತ್ತಿತ್ತು. ಆ ಮನೆಯ ಹಿರಿಯರೂ ಈ ಮನೆಯ ವ್ಯಕ್ತಿಗಳು ಅಲ್ಲಿಗೆ ಬಂದಾಗ ಅವರ ಅವಹೇಳನ ಮಾಡುವಷ್ಟು ಕೆಟ್ಟವರಾಗಿರಲಿಲ್ಲ. ಹಾಗೆ ಮಾಡುವುದಕ್ಕೆ ಬದಲಾಗಿ ಅವರು ಅವರನ್ನು ಆದರಿಸುತ್ತಿದ್ದರು.

ಗಾಳಿಪಟವನ್ನು ಹಾರಿಸಬೇಕೆಂಬ ಮಕ್ಕಳ ಆಸೆಯನ್ನು ಪೂರೈಸುವ ಸಲುವಾಗಿ ಅವರು ಪೇಟೆಯಿಂದ ಮಕ್ಕಳಿಗೆ ಗಾಳಿಪಟಗಳನ್ನು ತಂದುಕೊಡುತ್ತಿದ್ದರು. ಹೊಗೆಸೊಪ್ಪು, ಹುಕ್ಕಾ ಸೇದುವ ಆಸೆಯನ್ನು ಯಾರಾದರೂ ತೋರಿದರೆ, ಬೆತ್ತದಿಂದ ಅವರನ್ನು ಯಾರೂ ಬಾರಿಸುತ್ತಿರಲಿಲ್ಲ. ಆ ತಪ್ಪನ್ನು ಹಾಸ್ಯದಲ್ಲಿ ಹಾರಿಸಿಬಿಡುತ್ತಿದ್ದರು. ಹೊರಾಂಗಣದ ಸಂತೋಷಕೂಟಗಳು ವಿನೋದಗೋಷ್ಠಿಗಳು ಚೆನ್ನಾಗಿಯೇ ನಡೆಯುತ್ತಿದ್ದುವು. ಹಾವಾಡಿಗರು ಹಾವುಗಳನ್ನಾಡಿಸುತ್ತಿದ್ದರು. ಕೋತಿ ಆಡಿಸುವವರು ಕೋತಿಗಳನ್ನು ಕರಡಿಗಳನ್ನು ಆಡಿಸುತ್ತಿದ್ದರು, ಗೊಂಬೆಯಾಟದವರು ಕೈಗೊಂಬೆಗಳ ಆಟವನ್ನು ತೋರಿಸುತ್ತಿದ್ದರು. ಸಂಜೆಯಾಗುತ್ತಿದ್ದಂತೆಯೇ ಜಾತ್ರಾತಂಡದವರ[1] ವಾದ್ಯ ಘೋಷಗಳು ಆಲಾಪಗಳು ನೆರಮನೆಯ ಮಕ್ಕಳ ಮನಸ್ಸನ್ನು ಚಂಚಲಗೊಳಿಸುತ್ತಿದ್ದುವು. ನಿಯಮದ ಕಬ್ಬಿಣದ ಪಂಜರದಲ್ಲಿ ಕೂಡಿ ಹಾಕಲಾಗಿದ್ದ ಗಂಗೂಲಿ ಕುಟುಂಬದ ಕಿಶೋರರು ಈ ಸಂತೋಷಕೂಟವನ್ನು ಅದೆಂಥ ಲೋಲುಪ ದೃಷ್ಟಿಯಿಂದ ನೋಡುತ್ತಿದ್ದಿರಬಹುದು ಎಂಬುದನ್ನು ಕಲ್ಪಿಸಿಕೊಳ್ಳುವುದು ಕಷ್ಟವೇನೂ ಅಲ್ಲ. ಈ ಜಾತ್ರಾತಂಡಕ್ಕೆ ಇದ್ದ ಹೆಸರು 'ನವಹುಲ್ಲೋಡ' ಎಂಬುದು. ಈ ಶಬ್ದಕ್ಕೆ ಅರ್ಥವೇನೆಂದು ಹೇಳುವುದು ಕಷ್ಟ. ಆದರೆ ಅರ್ಥ ಮಾಡಿಕೊಳ್ಳುವುದು ಸುಲಭ. ಈ ನವಹುಲ್ಲೋಡದಲ್ಲಿ ಒಬ್ಬ

1. ನಮ್ಮಲ್ಲಿಯ ಯಕ್ಷಗಾನ, ಬಯಲಾಟವನ್ನು ಹೋಲುವಂಥ ಪ್ರದರ್ಶಕ ತಂಡ - ಅನುವಾದಕನ ಅಡಿಟಪ್ಪಣಿ

ಆಲಾಪನೆ ಕಲಿಯುತ್ತಿದ್ದರೆ, ಇನ್ನೊಬ್ಬ ತಬಲ ಬಾರಿಸುತ್ತಿದ್ದ. ಒಂದೆಡೆ ಕೊಳಲಿನ ಮಾದಕ ಧ್ವನಿ ಕೇಳಿಬಂದರೆ, ಇನ್ನೊಂದು ಕಡೆ ನೂಪುರಗಳ ಝುಣತ್ಕಾರ ಕೇಳಿಬರುತ್ತಿತ್ತು. ಮತ್ತೊಂದು ಕಡೆ ಈ ಶ್ಲೋಕದೊಂದಿಗೆ ಹುಕ್ಕಾದ ಹೊಗೆ ಮೇಲೇರುತ್ತಿತ್ತು.

ತಾಮ್ರಕೂಟಮ್ ಮಹಾದ್ರವ್ಯಮ್ ಸ್ವೇಚ್ಛಯಾ ಪೀಯತೇ ಯದಿ
ಟಾನೇ ಟಾನೇ ಮಹಾಫಲಂ ಮರ್ತ್ಯೇ ದಿವ್ಯ ಮಹತ್ ಸುಖಮ್

ಇತರ ಮಾದಕ ವಸ್ತುಗಳ ವಿಷಯದಲ್ಲಿಯೂ ಯಾವುದೇ ಅಡೆ-ತಡೆಗಳಿರಲಿಲ್ಲ. ವೃದ್ಧರಾಗಲಿ, ಯುವಕರಾಗಲಿ, ಬಾಲಕರಾಗಲಿ - ಯಾರಿಗೂ ಅಲ್ಲಿಯ ಪ್ರವೇಶ ವರ್ಜಿತವಾಗಿರಲಿಲ್ಲ.

ಶರತ್‌ನ ಸೃಜನಶೀಲ ಮನಸ್ಸು ಬಹುದಿನಗಳವರೆಗೆ ಈ ಮೌನ-ಮಧುರ ಆಹ್ವಾನವನ್ನು ಅಂಗೀಕರಿಸದೆ ದೂರವಿರಲಾರದೆ ಹೋಯಿತು. ಕದ್ದು-ಕಣ್ಣುತಪ್ಪಿಸಿ ಅವನು ಅಲ್ಲಿಗೆ ಹೋಗಿ ಬರಲಾರಂಭಿಸಿದ. ಪರಿಚಯ ಬೆಳೆದ ಮೇಲೆ ಎಲ್ಲರಿಗೂ ಕಾಣುವಂತೆಯೇ ಹೋಗತೊಡಗಿದ. ಗಂಗೂಲಿ ಕುಟುಂಬದ ಕಾನೂನು ಯಾವ ರೀತಿಯಲ್ಲೂ ಅವನನ್ನು ಬಂಧಿಸಿ ಇಡಲಾರದೆ ಹೋಯಿತು. ಅದನ್ನು ಉಲ್ಲಂಘಿಸುವುದರಲ್ಲಿಯೇ ಅವನಿಗೆ ಆನಂದ ಉಂಟಾಗುತ್ತಿತ್ತು. 'ಚರಿತ್ರಹೀನ' ಕಾದಂಬರಿಯ ಸತೀಶನೂ ಈ ವಿದ್ಯೆಗಳಲ್ಲಿ ದಕ್ಷನಾಗಿದ್ದ. ಇದರ ಜೊತೆಗೆ, ಅವನ ಕಂಠ ಮಧುರವಾಗಿಯೇ ಇತ್ತಲ್ಲವೆ! ಆದ್ದರಿಂದ, ಬಹುಬೇಗ ಅವನು ಆ ಗುಂಪಿನ ಪ್ರಮುಖ ಸದಸ್ಯನಾಗಿಬಿಟ್ಟ. ರಾಜು ಆ ಗುಂಪಿಗೆ ಬಲಗೈಯಾಗಿದ್ದ. ಯಾವ ಕೆಲಸಕ್ಕೆ ಕೈಹಾಕಿದರೂ ಅದರಲ್ಲಿ ಸಂಪೂರ್ಣ ಪ್ರಭುತ್ವವನ್ನು ಗಳಿಸಿಕೊಳ್ಳದೆ ಅವನು ಹಿಮ್ಮೆಟ್ಟುತ್ತಲೇ ಇರಲಿಲ್ಲ.

ಜಾತ್ರಾ-ತಂಡದ ಬಗ್ಗೆ ಶರತ್‌ಗೆ ಬಾಲ್ಯದಿಂದಲೂ ಆಸಕ್ತಿ ಇದ್ದೇ ಇತ್ತು. ಆದರೆ ಅದು ಅವನನ್ನು ಸಂಪೂರ್ಣವಾಗಿ ಹುಚ್ಚನನ್ನಾಗಿಸಲಾರದೆ ಹೋಯಿತು. ಅದರ ಆನಂದ ಸ್ಥೂಲ ಸ್ವರೂಪದ್ದಾಗಿದ್ದುದೇ ಇದಕ್ಕೆ ಕಾರಣ. ಅದರಲ್ಲಿ ಸೂಕ್ಷ್ಮ ರಸಾನುಭವದ ಕೊರತೆ ಇತ್ತು. ಜಾತ್ರಾ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದು ಸುಲಭದ ಆಟವೇನೂ ಅಲ್ಲ. ಕೂಲಿಗಾರರಂತೆ ಒಂದೇ ಸಮನೆ ಹತ್ತು ಹನ್ನೆರಡು ಘಂಟೆಗಳವರೆಗೆ ಶ್ರಮಿಸಿದರೆ ಆ ಆಟ ಒಂದು ರೂಪಕ್ಕೆ ಬರುತ್ತದೆ. ನಿರ್ವಿಕಾರ ಭಾವದೊಡನೆ ಈ ಬಗೆಯಲ್ಲಿ ಕಾರ್ಯಮಗ್ನನಾಗುವುದು ಸುಲಭವಾದ ಕೆಲಸವೇನೂ ಅಲ್ಲ. ಇಲ್ಲಿ ಮಾದಕತೆಯ ಅಗತ್ಯವೂ ಉಂಟಾಗುತ್ತದೆ. ಸೆರೆಯನ್ನು ಕುಡಿಯಲು ಸಾಕಷ್ಟು ಹಣವಿಲ್ಲದಿದ್ದರೆ, ಗಾಂಜಾ ಮತ್ತು ಅಫೀಮುಗಳು ಜೊತೆಗೂಡಿದರೂ ಸಾಕಾಗುತ್ತದೆ.

ಹೊಸ ನಾಗರಿಕತೆಯ ಪ್ರಸಾರವಾಗತೊಡಗಿದಂತೆ, ಜನರ ಮನಸ್ಸು ಅತ್ತಣಿಂದ ವಿಮುಖವಾಗತೊಡಗಿತು. ಈ ರೀತಿ ಭಾಗಲಪುರದ ಬಂಗಾಳಿ ಸಮಾಜದಲ್ಲಿ 'ಥಿಯೇಟರ್'[1] ಕೂಡ ತಲೆ ಎತ್ತಿತು. ಜನ ಕಂಪನಿ ನಾಟಕಗಳನ್ನು ನೋಡಲು

1. ನಾಟಕಗಳನ್ನು ಪ್ರದರ್ಶಿಸುವ ತಂಡ; ಕಂಪನಿ ನಾಟಕ -ಅನುವಾದಕನ ಅಡಿಟಿಪ್ಪಣಿ.

ಇಷ್ಟಪಡುತ್ತಿದ್ದರು. ಒಳ್ಳೆಯದೋ ಕೆಟ್ಟದೋ, ಯಾವುದೇ ನಾಟಕವಾದರೂ ಸರಿ, ನೋಡುವವರ ಗುಂಪು ಭಾರಿಯಾಗಿಯೇ ಇರುತ್ತಿತ್ತು. ಆದರೆ, ತಮ್ಮ ಮಕ್ಕಳು ಅದರಲ್ಲಿ ಭಾಗವಹಿಸುವುದನ್ನು ಮಾತ್ರ ಅವರಾರೂ ಇಷ್ಟಪಡುತ್ತಿರಲಿಲ್ಲ.

ಒಮ್ಮೆ ಈ ಬಗೆಯ ಅಭಿನಯ ಸಾಗುತ್ತಿತ್ತು. ಸುತ್ತಲೂ ಜನರ ಭಾರಿ ಗುಂಪು ಕೂಡಿತ್ತು. ಯುವಕನೊಬ್ಬ ಹೆಣ್ಣಿನ ಪಾತ್ರವನ್ನಭಿನಯಿಸುತ್ತ ತನ್ನ ಮಧುರ ಸಂಗೀತದಿಂದ ಶ್ರೋತೃಗಳನ್ನು ಮುಗ್ಧಗೊಳಿಸಿ, ಸಂಭಾಷಣೆಯನ್ನು ಇನ್ನೇನು ಪ್ರಾರಂಭಿಸಬೇಕು ಅನ್ನುವ ಹೊತ್ತಿಗೆ, ಪ್ರೇಕ್ಷಕರ ಗುಂಪಿನಲ್ಲಿದ್ದ ಅವನ ತಂದೆ ಹಾರಾಡುತ್ತ ಕೂಗಾಡುತ್ತ ವೇದಿಕೆಯ ಮೇಲೇರಿ ಬಂದ. ಬಹಳ ಶ್ರಮ ಹಾಗೂ ಪ್ರಯತ್ನಗಳಿಂದ ಸಿದ್ಧಪಡಿಸಿದ್ದ 'ಫುಟ್‌ಲೈಟ'ನ ಬತ್ತಿ ಭಾರಿ ಸದ್ದಿನೊಡನೆ ಅದೆಲ್ಲಿ ಹೋಗಿ ಬಿದ್ದಿತೆಂಬುದೂ ಗೊತ್ತಾಗಲಿಲ್ಲ. ರತ್ನಗಂಬಳಿಗೆ ಬೆಂಕಿ ಹತ್ತಿಕೊಂಡಿತು. ವೇದಿಕೆಯ ಮೇಲೆ ಭುಗಿಲೆದ್ದ ಈ ಅಗ್ನಿಕಾಂಡದಲ್ಲಿ ಆ ತಂದೆ ತನ್ನ ಮಗನ ಮೇಲೆ ನಿರ್ದಯವಾಗಿ ಪ್ರಹಾರ ನಡೆಸುತ್ತಿದ್ದುದನ್ನು ಪ್ರೇಕ್ಷಕರು ಕಂಡರು. ಆ ರಾತ್ರಿ ಎಲ್ಲವೂ ಭಗ್ನವಾದುದನ್ನು ಬಿಟ್ಟರೆ, ಬೇರೇನು ತಾನೆ ಆಗಲು ಸಾಧ್ಯವಿತ್ತು!

ಈ 'ಆರ್ಯ ಥಿಯೇಟರ್' ವಯಸ್ಕರನ್ನೊಳಗೊಂಡಿತ್ತು. ರಾಜು ಮತ್ತು ಶರತ್ ಅವರ ತಂಡವನ್ನು ಇದು ಸಂತುಷ್ಟಗೊಳಿಸಲಾರದೆ ಹೋಯಿತು. ಅವರ ಪ್ರಯತ್ನಗಳ ಫಲವಾಗಿ ಹೊಸ ಕಂಪನಿಯೊಂದು ಹುಟ್ಟಿಕೊಂಡಿತು. ಇದರ ಮೂಲಕ ಅವರು ಪ್ರದರ್ಶಿಸಿದ ಮೊದಲ ನಾಟಕ ಬಂಕಿಮಚಂದ್ರರ 'ಮೃಣಾಲಿನಿ'ಯನ್ನು ಆಧರಿಸಿತ್ತು. ಇದರಲ್ಲಿ ಸ್ವತಃ ಶರತ್ ಮೃಣಾಲಿನಿಯ ಪಾತ್ರವನ್ನು ಅಭಿನಯಿಸಿದ್ದ. ಈ ವಿದ್ಯೆಯಲ್ಲಿಯೂ ರಾಜುವೇ ಅವನ ಗುರುವಾಗಿದ್ದರೂ, ಶರತ್‌ನ ಅಭಿನಯನವನ್ನು ಕಂಡು ಪ್ರೇಕ್ಷಕರೆಲ್ಲರೂ ಮುಗ್ಧರಾಗಿಬಿಟ್ಟಿದ್ದರು. ಆದರೆ ಗುರುಗಳ ಪ್ರಬಲ ವಿರೋಧದಿಂದಾಗಿ ಇದನ್ನು ನಿಲ್ಲಿಸಬೇಕಾಯಿತು. ಅನೇಕ ವರ್ಷಗಳ ತರುವಾಯ 'ಆದಮಪುರ ಕ್ಲಬ್ಬಿ'ನ ಒಂದು ಶಾಖೆಯ ರೂಪದಲ್ಲಿ ಇದು ಮರುಹುಟ್ಟು ಪಡೆಯಿತು. ರಾಜಾ ಶಿವಚಂದ್ರರ ಮಗ ಸತೀಶಚಂದ್ರ ಈ ತಂಡಕ್ಕೆ ಪ್ರಾಣದಂತಿದ್ದ. ಸಂಗೀತ ಮತ್ತು ನಾಟಕಗಳ ವಿಷಯದಲ್ಲಿನ ಅವನ ಆಸಕ್ತಿ ಅಸಾಮಾನ್ಯವಾದುದಾಗಿತ್ತು. ರಾಜು-ಶರತ್ ಹಾಗೂ ಅವರ ಒಡನಾಡಿಗಳು, ಸಂಗಡಿಗರು ಇದರ ಉತ್ಸಾಹೀ ಸದಸ್ಯರಾಗಿದ್ದರು. ತಮ್ಮ ತಂಡವನ್ನು ಬಲಪಡಿಸುವ ಸಲುವಾಗಿ ಅವರು ಆಗಿಂದಾಗ್ಗೆ ಕಲ್ಕತ್ತೆಗೆ ಹೋಗಿ ಅಲ್ಲಿ ಪ್ರದರ್ಶಿತವಾಗುತ್ತಿದ್ದ ನಾಟಕಗಳನ್ನು ನೋಡಿಕೊಂಡು ಬರುತ್ತಿದ್ದರು. ಅಲ್ಲಿಂದ ಹಿಂದಿರುಗಿದ ಮೇಲೆ ತಮ್ಮ ಕಲೆಯಲ್ಲಿ ಸುಧಾರಣೆ ಮಾಡುತ್ತಿದ್ದರು. ಕುಮಾರ್ ಸತೀಶ್‌ರ ಮಗನ ಅನ್ನಪ್ರಾಶನ ಸಮಾರಂಭದ ಸಂದರ್ಭದಲ್ಲಿ[1] ಕಲ್ಕತ್ತೆಯ ಸುವಿಖ್ಯಾತ 'ಮಿನರ್ವಾ ಥಿಯೇಟರಿ'ನ ಪಾತ್ರಧಾರಿಗಳು ಭಾಗಲಪುರಕ್ಕೆ ಆಗಮಿಸಿದ್ದರು. ರಾಜಬಾಡಿಯಲ್ಲಿ ಭಾರಿ ವೈಭವದೊಂದಿಗೆ ಅವರು 'ಅಲೀಬಾಬಾ' ನಾಟಕವನ್ನು ಪ್ರದರ್ಶಿಸಿದ್ದರು. ಶರತ್ ಇದರಲ್ಲಿ ಮುಸ್ತಫಾನ ಪಾತ್ರವಹಿಸಿದ್ದ. ಆ ಪಾತ್ರವನ್ನು ಅದೆಷ್ಟು ಜಾಣ್ಮೆಯಿಂದ ಅಭಿನಯಿಸಿದ್ದನೆಂದರೆ ಪ್ರೇಕ್ಷಕರಲ್ಲಿ ಯಾವನೊಬ್ಬನೂ ಶರತನನ್ನು ಗುರುತಿಸಲಾರದೆ ಹೋದ.

1. 13 ನವೆಂಬರ್ 1896

ಹೀಗೆ, ವಿರೋಧದ ಈ ಬೇರುಗಳು ಮತ್ತಷ್ಟು ಮತ್ತಷ್ಟು ಆಳಕ್ಕೆ ಇಳಿಯತೊಡಗಿದ್ದುವು. ಪ್ರತಿಯೊಂದು ಕ್ಷೇತ್ರದಲ್ಲಿಯೂ ಸ್ಪರ್ಧೆ ನಡೆಯುತ್ತಿತ್ತು. ಸಾಮಾನ್ಯವಾಗಿ ಸಾವಿನ ಸಂದರ್ಭದಲ್ಲಿ ಎಲ್ಲ ಬಗೆಯ ದ್ವೇಷ-ವೈಷಮ್ಯ-ವಿರೋಧ ಗಳ ಸದ್ದಡಗಿ ಹೋಗುತ್ತದೆ. ಆದರೆ ಇಲ್ಲಿ ಆ ಸ್ಥಿತಿಯೂ ಇರಲಿಲ್ಲ.

ಈ ಹೊತ್ತಿಗೆ ಸರಿಯಾಗಿ ರಾಜಾ ಶಿವಪ್ರಸಾದರ ಸಂಬಂಧಿಯೊಬ್ಬನ ಭಾವಮೈದುನನೂ, ಬಂಗಾಳಿ ಶಾಲೆಯ ಅಧ್ಯಾಪಕನೂ ಆಗಿದ್ದ ಕಾಂತಿಚಂದ್ರ ಎಂಬುವನು ತೀರಿಕೊಂಡ. ಸೇಡು ತೀರಿಸಿಕೊಳ್ಳುವ ಇಂಥ ಸುವರ್ಣಾವಕಾಶವನ್ನು ಸಂಪ್ರದಾಯವಾದಿಗಳು ಹೇಗೆತಾನೆ ಬಿಟ್ಟುಕೊಟ್ಟಾರು ? ಅವರು ಶವಯಾತ್ರೆಯಲ್ಲಿ ಭಾಗವಹಿಸಲು ಒಪ್ಪಲಿಲ್ಲ. ಕೊನೆಗೆ 'ಆದಮಪುರ ಕ್ಲಬ್ಬ'ನ ಸದಸ್ಯರೇ ಈ ಅಂತಿಮ ಕ್ರಿಯೆಯನ್ನು ನಡೆಸಬೇಕಾಗಿ ಬಂತು.

ಅವರೆಲ್ಲರನ್ನೂ ಜಾತಿಯಿಂದ ಹೊರಹಾಕಲಾಯಿತು. ನಗರದಲ್ಲಿ ಎಷ್ಟು ಹಾಹಾಕಾರ ಉಂಟಾಯಿತೆಂದರೆ ಮನೆಮನೆಯಲ್ಲೂ ಗುಂಪುಗಾರಿಕೆ ಆರಂಭ ಗೊಂಡಿತು. ದುರ್ಬಲರಾಗಿದ್ದವರು ತಲೆ ಬೋಳಿಸಿಕೊಂಡು ಪ್ರಾಯಶ್ಚಿತ್ತ ಮಾಡಿಕೊಂಡರು. ಶರತ್‌ನ ತಂದೆ ಈ ವಿಷಯದಲ್ಲಿ ಉದಾಸೀನರಾಗಿದ್ದರು. ಹೀಗಾಗಿ, ಈ ಸಲ ಅವನು ತಪ್ಪಿಸಿಕೊಂಡನಾದರೂ, ಮುಂದೆ ಅವನು ಇದಕ್ಕಾಗಿ ತುಂಬ ಅವಹೇಳನವನ್ನು ಸಹಿಸಬೇಕಾಗಿ ಬಂದಿತು. ಗಂಗೂಲಿಗಳ ಕುಟುಂಬದಲ್ಲಿ ಪ್ರತಿವರ್ಷವೂ ಮಹಾ ಸಡಗರ ವೈಭವಗಳೊಂದಿಗೆ ಜಗದ್ಧಾತ್ರಿಯ ಪೂಜೆ ನಡೆಯುತ್ತಿತ್ತು. ಅಲ್ಲಿ ನೆಲೆಸಿದ್ದ ಎಲ್ಲ ಬಂಗಾಳಿಗಳೂ ಇದರಲ್ಲಿ ಭಾಗವಹಿಸುತ್ತಿದ್ದರು. ಆದರೆ ಗುಂಪುಗಾರಿಕೆ ಉಗ್ರರೂಪವನ್ನು ಧರಿಸಿದಾಗಿನಿಂದ ರಾಜಾ ಶಿವಚಂದ್ರರ ಗುಂಪಿನವರಿಗೆ ಆಹ್ವಾನ ಬರುವುದು ನಿಂತುಹೋಯಿತು.

ಸಂತೋಷ ಸಮಾರಂಭಗಳಿಗೆ ಜನ ಶರತ್‌ನನ್ನು ಹೇಗೆ ಆಹ್ವಾನಿಸುತ್ತಿದ್ದರೋ ಹಾಗೆಯೇ ಕಷ್ಟ-ಸಂಕಟಗಳ ಸಂದರ್ಭದಲ್ಲಿಯೂ ಅವನಿಗೆ ಅವರ ಕರೆ ಹೋಗುತ್ತಿತ್ತು. ರಾತ್ರಿಯೆಲ್ಲ ಎಚ್ಚರವಾಗಿದ್ದು ರೋಗಿಗಳನ್ನು ಉಪಚರಿಸುವುದು, ಹೊತ್ತುಗೊತ್ತಿಲ್ಲದೆ ಶ್ಮಶಾನಕ್ಕೆ ಹೋಗಿ ದಹನಸಂಸ್ಕಾರಗಳನ್ನೆಸಗುವುದು, ವಿವಾಹ, ಪೂಜೆ ಮೊದಲಾದ ಸಂದರ್ಭಗಳಲ್ಲಿ ಆಗಮಿಸಿದ ಅತಿಥಿಗಳನ್ನು ಸತ್ಕರಿಸುವುದು - ಈ ಎಲ್ಲ ಕಾರ್ಯಗಳಲ್ಲಿ ಅವನು ಸಿದ್ಧಹಸ್ತನಾಗಿದ್ದ. ಬೀದಿಯಲ್ಲಿ 'ಬಾರೋಯಾರಿ' ಪೂಜೆ ನಡೆಸಿದಾಗ ಹಾಗೂ ಅಜ್ಜನ ಮನೆಯಲ್ಲಿ ಜಗದ್ಧಾತ್ರಿಯ ಪೂಜೆ ನಡೆದ ಸಂದರ್ಭದಲ್ಲಿ ಅತಿಥಿಗಳ ಉಟೋಪಚಾರಗಳ ಹೊಣೆ ಇವನದೇ ಆಗಿರುತ್ತಿತ್ತು. ಆದರೆ, ಈ ಸಲ[1] ಅವನನ್ನು ಆಹ್ವಾನಿಸಿರಲಿಲ್ಲ. ಆಹ್ವಾನದ ಅಗತ್ಯವೇನೂ ಅವನಿಗೆ ಇರಲಿಲ್ಲ. ಆದ್ದರಿಂದ, ತನ್ನ ಇಚ್ಛೆಯಂತೆಯೇ ಅವನು ಅಲ್ಲಿಗೆ ಹೋಗಿ ಕೆಲಸ ಮಾಡಲಾರಂಭಿಸಿದ. ಬ್ರಾಹ್ಮಣರ ಭೋಜನ ನಡೆಯುತ್ತಿತ್ತು. ಉಣಿಸುಗಳನ್ನು ಬಡಿಸುತ್ತ ಎಲ್ಲರೂ ಎಲ್ಲ ಕಡೆಗಳಲ್ಲೂ ಓಡಾಡುತ್ತಿದ್ದಾಗ ಗುಂಪಿನ ನೇತಾರ ರೊಬ್ಬರು ಹಾರಾಡತೊಡಗಿದರು. ಅದನ್ನು ಕಂಡು ನಡುವಣ ಚಿಕ್ಕಜ್ಜ ಮಹೇಂದ್ರ ನಾಥರು ಓಡೋಡಿ ಬಂದರು. "ಏನಾಯ್ತು ಅಣ್ಣಯ್ಯ ?" ಎಂದು ಕೇಳಿದರು.

---

1. 1896

ಗುಂಪಿನ ನೇತಾರರು ಅಬ್ಬರಿಸಿದರು: "ಏನಾಯ್ತು ಅಂತೀಯಾ? ಏನಾಗಲಿಲ್ಲ ಅಂತ ಕೇಳು! ಈ ಶರತ್ ಸೂಳೇಮಗ ಕಾಂತಿಯ ದಹನ ಸಂಸ್ಕಾರದಲ್ಲಿ ಭಾಗವಹಿಸಿದ್ದ. ಆ ದುಷ್ಟ ಸೂಳೇ ಮಗ ನಮ್ಮೆಲ್ಲರ ಜಾತಿ ಕೆಡಿಸುವುದಕ್ಕೆ ಬಂದಿದ್ದಾನೆ."

ಅಯ್ಯೋ-ಅಯ್ಯೋ ಎನ್ನುತ್ತ ಎಲ್ಲರೂ ಎದ್ದು ನಿಂತಾಗ ಮಹೇಂದ್ರನಾಥರು ಶರತ್‌ಗೆ ಹೇಳಿದರು: "ಶರತ್, ನೀನಿಲ್ಲಿ ಬಡಿಸುವಂತಿಲ್ಲ."

ಕೋಪ-ಅಭಿಮಾನಗಳಿಂದಾಗಿ ಶರತ್‌ನ ಕಣ್ಣುಗಳಿಂದ ಕಣ್ಣೀರು ಉಕ್ಕಿಹರಿಯಿತು. ಕೈಯಲ್ಲಿದ್ದ ಪಾತ್ರೆಯನ್ನು ನೆಲದ ಮೇಲೆ ಇರಿಸಿ, ಅವನು ಅಲ್ಲಿಂದ ಹೊರಟುಹೋದ. ಅವನ ಮನಸ್ಸಿಗೆ ಇದರಿಂದ ಎಷ್ಟು ನೋವಾಗಿತ್ತೆಂದರೆ ಕೆಲವು ದಿವಸಗಳವರೆಗೆ ಅವನು ಮನೆಗೂ ಬಂದಿರಲಿಲ್ಲ. ಎಲ್ಲೆಲ್ಲಿ ಅಲೆದಾಡುತ್ತಿದ್ದನೋ ಏನೋ.....

## 11

ಆ ವರ್ಷ ಅವನು ಪರೀಕ್ಷೆಗೆ[1] ಕುಳಿತುಕೊಳ್ಳಲು ಸಾಧ್ಯವಾಗಲಿಲ್ಲ. ಉಪ ಪರೀಕ್ಷೆಯಲ್ಲಿ ಉತ್ತೀರ್ಣರಾದಂಥ ವಿದ್ಯಾರ್ಥಿಗಳಿಗೆ ಮಾತ್ರವೇ ದೊಡ್ಡ ಪರೀಕ್ಷೆಗೆ ಕುಳಿತುಕೊಳ್ಳಲು ಅನುಮತಿ ಕೊಡಲಾಗುತ್ತಿತ್ತು. ಈ ಪರೀಕ್ಷೆಯ ಸಂದರ್ಭದಲ್ಲಿಯೇ ಒಂದು ಅಪ್ರಿಯ ಘಟನೆ ಸಂಭವಿಸಿತು. ಅವನ ವಿಷಯದಲ್ಲಿ ಯಾವಾಗಲೂ ಆಗುತ್ತಿದ್ದಂತೆ, ಈ ಘಟನೆಯ ವಿಷಯದಲ್ಲಿಯೂ ಹಲವಾರು ಕಥೆಗಳು ಹುಟ್ಟಿಕೊಂಡಿದ್ದುವು ಅಥವಾ ಸ್ವತಃ ಅವನೇ ಅವುಗಳನ್ನು ಹುಟ್ಟುಹಾಕಿದ್ದಿರಬಹುದು. ಅವುಗಳಲ್ಲಿ ಒಂದು ಹೀಗಿದೆ. ವಿಜ್ಞಾನ ವಿಷಯಗಳಲ್ಲಿ ಅವನು ತುಂಬ ಜಾಣನಾಗಿದ್ದ. ಅರ್ಧ ಸಮಯದಲ್ಲಿಯೇ ಅವನು ಇಡೀ ಪ್ರಶ್ನೆಪತ್ರಿಕೆಗೆ ಉತ್ತರಗಳನ್ನು ಬರೆದು ಮುಗಿಸಿದ್ದ. ಆಮೇಲೆ ಅವನು ತನ್ನ ಸಂಗಡಿಗರಿಗೆ ನೆರವಾಗುವ ಕೆಲಸದಲ್ಲಿ ತೊಡಗಿದ. ಒಂದು ಕೋಣೆಯಲ್ಲಿ ಕುಳಿತುಕೊಂಡು ಅವನು ಪ್ರಶ್ನೆಗಳಿಗೆ ಉತ್ತರಗಳನ್ನು ಬರೆಯುತ್ತಿದ್ದ ಹಾಗೂ ಸೇವಕನ ಮೂಲಕ ಅದನ್ನು ತನ್ನ ಸಂಗಡಿಗರಿಗೆ ತಲುಪಿಸುತ್ತಿದ್ದ. ನೀರು ಕೊಡುವ ಹಾಗೂ ಇತರ ಕೆಲಸಗಳ ನೆಪ ಮಾಡಿಕೊಂಡು ಸೇವಕ ಮತ್ತೆ ಮತ್ತೆ ಬಂದು ಹೋಗಿ ಮಾಡತೊಡಗಿದ. ಇದನ್ನು ಗಮನಿಸಿದ ಮೇಲ್ವಿಚಾರಕನಿಗೆ ಅನುಮಾನ ಉಂಟಾಯಿತು. ಆ ಸೇವಕನನ್ನು ಹಿಂಬಾಲಿಸಿಕೊಂಡು, ಶರತ್ ಕುಳಿತು ಉತ್ತರಗಳನ್ನು ಸಿದ್ಧಪಡಿಸುತ್ತಿದ್ದಲ್ಲಿಗೇ ಅವನು ಬಂದು ತಲುಪಿದ. ಈಗ ಯಾವ ಗೋಪ್ಯವೂ ಉಳಿಯಲಿಲ್ಲ. ಮೇಲ್ವಿಚಾರಕ ಅವನನ್ನು ಪ್ರಿನ್ಸಿಪಾಲರ ಬಳಿಗೆ ಕರೆದುಕೊಂಡುಹೋದ. ಎಲ್ಲವನ್ನು ಕೇಳಿಯಾದ ಮೇಲೆ, ಶರತ್‌ಗೆ ಪರೀಕ್ಷೆ ತೆಗೆದುಕೊಳ್ಳಲು ಅನುಮತಿ ಕೊಡುವುದಿಲ್ಲವೆಂದು ಪ್ರಿನ್ಸಿಪಾಲರು ತೀರ್ಮಾನಿಸಿಬಿಟ್ಟರು. ಈ ತಪ್ಪಿಗೆ ಇದಕ್ಕಿಂತ ಕಡಿಮೆ ಶಿಕ್ಷೆ ವಿಧಿಸುವುದು ಸಾಧ್ಯವಿರಲಿಲ್ಲ.

ಹೀಗಾಗಿ ಪರೀಕ್ಷೆಯ ಫಲಿತಾಂಶವನ್ನು ಪ್ರಕಟಿಸಿದಾಗ, ಉತ್ತೀರ್ಣರಾಗಿದ್ದಂಥ ವಿದ್ಯಾರ್ಥಿಗಳ ಪಟ್ಟಿಯಲ್ಲಿ ಶರತ್‌ನ ಹೆಸರಿರಲಿಲ್ಲ. ತನ್ನ ಸ್ವಭಾವಕ್ಕನುಗುಣವಾಗಿ

1. 1896

ಅವನು ತೆಪ್ಪಗಿದ್ದು ಬಿಟ್ಟ. ಏನು ತಾನೆ ಮಾಡಲು ಸಾಧ್ಯವಿತ್ತು? ಅವನೇ ಅಪರಾಧಿಯಾಗಿದ್ದನಲ್ಲವೆ? ಆದರೆ, ಓದಿನಲ್ಲಿ ಅವನು ತುಂಬ ಚತುರನಾಗಿದ್ದುದರಿಂದ, ಅವನನ್ನು ಕ್ಷಮಿಸಿಬಿಡಬೇಕೆಂದು ಸ್ವತಃ ಅಧ್ಯಾಪಕರುಗಳೇ ಪ್ರಿನ್ಸಿಪಾಲರನ್ನು ಕೋರಿದರು. ಪ್ರಿನ್ಸಿಪಾಲರೂ ತಮ್ಮ ನಿರ್ಣಯದ ಬಗ್ಗೆ ದುಃಖಿತರಾಗಿದ್ದರು. ಶಿಕ್ಷೆ ಸ್ವಲ್ಪ ಹೆಚ್ಚಾಯಿತೆಂದು ಅವರಿಗೆ ಅನ್ನಿಸತೊಡಗಿತ್ತು. ಹೀಗಾಗಿ, ಅವರು ಅವನನ್ನು ಕ್ಷಮಿಸಿಬಿಡಲು ಒಪ್ಪಿದರು. ಪರೀಕ್ಷಾ ಶುಲ್ಕವನ್ನು ಕಟ್ಟಲು ಗೊತ್ತುಪಡಿಸಿದ್ದ ಕೊನೆಯ ತಾರೀಖಿನ ಹಿಂದಿನ ದಿವಸ ಅವರು ಅವನನ್ನು ಕರೆದು ಹೇಳಿದರು: "ನಾಳೆ ಬಂದು ಪರೀಕ್ಷಾ ಶುಲ್ಕವನ್ನು ಕಟ್ಟಿಬಿಡು."

ಆದರೆ ಒಂದೇ ಒಂದು ದಿನದಲ್ಲಿ ಪರೀಕ್ಷಾ ಶುಲ್ಕಕ್ಕೆ ವ್ಯವಸ್ಥೆ ಮಾಡಿಕೊಳ್ಳುವುದು ಅವನಿಗೆ ಅಸಾಧ್ಯವಾಗಿತ್ತು. ತಾಯಿ ತೀರಿಕೊಂಡಿದ್ದಳು. ತಂದೆ ವಿಭಿನ್ನ ಪ್ರವೃತ್ತಿಯವರಾಗಿದ್ದರು. ಹಣವನ್ನು ಸಂಪಾದಿಸುವ ವಿಧಾನ ಅವರಿಗೆ ಗೊತ್ತಿರಲಿಲ್ಲ. ಇತ್ತ ಸೋದರಮಾವನೂ ತುಂಬ ಬಡವನಾಗಿದ್ದ. ನೆಂಟತನದ ಮಾವನೇನೋ ಶುಲ್ಕವನ್ನು ತುಂಬಬಹುದಾಗಿತ್ತು. ಆದರೆ ಕೊಡದಿದ್ದರೂ ಅವರನ್ನು ಏನೂ ಅನ್ನುವಂತಿರಲಿಲ್ಲ. ಅವನು ತಮ್ಮ ಒಡಹುಟ್ಟಿದ ತಂಗಿಯ ಮಗನೇನೂ ಆಗಿರಲಿಲ್ಲ. ಮೇಲಾಗಿ, ಅವನು ಈ ಎಲ್ಲ ಜನರನ್ನು ವಿರೋಧಿಸಿ ರಾಜಾ ಶಿವಚಂದ್ರರ ಪರವಾಗಿ ಮಾತನಾಡುತ್ತಿದ್ದ. ಅಂದಿನ ಅಳತೆಗೋಲಿನಲ್ಲಿ ಅವನೇನೂ ಒಳ್ಳೆಯವನೆಂದು ಹೇಳಬಹುದಾದ ನಡತೆಯುಳ್ಳವನಾಗಿರಲಿಲ್ಲವಲ್ಲ! ಹೀಗಾಗಿ, ಮಾವಂದಿರ ಕುಟುಂಬಗಳಲ್ಲಿ ಅವನ ಬಗ್ಗೆ ಸ್ವಲ್ಪವೂ ಸಹಾನುಭೂತಿ ಇರಲಿಲ್ಲ.

ಹೀಗೆ, ಹಣದ ಕೊರತೆಯಿಂದಾಗಿ ಅವನ ಓದು ಕೊನೆಗೊಂಡಿತು. ನಾಟಕ-ಥಿಯೇಟರ್, ಹಾಡುಗಾರರಿಗೆ-ವಾದ್ಯ ನುಡಿಸುವುದು ಹಾಗೂ ಸಾಹಿತ್ಯ ಸೃಷ್ಟಿ - ಈ ವಿಷಯಗಳಲ್ಲಿಯೇ ಅವನ ಮನಸ್ಸು ರಮಿಸತೊಡಗಿತು. ರಾಜುವಿನ ಜೊತೆಯ ಅವನ ಓಡಾಟ-ಒಡನಾಟಗಳು ಮತ್ತಷ್ಟು ಜೋರಾಗಿ ನಡೆಯತೊಡಗಿದುವು. ವೇಶ್ಯೆಯ ಮನೆಗೆ ಹೋಗುವುದೂ ವರ್ಜಿತವಾಗಿರಲಿಲ್ಲ. ಆಗ ಮಂಸೂರ್ ಗಂಜ್‌ನಲ್ಲಿ ಕಾಲೀದಾಸಿ ಎಂಬ ಹೆಸರಿನ ನರ್ತಕಿಯೊಬ್ಬಳಿದ್ದಳು. ಅವಳ ಬಳಿ ತುಂಬ ಹಣವಿತ್ತು. ತನ್ನದೇ ಆದ ಎರಡು ಮಹಡಿಯ ಮನೆಯೂ ಅವಳಿಗಿತ್ತು. ಆದರೆ ಅವಳ ಮನಸ್ಸು ಧಾರ್ಮಿಕ ವಿಷಯಗಳಲ್ಲಿ ಮಗ್ನವಾಗಿತ್ತು. ಅವಳು ಕೀರ್ತನೆಗಳನ್ನು ಹಾಡುತ್ತಿದ್ದಳು. ಅವಳ ದನಿ ತುಂಬ ಇಂಪಾಗಿತ್ತು. ಆ ಇಂಪನ್ನು ಕೇಳಿ ಸವಿಯುವ ಆಸೆಯಿಂದಲೇ ರಾಜೂ ಆಗಿಂದಾಗ್ಗೆ ಅಲ್ಲಿಗೆ ಹೋಗುತ್ತಿದ್ದ. ಶರತ್ ಕಾಲೇಜಿಗೆ ಹೋಗುತ್ತಿದ್ದುದೂ ಆ ಮಾರ್ಗವಾಗಿಯೇ ಆದ್ದರಿಂದ ಅವನು ಅವನನ್ನೂ ಬಿಡುತ್ತಿರಲಿಲ್ಲ.

ಕಾಲೀದಾಸಿ ಇವರಿಬ್ಬರನ್ನೂ ಪ್ರೀತಿಸುತ್ತಿದ್ದಳೆಂದು ಹೇಳುತ್ತಾರೆ. ನರ್ತಕಿ ಕಾಲೀದಾಸಿಯ ಸಂಪರ್ಕದಲ್ಲಿ ಹತ್ತೊಂಬತ್ತು ವರ್ಷ ವಯಸ್ಸಿನವನಾಗಿದ್ದ ಶರತ್ ನಿಷೇಧಿತ ಫಲದ ರುಚಿಯನ್ನು ಸವಿದನೇ ಇಲ್ಲವೇ ಎಂಬ ಮೀಮಾಂಸೆಗೆ ಇಂದು ತೊಡಗುವುದು ವ್ಯರ್ಥ. ಆದರೆ, ಅವನ ಧ್ವನಿಯ ಮಾಧುರ್ಯ ಹಾಗೂ ವಾಕ್ಚಾತುರ್ಯಗಳಿಂದಾಗಿ ನಾರಿಯರು ಅವನತ್ತ ವಿಶೇಷವಾಗಿ ಆಕರ್ಷಿತ

ರಾಗುತ್ತಿದ್ದರು ಎಂಬುದೇನೋ ನಿಜ. ಈ ಬಗೆಯ ಕುಕರ್ಮಗಳ ಬಗೆಗಿನ ಗಾಳಿಮಾತುಗಳಿಂದಾಗಿ ಕುಲೀನ ಸಮಾಜದಲ್ಲಿ ಅವನ ಮರ್ಯಾದೆ ಒಂದೇ ಸಮನೆ ಕಡಿಮೆಯಾಗತೊಡಗಿತ್ತು. ಆದ್ದರಿಂದ ಅಕುಲೀನರ ಬಳಿಯೇ ಅವನು ಶರಣು ಪಡೆಯಬೇಕಾಗಿತ್ತು. ಮನುಷ್ಯತ್ವವನ್ನು ಅವನು ಅರಸಿದ್ದೂ ಅಲ್ಲಿಯೇ ಹಾಗೂ ಮನುಷ್ಯತ್ವ ಸತೀತ್ವಕ್ಕಿಂತಲೂ ಹಿರಿದಾದ ವಸ್ತುವೆಂಬುದನ್ನು ಅರಿತದ್ದು ಅಲ್ಲಿಯೇ.

ಈ ದಿನಗಳಲ್ಲಿಯೇ ಕದ್ದು-ಮುಚ್ಚಿ 'ದೇವದಾಸ'ನ ಸೃಷ್ಟಿ ನಡೆಯುತ್ತ ಬಂದಿತ್ತು. ಇಷ್ಟಾಗಿಯೂ, ಪ್ರೌಢಾವಸ್ಥೆಯಲ್ಲಿ ಪ್ರಸಿದ್ಧ ಲೇಖಕ ಶರತ್‌ಚಂದ್ರರೇನೋ ಈ ಕೃತಿಯನ್ನು ಖಂಡಿಸಿದ್ದುಂಟು. ಮತ್ತೆ ಮತ್ತೆ ಅವರು ಈ ಮಾತನ್ನಾಡಿದ್ದಾರೆ: "ಅದು ಚೆನ್ನಾಗಿಲ್ಲ. ಅಶ್ಲೀಲವಾಗಿದೆ. ಇನ್ನು ಏನೇನೋ ಆಗಿದೆ. ನನ್ನ ಆ ಬಾಲ್ಯಕಾಲದ ಕೃತಿಯನ್ನು ಅಚ್ಚಿಸಬೇಡಿ" ಆದರೆ, ಆಗ ಅವನು ತನ್ನ ಪ್ರೇಮದ ವೇದನೆಗೆ ದೇವದಾಸನ ಮಾಧ್ಯಮದ ಮೂಲಕ ನುಡಿಗೊಡಲು ಪ್ರಯತ್ನಿಸಿದ್ದನೆಂಬುದೇನೋ ನಿಜ. ಅದರಲ್ಲಿನ ಅತಿಯಾದ ಭಾವುಕತೆಯನ್ನು ಬದಿಗಿರಿಸಿದರೂ, ಈ ಕೃತಿ ಶರತ್‌ನ ಅಸಫಲವಾದ ಆದರೆ ಉತ್ಕಟವಾದ ಪ್ರೇಮದ ಬಗೆಗಿನ ಆತ್ಮಸ್ವೀಕೃತಿಯೇ ಆಗಿದೆ. ಇಲ್ಲಿನ ಎಲ್ಲ ಪಾತ್ರಗಳಿಗೂ ನೈಜ ಜೀವನದ ಆಧಾರಗಳಿವೆ. ಅವನನ್ನು ತುಂಬ ಪ್ರೀತಿಸುತ್ತಿದ್ದ, ಶಾಲೆಯ ಆ ಜೊತೆಗಾರ್ತಿ ಧೀರೂ 'ದೇವದಾಸ್' ಕಾದಂಬರಿಯಲ್ಲಿ ಪಾರ್ವತಿಯಾಗಿ ಕಾಣಿಸಿಕೊಂಡಿದ್ದಾಳೆ. ಧರ್ಮದಾಸನ ಪಾತ್ರಕ್ಕೆ ಆಧಾರವಾದವನು ಅಜ್ಜನ ಮನೆಯಲ್ಲಿದ್ದ ಸೇವಕ ಮುಶಾಯಿ. ಚಂದ್ರಮುಖಿಯ ಪಾತ್ರಕ್ಕೆ ಅಗತ್ಯವಾದ ಅಂಶಗಳನ್ನು ಒದಗಿಸಿದವಳು ಒಬ್ಬ ನರ್ತಕಿ. ಸ್ವತಃ ಶರತ್‌ಚಂದ್ರರೇ ನರ್ತಕಿಯ ಈ ಕೃಪೆಯನ್ನು ಒಪ್ಪಿದ್ದಾರೆ. ದೊಡ್ಡವರಾದ ಮೇಲೆ ಅವರು ಈ ಕಥೆಯನ್ನೇ ಅನೇಕ ಸಲ, ಅನೇಕ ಗೆಳೆಯರಿಗೆ, ಅನೇಕ ರೀತಿಗಳಲ್ಲಿ ಹೇಳಿದ್ದಾರೆ. ಆದರೆ, ತಮ್ಮ ನೆಚ್ಚಿನ ಸಾಹಿತ್ಯಭಕ್ತರಾಗಿದ್ದ ಪ್ರಸಿದ್ಧ ಸಂಗೀತಕಾರ ದಿಲೀಪ್‌ಕುಮಾರ್ ರಾಯ್ ಅವರೊಂದಿಗೆ, ಇದು ತಮ್ಮ ವೈಯಕ್ತಿಕ ಅನುಭವದ ಸಂಗತಿ ಎಂದು ಅವರೇ ಹೇಳಿಕೊಂಡಿದ್ದಾರೆ. ಅವರು ತನ್ನ ಗೆಳೆಯನೊಬ್ಬನೊಂದಿಗೆ ಹಾಡುಗಾರಿಕೆಯನ್ನು ಕೇಳಲು ಅಲ್ಲಿಗೆ ಹೋಗಿದ್ದ. ಆ ಗೆಳೆಯ ಜಮೀನುದಾರರೊಬ್ಬರ ಬಳಿ ಕೆಲಸ ಮಾಡುತ್ತಿದ್ದ. ಅಂದು ಅವನ ಬಳಿ ಹಲವಾರು ಸಾವಿರ ರೂಪಾಯಿಗಳಿದ್ದುವು.

ನೃತ್ಯ-ಗಾಯನಗಳೆಲ್ಲ ಚೆನ್ನಾಗಿ ನಡೆದುವು. ಮದ್ಯದ ಹೊಳೆಯೂ ಹರಿಯಿತು. ಕ್ರಮಕ್ರಮವಾಗಿ ಅದರ ಪ್ರಮಾಣ ಹೆಚ್ಚುತ್ತ ಹೋಯಿತು. ಅದರ ಜೊತೆಗೆ ಅವನ ಚೈತನ್ಯವೂ ಕಡಿಮೆಯಾಗುತ್ತ ಬಂದಿತು. ಗೆಳೆಯ ಮತ್ತೆ ಮತ್ತೆ ಜೇಬಿನಿಂದ ಹಣವನ್ನು ಹೊರತೆಗೆಯುತ್ತ ಹೇಳುತ್ತಿದ್ದ: "ಇನ್ನೂ ನರ್ತಿಸು; ಇನ್ನಷ್ಟು ಮದ್ಯವನ್ನು ತಾ."

ಅವನಿಗೆ ಚೆನ್ನಾಗಿ ರಂಗೇರತೊಡಗಿತ್ತು. ಕೊನೆಗೆ ಅವನು ಮೈಮರೆತ. ಮೈಮರೆಯದೆ ಇರಲು ಶರತ್‌ಗೂ ಸಾಧ್ಯವಾಗಲಿಲ್ಲ. ಮಾರನೆಯ ದಿವಸ ಬೆಳಿಗ್ಗೆ ಗೆಳೆಯನ ಕಿರಿಚಾಟವನ್ನು ಕೇಳಿ ಅವನು ಕಣ್ದೆರೆದ. ಗೆಳೆಯ ಅರಚುತ್ತಿದ್ದ. "ಅಯ್ಯೋ, ಅಯ್ಯೋ, ನನ್ನನ್ನು ಲೂಟಿ ಮಾಡಿದ್ದಾರೆ. ನನ್ನ ಸರ್ವನಾಶ ಆಗಿಹೋಯಿತು."

ಶರತ್ ಕೇಳಿದ: "ಏನಾಯಿತು ? ಏಕೆ ಹೀಗೆ ಅರಚಿಕೊಳ್ಳುತ್ತಿದ್ದೀಯೆ ?"

ಗೆಳೆಯ ಹೇಳಿದ: "ನನ್ನ ಹತ್ತಿರ ಮೂರು ಸಾವಿರ ರೂಪಾಯಿ ಇತ್ತು. ಅದೀಗ ಸಿಕ್ಕುತ್ತಿಲ್ಲ. ನೀನೆಲ್ಲಿಯಾದರೂ ಬಚ್ಚಿಟ್ಟಿದ್ದೀಯೇನು ?"

ಶರತ್ ಉತ್ತರಿಸಿದ: "ನಾನೇಕೆ ಬಚ್ಚಿಡಲಿ? ಆಗಿನಿಂದಲೂ ನಾನೂ ಮೈಮರೆತಿದ್ದೇನೆ. ನಿನ್ನ ಕಿರುಚಾಟವನ್ನೇ ಕೇಳಿ ಇದೀಗ ತಾನೆ ಕಣ್ಣುಬಿಟ್ಟಿದ್ದೇನೆ."

ಗೆಳೆಯನ ಕಣ್ಣಿನಿಂದ ಕಣ್ಣೀರು ಹರಿಯತೊಡಗಿತು. ಅವನು ಹೇಳಿದ: "ಸರ್ವನಾಶ ಆಗಿಹೋಯಿತು. ಅದೆಲ್ಲ ಜಮೀನುದಾರರಿಗೆ ಸೇರಿದ ಹಣವಾಗಿತ್ತು. ಅವನಿಗೆ ಹಣವನ್ನು ತಲುಪಿಸದಿದ್ದರೆ ಕೆಲಸಕ್ಕೆ ಎಳ್ಳು-ನೀರು ಬಿಟ್ಟಂತಾಗುತ್ತದೆ. ಜೈಲಿನ ಕಂಬಿಯನ್ನು ಎಣಿಸಬೇಕಾಗುತ್ತದೆ. ಇನ್ನೂರು-ಮುನ್ನೂರು ರೂಪಾಯಿ ಗಳಷ್ಟು ಖರ್ಚಾಗಬಹುದು; ಚಿಂತೆಯಿಲ್ಲ ತೀರಿಸಿದರೆ ಆಯಿತು ಎಂದುಕೊಂಡಿದ್ದೆ. ಆದರೆ ಈಗ ನನಗೆ ಇಷ್ಟೊಂದು ಹಣವನ್ನು ಕೊಡಲು ಯಾರು ಸಿದ್ಧವಾಗಿದ್ದಾರೆ? ಅಯ್ಯಯ್ಯೊ, ನಾನೀಗ ಏನು ಮಾಡಲಿ?"

ಅವನು ಬಿಕ್ಕಿಬಿಕ್ಕಿ ಅಳತೊಡಗಿದ. ಆದರೆ, ಅಳುವುದರಿಂದ ಹಣವೇನೂ ದೊರೆಯುವುದಿಲ್ಲವಲ್ಲ! ಶರತ್‌ನ ಹೇಳಿಕೆಯ ಮೇರೆಗೆ ಅವನು ಎಲ್ಲ ಕಡೆಯೂ ಹುಡುಕಿ ನೋಡಿದ. ಆದರೂ ಎಲ್ಲಿಯೂ ಹಣವೂ ಕಾಣಿಸಲಿಲ್ಲ. ಆ ನರ್ತಕಿಯೂ ಇರಲಿಲ್ಲ. ಅವಳೇ ಹಣವನ್ನು ಕದ್ದಿದ್ದಿರಲಿಲ್ಲವೇಕೆ... ?

ಆ ಹೊತ್ತಿಗೆ ಸರಿಯಾಗಿ ನರ್ತಕಿ ಅಲ್ಲಿಗೆ ಬಂದಳು. ಅವಳನ್ನು ಕಂಡೊಡನೆಯೇ ಆ ಗೆಳೆಯ ಮತ್ತಷ್ಟು ಜೋರಾಗಿ ಅಳತೊಡಗಿದ. ಒಂದೇ ಉಸಿರಿನಲ್ಲಿ ಅವನು ತನ್ನ ಕಥೆಯೆಲ್ಲವನ್ನೂ ಹೇಳಿ ಮುಗಿಸಿದ.

ನರ್ತಕಿ ಶಾಂತಸ್ವರದಲ್ಲಿ ಹೇಳಿದಳು: "ವೇಶ್ಯೆಯ ಮನೆಗೆ ಇಷ್ಟೊಂದು ಹಣವನ್ನು ತೆಗೆದುಕೊಂಡು ಬರಲು ನಿನಗೆ ತಲೆ ಕೆಟ್ಟಿತ್ತೇನು? ಇಲ್ಲಿ ನಾಲ್ಕಾರು ರೂಪಾಯಿ ಗಳಿಗಾಗಿಯೇ ಪ್ರಾಣವನ್ನೂ ಅಪಹರಿಸಿಬಿಡುತ್ತಾರೆ. ಅಂಥದ್ದರಲ್ಲಿ ನಿನ್ನ ಬಳಿ ಸಾವಿರಾರು ರೂಪಾಯಿಗಳಿದ್ದುವು. ಮತ್ತೆ ಮತ್ತೆ ಎಲ್ಲರ ಎದುರಿಗೆ ಜೇಬಿನಿಂದ ಹಣವನ್ನು ತೆಗೆದು ತೆಗೆದು ನನಗೆ ಕೊಡುತ್ತಿದ್ದೆ. ಎಲ್ಲರ ದೃಷ್ಟಿಯೂ ನಿನ್ನ ಜೇಬಿನ ಮೇಲೆಯೇ ಇತ್ತು. ಅಷ್ಟು ಹೊತ್ತಿಗಾಗಲೇ ನೀವೆಲ್ಲ ಪಾನಮತ್ತರಾಗಿ ತಟ್ಟಾಡುತ್ತ ಒರಗು ದಿಂಬಿನಿಂದ ಜಾರಿ ಕೆಳಗೆ ಮೈಚಾಚಿದಿರಿ. ಎಲ್ಲರನ್ನೂ ಬೀಳ್ಕೊಂಡು ಬಂದು ನಾನು ನಿಮ್ಮನ್ನು ಸರಿಯಾಗಿ ಮಲಗಿಸಿ ನಿಮ್ಮ ತಲೆಯ ಕೆಳಗೆ ದಿಂಬನ್ನಿರಿಸಿದೆ. ಆಗ ನೀವು ನನ್ನ ಬಗ್ಗೆ ಆಡದಿದ್ದ ಮಾತೇನಾದರೂ ಉಳಿದಿತ್ತೆ? ಹೋಗಲಿ ಬಿಡಿ. ಪ್ರತಿದಿನವೂ ನಾವು ಅಂಥ ಮಾತುಗಳನ್ನು ಕೇಳುತ್ತಲೇ ಇರುತ್ತೇವೆ. ಆದರೆ, ನಿಮ್ಮನ್ನು ಮಲಗಿಸಿ ನಾನು ಮೇಲೆದ್ದಾಗ ನನ್ನ ದೃಷ್ಟಿ ನಿಮ್ಮ ಬಳಿ ಇದ್ದ ಹಣದತ್ತ ಹೋಯಿತು. ಅದನ್ನೆತ್ತಿ ನಾನು ನನ್ನ ಸೆರಗಿನಲ್ಲಿ ಭದ್ರವಾಗಿ ಗಂಟುಹಾಕಿ ಇರಿಸಿದೆ. ಅದನ್ನು ಸೊಂಟಕ್ಕೆ ಹೇಗೆ ಸುತ್ತಿಕೊಂಡೆ ಅಂದರೆ ಸ್ವಲ್ಪವೇ ಸ್ವಲ್ಪ ಏಳೆದರೂ ನನಗೆ ಎಚ್ಚರವಾಗಿಬಿಡಬೇಕು.

"ಈ ಮೊಹಲ್ಲಾ ಎಷ್ಟು ಕುಪ್ರಸಿದ್ಧವಾದುದು! ಇಲ್ಲಿ ಎಂಥೆಂಥ ಗೂಂಡಾಗಳಿದ್ದಾರೆ! ನಿಮ್ಮ ಬಳಿ ಹಣ ಇದೆಯೆಂಬುದು ಅವರಿಗೆ ಗೊತ್ತಾಗಿಬಿಟ್ಟಿತ್ತು. ನೀವು ಹೊರಗೆ ಬಂದೊಡನೆಯೇ ನಿಮ್ಮಿಂದ ಹಣವನ್ನು ಅಪಹರಿಸಿಬಿಡಬೇಕೆಂದು

ಇಡೀ ರಾತ್ರಿ ಈ ಮನೆಯ ಸುತ್ತ ಅಲೆದಾಡುತ್ತಿದ್ದರು. ನಾನಾದರೋ ಭಯದಿಂದಾಗಿ ನಿದ್ದೆಯನ್ನೂ ಮಾಡಲಾರದೆ ಹೋದೆ. ಬೆಂಕಿ ಹೊತ್ತಿಸಿ, ಕೆಲಸದವಳೊಂದಿಗೆ ಇಡೀ ರಾತ್ರಿ ಎದ್ದು ಕುಳಿತಿದ್ದೆ."

ಹೀಗೆಂದು ಹೇಳುತ್ತ, ಅವಳು ಆ ಹಣವನ್ನು ಆ ಗೆಳೆಯನ ಮುಂದಿರಿಸಿ ಹೇಳಿದಳು: "ನೋಡಿಕೊಳ್ಳಿ ಎಲ್ಲ ಸರಿಯಾಗಿದೆ ತಾನೆ? ಮತ್ತೆಂದೂ ಈ ಬಗೆಯ ಮೂರ್ಖ ಕೆಲಸ ಮಾಡದಿರಿ."

ಶರತ್ ಅವಳತ್ತ ನೋಡುತ್ತಲೇ ಇದ್ದ. ಇಷ್ಟಪಟ್ಟಿದ್ದರೆ ಅವಳು ಇದೆಲ್ಲವನ್ನೂ ನುಂಗಿ ಹಾಕಿಬಿಡಬಹುದಾಗಿತ್ತು. ಅವಳಿಂದ ಅದನ್ನು ವಾಪಸು ಪಡೆಯುವ ತಾಕತ್ತಾದರೂ ಯಾರಿಗಿತ್ತು? ಇವಳೆಂಥ ದೊಡ್ಡ ವ್ಯಕ್ತಿ! ದಾರಿತಪ್ಪಿದರೂ ಮನುಷ್ಯನ ಅಂತರ್ಯದಲ್ಲಿರುವ ಸದ್ವೃತ್ತಿಗಳು ಸಂಪೂರ್ಣವಾಗಿ ನಷ್ಟವಾಗಿ ಬಿಡುವುದಿಲ್ಲ. ಹೊರ ರೂಪ ಮಾತ್ರವೇ ಮನುಷ್ಯನ ನಿಜವಾದ ಪರಿಚಯವನ್ನು ನಮಗೆ ಒದಗಿಸುವುದಿಲ್ಲ. ಅನೇಕ ಮಡದಿಯರು ಅನೇಕ ಕೆಟ್ಟ ಕಾರ್ಯಗಳನ್ನೆ ಸಗುತ್ತಿರುತ್ತಾರೆ. ಕಳ್ಳತನ, ಮೋಸ, ವಂಚನೆ, ಸುಳ್ಳು ಸಾಕ್ಷ್ಯ - ಯಾವುದಕ್ಕೂ ಅವರು ಹಿಂದೆಗೆಯುವುದಿಲ್ಲ. ಇದಕ್ಕೆ ತದ್ವಿರುದ್ಧವಾಗಿ ದುರಾಚಾರಿಣಿಯರೆಂದು ಭಾವಿಸಲಾಗಿರುವವರ ಹೃದಯದಲ್ಲೂ ದಯೆ-ಕರುಣೆಗಳು ಮನೆ ಮಾಡಿಕೊಂಡಿರುತ್ತವೆ.

ಈ ನರ್ತಕಿ ಕಾಲೀದಾಸಿಯೇ ಆಗಿದ್ದಿರಬಹುದಲ್ಲವೆ? 'ದೇವದಾಸ್' ಕಾದಂಬರಿಯನ್ನು ರಚಿಸುವ ಕಾಲದಲ್ಲಿ ಅವನು ಅವಳ ಬಳಿಗೆ ಹೋಗುತ್ತಿದ್ದ. ಅವಳ ನಡತೆ ಕಾದಂಬರಿಯಲ್ಲಿನ ನರ್ತಕಿಯ ನಡತೆಯನ್ನು ಹೋಲುತ್ತದೆ. ಅವಳು ಎಲ್ಲವನ್ನೂ ದಾನಮಾಡಿ ಸನ್ಯಾಸಿನಿಯಾಗಿಬಿಟ್ಟಿದ್ದಳು. ಆದರೂ ಅನಂತರದಲ್ಲಿಯೂ ಅವಳು ಪೂಜೆ-ಉತ್ಸವಗಳ ಸಂದರ್ಭಗಳಲ್ಲಿ ಗೀತೆಗಳನ್ನು ಹಾಡಲು ಅನೇಕ ಜನರ ಮನೆಗೆ ಹೋಗುತ್ತಲೇ ಇದ್ದಳು. ಅಂಥ ಸಂದರ್ಭಗಳಲ್ಲಿ ಜನರು ಅವಳಿಗೇನನ್ನಾದರೂ ಕೊಡುವ ಪ್ರಯತ್ನ ಮಾಡಿದರೆ ಅವಳು ಹೀಗೆನ್ನುತ್ತಿದ್ದಳು: "ದೇವರು ನನಗೆ ಅದೆಷ್ಟು ಐಶ್ವರ್ಯವನ್ನು ಕೊಟ್ಟಿದ್ದ! ಅದನ್ನೇ ನಾನು ಇಟ್ಟುಕೊಳ್ಳಲಾರದೆ ಹೋದೆ. ನನಗೆ ಈಗ ಏನೂ ಬೇಕಿಲ್ಲ."

ಈ ಕಾಲೀದಾಸಿಯೇ ಚಂದ್ರಮುಖಿಯ ರೂಪದಲ್ಲಿ ಕಾದಂಬರಿಯಲ್ಲಿ ಕಾಣಿಸಿಕೊಂಡಿದ್ದಾಳೆ ಎಂಬುದರಲ್ಲಿ ಲವಲೇಶವೂ ಅನುಮಾನಕ್ಕೆ ಎಡೆಯಿಲ್ಲ. ಆದ್ದರಿಂದಲೇ ಚುನ್ನೀಲಾಲ್ ಅವಳೊಡನೆ ಹೀಗೆ ಹೇಳಬಲ್ಲವನಾಗಿದ್ದ: "ಇಲ್ಲ, ಇಲ್ಲ, ನೋಟು-ಗೀಟುಗಳ ಲಾಲಸೆ ಇರುವಂಥವರೇ ಬೇರೆ. ನೀನು ಅಂಥವರಲ್ಲಿ ಒಬ್ಬಳಲ್ಲ." (ದೇವದಾಸ್)

ಆದರೆ, ಅವಳು ಎಷ್ಟೇ ಧರ್ಮಪರಾಯಣೆಯಾಗಿದ್ದರೂ, ಅವಳೊಬ್ಬ ನರ್ತಕಿಯೇ ಆಗಿದ್ದಳಲ್ಲವೆ! ಶರತ್ ಅವಳ ಮನೆಗೆ ಹೋಗುವುದನ್ನು ಶರತ್‌ನ ಅಜ್ಜನ ಕುಟುಂಬದ ಸದಸ್ಯರು ಒಪ್ಪುವುದಾದರೂ ಹೇಗೆ ಸಾಧ್ಯವಿತ್ತು? ಅವರ ದೃಷ್ಟಿಯಲ್ಲಿ ಅವನು ಉಚ್ಛೃಂಖಲನೂ, ಚರಿತ್ರಹೀನನೂ ಆಗುತ್ತ ಬಂದಿದ್ದ. ಹೀಗಾಗಿ ಅವನು ಅವರ ಮನೆಗಳಿಗೆ ಮುಕ್ತಮನಸ್ಸಿನಿಂದ ಹೋಗಿಬರುವುದು ಸಾಧ್ಯವಿರಲಿಲ್ಲ.

ಒಳಕ್ಕೆ ಬರುವ ಮೊದಲು ಅವನು ಕೆಮ್ಮಬೇಕಾಗಿತ್ತು. ಹಾಗೆ ಮಾಡಿದಾಗ ವಯಸ್ಸಿಗೆ ಬಂದ ಹೆಣ್ಣುಮಕ್ಕಳು ಒಳಗೆ ಹೋಗಲು ಸಾಧ್ಯವಾಗುತ್ತಿತ್ತು.

ಆದರೆ ಅಜ್ಜನ ಕುಟುಂಬದ ಜನರನ್ನು ಸಂತೋಷಪಡಿಸುವ ಸಲುವಾಗಿ ತನ್ನ ವರ್ತನೆಯನ್ನು ಸುಧಾರಿಸಿಕೊಳ್ಳುವ ಒಂದಿಷ್ಟು ಪ್ರಯತ್ನವನ್ನು ಅವನು ಕೈಗೊಳ್ಳಲಿಲ್ಲ. ಹೀಗಾಗಿ, ಒಂದು ದಿನ ಕಿರಿಯತಾತ ಅಘೋರನಾಥರು ಆಜ್ಞೆಯನ್ನು ಹೊರಡಿಸಿದರು: "ಶರತ್‌ಗೆ ಮನೆಯ ಒಳಗೆ ಬರಲು ಅವಕಾಶಕೊಡಬೇಡಿ. ಅವನು ಇಲ್ಲಿಗೆ ಬರುವುದನ್ನು ನಿಷೇಧಿಸಿದೆ."

ಪ್ರತಿಭಾಶಾಲಿಗಳ ಹಣೆಯಬರೆಹ ಬಹುಶಃ ಹೀಗೆಯೇ ಇರುತ್ತದೆಂದು ತೋರುತ್ತದೆ. ಏಕೆಂದರೆ ಶೆಲ್ಲಿಯ ಕ್ರಾಂತಿಕಾರಕ ಆಲೋಚನೆಗಳನ್ನು ಕಂಡು ಅವನ ತಾಯಿಯೂ, ಅವನೊಡನೆ ಹೆಚ್ಚು ಮಾತನಾಡಲು ಹೋಗಬಾರದೆಂದು ಅವನ ಸೋದರಿಯರಿಗೆ ಸೂಚನೆ ಕೊಟ್ಟಿದ್ದಳು. ಅವನಿಗೆ ಧರ್ಮದಲ್ಲಾಗಲೀ, ವಿವಾಹವ್ಯವಸ್ಥೆಯಲ್ಲಾಗಲೀ ನಂಬಿಕೆ ಇಲ್ಲವೆಂದು ಅವನ ತಾಯಿಗೆ ತೋರಿದ್ದುದೇ ಇದಕ್ಕೆ ಕಾರಣ.

## 12

ಇದೇ ಸಮಯದಲ್ಲಿ ರಾಜು ಎಲ್ಲಿಯೋ ಹೊರಟುಹೋಗಿದ್ದಾನೆಂದು ಒಂದು ದಿನ[1] ಇದ್ದಕ್ಕಿದ್ದಂತೆಯೇ ಸುದ್ದಿ ಬಂದಿತು. ಮತ್ತೆ ಅವನೆಂದೂ ಹಿಂದಿರುಗಿ ಬರಲೇ ಇಲ್ಲ. ಅನೇಕ ವರ್ಷಗಳ ತರುವಾಯ 'ಶ್ರೀಕಾಂತ'ದ ಕರ್ತೃ ಹೀಗೆ ಬರೆದ: "ಇಂದು ಅವನು ಬದುಕಿದ್ದಾನೆಯೋ ಇಲ್ಲವೋ ಎಂಬುದು ನನಗೆ ತಿಳಿಯದು. ಏಕೆಂದರೆ ಎಷ್ಟೋ ವರ್ಷಗಳ ಹಿಂದೆ ಒಂದು ದಿನ ಬೆಳಗಿನ ಜಾವ ಬಹುಮುಂಚಿತವಾಗಿಯೇ ಎದ್ದು, ಮನೆಮಠ, ಆಸ್ತಿಪಾಸ್ತಿ ಹಾಗೂ ಕುಟುಂಬವನ್ನು ತ್ಯಜಿಸಿ, ಪಂಚೆಯೊಂದನ್ನು ಮಾತ್ರ ಉಟ್ಟುಕೊಂಡು ಇಲ್ಲಿಂದ ಹೊರಟುಹೋದ ಮತ್ತೆ ಅವನು ಹಿಂದಿರುಗಿ ಬರಲೇ ಇಲ್ಲ. ಓಹ್, ಆ ದಿನ ಇಂದೂ ನನಗೆ ಅದೆಷ್ಟು ಚೆನ್ನಾಗಿ ನೆನಪಿದೆ!"

ಶರತ್‌ನ ಜೀವನದಲ್ಲಿ ಒಮ್ಮೆಗೇ ಬಹುದೊಡ್ಡ ಶೂನ್ಯ ಮೇಲೆದ್ದು ಬಂದು ಕವಿದುಕೊಂಡಂತೆ ಆಯಿತು. ಜೀವನದ ಪ್ರತಿಯೊಂದು ರಂಗದಲ್ಲಿಯೂ ಅವನಿಗೆ ಪ್ರೇರಣೆಯಾಗಿದ್ದವನು ಅವನೇ ಅಲ್ಲವೆ?

ಆದಮಪುರದ ಕ್ಲಬ್ಬಿನ ನಾಟಕ ವಿಭಾಗ ಅನೇಕ ಸುಂದರ ನಾಟಕಗಳನ್ನು ರಂಗಮಂಟಪದ ಮೇಲೆ ತಂದಿತ್ತು. 'ಮೃಣಾಲಿನಿ', 'ಬಿಲ್ವಮಂಗಲ' ಮತ್ತು 'ಜನಾ' - ಇವುಗಳಲ್ಲಿ ಮುಖ್ಯವಾದುವು. ಇವುಗಳಲ್ಲಿ ಶರತ್ ಕ್ರಮಶಃ ಮೃಣಾಲಿನಿ, ಚಿಂತಾಮಣಿ ಮತ್ತು ಜನಾ - ಈ ಪಾತ್ರಗಳನ್ನು ನಿರ್ವಹಿಸಿದ್ದ. ರಾಜೂ ಗಿರಿಜಾ ಹಾಗೂ ಹುಚ್ಚಿಯ ಪಾತ್ರಗಳನ್ನು ಅಭಿನಯಿಸಿ ಕೀರ್ತಿಯನ್ನು ಗಳಿಸಿದ್ದ. ಶರತ್‌ನ ಅಭಿನಯದಲ್ಲಿ ಯಾವ ಗಾಂಭೀರ್ಯ, ಸಂಯಮ, ತೇಜಸ್ಸು ಹಾಗೂ ಶೋಕವನ್ನು ವ್ಯಕ್ತಪಡಿಸುವ ಭಂಗಿ ಕಾಣದೊರೆಯುತ್ತಿತ್ತೋ ಅದು ಕಲ್ಕತ್ತೆಯ ಪ್ರತಿಭಾಶಾಲಿ ಅಭಿನೇತ್ರಿಯ ಉನ್ಮತ್ತ ಉಚ್ಛ್ವಾಸಗಳಲ್ಲಿಯೂ ಕಾಣದೊರೆಯುತ್ತಿರಲಿಲ್ಲ. ಅರುವತ್ತು

1. 1897

ವರ್ಷಗಳ[1] ಅನಂತರವೂ ರಾಜು ಅಭಿನಯಿಸುತ್ತಿದ್ದ ಹುಚ್ಚಿಯ ಪಾತ್ರವನ್ನು ನೆನಪಿಸಿಕೊಂಡರೆ ಜನರಿಗೆ ರೋಮಾಂಚನವಾಗುತ್ತಿತ್ತಂತೆ. ಆ ದೃಶ್ಯ ಅವರ ಮನಸ್ಸಿನ ಒಳಹೊಕ್ಕು ಬಿಟ್ಟಿದೆಯೋ ಎಂಬಂತೆ ತೋರುತ್ತಿತ್ತು. ಸ್ವತಃ ರಾಜುವೂ ಹುಚ್ಚನಂತೆ ಆಗಿಬಿಟ್ಟಿದ್ದ. ಮತ್ತೆ ಮತ್ತೆ ಅದನ್ನೇ ಅಭಿನಯಿಸುತ್ತಿದ್ದ. ಒಂದು ದಿನ ತನ್ನ ಸೋದರನ ಕಿರಿಯ ಮಗುವನ್ನು ಎತ್ತಿಕೊಂಡು ಮರವನ್ನೇರಿ ಕುಳಿತ ಹಾಗೂ ಆ ಮಗುವನ್ನು ಮಡಿಲಲ್ಲಿರಿಸಿಕೊಂಡು ಅಲ್ಲಿಯೇ ಹುಚ್ಚಿಯ ಪಾತ್ರವನ್ನು ಅಭಿನಯಿಸತೊಡಗಿದ. ನೋಡುತ್ತಿದ್ದವರು ಹತಪ್ರಭರಾಗಿ ನಿಂತುಬಿಟ್ಟರು. ಆ ಮಗು ಯಾವ ಕ್ಷಣದಲ್ಲಾದರೂ ಕೈತಪ್ಪಿ ಕೆಳಗೆ ಬೀಳಬಹುದಾಗಿತ್ತು.

ಅಂದು ರಾತ್ರಿ ರಾಜುವಿನ ತಂದೆ ಅವನಿಗೆ ಚೆನ್ನಾಗಿ ಒದೆಗಳನ್ನು ಕೊಟ್ಟರು. ಅಂದು ರಾತ್ರಿಯಿಂದಲೇ ಅವನು ನಾಪತ್ತೆಯಾಗಿಬಿಟ್ಟ. ಅವನು ಸನ್ಯಾಸಿಯಾಗಿಬಿಟ್ಟನೆಂದು ಹೇಳುತ್ತಾರೆ. ಅವನ ಮನಸ್ಸು ಸಾಕಷ್ಟು ದಿನಗಳಿಂದ ಸನ್ಯಾಸದತ್ತ ಆಕರ್ಷಿತವಾಗುತ್ತ ನಡೆದಿತ್ತು. ಬಾಹ್ಯ ಜಗತ್ತಿನಿಂದ ಬೀಳ್ಕೊಂಡು ಅವನು ಮನೋಜಗತ್ತಿನಲ್ಲಿ ರಮಿಸತೊಡಗಿದ್ದಂತೆ ತೋರುತ್ತಿತ್ತು. ಗಂಗಾ ನದಿಯ ದಡದಲ್ಲಿ ಮಕ್ಕಳ ಶ್ಮಶಾನಕ್ಕೆ ಹತ್ತಿರದಲ್ಲೇ ಇದ್ದ ವಿಶಾಲ ಅಶ್ವತ್ಥ ವೃಕ್ಷದ ಮೇಲೆ ಅವನು ಸ್ವತಃ ಮರದ ಧ್ಯಾನಗೃಹವನ್ನು ನಿರ್ಮಿಸಿಕೊಂಡಿದ್ದ. ಶರತ್‌ನನ್ನು ಬಿಟ್ಟರೆ ಬೇರಾರಿಗೂ ಅಲ್ಲಿಗೆ ಬರಲು ಅವನು ಅವಕಾಶ ಕೊಟ್ಟಿರಲಿಲ್ಲ. ಅದರೊಳಗೆ ಪ್ರವೇಶಿಸುವುದು ಕೂಡ ಎಲ್ಲರಿಗೂ ಸಾಧ್ಯವಾಗುವಂಥ ಕೆಲಸವಾಗಿರಲಿಲ್ಲ. ಬಿದಿರಿನ ಏಣಿಯನ್ನೇರಿ ಮೇಲೆ ಹೋಗಬೇಕಾಗಿತ್ತು. ಅಲ್ಲಿಯೇ ಅವನು ನಡುನಡುವೆ ಈಶ್ವರನ ಜ್ಯೋತಿಯ ದರ್ಶನ ಪಡೆದು ಮೈಮರೆತು ಬಿಡುತ್ತಿದ್ದ. ಕ್ರಮೇಣ ಅವನು ಹೆಚ್ಚು ಹೆಚ್ಚು ಮೌನಿಯಾಗತೊಡಗಿದ್ದ. ಉಪವಾಸ ಮಾಡುತ್ತ ದಿನಗಳನ್ನು ಕಳೆದುಬಿಡುತ್ತಿದ್ದ. ಬಂಧು-ಬಾಂಧವರೆಲ್ಲ ಹಿಂದೆಯೇ ಉಳಿದುಬಿಟ್ಟಿದ್ದರು. ಮಕ್ಕಳನ್ನು ಮಾತ್ರವೇ ಅವನು ಪ್ರೀತಿಸುತ್ತಿದ್ದ. ಅವರನ್ನು ಎದೆಗೆ ತಬ್ಬಿಕೊಂಡರೆ ಅವನಿಗೆ ತೃಪ್ತಿಯುಂಟಾಗುತ್ತಿತ್ತು. ಅವರನ್ನು ಎತ್ತಿಕೊಂಡು ಅವನು ಮರವನ್ನೇರಿ ಕುಳಿತುಬಿಡುತ್ತಿದ್ದ. ತಂದೆ ಆತನನ್ನು ಗುರುತಿಸಲಾರದೆ ಹೋದರು. ಹಕ್ಕಿ ಸಾಗರದ ಇನ್ನೊಂದು ತೀರಕ್ಕೆ ಹಾರಿಹೋಯಿತು.

ಕೆಲವು ದಿನಗಳ ಬಳಿಕ, ಹರಿದ್ವಾರದಲ್ಲಿ ಅವನನ್ನು ಕಂಡಿದ್ದಾಗಿ ಕೆಲವರು ಹೇಳಿಕೊಂಡರು. ಒಮ್ಮೆ ಮಹಿಳೆಯೊಬ್ಬಳು[2] ಉದಾಸಿಪಂಥದ ಮಂಡಳಿಯೊಂದರಲ್ಲಿ ಯಾರೋ ಒಬ್ಬರು ಸುಮಧುರ ಸ್ವರದಲ್ಲಿ ಬಂಗಾಳಿ ಗೀತೆಗಳನ್ನು ಹಾಡುತ್ತಿದ್ದುದನ್ನು ಕೇಳಿದಳು. ಆ ಧ್ವನಿಯನ್ನು ಎಲ್ಲಿಯೋ ಕೇಳಿದ್ದಂತೆ ತೋರಿತು. ಆದ್ದರಿಂದ, ಕುತೂಹಲವನ್ನು ತಡೆಯಲಾರದೆ ಆಕೆ ಒಳಗೆ ಇಣುಕಿ ನೋಡಿದಳು. ಹಾಡುಗಾರನ ಬೆನ್ನು ಅವಳ ಕಡೆಗಿತ್ತು. ಅದರ ಮೇಲೆ ಶಸ್ತ್ರಚಿಕಿತ್ಸೆಯ ಕಲೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಇವನೇ ರಾಜುವಾಗಿರಬೇಕೆಂದು ಆಕೆಗೆ ನಂಬಿಕೆ ಮೂಡಿತು. ಏಕೆಂದರೆ ಅವನ ಬೆನ್ನಿನ ಮೇಲೆಯೇ ಶಸ್ತ್ರಚಿಕಿತ್ಸೆಯ ಕಲೆ ಇತ್ತು. ಆಕೆ ಕೂಡಲೇ ಒಳಗೆ ಹೋಗಿ ಹೀಗೆಂದು

1. 1959ರಲ್ಲಿ ಈ ಲೇಖಕ ಭಾಗಲಪುರಕ್ಕೆ ಹೋಗಿದ್ದ.
2. ಈ ಲೇಖಕ 1959ರಲ್ಲಿ ಈ ಮಹಿಳೆಯ ಮಗನನ್ನು ಭೇಟಿಯಾಗಿದ್ದ.

ಹೇಳಿದಳು: "ಅರೆ, ರಾಜು! ನಿನ್ನ ತಾಯಿ ನಿನಗಾಗಿ ಹುಚ್ಚಿಯಂತಾಗಿ ಬಿಟ್ಟಿದ್ದಾರೆ. ನೀನಾದರೋ ಇಲ್ಲಿ ಸಾಧುವಿನಂತೆ ಅಲೆದಾಡುತ್ತಿದ್ದೀಯೆ.!"

ಆ ಕ್ಷಣವೇ ರಾಜು ತನ್ನ ಮುಖವನ್ನು ಮುಚ್ಚಿಕೊಂಡುಬಿಟ್ಟ. ಯಾವ ಉತ್ತರವನ್ನೂ ಕೊಡಲಿಲ್ಲ. ಈ ಸುದ್ದಿಯನ್ನು ತಿಳಿದು ಕೂಡಲೇ, ಅವನ ತಾಯಿ ಹರಿದ್ವಾರಕ್ಕೆ ಬಂದಳು. ಆದರೆ ಅಷ್ಟು ಹೊತ್ತಿಗೆ ಆ ತಂಡ ಅದೆಲ್ಲಿಗೆ ಹೊರಟುಹೋಯಿತೆಂಬುದು ಯಾರಿಗೂ ಗೊತ್ತಿರಲಿಲ್ಲ. ಬಹಳ ಹುಡುಕಿದರೂ ಎಲ್ಲವೂ ವ್ಯರ್ಥವೇ ಆಯಿತು.

ರಾಜೂ ಹೊರಟುಹೋದ. ಶರತ್‌ನ ದುಃಖಕ್ಕೆ ಮೇರೆಯೇ ಇರಲಿಲ್ಲ. ಅವನ ಜೊತೆಯಲ್ಲಿ ಕಳೆದ ತನ್ನ ಬಾಳಿನ ಅವಧಿಯನ್ನು ಜ್ಞಾಪಿಸಿಕೊಂಡರೆ ಅವನ ಎದೆಯಲ್ಲಿ ವೇದನೆ ಮರುಕಳಿಸುತ್ತಿತ್ತು. ಅವನು ಅದೆಷ್ಟು ಹತ್ತಿರದ ಗೆಳೆಯನಾಗಿದ್ದ. ಈ ಲೋಕದಲ್ಲಿ ಇತರ ಮೌಲ್ಯಗಳು ಯಾವುದೇ ಒಂದು ಸ್ತರದಲ್ಲಿ ಸುಳ್ಳೆಂದು ತೋರಿಬರಬಹುದಾದರೂ ಸಹಜ ಮಾನವೀಯ ಕರುಣೆ ಎಂಬುದು ಎಂದೂ ಸುಳ್ಳಾಗುವುದಿಲ್ಲ ಎಂಬುದನ್ನು ಅವನು ಅವನಿಂದಲೇ ಕಲಿತಿದ್ದ. ಆ ಸಲ ಜಗದ್ಧಾತ್ರಿಯ ಪೂಜೆಯ ಮಾರನೆಯ ದಿವಸವೇ ಮಾವನ ಮನೆಯಲ್ಲಿ ಜಾತ್ರಾತಂಡದ ಪ್ರದರ್ಶನದ ಏರ್ಪಾಟು ಆಗಿತ್ತು. ಕಲ್ಕತ್ತೆಯ ಹೆಸರಾಂತ ತಂಡ ಆಗಮಿಸಿತ್ತು. ಓಣಿ-ಕೇರಿಗಳ ಮತ್ತು ಮೊಹಲ್ಲಾದ ಜನಗಳೆಲ್ಲ ಅದನ್ನು ನೋಡುವ ಸಲುವಾಗಿ ಗುಂಪುಗೂಡಿಕೊಂಡು ಅಲ್ಲಿಗೆ ಬಂದು ಸೇರಿದ್ದರು. ಶರತ್ ಕೂಡ ಒಂದು ಮೂಲೆಯಲ್ಲಿ ಕುಳಿತು ತಲ್ಲೀನಭಾವದಿಂದ ಅದನ್ನು ನೋಡುತ್ತಿದ್ದ. ಆಗಲೇ ರಾಜೂ ಅದೆಲ್ಲಿಂದಲೋ ಅಲ್ಲಿಗೆ ಬಂದು ಸೇರಿದ. ಅವನು ಬಹಳ ಗಡಿಬಿಡಿಯಲ್ಲಿದ್ದಂತೆ ತೋರುತ್ತಿತ್ತು. ಹತ್ತಿರ ಬಂದು ಅವನು ಹೇಳಿದ: "ನಡಿ, ಎದ್ದೇಳು!"

ಗುರುವಿನ ಆಜ್ಞೆಯಾಗಿತ್ತು. ಏಳಲೇಬೇಕಾಗಿ ಬಂತು. ಹೊರಗೆ ಬಂದು ರಾಜೂ ತಿಳಿಸಿದ: "ಆ ಮೊಹಲ್ಲಾದ ತಾರಾಪಾದನ ಮಗ ಈಗ ತಾನೆ ಕಾಲರಾದಿಂದ ತೀರಿಕೊಂಡಿದ್ದಾನೆ. ಮೂರುವರ್ಷದ ಬಡಪಾಯಿ ಮಗು. ಏನೆಲ್ಲ ಪ್ರಯತ್ನ ಮಾಡಿದರೂ ಅವನನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ತಾಯಿತಂದೆಗಳು ಹುಚ್ಚರಂತೆ ಅತ್ತು ಕರೆದು ಮಾಡುತ್ತಿದ್ದಾರೆ. ಈ ರೋಗದಿಂದ ಸತ್ತ ರೋಗಿಗಳ ಹೆಣವನ್ನು ಬಹಳ ಹೊತ್ತು ಹಾಗೆಯೇ ಬಿಟ್ಟಿರಬಾರದು. ಈ ಕ್ಷಣವೇ ಅದನ್ನು ಶ್ಮಶಾನಕ್ಕೆ ತಲುಪಿಸಿಬಿಡಬೇಕು. ಮೊಹಲ್ಲಾದ ಜನಗಳೆಲ್ಲ ಈ ಜಾತ್ರೆ ಪ್ರದರ್ಶನವನ್ನು ನೋಡುವ ಸಲುವಾಗಿ ಇಲ್ಲಿಗೆ ಬಂದುಬಿಟ್ಟಿದ್ದಾರೆ. ಈಗ ನೀನೇ ನನ್ನ ಜೊತೆಗೆ ಬಾ!"

ಇಬ್ಬರೂ ತಾರಾಪಾದರ ಮನೆಯನ್ನು ತಲುಪಿದರು. ತಂದೆತಾಯಿಗಳಿಗೆ ತಿಳಿಯ ಹೇಳಿ, ಮಗುವಿನ ಹೆಣವನ್ನು ಶ್ಮಶಾನದ ಕಡೆಗೆ ತೆಗೆದುಕೊಂಡು ಹೊರಟರು. ನಡುರಾತ್ರಿ ಕಳೆದಿತ್ತು. ಸ್ವಲ್ಪ ದೂರ ಹೋದಮೇಲೆ ಶರತ್ ಹೇಳಿದ: "ಜೊತೆಗೆ ಬತ್ತಿಯನ್ನು ತೆಗೆದುಕೊಂಡಿದ್ದರೆ ಚೆನ್ನಾಗಿರುತ್ತಿತ್ತು."

ರಾಜೂ ಉತ್ತರಿಸಿದ: "ಇದ್ದರೆ ತಾನೆ? ಆದರೆ ಈ ಹೊತ್ತಿನಲ್ಲಿ ಅದು ಸಿಕ್ಕುವುದಾದರೂ ಎಲ್ಲಿ! ಕೊಡುವವರಾದರೂ ಯಾರು? ನನ್ನ ಹತ್ತಿರ ಒಂದು

ಬೆಂಕಿಪೊಟ್ಟಣ ಇದೆ. ಆದರಿಂದಲೇ ಕೆಲಸ ಮುಗಿಸೋಣ."

ಶ್ಮಶಾನ ಸರಿಯಾಗಿ ಗಂಗೆಯ ದಡದಲ್ಲಿಯೇ ಇತ್ತು. ಎಷ್ಟು ದೊಡ್ಡದಾಗಿತ್ತೋ ಅಷ್ಟೇ ದಿಗಿಲು ಹುಟ್ಟಿಸುವಂಥದೂ ಆಗಿತ್ತು. ಬಹುದೂರದವರೆಗೆ ಎಲ್ಲಿಯೂ ಜನವಸತಿಯ ಕುರುಹು ಕೂಡ ಇರಲಿಲ್ಲ. ನಾಲ್ಕು ಕಡೆಯೂ ಮರಳಿನ ಅಖಂಡ ಸಾಮ್ರಾಜ್ಯವಿತ್ತು. ಎಲ್ಲೋ ಒಂದೊಂದು ಕಡೆ ಖರ್ಜೂರದ ಒಂದೆರಡು ಗಿಡಗಳು ಅಥವಾ ಮುಳ್ಳಿನಿಂದ ಕೂಡಿದ ಪೊದೆಗಳು - ಇಷ್ಟು ಮಾತ್ರವೇ ಅಲ್ಲಿ ಕಾಣಿಸುತ್ತಿದ್ದುದು.

ಶ್ಮಶಾನದ ನಟ್ಟ ನಡುವೆ ಒಂದು ಗುಡಿಸಿಲಿತ್ತು. ಬಿರುಗಾಳಿ ಬೀಸಿದರೆ ಅಥವಾ ಮಳೆ ಬಂದರೆ ಅಥವಾ ಬೇರಾವುದೇ ಕಾರಣದಿಂದಾಗಿ ವಿಶ್ರಾಂತಿ ಪಡೆಯುವ ಅಗತ್ಯ ಬಿದ್ದರೆ ಅದನ್ನು ಉಪಯೋಗಿಸಿಕೊಳ್ಳಬಹುದಾಗಿತ್ತು. ಆದರೆ, ಅದರಲ್ಲಿ ಭೂತಗಳು ವಾಸಮಾಡುತ್ತಿರುತ್ತವೆ ಎಂಬುದು ಜನರ ನಂಬಿಕೆಯಾಗಿತ್ತು. ಹಗಲಿನಲ್ಲಿಯೂ ಅದರ ಒಳಗೆ ಹೋಗಲು ಜನರ ಹೆದರುತ್ತಿದ್ದರು.

ಆದರೆ, ರಾಜುವಿಗೆ ಈ ಸಂಗತಿಗಳ ಚಿಂತೆಯೇನೂ ಇರಲಿಲ್ಲ. ಅವನು ನೇರವಾಗಿ ಆ ಗುಡಿಸಿಲಿಗೇ ಹೋಗಿ ನುಗ್ಗಿದ. ಹಿಂದೆ ಹಿಂದೆ ಶರತ್ ಕೂಡ ನಡೆದು ಬಂದ. ಆದರೆ ಭಯದಿಂದಾಗಿ ಅವನು ನಡುಗುತ್ತಿದ್ದ. ರಾಜು ಹೆಣವನ್ನು ನೆಲದ ಮೇಲೆ ಇರಿಸಿದ. "ಬಹಳ ಹೊತ್ತಿನಿಂದಲೂ ಬೀಡಿ ಸೇದಿಲ್ಲ. ಮೊದಲು ಒಂದು ಬೀಡಿ ಸೇದಿಬಿಡುತ್ತೇನೆ."

ಆಗ ಒಮ್ಮೆಗೇ ಕತ್ತಲಿನ ಆಳದಿಂದ ಮತ್ತೊಂದು ಧ್ವನಿ ಕೇಳಿ ಬಂದಿತು: "ನನಗೂ ಒಂದು ಕೊಡುತ್ತೀಯಾ ?"

ಶರತ್‌ನ ರೋಮಗಳು ನಿಮಿರಿ ನಿಂತುವು. ಮೈಯಲ್ಲಿ ಬೆವರು ಕಿತ್ತುಕೊಂಡಿತು. ರಾಜೂ ಕೇಳಿದ: "ಯಾರು ನೀನು ?" ಜೊತೆಗೆ ಬೆಂಕಿ ಕಡ್ಡಿಯೊಂದನ್ನು ಗೀರಿದ. ಹತ್ತಿರದಲ್ಲಿಯೇ ಕೊಳೆಯಾಗಿದ್ದ ಹಾಸಿಗೆಯೊಂದರ ಮೇಲೆ ಚಿಂದಿಗಳಿಂದ ಮೈಮುಚ್ಚಿಕೊಂಡಿದ್ದ ವ್ಯಕ್ತಿಯೊಬ್ಬ ಮೈ ಚಾಚಿದ್ದ.

ಅವನನ್ನು ಪ್ರಶ್ನಿಸಿದ: "ಯಾರು ನೀನು ?"

ಮತ್ತೆ ಧ್ವನಿ ಕೇಳಿಸಿತು: 'ನಾನೊಬ್ಬ ಗಂಗಾ-ಯಾತ್ರಿಕ"

ಈಗ ಅವನು ಅವನನ್ನು ಗಮನವಿಟ್ಟು ನೋಡಿದ. ಚಿಂದಿಯ ನಡುವೆ ಸುಮಾರು ಎಂಬತ್ತು ವರ್ಷ ವಯಸ್ಸಿನ ಒಬ್ಬ ಮುದುಕ ಮೈಚಾಚಿ ಮಲಗಿದ್ದ. ರಾಜು ಅವನಿಗೆ ಸೇದಲು ಒಂದು ಬೀಡಿಯನ್ನು ಕೊಟ್ಟ. ಅಮೃತವೇ ಸಿಕ್ಕಿತೇನೋ ಎಂಬಂತೆ ಆ ವೃದ್ಧ ದಮ್ಮು ಎಳೆದ. ಹೇಳಿದ: "ಮಗು, ನೀನು ನನ್ನನ್ನು ಕಾಪಾಡಿದೆ. ಅನೇಕ ದಿನಗಳಿಂದ ಇಲ್ಲಿ ಬಿದ್ದಿದ್ದೆ. ಸಾವೂ ಹತ್ತಿರ ಸುಳಿದಿಲ್ಲ. ನನ್ನ ಜೊತೆಗೆ ನನ್ನ ಇಬ್ಬರು ಸಂಬಂಧಿಕರು ಹಾಗೂ ನಮ್ಮ ಮೊಹಲ್ಲಾದ ಇನ್ನೊಬ್ಬ ವ್ಯಕ್ತಿ ಬಂದಿದ್ದಾರೆ. ನಾನು ಬೇಗ ಸಾಯುತ್ತಿಲ್ಲವಲ್ಲ ಎಂದು ಅವರಿಗೆ ತುಂಬ ಕೋಪ ಬಂದಿದೆ. ಇವತ್ತು ಜಾತ್ರಾ-ಪ್ರದರ್ಶನವನ್ನು ನೋಡಲು ಹೋಗಿದ್ದಾರೆ. 'ಮುದುಕ ಬೇಗ ಸತ್ತು ಹೋಗುತ್ತಾನೆ ಎಂದು ಕರೆದುಕೊಂಡು ಬಂದೆವು. ಆದರೆ ಗಂಗೆಯ ಗಾಳಿಯನ್ನು ಕುಡಿದು ಇವನು ಇನ್ನೂ ಚೆನ್ನಾಗಿ ಆಗತೊಡಗಿದ್ದಾನೆ' ಎಂದು ಹೇಳಲು

ಆರಂಭಿಸಿದ್ದಾರೆ. ನನ್ನ ಗತಿ ಏನಾಗುತ್ತದೋ ಗೊತ್ತಿಲ್ಲ. ಗಂಗಾಯಾತ್ರಿಕನಂತೂ ಹಿಂದಿರುಗುವ ಹಾಗಿಲ್ಲವಲ್ಲ!"

ರಾಜೂ ಕೂಡಲೇ ಉತ್ತರಿಸಿದ: "ಏಕೆ ಹಿಂದಿರುಗಬಾರದು? ನೀನು ಚೆನ್ನಾಗಿದ್ದೀಯೆ ನಿನ್ನ ಮನೆ ಎಲ್ಲಿದೆ? ನಾವು ನಿನ್ನನ್ನು ಅಲ್ಲಿಗೆ ಬಿಟ್ಟುಬರುತ್ತೇವೆ. ಇಲ್ಲದೆ ಹೋದರೆ ನಿನ್ನ ಸಂಗಡಿಗರು ನಿನ್ನನ್ನು ಕತ್ತು ಹಿಸುಕಿ ಕೊಂದುಹಾಕಿಬಿಡುತ್ತಾರೆ."

ಮುದುಕ ಹೇಳಿದ: "ಹೌದು ಮಗು. ಅವರು ಮತ್ತೆ ಮತ್ತೆ ಇದೇ ಮಾತನ್ನು ಹೇಳಿ ನನ್ನನ್ನು ಬೆದರಿಸುತ್ತಿದ್ದಾರೆ. ಯಾವಾಗ ಅವರು ಕತ್ತು ಹಿಸುಕಿ ಬಿಡುತ್ತಾರೋ ಏನೋ?"

ರಾಜು ಮೊದಲು ಹುಡುಗನ ಶವವನ್ನು ಹೂಳಿದ. ಆಮೇಲೆ ಸ್ನಾನ ಮಾಡಿದ. ಅನಂತರ ಶರತ್‌ನೊಂದಿಗೆ ಹೇಳಿದ: "ನಾನು ಈ ಮುದುಕನನ್ನು ಭುಜದ ಮೇಲೆ ಹೊತ್ತುಕೊಳ್ಳುತ್ತೇನೆ. ನೀನು ಅವನ ಚಿಂದಿ ಹೊದಿಕೆಯನ್ನು ಬಗಲಿನಲ್ಲಿ ತುರುಕಿಕೊ."

ಮತ್ತೆ, ಆ ಉಸ್ತಾದ್ ಹಾವಾಡಿಗ ಮತ್ತು ಅನ್ನದಾ ಸೋದರಿ! ಆ 'ಪ್ರೇಮ-ಪ್ಲಾವಿತ ಆತ್ಮವನ್ನು ರಾಜು ನಿಜಕ್ಕೂ ಪೂಜಿಸುತ್ತಿದ್ದ. ಸಮಾಜದಿಂದ ಬಹಿಷ್ಕೃತಳಾಗಿದ್ದ ಆಕೆ ಯಾರು? ಇದು ಸರಿಯಾಗಿ ಯಾರಿಗೂ ಗೊತ್ತಿರಲಿಲ್ಲ. ಆದರೆ, ಆಕೆಯ ಗಂಡ ಮುಸಲ್ಮಾನನಾಗಿ ಬಿಟ್ಟಿದ್ದ ಹಾಗೂ ಸಮಾಜ ಕಟ್ಟಪ್ಪಣೆ ಮಾಡಿದ್ದರೂ ಆಕೆ ಅವನನ್ನು ತ್ಯಜಿಸಿರಲಿಲ್ಲವೆಂಬುದಂತೂ ಸತ್ಯ ಸಂಗತಿಯಾಗಿತ್ತು. ಅವನು ಹಾವು ಹಿಡಿಯುವ ಕೆಲಸ ಮಾಡುತ್ತಿದ್ದ. ಆದರೆ, ಅದರಿಂದ ಹೊಟ್ಟೆಯೇನೂ ತುಂಬುತ್ತಿರಲಿಲ್ಲ. ಆದ್ದರಿಂದ, ತಮ್ಮ ಸ್ವಭಾವಕ್ಕನುಗುಣವಾಗಿ ರಾಜು ಮತ್ತು ಶರತ್ ಅವರಿಗೆ ನೆರವಾಗುತ್ತಿದ್ದರು. ಒಮ್ಮೆ ಆ ಸೋದರಿಯನ್ನು ಹೀಯಾಳಿಸಿದ್ದಕ್ಕಾಗಿ ಅವನು ಆ ಉಸ್ತಾದನಿಗೆ ಒದೆಗಳನ್ನೂ ಕೊಟ್ಟಿದ್ದ.

ಈ ಕಥೆಗಳಿಗೆ ಕೊನೆಯೇ ಇರಲಿಲ್ಲ. ಶರತ್‌ನ ದುಃಖಕ್ಕೂ ಕೊನೆಯೇ ಇರಲಿಲ್ಲ. ಆದರೆ, ಅವನು ಈ ದುಃಖವನ್ನು ಯಾರ ಎದುರಿಗೂ ತೋಡಿಕೊಳ್ಳುತ್ತಿರಲಿಲ್ಲ. ಜೊತೆಗೆ, ರಾಜುವಿನ ನೆನಪು ಅವನ ಸಾಹಸಪ್ರವೃತ್ತಿಗೆ, ಕೆಚ್ಚಿಗೆ ಒತ್ತಾಸೆ ನೀಡುತ್ತಿತ್ತು. ಎಲ್ಲ ಕಡೆಯೂ ಎಲ್ಲರನ್ನೂ ಅವನು ತನ್ನ ಧೈರ್ಯ-ಸಾಹಸಗಳಿಂದ ಆಶ್ಚರ್ಯಚಕಿತರನ್ನಾಗಿಸುತ್ತಿದ್ದ.

## 13

ಇತ್ತ ಶರತ್ ಈ ಪ್ರವೃತ್ತಿಗಳಲ್ಲಿ ಮಗ್ನನಾಗಿದ್ದರೆ, ಅತ್ತ ಅವನ ತಂದೆಯ ಯಾಯಾವರ ವೃತ್ತಿ ಮೇರೆಯನ್ನು ದಾಟ ಹೋಗತೊಡಗಿತ್ತು. ಮನೆಯಲ್ಲಿ ಇನ್ನೂ ಮೂರು ಮಕ್ಕಳಿದ್ದರು. ಅವರ ಹೊಟ್ಟೆಗೆ ಅನ್ನ ಮತ್ತು ಮೈಗೆ ಬಟ್ಟೆ ಅಗತ್ಯವಾಗಿತ್ತು. ಆದರೆ ಈ ಅಗತ್ಯಗಳನ್ನು ಪೂರೈಸುವ ಸಲುವಾಗಿ ಹಣವನ್ನು ಜೋಡಿಸುವುದು ಅವರ ಕೈಮೀರಿದ ಸಂಗತಿಯಾಗಿತ್ತು. ಹಿಂದಿನ ಸಾಲಗಳನ್ನು ತೀರಿಸಲೂ ಅವರಿಗೆ ಸಾಧ್ಯವಾಗಿರಲಿಲ್ಲ. 'ಡಿಕ್ರಿ'ಯಾಗಿ ಬಿಟ್ಟಿದ್ದುದರಿಂದ ಹಳ್ಳಿಯಲ್ಲಿನ ತಮ್ಮ ಮನೆಯನ್ನೂ

ಚಿಕ್ಕ ಮಾವನವರಿಗೆ ಕೇವಲ 225 ರೂ.ಗಳಿಗೆ ಮಾರಿಬಿಟ್ಟಿದ್ದರು.[1] ಈಗ ಹಸಿವಿನಿಂದ ಬಳಲಿ ಸಾಯುವುದಲ್ಲದೆ ಬೇರಾವ ದಾರಿಯೂ ಇರಲಿಲ್ಲ. ಶರತ್ ಹುಡುಗನೇನೂ ಆಗಿರಲಿಲ್ಲ; ಈಗಾಗಲೇ ಇಪ್ಪತ್ತೊಂದು ವರ್ಷ ವಯಸ್ಸಿನ ಯುವಕನಾಗಿದ್ದ. ತನ್ನ ಕೆಲವೊಂದು ಗುಣಗಳು ಹಾಗೂ ಕೆಲವೊಂದು ದುರ್ಗುಣಗಳಿಂದಾಗಿ ಅವನು ಕಡಿಮೆ ಜನಪ್ರಿಯನೇನೂ ಆಗಿರಲಿಲ್ಲ. ಮನೆಯ ದುಃಸ್ಥಿತಿ ಕೊನೆಗೂ ಅವನ ಹೃದಯವನ್ನು ತಟ್ಟಿತು. ಹೀಗಾಗಿ ಅವನು ಕೆಲಸವನ್ನು ಹುಡುಕಿಕೊಂಡು ಹೊರಟ.

ಆ ದಿನಗಳಲ್ಲಿ ಸಂಥಾಲ್ ಪರಗಣದಲ್ಲಿ 'ಸೆಟ್ಲ್‌ಮೆಂಟ್' ಕಾರ್ಯ ನಡೆಯುತ್ತಿತ್ತು. ಬನ್ನೈರಿ ಎಸ್ಟೇಟ್‌ನ ವತಿಯಿಂದ ಎಸ್ಟೇಟಿನ ಹಿತಾಸಕ್ತಿಗಳ ರಕ್ಷಣೆಗಾಗಿ ಹಿರಿಯ ಅಧಿಕಾರಿಯೊಬ್ಬನನ್ನು ನೇಮಿಸಲಾಗಿತ್ತು. ಇವನಿಗೆ ಸಹಾಯಕನಾಗಿ ಕೆಲಸ ಮಾಡುವ ಹುದ್ದೆ ಶರತ್‌ಗೆ ದೊರೆಯಿತು. ಕೆಲಸ ಆಸಕ್ತಿಯನ್ನುಂಟು ಮಾಡುವಂಥದಾಗಿತ್ತು. ಆಗಿಂದಾಗ್ಗೆ ಪ್ರವಾಸ ಮಾಡಬೇಕಾಗಿ ಬರುತ್ತಿತ್ತು. ಗುಡಾರಗಳಲ್ಲಿ ವಾಸ ಮಾಡುವುದು, ಆ ದಿನಗಳಲ್ಲಿ ಸ್ಥಳೀಯ ಸಂಸ್ಥಾನಗಳಲ್ಲಿ ನಡೆಯುತ್ತಿದ್ದ ನೃತ್ಯ-ಸಂಗೀತಗೋಷ್ಠಿಗಳಲ್ಲಿ ಭಾಗವಹಿಸುವುದು, ಬೇಟೆಯಾಡುವುದು - ಇವೇ ಹಿರಿಯ ಅಧಿಕಾರಿಗಳ ಪ್ರಮುಖ ಕಾರ್ಯಗಳಾಗಿರುತ್ತಿದ್ದುವು. ಒಮ್ಮೊಮ್ಮೆ ರಾಜಕುಮಾರರೂ ಅಲ್ಲಿಗೆ ಬರುತ್ತಿದ್ದರು. ಹೇಳಿಕೇಳಿ ಶರತ್ ದುಸ್ಸಾಹಸಿಯಾಗಿದ್ದಂಥವನು. ಅವನು ಗುಂಡು ಹಾರಿಸುವುದನ್ನೂ ಇಲ್ಲಿ ಚೆನ್ನಾಗಿ ಅಭ್ಯಾಸ ಮಾಡಿಕೊಂಡ. ಬಹುಬೇಗನೆ ಹಾರಾಡುತ್ತಿರುವ ಹಕ್ಕಿಯನ್ನೂ ಹೊಡೆದುರುಳಿಸಬಲ್ಲಂಥವನೆಂದು ಅವನು ಹೆಸರು ಗಳಿಸಿದ. ಈ ಗುಣ ಅವನ ಜನಪ್ರಿಯತೆಯನ್ನು ಮತ್ತಷ್ಟು ಹೆಚ್ಚಿಸತೊಡಗಿತು. ಒಮ್ಮೊಮ್ಮೆ ಒಂಟಿಯಾಗಿ, ಒಮ್ಮೊಮ್ಮೆ ಗುಂಪಿನ ಜೊತೆಯಲ್ಲಿ ಅವನು ಸಂಚಾರಕ್ಕೆಂದು ಹೊರಡುತ್ತಿದ್ದ. ಶ್ಮಶಾನ ಭೂಮಿಯ ಬಗೆಗೆ ಅವನಿಗೆ ವಿಶೇಷವಾದ ಒಲವಿತ್ತು. ಒಮ್ಮೆ ಅಲ್ಲಿ ಇಲ್ಲಿ ಅಲೆದಾಡುತ್ತ ಅವನು ವಕ್ರೇಶ್ವರಕ್ಕೆ ಹೋಗಿ ತಲುಪಿದ. ಅಲ್ಲಿಯ ಶ್ಮಶಾನ ಭೂಮಿಯನ್ನು ಕಂಡು ಅವನು ಮುಗ್ಧನಾಗಿ ಬಿಟ್ಟ. ಶಿವನ ದೇವಸ್ಥಾನದ ಬಳಿ ಅದೆಂಥ ನಿರ್ಜನತೆ! ಅವನ ವೈರಾಗ್ಯಶೀಲ ಮನಸ್ಸಿಗೆ ನಿರ್ಜನತೆ ಯಾವಾಗಲೂ ತುಂಬ ಪ್ರಿಯವಾಗಿ ತೋರುತ್ತಿತ್ತು. ರಾಶಿರಾಶಿಯಾಗಿ ಬಿದ್ದಿದ್ದ ನರಮುಂಡಗಳು, ಬೂರುಗದ ಮರದ ಕೊಂಬೆಗಳಿಗೆ ಚೀಲಗಳಂತೆ ನೇತುಬಿದ್ದಿದ್ದ ಬಾವಲಿಗಳು, ಹಾಗೂ ಇವುಗಳ ನಡುವೆ ಆ ವಿರಾಟ್ ಮೌನದಲ್ಲಿ ಆರ್ತಕಂಠದಿಂದ ಅರಚುತ್ತಿದ್ದ ಒಂದು ಬಾವಲಿ ಮರಿ - ಇವುಗಳಲ್ಲಿ ಯಾವುದೂ ಅವನ ವೈರಾಗ್ಯಶೀಲ ಮನಸ್ಸನ್ನು ಚಂಚಲಗೊಳಿಸಲಾರದೆ ಹೋಯಿತು.

ಅಂದು ರಾಜಕುಮಾರನೊಬ್ಬ ಆಗಮಿಸಿದ್ದರಿಂದ ನೃತ್ಯ-ಗಾಯನ ಗೋಷ್ಠಿಗೆ ವಿಶೇಷ ಕಳೆಬಂದಿತ್ತು. 'ಸೆಟ್ಲ್‌ಮೆಂಟ್'ನ ದೊಡ್ಡದೊಡ್ಡ ಅಧಿಕಾರಿಗಳನ್ನು ಆಹ್ವಾನಿಸಲಾಗಿತ್ತು. ಕೈ ತುಂಬ ಹಣವನ್ನೇ ಕೊಡುವ ಶರತ್ತಿನ ಮೇಲೆ ಪಟ್ನಾದಿಂದ ಒಬ್ಬ ವೇಶ್ಯೆಯೂ ಆಗಮಿಸಿದ್ದಳು. ನೋಡಲು ಸುಂದರಳಾಗಿದ್ದುದು ಮಾತ್ರವಲ್ಲದೆ, ಆಕೆಯ ಕಂಠವೂ ತುಂಬ ಮಧುರವಾಗಿತ್ತು. ಶರತ್‌ನನ್ನು ಈ ಗೋಷ್ಠಿಗೆ

1. ನವೆಂಬರ್ 1896 ('ದೇವಾನ ದಪುರೇ ಶರತ್‌ಚಂದ್ರ' - ದ್ವಿಜೇಂದ್ರನಾಥ ದತ್ತ ಮುನ್ಷಿ; 'ಭಾರತ ವರ್ಷ', ಮಾರ್ಚ್ 1938; ಚೈತ್ರ 1344)

ಆಹ್ವಾನಿಸಲಾಗಿತ್ತು. ಅವನು ಉನ್ನತ ಹುದ್ದೆಯಲ್ಲೇನೂ ಇರಲಿಲ್ಲ. ಆದರೆ ಅವನ ಕಂಠ ಮಾಧುರ್ಯದ ಸುದ್ದಿ ರಾಜಕುಮಾರನ ಕಿವಿಯವರೆಗೂ ತಲುಪಿತ್ತು. ಆತ ಹೇಳಿದ: "ಶರತ್, ಇಂದು ನೀನು ಹಾಡಲೇಬೇಕು."

ಶರತ್‌ನ ಹಾಡುಗಾರಿಕೆಯನ್ನು ಶಾಸ್ತ್ರೀಯ ಸಂಗೀತದ ದೃಷ್ಟಿಯಿಂದ ಶುದ್ಧವಾದುದೆಂದು ಹೇಳಲಾಗದಿದ್ದರೂ, ಅದರ ಮಾಧುರ್ಯ ಮನಸ್ಸನ್ನು ತಟ್ಟುವಂಥದಾಗಿತ್ತು. ಸ್ವತಃ ಆ ನರ್ತಕಿಯೂ ಅವನನ್ನು ಹೊಗಳಿದಳು. ನೃತ್ಯದಲ್ಲಿ ಹಾಡುಗಾರಿಕೆಯಲ್ಲೂ ಅವಳು ನಿಪುಣೆಯಾಗಿದ್ದಳು. ತನ್ನ ಚೈತನ್ಯವನ್ನೆಲ್ಲ ಧಾರೆಯೆರೆದು ಅಂದು ಗೋಷ್ಠಿಯಲ್ಲಿ ಆಕೆ ವೀಣೆಯನ್ನು ನುಡಿಸಿದಳು. ಆದರೆ, "ಕೋಣನ ಎದುರಿಗೆ ಕಿಂದರಿ ಬಾರಿಸಿದರೆ, ಕೋಣ ನಿಂತು ಮೆಲುಕು ಹಾಕುತ್ತಿತ್ತು" ಎಂಬಂತೆ ಆಯಿತು. ಆ ಗೋಷ್ಠಿಯಲ್ಲಿ ಶರತ್ ಮಾತ್ರವೇ ರಾಗಿಣಿಯ ರಹಸ್ಯವನ್ನು ಗುರುತಿಸಬಲ್ಲವನಾದ. ಮುಕ್ತ ಕಂಠದಿಂದ ಅವನು ನರ್ತಕಿಯ ವೀಣಾವಾದನ ಕೌಶಲವನ್ನು ಪ್ರಶಂಸಿಸಿದ. ಅವಳು ಈ ಪ್ರಶಂಸೆಯನ್ನು ಕೇಳಿ ಗದ್ಗದಿತಳಾದಳು. ದಾರಿತಪ್ಪಿದ ಈ ಗುಣಗ್ರಾಹಿ ಯುವಕನ ವಿಷಯದಲ್ಲಿ ಅವಳ ಹೃದಯದಿಂದ ಸಹಾನುಭೂತಿಯ ಭಾವನೆ ಉಕ್ಕಿಹರಿಯಿತು. ಕೆಲವೇಕ್ಷಣಗಳ ಪರಿಚಯ ಅವರಿಬ್ಬರನ್ನೂ ಪರಸ್ಪರ ತುಂಬ ಹತ್ತಿರಕ್ಕೆ ತಂದಿತು. ಅಂದು ರಾತ್ರಿ ಬಹಳ ಹೊತ್ತಿನ ಬಳಿಕ ಯಾವುದೋ ಪ್ರಸಂಗದಲ್ಲಿ ಆ ನರ್ತಕಿ ಅವನೊಂದಿಗೆ ಹೀಗೆಂದಳು: "ನಾನೇನೋ ಹಣಕ್ಕಾಗಿ ಹಾಡುತ್ತೇನೆ. ಹಾಡುವುದು ನನ್ನ ವೃತ್ತಿ. ಆದರೆ ನೀವೇಕೆ ಇವರ ಆಸ್ಥಾನಿಕರಂತೆ ವರ್ತಿಸಬೇಕು ? ನೀವು ಗುಣಗ್ರಾಹಿಗಳು. ನೀವು ಇಂಥಲ್ಲಿಂದ ಹೊರಟುಹೋಗಬೇಕು."

ಕೊನೆಗೆ ಶರತ್ ಆ ಕೆಲಸವನ್ನು ಬಿಟ್ಟುಬಿಟ್ಟ. ಆ ನರ್ತಕಿಯ ಒತ್ತಾಯದಿಂದಾಗಿಯೇ ಅವನು ಆ ಕೆಲಸವನ್ನು ಬಿಟ್ಟು ಬಿಟ್ಟಿರಬೇಕೆಂಬ ಮಾತನ್ನು ಯಾವ ರೀತಿಯಲ್ಲೂ ಒಪ್ಪಲು ಸಾಧ್ಯವಾಗುವುದಿಲ್ಲ. ತನ್ನ ತಂದೆಯಿಂದ ಬಳುವಳಿಯಾಗಿ ಪಡೆದಿದ್ದ ಆ ಚಂಚಲ ಸ್ವಭಾವ ಎಲ್ಲಿಯಾದರೂ ಒಂದು ಕಡೆ ಭದ್ರವಾಗಿ ನೆಲೆಯೂರಿ ಕುಳ್ಳಿರಲು ಬಿಡುತ್ತಿತ್ತೆ? ತನ್ನ ನಲವತ್ತನೆಯ ವಯಸ್ಸಿನಲ್ಲಿ ಅವನು ರಾಜನಂತೆ ಪ್ರಸಿದ್ಧನಾಗುತ್ತಾನೆಂದು ಜ್ಯೋತಿಷಿಯೊಬ್ಬ ಭವಿಷ್ಯವನ್ನು ನುಡಿದಿದ್ದ. ಕೆಲಸವನ್ನು ಬಿಡುವುದಕ್ಕೆ ಇದೂ ಕಾರಣವಾಗಿದ್ದಿರಬಹುದು.

ಇತರ ಕಾರಣಗಳೂ ಇದ್ದಿರಬಹುದು. ವಾಸ್ತವವಾಗಿ ಕಿಶೋರಾವಸ್ಥೆಯಿಂದಲೂ ಅವನು ತನ್ನ ಸುತ್ತ ಒಂದು ರಹಸ್ಯಮಯ ವಾತಾವರಣವನ್ನು ಸೃಷ್ಟಿಸಿಕೊಂಡೇ ಇರುತ್ತಿದ್ದ. ಸ್ವತಃ ಬಗೆಬಗೆಯಾದ ಕಥೆಗಳನ್ನು ಕಟ್ಟಿ ಹೇಳುವುದು ಅವನ ಸ್ವಭಾವವೇ ಆಗಿಬಿಟ್ಟಿತ್ತು. ಆ ಕಥೆಗಳಲ್ಲಿ ತನ್ನ ಬಗೆಗೂ ಬಗೆಬಗೆಯಾದ ಕಿಂವದಂತಿಗಳನ್ನು ಹರಡಿಬಿಡುತ್ತಿದ್ದ. ಆ ನರ್ತಕಿಯ ಒತ್ತಾಯದ ಕಥೆಯೂ ಈ ಬಗೆಯ ಒಂದು ಕಿಂವದಂತಿಯೇ ಆಗಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ, ನಿಜವಾಗಿಯೂ ಸತ್ಯವಾಗಿದ್ದ ಸಂಗತಿಯೆಂದರೆ ಈ ಎಲ್ಲ ಕುಸಂಗತಿಗಳನ್ನೂ, ಸ್ವಚ್ಛಂದ ಹಾಗೂ ದುಸ್ಸಾಹಸಪೂರ್ಣ ಪ್ರವೃತ್ತಿಗಳನ್ನೂ ಮೀರಿ ನಿಂತು, ಅವನ ಸಾಹಿತ್ಯಿಕ ಸಾಧನೆ ಸದ್ದಿಲ್ಲದ ಆಮೆಯ ವೇಗದಲ್ಲಿ ಮುಂದುವರಿಯುತ್ತ ಇತ್ತು. ದಿನವಿಡೀ ನಡೆಸುತ್ತಿದ್ದ

ಯಾಯಾವರ ವೃತ್ತಿಯ ತರುವಾಯ, ರಾತ್ರಿಯ ಏಕಾಂತದಲ್ಲಿ ಅವನು ಪುಸ್ತಕಗಳ ಹಾಳೆಗಳ ನಡುವೆ ಸೇರಿಬಿಡುತ್ತಿದ್ದ. ಕೆಲಸದಲ್ಲಿದ್ದಾಗಲೂ ಈ ನಿಯಮಕ್ಕೆ ಭಂಗವೇನೂ ಉಂಟಾಗಿರಲಿಲ್ಲ. ಮೊದಮೊದಲು ಅವನಿಗೆ ಕವಿತೆಯತ್ತ ಒಲವು ಉಂಟಾಗಿತ್ತು. ಆದರೆ ಪದ್ಯವನ್ನು ರಚಿಸುವ ಧೈರ್ಯ ಅವನಲ್ಲಿ ಇರಲಿಲ್ಲ. ತನ್ನ ಅಭಿರುಚಿಗೆ ಅನುಗುಣವಾಗಿ ಗದ್ಯವನ್ನು ಬರೆಯುವುದರಲ್ಲಿಯೇ ಅವನು ತನ್ನೆಲ್ಲ ಸಮಯವನ್ನೂ ಕಳೆಯುತ್ತಿದ್ದ. ಸರಿಯಾದ ಶೈಲಿ ಮತ್ತು ಶಬ್ದಗಳು ಮೂಡಿ ಬರುವವರೆಗೆ ಅವನಿಗೆ ಸಮಾಧಾನವಾಗುತ್ತಿರಲಿಲ್ಲ. ಬರೆದುದನ್ನು ಮತ್ತೆ ಮತ್ತೆ ಹೊಡೆದು ಹಾಕುತ್ತಿದ್ದ. ಆದರೆ, ಛಂದಸ್ಸಿನ ಜೆನ್ನುಹತ್ತುವ ಪ್ರಯತ್ನ ಬಹುಬೇಗ ಅವನನ್ನು ಬಳಲಿಸಿಬಿಡುತ್ತಿತ್ತು. 'ಅಮಿತ್ರಾಕ್ಷರ' ಛಂದಸ್ಸಿನಲ್ಲಿ ಅವನು ಕಿರುಗಾಥೆಯೊಂದನ್ನು ಮಾತ್ರವೇ ಬರೆದು ಮುಗಿಸಿದ್ದ. 'ಫೂಲ್ ಬನೇ ಲೇಗೇಛೇ ಆಗುನ್' ಎಂಬುದು ಅದರ ಮೊದಲ ಪಂಕ್ತಿಯಾಗಿತ್ತು.

ಇದರಲ್ಲಿ ಅವನು 'ಸುಪ್ರಭಾ' ಮತ್ತು 'ಇಂದ್ರಾ' ಎಂಬ ಇಬ್ಬರು ನಾಯಿಕೆಯರ ಮನೋಭಾವಗಳನ್ನು ವಿಶ್ಲೇಷಿಸಿದ್ದ. ಕೊನೆಯಲ್ಲಿ ಸುಪ್ರಭಾ ವಿಷಪಾನ ಮಾಡಿ ಸಾವನ್ನಪ್ಪಿದ್ದಳು. ಅವಳ ಆ ಸೋಲಿನಲ್ಲಿಯೇ ಅವನು ತನ್ನ ಗೆಲುವಿನ ಪತಾಕೆಯನ್ನು ಹಾರಿಸಿದ್ದ. ಆ ಅವಧಿಯಲ್ಲಿ ಶರತ್‌ನಂಥ ದಾರಿತಪ್ಪಿದ ಹಾಗೂ ಭಾವುಕ ಯುವಕನಿಂದ ಇದಕ್ಕಿಂತಲೂ ಹೆಚ್ಚಿನದೇನನ್ನು ತಾನೇ ನಿರೀಕ್ಷಿಸಲು ಸಾಧ್ಯವಿತ್ತು? ಕಾವ್ಯರಚನೆಗೆ ಅವನು ಕೈಹಾಕಿದ್ದು, ಆ ಅವಧಿಯಲ್ಲಿನ ಪ್ರವೃತ್ತಿಗೆ ಅನುಗುಣ ವಾಗಿಯೇ ಇತ್ತು. ಅದು ರವೀಂದ್ರ ಯುಗವಾಗಿತ್ತಲ್ಲವೆ! ಅವನಂತೆಯೇ, ಅನಾತೋಲೆ ಫ್ರಾನ್ಸ್‌ನಂಥ ಜಗತ್ತಿನ ಅನೇಕ ಸಾಹಿತಿಗಳು ಮೊಟ್ಟಮೊದಲು ಕಾವ್ಯರಚನೆಯತ್ತಲೇ ತಮ್ಮ ಗಮನ ಹರಿಸಿದ್ದರು. ಆದರೆ ಅವನು ಕವಿಯಾಗಲಾರದೆ ಹೋದ. ಗದ್ಯನಲ್ಲಿಯೇ ಅವನ ಪ್ರತಿಭೆ ವಿಕಸಿಸಿತು. ಕಾವ್ಯದ ಪ್ರಭಾವ ಅವನ ಮೇಲೆ ಒಂದೇ ಸಮ ಆಗುತ್ತ ಬಂದಿತ್ತೆಂಬುದೇನೋ ನಿಜ. ಕವಿಯೇ ಮಾತನಾಡುತ್ತಿದ್ದಾನೇನೋ ಎಂದು ಅಲ್ಲಲ್ಲಿ ನಮಗೆ ಅನ್ನಿಸುವುದೂ ಉಂಟು.

ಒಂದು ಕಾಲದಲ್ಲಿ ಇಂಗ್ಲೆಂಡಿನಲ್ಲಿ ಲ್ಯಾಟಿನ್ ಭಾಷೆಯ ಬಗೆಗೆ ಎಂಥ ವ್ಯಾಮೋಹವಿತ್ತೋ, ಇಂಗ್ಲಿಷ್‌ನ ಬಗೆಗೆ ಬಂಗಾಳಿ ಸುಶಿಕ್ಷಿತ ಸಮುದಾಯದಲ್ಲಿ ಅಂದು ಅಂಥದೇ ವ್ಯಾಮೋಹವಿತ್ತು. ಕಾಗದ ಪತ್ರಗಳನ್ನು ಕೂಡ ಅವರು ಇಂಗ್ಲೀಷ್‌ನಲ್ಲಿಯೇ ಬರೆಯುತ್ತಿದ್ದರು. ಶರತ್ ಈ ಪ್ರವೃತ್ತಿಯನ್ನು ವಿರೋಧಿಸಿದ. ಅವನು ಸ್ವತಃ ಇಂಗ್ಲಿಷ್‌ನಲ್ಲಿ ಯಾರಿಗೂ ಪತ್ರ ಬರೆಯುತ್ತಿರಲಿಲ್ಲ; ತನ್ನ ಪರಿಚಯದವರಾರಿಗೂ ಇಂಗ್ಲಿಷ್‌ನಲ್ಲಿ ಬರೆಯುವಂತೆ ಅವನು ಪ್ರೇರಿಸುತ್ತಲೂ ಇರಲಿಲ್ಲ. ತನ್ನ ತರುಣ ಮಾವಂದಿರಲ್ಲಿ ಬಂಗಾಳಿ ಭಾಷೆ ಮತ್ತು ಸಾಹಿತ್ಯದ ಬಗೆಗೆ ಪ್ರೀತಿಯನ್ನು ಮೂಡಿಸಿದವನೂ ಅವನೇ. ಅವರೆಲ್ಲರೂ ಸೇರಿ 'ಶಿಶು' ಎಂಬ ಹೆಸರಿನಲ್ಲಿ ಕೈ ಬರಹದ ಸಚಿತ್ರ ಮಾಸಪತ್ರಿಕೆಯನ್ನು ಹೊರತರಲೂ ಆರಂಭಿಸಿದ್ದರು. ಸಂಪಾದಕನಾಗಿದ್ದವನು ಮಾವಂದಿರಲ್ಲಿ ಒಬ್ಬನಾದ ಹತ್ತು ವರ್ಷ ವಯಸ್ಸಿನ ಗಿರೀಂದ್ರನಾಥ. ಅವನ ಕೈಬರಹ ತುಂಬ ಸುಂದರವಾಗಿತ್ತು. 'ಶಿಶು'ವಿನ ಬಂಗಾಳಿ ಹಾಗೂ ಆಂಗ್ಲ ಕವಿತೆಗಳು ಶಿಶುಗಳ ಮನೋಭಾವಕ್ಕೆ ಅನುಗುಣವಾಗಿಯೇ

ಇದ್ದುವು. 'ಬಾಂದರ್' ಎಂಬುದರೊಡನೆ 'ಚಾದರ್' ಶಬ್ದದ ಪ್ರಾಸವನ್ನು ಹೊಂದಿಸುವುದೇ ಅವರ ಮಹಾ ಸಾಧನೆಯಾಗಿತ್ತು.

ಬಾಂದರ್ ಬಾಂದರ್
ಛಿಂಡಲೋ ಕೇನ ಚಾದರ್
ಬಾಂದರ್ ರೂಪೀ ರೂಪೀ
ಪರೇಛಿಸ್ ಕೇಮನ ಟೂಪೀ
ಬಾಂದರ್ ಬಾಂದರ್, ಕೇನ
ಖೇಏಛಿಸ್ ಫೇನ
ರಾಮಸಿಂಹ ಛಟಕೇ
ಪಡಲೋ ಡೋಬಾಏ ಪಟಕೇ
ಲೋಕರತನೇ
ಕರಲೇ ಜತನೇ
ರಾಮಸಿಂಹ ಗೇಲೋ ಮರೇ.

ಇಂಗ್ಲೀಷ್ ರಚನೆಗಳೂ ಇದೇ ಬಗೆಯವಾಗಿರುತ್ತಿದ್ದುವು.

ಎ ಲಯನ್ ಕಿಲ್ಡ್ ಎ ಮೌಸ್
ದೆನ್ ವೆಂಟ್ ಟು ಹಿಸ್ ಹೌಸ್
ನೌ ಕ್ರೈಡ್ ಹಿಸ್ ಮದರ್
ಅಂಡ್ ದೇರ್‌ಫೋರ್ ಕ್ರೈಡ್ ಹಿಸ್ ಸಿಸ್ಟರ್

ಆದರೆ ಆ ದಿನಗಳಲ್ಲಿ ಯಾರೂ ಇಂಥ ಕಾರ್ಯದಲ್ಲಿ ಸಹಕರಿಸುತ್ತಲೂ ಇರಲಿಲ್ಲ. ಉತ್ತೇಜನೆಯನ್ನೂ ಕೊಡುತ್ತಿರಲಿಲ್ಲ. 'ಶಿಶು'ವಿನ ಅನೇಕ ಸಂಚಿಕೆಗಳು ಹೊರಬಂದುವಾದರೂ ಗಂಗೂಲಿ ಕುಟುಂಬದಲ್ಲಿ ಸಾಹಿತ್ಯದ ವಿಷಯದಲ್ಲಿ ಸ್ವಲ್ಪವೂ ಪ್ರೀತಿ ಉಂಟಾಗಲಿಲ್ಲ. ಅಧ್ಯಾಪಕರೂ ಅನಾಸಕ್ತ ಭಾವದಿಂದ ಹೇಳಿದರು: "ಇದರಿಂದೆಲ್ಲ ಏನಾಗುತ್ತದೆ ? ಇಂಗ್ಲಿಷ್ ಓದು-ಬರಹ ಕಲಿತುಕೊಳ್ಳುವುದಾದರೂ ಮಾಡಿದ್ದರೆ ಒಳ್ಳೆಯದಾಗುತ್ತಿತ್ತು."

'ಶಿಶು'ವಿನಲ್ಲಿ ಶರತ್‌ನ ಕೆಲವು ರಚನೆಗಳು ಬೆಳಕು ಕಂಡುವು. 'ಬೋಝಾ' ಎಂಬ ಹೆಸರಿನ ಕಥೆಯನ್ನು ತನ್ನ ಪ್ರೀತಿಯ ಮಾವನಾಗಿದ್ದ ಸುರೇಂದ್ರನಾಥನ ಹೆಸರಿನಲ್ಲಿ ಪ್ರಕಟಿಸಿದ. ಆಗ ಅವನು ಭಾಗಲಪುರದಲ್ಲಿ ಇರಲಿಲ್ಲ. ಹಿಂದಿರುಗಿದಾಗ[1] ತಾನು ಒಳ್ಳೆಯ ಕಥೆ ಬರೆಯುತ್ತೇನೆಂಬ ಹೊಗಳಿಕೆಯ ಮಾತು ಅವನ ಕಿವಿಗೆ ಬಿತ್ತು. ದಿಙ್ಮೂಢನಾಗಿ ಅವನು ಕೇಳಿದ: "ನಾನು ಕಥೆ ಬರೆಯುತ್ತೇನೆಯೆ ?"

ಗೆಳೆಯ ಹೇಳಿದ: "ಹೌದು. 'ಬೋಝಾ' ಎಂಬ ಆ ನಿನ್ನ ಕಥೆ ತುಂಬ ಚೆನ್ನಾಗಿದೆ."

ಸುರೇಂದ್ರ 'ಬೋಝಾ' ಕಥೆಯನ್ನು ಓದಿದ. ಇದು ಶರತ್‌ನ ಕೆಲಸವೇ ಎಂಬುದು ಅವನಿಗೆ ಗೊತ್ತಾಯಿತು. ಅವನು ಕೇಳಿದ: "ಇದೆಲ್ಲ ಏನು ? ನಿನ್ನ ಕಥೆಯನ್ನು ನನ್ನ ಹೆಸರಿನಲ್ಲಿ ಏಕೆ ಪ್ರಕಟಿಸಿದ್ದೀಯೆ ?"

---

1. 1898

ನಗುತ್ತಾ ಶರತ್ ಉತ್ತರಿಸಿದ: "ಪ್ರಕಟಿಸಿದ್ದೇನೆ, ನಿಜ. ಇದರಿಂದ ನಿನಗೆ ಆದ ನಷ್ಟವಾದರೂ ಏನು ?"

ಇದೂ ತನ್ನನ್ನು ತೆರೆಯ ಮರೆಯಲ್ಲಿಯೇ ಇರಿಸುವ ಪ್ರವೃತ್ತಿಯ ನಿದರ್ಶನವಾಗಿತ್ತು. ಅದೆಷ್ಟು ಕಾದಂಬರಿಗಳನ್ನು ಅದೆಷ್ಟು ವಿಜ್ಞಾನ ಗ್ರಂಥಗಳನ್ನು ಅವನು ಓದಿಹಾಕಿ ಬಿಟ್ಟಿದ್ದನೋ ಏನೋ. ಡಿಕನ್ಸ್, ಥ್ಯಾಕರೆ ಮತ್ತು ಮಿಸೆಸ್ ಹೆನ್ರಿವುಡ್ ಅವನ ಮೆಚ್ಚಿನ ಲೇಖಕರಲ್ಲಿ ಕೆಲವರಾಗಿದ್ದರು. ಬರೆಯುವ ಕೆಲಸವೂ ಸದ್ದಿಲ್ಲದೆ ಸಾಗುತ್ತಿತ್ತು. 'ಶುಭದಾ'[1] ಕಾದಂಬರಿಯನ್ನು ಅವನು ಆಗ ತಾನೆ ಬರೆದು ಮುಗಿಸಿದ್ದ. ಈ ಕಾದಂಬರಿಯಲ್ಲಿ ಅವನು ತನ್ನ ಕುಟುಂಬದ ದಟ್ಟ ದಾರಿದ್ರ್ಯದ ಇಣುಕು ನೋಟವನ್ನು ಕೊಟ್ಟಿದ್ದಾನೆ. ದಿನದಿನದ ಜೀವನದಲ್ಲಿ ಅವನು ಸಹಿಸಬೇಕಾಗಿ ಬಂದ ದುಃಖ ದೈನ್ಯಗಳ ಮಾರ್ಮಿಕ ಚಿತ್ರಣ ಅದರಲ್ಲಿದೆ. ವೈಯಕ್ತಿಕ ಅನುಭವವಿಲ್ಲದೆ ಅವನು ಏನನ್ನೂ ಬರೆಯುತ್ತಿರಲಿಲ್ಲ.

ಈ ಸಾಹಿತ್ಯ ಸಾಧನೆ ಅವನವರೆಗೆ ಮಾತ್ರವೇ ಸೀಮಿತವಾಗಿರಲಿಲ್ಲ. ಅವನ ಸುತ್ತಲೂ ಇಂಥ ಗೆಳೆಯರ ಒಂದು ಗುಂಪೇ ಬಂದು ಕೂಡಿತ್ತು. ಅವರೆಲ್ಲ ಸೇರಿ ಒಂದು ಸಾಹಿತ್ಯ ಗೋಷ್ಠಿಯನ್ನು ಸ್ಥಾಪಿಸಿದ್ದರು.[2] ಹಾಗೆ ನೋಡಿದರೆ, ಈ ಗೋಷ್ಠಿ ಆರು ವರ್ಷಗಳಷ್ಟು ಹಿಂದಿನಿಂದಲೂ[3] ನಡೆದು ಬಂದಿತ್ತು. ಆದರೆ, ಮಧ್ಯೆ ಸ್ವಲ್ಪಮಟ್ಟಿಗೆ ಶಿಥಿಲಗೊಂಡಿದ್ದಂತೆ ತೋರುತ್ತದೆ. ಈಗ ಅದಕ್ಕೆ ಮರುಹುಟ್ಟು ದೊರೆಯಿತು. ಸ್ವತಃ ಅವನೇ ಆ ಗೋಷ್ಠಿಗೆ ಮುಂದಾಳಾಗಿದ್ದ. ಮಾವಂದಿರಾದ ಸುರೇಂದ್ರನಾಥ ಮತ್ತು ಗಿರೀಂದ್ರನಾಥ ಮಿತ್ರ ಹಾಗೂ ಯೋಗೇಶ್ ಮಜೂಮದಾರ್ ಮತ್ತು ವಿಭೂತಿಭೂಷಣ ಭಟ್ಟ ಆ ಗೋಷ್ಠಿಯ ಪ್ರಮುಖ ಸದಸ್ಯರಾಗಿದ್ದರು. ಸುರೇಂದ್ರನೇನೋ ಮೊದಲಿನಿಂದಲೇ ಇದರ ಸದಸ್ಯನಾಗಿರಲಿಲ್ಲ. ಆಗ ಅವನು ಅಲ್ಲಿ ಇರಲೂ ಇಲ್ಲ. ಹೊರಗಿನಿಂದ ಹಿಂದಿರುಗಿದ ಮೇಲೆ ಅವನೂ ಇದಕ್ಕೆ ಸೇರಿಕೊಂಡ. ಮತ್ತೊಬ್ಬ ವ್ಯಕ್ತಿ ನೀಡಿದ ಸಹಕಾರವನ್ನು ಸ್ಮರಿಸದೆ ಇರಲು ಸಾಧ್ಯವಿಲ್ಲ. ಆ ವ್ಯಕ್ತಿ ಬೇರಾರೂ ಆಗಿರದೆ ವಿಭೂತಿ ಭೂಷಣನ ಸೋದರಿಯಾದ ನಿರುಪಮಾದೇವಿಯೇ ಆಗಿದ್ದಳು. ಆಕೆ ಬಾಲ ವಿಧವೆಯಾಗಿದ್ದಳು. ಆ ಸಂಪ್ರದಾಯ ಬದ್ಧ, ಸಂಕೀರ್ಣಯುಗದ ಕಟ್ಟುಪಾಡುಗಳಿಗನುಗುಣವಾಗಿ ಪ್ರತ್ಯಕ್ಷವಾಗಿ ಆ ಗೋಷ್ಠಿಯಲ್ಲಿ ಭಾಗವಹಿಸುವ ಹಕ್ಕು ಆಕೆಗೆ ಇರುವುದು ಸಾಧ್ಯವೇ ಇರಲಿಲ್ಲ. ಪುರುಷರೇ ಕದ್ದು ಮುಚ್ಚಿ ಈ ಕೆಲಸ ಮಾಡುತ್ತಿದ್ದರೆಂದರೆ ಮಹಿಳೆಯರ ಸ್ಥಿತಿ ಹೇಗಿತ್ತು ಎಂಬುದನ್ನು ಸುಲಭವಾಗಿಯೇ ಊಹಿಸಿಕೊಳ್ಳಬಹುದು. ನಿರುಪಮಾ ಬರೆಯುತ್ತಿದ್ದಳೆಂಬುದು ನಿಜ. ಆದರೆ, ಸೋದರನ ಮೂಲಕ ಆ ರಚನೆಗಳು ವಿಮರ್ಶಾರ್ಥವಾಗಿ ಗೋಷ್ಠಿಯ ಮುಂದೆ ಇರಿಸಲ್ಪಡುತ್ತಿದ್ದುವು. ಈ ಸಣ್ಣ ಸಾಹಿತ್ಯಗೋಷ್ಠಿ ಅನೇಕ ಬಾವೀ ಸಾಹಿತಿಗಳನ್ನು ಸೃಷ್ಟಿಸುವಲ್ಲಿ ಯಶಸ್ವಿಯಾಗಬಹುದೆಂದು ಅಂದು ಯಾರೂ ಊಹಿಸಿಯೂ ಇರಲಿಲ್ಲ. ಆದರೆ,

---

1 ರಚನಾಕಾಲ: 20 ಜೂನ್ 1898ರಿಂದ 22 ಸಪ್ಟೆಂಬರ್ 1898

2 ಆಗಸ್ಟ್ 1900 ಶನಿವಾರ

3 1894

ಈ ವ್ಯಕ್ತಿಗಳು ಕೈಗೊಂಡ ಸಾಹಿತ್ಯ ಸೃಷ್ಟಿಯ ವ್ರತ ಮಾತೆ ಸರಸ್ವತಿಯ ಆಶೀರ್ವಾದದಿಂದ ಚೆನ್ನಾಗಿ ಫಲಕೊಟ್ಟಿತು ಎಂಬುದು ನಿಜ. ಸಾಹಿತ್ಯಾಕಾಶದಲ್ಲಿ ರವೀಂದ್ರನಾಥರು ಸೂರ್ಯನಂತೆ ಬೆಳಗುತ್ತಿದ್ದಾಗ ಈ ವ್ಯಕ್ತಿಗಳು ಪೂರ್ಣ ಚಂದ್ರೋದಯದ ಸಂಭವವನ್ನು ಸತ್ಯವಾಗಿಸುವ ಕಾರ್ಯದಲ್ಲಿ ತೊಡಗಿದ್ದರು. ಅನೇಕ ವರ್ಷಗಳ ಬಳಿಕ[1] ಶರತ್ ತನ್ನ ಮಾವನಾದ ಗಿರೀಂದ್ರನಾಥನಿಗೆ ಹೀಗೆಂದು ಬರೆದಿದ್ದ: "ಈ ಸಾಹಿತ್ಯಗೋಷ್ಠಿ ನನ್ನ ದುಃಖಪೂರ್ಣ ಬಾಳಿನ ಸುಖಮಯ ನೆನಪಾಗಿದೆ. ಮನೆಯ ಜನರು ನಿನ್ನನ್ನು ಹುಡುಕುತ್ತ ಅಲೆದಾಡುತ್ತಿದ್ದಾಗ, ಸಿಕ್ಕಲಿಲ್ಲವೆಂದು ಕೋಪ ತಪ್ತರಾಗುತ್ತಿದ್ದಾಗ ನಾವು ಕದ್ದು ಕುಳಿತು ಸಾಹಿತ್ಯ ಚರ್ಚೆಯಲ್ಲಿ ತೊಡಗಿರುತ್ತಿದ್ದೆವಲ್ಲವೆ! ನಾನು ಆ ಎಲ್ಲ ಸಂಗತಿಗಳನ್ನು ಒಂದು ದಿನದ ಮಟ್ಟಿಗೂ ಮರೆಯಲಾರದೆ ಹೋಗಿದ್ದೇನೆ."

ವಿಭೂತಿ ಭೂಷಣ ಮತ್ತು ನಿರಪಮಾ ಅಲ್ಲಿಯ ಉಪ-ನ್ಯಾಯಾಧೀಶರಾಗಿದ್ದ ನಫರಭಟ್ಟರ ಮಕ್ಕಳಾಗಿದ್ದರು. ಅದೊಂದು ದೊಡ್ಡ ಮನುಷ್ಯರ ಕುಟುಂಬವಾಗಿತ್ತು. ನಿರುಪಮಾಳ ನಡುವಣ ಸೋದರನಾಗಿದ್ದ ಇಂದ್ರಭೂಷಣನ ಮೂಲಕ ಈ ಕುಟುಂಬದೊಂದಿಗೆ ಶರತ್‌ನ ಸಂಪರ್ಕ ಏರ್ಪಟ್ಟಿತ್ತು. ಅವನು ಕಾಲೇಜಿನಲ್ಲಿ ಅವನ ಸಹಪಾಠಿಯಾಗಿದ್ದ. ಅವನ ಮೂಲಕವೇ ವಿಭೂತಿಭೂಷಣ ಮತ್ತು ನಿರುಪಮಾ ಅವರ ಕವಿತೆಗಳು ಶರತ್‌ನವರೆಗೆ ತಲುಪಿದುವು ಹಾಗೂ ಶರತ್‌ನ ರಚನೆಗಳು ಆ ಕುಟುಂಬವನ್ನು ಪ್ರವೇಶಿಸಿದುವು.

ಭಟ್ಟರ ಕುಟುಂಬವಿದ್ದ ಮನೆಯ ಬಳಿ ಪಶ್ಚಿಮ ದಿಕ್ಕಿನಲ್ಲಿ ಒಂದು ಶ್ಮಶಾನವಿತ್ತು. ಎಂದೋ ಸರಿರಾತ್ರಿಯಲ್ಲಿ ಆ ಶ್ಮಶಾನದ ಅಂಗಳದಿಂದ ಮೂಡಿಬಂದ ಹಾಡಿನ ಧ್ವನಿ ಗಾಳಿಯ ತರಂಗಗಳಲ್ಲಿ ಅಲೆಯಲೆಯಾಗಿ ಬಂದು ಅವರ ಕಿವಿಯನ್ನು ಸೇರುತ್ತಿತ್ತು.

"ಆಮಿ ದುದಿನ ಆಸಿನಿ, ದುದಿನ ದೇಖಿನಿ, ಆಮನಿ ಮುದಿಲಿ ಆಂಖಿ."

ಇನ್ನೊಮ್ಮೆ ಯಮುನಿಯಾ ನದಿಯ ತೀರದಿಂದ ಮುರಳಿಯ ಮೋಹಕ ಸ್ವರ ಕೇಳಿ ಬರುತ್ತಿತ್ತು. 'ಚರಿತ್ರಹೀನ' ಕಾದಂಬರಿಯಲ್ಲಿ, ರೈಲು ಪ್ರಯಾಣದ ಸಂದರ್ಭದಲ್ಲಿ ಸತೀಶ ಕೊಳಲನ್ನೂದಿದರೆ ನೆಲದ ಮೇಲೆ ಮಲಗಿದ್ದ ಬೆಳದಿಂಗಳ ನಿದ್ದೆಯೂ ಹಾರಿ ಹೋಗುತ್ತಿತ್ತು. ಆಕಳಿಸುತ್ತ ಎದ್ದು ಕುಳಿತುಕೊಳ್ಳುವ ಪ್ರಯತ್ನ ಮಾಡುತ್ತ ಉಪೇಂದ್ರ ಹೀಗೆನ್ನುತ್ತಾನೆ: "ವಾಹ್! ನಾನೇನಾದರೂ ಕಲಿಯಬೇಕಾಗಿ ಬಂದರೆ, ಕೊಳಲೂದುವುದನ್ನೇ ಕಲಿಯುತ್ತೇನೆ."

ಇಂದ್ರಭೂಷಣನೂ ಈ ನಾದವನ್ನು ಕೇಳಿ ಮುಗ್ಧನಾಗಿದ್ದಾನೆ. ಆದ್ದರಿಂದಲೇ ಇದು ಶರತ್‌ನ ಧ್ವನಿಯೆಂದು ಅವನಿಗೆ ಗೊತ್ತಾಗಿಬಿಡುತ್ತದೆ. ಪರಿಚಯ ಆಳವಾಗುತ್ತ ಬರುತ್ತದೆ. ಅವನು ಅವರ ಮನೆಗೆ ಬಂದು ಹೋಗಿ ಮಾಡತೊಡಗುತ್ತಾನೆ. ಒಮ್ಮೊಮ್ಮೆ ಹಾಡಿಯೂ ಹಾಡುತ್ತಾನೆ. ನವಕೃಷ್ಣ ಭಟ್ಟಾಚಾರ್ಯರ ಈ ಹಾಡು ಅವನಿಗೆ ತುಂಬ ಪ್ರಿಯವಾಗಿತ್ತು.

"ಗೋಕುಲೇ ಮಧು ಫೂರಾಯ ಗೇಲ, ಆಂಧಾರ ಆಜಿ ಕುಂಜಖಿನ."

---

1. 18 ಮಾರ್ಚ್ 1913

ಆ ಕುಟುಂಬದೊಂದಿಗೆ ಆತ್ಮೀಯತೆ ಹೆಚ್ಚಲು ಇನ್ನೊಂದು ಕಾರಣವೂ ಇತ್ತು. ಅವರು ಶ್ರೀಮಂತರಾಗಿದ್ದರು; ಆದರೆ ಶ್ರೀಮಂತಿಕೆಯ ಅಹಂಕಾರ ಅವರಲ್ಲಿ ಇರಲಿಲ್ಲ. ಮನೆಯ ಒಳಗೆ ಕಟ್ಟುನಿಟ್ಟಾಗಿ ನಿಯಮ ನೇಮಗಳನ್ನು ಪಾಲಿಸುತ್ತಿದ್ದರು. ಆದರೆ ಹೊರಗೆ ಎಲ್ಲವೂ ಅಳ್ಳಕವಾಗಿರುತ್ತಿತ್ತು. ಅಂದರೆ, ಮೋಸ ಮಾಡಬಹುದಾಗಿತ್ತು. ಚದುರಂಗದ ಆಟವನ್ನಾಡುವ ಪದ್ಧತಿ ಇತ್ತು. ಇದರ ಅರ್ಥ ಆಟವಾಡುವುದು ಎಂದು ಮಾತ್ರವೇ ಆಗಿರದೆ. ಅದರ ಜೊತೆಯಲ್ಲಿ ತಿಂಡಿ ತೀರ್ಥ, ತಾಂಬೂಲ ಚರ್ವಣ ಇವೆಲ್ಲ ಚೆನ್ನಾಗಿಯೇ ನಡೆಯುತ್ತಿದ್ದುವು. ಇಂದ್ರಭೂಷಣನಿಗೆ ಈ ಆಟದಲ್ಲಿ ತುಂಬ ಆಸಕ್ತಿ ಇತ್ತು. ಶರತ್‌ನೂ ಈ ವಿದ್ಯೆಯಲ್ಲಿ ನಿಷ್ಣಾತನಾಗಿದ್ದ. ಆದ್ದರಿಂದಲೇ ಅವನು ಈ ಕುಟುಂಬಕ್ಕೆ ಇಷ್ಟು ಹತ್ತಿರಬರಲು ಸಾಧ್ಯವಾಗಿತ್ತು.

ವಯಸ್ಸಿನಲ್ಲಿ ವಿಭೂತಿಭೂಷಣ ಚಿಕ್ಕವನಾಗಿದ್ದ. ಅವನ ಅಣ್ಣ ಅವನು ಬರೆದಿದ್ದ ಕವಿತೆಗಳ ಹಾಳೆಯನ್ನು ಶರತ್‌ಗೆ ನೋಡಲು ಕೊಟ್ಟದ್ದು. ಅದನ್ನೇ ಹಿಡಿದುಕೊಂಡು ಅವನು ಒಂದು ದಿವಸ ವಿಭೂತಿಭೂಷಣನ ಮುಂದೆ ಬಂದು ನಿಂತ. ಅದನ್ನು ಜೋರಾಗಿ ಮೇಜಿನ ಮೇಲೆ ಎಸೆಯುತ್ತ ಹೇಳಿದ: "ಇದೇನು ಬರೆದಿದ್ದೀಯ ? ಬರಿ ಅನುವಾದ. ಅದೂ ಅಶುದ್ಧ. ಸ್ವಂತವಾಗಿ ಬರೆಯಲು ನಿನ್ನ ಬಳಿ ಏನೂ ಇಲ್ಲವೇನು ?"

ಈ ಮಾತನ್ನು ಕೇಳಿ ವಿಭೂತಿಭೂಷಣ ಮೂಕನಂತಾಗಿ ಬಿಟ್ಟ. ಆದರೆ, ಆ ಕ್ಷಣದಿಂದ ಆರಂಭಗೊಂಡ ಅವರ ಮೈತ್ರಿಯನ್ನು ಸಾವು ಕೂಡ ಒಡೆಯಲಾರದೆ ಹೋಯಿತು. ವಿಭೂತಿ ಭೂಷಣನೂ ಶರತ್‌ನಂತೆಯೇ ಅಧ್ಯಯನ ಪ್ರಿಯನಾಗಿದ್ದ. ಅವನು ಪಾಶ್ಚಾತ್ಯ ದಾರ್ಶನಿಕ ಅನೇಕ ಗ್ರಂಥಗಳನ್ನು ತಿರುವಿ ಹಾಕಿಬಿಟ್ಟಿದ್ದ. ದೇವರಿಗೆ ಯಾವುದೇ ಅಸ್ತಿತ್ವವೂ ಇಲ್ಲವೆಂದು ಅವನು ತರ್ಕದ ಮೂಲಕ ಸಿದ್ಧಪಡಿಸಬಲ್ಲವನಾಗಿದ್ದ. ದೇವರು ಇರುವುದಾದರೆ, ಪ್ರೋಟೋಪ್ಲಾಜಮ್ಮಿನ ರೂಪದಲ್ಲಿ ಮಾತ್ರ ಎನ್ನುತ್ತಿದ್ದ. ಆ ದಿನಗಳಲ್ಲಿ ದೇವರ ಅಸ್ತಿತ್ವವನ್ನು ಅಲ್ಲಗಳೆಯುವುದು ಸುಶಿಕ್ಷಿತ ಯುವಕರಿಗೆ ಮದ್ಯಪಾನದಂತೆಯೇ ಪ್ರಗತಿಯ ಲಕ್ಷಣವಾಗಿ ಪರಿಣಮಿಸಿತ್ತು. ಶರತ್ ಕೂಡ ಇದೇ ಪಥದ ಪಥಿಕನಾಗಿದ್ದ. ಆದರೆ, ವಿಭೂತಿಭೂಷಣ ಎಷ್ಟು ಮೇಧಾವಿಯಾಗಿದ್ದನೋ ಅಷ್ಟೇ ಬಂಧು ವತ್ಸಲನೂ ಆಗಿದ್ದ. ಶರತ್‌ನೊಂದಿಗೆ ಅವನ ಸಂಪರ್ಕ ಅಷ್ಟು ಘನಿಷ್ಠವಾಗಿದ್ದುದಕ್ಕೆ ಇದೂ ಒಂದು ಕಾರಣವಾಗಿತ್ತು.

ಆ ದಿನಗಳಲ್ಲಿ ಸಾಹಿತ್ಯ ಚರ್ಚೆ ಪ್ರತ್ಯಕ್ಷ ರೂಪದಲ್ಲಿ ನಡೆಯುವುದು ಸಾಧ್ಯವಿಲ್ಲದೆ ಇದ್ದುದರಿಂದ ಪಾಲಕ-ಪೋಷಕರ ಕಣ್ಣು ತಪ್ಪಿಸಿಯೇ ಈ ಗೋಷ್ಠಿ ಕೆಲಸದಲ್ಲಿ ತೊಡಗುತ್ತಿತ್ತು. ವಾರಕ್ಕೆ ಒಂದು ದಿನ ಯಾವುದಾದರೂ ಒಂದು ನಿರ್ಜನ ಸ್ಥಳದಲ್ಲಿ ಅವರು ಒಂದುಗೂಡುತ್ತಿದ್ದರು. ಒಮ್ಮೆ ಸರ್ಕಾರಿ ಪಾಠಶಾಲೆಯ ಬಳಿ ಇದ್ದ ದೊಡ್ಡ ಕಾಲುವೆಯಲ್ಲಿ ಕಾಲುಗಳನ್ನು ಇಳಿಬಿಟ್ಟುಕೊಂಡು ಪ್ರಬಂಧವಾಚನ ಹಾಗೂ ವಿಮರ್ಶೆ ನಡೆಸಿದರೆ, ಇನ್ನೊಮ್ಮೆ ಯಾವುದೋ ಒಂದು ಮಠದಲ್ಲಿ ಮರದ ಕೆಳಗೆ ಕುಳಿತು ಅಥವಾ ಯಾವುದೋ ಒಂದು ದಿಬ್ಬವನ್ನೇರಿ ಕುಳಿತು ಈ ತರುಣ ಬಂಧುಗಳು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಿದ್ದರು. ಶ್ಮಶಾನದಲ್ಲಿಯೂ ಈ ಗೋಷ್ಠಿ

ಸೇರುತ್ತಿತ್ತು. ಶರತ್‌ನ ನೇತೃತ್ವದಲ್ಲಿ ಅದೆಷ್ಟು ಅಮಾವಾಸ್ಯೆಯ ರಾತ್ರಿಗಳನ್ನು ಈ ತಂಡ ಶ್ಮಶಾನದಲ್ಲಿ ಕಳೆದಿತ್ತೋ, ಸದ್ದಿಲ್ಲದೆ ಕುಳಿತು ಅವನ ಸಂಗೀತವನ್ನು ಕೇಳಿತ್ತೋ. ಭಟ್ಟರ ಕುಟುಂಬದ ಮನೆಯ ಬಳಿ ಇದ್ದ ಶ್ಮಶಾನದಲ್ಲಿ ಒಂದು ದೊಡ್ಡ ಸಮಾಧಿಯಿತ್ತು. ಅದರ ಛಾವಣಿ ಮೈದಾನದಂತೆ ವಿಶಾಲವಾಗಿತ್ತು. ಮೆಟ್ಟಿಲನ್ನೇರಿ ಮೇಲೆ ಹೋದರೆ ಅಂದರೆ ಲೋಕದ ದೃಷ್ಟಿಯಿಂದ ಅವರು ಮಾಯವಾದಂತಾಗಿ ಬಿಡುತ್ತಿದ್ದರು. ಗೋಷ್ಠಿ ಸೇರುವುದಕ್ಕೆ ಇದು ಆದರ್ಶಪ್ರಾಯವಾದ ಎಡೆಯಾಗಿತ್ತು.

ಒಮ್ಮೆ ಸುರೇಂದ್ರ ಅಲ್ಲಿಗೆ ಬಂದು, ತಾನು ಕಂಡ ದೃಶ್ಯದಿಂದ ವಿಸ್ಮಿತನಾಗಿ ಬಿಟ್ಟಿದ್ದ. ವಸಂತ ಋತು, ಶುಕ್ಲ ಪಕ್ಷದ ಸಂಜೆ, ಆ ವಿಶಾಲವಾದ ಛಾವಣಿ ಚಂದ್ರನ ಬೆಳದಿಂಗಳಿನಲ್ಲಿ ಬೆಳಗುತ್ತಿತ್ತು. ಗಂಗೆಯ ಸ್ಪರ್ಶವನ್ನು ಪಡೆದ ಶೀತಲ ಮಂದಪವನ ಉತ್ತರ ದಿಕ್ಕಿನಿಂದ ಬೀಸುತ್ತಿತ್ತು. ಅಲ್ಲಲ್ಲಿ ಚಾಪೆಗಳನ್ನು ಹಾಸಿಕೊಂಡು ಬೇರೆ ಬೇರೆ ತಂಡಗಳು ಕಾರ್ಯಮಗ್ನವಾಗಿದ್ದುವು. ಒಂದೆಡೆ ಜೋರಾಗಿ ನಾಟಕದ ಪೂರ್ವಾಭ್ಯಾಸ ನಡೆಯುತ್ತಿದ್ದರೆ, ಇನ್ನೊಂದು ಕಡೆ ಹಾರ್ಮೋನಿಯಮ್ ಬಾರಿಸಿಕೊಂಡು ಸಂಗೀತದ ಅಭ್ಯಾಸ ನಡೆಯುತ್ತಿತ್ತು. ಮತ್ತೊಂದು ಕಡೆ ಸಾಹಿತ್ಯಿಕ ವಾದ-ವಿವಾದಗಳ ಅಬ್ಬರವಿತ್ತು. ಆ ಹೊತ್ತಿಗೆ ಎಲ್ಲಿಂದಲೋ ಚಹಾ ಆಗಮಿಸಿತು. ಜೊತೆಗೆ ಹರಿವಾಣದ ತುಂಬ ಭೋಜ್ಯ ವಸ್ತುಗಳೂ ಆಗಮಿಸಿದ್ದುವು. ನೋಡುತ್ತ ಇದ್ದಂತೆಯೇ ಹುಕ್ಕಾದ ಗುಡಗುಡ ಎಂಬ ಸದ್ದು ಕೇಳಿಬರತೊಡಗಿತು. ಸಿಗರೇಟಿನ ಹೊಗೆಯಿಂದ ಆಕಾಶವೂ ಮುಚ್ಚಿಹೋಯಿತು.

ಈ ಸಾಹಿತ್ಯಗೋಷ್ಠಿಯ ಸಂಚಾಲನೆಯ ಸಂಪೂರ್ಣ ಹೊಣೆ ಶರತ್‌ನ ಮೇಲಿತ್ತು. ಕೃತಿಗಳ ವಸ್ತುವನ್ನು ಕುರಿತ ನಿರೂಪಣೆಯನ್ನೂ ವ್ಯಾಖ್ಯಾನವನ್ನೂ ಅವನೇ ಮುಂದಿರಿಸುತ್ತಿದ್ದ. ಸದಸ್ಯರು ಏಳು ದಿವಸಗಳ ಅವಧಿಯ ಒಳಗಾಗಿ ತಮ್ಮ ಕೃತಿಗಳನ್ನು ರಚಿಸಿ ತಂದು ಅವುಗಳನ್ನು ಗೋಷ್ಠಿಯ ಮುಂದೆ ಮಂಡಿಸುತ್ತಿದ್ದರು. ಗೋಷ್ಠಿಯ ಅಧ್ಯಕ್ಷನಾದ ಶರತ್ ಪ್ರತಿಯೊಂದು ರಚನೆಯನ್ನು ವಿಶ್ಲೇಷಿಸುತ್ತಿದ್ದ, ವಿಮರ್ಶಿಸುತ್ತಿದ್ದ. ಅದರಲ್ಲಿನ ತಪ್ಪುಗಳನ್ನು ತೋರಿಸಿಕೊಟ್ಟು, ಲೇಖಕನಿಗೆ ಇಂತಿಷ್ಟೆಂದು ಅಂಕಗಳನ್ನೂ ಕೊಡುತ್ತಿದ್ದ. ಕಾವ್ಯ ರಚನೆಯಲ್ಲಿ ಎಲ್ಲರಿಗಿಂತ ಮುಂದಿದ್ದವಳೆಂದರೆ ನಿರುಪಮಾ. ಇತರ ಸದಸ್ಯರಿಗೆ ಅವಳ ವಿಷಯದಲ್ಲಿ ಹೊಟ್ಟೆಕಿಚ್ಚು ಉಂಟಾಗಿತ್ತು. ಈ ವಿಷಯದಲ್ಲಿ ಚಾಡಿಛಿದ್ರಗಳನ್ನೂ ಮಾಡುತ್ತಿದ್ದರು. ಮೊದಲಿನಿಂದಲೂ ನಿರುಪಮಾಳ ವಿಷಯದಲ್ಲಿ ಶರತ್‌ಗೆ ವಿಶೇಷವಾದ ಒಲವಿದ್ದುದನ್ನು ಗುರುತಿಸಿದ್ದುದರಿಂದ ವಿಶೇಷವಾಗಿಯೇ ಚಾಡಿ-ಛಿದ್ರಗಳಲ್ಲಿ ತೊಡಗುತ್ತಿದ್ದರು. ನಿರುಪಮಾಳ ಪ್ರತ್ಯಕ್ಷ ಪರಿಚಯ ಅವನಿಗೆ ಆಗಿಯೇ ಇರಲಿಲ್ಲ. ತನ್ನ ಅಣ್ಣನ ಗೆಳೆಯನೆಂದು ಭಾವಿಸಿಯೇ ಆಕೆ ಶರತ್‌ನನ್ನು ಗೌರವಿಸುತ್ತಿದ್ದಳು. ಆದರೆ ಅವಳಲ್ಲಿ ಉತ್ಸಾಹವನ್ನು ತುಂಬುವ ಸಲುವಾಗಿ ಶರತ್ ವಿಶೇಷ ಆಸಕ್ತಿಯನ್ನು ತೋರಿಸುವಂತೆ ಕಾಣುತ್ತಿತ್ತು. ಆಕೆಯ ಪದ್ಯಗಳಲ್ಲಿ ಭಾವಗಳ ಕೃಪಣತೆ ಇದೆ ಎಂಬ ಆಕ್ಷೇಪವನ್ನು ಅವನು ವಿಭೂತಿ ಭೂಷಣನ ಬಳಿ ಮಾಡಿಯೂ ಇದ್ದ. "ಒಂದೇ ಭಾವವನ್ನು ಕುರಿತು ಯೋಚಿಸುವುದನ್ನು ಬಿಟ್ಟು, ಇನ್ನೂ ಹಲವು ಬಗೆಗಳಲ್ಲಿ ಆಲೋಚಿಸಿ ಬರೆದರೆ ಆಕೆ ಮತ್ತಷ್ಟು ಉನ್ನತಿಯನ್ನು ಸಾಧಿಸಬಲ್ಲಳು" ಎಂದಿದ್ದ.

ಇದೇ ಅಭಿಪ್ರಾಯವನ್ನು ಪದ್ಯರೂಪಕ್ಕೆ ಪರಿವರ್ತಿಸಿ ವಿಭೂತಿ ಭೂಷಣ ಅದನ್ನು ನಿರುಪಮಾಳಿಗೆ ತಲುಪಿಸಿದ-

"ಆರೋ ಜಾಓ, ಆರೋ ಜಾಓ ದೂರೇ, ಥಾಮಿಯೋನಾ ಆಪನಾರ್ ಸೂರೇ."

ಈ ಆಕ್ಷೇಪ ನಿರುಪಮಾಳಿಗೆ ಉತ್ತೇಜನೆಯನ್ನೇ ಕೊಟ್ಟಿತು. ಶರತ್‌ನನ್ನು ಸಂತುಷ್ಟಗೊಳಿಸುವ ಸಲುವಾಗಿ ಆವಳು ತನ್ನ ಕವಿತೆಗಳ ವಿಷಯದಲ್ಲಿ ಮತ್ತಷ್ಟು ಶ್ರಮವಹಿಸತೊಡಗಿದಳು. ಆ ಪದ್ಯಗಳ ಅಕ್ಕಪಕ್ಕಗಳಲ್ಲಿ ಹಾಗೂ ಮೇಲೆ ಕೆಳಗೆ ಶರತ್ ಅದೇನೇನನ್ನು ಬರೆದಿದ್ದನೋ, ಅದೆಷ್ಟು ಬರೆದಿದ್ದನೋ ಏನೋ ವಿಭೂತಿಭೂಷಣನೊಡನೆ ಅವನು ಇದನ್ನು ಹೇಳಿದ್ದ. "ಆಕೆ ಪ್ರಯತ್ನಿಸಿದರೆ ಗದ್ಯವನ್ನು ಬರೆಯಬಹುದು."

ಆಗ ನಿರುಪಮಾಳಿಗೆ ಈ ಮಾತಿನಲ್ಲಿ ನಂಬಿಕೆ ಮೂಡಿರಲಿಲ್ಲ. ಶರತ್‌ನ ರಚನೆಗಳನ್ನು ಓದಿ ಓದಿಯೇ ಅವಳು ಪರವಶಳಾಗಿದ್ದಳು. ಈ ಎರಡು ಮೂರು ವರ್ಷಗಳಲ್ಲಿ ಆಕೆ ಕ್ರಮಕ್ರಮವಾಗಿ 'ಬಾಸಾ'[1], 'ಬೋಝಾ', 'ಕೋರೇಲಗ್ರಾಮ'[2] 'ಅನುಪಮಾಳ ಪ್ರೇಮ', 'ಕಾಶೀನಾಥ' 'ಚಂದ್ರನಾಥ' 'ಶಿಶು' (ದೊಡ್ಡ ಅಕ್ಕ),'ಹರಿಚರಣ', 'ಬಾಲ-ಸ್ಮೃತಿ', 'ಶುಭದಾ', 'ದೇವದಾಸ್' ಮೊದಲಾದುವನ್ನೆಲ್ಲ ಓದಿ ಮುಗಿಸಿದ್ದಳು. ಕೆಲವು ದಿನಗಳ ಹಿಂದೆ ನಡುವಣ ಅತ್ತಿಗೆ ತನ್ನ ಗಂಡನಿಂದ ತರಿಸಿಕೊಂಡಿದ್ದ ಬೃಹದ್-ಗ್ರಂಥವೊಂದನ್ನು ಆಕೆಗೆ ಕೊಟ್ಟಿದ್ದಳು. ಅದರ ಮೇಲೆ ಸುಂದರವಾದ ಸಣ್ಣ ಸಣ್ಣ ಅಕ್ಷರಗಳಲ್ಲಿ 'ಅಭಿಮಾನ'[3] ಎಂದು ಬರೆಯಲಾಗಿತ್ತು. ಇದು ಮಿಸೆಸ್ ಹೆನ್ರಿವುಡ್ಡಳ 'ಈಸ್ಟಲಿನ್' ಕಾದಂಬರಿಯ ಛಾಯಾನುವಾದವಾಗಿದ್ದು, ಶರತ್ ಈ ಅನುವಾದ ಮಾಡಿದ್ದ. ಆ ದಿನಗಳಲ್ಲಿ ಅವನ ಮನಸ್ಸಿನಲ್ಲಿ ಮಾನ-ಅಭಿಮಾನಗಳ ಯಾವ ಬಿರುಗಾಳಿ ಬೀಸುತ್ತಿತ್ತೋ, ಅದರ ಪರಿಣಾಮವಾಗಿಯೇ ಅವನು ಈ ಕೃತಿಯನ್ನು ಅನುವಾದಿಸಿದ್ದ. ಈ ಕಾರಣದಿಂದಾಗಿಯೇ ಅದಕ್ಕೆ 'ಅಭಿಮಾನ' ಎಂಬ ಹೆಸರಿಟ್ಟಿದ್ದ.

ಈ ದಿನಗಳಲ್ಲಿಯೇ ಶರತ್ ಮೇರಿ ಕೊರೇಲಿಯ 'ಮೈಟಿ ಆಟಮ್' ಎಂಬ ಕಾದಂಬರಿಯನ್ನೂ ಅನುವಾದಿಸತೊಡಗಿದ್ದ. ಅದಕ್ಕೆ 'ಪಾಷಾಣ'ವೆಂದು ಹೆಸರಿಟ್ಟಿದ್ದ. ಹಿಂದಿನಂತೆಯೇ ಇದೂ ನಿರುಪಮಾಳ ಬಳಿಗೆ ಬಂದು ಸೇರಿತ್ತು. ಅದರಲ್ಲಿ ಪರಮಾಣುವಾದಿಯಾದ ನಾಸ್ತಿಕ ತಂದೆಯ ಮಕ್ಕಳ ಮಾನಸಿಕ ಆಘಾತದ ವೇದನೆ ಮೂಡಿಬಂದಿದ್ದ ಬಗೆಯನ್ನು ಕಂಡು ಆಕೆಯ ಹೃದಯ ಕರಗಿಬಿಟ್ಟಿತು. ಶರತ್‌ನ ರಚನೆಗಳ ಈ ಪ್ರಭಾವ ಖಂಡಿತವಾಗಿಯೂ, ಪರೋಕ್ಷರೂಪದಲ್ಲಿ, ಗದ್ಯರಚನೆಗೆ ತೊಡಗುವಂತೆ ಆಕೆಯನ್ನು ಪ್ರೇರಿಸಿತು.

---

1. ಶರತ್‌ನೇ ಸ್ವತಃ ಇದನ್ನು ನಾಶಪಡಿಸಿದ್ದ.
2. ಮುಂದೆ ಇದನ್ನು ಮತ್ತೆ ಹೊಸದಾಗಿ ಬರೆದು 'ಛವಿ' ಎಂಬ ಹೆಸರಿನಲ್ಲಿ ಪ್ರಕಟಿಸಲಾಯಿತು.
3. ಇದು ಶರತ್‌ನ ಬಾಲ್ಯದ ಗೆಳೆಯ ಕೇದಾರನಾಥರ ಬಳಿ ಉಳಿದುಹೋಗಿತ್ತು. ಇದರ ರಚನಾಕಾಲ 1898-99

## 14

ಇದೇ ಹೊತ್ತಿಗೆ ನಿರುಪಮಾಳ ಆತ್ಮೀಯ ಗೆಳತಿಯೂ, ಸುವಿಖ್ಯಾತರಾಗಿದ್ದ ಭೂದೇವ ಮುಖರ್ಜಿಯವರ ಮೊಮ್ಮಗ್ಗಳೂ ಆದ ಅನುಪಮಾಳ ಸೋದರಸಂಬಂಧಿಯಾದ ಸೌರೀಂದ್ರನಾಥ ಮುಖೋಪಾಧ್ಯಾಯ ಓದುವ ಸಲುವಾಗಿ ಭಾಗಲಪುರಕ್ಕೆ ಬಂದ.[1] ಅವನು ವಿಭೂತಿಭೂಷಣನ ಸಹಪಾಠಿಯಾಗಿದ್ದ. ಇಬ್ಬರಲ್ಲೂ ಒಳ್ಳೆಯ ಸ್ನೇಹವಿತ್ತು. ಆಗಾಗ್ಗೆ ಬಂದು ಹೋಗಿ ಮಾಡುತ್ತಿದ್ದ. ಜೊತೆಜೊತೆಯಾಗಿ ಕ್ರಿಕೆಟ್ ಆಡುತ್ತಿದ್ದರು. ಒಮ್ಮೆ[2] ಸೌರೀಂದ್ರನ ಕೈಗೆ ಪೆಟ್ಟುಬಿತ್ತು. ಆಟವಾಡುವುದು ಅವನಿಗೆ ಸಾಧ್ಯವಿರಲಿಲ್ಲ. ಅವನ ಕೈಗೆ ಹಾಳೆಯೊಂದನ್ನು ಕೊಡುತ್ತ ವಿಭೂತಿಭೂಷಣ ಹೇಳಿದ: "ತೆಗೆದುಕೋ. ನೀನು ಈ ಕಥೆಗಳನ್ನು ಓದು."

ಸೌರೀಂದ್ರ ನೋಡಿದ. ಪುಸ್ತಕದ ಮೊದಲ ಪುಟದಲ್ಲಿ ಸಣ್ಣಸಣ್ಣ ಮುತ್ತಿನಂಥ ಅಕ್ಷರಗಳಲ್ಲಿ 'ಬಾಗಾನ್' ಎಂದು ಬರೆದಿದೆ. ತಿರುಗಿಸಿದರೆ ಬಲಭಾಗದಲ್ಲಿ ಮೊದಲ ಪುಟದಲ್ಲಿ ತುಂಬ ಕಲಾತ್ಮಕ ರೀತಿಯಲ್ಲಿ ಇಂಗ್ಲಿಷ್ ಅಕ್ಷರಗಳಲ್ಲಿ ಹೆಸರೊಂದು ಅಂಕಿತಗೊಂಡಿದೆ - ಬಹುಶಃ ಅದೇ ಲೇಖಕನ ಹೆಸರಾಗಿದ್ದಿರಬೇಕು - ಎಸ್.ಟಿ.ಸಿ.ಲಾರಾ. 'ಎಸ್-ಟಿ' ಎಂದರೆ ಶರತ್, 'ಸಿ' ಎಂದರೆ ಚಟ್ಟೋಪಾಧ್ಯಾಯ, 'ಲಾರಾ' ಎಂದರೆ ಅದ್ಭುತ, ವಿಚಿತ್ರ.

ಈ ಪ್ರತಿಯಲ್ಲಿ ಕೆಲವು ಕಥೆಗಳನ್ನು ಬರೆಯಲಾಗಿತ್ತು. ನಿರುಪಮಾ ಓದುತ್ತ ಇದ್ದುದು ಈ ಕಥೆಗಳನ್ನೇ. ಒಂದಾದ ಮೇಲೆ ಒಂದರಂತೆ ಸೌರೀಂದ್ರನೂ ಅವುಗಳನ್ನು ಓದತೊಡಗಿದ. ಓದುತ್ತ ಹೋದಂತೆ ಮುಗ್ಧನಾಗಿಬಿಟ್ಟ. ಆದರೆ ಅಂದು ಅವನು ಶರತ್‌ನನ್ನು ಭೇಟಿಯಾಗಲು ಸಾಧ್ಯವಾಗಲಿಲ್ಲ. ಆ ಅವಕಾಶ ದೊರೆತದ್ದು ಒಂದು ತಿಂಗಳ ಬಳಿಕ. ಅದು ನಿರುಪಮಾದೇವಿ ಆಚರಿಸಿದ್ದ ಯಾವುದೋ ವ್ರತದ ಅಂಗವಾಗಿ ಆ ಕುಟುಂಬದಲ್ಲಿ ಭೋಜನಕೂಟ ಏರ್ಪಾಟಾಗಿತ್ತು. ಅದಕ್ಕೆ ಆಹ್ವಾನಿತನಾಗಿ ಸೌರೀಂದ್ರ ಅಲ್ಲಿಗೆ ಹೋದಾಗ ನೋಡಿದ - ಕೂಡುವ ಕೋಣೆಯಲ್ಲಿದ್ದ ಒಂದು ದೊಡ್ಡ ಮೇಜಿನ ಮುಂದೆ ಬಡಕಲಾದ ಒಬ್ಬ ವ್ಯಕ್ತಿ ಕುಳಿತಿದ್ದಾನೆ. ಬಹುಕಾಲ ದಿಂದಲೂ ಅನಾರೋಗ್ಯದಿಂದಿದ್ದ ರೋಗಿಯಂಥ ಮುಖ, ತಲೆಯಲ್ಲಿ ಉದ್ದವಾದ ತೆಳುವಾದ, ಕೆದರಿದ ಕೂದಲು, ಸಿಕ್ಕುಸಿಕ್ಕಾದ ಚಿಕ್ಕ ಗಡ್ಡ, ಎದುರಿಗೆ ಬೃಹದ್-ಗಾತ್ರದ ಒಂದು ಪುಸ್ತಕ ತೆರೆದಿದೆ, ಅದನ್ನು ಅವನು ತನ್ಮಯನಾಗಿ ಓದುತ್ತ ಕುಳಿತಿದ್ದಾನೆ. ನಡುನಡುವೆ ತಲೆಗೂದಲಿನಲ್ಲಿ ಬೆರಳಾಡಿಸುತ್ತ ಅದೇನು ಯೋಚಿಸುತ್ತಿದ್ದಾನೋ ಏನೋ.

ಸೌರೀಂದ್ರ ಬಂದು ಕುಳಿತ ಮೇಲೆ ವಿಭೂತಿಭೂಷಣ ಕೂಗಿದ: "ಶರತ್!"

ಕೂಡಲೇ ಶರತ್ ವಿಭೂತಿಭೂಷಣನತ್ತ ನೋಡಿದ. ಅವನು ಹೇಳಿದ: "ಶರತ್! ಇವನು ನನ್ನ ಗೆಳೆಯ ಸೌರೀಂದ್ರ. ಇವನು ತೀವ್ರ 'ರ್‍ಯಾಬಿಕ್' ಅಂದರೆ ರವೀಂದ್ರ ಪ್ರೇಮಿ. ನಿನ್ನ ಕಥೆಗಳನ್ನು ಓದಿ ಅಂದು ನನ್ನೊಡನೆ ಸಮಾಲೋಚನೆ ನಡೆಸಿದ್ದಾತ ಇವನೇ."

---

1. 1899ರ ಕೊನೆ.
2. ಜನವರಿ 1900

ಈಗ ಶರತ್ ಸೌರೀಂದ್ರನತ್ತ ನೋಡಿದ. ಆ ನೋಟದಲ್ಲಿ ಅದ್ಭುತವಾದ ಕಾಂತಿಯಿತ್ತು. ಈ ಕಾಂತಿಯೇ ಎಲ್ಲರನ್ನೂ ತನ್ನತ್ತ ಸೆಳೆದುಕೊಳ್ಳುತ್ತಿತ್ತು ಹಾಗೂ ನೋಡಿದವರನ್ನು ಸೋಲಿಸಿ ಬಿಡುತ್ತಿತ್ತು. ಸಂಕೋಚ ಭಯಗಳಿಂದ ಸೌರೀಂದ್ರ ವಿಚಲಿತನಾದ. ಕೆಲವು ಕ್ಷಣಗಳವರೆಗೆ ಅವನನ್ನು ನೋಡುತ್ತಿದ್ದು, ಆ ಬಳಿಕ ಶರತ್ ಕೇಳಿದ: "ನೀನು ಕಥೆ ಬರೆಯುತ್ತೀಯೇನು ?"

ಸೌರೀಂದ್ರ ಉತ್ತರಿಸಿದ: "ಇಲ್ಲ."

ವಿಭೂತಿಭೂಷಣ ಹೇಳಿದ: "ಇವನು ಪದ್ಯ ಬರೆಯುತ್ತಾನೆ."

ಶರತ್ ಈಗಲೂ ಸೌರೀಂದ್ರನತ್ತಲೇ ನೋಡುತ್ತಿದ್ದ. ಆ ದೃಷ್ಟಿ ಸೌರೀಂದ್ರನನ್ನು ಇರಿಯತೊಡಗಿತ್ತು. ಅವನಿಗೆ ಸ್ವಲ್ಪ ಇರಿಸುಮುರಿಸಾದಂತೆ ಆಯಿತು. ಆಗಲೇ ಶರತ್ ಮತ್ತೆ ಕೇಳಿದ: 'ನೀನು ಸಣ್ಣ ಕಥೆಗಳನ್ನೇಕೆ ಬರೆಯಬಾರದು ?"

ಸೌರೀಂದ್ರ ಹೇಳಿದ: "ಬರೆಯಲಾರೆನಾದ್ದರಿಂದ."

ಶರತ್ ಹೇಳಿದ: "ಪದ್ಯವನ್ನು ಬರೆಯುತ್ತೀಯೆ, ಸಣ್ಣಕಥೆ ಬರೆಯಲಾರೆ! ಬರೆಯಲು ಪ್ರಯತ್ನಿಸು. ಯಾವುದನ್ನು ಕಥೆ ಎಂದು ಕರೆಯುತ್ತಾರೆ, ಅದು ಹೇಗಿರುತ್ತದೆ, ಹೇಗಿರಬೇಕು ಎಂಬುದು ನಿನಗೆ ಗೊತ್ತಿದೆ. ನನ್ನ ಕಥೆಗಳ ಬಗ್ಗೆ ವಿಭೂತಿ ಭೂಷಣನೊಡನೆ ನೀನು ನಡೆಸಿದ ಸಮಾಲೋಚನೆಯ ವಿವರಗಳನ್ನು ಅವನೇ ನನಗೆ ತಿಳಿಸಿದ್ದಾನೆ. ಅದನ್ನು ಕೇಳಿಯೇ ನಾನು ಹೇಳುತ್ತಿದ್ದೇನೆ - ಕಥಾ ರಚನೆಯ ಬಗ್ಗೆ ನಿನಗೆ ತಿಳಿದಿದೆ. ನೀನು ಬರೆಯಲು ಯತ್ನಿಸು."

ಕ್ಷಣಮಾತ್ರದಲ್ಲಿ ಸೌರೀಂದ್ರನ ಸಂಕೋಚ ಮಾಯವಾಗಿಬಿಟ್ಟಿತ್ತು. ಅವನು ಹೇಳಿದ: "ಬರೆಯುತ್ತೇನೆ."

ಕ್ರಮೇಣ ಇಬ್ಬರಲ್ಲೂ ಗಾಢವಾದ ಸ್ನೇಹ ಉಂಟಾಯಿತು. ಅವರು ಆಗಿಂದಾಗ್ಗೆ ಸಾಹಿತ್ಯಿಕ ಚರ್ಚೆಯಲ್ಲಿ ತೊಡಗುತ್ತಿದ್ದರು. ಆಗ 'ಶಿಶು' ('ಬಡೀ ದೀದೀ' - ದೊಡ್ಡಕ್ಕ) ಕಥೆಯ ಕೊನೆಯ ಎರಡು ಸಾಲುಗಳು ಹೀಗಿದ್ದುವು: "ದೇವರೆ, ಪರಲೋಕದಲ್ಲಿ ಸುರೇಂದ್ರನಾಥನ ಪಾದಗಳ ಬಳಿ ಮಾಧವಿಗೆ ಸ್ವಲ್ಪ ಜಾಗ ಕೊಡು..."

ಇದರ ಬಗ್ಗೆ ಆಕ್ಷೇಪಿಸುತ್ತ ಸೌರೀಂದ್ರನೆಂದ: "ನೀನು ಲೇಖಕ. ಯಾವುದೇ ಪಾತ್ರದ ಬಗೆಗೆ ನೀನು ಮಮತೆಯನ್ನಿರಿಸಿಕೊಳ್ಳಬಾರದು."

ಈ ಮಾತಿನ ಬಗ್ಗೆ ಇಬ್ಬರಲ್ಲಿಯೂ ಸಾಕಷ್ಟು ಚರ್ಚೆ ನಡೆಯಿತು. ಆಗ ಶರತ್ ಸೌರೀಂದ್ರನ ತರ್ಕವನ್ನು ಯಾವ ರೀತಿಯಲ್ಲೂ ಒಪ್ಪಲಿಲ್ಲ. ಆದರೆ, ಎರಡು ತಿಂಗಳ ಬಳಿಕ ಅವನು ಹೇಳಿದ: "ಇದನ್ನು ಕೇಳಿ ನಿನಗೆ ಸಂತೋಷವಾಗಬಹುದು, ಸೌರೀಂದ್ರ! ಕೊನೆಯ ಆ ಎರಡು ಸಾಲುಗಳನ್ನೂ ನಾನು ಹೊಡೆದುಹಾಕಿ ಬಿಟ್ಟಿದ್ದೇನೆ.

ಸೌರೀಂದ್ರ ಬಹಳ ಕಾಲದವರೆಗೆ ಭಾಗಲಪುರದಲ್ಲಿರುವುದು ಸಾಧ್ಯವಾಗಲಿಲ್ಲ. ಮೂರನೆಯ ವರ್ಷವೇ[1] ಅವನು ಕಲ್ಕತ್ತೆಗೆ ಹಿಂದಿರುಗಿದ. ಆದರೆ, ಹಾಗೆ ಹೋಗುವಾದ ಶರತ್‌ನ ಕೆಲವು ರಚನೆಗಳನ್ನು ತನ್ನೊಡನೆ ತೆಗೆದುಕೊಂಡು ಹೋದ. ಕ್ರಮೇಣ ಆ ಕಥೆಗಳನ್ನು ವಿದ್ಯಾರ್ಥಿಕೂಟಗಳಲ್ಲಿ ಓದಲಾಯಿತು. ಅವುಗಳನ್ನು

---

1. 1901

ಮೆಚ್ಚಿಕೊಳ್ಳುತ್ತ ಸದಸ್ಯರು ಒಕ್ಕೊರಲಿನಲ್ಲಿ ಹೀಗೆಂದರು: "ರವೀಂದ್ರನಾಥ ಠಾಕೂರರನ್ನು ಬಿಟ್ಟರೆ ಬೇರೆ ಯಾರೂ ಇಷ್ಟು ಸುಂದರವಾದ ಕಥೆಗಳನ್ನು ಬರೆಯಲಾರರು."

ಸತೀಶಚಂದ್ರ ಮಿತ್ರ ಈ ಸಾಹಿತ್ಯ ಗೋಷ್ಠಿಯ ಮತ್ತೊಬ್ಬ ಸದಸ್ಯನಾಗಿದ್ದ. ಒಮ್ಮೆ ಒಂದು ಪುಸ್ತಕವನ್ನು ಮಾಸಪತ್ರಿಕೆಯ ಆಕಾರದಲ್ಲಿ ಕಟ್ಟಿ, ಅದರ ಮೊದಲ ಪುಟದ ಮೇಲೆ ಹೀಗೆ ಬರೆದ - 'ಆಲೋ'. ಅದರ ಕೆಳಗೆ ಸಂಪಾದಕರ ಹೆಸರು ಬರಬೇಕಾಗಿದ್ದ ಜಾಗದಲ್ಲಿ ಹೀಗೆ ಬರೆದ: 'ಸತೀಶಚಂದ್ರಮಿತ್ರ ಮತ್ತು ಯೋಗೇಶಚಂದ್ರ ಮಜೂಮ್‌ದಾರ್' ಶರತ್‌ನ ಕಡೆಯಿಂದಲೇ ಇಂಥ ಸೂಚನೆ ಬಂದಿತ್ತು. ಆದ್ದರಿಂದ ಈ ಪುಟವನ್ನು ತುಂಬುವ ಕೆಲಸ ಅವನ ಪಾಲಿಗೇ ಬಂದಿತ್ತು. ಸಾಹಿತ್ಯ ರಸಿಕರಾದ ಬಂಧು-ಬಾಂಧವವ ಪ್ರೋತ್ಸಾಹ ದೊರೆತರೆ ಈ ಪತ್ರಿಕ ಬಹುಬೇಗ ಪ್ರತಿಷ್ಠಿತ ಸ್ಥಾನವನ್ನು ಗಳಿಸಿತು ಎಂಬುದು ಅವನ ನಂಬಿಕೆಯಾಗಿತ್ತು. ಆದರೆ ಅವನ ಈ ಇಚ್ಛೆ ಕೈಗೂಡಲೇ ಇಲ್ಲ. ಒಂದು ಪಕ್ಷದ ಒಳಗಾಗಿಯೇ ಸತೀಶಚಂದ್ರ ಸಾವನ್ನಪ್ಪಿದ. ಅವನ ಈ ಅಕಾಲಮೃತ್ಯುವಿನಿಂದಾಗಿ ಗೆಳೆಯರೆಲ್ಲ ತುಂಬ ದುಃಖಿತರಾದರು. ಅವನ ನೆನಪನ್ನು ಕಾಯ್ದಿರಿಸಬೇಕೆಂಬ ಉದ್ವಿಗ್ನತೆ ಅವರಲ್ಲಿ ತುಂಬಿಕೊಂಡಿತು. ಈ ಪತ್ರಿಕೆಗೆ 'ಛಾಯಾ' ಎಂದು ಹೆಸರಿಟ್ಟು ಮತ್ತೆ ಅದನ್ನು ಹೊಸದಾಗಿ ಪ್ರಕಟಿಸಬೇಕೆಂಬ ಸೂಚನೆಯನ್ನು ಗಿರೀಂದ್ರ ಮುಂದಿರಿಸಿದ.

ಈ ಸೂಚನೆಯನ್ನು ಒಪ್ಪಿಕೊಳ್ಳಲಾಯಿತು.[1] ಅದಕ್ಕೆ ಯೋಗೇಶ್ ಚಂದ್ರ ಮಜೂಮದಾರನನ್ನು ಸಂಪಾದಕನೆಂದು ಗೊತ್ತುಪಡಿಸಲಾಯಿತು. ಅವರನ್ನು ತೃಪ್ತಿಗೊಳಿಸುವುದು ತುಂಬ ಕಷ್ಟದ ಕೆಲಸವಾಗಿತ್ತು. ವಿಭೂತಿಭೂಷಣನಂತೂ ಅವರ ಬಗ್ಗೆ ಒಂದು ಪದ್ಯವನ್ನೇ ಬರೆದುಬಿಟ್ಟಿದ್ದ:

ಏಈ ಕುಂಚಿತಕೇಶ್ ಮಾರ್ಜಿತ್‌ವೇಶ್ ಕ್ರಿಟಿಕ್ ಯೋಗೇಶ್ ಕ್ರುದ್ಧ
ಬಲೇದೀನತಾರ್ ಛಬಿ, ಏಈ ಸಬ್ ಕವಿ ಕಾರಗಾರೇ ಹಬಿ ರುದ್ಧ

ಶರತ್ ಈ ಪತ್ರಿಕೆಗೆ ಅನೇಕ ಕಥೆಗಳನ್ನು, ಪ್ರಬಂಧಗಳನ್ನೂ ಬರೆದ. 'ಕ್ಷುದ್ರೇರ್ ಗೌರವ್'[2] ಎಂಬ ಪ್ರಬಂಧ ಹಾಗೂ 'ಆಲೋ ಓ ಛಾಯಾ' ಎಂಬ ಕಿರು ಕಾದಂಬರಿ ಈ ಪತ್ರಿಕೆಯಲ್ಲಿಯೇ ಬೆಳಕು ಕಂಡಿದ್ದುವು.

ಲೇಖಕರೇನೋ ಹಲವರಿದ್ದರು. ಆದರೆ ಲೇಖಕಿಯಾಗಿ ಇದ್ದವಳು ಒಬ್ಬಳೇ. ಅಂತಃಪುರಚಾರಿಣಿ ವಿಧವೆ ನಿರುಪಮಾ. ಆಕೆಯ ರಚನೆಗಳು ಈ ಪತ್ರಿಕೆಯಲ್ಲಿ 'ಶ್ರೀಮತಿ ದೇವಿ' ಎಂಬ ಹೆಸರಿನಲ್ಲಿ ಪ್ರಕಟವಾಗಿದ್ದುವು. ಆ ಹೊತ್ತಿಗೆ ಪದ್ಯಗಳನ್ನು ಮಾತ್ರವಲ್ಲದೆ ಆಕೆ ಗದ್ಯದಲ್ಲಿಯೂ ಬರೆಯತೊಡಗಿದ್ದಳು. ಕೆಲವೇ ದಿನಗಳಲ್ಲಿ ಈ ಪತ್ರಿಕೆ ತುಂಬ ಹೆಸರುವಾಸಿಯಾಗಿ ಬಿಟ್ಟಿತು. ಆ ಹೊತ್ತಿಗೆ ಸೌರೀಂದ್ರ ಕಲ್ಕತ್ತೆಗೆ ಹಿಂದಿರುಗಿಬಿಟ್ಟಿದ್ದ. ಅಲ್ಲಿ ಅವನು ಇದೇ ಬಗೆಯ ಇನ್ನೊಂದು ಪತ್ರಿಕೆಯನ್ನು ಆರಂಭಿಸಿದ್ದನು. ಅದಕ್ಕೆ ಇಟ್ಟಿದ್ದ ಹೆಸರು 'ತರುಣಿ' ವಾವೆಯಲ್ಲಿ ಶರತ್‌ನ ಇನ್ನೊಬ್ಬ ಮಾವಂದಿರಾಗಿದ್ದ ಗಂಗೋಪಾಧ್ಯಾಯರು ಅವನ ಜೊತೆಗಾರರಾಗಿದ್ದರು.

---

1. 23 ಏಪ್ರಿಲ್ 1900 ಸೋಮವಾರ

2. ಇದರ ಮೇಲೇ ಬಂಕಿಮಚಂದ್ರರ 'ಕಮಲಾಕಾಂತನ ಕಡತ'ದ ಪ್ರಭಾವ ಬದ್ದಿದೆ. ಜುಲೈ 1901

'ಭವಾನಿಪುರ ಸಾಹಿತ್ಯ ಸಮಿತಿ' ಎಂದು ಅದಕ್ಕೆ ಹೆಸರು ಕೊಡಲಾಗಿತ್ತು. ಅಂಚೆಯ ಮೂಲಕ ಎರಡೂ ಪತ್ರಿಕೆಗಳ ವಿನಿಮಯ ನಡೆಯುತ್ತಿತ್ತು. ಒಂದು ಇನ್ನೊಂದರ ಬಗ್ಗೆ ಭಾರಿ ಭಾರಿ ಟೀಕೆ ಟಿಪ್ಪಣಿಗಳನ್ನು ಮಾಡುತ್ತಿತ್ತು. 'ಛಾಯಾ ತಂಡ' ಈ ಕಾರ್ಯಕ್ಕಾಗಿ ಮಂಡಳಿಯೊಂದನ್ನು ರಚಿಸಿತ್ತು. ಈ ಮಂಡಳಿಯ ಪ್ರತಿಯೊಬ್ಬ ಸದಸ್ಯನೂ 'ತರುಣಿ'ಯಲ್ಲಿ ಪ್ರಕಟವಾದ ರಚನೆಗಳನ್ನು ಓದಿ ನೋಡಿ ಅವುಗಳ ಬಗ್ಗೆ ವಿಮರ್ಶೆ ಬರೆದುಕೊಡುತ್ತಿದ್ದ. ಸಂಪಾದಕ ಮಹಾಶಯ ಅದೆಷ್ಟು ಜಾಣ್ಮೆಯಿಂದ ಅವುಗಳನ್ನು ಸಂಪಾದಿಸುತ್ತಿದ್ದನೆಂದರೆ ಅವುಗಳಲ್ಲಿರುತ್ತಿದ್ದ ಮಾಧುರ್ಯವೆಲ್ಲ ನಷ್ಟವಾಗಿ ಬಿಡುತ್ತಿತ್ತು. ಉಳಿದಿರುತ್ತಿದ್ದುದು 'ವಿಷ' ಮಾತ್ರ. 'ತರುಣಿ'ಯ ವತಿಯಿಂದಲೂ ಇಂಥವೇ ತೀವ್ರ ಉತ್ತರಗಳು ದೊರೆಯುತ್ತಿದ್ದುವು. ಎರಡು ಕಡೆಗಳಲ್ಲೂ ಯಾರೂ ಯಾರ ಬಗ್ಗೆಯೂ ಮಾನಮರ್ಯಾದೆಗಳನ್ನಿರಿಸಿ ಕೊಂಡಿರುತ್ತಿರಲಿಲ್ಲ. ಆದರೆ, ಶರತ್ ಈ ವಿಷಯಗಳಲ್ಲಿ ವಿಶೇಷ ಆಸಕ್ತಿಯನ್ನೇನೂ ತೋರುತ್ತಿರಲಿಲ್ಲ. ಒಂದೇ ಸಮನೆ ಬರೆಯುವುದಷ್ಟೇ ಅವನ ಮುಖ್ಯ ಕಾರ್ಯವಾಗಿತ್ತು.

## 15

ಮನುಷ್ಯರ ಆಸೆ, ಆಕಾಂಕ್ಷೆ, ಅಭೀಪ್ಸೆಗಳೆಲ್ಲ ಮೂರ್ತರೂಪವನ್ನು ಪಡೆಯತೊಡಗುವಂಥ ಕಾಲವೂ ಬರುತ್ತದೆ. ಅಡ್ಡಿಗಳು ಹಾದಿಗಡ್ಡವಾಗಿ ಬಂದರೆ, ಅಭಿವ್ಯಕ್ತಿಗಾಗಿ ಅದು ಬೇರೊಂದು ಮಾರ್ಗವನ್ನೇ ಕಂಡುಕೊಳ್ಳುತ್ತದೆ. ಇಂಥ ಸ್ಥಿತಿಯಲ್ಲಿಯೇ, ಶರತ್‌ನ ಜೀವನ ಅತಿಯಾದ ಉಪೇಕ್ಷೆಗಳ ಹಾಗೂ ಅನಂತ ಆಸೆಗಳ ನೆರಳಿನಲ್ಲಿ ಸಾಗುತ್ತ ನಡೆದಿತ್ತು. ಯಾವುದೇ ಸಾಧನವಾಗಲೀ, ಸ್ನೇಹ ವರದಹಸ್ತವಾಗಲೀ, ಸಹಾನುಭೂತಿಯಾಗಲೀ, ಪ್ರೋತ್ಸಾಹದ ಅಮೃತವಾಣಿ ಯಾಗಲೀ ಅವನ ನೆರವಿಗೆ ಇರಲಿಲ್ಲ. ತಾಯಿಯ ಸಾವಿನ ಬಳಿಕ ಜೀವನದಲ್ಲಿ ಸಿಹಿಯಾದುದೇನೂ ಉಳಿದೇ ಇದ್ದಂತೆ ಕಾಣುತ್ತಿರಲಿಲ್ಲ. ಆದರೂ, ಅತಿಯಾಗಿ ಭಾವುಕನಾಗಿದ್ದರೂ ಜೀವನದಲ್ಲಿ ಸೋಲನ್ನು ಒಪ್ಪಿಕೊಳ್ಳಲು ಬಿಡದೆ ಇರುವಂಥದೇನೋ ಅವನ ವ್ಯಕ್ತಿತ್ವದಲ್ಲಿ ಎಲ್ಲಿಯೋ ಅಡಗಿತ್ತು. ತನ್ನ ಆಕ್ರೋಶ-ಆಕಾಂಕ್ಷೆಗಳಿಗೆ, ಅಭಾವ-ಆದರ್ಶಗಳಿಗೆ ಅಭಿವ್ಯಕ್ತಿಯನ್ನು ಕೊಡುವ ಮಾಧ್ಯಮ ಅವನಿಗೆ ದೊರೆತಿತ್ತು. ಈ ಮಾಧ್ಯಮವೇ ಅವನಲ್ಲಿ ಬದುಕಬೇಕೆಂಬ ಅದಮ್ಯ ಬಯಕೆಯನ್ನು ಮೂಡಿಸುತ್ತಿತ್ತು.

ಸೃಜನಾತ್ಮಕ ಒಲವಿನ ಆ ದಿನಗಳಲ್ಲಿ ಅವನು ಕತ್ತಿನವರೆಗೂ ಪ್ರೇಮದಲ್ಲಿ ಮುಳುಗಿದ್ದ. ಈ ವಯಸ್ಸಿನಲ್ಲಿ ಪ್ರತಿಯೊಬ್ಬ ಯುವಕನ ಹೃದಯದಲ್ಲಿಯೂ ಪ್ರೇಮದ ಹಂಬಲ ಎಚ್ಚರಗೊಳ್ಳುತ್ತದೆ. ಆಲೋಚನೆ ಹಾಗೂ ಭಾವನೆಗಳ ಬಿರುಗಾಳಿಯೊಂದು ಮನಸ್ಸು ಹಾಗೂ ಬುದ್ಧಿಯನ್ನು ಕಲಕಿಬಿಡುತ್ತಿರುತ್ತದೆ. ಅದೆಷ್ಟು ವೈವಿಧ್ಯ, ಅದೆಂಥ ವಿರೋಧಾಭಾಸ! ರಕ್ತ-ಮಾಂಸಗಳ ಪ್ರೇಮಿಕೆ ಇಲ್ಲದಿದ್ದರೂ ಸರಿ, ಕಲ್ಪನೆಯ ಪ್ರೇಮಿಕೆಯೊಡನೆಯೇ ಈ ಪಾತ್ರವನ್ನು ನಿರ್ವಹಿಸಬಹುದಾಗಿರುತ್ತದೆ.

ಒಂದು ದಿನ ಅವನು ಮಾವ ಸುರೇಂದ್ರನೊಡನೆ ಅವನ ಮನೆಗೆ ಹೋದ. ಕೆಲವು

ದಿನಗಳ ಮುಂಚೆ ಅವನು ಇದೇ ಮನೆಯ ಸದಸ್ಯನೂ ಆಗಿದ್ದ. ಎಲ್ಲವೂ-ಎಲ್ಲರೂ ಪರಿಚಯದವರೇ. ಹೀಗಾಗಿ, ಮಾತಿಗೆ ಕೊನೆಯೇ ಇಲ್ಲವಾಗಿತ್ತು. ರಾತ್ರಿ ಆಗಲೇ ಸಾಕಷ್ಟು ಹೊತ್ತು ಮೀರಿತ್ತು. ಸುರೇಂದ್ರ ಹೇಳಿದ: "ನಡಿ, ನಿನ್ನನ್ನು ಬಿಟ್ಟು ಬರುತ್ತೇನೆ."

ದಾರಿಯಲ್ಲಿ ಮತ್ತೆ ಮಾತು ಮುಂದುವರಿಯಿತು. ಈ ಬಾರಿ ಶರತ್ ಹೇಳಿದ: "ನಡಿ ಮಾವ, ಈಗ ನಾನು ನಿನ್ನನ್ನು ಬಿಟ್ಟುಬರುತ್ತೇನೆ."

ಹೀಗೆ ದಾರಿಯನ್ನು ಸವೆಸುತ್ತ ಸವೆಸುತ್ತ ರಾತ್ರಿಯೇ ಕಳೆದುಹೋಯಿತು. ಅವರು ಅದೆಷ್ಟು ಮಾತನಾಡಿದ್ದರು. ಆಗ ಸರಸ್ವತಿ ಶರತ್‌ನ ನಾಲಿಗೆಯ ಮೇಲೆ ನಲಿದಾಡತೊಡಗಿದ್ದಳು. ಆಗಲೇ ಯಾವುದೋ ಒಂದು ಪ್ರಸಂಗದಲ್ಲಿ ಅವನು ಹೇಳಿದ: "ನಾನು ನಿಜವಾಗಿಯೂ ಒಬ್ಬ ಹುಡುಗಿಯನ್ನು ಪ್ರೀತಿಸುತ್ತಿದ್ದೇನೆ."

ಆಶ್ಚರ್ಯದಿಂದ ಅವನತ್ತ ನೋಡುತ್ತ ಸುರೇಂದ್ರ ಕೇಳಿದ: "ನಿಜವಾಗಿಯೂ ?"

"ಹೌದು. ನಾನು ಯಾವಾಗಲಾದರೂ ನಿನ್ನಿಂದ ಏನನ್ನಾದರೂ ಮುಚ್ಚಿಟ್ಟಿದ್ದೇನೇನು ?"

"ಯಾರು ಅವಳು ?"

"ಇಲ್ಲ, ಇಲ್ಲ, ಅದನ್ನು ಮಾತ್ರ ತಿಳಿಸುವುದಿಲ್ಲ."

"ಹೋಗಲಿ, ಅವಳ ಹೆಸರನ್ನಾದರೂ ಹೇಳು."

"ಅವಳ ಹೆಸರು ನೀರದಾ."

ಬನೈಲಿ ರಾಜ್ಯಕ್ಕೆ ಸಂಬಂಧಿಸಿದ ಕೆಲಸಕ್ಕಾಗಿ ಪ್ರವಾಸ ಹೋಗಿದ್ದಾಗ ಒಂದು ದಿನ ಅವನು ನೀರದಾಳ ಪ್ರೇಮಪಾಶಕ್ಕೆ ಸಿಲುಕಿದುದಾಗಿಯೂ ಶರತ್ ಹೇಳಿಬಿಟ್ಟ. ಈ ಕಥೆ ಅಜ್ಜಿ ಹೇಳುವ ರಾಜಕುಮಾರನ ಕಥೆಯಂತಿತ್ತು. ವೇಗವಾಗಿ ಓಡುವ ಕುದುರೆಯ ಮೇಲೆ ಕುಳಿತು ಕತ್ತಲಲ್ಲಿಯೇ ಶರತ್ ಸಂಥಾಲ್ ಪರಗಣಾದತ್ತ ಧಾವಿಸಿಬಿಡುತ್ತಿದ್ದ. ಅವನ ಪ್ರೇಯಸಿ ಇದ್ದುದು ಅಲ್ಲಿಯೇ ಅಲ್ಲವೆ! ಅವನ ಮನಸ್ಸಿನಲ್ಲಿ ಆಗ ಯಾವಾಗಲೂ ಇರುತ್ತಿದ್ದ ಒಂದು ಕಲ್ಪನೆಯೆಂದರೆ ನೀರದಾ ಅವನ ಹಾದಿಯನ್ನು ಕಾಯುತ್ತ ಕಣ್ಣವೆ ಮುಚ್ಚದೆ ಕುಳಿತುಕೊಂಡಿರುತ್ತಾಳೆ ಎಂಬುದು. ಹಠಾತ್ತಾಗಿ ಒಂದು ದಿನ ಅವನು ಕುದುರೆ ಸಮೇತ ಆ ನದಿಯಲ್ಲಿ ಬಿದ್ದುಬಿಟ್ಟಿದ್ದ. ಆದರೆ, ಅಷ್ಟಕ್ಕೇ ಅವನು ನಿಂತುಬಿಟ್ಟನೆ ? ಒದ್ದೆ ಬಟ್ಟೆಯಷ್ಟೇ ವಾಯುವೇಗದಿಂದ ಅವನು ಹಾರಿ ಹೋದ.

ಸುರೇಂದ್ರ ತುಂಬ ಆಶ್ಚರ್ಯದಿಂದ ಈ ಕಥೆಯನ್ನು ಕೇಳಿದ. ಆದರೆ ಆ ನೀರಾದಾಳನ್ನು ಅವನೆಂದೂ ನೋಡಲಾಗಲಿಲ್ಲ. ಯಾರಿಗೂ ಆಕೆಯನ್ನು ನೋಡಲಾಗಲಿಲ್ಲ. ಅನೇಕ ವ್ಯಕ್ತಿಗಳು ಈ ವಿಚಾರವಾಗಿ ಮಾತನಾಡಿಕೊಳ್ಳುತ್ತಿದ್ದ ರೆಂಬುದೇನೋ ನಿಜ. ಶರತ್ ಯಹೂದಿ ಕನ್ಯೆಯೊಬ್ಬಳನ್ನು ಪ್ರೀತಿಸುತ್ತಿದ್ದಾನೆ ಎಂದೂ ಕೆಲವರು ಹೇಳಿಬಿಟ್ಟರು. ಕೆಲವರು ಅವನು ಬೇರೆ ಬೇರೆ ಎಡೆಗಳಲ್ಲಿ ಬೇರೆ ಬೇರೆ ಹುಡುಗಿಯರೊಂದಿಗೆ ಏಕಾಂತದಲ್ಲಿ ಕುಳಿತು ಮಾತನಾಡುತ್ತಿದ್ದುದನ್ನು ಅಥವಾ ಕೊಳಲೂದುತ್ತ ಕುಳಿತಿದ್ದುದನ್ನು ಕಂಡಿದ್ದರು. ಆದರೆ, ಆಶ್ಚರ್ಯದ ಸಂಗತಿಯೆಂದರೆ ಅಂಥ ಯಾವೊಂದು ಸನ್ನಿವೇಶದಲ್ಲಿಯೇ ಆಗಲಿ ಅವನು

ಇದ್ದುದನ್ನು ಯಾರೊಬ್ಬರೂ ಇನ್ನೊಬ್ಬರಿಗೆ ತೋರಿಸಲು ಸಾಧ್ಯವಾಗಿರಲಿಲ್ಲ. ಅವನ ಪ್ರೀತಿ ಅದೆಷ್ಟು ಮೌನವಾಗಿ, ಅದೆಷ್ಟು ರಹಸ್ಯಮಯವಾಗಿ ಇತ್ತೆಂದರೆ ಅದರ ತಾಪವಷ್ಟೇ ಜನರಿಗೆ ತಟ್ಟುತ್ತಿತ್ತು. ಅದು ಸಾಕಾರವಾಗಿ ಎಂದೂ ಯಾರ ಮುಂದೆಯೂ ಬರಲಾರದೆ ಹೋಯಿತು. ನೀರದಾ ಯಾವಾಗಲೋ ಕಲ್ಪನಾ ಲೋಕದ ಏಕಾಂತದಲ್ಲಿ ನಿದ್ದೆಯಲ್ಲಿ ನಡೆಯುತ್ತಿದ್ದಾಳೋ ಎಂಬಂತೆ, ಅವನ ಬಳಿ ಬರುತ್ತಿದ್ದಳು. ಅವನು ಬರೆಯುತ್ತ ಇದ್ದುದನ್ನು ನೋಡುತ್ತಲೇ ಇರುತ್ತಿದ್ದಳು, ಮಾತನ್ನು ಆಡುತ್ತಿರಲಿಲ್ಲ. ಶರತ್‌ಗೆ ಈ ಮೌನ ಅಸಹನೀಯವಾಗಿ ತೋರುತ್ತಿತ್ತು. ಆಗ ನೀರದಾ ಇದ್ದಕ್ಕಿದ್ದಂತೆ ಅವನ ಬಳಿ ಬಂದು ಕುಳಿತು, ಹೇಳುತ್ತಿದ್ದಳು: "ಅದೇನು ಬರೆದಿದ್ದೀರಿ ? ಓದಿ ಹೇಳಿ!"

ಶರತ್ ಓದತೊಡಗುತ್ತಿದ್ದ. ಅವನ ಉಸಿರು ಜೋರು-ಜೋರಾಗಿ ಆಡುತ್ತಿತ್ತು. ಮುಗುಳ್ನಗುತ್ತಾ ನೀರದಾ ತನ್ನತಲೆಯನ್ನು ಆ ನಿರ್ಭಾಗ್ಯನ ಭುಜದ ಮೇಲೆ ಇರಿಸುತ್ತಿದ್ದಳು. ಆಮೇಲೆ ಅವನಿಗೆ ಎಚ್ಚರವಿರುತ್ತಿರಲಿಲ್ಲ. ಆ ಅಪ್ರಜ್ಞಾವಸ್ಥೆ ಯಲ್ಲಿಯೇ ಕೊಳಲನ್ನೂದಿ ಅವನು ಅವಳನ್ನು ಮುಗ್ಧಳನ್ನಾಗಿಸುತ್ತಿದ್ದ. ಕೆಲವೊಮ್ಮೆ ಅವಳೊಂದಿಗೆ ಜಗಳವನ್ನು ಆಡುತ್ತಿದ್ದ. ಅವಳನ್ನು ಬಿಟ್ಟು ಹೊರಟುಹೋಗುತ್ತಿದ್ದ. ನೀರದಾ ಮತ್ತೆ ಅವನನ್ನು ಹುಡುಕಿಕೊಂಡು ಹೊರಡುತ್ತಿದ್ದಳು. ಪತ್ತೆ ಹಚ್ಚಿ ಕರೆತರುತ್ತಿದ್ದಳು. ತನ್ನ ಮನೆಗೆ ಕರೆದೊಯ್ದು ಅತ್ಯುತ್ತಮವಾದ ಶಯ್ಯೆಯ ಮೇಲೆ ಮಲಗಿಸುತ್ತಿದ್ದಳು. ಅವನಿಗಾಗಿ ಹುಕ್ಕಾ ಸಿದ್ಧಪಡಿಸಿಕೊಡುತ್ತಿದ್ದಳು, ತನ್ನ ಕೈಯಾರೆ 'ಸಂದೇಶ'[1]ವನ್ನು ತಯಾರಿಸಿ ತಿನ್ನಿಸುತ್ತಿದ್ದಳು. ಆಮೇಲೆ ಅವನ ಮಂಚದ ಬಳಿಯೇ ಚಾಪೆಯನ್ನು ಹಾಸಿಕೊಂಡು ಅದರ ಮೇಲೆ ಮೈಚಾಚಿ ಅವನ ಮಾತುಗಳನ್ನು ಕೇಳುತ್ತಿದ್ದಳು, ಕೊನೆಯಿರದ ಕಲ್ಪನಾಲೋಕದ ಆ ಮಾತುಗಳು....

ಒಮ್ಮೊಮ್ಮೆ ಅವಳೂ ಕೋಪದಿಂದ ಅವನನ್ನು ತ್ಯಜಿಸಿ ಹೊರಟು ಹೋಗುತ್ತಿದ್ದಳು. ಹೀಗೆಂದು ಹೇಳುತ್ತಿದ್ದಳು: "ನನಗೂ ನಿಮಗೂ ಯಾವ ಸಂಬಂಧವೂ ಇಲ್ಲ. ನೀವೇನೂ ಮಾಡುತ್ತಲೇ ಇಲ್ಲವಲ್ಲ!"

"ನಾನು.... ನಾನು ಒಬ್ಬ ಸಾಹಿತಿ. ಒಂದಲ್ಲ ಒಂದು ದಿನ...."

"ಸಾಹಿತಿ!" ಅವಳು ನಕ್ಕು ಹೇಳುತ್ತಿದ್ದಳು. "ಸಾಹಿತಿಗಳು ಹೊಟ್ಟೆಗಿಲ್ಲದೆ ಸಾಯುತ್ತಾರೆ. ನೀವಾದರೋ ಅಲೆಮಾರಿಗಳು; ಚರಿತ್ರಹೀನರು. ನಿಮ್ಮೊಂದಿಗೆ ನನ್ನ ಮದುವೆ ಹೇಗೆ ಸಾಧ್ಯ! ಕುಲ-ಮರ್ಯಾದೆಯ ವಿಚಾರವನ್ನಾದರೂ ಲೆಕ್ಕಿಸಬೇಡವೆ... ?"

"ಕುಲ-ಮರ್ಯಾದೆಯೆ ? ಕುಲ-ಮರ್ಯಾದೆಯಂಥ ವಿಚಾರಗಳಲ್ಲಿ ನನಗೆ ಸ್ವಲ್ಪವೂ ನಂಬಿಕೆಯಿಲ್ಲ. ತೋರಿಕೆಗಾಗಿಯೇ ಇರುವ ಈ ಮರ್ಯಾದೆಯ ವಿಚಾರವನ್ನು ಕಟ್ಟಿಕೊಂಡು ಎರಡು ಜೀವಗಳನ್ನು ನೀನು ಹಾಳು ಮಾಡಿಬಿಡಬಾರದು."

ಮತ್ತೆ ಉಗ್ರನಾಗಿ ಹೇಳುತ್ತಿದ್ದ: "ಇದೆಲ್ಲ ಹೇಳಲು ನಿನಗೆ ಹೇಗೆ ಸಾಧ್ಯವಾಯಿತು ? ನೀನು ಇಷ್ಟೊಂದು ಸ್ವಾಭಿಮಾನಿ ಎಂಬುದು ನನಗೆ ಗೊತ್ತಿರಲಿಲ್ಲ.

---

1. ಬಂಗಾಳದ ವಿಶಿಷ್ಟ ಸಿಹಿತಿಂಡಿ - ಅನುವಾದಕನ ಅಡಿಟಿಪ್ಪಣಿ

ನಿನ್ನನ್ನು ಕಂಡರ ನನಗೆ ಇಷ್ಟವಿಲ್ಲ. ಸುತರಾಂ ಇಷ್ಟವಿಲ್ಲ. ನೀನು ಏನು ಬೇಕಾದರೂ ಮಾಡಿಕೊ...."

"ಕೋಪ ಬಂದಿತೆ ? ನಿಮಗೆ ನನ್ನ ಮೇಲೆ ಪ್ರೀತಿ ಇಲ್ಲ ಎಂಬುದು ನನಗೆ ಗೊತ್ತು. ಯಾರೇ ಆಗಲಿ ನನ್ನನ್ನು ಪ್ರೀತಿಸುವುದು ನನಗೆ ಇಷ್ಟವೂ ಇಲ್ಲ. ಆದರೆ, ಇಲ್ಲಿ ನಾನೇ ನಿಮ್ಮನ್ನು ಪ್ರೀತಿಸ ಬಯಸುತ್ತೇನೆ."

ಈ ರೀತಿ ನೀರದಳೊಂದಿಗೆ ಮುನಿಸು - ಸಮಾಧಾನಗಳ ಕಾರ್ಯಕ್ರಮ ನಡೆಯುತ್ತಲೇ ಇರುತ್ತಿತ್ತು. ಆದರೆ ಯಾವಾಗ ಮತ್ತು ಎಲ್ಲಿ ಎಂಬುದು ಯಾರಿಗೂ ಗೊತ್ತಿರಲಿಲ್ಲ. ಶರತ್‌ನ ನಡತೆ ಸರಿಯಾಗಿಲ್ಲ ಎಂಬುದಷ್ಟೇ ಎಲ್ಲರಿಗೂ ಗೊತ್ತಿದ್ದದ್ದು. ಈ ನೀರದಾ ಬಾಲ್ಯಕಾಲದ ಗೆಳತಿಯಾದ ಧೀರೂ ಸಹ ಆಗಿರಬಹುದು. ಈ ಹೆಸರಿನೊಂದಿಗೆ ಅದೆಷ್ಟು ಕಥೆಗಳು ಬಂದು ಸೇರಿಕೊಂಡು ಬಿಟ್ಟಿದ್ದುವು! ಆಕೆ ಶರತ್‌ನನ್ನು ಮದುವೆಯಾಗಬೇಕೆಂದು ಆಸೆಪಟ್ಟಿದ್ದಳು ಎಂದೂ ಹೇಳುತ್ತಾರೆ. ವಿಧವೆಯಾದ ಮೇಲೂ ಮತ್ತೆ ಅವಳನ್ನು ಶರತೇ ಭೇಟಿಯಾಗಿದ್ದ ಎಂದೂ ಹೇಳುತ್ತಾರೆ.

ಕಥೆಗಳ ಮೇಲೆ ಕಥೆಗಳು ಹುಟ್ಟಿಕೊಂಡಿದ್ದುವು. ಸತ್ಯವೆಂದೂ ಹೊರಬರಲೇ ಇಲ್ಲ. ಧೀರೂಳ ವಿಚಾರವನ್ನು ಕೈಬಿಡೋಣ. ನೀರದಾಳ ಇನ್ನೊಂದು ಹೆಸರು ರಾಜಲಕ್ಷ್ಮಿಯೂ ಆಗಿರಬಹುದು. ಆಕೆಯನ್ನು ಪಾರ್ವತಿ, ಮಾಧವಿ ಎಂದೂ ಕರೆಯಬಹುದು. ಈ ನೀರದಾ ನಿರುಪಮಾಳೇ ಆಗಿರುವ ಸಂಭವವೂ ಇದೆ. ಆಕೆ ಅವನ ರಚನೆಗಳನ್ನು ಓದಿ ಓದಿ ಪರವಶಳಾಗುತ್ತಿದ್ದಳು, ಶರತ್ ಅವಳ ಕವಿತೆಗಳನ್ನು ಹಾಡಿಹೊಗಳುತ್ತಿದ್ದ. ಪ್ರಶಂಸೆಯ ಈ ಮಾಧ್ಯಮದ ಮೂಲಕ ಮನಸ್ಸಿನಲ್ಲಿ ಪ್ರೀತಿಯ ಮೊಳಕೆ ಮೂಡಿ, ಎಲ್ಲ ಅಡ್ಡಿಗಳನ್ನು ಬದಿಗೆ ಸರಿಸುತ್ತ, ಮೇಲೆದ್ದು ಬರುತ್ತಿತ್ತು, ಒಮ್ಮೆ ಆಕೆ ಮನೆಯಲ್ಲಿ ಒಂಟಿಯಾಗಿದ್ದಳು. ಹೊರಗಿನ ಕೂಡುವ ಕೋಣೆಯಲ್ಲಿ ಶರತ್ ಕುಳಿತಿದ್ದ. ಅನೇಕ ವೇಳೆ ಅವನು ಅಲ್ಲಿಯೇ ಕುಳಿತು ಏನನ್ನಾದರೂ ಓದಿ ಬರೆದು ಮಾಡುತ್ತಿದ್ದ. ದಿನದ ಬಹುಭಾಗ ಅಲ್ಲಿಯೇ ಕಳೆದುಹೋಗುತ್ತಿತ್ತು. ಅಂದು ಏಕೋ ಏನೋ ಅವನು ತನ್ನನ್ನು ತಾನು ತಡೆದುಕೊಳ್ಳಲಾರದೆ ಹೋದ. ಒಮ್ಮೆಗೇ ಅವಳ ಮುಂದೆ ಬಂದು ನಿಂತು, ಕೇಳಿದ: "ಏನು, ಹೇಗಿದ್ದೀಯೆ ?"

ಅತ್ಯಂತ ಧರ್ಮಪರಾಯಣೆಯಾಗಿದ್ದ ಆ ವಿಧವೆ ಒಮ್ಮೆಗೇ ಶರತ್‌ನನ್ನು ಅಲ್ಲಿ ಕಂಡು ಹತಪ್ರಭಳಾದಳು. ಆ ಒಂದು ಕ್ಷಣದಲ್ಲಿಯೇ ಸಹಸ್ರಯುಗಗಳು ಒಂದುಗೂಡಿದಂತೆ ತೋರಿತು. ಹೇಗೋ ಧೈರ್ಯವನ್ನು ತಂದುಕೊಂಡು ಅವಳು ಹೇಳಿದಳು:" ನೀವು ಇಲ್ಲಿಂದ ಹೊರಟುಹೋಗಿ. ನೀವು ಇಲ್ಲಿಗೆ ಬರಬಾರದು."

"ನಿರುಪಮಾ !"

"........."

".........."

"ಹೊರಟುಹೋಗಿ ಇಲ್ಲವಾದರೆ...."

ಶರತ್ ತಲೆತಗ್ಗಿಸಿಕೊಂಡು ನಿಧಾನವಾಗಿ ಅಲ್ಲಿಂದ ಹಿಂದಿರುಗಿದ. ಈ ಘಟನೆಗಾಗಿ

ನಿರುಪಮಾ ಅವನನ್ನು ಕ್ಷಮಿಸಲಾರದೆ ಹೋದಳು. ತನ್ನ ಅಣ್ಣನೊಂದಿಗೆ ಆಕ್ಷೇಪದ ಧ್ವನಿಯಲ್ಲಿ ಹೀಗೆಂದಳು: "ನಿಮ್ಮ ಈ ಮಿತ್ರ ಎಂಥವನು! ಮನೆಯಲ್ಲಿ ಯಾರೂ ಇಲ್ಲ. ಆದರೂ ನನ್ನ ಜೊತೆ ಮಾತನಾಡಲು ಮುನ್ನುಗ್ಗಿ ಬಂದನಲ್ಲ!"

ಅಣ್ಣ ಶರತ್‌ನ ಸಹಪಾಠಿಯಾಗಿದ್ದವನು. ಬಡವನೂ, ಆಶಾರಹಿತನೂ, ಅಂದಿನ ಅಳತೆಗೋಲಿನಲ್ಲಿ ದುಸ್ಸಾಹಸಿಯೂ ದುರಾಚಾರಿಯೂ ಆಗಿದ್ದ ಶರತ್‌ನಿಗೆ ಇಷ್ಟು ಧೈರ್ಯ ಹೇಗೆ ಬಂತು? ಯಾರಿಗಾದರೂ ಗೊತ್ತಾದರೆ, ಅದರ ಪರಿಣಾಮ ವೇನಾದೀತು? ನೀತೀ ಪರಾಯಣ, ಮರ್ಯಾದಸ್ಥ ಕುಟುಂಬದ ಈ ವಿಧವೆಯ ಗತಿ ಏನಾದೀತು?.....

ಇವರಿಬ್ಬರ ಮದುವೆ ಸಾಧ್ಯವಿಲ್ಲವೇನು?

ಇಲ್ಲ, ಇಲ್ಲ, ಇಲ್ಲ. ಇದು ದುಸ್ಸಾಹಸವಾಗುತ್ತದೆ.

ಆ ಯುಗದಲ್ಲಿ ವಿಧವಾ-ವಿವಾಹದ ಬಗೆಗೆ ಅನೇಕ ಆಂದೋಳನಗಳೇನೋ ನಡೆದಿದ್ದುವು. ಆದರೆ, ಸಮಾಜ ಇನ್ನೂ ಇದನ್ನು ಒಪ್ಪಿರಲಿಲ್ಲ. ಈ ಸೂಚನೆ ಒಪ್ಪಿಗೆಯಾಗುವುದಾದರೂ ಹೇಗೆ? ಬಹುಶಃ ಈ ವಿಚಾರದ ಬಗ್ಗೆ ಯಾರೂ ಆಲೋಚಿಸಿಯೇ ಇಲ್ಲ. ಬಹುಶಃ ಇದೆಲ್ಲ ಅವನ ಫಲವತ್ತಾದ ಕಲ್ಪನಾ ಲೋಕದಲ್ಲಿ ಸಂಭವಿಸಿರಬಹುದು ಅಥವಾ ಮತ್ತೇನಾದರೂ....

ಏನಾದರೂ ಆಗಿರಲಿ, ಯೌವನದ ಮೊದಲ ಕಾಲದಲ್ಲಿ ಮೂಡಿದ ಪ್ರೇಮ ನಿರರ್ಥಕವಾಯಿತು. ಆದರೆ, ಆ ಎಲ್ಲ ಉಚ್ಛೃಂಖಲತೆಗಳ ನಡುವೆ ಅದು ಶಾಶ್ವತವಾಗಿ ಅವನ ಹೃದಯದಲ್ಲಿ ಅಡಗಿಹೋಯಿತು.

ನಿರುಪಮಾ ಅವನ ಕೃತಿಗಳನ್ನು ಓದಿ ಪರವಶಳಾಗಿದ್ದುದು ನಿಜವಾದರೂ, ತತ್ಕಾಲೀನ ಸಮಾಜದ ನಿಷ್ಠುರ ನಿಯಮಗಳ ಎದುರಿನಲ್ಲಿ, ಆಕೆಯ ಮನದ ಮಾತನ್ನು ಅರಿಯುವ ಯಾವ ಮಾರ್ಗವೂ ಇರಲಿಲ್ಲ. ತಿಳಿಯಲು ಪ್ರಯತ್ನಿಸುವುದೂ ಅಪಮಾನಕಾರಕವಾಗಬಹುದಾಗಿತ್ತು. ಅಂದಿನ ಆ 'ಸಮಾಜ ಶಾಸ್ತ್ರಜ್ಞ'ರು "ಉಚ್ಚ ಕುಲಕ್ಕೆ ಸೇರಿದ ವಿಧವೆಯನ್ನು ನೀನು ಅಪಮಾನ ಗೊಳಿಸಬಯಸುತ್ತೀಯೇನು? ಪರಪುರುಷನ ನೆರಳನ್ನೂ ನೋಡದಾಕೆ ಪ್ರೇಮಿಸುವುದಾದರೂ ಹೇಗೆ ಸಾಧ್ಯ? ಹೀಗೆ ಯೋಚಿಸುವುದೂ ತಪ್ಪು" ಎಂದು ತಲೆಯೆತ್ತಿ ಕಠೋರಸ್ವರದಲ್ಲಿ ಹೇಳಬಹುದಾಗಿತ್ತು.

ಒಮ್ಮುಖವಾದ ಪ್ರೇಮವೇನು ಕಮ್ಮಿ ಶಕ್ತಿಶಾಲಿಯಾಗಿರುತ್ತದೆಯೆ? ತನ್ನಿಂದ ತಾನೇ ಅದು ಮಧುರವಾಗಿರುವುದಿಲ್ಲವೆ? ಸಾಫಲ್ಯವೊಂದೇ ಅದರ ಅಸ್ತಿತ್ವಕ್ಕೆ ಪ್ರಮಾಣವಾಗುತ್ತದೆಯೆ? ಯಾರೋ ಒಬ್ಬರಿಗಾಗಿ ಮನಸ್ಸಿನಲ್ಲಿಯೇ ತನ್ನನ್ನು ತಾನು ವಿಸರ್ಜಿಸಿಕೊಳ್ಳುವುದು ಸಾಧ್ಯವಿಲ್ಲವೆ? ಈ ವೇದನೆಯನ್ನೇ ನೀವು ಸ್ನೇಹವೆನ್ನಿ, ಪ್ರೇಮವೆನ್ನಿ, ವಯಸ್ಸಿನ ದೋಷವೆನ್ನಿ; ಆದರೆ ಅದರ ಅಸ್ತಿತ್ವವನ್ನು ಅಲ್ಲಗಳೆಯಲಾಗುವುದಿಲ್ಲ. ಅದರಲ್ಲಿ ಪ್ರೇಮದ ಹಸಿವು ಅಪಾರವಾಗಿರುತ್ತದೆ, ಆದರೆ ತೃಪ್ತಿಯ ಸಾಧನವಾವುದೂ ಇರುವುದಿಲ್ಲ. ಈ ಅತೃಪ್ತಿ ನೋವಿನ ರೂಪದಲ್ಲಿ ಅವನ ಹೃದಯಾಂತರಾಳವನ್ನು ಸೇರಿಬಿಟ್ಟಿತು. 'ದೇವದಾಸ್' 'ಬಡೀ ದೀದೀ' ಮೊದಲಾದ ಕೃತಿಗಳಲ್ಲಿ ಈ ನೋವು ಅಭಿವ್ಯಕ್ತಿಯನ್ನು ಪಡೆಯಿತು. ಈ ಕೃತಿಗಳಲ್ಲಿ ವಿಫಲ

ಪ್ರೇಮದ ಆ ನೋವೇ ತುಂಬಿಕೊಂಡಿದೆ. ನೀರದೆಯಾಗಿರಲಿ, ನಿರುಪಮಳಾಗಿರಲಿ, 'ದೇವದಾಸ್' ಕಾದಂಬರಿಯ ಪಾರ್ವತಿಯಾಗಿರಲಿ ಅಥವಾ 'ಬಡೀ ದೀದಿ'ಯ ಮಾಧವಿಯಾಗಿರಲಿ - ಇವರೆಲ್ಲ ಒಂದೇ, ಎಲ್ಲರೂ ಅಸಫಲಪ್ರೇಮದ ನೋವಿನ ಪ್ರತಿಮೆಗಳು. ನಿರುಪಮಾ ಅವನನ್ನು ಹೊರಟುಹೋಗೆಂದು ಹೇಳುತ್ತಾಳೆ, ಸುರೇಂದ್ರನಾಥ ಬಂದಾಗ ಮಾಧವಿ ತನ್ನ ತಂಗಿ ಪ್ರಮೀಳಾಗೆ ಹೇಳುತ್ತಾಳೆ. "ಪ್ರಮೀಲಾ, ಹೊರಗೆಹೋಗುವಂತೆ ಮೇಷ್ಟರಿಗೆ ಹೇಳಿಬಿಡು"

ಆದರೆ, ಅವಳು ನಿರುಪಮಾಳಂತೆ ಕಠೋರ ಹೃದಯಿಯಲ್ಲ. ಹೋಗು ಎಂದೇನೋ ಹೇಳುತ್ತಾಳೆ ಆದರೆ ಕೋಮಲವಾದ ಧ್ವನಿಯಲ್ಲಿ, ತಲೆಯ ಮೇಲೆ ಮೊಗದೆರೆಯನ್ನು ಪೂರ್ಣವಾಗಿ ಎಳೆದುಕೊಂಡು ಮೂಲೆಯೊಂದಕ್ಕೆ ಜಾರಿಕೊಳ್ಳುತ್ತಾಳೆ. ಮುಂದೆ ನಾಚಿಕೆಯಿಂದಾಗಿ, ಸುರೇಂದ್ರನಾಥನ ಆರೈಕೆಯನ್ನೂ ಸ್ವಲ್ಪ ಮಟ್ಟಿಗೆ ಕಡಿಮೆ ಮಾಡಿಬಿಡುತ್ತಾಳೆ.

ಇವೆಲ್ಲ ಕಾದಂಬರಿಯ ಮಾತುಗಳೇ ಆದರೂ ಅವು ಆಧಾರ ರಹಿತವಾದುವೇನೂ ಅಲ್ಲ. ಅವನು ಅನುಭವಿಸಿದ ಯಥಾರ್ಥ ಸಂಗತಿಗಳನ್ನೇ ಅವು ಆಧರಿಸಿವೆ. ಅನೇಕ ವರ್ಷಗಳ ಅನಂತರ ಸೋಲರಿಯದ ಕಥಾಶಿಲ್ಪಿ ಶರತ್‌ಚಂದ್ರರು ಸುಪ್ರಸಿದ್ಧ ಕವಯಿತ್ರಿ ರಾಧಾರಾನೀ ದೇವಿಯವರಿಗೆ ಹೀಗೆಂದು ಬರೆದಿದ್ದರು: "ಎಂದಾದರೂ ಒಮ್ಮೆ ಸಾಧ್ಯವಾದರೆ ನಿನಗೊಂದು ಕಥೆಯನ್ನು ಹೇಳುತ್ತೇನೆ. ಕೇಳಿದಾಗ ಆ ಕಥೆ ಈ ಕಥೆಗಳಂತೆ ಅದೂ ಅವಾಸ್ತವಿಕವೆಂದು ತೋರಬಹುದು. ಆದರೆ ಇದಕ್ಕಿಂತದಲೂ ಹೆಚ್ಚು ವಾಸ್ತವವಾದ ಸತ್ಯ ನನ್ನ ಬಾಳಿನಲ್ಲಿ ಬೇರಾವುದೂ ಇಲ್ಲ."

ಈ ಕಥೆ ನಿರುಪಮಾಳ ಕಥೆಯೇ ಅಲ್ಲವೆ ? ಈ ಸತ್ಯದವರೆಗೆ ಹೋಗಿ ತಲುಪುವ ದಾರಿ ಯಾವುದೂ ಇಂದು ಉಳಿದಿಲ್ಲ. ನಮಗೆ ಗೊತ್ತಿರುವುದು ಇಷ್ಟು ಮಾತ್ರ: ಪ್ರೇಮದ ವಿಷಯದಲ್ಲಿ ಸೋತರೂ ಶರತ್ ಆತ್ಮಹತ್ಯೆಗೆ ಕೈಹಾಕಲಾರದೆ ಹೋದ. ಸನ್ಯಾಸಿಯೂ ಆಗಲಾರದೆ ಹೋದ. ಆದರೆ ಸೃಷ್ಟಿಕರ್ತನಾಗುವ ಮಾರ್ಗವೇ ಅವನಿಗೆ ಕಂಡಿತು. ಈ ಮಾರ್ಮಿಕ ಅನುಭವ ಸಾಹಿತ್ಯದಲ್ಲಿ ಪ್ರತಿಬಿಂಬಿತವಾಗುವ ಹಾದಿಯನ್ನು ಕಂಡುಕೊಂಡಿತು. ನೀರದಾ ಅಥವಾ ನಿರುಪಮಾಳೊಂದಿಗೆ ಅವನ ಬಾಳು ಒಂದುಗೂಡಿದ್ದರೆ, ಅದು ವೈಯಕ್ತಿಕ ತೃಪ್ತಿಯ ಕಾರಣವಾಗಬಹುದಿತ್ತು. ಆದರೆ, ವಿಯೋಗ ಶಕ್ತಿಶಾಲಿ ಕಲಾವಿದನೊಬ್ಬನಿಗೆ ಜನ್ಮ ನೀಡಿತು. ವಿರಹಾನುಭವವೇ ಜೀವನ ಮತ್ತು ಯೌವನದ ಆವೇಗ, ಬುದ್ಧಿ ಇದರ ಆಳವನ್ನು ಕಂಡುಕೊಳ್ಳಲಾರದು, ಹೃದಯದಿಂದ ಮಾತ್ರವೇ ಇದರ ಸ್ವರೂಪವನ್ನು ಅರಿಯಲು ಸಾಧ್ಯ. ಅವನ ಸಾಹಿತ್ಯದಲ್ಲಿ ಈ ವಿರಹಾನುಭವವೇ ಪ್ರತಿಧ್ವನಿಸಿದೆ. ಆದರ್ಶ ಮತ್ತು ಯಥಾರ್ಥ, ಸಮಸ್ಯೆ ಮತ್ತು ಪರಿಹಾರ - ಇವೆಲ್ಲ ಹೃದಯರಸದ ಸಂಜೀವಿನಿಯಲ್ಲಿ ಮುಳುಗಿವೆ.

ಮತ್ತೊಂದು ಕ್ಷೇತ್ರದಿಂದಲೂ ಅವನ ಈ ಪ್ರವೃತ್ತಿಗೆ ಬೆಂಬಲ ದೊರೆಯಿತು. 'ವಂಗದರ್ಶನ'ದಲ್ಲಿ ಅವನು 'ಆಂಖ್ ಕೀ ಕಿರ್‌ಕಿರೀ' (ಕಣ್ಣಿನ ಕಿರಿಕಿರಿ) ಎಂಬ ರವೀಂದ್ರರ ಕೃತಿಯನ್ನು ಓದಿದ್ದ. ಈ ಯುಗಾಂತರಕಾರಕ ಕೃತಿಯಲ್ಲಿ ರವೀಂದ್ರರು ವಿಧವೆಯ ಪ್ರಣಯ ಭಾವನೆಗಳಿಗೆ ದನಿಗೊಟ್ಟಿದ್ದಾರೆ. ಬಂಕಿಮಚಂದ್ರರಂತೆ ಆದರ್ಶದ ರಕ್ಷಣೆಗಾಗಿ ಆಕೆಯನ್ನು ಸಾಯಿಸಿಲ್ಲ. ವಿಶಿಷ್ಟ ಸ್ಥಿತಿಯಲ್ಲಿ ಯಾರಾದರೊಬ್ಬ

ವಿಧವೆ ಯಾವನಾದರೂ ಒಬ್ಬ ಪುರುಷನ ವಿಷಯದಲ್ಲಿ ಆಸಕ್ತಳಾದರೆ, ಅದರಲ್ಲಿ ಅಸಹಜವಾದುದೇನೂ ಇಲ್ಲವೆಂದು ಅವರು ಸ್ಪಷ್ಟವಾಗಿಯೇ ಹೇಳಿದರು. ಇದಕ್ಕೆ ತದ್ವಿರುದ್ಧವಾಗಿ 'ಕೃಷ್ಣಕಾಂತನ ಉಯಿಲಿ'ನಲ್ಲಿ ರೋಹಿಣಿಯ ಪ್ರಣಯಾಕಾಂಕ್ಷೆಯನ್ನು ಸಾರ್ಥಕಗೊಳಿಸದೆ, ಬಂಕಿಮಚಂದ್ರರು ಅವಳನ್ನು ಸಾಯಿಸಿಬಿಟ್ಟಿದ್ದಾರೆ. ಇದಕ್ಕಾಗಿ ಶರತ್ ಅವರನ್ನು ಜೀವನವಿಡೀ ಕ್ಷಮಿಸಲಾರದೆ ಹೋದ; ಆದರೆ, ಈ ಸಂಸ್ಕಾರಗಳಿಂದ ಬಿಡುಗಡೆ ಹೊಂದಿದ್ದಕ್ಕಾಗಿ ರವೀಂದ್ರನಾಥರನ್ನು ಅವನು ಜೀವನವಿಡೀ ಗುರುವೆಂದು ಭಾವಿಸುತ್ತಿದ್ದ.

ಅವನ ಆಂತರಿಕ ಸಂಘರ್ಷದ ಮೂಲದಲ್ಲಿ ಈ ಇಬ್ಬರು ಸಾಹಿತ್ಯ ಬ್ರಹ್ಮರು ಮೊದಲಿನಿಂದಲೂ ಆಸನ ಹಾಕಿಕೊಂಡು ಕುಳಿತುಬಿಟ್ಟಿದ್ದರು.

## 16

ಗೃಹಸ್ಥಾಶ್ರಮದ ಬಗ್ಗೆ ಶರತ್‌ಗೆ ಮೊದಲಿನಿಂದಲೂ ಆಸಕ್ತಿ ಇರಲಿಲ್ಲ - ಕೆಲಸಕ್ಕೆ ಸೇರಿದ್ದಾಗಲೂ ಇರಲಿಲ್ಲ; ಈಗ ಕೆಲಸವನ್ನು ಬಿಟ್ಟಾಗಲೂ ಇರಲಿಲ್ಲ. ಲೋಕದ ಈ ಕುತ್ಸಿತ ರೂಪಕ್ಕೆ ಬೆನ್ನು ತಿರುಗಿಸಿ, ಅವನು ಕಲ್ಪನೆಯ ಲೋಕದಲ್ಲಿ ಜೀವಿಸಬಯಸುತ್ತಿದ್ದ. ತೀವ್ರ ದಾರಿದ್ರ್ಯದ ಸ್ಥಿತಿಯಲ್ಲಿಯೂ ಅವನ ಸೌಂದರ್ಯ ಭಾವನೆ ಸ್ವಲ್ಪ ಮಾತ್ರವೂ ಮಾಸಲಿಲ್ಲ. ಅವನು ಎಷ್ಟು ಉಚ್ಛೃಂಖಲನಾಗಿದ್ದನೋ ಅವನಕೋಣೆ ಅಷ್ಟೇ ಸುವ್ಯವಸ್ಥಿತವಾಗಿರುತ್ತಿತ್ತು. ಅವನ ಕೋಣೆಯಲ್ಲಿ ಒಂದು ಹಗ್ಗದ ಮಂಚವಿತ್ತು, ಮಡಿಸಬಹುದಾದ ಮೇಜಿತ್ತು. ತನ್ನ ಮಾವ ಠಾಕುರ್‌ದಾಸ್ ಅವರಿಂದ ಈ ಎರಡು ವಸ್ತುಗಳೂ ಅವನಿಗೆ ದೊರೆತಿದ್ದುವು. ರಾಜೂ ಸ್ವತಃ ಕುರ್ಚಿಯನ್ನು ಮಾಡಿಸಿಕೊಟ್ಟಿದ್ದ. ಮೇಜಿನ ಮೇಲೆ ಅವನ ಮೆಚ್ಚಿನ ಲೇಖಕರಾದ ಹೆನ್ರಿವುಡ್, ಮೇರಿ ಕೊರೇಲಿ, ಲಿಟನ್ ಮತ್ತು ಡಿಕನ್ಸ್ ಅವರ ಪುಸ್ತಕಗಳು ಜೋಡಣೆಗೊಂಡಿರುತ್ತಿದ್ದುವು. ಬರೆವಣಿಗೆಯ ವಸ್ತುಗಳೆಲ್ಲವೂ 'ಟಿಪ್‌ಟಾಪ್' ಆಗಿ ಸುಂದರವಾಗಿ ಇರುತ್ತಿದ್ದುವು. ಆದರೆ, ಸೌಂದರ್ಯಪ್ರಜ್ಞೆ ಹೊಟ್ಟೆಯ ಬೆಂಕಿಯನ್ನು ಆರಿಸಲಾರದು. ಕಲ್ಪನೆಯ ನೆರವಿನಿಂದ ಗೃಹಸ್ಥ ಜೀವನವನ್ನು ಸಾಗಿಸಲೇನೂ ಆಗುವುದಿಲ್ಲ. ಅದಕ್ಕೆ ಪಕ್ಕಾ ಹಣಬೇಕು. ಆದಕ್ಕೆ ಇಲ್ಲಿ ತೃಪ್ತಿಕರವಾದ ಏರ್ಪಾಟೇನೂ ಇರಲಿಲ್ಲ. ಇದರ ಬಗ್ಗೆ ಅವನಿಗಾಗಲೀ ಅವನ ತಂದೆಗಾಗಲೀ ಯಾವುದೇ ಚಿಂತೆಯೂ ಇರಲಿಲ್ಲ. ಮಾರಾಟಕ್ಕೆ ಅರ್ಹವಾಗಿದ್ದಂಥದೆಲ್ಲ ಮಾರಾಟಗೊಂಡಿತ್ತು. ಗೆಳೆಯರಾಗಲೀ ನೆಂಟರಾಗಲೀ ಎಲ್ಲಿಯವರೆಗೆ ನೆರವಾಗಬಲ್ಲರು? ಸಾಲ ಬೇಡುವುದಕ್ಕೂ ಒಂದು ಮಿತಿ ಇರುತ್ತದೆ. ಅವರು ಯಾವ ವರ್ಗಕ್ಕೆ ಸೇರಿದವರಾಗಿದ್ದರೋ ಆ ವರ್ಗಕ್ಕೆ ಭಿಕ್ಷೆ ನೀಡುವಂಥ ಧೈರ್ಯ ಮಾಡಬಲ್ಲಂಥವರು ಯಾರೂ ಇರಲಿಲ್ಲ. ತೋಟದಿಂದ ತರಕಾರಿ ಬಿಡಿಸಿಕೊಂಡು ಬರುವಷ್ಟರಿಂದಲೇ ಹೊಟ್ಟೆ ತುಂಬುವುದಿಲ್ಲ. ಆದ್ದರಿಂದ ಆಗಾಗ್ಗೆ "ದೇವರೇ ಒಂದೆರಡು ದಿನಗಳ ಮಟ್ಟಿಗಾದರೂ ಜ್ವರ ಬಡುವಂತೆ ಮಾಡು. ಹಾಗಾದರೂ ಆದರೆ ಎರಡು ತುತ್ತು ಅನ್ನ ತಿನ್ನುವ ಬಗ್ಗೆ ಚಿಂತೆ ಮಾಡುವುದಾದರೂ ತಪ್ಪುತ್ತದೆ" ಎಂದು ಅವನು ದೇವರನ್ನು ಪ್ರಾರ್ಥಿಸಿಕೊಳ್ಳಬೇಕಾಗಿ ಬರುತ್ತಿತ್ತು.

ತನ್ನ ಅಕರ್ಮಣ್ಯತೆಯನ್ನು ಬಚ್ಚಿಡುವ ಸಲುವಾಗಿ ಭಗವಂತನ ಮರೆಹೊಕ್ಕರೂ ಹೊಣೆಗಾರಿಕೆಯಿಂದ ಮುಕ್ತನಾಗುವುದು ಸಾಧ್ಯವಾಗುವುದಿಲ್ಲ. ತಂದೆ ಮಕ್ಕಳಿಬ್ಬರೂ ಬೇಜವಾಬ್ದಾರರೇ ಆಗಿದ್ದರು. ಮರಳುಕೋಳಿ ಹೇಗೆ ಮರಳಿನಲ್ಲಿ ತಲೆಯನ್ನು ಅಡಗಿಸಿಟ್ಟುಕೊಂಡು ಶತ್ರುವಿನ ಅಸ್ತಿತ್ವವನ್ನು ಸುಳ್ಳಾಗಿಸಬಯಸುತ್ತದೆಯೋ ಹಾಗೆಯೇ ತಂದೆ-ಮಕ್ಕಳಿಬ್ಬರೂ ತಮ್ಮ ತಮ್ಮ ಸೌಂದರ್ಯಭಾವನೆಗಳಲ್ಲಿಯೇ ಮುಳುಗಿದ್ದು ಹಸಿವಿನ ಅಸ್ತಿತ್ವವನ್ನು ಇಲ್ಲಗೈಯುವ ಪ್ರಯತ್ನ ಮಾಡುತ್ತಿದ್ದರು. ಮಗ ಸಾಹಿತ್ಯ ಸಾಧನೆಯಲ್ಲಿ ಮಗ್ನನಾಗಿದ್ದರೆ, ಕಲ್ಪನಾ ವಿಹಾರಿಯಾಗಿದ್ದ ತಂದೆ ಈ ಸ್ಥಿತಿಯಲ್ಲೂ ಬಗೆಬಗೆಯಾದ ಸುಂದರವಾದ ಕಲ್ಲುಗಳನ್ನು ಆರಿಸಿ ಇಡುವಕಾರ್ಯದಲ್ಲಿ ತೊಡಗಿರುತ್ತಿದ್ದ.

ಅವುಗಳನ್ನು ಬೀಗ ಹಾಕಿ ಭದ್ರವಾಗಿ ಇಟ್ಟಿರುತ್ತಿದ್ದರೆಂಬುದು ಶರತ್‌ಗೆ ಗೊತ್ತಿತ್ತು. ಆ ದಿನಗಳಲ್ಲಿ ಅವನಿಗೆ ಹಣದ ಅಗತ್ಯ ಬಹಳವಾಗಿತ್ತು. ಇಂಥ ಸ್ಥಿತಿಯಲ್ಲಿಯೂ ಇತರರಿಗೆ ನೆರವಾಗುವುದನ್ನೇನೂ ಅವನು ನಿಲ್ಲಿಸಿರಲಿಲ್ಲ. ಆದ್ದರಿಂದ ಒಮ್ಮೆ ಹೀಗೆ ಯೋಚಿಸಿದ: "ಈ ಕಲ್ಲುಗಳನ್ನಿಟ್ಟುಕೊಂಡು ತಂದೆ ಏನು ಮಾಡಿಯಾರು ? ಇವು ಬೇರೆ ಯಾರಿಗಾದರೂ ಏಕೆ ಉಪಯೋಗಕ್ಕೆ ಬರಬಾರದು !"

ಸರಿ, ತಂದೆಯ ಕಣ್ಣು ತಪ್ಪಿಸಿ ಅವನು ಆ ಕಲ್ಲುಗಳನ್ನು ತಗೆದಿಟ್ಟುಕೊಂಡ. ಆದರೆ ಈ ಸಂಗತಿ ಬಹಳ ದಿವಸಗಳವರೆಗೆ ಗೋಪ್ಯವಾಗಿರಲು ಸಾಧ್ಯವಾಗಲಿಲ್ಲ. ಆ ಬಡವನ ಮನೆಯಲ್ಲಿದ್ದ ಐಶ್ವರ್ಯ ಇದೇ ಅಲ್ಲವೇ! ಮೋತೀಲಾಲ್ ಬೆಚ್ಚಿ ಬಿದ್ದರು. ಮನೆಯಲ್ಲಿ ಎಲ್ಲರನ್ನೂ ಕೇಳಿದರು. ಕೊನೆಗೆ ಶರತ್‌ನನ್ನು ಕರೆದು ಕೇಳಿದರು: "ಮಗು, ನೀನು ಆ ಕಲ್ಲುಗಳನ್ನು ತೆಗೆದುಕೊಂಡೆಯಾ ?"

ಶರತ್ ಉತ್ತರಿಸಿದ: "ಹೌದು, ತೆಗೆದುಕೊಂಡೆ."

"ಏಕೆ ತೆಗೆದುಕೊಂಡೆ ?"

"ಏಕೆ ಅಂದರೆ ನನಗೆ ಹಣದ ಅಗತ್ಯವಿತ್ತು. ಮೇಲಾಗಿ ಆ ಕಲ್ಲುಗಳಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ."

ತಂದೆಯ ಕೋಪಕ್ಕೆ ಮಿತಿಯೇ ಇರಲಿಲ್ಲ. ಅಸಹಾಯನೂ ದುರ್ಬಲನೂ ಆದ ವ್ಯಕ್ತಿಗೆ ಕೋಪ ಬಂದಾಗ, ಅದು ಮೇರೆಯನ್ನು ಮೀರಿಯೇ ಬಿಡುತ್ತದೆ. ಅತ್ಯಂತ ಕಟುವಾದ ಮಾತುಗಳಲ್ಲಿ ಶರತ್‌ನನ್ನು ಹೀಯಾಳಿಸುತ್ತ ಅವರೆಂದರು: "ನಿನಗೆ ನಾಚಿಕೆಯಾಗುವುದಿಲ್ಲವೆ ? ವಯಸ್ಸಿಗೆ ಬಂದಿರುವ ಹುಡುಗ ನೀನು! ನಿನ್ನ ಕೈಲಿ ಏನೂ ಮಾಡಲು ಆಗುವುದಿಲ್ಲವೆ ? ಎಲ್ಲರೂ ಇಲ್ಲಿ ಹಸಿವಿನಿಂದ ಸಾಯುತ್ತ ಬಿದ್ದಿದ್ದಾರೆ, ನೀನು ನಾಲ್ಕು ಕಾಸಿಗಾಗಿ ನಾನು ತುಂಬ ಆಸಕ್ತಿಯಿಂದ ಸಂಗ್ರಹಿಸಿದ್ದ ಆ ಕಲ್ಲುಗಳನ್ನು ತೆಗೆದುಕೊಂಡು ಬಿಟ್ಟೆಯಲ್ಲವೆ ?"

ಸ್ತಬ್ಧವಾಗಿ ಬಿಟ್ಟ ಶರತ್, ತಂದೆಯನ್ನು ನೋಡುತ್ತಲೇ ನಿಂತುಬಿಟ್ಟ. ತನ್ನ ಮಕ್ಕಳ ಬಗ್ಗೆ ಆ ಕನಸುಗಾರ ತಂದೆಯ ಹೃದಯದಲ್ಲಿಯೂ ಕರುಣೆ ಮಮತೆಯ ಭಾವನೆಗಳಿದ್ದುವು. ಅವನ ಆ ಎಲ್ಲ ತುಂಟಾಟಗಳನ್ನು ಕಂಡೂ ಅವರು ಇದುವರೆಗೆ ಶರತ್‌ಗೆ ಒಂದೆರಡು ಮಾತುಗಳನ್ನೂ ಹೇಳಿರಲಿಲ್ಲ. ಈಗಲಾದರೋ ಅವರ ಆ ಕಟುಭಾವನೆಗೆ ಮೇರೆಯೇ ಇರಲಿಲ್ಲ. ಅದೂ ಆ ನಿರ್ಜೀವವಾದ ಕಲ್ಲುಗಳಿಗಾಗಿ.

ಅವನ ಭಾವುಕ ಹೃದಯಕ್ಕೆ ಇದರಿಂದ ಭಾರಿ ಪೆಟ್ಟು ಬಿತ್ತು. ಆ ಕ್ಷಣವೇ ಅವನು ಮನೆ ಬಿಟ್ಟು ಹೊರಟುಹೋದ.

ಹೀಗೆ ಮನೆಬಿಟ್ಟು ಹೊರಟುಹೋಗಿದ್ದಕ್ಕೆ ಇದೊಂದೇ ಕಾರಣವಾಗಿರಲಿಲ್ಲ. ಮನೆಯಲ್ಲಿದ್ದ ದಾದಿಯೊಬ್ಬಳು ಅಡುಗೆ ಮಾಡುತ್ತಿದ್ದಳು, ತಂಗಿ-ತಮ್ಮಂದಿರನ್ನು ನೋಡಿಕೊಂಡಿರುತ್ತಿದ್ದಳು. ಆದರೆ, ಅವರ ಬಗ್ಗೆ ಅವಳ ವರ್ತನೆ ಅಷ್ಟೇನೂ ಚೆನ್ನಾಗಿರಲಿಲ್ಲ. ಅವಳು ಆ ಮಕ್ಕಳನ್ನು ಹೆದರಿಸುತ್ತಿದ್ದಳು, ಹೊಡೆಯುತ್ತಲೂ ಇದ್ದಳು. ಈ ವಿಷಯದ ಬಗ್ಗೆ ಒಮ್ಮೆ ತಂದೆ-ಮಕ್ಕಳ ನಡುವೆ ವಾಗ್ವಾದವೂ ನಡೆಯಿತು. ತಂದೆ ಆ ದಾದಿಯ ಪಕ್ಷ ವಹಿಸಿದರು. ಮನೆಯ ಸ್ಥಿತಿಯನ್ನು ನೋಡಿದರೆ, ಹಾಗೆ ಮಾಡಿದ್ದಕ್ಕಾಗಿ ಅವರ ಮೇಲೆ ದೋಷಾರೋಪಣೆ ಮಾಡುವುದೂ ಸಾಧ್ಯವಿರಲಿಲ್ಲ. ಅವಳ ನೆರವಿನಿಂದಾಗಿಯೇ ಆ ಮನೆವಾರ್ತೆ ನಡೆಯುತ್ತಿತ್ತು. ಆದರೆ, ಶರತ್ ಈ ಮಾತನ್ನು ಒಪ್ಪಲು ಸಿದ್ಧನಾಗಿರಲಿಲ್ಲ. ತಂದೆ ಆ ದಾದಿಯ[1] ಅನುಚಿತ ಪ್ರಭಾವಕ್ಕೆ ಒಳಗಾಗಿದ್ದರೆಂದು ಅವನಿಗೆ ಅನ್ನಿಸಿತು. ಆದರೆ, ಅವನು ಏನುತಾನೆ ಮಾಡಲು ಸಾಧ್ಯವಿತ್ತು? ಈ ಸ್ಥಿತಿಗೆ ಆ ಕುಟುಂಬ ಬಂದಿದ್ದುದಕ್ಕೆ ಸ್ವತಃ ಅವನೂ ಕಾರಣನಾಗಿದ್ದ. ಆದ್ದರಿಂದ ಅವನು ಮನೆಬಿಟ್ಟು ಹೊರಟುಹೋದ.

ಶರತ್‌ನ ಯಾವುದೇ ಕಾರ್ಯದ ಹಿಂದೆ ಯಾವುದೇ ಒಂದು ಕಾರಣ ಇರುತ್ತಿರಲಿಲ್ಲ. ಇಲ್ಲವಾದರೆ, ಅಂಥ ಕಾರಣಗಳನ್ನು ಕಲ್ಪಿಸಿಬಿಡುತ್ತಿದ್ದರು. ಅವನೂ ಸ್ವತಃ ಈ ವಿದ್ಯೆಯಲ್ಲಿ ನಿಪುಣನಾಗಿದ್ದ. ಆದ್ದರಿಂದ, "ಅವನ ಪ್ರೇಯಸಿ ಅವನಿಗೆ ಕೈಕೊಟ್ಟು ಹೊರಟುಹೋದಳು; 'ಅವಳನ್ನು ಹುಡುಕಿಕೊಂಡು ಬರುತ್ತೇನೆ' ಎಂದು (ಪ್ರೇಮದ ನೋವಿನಿಂದ ವ್ಯಾಕುಲಚಿತ್ತನಾದ ಅವನು) ತೀರ್ಮಾನಿಸಿ ಹೊರಟುಬಿಟ್ಟಿದ್ದಾನೆ" ಎಂದೂ ಅವನು ಮನೆಬಿಟ್ಟು ಹೋದದಕ್ಕೆ ಜನ ಕಾರಣವನ್ನು ಕಲ್ಪಿಸಿ ಹೇಳಿದ್ದರು.

ಕಾರಣ ಏನಾದರೂ ಆಗಿರಲಿ, ಏನನ್ನಾದರೂ ಸಾಧಿಸಬೇಕೆಂಬ ವ್ಯಥೆಯಿಂದ ಪೀಡಿತನಾಗಿದ್ದ ದಾರಿ ತಪ್ಪಿದವನಾದ ಶರತ್ ಮತ್ತೊಮ್ಮೆ ಉದ್ದೇಶ ಅಥವಾ ಗುರಿ ಇಲ್ಲದ ಯಾತ್ರೆಯನ್ನು ಆರಂಭಿಸಿದ.[2]

## 17

ಶ್ರೀಕಾಂತನಂತೆ ಅಲ್ಲಿ ಇಲ್ಲಿ ಅಲೆದಾಡುತ್ತ ಒಂದು ದಿನ ಮಾವಿನ ತೋಪೊಂದರ ಬಳಿಗೆ ಬಂದಾಗ, ಅಲ್ಲಿ ಹೊಗೆಯಾಡುತ್ತಿದ್ದುದನ್ನು ಕಂಡು ಶರತ್ ಕೂಡಲೇ ಅಲ್ಲಿಗೆ ಹೋಗಿ ಸೇರಿದ. ನೋಡಿದರೆ ಅದೊಂದು ಸುಸಜ್ಜಿತ ಸನ್ಯಾಸಿಗಳ ಆಶ್ರಮವಾಗಿತ್ತು. ಗುಗ್ಗುಳದ ಧೂಪ ಹತ್ತಿಕೊಂಡು ಚೆನ್ನಾಗಿ ಹೊಗೆಯಾಡುತ್ತಿದೆ. ಪಾತ್ರೆಯೊಂದರಲ್ಲಿ ಚಹಾಕ್ಕಾಗಿ ನೀರನ್ನು ಕುದಿಸಲಾಗುತ್ತಿದೆ. ಅರೆತೆರೆದ ಕಣ್ಣುಗಳ ಒಬ್ಬ ಬಾಬಾ ಎದುರಿಗೆ

---

1 ಶರತ್‌ಚಂದ್ರರು ಪ್ರಸಿದ್ಧರಾಗಿ ಭಾಗಲಪುರಕ್ಕೆ ಬಂದಿದ್ದಾಗ ಈ ದಾದಿ ಅವರನ್ನು ಭೇಟಿಯಾಗಿದ್ದಳು. ಅವರು ಆಕೆಗೆ ಔದಾರ್ಯದಿಂದ ಹಣವನ್ನು ಕೊಟ್ಟಿದ್ದರು.

2 ಜುಲೈ 1901ರ ಅನಂತರ. ಏಕೆಂದರೆ ಈ ತಾರೀಖಿನ ಅವರ ಕೃತಿಯಾದ 'ಕ್ಷುದ್ರೇರ್ ಗೌರವ್' ಎಂಬುದು ಕೈ ಬರಹದ ಪತ್ರಿಕೆಯಾದ 'ಛಾಯಾ'ದಲ್ಲಿ ದೊರೆತಿದೆ.

ವಿರಾಜಿಸುತ್ತಿದ್ದಾನೆ. ಅಕ್ಕಪಕ್ಕಗಳಲ್ಲಿ ಅಫೀಮು ಕುಡಿಯುವ ಸಾಧನಗಳಿವೆ. ಹಾಲಿಗಾಗಿ ಒಂದು ಆಡು ಮತ್ತು ಒಂದು ಹಸುವೂ ಇದೆ. ಒಂಟೆ ಮತ್ತು ಕುದುರೆಗಳೂ ಇವೆ. ಇವುಗಳ ಜೊತೆಗೆ ಅಫೀಮನ್ನು ಸೋಸುವ ಉಪಕರಣಗಳೂ ಇವೆ. ಶರತ್ ಕೂಡಲೇ ಮುಂದೆ ಬಂದು ಬಾಬಾನ ಪಾದಗಳಿಗೆ ನಮಸ್ಕರಿಸಿದ. ವಿನಯಪೂರ್ಣವಾದ ಧ್ವನಿಯಲ್ಲಿ ಹೇಳಿದ: "ನಾನು ಮನೆ ಬಿಟ್ಟು ಬಂದಿರುವ, ಮುಕ್ತಿಪಥವನ್ನು ಅರಸುತ್ತಿರುವ ಹತಭಾಗ್ಯ ಶಿಶು. ದಯವಿಟ್ಟು ತಮ್ಮ ಪಾದಸೇವೆ ಮಾಡಿಕೊಂಡಿರಲು ಅನುಮತಿ ಕೊಡಿ."

ಬಾಬಾ ನಕ್ಕರು. ಮತ್ತೆ ತಲೆಯಲ್ಲಾಡಿಸುತ್ತ ಹೇಳಿದರು: "ಮಗು, ಮನೆಗೆ ಹಿಂದಿರುಗು. ಈ ಹಾದಿ ತುಂಬ ದುರ್ಗಮವಾದುದು."

ಶರತ್ ದೀನ ಸ್ವರದಲ್ಲಿ ಹೇಳಿದ: "ಬಾಬಾ, ಅನೇಕ ಪಾಪಿಗಳು ತಮ್ಮಂಥ ಸಂತರ ಪಾದಸೇವೆ ಮಾಡಿ ಮುಕ್ತಿಯನ್ನು ಪಡೆದಿದ್ದಾರೆ. ತಮ್ಮ ಪಾದಗಳ ಬಳಿ ಬಂದು ಬಿದ್ದ ಮೇಲೂ ನನಗೆ ಮುಕ್ತಿ ದೊರೆಯಲಾರದೇನು ?"

ಬಾಬಾ ಪ್ರಸನ್ನರಾದರು. "ನೀನು ನಿಜ ಹೇಳುತ್ತಿದ್ದೀಯೆ. ಒಳ್ಳೆಯದು ಮಗು. ಭಗವಂತನ ಇಚ್ಛೆ ಇದೇ ಆಗಿದ್ದರೆ ನೀನು ಇಲ್ಲಿಯೇ ಇರು."

ಶರತ್‌ಗೆ ಆ ತಂಡದಲ್ಲಿ ಶರಣು ದೊರೆಯಿತು. ಗಾಂಜಾ ಮೊದಲಾದುವನ್ನು ಸಿದ್ಧಪಡಿಸುವುದರಲ್ಲಿ ಅವನು ನಿಪುಣನಾಗಿಯೇ ಇದ್ದ. ಬಾಬಾನನ್ನು ಮೆಚ್ಚಿಸುವುದಕ್ಕೆ ಹೆಚ್ಚು ಹೊತ್ತೇನೂ ಹಿಡಿಯಲಿಲ್ಲ. ಬಹುಬೇಗ ಅವನಿಗೆ ದೀಕ್ಷೆಯನ್ನು ಕೊಡಲಾಯಿತು ಹಾಗೂ ನಿಯಮಾನುಗುಣವಾಗಿ ಕಾವಿಬಟ್ಟೆ ಮತ್ತು ರುದ್ರಾಕ್ಷಿ ಮಾಲೆಯನ್ನು ಕೊಟ್ಟು ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು.

ಅನೇಕ ದಿನಗಳವರೆಗೆ ಇದೇ ರೀತಿ ಶಿಷ್ಯತ್ವವನ್ನು ಪಾಲಿಸಿಕೊಂಡು ಅವನು ಅವರ ಜೊತೆ ಅಲೆದಾಡುತ್ತ ಇದ್ದುಬಿಟ್ಟ. ಆದರೆ, ಒಂದೇ ಕಡೆ ಬಹಳ ದಿನಗಳವರೆಗೆ ಇರುವುದು ಅವನ ಸ್ವಭಾವವೇ ಆಗಿರಲಿಲ್ಲ. ಒಂದು ದಿನ ಅವನು ಅವರಿಂದ ತಪ್ಪಿಸಿಕೊಂಡು ಬಿಟ್ಟ. ಆಗಲೇ ಒಂದು ಶ್ರದ್ಧಾವಂತ ಕುಟುಂಬದ ಪರಿಚಯ ಅವನಿಗಾಯಿತು. ಆ ದಿನಗಳಲ್ಲಿ ಆ ಪ್ರದೇಶದಲ್ಲಿ ಸಿಡುಬಿನ ರೋಗ ತುಂಬ ಹರಡಿಕೊಂಡಿತ್ತು. ಆ ಕುಟುಂಬವೂ ಇದರ ಆಕ್ರಮಣದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ತನ್ನ ಸ್ವಭಾವಕ್ಕನುಗುಣವಾಗಿ ಶರತ್ ತನುಮನಗಳಿಂದ ಅವರ ಸೇವೆ ಮಾಡತೊಡಗಿದ. ನಿಧಾನವಾಗಿ ರೋಗದ ತೀಕ್ಷ್ಣತೆ ಕಡಿಮೆಯಾಗಿ ಅವರೆಲ್ಲರೂ ಆರೋಗ್ಯವಂತರಾದರು. ಹೀಗಾಗಿ, ಅವನ ಬಗೆಗಿನ ಅವರ ಕೃತಜ್ಞತೆಗೆ ಮೇರೆಯೇ ಇರಲಿಲ್ಲ. ತಮ್ಮೊಡನೆ ಬರಬೇಕೆಂದು ಅವರು ಅವನನ್ನು ಆಹ್ವಾನಿಸಿದರು.

ಅವರು ಮುಂದಕ್ಕೆ ಪ್ರಯಾಣ ಮಾಡುವ ಸಿದ್ಧತೆ ನಡೆಸುತ್ತಿದ್ದರೆ ಇತ್ತ ಇದ್ದಕ್ಕಿದ್ದಂತೆಯೇ ಶರತ್‌ಗೆ ಜ್ವರ ಬಂದುಬಿಟ್ಟಿತು. ಆಗ ಎಂದೂ ಅವನ ಪರಿಚಯವೇ ಆಗಿರಲಿಲ್ಲವೇನೋ ಎಂಬಂತೆ ಆ ಕುಟುಂಬದವರು ಅವನನ್ನು ಹಾಗೆಯೇ ಬಿಟ್ಟು ಹೊರಟುಹೋದರು. ಶರತ್ ಕಣ್ತೆರೆದಾಗ ಅಲ್ಲಿ ಯಾರೂ ಇರಲಿಲ್ಲ. ಆ ಸ್ಥಿತಿಯಲ್ಲಿ ಅವನು ಸ್ವತಃ ಸ್ಟೇಷನ್ನಿನತ್ತ ಹೆಜ್ಜೆ ಹಾಕಿದ. ದಾರಿಯಲ್ಲಿ ವೃದ್ಧ ಬಿಹಾರಿಯೊಬ್ಬ ಅವನ ಬಗ್ಗೆ ದಯೆ ತೋರಿ ಅವನನ್ನು ತನ್ನ ಗಾಡಿಯಲ್ಲಿ ಕೂಡಿಸಿಕೊಂಡು, ಅವನನ್ನು

ಸ್ಟೇಷನ್ನಿನವರೆಗೂ ಕರೆದುಕೊಂಡು ಬಂದುಬಿಟ್ಟ.

ಎಷ್ಟು ದಿನಗಳವರೆಗೆ ಅವನು ಅಲ್ಲಿಯೇ ಮಲಗಿದ್ದ. ಯಾವಾಗ ಅವನ ಆರೋಗ್ಯ ಎಂದಿನಂತಾಯಿತು - ಇದೆಲ್ಲ ಯಾರಿಗೂ ಗೊತ್ತಿಲ್ಲ. ಒಬ್ಬ ಬಡ ಬಂಗಾಳಿ ಹುಡುಗ ಹರಿದುಹೋಗಿದ್ದ ತನ್ನ ಹಾಸಿಗೆಯನ್ನು ತಂದು ಅವನಿಗೆ ಹಾಸಿಕೊಟ್ಟು ಹೋಗಿದ್ದ. ಆಗಾಗ್ಗೆ ಬಂದು ಬಿಸಿ ಬಿಸಿ ಹಾಲನ್ನು ಕುಡಿಸುತ್ತಿದ್ದ ಹಾಗೂ "ಹೆದರಬೇಕಾದ ಅಗತ್ಯವೇನೂ ಇಲ್ಲ. ಬೇಗ ಗುಣಮುಖನಾಗುತ್ತೀಯೆ. ಮನೆಯ ವಿಳಾಸ ತಿಳಿಸಿದರೆ ನಾನು ಅವರಿಗೆ ತಂತಿಯನ್ನು ಕಳಿಸಬಲ್ಲೆ" ಎಂದು ಹೇಳಿದ್ದ ಎಂಬುದಷ್ಟೇ ಅವನಿಗೆ ನೆನಪಿದ್ದುದು.

ಆದರೆ ಅವನು ಯಾರಿಗೂ ಏನನ್ನೂ ಹೇಳಲಿಲ್ಲ. ಆರೋಗ್ಯ ಸುಧಾರಿಸುವವರೆಗೆ ಅಲ್ಲಿಯೇ ಬಿದ್ದಿದ್ದ. ಆ ಹುಡುಗ ಹಾಗೂ ಆ ನಿಲ್ದಾಣದಲ್ಲಿದ್ದ ಇತರ ವ್ಯಕ್ತಿಗಳು ಒಂದೇ ಸಮನೆ ಅವನ ಆರೈಕೆ ಮಾಡಿದರು. ನಡೆದಾಡುವಷ್ಟು ಶಕ್ತಿ ಬಂದಕೂಡಲೇ ಅವನು ಮಜಫರ್‌ಪುರಕ್ಕೆ ಹೊರಟು ಬಂದ. ಅಲ್ಲಿ ಒಂದು ಛತ್ರದಲ್ಲಿ ತಂಗಿದ್ದ. ಈಗಲೂ ಅವನು ಸನ್ಯಾಸಿಯ ವೇಷದಲ್ಲಿಯೇ ಇದ್ದ. ಈ ವೇಷದಲ್ಲಿ ಭಿಕ್ಷೆ ದೊರೆಯುವ ಸೌಲಭ್ಯವಿರುತ್ತದೆಯಲ್ಲವೆ!

ಒಂದು ದಿನ ಬಂಗಾಳಿಗಳ ಕ್ಲಬ್ ಒಂದಕ್ಕೆ ಹೋಗಿ ಶುದ್ಧ ಹಿಂದಿಯಲ್ಲಿ ಒಬ್ಬ ವ್ಯಕ್ತಿಯೊಂದಿಗೆ ಹೀಗೆ ಹೇಳಿದ: "ನನಗೆ ಒಂದು ಅಂಚೆಯ ಕಾರ್ಡು ಮತ್ತು ಲೇಖನಿ ಬೇಕಾಗಿದೆ. ನಾನು ಕಾಗದ ಬರೆಯಬೇಕೆಂದಿದ್ದೇನೆ."

ಆ ವಸ್ತುಗಳು ದೊರೆತ ಕೂಡಲೇ ಅಲ್ಲಿಯೇ ಒಂದು ಮೂಲೆಯಲ್ಲಿ ಕುಳಿತು ಕಾಗದ ಬರೆಯತೊಡಗಿದ. ಅಕ್ಕಪಕ್ಕದಲ್ಲಿ ಮಕ್ಕಳು ಸುತ್ತಾಡುತ್ತಿದ್ದರು. ಸನ್ಯಾಸಿಯೊಬ್ಬ ಕಾಗದ ಬರೆಯುತ್ತಿದ್ದುದನ್ನು ಕಂಡು ಅವರು ಕುತೂಹಲದಿಂದ ಇಣುಕಿ ನೋಡತೊಡಗಿದರು. ಅವನು ಸುಂದರವಾದ ಬಂಗಾಳಿ ಅಕ್ಷರಗಳಲ್ಲಿ ಕಾಗದ ಬರೆಯುತ್ತಿದ್ದುದನ್ನು ನೋಡಿದರು.

ಕಿವಿಯಿಂದ ಕಿವಿಗೆ ಸಂಚರಿಸುತ್ತ ಈ ಸುದ್ದಿ ಸದಸ್ಯರವರೆಗೂ ತಲುಪಿತು. ಅವರಿಗೂ ಆ ಸನ್ಯಾಸಿಯ ಬಗ್ಗೆ ತುಂಬ ಕುತೂಹಲ ಉಂಟಾಯಿತು. ಪ್ರಮಥನಾಥ ಭಟ್ಟನೆಂಬ ಯುವಕ ಅವನ ಬಳಿಗೆ ಬಂದು ಬಂಗಾಳಿಯಲ್ಲಿ ಕೇಳಿದ: "ನೀವು ಯಾರು ? ಎಲ್ಲಿಂದ ಬರುತ್ತಿದ್ದೀರಿ ?"

ಶರತ್ ಮುಗುಳ್ನಗುತ್ತ ಉತ್ತರಿಸಿದ: "ನಾನೊಬ್ಬ ಬಿಹಾರಿ. ಅಲ್ಲಿ-ಇಲ್ಲಿ ಸಂಚಾರಮಾಡುತ್ತ ಜೀವನಯಾಪನೆ ಮಾಡುತ್ತಿದ್ದೇನೆ."

ಆ ಮುಗುಳ್ನಗೆಯೇ ರಹಸ್ಯವನ್ನು ಬಹಿರಂಗಪಡಿಸಿತು. ಪ್ರಮಥನಾಥ ಹೇಳಿದ: "ಇರಲಿ ಬಿಡಿ. ನೀವು ಬಿಹಾರಿಗಳಲ್ಲ, ಬಂಗಾಳಿಗಳು. ಈಗ ಈ ಹಿಟ್ಟು ತಿನ್ನುವವರ ಭಾಷೆಯನ್ನು ಬಿಟ್ಟು ನಿಮ್ಮ ಮಾತೃಭಾಷೆಯಲ್ಲಿ ಮಾತನಾಡಿ."

ಇದಾದ ಮೇಲೆ ಸಾಧುವಿನ ಆ ವೇಷ ಎಲ್ಲಿ ಹೋಯಿತೋ ಏನೋ. ಆದರೆ ಈಗಲೂ ಅಪರಿಚಿತರೊಂದಿಗೆ 'ನಾನೊಬ್ಬ ಬಿಹಾರಿ' ಎಂದು ಹೇಳಿಕೊಂಡು ತನ್ನನ್ನು ಪರಿಚಯಿಸಿಕೊಳ್ಳುತ್ತಿದ್ದ ಹಾಗೂ ಛತ್ರದಲ್ಲಿಯೇ ವಾಸಿಸುತ್ತಿದ್ದ. ಒಮ್ಮೆ ಭಾವಣೆಯ ಮೇಲೆ ಕುಳಿತು ತನ್ಮಯನಾಗಿ ಹಾಡಿಕೊಳ್ಳುತ್ತಿದ್ದ. ಅದೇ ಹೊತ್ತಿಗೆ ನಿಶಾನಾಥ

ಬಂದೋಪಾಧ್ಯಾಯನೆಂಬ ಒಬ್ಬ ಯುವಕ ಆ ಮಾರ್ಗವಾಗಿ ಹೋಗುತ್ತಿದ್ದ. ಸಂಗೀತದ ಮಧುರ ಧ್ವನಿಯನ್ನು ಕೇಳಿ ಅವನು ಬೆರಗಾಗಿ ನಿಂತ. ಅವರ ಕುಟುಂಬಕ್ಕೆ ಸಂಗೀತದಲ್ಲಿ ತುಂಬ ಆಸಕ್ತಿ ಇತ್ತು. ಪ್ರತಿದಿನವೂ ಒಬ್ಬನಲ್ಲ ಒಬ್ಬ ಹಾಡುಗಾರ ಅವರಲ್ಲಿಗೆ ಬಂದು ಕಛೇರಿ ನಡೆಸುತ್ತಿದ್ದ. ಅವನು ಕೂಡಲೇ ಶರತ್‌ನ ಬಳಿಗೆ ಬಂದು ಹೇಳಿದ: "ನೀವು ತುಂಬ ಚೆನ್ನಾಗಿ ಹಾಡುತ್ತೀರಿ. ನೀವು ಎಲ್ಲಿಯವರು ?"

ಶರತ್ ಉತ್ತರಿಸಿದ: "ನಾನು ಭಾಗಲಪುರದವನು. ನನ್ನ ಹೆಸರು ಶರತ್-ಚಂದ್ರ."

ನಿಶಾನಾಥ್ ಹೇಳಿದ: "ಭಾಗಲಪುರವೆ! ಅಲ್ಲಿಯ ಭೂದೇವ ಮುಖರ್ಜಿಗಳ ಮೊಮ್ಮಗಳಾದ ಅನುರೂಪಾದೇವಿ ನನ್ನ ಅತ್ತಿಗೆ."

ಶರತ್ ಹೇಳಿದ: "ನನಗೆ ಅವರು ಗೊತ್ತು. ವಿಭೂತಿ ಭೂಷಣನ ಸೋದರಿ ನಿರುಪಮಾಳ ಗೆಳತಿ ಅವರು. ಸೌರೀಂದ್ರಮೋಹನ ನನ್ನ ಗೆಳೆಯ."

ಈಗಂತೂ ತುಂಬ ಒತ್ತಾಯದಿಂದ ನಿಶಾನಾಥ್ ಶರತ್‌ನನ್ನು ಮನೆಗೆ ಕರೆದುಕೊಂಡು ಹೋದ. ದೊಡ್ಡಣ್ಣ ಶಿಖರನಾಥರಿಗೆ ಹೇಳಿದ: "ಇವರು ಭಾಗಲಪುರದ ಶರತ್‌ಚಂದ್ರ ಎಂಬುವರು. ಇವರ ಕಂಠ ತುಂಬ ಮಧುರವಾಗಿದೆ."

ಶಿಖರನಾಥರು ನಕ್ಕು ಹೇಳಿದರು: "ಇವರು ಕಥೆಗಳನ್ನು ಬರೆಯುತ್ತಾರೆ. ನಿನ್ನ ಅತ್ತಿಗೆ ಇವರ ಬಗ್ಗೆ ನನಗೆ ತಿಳಿಸಿದ್ದಳು."

ಶರತ್ ಅಲ್ಲಿಯೇ ಇರತೊಡಗಿದ. ನಿತ್ಯವೂ ಸಂಗೀತ ಕಛೇರಿ ನಡೆಯುತ್ತಿತ್ತು. ಒಳ್ಳೆಯ ಒಬ್ಬ ಗಾಯಕನೆಂಬ ರೂಪದಲ್ಲಿ ಅವನ ಖ್ಯಾತಿ ಅಲ್ಲಿ ಹರಡಿತು. ಅನೇಕ ವರ್ಷಗಳ ಬಳಿಕ ಅವನ ಕಂಠ ಮಾಧುರ್ಯವನ್ನು ನೆನಪಿಸಿಕೊಂಡು ಶಿಖರನಾಥರು ಹೇಳುತ್ತಿದ್ದರು: "ಓಹ್, ಶರತ್ ಈ ಹಾಡನ್ನು ಹೇಗೆ ಹೇಳುತ್ತಿದ್ದ! ಅದಿನ್ನು ನನ್ನ ಕಿವಿಗಳಲ್ಲಿ ಮೊಳಗುತ್ತಿದೆ."

ಎರಡು ತಿಂಗಳು ಅದು ಹೇಗೆ ಬಂದು ಹೇಗೆ ಕಳೆದುಹೋಯಿತು ಎಂಬುದು ಯಾರಿಗೂ ಗೊತ್ತಾಗಲೇ ಇಲ್ಲ. ಅನಾಥನಂತೆ ಅವನು ಮುಜಫರ್‌ಪುರಕ್ಕೆ ಬಂದಿದ್ದ. ಆದರೆ ಈಗ ಅವನ ಸುತ್ತಲೂ ಮಿತ್ರರೇ ತುಂಬಿಕೊಂಡಿದ್ದರು. ಬಂಗಾಳಿಗಳ ಪರಿಚಯ ಮಾತ್ರವಲ್ಲದೆ ಮಹಾದೇವ ಸಾಹೂ ಎಂಬ ಬಿಹಾರಿ ನವಯುವಕ ನೊಂದಿಗೂ ಆಳವಾದ ಪರಿಚಯ ಬೆಳೆಯಿತು. ಈತ ಶ್ರೀಮಂತ ಜಮೀನುದಾರ ನಾಗಿದ್ದ. ಬಂಗಾಳಿ ಓದಿ-ಬರೆಯುವುದನ್ನು ಹಾಗೂ ಅವರಂತೆಯೇ ಉಡುಪು ಧರಿಸುವುದನ್ನು ಅವನು ಕಲಿತಿದ್ದ. ಶರತ್‌ನತ್ತ ಅವನು ಆಕರ್ಷಿತನಾದುದಕ್ಕೆ ಅನೇಕ ಕಾರಣಗಳಿದ್ದುವು: ಮಧುರವಾಗಿದ್ದ ಆ ಕಂಠ ಹಾಗೂ ಕಥೆ ಹೇಳುವ ಆ ಅದ್ಭುತ ಸಾಮರ್ಥ್ಯ. ಒಂದು ದಿವಸ ಅವನು ಹೇಳಿದ: "ನಾನು ರಾಣಾಘಾಟ್‌ನಲ್ಲಿ ಪೋಲೀಸರ ಕೈಗೆ ಸಿಕ್ಕುಬಿದ್ದಿದ್ದ ಅವಿವಾಹಿತ ಕನ್ಯೆಯೊಬ್ಬಳನ್ನು ರಕ್ಷಿಸಿದೆ."

ಸಾಹುವಿನ ಗೆಳೆಯನೊಬ್ಬ ಮುಗುಳ್ನಗುತ್ತ ಪ್ರಶ್ನಿಸಿದ: "ನಿಜವಾಗಿಯೂ!"

"ಖಂಡಿತವಾಗಿಯೂ ನಿಜ."

ಆದರೆ, ಆ ಗೆಳೆಯ ರಾಣಾಘಾಟಿಗೆ ಹೋಗಿ ಶರತ್‌ನ ಕಥೆಯ ಬಗ್ಗೆ ತನಿಖೆ ನಡೆಸಿದಾಗ, ಶರತ್ ಹೇಳಿದ್ದುದೆಲ್ಲ ಸಂಪೂರ್ಣವಾಗಿ ಕಪೋಲ ಕಲ್ಪಿತವಾದುದು ಎಂಬುದು ಗೊತ್ತಾಯಿತು. ಅದು ಹೇಗಾದರೂ ಇರಲಿ, ಆ ಕಥೆಗಳನ್ನು ಕೇಳಿ

ಶ್ರೋತೃಗಳು ಗದ್ಗದಿತರಾಗುತ್ತಿದ್ದರು. ಅವು ಅವರಲ್ಲಿ ಕುತೂಹಲವನ್ನುಂಟು ಮಾಡುತ್ತಿದ್ದುದು ಮಾತ್ರವಲ್ಲ, ಸಾಕಷ್ಟು ನಗಿಸುತ್ತಲೂ ಇದ್ದುವು. ಅದೆಷ್ಟು ಸಹಜಭಾವದಿಂದ ಅವನು ಅವರನ್ನು ನಗಿಸಬಲ್ಲವನಾಗಿದ್ದನೋ ಅಷ್ಟೇ ಸಹಜ ಭಾವದಿಂದ ಅಸಹಾಯಕರಾದ ರೋಗಿಗಳ ಶುಶ್ರೂಷೆಯನ್ನು ಮೃತ ವ್ಯಕ್ತಿಗಳ ಅಂತಿಮ ಸಂಸ್ಕಾರದಂಥ ಕಠಿಣ ಕಾರ್ಯಗಳನ್ನು ಅವನು ನಡೆಸಬಲ್ಲವನಾಗಿದ್ದ.

ಕೆಲವೇ ದಿನಗಳಲ್ಲಿ ಸಾಹೂ ಮತ್ತು ಆತ ಅದೆಷ್ಟರ ಮಟ್ಟಿಗೆ ಒಂದಾಗಿಬಿಟ್ಟರೆಂದರೆ ಮದ್ಯಪಾನ ಹಾಗೂ ವೇಶ್ಯಾ ಸಹಚರ್ಯದಲ್ಲೂ ಅವರು ಪರಸ್ಪರ ಜೊತೆಗೂಡತೊಡಗಿದರು. ಜೊತೆಜೊತೆಯಾಗಿಯೇ ಭೇಟಿಯಾಡುತ್ತಿದ್ದರು. ಅಲಿಫ್‌ಲೈಲಾ ಕಥೆಯಲ್ಲಿನ ಅಬೂಹಸನ್‌ನಂತೆ ಯಾವಾಗಲೂ ಸಾಹೂವಿನ ಸುತ್ತ ಗೆಳೆಯರ ಗುಂಪು ಇದ್ದೇ ಇರುತ್ತಿತ್ತು. ಅವನು ಬಿಲಿಯರ್ಡ್ಸ್ ಅನ್ನೂ ಚೆನ್ನಾಗಿ ಆಡುತ್ತಿದ್ದ. ಆದರೆ ಶರತ್ ಈ ಕಲೆಯಲ್ಲಿ ಅನಭಿಜ್ಞನಾಗಿಯೇ ಉಳಿದ. ಸೌಲಭ್ಯ ದೊರೆತಿದ್ದರಿಂದ ಕುಡಿಯುವ ಖಯಾಲಿ ಸ್ವಲ್ಪ ಹೆಚ್ಚಿತೆಂದೇ ಹೇಳಬೇಕು. ಆದರೆ, ಮೈಮೇಲೆ ಎಚ್ಚರವಿಲ್ಲದಂಥ ಸ್ಥಿತಿಯಲ್ಲಿ ಎಂದು ಯಾರೂ ಅವನನ್ನು ಕಂಡಿರಲಿಲ್ಲ. ಬದಲಾಗಿ ಆಗ ಕೊಳಲಿನ ನಾದ ಮತ್ತಷ್ಟು ಮಾದಕವಾಗಿ ಪರಿಣಮಿಸುತ್ತಿತ್ತು. ಶ್ರೋತೃಗಳು ಮುಗ್ಧರಾಗಿ ಅದನ್ನು ಕೇಳುತ್ತಿದ್ದರು.

ಸಾಹುವೂ ಈ ವೇಣುವಾದನವನ್ನೇ ಕೇಳುತ್ತಿದ್ದ. ಬೇಟೆ, ಮದ್ಯ ಮತ್ತು ವೇಶ್ಯೆಯರಿಗಾಗಿ ಅವನು ಹಣವನ್ನು ನೀರಿನಂತೆ ಚೆಲ್ಲುತ್ತಿದ್ದ. ಅವನ ಬಂಧುಗಳು ಇದರಿಂದ ತುಂಬ ಚಿಂತಿತರಾದರು. "ಭಾಗಲಪುರದಿಂದ ಬಂದ ಶರತ್‌ನೆಂಬ ಬಂಗಾಳಿ ಯುವಕ ಸಾಹುವನ್ನು ಕೆಟ್ಟ ದಾರಿಗೆ ಎಳೆದಿದ್ದಾನೆ" ಎಂದು ಅವರೆಲ್ಲ ಹೇಳತೊಡಗಿದರು.

ಮತ್ತೊಂದು ಗುಂಪು ಹಿಂದೆ ಬೀಳುವುದಾದರೂ ಹೇಗೆ ಸಾಧ್ಯ? "ಸಾಹೂ ಶರತ್‌ನನ್ನು ಹಾಳು ಮಾಡಿಬಿಟ್ಟ" ಎಂದು ಅವರು ಹೇಳುತ್ತಿದ್ದರು.

ಪರಸ್ಪರ ದೋಷಾರೋಪಣೆಯ ಈ ಏಟು-ಎದಿರೇಟುಗಳ ವಿಚಾರ ಈ ಇಬ್ಬರು ಗೆಳೆಯರಿಗೆ ಗೊತ್ತಿರಲಿಲ್ಲವೆಂದೇನೂ ಅಲ್ಲ. ಆದರೆ ಅವರೆಂದೂ ಇದರಿಂದಾಗಿ ತಮ್ಮ ತಲೆ ಕೆಡಿಸಿಕೊಳ್ಳಲಿಲ್ಲ. ಇಬ್ಬರೂ ಮನಸ್ಸಿನಲ್ಲಿಯೇ ನಕ್ಕುಬಿಡುತ್ತಿದ್ದರು. ಏಕೆಂದರೆ, ತಾವು ಪರಸ್ಪರ ಭೇಟಿಯಾಗುವ ಮೊದಲೇ ಇವೆಲ್ಲವನ್ನು ಕಲಿತಿದ್ದೆವೆಂಬುದು ಅವರಿಬ್ಬರಿಗೂ ಗೊತ್ತಿತ್ತು. ಶರತ್‌ಗೆ ಈಗ ಹಣದ ಸೌಲಭ್ಯ ದೊರೆತಿತ್ತು. ಸಾಹೂಗೆ ಮನಸ್ಸು ಬಯಸಿದಂಥ ಗೆಳೆಯ ಈಗ ದೊರೆತಿದ್ದ. ಅವನು ಶರತ್‌ನನ್ನು ತನ್ನ ಆದರ್ಶವೆಂದು ಭಾವಿಸುತ್ತಿದ್ದ. ಶರತ್‌ಗೆ ದೇವರ ವಿಚಾರದಲ್ಲಿ ನಂಬಿಕೆ ಇರಲಿಲ್ಲ. "ಶರತ್ ಹೇಳುತ್ತಾನೆ 'ದೇವರಿಲ್ಲ ಎಂದು'. ಆದ್ದರಿಂದ ನಿಜವಾಗಿಯೂ ದೇವರಿಲ್ಲ. ದೇವರಿಲ್ಲ ಎಂಬುದನ್ನು ನಾನೂ ಒಪ್ಪುತ್ತೇನೆ" ಎಂದು ಸಾಹುವೂ ಹೇಳತೊಡಗಿದ.

ಇದುವರೆಗೂ ಅವನು ಶಿಖರನಾಥರ ಮನೆಯಲ್ಲಿ ವಾಸಮಾಡುತ್ತಿದ್ದ. ಆದರೆ ಸಾಹುವಿನ ಜೊತೆ ಕಛೇರಿಗಳು ನಡೆಯತೊಡಗಿದ ಮೇಲೆ ರಾತ್ರಿಯ ಹೊತ್ತು ಹಿಂದಿರುಗುವುದೂ ತಡವಾಗತೊಡಗಿತು. ಮನೆಯ ಒಡತಿ ಅವನನ್ನು ಮಗನೆಂಬಂತೆ ಪ್ರೀತಿಸುತ್ತಿದ್ದಳು. ಆಕೆ ಬಹಳ ಹೊತ್ತಿನವರೆಗೂ ಅವನ ದಾರಿ

ಕಾಯುತ್ತ ಕುಳಿತಿರುತ್ತಿದ್ದಳು. ಆದರೆ ಇತ್ತೀಚೆಗೆ ಶರತ್‌ಗೆ ಆಗಾಗ್ಗೆ ಮೈಮೇಲೆ ಎಚ್ಚರವೇ ಇರುವಂತಿರುವುದಿಲ್ಲವೆಂದು ಆಕೆಗೆ ಅನ್ನಿಸತೊಡಗಿತು. ಅವನ ಬಾಯಿಂದ ದುರ್ವಾಸನೆ ಬರುತ್ತಿರುವಂತೆಯೂ ಆಕೆಗೆ ತೋರುತ್ತಿತ್ತು. ಅವಳು ಶಿಖರನಾಥನ ಬಳಿ ದೂರಿದಳು: "ಶರತ್ ರಾತ್ರಿ ಅಷ್ಟುಹೊತ್ತಿನಲ್ಲಿ ಹೀಗೆ ಮನೆಗೆ ಬರುವುದು ನನಗೆ ಹಿಡಿಸುವುದಿಲ್ಲ."

ಶಿಖರನಾಥರು ಅಂದೇ ಶರತ್‌ನೊಂದಿಗೆ ಹೇಳಿದರು: "ಶರತ್, ನೀನು ಹೀಗೆ ತಡವಾಗಿ ಬರುವುದು ಹಾಗೂ ಹೆಂಡ ಕುಡಿಯುವುದು ಈ ಮನೆಯ ಜನರಿಗೆ ಹಿಡಿಸುತ್ತಿಲ್ಲ. ಈ ವಿಷಯಗಳಲ್ಲಿ ನೀನು ಎಚ್ಚರದಿಂದಿರಬೇಕು."

ಆ ಕುಟುಂಬ ಸಂಗೀತ ಪ್ರೇಮಿಗಳ ಕುಟುಂಬವಾಗಿತ್ತಾದರೂ ಅವರೆಲ್ಲ ಧರ್ಮ ಪರಾಯಣರಾಗಿದ್ದರು. ಶರತ್‌ಗೆ ತನ್ನ ತಪ್ಪು ಅರಿವಾಯಿತು. ಅವನು ಮತ್ತೆ ಅಲ್ಲಿಗೆ ಹಿಂದಿರುಗಲಿಲ್ಲ. ಒಂದು ಭೋಜನಶಾಲೆಯಲ್ಲಿ ಹೋಗಿ ಇರತೊಡಗಿದ. ಆದರೆ, ಅವನ ಬಳಿ ದುಡ್ಡೆಲ್ಲಿ ಬರಬೇಕು ? ಕೊನೆಗೆ ಅವನು ಮಹಾದೇವ್ ಸಾಹೂ ಬಳಿಗೇ ಹೋದ. ಊಟ ತಿಂಡಿ, ಮಲಗುವುದು - ಏಳುವುದು, ನಿಲ್ಲುವುದು - ಕೂಡುವುದು - ಎಲ್ಲವೂ ಸಾಹೂವಿನ ಜೊತೆಯಲ್ಲೇ ನಡೆಯತೊಡಗಿದುವು.

ಪ್ರೇಮದ ವೇದನೆ ಇನ್ನೂ ಶರತ್‌ನನ್ನು ಕಾಡುತ್ತಲೇ ಇತ್ತು. ಅವನ ಪ್ರೇಯಸಿ ನೀರದಾ ಅವನ ಬಗ್ಗೆ ಕೋಪಿಸಿಕೊಂಡು ಭಾಗಲಪುರದಿಂದ ಓಡಿಬಂದಿದ್ದಳು. ಆಬಕಾರಿ ಇಲಾಖೆಗೆ ಸೇರಿದ ಯಾರೋ ಒಬ್ಬ ಮೇಲ್ವಿಚಾರಕನ ಮನೆಯಲ್ಲಿ ಅವಳು ಇದ್ದಾಳೆ ಎಂದು ಅವನು ಕೇಳಿದ್ದ. ಆದ್ದರಿಂದಲೇ ಅವನು ಮುಜಫರ್‌ಪುರಕ್ಕೆ ಬಂದಿದ್ದ. ಒಂದು ದಿವಸ ಅವನು ಅವಳನ್ನು ಪತ್ತೆ ಹಚ್ಚಿಯೇ ಬಿಟ್ಟ. ಆದರೆ ನೀರದಾ ಅವನತ್ತ ಕಣ್ಣೆತ್ತಿಯೂ ನೋಡಲಿಲ್ಲ.

ಪ್ರೇಮ ಕುರುಡಾಗಿರುತ್ತದೆ. ನೀರದಾ ತನ್ನನ್ನು ಪ್ರೀತಿಸುತ್ತಾಳೆ ಎಂಬ ನಂಬಿಕೆ ಇನ್ನೂ ಅವನ ಮನಸ್ಸಿನಲ್ಲಿತ್ತು. ಅವನು ಅವಳ ಬೆನ್ನು ಹತ್ತುತ್ತಲೇ ಇದ್ದ. ಈ ಕಾಟವನ್ನು ತಾಳಲಾರದೆ ಒಂದು ದಿನ ನೀರದಾ ಈ ಬಗ್ಗೆ ತನ್ನ ಗಂಡನಿಗೆ ದೂರು ಕೊಟ್ಟಳು. ಆ ಮೇಲ್ವಿಚಾರಕ ಅಂದೇ ಶರತ್‌ನನ್ನು ಹಿಡಿದು ಚೆನ್ನಾಗಿ ಬಡಿದ. ಎಷ್ಟರಮಟ್ಟಿಗೆ ಬಡಿದನೆಂದರೆ ಬಹಳ ಹೊತ್ತಿನವರೆಗೆ ಅವನಿಗೆ ಪ್ರಜ್ಞೆಯೇ ಇರಲಿಲ್ಲ. ಇದಾದ ಮೇಲಾದರೂ ಅವನ ಭ್ರಮೆ ದೂರವಾಯಿತೋ ಇಲ್ಲವೋ ತಿಳಿಯದು. ಅಥವಾ ಇಡೀ ಕಥೆಯೇ ಒಂದು ಭ್ರಮೆಯೋ ? ಆದರೆ, ಮುಜಫರ್‌ಪುರದಲ್ಲಿದ್ದಾಗ ಅವನಿಗೆ ಹೆಣ್ಣುಗಳ ಸಹವಾಸದ ಕೊರತೆಯೇನೂ ಇರಲಿಲ್ಲವೆಂಬುದು ನಿಜ. ಪೂಂಟೀ ಎಂಬ ಸುಂದರ ವೇಶ್ಯೆಯನ್ನು ಕರೆಸಿ ಸಾಹೂ ಪ್ರತಿದಿನವೂ ನೃತ್ಯ-ಸಂಗೀತ ಗೋಷ್ಠಿಯನ್ನು ಏರ್ಪಡಿಸುತ್ತಿದ್ದ. ಮಿತ್ರರಿಬ್ಬರೂ ಇದರಲ್ಲಿ ಮುಕ್ತರೂಪದಲ್ಲಿ ಭಾಗವಹಿಸುತ್ತಿದ್ದರು.

ಈ ಕಾಲದಲ್ಲಿಯೇ ರಾಜಬಾಲಾ ಎಂಬ ಅತ್ಯಂತ ಸುಂದರ ತರುಣಿಯ ಪರಿಚಯವೂ ಶರತ್‌ಗೆ ಆಯಿತು. ಅವಳ ಬಾಳಿನ ಕಥೆ ತುಂಬ ರೋಮಾಂಚಕವಾಗಿತ್ತು. ಅವಳ ತಂದೆ ವಿಧುಭೂಷಣ ಬಾಬೂ ವಕೀಲರಾಗಿದ್ದರು. ಮನೆ ಬಿಟ್ಟು ಓಡಿ ಬಂದಿದ್ದ ಬಂಗಾಳಿ ವಧು ಒಬ್ಬಳಿಗೆ ಅವರು ಆಶ್ರಯ ನೀಡಿದ್ದರು.

ಕೆಲವು ದಿನಗಳ ಬಳಿಕ ಅವಳ ಪ್ರೇಮಿ ಅವಳನ್ನು ತ್ಯಜಿಸಿ ಹೊರಟುಹೋದ. ಅಸಹಾಯಕಳಾಗಿದ್ದ ಆ ಹೆಣ್ಣು ಆಗಿನಿಂದಲೂ ಅವರ ಬಳಿಯೇ ಇರತೊಡಗಿದ್ದಳು. ಕೊನೆಗೆ ಅವರು ಅವಳನ್ನು ಮದುವೆಯೂ ಆದರು. ಅವಳಲ್ಲಿ ಅವರು ಇಬ್ಬರು ಗಂಡುಮಕ್ಕಳನ್ನು, ನಾಲ್ವರು ಹೆಣ್ಣು ಮಕ್ಕಳನ್ನು ಪಡೆದರು. ಹೆಣ್ಣು ಮಕ್ಕಳು ಒಬ್ಬರಿಗಿಂತ ಒಬ್ಬರು ಹೆಚ್ಚು ಸುಂದರಿಯರಾಗಿದ್ದರು. ರಾಜಬಾಲಾ ಎಲ್ಲರಿಗಿಂತಲೂ ಹೆಚ್ಚು ಸುಂದರಿಯಾಗಿದ್ದಳು. ಅವಳು ಯೌವನದಲ್ಲಿ ಕಾಲಿರಿಸುತ್ತ ಬಂದಂತೆ ಅವಳ ಸೌಂದರ್ಯದ ಕಥೆ ನಗರದಲ್ಲಿ ಹರಡಿಕೊಳ್ಳತೊಡಗಿತು. ಗೌರವರ್ಣ, ಕಡೆದಿಟ್ಟಂಥ ಅಂಗಾಂಗಗಳು, ತೀಕ್ಷ್ಣ ದೃಷ್ಟಿ, ಮಾದಕ ಸ್ವಭಾವ-ಯುವಕರ ಸಹವಾಸ ಅವಳಿಗೆ ತುಂಬ ಪ್ರಿಯವಾಗಿತ್ತು. ವಿವಾಹಿತೆಯಾಗಿದ್ದರೂ ಅವಳು ನಗರದ ರಸಿಕ ಯುವಕರ ಹೃದಯವಲ್ಲಭೆಯಾಗಿದ್ದಳು. ಹೀಗಿರುವಾಗ ಶರತ್ ಮತ್ತು ಸಾಹೂ ಅವರ ಪರಿಚಯ ಅವಳಿಗೆ ಆಗದೆ ಇರಲು ಹೇಗೆ ಸಾಧ್ಯ? ಸಾಹುವಿನ ಬಳಿ ಎಲ್ಲ ಸಾಧನ ಸೌಲಭ್ಯಗಳೂ ಇದ್ದುವು. ಆದ್ದರಿಂದ ಅಲ್ಲಿಗೆ ಹೋಗಲು ಶರತ್‌ಗೆ ಯಾವ ಅಡ್ಡಿಯೂ ಇರಲಿಲ್ಲ. ಅವನು ಬಹಿರಂಗವಾಗಿಯೇ ರಾಜಬಾಲಾಳ ರೂಪಜಾಲದಲ್ಲಿ ಸಿಲುಕಿಕೊಂಡ.

ಮುಜಫರ್‌ಪುರದ ಈ ಜೀವನ ಎಲ್ಲ ದೃಷ್ಟಿಯಿಂದಲೂ ಬೊಹೇಮಿಯನ್ ಸ್ವರೂಪದ್ದಾಗಿತ್ತು. ಬೇಟೆ, ಮದ್ಯ ಮತ್ತು ವೇಶ್ಯೆ- ಈ ಎಲ್ಲ ಸೌಲಭ್ಯಗಳೂ ದೊರೆತ ಮೇಲೆ ಬೇರೇನು ತಾನೆ ಆಗಲು ಸಾಧ್ಯ? ಅವನು ಸುಂದರನೂ ಆಗಿರಲಿಲ್ಲ. ಆರೋಗ್ಯಶಾಲಿಯೂ ಆಗಿರಲಿಲ್ಲ. ಹಣವೂ ಅವನ ಬಳಿಯಲ್ಲಿರಲಿಲ್ಲ. ಆದರೇನು? ಯಾರನ್ನಾದರೂ ಎಲ್ಲರಿಗೂ ಬೇಕಾದಂಥವನನ್ನಾಗಿಸುವ ಆ ವಿಶಿಷ್ಟ ಗುಣಗಳು ಅವನಲ್ಲಿರಲಿಲ್ಲವೆ? ಹೆಣ್ಣುಗಳು ವಿಶೇಷವಾಗಿ ಅವನ ಮಾತಿನ ಬಲೆಯಲ್ಲಿ ಸಿಲುಕಿಕೊಂಡು ಅವನತ್ತ ಆಕರ್ಷಿತರಾಗಿ ಬಿಡುತ್ತಿದ್ದರು.

ಆದರೆ, ಈ ಚರಿತ್ರಹೀನತೆಯ ನಡುವೆಯೂ ನಿಸ್ಸಂಗಿ ಎಂಬಂತೆ ಮೇಲೆದ್ದು ಬರುವ ಶಕ್ತಿ ಅವನಲ್ಲಿ ಈಗಲೂ ಇತ್ತು. ಒಳಗೆ ಕುಳಿತಿದ್ದ ವಿರಾಗಿ ಶರತ್ ಅವನನ್ನು ದೂರದ ನಿರ್ಜನ ಸ್ಥಾನದತ್ತ ಎಳೆದೊಯ್ಯುತ್ತಿದ್ದ. ನದಿಯ ತೀರಕ್ಕೆ ಹೋಗಿ ಘಂಟೆಗಟ್ಟಲೆ ಅವನು ಒಂಟಿಯಾಗಿ ಕುಳಿತಿರುತ್ತಿದ್ದ. ಬರೆಯುತ್ತಲೂ ಕುಳಿತಿರುತ್ತಿದ್ದ. ಅದೆಷ್ಟು ಕೃತಿಗಳನ್ನು ಅವನಿಲ್ಲಿ ರಚಿಸಿದನೋ ಏನೋ. 'ಬ್ರಹ್ಮದೈತ್ಯ' ಎಂಬ ಇಡೀ ಒಂದು ಕಾದಂಬರಿ ಆದರಲ್ಲಿ ಸೇರಿತ್ತು.

ಅಪೂರ್ಣವಾಗಿದ್ದ 'ಚರಿತ್ರಹೀನ' ಕಾದಂಬರಿಯ ಹಸ್ತಪ್ರತಿಯೂ ಅವನ ಬಳಿ ಇತ್ತು. ಅದನ್ನು ನೋಡಿಯೇ ಪ್ರಮಥನಾಥ ಅವನ ಅತ್ಯಂತ ಹತ್ತಿರದ ಸ್ನೇಹಿತನಾದದ್ದು. ಈತ ವರ್ಧಮಾನ್ ಜಿಲ್ಲೆಯ ನಿವಾಸಿಯಾಗಿದ್ದ. ಇಲ್ಲಿ ಅವನ ಚಿಕ್ಕಪ್ಪನ ಬಳಿ ಇದ್ದುಕೊಂಡು ಓದು ಮುಗಿಸಿದ್ದ. ಈಗ ಅವರನ್ನು ನೋಡಿಕೊಂಡು ಹೋಗಲು ಬಂದಿದ್ದ. ಈ ಮೈತ್ರಿ ಮುಂದೆ ಅನೇಕ ರೂಪಗಳಲ್ಲಿ ಆದರ್ಶಪ್ರಾಯವೆಂದು ಸಿದ್ಧವಾಯಿತು.

ಗೆಳೆಯರನ್ನು ಮಾತ್ರವಲ್ಲದೆ, ಇಲ್ಲಿ ಅವನು ಇನ್ನೂ ಬಗೆಬಗೆಯಾದ ವ್ಯಕ್ತಿಗಳನ್ನು ಭೇಟಿಯಾಗುತ್ತಿದ್ದ. ವೇಶ್ಯೆಯರು, ಜಮೀನುದಾರರು, ಗುಮಾಸ್ತರು, ವಕೀಲರು,

ಸಂಗೀತ ಪ್ರೇಮಿಗಳು ಹಾಗೂ ಕೆಳಸ್ತರದ ವ್ಯಕ್ತಿಗಳೂ ಇದರಲ್ಲಿ ಸೇರಿದ್ದರು. ಅವನು ಅವರೆಲ್ಲರ ಬಗೆಗೂ ಚೆನ್ನಾಗಿ ಅಭ್ಯಾಸ ಮಾಡುತ್ತಿದ್ದ. ಅವರ ಮಾತುಕತೆಗಳನ್ನು ಗಮನವಿಟ್ಟುಕೇಳುತ್ತಿದ್ದ. ಇವುಗಳ ಆಧಾರದ ಮೇಲೆ ಏಕಾಂತದಲ್ಲಿ ಹೋಗಿ ಕುಳಿತು, ಬರವಣಿಗೆಯಲ್ಲಿ ತೊಡಗುತ್ತಿದ್ದ. ಆಗಾಗ್ಗೆ ಅವನು ವ್ಯಕ್ತಿಗಳ ರೇಖಾಚಿತ್ರಗಳನ್ನು ಬರೆದು, ಅದನ್ನು ಗೆಳೆಯರಿಗೆ ಓದಿಹೇಳುತ್ತಿದ್ದ. ಆ ರೇಖಾಚಿತ್ರಗಳಲ್ಲಿ ಮನೋವೈಜ್ಞಾನಿಕ ವಿಶ್ಲೇಷಣೆಯೂ ಇರುತ್ತಿತ್ತು. ಸಾಮಾನ್ಯ ವ್ಯಕ್ತಿಗೆ ಯಾವ ಬದುಕು ಅಗೌರವದ ಹಾಗೂ ಕಳಂಕದ ಕಾರಣವಾಗಿ ಪರಿಣಮಿಸಬಹುದೋ ಆ ಬದುಕೇ ಸಾಹಿತಿಗೆ ಮಹಾಶಕ್ತಿಯಾಗಿಯೂ ಪರಿಣಮಿಸಬಹುದು. ವಿಶ್ವಕವಿ ಹೀಗೆ ಬರೆದಿದ್ದಾರೆ:

ಜೀವನಮಂಥನದಲ್ಲಿ ಹೊರಬಂದಿತು ವಿಷ
ಅದನೊಬ್ಬನೆ ಕುಡಿದೆಯೋ ನೀನು
ಅಮೃತವೇನದು ಹೊರಬಂದಿತು
ಅದ ದಾನವ ನೀಡಿದೆ ಲೋಕಕೆ ನೀನು

## 18

ಈ ಜೀವನ ಅದು ಹೇಗೆ ಕೊನೆಗಾಣುತ್ತಿತ್ತೋ ಏನೋ. ಇದ್ದಕ್ಕಿದ್ದಂತೆ ಭಾಗಲಪುರದಿಂದ ತಂತಿಯೊಂದು ಬಂದಿತು. ಅದರಲ್ಲಿ ಹೀಗೆ ತಿಳಿಸಲಾಗಿತ್ತು. ನಿಮ್ಮ ತಂದೆ ತೀರಿಕೊಂಡರು. ಕೂಡಲೇ ಹೊರಟುಬಾ.

ಅವನು ಭಾಗಲಪುರವನ್ನು ಬಿಟ್ಟು ಬಂದಾಗ ಮನೆಯ ಸ್ಥಿತಿ ಚೆನ್ನಾಗಿರಲಿಲ್ಲ. ಅವನು ಅಲ್ಲಿಂದ ಬಂದುಬಿಟ್ಟ ಮೇಲೆ ಪರಿಸ್ಥಿತಿ ಮತ್ತಷ್ಟು ಕೆಟ್ಟಿತು. ಮೋತೀಲಾಲರು ಹುಚ್ಚರಂತೆ ಎಲ್ಲೆಲ್ಲೋ ಅಲೆದಾಡುತ್ತಿದ್ದರು. ಕಿತ್ತುಹೋದ ಚಪ್ಪಲಿ, ಕೆಸರು ಮೆತ್ತಿಕೊಂಡ ಮೈ, ತಲೆಯ ಮೇಲೆ ಬೆಳೆದು ನಿಂತ ಜಟೆ, ಹೊಟ್ಟೆಯಲ್ಲಿ ಅನ್ನವಿಲ್ಲ, ಕೈಯಲ್ಲಿ ಕಾಸಿಲ್ಲ. ಇಂಥ ಸ್ಥಿತಿಯಲ್ಲಿ ಕನಸುಗಾರನಾದ ವ್ಯಕ್ತಿ ಹುಚ್ಚನೇ ಆಗುತ್ತಾನೆ.

ಈ ದಿನಗಳಲ್ಲಿಯೇ ಅವರ ಚಿಕ್ಕಪ್ಪನ ನೆಂಟರಾದ ಅಘೋರನಾಥರು ಭಾಗಲಪುರಕ್ಕೆ ಬಂದಿದ್ದರು. ಇಬ್ಬರೂ ಸಹಪಾಠಿಗಳಾಗಿದ್ದವರು. ಅವರನ್ನು ಭೇಟಿಯಾಗಿ ಬರಲು ಮೋತೀಲಾಲರು ಮಾವನ ಮನೆಗೆಂದು ಹೊರಟರು. ಚೆನ್ನಾಗಿ ಹಿಮಸುರಿಯುತ್ತಿತ್ತು. ಮೈಮೇಲೆ ಬಟ್ಟೆಯೂ ಇರಲಿಲ್ಲ. ತಂದೆ ಮಕ್ಕಳ ವಿಷಯದಲ್ಲಿ ಅಘೋರನಾಥರಿಗೆ ಸ್ವಲ್ಪವೂ ಸಂತೋಷವಿರಲಿಲ್ಲ. ಆದರೂ ಬಾಲ್ಯದ ಗೆಳೆಯನ ಈ ಸ್ಥಿತಿಯನ್ನು ಕಂಡು ಅವರ ಮನಸ್ಸು ಕರಗಿತು. ಕೇಳಿದರು: "ಮೋತೀಲಾಲ್! ನೀನೇಕೆ ಈ ಮನೆ ಬಿಟ್ಟು ಹೊರಟೆ?"

"ಮನಸ್ಸಿಗೆ ಹಿಡಿಸುತ್ತಿರಲಿಲ್ಲ."

"ಇಷ್ಟೊಂದು ಚಳಿಯಾಗುತ್ತಿದೆ. ಬಟ್ಟೆಯನ್ನೇಕೆ ಹಾಕಿಕೊಂಡಿಲ್ಲ?"

"ಇದ್ದರೆ ತಾನೆ!"

"ಶರತ್ ಎಲ್ಲಿದ್ದಾನೆ?"

"ಜಗಳವಾಡಿಕೊಂಡು ಎಲ್ಲಿಗೋ ಓಡಿಹೋಗಿದ್ದಾನೆ."

"ಈಗೇನಾದರೂ ಕೆಲಸ-ಗಿಲಸ ಮಾಡುತ್ತಿದ್ದಾನೋ ?"

"ಇಲ್ಲ."

"ಹಾಗಾದರೆ ನಿನ್ನ ಕುಟುಂಬದ ಗತಿ ಏನು ?

ಮೋತೀಲಾಲ್ ಈ ಮಾತಿಗೆ ಉತ್ತರವನ್ನೇನೂ ಕೊಡಲಿಲ್ಲ. ಕಣ್ಣುಗಳು ತುಂಬಿ ಬಂದುವು. ಟಪಟಪನೆ ಕಣ್ಣೀರ ಹನಿಗಳು ಉದುರತೊಡಗಿದುವು. ಅವರು ಹೊರಡಲೆಂದು ಎದ್ದು ನಿಂತರು. ಆಗ ಅಘೋರನಾಥರು ತಮ್ಮ ಮೈಮೇಲಿದ್ದ ಬಟ್ಟೆಯನ್ನು ಅವರಿಗೆ ಹೊದಿಸಿ ಕೈಗೆ ನೋಟೊಂದನ್ನು ತುರುಕಿದರು. ಮೋತೀಲಾಲರ ಮುಖದ ಮೇಲೆ ಮುಗುಳ್ನಗೆ ಅರಳಿತು. ಕೇಳಿದರು: "ಇನ್ನೆಷ್ಟು ದಿನ ಇರುತ್ತೀರಿ ಚಿಕ್ಕಪ್ಪ ?"

"ನಾಳೆಯೇ ಹೊರಟುಹೋಗುತ್ತಿದ್ದೇನೆ."

ಅವರ ಪಾದಧೂಳಿಯನ್ನು ತೆಗೆದುಕೊಳ್ಳುತ್ತ ಮೋತೀಲಾಲರೆಂದರು: "ಮತ್ತೆ ನಿಮ್ಮನ್ನು ಭೇಟಿಯಾಗಲು ಸಾಧ್ಯವಾಗುವುದಿಲ್ಲ. ನನ್ನ ಆಯುಸ್ಸು ಮುಗಿದು ಹೋಗಿದೆ."[1]

ನಿಜವಾಗಿಯೂ ಮತ್ತೆ ಭೇಟಿಯಾಗಲು ಸಾಧ್ಯವೇ ಆಗಲಿಲ್ಲ. ಕೆಲವೇ ದಿನಗಳಲ್ಲಿ ಹೃದಯದಲ್ಲಿ ಎಣೆಯಿಲ್ಲದ ಪ್ರೀತಿಯನ್ನು ತುಂಬಿಕೊಂಡಿದ್ದ ಈ ನಾಡಿಗೆ ಅನರ್ಹರಾಗಿದ್ದ, ಕನಸುಗಾರ ಮೋತೀಲಾಲರು ವಿರುದ್ಧ ಪರಿಸ್ಥಿತಿಗಳ ಪೆಟ್ಟನ್ನು ಸಹಿಸಿ ಸಹಿಸಿ ಜರ್ಜರರಾಗಿ ಕೊನೆಯುಸಿರನ್ನೆಳೆದು ಬಿಟ್ಟರು.

ತಂದೆಯ ಸಾವಿನ ಸುದ್ದಿಯನ್ನು ತಿಳಿದು ಶರತ್‌ಗೆ ತುಂಬ ದುಃಖವಾಯಿತು. ಅವನೇನೋ ಅವರೊಡನೆ ಜಗಳವಾಡಿಕೊಂಡು ಬಂದಿದ್ದ. ಇಲ್ಲಿಯ ಬೊಹೇಮಿಯನ್ ಜೀವನದಲ್ಲಿ ಅವನು ಅವರನ್ನು ಅದೆಷ್ಟು ಬಾರಿ ನೆನೆಸಿಕೊಂಡಿದ್ದನೆಂಬುದನ್ನು ಯಾರು ತಾನೆ ಹೇಳಲು ಸಾಧ್ಯ ? ಆದರೆ ಅವರು ಇಲ್ಲವಾಗಿದ್ದ ಈ ಸ್ಥಿತಿಯಲ್ಲಿ ಅವರ ಆಳವಾದ ಪ್ರೀತಿಯ ನೆನಪು ಉಕ್ಕಿ ಬರತೊಡಗಿತು. ಅವನು ಆ ಕ್ಷಣವೇ ಭಾಗಲಪುರಕ್ಕೆ ಹೊರಟು ನಿಂತ.

ಇವನ ಗೈರುಹಾಜರಿಯಲ್ಲಿ ಮಾವ ಮಣೀಂದ್ರನಾಥನೇ ಅಂತಿಮ ಸಂಸ್ಕಾರಗಳನ್ನು ಮಾಡಿಮುಗಿಸಿದ್ದ. ಶ್ರಾದ್ಧದ ಸಂದರ್ಭದಲ್ಲಿಯೂ ಅವನೇ ನೆರವಾದ. ಅವನು ಶರತ್‌ನ ಸಹಪಾಠಿಯಾಗಿದ್ದ. ಆದರೆ, ಹಳೆಯ ಸಂಪ್ರದಾಯದ ಗಂಗೂಲಿ ಪರಿವಾರದ ನಿಜವಾದ ಪುತ್ರನೂ ಆಗಿದ್ದ. ಶರತ್‌ನ ಬಾಳಿನ ಬಗ್ಗೆ ಅವನಿಗೆ ಜುಗುಪ್ಸೆಯಿತ್ತು. ಆದರೆ, ಶ್ರಾದ್ಧ ನಡೆಯಬೇಕಾಗಿದ್ದ ಆ ವ್ಯಕ್ತಿ ಗಂಗೂಲಿ ಕುಟುಂಬದ ಅಳಿಯನಾಗಿದ್ದ. ಅದಕ್ಕೆ ಅನುಗುಣವಾಗಿಯೇ ಆ ಶ್ರಾದ್ಧ ನಡೆಯಬೇಕಾಗಿತ್ತು. ಆದ್ದರಿಂದಲೇ ಅವನು ನೆರವಾಗಿದ್ದ.

ತಾಯಿ ಮೊದಲೇ ತೀರಿಕೊಂಡಿದ್ದರು. ತಂದೆಯೂ ಕೊನೆಯುಸಿರೆಳೆದರು. ಅಕ್ಕ ಬೇರೆಯ ಕುಟುಂಬವನ್ನು ಸೇರಿದ್ದಳು. ಉಳಿದಿದ್ದವರು ಮೂವರು ತಂಗಿ-ತಮ್ಮಂದಿರು ಹಾಗೂ ಅವನು ಮಾತ್ರ. ತನ್ನ ಬಗ್ಗೆ ಅವನಿಗೆ ಚಿಂತೆಯೇನೂ ಇರಲಿಲ್ಲ. ಆ ಅರಿಯದ ಮಕ್ಕಳ ಬಗೆಗಿನ ಚಿಂತೆಯಷ್ಟೇ ಅವನನ್ನು ಕಾಡುತ್ತಿತ್ತು.

1. ಶರತ್ ಪರಿಚಯ: ಸುರೇಂದ್ರನಾಥ

ತಂಗಿ ಸುಶೀಲಳನ್ನು ಮನೆಯೊಡತಿ ತುಂಬ ಪ್ರೀತಿಸುತ್ತಿದ್ದಳು. ಆಕೆ ಅವಳನ್ನು ತಮ್ಮ ಬಳಿಯೇ ಇರಿಸಿಕೊಂಡರು. ತಮ್ಮ ಪ್ರಭಾಸ್ 11-12 ವರ್ಷ ವಯಸ್ಸಿನವನಾಗಿದ್ದ. ಶರತ್ ಅವನನ್ನು ಆಸನ್‌ಸೋಲ್‌ಗೆ ಕರೆದೊಯ್ದ. ಅಲ್ಲಿ ಅವನ ಗೆಳೆಯನೊಬ್ಬ ರೈಲ್ವೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ. ಕೆಲಸವನ್ನು ಕಲಿತುಕೊಳ್ಳಲಿ ಎಂದು ಪ್ರಭಾಸನನ್ನು ಅವನ ಬಳಿಯೇ ಬಿಟ್ಟು ಬಂದ.

ಇನ್ನು ಉಳಿದಿದ್ದವನೆಂದರೆ ಪ್ರಕಾಶ. ಅವನನ್ನು ಯಾರ ಬಳಿ ಬಿಡಲು ಸಾಧ್ಯ? ತನ್ನವರೆನ್ನುವಂಥವರು ಯಾರೂ ಅವನಿಗಿರಲಿಲ್ಲ. ತುಂಬಯೋಚನೆ ಮಾಡಿ, ಕೊನೆಗೆ ಅವನು ಚಿಕ್ಕಜ್ಜ ಅಘೋರನಾಥರ ಬಳಿಗೆ ಹೋದ. ಅವರು ಶರತ್‌ನ ವಿಷಯದಲ್ಲಿ ತುಂಬ ಕೋಪಗೊಂಡಿದ್ದರು. ಆದರೆ, ಶರತ್‌ಗೆ ತನ್ನ ಚಿಕ್ಕಜ್ಜಿಯ ಬಗ್ಗೆ ನಂಬಿಕೆ ಇತ್ತು. ಅದೆಷ್ಟು ಸಾರಿ ಆಕೆ ಶರತ್‌ನ ಪ್ರಾಣವನ್ನು ರಕ್ಷಿಸಿದ್ದರೋ ಏನೋ? ಪ್ರಕಾಶನನ್ನು ಕರೆದುಕೊಂಡು ಅವನು ಜಲಪೈಗುರಿಗೆ ಹೋದ. ಅಲ್ಲಿಗೆ ಹೋಗಿ ಅವನು ಅಜ್ಜನ ಕಾಲಿಗೆ ಬಿದ್ದ. ಮೊದಲಿಗೇನೋ ಅವರು ಸ್ವಲ್ಪ ಕೋಪ ಮಾಡಿಕೊಂಡರು. ಅದು ಸಹಜವೇ ಆಗಿತ್ತು. ಆದರೆ, ಇತ್ತ ಮೋತೀಲಾಲರು ತೀರಿಕೊಂಡಿದ್ದರು, ಅತ್ತ ಹೆಂಡತಿಯ ಒತ್ತಾಯವೂ ಇತ್ತು. ಹೀಗಾಗಿ ಇಲ್ಲವೆನ್ನಲು ಅವರಿಗೆ ಸಾಧ್ಯವಾಗದೆ ಹೋಯಿತು.

ಚಿಕ್ಕಜ್ಜಿಯ ಕೃಪೆಯಿಂದಾಗಿ ಶರತ್‌ಗೆ ಮತ್ತೊಮ್ಮೆ ರಕ್ಷಣೆ ದೊರೆಯಿತು. ಅಜ್ಜ ಕೊಂಚ ಉಪೇಕ್ಷೆಯಿಂದಲೂ ಅಜ್ಜಿ ಪ್ರೀತಿಯಿಂದಲೂ ಅವನಿಗೆ ತಿಳಿಯ ಹೇಳಿದರು: "ಈಗ ಮನೆಯ ಜವಾಬ್ದಾರಿಯೆಲ್ಲ ನಿನ್ನ ಮೇಲೆ ಬಿದ್ದಿದೆ. ನೀನು ಏನಾದರೂ ಮಾಡಲೇಬೇಕು."

ಶರತ್ ಉತ್ತರಿಸಿದ: "ಅದನ್ನೇ ಮಾಡಹೊರಟಿದ್ದೇನೆ."

ಸೋದರ-ಸೋದರಿಯ ಬಗೆಗಿನ ಚಿಂತೆಯಿಂದ ಮುಕ್ತನಾದ ಅವನು ಬಿಹಾರಕ್ಕೆ ಕೊನೆಯ ನಮಸ್ಕಾರವನ್ನು ಹಾಕಿ, ಕೆಲಸವನ್ನು ಹುಡುಕಿಕೊಂಡು ಕಲ್ಕತ್ತೆಗೆ ಬಂದು ಸೇರಿದ. ಮಾವನ ಮಾವಂದಿರೇನೋ ಅಲ್ಲಿಯೇ ವಾಸವಾಗಿದ್ದರು. ಉಪೇಂದ್ರನಾಥ ನೊಂದಿಗೆ ಅವನಿಗೆ ನಿಕಟಸಂಬಂಧವೂ ಇತ್ತು. ಉಪೇಂದ್ರನಿಗೂ ಸಾಹಿತ್ಯದ ಬಗ್ಗೆ ವಿಶೇಷವಾದ ಪ್ರೀತಿ ಇತ್ತು. ಇನ್ನೊಬ್ಬ ಮಾವ ಲಾಲ್‌ಮೋಹನ್ ಅಲ್ಲಿಯೇ ವಕೀಲರಾಗಿದ್ದರು. ಭಾಗಲಪುರದ ಕಛೇರಿಯಲ್ಲಿನ ಮೊಕದ್ದಮೆಗಳ ಬಗೆಗಿನ ಮೇಲ್ಮನವಿಯನ್ನು ಕಲ್ಕತ್ತಾ ಹೈಕೋರ್ಟಿನಲ್ಲಿಯೇ ಸಲ್ಲಿಸಬೇಕಾಗುತ್ತಿತ್ತು. ಲಾಲ್ ಮೋಹನ್ ವಕೀಲರಾಗಿದ್ದುದು ಈ ಹೈಕೋರ್ಟಿನಲ್ಲಿಯೇ. ಅವರ ಬಳಿ ಇದ್ದುಕೊಂಡೇ ಕೆಲಸವನ್ನು ಹುಡುಕಬೇಕೆಂದು ಅವನು ನಿಶ್ಚಯಿಸಿಕೊಂಡ. ವಯಸ್ಸಿಗೆ ಬಂದ ಹುಡುಗನೊಬ್ಬನಿಗೆ ತನ್ನ ಖರ್ಚು-ವೆಚ್ಚಗಳಿಗಾಗಿ ತನ್ನ ಪೋಷಕರ ಮುಂದೆ ಕೈಚಾಚಿ ನಿಲ್ಲುವುದು ಮಾನಸಿಕವಾಗಿ ಹಿಂಸೆಯೇ ಆಗುತ್ತದೆ. ಈ ಹಿಂಸೆಯಿಂದ ಮುಕ್ತನಾಗುವ ಸಲುವಾಗಿ ಶರತ್ ಹಿಂದಿಯಲ್ಲಿ ಬರುತ್ತಿದ್ದಂಥ ಅರ್ಜಿಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿ ಕೊಡತೊಡಗಿದ. ಇದಕ್ಕೆ ಪ್ರತಿಯಾಗಿ ಶರತ್‌ಗೆ ಖರ್ಚಿಗೆ ಸ್ವಲ್ಪ ಹಣ ದೊರೆಯುತ್ತಿತ್ತು. ಆದರೆ ನಿಯಮಗಳ, ನ್ಯಾಯಾಲಯಗಳ ಭಾಷೆಯ ವಿಶೇಷ ಪರಿಚಯವೇನೂ ಶರತ್‌ಗೆ ಇರಲಿಲ್ಲ. ಆದ್ದರಿಂದ ಈ ಕೆಲಸದಲ್ಲಿ ಬಹು

ದಿನಗಳವರೆಗೆ ಮುಳುಗಿರುವುದು ಅವನ ಮನಸ್ಸಿಗೆ ಸಾಧ್ಯವಾಗುವಂತಿರಲಿಲ್ಲ. ಜೊತೆಗೆ, ಮನೆಗೆ ಬೇಕಾದ ಸೊಪ್ಪು ತರಕಾರಿಗಳನ್ನು ಅವನೇ ತರಬೇಕಾಗುತ್ತಿತ್ತು. ಸಾಮಾನ್ಯ ನೌಕರರಂತೆ ಇತರ ಕೆಲವು ಕೆಲಸಗಳನ್ನೂ ಅವನು ಮಾಡಬೇಕಾಗುತ್ತಿತ್ತು. ಅಪಮಾನವೂ ಕಡಿಮೆಯಾಗಿಯೇನೂ ಇರುತ್ತಿರಲಿಲ್ಲ. ಭಾಗಲಪುರದಲ್ಲಿ ಮಾಡುತ್ತಿದ್ದಂತೆ, ಇಲ್ಲಿಯೂ ಮನೆಯೊಳಗೆ ಹೋಗುವ ಮೊದಲು ಕೆಮ್ಮಿ ಅನಂತರ ಹೆಜ್ಜೆ ಇರಿಸಬೇಕಾಗುತ್ತಿತ್ತು. ಒಮ್ಮೆ ಅವನು ಮಾವನವರ ಬ್ರಷ್‌ನಿಂದ ತಲೆಬಾಚಿಕೊಳ್ಳುತ್ತಿದ್ದಾಗ, ಇದ್ದಕ್ಕಿದ್ದಂತೆ ಅವರು ಅಲ್ಲಿಗೆ ಬಂದುಬಿಟ್ಟರು. ಅವರ ಕೋಪಕ್ಕೆ ಮಿತಿಯೇ ಇರಲಿಲ್ಲ. ಅವರು ಶರತ್‌ನತ್ತ ಒಮ್ಮೆ ನೋಡಿ, ಆ ಬ್ರಷ್ಷನ್ನೆತ್ತಿ ಹೊರಗೆ ಎಸೆದುಬಿಟ್ಟರು. "ನೀನು ಬಳಸಿದಂಥ ಬ್ರಷ್ ನನ್ನ ಬಳಕೆಗೆ ಅರ್ಹವಾಗಿ ಉಳಿದಿರುವುದಿಲ್ಲ" ಎಂದು ಅವರು ಹೇಳಿದಂತೆ ತೋರಿತು.

ಈ ಬಗೆಯ ಅಪಮಾನ ತಿರಸ್ಕಾರಗಳಿಂದಾಗಿ ಅವನ ನೋವಿಗೆ ಕೊನೆಯೇ ಇರಲಿಲ್ಲ. ಬೇರೆಯವರ ಮನೆಯಲ್ಲಿದ್ದುಕೊಂಡು ಈ ಬಗೆಯ ಅಪಮಾನಗಳನ್ನು ಸಹಿಸುವುದಕ್ಕಿಂತ ಬೀದಿಯಲ್ಲೋ, ಕಾಡಿನಲ್ಲೋ ಮರುಭೂಮಿಯಲ್ಲೋ ಇರುವುದೇ ಉತ್ತಮವೆಂದು ಅವನು ಅನೇಕ ಸಲ ಯೋಚಿಸುತ್ತಿದ್ದ. ಅವನ ಅಕ್ಕ ಕಲ್ಕತ್ತೆಯ ಬಳಿಯೇ ಇದ್ದ ಗೋವಿಂದಪುರವೆಂಬ ಹಳ್ಳಿಯಲ್ಲಿ ವಾಸವಾಗಿದ್ದಳು. ಅವಳ ಬಳಿ ಹೋಗಿ ಇರಲು ಪ್ರಯತ್ನಿಸಿದ. ಗಿರೀಂದ್ರನಾಥರಿಗೆ ಬರೆದ ಒಂದು ಕಾಗದದಿಂದ, ಅವನು ಅಲ್ಲಿ ಹೋಗಿ ಇದ್ದಂತೆಯೂ ತೋರುತ್ತದೆ.[1] ಆದರೆ, ಅಲ್ಲಿ ಸೋದರರ ಜಗಳ ಆರಂಭವಾಗಿತ್ತು. ಆದ್ದರಿಂದ ಮುಖರ್ಜಿ ಮಹಾಶಯ ಅವನಿಗೆ ಯಾವುದೇ ರೀತಿಯಲ್ಲಿ ನೆರವಾಗುವ ಸ್ಥಿತಿಯಲ್ಲಿರಲಿಲ್ಲ. ಅವನು ತನ್ನ ಪತ್ನಿಯೊಂದಿಗೆ ಹೀಗೆಂದ: "ಇದು ಹಳ್ಳಿ ಎಂಬುದು ನಿನಗೆ ಗೊತ್ತೇ ಇದೆ. ಶರತ್ ಇಲ್ಲಿರುವುದು ಸಾಧ್ಯವಾಗಲಾರದು. ಹಳ್ಳಿಯ ಜನ ಟೀಕೆ ಮಾಡತೊಡಗುತ್ತಾರೆ."

"ಅಂದರೆ.... ?" ತಮ್ಮನ ವಿಷಯದಲ್ಲಿ ಅವಳ ಹೃದಯ ತುಂಬಿ ಬಂತು. ಮುಂದಕ್ಕೆ ಅವಳಿಂದ ಏನೂ ಮಾತನಾಡಲು ಸಾಧ್ಯವಾಗಲಿಲ್ಲ.

ಮುಖರ್ಜಿ ಮಹಾಶಯ ಹೇಳಿದ: "ಬೇರೆ ಎಲ್ಲಿಯಾದರೂ ಹೋಗಿ ಇದ್ದುಕೋ ಎಂದು ಅವನಿಗೆ ಹೇಳು. ದುಡ್ಡು-ಕಾಸಿಗೆ ನಾನು ವ್ಯವಸ್ಥೆ ಮಾಡುತ್ತೇನೆ."

ಅವನು ಸ್ವಲ್ಪಮಟ್ಟಿಗೆ ಸಹಾಯ ಮಾಡಿದ್ದಿರಬಹುದಾದರೂ ಕಲ್ಕತ್ತೆಯಲ್ಲಿರುವುದು ಶರತ್‌ಗೆ ಸಾಧ್ಯವಾಗಲಿಲ್ಲ. ಎಲ್ಲಿಗೆ ಹೋಗುವುದು, ಏನು ಮಾಡುವುದು ಎಂದು ಯೋಚಿಸುತ್ತಿದ್ದಂತೆ ಅವನಿಗೆ ತನ್ನ ಚಿಕ್ಕಪ್ಪ ಅಘೋರನಾಥ ಚಟ್ಟೋಪಾಧ್ಯಾಯರ ನೆನಪು ಬಂತು. ಅವರು ರಂಗೂನ್‌ನಲ್ಲಿ ವಕೀಲರಾಗಿದ್ದರು. ಕೆಲವು ವರ್ಷಗಳ ಹಿಂದೆ ಭಾಗಲಪುರಕ್ಕೆ ಬಂದಿದ್ದಾಗ "ಮಗನನ್ನು ಕಾಲೇಜಿಗೆ ಏಕೆ ಕಳಿಸುತ್ತೀಯೆ ? ನನ್ನ ಜೊತೆಯಲ್ಲಿ ರಂಗೂನಿಗೆ ಕಳಿಸಿಬಿಡು. ಓದಿ ಬರೆದು ವಕೀಲನಾಗುವುದಕ್ಕೆ ಹೆಚ್ಚು ಕಾಲವೇನೂ ಹಿಡಿಯುವುದಿಲ್ಲ. ಮುಂದೆ ಅವನು ಸಾಕಷ್ಟು ಹಣವನ್ನು ಸಂಪಾದಿಸಬಹುದು" ಎಂದು ಮೋತೀಲಾಲರೊಂದಿಗೆ ಹೇಳಿದ್ದರು.

---

1. 24 ಡಿಸೆಂಬರ್ 1902

ಅನೇಕ ಕಾರಣಗಳಿಂದ ಆಗ ಹೋಗುವುದು ಅವನಿಗೆ ಸಾಧ್ಯವಾಗಿರಲಿಲ್ಲ. ಆದರೆ ಈಗಂತೂ ಅವನ ಎದುರಿನಲ್ಲಿ ಬದುಕಿನ ಪ್ರಶ್ನೆಯಿತ್ತು. ಕಲ್ಕತ್ತೆಯಲ್ಲಿ ಅನೇಕ ಜನರು ಬರ್ಮಾದ ಬಗ್ಗೆ ಅವನಿಗೆ ಬಗೆಬಗೆಯಾದ ಕಥೆಗಳನ್ನು ಹೇಳಿದ್ದರು. ಇಂಥ ವ್ಯಕ್ತಿಯೊಬ್ಬ ಬರ್ಮಾದಲ್ಲಿ ಕೆಲಸ ಮಾಡಿ ಭಾರಿ ಶ್ರೀಮಂತನಾಗಿದ್ದಾನೆ. ಅಲ್ಲಿ ಹಾದಿ-ಬೀದಿಗಳಲ್ಲೆಲ್ಲ ಹಣ ಚೆಲ್ಲಿರುತ್ತದೆ, ಅದನ್ನೆಲ್ಲ ದೋಚಿಕೊಳ್ಳುವುದಷ್ಟೇ ನಾವು ಮಾಡಬೇಕಾಗಿರುವುದು; ಹಡಗಿನಿಂದ ಇಳಿದಕೂಡಲೇ ಬಂಗಾಳಿಗಳನ್ನು ಭುಜದ ಮೇಲೆ ಕೂರಿಸಿಕೊಂಡು, ಕರೆದೊಯ್ದು ಕೆಲಸ ಕೊಡುತ್ತಾರೆ - ಹೀಗೆಲ್ಲ ಹೇಳಿದ್ದರು.

ಈ ಮಾತುಗಳನ್ನೆಲ್ಲ ಕೇಳಿ ಕೇಳಿ ಶರತ್‌ನಲ್ಲಿ ಅಡಗಿ ಕುಳಿತಿದ್ದ ಅಲೆಮಾರಿ ಅವನನ್ನು ತುಂಬ ಕಾಡತೊಡಗಿದ. ಹೇಗಾದರೂ ಮಾಡಿ ಬರ್ಮಾಕ್ಕೆ ಹೋಗಿ ತಲುಪಬೇಕೆಂದು ಅವನು ಹಂಬಲಿಸತೊಡಗಿದ. ಈ ಹೊತ್ತಿಗೆ ಸರಿಯಾಗಿ ಅಘೋರನಾಥರು ಕಲ್ಕತ್ತೆಗೆ ಬಂದರು ಹಾಗೂ ಲಾಲ್‌ಮೋಹನ್ ಅವರಲ್ಲಿಯೇ ಉಳಿದುಕೊಂಡರು. ಅವರು ಶರತ್‌ಗೆ ಅದೆಂಥೆಂಥ ರೊಮ್ಯಾಂಟಿಕ್ ಕಥೆಗಳನ್ನು ಹೇಳಿದರೆಂದರೆ ಕೂಡಲೇ ಅವನು ಬರ್ಮಾಕ್ಕೆ ಹೋಗಬೇಕೆಂದು ನಿರ್ಧರಿಸಿಬಿಟ್ಟ.

ಇಂಥ ಅನಿಶ್ಚಿತ ಹಾಗೂ ವಿರುದ್ಧ ಪರಿಸ್ಥಿತಿಗಳಲ್ಲೂ ಅವನ ಸಾಹಿತ್ಯ ಸಾಧನೆ ಮೌನವಾಗಿ ನಡೆಯುತ್ತಲೇ ಇತ್ತು. 'ಚರಿತ್ರಹೀನ'ದ ರಚನೆ ಆರಂಭವಾಗಿತ್ತು. ಅದು ನಿಧಾನವಾಗಿ ಮುಂದುವರೆಯುತ್ತಿತ್ತು. ಆದರೆ ಬಹುಶಃ ಯಾರಿಗೂ ಆ ವಿಷಯದಲ್ಲಿ ಏನೇನೂ ಗೊತ್ತಿರಲಿಲ್ಲ. ಸೌರೀಂದ್ರ ಮೋಹನನಿಗೂ ಅಷ್ಟೆ. ಭಾಗಲಪುರದ ಆ ಹಳೆಯ ಗೆಳೆಯ ಈಗ ಇಲ್ಲಿಯೇ ವಾಸವಾಗಿದ್ದ. ಅವನು ಶರತ್‌ನಿಂದ ತುಂಬ ಪ್ರಭಾವಿತನಾಗಿದ್ದ. ಪ್ರತಿದಿನ ಸಂಜೆ ಅವನು ಶರತ್‌ನ ಬಳಿಗೆ ಬರುತ್ತಿದ್ದ. ಆಮೇಲೆ ಇಬ್ಬರೂ ಓಡಾಡಿಕೊಂಡು ಬರಲು ಹೊರಡುತ್ತಿದ್ದರು. ಸಾಮಾನ್ಯವಾಗಿ ಅವರು ಸಾಹಿತ್ಯಿಕ ಚರ್ಚೆಯಲ್ಲಿ ತೊಡಗುತ್ತಿದ್ದರು.

ಒಮ್ಮೆ ಸೌರೀಂದ್ರ ಹೇಳಿದ: "ಶರತ್! ಸ್ಟಾರ್ ಥಿಯೇಟರ್‌ನಲ್ಲಿ ಕ್ಷೀರೋದ ಪ್ರಸಾದರ 'ಸಾವಿತ್ರಿ' ಎಂಬ ನಾಟಕ ನಡೆಯುತ್ತಿದೆ. ನೀನು ಅದನ್ನು ತಪ್ಪದೆ ನೋಡಬೇಕು."

ಶರತ್ ಅದನ್ನು ನೋಡಲು ಹೋದ. ಅಲ್ಲಿಂದ ಹಿಂದಿರುಗಿದ ಮೇಲೆ ಅವನು ಸೌರೀಂದ್ರನನ್ನೇ ತರಾಟೆಗೆ ತೆಗೆದುಕೊಂಡ. ಹೇಳಿದ: "ಅಯ್ಯೋ ರಾಮ! ನಿನಗೆ ಈ ನಾಟಕ ಅದು ಹೇಗೆ ಚೆನ್ನಾಗಿ ತೋರಿತು? ಸತ್ಯವಾನನ ಸಾವಿನ ತನಕ ಏನೋ ಅದು ಅಷ್ಟೊಂದು ಕೆಟ್ಟದಾಗಿರಲಿಲ್ಲ. ಮಾಂಡವ್ಯನ ಪಾತ್ರವನ್ನು ಅಮೃತಮಿತ್ರ ಚೆನ್ನಾಗಿಯೇ ಅಭಿನಯಿಸಿದ್ದ. ಆದರೆ, ಸತ್ಯವಾನನ ಮುಖವನ್ನು ನೋಡಿದರೆ, ಅವನು ಸಾವಿತ್ರಿಯ ತಮ್ಮನಂತೆ ತೋರುತ್ತಿದ್ದ. ಅವನು ಸತ್ತಾಗ ಸಾವಿತ್ರಿ ಮೃತ ಶರೀರವನ್ನು ತೊಡೆಯ ಮೇಲಿರಿಸಿಕೊಂಡು ಹಾಡು ಹಾಡತೊಡಗಿದಳು. ಆ ಸ್ಥಿತಿಯಲ್ಲಿ ಯಾವ ವ್ಯಕ್ತಿಯೇ ಆಗಲಿ, ಹಾಡಲು ಸಾಧ್ಯವಾಗುತ್ತದೆಯೆ?"

ಸೌರೀಂದ್ರ ಉತ್ತರಿಸಿದ: "ಅದನ್ನು ಸರಿಯಾದ ಸ್ವರ-ಲಯಗಳಿಂದ ಕೂಡಿದ ಹಾಡೆಂದು ನೀನೇಕೆ ಭಾವಿಸುತ್ತೀಯೆ? ಆ ಸ್ಥಿತಿಯಲ್ಲಿ ಮನುಷ್ಯರು ಜೋರಾಗಿ ಅಳುತ್ತಾರೆ: 'ನನ್ನನ್ನು ಬಿಟ್ಟು ಎಲ್ಲಿ ಹೋಗಿಬಿಟ್ಟರಿ? ನನ್ನ ಗತಿಯೇನು? ಇತ್ಯಾದಿ

ಇತ್ಯಾದಿ. ದುಃಖದ ಆ ಆವೇಗವನ್ನೇ ನಾಟಕಕಾರ ಛಂದೋಯುಕ್ತವಾದ ಹಾಡಿನ ರೂಪದಲ್ಲಿ ವ್ಯಕ್ತಪಡಿಸಿದ್ದಾನೆ."

ಶರತ್ ಹೇಳಿದ: "ಹಾಗೆಂದೇ ಇಟ್ಟುಕೊಂಡರೂ, ಎರಡೆರಡು ಪಾಡುಗಳಿರುವುದು ಸರಿಯೆ ? ಒಂದೇ ಹೆಚ್ಚು. ಇದೆಲ್ಲ ನನಗೆ ತುಂಬ ಕೆಟ್ಟದಾಗಿ ತೋರಿತು. ಹಾಡಿನಿಂದ ಕರುಣರಸದ ಶ್ರಾದ್ಧವೇ ಆಗಿಬಿಡುತ್ತದೆ. ದುರಂತಭಾವನೆಯೂ ಮೂಡಲಾರದೆ ಹೋಗುತ್ತದೆ."

ಮುಜಫರಪುರದ ಅವನ ಗೆಳೆಯ ಪ್ರಮಥನಾಥ ಭಟ್ಟನೂ ಇಲ್ಲಿಯೇ ಪಾಥುರಾಘಾಟಾದಲ್ಲಿ ರಾಜಾಸೌರೀಂದ್ರಮೋಹನ ಠಾಕೂರರ ಆಪ್ತ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದ. ಸಾಮಾನ್ಯವಾಗಿ ಶರತ್ ಅವನ ಬಳಿಗೆ ಹೋಗಿ, ಅವನೊಡನೆ ತನ್ನ ಕೃತಿಗಳ ಬಗ್ಗೆ ಚರ್ಚಿಸುತ್ತಿದ್ದ. ಜೊತೆಗೆ, ಸುರೇಂದ್ರ ಮತ್ತು ಗಿರೀಂದ್ರರೂ ಈಗ ಕಲ್ಕತ್ತೆಯಲ್ಲಿಯೇ ಓದುತ್ತಿದ್ದರು. ಅವರೂ ಶರತ್‌ನನ್ನು ಭೇಟಿಯಾಗಲು ಬರುತ್ತಿದ್ದರು. ಒಮ್ಮೆ ಇದ್ದಕ್ಕಿದ್ದಂತೆ ಗಿರೀಂದ್ರನೆಂದ: "ಶರತ್, ನೀನು 'ಕುಂತಲೀನ ಬಹುಮಾನ'ಕ್ಕಾಗಿ ಏಕೆ ಕಥೆಯನ್ನು ಬರೆಯಬಾರದು ? ಇಪ್ಪತ್ತೈದು ರೂಪಾಯಿ ಸಿಕ್ಕುತ್ತದೆ."

ಶರತ್ ಕೇಳಿದ: "ಈ 'ಕುಂತಲೀನ ಬಹುಮಾನ' ಅನ್ನುವುದೇನು ?"

ಗಿರೀಂದ್ರ ಹೇಳಿದ: "ಇದು ಸ್ವದೇಶಿ ಯುಗ. ಎಲ್ಲ ದೇಶಪ್ರೇಮಿಗಳೂ ಸ್ವದೇಶಿ ಉದ್ಯಮಗಳಿಗೆ ಪ್ರೋತ್ಸಾಹ ಕೊಡಬಯಸುತ್ತಾರೆ. ಅವರು ಹಾಗೆ ಮಾಡುವುದೂ ಸರಿಯೆ. 'ಕುಂತಲೀನ' ಎಂಬುದು ಸ್ವದೇಶಿ ಸುವಾಸನೆಯ ತೈಲ. ಬಹೂ ಬಾಜಾರಿನ ಎಚ್.ಬಸು ಅದರ ತಯಾರಕರು. ಅದರ ಪ್ರಚಾರಕ್ಕಾಗಿಯೇ ಅವರು ಈ ಸ್ಪರ್ಧೆಯನ್ನು ನಡೆಸುತ್ತಿದ್ದಾರೆ. ಹೆಸರಾಂತ ಲೇಖಕರು ಇದಕ್ಕೆ ತೀರ್ಪುಗಾರರಾಗಿರುತ್ತಾರೆ. ಈ ಕಥೆಗಳು ಪುಸ್ತಕದ ರೂಪದಲ್ಲಿಯೂ ಅಚ್ಚಾಗುತ್ತವೆ."

ಶರತ್ ಹೇಳಿದ: "ಸ್ವದೇಶಿ ವಿಚಾರವೇನೋ ಸರಿಯೆ. ಆದರೆ ಕಥೆ ಬರೆಯುವುದು ಅದರಲ್ಲಿಯೂ ಬಹುಮಾನಕ್ಕಾಗಿ ನನ್ನಿಂದ ಇದು ಖಂಡಿತವಾಗಿಯೂ ಸಾಧ್ಯವೇ ಇಲ್ಲ. ಇಷ್ಟೊಂದು ಮಂದಿ ದೊಡ್ಡ ದೊಡ್ಡ ಲೇಖಕರಿರುವಾಗ ನನ್ನನ್ನು ಯಾರು ಕೇಳುತ್ತಾರೆ ?"

ಗಿರೀಂದ್ರ ಹೇಳಿದ: "ನಿನಗೆ ಗೊತ್ತಿಲ್ಲ. ನೀನು ತುಂಬ ಚೆನ್ನಾಗಿ ಕಥೆ ಬರೆಯುತ್ತೀಯೆ. ಖಂಡಿತವಾಗಿಯೂ ಬರಿ. ನಿನಗೆ ಬಹುಮಾನ ಬಂದೇ ಬರುತ್ತದೆ."

ಆದರೆ, ತನ್ನ ಎಂದಿನ ಸ್ವಭಾವದಂತೆ, ಅವನು ಆ ಕೂಡಲೇ ಆ ಮಾತನ್ನು ಒಪ್ಪಲಾರದೆ ಹೋದ. ಈ ಮಾವಂದಿರು ಒತ್ತಾಯಪಡಿಸುತ್ತಲೇ ಇದ್ದರು. ಅವನು ಮುಂದೂಡುತ್ತಲೇ ಇದ್ದ. ಕೊನೆಗೆ ಆ ಕೊನೆಯ ತಾರೀಖೂ ಬಂದುಬಿಟ್ಟಿತು. ಗಿರೀಂದ್ರ ಮತ್ತೆ ಕೇಳಿದ: "ನೀನು ಕಥೆ ಏಕೆ ಬರೆಯುವುದಿಲ್ಲ. ಬಹುಮಾನ ದೊರೆಯದಿದ್ದರೆ ತಾನೆ ಏನಂತೆ ? ಕಥೆ ಬರಿ."

ಕೊನೆಗೆ ಕಥೆ ಬರೆಯಲು ಅವನು ಸಿದ್ಧನಾದ. ಅಂದು ಅವನು ಬರೆದ ಕಥೆಯ ಹೆಸರು 'ಮಂದಿರ' ಎಂದಿತ್ತು. ಅದನ್ನು ಬರೆದು ಮುಗಿಸುವ ಹೊತ್ತಿಗೆ ಸಂಜೆ ಕವಿದುಕೊಳ್ಳತೊಡಗಿತ್ತು. ಆದ್ದರಿಂದ ಅವನು ಗಿರೀಂದ್ರನನ್ನು ಜೊತೆಗೆ

ಕರೆದುಕೊಂಡು 'ಕುಂತಲೀನ' ಕಛೇರಿಗೆ ಹೋದ. ವ್ಯವಸ್ಥಾಪಕರಾಗಿದ್ದ ಬಸು ಅವರೆಂದರು: "ಕೊನೆಯ ದಿವಸ ಕೊನೆಯ ಘಳಿಗೆಯಲ್ಲಿ ಕಥೆ ತೆಗೆದುಕೊಂಡು ಬಂದಿದ್ದೀಯಲ್ಲ!"

ಶರತ್ ಹೇಳಿದ: "ಕಾಲಾವಕಾಶ ಮುಗಿದುಹೋಗಿದ್ದರೆ, ಕಥೆಯನ್ನು ತೆಗೆದುಕೊಳ್ಳಬೇಕೆಂದು ನಾನೇನೂ ನಿಮ್ಮನ್ನು ಒತ್ತಾಯಪಡಿಸುವುದಿಲ್ಲ."

ಬಸು ಮುಗುಳ್ನಕ್ಕರು. "ಇಲ್ಲ, ಇಲ್ಲ, ಕೊನೆಯ ಗಳಿಗೆ ಇದ್ದೇ ಇದೆಯಲ್ಲ, ತಾ ನಿನ್ನ ಕಥೆಯನ್ನು ತೆಗೆದುಕೊಳ್ಳುತ್ತೇನೆ" ಎಂದರು.

ಕಥೆಯನ್ನು ಒಪ್ಪಿಸಿ ಶರತ್ ಸಮಾಧಾನದ ನಿಟ್ಟುಸಿರನ್ನು ಬಿಟ್ಟ. ಆದರೆ, ಕಥೆಯ ಮೇಲೆ ಲೇಖಕನೆಂಬಂತೆ ಅವನು ತನ್ನ ಹೆಸರನ್ನು ಕೊಟ್ಟಿರಲಿಲ್ಲ. ತನಗೆ ಬಹುಮಾನ ದೊರೆಯಬಹುದೆಂಬ ನಂಬಿಕೆಯೇ ಅವನಿಗಿರಲಿಲ್ಲ. ಬಹುಮಾನ ದೊರೆಯದಿದ್ದಾಗ ಉಂಟಾಗಬಹುದಾದ ನಾಚಿಕೆ ಮತ್ತು ದುಃಖಗಳಿಂದ ತಪ್ಪಿಸಿಕೊಳ್ಳುವ ಸಲುವಾಗಿ ಅವನು ಆ ಕಥೆಯನ್ನು ಮಾವ ಸುರೇಂದ್ರನಾಥನ ಹೆಸರಿನಲ್ಲಿ ಕಳುಹಿಸಿದ್ದ. ಅವನೊಂದಿಗೆ ಹೀಗೆ ಹೇಳಿದ್ದ: "ನಾನು ಈ ಕಥೆಯನ್ನು ನಿನ್ನ ಹೆಸರಿನಲ್ಲಿ ಕಳಿಸಿದ್ದೇನೆ. ಅದೃಷ್ಟವಶಾತ್ ಬಹುಮಾನವೇನಾದರೂ ಬಂದುಬಿಟ್ಟರೆ, ಮೋಹಿತ್ ಸೇನ್ ಅವರು ಪ್ರಕಟಿಸಿರುವ ರವೀಂದ್ರನಾಥರ ಕಾವ್ಯ ಗ್ರಂಥಾವಳಿಯನ್ನು ನನಗೆ ಕಳಿಸಿಕೊಡು."

ಬಹುಶಃ ಅವನ ಹೆಸರಿನ ಪ್ರಭಾವವೇ ಹಾಗಿತ್ತೇನೋ. ಸ್ಪರ್ಧೆಯ ಫಲಿತಾಂಶ ಪ್ರಕಟವಾದಾಗ, ಭಾಗಲಪುರದ ಬಂಗಾಲಿ ಟೋಲಾದ ಶ್ರೀ ಸುರೇಂದ್ರನಾಥ ಗಂಗೋಪಾಧ್ಯಾಯ ಅವರಿಗೇ ಮೊದಲ ಬಹುಮಾನ ಬಂದಿತ್ತು. ಗೆಳೆಯರು ಅವನಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸಿದರು. ಆದರೆ ಅವನ ಹೃದಯದಲ್ಲಿ ಗ್ಲಾನಿ ತುಂಬಿಕೊಂಡಿತ್ತು. ಈ ಕೀರ್ತಿ ಮತ್ತು ಅಭಿನಂದನೆಗಳಿಗೆ ತಾನು ಅಧಿಕಾರಿ ಯಲ್ಲವೆಂಬುದು ಅವನಿಗೆ ಗೊತ್ತಿತ್ತು. ಆದರೆ ನಿಜವಾದ ಅಧಿಕಾರಿಯಾಗಿದ್ದ ಆ ಶರತ್ ಆ ಹೊತ್ತಿಗಾಗಲೇ ಕಲ್ಕತ್ತಾ ಬಿಟ್ಟು ತೆರಳಿದ್ದ. ನೂರೈವತ್ತು ಕಥೆಗಳ ನಡುವೆ ಮೊದಲ ಬಹುಮಾನವನ್ನು ಪಡೆಯುವುದು ಕಡಿಮೆ ಅದೃಷ್ಟದ ಸಂಗತಿಯೇನೂ ಆಗಿರಲಿಲ್ಲ. ಆದರೆ, ಇಂಥ ವಿಷಯಗಳಲ್ಲೆಲ್ಲ ಉದಾಸೀನನಾಗಿರುತ್ತಿದ್ದ ಶರತ್, ತನ್ನನ್ನು ಎಲೆಯ ಮರೆಯಲ್ಲಿ ಅಡಗಿಸಿಕೊಂಡಿರುವುದರಲ್ಲಿಯೇ ಸಂತೋಷ ಪಡುತ್ತಿದ್ದ.

ರಂಗೂನ್‌ಗೆ ಹೋಗುವ ವಿಚಾರವನ್ನು ಅವನು ಯಾರಿಗೂ ತಿಳಿಸಿರಲಿಲ್ಲ. ತನ್ನ ಗೆಳೆಯರು ತನ್ನನ್ನು ಹೋಗಗೊಡದಿರಬಹುದೆಂಬ ಭಯವೂ ಅವನಿಗಿತ್ತು. ಆದರೆ, ಇಡೀ ಬಾಳೇ ಅವನ ಮುಂದಿತ್ತು. ತಂಗಿ-ತಮ್ಮಂದಿರು ಬೇರೆ ಇದ್ದರು. ಈಗ ಅವರ ಭಾರವನ್ನು ಅವನು ಯಾರ ಮೇಲೆ ತಾನೆ ಹೊರಿಸಲು ಸಾಧ್ಯವಿತ್ತು? ಹೇಗಾದರೂ ಮಾಡಿ ಹೊಟ್ಟೆ ಹೊರೆಯಲೇಬೇಕಾಗಿತ್ತು. ತನ್ನ ಮಾವಂದಿರಲ್ಲಿ ಒಬ್ಬನಾದ ದೇವಿ[1]ಗೆ ಮಾತ್ರ ಅವನು ತನ್ನ ನಿರ್ಣಯದ ಬಗ್ಗೆ ಸೂಚನೆ ಕೊಟ್ಟಿದ್ದ. ಅವನ ಹತ್ತಿರ ಹಣವೂ ಇರಲಿಲ್ಲವಲ್ಲ. ಹೇಗೋ ಮಾಡಿ ಯಾರಿಂದಲೋ ಪ್ರಯಾಣದ ಖರ್ಚಿನ ಹಣವನ್ನು ಸಾಲವಾಗಿ ಪಡೆದು, ಒಂದು ದಿವಸ ಬೆಳಿಗ್ಗೆ ನಾಲ್ಕು ಘಂಟೆಗೆ ಭವಾನೀಪುರದ

1. ದೇವೇಂದ್ರನಾಥ ಗಂಗೋಪಾಧ್ಯಾಯ

ಮನೆಯಿಂದ ಸ್ಟೀಮರ್ ಘಟ್ಟದತ್ತ ಹೆಜ್ಜೆ ಹಾಕಿದ. ದೇವಿ ಒಬ್ಬನು ಮಾತ್ರವೇ ಅವನ ಜೊತೆಗಿದ್ದ. ಪ್ರಯಾಣದ ವೆಚ್ಚವನ್ನು ಸಲ್ಲಿಸಿಯಾದ ಮೇಲೆ ಅವನ ಜೇಬಿನಲ್ಲಿ ಒಂದೆರಡು ರೂಪಾಯಿಗಳು ಮಾತ್ರವೇ ಉಳಿದಿದ್ದುವು. ಮತ್ತೆ ಭಾರತಕ್ಕೆ ಹಿಂದಿರುಗಲು ಸಾಧ್ಯವಾಗುತ್ತದೆಯೋ ಇಲ್ಲವೋ ಎಂಬುದೂ ಅವನಿಗೆ ಗೊತ್ತಿರಲಿಲ್ಲ.

ಈ ಪಲಾಯನದೊಂದಿಗೆ ಅವನ ಜೀವನ-ನಾಟಕದ ಒಂದು ಅಂಕ ಮುಗಿದಂತೆ ಕಂಡಿತು. ಅವನಿಗೆ ಆಗ ಇಪ್ಪತ್ತಾರು ವರ್ಷ ವಯಸ್ಸಾಗಿತ್ತು. ಯೌವನದ ಸೂರ್ಯ ನಡುನೆತ್ತಿಯನ್ನು ತಲುಪಿದ್ದ; ಕೊರೆಯುವಂತಿದ್ದ ಹಾಗೂ ದಟ್ಟವಾಗಿದ್ದ ಮಂಜು ಅವನಿಗೆ ಮುಸುಕಿದ್ದಂತೆ ತೋರುತ್ತಿತ್ತು. 'ಶ್ರೀಕಾಂತ'ನಂತೆಯೇ ಬೇರೊಬ್ಬರ ಇಚ್ಛೆಯಂತೆ ಬೇರೊಬ್ಬರ ಮನೆಯಲ್ಲಿ ವರ್ಷಗಳ ಮೇಲೆ ವರ್ಷಗಳನ್ನು ಕಳೆದು ಅವನು ತನ್ನ ಶರೀರವನ್ನು ಬಾಲ್ಯದಿಂದ ಯೌವನದತ್ತ ನೂಕುತ್ತ ನಡೆದಿದ್ದ; ಆದರೆ ಮನಸ್ಸನ್ನು ಅದಾವ ರಸಾತಲದತ್ತ ಚೋದಿಸುತ್ತ ನಡೆದಿದ್ದನೋ ಏನೋ, ಅವನ ಮನಸ್ಸು ಅಲ್ಲಿಂದ ಎಂದೂ ಹಿಂದಿರುಗಿ ಬರಲಿಲ್ಲ.

ಹೀಗೆ ಆ ಉಚ್ಛೃಂಖಲ, ಅಲೆಮಾರಿ, ಅರ್ಧಶಿಕ್ಷಿತ ಹಾಗೂ ಧನರಹಿತ ವ್ಯಕ್ತಿ ಬಂಧುಗಳಿಲ್ಲದ, ಗುರಿಯಿಲ್ಲದ ದಿಕ್ಕಿನತ್ತ ಪ್ರವಾಸ ಮಾಡಿದ.

ತಾಯಿ ಸತ್ತ ಮೇಲೆ ನೀನು ತಿಂದೆಯಾ ಬಿಟ್ಟೆಯಾ ಎಂದು ಕೇಳುವಂಥವರು ಕೂಡ ಅವನ ಪಾಲಿಗೆ ಯಾರೂ ಇರಲಿಲ್ಲ. ಅವನ ದಾರಿಯನ್ನು ಕಾಯುತ್ತ ಯಾರೂ ಕುಳಿತಿರುತ್ತಿರಲಿಲ್ಲ. ಅವನ ಬಳಿ ಉಡಲು-ತೊಡಲು ಬಟ್ಟೆಬರೆಗಳಾದರೂ ಇವೆಯೇ ಎಂಬುದನ್ನು ಕೇಳಿ ತಿಳಿಯುವ ಇಚ್ಛೆಯೂ ಯಾರಿಗೂ ಇರಲಿಲ್ಲ. ತನ್ನ ಮನಸ್ಸು ಬಂದಂತೆ ಅವನು ಅಭಿನಯದಲ್ಲಿ, ಸಂಗೀತ-ನೃತ್ಯಗಳಲ್ಲಿ ಬಗೆಬಗೆಯ ಆಟಕೂಟಗಳಲ್ಲಿ ಮದ್ಯಪಾನ ಮೊದಲಾದವುಗಳಲ್ಲಿ ತೊಡಗಿರುತ್ತಿದ್ದ. ಚಿಕ್ಕಪ್ಪನ ಕುಟುಂಬದಲ್ಲಿ ಇವು ಯಾವೂ ಮಾಡಬಾರದ ಕಾರ್ಯಗಳೇ ಆಗಿದ್ದುವು. ಆದ್ದರಿಂದ, ಅಪಮಾನದ ಪ್ರಮಾಣವಷ್ಟೇ ಹೆಚ್ಚಿತ್ತು. ಈ ಅಪಮಾನದ ಸಂಗತಿಯನ್ನು ಅವನು ಗುರುತಿಸಲಾರದೆ ಹೋಗಿದ್ದನೆಂದೇನೂ ಅಲ್ಲ. ಆದರೆ, ಧರ್ಮಶಾಸ್ತ್ರದಲ್ಲಿ ಕಾಣದೊರೆಯುವ ನಡವಳಿಕೆಯ ಸಂಹಿತೆ ಯುಗಯುಗಗಳವರೆಗೆ ಅಬಾಧಿತವಾಗಿ ಇರುವಂಥದೇನೂ ಅಲ್ಲವೆಂಬುದು ಕೂಡ ಅವನಿಗೆ ಗೊತ್ತಿತ್ತು. ಯುಗಗಳು ಬದಲಾಗುತ್ತ ಬಂದಂತೆ ಸಂಹಿತೆಗಳೂ ಬದಲಾಗಬೇಕಾಗುತ್ತವೆ. ಹೀಗಾಗಿ, ಆ ಅಪಮಾನವೇ ಅವನ ಶಕ್ತಿಯಾಗಿ ಪರಿಣಮಿಸಿತ್ತು; ದಿಕ್ಕು ತಪ್ಪಿದ ಮನಸ್ಸಿನಲ್ಲಿ ಮೊಳೆಯುತ್ತಿದ್ದ ಆ ಸೌಂದರ್ಯ ಹಾಗೂ ಸಾಹಿತ್ಯ ಸೃಷ್ಟಿಯ ಬೀಜಗಳು ಬೆಳೆದು ನಿಲ್ಲಲು ಈ ಜೀವನ ನೆರವಾಯಿತು. ಅವನು ಭೋಕ್ತಾರನಾಗಿ ದುಃಖವನ್ನು ಅನುಭವಿಸದ್ದು ಮಾತ್ರವಲ್ಲ, ದ್ರಷ್ಟಾರನಾಗಿ ಅದನ್ನು ನೋಡಿಯೂ ಇದ್ದ.

ದಾಸ್ಯವನ್ನು ಕೊನೆಗಾಣಿಸಿದ ರಾಷ್ಟ್ರಾಧ್ಯಕ್ಷ ಲಿಂಕನ್ನನೊಡನೆ ಅವನನ್ನು ಹೋಲಿಸಿನೋಡುವುದು ಅಷ್ಟಾಗಿ ಸುಸಂಗತವೆಂದೇನೂ ತೋರುವುದಿಲ್ಲ. ಆದರೆ, ಆಶ್ಚರ್ಯದ ಸಂಗತಿಯೆಂದರೆ ತಮ್ಮ ಪ್ರಾರಂಭಿಕ ಜೀವನದ ಕೆಲವು ಪ್ರವೃತ್ತಿಗಳಲ್ಲಿ ಇಬ್ಬರಲ್ಲಿಯೂ ಸಾಮ್ಯ ಕಾಣದೊರೆಯುವುದು. ಶಾರೀರಿಕ ಶಕ್ತಿ ಪ್ರದರ್ಶನ

ವಿನೋದಪ್ರಿಯತೆ, ಅಧ್ಯಯನ, ಕಥೆ ಹೇಳುವ ಕಲೆ ಹಾಗೂ ಪ್ರೀತಿಯ ನೋವು - ಇವೆಲ್ಲ ಇಬ್ಬರ ಬದುಕಿನಲ್ಲಿಯೂ ಕಂಡುಬರುವ ಸಾಮಾನ್ಯ ಸಂಗತಿಗಳು. ಲಾರ್ಡ್ ಚಾರ್ಲ್‌ವುಡ್ ಹೀಗೆ ಬರೆದಿದ್ದಾನೆ: "ಅವನು ಅರಾಜಕವಿಚಾರಧಾರೆಯ ಪ್ರತಿನಿಧಿಗಳಾಗಿದ್ದ ಕೆಲವು ಲೇಖಕರನ್ನು ಅಭ್ಯಾಸ ಮಾಡಿದ್ದ. ಅವರಲ್ಲಿ ಥಾಮಸ್ ಪೇನ್, ವಾಲ್ಟೇರ್ ಮತ್ತು ಬೋಲ್ಸ್ ಮುಖ್ಯರಾದವರು. ಕೋಳಿಯುದ್ಧ ಮಾಡಿಸುವುದು, ಶಾರೀರಿಕ ಶಕ್ತಿಪ್ರದರ್ಶನ, ಕುಡುಗೋಲು, ಸುತ್ತಿಗೆ ಅಥವಾ ಅರೆಸಾಲುಗಳನ್ನು ಬಳಸುವ ಕೌಶಲ ಅಥವಾ ಅಣಕಿಸಿಕೊಳ್ಳುವ ವಿನೋದಪ್ರವೃತ್ತಿ ಆ ದಿನಗಳಲ್ಲಿ ಅತಿಯಾಗಿ ಕ್ರಿಯಾಶೀಲವಾಗಿದ್ದುವು.... ಅವನಲ್ಲಿ ಏಕಾಂತಪ್ರಿಯತೆ ಅಥವಾ ತನ್ನಲ್ಲಿಯೇ ಲೀನವಾಗಿಬಿಡುವ ಪ್ರವೃತ್ತಿ ಬೆಳೆಯುತ್ತಿತ್ತು. ಪ್ರಿಯತಮೆಯ ಸಾವಿನ ಘಟನೆ ಲಿಂಕನ್ನನ ಮೇಲೆ ಆಳವೂ, ಶಾಶ್ವತವೂ ಆದ ಪರಿಣಾಮವನ್ನು ಬೀರಿತು."

ಶರತ್‌ನ ಪ್ರಿಯತಮೆ ಸತ್ತೇನೂ ಹೋಗಿರಲಿಲ್ಲ. ಆದರೆ ಅಗಲಿಕೆ ಸಂಪೂರ್ಣವಾಗಿತ್ತು. ಆ ಅಗಲಿಕೆ ಅವನ ಬಾಳಿನ ಮೇಲೆ ಆಳವಾದ ಹಾಗೂ ಶಾಶ್ವತವಾದ ಪರಿಣಾಮವನ್ನುಂಟು ಮಾಡಿತು. ಅವನೇ ಒಂದು ಕಡೆ ಬರೆದಿದ್ದಾನೆ: ನಿಜವಾದ ಪ್ರೇಮ ದೂರೆಯದಿರುವುದು ಮಾತ್ರವಲ್ಲ; ದೂರವಾಗಿಸಿಯೂ ಬಿಡುತ್ತದೆ."

ಇದಕ್ಕಾಗಿಯೇ ಅವನು ದೂರ ಹೋಗುತ್ತಿರಲಿಲ್ಲವಷ್ಟೆ?

# ಎರಡನೆಯ ಭಾಗ
# ಹಾದಿಯ ಹುಡುಕಾಟ

ಶ್ರೀಕಾಂತನಂತೆ ಕಬ್ಬಿಣದ ಒಂದು ಚಿಕ್ಕ ಪೆಟ್ಟಿಗೆ ಹಾಗೂ ತೆಳುವಾಗಿದ್ದ ಹಾಸಿಗೆಯನ್ನು ಹಿಡಿದುಕೊಂಡು ಶರತ್ ಹಡಗುಕಟ್ಟೆಯನ್ನು ತಲುಪಿದಾಗ ನಾಲ್ಕು ಕಡೆಗಳಲ್ಲಿಯೂ ಮನುಷ್ಯರೇ ತುಂಬಿಕೊಂಡಿದ್ದುದನ್ನು ಕಂಡ. ದೊಡ್ಡ ದೊಡ್ಡ ಗಂಟುಮೂಟೆಗಳನ್ನು ಹೊತ್ತುಕೊಂಡು ಹೆಂಡತಿ ಮಕ್ಕಳ ಕೈ ಹಿಡಿದುಕೊಂಡು ಇಡೀ ರಾತ್ರಿ ಹಡಗು ಕಟ್ಟೆಯಲ್ಲಿಯೇ ಅವರೆಲ್ಲ ಕಾಯುತ್ತ ಬಿದ್ದಿದ್ದರು. ಬೆಳಿಗ್ಗೆ ಹಡಗಿನಲ್ಲಿ ಒಳ್ಳೆಯ ಜಾಗ ಸಿಕ್ಕಬಹುದೆಂಬ ನಂಬಿಕೆಯಿಂದ ಅವರು ಹೀಗೆ ಮುಂಚಿತವಾಗಿಯೇ ಬಂದು ಕಾಯುತ್ತ ಇದ್ದರು. ಅವರೆಲ್ಲ ಭಾರತದ ಮೂಲೆಮೂಲೆಗಳಿಂದ ಬಂದಿದ್ದಂಥವರು. ನಿಧಾನವಾಗಿ ಅವರೆಲ್ಲ ಸಾಲುಗಟ್ಟಿ ನಿಲ್ಲತೊಡಗಿದ್ದರು. ವೈದ್ಯಕೀಯ ಪರೀಕ್ಷೆ ನಡೆಯಲಿದೆ ಎಂದು ಗೊತ್ತಾಯಿತು. ಆ ಪರೀಕ್ಷೆಯಾದರೂ ಹೇಗಿತ್ತು? ಸಂದೇಹಕ್ಕೆ ಎಡೆಗೊಡುವಂಥ ಕಡೆಗಳಲ್ಲಿ ಕೈ ಹಾಕಿ ವೈದ್ಯರು ಗಡ್ಡೆಯನ್ನು ಹುಡುಕಿ ನೋಡುತ್ತಿದ್ದರು. ಆಗಿನ ಅವರ ಮುಖಭಾವವನ್ನು ನೋಡಿಯೇ ನಲಿಯ ಬೇಕಾಗಿತ್ತು. ಪ್ಲೇಗ್ ರೋಗದ ಸೋಂಕಿಗೆ ಒಳಗಾಗಿರುವಂಥ ಪ್ರಯಾಣಿಕರಾರೂ ಇಲ್ಲಿಂದ ಹೋಗುತ್ತಿಲ್ಲವಷ್ಟೇ ಎಂಬುದನ್ನು ಖಚಿತಪಡಿಸಿಕೊಳ್ಳುವ ಚಿಂತೆ ಅವರದಾಗಿತ್ತು. ಈ ರೋಗ ಬೊಂಬಾಯಿಯಿಂದಲೇ ಬರ್ಮಾಕ್ಕೆ ಬಂದು ಹರಡಿತ್ತು.

ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ಮೇಲೆ ಹಡಗಿಗೆ ಹತ್ತುವ ಸರದಿ ಬಂದಿತು. ಒಂದೇ ಸಮನೆ ಹಿಂದೆ-ಮುಂದೆ ತಿರುಗುತ್ತಿರುವ ಹಲ್ಲುಗಳನ್ನುಳ್ಳ ಗಾಲಿಯ ಯಂತ್ರದೊಂದಿಗೆ ವ್ಯವಹರಿಸುವುದು ಎಷ್ಟು ಕಷ್ಟವೋ ಈ ಹಡಗನ್ನು ಹತ್ತುವ ಕೆಲಸವೂ ಅಷ್ಟೇ ಪ್ರಯಾಸಕರವಾಗಿತ್ತು. ಮೇಲೆ ಹೋಗಿ, ಅಲ್ಲಿಂದ ಮತ್ತೆ ಕೆಳಕ್ಕೆ ಹಡಗಿನ ಒಳಭಾಗಕ್ಕೆ ಇಳಿಯಬೇಕಾಗಿತ್ತು. ಅಲ್ಲಿಗೆ ಹೋಗಿ ಸೇರಿ, ಎಲ್ಲರೂ ತಮ್ಮತಮ್ಮ ಕಂಬಳಿಗಳನ್ನು ಹಾಸಿ ತಮ್ಮ ಜಾಗಗಳನ್ನು ಭದ್ರಪಡಿಸಿಕೊಳ್ಳುತ್ತಿದ್ದರು. ಆದರೆ, ಶರತ್‌ಗೆ ಅಲ್ಲಿ ಜಾಗ ಸಿಕ್ಕಲಿಲ್ಲ. ಮೇಲೆಬಂದ ಬಳಿಕವೇ ಅವನಿಗೆ ಹೇಗೋ ಉಸಿರಾಡಲು ಸಾಧ್ಯವಾಯಿತು. ಕೊನೆಗೆ ಒಂದು ಕಡೆ ಕುಳಿತುಕೊಳ್ಳುವಷ್ಟು ಜಾಗ ದೊರೆಯಿತು. ಮುಂದೆ ಅವನು ಅಲ್ಲಿ ಕಂಡಿದ್ದನ್ನು 'ಭಾರತ ದರ್ಶನ'ವೆಂದೇ ಹೇಳಬಹುದಾಗಿದೆ.

ಇದು ಕೆಲವು ಘಂಟೆಗಳ ಸಮಾಚಾರ ಮಾತ್ರವಾಗಿರಲಿಲ್ಲ. ಇಡೀ ನಾಲ್ಕು ದಿವಸಗಳವರೆಗೆ ಮನುಷ್ಯರ ವಾಸ್ತವಿಕ ಜೀವನದ ಪರಿಚಯವನ್ನು ಪಡೆಯುವ ಸದವಕಾಶ ಅವನಿಗೆ ದೊರೆತಿತ್ತು. ಬಹುಪಾಲು ಜನರು ಮತ್ತೆ ಮತ್ತೆ ಬಂದು ಹೋಗಿ

ಮಾಡುವಂಥವರೇ ಆಗಿದ್ದರು. ಇನ್ನು ಕೆಲವರು ಕೆಲಸವನ್ನು ಹುಡುಕಿಕೊಂಡು ಬರ್ಮಾಕ್ಕೆ ಹೋಗುತ್ತಿದ್ದರು. ಕೆಲವು ಮಂದಿ ಪ್ರೇಮಿಗಳೂ ಅಲ್ಲಿದ್ದರು. ಅವರು ಭಾರತೀಯ ಸಮಾಜದ ಹಿಡಿತದಿಂದ ತಪ್ಪಿಸಿಕೊಳ್ಳುವ ಸಲುವಾಗಿ ಕಣ್ಣುತಪ್ಪಿಸಿ ಓಡಿಬಂದಿದ್ದಂಥವರು. ಇವೆಲ್ಲಕ್ಕಿಂತ ಮಿಗಿಲಾಗಿದ್ದುದು ಚಂಡಮಾರುತದ ಅನುಭವ. ಅದು ಹೇಗಿದ್ದಿರಬಹುದು ಎಂಬುದರ ಕಲ್ಪನೆಯೂ ಅವನಿಗೆ ಇದ್ದಿರಲಿಲ್ಲ. ಮೊದಲಿಗೆ ಅಷ್ಟಿಷ್ಟು ಮಳೆಯಾಗತೊಡಗಿತು, ಆಮೇಲೆ ಮಳೆ ಮತ್ತು ಗಾಳಿಗಳೆರಡೂ ಬಿರುಸಾದುವು. ಆ ಮಳೆ, ಆ ಗಾಳಿ, ಆ ಕತ್ತಲು, ಹಡಗಿನ ಆ ಓಲಾಟ ಹಾಗೂ ಸಮುದ್ರದ ಅಲೆಗಳ ಆ ಆಕಾರ - ಇವುಗಳೆನ್ನೆಲ್ಲ ಕಂಡು ಅವನು ವ್ಯಾಕುಲಗೊಳ್ಳುತ್ತ ಇದ್ದ. ಆಗ ಇದ್ದಕ್ಕಿದ್ದಂತೆಯೇ ಸಹಸ್ರಾರು ಮಂದಿ ರಾಕ್ಷಸಿಯರು ಒಮ್ಮೆಗೇ ಸಾವಿನ ಯಾತನೆಯೊಂದಿಗೆ ಚೀತ್ಕರಿಸುತ್ತ, ತಮ್ಮ ಕಾಲಿನ ಭಾರದಿಂದ ನೆಲವನ್ನು ಹೊಸಕಿ ಹಾಕುತ್ತ, ಅತ್ತ-ಇತ್ತ ಓಡುತ್ತಿದ್ದಾರೋ ಎಂಬಂತೆ ವಿಚಿತ್ರ ಶಬ್ದವೊಂದು ಬಂದು ಕಿವಿಯನ್ನಿರಿಯಿತು. ಇದು ಚಂಡಮಾರುತದ ಗಾಳಿಯಾಗಿತ್ತು. ಅದರಿಂದ ತಪ್ಪಿಸಿಕೊಳ್ಳುವುದು ಅಸಂಭವವೆಂದೇ ತೋರುತ್ತಿತ್ತು. ಅದರ ನೆರವಿನಿಂದ ಸಮುದ್ರದ ಅಲೆಗಳು ಬೃಹದಾಕಾರವನ್ನು ತಾಳಿ ಹಡಗನ್ನು ನುಂಗಲು ಧಾವಿಸಿಬರುತ್ತಿದ್ದುವು. ಸಮುದ್ರದ ನೀರು ಬಂದು ಅಪ್ಪಳಿಸಿದಾಗ ಒಂದು ಬಗೆಯ ಜ್ವಾಲೆಯಂಥ ಹೊಳಪು ಉಂಟಾಗುತ್ತಿತ್ತು. ಕತ್ತಲೆಯಿಂದಾಗಿ ಸಮುದ್ರದ ಜಲರಾಶಿ ಕಾಣಿಸುತ್ತಿರಲಿಲ್ಲ. ಆದರೆ ಈ ಜ್ವಾಲೆ ಅದರ ಭಯಂಕರತೆಯನ್ನು ಮತ್ತಷ್ಟು ಹೆಚ್ಚಿಸುತ್ತಿತ್ತು.

ಒಮ್ಮೆಲೇ ಎಲ್ಲರೂ ಗಂಟಲು ಹರಿದುಹೋಗುವಂತೆ ಕಿರಿಚಿಕೊಳ್ಳತೊಡಗಿದರು. ದೊಡ್ಡ ಅಲೆಯೊಂದು ಹಡಗನ್ನು ನುಂಗಲೆಂದು ಧಾವಿಸಿಬಂದಿತು. ಎಲ್ಲ ಕಡೆಯೂ ನೀರೇ ನೀರು ತುಂಬಿಕೊಂಡಿತ್ತು. ಎಲ್ಲರೂ ಮುಳುಗಿ ಹೋದಂತೆ ತೋರಿತು. ಆದರೆ, ಕೆಲವು ಕ್ಷಣಗಳ ಬಳಿಕ ಅಲೆಗಳ ಆಕ್ರಮಣ ಕೊನೆಗೊಂಡಾಗ ಅಲ್ಲಿ ಕಂಡುಬಂದ ದೃಶ್ಯ ಪ್ರಳಯದ ದೃಶ್ಯವನ್ನು ಹೋಲುತ್ತಿತ್ತು. ತಲೆಯಡಗಿಸಿಕೊಳ್ಳುವ ಸಲುವಾಗಿ ಎಲ್ಲರೂ ಅತ್ತಿಂದಿತ್ತ ಇತ್ತಿಂದತ್ತ ಓಡುತ್ತ ಇದ್ದರು. ಮನುಷ್ಯರು ಮಾತ್ರವಲ್ಲ, ಪಕ್ಷಿಗಳೂ ಇದರಲ್ಲಿ ಸೇರಿದ್ದವು. ಬಗೆಬಗೆಯಾದ ಹುರಿಗಾಳುಗಳನ್ನು ಬೆರೆಸಿರುವಂತೆ ಅಲ್ಲಿ ಪ್ರಾಣಿ-ಪಕ್ಷಿಗಳ ಹಾಗೂ ಮಾನವರ ಕಲಬೆರಕೆಯಾಗಿ ಬಿಟ್ಟಿತ್ತು. ಇಡೀ ರಾತ್ರಿ ಜನ ಎಂಥ ಪಾಡುಪಟ್ಟರೆಂದರೆ ಕಲ್ಲಿನ ಮೇಲೆ ಮಸಾಲೆಯನ್ನು ಹಾಕಿ ಗುಂಡು ಕಲ್ಲಿನಿಂದ ಅರೆಯುತ್ತಿದ್ದಾರೋ ಎಂಬಂತೆ ಆಗಿತ್ತು. ಅನೇಕರು ವಾಂತಿ ಮಾಡಿಕೊಂಡಿದ್ದರು. ಇದರಿಂದಾಗಿ ಸುತ್ತಲೂ ದುರ್ವಾಸನೆ ಹರಡಿಕೊಂಡಿತ್ತು. ಝಾಡಮಾಲಿಗಳನ್ನು, ನಾವಿಕರನ್ನು ಬಳಸಿಕೊಂಡು ವೈದ್ಯರು ಹಡಗನ್ನು ಚೊಕ್ಕಟಗೊಳಿಸುವುದರಲ್ಲಿ ತೊಡಗಿದ್ದರು.

ಹೀಗೆಯೇ ಈ ಹೊಸ ಬದುಕಿನ ಪರಿಚಯವನ್ನು ಪಡೆದುಕೊಳ್ಳುತ್ತ ಶರತ್ ರಂಗೂನಿಗೆ ಬಂದು ಸೇರಿದ. ಬಂದರು ಹತ್ತಿರ ಹತ್ತಿರ ಬರುತ್ತಿದ್ದಂತೆ 'ಕ್ವಾರೆಂಟೀನ್' ಅನ್ನು ಕುರಿತಾದ ಮಾತುಕಥೆಗಳು ಹೆಚ್ಚುತ್ತ ಬಂದುವು. ಅಲ್ಲಿಗೆ ಬಂದು ಸೇರಿದೊಡನೆಯೇ ನಾವಿಕನೊಬ್ಬ 'ಡೆಕ್' ಮೇಲೆ ಬಂದು ಕೂಗತೊಡಗಿದ.

'ರಂಗೂನ್ ನಗರ, ರಂಗೂನ್ ನಗರ. ಎಲ್ಲರೂ ಸಿದ್ಧರಾಗಿ, ಎಲ್ಲರೂ 'ಕ್ಯಾರೆಂಟೀನ್'ನಲ್ಲಿ ಇರಬೇಕಾಗಿದೆ. ಅಲ್ಲಿ ಇರದೆ, ಯಾರೂ ನಗರವನ್ನು ಪ್ರವೇಶಿಸುವಂತಿಲ್ಲ."

ಪ್ಲೇಗ್ ರೋಗದ ಭಯದಿಂದಾಗಿ ಬರ್ಮಾ ಸರ್ಕಾರ ಬಹಳ ಎಚ್ಚರಿಕೆ ವಹಿಸುತ್ತಿತ್ತು. ನಗರಕ್ಕೆ ಎಂಟು ಮೈಲಿ ಆಚೆ ಮರಳು ಬೀಡಿನಲ್ಲಿ ಸ್ವಲ್ಪ ಜಾಗವನ್ನು ಮುಳ್ಳಿನ ತಂತಿಗಳಿಂದ ಪ್ರತ್ಯೇಕಿಸಿ, ಅಲ್ಲಿ ಅನೇಕ ಗುಡಿಸಲುಗಳನ್ನು ಹಾಕಲಾಗಿತ್ತು. ಡೆಕ್‌ನಲ್ಲಿದ್ದ ಎಲ್ಲ ಪ್ರಯಾಣಿಕರೂ, ನಗರವನ್ನು ಪ್ರವೇಶಿಸುವುದಕ್ಕೆ ಮುಂಚೆ, ಎಂಟರಿಂದ ಹತ್ತು ದಿವಸಗಳವರೆಗೆ ಇಲ್ಲಿಯೇ ಇರಬೇಕಾಗುತ್ತಿತ್ತು. ಆದರೆ, ಪರಿಚಿತ ವ್ಯಕ್ತಿಗಳು ಯಾರಾದರೂ ನಗರದಲ್ಲಿ ಇದ್ದರೆ, ಏನಾದರೂ ಉಪಾಯ ಮಾಡಿ ತಮ್ಮ ಕಡೆಯ ಪ್ರಯಾಣಿಕರನ್ನು ಬಿಡಿಸಿಕೊಳ್ಳಬಹುದಾಗಿತ್ತು. ಶರತ್ ಯಾರಿಗೂ ತಾನು ಬರುವ ಸೂಚನೆಯನ್ನು ಕೊಟ್ಟಿರಲಿಲ್ಲ. ಅವನು ಮೇಲ್ದರ್ಜೆಯ ಪ್ರಯಾಣಿಕನೂ ಆಗಿರಲಿಲ್ಲ. ಹೀಗಾಗಿ ಅವನು 'ಕ್ಯಾರೆಂಟೀನ್'ನಲ್ಲಿ ಇರಲೇಬೇಕಾಯಿತು. ಹೊಸಹೊಸ ಅನುಭವಗಳನ್ನು ಗಳಿಸುವುದರಲ್ಲಿ ಆಸಕ್ತನಾಗಿದ್ದಂಥ ಹಾಗೂ ಅನುಭವಗಳಿಕೆಯನ್ನೇ ತನ್ನ ಶಕ್ತಿಯೆಂದು ಭಾವಿಸಿದ್ದಂಥ ಅವನಿಗೆ ಹೀಗೆ ಹೋಗಿರುವುದೂ ಇನ್ನೊಂದು ಅನುಭವವೇ ಆಗಿತ್ತು. ಆ ದಿನಗಳನ್ನು ಅಲ್ಲಿ ಹೇಗೆ ಕಳೆದಿರಬೇಕೆಂಬುದನ್ನು ನಾವು ಕಲ್ಪಿಸಿಕೊಳ್ಳಬಹುದು. ಪುಣ್ಯಕ್ಕೆ ಆ ಅವಧಿಯಲ್ಲಿ ಮತ್ತೆ 'ಚಂಡಮಾರುತ'ವೇನೂ ಬೀಸಲಿಲ್ಲ. ಡೆಕ್‌ನ ಮೇಲೆಯೇ ಕುರಿ-ಮೇಕೆಗಳಂತೆ ಇರಬೇಕಾಗಿ ಬರಲಿಲ್ಲ. ಆದರೂ, ಅದು ಮನೆಯೇನೂ ಆಗಿರಲಿಲ್ಲ. 'ಕ್ಯಾರೆಂಟೀನ'ನ ಅವಧಿ ಮುಗಿದ ದಿವಸ ಅಥವಾ ಮತ್ತೊಂದು ದಿವಸವನ್ನು 'ದಾ ಠಾಕರ್ ಹೊಟೇಲಿ'ನಲ್ಲಿ ಕಳೆದು, ಅವರಿವರನ್ನು ಕೇಳುತ್ತ ಶರತ್ ಪಾವೆಯಲ್ಲಿ ತನ್ನ ಚಿಕ್ಕಪ್ಪನವರಾಗಿದ್ದ ಅಘೋರನಾಥ ಚಟರ್ಜಿಯವರ ಮನೆಗೆ ಬಂದು ತಲುಪಿದಾಗ[1] ಅವನ ರೂಪವನ್ನು ನೋಡಬೇಕಿತ್ತು - ಯಾರೋ ಭಿಕಾರಿ ಎಂಬಂತೆ ಕಾಣಿಸುತ್ತಿದ್ದ: ಕೆದರಿದ ಕೂದಲು, ಕೊಳೆಯಾದ ಬಟ್ಟೆ ಹರಿದ ಅಂಗಿ, ಕಾಲಿನಲ್ಲಿ ಒಂದು ಜೊತೆ ಚಪ್ಪಲಿ, ಭುಜದ ಮೇಲೆ ಒಂದು ಚೌಕ. ಇಷ್ಟು ದಿನಗಳೂ ತನ್ನ ಕೈಯಿಂದಲೇ ಅಡುಗೆ ಮಾಡಿಕೊಂಡು ತಿನ್ನಬೇಕಾಗಿ ಬಂದಿತ್ತು. ಇದರಿಂದಾಗಿ ಅವನ ಸ್ಥಿತಿ ಮತ್ತಷ್ಟು ಚಿಂತಾಜನಕವಾಗಿ ಪರಿಣಮಿಸಿತ್ತು. ಮನೆಯೊಳಗೆ ಪ್ರವೇಶಿಸಿ ಅಘೋರನಾಥರನ್ನು ಕಂಡ ಒಡನೆಯೇ ಅವನು ಜೋರಾಗಿ ಅಳತೊಡಗಿದ. ಅಳುತ್ತಲೇ ಅವನು ಅಘೋರನಾಥರಿಗೆ ನಮಸ್ಕರಿಸಿದ. ಅವರಿಗೆ ಆಶ್ಚರ್ಯವಾಯಿತು. "ಯಾಕೋ ಶರತ್, ಎಲ್ಲಿಂದ ಬಂದೆಯೊ ?" ಎಂದು ಕೇಳಿದರು.

ಶರತ್ ಹೇಳಿದ: "ನನ್ನನ್ನು ಕ್ಯಾರೆಂಟೀನ್‌ನಲ್ಲಿ ಹಿಡಿದಿಟ್ಟಿದ್ದರು."

ಅವರು ಚಕಿತರಾಗಿ ಹೇಳಿದರು: "ನೀನು ನನ್ನ ಹೆಸರನ್ನೇಕೆ ಹೇಳಲಿಲ್ಲ ? ನನ್ನ ಹೆಸರು ಹೇಳಿಕೊಂಡು ಯಾರು ಯಾರೋ ಬಿಡಿಸಿಕೊಂಡು ಹೋಗುತ್ತಾರೆ. ನೀನು ಕ್ಯಾರೆಂಟೀನ್‌ನಲ್ಲಿ ಬಿದ್ದಿದ್ದೆಯಲ್ಲ! ನೀನೊಬ್ಬ ಮೂರ್ಖ."

ಅಘೋರನಾಥರು ರಂಗೂನಿನ ಸುಪ್ರಸಿದ್ಧ ವಕೀಲರಾಗಿದ್ದುದು ಮಾತ್ರವಲ್ಲ,

---

1 ಜನವರಿ 1903

ದೊಡ್ಡ ಮನುಷ್ಯರೂ ಆಗಿದ್ದರು. ಅವರ ಮುಖಕಾಂತಿ ಎಷ್ಟು ದರ್ಶನೀಯವಾಗಿತ್ತೋ, ಮನಸ್ಸು ಅಷ್ಟೇ ತೆರೆದಂಥದ್ದಾಗಿತ್ತು. ಮನೆಯಲ್ಲಿ ಪ್ರತಿ ಶನಿವಾರವೂ ಭಾರಿಭಾರಿ ಭೋಜನಕೂಟಗಳೂ ಸಂಗೀತಗೋಷ್ಠಿಗಳೂ ನಡೆಯುತ್ತಲೇ ಇದ್ದುವು. ಎಲ್ಲ ಜಾತಿಗಳಿಗೆ, ಎಲ್ಲ ಧರ್ಮಗಳಿಗೆ ಸೇರಿದ ವ್ಯಕ್ತಿಗಳೂ ಇವುಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಅವರ ಹೆಂಡತಿ ಅಲ್ಲಿಯ ಸಂಪ್ರದಾಯಗಳಿಗೆ ಮತ್ತು ನಡವಳಿಕೆಗಳಿಗೆ ಅನುಗುಣವಾಗಿ ವ್ಯಾಪಾರ ವ್ಯವಹಾರಗಳನ್ನು ನಡೆಸುತ್ತಿದ್ದರು. ಜಾಕೆಟ್, ತುಂಡು ಲಂಗ ಹಾಗೂ ಕಾಲುಚೀಲ ಮತ್ತು ಬೂಡ್ಸುಗಳನ್ನು ಹಾಕಿಕೊಳ್ಳುತ್ತಿದ್ದರು. ಶರತ್ ಅನಾಥನಂತೆ ಈ ಕುಟುಂಬಕ್ಕೆ ಬಂದು ತಲುಪಿದ. ಆದರೆ ಚಿಕ್ಕಪ್ಪ ಮತ್ತು ಚಿಕ್ಕಮ್ಮ ಸಹಜವಾದ ಪ್ರೀತಿ ಮತ್ತು ಆತ್ಮೀಯತೆಯಿಂದ ಅವನನ್ನು ಸ್ವಾಗತಿಸಿದರು. ಭಾಗಲಪುರದ ಅವಹೇಳನೆ ಉಪೇಕ್ಷೆಗಳಾಗಲೀ, ಭವಾನೀಪುರದ ಅಪಮಾನ-ಆದೇಶಗಳಾಗಲೀ ಇಲ್ಲಿ ಅವನಿಗೆ ಎದುರಾಗಲಿಲ್ಲ. ಚಿಕ್ಕಪ್ಪ ಹೇಳಿದರು: "ಮೊಟ್ಟಮೊದಲು ನೀನು ಮಾಡಬೇಕಾಗಿರುವ ಕೆಲಸವೆಂದರೆ ಬರ್ಮೀ ಭಾಷೆಯನ್ನು ಕಲಿತು, ಕಾನೂನಿನ ಅಭ್ಯಾಸ ಮಾಡುವುದು. ಆಮೇಲೆ ನೀನು ನನ್ನಂತೆಯೇ ವಕೀಲನಾಗಿ ಬಿಡುತ್ತೀಯೆ. ಈ ಮಧ್ಯೆ ನಿನಗೆ ಯಾವುದಾದರೂ ಒಂದು ಕೆಲಸ ಕೊಡಿಸುವ ವ್ಯವಸ್ಥೆ ಮಾಡುತ್ತೇನೆ."

ಮೂರು ತಿಂಗಳು ಕೂಡ ಕಳೆದಿರಲಿಲ್ಲ - ಬರ್ಮಾದ ರೈಲ್ವೆಯ ಲೆಕ್ಕ ತನಿಖೆ ವಿಭಾಗದಲ್ಲಿ ಶರತ್ ಕೆಲಸ ಮಾಡತೊಡಗಿದ್ದ. ಮನೆಯಲ್ಲಿ ಚಿಕ್ಕಪ್ಪನ ಮಗಳಿಗೆ ಸಂಗೀತವನ್ನು ಹೇಳಿಕೊಡತೊಡಗಿದ್ದ.

ಕಷ್ಟದ ದಿನಗಳು ಕಳೆದು ಹೋದುವೇನೋ ಎನ್ನಿಸಿತು. ಆದರೆ, ಅದು ತೋರಿಕೆ ಮಾತ್ರವಾಗಿತ್ತು. ಆ ಕೆಲಸ ಒಂದೂವರೆ ವರ್ಷವೂ ಮುಂದುವರಿಯಲಿಲ್ಲ. ಬರ್ಮೀ ಭಾಷೆಯ ಪರೀಕ್ಷೆಯಲ್ಲಿ ಅವನು ತೇರ್ಗಡೆಯಾಗಿರಲಿಲ್ಲ. ಹೀಗಿರುವಾಗ ಅವನು ವಕೀಲನಾಗುವುದಾದರೂ ಹೇಗೆ ಸಾಧ್ಯ.? ಅವನು ಕಂಡಿದ್ದ ಕನಸು ಕನಸಾಗಿಯೇ ಉಳಿದುಬಿಟ್ಟಿತು. ಆದರೆ, ಈ ಮಧ್ಯೆ, ಹುಟ್ಟಿನಿಂದ ಬಂದಿದ್ದ ತನ್ನ ಗುಣಗಳಿಂದಾಗಿ ಇಲ್ಲಿಯ ಮಧ್ಯಮವರ್ಗದ ಬಂಗಾಳಿ ಸಮುದಾಯದಲ್ಲಿ ಅವನಾಗಲೇ ಸಾಕಷ್ಟು ಪ್ರಸಿದ್ಧನಾಗಿಬಿಟ್ಟಿದ್ದ. ಅವನ ಹಾಡುಗಾರಿಕೆಯನ್ನು ಕೇಳಲೆಂದೇ ಅನೇಕ ಮರ್ಯಾದಸ್ಥ ಕುಟುಂಬಗಳ ಜನರು ಅಘೋರನಾಥರ ಮನೆಗೆ ಬರುತ್ತಿದ್ದರು. ಅವನಿಗೆ ವಿಶೇಷವಾಗಿ ಪರಿಚಿತರಾದವರಲ್ಲಿ ವಿಶ್ವಸಂಚಾರಿಯಾಗಿದ್ದ ಗಿರೀಂದ್ರನಾಥ ಸರ್ಕಾರ್[1] ಅವರೂ ಒಬ್ಬರು. ಅವರ ಜೊತೆಯಲ್ಲಿ ಹಾಡುವುದು, ಸಂಕಥಾ-ಸಲ್ಲಾಪಗಳಲ್ಲಿ ತೊಡಗುವುದು-ಇವೆಲ್ಲ ನಡೆದಿತ್ತು. ಮದ್ಯ ಕುಡಿಯುವುದು, ಕುಡಿಸುವುದು ಕೂಡ ಹಿಂದೆ ಬಿದ್ದಿರಲಿಲ್ಲ.

ಒಂದು ದಿನ ಮನೆಗೆ ಹಿಂದಿರುಗಿದಾಗ, ಇದ್ದಕ್ಕಿದ್ದಂತೆ ಚಿಕ್ಕಪ್ಪನಿಗೆ ನ್ಯುಮೋನಿಯಾ ಆಗಿದ್ದುದು ತಿಳಿದುಬಂದಿತು. ಮಗಳ ಮದುವೆಯ ಏರ್ಪಾಟುಗಳನ್ನು ಮಾಡುವ

---

1 ಶರತ್‌ನ ಬರ್ಮಾ-ಪ್ರವಾಸದ ಬಗ್ಗೆ ಇವರೊಂದು ಪುಸ್ತಕವನ್ನು ಬರೆದಿದ್ದರು. ಅದು ಇಂದು ದುರ್ಲಭವಾಗಿ ಬಿಟ್ಟಿದೆ. ಅದರಲ್ಲಿ ವರ್ಣಿಸಲಾಗಿರುವ ಬಹುಪಾಲು ಘಟನೆಗಳು ನಂಬಲು ಅರ್ಹವಾಗಿರುವಂಥವಲ್ಲ.

ಸಲುವಾಗಿ ಚಿಕ್ಕಮ್ಮ ಕಲ್ಕತ್ತೆಗೆ ತೆರಳಿದ್ದರು. ಆಗ ಅವನು ರಾತ್ರಿ ಇಡೀ ಕಣ್ಣುಮುಚ್ಚದೆ ಎದ್ದು ಕುಳಿತಿದ್ದು ಅನೇಕ ದಿನಗಳವರೆಗೆ ಚಿಕ್ಕಪ್ಪನ ಸೇವೆ ಮಾಡಿದ. ಆದರೆ ಎಲ್ಲವೂ ವ್ಯರ್ಥವಾಯಿತು. ಅವರನ್ನು ಉಳಿಸಿಕೊಳ್ಳಲಾಗಲಿಲ್ಲ.[1]

ಮತ್ತೊಮ್ಮೆ ನಿರಾಶ್ರಿತನಾಗಿ ಅವನು ಹಾದಿ-ಬೀದಿಗಳಲ್ಲಿ ಅಲೆಯತೊಡಗಿದ.

ಹಾದಿ-ಬೀದಿಗಳಲ್ಲಿ ಅಲೆಯುತ್ತಿದ್ದ ಅವನ ಈ ಅವಧಿಯ ಬಾಳಿಗೆ ಸಂಬಂಧಿಸಿದಂತೆ, ಅವನ ಪ್ರತಿಯೊಂದು ಕಾರ್ಯದ ಬಗ್ಗೆಯೂ ಆಗುತ್ತಿದ್ದಂತೆ, ಅನೇಕ ಕಿಂವದಂತಿಗಳು ಹುಟ್ಟಿಕೊಂಡು ಬಿಟ್ಟಿದ್ದುವು. ಇನ್ನು ಅಲ್ಲಿರುವುದು ಸಾಧ್ಯವಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಏಕೆಂದರೆ, ಯಾರಾದರೂ ಒಬ್ಬ ಮಾವ ಬಂದೇ ಬರುತ್ತಾನೆ ಹಾಗೂ ಮತ್ತೆ ಅಪಮಾನದ ಹಾಗೂ ಉಪೇಕ್ಷೆಯ ಬಾಳನ್ನು ಬದುಕಬೇಕಾಗುತ್ತದೆ ಎಂಬ ಅರಿವು ಅವನಿಗಿತ್ತು. ಹೀಗಾಗಿ, ಅಂಥವನೊಬ್ಬ ಆಗಮಿಸುವುದಕ್ಕೆ ಮೊದಲೇ ಅವನು ಅಲ್ಲಿಂದ ಹೊರಟುಬಿಟ್ಟ.

ಚಿಕ್ಕಮ್ಮನ ಜೊತೆಯಲ್ಲಿ ಮಾವ ಮಣೀಂದ್ರನಾಥರು ಬಂದಿದ್ದರು. ಶರತ್ ರೋಗಗ್ರಸ್ತನಾಗಿ ಯಾವುದೋ ಆಸ್ಪತ್ರೆಯಲ್ಲಿದ್ದಾನೆಂದೂ, ಅವನಿಗೆ ಬಂದಿರುವ ರೋಗ ಎಂಥದೆಂದರೆ ಎಲ್ಲರೂ ಹೋಗಿ ಅವನನ್ನು ನೋಡಿಕೊಂಡು ಬರಲೂ ಆಗುವಂಥದ್ದಲ್ಲವೆಂದೂ ಅವರಿಗೆ ಯಾರೋ ಹೇಳಿದರು. ಅವನ ಸ್ವಚ್ಛಂದ ವ್ಯವಹಾರಗಳಿಂದಾಗಿ ಮಾವ ಮಣೀಂದ್ರನಾಥರೂ ದಿನೇ ದಿನೇ ಅವನಿಂದ ದೂರ ಸರಿಯುತ್ತಲೇ ಇದ್ದರು. ಆದ್ದರಿಂದ, ಆ ರೋಗ ಎಂಥದೆಂಬುದನ್ನು ಊಹಿಸಲು ಅವರಿಗೆ ತಡವೇನೂ ಆಗಲಿಲ್ಲ. ಅವನನ್ನು ನೋಡಿಕೊಂಡು ಬರಲು ಅವರು ಪ್ರಯತ್ನಿಸಲೂ ಇಲ್ಲ.

ಕೆಲವು ದಿನಗಳ ಬಳಿಕ ಮಾವ ಲಾಲ್‌ಮೋಹನ್ ಅವರೂ ಅಲ್ಲಿಗೆ ಹೋಗಿದ್ದರಂತೆ. ಶರತ್‌ನನ್ನು ನೋಡಲೂ ಅವರು ಸಿದ್ಧರಾಗಿರಲಿಲ್ಲ. ತಂಗಿಗೆ ಚೆನ್ನಾಗಿ ಕಿವಿ ಚುಚ್ಚಿ ಎಂಥ ಪರಿಸ್ಥಿತಿಯನ್ನುಂಟು ಮಾಡಿದರೆಂದರೆ ಶರತ್‌ಗೆ ಮತ್ತೆ, ಯಾವುದೇ ರೀತಿಯಲ್ಲೂ, ಆ ಮನೆಯಲ್ಲಿ ಕಾಲಿರಿಸುವುದು ಸಾಧ್ಯವಾಗದೆ ಹೋಯಿತು.[2]

ಕಾರಣ ಏನಾದರೂ ಆಗಿರಲಿ, ಶರತ್ ಚಿಕ್ಕಪ್ಪನ ಆ ಮನೆಯಿಂದ ಶಾಶ್ವತರಾಗಿ ಹೊರಹೊರಟ.

## 2

ಅಲ್ಲಿಂದ ಹೊರಹೊರಟ ಮೇಲೆ ಶರತ್ ಅನೇಕ ವ್ಯಕ್ತಿಗಳ ಬಳಿ ಇದ್ದ. ಅನೇಕ ಕಡೆಗಳಲ್ಲಿ ಅಲೆದಾಡಿದ. ಅನೇಕ ಬಗೆಯ ಅನುಭವಗಳನ್ನು ಪಡೆದ. ಮತ್ತೊಮ್ಮೆ ಅವನು ದಿಕ್ಕು ತಪ್ಪಿದವನಂತೆ ಅದನೇನೋ ಎನ್ನಿಸುವಂತೆ ಇಂದು ರಂಗೂನಿನಲ್ಲಿ ಕಾಣಿಸಿಕೊಂಡರೆ ನಾಳೆ ಪೆಗೂವಿನಲ್ಲೋ, ಉತ್ತರ ಬರ್ಮಾದಲ್ಲೋ ಇರುತ್ತಿದ್ದ. ಬೌದ್ಧ ಸಾಧುವಾಗಿ ಅಲೆದಾಡುವುದು ಅವನ ಮಟ್ಟಿಗೆ ಕೊಳಲೂದುವಷ್ಟೇ ಸಹಜವಾಗಿತ್ತು. ಆದರೆ ಈಗಿನ ಪ್ರಶ್ನೆ ಅವನದಷ್ಟೇ ಆಗಿರಲಿಲ್ಲ. ತಂಗಿ-ತಮ್ಮಂದಿರನ್ನು

1. 30 ಜನವರಿ 1905

2 ಈ ಲೇಖಕ ಅಘೋರನಾಥರ ಮಗನನ್ನು ಭೇಟಿಯಾಗಿದ್ದ.

ಸ್ವದೇಶದಲ್ಲಿ ಆಶ್ರಯಹೀನರಾಗಿ ಬಿಟ್ಟುಬಂದಿದ್ದ. ಹೀಗಾಗಿ, ಐದಾರುತಿಂಗಳ ಉಚ್ಛೃಂಖಲ ಜೀವನದ ತರುವಾಯ, ಲೋಕೋಪಯೋಗಿ ಇಲಾಖೆಯ ಲೆಕ್ಕಪತ್ರಗಳ ತನಿಖೆ ಕಛೇರಿಯಲ್ಲಿ ಮಾಹೆಯಾನ ಮುವತ್ತು ರೂ.ಗಳ ವೇತನದ ಹಂಗಾಮಿ ಕೆಲಸವೊಂದಕ್ಕೆ ಸೇರಿಕೊಂಡ.[1]

ಬರ್ಮಾದ ಲೋಕೋಪಯೋಗಿ ಇಲಾಖೆಯ ಲೆಕ್ಕಪತ್ರಗಳ ಉಪತನಿಖಾಧಿಕಾರಿಗಳಾಗಿದ್ದ ಶ್ರೀ ಮಣೀಂದ್ರನಾಥ ಮಿತ್ರರು ಕಾರ್ಯಪಾಲಕ ಎಂಜಿನಿಯರ್ ಅವರ ಕಛೇರಿಯ ಲೆಕ್ಕಪತ್ರಗಳ ತನಿಖೆಗಾಗಿ ಪೆಗೂಗೆ ಬಂದಿದ್ದರು. ಆಗ ಶರತ್ ಅವರ ಸೋದರ ಸಂಬಂಧಿಯೊಬ್ಬನ ಬಳಿ ಅಲ್ಲಿಯೇ ವಾಸವಾಗಿದ್ದ. ಅವನ ಇಂಪಾದ ಕಂಠದಿಂದಾಗಿ ಅವರು ಅವನನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಒಂದು ದಿನ ಅವರು ಮಿತ್ರರ ಗೌರವಾರ್ಥ ಸಂಜೆಯ ಊಟದ ಏರ್ಪಾಟು ಮಾಡಿದ್ದರು. ಅದಕ್ಕೆ ಅನೇಕ ಗೆಳೆಯರನ್ನು ಆಹ್ವಾನಿಸಲಾಗಿತ್ತು. ಶರತ್ ಇದ್ದನೆಂದು ಹೇಳಲೇಬೇಕಾಗಿಲ್ಲ. ಅವನ ಹಾಡುಗಳನ್ನು ಕೇಳಲು ಅವರೆಲ್ಲ ಆತುರರಾಗಿದ್ದರು. "ಶರತ್, ಅದೇ 'ಓಹೇ ಜೀವನವಲ್ಲಭ, ಸಾಧನ ದುರ್ಲಭ ಹೇ' ಎಂಬ ಹಾಡನ್ನು ಹೇಳಿ" ಎಂಬ ಕರೆ ಕೇಳಿಬಂತು.

ಅವನು ಇಲ್ಲ, ಇಲ್ಲ ಎಂದು ಎಷ್ಟು ಸಲ ಹೇಳಿದರೆ ತಾನೆ ಏನು ? ಹಾಡದೆಯೇ ಅವನಿಗೆ ಬಿಡುಗಡೆ ದೊರೆಯುವುದಾದರೂ ಹೇಗೆ ಸಾಧ್ಯವಿತ್ತು! ಸಭ್ಯ ಸಮಾಜದೊಂದಿಗೆ ಬೆಸೆಯುವ ಈ ಒಂದು ಗುಣ ಮಾತ್ರವೇ ಅವನಲ್ಲಿತ್ತಲ್ಲವೆ! ಹೀಗಾಗಿ, ಅವನು ಒಂದಲ್ಲ, ಹಲವು ಗೀತೆಗಳನ್ನು ಹಾಡಬೇಕಾಯಿತು. ಅವನು ಹಾಡುತ್ತಿದ್ದಷ್ಟು ಹೊತ್ತು ಮಿತ್ರರು ಮಂತ್ರಮುಗ್ಧರಾಗಿ ಕೇಳುತ್ತಲೇ ಇದ್ದರು. ಅವರು ಅತ್ಯಂತ ಸರಳ ಸ್ವಭಾವದ ವ್ಯಕ್ತಿಯಾಗಿದ್ದರು. ಗದ್ಗದರಾಗಿ ಅವರು ಹೇಳಿದರು: "ಶರತ್, ಖಂಡಿತವಾಗಿಯೂ ನಿನ್ನ ಧ್ವನಿಯಲ್ಲಿ ಮಾಧುರ್ಯವಿದೆ."

ಶರತ್ ಮುಗುಳ್ನಕ್ಕು ಸುಮ್ಮನಾದ. ಆದರೆ, ಈ ಎಳೆಯ ಆಧಾರದ ಮೇಲೆಯೇ ಅವರಿಬ್ಬರೂ ಬಹುಬೇಗ ಗೆಳೆತನದ ಮುರಿಯದ ಬೆಸುಗೆಯಲ್ಲಿ ಬಂಧಿತರಾದರು. ಅವರ ಕೃಪೆಯಿಂದಲೇ ಅವನಿಗೆ ಈ ಕೆಲಸ ದೊರೆತಿತ್ತು. ತನ್ನ ಕೆಲಸದ ವೇಳೆ ಮುಗಿದ ಬಳಿಕ ರಂಗೂನ್‌ಗೆ ಬಂದು ಅವನು ಅವರೊಡನೆಯೇ ಇರತೊಡಗಿದ್ದ. ಆದರೆ ಒಂದು ತಿಂಗಳ ಬಳಿಕ ಮತ್ತೆ ಅವನು ಪೆಗೂಗೆ ಹೋಗಬೇಕಾಗಿ ಬಂದಿತು. ಪೆಗೂ ವಿಭಾಗದ ಕಾರ್ಯಪಾಲಕ ಎಂಜಿನಿಯರ್ ಅವರ ಕಛೇರಿಯಲ್ಲಿ ಅವನಿಗೆ ಕೆಲಸ ಸಿಕ್ಕಿತ್ತು.[2] ನಾಲ್ಕನೆಯ ದರ್ಜೆಯ ಲೋಕೋಪಯೋಗಿ ಇಲಾಖೆ ಲೆಕ್ಕಿಗರ ಪರೀಕ್ಷೆಯನ್ನು ಅವನು ತೆಗೆದುಕೊಂಡ. ಆದರೆ ಅದರಲ್ಲಿ ಉತ್ತೀರ್ಣನಾಗಲಾರದೆ ಹೋದ.

ಒಂದಾದ ಮೇಲೆ ಒಂದರಂತೆ ಅನೇಕ ಹುದ್ದೆಗಳು ಅವನಿಗೆ ದೊರೆತವು. ಆದರೆ ಎಲ್ಲವೂ ಹಂಗಾಮಿ ಸ್ವರೂಪದವೇ. ಮಧ್ಯೆ ಮಧ್ಯೆ ನಿರುದ್ಯೋಗಿಯಾಗಿರಬೇಕಾಗುತ್ತಿತ್ತು. ನಿರುದ್ಯೋಗದ ಅವಧಿ ಎಂದರೆ ಕೊಳಲು ನುಡಿಸುವುದು,

---

1 ಜುಲೈ 1905
2 ಆಗಸ್ಟ್ 1905

ಚದುರಂಗದಾಟದಲ್ಲಿ ತೊಡಗುವುದು, ಬೇಟೆಯಾಡುವುದು ಅಥವಾ ಮತ್ತೆ ಕಾವಿಬಟ್ಟೆಗೆ ಶರಣುಹೋಗುವುದು-ಇವುಗಳ ಪುನರಾವೃತ್ತಿಯೇ ಆಗಿರುತ್ತಿತ್ತು. ?ೌದ್ಧ ಸಾಧುವಾಗಿ ತನಗೆ ಚಿರಪರಿಚಿತವಾಗಿದ್ದ ಗೊತ್ತುಗುರಿ ಇಲ್ಲದ ಯಾತ್ರೆಯನ್ನು ೖಗೊಳ್ಳುತ್ತಿದ್ದ. ಬೇಸರವಾದರೆ ಮತ್ತೆ ರಂಗೂನ್‌ಗೆ ಹಿಂದಿರುಗುತ್ತಿದ್ದ. ಬರ್ಮಾದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಬಾಳಿನಲ್ಲಿ ಒಮ್ಮೆಯಾದರೂ ಬೌದ್ಧ ಸಾಧುವಾಗಲೇ ಬೇಕಾಗುತ್ತದೆ. ಅದರ ಅವಧಿ ಏಳು ದಿನಗಳಿಂದ ಹಿಡಿದು ಜೀವನ ಪರ್ಯಂತವೂ ಆಗಬಹುದು. ಆ ವೇಷದಲ್ಲಿ ಅವನಿಗೆ ತುಂಬ ಗೌರವ ದೊರೆಯುತ್ತದೆ ಹಾಗೂ ಏನು ಮಾಡಲೂ ಅವನು ಸ್ವತಂತ್ರನಾಗಿರುತ್ತಾನೆ. ಚುಟ್ಟಾ ಸೇದುವುದಾಗಲೀ, ಸಿನೆಮಾ ನೋಡುವುದಾಗಲೀ, ವರ್ಜಿತವಾಗುತ್ತಿರಲಿಲ್ಲ. ಆದ್ದರಿಂದ ಈ ವೇಷವನ್ನು ಧರಿಸುವುದು ಅವನಿಗೆ ಕಷ್ಟದ ವಿಚಾರವೇನೂ ಆಗಿರಲಿಲ್ಲ. ಹಾಗೆ ನೋಡಿದರೆ ನಿಡಿದಾದ ಕೂದಲುಗಳು ಹಾಗೂ ಗಡ್ಡ ಅವನಿಗ ಪ್ರಿಯವಾಗಿಯೇ ಇದ್ದುವು. ಎಷ್ಟಾದರೂ ಹುಚ್ಚರ ವೇಷವಲ್ಲವೆ! ಹುಚ್ಚರ ವೇಷದಲ್ಲಿ ಏಕನಾದವನ್ನು ಹಿಡಿದುಕೊಂಡು ಹಾಡುತ್ತಾ, ಅಲೆದಾಡುತ್ತ ಇರಬಹುದಲ್ಲವೇ ಎಂದು ಯೋಚಿಸುತ್ತಿದ್ದಿರಬಹುದು.

ಕೊನೆಗೆ ಮಿತ್ರರ ಕೃಪೆಯಿಂದಾಗಿ ರಂಗೂನಿನ ಲೋಕೋಪಯೋಗಿ ಇಲಾಖೆ ಲೆಕ್ಕಪತ್ರ ಪರಿಶೀಲಕರ ಕಛೇರಿಯಲ್ಲಿ 'ಹಂಗಾಮಿ' ಗುಮಾಸ್ತನ 'ಖಾಯಂ' ಕೆಲಸ ಸಿಕ್ಕಿತು.[1] ಮಾಹೆಯಾನ ಐವತ್ತು ರೂಪಾಯಿಗಳ ವೇತನವನ್ನು ನಿಗದಿಗೊಳಿಸಲಾಗಿದ್ದು, ತೃಪ್ತಿಕರವಾದ ಕಾರ್ಯ ನಿರ್ವಹಣೆಯ ಆಧಾರದ ಮೇಲೆ, ಮೂರು ತಿಂಗಳ ಬಳಿಕ ಅದನ್ನು ಅರವತ್ತೈದು ರೂಪಾಯಿಗಳಿಗೆ ಏರಿಸಲಾಯಿತು. ಅವನ ಅನಿಶ್ಚಿತವಾದ, ಒಂದು ದೃಷ್ಟಿಯಲ್ಲಿ ಬೊಹೇಮಿಯನ್ ಸ್ವರೂಪದ ಬಾಳು ಕೊನೆಗೊಂಡಂತೆ ತೋರಿತು. ಹತ್ತು ವರ್ಷಗಳ ಬಳಿಕ ಆ ಹುದ್ದೆಗೆ ರಾಜೀನಾಮೆ ನೀಡಿದಾಗ ಅವನ ವೇತನ ತೊಂಬತ್ತು ರೂಪಾಯಿಗಳವರೆಗೆ ಬಂದು ತಲುಪಿತ್ತು ಹಾಗೂ ಅವನು ಕೆಲಸ ಮಾಡುತ್ತಿದ್ದ ವಿಭಾಗ ಪ್ರಧಾನ ಲೆಕ್ಕಪತ್ರ ಅಧಿಕಾರಿಗಳ ಕಛೇರಿಯೊಂದಿಗೆ ವಿಲೀನಗೊಂಡಿತ್ತು.

ಈಗಲೂ ಅವನು ಮಣೀಂದ್ರ ಮಿತ್ರರ ಜೊತೆಯಲ್ಲಿಯೇ ವಾಸಮಾಡುತ್ತಿದ್ದ. ಇಬ್ಬರೂ ಸಂಗೀತದ ಬಗ್ಗೆ ಹಾಗೂ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರದ ಬಗ್ಗೆ ಚರ್ಚಿಸಿ ಎಂದೂ ದಣಿಯುತ್ತಿರಲಿಲ್ಲ. ಇದರ ಜೊತೆಗೆ ಅವನು ಮಿತ್ರರ ಮಕ್ಕಳಿಗೆ ಸಂಗೀತವನ್ನೂ ಹೇಳಿಕೊಡುತ್ತಿದ್ದ.

ರಂಗೂನ್‌ನಲ್ಲಿ 'ಬೆಂಗಾಲ್ ಸೋಷಿಯಲ್ ಕ್ಲಬ್' ಎಂಬ ಹೆಸರಿನಲ್ಲಿ ಬಂಗಾಳಿಗಳು ತಮ್ಮದೇ ಆದ ಕೂಟವೊಂದನ್ನು ಸ್ಥಾಪಿಸಿಕೊಂಡಿದ್ದರು. ಪ್ರತಿದಿನ ಸಂಜೆ ಇಲ್ಲಿ ಒಂದುಗೂಡಿ ಅವರು ಸಂಗೀತ, ನಾಟಕ ಮತ್ತು ಅಧ್ಯಯನದಲ್ಲಿ ಪಾಲ್ಗೊಳ್ಳುತ್ತಿದ್ದರು. ಅದರಲ್ಲಿ ಬಹುಪಾಲು ಸದಸ್ಯರು ಸರ್ಕಾರಿ ನೌಕರರೇ ಆಗಿದ್ದರು. ಹೀಗಾಗಿ, ಶರತ್ ಸಹ ಆ ಕ್ಲಬ್ಬಿಗೆ ಬರತೊಡಗಿದ ಹಾಗೂ ಬಹುಬೇಗ

---

1 ಏಪ್ರಿಲ್ 1906

ಅಲ್ಲಿಯ ಪ್ರಮುಖ ಗಾಯಕನೂ ಆಗಿಬಿಟ್ಟ. ಅವನ ಇಂಪಾದ ಧ್ವನಿಯಲ್ಲಿ ರವೀಂದ್ರರ ಗೀತೆಗಳನ್ನು ಕೇಳಿ ಭಾವುಕ ಶ್ರೋತೃಗಳು ಮೈಮರೆಯುತ್ತಿದ್ದರು. ನೀಲಕಂಠ, ನಿಧು ಬಾಬೂ, ದಾಶರಥಿರಾಯ್ ಮೊದಲಾದ ಪ್ರಾಚೀನ ಕವಿಗಳ ಗೀತೆಗಳನ್ನು ಮಾತ್ರವಲ್ಲದೆ ವೈಷ್ಣವ ಪದಾವಳಿಗಳನ್ನೂ, ಇತರ ದ್ವಿಪದಿಗಳನ್ನು ಹಾಗೂ ಭಜನೆಗಳನ್ನೂ ಅವನು ಚೆನ್ನಾಗಿ ಹಾಡುತ್ತಿದ್ದ. ವೈರಾಗ್ಯ ಗೀತೆಗಳ ಹಾಗೂ ಕೀರ್ತನೆಗಳ ವೈಶಿಷ್ಟ್ಯ ಅವನ ಕೊರಳಿನ ಸ್ಪರ್ಶವನ್ನು ಪಡೆದು ಮತ್ತಷ್ಟು ಎದ್ದು ಕಾಣುತ್ತಿತ್ತು.

"ತೋಮಾರಿ ಗರ್ಬೇ ಗರಬಿನೀ ರಾಈ, ರೂಪಸೀ ತೋಮಾರಿ ರೂಪೇ"

ಎಂಬ ಜ್ಞಾನದಾಸನ ಪದವನ್ನು ಒಂದು ದಿನ ಅವನು ಹಾಡಿದಾಗ ಅವನ ರುಗ್ಣಶೀರ್ಣಕಂಠ ಸಂಗೀತದ ಭಾರದಿಂದಾಗಿ ಒಡೆದುಹೋಗುತ್ತದೇನೋ ಎಂದು ತೋರಿತ್ತು. ಆ ಆತ್ಮವೇದನೆ ಅದೆಷ್ಟು ಅದ್ಭುತವಾಗಿತ್ತು! ಸಂಗೀತದ ಮಾಧ್ಯಮದ ಮೂಲಕ ಎಲ್ಲರ ಹೃದಯವನ್ನು ಪ್ರವೇಶಿಸಿದ ಆ ಮಾರ್ಮಿಕ ಕ್ರಂದನ ಅದೆಂತಿತ್ತು! ಆ ಕ್ಷಣದಲ್ಲಿಯೇ ಅವನು ಅದೆಷ್ಟು ಮಂದಿ ಭಕ್ತರನ್ನು ಗಳಿಸಿಕೊಂಡನೋ ಏನೋ!

ಅಂದು ಮಾತ್ರವೇ ಏಕೆ, ಶರತ್ ಅವರನ್ನು ಅದೆಷ್ಟು ಬಿಟ್ಟು ಓಡಿದರೂ, ಕಛೇರಿಯ ಅವನ ಗೆಳೆಯರು ಅವನನ್ನು ಅಷ್ಟೇ ಬಲವಾಗಿ ಕಟ್ಟಿ ಹಾಕುತ್ತಿದ್ದರು. 'ಮೆಸ್'ನಲ್ಲಿ ಯಾರ ಬಳಿಯೋ ಹಾರ್ಮೋನಿಯಮ್ ಇತ್ತು. ಯಾವಾಗಿನಿಂದ ಅದರ ಮೇಲೆ ಧೂಳು ಕುಳಿತಿತ್ತೋ ಏನೋ. ಅದನ್ನು ಕೊಡವಿ-ಒರೆಸಿ, ಒಂದು ದಿನ ಮಿತ್ರರು ಶರತ್‌ನನ್ನು ನಿಲ್ಲಿಸಿಕೊಂಡು, ಒತ್ತಾಯಪಡಿಸಿದರು: "ಶರತ್! ಇಂದು ಹಾಡಲೇಬೇಕು." ಅವನು ಹಾಡಲೇಬೇಕಾಯಿತು:

"ಶ್ರೀಮುಖ ಪಂಕಜ ದೇಖಬೋ ಬೇಂಲೇ ಹೇ ತಾಈ ಏಶೇ ಛಿಲಾಮ
ಏ ಗೋಕುಲೇ
ಆಮಾಯ ಸ್ಥಾನ ದಿಯೇ ರಾಈ ಚರಣತಲೇ"

ಅವರು ಈ ಹಾಡನ್ನು ಒಬ್ಬ ಒಳ್ಳೆಯ ಗಾಯಕನ ಬಾಯಿಂದಲೂ ಕೇಳಿದ್ದರು. ಸಂಗೀತ ಶಾಸ್ತ್ರದ ದೃಷ್ಟಿಯಿಂದ ಅವನ ಹಾಡುಗಾರಿಕೆ ಶರತ್‌ನ ಹಾಡುಗಾರಿಕೆಗಿಂತಲೂ ಶ್ರೇಷ್ಠವಾದುದಾಗಿತ್ತು. ಆದರೆ, ಅದರ ಭಾವದ ಅಥವಾ ಜೀವಾಳದ ದೃಷ್ಟಿಯಿಂದ ನೋಡಿದರೆ, ಖಂಡಿತವಾಗಿಯೂ ಶರತ್‌ನ ಕಂಠದಲ್ಲಿ ಅದು ಹೆಚ್ಚಾಗಿಯೇ ಇತ್ತು. ಆದ್ದರಿಂದಲೇ ಅಂದು ಆ ಹಾಡನ್ನು ಕೇಳಿ ಅವರು ನಕ್ಕಿದ್ದರು. ಆದರೆ, ಇಂದು ಅವರ ಕಣ್ಣುಗಳಿಂದ ಕಣ್ಣೀರು ಒಂದೇ ಸಮನೆ ಹರಿಯತೊಡಗಿತು.

ಅನೇಕ ವರ್ಷಗಳ ತರುವಾಯ 'ಶೇಷ ಪ್ರಶ್ನೆ'ಯ ಸೃಷ್ಟಿಕರ್ತ ಶಿವನಾಥನನ್ನು ಪರಿಚಯಿಸಿಕೊಡುತ್ತ ಹೀಗೆ ಬರೆದರು: "ಜೊತೆಗೆ ಅವನು ಕುಡುಕನೂ ಹೌದು. ಕುಡುಕನಾಗಿದ್ದುದರಿಂಲೇ ಆ ಅಲೆಮಾರಿಯನ್ನು ಕಾಲೇಜಿನ ಪ್ರಾಧ್ಯಾಪಕ ಹುದ್ದೆಯಿಂದಲೂ ಕಿತ್ತುಹಾಕಲಾಗಿತ್ತು. ಜೊತೆಗೆ, ಆಗಾಗ್ಗೆ ಅವನು ವೇಶ್ಯೆಯರ ಬಳಿಯೂ ಹೋಗುತ್ತಾನೆ. ಆದರೆ, ಅವನೊಬ್ಬ ಹಿರಿಯ ಮಟ್ಟದ ಗಾಯಕ. ಆದ್ದರಿಂದಲೇ ಈ ಎಲ್ಲ ದೋಷಗಳಿಂದ ಕೂಡಿದ್ದರೂ, ಸಂಗೀತ ಗೋಷ್ಠಿಗಳಿಗೆ ಅವನನ್ನು ಆದರದಿಂದ ಆಹ್ವಾನಿಸಲಾಗುತ್ತದೆ."

ಇದು ಅವನ ನಡತೆಯ ವರ್ಣನೆಯೇ ಅಲ್ಲವೆ ? ಒಳ್ಳೆಯ ಗಾಯಕನಾಗಿ ಅವನ ಖ್ಯಾತಿ ಶಿವನಾಥನ ಖ್ಯಾತಿಗಿಂತಲೂ ಕಡಿಮೆಯೇನೂ ಆಗಿರಲಿಲ್ಲ. ಈ ಇಂಪಾದ ಧ್ವನಿಯಿಂದಾಗಿಯೇ ಸಂಗೀತಗೋಷ್ಠಿಗಳಲ್ಲಿ ಅವನಿಗೆ ಗೌರವವೂ ದೊರೆಯಿತು. ಅನೇಕ ಗೆಳೆಯರೂ ದೊರೆತರು. ಸುಮಾರು ಇದೇ ಹೊತ್ತಿಗೆ 'ಪಲಾಸೀ ಯುದ್ಧ'ದ (ಪ್ಲಾಸೀ ಕದನ) ಕರ್ತೃವೂ ಸುಪ್ರಸಿದ್ಧಕವಿಯೂ ಆದ ನವೀನ ಚಂದ್ರಸೇನರು ರಂಗೂನಿಗೆ ಬಂದರು. 'ಬೆಂಗಾಲ್ ಸೋಷಿಯಲ್ ಕ್ಲಬ್' ಒಂದು ದಿವಸ ಅವರ ಗೌರವಾರ್ಥವಾಗಿ ಒಂದು ಬೃಹತ್ ಸಭೆಯನ್ನು ಏರ್ಪಡಿಸಿತು. ಈ ಸಂದರ್ಭದಲ್ಲಿ 'ಶರತ್, ಈ ಸಮಾರಂಭದಲ್ಲಿ ಪ್ರಾರ್ಥನಾ ಗೀತೆಯನ್ನು ನೀವೇ ಹಾಡಬೇಕು" ಎಂದು ಮಣೀಂದ್ರನಾಥರು ಶರತನನ್ನು ಒತ್ತಾಯಪಡಿಸಿದರು.

ಅವನು ಹಾಡಿದ - ಆದರೆ ತೆರೆಯ ಹಿಂದೆ ಕುಳಿತು. ಗೆಳೆಯರ ಗುಂಪಿನಲ್ಲಿ ಯಾವುದೇ ಸಂಕೋಚವಿಲ್ಲದೆ ಅವನು ಹಾಡಬಲ್ಲವನಾಗಿದ್ದ. ಆದರೆ ಬೃಹತ್ ಜನಸಮೂಹದ ಎದುರಿಗೆ ಹಾಡುವುದಾಗಲೀ, ಭಾಷಣ ಮಾಡುವುದಾಗಲೀ ಅವನಿಗೆ ಸಾಧ್ಯವಿರಲಿಲ್ಲ. ತನ್ನನ್ನು ತೆರೆಮರೆಯಲ್ಲಿರಿಸಿಕೊಳ್ಳುವ ಪ್ರವೃತ್ತಿ ಅವನಲ್ಲಿ ಭಯಂಕರ ರೂಪದಲ್ಲಿ ಬೆಳೆದು ನಿಂತಿತ್ತು. ಇದು ಅಹಂಭಾವವೇನೂ ಆಗಿರಲಿಲ್ಲ; ಆತ್ಮವಿಶ್ವಾಸದ ಕೊರತೆಯಷ್ಟೇ ಆಗಿದ್ದುದರಿಂದ ಈ ಬಗೆಯ ಪಲಾಯನದಲ್ಲಿಯೇ ಅವನಿಗೆ ಆನಂದ ದೊರೆಯುತ್ತಿತ್ತು. ಪರದೆಯ ಹಿಂದೆ ಕುಳಿತರೇನಾಯಿತು ? ಕಂಠದ ಮಾಧುರ್ಯವೇನೂ ನಷ್ಟವಾಗುತ್ತಿರಲಿಲ್ಲವಲ್ಲ! ಆದ್ದರಿಂದ ಅಂದು ಅವನ ಹಾಡನ್ನು ಕೇಳಿ ಸಭೆ ಮುಗ್ಧವಾದದ್ದು ಮಾತ್ರವಲ್ಲ ಸ್ವತಃ ಸೇನ್ ಅವರೂ ಆನಂದಪರವಶರಾದರು.

ರವೀಂದ್ರರ ಒಂದು ಗೀತೆಯನ್ನೂ ಅವನು ಹಾಡಿದ. ಅದನ್ನು ಹಾಡಿ ಮುಗಿಸಿದ ಮೇಲೆ ಸೇನ್ ಅವರೆಂದರು: "ನಾನು ಆ ವ್ಯಕ್ತಿಯನ್ನು ಭೇಟಿಯಾಗಬಯಸುತ್ತೇನೆ."

ಆದರೆ ಅಷ್ಟು ಹೊತ್ತಿಗಾಗಲೇ ಅವನು ಅಲ್ಲಿಂದ ಪಲಾಯನಮಾಡಿಬಿಟ್ಟಿದ್ದ. ಕವಿಶ್ರೇಷ್ಠರು ಹೇಳಿದರು: "ಇಂಥ ಮಧುರ ಕಂಠದಲ್ಲಿ ಬಂಗಾಳಿ ಸಂಗೀತವನ್ನು ನಾನು ಹೆಚ್ಚಾಗಿ ಕೇಳಿಲ್ಲ. ನೀವು ಆತನನ್ನು ಹುಡುಕಿಕೊಂಡು ಬನ್ನಿ."

ಮತ್ತೆ ಮತ್ತೆ ಒತ್ತಾಯಪಡಿಸಿದರೂ, ಅವರನ್ನು ಭೇಟಿಯಾಗಲು ಒಪ್ಪಲಿಲ್ಲ. ಹೇಗೋ ಒಂದು ರೀತಿಯಲ್ಲಿ ಭೇಟಿಯನ್ನು ಏರ್ಪಡಿಸಿದರೂ ಅವನೊಂದು ವಿಚಿತ್ರ ಸನ್ನಿವೇಶವನ್ನೇ ಸೃಷ್ಟಿಸಿಬಿಟ್ಟ. ಸೇನ್ ಅವರು ಇಳಿದುಕೊಂಡಿದ್ದ ಜಾಗಕ್ಕೆ ಹೋಗಿ, ಅವನು ಮಹಡಿಯ ಮೆಟ್ಟಿಲುಗಳನ್ನು ಹತ್ತತೊಡಗಿದ. ಕೊನೆಯ ಮೆಟ್ಟಿಲಿನಲ್ಲಿ ಕಾಲಿರಿಸುತ್ತಿದ್ದಂತೆಯೇ ಎದುರಿಗೆ ಡ್ರಾಯಿಂಗ್ ರೂಮ್ ಇದ್ದುದೂ, ವರಕವಿ ಸೇನ್ ಅವರು ರಂಗೂನ್ ಹೈಕೋರ್ಟಿನ ನ್ಯಾಯಮೂರ್ತಿಗಳಾಗಿದ್ದ ಯತೀಂದ್ರನಾಥ ಸರ್ಕಾರ್ ಅವರ ಜೊತೆಯಲ್ಲಿ ಮಾತನಾಡುತ್ತ ಕುಳಿತಿದ್ದುದೂ ಶರತ್‌ಗೆ ಕಾಣಿಸಿತು. ಒಡನೆಯೇ ಅವನು ಹಿಂದಿರುಗಿ ನಿಂತ ಹಾಗೂ ಸರಸರನೆ ಮೆಟ್ಟಿಲಿಳಿದು ಹೋಗತೊಡಗಿದ. ಸದ್ದು ಕೇಳಿ ಎಲ್ಲರೂ ಹೊರಗೆ ಬಂದರು. ಆಶ್ಚರ್ಯಚಕಿತರಾಗಿ ಸೇನ್ ನೋಡಿದರು - ಮೇಲುಗಡೆಯ ಮೆಟ್ಟಿಲಿನಲ್ಲಿ ಒಂದು ಚಪ್ಪಲಿ ಬಿದ್ದಿದೆ. ಶರತ್ ಬರಿಗಾಲಿನಲ್ಲಿಯೇ ಓಡುತ್ತ ಇದ್ದಾನೆ.

ಆದರೆ ಒಂದು ದಿನ ಶರತ್ ಆವರ ಮನೆಗೆ ಹೋಗಲೇಬೇಕಾಯಿತು. ಅವರು ಹೇಳಿದರು: "ನಿಮ್ಮ ಹಾಡನ್ನು ಕೇಳಬೇಕೆಂದು ಬಾಯಾರಿದ ಚಾತಕ ಪಕ್ಷಿಯಂತೆ ಆಸೆಯಿಂದ ಕಾದು ಕುಳಿತಿದ್ದೇನೆ."

ಶರತ್ ಉತ್ತರಿಸಿದ: "ನಾನು ಹಾಡಲೆಂದೇನೂ ಬಂದಿಲ್ಲ. ನಿಮ್ಮ ಮಗ ನಿರ್ಮಲಚಂದ್ರ ಒಳ್ಳೆಯ ಹಾಡುಗಾರ. ಆತನ ಹಾಡುಗಾರಿಕೆಯನ್ನು ಕೇಳಲೆಂದೇ ನಾನಿಲ್ಲಿಗೆ ಬಂದಿದ್ದೇನೆ."

ವರಕವಿಗಳು ಹೇಳಿದರು: "ಶರತ್‌ಚಂದ್ರರೊಂದಿಗೆ ನಿರ್ಮಲ ಚಂದ್ರನನ್ನು ಹೋಲಿಸಲಾಗುವುದಿಲ್ಲ."

ಆಗ ರಾಮಕೃಷ್ಣ ಮಿಶನ್ನಿನ ಅಧ್ಯಕ್ಷರಾಗಿದ್ದ ಸ್ವಾಮಿ ರಾಮಕೃಷ್ಣಾನಂದರು ಅಲ್ಲಿದ್ದರು. ಅವರು "ಇಂದು ಇಲ್ಲಿ ಶರತ್‌ಚಂದ್ರ ನಿರ್ಮಲಚಂದ್ರ ಮತ್ತು ನವೀನಚಂದ್ರರೆಲ್ಲ ಸೇರಿಬಿಟ್ಟದ್ದಾರೆ. ಆದರೆ ನಾನು ಶರತ್-ಸುಧೆಯನ್ನು ಪಾನಮಾಡಬಯಸುತ್ತೇನೆ" ಎಂದರು.

ಆದರೆ, ನಿರ್ಮಲಚಂದ್ರ ಹಾಡುವುದಕ್ಕೆ ಮೊದಲು ತಾನು ಹಾಡಲು ಶರತ್ ಯಾವ ರೀತಿಯಲ್ಲೂ ಒಪ್ಪಲಿಲ್ಲ. ಮೊದಲು ನಿರ್ಮಲಚಂದ್ರ ಹಾಡಿದ, ಆಮೇಲೆ ಶರತ್‌ನೂ ಹಾಡಿದ:

"ಆಮಾರ್ ರಿಕ್ತಶೂನ್ಯ ಜೀವನೇ ಸಖಾ ಬಾಕೀ ಕಿಛು ನಾಈ ।
ಓ ದಾಓ ಬಾಚೀಬಾರ್ ಮತ್ ತಾರ್ ಬೇಶೀ ನಾಈ ಚಾಈ ॥"

ಕವಿಶ್ರೇಷ್ಠ ನಿರ್ಮಲಚಂದ್ರರು ಆನಂದದಿಂದ ಮೈಮರೆತರು. "ನಿಮ್ಮ ವಾಗುಗಾರಿಕೆಯ ಭಾವೋದ್ದೀಪನದಿಂದ ಆ ಚಿರಸೌಂದರ್ಯ ಮನಸ್ಸಿನಲ್ಲಿ ಅವತರಿಸುತ್ತದೆ. ರಂಗೂನಿನಲ್ಲಿ ಇಂಥ ರತ್ನ ಅಡಗಿದೆಯೆಂಬುದು ನನಗೆ ಗೊತ್ತಿರಲಿಲ್ಲ. ನಾನಿಂದು ನಿಮಗೆ 'ರಂಗೂನ್ ರತ್ನ' ಎಂಬ ಪ್ರಶಸ್ತಿಯನ್ನು ಕೊಡುತ್ತೇನೆ" ಎಂದರು.

ಅವನಿಗೆ ಆ ಪ್ರಶಸ್ತಿಯನ್ನು ಕಾಯ್ದುಕೊಳ್ಳಲು ಸಾಧ್ಯವಾಯಿತೆ ? ಉಪೇಕ್ಷೆಯಿಂದ, ಅಹಂಕಾರದಿಂದ ಅವನು ತನ್ನ ಕಂಠಮಾಧುರ್ಯವನ್ನು ಕಳೆದುಕೊಂಡುಬಿಟ್ಟ. ದಿನಗಳೆದಂತೆ ಸಂಗೀತದ ಬಗೆಗಿನ ಅಭಿರುಚಿಯೂ ಕಡಿಮೆಯಾಗತೊಡಗಿತು. ಎರಡನೆಯ ಹಾಡನ್ನು ಹಾಡುವ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ಮೊದಲ ಗೀತೆಯನ್ನು ಹಾಡುತ್ತಿದ್ದಂತೆಯೇ ಅವನು ತಾನಿದ್ದಲ್ಲಿಂದ ಎದ್ದು ಓಡಿ ಬಿಡುತ್ತಿದ್ದ. ಗೆಳೆಯರು ಕೂಗಿ ಹೇಳುತ್ತಿದ್ದರು: "ಶರತ್, ಇದೇನು ಮಾಡುತ್ತಿದ್ದೀಯೆ ? ಘಟ್ಟದವರೆಗೆ ತಂದು ದೋಣಿಯನ್ನು ಮುಳುಗಿಸಿ ಬಿಡುತ್ತಿದ್ದೀಯಲ್ಲ ! ಎರಡನೆಯ ಗೀತೆಯನ್ನು ಹಾಡಬಯುಸದಿದ್ದರೆ ಬೇಡ. ಮೊದಲನೆಯದನ್ನಾದರೂ ಪೂರ್ಣಗೊಳಿಸು."

ಆದರೆ ಅವನು ಎಂದೂ ಯಾರ ಒತ್ತಾಯದ ಬಗೆಗೂ ಚಿಂತಿಸಿರಲಿಲ್ಲ. ಈ ಅಸ್ಥಿರ ಚಂಚಲ ಸ್ವಭಾವದಿಂದಾಗಿ ಒಂದು ದಿನ ಸಂಗೀತ ರಸ ಇಂಗಿ ಹೋಯಿತು. ಶರತ್‌ಗೆ ಹಾಡಲೂ ಬರುತ್ತದೆಂಬುದು ಜನರಿಗೆ ಮರೆತೇ ಹೋಯಿತು. ಅವನ ಆರೋಗ್ಯ ತುಂಬ ಕೆಟ್ಟಿತ್ತು. ಹಾಡುತ್ತ-ಹಾಡುತ್ತ ಅವನು ಬಳಲಿಬಿಡುತ್ತಿದ್ದ. ಜೊತೆಗೆ, ಏಕಾಂತ

ಅಧ್ಯಯನದ ಪ್ರವೃತ್ತಿ ಒಂದೇ ಸಮನೆ ಬೆಳೆಯುತ್ತ ನಡೆದಿತ್ತು. ಒಂದು ದಿನ ಈ ಪ್ರವೃತ್ತಿ ಉಳಿದೆಲ್ಲ ಪ್ರವೃತ್ತಿಗಳನ್ನು ಬದಿಗೆ ಸರಿಸಿ, ಮೇಲೇರಿ ನಿಂತಿತು. ಈ ಪಲಾಯನದ ಹಿಂದೆ ಬರಹಗಾರನ ಮೌನ ಸಾಧನೆ ಅಡಗಿತ್ತೆಂಬುದು ಯಾರ ಕಲ್ಪನೆಗೂ ನಿಲುಕಿರಲಿಲ್ಲ.

**3**

ತನ್ನನ್ನು ಅವನು ನಿರೀಶ್ವರವಾದಿಯೆಂದೇ ಬಣ್ಣಿಸಿಕೊಳ್ಳುತ್ತಿದ್ದ. ಈ ಎಲ್ಲ ವ್ಯಸನಗಳು ಹಾಗೂ ದುರ್ಗುಣಗಳಿದ್ದರೂ ಅವನ ಮನಸ್ಸು ವಿರಾಗಿಯ ಮನಸ್ಸೇ ಆಗಿತ್ತು. ಅವನು ತುಂಬ ಓದುತ್ತಿದ್ದ. ಸಮಾಜ ವಿಜ್ಞಾನ, ಯೌವನ ವಿಜ್ಞಾನ, ಭೌತ ವಿಜ್ಞಾನ, ತತ್ವಶಾಸ್ತ್ರ - ಯಾವುದನ್ನು ಬಿಟ್ಟಿರಲಿಲ್ಲ. ಮಣೀಂದ್ರ ಕುಮಾರ ಮಿತ್ರರೊಂದಿಗೆ ಪಾಶ್ಚಾತ್ಯ ದಾರ್ಶನಿಕರ ಬಗೆಗೆ ಚೆನ್ನಾಗಿಯೇ ಚರ್ಚೆ ನಡೆಯುತ್ತಿತ್ತು. ತತ್ವಶಾಸ್ತ್ರದ ಬಗೆಗಿನ ಆ ಪ್ರೀತಿಯಿಂದಾಗಿಯೇ ಅವನು ಅಲ್ಲಿಯ ರಾಮಕೃಷ್ಣ ಮಿಶನ್ನಿನ ಸ್ವಾಮಿ ರಾಮಕೃಷ್ಣಾನಂದರೊಂದಿಗೆ ಸಂಪರ್ಕವನ್ನು ಬೆಳೆಸಿಕೊಂಡ. ಮೊದಮೊದಲು ಅವನು ಮಿಸ್ತ್ರಿಪಲ್ಲಿಯ ನಿವಾಸಿಗಳ ಜೊತೆಯಲ್ಲಿ ಕೀರ್ತನೆಯಲ್ಲಿ ಭಾಗವಹಿಸಲು ಅಲ್ಲಿಗೆ ಹೋಗಿಬರುತ್ತಿದ್ದ. ಮುಂದೆ ಅವನು ಆಗಾಗ್ಗೆ ಅವರೊಡನೆ ದೇವರಿಗೆ ಸಂಬಂಧಿಸಿದ ವಿಚಾರಗಳ ಬಗ್ಗೆ ಚರ್ಚಿಸತೊಡಗಿದ. ಒಂದು ದಿನ ಅವನು ಸ್ವಾಮೀಜಿಯನ್ನು ಕೇಳಿದ: "ಸ್ವಾಮೀಜಿ, ನೀವು ದೇವರನ್ನು ಏಕೆ ಕಾಣಲಾರಿರಿ ?"

ಸ್ವಾಮೀಜಿ ಹೇಳಿದರು: "ಸಮುದ್ರದಲ್ಲಿ ರತ್ನಗಳಿವೆ; ಆದರೆ ಅವನ್ನು ಪಡೆಯಲು ಪ್ರಯತ್ನ ಮಾಡಬೇಕಾಗುತ್ತದೆ ಎಂದು ಠಾಕುರ್ ಹೇಳಿದ್ದಾರೆ. ದೇವರಿದ್ದಾನೆ. ಆದರೆ ಅವನನ್ನು ಕಾಣಲು ಸಾಧನೆ ಮಾಡಬೇಕಾಗುತ್ತದೆ. ಪಾಚಿಯಿಂದ ಮುಚ್ಚಿಹೋಗಿರುವ ಕೊಳದ ಎದುರಿಗೆ ನಿಂತಿರುವಾಗ, ನೀರು ಬೇಕೆಂದರೆ ಪಾಚಿಯನ್ನು ಬದಿಗೆ ಸರಿಸಲೇ ಬೇಕಾಗುತ್ತದೆ. ಇದೇ ರೀತಿ ಮಾಯೆ ಮುಚ್ಚಿಕೊಂಡಿರುವ ಕಣ್ಣುಗಳನ್ನಿಟ್ಟುಕೊಂಡು ದೇವರನ್ನು ನೋಡಲು ಸಾಧ್ಯವಾಗುವುದಿಲ್ಲ. ಮೊಟ್ಟಮೊದಲು ಮಾಯೆಯಿಂದ ಮುಕ್ತರಾಗಬೇಕು."

ಶರತ್ ಜಿಜ್ಞಾಸೆಯನ್ನಾರಂಭಿಸಿದ: "ಮಾಯೆ ಎಂದರೇನು ?"

ಸ್ವಾಮೀಜಿ ಹೇಳಿದರು: ವಿಷಯ, ವಸ್ತು ಮತ್ತು ಕಾಮಿನಿ-ಕಾಂಚನಗಳಲ್ಲಿ ಮುಳುಗಿರುವುದೇ ಮಾಯೆ. ಇವುಗಳ ಬಗೆಗಿನ ಮೋಹವನ್ನು ಹರಿದೊಗೆದು ಸರಳ ಸ್ವಭಾವದಿಂದ ಹಂಬಲಿಸಿದರೆ ಮನಸ್ಸು ಶುದ್ಧವಾಗುತ್ತದೆ. ದೇವರ ಕೃಪೆಯೂ ದೊರೆಯುತ್ತದೆ."

ಶರತ್‌ಚಂದ್ರ ಪ್ರಶ್ನಿಸಿದ: "ದೇವರು ಮಂಗಳಕಾರಿ ಎಂದು ಹೇಳುತ್ತಾರಲ್ಲ. ಹಾಗಿದ್ದರೂ ಲೋಕದಲ್ಲಿ ಇಷ್ಟೊಂದು ದುಃಖ ಏಕೆ ತುಂಬಿಕೊಂಡಿದೆ ?"

ಮುಗುಳ್ನಗುತ್ತ ಸ್ವಾಮೀಜಿ ಹೇಳಿದರು: "ಈ ಲೋಕದಲ್ಲಿ ಯಾವುದನ್ನು ನಾವು ದುಃಖವೆನ್ನುತ್ತೇವೋ ಅದು ವಾಸ್ತವವಾಗಿ ದುಃಖವಲ್ಲ. ಅದು ಅವನಿಗೆ ದೊರೆಯುವ ದೀಕ್ಷೆ. ಸುಖ ಲಭಿಸಿದೊಡನೆಯೇ ಮನುಷ್ಯ ಅವನನ್ನು ಮರೆತುಬಿಡುತ್ತಾನೆ. ವ್ಯಥೆಯ ರೂಪದ ದುಃಖ ಉಂಟಾದಾಗಲೇ ಅವನ ಮನಸ್ಸಿಗೆ ಅರಿವು

ಉಂಟಾಗುತ್ತದೆ. ಈ ಲೋಕದಲ್ಲಿ ದುಃಖವೇ ಎಲ್ಲಕ್ಕಿಂತಲೂ ಹೆಚ್ಚು ಪ್ರಿಯವಾದ ವಸ್ತು. ಇಲ್ಲವಾದರೆ ಅವನನ್ನು ಏಕಾದರೂ ನೆನಪು ಮಾಡಿಕೊಂಡೀರಿ ? ಅವನ ಮಹಿಮೆಯನ್ನು ಕಾಣುವ ಅವಕಾಶವಾದರೂ ನಿಮಗೆಲ್ಲಿ ದೊರೆತೀತು ?"

ಶರತ್ ಒಮ್ಮೆಗೇ ಅನ್ಯಮನಸ್ಕನಂತಾಗಿಬಿಟ್ಟ. ಕೆಲವು ಕ್ಷಣಗಳ ಬಳಿಕ ಕೇಳಿದ: "ಅದೃಷ್ಟ, ದೇವರು ಮತ್ತು ಪುರುಷಪ್ರಯತ್ನವೆಂಬ ಕಥೆಗಳಿಗಿರುವ ಅರ್ಥವೇನು ?"

ಸ್ವಾಮೀಜಿ ಹೇಳಿದರು: "ಹಿಂದಿನ ಜನ್ಮದಲ್ಲಿ ಗಳಿಸಿದ ಫಲವನ್ನೇ ಅದೃಷ್ಟವೆನ್ನುತ್ತಾರೆ. ವರ್ತಮಾನ ಜೀವನದ ಕೆಲವು ಅಂಶಗಳಿಗೂ ಅದಕ್ಕೂ ಒಂದಿಲ್ಲೊಂದು ಸಂಬಂಧ ಇದೆ. ಇದನ್ನೇ ಆಡುಮಾತಿನಲ್ಲಿ ನಾವು ಕರ್ಮ ಎನ್ನುತ್ತೇವೆ. ದೇವರು ಮತ್ತು ಪುರುಷ ಪ್ರಯತ್ನ - ಇವೆರಡೂ ಒಂದೇ. ಒಂದನ್ನು ಬಿಟ್ಟು ಇನ್ನೊಂದಕ್ಕೆ ಚಾಲನೆ ಇಲ್ಲ. ಆದ್ದರಿಂದಲೇ ದೈವ ಸಾಕ್ಷಾತ್ಕಾರಕ್ಕೆ ಪುರುಷ ಪ್ರಯತ್ನ ಅಗತ್ಯವಾಗುತ್ತದೆ. ಇದೇ ರೀತಿ, ಪುರುಷ ಪ್ರಯತ್ನದ ಸಫಲತೆಗೆ ದೈವದ ಅಥವಾ ಭಗವಂತನ ಕೃಪೆ ಅಗತ್ಯವಾಗುತ್ತದೆ."

ಶರತ್ ಮತ್ತೆ ಮೌನಿಯಾದ. ಕೆಲವು ಕ್ಷಣಗಳ ಬಳಿಕ ಮತ್ತೆ ಕೇಳಿದ: "ಕಾವಿಯ ಬಟ್ಟೆಯನ್ನು ಧರಿಸದೆಯೇ ಸನ್ಯಾಸಿಯಾಗಲು ಸಾಧ್ಯವಿಲ್ಲವೆ ?"

ಸ್ವಾಮೀಜಿ ಉತ್ತರಿಸಿದರು: ಧರ್ಮಕ್ಕೆ ಸಂಬಂಧ ಇರುವುದು ಮನಸ್ಸಿನೊಡನೆ. ಕಾವಿ ಬಟ್ಟೆಯನ್ನು ಧರಿಸದಿದ್ದರೂ ಮುಕ್ತಿಯನ್ನು ಸಾಧಿಸಬಹುದು. ಮನುಷ್ಯ ಬಂಧನಕ್ಕೆ ಒಳಗಾಗುವುದು ಮನಸ್ಸಿನಿಂದಲೇ. ಆದ್ದರಿಂದ ಮೊದಲು ಮನಸ್ಸು ಮಾಡಬೇಕು. ಆಮೇಲೆ ಹೊರಗಿನ ಸಹಾಯ. ಮನಸ್ಸು ಒಳ್ಳೆಯದಾಗಿದ್ದರೆ, ಹೊರಗಿನ ಕಾವಿ ಬಟ್ಟೆ ನಿನಗೆ ನೆರವಾಗಬಲ್ಲದು. ಇಲ್ಲದೆ ಹೋದರೆ ಬೂಟಾಟಿಕೆಯನ್ನು ಸೃಷ್ಟಿಸಿದಂತಾಗುತ್ತದೆ ಅಷ್ಟೆ."

ಇದೇ ರೀತಿ ಮತ್ತೆ ಮತ್ತೆ ವಿಚಾರ ವಿನಿಮಯ ನಡೆಯುತ್ತಲೇ ಇತ್ತು. ಎಲ್ಲ ವ್ಯಸನಗಳಲ್ಲಿ ಮುಳುಗಿದ್ದರೂ, ಅವನ ವೈರಾಗ್ಯ ಶೀಲ ಮನಸ್ಸು ಸದ್ದಿಲ್ಲದ ನಿಜವಾದ ದೇವರನ್ನು ಅರಸುವತ್ತ ಕಣ್ಣಿಟ್ಟು ಸಾಗುತ್ತಿತ್ತು. ಆಗ ಇದ್ದಕ್ಕಿದ್ದಂತೆ ಪ್ಲೇಗ್ ರಂಗೂನಿನಲ್ಲಿ ಹಾವಳಿಯನ್ನೇ ಆರಂಭಿಸಿತು. ಮಿತ್ರರ ಮನೆಯಲ್ಲೂ ಇಲಿಗಳು ಬೀಳತೊಡಗಿದುವು. ಅವರು ಭಯದಿಂದ ತತ್ತರಿಸಿದರು. ಆ ಮನೆಯನ್ನು ಬಿಟ್ಟು ಊರಿಂದಾಚೆ ದೂರದಲ್ಲಿದ್ದ ಸಣ್ಣ ಮನೆಯೊಂದರಲ್ಲಿ ವಾಸಮಾಡಲು ಹೊರಟರು. ಅವರೊಡನೆ ಹೋಗುವುದು ಶರತ್‌ಗೆ ಸಾಧ್ಯವಾಗಲಿಲ್ಲ. ಅವನು ಕಛೇರಿಯ ಇತರ ಸಹೋದ್ಯೋಗಿಗಳೊಂದಿಗೆ 'ಮೆಸ್'ನಲ್ಲಿ ಇರತೊಡಗಿದ.

ಪ್ಲೇಗ್‌ನ ಹಾವಳಿ ಅದೆಷ್ಟು ಭಯಂಕರವಾಗಿತ್ತೆಂದರೆ ಯಾರೊಬ್ಬನೂ ಇನ್ನೊಬ್ಬನ ಬಗ್ಗೆ ಚಿಂತಿಸದೆ ಓಡಿಹೋಗಲು ಸಿದ್ಧನಾಗಿರುತ್ತಿದ್ದ. ಯಾರೂ ಹೇಳುವವರು-ಕೇಳುವವರು ಇಲ್ಲದೆ ರೋಗಿಗಳು ಒದ್ದಾಡಿ ಪ್ರಾಣಬಿಡತೊಡಗಿದ್ದರು. ಅಸಹಾಯಕರಾಗಿದ್ದವರಿಗೆ ನೆರವಾಗಲು ಶರತ್ ಯಾವಾಗಲೂ ಮುಂದಿರುತ್ತಿದ್ದ. ಇಲ್ಲಿಯೂ ಅವನು ಮುಂದೆ ಬಂದ. 'ಪ್ಲೇಗ್' ಎಂಬ ಶಬ್ದವನ್ನು ಕೇಳಿದ ಒಡನೆಯೇ ಅತ್ಯಂತ ಧೈರ್ಯಶಾಲಿಯಾಗಿದ್ದವನೂ ತನಗೆ ಅತ್ಯಂತ ಪ್ರಿಯವಾಗಿದ್ದಂಥವರನ್ನೂ ಬಿಟ್ಟು ಓಡುತ್ತಿದ್ದರೆ, ಶರತ್ ಅಪರಿಚಿತರ ಬಳಿಗೂ ಓಡಿಬರುತ್ತಿದ್ದ. ಔಷಧಿ

ಮೊದಲಾದುವನ್ನು ಕೊಂಡುಕೊಡಲೂ ಹಿಂದೆಗೆಯುತ್ತಿರಲಿಲ್ಲ. ರಾಜುವಿನ ಪಾಠಶಾಲೆಯಲ್ಲಿ ಕಲಿತಿದ್ದ ಮಾನವೀಯತೆಯ ಪಾಠವನ್ನೆಂದೂ ಅವನು ಮರೆಯಲಾರದೆ ಹೋದ.

ಅವನಿಗೆ ಎಂಥೆಂಥ ಅನುಭವಗಳು ದೊರೆತವ್ವೋ ಏನೋ. ವರ್ಷಗಳು ಕಳೆದ ಬಳಿಕ ಈ ಅನುಭವದ ಚಿತ್ರಗಳೇ 'ಶ್ರೀಕಾಂತ'ದಲ್ಲಿ ಅರಳಿ ನಿಂತುವು. ಒಂದು ದಿನ ಇದ್ದಕ್ಕಿದ್ದಂತೆಯೇ ಅವನಿಗೂ ಜ್ವರ ಕಾಣಿಸಿಕೊಂಡಿತು. ಅವನ ಜೊತೆಗಾರ ಈ ಮೊದಲೇ ರೋಗಗ್ರಸ್ತನಾಗಿದ್ದ. ಬಹಳ ಹೊತ್ತಿನವರೆಗೆ ಇಬ್ಬರೂ, ಒಬ್ಬರು ಇನ್ನೊಬ್ಬರ ತಲೆಯ ಮೇಲೆ ಮಂಜುಗಡ್ಡೆಯ ಚೀಲವನ್ನು ಇರಿಸುತ್ತ ಇದ್ದರು. ಆದರೆ, ಜೊತೆಗಾರನ ಸ್ಥಿತಿ ಒಂದೇ ಸಮನೆ ಕೆಡುತ್ತ ಹೋಯಿತು. ನಡುನಡುವೆ ಅವನಿಗೆ ಪ್ರಜ್ಞೆ ಮರಳುತ್ತಿತ್ತು. ತನ್ನ ಕೊನೆಗಾಲ ಸಮೀಪಿಸಿದ್ದುದನ್ನು ಅರಿತು ಅವನು ಶರತ್‌ನೊಂದಿಗೆ ಹೇಳಿದ: "ನನ್ನ ಪೆಟ್ಟಿಗೆಯಲ್ಲಿ ಕೆಲವು 'ಗಿನಿ'ಗಳಿವೆ. ಅವನ್ನು ನನ್ನ ಹೆಂಡತಿಗೆ ತಲುಪಿಸಿಬಿಡು."

ಮೆಸ್‌ನಲ್ಲಿದ್ದ ಇತರ ವ್ಯಕ್ತಿಗಳು ತಮಗೆ ನೆರವಾಗಬಹುದೆಂದು ಶರತ್ ನಿರೀಕ್ಷಿಸಿದ್ದ. ಆದರೆ ಯಾರೊಬ್ಬರೂ ಬರಲಿಲ್ಲ. ಹೆದರುತ್ತ ಹೆದರುತ್ತಲೇ ಅವನು ಎದುರಿನ ಕೋಣೆಯಲ್ಲಿ ಇಣುಕಿ ನೋಡಿದ: ಇಬ್ಬರು ತಲೆದಿಂಬಿನ ಮೇಲೆ ತಲೆ ಇರಿಸಿಕೊಂಡು ನಿದ್ದೆ ಹೋಗಿದ್ದಾರೆ. ಆದರೆ ಸಾವಿರ ಸಲ ಅರಚಿಕೊಂಡರೂ ಭಂಗಬಾರದಂಥ ನಿದ್ದೆ ಅದು. ಹಿಂದಿರುಗಿ ಬಂದುನೋಡಿದರೆ ಈ ಗೆಳೆಯನೂ ಒದ್ದಾಡುತ್ತಿದ್ದಾನೆ. ಎರಡು ಕ್ಷಣಗಳ ಬಳಿಕ ಅವನೂ ನಿದ್ರೆ ಹೋದ. ಇದೂ ಯಾರೂ ಎಬ್ಬಿಸಲಾಗದಂಥ ಆ ನಿದ್ದೆಯೇ ಆಗಿತ್ತು.

ಅಂದು ರಾತ್ರಿ ಅವನಿಗೆ ನಿದ್ದೆ ಬರಲಿಲ್ಲ. ಮಾರನೆಯ ದಿವಸ ಪೊಲೀಸರನ್ನು ಕರೆಸುವುದರಲ್ಲಿ, ತಂತಿ ಕೊಡುವುದರಲ್ಲಿ ಹಾಗೂ ಶವದಹನಕ್ಕೆ ಏರ್ಪಾಡು ಮಾಡುವುದರಲ್ಲಿ ಸಂಜೆಯಾಗಿ ಹೋಯಿತು. ಆರೋಗ್ಯ ಇನ್ನು ಸುಧಾರಿಸಿರಲಿಲ್ಲ. ಹೋಗಬಯಸಿದರೂ ಎಲ್ಲಿಗೆ ಹೋಗಲು ಸಾಧ್ಯವಿತ್ತು? ಅದೃಷ್ಟವಶಾತ್ ಅವನಿಗೆ ಬಂದಿದ್ದ ಜ್ವರ ಪ್ಲೇಗಿನ ಜ್ವರವಾಗಿರಲಿಲ್ಲ. ಕೆಲವು ದಿನಗಳ ಬಳಿಕ ಅವನ ಆರೋಗ್ಯ ಸಂಪೂರ್ಣವಾಗಿ ಸುಧಾರಿಸಿತು. ಆದರೆ, ಈ ದಿನಗಳನ್ನು ಅವನು ಎಲ್ಲಿ ಹಾಗೂ ಹೇಗೆ ಕಳೆದ ಎಂಬುದು ಯಾರಿಗೂ ಸರಿಯಾಗಿ ಗೊತ್ತಿಲ್ಲ.

ನಡುನಡುವೆ ಅವನು ನಿಮ್ನ ವರ್ಗಗಳಿಗೆ ಸೇರಿದ ಜನಗಳು ವಾಸಿಸುತ್ತಿದ್ದ ಮಿಸ್ತ್ರಿಪಲ್ಲಿಯಲ್ಲಿಯೂ ಹೋಗಿ ಇರುತ್ತಿದ್ದ. ಅವನ ಹೃದಯದಲ್ಲಿ ಅಡಗಿದ್ದ ನೈಚ್ಯಾನುಸಂಧಾನದ ಅಥವಾ ಕೀಳರಿಮೆಯ ಭಾವನೆ ಸಭ್ಯ ಸಮಾಜದಿಂದ ದೂರವಿರುವ ಸಣ್ಣವರೆಂದು ಹೇಳಲಾಗುವ ಜನರ ನಡುವೆಯೇ ಅವನಿಗೆ ಆನಂದವನ್ನು ತಂದುಕೊಡುತ್ತಿತ್ತು. ತಾಯ್ನಾಡಿನಲ್ಲಂತೂ ಅವನನ್ನು ಜಾತಿಯಿಂದ ಹೊರಹಾಕಲಾಗಿತ್ತು. ಇಲ್ಲಿಯೂ ಉಚ್ಚ ವರ್ಗಕ್ಕೆ ಸೇರಿದ ಬಂಗಾಳಿಗಳೂ ಅವನನ್ನು ದ್ವೇಷಿಸುತ್ತಿದ್ದರು. ಅವನ ನೆಂಟರೂ ಅವನನ್ನು ತಮ್ಮವನೆಂದು ಹೇಳಿಕೊಳ್ಳಲು ಸಂಕೋಚಪಡುತ್ತಿದ್ದರು. ಅಧಾರ್ಮಿಕತೆಯತ್ತ ಹಾಗೂ ಅಧಃಪತನದತ್ತ ಕೊಂಡೊಯ್ಯುವಂಥ ಶರತ್‌ನಂಥವರೊಂದಿಗೆ ಯಾವುದೇ ಸಂಬಂಧವನ್ನು

ಇರಿಸಿಕೊಳ್ಳಬಾರದೆಂಬ ಮಾತನ್ನು ಅವರೂ ಒಪ್ಪುತ್ತಿದ್ದರು. ಅವರ ವಿಷಯದಲ್ಲಿ ಸೇಡು ತೀರಿಸಿಕೊಳ್ಳಬೇಕೆಂಬ ಭಾವನೆ ಅವನ ಅಂತರ್ಯದಲ್ಲಿ ಖಂಡಿತವಾಗಿಯೂ ಮೂಡುತ್ತಿತ್ತು. ಆದ್ದರಿಂದಲೇ, ಅವನು ನಿಮ್ನ ವರ್ಗದ ಜನರನ್ನು ಮತ್ತಷ್ಟು ಹೆಚ್ಚಾಗಿ ಪ್ರೀತಿಸತೊಡಗಿದ.

ಅವನ ಈ ಪ್ರವೃತ್ತಿಯಿಂದಾಗಿ ಓದಿ-ಬರೆದು ಮಾಡುವ ಅವನ ಅಭಿರುಚಿಗೆ ಹೆಚ್ಚಿನ ನೆರವು ದೊರೆಯಿತು. ಕಛೇರಿ ಕೆಲಸ ಮುಗಿದ ಮೇಲೆ ಅವನು ಸದ್ದಿಲ್ಲದೆ, ಅಲ್ಲಿಯ ಸುಪ್ರಸಿದ್ಧ ಗ್ರಂಥ ಭಂಡಾರವೆನಿಸಿಕೊಂಡಿದ್ದ 'ಬರ್ನಾರ್ಡ್ ಲೈಬ್ರರಿ'ಗೆ ಹೋಗಿ ಒಂದು ಮೂಲೆಯನ್ನು ಹಿಡಿದು ಓದತೊಡಗುತ್ತಿದ್ದ. ಅವನಿಗೆ ಅಲ್ಲಿ ಯಾವುದೇ ಬಗೆಯ ನಿರ್ಬಂಧವೂ ಇರಲಿಲ್ಲ. ಯಾವ ಬೀರುವಿನಲ್ಲಿ ಯಾವ ಪುಸ್ತಕ ಎಲ್ಲಿದೆ ಎಂಬುದು ಅವನಿಗೆ ಗೊತ್ತಿತ್ತು. ಒಂದೊಂದು ಪುಸ್ತಕವನ್ನೂ ಅವನು ಓದಿ ಮುಗಿಸಿದ್ದ. ತನ್ನ ಅಂತರಂಗದ ಗೆಳೆಯನೆಂಬಂತೆ ಅವನು ಒಂದೊಂದು ಪುಸ್ತಕವನ್ನು ಪ್ರೀತಿಸುತ್ತಿದ್ದ. ಈ ದಿನಗಳಲ್ಲಿ ಟಾಲ್‌ಸ್ಟಾಯ್ ಅವನ ಮೆಚ್ಚಿನ ಲೇಖಕನಾಗಿದ್ದ - ಅದರಲ್ಲಿಯೂ 'ಅನ್ನಾ ಕರೆನೀನಾ' ಹಾಗೂ 'ರಿಸರೆಕ್ಷನ್'ನಂಥ ಕೃತಿಗಳ ಕರ್ತೃ ಅವನಾಗಿದ್ದುದರಿಂದ. 'ಅನ್ನಾ ಕರೆನೀನಾ' ಕಾದಂಬರಿಯನ್ನಂತೂ ಅವನು ಐವತ್ತುಬಾರಿ ಓದಿದ್ದ. ಈ ಸಾಧನೆಯ ಮುದ್ರೆಯನ್ನು ಅವನ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ. 'ನಾರಿಯ ಮೌಲ್ಯ' ಹಾಗೂ 'ನಾರಿಯ ಇತಿಹಾಸ'ದಂಥ ಕೃತಿಗಳಿಗೆ ಅಗತ್ಯವಾಗಿದ್ದ ಮಾಹಿತಿಯನ್ನು ಅವನು ಇಲ್ಲಿಂದಲೇ ಸಂಗ್ರಹಿಸಿದ್ದ.

ಶಾಶ್ವತವಾಗಿ ಕಲ್ಕತ್ತೆಗೆ ಹಿಂದಿರುಗುವ ಸಂದರ್ಭದಲ್ಲಿ ಅವನು ಹೀಗೆಂದು ಹೇಳಿದ್ದ: "ಈ ಗ್ರಂಥ ಭಂಡಾರಕ್ಕಾಗಿಯೇ ನಾನು ರಂಗೂನ್ ಬಿಟ್ಟು ಹೋಗಬಯಸುವುದಿಲ್ಲ. ಕಲ್ಕತ್ತೆಯ 'ಇಂಪೀರಿಯಲ್ ಲೈಬ್ರರಿ'ಯಲ್ಲಿ ಇಷ್ಟೊಂದು ಸ್ವಾತಂತ್ರ್ಯ ಎಲ್ಲಿ ದೊರೆತೀತು ?"

'ಅಧಿಕಾರ' ಕೃತಿಯಲ್ಲಿನ ಕವಿಯ ಬಗ್ಗೆ ಸವ್ಯಸಾಚಿ ಹೀಗೆನ್ನುತ್ತಾನೆ: "ಭಾರತಿ, ನಿಮ್ಮಲ್ಲಿ ಯಾರೂ ಅವನನ್ನು ಸರಿಯಾಗಿ ಗುರುತಿಸಿಲ್ಲ. ಅವನಂಥ ವಾಸ್ತವ ಗುಣಗಳನ್ನು ಹೊಂದಿರುವ ವ್ಯಕ್ತಿ ಎಷ್ಟೇ ಹುಡುಕಿದರೂ ಸಿಕ್ಕುವುದಿಲ್ಲ. ಭಗ್ನ ವ್ಯಾಕುಲದ ಬಂಡವಾಳವನ್ನು ಮಾತ್ರವೇ ಇರಿಸಿಕೊಂಡು, ಅವನು ಸಂಚರಿಸದಿರುವಂಥ ಯಾವುದೇ ಎಡೆಯೂ ಇಲ್ಲ. ಇಷ್ಟು ಮಾತ್ರವಲ್ಲದೆ, ಅವನೊಬ್ಬ ಭಾರಿ ವಿದ್ವಾಂಸನೂ ಹೌದು. ಅವನನ್ನು ಬಿಟ್ಟರೆ, ಎಲ್ಲಿ ಯಾವ ಪುಸ್ತಕದಲ್ಲಿ ಏನೆಂದು ಬರೆದಿದೆಯೆಂದು ಹೇಳಬಲ್ಲಂಥವನು ಇನ್ನೊಬ್ಬನಿಲ್ಲ."

ಶರತ್‌ನನ್ನು ಗುರುತಿಸಬಲ್ಲಂಥವರು ತಾನೆ ಯಾರಿದ್ದರು ?

ಈ ದಿನಗಳಲ್ಲಿಯೇ ಅವನು 'ಚರಿತ್ರ ಹೀನ' ಕಾದಂಬರಿಯನ್ನು ಬರೆಯುತ್ತಿದ್ದ. ಭಾರತದಲ್ಲಿಯೇ ಅದನ್ನು ಆರಂಭಿಸಿದ್ದರೂ, 'ಮೆಸ್' ಜೀವನದ ಅನುಭವ ಅವನಿಗೆ ದೊರೆತದ್ದು ಇಲ್ಲಿಯೇ. 'ಚರಿತ್ರ ಹೀನ'ದ ನಾಯಕ ಸತೀಶ್ 'ಮೆಸ್'ನಲ್ಲಿಯೇ ವಾಸ ಮಾಡುತ್ತಿದ್ದ. ದಿನವಿಡೀ ಕೆಲಸ ಮಾಡಿದ ಮೇಲೆ ರಾತ್ರಿಯ ಹೊತ್ತು ಲಾಟೀನ್ ಉರಿಸಿಕೊಂಡು ಬರೆಯಲು ಕುಳಿತರೆ ಅವನ ಜೊತೆಗಾರರು ಸಿಡಿಮಿಡಿ ಗೊಳ್ಳುತ್ತಿದ್ದರು. ಕೂಗಿಕೂಗಿ ಹೇಳುತ್ತಿದ್ದರು: "ನೋಡಿ, ನೋಡಿ ಇವನು

ಲೇಖಕನಾಗುತ್ತಾನೆ. ಅರ್ಧರಾತ್ರಿಯಲ್ಲಿ ದೀಪ ಉರಿಸಿಕೊಂಡು ಕುಳಿತಿದ್ದಾನೆ. ಐವತ್ತು ರೂಪಾಯಿ ಸಂಬಳದ ಗುಮಾಸ್ತ ಇವನು. ಆದರೆ ಲೇಖಕನಾಗುವ ಕನಸು ಕಾಣುತ್ತಿದ್ದಾನೆ. ಇರುವುದು ಈ ಮೂತಿ, ಬಯಸುತ್ತಿರುವುದು ಮೃಷ್ಟಾನ್ನ!"

ಅವರು ಹೊಟ್ಟೆ ಬಿರಿಯುವಂತೆ ನಗುತ್ತಿದ್ದರು. ಲಾಟೀನನ್ನು ಆರಿಸಿಬಿಡುತ್ತಿದ್ದರು. ಆಗಾಗ್ಗೆ ಎಡೆಬಿಡದ ಕಾಡುಹರಟೆಯೂ ಸಾಗುತ್ತಿತ್ತು. ಇದನ್ನೆಲ್ಲ ನೋಡಿ, ಒಂದು ದಿನ ಖಾಯಂ ಆಗಿ ಮಿಸ್ತ್ರಿಪಲ್ಲಿಯಲ್ಲಿಯೇ ಹೋಗಿ ಇದ್ದುಬಿಡಬೇಕೆಂದು ಶರತ್ ನಿಶ್ಚಯಿಸಿಬಿಟ್ಟ. ಆ ಜಾಗ ನಗರದಿಂದ ಎರಡು ಮೈಲಿ ದೂರದಲ್ಲಿ ಬೋಟಾಟಾಂಗ್ - ಪೋಜಾನ್ ಡಂಗ್ ರಸ್ತೆಯಲ್ಲಿತ್ತು. ಬತ್ತ, ಮರ ಹಾಗೂ ಎರಕದ ಕಾರ್ಖಾನೆಗಳಿಗೆ ಮತ್ತು ಡಾಕ್‌ಯಾರ್ಡ್‌ಗೆ ಸಂಬಂಧಿಸಿದ ಅನೇಕ ಬಂಗಾಳಿ ಮೇಸ್ತ್ರಿಗಳು ಅಲ್ಲಿ ವಾಸವಾಗಿದ್ದರು. ಶರತ್ ಆಯ್ದುಕೊಂಡಿದ್ದ ಮನೆ ರಸ್ತೆಯ ಅಂಚಿನಲ್ಲಿಯೇ ಇತ್ತು. ಅದರ ಇನ್ನೊಂದು ಬದಿಗೆ ವಿಶಾಲವಾದ ಮೈದಾನ ಹರಡಿಕೊಂಡಿತ್ತು. ಅದು ಕೊನೆಗೊಳ್ಳುವಲ್ಲಿಂದ ಅರ್ಧಚಂದ್ರಾಕಾರದ ಪೋಜಾನ್‌ಡಂಗ್ ಕೊಲ್ಲಿ ಆರಂಭಗೊಳ್ಳುತ್ತಿತ್ತು. ಈ ದೃಶ್ಯ ತುಂಬ ಸುಂದರವಾಗಿತ್ತು. ಬಾಲ್ಕನಿಯಲ್ಲಿ ನಿಂತುಕೊಂಡು ಬಹಳ ಹೊತ್ತಿನವರೆಗೆ ಅವನು ಈ ದೃಶ್ಯವನ್ನು ನೋಡುವುದರಲ್ಲೇ ಮುಳುಗಿರುತ್ತಿದ್ದ.

ಇಲ್ಲಿಗೆ ಬಂದ ಮೇಲೆ ಮಿತ್ರಮಂಡಲಿಯೊಂದಿಗಿನ ಅವನ ಸಂಬಂಧ ತುಂಬ ಕಮ್ಮಿಯಾಗಿಬಿಟ್ಟಿತು. ತೀರ ಅಂತರಂಗದ ಮಿತ್ರರಾಗಿದ್ದಂಥವರು ಮಾತ್ರವೇ ಇಲ್ಲಿಗೆ ಬರಬಹುದಾಗಿತ್ತು. ಇಲ್ಲವಾದರೆ ಮಿಸ್ತ್ರಿಪಲ್ಲಿಯ ಕೂಲಿಗಾರರೇ ಅವನ ಸಂಗಡಿಗರಾಗಿರುತ್ತಿದ್ದರು. ಅವರು ತಮ್ಮ ತಮ್ಮಲ್ಲಿಯೇ ಸಾಕಷ್ಟು ಹೊಡೆದಾಟ ಬಡಿದಾಟ ಮಾಡಿಕೊಳ್ಳುತ್ತಿದ್ದರು, ಶರತ್ ನ್ಯಾಯತೀರ್ಮಾನ ಮಾಡಬೇಕಾಗಿ ಬರುತ್ತಿತ್ತು. ರಜೆ ಅರ್ಜಿಯನ್ನು ಬರೆದುಕೊಡುವುದು, ಮನೆಗೆ ಕಳಿಸುವ ಕಾಗದ ಹಾಗೂ ಮನಿಯಾರ್ಡರುಗಳನ್ನು ಬರೆದುಕೊಡುವುದು ಈ ಎಲ್ಲ ಕೆಲಸಗಳನ್ನೂ ಮಾಡಿಕೊಡುವುದು ಇಲ್ಲಿ ನಿಯಮವೇ ಆದಂತೆ ಆಗಿಬಿಟ್ಟದ್ದಿತು. ಅವರ ಆರೋಗ್ಯ ಸರಿಯಿಲ್ಲದೆ ಇದ್ದಾಗ ಈತ ಹೋಮಿಯೋಪತಿ ಔಷಧಿಗಳ ಚೀಲವನ್ನು ಹಿಡಿದುಕೊಂಡು ಮನೆಮನೆಗೆ ಹೋಗಿ ಅವರನ್ನು ಉಪಚರಿಸುತ್ತ ಇದ್ದ.

ಇಲ್ಲಿಗೆ ಬಂದು ವಾಸಮಾಡತೊಡಗಿ ಇನ್ನೂ ಕೆಲವು ದಿನಗಳು ಮಾತ್ರವೇ ಕಳೆದಿದ್ದುವು. ಅಷ್ಟರಲ್ಲಿಯೇ ಅವನ ಸ್ನೇಹಿತ ಬಂಗಚಂದ್ರ ಡೇ ರೋಗಗ್ರಸ್ತನಾದ. ಬಹಳ ಕಾಲದವರೆಗೆ ಶರತ್ ಅವನೊಡನೆ ಮೆಸ್‌ನಲ್ಲಿ ವಾಸವಾಗಿದ್ದ. ಪ್ರೀತಿಸಲು ಮಾತ್ರವೇ ಸಾಧ್ಯವಾಗಿದ್ದಂಥ ಆತನ ಕೆಲವೇ ಕೆಲವು ಗೆಳೆಯರಲ್ಲಿ ಅವನೂ ಒಬ್ಬನಾಗಿದ್ದ. ಪೂರ್ವ ಬಂಗಾಳದ ನಿವಾಸಿಯಾಗಿದ್ದ ಆತ ಉನ್ನತ ಶಿಕ್ಷಣವನ್ನು ಪಡೆದಿದ್ದ ಅಧ್ಯಯನಶೀಲ ವ್ಯಕ್ತಿಯಾಗಿದ್ದ. ಆಂಗ್ಲ ಪತ್ರಿಕೆಗಳಲ್ಲಿ ಅವನ ಲೇಖನಗಳು ಅಚ್ಚಾಗುತ್ತಿದ್ದುವು. ಅವನ ಜ್ಞಾನತೃಷೆ ಎಷ್ಟು ಅನಂತವಾಗಿತ್ತೋ ಅವನ ಶಾರೀರಿಕ ತೃಷೆಯೂ ಅಷ್ಟೇ ಉಗ್ರವಾಗಿತ್ತು. ಅದೆಷ್ಟು ಮುಕ್ತ ಹೃದಯದಿಂದ ಅವನು ಹಾಸ್ಯ ವಿನೋದಗಳಲ್ಲಿ ಪಾಲ್ಗೊಳ್ಳುತ್ತಿದ್ದನೋ ಅಷ್ಟೇ ಮುಕ್ತ ಹೃದಯದಿಂದ ಮದ್ಯಪಾನದಲ್ಲಿಯೂ ತೊಡಗುತ್ತಿದ್ದ. ಎರಡೂ ಬಗೆಯ ಈ ಸಮಾನ

ಗುಣಗಳಿಂದಾಗಿ ಅವರಿಬ್ಬರಲ್ಲಿ ವಿಶೇಷವಾದ ಸ್ನೇಹ ಉಂಟಾಗಿತ್ತು.

ಬಂಗಚಂದ್ರನನ್ನು ಬಂಗಾಳಿ ಗಮಾರನೆಂದು ಹೇಳಿ ಶರತ್ ಚುಡಾಯಿಸಿದರೆ ಬಂಗಚಂದ್ರ ಮನಸ್ಸಿಗೆ ಬಂದಂತೆ ಚೆನ್ನಾಗಿ ಅಂದು-ಆಡಿ ಮಾಡಿಬಿಡುತ್ತಿದ್ದ. ಬಂಗಚಂದ್ರ ನವೀನಚಂದ್ರರ ಪರಮಭಕ್ತನಾಗಿದ್ದರೆ, ಶರತ್ ಕವಿಗುರು ರವೀಂದ್ರನಾಥರ ಉಪಾಸಕನೇ ಆಗಿದ್ದ. ಈ ಇಬ್ಬರ ಕವಿತೆಗಳ ಬಗ್ಗೆ ಅವರು ಚರ್ಚಿಸತೊಡಗಿದರೆಂದರೆ , ಆ ವಾದ-ವಿವಾದಗಳಿಗೆ ಕೊನೆಯೆಂಬುದೇ ಇರುತ್ತಿರಲಿಲ್ಲ. ಆದರೆ, ಶರತ್ ತರ್ಕಕ್ಕೆ ಎಡೆಗೊಡದೆ-

"ತೋಮಾರ್ ಕಥಾ ಹೇಥಾ ಕೇಹಿತೋ ಬುಲೇ ನಾ
ಕರೇ ಶುಧೂ ಮಿಥೇ ಕೋಲಾಹಲ್,
ಸುಧಾ ಸಾಗರೇರ್ ತೀರೇತೇ ಬಸಿಯಾ
ಪಾನ್ ಕರೇ ಶುಧೂ ಹಲಾಹಲ್"

ಎಂಬ ಕವಿಗುರುವಿನ ಈ ಕವಿತೆಯನ್ನು ಓದತೊಡಗಿದರೆ, ಬಂಗಚಂದ್ರ ತೆಪ್ಪಗಾಗಿ ಬಿಡುತ್ತಿದ್ದ.

ಪೂರ್ವ ಮತ್ತು ಪಶ್ಚಿಮ ಬಂಗಾಳಗಳ ನಡುವಣ ಸ್ಪರ್ಧೆ ಎಲ್ಲರಿಗೂ ತಿಳಿದಿರುವಂಥ ಸಂಗತಿ. ಆದರೆ ಈ ಕಾರಣಕ್ಕಾಗಿಯೇ ಅವರಿಬ್ಬರ ನಡುವೆ ಎಂದೂ ಮನಸ್ತಾಪ ಉಂಟಾಗಲಿಲ್ಲ. ಮನಸ್ಸಿಗೆ ಬಂದಂತೆ ಹರಟುವುದು, ಹಾಸ್ಯ-ವಿನೋದ, ಕುಡಿಯುವುದು-ಕುಡಿಸುವುದು, ಗಹನವಾದ ತತ್ತ್ವಶಾಸ್ತ್ರ ಸಂಬಂಧವಾದ ವಿಷಯಗಳನ್ನು ಕುರಿತ ವಾದ-ವಿವಾದ - ಇವೆಲ್ಲ ಒಟ್ಟಿಗೆ ಹಾಗೂ ಒಂದೇ ರೀತಿಯಲ್ಲಿ ನಡೆಯುತ್ತಿದ್ದುವು. ಬಂಗಚಂದ್ರ ಶರತ್‌ನ ಪ್ರತಿಭೆಯನ್ನು ಗುರುತಿಸಿದ್ದ; ಶರತ್ ಬಂಗಚಂದ್ರನ ಅಪಾರ ಜ್ಞಾನದಿಂದ ಪ್ರಭಾವಿತನಾಗಿದ್ದ. ಆದರೆ, ಒಡೆಯದಂಥ ಅವರ ಗೆಳೆತನಕ್ಕೆ ಕಾರಣವಾಗಿದ್ದುದು ಅವರ ಹೃದಯದಲ್ಲಿ ದಟ್ಟವಾಗಿದ್ದ ಮಾನವೀಯತೆಯ ಭಾವನೆ.

ಆದ್ದರಿಂದ ಬಂಗಚಂದ್ರ ಕಾಯಿಲೆ ಬಿದ್ದಿದ್ದ ಸುದ್ದಿ ತಿಳಿದೊಡನೆಯೇ ಶರತ್ 'ಮೆಸ್'ಗೆ ಹೋದ. ರೋಗ ನಿಜವಾಗಿಯೂ ತೀವ್ರವಾಗಿಯೇ ಇತ್ತು. ಹತ್ತಿರದ ಬಂಧು-ಬಾಂಧವರೆಲ್ಲ ಅವನನ್ನು ತ್ಯಜಿಸಿ ಹೊರಟುಹೋಗಿದ್ದರು. ಆದರೆ ಶರತ್ ಮನಃಪೂರ್ವಕವಾಗಿ ಅವನ ಸೇವೆಯಲ್ಲಿ ತೊಡಗಿದ. ಅವನ ಆರೋಗ್ಯ ಸ್ವಲ್ಪಮಟ್ಟಿಗೆ ಸುಧಾರಿಸಿದಾಗ, ಅವನನ್ನು ತನ್ನ ಮನೆಗೇ ಕರೆದುಕೊಂಡು ಬಂದ. ಒಂಟಿಯಾಗಿದ್ದನಾದರೂ ಅವನಿಗಾಗಿ ಔಷಧಿಯನ್ನು ತರುತ್ತಿದ್ದ. ನೀರು ಕಾಯಿಸಿ ಮೈ ಒರೆಸುತ್ತಿದ್ದ; ಸಾಬೂದಾಣೆ ತಯಾರಿಸಿ ತಿನ್ನಿಸುತ್ತಿದ್ದ; ಇವುಗಳ ಮಧ್ಯೆ ಹಾಸ್ಯ-ವಿನೋದ ಮತ್ತು ಕಾಡುಹರಟೆ ಅಡೆ-ತಡೆಗಳಿಲ್ಲದೆ ಸಾಗುತ್ತಿತ್ತು. ಆದರೆ ಇಷ್ಟೆಲ್ಲ ಮಾಡಿಯೂ ಅವನು ತನ್ನ ಗೆಳೆಯನ ಪ್ರಾಣವನ್ನು ಉಳಿಸಿಕೊಳ್ಳಲಾರದೆ ಹೋದ. ಒಂದು ದಿವಸ ಅವನ ತೊಡೆಯ ಮೇಲೆ ತಲೆ ಇಟ್ಟುಕೊಂಡು, ಅವನತ್ತಲೇ ನೋಡುತ್ತ, ಶಾಶ್ವತವಾಗಿ ಕಣ್ಣು ಮುಚ್ಚಿಬಿಟ್ಟ. ತನ್ನ ಈ ಪ್ರೀತಿಯ ಗೆಳೆಯನ ಸಾವು ಶರತ್‌ಗೆ ತುಂಬ ದುಃಖವನ್ನುಂಟು ಮಾಡಿತು. ಅಂದು ಅವನ ಹೃದಯಕ್ಕೆ ಮತ್ತೊಮ್ಮೆ ಮರ್ಮಾಂತಕವಾದ ಆಘಾತ ಉಂಟಾಯಿತು. ಹಾಸ್ಯ-ವಿನೋದ,

ಹಾಡು-ಹರಟೆಗಳೆಲ್ಲ ಅಂದೇ ಮುಗಿದುಹೋದುವು. ಒಂಟಿತನ, ಚಿಂತನೆ ಮತ್ತು ಸಾಹಿತ್ಯಸೃಷ್ಟಿಯಷ್ಟೇ ಅವನ ಪಾಲಿಗೆ ಉಳಿದುವು. ಅವನ ವೈರಾಗ್ಯಶೀಲ ಮನಸ್ಸು ಮತ್ತಷ್ಟು ವೈರಾಗ್ಯಯುಕ್ತವಾಯಿತು.

4

ಒಂದು ದಿನ ಏನಾಯಿತೆಂದರೆ ಎಂದಿನಂತೆ ಅವನು ರಾತ್ರಿ ತಡವಾಗಿ ಬಂದ, ಬಾಗಿಲನ್ನು ತೆರೆಯುವ ಸಲುವಾಗಿ ಒದ್ದರೆ, ಅದನ್ನು ಒಳಗಿನಿಂದ ಭದ್ರಪಡಿಸಿರುವುದು ಕಂಡುಬಂದಿತು. ಒಳಗೆ ಯಾರಿರಬಹುದು ಎಂದು ಅವನಿಗೆ ಆಶ್ಚರ್ಯವಾಯಿತು. ಕಳ್ಳನೇನೂ ನುಗ್ಗಿಲ್ಲವಷ್ಟೆ! ಅವನು ಮತ್ತೆ ಬಾಗಿಲನ್ನು ಜೋರಾಗಿ ಒದ್ದ. ಬಾಗಿಲನ್ನು ನಿಜವಾಗಿಯೂ ಮುಚ್ಚಲಾಗಿತ್ತು. "ಒಳಗೆ ಯಾರಿದ್ದೀರಿ ?" ಎಂದು ಅವನು ಕೇಳಿದ.

ಉತ್ತರವೇ ಇಲ್ಲ.

ಮತ್ತೆ ಕರೆದ, ಮತ್ತೆ-ಮತ್ತೆ ಕೂಗು ಹಾಕಿದ - ಅರಚುತ್ತಿದ್ದಾನೋ ಎಂಬಂತೆ. ಆಗ ಎಲ್ಲಿಯೋ ಸ್ವಲ್ಪ ಸದ್ದಾದಂತಾಯಿತು. ಬಾಗಿಲು ತೆರೆಯಿತು. ವಿಮೂಢನೂ ವಿಸ್ಮಿತನೂ ಆಗಿ ಶರತ್ ನೋಡಿದ. ಬಿರುಗಾಳಿಗೆ ಸಿಕ್ಕ ತರಗೆಲೆಯಂತೆ ನಡುಗುತ್ತ ನಿಂತಿದ್ದಾಳೆ, ಕೆಳಗಿನ ಬೀದಿಯಲ್ಲಿ ವಾಸಿಸುತ್ತಿದ್ದ ಯಜ್ಞೇಶ್ವರ ಮೇಸ್ತ್ರಿಯ ಮಗಳು ಶಾಂತಿ. ಕಣ್ಣುಗಳಿಂದ ಕಣ್ಣೀರಿನ ಝರಿ ಹರಿಯುತ್ತಿದೆ. ದೃಷ್ಟಿ ಕೆಳಗೆ ಮಾಡಿ ಅವಳು ನಿಂತೇ ಇದ್ದಾಳೆ. ಶರತ್ ನೋಡುತ್ತ ನಿಂತ, ಯೋಚಿಸುತ್ತ ನಿಂತ. ಯುಗಗಳಂತೆ ತೋರಿದ ಎರಡು ಕ್ಷಣಗಳ ಬಳಿಕ ಅವನು ಕೇಳಿದ; "ಏನು ಸಮಾಚಾರ, ಶಾಂತಿ ? ಏನು ಮಾಡಬೇಕೆಂದು ಇಲ್ಲಿಗೆ ಬಂದಿದ್ದೀಯೆ ?"

ಕೆಲವು ಕ್ಷಣಗಳವರೆಗೆ ಮತ್ತೆ ಮೌನ ನೆಲೆಸಿತ್ತು. ಮತ್ತೆ ಮತ್ತೆ ಆಶ್ವಾಸನೆ ಕೊಟ್ಟ ಮೇಲೆ, ಹೇಗೋ ಮನಸ್ಸನ್ನು ಹಿಡಿತಕ್ಕೆ ತಂದುಕೊಂಡು ಅವಳು ಹೇಳಿದಳು: "ಅಪ್ಪ ಒಂದಿಷ್ಟು ದುಡ್ಡು ತೆಗೆದುಕೊಂಡು, ಆ ಕುಡುಕನೂ ಧೂರ್ತನೂ ಆದ ಮುದುಕ ಘೋಷಾಲ್‌ನೊಂದಿಗೆ ನನ್ನ ಮದುವೆ ಮಾಡಿಬಿಡಬೇಕೆಂದು ತೀರ್ಮಾನಿಸಿದ್ದಾನೆ. ಇಂದು ಕುಡಿದ ಮತ್ತಿನಲ್ಲಿ ಅವನು ನನ್ನ ವಿಷಯದಲ್ಲಿ ಸ್ವಾತಂತ್ರ್ಯವಹಿಸಲು ಪ್ರಯತ್ನಿಸಿದ. ಅವನಿಗೆ ಹೆದರಿಕೊಂಡೇ ನಾನಿಲ್ಲಿಗೆ ಬಂದು ಅಡಗಿಕೊಂಡಿದ್ದೆ...."

ಈ ಮಾತುಗಳನ್ನು ಹೇಳುತ್ತ ಹೇಳುತ್ತ ಶಾಂತಿ ಶರತ್‌ನ ಕಾಲುಗಳನ್ನು ಹಿಡಿದುಕೊಂಡು ದೀನಸ್ವರದಲ್ಲಿ ಹೇಳಿದಳು: "ನನ್ನನ್ನು ಕಾಪಾಡಿ. ನನ್ನನ್ನು ಹೇಗಾದರೂ ರಕ್ಷಿಸಿ."

ಇನ್ನು ಯೋಚಿಸುವುದಕ್ಕೆ ಏನೂ ಉಳಿದಿರಲಿಲ್ಲ. ಶಾಂತಿ ಅವನ ಆಶ್ರಯವನ್ನು ಅರಸಿ ಬಂದಿದ್ದಾಳೆ. ಅವನು ಹಿಂದೆ ಸರಿಯುವುದಾದರೂ ಹೇಗೆ ? ಹೇಳಿದ: "ಹೆದರಬೇಡ, ಶಾಂತಿ. ಇಂದು ರಾತ್ರಿ ನೀನು ಇಲ್ಲಿಯೇ ನಿದ್ದೆ ಮಾಡು. ನಾನು ಬೇರೆಲ್ಲಿಗಾದರೂ ಹೋಗುತ್ತೇನೆ. ನಾಳೆ ಬೆಳಿಗ್ಗೆ ಬಂದು ಏನಾದರೊಂದು ವ್ಯವಸ್ಥೆ ಮಾಡುತ್ತೇನೆ."

ಯಜ್ಞೇಶ್ವರ ಮೇಸ್ತ್ರಿಯ ಮನೆ ಪುಂಡುಪೋಕರಿಗಳ ನೆಲೆ ಎಂಬುದು ಅವನಿಗೆ

ಗೊತ್ತಿತ್ತು. ಕುಡುಕರು ಅಫೀಮುಕೋರರು - ಇವರೇ ಅವನ ಗೆಳೆಯರು, ಸಂಗಡಿಗರು. ಹೆಂಡತಿ ಇರಲಿಲ್ಲ. ಹೀಗಾಗಿ ಬಡಪಾಯಿ ಶಾಂತಿಯೇ ಅವನ ಬೇಕು-ಬೇಡಗಳನ್ನು ಪೂರೈಸುತ್ತ ಬೇಸತ್ತು ಹೋಗಿದ್ದಳು. ಸ್ವಲ್ಪ ಏರು-ಪೇರಾದರೂ, ನಿಷ್ಕರುಣೆಯಿಂದ ಆ ಚಕ್ರವರ್ತಿ ಅವಳನ್ನು ಸದೆಬಡಿಯುತ್ತಿದ್ದ. 'ಅಧಿಕಾರ' ಕಾದಂಬರಿಯಲ್ಲಿ ಭಾರತಿ ಇಂಥವನೇ ಒಬ್ಬ ಬಂಗಾಳಿ ಮೇಸ್ತ್ರಿಯ ಮನೆಯಲ್ಲಿ ಕಾಲಿರಿಸಬೇಕಾಗುತ್ತದೆ. ಅವನು ನಡುವಯಸ್ಸು ದಾಟಿದವನು. ಕಾರ್ಖಾನೆಯೊಂದರಲ್ಲಿ ಹಿತ್ತಾಳೆ ಎರಕದ ಕೆಲಸ ಮಾಡುತ್ತಿರುತ್ತಾನೆ. ಹೆಂಡ ಕುಡಿದು ಬಂದು, ಮರದ ಮಂಚದ ಮೇಲೆ ಬಂದುರುಳಿಕೊಂಡು, ಯಾರಿಗೋ ಕೆಟ್ಟ ಕೆಟ್ಟ ಬೈಗುಳನ್ನು ಬಯ್ಯುತ್ತ ಇರುತ್ತಾನೆ. ಭಾರತಿ ಕೇಳುತ್ತಾಳೆ: ಮಾಣಿಕ್, ಯಾರ ವಿಷಯದಲ್ಲಿ ಕೋಪಮಾಡಿಕೊಂಡಿದ್ದೀಯೆ ? ಸುಶೀಲಾ ಎಲ್ಲಿ ? ಈಗ ಎರಡು ದಿವಸಗಳಿಂದ ಅವಳೇಕೆ ಶಾಲೆಗೆ ಬರುತ್ತಿಲ್ಲ ?

ಮಾಣಿಕ್ ಹೇಗೋ ಮಾಡಿ, ಕೈಕಾಲುಗಳನ್ನು ಆಶ್ರಯಿಸಿಕೊಂಡು ಎದ್ದು ಕುಳಿತು, ದುರುಗುಟ್ಟಿಕೊಂಡು ನೋಡಿ, ಅವಳನ್ನು ಗುರುತಿಸಿದ ಬಳಿಕ ಹೇಳುತ್ತಾನೆ: "ಅಕ್ಕಾ ಅವರೆ! ಬನ್ನಿ ಕುಳಿತುಕೊಳ್ಳಿ. ಸುಶೀಲಾ ನಿಮ್ಮ ಶಾಲೆಗೆ ಹೇಗೆ ಬರಲು ಸಾಧ್ಯವಾಗುತ್ತೆ, ಹೇಳಿ. ಅಡುಗೆ ಮಾಡುವುದು, ಪಾತ್ರೆ ಪಡಗ ತೊಳೆಯುವುದು, ಬಟ್ಟೆಬರೆ ಒಗೆಯುವುದು ಮಗನನ್ನು ನೋಡಿಕೊಳ್ಳುವುದು - ಇದನ್ನೆಲ್ಲ ಅವಳೇ ಮಾಡಬೇಕಾಗಿದೆ. ಎದೆ ಒಡೆದು ಹೋಗುತ್ತದೆ. ಅಕ್ಕಾ ಅವರೆ. ಭಾವನೆಂಟ ಜದವಾನನ್ನು ಕೊಂದು ಹಾಕದಿದ್ದರೆ, ನಾನು ಕಾಯಸ್ಥ ವಂಶದಲ್ಲಿ ಹುಟ್ಟಿದವನೇ ಅಲ್ಲ. ದೊಡ್ಡ ಸಾಹೇಬರಿಗೆ ಹೇಗೆ ಅರ್ಜಿ ಗುಜರಾಯಿಸುತ್ತೇನೆ ಅಂದರೆ ಆ ಬಡ್ಡೀ ಮಗನ ಕೆಲಸವೇ ಹೋಗಿಬಿಡಬೇಕು."

ತನಗೆ ಅರಿವಿಲ್ಲದಂತೆಯೇ ಶಾಂತಿಯ ವಿಷಯದಲ್ಲಿ ಶರತ್‌ಗೆ ಸಹಾನುಭೂತಿ ಮೂಡಿತ್ತು. ಆದ್ದರಿಂದ ಬೆಳಿಗ್ಗೆಯೇ ಬಂದು ಅವಳ ತಂದೆಯನ್ನು ಕೇಳಿದ: "ಮುದಿಯ ಘೋಷಾಲನಿಗೆ ಶಾಂತಿಯನ್ನು ಕೊಟ್ಟು ಮದುವೆ ಮಾಡಬೇಕು ಎಂದು ಕೊಂಡಿದ್ದೀಯಂತಲ್ಲ, ಹೌದೆ ?"

ಯಜ್ಞೇಶ್ವರ ಉತ್ತರಿಸಿದ: "ಹೌದು !"

"ಆದರೆ ಅವನು ಅವಳಿಗೆ ಯೋಗ್ಯನಾದ ವರ ಅಲ್ಲ. ಮುದುಕ, ಕುಡುಕ ಬೇರೆ !"

ಚಕ್ರವರ್ತಿ ಉತ್ತರ ಕೊಟ್ಟ: "ನಾನಂತೂ ಬಡವ. ಈ ವಿದೇಶದಲ್ಲಿ ಅವನಿಗಿಂತಲೂ ಉತ್ತಮನಾದ ವರನನ್ನು ನಾನೆಲ್ಲಿಂದ ಹುಡುಕಿಕೊಂಡು ಬರಲು ಸಾಧ್ಯ ? ಅವನ ಹತ್ತಿರ ದುಡ್ಡಿದೆ. ಹುಡುಗಿಗೆ ಹೊಟ್ಟೆ-ಬಟ್ಟೆಗೆ ಕಷ್ಟವೇನೂ ಆಗುವುದಿಲ್ಲ. ಕುಡುಕನಾದರೆ ಏನಾಯಿತು ? ನಾನು ಕುಡಿಯುತ್ತೇನೆ. ನೀವೂ ಕುಡಿಯುತ್ತೀರಿ. ಇನ್ನು ವಯಸ್ಸಿನ ವಿಚಾರ. ಗಂಡಸರ ವಿಷಯದಲ್ಲಿ ಯಾರು ತಾನೆ ವಯಸ್ಸನ್ನು ನೋಡುತ್ತಾರೆ ?"

ಮೇಸ್ತ್ರಿಯ ತರ್ಕವನ್ನು ಕೇಳಿ ಶರತ್ ಮುಗುಳ್ನಗತೊಡಗಿದ. ಅವನಿಗೆ ಬುದ್ಧಿವಾದ ಹೇಳಲು ತುಂಬ ಪ್ರಯತ್ನಿಸಿದ. ಆದರೆ ಎಲ್ಲವೂ ವ್ಯರ್ಥವಾಯಿತು. ಆ ಪರಿಸ್ಥಿತಿಯಲ್ಲಿ, ಯಾರಿಗೇ ಆಗಲಿ ತಿಳಿಯಹೇಳುವುದು ಅಸಾಧ್ಯವೆಂದೇ

ತೋರುತ್ತಿತ್ತು. ಆದರೂ ಶರತ್ ಹೇಳಿದ: "ನೀನು ಘೋಷಾಲನಿಗೆ ಏನು ಸಾಲ ಕೊಡಬೇಕಾಗಿದೆಯೋ ಅದನ್ನು ನಾನು ತೀರಿಸುತ್ತೇನೆ."

ಚಕ್ರವರ್ತಿ ಹೇಳಿದ: "ಅಷ್ಟರಿಂದಲೇ ಏನಾಗುತ್ತದೆ? ಹುಡುಗಿಗೆ ಹೇಗಾದರೂ ಮದುವೆ ಮಾಡಿಯೇ ತೀರಬೇಕಲ್ಲ. ಅಲ್ಲ, ನಿಮ್ಮ ಹೃದಯದಲ್ಲಿ ನಿಜವಾಗಿಯೂ ಅಷ್ಟೊಂದು ದಯೆ ಸಹಾನುಭೂತಿ ಇರುವುದು ನಿಜವಾದರೆ, ನೀವೇ ಏಕೆ ಈ ಬ್ರಾಹ್ಮಣ ಕನ್ಯೆಯನ್ನು ಮದುವೆಯಾಗಿ ನನ್ನ ಜಾತಿ-ಕುಲಗಳನ್ನು ರಕ್ಷಿಸಬಾರದು?"

ಇದನ್ನು ಕೇಳಿ ಶರತ್ ಮೂಕನಂತಾಗಿ ಬಿಟ್ಟ. ತಾನೇ ಅವಳನ್ನು ಮದುವೆಯಾಗುವ ಕಲ್ಪನೆ ಅವನ ತಲೆಯಲ್ಲಿ ಬಹುಶಃ ಮೂಡಿಯೇ ಇರಲಿಲ್ಲ. ಬಹುಶಃ ಕಿಶೋರ ವಯಸ್ಸಿನ ಆ ಅಸಫಲ ಪ್ರೇಮ ಅವನ ಹೃದಯವನ್ನು ಇನ್ನೂ ಕೊರೆಯುತ್ತಲೇ ಇತ್ತು. ಆದ್ದರಿಂದಲೇ ಅವನು ಆಗ ಅಲ್ಲಿಂದ ಹೊರಟುಹೋದ. ಆದರೆ, ಮನಸ್ಸಿನಲ್ಲಿಯೇ ಆ ಹುಡುಗಿಯ ವಿಷಯದಲ್ಲಿ ಆಗಲಿದ್ದ ಅನ್ಯಾಯಕ್ಕೆ ವಿರುದ್ಧವಾಗಿ ಪ್ರತೀಕಾರವನ್ನೆಸಗಬೇಕೆಂದು ತೀರ್ಮಾನಿಸಿದ. ಸಾಕಷ್ಟು ಪ್ರಯತ್ನಿಸಿದ. ಅಲ್ಲಿ-ಇಲ್ಲಿ ಬಹಳಷ್ಟು ಓಡಾಡಿದ. ಆದರೆ, ಅವಳಿಗೆ ಯೋಗ್ಯನಾದ ವರನನ್ನು ಹೊಂದಿಸುವುದು ಅವನಿಗೆ ಸಾಧ್ಯವಾಗಲಿಲ್ಲ. ಕೊನೆಗೊಂದು ದಿವಸ ಅವನು ಚಕ್ರವರ್ತಿಯ ಬಳಿಗೆ ಹೋಗಿ ಹೇಳಿದ: "ನಾನು ಸಿದ್ಧನಾಗಿದ್ದೇನೆ."

ಆ ಮದುವೆ ಹೇಗೆ ನಡೆಯಿತು? ರಂಗೂನಿನಲ್ಲಿದ್ದ ಎಷ್ಟು ಮಂದಿ ಕುಲೀನ ಬಂಗಾಳಿಗಳು ಅದರಲ್ಲಿ ಭಾಗವಹಿಸಿದ್ದರು? ಇದಕ್ಕೆ ಸಂಬಂಧಿಸಿದ ದಾಖಲೆಗಳು ಯಾರ ಬಳಿಯೂ ಇಲ್ಲ. ಶರತ್ ನಿಜವಾಗಿಯೂ ಮದುವೆ ಮಾಡಿಕೊಂಡಿದ್ದಾನೆ ಎಂಬುದು ಸಹ ಅವರಿಗೆ ಗೊತ್ತಿರಲಿಲ್ಲ. ಯಾವಳೋ ಒಬ್ಬ ಕೀಳು ಜಾತಿಯ ಹೆಣ್ಣಿನ ಮನೆಯಲ್ಲಿ ವಾಸ ಮಾಡುತ್ತಿದ್ದಾನೆ ಎಂದೇ ಅವರೆಲ್ಲ ಭಾವಿಸಿದ್ದರು. ಹೀಗೆ ಯಾರೋ ಒಬ್ಬ ಹೆಣ್ಣಿನೊಂದಿಗೆ ಇರುವುದು ಶುದ್ಧಾಂಗವಾಗಿ 'ಚರಿತ್ರ ಹೀನ'ತೆಯೇ ಅಲ್ಲವೆ!

ಅದೇನಾದರೂ ಆಗಿರಲಿ. ವ್ಯವಸ್ಥೆ ಎಂಬುದೇ ಇರದಿದ್ದ ಅವನ ಬದುಕಿನಲ್ಲಿ ಈಗ ಹೆಣ್ಣೊಬ್ಬಳು ಕಾಲಿರಿಸಿದ್ದಳು. ಅವಳ ಕೋಮಲ ಸ್ಪರ್ಶವನ್ನು ಪಡೆದು, ಅವನ ಬಾಳನದಿ ಆನಂದದ ಸ್ರೋತ್ರವಾಗಿ ಪರಿಣಮಿಸಿತು. ಅವನ ಬಾಳಿನಲ್ಲಿ ಹೆಣ್ಣುಗಳು ಪ್ರವೇಶಿಸಿಯೇ ಇರಲಿಲ್ಲವೆಂದೇನೂ ಅಲ್ಲ. ಆದರೆ ಸಂಸಾರಿಯಾಗಿ ಬಾಳುವ ಮೊದಲ ಸಂದರ್ಭ ಇದಾಗಿತ್ತು. ಅಂದಿನಿಂದ ಅವನ ಪಾಲಿಗೆ ಬದುಕಿನ ಅರ್ಥವೇ ಬೇರೆಯಾಗಿ ಬಿಟ್ಟಿತು. ಈಗ ಅವನು ಒಬ್ಬಂಟಿಗನಾಗಿರಲಿಲ್ಲ. ಅವನನ್ನು ಹೃದಯಾಂತರಾಳದಿಂದ ಪ್ರೀತಿಸುವಂಥ ಪ್ರಿಯತಮೆಯೊಬ್ಬಳು ಈಗ ಅವನ ಬಳಿ ಇದ್ದಳು. ಅವನು ಅವಳ ಪಾಲಿಗೆ ಗಂಡ ಮಾತ್ರವಾಗಿರದೆ, ಅವಳನ್ನು ಪಾರುಮಾಡಿದ ದೇವನೂ ಆಗಿದ್ದುದೇ ಅವಳ ಈ ಅತಿಶಯವಾದ ಪ್ರೀತಿಗೆ ಕಾರಣವಾಗಿತ್ತು.

ಅದೆಷ್ಟು ದುಃಖಗಳ ನಡುವೆ ಹಾಯ್ದು ಬಂದು ಇದೀಗ ಅವನು ಈ ಸುಖವನ್ನು ಪಡೆದಿದ್ದನೋ ಏನೋ? ಇಬ್ಬರೂ ಅದೆಷ್ಟು ಹೊತ್ತಿನವರೆಗೆ ಮಾತುಕತೆಗಳಲ್ಲಿ ತೊಡಗಿರುತ್ತಿದ್ದರೋ ಏನೋ? ಒಬ್ಬರು ಇನ್ನೊಬ್ಬರ ಕಣ್ಣಿನಲ್ಲಿ ಇಣುಕಿ ನೋಡುತ್ತ ಇದ್ದರು. ಕಛೇರಿಯ ಗೆಳೆಯರು ಇವನನ್ನು ಷಂಡನೆಂದು ರೇಗಿಸತೊಡಗಿದ್ದರು. ಆದರೆ ಅವನು ಇದಾವುದನ್ನು ತಲೆಗೆ ಹಚ್ಚಿಕೊಳ್ಳಲೇ ಇಲ್ಲ. ಮಿಸ್ತ್ರಿಪಲ್ಲಿಯ ಜನರಿಂದ

ಕರೆಬಂದರೆ ಹೋಮಿಯೋಪತಿ ಔಷಧಿಗಳ ಪೆಟ್ಟಿಗೆಯನ್ನು ಹಿಡಿದುಕೊಂಡು ಅವರ ಸೇವೆಗೆಂದು ಹೊರಟುಬರುತ್ತಿದ್ದ. ಅಥವಾ ಯಾವಾಗಲಾದರೂ ಓದಬೇಕೆಂಬ ಅಥವಾ ಬರೆಯಬೇಕೆಂಬ ಬಯಕೆ ಮೂಡಿದರೆ, ಹೊಸ ಅನುಭೂತಿಯೊಂದಿಗೆ ಆ ಸಾಧನೆಯಲ್ಲಿ ತೊಡಗಿರುತ್ತಿದ್ದ. ಇಲ್ಲವಾದರೆ, ಅವನ ಪ್ರಪಂಚವೆಲ್ಲ ಈಗ ಶಾಂತಿಗೆ ಮಾತ್ರ ಸೀಮಿತಗೊಂಡಿತ್ತು.

ನಿಧಾನವಾಗಿ ಒಂದು ವರ್ಷ ಕಳೆಯಿತು. ಹೊಸ ಜೀವವೊಂದು ಅವರ ಬದುಕಿನಲ್ಲಿ ಪ್ರವೇಶಿಸಿತು. ಮಗುವಿನ ಮಂಜುಳ ಧ್ವನಿ ಆ ಮನೆಯಲ್ಲಿ ಮೊಳಗತೊಡಗಿತ್ತು. ಪ್ರೀತಿ-ಸಹಾನುಭೂತಿಗಳನ್ನು ಕಾಣದೆ ಆಶ್ರಯಹೀನನೆಂಬಂತೆ ಇದುವರೆಗೂ ಅಲೆದಾಡುತ್ತಿದ್ದ ಹಾಗೂ ಸಭ್ಯರಿಗೆ ವರ್ಜಿತವಾಗಿದ್ದಂಥ ಎಡೆಗಳಲ್ಲಿಯೇ ಸದಾ ಆಶ್ರಯವನ್ನು ಪಡೆಯುತ್ತ ಬಂದಿದ್ದ ಅವನ ಬದುಕಿನಲ್ಲಿ ಇದೆಂಥ ಅನಿರೀಕ್ಷಿತ ಸುಖ....

ಆದರೆ ಅವನ ದೌರ್ಭಾಗ್ಯ ಇನ್ನೂ ಮುಗುಳ್ನಗುತ್ತಲೇ ಇತ್ತು. ಹೊಸಬಾಳು ಆರಂಭಗೊಂಡು ಇನ್ನೂ ಎರಡು ವರ್ಷಗಳು ಕೂಡ ಕಳೆದಿರಲಿಲ್ಲ. ಪ್ಲೇಗಿನ ಮಹಾಮಾರಿ ಮತ್ತೊಮ್ಮೆ ರಂಗೂನ್ ನಗರದ ಮಲೆ ಆಕ್ರಮಣವನ್ನೆಸಗಿದಳು. ನಾಲ್ಕೂ ಕಡೆಗಳಲ್ಲಿ ಹಾಹಾಕಾರ ಮೊಳಗತೊಡಗಿತು. ಅಲ್ಲಲ್ಲಿ ಹೆಣಗಳು ಕಾಣಿಸತೊಡಗಿದುವು. ಆ ಅವಧಿಯಲ್ಲಿಯೇ ಒಂದು ದಿನ ಶರತ್ ಮನೆಗೆ ಹಿಂದಿರುಗಿ ಬಂದಾಗ ಶಾಂತಿ ಜ್ವರದಿಂದ ನರಳುತ್ತಿರುವುದನ್ನು ಕಂಡ. ಭಯದಿಂದ ನಡುಗಿದ. ಅವನು ತುಂಬ ಹತ್ತಿರದಿಂದಲೇ ಆ ಜ್ವರದ ಉಗ್ರರೂಪವನ್ನು ನೋಡಿದ್ದ. ಇದು ಪ್ಲೇಗ್ ಜ್ವರವೇ ಎಂಬುದು ಅವನಿಗೆ ಆ ಕ್ಷಣವೇ ತಿಳಿಯಿತು. ನೆರವು ನೀಡಬೇಕೆಂದು ನೆರೆಹೊರೆಯವರನ್ನು ಕೋರಿದ. ಆದರೆ, ಇಂಥ ಸಮಯದಲ್ಲಿ ಯಾರು ತಾನೆ ನೆರವಿಗೆ ಬಂದಾರು? ತನ್ನ ಗೆಳೆಯ ಗಿರೀಂದ್ರ ಸರ್ಕಾರನ ಬಳಿಗೆ ಧಾವಿಸಿದ. ಕಟ್ಟಿಕೊಂಡ ಕಂಠದಿಂದಲೇ ಹೇಳಿದ: "ಗೆಳೆಯ ಗಿರೀನ್! ನಾನು ತುಂಬ ಕಷ್ಟಕ್ಕೆ ಸಿಕ್ಕಿಕೊಂಡಿದ್ದೀನಿ. ಶಾಂತಿ ತೀವ್ರ ಜ್ವರದಿಂದ ಒದ್ದಾಡುತ್ತಿದ್ದಾಳೆ."

"ಇದೇನು ಹೇಳುತ್ತಿದ್ದೀಯೆ, ಶರತ್! ಯಾರಿಗಾದರೂ ತೋರಿಸಿದೆಯೇನು?"

"ಇದುವರೆಗೂ ಯಾರಿಗೂ ತೋರಿಸಿಲ್ಲ. ತಿಂಗಳ ಕೊನೆ, ಕೈಯಲ್ಲಿ ಕಾಸಿಲ್ಲ"

"ಚಿಂತಿಸಬೇಡ. ನಾನು ಈಗಲೇ ಡಾ. ಅಪೂರ್ವ ಅಥವಾ ಡಾಕ್ಟರ್ ದೇ ಅವರನ್ನು ಕರೆದುಕೊಂಡು ಬರುತ್ತೇನೆ."

ಗಿರೀಂದ್ರನಾಥ ಸರ್ಕಾರ್ ಒಂದು ಸತ್ಕಾರ್ಯ ಸಮಿತಿಯನ್ನು ಸಂಘಟಿಸಿದ್ದ. ಇಂಥ ಸಮಯದಲ್ಲಿ ರೋಗಿಗಳಿಗೆ ಚಿಕಿತ್ಸೆ ನೀಡುವಲ್ಲಿ ಅಥವಾ ರೋಗಿ ಸತ್ತಲ್ಲಿ, ಅವನ ದಹನಕಾರ್ಯಕ್ಕೆ ವ್ಯವಸ್ಥೆ ಮಾಡುವಲ್ಲಿ ಅದು ಜನರಿಗೆ ನೆರವಾಗುತ್ತಿತ್ತು. ಶರತ್ ಹೇಳಿದ: "ಈ ಸತ್ಕಾರ್ಯ ಸಮಿತಿಯನ್ನು ಸಂಘಟಿಸಿ ತುಂಬ ಪುಣ್ಯದ ಕೆಲಸ ಮಾಡಿದ್ದೀಯೆ. ಈ ಕಷ್ಟದಲ್ಲಿ ನನಗೆ ನೆರವಾಗಪ್ಪ!"

ಇಷ್ಟು ಹೇಳಿ ಹತಾಶಭಾವನೆಯಿಂದ ಕುರ್ಚಿಯ ಮೇಲೆ ಕುಸಿದು ಕುಳಿತ. ನಿಟ್ಟುಸಿರು ಬಿಡುತ್ತಾ ಹೇಳಿದ: "ಅದೃಷ್ಟ ಕಣಪ್ಪ, ಅದೃಷ್ಟ! ಹಣೆಯಲ್ಲಿ ಏನು ಬರೆದಿದೆಯೋ ಅದೇ ಆಗುತ್ತದೆ."

ಸರ್ಕಾರ್ ಅವನಿಗೆ ಸಮಾಧಾನ ಹೇಳಿದ. ಸಮಿತಿಯ ಬೀರು ತೆಗೆದು, ರೋಗಿಗೆ ಉಪಯೋಗಕ್ಕೆ ಬರುವಂಥ ಕೆಲವು ವಸ್ತುಗಳನ್ನು, ಕೆಲವು ಔಷಧಿಗಳನ್ನು ಕೊಟ್ಟ. "ನೀನು ಮನೆಗೆ ಹೋಗು. ನಾನು ನಿನ್ನ ಹಿಂದೆಯೇ ಬರುತ್ತೇನೆ."

ಸ್ವಲ್ಪ ಹೊತ್ತಿನ ಬಳಿಕ ಅವನು ವೈದ್ಯರನ್ನು ಕರೆದುಕೊಂಡು ಹೋದಾಗ, ಮರದ ಒಂದು ಮಂಚದ ಮೇಲೆ, ದುಪಟಿಯಿಂದ ಮುಖವನ್ನು ಮುಚ್ಚಿಕೊಂಡು ಮಲಗಿದ್ದ ಶಾಂತಿ ಅಚೇತನ ಸ್ಥಿತಿಯಲ್ಲಿಯೇ ಒದ್ದಾಡುತ್ತಿದ್ದಳು. ಪ್ರಾಣೋತ್ಕ್ರಮಣ ಸ್ಥಿತಿಯೇ ಉಂಟಾಗಿತ್ತು. ಮುದುಕಿಯೊಬ್ಬಳು ತಲೆದಿಂಬಿನ ಬಳಿ ಕುಳಿತುಕೊಂಡು ಬೀಸಣಿಗೆಯಿಂದ ಗಾಳಿಬೀಸುತ್ತಿದ್ದಳು. ಇದು ಪ್ಲೇಗ್ ಜ್ವರ, ರೋಗಿ ಉಳಿಯುವ ಆಸೆಯೇನೂ ಇಲ್ಲವೇ ಇಲ್ಲ ಎಂಬುದು ವೈದ್ಯರಿಗೆ ಗೊತ್ತಾಯಿತು. ಒಂದೆರಡು ಕ್ಷಣಗಳವರೆಗೆ ರೋಗಿಯನ್ನು ಪರೀಕ್ಷಿಸಿ ಅವರು ಹೊರಬಂದರು. ಶರತ್‌ನ ಕಾತರ ಮತ್ತಷ್ಟು ಹೆಚ್ಚಿತು. ವಿಕಲವಿಹ್ವಲನಾಗಿ ಹೇಗಾದರೂ ಮಾಡಿ ಶಾಂತಿಯ ಪ್ರಾಣ ಉಳಿಸಬೇಕೆಂದು ಮತ್ತೆ ಮತ್ತೆ ವೈದ್ಯರನ್ನು ಒತ್ತಾಯಪಡಿಸತೊಡಗಿದ. ಆದರೆ, ಅವರು ತಾನೆ ಏನು ಮಾಡಲು ಸಾಧ್ಯವಿತ್ತು? ಶರತ್‌ಗೆ ಸಮಾಧಾನದ ಒಂದೆರಡು ಮಾತುಗಳನ್ನು ಹೇಳಿ, ರೋಗಿಯ ಶುಶ್ರೂಷೆಯ ವಿಧಾನವನ್ನು ತಿಳಿಸಿ, ಅವರು ಅಲ್ಲಿಂದ ಹೊರಟುಹೋದರು. ಶರತ್ ಮತ್ತೆ ಶಾಂತಿಯ ಶಯ್ಯೆ ಬಳಿ ಬಂದು ಕುಳಿತ.

ಕೊನೆಯ ಕೆಲವು ಕ್ಷಣಗಳ ಮೊದಲು ಶಾಂತಿಗೆ ಪ್ರಜ್ಞೆ ಮರಳಿತು. ಕ್ಷೀಣವಾದ ಧ್ವನಿಯಲ್ಲಿ ನಿಧಾನವಾಗಿ ಅವಳು ಹೇಳಿದಳು: "ನನ್ನಿಂದಾಗಿ ನಿಮಗೆ ತುಂಬ ದುಃಖಸಂಕಟಗಳು ಒದಗಿವೆ. ಅದಕ್ಕಾಗಿ ನನ್ನನ್ನು ಕ್ಷಮಿಸಿ ಬಿಡಿ."

ಆರ್ತಸ್ವರದಲ್ಲಿ ಶರತ್ ಹೇಳಿದ: "ಇಂಥ ಮಾತುಗಳನ್ನು ಆಡಬೇಡ. ನನಗೆ ಹೆದರಿಕೆ ಆಗುತ್ತದೆ."

ಶಾಂತಿ ಹೇಳಿದಳು: "ಛಿ! ಏಕಾಗಿ ಹೆದರಿಕೆ? ಬನ್ನಿ, ನಿಮ್ಮ ಪಾದಧೂಳಿಯನ್ನು ಸ್ವಲ್ಪ ಕೊಡಿ. ಆಶೀರ್ವಾದ ಮಾಡಿ."

ಇನ್ನು ಆಶೀರ್ವಾದ ಮಾಡಲು ಏನೂ ಉಳಿದಿಲ್ಲವೆಂಬುದು ಶರತ್‌ಗೆ ಅರ್ಥವಾಯಿತು. ಎಲ್ಲ ಪ್ರಯತ್ನಗಳೂ ವ್ಯರ್ಥವಾಗಿದ್ದುವು. ಲೋಕದ ದುಃಖಕಷ್ಟಗಳನ್ನೆಲ್ಲ ಮೀರಿ ನಿಂತು, ಶಾಂತಿ ಪರಲೋಕಕ್ಕೆ ತೆರಳಿಬಿಟ್ಟಳು. ಸಾವಿನಿಂದ ಬಣ್ಣಗೆಟ್ಟಿದ್ದ ತನ್ನ ಹೆಂಡತಿಯ ಮುಖವನ್ನು ರೆಪ್ಪೆ ಮಿಟುಕಿಸದೆ ನೋಡುತ್ತ ಶರತ್ ಬಿಕ್ಕಳಿಸಿ ಅತ್ತ.

ಆಗ ಸ್ಥಿತಿ ಹೇಗಿತ್ತೆಂದರೆ ನೆರೆಹೊರೆಯವರಿಂದ ಯಾವುದೇ ನೆರವು ದೊರೆಯುವ ನಿರೀಕ್ಷೆ ಇರಲಿಲ್ಲ. ಸಭ್ಯರೆನಿಸಿಕೊಂಡಿದ್ದ ಬಂಗಾಳಿಗಳಿಂದ ಅವನು ಯಾವಾಗಲೂ ದೂರವಾಗಿಯೇ ಇದ್ದ. ಅವರಾದರೂ ಏಕೆ ಬಂದಾರು? ಆದ್ದರಿಂದ ಗಿರೀಂದ್ರನಾಥನೊಬ್ಬನ ನೆರವಿನಿಂದಲೇ ಶರತ್ ಎಲ್ಲವನ್ನೂ ಮಾಡಬೇಕಾಯಿತು. ಬಹಳ ಕಷ್ಟದಿಂದ ಒಂದು ಗಾಡಿಯನ್ನು ಬಾಡಿಗೆಗೆ ತೆಗೆದುಕೊಂಡು, ಅದರ ಮೇಲೆ ಹೆಣವನ್ನು ಹಾಕಿಕೊಂಡು ಶ್ಮಶಾನಕ್ಕೆ ತೆಗೆದುಕೊಂಡು ಹೋದನು.

ಅಲ್ಲಿ ಒಬ್ಬ ಸನ್ಯಾಸಿ ವಾಸವಾಗಿದ್ದ. ಈತ ಒಂಟಿಯಾಗಿದ್ದುದನ್ನು ಕಂಡು ಆತನೆ

ಖುದ್ದಾಗಿ ಚಿತೆಯನ್ನು ಸಿದ್ಧಪಡಿಸಿದ. ಹೀಗೆ ಶಾಂತಿ ದೇವಿಯ ದಹನ ಸಂಸ್ಕಾರ ನಡೆಯಿತು.[1]

ಶರತ್‌ನ ದುಃಖಕ್ಕೆ ಮೇರೆಯೇ ಇರಲಿಲ್ಲ. ಕಿಶೋರ ವಯಸ್ಸಿನ ಆ ವಿಫಲ ಪ್ರೇಮದಂತೆಯೇ ಈ ಆಘಾತವೂ ಅವನ ಬಾಳಿನ ಮೇಲೆ ಆಳವಾದ ಪ್ರಭಾವವನ್ನು ಬೀರಿತು. ಓದುವುದು ಬಿಟ್ಟು ಹೋಯಿತು, ಬರೆಯುವುದು ಬಿಟ್ಟು ಹೋಯಿತು. ಚಿತ್ರ ರಚನೆಯೂ ಬಿಟ್ಟು ಹೋಯಿತು. ಹುಚ್ಚನಂತೆ ಅಲ್ಲಿ-ಇಲ್ಲಿ ಅಲೆದಾಡುತ್ತಿದ್ದ. ಈ ಮಧ್ಯೆ ಆ ಮಗುವೂ ಮಹಾಮಾರಿಗೆ ಬಲಿಯಾಯಿತು. ಅನೇಕ ವರ್ಷಗಳ ಬಳಿಕ, ತನ್ನ ಗೆಳೆಯನೊಬ್ಬ ಕೈಗೆ ಬಂದಿದ್ದ ಮಗನನ್ನು ಕಳೆದುಕೊಂಡಾಗ, ಆ ಮಗನ ತಾಯಿಯೊಡನೆ ತತ್ವಜ್ಞಾನಿಯ ಉಪೇಕ್ಷಾಭಾವದೊಡನೆ ಶರತ್ ಹೀಗೆ ಹೇಳಿದ್ದ: "ಅಕ್ಕ, ನೀನು ಇಷ್ಟು ದಿವಸಗಳವರೆಗಾದರೂ ಪುತ್ರ ಸುಖವನ್ನು ಅನುಭವಿಸಿದೆ. ನನಗೆ ಒಂದು ವರ್ಷ ಕೂಡ ಆ ಸುಖ ಲಭ್ಯವಾಗಲಿಲ್ಲ." ಆದರೇನು, ಅಂದಿನ ಅವನ ವ್ಯಥೆಗೆ ಕೊನೆಯೇ ಇಲ್ಲವಾಗಿತ್ತು. ಎಲ್ಲವನ್ನೂ ಕಳೆದುಕೊಂಡು, ಮತ್ತೊಮ್ಮೆ ಅವನು ಒಬ್ಬಂಟಿಗನಾಗಿ ಬಿಟ್ಟ.

ಗೆಳೆಯರು ಸಲಹೆ ನೀಡಿದರು: "ಕೆಲವು ದಿವಸಗಳವರೆಗೆ ಬೇರೆಲ್ಲಿಯಾದರೂ ಓಡಾಡಿಕೊಂಡು ಬಾ."

ಅವನ ಇಡೀ ಬದುಕೇ ಒಂದು ಪಯಣವಾಗಿತ್ತು. ಯಾವುದೇ ಉದ್ದೇಶವಿರದ, ಗೊತ್ತುಗುರಿಗಳೂ ಇಲ್ಲದ ಪಯಣ. ಮತ್ತೊಮ್ಮೆ ಅವನು ಓಡಾಡಿಕೊಂಡು ಬರಲು ಹೊರಟ. ಆದರೆ, ಮೊದಲಿನಂತೆ ಅವನು ಈಗ ಸ್ವತಂತ್ರನಾಗಿರಲಿಲ್ಲ. ರಜೆಗೆ ಒಂದು ಮಿತಿ ಇರುತ್ತದಲ್ಲವೆ! ಕೊನೆಗೆ ಅವನು ತನ್ನ ಕೆಲಸಕ್ಕೆ ಹಿಂದಿರುಗಬೇಕಾಯಿತು. ಜೊತೆಗೆ, ನೋವನ್ನು ಸಹಿಸಿಕೊಳ್ಳಬೇಕಾಗುತ್ತದೆ. ಅದಕ್ಕೆ ಪ್ರಚಾರವನ್ನೇನೂ ಕೊಡಲಾಗುವುದಿಲ್ಲ. ಆಗಲೇ ಅದು ಶಕ್ತಿಯಾಗಿ ಪರಿಣಮಿಸುವುದು. ಹೀಗಾಗಿ ಓದುವುದು, ಬರೆಯುವುದು ಹಾಗೂ ಚಿತ್ರ ರಚನೆ ಮಾಡುವುದು ಎಂದಿನಂತೆ ಆದುವು. ಆ ನೋವು ಆಳ-ವೈಶಾಲ್ಯಗಳನ್ನು ತಂದುಕೊಟ್ಟಿತು. ಆದರೆ, ಆ ಮನೆಯಲ್ಲಿರುವುದು ಅವನಿಗೆ ಸಾಧ್ಯವಾಗಲಿಲ್ಲ. ಅದರ ಕಣಕಣದಲ್ಲೂ ಅವನ ಅಲ್ಪಕಾಲದ ದಾಂಪತ್ಯ ಜೀವನದ ನೆನಪುಗಳು ಅಚ್ಚೊತ್ತಿದ್ದುವು. ಹತ್ತಿರದಲ್ಲಿಯೇ ಇದ್ದ ಇನ್ನೊಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅವನು ಅಲ್ಲಿ ವಾಸಮಾಡತೊಡಗಿದ.

## 5

ಬಹುಮುಖೀ ಪ್ರತಿಭೆಯ ಸಂಗಮವಾಗಿದ್ದ ರವೀಂದ್ರನಾಥರಂತೆ ಶರತ್ ಕೂಡ ಸಾಹಿತ್ಯದಲ್ಲಿ ಮಾತ್ರವಲ್ಲದೆ ಸಂಗೀತ ಮತ್ತು ಚಿತ್ರಕಲೆಗಳಲ್ಲಿ ಆಸಕ್ತಿ ತೋರಿದ್ದ. ಈ ಕ್ಷೇತ್ರದಲ್ಲಿ ಹೇಳಿಕೊಳ್ಳುವಂಥ ಅವನ ಸಾಧನೆಯೇನೂ ಉಳಿದು ಬಂದಿಲ್ಲವಾದರೂ, ಅನೇಕ ವರ್ಷಗಳವರೆಗೆ ಅವನು ಚಿತ್ರಕಲೆಯನ್ನು ಅಭ್ಯಾಸ ಮಾಡಿದ್ದ ಹಾಗೂ ಅನೇಕ

1 'ಬ್ರಹ್ಮದೇಶೇ ಶರತ್': ಗಿರೀಂದ್ರನಾಥ ಸರ್ಕಾರ್

ಚಿತ್ರಗಳನ್ನು ರಚಿಸಿದ್ದ ಎಂಬುದಕ್ಕೆ ಸಾಕ್ಷಿಗಳೇನೋ ಖಂಡಿತವಾಗಿಯೂ ದೊರೆಯುತ್ತವೆ.

ಮೂರು ವರ್ಷಗಳ ಬಳಿಕ, ತನ್ನ ಮನೆಗೆ ಬೆಂಕಿ ಬಿದ್ದುದರ ಸೂಚನೆ ಕೊಡುತ್ತ ತನ್ನ ಪ್ರಿಯಮಿತ್ರನಾಗಿದ್ದ ಪ್ರಮಥನಾಥ ಭಟ್ಟನಿಗೆ ಬರೆದ ಒಂದು ಪತ್ರದಲ್ಲಿ ಹೀಗೆ ಬರೆದಿದ್ದ.[1] "ಇನ್ನೊಂದು ವಿಚಾರವನ್ನು ನಿನಗೆ ತಿಳಿಸಬೇಕಾಗಿದೆ. ಸುಮಾರು ಮೂರುವರ್ಷಗಳ ಹಿಂದೆ ಹೃದಯ ರೋಗದ ಲಕ್ಷಣಗಳು ಕಾಣಿಸಿಕೊಂಡಿದ್ದುವು. ಆಗ ನಾನು ತೈಲಚಿತ್ರಗಳ ರಚನೆಯನ್ನು ಆರಂಭಿಸಿದ್ದೆ. ಓದುವುದನ್ನು ಬಿಟ್ಟು ಬಿಟ್ಟಿದ್ದೆ. ಈ ಮೂರು ವರ್ಷಗಳಲ್ಲಿ ಸಾಕಷ್ಟು ಚಿತ್ರಗಳು ತುಂಬಿಕೊಂಡಿದ್ದುವು. ಅವೆಲ್ಲ ಈಗ ನಷ್ಟವಾಗಿಬಿಟ್ಟಿವೆ. ಚಿತ್ರರಚನೆಯ ಕೆಲವೊಂದು ಉಪಕರಣಗಳು ಮಾತ್ರ ಉಳಿದಿವೆ. ನಾನು ಏನು ಮಾಡುವುದು ಉಚಿತ ಎಂಬುದನ್ನು ತಿಳಿಸಿದರೆ, ನಿನ್ನ ಮಾತಿನಂತೆ ಪ್ರಯತ್ನಿಸಿ ನೋಡುತ್ತೇನೆ. ಕಾದಂಬರಿ, ಇತಿಹಾಸ, ವರ್ಣಚಿತ್ರಗಳು - ಇವುಗಳಲ್ಲಿ ಯಾವುದನ್ನು ಆರಂಭಿಸಲಿ ?"

ಆದರೆ, ಈ ಅಗ್ನಿದಹನದ ಘಟನೆಯ ಬಳಿಕ ಚಿತ್ರಕಲೆಯ ವಿಷಯದಲ್ಲಿ ಅವನ ಆಸಕ್ತಿ ಮತ್ತೆ ಹಿಂದಿನಂತೆ ಮುಂದುವರಿದಂತೆ ಕಾಣುವುದಿಲ್ಲ. ಹೇಗೋ ಏನೋ, ಅಗ್ನಿದಹನದ ಅನಂತರವೂ ಉಳಿದುಕೊಂಡಿದ್ದ ಮಹಾಶ್ವೇತೆಯ ಅಪೂರ್ಣ ಚಿತ್ರವೊಂದನ್ನು ಪೂರೈಸುವುದು ಮಾತ್ರ ಅವನಿಗೆ ಸಾಧ್ಯವಾಯಿತು.[2] ಆದರೆ, ಈ ದಿನಗಳಲ್ಲಿ ಅವನು ಅನೇಕ ಚಿತ್ರಗಳನ್ನು ರಚಿಸಿದ್ದನೆಂಬುದು ನಿಜ. ಅವನ ಗೆಳೆಯನೂ, ಸಹೋದ್ಯೋಗಿಯೂ ಆಗಿದ್ದ ಗಿರೀಂದ್ರನಾಥ ಸರ್ಕಾರ್ ಹೀಗೆ ಬರೆದಿದ್ದಾರೆ: "ಒಂದು ಭಾನುವಾರ, ಹೋಗಿ ನೋಡಿದರೆ, ಬಟ್ಟೆಯತೆರೆಯ ಹಿಂದೆ ಸ್ಟ್ಯಾಂಡಿನ ಮೇಲೆ ಚಿತ್ರವೊಂದನ್ನು ಇರಿಸಿದೆ. ಕೇಳಿದೆ: 'ಇದೇನು ಶರತ್ ?'

'ನಗುತ್ತ ಶರತ್ ಉತ್ತರಿಸಿದ: ಸರಿ ನೀನೇ ಹೇಳು, ಅದೇನು ?'

"ಇನ್ನೇನಾಗಿರುವುದು ಸಾಧ್ಯ-ಚಿತ್ರ !'

"ಹಾಗೆಂದರೇನಾಯಿತು ? ಚಿತ್ರವನ್ನು ಬಿಟ್ಟು ಬೇರೇನು ತಾನೆ ಅಲ್ಲಿರಲು ಸಾಧ್ಯ ? ಅದು ಯಾರ ಚಿತ್ರ ಎಂಬುದನ್ನು ಹೇಳಿದರೆ ಅದೀಗ ನಿನ್ನ ಕಲ್ಪನಾಶಕ್ತಿಯ ಹಿರಿಮೆಯಾಗುತ್ತದೆ."

"ಇದು ನಾರದ ಮುನಿಯ ಚಿತ್ರ ಎಂದು ಹೇಳಿದರೆ ?"

"ಹೌದು. ಅದೇ ನೋಡು !"

"ಹೀಗೆಂದು ಹೇಳುತ್ತ, ಶರತ್ ಚಿತ್ರದ ಮೇಲಿದ್ದ ಪರದೆಯನ್ನು ಸರಿಸಿದ. ನಾನು ಮೂಕನಾಗಿ ನಿಂತುಬಿಟ್ಟೆ. ಅದು ನಿಜವಾಗಿಯೂ ಆ ಮುದುಕನ ಚಿತ್ರವೇ ಆಗಿತ್ತು. ಹಳ್ಳಿಯ ಕೆರೆಯ ಬಳಿ ಅಲ್ಲಿ ಇಲ್ಲಿ ಹರಡಿಕೊಂಡಿದ್ದಂಥ ಮರಗಳ ಗುಂಪು, ಅವುಗಳ ನಡುವೆ ಹಾದು ಹೋಗುತ್ತಿದ್ದ ಅಂಕುಡೊಂಕಾದ ಹಾದಿ, ಆ ಹಾದಿಯ ಬಳಿ ಮರವೊಂದರ ನೆರಳಿನಲ್ಲಿ ಕುಳಿತಿದ್ದ ಒಬ್ಬ ಮುದುಕ, ನಾರದಮುನಿಯಂತೆಯೇ ಇದ್ದ - ಒಂದು ಚೂರೂ ವ್ಯತ್ಯಾಸವಿಲ್ಲ. ಮುದಿತನ ಹಾಗೂ ಬಡತನಗಳ ಮೇಲೆ

1. 22 ಮಾರ್ಚ್ 1913

2. 18 ಮಾರ್ಚ್ 1913ರಂದು ಮಾವ ಗಿರೀಂದ್ರನಾಥನಿಗೆ ಬರೆದ ಪತ್ರದ ಆಧಾರದ ಮೇಲೆ.

ನಿರಾಶೆಯ ನೆರಳು ಹೇಗೆ ಕವಿದುಕೊಂಡಿತ್ತೆಂಬುದನ್ನು ನೋಡಿಯೇ ಅನುಭವಿಸಬೇಕಾಗಿತ್ತು....."

ಸರ್ಕಾರ್ ಆ ಚಿತ್ರವನ್ನು ನೋಡುತ್ತಿದ್ದಂತೆಯೇ, ಆ ಮುದುಕ ಅಲ್ಲಿಗೆ ಬಂದ. ಮೆಟ್ಟಿಲ ಮೇಲೆ ಕಾಲಿರಿಸುತ್ತಿದ್ದಂತೆಯೇ ಅವನು ಕೂಗು ಹಾಕಿದ: "ಮನೆಯಲ್ಲಿ ಇದ್ದೀರಾ, ದೇವರು ?"

ಶರತ್ ಕೂಡಲೇ ಕೆಳಗಿಳಿದು ಹೋದ. ತುಂಬ ಪ್ರೀತಿ-ಗೌರವಗಳಿಂದ ಆ ವೃದ್ಧನಿಗೆ ನೆರವು ನೀಡುತ್ತ, ಮೇಲಕ್ಕೆ ಕರೆದುಕೊಂಡುಬಂದ. ಆ ಚಿತ್ರವನ್ನು ತಂದು ಅವನ ಮುಂದೆ ಇರಿಸಿದ. ಅದನ್ನು ನೋಡುತ್ತಿದ್ದಂತೆಯೇ ಗುಳಿಬಿದ್ದಿದ್ದ ಆ ಮುದುಕನ ಕಣ್ಣುಗಳಲ್ಲಿಯೂ ಕಾಂತಿ ಸಂಚರಿಸಿತು. ಹೇಳಿದ: "ಏನು ದೇವರು! ನಿಮ್ಮ ತಲೆಯಲ್ಲಿ ಇಷ್ಟೆಲ್ಲ ಇದೆಯಾ ?"

ಶರತ್ ಹೇಳಿದ: ನೋಡು ನಾರದ! ನೀನೊಂದು ಕೆಲಸ ಮಾಡಬೇಕು. ತುಂಬ ಕಷ್ಟವಾದ ಕೆಲಸವೇನಲ್ಲ. ಪ್ರತಿ ದಿನ ಬೆಳಗ್ಗೆ ನನ್ನ ಮನೆಗೆ ಬಂದು ಕುಳಿತುಕೊಳ್ಳಬೇಕು. ಚಹ ಕುಡಿಯುತ್ತ, ನಾನು ಈ ಚಿತ್ರ ರಚಿಸುವುದನ್ನು ನೀನು ನೋಡುತ್ತ ಇರಬೇಕು."

ಚಹದ ಮಾತು ಕಿವಿಗೆ ಬಿದ್ದ ಕೂಡಲೇ ನಾರದನ ಬಾಯಲ್ಲಿ ನೀರಾಡತೊಡಗಿತು. ಕೂಡಲೇ ಶರತ್ ಒಳಗಿನಿಂದ ಒಂದು ಕಪ್ ಚಹಾ ತೆಗೆದುಕೊಂಡು ಬಂದ. ಮಧುರವಾದ ಧ್ವನಿಯಲ್ಲಿ ಹೇಳಿದ: "ನಿನಗೆ ತುಂಬ ಕಷ್ಟವಾಗುತ್ತಿದೆಯಲ್ಲವೆ! ಚಹ ತೆಗೆದುಕೊ."

ಹಿಂದೆ ಮುಂದೆ ನೋಡುತ್ತ ಆ ಮುದುಕ ಕೇಳಿದ: "ದೇವರು, ನೀವು ಕುಡಿದಾಯಿತೆ ?"

ಶರತ್ ಉತ್ತರಿಸಿದ: "ದೇವರು ಯಾರಿಗಾದರೂ ಕಾಯುತ್ತಾರೇನಪ್ಪಾ! ನೀನು ಬೇಗ ಕುಡಿದುಬಿಡು. ಇಲ್ಲದೆ ಹೋದರೆ, ಅದು ತಣ್ಣಗಾಗಿ ಬಿಡುತ್ತದೆ."

ಸರ್ಕಾರ್ ಕೇಳಿದ: "ಈ ಕಲೆಯನ್ನು ನೀನು ಯಾರಲ್ಲಿ ಕಲಿತೆ ?"

ತನ್ನ ತಲೆಯತ್ತ ಬೆರಳು ತೋರುತ್ತ ಶರತ್ ಹೇಳಿದ: "ಈ ವಿದ್ಯೆಗೆ ನನಗೆ ನಾನೇ ಗುರು."

ಚಿತ್ರಕಲೆಯ ಬಗ್ಗೆ ಅವನು ಸ್ವತಃ ಅಭ್ಯಾಸ ನಡೆಸಿದ್ದ. ಪ್ರಕೃತಿಯನ್ನು ಚಿತ್ರಿಸುವುದಕ್ಕಿಂತಲೂ ಮಾನವ ಆಕೃತಿಗಳನ್ನು ಚಿತ್ರಿಸುವುದು ಅವನಿಗೆ ತುಂಬ ಪ್ರಿಯವಾಗಿತ್ತು. ಶರೀರ ವಿಜ್ಞಾನದ ಪೂರ್ಣ ಅರಿವಿಲ್ಲದೆ ಹೋದರೆ ಮಾನವ ಆಕೃತಿಗಳನ್ನು ಚಿತ್ರಿಸುವುದು ಸಾಧ್ಯವೇ ಇಲ್ಲವೆಂಬುದು ಅವನ ಅಭಿಪ್ರಾಯವಾಗಿತ್ತು. ಯಾವುದೇ ಆಕೃತಿ ಎಲ್ಲಿಯವರೆಗೆ ಪ್ರತಿಯೊಂದು ಅಂಶದಲ್ಲಿಯೂ ಜೀವಂತ ವಾಗಿರುವುದಿಲ್ಲವೋ ಅಲ್ಲಿಯವರೆಗೆ ಅದನ್ನು ಭಾವಚಿತ್ರವೆಂದು ಹೇಗೆ ಹೇಳಲಾದೀತು ? ಬಟ್ಟೆಯ ಚೂರಿನ ಮೇಲೆ ಬಣ್ಣದಿಂದ ಏನೋ ಒಂದು ಆಕೃತಿಯನ್ನು ರಚಿಸಿ ಬಿಡುವಷ್ಟರಿಂದಲೇ ಅದು ಭಾವಚಿತ್ರವಾಗಿ ಬಿಡುವುದಿಲ್ಲ. ಅವನು ಕಲಾವಿದ ವಿನ್ಸೆಂಟ್ ವಾನ್‌ಗಾಗ್‌ನ ಈ ಮಾತುಗಳನ್ನು ಆಗಾಗ್ಗೆ ಉದ್ಧರಿಸುತ್ತಿದ್ದ. "ಚಿತ್ರಕಲೆಯನ್ನು ಕಲಿಯಬೇಕೆಂದು ಬಯಸುವಂಥವರು ಮಾನವ

ಶರೀರದ ಪೂರ್ಣ ಪರಿಚಯವನ್ನು ಪಡೆದಿರುವುದು ತುಂಬ ಅಗತ್ಯವಾಗುತ್ತದೆ. ಈ ಅರಿವು ಅವನಿಗಿಲ್ಲವಾದರೆ ಅವನು ಕೇವಲ ನಕಲುಗಾರನಾಗಿ ಉಳಿದುಬಿಡುತ್ತಾನೆ." ಒಮ್ಮೆ ಅವನು ಸರ್ಕಾರ್‌ನನ್ನು ಕೇಳಿದ: "ಈ ಲೋಕದಲ್ಲಿ ಅತ್ಯಂತ ಶ್ರೇಷ್ಠ ಕಲಾವಿದ ಯಾರು ? ಹೇಳು, ನೋಡೋಣ."

ಸರ್ಕಾರ್ ಹೇಳಿದ: "ರ್‍ಯಾಫೆಲ್!"

"ಅಲ್ಲ, ಅಲ್ಲ." ಶರತ್ ಹೇಳಿದ"ರ್‍ಯಾಫೆಲ್‌ಗಿಂತಲೂ ಮೈಕೇಲ್ ಏಂಜಲೋ ಶ್ರೇಷ್ಠ ಕಲಾವಿದ. ದೊಡ್ಡ ದೊಡ್ಡ ವಿಮರ್ಶಕರೇನೋ ತಿಸಿಯನ್ ಅತ್ಯುತ್ತಮ ಕಲಾವಿದನೆಂದು ಹೇಳುತ್ತಾರೆ."

ತಿಸಿಯನ್ನನ ವಿಷಯದಲ್ಲಿ ಶರತ್ ತುಂಬ ಒಳ್ಳೆಯ ಅಭಿಪ್ರಾಯ ವನ್ನಿರಿಸಿಕೊಂಡಿದ್ದ. ಇಟಲಿಯ ಚಿತ್ರಕಲೆ ಅತ್ಯುತ್ತಮವಾದುದೆಂಬುದು ಅವನ ನಿಲುವಾಗಿತ್ತು. ಫ್ಲೆಮಿಷ್ ಡಚ್ ಮತ್ತು ಬ್ರಿಟಿಷ್ ಚಿತ್ರಕಲೆಗಳಿಗೆ ಅನಂತರದ ಸ್ಥಾನವನ್ನು ಅವನು ಕೊಡುತ್ತಿದ್ದ. ಕಲಾವಿದ ಬಾಥಿನ್ ಶರತ್‌ನ ಗೆಳೆಯರಲ್ಲಿ ಒಬ್ಬನಾಗಿದ್ದ. 'ಛವಿ' ಎಂಬ ಕಥೆಯಲ್ಲಿ ಶರತ್ ಬಾಥಿನ್‌ನನ್ನು ಅಮರನಾಗಿಸಿದ್ದಾನೆ. ಬಹುಶಃ ಶರತ್‌ಗೆ ಚಿತ್ರಕಲೆಯ ವಿಷಯದಲ್ಲಿ ಅವನಿಂದಲೇ ಸ್ಫೂರ್ತಿ ದೊರೆತಿದ್ದಿರಬಹುದು. ಸಾಮಾನ್ಯವಾಗಿ ಬಂಗಾಳಿಗಳು ತಮ್ಮವರೆಗೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಂಡಿರುತ್ತಾರೆ. ಆದರೆ, ಶರತ್ ಇದಕ್ಕೆ ಅಪವಾದವೆಂಬಂತೆ ಇದ್ದ. ಕಛೇರಿಯ ಹೊರಗೂ ಬಂಗಾಳೇತರರೊಂದಿಗೆ ಅವನು ಒಡನಾಟವನ್ನಿರಿಸಿ ಕೊಂಡಿದ್ದ. ಇಂಥವರಲ್ಲಿ ಕಲಾವಿದ ಬಾಥಿನ್ ಕೂಡ ಒಬ್ಬನಾಗಿದ್ದ. ಒಮ್ಮೆ ಸತೀಶಚಂದ್ರದಾಸ್ ಅವರನ್ನು[1] ಜೊತೆಯಲ್ಲಿ ಕರೆದುಕೊಂಡು, ಶರತ್ ಅವನನ್ನು ಭೇಟಿಯಾಗಲೂ ಹೋಗಿದ್ದ. ದಾಸ್ ಆ ಭೇಟಿಯ ಬಗ್ಗೆ ಹೀಗೆಂದು ಬರೆದಿದ್ದಾರೆ: "ಸಂಜೆ ಕವಿದುಕೊಂಡಿತ್ತು. ಎಲ್ಲವನ್ನೂ ಕಳೆದುಕೊಂಡಿದ್ದ ಭಾರತೀಯರ 'ಕರಿಯರ ಕಾಲೋನಿ'ಯಲ್ಲಿ ದೀಪದ ವ್ಯವಸ್ಥೆಯೂ ಸರಿಯಾಗಿರ ಲಿಲ್ಲ; ರಸ್ತೆಯೂ ಚೆನ್ನಾಗಿರಲಿಲ್ಲ. ಗುಡಿಯಲ್ಲಿ ನಡೆಯುತ್ತಿದ್ದ ಮಂಗಳಾರತಿಯ ಶಂಖಧ್ವನಿಯೂ ಸರಿಯಾಗಿ ಕೇಳಿಸುತ್ತಿರಲಿಲ್ಲ. ನಾನು ಕೇಳಿದೆ: 'ಶರತ್, ಇದೆಲ್ಲಿಗೆ ಕರೆದುಕೊಂಡು ಹೊರಟಿದ್ದೀಯೆ ? ಗೂಂಡಾಗಳಿಗೆ ಪುಂಡುಪೋಕರಿಗಳ ಕೈಗೆ ಪ್ರಾಣ ಒಪ್ಪಿಸಬೇಕೆಂದಿದ್ದೀಯೇನು ?'

"ಶರತ್ ಹೇಳಿದ: 'ಇಲ್ಲ, ಇಲ್ಲ, ನನ್ನ ಜೊತೆ ಸುಮ್ಮನೆ ಬಾ. ಗೂಂಡಾಗಳಿಗೆ, ಪುಂಡು-ಪೋಕರಿಗಳಿಗೆ ಇಲ್ಲಿ ಕೆಲಸವೇನೂ ಇಲ್ಲ.'

" 'ನೀನು ಏನು ಬೇಕಾದರೆ ಹೇಳು, ಅಣ್ಣಯ್ಯ! ಇಂಥ ಕೆಟ್ಟ ಜಾಗಕ್ಕೆ ಯಾವತ್ತೂ ಹೋಗಬಾರದು. ನಾವೇನೋ ಹಳ್ಳಿಯ ಜನ. ಆದರೆ ಇದಂತೂ ಹಳ್ಳಿಗಿಂತ ಕೆಟ್ಟದಾಗಿದೆಯಲ್ಲ! ಮಳೆಗಾಲದಲ್ಲಿಯಂತೂ ಇಲ್ಲಿ ಕಾಲಿರಿಸುವುದೂ ಕಷ್ಟವಾಗು ತ್ತಿದ್ದಿರಬೇಕು. ಒಂದೊಂದು ಇಟ್ಟಿಗೆಯೂ ಚೂರುಚೂರಾಗಿ ಮಣ್ಣಿನೊಂದಿಗೆ ಸಿಕ್ಕಿಕೊಂಡಿದೆ.'

"ಶರತ್ ಉತ್ತರವನ್ನೇನೂ ಕೊಡಲಿಲ್ಲ. ನಾನು ವಿವಶನಾಗಿ ಅವರ ಹಿಂದೆ

---

1 ಶರತ್‌ನ ಬರ್ಮಾ ಪ್ರವಾಸದ ಬಗ್ಗೆ ಇವರು ಕೆಲವು 'ಸಂಸ್ಮರಣ'ಗಳನ್ನು ಬರೆದಿದ್ದಾರೆ.

ನಡೆಯುತ್ತ ಇದ್ದೆ. ಆದರೆ, ಆ ಕಾಲೋನಿಯ ನಾಯಿಗಳ ವಿಚಾರ ನೆನಪಿಗೆ ಬಂದೊಡನೆಯೇ ಎದೆ ಡವ ಡವ ಎಂದು ಹೊಡೆದುಕೊಳ್ಳುತ್ತಿತ್ತು. ಬರ್ಮೀಯರ ನಾಲ್ಕಾರು ಮರದ ಮನೆಗಳೂ ಅಲ್ಲಿದ್ದುವು. ಅವರ ಮನೆಗಳ ಮುಂದೆ ಮಲಗಿದ್ದ ನಾಯಿಗಳು ಹೊಸಬರನ್ನು ಕಂಡೊಡನೆಯೇ ಅವರ ಮೇಲೆರಗಲು ತಮ್ಮ ಧಣಿಯ ಸೂಚನೆಗಾಗಿ ಕಾಯುತ್ತಿದ್ದವೆಂಬುದನ್ನು ಸೀಮೆಎಣ್ಣೆಯ ದೀಪಗಳ ಬೆಳಕಿನಲ್ಲಿಯೂ ಕಾಣಬಹುದಾಗಿತ್ತು. ಅಲ್ಲಿಯ ನಾಯಿಗಳು ಅದೆಷ್ಟು ಕೆಟ್ಟವಾಗಿದ್ದುವೆಂದರೆ ಸದ್ದು ಮಾಡದೆಯೇ ಹಿಂದಿನಿಂದ ಬಂದು ಬಾಯಿ ಹಾಕಿಬಿಡುತ್ತಿದ್ದುವು. ನನಗೆ ಆ ಅನುಭವ ಇತ್ತು. ನಾನು ಹೇಳಿದೆ: "ಶರತ್, ಈ ಕಾಲೋನಿಯ ನಾಯಿಗಳು ತುಂಬ....'

"ಮಾತು ಮುಗಿಸುವುದರ ಒಳಗಾಗಿಯೇ ಶರತ್ ಹೇಳಿದರು: "ಹೆದರಿಕೊಳ್ಳಬೇಡ ನನ್ನ ಜೊತೆಯಲ್ಲಿ ಬಾ. ಪ್ರಾಣಿಗಳಾದರೇನಂತೆ! ಅವು ಮನುಷ್ಯರನ್ನು ಗುರುತಿಸಬಲ್ಲವು."

"ಸ್ವಲ್ಪ ದೂರ ಹೋಗಿ ಶರತ್ ಮರದ ಮನೆಯೊಂದರ ಮುಂದೆ ನಿಂತುಕೊಂಡರು. ಅವರನ್ನು ನೋಡಿ ಕಿರಿಯ ವಯಸ್ಸಿನ ಬರ್ಮೀಯ ಹೆಣ್ಣು ಮಗಳೊಬ್ಬಳು ತನ್ನ ಭಾಷೆಯಲ್ಲಿಯೇ ಅವರನ್ನು ಮಾತನಾಡಿಸಿದಳು. ಅವರೂ ಅದೇ ಭಾಷೆಯಲ್ಲಿ ಉತ್ತರಿಸಿದರು. ಆಮೇಲೆ ಅವರಿಬ್ಬರೂ ಒಳಗೆ ನಡೆದರು. ಅಲ್ಲಿ ಒಬ್ಬ ಹುಡುಗಿ ಕುಳಿತಿದ್ದಳು. ಆ ಹುಡುಗಿ ಅವಳೊಂದಿಗೆ ಏನೋ ಹೇಳಿದಳು. ಕೂಡಲೇ ಅವಳು ಹೊರಗೆ ಹೊರಟಳು. ಕುರ್ಚಿಯಲ್ಲಿ ಕುಳಿತುಕೊಂಡು ಆ ಇನ್ನೊಬ್ಬ ಹುಡುಗಿಯೊಂದಿಗೆ ಶರತ್ ತುಂಬ ಆತ್ಮೀಯತೆಯಿಂದ ಮಾತನಾಡ ತೊಡಗಿದರು. ಸ್ವಲ್ಪ ಹೊತ್ತಿನಲ್ಲಿಯೇ ಆ ಹುಡುಗಿಯೊಂದಿಗೆ ಬಾಥಿನ್ ಎಲ್ಲಿಂದಲೋ ಬಂದರು. ಬಹುದಿನಗಳ ಬಳಿಕ ಅವರಿಬ್ಬರು ಭೇಟಿಯಾಗುತ್ತಿದ್ದಂತೆ ತೋರಿತು. ಆದ್ದರಿಂದಲೇ, ಬಹಳ ಹೊತ್ತಿನವರೆಗೆ ಅವರಿಬ್ಬರೂ ಪರಸ್ಪರ ದೋಷಾರೋಪಣೆಯಲ್ಲಿ ತೊಡಗಿದ್ದರು. ಇದಾದ ಬಳಿಕ ಸತ್ಕಾರ ಆರಂಭಗೊಂಡಿತು. ಮೇಜಿನ ಮೇಲೆ ಬಗೆಬಗೆಯಾದ ಆಹಾರ ಪದಾರ್ಥಗಳನ್ನು ತಂದಿರಿಸತೊಡಗಿದರು. ಶರತ್ ಮಾತಿಲ್ಲದೆಯೇ ನನ್ನನ್ನು ಪ್ರಶ್ನಿಸಿದರು: 'ತಿನ್ನುತ್ತೀಯಾ ?'

"ಅದೆಲ್ಲವನ್ನು ನೋಡಿಯೇ ನಾನು ಮೂಕನಾಗಿದ್ದೆ. ಏನು ಹೇಳಲಿ? ಊಟ ತಿಂಡಿಗಳ ಬಗ್ಗೆ ಯಾವುದನ್ನು ತಲೆಗೆ ಹಚ್ಚಿಕೊಳ್ಳದ, ಎಲ್ಲಿ ಏನನ್ನು ಬೇಕಾದರೂ ತಿಂದುಬಿಡುವ ಶರತ್‌ನೊಂದಿಗೆ ತಿಂದು ನಾನೂ ಜಾತಿಯನ್ನು ಬಿಡಬೇಕೆ ?"

"ನಾನು ನನ್ನ ಜಾತಿಯನ್ನು ಉಳಿಸಿಕೊಂಡು ಹಿಂದೂಸ್ಥಾನದವರ ಪದ್ಧತಿಯಂತೆ ಚಹಾ ಮತ್ತು ಬಿಸ್ಕತ್ತುಗಳನ್ನು ಮಾತ್ರ ತೆಗೆದುಕೊಂಡೆ. ಆದರೆ ಶರತ್ ತಮ್ಮ ಗೆಳೆಯನ ಕುಟುಂಬದೊಂದಿಗೆ ಒಂದೇ ಮೇಜಿನ ಮೇಲೆ ಕುಳಿತು ಉಣ್ಣತೊಡಗಿದರು. ಹಾಸ್ಯ-ನಗೆ ಚಾಟಿಕೆಯೂ ನಡೆದಿತ್ತು. ರಾತ್ರಿ ಬಹಳ ಹೊತ್ತು ಕಳೆದು ಹೋಗುವುದನ್ನು ಕಂಡು ನಾನು ಹೇಳಿದೆ: 'ಇನ್ನು ಹೊರಡೋಣ. ತುಂಬ ಹೊತ್ತಾಗಿಬಿಟ್ಟಿದೆ.'

"ಶರತ್ ಎದ್ದು ನಿಂತರು. ಬರ್ಮೀಯ ಗೆಳೆಯ ಗಲ್ಲಿಯ ತಿರುವಿನ ತನಕ

ದೀಪವನ್ನು ಹಿಡಿದುಕೊಂಡು ಅವರೊಂದಿಗೆ ಬಂದ. ಆತ ಹಿಂದಿರುಗಿದ ಬಳಿಕ ಕೇಳಿದೆ: 'ಈತ ಯಾರು ? ಈತನೊಂದಿಗೆ ಗೆಳೆತನ ಹೇಗುಂಟಾಯಿತು ? ಇಬ್ಬರೂ ಒಂದೇ ಕಛೇರಿಯಲ್ಲಿ ಕೆಲಸ ಮಾಡುತ್ತಿರುವಂತೆ ತೋರುತ್ತದೆಯಲ್ಲ!'

"ಶರತ್ ಹೇಳಿದರು: 'ಇಲ್ಲ ಈತನೊಬ್ಬ ಒಳ್ಳೆಯ ಕಲಾವಿದ. ಮನೆಯಲ್ಲಿ ನೀನು ನೋಡಿದ ಆ ಚಿತ್ರಗಳೆಲ್ಲ ಆತನೇ ಬರೆದಂಥವು. ಪೆಗೂನಲ್ಲಿ ಈತನ ಪರಿಚಯವಾಯಿತು.'

"ನಾನು ಹೇಳಿದೆ: 'ಗೆಳೆಯ ಎನ್ನುವ ದೃಷ್ಟಿಯಿಂದ ಭೇಟಿಯಾಗಲು ಬಂದೆ. ಅದೇನೋ ಸರಿ. ಆದರೆ ಅವರ ಜೊತೆಯಲ್ಲಿ ಕುಳಿತು ಅದು ಹೇಗೆ ಊಟ ಮಾಡಿದೆ ?'

"ಶರತ್ ನಕ್ಕು ಹೇಳಿದರು: 'ಹುಚ್ಚ ಎಂದು ಇನ್ನು ಯಾರನ್ನು ಕರೆಯುತ್ತಾರೆ ? ಇದೂ ಹಿಂದೂಗಳ ಒಂದು ಶಾಖೆಯೇ. ಇವರು ತುಂಬ ಧರ್ಮಬೀರುಗಳು. ಇವರಲ್ಲಿ ಅಷ್ಟಾಗಿ ಸಂಕೋಚವಿಲ್ಲ. ಒಂದೆರಡು ದಿನಗಳ ಪರಿಚಯದಲ್ಲಿಯೇ ಜನರನ್ನು ತಮ್ಮವರನ್ನಾಗಿಸಿಕೊಂಡು ಬಿಡುತ್ತಾರೆ. ಹಿಂಸೆ, ತಿರಸ್ಕಾರ ಮತ್ತು ಸಂಕೋಚ ಇವರ ಧರ್ಮಕ್ಕೆ ವಿರುದ್ಧವಾದ ಸಂಗತಿಗಳು."

ಹಾಗೆ ನೋಡಿದರೆ, ಈ ಗುಣ ಶರತ್‌ಗೆ ಆನುವಂಶಿಕವಾಗಿಯೇ ಬಂದಿತೆನ್ನಬೇಕು. ಮೋತಿಲಾಲ್ ಒಳ್ಳೆಯ ಕಲಾವಿದರಾಗಬಹುದಾಗಿತ್ತು. ಆದರೆ ಪಟ್ಟಾಗಿ ಕುಳಿತು ಅವರು ಯಾವುದೇ ಕೆಲಸವನ್ನೂ ಮಾಡುತ್ತಿರಲಿಲ್ಲ. ಅವರ ಕನಸುಗಳೆಲ್ಲ ಶರತ್‌ನಲ್ಲಿ ಸಾಕಾರವಾಗತೊಡಗಿವೆಯೋ ಎಂದು ತೋರುತ್ತಿತ್ತು. ಭಾಥಿನ್‌ನ ಗೆಳೆತನದಿಂದಾಗಿ ಈ ಪ್ರಯತ್ನಕ್ಕೆ ಬೆಂಬಲ ದೊರೆತಂತಾಗಿತ್ತು. ಶರತ್ ಅನೇಕ ಚಿತ್ರಗಳನ್ನು ರಚಿಸಿದ್ದುಂಟು. ಅವುಗಳಲ್ಲಿ ತುಂಬ ಸುಂದರವಾಗಿದ್ದುದು 'ಮಹಾಶ್ವೇತೆ'ಯ ಚಿತ್ರ. ಅದನ್ನು ನೋಡಿ ಗೆಳೆಯರು ಕೇಳಿದ್ದರು: "ಇದನ್ನು ನೀವು ಪ್ರದರ್ಶನಕ್ಕೆ ಏಕೆ ಕಳುಹಿಸಬಾರದು ?"

ಕೀರ್ತಿ ಮತ್ತು ಪ್ರದರ್ಶನಗಳಿಂದ ಸದಾ ದೂರ ಓಡಿಹೋಗುತ್ತಿದ್ದ ಶರತ್, ಗೆಳೆಯರ ಒತ್ತಾಯವನ್ನು ಹೇಗೆ ತಾನೆ ಮನ್ನಿಸುವುದು ಸಾಧ್ಯವಿತ್ತು ? ಆದರೆ, ಒರೆಹಚ್ಚಿ ನೋಡಬಲ್ಲಂಥವರ ದೃಷ್ಟಿಯಲ್ಲಿ ಆ ಚಿತ್ರ ನಿಜಕ್ಕೂ ಸುಂದರವಾಗಿತ್ತು. ಯೋಗೇಂದ್ರನಾಥ್ ಸರ್ಕಾರ್ ಹೀಗೆ ಬರೆದಿದ್ದಾರೆ. "ಬೆಳಕು ಮತ್ತು ನೆರಳಿನ ಸಂಯೋಜನೆ ಹೇಗಿತ್ತೆಂದರೆ ಅದನ್ನು ನೋಡಿ ಇದೊಬ್ಬ ಅನಭ್ಯಸ್ಥ ಕಲಾವಿದನ ರಚನೆಯೆಂದು ಹೇಳಲು ಸಾಧ್ಯವೇ ಇರಲಿಲ್ಲ. ಶರೀರವಿಜ್ಞಾನ, ಹಿನ್ನೆಲೆ ಹಾಗೂ ಪರಿಪ್ರೇಕ್ಷ್ಯಗಳ ದೃಷ್ಟಿಯಿಂದ ಅದರಲ್ಲಿ ಯಾವುದೇ ಕೊರತೆಯೂ ಇರಲಿಲ್ಲ..... ಪುರುಷ ಮತ್ತು ಪ್ರಕೃತಿಯ ಕಲಾಮೇಳದಂತೆ ತಪಸ್ವಿನಿ ಮಹಾಶ್ವೇತೆಯ ಆಕೃತಿ ತುಂಬ ಸುಂದರವಾಗಿ ರೂಪುಗೊಂಡಿತ್ತು. ಮಳೆಯ ದಿನದಂದು ನದಿಯ ತೀರದಲ್ಲಿ ಎಲ್ಲವೂ ಮಂಜಿನಲ್ಲಿ ಮುಚ್ಚಿಹೋಗಿ, ಅಸ್ಪಷ್ಟವಾಗಿ ಮಾತ್ರ ಕಾಣುವಂತಿತ್ತು. ಆ ದಡದಲ್ಲಿ ಒತ್ತಾದ ಮೋಡಗಳಿಂದ ಆವೃತವಾಗಿದ್ದ ಆಕಾಶ ಮತ್ತಷ್ಟು ಅಸ್ಪಷ್ಟವಾಗಿ ಇತ್ತ ಇನ್ನೊಂದು ಮೂಲೆಯಿಂದ ನಾಚಿಕೊಂಡಿದ್ದ ಸೂರ್ಯ ಇಣುಕಿ ನೋಡುತ್ತಿದ್ದಾನೋ ಎಂಬಂತೆ ತೋರುತ್ತಿತ್ತು. ದಡದಲ್ಲಿ ಮರವೊಂದರ ಕೆಳಗೆ

ಮುಕ್ತ ಕೇಶಿನಿಯೂ, ಸದ್ಯಃಸ್ನಾತೆಯೂ ಆದ ತಪಸ್ವಿನಿ ಮಹಾಶ್ವೇತೆ, ರೋದಿಸುತ್ತಿದ್ದ ಪ್ರಕೃತಿಯ ಜೀವಂತ ಪ್ರತಿಮೆಯಂತಿದ್ದಳು."

ಚಿಕ್ಕ ಮನೆಯೊಂದರ ಬೆಳಕು ಕಮ್ಮಿಯಾಗಿದ್ದಂಥ ಮೂಲೆಯಲ್ಲಿ ಆ ಚಿತ್ರವನ್ನು ಹೇಗೆ ಇರಿಸಲಾಗಿತ್ತೆಂದರೆ ಕಿಟಕಿಯನ್ನು ತೆರೆದಾಗ ಮನೆಯೊಳಗೆ ಬರುವಷ್ಟು ಬೆಳಕಿನ ನೆರವಿನಿಂದಲೇ ಆ ಭಾವಚಿತ್ರವನ್ನು ಚೆನ್ನಾಗಿ ನೋಡಿ ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತಿತ್ತು. ಆ ಸ್ಥಿತಿಯಲ್ಲಿಯೇ ಶರತ್ ಆ ಚಿತ್ರವನ್ನು ಸರ್ಕಾರ್ ಅವರಿಗೆ ತೋರಿಸಿದ್ದ. ಅವರು ಮುಂದುವರಿದು ಆ ಚಿತ್ರದ ಬಗ್ಗೆ ಹೀಗೆ ಬರೆದಿದ್ದಾರೆ: "ಎಲ್ಲ ಶ್ರೇಷ್ಠ ಕಲೆಗಳಲ್ಲೂ ಅದೇ ಚಿರಸುಂದರ ಆನಂದಘನ ರಸಮೂರ್ತಿಯ ವಿಕಾಸ ಸಾಧನೆಯ ಪ್ರಯತ್ನ ಕಂಡುಬರುತ್ತದೆ. ವಾಸ್ತವವಾಗಿ, ಸ್ವಲ್ಪಮಟ್ಟಿನ ಉದಾರ ದೃಷ್ಟಿಯಿಂದ ನೋಡಿದರೆ ಸಂಪೂರ್ಣವಾಗಿ ಕುತ್ಸಿತವೆಂದು ತೋರುವ ವಸ್ತುವೂ ಸುಂದರವಾಗಿ ಕಾಣಿಸುತ್ತದೆ. ಆ ಚಿತ್ರನಗ್ನ ಸೌಂದರ್ಯದ ಚಿತ್ರವೇನೂ ಆಗಿರಲಿಲ್ಲ. ನಗ್ನವಾಗಿದ್ದರೂ ಅದನ್ನು ಕುತ್ಸಿತವಾದುದೆಂದು ಹೇಳಲು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ, ಅದರೊಡನೆ ಹಿನ್ನೆಲೆಯಲ್ಲಿ ಕಾಣಿಸಿದ್ದ ಪ್ರಕೃತಿಯ ದೃಶ್ಯ ಅತ್ಯಂತ ಚಮತ್ಕಾರಪೂರ್ಣವಾಗಿತ್ತು." ಆ ಚಿತ್ರ ಶರತ್‌ಗೂ ಪ್ರಿಯವಾಗಿತ್ತು. ಮಾವ ಗಿರೀಂದ್ರನಾಥನಿಗೆ ಬರೆದ ಪತ್ರದಲ್ಲಿ[1] ಹೀಗೆಂದು ಬರೆದಿದ್ದ: "ಇನ್ನೂ, ಅದು ಪೂರ್ಣಗೊಂಡಿಲ್ಲ. ಪೂರೈಸು ಎಂದು ಹೇಳಿದರೆ ಪೂರೈಸಿಬಿಡುತ್ತೇನೆ. ನನಗಂತೂ ಮನೆಮಾರುಗಳೇನೂ ಇಲ್ಲ; ನಿನಗಾದರೋ ಅವೆಲ್ಲ ಇವೆ. ಇದು ನನಗೆ ತುಂಬ ಪ್ರಿಯವಾಗಿದೆ. ಆದ್ದರಿಂದ ಹೇಗೂ ನಾಶವಾಗದಂತೆ ಅದನ್ನು ನಿನ್ನ ಬಳಿ ಇಡಬಯಸುತ್ತೇನೆ."

## 6

ರಂಗೂನ್‌ಗೆ ಹೋಗುವುದಕ್ಕೆ ಮುಂಚೆ ಶರತ್ ತನ್ನೆಲ್ಲ ರಚನೆಗಳನ್ನೂ ತನ್ನ ಗೆಳೆಯರ ಬಳಿ ಬಿಟ್ಟುಹೋಗಿದ್ದ. ಅವುಗಳಲ್ಲಿ ಅವನ ದೀರ್ಘ ಕಥೆಗಳಲ್ಲೊಂದಾದ 'ಬಡೀ ದೀದೀ' ಕೂಡ ಇತ್ತು. ಅದು ಸುರೇಂದ್ರನಾಥನ ಹತ್ತಿರ ಇತ್ತು. ಹೋಗುವಾಗ ಅವನು ಹೀಗೆಂದು ಹೇಳಿಹೋಗಿದ್ದ: "ಅಚ್ಚಿಸುವ ಅಗತ್ಯವೇನೂ ಇಲ್ಲ. ಆದರೆ, ಅಚ್ಚಿಸಲೇಬೇಕೆಂದರೆ 'ಪ್ರವಾಸಿ'ಯೊಂದನ್ನು ಬಿಟ್ಟು ಬೇರಾವುದೇ ಪತ್ರಿಕೆಯಲ್ಲಿಯೂ ನನ್ನ ಯಾವುದೇ ರಚನೆಯನ್ನು ನನ್ನ ಅನುಮತಿ ಇಲ್ಲದೆ ಅಚ್ಚಿಸಕೂಡದು." ಈ ಕೆಲಸದಲ್ಲಿ ನೆರವಾಗಬಲ್ಲಂಥ ವ್ಯಕ್ತಿಯೊಬ್ಬರನ್ನು ಸುರೇಂದ್ರನಾಥ ಆಕಸ್ಮಿಕವಾಗಿ ಸಂಧಿಸಿದ. ಭಾಗಲಪುರದಲ್ಲಿ ಮುನ್ಸೀಫರಾಗಿದ್ದ ಶ್ರೀ ಜ್ಞಾನೇಂದ್ರಕುಮಾರ್ ಬಂದೋಪಾಧ್ಯಾಯರು ಸಾಹಿತ್ಯದಲ್ಲಿ ಅಭಿರುಚಿಯನ್ನುಳ್ಳಂಥವರಾಗಿದ್ದರು. 'ಪ್ರವಾಸಿ'ಯ ಸಂಪಾದಕರಾಗಿದ್ದ ಶ್ರೀರಾಮಾನಂದ ಚಟ್ಟೋಪಾಧ್ಯಾಯರ ಪರಿಚಯವೂ ಅವರಿಗಿತ್ತು. ಅವರು ಸುರೇಂದ್ರನಾಥನ 'ಸಾಹಿತ್ಯ ಸಂಹಾರ ಸಭಾ' ಎಂಬ ಹೆಸರಿನ ಸಂಸ್ಥೆಯ ಸದಸ್ಯರೂ ಆಗಿದ್ದರು. ಆ 'ಸಭೆ'ಯಲ್ಲಿ ಶರತ್‌ಚಂದ್ರನ ಕೃತಿಗಳನ್ನು ಓದಲಾಗುತ್ತಿತ್ತು. ಜ್ಞಾನೇಂದ್ರರಿಗೆ ಈ ಕೃತಿಗಳು ತುಂಬ ಹಿಡಿಸಿದ್ದುವು.

---

1. 18 ಮಾರ್ಚ್ 1913

'ಪ್ರವಾಸಿ'ಯಲ್ಲಿ ಅಚ್ಚಿಸುವುದಾಗಿ ಮಾತುಕೊಟ್ಟು 'ಬಡೀ ದೀದೀ' ಕಥೆಯ ಪ್ರತಿಯೊಂದನ್ನು ಅವರು ದೊರಕಿಸಿಕೊಂಡರು.

ಆ ದಿನಗಳಲ್ಲಿ ಶ್ರೀಮತಿ ಸರಳಾದೇವಿ ಚೌಧರಾನೀ ಅವರು 'ಭಾರತೀ' ಪತ್ರಿಕೆಯನ್ನು ಹೊರತರುತ್ತಿದ್ದರು. ಆದರೆ, ಆಕೆ ಲಾಹೋರ್‌ನಲ್ಲಿಯೇ ಹೆಚ್ಚಾಗಿ ಇರುತ್ತಿದ್ದರು. ಹೀಗಾಗಿ, ಹೊತ್ತಿಗೆ ಸರಿಯಾಗಿ ಆ ಪತ್ರಿಕೆ ಹೊರಬರುತ್ತಿರಲಿಲ್ಲ. ಆಕೆಗೆ ಸಂಪಾದಕರೊಬ್ಬರ ಅಗತ್ಯವಿತ್ತು. ಅದೃಷ್ಟವಶಾತ್ ಸೌರೀಂದ್ರಮೋಹನ ಮುಖೋಪಾಧ್ಯಾಯರನ್ನು ಈ ಕೆಲಸಕ್ಕೆ ಆರಿಸಲಾಯಿತು. ಅವರು ಶರತ್‌ಚಂದ್ರನ ಗೆಳೆಯರಾಗಿದ್ದರು. 'ಬಡೀ ದೀದೀ' ಕಥೆಯ ಒಂದು ಪ್ರತಿ ಅವರ ಬಳಿಯೂ ಇತ್ತು. ಅವರು ಈ ಪ್ರತಿಯನ್ನು ಓದಲೆಂದು ಸರಳಾದೇವಿಯವರಿಗೆ ಕೊಟ್ಟರು. ಜ್ಞಾನೇಂದ್ರರು ಅದನ್ನು 'ಪ್ರವಾಸಿ'ಯಲ್ಲಿ ಅಚ್ಚಿಸುವ ವ್ಯವಸ್ಥೆ ಮಾಡಿದರೋ ಇಲ್ಲವೋ ತಿಳಿಯದು, ಆದರೆ, ಸರಳಾದೇವಿಯವರ ಬಳಿ ಅದನ್ನು ತುಂಬ ಹೊಗಳಿದ್ದರು. ಈಗಂತೂ ಆಕೆ ಅದನ್ನು ಓದಿ ಮುಗ್ಧರಾಗಿಬಿಟ್ಟರು. "ಆಶ್ಚರ್ಯಕರವಾಗಿದೆ! 'ಭಾರತಿ'ಯಲ್ಲಿ ಅಚ್ಚಿಸಲು ಇದನ್ನು ಕೊಟ್ಟುಬಿಡಿ. ಮೂರು-ನಾಲ್ಕು ಭಾಗಗಳಲ್ಲಿ ಇದನ್ನು ಅಚ್ಚಿಸಿ. ಮೊದಲಿಗೆ ಲೇಖಕನ ಹೆಸರನ್ನು ಕೊಡಬೇಡಿ. ಇದು ರವೀಂದ್ರನಾಥರ ಕೃತಿ ಎಂಬುದಾಗಿ ಭಾವಿಸಿ, ಪತ್ರಿಕೆ ತಡವಾಗಿ ಹೊರಬಂದಿರುವ ವಿಚಾರವನ್ನು ಜನ ಮರೆತುಬಿಡುತ್ತಾರೆ" ಎಂದರು.

ಸೌರೀಂದ್ರ ಮೋಹನ್ ಹೇಳಿದರು: "ಅಚ್ಚಿಸುವುದಕ್ಕೆ ಮೊದಲು ಲೇಖಕನ ಅನುಮತಿಯನ್ನು ಪಡೆದುಕೊಳ್ಳಬೇಕು."

ಸರಳಾದೇವಿ ಹೇಳಿದರು: "ಹಾಗಾದರೆ, ಕಾಗದ ಬರೆದು, ಅನುಮತಿ ಪಡೆದುಕೊಳ್ಳಿ."

ಸೌರೀಂದ್ರ ಮೋಹನ್ ಹೇಳಿದರು: "ಆತ ಬರ್ಮಾದಲ್ಲಿದ್ದಾನೆ. ಆದರೆ ಎಲ್ಲಿದ್ದಾನೆ ಎಂಬುದು ಯಾರಿಗೂ ಸರಿಯಾಗಿ ಗೊತ್ತಿಲ್ಲ. ಬಹಳ ಕಾಲದಿಂದ ಆತನ ಸುದ್ದಿಯೇನೂ ನನಗೆ ಬಂದಿಲ್ಲ."

ಸರಳಾದೇವಿ ಹೇಳಿದರು: "ಎಲ್ಲಿಯಾದರೂ ಇರಲಿ. ಅಚ್ಚಾದ ಮೇಲೆ ಒಬ್ಬರಲ್ಲ ಒಬ್ಬರಿಂದ ಇದರ ವಿಚಾರ ಆತನ ಕಿವಿಗೆ ಬಿದ್ದೇ ಬೀಳುತ್ತದೆ. ಅನುಮತಿ ಇಲ್ಲದೆ ಅದನ್ನು ಅಚ್ಚಿಸುವ ಹೊಣೆಯನ್ನು ನೀವು ಹೊರಲು ಸಾಧ್ಯವಾಗುವುದಿಲ್ಲವೆ?"

ಸೌರೀಂದ್ರ ಮೋಹನ್ ಅಭಿಮಾನದಿಂದ ಉಬ್ಬಿ ಹೋದರು. "ಏಕೆ ಸಾಧ್ಯವಾಗಲಾರದು? ಅವನು ಪ್ರಚಾರ ಪಡೆಯುವ ಸಲುವಾಗಿ ತುದಿಗಾಲಲ್ಲಿ ನಿಂತಿರುವಂಥವನೇನೂ ಅಲ್ಲ. 'ಬರೆಯುವುದರಿಂದ ನನಗೆ ಸಂತೋಷ ಉಂಟಾಗುತ್ತದೆ. ನೀನು ಓದಿದರೆ ನನಗೆ ಅಷ್ಟೇ ಸಾಕು. ಅದನ್ನು ಅಚ್ಚಿಸಿ ಏನಾಗಬೇಕಾಗಿದೆ? ನಿನ್ನನ್ನು ಬಿಟ್ಟರೆ ನನ್ನ ಕಥೆಯನ್ನು ಬೇರೆ ಯಾರು ತಾನೇ ಓದುತ್ತಾರೆ ಎನ್ನುತ್ತಾನೆ" ಎಂದು ಹೇಳಿದರು.

ಸರಳಾದೇವಿ ಹೇಳಿದರು: "ಇಂಥ ಶಕ್ತ ಬರಹಗಾರ ಹೀಗೆ ನಾಚಿಕೊಳ್ಳುವುದು ಒಳ್ಳೆಯದಲ್ಲ. ಈ ಹೊಣೆಯನ್ನು ಹೊತ್ತುಕೊಂಡು ನೀವು ಅದನ್ನು ಅಚ್ಚಿಸಿಬಿಡಿ."

ಸೌರೀಂದ್ರ ಮೋಹನ್ ಕೂಡಲೇ ಆ ಕಥೆಯನ್ನು ಮೂರು ಭಾಗಗಳಾಗಿ ಅಚ್ಚಿಸಲು

ಅನುಕೂಲವಾಗುವಂತೆ ಅದನ್ನು ಮೂರು ಭಾಗಗಳಾಗಿ ಪ್ರತ್ಯೇಕಿಸಿ ಅಚ್ಚುಕೂಟಕ್ಕೆ ಕಳುಹಿಸಿಬಿಟ್ಟರು. ಆದರೆ, ಈ ಮಧ್ಯೆ ಕೊನೆಯ ಭಾಗ ಎಲ್ಲಿಯೋ ಕಳೆದು ಹೋಯಿತು. ಈಗ ಏನು ಮಾಡುವುದು? ಮುಖರ್ಜಿಯವರು ಭಾಗಲಪುರ ದಲ್ಲಿದ್ದ ವಿಭೂತಿಭೂಷಣ ಭಟ್ಟನಿಗೆ ಕಾಗದ ಬರೆದರು. ಶರತ್‌ನ ಎಲ್ಲ ರಚನೆಗಳೂ ಸುರೇಂದ್ರನಾಥನ ಬಳಿ ಇವೆ ಎಂದು ಆತ ಉತ್ತರಿಸಿದ.

ಮುಖರ್ಜಿಯವರು ಸುರೇಂದ್ರನಾಥನಿಗೆ ಬರೆದರು: 'ಬಡೀ ದೀದೀ' ಕಥೆಯ ಉಳಿದ ಭಾಗವನ್ನು ಪ್ರತಿ ಮಾಡಿ ಕೂಡಲೇ ಕಳಿಸಿಕೊಡು. ಇಲ್ಲದೆ ಹೋದರೆ, 'ಭಾರತಿ' ಪತ್ರಿಕೆ ಕಷ್ಟಕ್ಕೊಳಗಾಗುತ್ತದೆ."

ಶರತ್ ಎಲ್ಲಿದ್ದಾನೆಂಬುದು ಸುರೇಂದ್ರನಾಥನಿಗೆ ಗೊತ್ತಿತ್ತು. ಅವನು ಅದೇ ವಿಳಾಸಕ್ಕೆ ಕಾಗದ ಬರೆದ. "ಕಳಿಸಿಬಿಡು. ಈಗ ಬೇರಾವ ದಾರಿಯೂ ಇಲ್ಲ" ಎಂದು ಶರತ್‌ನಿಂದ ಉತ್ತರ ಬಂದಿತು.

'ಭಾರತಿ'ಯ ಆ ಸಂಚಿಕೆ[1] ಪ್ರಕಟವಾದೊಡನೆಯೇ ಬಂಗಾಳದ ಸಾಹಿತ್ಯ ಕ್ಷೇತ್ರದಲ್ಲಿ ಕೋಲಾಹಲ ಉಂಟಾಯಿತು: ಇಷ್ಟು ಸುಂದರವಾದ ಕಥೆಯನ್ನು ಬರೆದದರು ಯಾರು?"

"ಭಾಷೆ ಮತ್ತು ಶೈಲಿ ಎಷ್ಟು ಚೊಕ್ಕವಾಗಿವೆ. ಪ್ರಿಯವಾಗಿವೆ, ಹೇಳಿ ಮಾಡಿಸಿದಂತಿವೆ!"

"ಇದಂತೂ ಬಂಗಾಳದ ಮನೆಮನೆಯ ಕಥೆ. ಯಾರೋ ಒಬ್ಬ ಜಾಣ ಚಿತ್ರಕಾರ ಅದೆಷ್ಟು ಸುಂದರವಾಗಿ ಇದನ್ನು ಬರೆಹಕ್ಕಿಳಿಸಿದ್ದಾನೆ!"

ಸಾಹಿತ್ಯ ಮರ್ಮಜ್ಞರಾಗಿದ್ದವರು "ರವೀಂದ್ರನಾಥರೇ ಹೆಸರನ್ನು ಮರೆಸಿ ಈ ಕಥೆಯನ್ನು ಬರೆದಿರಬೇಕು. ಅವರನ್ನು ಬಿಟ್ಟರೆ ಇಷ್ಟೊಂದು ಶಕ್ತಿಪೂರ್ಣವಾಗಿರುವ, ಉತ್ಕೃಷ್ಟವಾಗಿರುವ ಕೃತಿಯನ್ನು ಬೇರೆ ಯಾರು ತಾನೆ ಕೊಡಲು ಸಾಧ್ಯ?" ಎಂದೆಲ್ಲ ಯೋಚಿಸಿದರು. 'ವಂಗದರ್ಶನ' ಪತ್ರಿಕೆಯ ಸಂಪಾದಕರಾಗಿದ್ದ ಶೈಲೇಶಚಂದ್ರ ಮಜೂಮದಾರರ ಅಭಿಪ್ರಾಯವೂ ಇದೇ ಆಗಿತ್ತು. ಆದರೆ, ಕೆಲವೇ ದಿವಸಗಳ ಹಿಂದೆ, ತಾವೀಗ ಬೇರೊಂದು ಕಾದಂಬರಿಯನ್ನು ಬರೆಯುವ ಸ್ಥಿತಿಯಲ್ಲಿಲ್ಲವೆಂದು ರವೀಂದ್ರನಾಥರೇ ಅವರೊಡನೆ ಹೇಳಿದ್ದರು. ಈಗ 'ಭಾರತಿ'ಯಲ್ಲಿ ಮಜೂಮ್ ದಾರರು 'ಬಡೀ ದೀದೀ' ಕಥೆಯ ಮೊದಲ ಕಂತನ್ನು ಓದಿದಾಗ ಆಶ್ಚರ್ಯಚಕಿತ ರಾದರು. ಆ ಕ್ಷಣವೇ ಅವರ ಬಳಿಗೆ ಹೋಗಿ ಕೇಳಿದರು: "ಈಗಲೇ ಹೊಸ ಕಾದಂಬರಿಯನ್ನು ಬರೆಯಲು ಸಾಧ್ಯವಾಗುವುದಿಲ್ಲವೆಂದು ನೀವೇ ಹೇಳಿದ್ದೀರಿ. ಆದರೆ, ಹೆಸರು ಕೊಡದೆಯೇ 'ಭಾರತಿ'ಯಲ್ಲಿ ಬರೆಯತೊಡಗಿದ್ದೀರಲ್ಲ."

ರವೀಂದ್ರನಾಥರೆಂದರು: "ಹೌದು. ನಾನು ಕಾದಂಬರಿ ಬರೆಯಲಾರೆ. ಯಾರಾದರೂ ನನ್ನ ಯಾವುದಾದರೂ ಒಂದು ಕವಿತೆಯನ್ನೋ ಗಿವಿತೆಯನ್ನೋ ಎಲ್ಲಿಂದಲೋ ಎತ್ತಿಕೊಂಡು ಅಚ್ಚಿಸಿರಬಹುದು."

ಕಣ್ಣುಗಳನ್ನರಳಿಸುತ್ತ ಶೈಲೇಶಚಂದ್ರರೆಂದರು: "ಕವಿತೆ-ಗಿವಿತೆ ಅಲ್ಲ ಸ್ವಾಮಿ, ಕಾದಂಬರಿ!"

---

1 'ಭಾರತೀ' - ವೈಶಾಖ ಸಂಚಿಕೆ 1907 (ಏಪ್ರಿಲ್-ಮೇ)

ರವೀಂದ್ರನಾಥರು ಮೂಕರಂತಾದರು. "ಕಾದಂಬರಿಯೆ! ಇದೇನು ಹೇಳುತ್ತಿದ್ದೀಯೆ ಶೈಲೇಶ್? ನಾನು ಕಾದಂಬರಿ ಬರೆದಿದ್ದೇನೆಯೆ? 'ಭಾರತಿ' ಅದನ್ನು ಪ್ರಕಟಿಸುತ್ತಿದೆಯೆ? ಇಲ್ಲ, ಇಲ್ಲ, ಖಂಡಿತವಾಗಿಯೂ ಎಲ್ಲೋ ಏನೋ ತಪ್ಪಾಗಿರಬೇಕು."

ವಿರಕ್ತಿಯ ಭಾವನೆಯಿಂದ 'ಭಾರತಿ'ಯಲ್ಲಿ ಪ್ರಕಟವಾಗಿದ್ದ 'ಬಡೀ ದೀದೀ' ಕಥೆಯ ಭಾಗವನ್ನು ಜೇಬಿನಿಂದ ಹೊರತೆಗೆಯುತ್ತ ಶೈಲೇಶಚಂದ್ರರೆಂದರು: "ಹೆಸರು ಕೊಡದಿದ್ದ ಮಾತ್ರಕ್ಕೆ ನೀವು ಮುಚ್ಚುಮರೆ ಮಾಡಲು ಸಾಧ್ಯವಾಗುತ್ತದೆಯ?"

ಶೈಲೇಶಚಂದ್ರರ ಆರೋಪದ ತೀವ್ರತೆಯಿಂದಾಗಿಯೋ ಅಥವಾ 'ಬಡೀ ದೀದಿ'ಯ ಮೊದಲ ನಾಲ್ಕಾರು ಪಂಕ್ತಿಗಳ ಆಕರ್ಷಣೆಯಿಂದಾಗಿಯೋ ರವೀಂದ್ರರು ಸ್ತಬ್ಧರಾಗಿ ಆ ಭಾಗವನ್ನು ಓದಿ ಮುಗಿಸಿದರು. ಓದಿ ಆದ ಮೇಲೆ ಹೇಳಿದರು: "ನಿಜವಾಗಿಯೂ ಈ ಕೃತಿ ತುಂಬ ಅದ್ಭುತವಾಗಿದೆ. ಆದರೆ, ಇದು ನನ್ನದಂತೂ ಅಲ್ಲ. ಇದು ಬೇರೊಬ್ಬ ವ್ಯಕ್ತಿಯ ಬರವಣಿಗೆ. ಯಾರದ್ದಾದರೂ ಆಗಿರಲಿ, ಆತ ಅಸಾಮಾನ್ಯ ಶಕ್ತಿಯಿಂದೊಡಗೂಡಿರುವ ಲೇಖಕ."

ಠಾಕುರ್ ಕುಟುಂಬದ ಇತರ ವ್ಯಕ್ತಿಗಳೂ ಈ ಕಥೆಯನ್ನು ಓದಿದರು. ಇದರ ಲೇಖಕ ಯಾರು ಎಂಬುದನ್ನು ತಿಳಿದುಕೊಳ್ಳಲು ಅವರೆಲ್ಲ ತುಂಬ ಉತ್ಸುಕರಾಗಿದ್ದರು. ಅವನೀಂದ್ರನಾಥ ಠಾಕುರ್ ಅವರ ಅಳಿಯ ಮಣೀಲಾಲ ಗಂಗೋಪಾಧ್ಯಾಯರು 'ಭಾರತಿ'ಯ ಸಂಪಾದಕರಾಗಿದ್ದ ಸೌರೀಂದ್ರಮೋಹನ ಮುಖರ್ಜಿಯವರ ಅಂತರಂಗದ ಗೆಳೆಯರಾಗಿದ್ದರು. ಅವರ ಬಳಿಯೇ ಹೋಗಿ ಅವರು ಲೇಖಕನ ಪರಿಚಯ ಮಾಡಿಕೊಡಿ ಎಂದು ಕೇಳಿದರು. ಮತ್ತೊಂದು ದಿನ ಆತನನ್ನು ಅವನೀಂದ್ರನಾಥರ ಬಳಿ ಕರೆದುಕೊಂಡು ಬಂದರು. ಅಲ್ಲಿಂದ ಅವರಿಬ್ಬರೂ ರವೀಂದ್ರನಾಥರ ಬಳಿ ಹೋದರು. ರವೀಂದ್ರನಾಥರು ಶರತ್‌ಚಂದ್ರರ ಬಗ್ಗೆ ಸೌರೀಂದ್ರಮೋಹನರಿಗೆ ಅನೇಕ ಪ್ರಶ್ನೆಗಳನ್ನು ಹಾಕಿದರು.

ಎಲ್ಲವನ್ನೂ ಹೇಳಿಯಾದ ಮೇಲೆ ಸೌರೀಂದ್ರ ಮೋಹನರೆಂದರು: "ಆತ ಇಂಥ ಇನ್ನೂ ಅನೇಕ ಕಥೆಗಳನ್ನು ಬರೆದಿದ್ದಾನೆ."

ರವೀಂದ್ರನಾಥರು ಹೇಳಿದರು: "ಹಾಗಾದರೆ ಅವುಗಳನ್ನೆಲ್ಲ ಇಟ್ಟುಕೊಂಡು ಏನು ಮಾಡುತ್ತಿದ್ದೀಯೆ? ಅವುಗಳನ್ನು ಅಚ್ಚಿಸು. ನಾಡಿಗೆ ಒಳಿತಾಗುತ್ತದೆ."

ಸೌರೀಂದ್ರಮೋಹನರು ಮತ್ತೆ ಹೇಳಿದರು: "ಆದರೆ, ಆತ ಇಲ್ಲಿಲ್ಲ. ರಂಗೂನ್‌ನಲ್ಲಿ ಎಲ್ಲಿದ್ದಾನೆ ಏನು ಎಂಬುದು ನನಗೆ ಗೊತ್ತಿಲ್ಲ. ಆತನ ಅನುಮತಿ ಇಲ್ಲದೆ ಆತನ ಕೃತಿಗಳನ್ನು ಅಚ್ಚಿಸಲಾಗುವುದಿಲ್ಲ."

ರವೀಂದ್ರರೆಂದರು: "ಏನಾದರೂ ಮಾಡು. ಆತನನ್ನು ಪತ್ತೆ ಹಚ್ಚು. ಅವನನ್ನು ಹಿಡಿದುಕೊಂಡು ಬಾ. ಇಡೀ ಬಂಗಾಳದಲ್ಲಿಯೇ ಅವನಿಗೆ ಪೆಗಲೆಣೆಯಾಗಿರುವಂಥ ಲೇಖಕ ಸಿಕ್ಕುವುದಿಲ್ಲ."

ಮಹಾಲೇಖಕನಾದ ಟಾಲ್‌ಸ್ಟಾಯ್ ತನ್ನ ಮೊದಲ ಕಥೆಯಾದ 'ಬಾಲ್ಯ'ವನ್ನು ಎಲ್.ಎನ್. ಎಂಬ ಗುಪ್ತ ಹೆಸರಿನಲ್ಲಿ ಬರೆದಿದ್ದ. ಅದನ್ನು ಓದಿದಾಗ ಸೈಂಟ್ ಪೀಟರ್ಸ್‌ಬರ್ಗ್‌ನ ಸಾಹಿತ್ಯ ಕ್ಷೇತ್ರದಲ್ಲಿ ಬಿರುಗಾಳಿ ಬೀಸಿದಂತಾಗಿತ್ತು. ಒಬ್ಬ

ಲೇಖಕನಂತೂ ಮನೆಮನೆಗೆ ಹೋಗಿ ಆ ಕಥೆ ಹೇಳುತ್ತಿದ್ದ. ರವೀಂದ್ರನಾಥರು ಶರತ್‌ನನ್ನು ಹೊಗಳಿದಂತೆಯೇ ಆ ಅಜ್ಞಾತ ಲೇಖಕನನ್ನು ತುರ್ಗನೇವ್ ಮುಕ್ತಕಂಠದಿಂದ ಹೊಗಳಿದ್ದರು. ಅವರು ಸಂಪಾದಕರಿಗೆ ಹೀಗೆಂದು ಬರೆದಿದ್ದರು: "ಆತ ನಿಜವಾಗಿಯೂ ಪ್ರತಿಭಾವಂತ. ಆತನು ಬರೆಯುತ್ತ ಇರಬೇಕೆಂದು ತಿಳಿಸಿ ನಾನು ನನ್ನ ಪ್ರಣಾಮಗಳನ್ನು ಸಲ್ಲಿಸುತ್ತಿದ್ದೇನೆಂದೂ, ನನ್ನ ಶುಭಕಾಮನೆಗಳನ್ನೂ ಪ್ರಶಂಸೆಯನ್ನೂ ಕಳುಹಿಸುತ್ತಿದ್ದೇನೆಂದೂ ಆತನಿಗೆ ತಿಳಿಸಿ."

'ಬಡೀ ದೀದಿ'ಗೆ ದೊರೆತ ಸ್ವಾಗತದ ಬಗೆಗಿನ ಸುದ್ದಿ ಶರತ್‌ಗೆ ರಂಗೂನ್‌ನಲ್ಲಿಯೇ ತಿಳಿಯದೆ ಹೋಯಿತು ಎಂದೇನೂ ಅಲ್ಲ. ಅದನ್ನು ಕೇಳಿ ಅವನಿಗೆ ಸಂತೋಷವೂ ಆಯಿತು. ಆದರೆ, ತನ್ನ ಸ್ವಭಾವಕ್ಕೆ ಅನುಗುಣವಾಗಿ, ಅವನು ಯಾರೊಂದಿಗೂ ಈ ವಿಷಯವನ್ನು ಚರ್ಚಿಸಲಿಲ್ಲ. ಆದರೆ, ಮೂರನೆಯ ಕಂತಿನೊಂದಿಗೆ ಲೇಖಕನ ಹೆಸರು ಪ್ರಕಟವಾದಾಗ, ನಮ್ಮ ಈ 'ಹುಚ್ಚ ಶರತ್'ನೇ ಆ ಶರತ್‌ಚಂದ್ರನೇ ಎಂಬ ಅನುಮಾನ ಅವನ ಗೆಳೆಯರಿಗೆ ಉಂಟಾಯಿತು. ಅವರಲ್ಲೊಬ್ಬ ಶರತ್‌ಚಂದ್ರನನ್ನು ಕೇಳಿದ: " 'ಬಡೀ ದೀದಿ'ಯ ಲೇಖಕ ನೀನೇ ಏನು ?"

ಶರತ್ ದೃಢತೆಯೊಂದಿಗೆ ಉತ್ತರಿಸಿದ: "ನನ್ನ ಯಾವ ರಚನೆಯನ್ನೂ ನಾನು 'ಭಾರತಿ'ಗೆ ಕಳುಹಿಸಿಲ್ಲ."

ಆದರೆ ತನ್ನ ಅಂತರಂಗದ ಗೆಳೆಯರೊಂದಿಗೆ ಅವನು ಏನನ್ನೂ ಮುಚ್ಚಿಡಲಿಲ್ಲ. ಯೋಗೇಂದ್ರನಾಥ ಸರ್ಕಾರ್‌ಗೆ ಎಲ್ಲವನ್ನೂ ತಿಳಿಸಿ ಹೇಳಿದ: "ನಾನು ಬಾಲ್ಯದಲ್ಲಿ ಈ ಕಥೆಯನ್ನು ಬರೆದಿದ್ದೆ. ಅದನ್ನು ಸುರೇಂದ್ರನ ಬಳಿ ಬಿಟ್ಟು ಬಂದಿದ್ದೆ. ಅವನೇ ಕೊಟ್ಟುಬಿಟ್ಟಿದ್ದಾನೆ."

'ಬಡೀ ದೀದಿ'ಯ ಪ್ರಕಟಣೆಯ ಬಳಿಕ ಅವನು ಕಲ್ಕತ್ತೆಗೆ ಬಂದ. 'ಹೈಡ್ರೋಸೀಲ್' ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬೇಕಾಗಿತ್ತು. ಕಾರ್ಮೈಕಲ್ ಕಾಲೇಜಿನಲ್ಲಿ ಆ ಶಸ್ತ್ರ-ಚಿಕಿತ್ಸೆ ನಡೆಯಿತು. ನಾಲ್ಕು ತಿಂಗಳವರೆಗೆ ಅವನು ಕಲ್ಕತ್ತೆಯಲ್ಲಿಯೇ ಇದ್ದ. ಆದರೆ, ಇಚ್ಛೆಯುಂಟಾಗಿದ್ದರೂ, ನಾಚಿಕೆಯಿಂದಾಗಿ ತನ್ನ ಅಂತರಂಗದ ಗೆಳೆಯರಾರನ್ನೂ ಭೇಟಿಯಾಗಲಿಲ್ಲ. ತನ್ನ ರಂಗೂನಿನ ಜೀವನದಿಂದಾಗಿ ತನ್ನ ಗೆಳೆಯರನ್ನು ಎದುರಿಸಲೂ ಅವನು ಅಂಜುತ್ತ ಇದ್ದನೇನೋ ಎಂಬಂತಿತ್ತು. ತನ್ನ ಗೆಳೆಯರನ್ನು ಭೇಟಿಯಾಗಲು ಅವನಿಗೆ ಸಾಧ್ಯವಾಗದೆ ಹೋಯಿತಾದರೂ, ವಿವಾಹ ಯೋಗ್ಯರಾಗಿದ್ದ ಕನ್ಯೆಯರ ತಂದೆಯರು ಅವನನ್ನು ಸಾಕಷ್ಟು ಗೋಳು ಹುಯ್ದುಕೊಂಡರು. ಒಂದು ಕಾಗದದಲ್ಲಿ ಅವನು ಹೀಗೆ ಬರೆದಿದ್ದ: "ನನ್ನ ದುಃಖದ ದಿನಗಳಲ್ಲಿ ಅವರು ಎಲ್ಲಿದ್ದರೋ ಏನೋ. ಆದರೆ, ಇಂದು ನಿಶ್ಚಿಂತೆಯಿಂದ ಕಾಲಕಳೆಯುವಂಥ ಸಮಯ ಬಂದಿರುವಾಗ ನನ್ನ ಮೇಲೆ ದಯೆ ತೋರುತ್ತ ಅದಾವ ಅಜ್ಞಾತ ಸ್ಥಾನದಿಂದ ಇವರು ಗುಂಪುಗಟ್ಟಿಕೊಂಡು ಬರುತ್ತಿದ್ದಾರೋ ನನಗೆ ಗೊತ್ತಾಗುತ್ತಿಲ್ಲ."

ಅವನು ಕಲ್ಕತ್ತೆಗೆ ಯಾವಾಗ ಬಂದರೂ ತನ್ನ ಗೆಳೆಯರ ಬಳಿಯಾಗಲೀ, ಬಂಧುಗಳ ಬಳಿಯಾಗಲೀ ಉಳಿದುಕೊಳ್ಳುತ್ತಿರಲಿಲ್ಲ. ಅವನು ತಂಗುತ್ತಿದ್ದುದು ಕೆಟ್ಟ ಹೆಸರಿನ ಗಲ್ಲಿಗಳಲ್ಲಿಯೇ. ಈ ಕೆಟ್ಟ ಹೆಸರಿನ ಗಲ್ಲಿಗಳಲ್ಲಿ ಕೆಟ್ಟ ಹೆಸರನ್ನು ಹೊತ್ತಿದ್ದ

ನಾರಿಯರಲ್ಲಿಯೇ ಅವನು ಸ್ತ್ರೀತ್ವವನ್ನು ಅರಸಿದ್ದ. ಅದೆಷ್ಟು ಮಂದಿ ಭಾಗ್ಯಹೀನ ಮಹಿಳೆಯರ ಇತಿಹಾಸವನ್ನು ಅವನು ಸಂಗ್ರಹಿಸಿದ್ದನೋ ಏನೋ. ಅವರ ಬಳಿ ಇದ್ದುಕೊಂಡೇ ಅವನು ಹಾಡುಗಳನ್ನು ಕಲಿತ, ತನ್ನ ಬಾಯಿಂದಲೇ ತನ್ನ ಈ ಖ್ಯಾತಿಯನ್ನು ಹೇಳಿಕೊಳ್ಳಲು ಅವನೆಂದೂ ಅಳುಕಲಿಲ್ಲ.

ಹೀಗಾಗಿ 'ಬಡೀ ದೀದಿ'ಗೆ ಅಂಥ ಭವ್ಯಸ್ವಾಗತ ದೊರೆತರೂ, ಸೌರೀಂದ್ರ ಮೋಹನನನ್ನು ಭೇಟಿಯಾಗುವುದು ಉಚಿತವೆಂದು ಅವನು ಭಾವಿಸಲಿಲ್ಲ. ಹೋಗುವಾಗ ತನ್ನ ತಮ್ಮ ಪ್ರಭಾಸಚಂದ್ರನೊಂದಿಗೆ ಇಷ್ಟು ಮಾತ್ರ ಹೇಳಿ ಹೋಗಿದ್ದ: "'ಭಾರತಿ'ಯ ಯಾವ ಸಂಚಿಕೆಗಳಲ್ಲಿ 'ಬಡೀ ದೀದಿ'ಯ ಭಾಗಗಳು ಪ್ರಕಟವಾಗಿವೆಯೋ ಅವನ್ನೆಲ್ಲ ಕೊಂಡುಕೊಂಡು ನನಗೆ ಕಳಿಸಿಕೊಡು"

ರಂಗೂನ್‌ಗೆ ಹಿಂದಿರುಗಿದ ಮೇಲೆ ವಿಭೂತಿಭೂಷಣ ಭಟ್ಟನಿಗೆ ಬರೆದ ಪತ್ರದಲ್ಲಿ ಅವನು ತನ್ನ ಗೆಳೆಯರನ್ನು ಏಕೆ ಭೇಟಿಯಾಗಲಿಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದ. ತನ್ನ ಈ 'ಅಜ್ಞಾತವಾಸ'ವೆಂದು ಹೇಳಬಹುದಾದ ಅವಧಿಯಲ್ಲಿ ತನ್ನ ಗೆಳೆಯರಿಗೆ ಆಗಾಗ ಪತ್ರ ಬರೆಯುತ್ತಿದ್ದನೆಂಬುದೂ ಈ ಪತ್ರದಿಂದ ಸ್ಪಷ್ಟವಾಗುತ್ತದೆ. ಅವರೇ ಅವನಿಗೆ ಉತ್ತರ ಕೊಟ್ಟಿರಲಿಲ್ಲ.

"ಬಹು ದಿನಗಳ ಬಳಿಕ ಪತ್ರ ಬರೆಯುತ್ತಿದ್ದೇನೆ. ಇದು ನಿನ್ನ ಕೈಸೇರಲಿ ಎಂದು ಪ್ರಾರ್ಥಿಸುತ್ತೇನೆ. ನನ್ನ ಎಲ್ಲ ಕೆಟ್ಟ ಕೆಲಸಗಳನ್ನೂ ಮರೆತು, ಇದನ್ನು ಪ್ರೀತಿಯ ದೃಷ್ಟಿಯಿಂದ ಓದು, ಹಾಗೆ ಮಾಡಿದರೆ ಮಾತ್ರ ನಾನು ಬರೆದಿರುವುದು ಸಾರ್ಥಕವಾಗುತ್ತದೆ. ನಿನಗೆ ಕಾಗದ ಬರೆಯುತ್ತಿರುವಾಗ ನನಗೆ ನಾಚಿಕೆಯೂ ಆಗುತ್ತಿದೆ, ಹೆದರಿಕೆಯೂ ಆಗುತ್ತಿದೆ, ಕಾಗುಣಿತದ ತಪ್ಪುಗಳಿಂದ ತುಂಬಿರುವ ಈ ಅಸಂಬದ್ಧ ಬರೆಹವನ್ನು ನೋಡಿ ನೀನು ನಗುತ್ತೀಯೆ, ಬಾಲ್ಯದಲ್ಲಿ ಇಂಥ ವ್ಯಕ್ತಿಯನ್ನು ನಾನು ಅದು ಹೇಗೆ ಪ್ರೀತಿಸುತ್ತಿದ್ದೆ ಎಂದು ಯೋಚಿಸಲೂಬಹುದು... ನಾನೆಂಥ ದುರದೃಷ್ಟಶಾಲಿ ? ನಾಲ್ಕೈದು ತಿಂಗಳ ಕಾಲ ಕಲ್ಕತ್ತೆಯಲ್ಲಿದ್ದರೂ ನಿನ್ನನ್ನು ಭೇಟಿಮಾಡಲಾರದೆ ಹೋದೆ. ಆಗ ನೀನೂ ಕಲ್ಕತ್ತೆಗೆ ಬಂದಿದ್ದೆ. ಮತ್ತೆಂದೂ ನಿನ್ನನ್ನು ಭೇಟಿಮಾಡುವುದು ಸಾಧ್ಯವಾಗಲಾರದೇನೋ ಎನ್ನಿಸುತ್ತಿದೆ. ಒಮ್ಮೆ ಆಶುವಿನ[1] ಜೊತೆಯಲ್ಲಿ, ಮತ್ತೊಮ್ಮೆ ಒಂಟಿಯಾಗಿಯೇ ನಿನ್ನ ಮನೆಗೆ ಬರಲು ಸಿದ್ಧನಾಗಿ ಹೊರಟಿದ್ದೆ. ಆದರೆ, ನಾಚಿಕೆಯಿಂದಾಗಿ ಬರಲಾರದೆ ಹೋದೆ.

"ಪಂಟೂ, ನನ್ನ ಬಾಳು ಅದೆಷ್ಟು ದೌರ್ಭಾಗ್ಯದಿಂದ ತುಂಬಿದೆ! ಅದೆಷ್ಟು ಅರ್ಥಹೀನ, ನಿಷ್ಫಲ, ನೀರಸ ದಿನಗಳು, ತಿಂಗಳುಗಳು ಮತ್ತು ವರ್ಷಗಳು ಕಳೆದುಹೋಗುತ್ತಲಿವೆ ಎಂಬುದನ್ನು ಯೋಚಿಸಲಾರದೆ ಹೋಗಿದ್ದೇನೆ. ದೇವರು ಬುದ್ಧಿಯನ್ನು ಕೊಡುವಾಗ ಸ್ವಲ್ಪ ಒಳ್ಳೆಯ ಬುದ್ಧಿಯನ್ನಾದರೂ ಕೊಡಬಹುದಾಗಿತ್ತು. ಕೊಡದೆ ಇದ್ದಾಗ, ಇಷ್ಟೊಂದು ಪ್ರೀತಿಸುವುದನ್ನೇಕೆ ಕಲಿಸಿದ ? ಪ್ರೀತಿಸುವುದಕ್ಕೆ ಯೋಗ್ಯವಾದ ಒಬ್ಬ ವ್ಯಕ್ತಿಯನ್ನು ನನಗೂ ಕೊಟ್ಟುಬಿಟ್ಟಿದ್ದರೆ ಅವನ ಜಗತ್ತಿನಲ್ಲಿ ಮನುಷ್ಯರ ಸಂಖ್ಯೆ ಕಡಿಮೆಯಾಗಿ ಬಿಡುತ್ತಿತ್ತೆ ? ಅವನ ನ್ಯಾಯ ಎಂಥದೆಂಬುದೇ ನನಗೆ ಗೊತ್ತಾಗುತ್ತಿಲ್ಲ.

---

1. ವಿಭೂತಿಭೂಷಣ ಭಟ್ಟನ ಒಬ್ಬ ಭಾವಮೈದುನ.

"ನನ್ನ ಆತ್ಮೀಯ ಬಂಧು-ಬಾಂಧವರೆಲ್ಲರ ತಿರಸ್ಕಾರಕ್ಕೆ ಪಾತ್ರನಾಗಿದ್ದೇನೆಂದೂ ನಾನು ಭಾವಿಸಿದ್ದೇನೆ. ಈ ಸಂಗತಿ ಮನಸ್ಸಿಗೆ ಎಷ್ಟು ಗಾಸಿಯನ್ನುಂಟು ಮಾಡುತ್ತದೆಂಬುದನ್ನು ತಿಳಿಸಿದರೆ, ಜನರು ನಂಬದೆ ಹೋಗಬಹುದು. ನನ್ನನ್ನು ನಂಬಬಹುದಾದಂಥ ಯಾವ ದಾರಿಯನ್ನು ನಾನು ಉಳಿಸಿಲ್ಲವೆಂಬುದು ನನಗೆ ಗೊತ್ತಿದೆ. ಒಂದೇ ಸಮನೆ ಅಲೆಯುತ್ತಿರುವವನೂ, ದುಃಖಿಯೂ ಕುತ್ಸಿತ ನಡತೆಯವನೂ ಆದ ನಾನು ಯಾರ ಮುಂದೆ ಬಂದು ನಿಲ್ಲಲೂ ಯೋಗ್ಯನಾಗಿಲ್ಲ. ಆದರೆ, ಪಂಟೂ! ಇದಕ್ಕೆಲ್ಲ ನಾನೇ ಕಾರಣನಾಗಿದ್ದೇನೆಯೆ? ನನ್ನ ಗಾಳಿಪಟಕ್ಕೆ ಕೆಳಗೆ ಭಾರವನ್ನೇ ಕಟ್ಟಿರಲಿಲ್ಲ. ನನ್ನ ಬಾಣದ ತುದಿಯಲ್ಲಿ ಪುಚ್ಛವಿರಲಿಲ್ಲ; ನನ್ನ ದೋಣಿಯಲ್ಲಿ ಹಾಯಿಯೇ ಇರಲಿಲ್ಲ. ನೇರವಾಗಿ ಹೋಗುತ್ತಿಲ್ಲವೆಂದು ಹೇಳಿ, ಎರಡು ಕೈಗಳಿಂದಲೂ ತಳ್ಳಿಬಿಡುತ್ತಿದ್ದಾರೆ. ಇವೆಲ್ಲ ನನ್ನೊಬ್ಬನ ತಪ್ಪುಗಳೇ ಏನು? ಸಾಧುವಾಗುವುದು ಸಾಧ್ಯವಿರಲಿಲ್ಲ. ಕೆಸರು ತುಂಬಿಕೊಂಡಿರುವ ಈ ಬಾಳಿನಲ್ಲಿ ಸಾಧುತ್ವದ ಕೃತ್ರಿಮ ನಡವಳಿಕೆ ನಿಲ್ಲಲಾರದು. ನೀನಾದರೋ ಒಳ್ಳೆಯವನು. ಹಾಗಿದ್ದೂ ನೀನೇಕೆ ಇಷ್ಟು ನಿಷ್ಠುರನಾಗಿಬಿಟ್ಟಿದ್ದೀಯೆ? ಸುರೇಂದ್ರ, ಗಿರೀಂದ್ರ ಅವರಿಗೆಲ್ಲ ಕಾಗದಗಳನ್ನು ಬರೆದಿದ್ದೆ. ಆದರೆ ಉತ್ತರವೇ ಬರಲಿಲ್ಲ. ನೀನೂ ಉತ್ತರ ಕೊಡಲಿಲ್ಲ. ನನಗೆ ಒಂದು ಪಂಕ್ತಿ ಬರೆದು ಕಳಿಸಿದ್ದರೆ, ನೀನು ಪತಿತನಾಗಿ ಬಿಡುತ್ತಿದ್ದಯೇನು? ಇಷ್ಟು ದೂರದಲ್ಲಿರುವುದರಿಂದ ನಿನಗೆ ಹಾನಿಯನ್ನೇನೂ ಉಂಟು ಮಾಡಲಾರೆನಲ್ಲವೆ! ಒಂದು ಕಾಗದ ಬರೆದಿದ್ದರೆ, ಅಷ್ಟರಿಂದಲೇ ನಿನ್ನ ನಡತೆ ಹಾಳಾಗಿ ಬಿಡುತ್ತಿತ್ತೆ? ಇಂಥ ವಸ್ತು ನಿರ್ಮಲವಾಗಿದ್ದರೇನು, ಮಲಿನವಾಗಿದ್ದರೇನು! ಒಮ್ಮೆ ನೀನು ನನ್ನನ್ನು ಪ್ರೀತಿಸುತ್ತಿದ್ದೆ. ಈ ಕಾಗದಕ್ಕಾದರೂ ಉತ್ತರಕೊಡಬೇಕೆಂದು ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ನೀನು ಮತ್ತು ನಿರುಪಮಾ ಎಂದೂ ನನಗೆ ಮುಖ ತಿರುಗಿಸುವುದಿಲ್ಲವೆಂಬ ನಂಬಿಕೆ ನನ್ನ ಮನಸ್ಸಿನಲ್ಲಿದೆ. ನನ್ನ ಈ ನಂಬಿಕೆಯನ್ನು ಸಿಡಿಸಿಬಿಡಬೇಡ. ನನ್ನ ಈ ನಂಬಿಕೆ ಸುಳ್ಳಾಗಿದ್ದರೂ ಅದರಿಂದ ಆಗುವ ನಷ್ಟವೇನು? ಈ ಸುಳ್ಳು ನಂಬಿಕೆ ಯಾರಿಗೂ ಯಾವುದೇ ಹಾನಿಯನ್ನು ಉಂಟು ಮಾಡುವುದಿಲ್ಲವಲ್ಲ; ಬದಲಾಗಿ ಒಬ್ಬ ವ್ಯಕ್ತಿಗೆ ಆಸರೆಯನ್ನೊದಗಿಸುತ್ತದೆ. ನೈತಿಕ ಅವನತಿಯಿಂದಾಗಿ ನಾನೆಷ್ಟು ಕೆಳಗೆ ಬಿದ್ದಿದ್ದೇನೆ ಎಂಬುದನ್ನು ಅಳೆದು ನೋಡುವ ತರಬೇತಿ ನನಗೆ ದೊರೆಯಲಿಲ್ಲ. ಆದರೆ ಕರುಣೆ, ಪ್ರೀತಿ ಮತ್ತು ಸಹಾನುಭೂತಿಗಳ ಹೊನ್ನಿನ ಮೈಗೆ ಒಂದು ಕಾಳಿನಷ್ಟು ಕಳಂಕ ಹತ್ತುವುದಿಲ್ಲವೆಂಬುದು ನಾನು ಖಂಡಿತವಾಗಿ ಹೇಳಬಲ್ಲೆ....."

ಆದರೆ, ಮುಂದಿನ ನಾಲ್ಕು ವರ್ಷಗಳ ಅವಧಿಯಲ್ಲಿ ಈ ನಂಬಿಕೆ ಬಹುಮಟ್ಟಿಗೆ ಉಳಿದು ಬರಲಿಲ್ಲವೆಂದೇ ತೋರುತ್ತದೆ. ಸ್ವತಃ ಅವನೂ ತನ್ನನ್ನು ಬೆಳಕಿಗೆ ತಂದುಕೊಳ್ಳಲು ಪ್ರಯತ್ನಿಸಲಿಲ್ಲ. ಕೀರ್ತಿಯನ್ನು ಗಳಿಸಬೇಕೆಂಬ ಆಸೆ ಅವನಲ್ಲಿ ಸ್ವಲ್ಪವೂ ಇರಲಿಲ್ಲ. ಮಾವ ಗಿರೀಂದ್ರನಾಥನಿಗೆ[1] ಹೀಗೆಂದು ಬರೆದಿದ್ದ: "ನಾನು ನಿಜವಾಗಿಯೂ ಕೀರ್ತಿಗಾಗಿ ಆಸೆಪಟ್ಟಿದ್ದರೆ ಇಷ್ಟು ದಿನಗಳನ್ನು, ಇಷ್ಟುಕಾಲವನ್ನು ಸಹಜವಾಗಿಯೇ ಹಾಳು ಮಾಡಿಕೊಳ್ಳುತ್ತಿರಲಿಲ್ಲ." 'ಮಂದಿರ' ಎಂಬ ಕಥೆಗೆ

1 ಮಾರ್ಚ್ 1913

ಪಾರಿತೋಷಿಕ ದೊರೆತಾಗಲೂ ಅವನು ತನ್ನನ್ನು ಬೆಳಕಿಗೆ ತಂದುಕೊಳ್ಳಲಿಲ್ಲ. 'ಬಡೀ ದೀದಿ' ಅಚ್ಚಾದಾಗಲೂ ಹಾಗೆಯೇ ಮಾಡಿದ. ರವೀಂದ್ರರ ಮುಕ್ತಕಂಠದ ಪ್ರಶಂಸೆಯನ್ನು ಪಡೆದೂ ಅವನು ಕತ್ತಲಿನಲ್ಲಿಯೇ ಅಡಗಿಕೊಂಡಿದ್ದ. ಆದರೆ, ಅವನ ಬಾಳನ್ನು ಬದಲಾಯಿಸಿದ್ದು ಮಾತ್ರವಲ್ಲದೆ ಭಾರತೀಯ ಸಾಹಿತ್ಯದ ಹೊನಲಿಗೇ ಹೊಸ ತಿರುವನ್ನು ಕಲ್ಪಿಸಿದಂಥದೇನೋ ಖಂಡಿತವಾಗಿಯೂ ನಡೆದಿತ್ತು - ಜನಮನವನ್ನು ಆವರಿಸಿಕೊಳ್ಳುವಂಥ ಒಂದು ಜೀವಂತ ಸೃಜನಾತ್ಮಕ ಶಕ್ತಿ ಮೈದಳೆದಿತ್ತು; ಮಾನವನ ಅಭಿಜ್ಞತೆಗೆ ರೂಪವನ್ನು ಕೊಡಬಲ್ಲಂಥ ಮಹಾ ಜನಪ್ರಿಯ ಕಥಾಶಿಲ್ಪಿಯೊಬ್ಬ ಅವತರಿಸಿದ್ದ! ಸೌರೀಂದ್ರ ಮೋಹನ 'ಭಾರತಿ'ಯಲ್ಲಿ 'ಬಡೀ ದೀದೀ' ಕಥೆಯನ್ನು ಪ್ರಕಟಿಸದಿದ್ದರೆ ನಿಜವಾಗಿಯೂ ಈ ಕಥಾಶಿಲ್ಪಿ ಕಾಣಿಸಿಕೊಳ್ಳುತ್ತಿದ್ದನೆ? ಹೀಗೆ ಆಗದೆ ಹೋಗಿದ್ದರೆ, ತನ್ನನ್ನು ಅಡಗಿಸಿ ಇಟ್ಟುಕೊಳ್ಳುವ ಪ್ರವೃತ್ತಿಯಲ್ಲಿ ಸಿದ್ಧಹಸ್ತನಾಗಿದ್ದ ಶರತ್‌ನ ಪ್ರತಿಭೆ ರಂಗೂನಿನ ಅಕೌಂಟೆಂಟ್ ಜನರಲ್ ಅವರ ಕಡತಗಳಲ್ಲಿಯೇ ಕೊನೆಯುಸಿರೆಳೆದು ಬಿಡುತ್ತಿತ್ತು ಎಂಬುದನ್ನು ಊಹಿಸಿಕೊಳ್ಳುವುದು ಕಷ್ಟವೇನೂ ಅಲ್ಲ. ತನ್ನನ್ನು ಅಡಗಿಸಿ ಇಟ್ಟುಕೊಳ್ಳುವ ಈ ಪ್ರವೃತ್ತಿಗೆ ಕಾರಣವೇನೆಂಬುದನ್ನು ಮೇಲಿನ ಪತ್ರದಲ್ಲಿ ಹುಡುಕಬಹುದು. ಇನ್ನೂ ಕೆಲವು ವ್ಯಕ್ತಿಗಳು ನಾನಾ ರೂಪಗಳಲ್ಲಿ ಇದನ್ನು ವಿಶ್ಲೇಷಿಸಿದ್ದಾರೆ. ಕಲ್ಕತ್ತೆಯಲ್ಲಿ ಕೆಲವು ವರ್ಷಗಳವರೆಗೆ ಶರತ್‌ನ ಜೊತೆಯಲ್ಲಿದ್ದ ಹಿಂದಿಯ ಸುವಿಖ್ಯಾತ ಇತಿಹಾಸಕಾರರಾದ ಇಳಾಚಂದ್ರ ಜೋಶಿಯವರು ಹೀಗೆ ಬರೆದಿದ್ದಾರೆ: "ಸಾಹಿತ್ಯ ಲೋಕದಲ್ಲಿ ಅಪರಿಚಿತನೂ ಅಜ್ಞಾತನೂ ಆಗಿ ಉಳಿಯುವುದರಲ್ಲಿ ಅವನಿಗೆ ಒಂದು ಬಗೆಯ ವಿಚಿತ್ರ ಸುಖ ಲಭಿಸುತ್ತಿದ್ದಂತೆ ತೋರುತ್ತದೆ. ಅವನ ಹೃದಯದಲ್ಲಿ ಕೆಲವೊಂದು ಗಂಟು-ಗೋಜಲುಗಳಿದ್ದುವು. ಅವುಗಳಿಂದಾಗಿಯೇ ಅವನು ತನ್ನ ಜೀವಿತಕಾಲದಲ್ಲಿ ಕೀರ್ತಿಯನ್ನೆದುರಿಸಲು ಹಿಂದೇಟು ಹಾಕುತ್ತಿದ್ದ. ತನ್ನ ಸಾವಿನ ಬಳಿಕ ಅವು ಪ್ರಕಟವಾಗಲಿ ಎಂಬ ಭಾವನೆಯಿಂದ ಅವನು ಬರೆಯುತ್ತ ಹೋಗುತ್ತಿದ್ದ. ಆಗ ದಿವಂಗತ ಲೇಖಕನೊಬ್ಬನ ಕೃತಿಗಳ ಒಳಗಿನಿಂದ ಹೊಮ್ಮಿ ಬಂದು ದನಿಗೈಯುವ ಮಹಾ ಆತ್ಮ ಎಲ್ಲ ಲೇಖಕರನ್ನೂ ತನ್ನ ಮೋಡಿಗೆ ಒಳಪಡಿಸಿಕೊಂಡು ಬಿಡುತ್ತದೆಂದು ಭಾವಿಸಿದ್ದ."

ಬಹುಶಃ ಈ ಕಾರಣದಿಂದಾಗಿಯೇ ಅವನ ಬರೆವಣಿಗೆಯ ಕೆಲಸ ಎಂದೂ ನಿಲ್ಲಲಿಲ್ಲ. ಮಂದಗತಿಯಲ್ಲಿ ಅದು ಒಂದೇ ಸಮನೆ ಮುಂದುವರಿಯುತ್ತಿತ್ತು. ಇಷ್ಟಾಗಿಯೂ ಶರತ್ ಇಂಥ ಒಬ್ಬ ಸುಂದರ ಬರಹಗಾರನೆಂಬುದು ಅವನ ಬರ್ಮಾದ ಗೆಳೆಯರಲ್ಲಿ ತೀರ ಕಡಿಮೆ ಮಂದಿಗೆ ಮಾತ್ರ ಗೊತ್ತಿತ್ತು. 'ಬಂಗಾಳಿ ಕ್ಲಬ್ಬಿ'ನ 'ಸಾಹಿತ್ಯ ಗೋಷ್ಠಿ'ಗಾಗಿ ಅವನು ಬರೆದಿದ್ದ ಒಂದು ಪ್ರಬಂಧದಿಂದಾಗಿ ಈ ರಹಸ್ಯ ಬಯಲಿಗೆ ಬಂದಿತ್ತು.

'ಬೆಂಗಾಲ್ ಸೋಷಿಯಲ್ ಕ್ಲಬ್'ನಿಂದ ಬೇರೆಯಾಗಿದ್ದ ಕೆಲವು ಸದಸ್ಯರು ಈ ಕ್ಲಬ್ಬನ್ನು ಸ್ಥಾಪಿಸಿದ್ದರು. ಇದರ ಗೋಷ್ಠಿಗಳಲ್ಲಿ ಕವಿತಾವಾಚನ, ಕಥಾವಾಚನಗಳು ಮಾತ್ರವಲ್ಲದೆ ಅನೇಕ ವಿಷಯಗಳಿಗೆ ಸಂಬಂಧಿಸಿದ ಪ್ರಬಂಧಗಳನ್ನೂ ಮಂಡಿಸಲಾಗುತ್ತಿತ್ತು. ಅವುಗಳ ಬಗ್ಗೆ ಚರ್ಚೆಯೂ ನಡೆಯುತ್ತಿತ್ತು. ಶರತ್‌ನಂತೂ

ಹೇಳಿಕೇಳಿ ವಾಕ್ಚತುರನಾಗಿದ್ದ. ವಿಮರ್ಶಿಸುವುದರಲ್ಲಿಯೂ ಅವನು ಎಲ್ಲರಿಗಿಂತಲೂ ಮುಂದಿರುತ್ತಿದ್ದ. ಆಗ ಅನೇಕ ಸಲ ಅವನ ಗೆಳೆಯರು ಹೇಳುತ್ತಿದ್ದರು: "ಇಷ್ಟೆಲ್ಲ ಹೇಳುತ್ತೀಯಲ್ಲ! ನೀನೇ ಏಕೆ ಬರೆಯಬಾರದು ?"

ಶರತ್ ಉತ್ತರಿಸುತ್ತಿದ್ದ: "ನನಗೆ ಬರೆಯಲು ಬರುವುದಿಲ್ಲ. ನಾನು ಅಷ್ಟೇನೂ ಓದಿದವನಲ್ಲ."

ಅದು ಸುಳ್ಳು, ತನ್ನನ್ನು ಎಲೆಮರೆಯಲ್ಲಿಯೇ ಇರಿಸಿಕೊಳ್ಳುವ ಅದೇ ಪ್ರವೃತ್ತಿ. ಆದರೆ, ಒಮ್ಮೆ ಹೆಣ್ಣಿನ ನಡತೆಯ ಬಗ್ಗೆ ಆ ಗೋಷ್ಠಿಯಲ್ಲಿ ತುಮುಲ ತರ್ಕಯುದ್ಧವೇ ಏರ್ಪಟ್ಟಾಗ, ಅನೇಕ ವಿದ್ವಾಂಸರ ಗ್ರಂಥಗಳಿಂದ ಉದ್ಧರಣೆಗಳನ್ನು ಮುಂದಿರಿಸಿ ಅವನು ಎಲ್ಲರನ್ನೂ ಬೆರಗುಗೊಳಿಸಿದ್ದ. ಅವನು ಸಿಕ್ಕಿಹಾಕಿಕೊಂಡಿದ್ದೂ ಇಲ್ಲಿಯೇ. ಗೆಳೆಯರು ಹೇಳಿದರು: "ನಾನು ಅಷ್ಟೇನೂ ಓದಿದವನಲ್ಲವೆಂದು ಹೇಳುತ್ತಿದ್ದೆಯಲ್ಲ! ಓದದೆಯೇ ಇಷ್ಟೊಂದು ಜ್ಞಾನ ಬರುವುದು ಹೇಗೆ ಸಾಧ್ಯ ? ಮುಂದಿನ ಸಲಕ್ಕೆ ನೀನು ಪ್ರಬಂಧವನ್ನು ಬರೆಯಲೇಬೇಕು."

ತಪ್ಪಿಸಿಕೊಳ್ಳಲು ಯಾವ ದಾರಿಯೂ ಉಳಿದಿರಲಿಲ್ಲ. ಆಗಲೇ 'ನಾರಿಯ ಸಾಮಾಜಿಕ ಜೀವನದ ಮೇಲೆ ಲೈಂಗಿಕತೆಯ ಪ್ರಭಾವ' ಎಂಬ ವಿಷಯದ ಬಗ್ಗೆ ಮುಂದಿನ ಸಭೆಯಲ್ಲಿ ಶರತ್ ಪ್ರಬಂಧವನ್ನು ಮಂಡಿಸುತ್ತಾನೆಂದು ಘೋಷಿಸಲಾಯಿತು. 'ನಾರಿಯ ಇತಿಹಾಸ' ಎಂಬುದು ಚರ್ಚಾವಿಷಯವಾಗಿರಬೇಕೆಂದು ನಿರ್ಧರಿಸಲಾಗಿತ್ತು.

ಈ ಒಪ್ಪಿಗೆಯ ಬಳಿಕ ಸದಸ್ಯರಲ್ಲಿ ಅದರಲ್ಲಿಯೂ ಯುವಕರಲ್ಲಿ ಉಂಟಾದ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲವೆಂಬಂತೆ ತೋರುತ್ತಿತ್ತು. ತುಂಬ ಕುತೂಹಲದಿಂದ ಅವರು ಆ ದಿನವನ್ನು ಎದುರು ನೋಡುತ್ತಿದ್ದರು. ಗೊತ್ತುಪಡಿಸಿದ್ದ ದಿನದಂದು ಗೊತ್ತುಪಡಿಸಿದ್ದ ಸಮಯಕ್ಕೆ ಸರಿಯಾಗಿ ಸಭೆ ಆರಂಭಗೊಂಡಿತು. ವಿಷಯದ ಆಕರ್ಷಣೆಗೆ ಅನುಗುಣವಾಗಿ ಅಂದು ಶ್ರೋತೃಗಳ ಸಂಖ್ಯೆಯೂ ತುಂಬ ಹೆಚ್ಚಾಗಿಯೇ ಇತ್ತು. ಆದರೆ, ವಕ್ತಾರನಾಗಿದ್ದ ಶರತ್ ಎಲ್ಲಿಯೂ ಕಾಣಿಸುತ್ತಿರಲಿಲ್ಲ. ಕಾಲ ಸರಿಯುತ್ತಿತ್ತು. ಗುಂಪಿನಲ್ಲಿ ವ್ಯಗ್ರತೆಯೂ ಹೆಚ್ಚತೊಡಗಿತ್ತು. ಸಭಾಧ್ಯಕ್ಷರು ಕುರ್ಚಿಯ ಮೇಲೆ ಕುಳಿತುಕುಳಿತೇ ಬಳಲಿ ಹೋದರು. ಶರತ್‌ನನ್ನು ಕರೆತರಲು ಇಬ್ಬರು ಸದಸ್ಯರನ್ನು ಅವನ ಮನೆಗೆ ಕಳಿಸಿಕೊಡಬೇಕೆಂದು ನಿಶ್ಚಯಿಸಲಾಯಿತು. ಈ ಮಧ್ಯೆ ಲಘು ಮನರಂಜನೆಯ ಸಂಗೀತದೊಂದಿಗೆ ಸಭೆಯ ಕಾರ್ಯಕ್ರಮ ಶುರುವಾಯಿತು.

ಜೋರಾಗಿ ಮಳೆ ಸುರಿಯುತ್ತಿತ್ತು. ಇನ್ನೊಬ್ಬ ಸದಸ್ಯನನ್ನು ಜೊತೆಗೆ ಕರೆದುಕೊಂಡು ಯೋಗೇಂದ್ರನಾಥ ಸರ್ಕಾರ್ ಒಂದೂವರೆ ಮೈಲಿಯ ಪ್ರಯಾಣವನ್ನು ಆರಂಭಿಸಿದ. ಆದರೆ, ಶರತ್‌ನ ಮನೆಯನ್ನು ತಲುಪಿದಾಗ ಅಲ್ಲಿ ಕಂಡಿದ್ದೇನು ? ಅಲ್ಲಿಯೂ ಅವನಿಲ್ಲ. ತುಂಬ ಹೊತ್ತು ಅರಚಿಕೊಂಡ ಮೇಲೆ ಒಬ್ಬ ವ್ಯಕ್ತಿ ಹೊರಗೆ ಬಂದ. ಸರ್ಕಾರ್ ಕೇಳಿದ: "ಶರತ್ ಒಳಗೆ ಇಲ್ಲವೇನು ?"

ಆ ವ್ಯಕ್ತಿ ಕೇಳಿದ: "ನೀವು ಯಾರು ? ಎಲ್ಲಿಂದ ಬಂದಿದ್ದೀರಿ ?"

ಸರ್ಕಾರ್ ಹೇಳಿದ: "ನಾವು ಬೆಂಗಾಲ್ ಕ್ಲಬ್ಬಿನವರು. ಇವತ್ತು ಶರತ್ ಅಲ್ಲಿ...."

ಮಾತನ್ನು ಪೂರ್ತಿಯಾಗಿ ಕೇಳಿಸಿಕೊಳ್ಳದೆಯೇ ಆ ವ್ಯಕ್ತಿ ಒಳಕ್ಕೆ ಹೊರಟುಹೋದ. ಸದಸ್ಯರಬ್ಬರೂ ಬೆರಗಾಗಿ ನಿಂತರು. ಆದರೆ, ಅವರು ಏನಾದರೂ ಕ್ರಮಕೈಗೊಳ್ಳುವುದಕ್ಕೆ ಮುಂಚೆಯೇ ಆ ವ್ಯಕ್ತಿ ಮತ್ತೆ ಹೊರಗೆ ಬಂದ. ಅವನ ಕೈಯಲ್ಲಿ ಒಂದುಗೂಡಿಸಿದ್ದ ಹಾಳೆಗಳ ಕಟ್ಟೊಂದು ಇತ್ತು. ಸರ್ಕಾರ್‌ನ ಕೈಗೆ ಅದನ್ನು ಒಪ್ಪಿಸುತ್ತ ಅವನು ಹೇಳಿದ: "ಬುದ್ಧಿಯವರು ಯಾವುದೋ ವಿಶೇಷ ಕೆಲಸದ ಮೇಲೆ ಹೊರಗೆ ಹೋಗಿದ್ದಾರೆ. ಸಭೆಯಲ್ಲಿ ಭಾಗವಹಿಸುವುದು ಅವರಿಗೆ ಸಾಧ್ಯವಾಗುವುದಿಲ್ಲ. ಈ ಹಾಳೆಗಳನ್ನು ಕೊಡುವಂತೆ ನನಗೆ ಹೇಳಿ ಹೋಗಿದ್ದಾರೆ."

ಪ್ರಬಂಧದ ಗಾತ್ರವನ್ನು ನೋಡಿಯೇ ಆ ಸದಸ್ಯರಿಬ್ಬರೂ ಬೆದರಿಬಿಟ್ಟರು. ಸಣ್ಣಸಣ್ಣ ಅಕ್ಷರಗಳಲ್ಲಿ ಬರೆಯಲಾಗಿದ್ದ ಆ ಪ್ರಬಂಧ 'ಮಹಾಭಾರತ'ದಂತೆಯೇ ಇತ್ತು. ಹಿಂದಿರುಗಿ ಬಂದು ಅವರು ಸಭೆಗೆ ಈ ಸುದ್ದಿಯನ್ನು ತಿಳಿಸಿದರು. ಶರತ್ ಬಂದಿಲ್ಲದಿದ್ದರೇನು, ಆ ಪ್ರಬಂಧವನ್ನು ಓದಬೇಕೆಂದು ತೀರ್ಮಾನಿಸಲಾಯಿತು. ಆದರೆ, ಅದನ್ನು ಯಾರು ಓದಬೇಕು? ಅಕ್ಷರಗಳು ಸುಂದರವಾಗಿದ್ದರೂ, ತುಂಬ ಸಣ್ಣದಾಗಿದ್ದುದರಿಂದಲೂ, ಹಾಳೆಗಳು ಅಷ್ಟೊಂದು ಪ್ರಮಾಣದಲ್ಲಿದ್ದುದರಿಂದಲೂ ಅದನ್ನು ಓದಲು ಯಾರೂ ಸಿದ್ಧರಾಗಲಿಲ್ಲ. ಕೊನೆಗೆ ಯೋಗೇಂದ್ರನಾಥ ಸರ್ಕಾರನೇ ಈ ಹೊಣೆಯನ್ನು ಹೊರಬೇಕಾಗಿ ಬಂದಿತು.

ತಾನೇ ಅದನ್ನು ಓದುವುದಿಲ್ಲವೆಂಬ ಶರತ್ತು ಹಾಕಿಯೇ ಶರತ್ ಆ ಪ್ರಬಂಧವನ್ನು ಸಿದ್ಧಪಡಿಸಿದ್ದನೆಂದೂ ಹೇಳಲಾಗಿದೆ. ಅದನ್ನು ಓದಲೂ ಅವನಿಗೆ ಆಗುತ್ತಿರಲಿಲ್ಲ. ರಾಶಿರಾಶಿ ಉದ್ಧರಣೆಗಳಿಂದ ಕೂಡಿದ್ದ ಆ ಪ್ರಬಂಧವನ್ನು ಓದಿ ಮುಗಿಸಲು ಯೋಗೇಂದ್ರನಾಥನಿಗೆ ಸಂಪೂರ್ಣವಾಗಿ ಎರಡು ಘಂಟೆಗಳೇ ಹಿಡಿದುವು. ಆದರೆ ಆ ಪ್ರಬಂಧ ಕೊನೆಗೊಂಡಾಗ ಸಭೆ ಸ್ತಬ್ಧವಾಗಿಬಿಟ್ಟಿತ್ತು. ಲಲಿತವಾದ ಭಾಷೆ, ಮೋಹಕವಾದ ಶೈಲಿ, ವಿಷಯದ ಸಹಜವಾದ ಹಾಗೂ ತರ್ಕ ಸಮ್ಮತವಾದ ನಿರೂಪಣೆ, ಮೌಲಿಕವಾದ ಹಾಗೂ ಗಂಭೀರವಾದ ವಿಶ್ಲೇಷಣೆ ಆ ಪ್ರಬಂಧದಲ್ಲಿದ್ದುದರಿಂದ ಎಲ್ಲರೂ ಮುಕ್ತಕಂಠದಿಂದ ಅದನ್ನು ಹೊಗಳಿದರು. ಅವನ ಬಾಲ್ಯಕಾಲದ ಕೃತಿಯಾದ 'ಬಡೀ ದೀದಿ' ಈಗಾಗಲೇ ಪ್ರಕಟವಾಗಿತ್ತು. ಆದರೆ ಅವನ ಸಹಜಪ್ರತಿಭೆ ಹಾಗೂ ಪ್ರೌಢ ರಚನಾಕೌಶಲದ ಪರಿಚಯ ಆದದ್ದು ಅದೇ ಮೊದಲ ಸಲಕ್ಕೆ.

ಅವನ ಚಿತ್ರಗಳನ್ನು ನೋಡುತ್ತ ಇದ್ದಾಗ ಒಮ್ಮೆ ಯೋಗೇಂದ್ರನಾಥ ಒಂದು ಹಸ್ತಪ್ರತಿಯನ್ನು ಹುಡುಕಿ ಹೊರತೆಗೆದ. ದಪ್ಪ ಬಫ್ ಕಾಗದದ ಹಾಳೆಗಳ ಮೇಲೆ ಮುತ್ತಿನಂಥ ಅಕ್ಷರಗಳಲ್ಲಿ ಬರೆದಿದ್ದ ಎಂಟೋ ಒಂಬತ್ತೋ ಅಧ್ಯಾಯಗಳನ್ನು ಆ ಹಸ್ತಪ್ರತಿ ಒಳಗೊಂಡಿತ್ತು. 'ಚರಿತ್ರ ಹೀನ' ಎಂಬ ಹೆಸರನ್ನು ಅದಕ್ಕೆ ಕೊಡಲಾಗಿತ್ತು. ಓದಲು ಶುರು ಮಾಡಿದರೆ ಅದನ್ನು ಕೆಳಗಿಡಲು ಸಾಧ್ಯವಾಗಲೇ ಇಲ್ಲ. ರವೀಂದ್ರನಾಥರ 'ಗೋರಾ' ಕಾದಂಬರಿಯನ್ನು ಬಿಟ್ಟರೆ ಬೇರಾವುದೇ ಇಂಥ ಸುಂದರ ಕೃತಿಯನ್ನು ಅವನು ಈವರೆಗೆ ಓದಿರಲಿಲ್ಲ. ಈಗ್ಗೆ ಕೆಲವು ದಿನಗಳ ಹಿಂದೆಯಷ್ಟೇ[1] ಅದು ಪ್ರಕಟವಾಗಿತ್ತು.

---

1. 1910

ಆ ಹಸ್ತಪ್ರತಿಯ ಮೊದಲ ಪುಟದಲ್ಲಿ ಕೆಲವು ವ್ಯಕ್ತಿಗಳ ಹೆಸರು ಬರೆಯಲಾಗಿದ್ದುದನ್ನೂ ಅವನು ನೋಡಿದ. ಕೇಳಿದ: "ಇವರು ಯಾರು ?"

ಶರತ್ ಉತ್ತರಿಸಿದ: "ಭಾಗಲಪುರದಲ್ಲಿ ನಮ್ಮದೊಂದು ಸಾಹಿತ್ಯಗೋಷ್ಠಿ ಇತ್ತು. ಇವರೆಲ್ಲ ಅದರ ಸದಸ್ಯರಾಗಿದ್ದರು."

ಅವರಲ್ಲಿ ಸೌರೀಂದ್ರಮೋಹನ ಮುಖೋಪಾಧ್ಯಾಯರ ಕಥೆಗಳ ಒಂದು ಸಂಕಲನ 'ಶೇಫಾಲೀ'[1] ಎಂಬ ಹೆಸರಿನಲ್ಲಿ ಬೆಳಕು ಕಂಡಿತ್ತು. ಯೋಗೇಂದ್ರನಾಥ ಅದನ್ನು ತುಂಬ ಹೊಗಳಿದ್ದ. ಆಗ ಶರತ್ ಹೇಳಿದ್ದ: "ಹೌದು, ಹೌದು. ಅವನು ಚೆನ್ನಾಗಿ ಬರೆಯುತ್ತಾನೆ. ಆದರೆ, ಅವನನ್ನು ಕೇಳಿದರೆ, 'ನಾನೇ ಅವನ ಗುರು'ವೆಂದು ಹೇಳುತ್ತಾನೆ."

ಸರ್ಕಾರ್ ಹೇಳಿದ: "ಅದೇನೋ ಸರಿಯೆ. ಆದರೆ, ಈಗಂತೂ ಶಿಷ್ಯನೇ ಗುರುವನ್ನು ಸೋಲಿಸಿಬಿಟ್ಟಿದ್ದಾನೆ."

ನಗುತ್ತ, ಶರತ್ ಹೇಳಿದ: "ಲೋ, ನಾನೇನೂ ಅಷ್ಟೊಂದು ಕೆಟ್ಟದಾಗಿ ಬರೆಯುವುದಿಲ್ಲ. ಬರೆದರೆ ಅನೇಕರಿಗಿಂತ ಚೆನ್ನಾಗಿಯೇ ಬರೆಯಬಲ್ಲೆ."

ಒಳಗಿರುವ ಬೆಂಕಿ ಬಹು ದಿನಗಳವರೆಗೆ ಒಳಗೇ ಅಡಗಿರುವುದು ಸಾಧ್ಯವಿಲ್ಲವೆಂಬುದು ಯೋಗೇಂದ್ರನಾಥನಿಗೆ ಗೊತ್ತಿತ್ತು. ಆದ್ದರಿಂದ ಆತ ಶರತ್‌ನನ್ನು ಒಂದೇ ಸಮನೆ ಪ್ರೋತ್ಸಾಹಿಸುತ್ತಿದ್ದ, ಪ್ರಚೋದಿಸುತ್ತಿದ್ದ. 'ನಾರಿಯ ಇತಿಹಾಸ' ಎಂಬುದು ಇದರ ಪರಿಣಾಮವಾಗಿ ಹೊರಬಂದ ಕೃತಿ. ಕುಲವನ್ನು ತ್ಯಜಿಸಿ ಹೊರಬಂದಿದ್ದ, ಬಂಗಾಳದ ವಿವಿಧ ಜಿಲ್ಲೆಗಳಿಗೆ ಸೇರಿದ ಏಳು ನೂರು ಮಂದಿ ದುರದೃಷ್ಟಶಾಲಿ ಮಹಿಳೆಯರ ಬದುಕಿನ ಕರುಣಕಥೆ ಇದರಲ್ಲಿ ಅಂಕಿತಗೊಂಡಿದೆ. ಹೆಸರು, ವಿಳಾಸ, ವಯಸ್ಸು, ಜಾತಿ, ಪರಿಚಯ ಹಾಗೂ ಕುಲತ್ಯಾಗಕ್ಕೆ ಸಂಬಂಧಿಸಿದ ಸಂಕ್ಷಿಪ್ತ ವಿವರಗಳನ್ನು ಇದರಲ್ಲಿ ಕೊಡಲಾಗಿತ್ತು. ನಾರಿಯ ಲೈಂಗಿಕ ಜೀವನದ ರಹಸ್ಯ ಹಾಗೂ ಅಗೋಚರವಾಗಿರುವ ಹಾಗೂ ವಿಲಕ್ಷಣವಾಗಿರುವ ಆಕೆಯ ದೈವಿಕ ಹಾಗೂ ಮಾನವೀಯ ಗುಣಗಳ ಬಗ್ಗೆ ಗಂಭೀರ ವಿವೇಚನೆ ಹಾಗೂ ಪರಿಶೀಲನೆಯನ್ನು ಮುಂದಿರಿಸಿ ಸತ್ಯವನ್ನು ಹೊರಗೆಳೆಯಲಾಗಿತ್ತು. ಇದಕ್ಕಾಗಿ ದೇಶವಿದೇಶಗಳ ಇತಿಹಾಸ ಮತ್ತು ಸಾಹಿತ್ಯಗಳ ಮಂಥನ ಮಾಡಬೇಕಾಗಿ ಬಂದಿತ್ತು. ತನ್ನ ಈ ಸಂಕಲನದ ಬಗ್ಗೆ, ಬಹುದಿನಗಳ ಬಳಿಕ ಆತ ಹೀಗೆಂದು ಬರೆದಿದ್ದ: "ಕುಲವನ್ನು ತ್ಯಜಿಸಿ ಹೊರಬರುವವರಲ್ಲಿ ಶೇಕಡಾ ಎಂಬತ್ತಕ್ಕಿಂತಲೂ ಹೆಚ್ಚು ಮಂದಿ ಸಧವೆಯರು, ವಿಧವೆಯರ ಸಂಖ್ಯೆ ತುಂಬ ಕಡಿಮೆಯಾಗಿಯೇ ಇರುತ್ತದೆ ಎಂಬುದನ್ನು ಅಸಂದಿಗ್ಧರೂಪದಲ್ಲಿ ಕಂಡುಕೊಂಡೆ. ಪತಿ ಜೀವಂತವಾಗಿ ಇದ್ದರೆ ತಾನೆ ಏನು ? ಅವರನ್ನು ಬಲವಾದ ಪಹರೆಯಲ್ಲಿ ಇರಿಸಿದ್ದರೆ ತಾನೆ ಏನು ? ವಿಧವೆಯಾದರೆ ತಾನೆ ಏನು ? ಅನೇಕ ದುಃಖಗಳಿಂದಾಗಿ ಹೆಣ್ಣು ತನ್ನ ಧರ್ಮವನ್ನು ಕಳೆದುಕೊಳ್ಳಲು ಸಿದ್ಧವಾಗಿಬಿಡುತ್ತಾಳೆ. ಪರಪುರುಷನ ರೂಪಿನಿಂದಾಗಿಯಾಗಲೀ, ಯಾವುದೋ ಬೀಭತ್ಸ ಪ್ರವೃತ್ತಿಯ ಲೋಭದಿಂದಾಗಿಯಾಗಲೀ ಅವರು ಹೀಗೆ

---

1. 1909

ಮಾಡಿರುವುದಿಲ್ಲ. ತಮ್ಮ ಅಷ್ಟು ಮಹತ್ತರವಾದ ವಸ್ತುವನ್ನೇ ಕಳೆದುಕೊಳ್ಳುವಾಗ ಹೊರಗೆ ಕಾಲಿರಿಸಿ ಯಾವುದೋ ಆಸರೆಯ ವಸ್ತುವನ್ನು ಪಡೆಯುವ ಲೋಭದಿಂದಾಗಿ ಅವರು ಹೀಗೆ ಮಾಡಿರುವುದಿಲ್ಲ. ಯಾವುದೋ ಒಂದು ಸಂಕಟದಿಂದ ಮುಕ್ತರಾಗುವ ಸಲುವಾಗಿಯೇ ಅವರು ಈ ದುಃಖವನ್ನು ತಲೆಯ ಮೇಲೆ ಹೊತ್ತುಕೊಂಡಿರುತ್ತಾರೆ."[1]

ಆದರೆ, ಶರತ್‌ನಂಥ ಒಬ್ಬ ಗುಮಾಸ್ತ ಪಾಶ್ಚಾತ್ಯ ದಾರ್ಶನಿಕರ ಕೃತಿಗಳನ್ನೆಲ್ಲ ಅಭ್ಯಾಸ ಮಾಡಿರಬಹುದೆಂಬುದನ್ನು ಒಪ್ಪಲು ಸಾಮಾನ್ಯ ಜನರು ಸಿದ್ಧವಾಗಿರಲಿಲ್ಲ. ಹೀಗಾಗಿ, ಅವನು ಯಾವಾಗಲಾದರೂ ಗಂಭೀರವಾಗಿ ಮಾತನಾಡತೊಡಗಿದರೆ, ಅದು ಅವರಿಗೆ ಸ್ವಲ್ಪವೂ ಅರ್ಥವಾಗುತ್ತಿರಲಿಲ್ಲ. ಅಷ್ಟೇ ಅಲ್ಲ, "ಶರತ್‌ನೇನು ಘನವಿದ್ವಾಂಸನೆ? ಅದೇನೇನೋ ಒದರುತ್ತ ಇರುತ್ತಾನೆ" ಎಂದು ಲೇವಡಿ ಮಾಡುತ್ತಲೂ ಇದ್ದರು.

ಅವರು ಏನಾದರೂ ಅಂದುಕೊಳ್ಳಲಿ, ಶರತ್‌ನಂತೂ ತುಂಬ ಓದುತ್ತಿದ್ದ. ಮಿಲ್, ಸ್ಪೆನ್ಸರ್ ಮತ್ತು ಕಾಂಟ್ ಅವನಿಗೆ ತುಂಬ ಮೆಚ್ಚಿನವರಾಗಿದ್ದರು. ಸ್ಪೆನ್ಸರನ ಸರಳ, ಸಹಜ ಅಭಿವ್ಯಕ್ತಿಯನ್ನು ಕಂಡು ಅವನು ಮುಗ್ಧನಾಗಿದ್ದ. ಸತ್ಯದ ಸಹಜ ಸಾಕ್ಷಾತ್ಕಾರ ಲಭ್ಯವಾಗುವವರೆಗೂ ಅಭಿವ್ಯಕ್ತಿ ಸಹಜವಾಗಿ ಪರಿಣಮಿಸುವುದಿಲ್ಲವೆಂಬುದು ಅವನಿಗೆ ಗೊತ್ತಿತ್ತು. 'ವಿವರಣಾತ್ಮಕ ಸಮಾಜಶಾಸ್ತ್ರ'ವನ್ನು ಅವನು ಚೆನ್ನಾಗಿ ಅಭ್ಯಾಸ ಮಾಡಿದ.

ಕಾದಂಬರಿಕಾರ ಡಿಕನ್ಸ್‌ನನ್ನು ಅವನು ಈಗಲೂ ತುಂಬ ಹಾಡಿ ಹೊಗಳುತ್ತಿದ್ದ. ಟಾಲ್‌ಸ್ಟಾಯ್ ಕೂಡ ಡಿಕನ್ಸ್‌ನನ್ನು ತುಂಬ ಮೆಚ್ಚಿಕೊಂಡಿದ್ದರು. ಇಬ್ಬರೂ ಹಾಗೆ ಮಾಡಲು ಇದ್ದ ಕಾರಣವೂ ಒಂದೇ. ಟಾಲ್‌ಸ್ಟಾಯ್ ತಮ್ಮ ದಿನಚರಿಯಲ್ಲಿ ಹೀಗೆ ಬರೆದಿದ್ದಾರೆ: "ತಾನು ಸೃಷ್ಟಿಸಿದ ಪಾತ್ರಗಳ ಬಗ್ಗೆ ಲೇಖಕ ತೋರುವ ಒಲವೇ, ಅವನ ಜನಪ್ರಿಯತೆಯ ಮೊದಲನೆಯ ಶರತ್ತಾಗಿರುತ್ತದೆ. ಆದ್ದರಿಂದಲೇ ಡಿಕನ್ಸ್‌ನ ಪಾತ್ರಗಳು ಇಡೀ ಲೋಕಕ್ಕೇ ಸಮಾನ ರೂಪದಲ್ಲಿ ಗೆಳೆಯರಾಗಿಬಿಟ್ಟಿರುತ್ತಾರೆ." ಅಮೆರಿಕನ್ನರನ್ನು ಹಾಗೂ ರಷ್ಯನ್ನರನ್ನು ಒಂದುಗೂಡಿಸುವ ಇಂಥ ಪಾತ್ರಗಳನ್ನೇ ಶರತ್ ಅರಸುತ್ತಿದ್ದ. ಡಿಕನ್ಸ್ ಅಲ್ಲದೆ, ಟಾಲ್‌ಸ್ಟಾಯ್, ಜೋಲಾ ಮತ್ತು ಹೆನ್ರಿವುಡ್ ಅವರೂ ಅವನ ಮೆಚ್ಚಿನ ಲೇಖಕರಾಗಿದ್ದರು. ಆದರೆ, ರವೀಂದ್ರನಾಥರ ಬಗ್ಗೆ ಅವನು ಇರಿಸಿಕೊಂಡಿದ್ದ ಗೌರವಾದರಗಳಿಗೆ ಮೇರೆಯೇ ಇರಲಿಲ್ಲ. ಅವರಿಗಿಂತಲೂ ದೊಡ್ಡ ಕವಿಯೊಬ್ಬನಿದ್ದಾನೆ ಎಂಬುದನ್ನು ಒಪ್ಪಲೂ ಅವನು ಸಿದ್ಧನಾಗಿರಲಿಲ್ಲ. ಅವನು ಆಗಾಗ ಹೇಳುತ್ತಿದ್ದ: "ಇತರ ಕವಿಗಳಂತೆ ಆಗುವ ಪ್ರಯತ್ನವನ್ನಾದರೂ ಮಾಡಬಹುದು. ಆದರೆ, ರವೀಂದ್ರರ ವಿಷಯದಲ್ಲಿ ಹಾಗೆ ಮಾಡಲೂ ಆಗುವುದಿಲ್ಲ. ಅವರ ಈ ಕವಿತೆಯನ್ನು ನೋಡಿ! ಇಷ್ಟು ಸುಂದರವಾದ ಕವಿತೆಯನ್ನು ಯಾರಾದರೂ ಬರೆಯಲು ಸಾಧ್ಯವೆ?

"ಜೀವನೇ ಯತ್ ಪೂಜಾ ಹಲ ನಾ ಸಾರಾ
ಜಾನಿ ಹೇ ಜಾನಿ ತಾಓ ಹಯನಿ ಹಾರಾ

---

1. 14 ಆಗಸ್ಟ್ 1919

ಜೇ ಫೂಲ್ ನಾ ಫೂಟಿತೇ ಝರೇಛೇ ಧರಣೇತೇ
ಜೇ ನದೀ ಮರುಪಥೇ ಹಾರಾಲೋ ಧಾರಾ
ಜಾನಿ ಹೇ ಜಾನಿ ತಾಓ ಹಯುನಿ ಹಾರಾ
ಜೀವನೇ ಆಜೋ ಜಾಹಾ ರೇಯೇಛೇ ಪಿಛೇ
ಜಾನಿ ಹೇ ಜಾನಿ ತಾಓ ಹಯನಿ ಮಿಛೇ
ಆಮಾರ್ ಅನಾಗತ್, ಆಮಾರ್ ಅನಾಹತ್
ತೋಮಾರ್ ವೀಣಾತಾರೇ ಬಾಜಿಛೇ ತಾರಾ
ಜಾನಿ ಹೇ ಜಾನಿ ತಾಓ ಹಯನಿ ಹಾರಾ."

ಇದನ್ನು ಓದುತ್ತ ಓದುತ್ತ ಇದ್ದಂತೆಯೇ ಕಣ್ಣೀರು ಹರಿಯತೊಡಗಿತು. ಆಗ ಹೇಳಿದ: "ಕವಿತೆಯ ಮೂಲದಲ್ಲಿ ಕಲ್ಪನೆ ಇರುವುದರಿಂದ ಮಾತ್ರವೇ ಅದು ಮಹತ್ತರವಾದುದಾಗಿ ಪರಿಣಮಿಸುವುದಿಲ್ಲ. ಸತ್ಯದ ಸಾಕ್ಷಾತ್ಕಾರ ಆಗಬೇಕು. ಆಗಮಾತ್ರವೇ ಸಾಹಿತ್ಯದ ಸೃಷ್ಟಿ ಸಾಧ್ಯವಾಗುತ್ತದೆ."

ಸರ್ಕಾರ್ ಹೇಳಿದ: "ರವೀಂದ್ರರ ಕವಿತೆಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವೆಂದು ಬಹು ಮಂದಿ ಹೇಳುತ್ತಾರಲ್ಲ ?"

ಶರತ್ ಹೇಳಿದ: "ಅದೇನೋ ಸರಿ. ಆದರೆ, ಕ್ಲಿಷ್ಟವಾದುದನ್ನು ಸರಳವಾದುದನ್ನಾಗಿಸುವ ಸಹಾನುಭೂತಿಯ ಬಿಸುಪು ಹೃದಯದಾಳದಿಂದಲೇ ದೊರೆಯುವುದು ಸಾಧ್ಯ. ಇಲ್ಲವಾದರೆ, ಕವಿತೆಯನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಕೇವಲ ವಿಡಂಬನೆಯಾಗಿ ಬಿಡುತ್ತದೆ. ಕವಿತೆ ಓದಲು-ಕೇಳಲು ಸುಂದರವಾಗಿ ಇರಬೇಕು, ಒಂದು ಸಲ ಓದುವುದರಿಂದ ಅಥವಾ ಕೇಳುವುದರಿಂದ ಮಾತ್ರವೇ ತೃಪ್ತಿಯಾಗುವಂತಿರಬಾರದು; ಅದರಲ್ಲಿ ಸಾಮಾನ್ಯ ಅರಿವಿಗಿಂತ ಭಿನ್ನವಾದ ಆಳವಾದ ಭಾವವಿರಬೇಕು. 'ತುಮಿ ಮಾರಲೇ ಧಾಕ್ಕಾ, ಅಮೀ ಮಾರಲಾಮ್ ಠೇಲಾ' ಎಂಬುದನ್ನು ಯಾರಾದರೂ ಕವಿತೆಯೆಂದು ಕರೆಯುತ್ತಾರೆಯೆ ? ಇದು ವಂಶೀಮೋಹನರ 'ಓಹೇ ತಾಲಗಾಛ್ ತುಮಿ ಕೇನೋ ಏತೋ ಲಂಬಾ, ಭೀತ ಜಗದಾಂಬಾ'ದಂಥ ಕವಿತೆಯಾಗುತ್ತದೆ."

7

ಒಂದೆಡೆ ಅಂತರಂಗದ ಗೆಳೆಯರೊಂದಿಗೆ ಈ ಬಗೆಯ ಸಾಹಿತ್ಯಕ ಚರ್ಚೆ ನಡೆಯುತ್ತಿದ್ದರೆ, ಇನ್ನೊಂದೆಡೆ ಎಲ್ಲವನ್ನೂ ಕಳೆದುಕೊಂಡಿದ್ದ ಸಮುದಾಯದ ಬಾಳಿನಲ್ಲಿ ಆಳದವರೆಗೆ ಇಳಿದು ಅವನು ವೈಯಕ್ತಿಕವಾದ ಅನುಭವವನ್ನು ಗಳಿಸಿಕೊಳ್ಳುತ್ತಿದ್ದ. ಇವರಲ್ಲಿಯೇ ಅವನು ತನ್ನ ಅನೇಕ ಪಾತ್ರಗಳನ್ನು ಅರಸಿಕೊಂಡಿದ್ದ. ಅಸಹಾಯರೂ, ನಿರಾಶ್ರಿತರೂ ಆದ ಈ ತಾಯ್ನಾಡಿನವರನ್ನು ಕಂಡಾಗ ಅವನು ಉದ್ವಿಗ್ನನಾಗುತ್ತಿದ್ದ. ಅವರು ಕೀಳು ಕೆಲಸಗಳನ್ನು ಮಾಡುತ್ತಿದ್ದುದನ್ನು ಕಂಡಾಗ ಅವನ ಆತ್ಮಾಭಿಮಾನ ಎಚ್ಚರಗೊಳ್ಳುತ್ತಿತ್ತು. ತನ್ನ ಕೈಲಾದ ಮಟ್ಟಿಗೂ ಅವನು ಅವರಿಗೆ ನೆರವಾಗುತ್ತಿದ್ದ. ತಾಯ್ನಾಡಿಗೆ ಹಿಂದಿರುಗುವುದಕ್ಕೆಂದು ತಾನೇ ಅವರಿಗೆ ಟಿಕೆಟ್ ಕೊಡಿಸಿ, ಹಡಗಿನಲ್ಲಿ ಕೂಡಿಸುತ್ತಿದ್ದ. ದಾರಿತಪ್ಪಿದ ಅವರ

ಹೆಣ್ಣುಗಳಿಗೂ ಅವನು ಇದೇ ಬಗೆಯಲ್ಲಿ ನೆರವು ನೀಡಿದ.

ಎಂಥೆಂಥ ವ್ಯಕ್ತಿಗಳು ಅವನ ಬಾಳಿನಲ್ಲಿ ಕಾಣಿಸಿಕೊಂಡರು. ಆ ದಿನಗಳಲ್ಲಿ ಊಟ-ತಿಂಡಿಯ ಯಾವುದೇ ಸೌಲಭ್ಯಗಳಿರಲಿಲ್ಲ. ಬಟ್ಟಲುಗಟ್ಟಲೆ ಚಹಾ ಕುಡಿದುಕೊಂಡು ಅವನು ದಿನಗಳನ್ನು ದೂಡುತ್ತಿದ್ದ. ಒಂದು ದಿನ ಆಕಸ್ಮಿಕವಾಗಿಯೇ ತನ್ನ ಮನೆಯ ಬಳಿಯಲ್ಲಿಯೇ ವಾಸಿಸುತ್ತಿದ್ದ ಬ್ರಾಹ್ಮಣ ಪೂಜಾರಿಯೊಬ್ಬರನ್ನು ಅವನು ಭೇಟಿಯಾದ. ಕ್ರಮೇಣ ಆ ಪರಿಚಯ ಎಷ್ಟು ನಿಕಟವಾಗುತ್ತ ಹೋಯಿತೆಂದರೆ, ಆ ಪೂಜಾರಿ ಒಮ್ಮೆ ಹೇಳಿದ: "ಶರತ್, ಊಟ-ತಿಂಡಿಗಳಿಗೆ ನಿಮಗೆ ತುಂಬ ತೊಂದರೆಯಾಗುತ್ತಿದೆ. ನೀವು ನಮ್ಮ ಮನೆಯಲ್ಲಿಯೇ ಏಕೆ ಊಟ ಮಾಡಬಾರದು ?"

ಶರತ್ ಹೇಳಿದ: "ಇಲ್ಲ, ಇಲ್ಲ, ನನಗೆ ಯಾವ ತೊಂದರೆಯೂ ಇಲ್ಲ."

ಆದರೆ, ಆ ಪೂಜಾರಿಯ ಒತ್ತಾಯ ಒಂದೇ ಸಮನೆ ಹೆಚ್ಚುತ್ತ ಹೋಯಿತು. ಕೊನೆಗೆ ಆ ಕುಟುಂಬದ ಪ್ರೀತಿಯ ಆಹ್ವಾನವನ್ನು ಒಪ್ಪದಿರಲು ಅವನಿಗೆ ಸಾಧ್ಯವೇ ಆಗಲಿಲ್ಲ. ಇದಕ್ಕೆ ಇನ್ನೊಂದು ಕಾರಣವೂ ಇತ್ತು. ಆ ಬ್ರಾಹ್ಮಣ ಪೂಜಾರಿಯ ಸ್ಥಿತಿ ಅಷ್ಟೇನೂ ಚೆನ್ನಾಗಿರಲಿಲ್ಲ. ತಾನು ಅವರ ಮನೆಯಲ್ಲಿ ಊಟ ಮಾಡಿದರೆ, ಅದರಿಂದ ಅವರಿಗೂ ಲಾಭವಾಗುತ್ತದೆ ಎಂದು ಭಾವಿಸಿ, ಶರತ್ ಆ ಸೂಚನೆಯನ್ನು ಒಪ್ಪಿಕೊಂಡ. ಆದರೆ, ಇದ್ದಕ್ಕಿದ್ದಂತೆ ಆ ಮನೆಯಲ್ಲಿ ಒಂದು ದಿನ ಅಸಂಭಾವ್ಯ ಘಟನೆಯೊಂದು ನಡೆದುಹೋಯಿತು. ಮನೆಯಲ್ಲಿ ಅಡುಗೆ ಮಾಡುತ್ತಿದ್ದ ಹೆಂಗಸು ಆ ಬ್ರಾಹ್ಮಣ ಪೂಜಾರಿಯ ಹೆಂಡತಿಯಲ್ಲ, ಅವನು ಇಟ್ಟುಕೊಂಡಿದ್ದವಳು ಎಂಬುದು ಶರತ್‌ಗೆ ಗೊತ್ತಿರಲಿಲ್ಲ. ಆ ಹೆಂಗಸಿನ ಹೆಸರು ಹರಿಮತಿ. ಆಕೆ ಶರತ್‌ನನ್ನು ತುಂಬ ಗೌರವಿಸುತ್ತಿದ್ದಳು. ಅಂದು ಯಾವುದೋ ಕಾರಣದಿಂದಾಗಿ ಆ ಇಬ್ಬರ ನಡುವೆ ಜಗಳ ಹುಟ್ಟಿಕೊಂಡಿತು. ಆ ಬ್ರಾಹ್ಮಣ ಪೂಜಾರಿ ಕತ್ತಿನಲ್ಲಿದ್ದ ಜನಿವಾರವನ್ನು ಸೊಂಟಕ್ಕೆ ಸುತ್ತಿಕೊಂಡು ಒಮ್ಮೆಗೇ ತನ್ನ ಆಸನವನ್ನು ಬಿಟ್ಟು ಎದ್ದು ನಿಂತು ಹೇಳಿದ: "ನೋಡು ಶರತ್, ಈ ಹಲ್ಕಾಗಳ ಕಥೆಯೇ ಇದು. ಈ ಕೀಳು ಜಾತಿಯ ಬುದ್ಧಿ....!"

ಅವನು ತನ್ನ ಮಾತನ್ನು ಇನ್ನೂ ಮುಗಿಸಿಯೇ ಇರಲಿಲ್ಲ. ಹರಿಮತಿ ಕೋಪದಿಂದ ಉರಿದೆದ್ದಳು. ಬೇಗ ಆಕೆ ಅನ್ನದ ತಪ್ಪಲೆಯನ್ನು ಒಲೆಯ ಮೇಲೆ ಇರಿಸಿದಳು. ತಲೆಯ ಮೇಲಿನ ಬಟ್ಟೆಯನ್ನು ತೆಗೆದುಕೊಂಡು ಬಾಗಿಲಿನ ಮರೆಯಲ್ಲಿ ನಿಂತುಕೊಂಡು ಹೇಳಿದಳು: "ಮೈಮೇಲೆ ಪ್ರಜ್ಞೆ ಇಟ್ಟುಕೊಂಡು ಮಾತಾಡು. ಕೀಳುಜಾತಿಗೆ ಸೇರಿದವರು ಯಾರು ? ನೀನು, ನೀನೇ, ನಾನಲ್ಲ. ಜಾತಿಯ ಮಾತೆತ್ತಿದರೆ, ಜೋಕೆ. ನಾನೇನೋ ಬೀದಿಯಲ್ಲಿ ಬಿದ್ದಿರುವ ಹೆಣ್ಣು, ಏನಂದರೂ ಅನ್ನಿಸಿಕೊಳ್ಳುತ್ತೇನೆ ಅಂದುಕೊಂಡಿದ್ದೀಯಾ ? ನಾನು ವೈಷ್ಣವ ಮನೆತನಕ್ಕೆ ಸೇರಿದವಳು. ನಿನ್ನಂಥ ಕೀಳುಜಾತಿಯ ಬ್ರಾಹ್ಮಣರನ್ನು ನಾನು ಬೇಕಾದಷ್ಟು ನೋಡಿದ್ದೇನೆ. ನಾಲಿಗೆ ಬಿಗಿ ಹಿಡಿದು ಮಾತಾಡು. ಹೊಟ್ಟೆಗೆ ಸರಿಯಾಗಿ ಹಾಕಲಿಲ್ಲ, ತೊಟ್ಟುಕೊಳ್ಳುವುದಕ್ಕೆ ತಂದುಕೊಡಲಿಲ್ಲ. ಸಾಲದು ಎಂದು ಜಂಬ ಬೇರೆ ಕೊಚ್ಚುತ್ತೀಯಾ, ಇಷ್ಟೊಂದು....!"

ಮುಂದೆ ನಡೆದ ವಾಗ್ಯುದ್ಧಕ್ಕೆ ಕೊನೆಯೆಂಬುದೇ ಇರಲಿಲ್ಲ. ಇವರು ತುಂಬ

ಬಡವರು ಹಾಗೂ ಹರಿಮತಿಯೊಂದಿಗೆ ಈ ಬ್ರಾಹ್ಮಣ ಪೂಜಾರಿಯ ವರ್ತನೆ ಅಷ್ಟೇನೂ ಚೆನ್ನಾಗಿಲ್ಲವೆಂಬುದು ಶರತ್‌ಗೆ ಗೊತ್ತಾಯಿತು. ದುಡಿದು ದುಡಿದು ತಂದು ಹಾಕಿ ಅವನ ಹೊಟ್ಟೆ ಹೊರೆಯುವುದರಲ್ಲಿ ಅವಳೇ ರೋಗಗ್ರಸ್ತಳಾಗಿದ್ದಾಳೆ, ವಯಸ್ಸು ಸಾಕಷ್ಟು ಆಗಿದೆ ಎಂಬುದೂ ಅವನಿಗೆ ತಿಳಿಯಿತು.

ಅವನಿಗೆ ತುಂಬ ದುಃಖವಾಯಿತು. ಜಗಳವನ್ನು ಬಗೆಹರಿಸಲು ಅವನು ಪ್ರಯತ್ನಿಸಿದ. ಆದರೆ ಅವನು ಸಫಲನಾಗಲಿಲ್ಲ. ಈ ಪ್ರಸಂಗದ ಬಗ್ಗೆ ಆ ಬ್ರಾಹ್ಮಣ ಪೂಜಾರಿಯೊಂದಿಗೆ ಅವಳು ಏರಿದ ದನಿಯಲ್ಲೇ ಅಂದು ಮಾತನಾಡಬೇಕಾಯಿತು. ಈ ಘಟನೆಯ ತರುವಾಯ ಅವನು ಹರಿಮತಿಗೆ ಹಣಕೊಡುವುದನ್ನು ನಿಲ್ಲಿಸಿದ. ಈಗಂತೂ ಅವಳ ಕಷ್ಟಗಳಿಗೆ ಮೇರೆಯೇ ಇರಲಿಲ್ಲ. ಅತ್ತೂ ಅತ್ತೂ ಅವಳು ಶರತ್‌ಗೆ ತನ್ನ ಕಥೆಯೆಲ್ಲವನ್ನೂ ಹೇಳಿದಳು.

ಶರತ್ ಹೇಳಿದ: "ನೀನು ಕಲ್ಕತ್ತೆಗೆ ಹೊರಟು ಹೋಗಬೇಕೆಂಬುದೇ ನಿನಗೆ ನಾನು ಕೊಡುವ ಸಲಹೆ."

ಹರಿಮತಿ ಹೇಳಿದಳು: "ಅಣ್ಣಯ್ಯ, ನೀವು ಇದಕ್ಕೆ ಏರ್ಪಾಟು ಮಾಡುವುದಾದರೆ ನಾನು ನಿಮಗೆ ತುಂಬ ಕೃತಜ್ಞಳಾಗಿರುತ್ತೇನೆ. ದುರದೃಷ್ಟದ ಈ ನಾಡಿನಿಂದ ಸಾಧ್ಯವಾದಷ್ಟು ಬೇಗ ನಾನು ಹೊರಟುಹೋಗಬಯಸುತ್ತೇನೆ."

ಆಕೆಯನ್ನು ಕಲ್ಕತ್ತೆಗೆ ಕಳಿಸಿಕೊಡಲು ಶರತ್ ಒಪ್ಪಿಕೊಂಡ. ಆದರೆ, ಇದ್ದಕ್ಕಿದ್ದಂತೆಯೇ ಒಂದು ದಿನ ಆಕೆಗೆ ಜ್ವರ ಕಾಣಿಸಿಕೊಂಡಿತು. ಇಪ್ಪತ್ತನಾಲ್ಕು ಘಂಟೆಗಳ ಒಳಗಾಗಿ ಆಕೆಯ ಪ್ರಾಣಪಕ್ಷಿ ಹಾರಿಹೋಯಿತು. ಡಾಕ್ಟರ್ ಬಂದು ಹೇಳಿದರು: "ಇದು ಪ್ಲೇಗ್ ಜ್ವರ!"

ಶರತ್ ಕಷ್ಟಕ್ಕೆ ಸಿಕ್ಕಿಕೊಂಡ. ಪ್ಲೇಗಿನ ಹೆಸರು ಕೇಳಿದೊಡನೆಯೇ ಯಾರೂ ಹತ್ತಿರ ಸುಳಿಯಲಿಲ್ಲ. ಹೇಗೋ ಹೆಂಡ ಕುಡಿಸಿ ಕುಡಿಸಿ ನಾಲ್ಕೈದು ಜನರನ್ನು ಅವನು ತಯಾರು ಮಾಡಿದ. ಆಗ ಮಾತ್ರವೇ ಎಲ್ಲಿಗೋ ತೆಗೆದುಕೊಂಡು ಹೋಗಿ ಹರಿಮತಿಯ ಅಂತಿಮ ಸಂಸ್ಕಾರಗಳನ್ನು ನಡೆಸುವುದು ಸಾಧ್ಯವಾಯಿತು.

ಮೇಸ್ತ್ರಿಗಳ ಆ ಕಾಲೋನಿಯಲ್ಲಿ ಇಂಥ ಕಥೆಗಳಿಗೆ ಕೊನೆಯೆಂಬುದೇ ಇರಲಿಲ್ಲ. ಒಂದಲ್ಲ, ಒಂದು ದಾರಿಯಿಂದ ಶರತ್ ಹೋಗಿ ಅವುಗಳಲ್ಲಿ ಸಿಕ್ಕಿಕೊಳ್ಳುತ್ತಿದ್ದ. ಹೋಮಿಯೋಪಥಿ ಔಷಧಗಳನ್ನು ಅವನು ಹಂಚುತ್ತಿದ್ದ. ಡಾಕ್ಟರನ ರೂಪದಲ್ಲಿಯೂ ಅವನ ಖ್ಯಾತಿ ಕಡಿಮೆಯೇನೂ ಆಗಿರಲಿಲ್ಲ. ಒಮ್ಮೆ ನೆರೆಮನೆಯ ಮೇಸ್ತ್ರಿಗಳ ಹೆಂಡತಿಗೆ ತೀವ್ರವಾದ ಜ್ವರ ಕಾಣಿಸಿಕೊಂಡಾಗ ಅವನು ಓಡೋಡಿ ಶರತ್‌ನ ಬಳಿಗೆ ಬಂದ. ಅಳುತ್ತ ಹೇಳಿದ: "ಅಣ್ಣಯ್ಯ, ನನ್ನ ಹೆಂಡತಿಗೆ ತುಂಬ ಜ್ವರ ಬಂದಿದೆ. ನೀವು ಬಂದು ದಯವಿಟ್ಟು ನೋಡಬೇಕು."

ಎಂದಿನಂತೆ ಹೋಮಿಯೋಪತಿ ಔಷಧಗಳ ಪೆಟ್ಟಿಗೆಯನ್ನು ಹಿಡಿದುಕೊಂಡು ಶರತ್ ಅವನೊಂದಿಗೆ ನಡೆದ. ತೀವ್ರ ಜ್ವರದಿಂದಾಗಿ ಆ ಹೆಂಗಸಿಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ಆದರೆ, ಅದೃಷ್ಟದ ಸಂಗತಿ ಎಂದರೆ ಔಷಧಿ ಕೊಟ್ಟ ಒಡನೆಯೇ ಆಕೆಗೆ ಪ್ರಜ್ಞೆ ಮರಳಿತು. ಕ್ರಮೇಣ ಜ್ವರವೂ ಇಳಿಯತೊಡಗಿತು. ಆ ಗಳಿಗೆಯಿಂದ ಆಕೆ ಶರತ್‌ನನ್ನು 'ಬಾಬಾ' ಎಂದು ಕರೆಯತೊಡಗಿದಳು.

ದಿನಗಳೆದಂತೆ ಈ ಸ್ನೇಹ-ಸಂಬಂಧಗಳು ಮತ್ತಷ್ಟು ಗಾಢವಾಗತೊಡಗಿದುವು. ಆದರೆ ಒಂದು ದಿನ ಇದ್ದಕ್ಕಿದ್ದಂತೆಯೇ ಅವರಿಬ್ಬರಲ್ಲೂ ಏಕೋ ಏನೋ ಜಗಳವಾಗಿ ಬಿಟ್ಟಿದೆ ಎಂಬ ಸುದ್ದಿ ಶರತ್‌ಗೆ ತಲುಪಿತು. ಆ ಜಗಳ ಸಾಕಷ್ಟು ಜೋರಾಗಿಯೇ ನಡೆದಿತ್ತು. ಶರತ್ ಮೇಸ್ತ್ರಿಯನ್ನು ಕೇಳಿದ: "ಅಲ್ಲಯ್ಯ, ನಿನ್ನ ಹೆಂಡತಿ ಎಂದೂ ಗಟ್ಟಿಯಾಗಿ ಮಾತನಾಡಿದ್ದನ್ನೇ ನಾನು ಕೇಳಿರಲಿಲ್ಲ. ಇವತ್ತು ಏನಾಗಿಬಿಟ್ಟಿದೆ ?"

ಮೇಸ್ತ್ರಿ ತುಂಬ ಕೋಪಗೊಂಡಿದ್ದ. ಹೇಳಿದ: "ನಿಮಗೆ ಎಲ್ಲವೂ ಗೊತ್ತೇ ಇದೆಯಲ್ಲ, ಬಾಬಾಜಿ, ಸತ್ತೇ ಹೋಗಿದ್ದವಳನ್ನು ನಾನು ಬದುಕಿಸಿಕೊಳ್ಳಲಿಲ್ಲವೆ ? ಇವಳಿಗೆ ಹೊಟ್ಟೆಗೆ ಕಷ್ಟವಿಲ್ಲ, ಕುಡಿಯಲು ತೊಂದರೆಯಿಲ್ಲ, ತೊಡಲು ಒಳ್ಳೆಯ ಬಟ್ಟೆ ಸಿಕ್ಕುತ್ತಿದೆ. ಇಷ್ಟಾಗಿಯೂ ಹಗಲೂ-ರಾತ್ರಿ ಕಿರಿಕಿರಿ ಮಾಡುತ್ತ ಇರುತ್ತಾಳೆ. ಹೀಗೆ ಮಾಡಲೇಬೇಕೆಂದಿದ್ದರೆ ನನ್ನ ಜೊತೆ ಕೂಡುವಳಿ ಮಾಡಿಕೊಂಡಿದ್ದಾದರೂ ಏಕೆ ?"

ತನ್ನ ಹೆಂಡತಿಯ ಮೇಲೆ ಮೇಸ್ತ್ರಿ ಆರೋಪ ಹೊರಿಸುವುದನ್ನು ಶರತ್ ಎಂದೂ ಕಂಡಿರಲಿಲ್ಲ. ಈಗ ಒಮ್ಮೆಗೇ ಅವಳ ತಲೆಯ ಮೇಲೆ ಇಷ್ಟೊಂದು ದೊಡ್ಡ ಅಪಮಾನವನ್ನು ಹೊರಿಸುತ್ತಿದ್ದ. ಹೀಗಿರುವಾಗ ಅವಳು ತಾನೇ ಹೇಗೆ ಸುಮ್ಮನಿರಲು ಸಾಧ್ಯ ? ತಲೆಯ ಮೇಲೆ ಸೆರಗು ಹೊದ್ದುಕೊಂಡು, ಮರೆಯಲ್ಲಿ ಹೋಗಿ ನಿಂತುಕೊಂಡು, ಏರಿದ ಧ್ವನಿಯಲ್ಲಿ ಹೇಳಿದಳು: "ಬಾಬಾ ಠಾಕೂರನ ಮುಂದೆ ನನ್ನ ಬಗ್ಗೆ ನೀನು ಸಾಕಷ್ಟು ಹೇಳಿದ್ದೀಯೆ, ನೀನು ಮಾತ್ರ ತುಂಬ ಸಭ್ಯ ಎಂದು ಹೇಳಿಕೊಳ್ಳುತ್ತಿದ್ದೀಯೆ. ನನ್ನ ಸರ್ವನಾಶ ಮಾಡಿಬಿಟ್ಟು, ಈಗ ತಲೆಯ ಮೇಲೆ ಎಲ್ಲ ತಪ್ಪನ್ನೂ ಹೊರಿಸುತ್ತಿದ್ದೀಯೆ. ಆ ಚಿಕ್ಕಪ್ಪ ಇಲ್ಲದೆ ಹೋಗಿದ್ದರೆ, ನಿನ್ನೆ ನೀನು ನನ್ನನ್ನು ಕೊಂದೇ ಹಾಕಿಬಿಡುತ್ತಿದ್ದೆ. ನಾನು ಯಾಕೆ ನಿನ್ನ ಕೈಲಿ ಏಟು ತಿನ್ನಬೇಕು ? 'ಹೊರಟುಹೋಗು', 'ಹೊರಟು ಹೋಗು' ಎಂದು ಮತ್ತೆ ಮತ್ತೆ ಹೇಳುತ್ತಿರುತ್ತೀಯಲ್ಲ ! ನನಗೇನೂ ಕಣ್ಣು-ಕಿವಿ ಇಲ್ಲ ಅಂದುಕೊಂಡು ಬಿಟ್ಟಿದ್ದೀಯೇನು ? ಮೊದಲು ಮದುವೆ ಆಗಿದ್ದೆಯಲ್ಲ, ಆ ಹೆಂಗಸು ಇಲ್ಲಿಗೆ ಬಂದು ಅವರ ಅಣ್ಣನ ಮನೆಯಲ್ಲಿ ಉಳಿದುಕೊಂಡಿದ್ದಾಳೆ. ನನ್ನನ್ನು ಓಡಿಸಿ, ಅವಳನ್ನು ಕರೆದುಕೊಂಡು ಬಂದು ಈ ಮನೆಯಲ್ಲಿ ಇಟ್ಟುಕೊಳ್ಳಬೇಕು ಎಂಬುದೇ ನಿನ್ನ ಹಂಚಿಕೆ. ಆ ಮಾತನ್ನು ಸ್ಪಷ್ಟವಾಗಿ ಯಾಕೆ ಹೇಳುತ್ತಿಲ್ಲ ? ಆ ಮಾತನ್ನು ನೀನು ಹೇಳಲೇಬೇಕಾಗುತ್ತದೆ. ನೀನು ಹೇಳಿ ಆಗಬೇಕಾಗಿರುವುದಾದರೂ ಏನು ! ನನ್ನ ಒಡವೆ-ವಸ್ತ್ರ ಕಲ್ಕತ್ತೆಗೆ ಹೋಗುವ ಖರ್ಚು-ವೆಚ್ಚ ನನಗೆ ಕೊಟ್ಟುಬಿಡು. ನಿನ್ನ ಆ ಹೆಂಡತಿಯನ್ನು ಕಟ್ಟಿಕೊಂಡು ಎಲ್ಲಿಯಾದರೂ ಹಾಳಾಗಿ ಹೋಗು. ನಾನೂ ಸಾಕಷ್ಟು ಸಹಿಸಿದ್ದೇನೆ. ಇನ್ನು ನನ್ನಿಂದ ಸಾಧ್ಯವಿಲ್ಲ. ನನ್ನದೆಲ್ಲವನ್ನೂ ನುಂಗಿಹಾಕಿಬಿಟ್ಟು ಈಗ ಹೊರಗೆ ಅಟ್ಟುತ್ತಿದ್ದೀಯಾ ? ನಿನ್ನಂತ ಕೆಟ್ಟ ಜಾತಿಯವನ ಮುಖಕ್ಕೆ ಪೊರಕೆ ತೆಗೆದುಕೊಂಡು ಹೊಡೆಯಬೇಕು. ಕಲ್ಕತ್ತೆಯಲ್ಲಿ ಭಿಕ್ಷೆ ಬೇಡಿಯಾದರೂ ಹೊಟ್ಟೆ ಹೊರೆಯುತ್ತೇನೆ. ಆದರೆ, ಇನ್ನು ಮೇಲೆ ಇದನ್ನೆಲ್ಲಾ ಸಹಿಸಲು ಸಾಧ್ಯವಿಲ್ಲ. ಇವತ್ತೇ ಈ ಕ್ಷಣವೇ ನನ್ನದೆಲ್ಲವೂ ನನಗೆ ಬೇಕು. ನಾನು ಹೇಳಿಯೇ ತೀರುತ್ತೇನೆ. ಈಗಂತೂ ನನ್ನ ಸರ್ವನಾಶ ಮಾಡಿಬಿಟ್ಟಿದ್ದೀಯೆ. ಆದರೆ, ಸೂರ್ಯಚಂದ್ರರು ಇನ್ನೂ

ಬೆಳಗುತ್ತಲೇ ಇದ್ದಾರೆ. ದೇವರು, ಬೆಳಕು ಹರಿಯುವುದರ ಒಳಗಾಗಿ ನಿನ್ನ ಸರ್ವನಾಶ ಮಾಡಿಬಿಡಲಿ."

ಇಷ್ಟು ಹೇಳಿ, ಅವಳು ಬಾಯಿಗೆ ಬಟ್ಟೆ ತುರುಕಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಆಗ ಶರತ್ ಹೇಗೋ ಅವರಿಗೆ ಸಮಾಧಾನ ಹೇಳಿ, ಶಾಂತಗೊಳಿಸಿದ. ಮೇಸ್ತ್ರಿ ಕಾರ್ಖಾನೆಗೆ ಹೋದ. ಆದರೆ ಅವನು ಹಿಂದಿರುಗಿ ಬರಲೇ ಇಲ್ಲ. ಒಂದಾದ ಮೇಲೆ ಒಂದರಂತೆ ಅನೇಕ ದಿನಗಳು ಕಳೆದುಹೋದುವು. ಈ ಮಧ್ಯೆ ಶರತ್ ಎಲ್ಲವನ್ನು ಪತ್ತೆ ಹಚ್ಚಿದ. ಈ ಪ್ರಕರಣದಲ್ಲಿ ಆ ಹೆಣ್ಣಿನ ತಪ್ಪೇನೂ ಇರಲಿಲ್ಲ. ಆ ಮೇಸ್ತ್ರಿಯ ಮೊದಲ ಹೆಂಡತಿ ಬಂದು ತನ್ನ ಸೋದರನ ಬಳಿ ತಂಗಿದ್ದಳು. ಅವಳನ್ನು ಕಟ್ಟಿಕೊಂಡು ಅವನು ಎಲ್ಲಿಗೆ ಹೋದನೆಂಬುದು ಯಾರಿಗೂ ಗೊತ್ತಿರಲಿಲ್ಲ. ಶರತ್ ಆಗ ಅವಳಿಗೆ ಹೇಳಿದ: "ನೀನು ಕಲ್ಕತ್ತೆಗೆ ಹೊರಟುಹೋಗು."

ಆಕೆ ಹೇಳಿದಳು: "ಬಾಬಾ, ಕಲ್ಕತ್ತೆಗೆ ಹೋಗಿ ಈಗ ನಾನೇನು ಮಾಡಲಿ? ಕಾಶಿಗೆ ಹೋಗಿ ಬಿಡುವುದೇ ಸರಿ."

ಶರತ್ ಅವಳನ್ನು ಕಾಶಿಗೆ ಕಳಿಸಿಕೊಟ್ಟ.

ಈ ಕಥೆಗಳಿಗೆ ಕೊನೆ ಮೊದಲಿರಲಿಲ್ಲ. ಎಲ್ಲವನ್ನೂ ಕಳೆದುಕೊಂಡಿದ್ದಂಥ ಇಂಥ ನಿರ್ಗತಿಕರ ವಿಷಯದಲ್ಲಿ ಮಾತ್ರ ಶರತ್ ಆಸಕ್ತಿ ವಹಿಸುತ್ತಿದ್ದನೆಂದೇನೂ ಅಲ್ಲ. ಕಷ್ಟಕ್ಕೆ ಸಿಲುಕಿದ ತನ್ನ ಗೆಳೆಯರಿಗೆ ನೆರವಾಗುವಲ್ಲಿಯೂ ಅವನೆಂದೂ ಹಿಂದೆ ಬಿದ್ದವನಲ್ಲ.

ಸುರೇಂದ್ರನಾಥ ಮಾನ್ನಾ ಅವನ ಒಬ್ಬ ಗೆಳೆಯ. ಇಬ್ಬರೂ ಒಂದೇ ಮನೆಯಲ್ಲಿ ವಾಸವಾಗಿದ್ದರು. ನೃತ್ಯ, ಸಂಗೀತಗಳಲ್ಲಿ ಅವನಿಗೂ ಆಸಕ್ತಿ ಇತ್ತು. ಅದರಲ್ಲಿಯೂ ಕೀರ್ತನೆಗಳನ್ನು ಹಾಡುವುದು ಅವನಿಗೆ ತುಂಬ ಪ್ರಿಯವಾಗಿತ್ತು. ಶರತ್ ಸ್ವರಸಂಯೋಜನೆ ಮಾಡುತ್ತಿದ್ದ. ಅವನು ಹಾಡುತ್ತಿದ್ದ. ಇವರು ತಮ್ಮದೇ ಆದ ಕೀರ್ತನ ತಂಡವೊಂದನ್ನು ರಚಿಸಿಕೊಂಡಿದ್ದರು. ಒಂದು ದಿನ ಇದ್ದಕ್ಕಿದ್ದಂತೆ ಸುರೇಂದ್ರ ಕೆಲಸವನ್ನು ಕಳೆದುಕೊಂಡು ನಿರುದ್ಯೋಗಿಯಾಗಿ ಬಿಟ್ಟ. ಮಾಡುವುದಾದರೂ ಏನು? ಬಹಳ ಪ್ರಯತ್ನಪಟ್ಟ ಮೇಲೆ, ನಾಮಟೂ ಚಿನ್ನದ ಗಣಿಯಲ್ಲಿ ಕೆಲಸ ಸಿಕ್ಕುವ ಸಂಭವವಿದೆಯೆಂದು ಗೊತ್ತಾಯಿತು. ಶರತ್ ಹೇಳಿದ: "ನೀನು ಈಗಲೇ ನಾಮಟೂಗೆ ಹೊರಟುಬಿಡು."

ಅನೇಕ ದಿನಗಳು ಕಳೆದುಹೋದುವು. ಆದರೂ ಸುರೇಂದ್ರ ಹೊರಡಲಿಲ್ಲ. ಶರತ್ ಅವನನ್ನು ಕೇಳಿದ: "ನೀನು ಯಾಕೆ ಅಲ್ಲಿಗೆ ಹೋಗುತ್ತಿಲ್ಲ?"

ಮೊದಮೊದಲು ಅವನು ಸ್ವಲ್ಪ ಹಿಂದೆಗೆದ. ಆಮೇಲೆ ಹೇಳಿದ: "ಹೇಗೆ ಹೋಗಲಿ ಅಣ್ಣಯ್ಯ? ನನ್ನ ಹತ್ತಿರ ಒಂದು ಕಾಸೂ ಇಲ್ಲ. ಹೊಟೇಲಿನ ಊಟದ ಸಾಲ ತೀರಿಸಬೇಕಾಗಿದೆ. ಸ್ನೇಹಿತರ ಹತ್ತಿರ ಸಾಲ ಮಾಡಿದ್ದೆ. ಅದನ್ನೂ ತೀರಿಸಬೇಕಲ್ಲ!"

ಶರತ್ ಕೂಡಲೇ ಯಾವ ಉತ್ತರವನ್ನೂ ಕೊಡಲಿಲ್ಲ. ಅವನಾದರೋ ಒಬ್ಬ ಸಾಧಾರಣ ಗುಮಾಸ್ತನಾಗಿದ್ದ. ಆದರೆ ಮಾರನೆಯ ದಿವಸವೇ ಅವನು ಸುರೇಂದ್ರನಿಗೆ ಹೇಳಿ ಕಳುಹಿಸಿದ ಹೇಳಿದ: "ನಾಮಟೂಗೆ ಹೋಗುವ ಮಾರ್ಗ ಗೊತ್ತೇನು? ಮೊದಲು ಮಾಂಡಲೇಗೆ ಹೋಗಬೇಕು. ಆಮೇಲೆ ಲಾಸಿಓ ದಾರಿಯಲ್ಲಿ ನಾಮಿಓ

ಎಂಬ ಊರು ಸಿಕ್ಕುತ್ತದೆ. ಅಲ್ಲಿಂದ ಗೋಲ್ಡ್‌ಮ್ಯೆನ್ ಕಡೆಗೆ ಒಂದು ರೈಲು ಹೋಗುತ್ತದೆ. ಆದರೆ, ಅದು ಪ್ರಯಾಣಿಕರನ್ನು ಕರೆದೊಯ್ಯುವುದಿಲ್ಲ. ಆದರೆ, ನಿನ್ನ ಬಳಿ ಇರುವ ನಿನ್ನ ಸ್ನೇಹಿತನ ಪತ್ರವನ್ನು ಅವರಿಗೆ ತೋರಿಸು. ಆಗ ಅವರು ನಿನ್ನನ್ನು ಕರೆದೊಯ್ಯುತ್ತಾರೆ. ಟಿಕೆಟ್ಟಿಗೆ ಒಟ್ಟು ಹದಿನೈದು ರೂಪಾಯಿ ಖರ್ಚಾಗುತ್ತದೆ. ಅಷ್ಟು ಹಣವನ್ನು ನಾನು ನಿನಗೆ ಕೊಡುತ್ತೇನೆ. ನೀನು ಈಗಿಂದೀಗಲೇ ಹೊರಡು."

ಸುರೇಂದ್ರನಿಗೆ ಒಮ್ಮೆಗೇ ನಂಬಿಕೆಯುಂಟಾಗಲಿಲ್ಲ. ಮತ್ತೆ ಹೇಳಿದ: "ಅಣ್ಣಯ್ಯ! ನಾನು ಸಾಲವನ್ನೂ ತೀರಿಸಬೇಕಾಗಿದೆಯಲ್ಲ."

ಶರತ್ ಹೇಳಿದ: "ಅದರ ಬಗ್ಗೆ ನೀನೇನೂ ಚಿಂತಿಸಬೇಡ. ನಾನು ಎಲ್ಲವನ್ನೂ ತೀರಿಸುತ್ತೇನೆ. ನೋಡು, ಅಲ್ಲಿ ತುಂಬ ಚಳಿಯಾಗುತ್ತದೆ. ಬಟ್ಟೆಗಳ ಅಗತ್ಯ ಉಂಟಾದರೆ, ನನಗೆ ಕಾಗದ ಬರಿ."

ಆಮೇಲೆ ಅವನ ಕೈಗೆ ಹಣವನ್ನಿತ್ತು ಹೇಳಿದ: "ರೈಲು ಬೆಳಿಗ್ಗೆಯೇ ಹೊರಡುತ್ತದೆ. ನೀನು ನಿಶ್ಚಿಂತೆಯಿಂದ ಹೋಗಿಬಾ."

ಅವನೇನೋ ಹೊರಟುಹೋದ. ಆದರೆ, ಪ್ರಯಾಣ ವೆಚ್ಚಕ್ಕಾಗಿ ಹಣವನ್ನು ಕೊಟ್ಟ ಮೇಲೆ ಶರತ್‌ನ ಬಳಿ ಅಂದು ಒಂದು ಕಾಸು ಸಹ ಉಳಿದಿರಲಿಲ್ಲವೆಂಬುದು ಬಹುಶಃ ಅವನಿಗೆ ಗೊತ್ತಿರಲಿಲ್ಲ. ಕೇವಲ ಒಂದು ಬಟ್ಟಲು ಚಹ ಕುಡಿದು ಅಂದು ಅವನು ತನ್ನ ಕಛೇರಿಗೆ ಹೋಗಿದ್ದ, ರಾತ್ರಿ ಒಂದು ಲೋಟ ಹಾಲು ಕುಡಿದು ಮಲಗಿದ. ಹೀಗೆ ಪಸಿದುಕೊಂಡೇ ಇಡೀ ದಿನವನ್ನು ಅವನು ನೂಕಿದ್ದ.

ಶರತ್ ನಾರದ ಮುನಿಯ ಚಿತ್ರ ರಚಿಸುತ್ತಿದ್ದುದನ್ನು ಯೋಗೇಂದ್ರ ನೋಡಿದ್ದ. ಇಂಥ ಇನ್ನೂ ಅದೆಷ್ಟು ಮಂದಿ ಬಡಬಗೆಯಾದ ನೆರವು ಕೋರಿ ಅವನ ಮನೆಗೆ ಬರುತ್ತಿದ್ದರೋ ಏನೋ. ಒಮ್ಮೆ ಇಂಥ ಜನರ ದುಃಖ ಸಂಕಟಗಳ ಬಗ್ಗೆಯೇ ಚರ್ಚೆ ನಡೆಯುತ್ತಿತ್ತು. ಆಗ ಠಕ್, ಠಕ್ ಎಂದು ಮೆಟ್ಟಿಲುಗಳ ಮೇಲೆ ಸದ್ದು ಕೇಳಿಬಂತು. ಇಣುಕಿ ನೋಡಿದರೆ ಅದೇ ಚಿರಪರಿಚಿತ ನಾರದ ಮುನಿ. ಊರುಗೋಲಿನ ನೆರವಿನಿಂದ, ತಟ್ಟಾಡುತ್ತ ಮೇಲೆ ಹತ್ತಿಬರುತ್ತಿದ್ದ.

ಶರತ್ ಕೂಡಲೇ ಕೆಳಕ್ಕೆ ಓಡಿದ. ತುಂಬ ಪ್ರೀತಿಯಿಂದ ಆಸರೆ ನೀಡಿ, ಆತನನ್ನು ಮೇಲಕ್ಕೆ ಕರೆದುಕೊಂಡು ಬಂದ. ಆತನನ್ನು ಪರಿಚಯಿಸಿಕೊಡುತ್ತ ಅಂದು ಯೋಗೇಂದ್ರನೊಂದಿಗೆ ಹೀಗೆ ಹೇಳಿದ: "ಈ ವ್ಯಕ್ತಿ ನಿಜಕ್ಕೂ ದೇವರ ದಯೆಗೆ ಅರ್ಹನಾಗಿದ್ದಾನೆ. ಪ್ರೀತಿಗಾಗಿ ಯಾರಾದರೂ ತಮ್ಮ ಸರ್ವಸ್ವವನ್ನೂ ಸೂರೆಗೊಟ್ಟು ಬೀದಿಯ ಭಿಕಾರಿಗಳಾಗುತ್ತಾರೆ ಎನ್ನಬಹುದಾದರೆ ಈತನ ಕಥೆ ನಿಜಕ್ಕೂ ಸತ್ಯವಾದುದು. ಪುರೋಹಿತನನ್ನು ಕರೆಸಿ, ಶಂಖವನ್ನು ಊದಿಸಿ, ಮಂತ್ರವನ್ನು ಪಠಿಸಿ ಈತನು ಮದುವೆ ಮಾಡಿಕೊಂಡಿದ್ದನೇ ಇಲ್ಲವೇ ಎಂಬುದು ಇವನಿಗೆ ಗೊತ್ತು ಇಲ್ಲವೇ ಆ ಅಂತರ್ಯಾಮಿ ಭಗವಂತನಿಗೆ ಗೊತ್ತು. ಆಕೆ ಯಾರಾದರೂ ಆಗಿರಲಿ, ಯಾವ ಮಂತ್ರಪೂತ ಪತ್ನಿಗಿಂತಲೂ ಆಕೆಯನ್ನು ಕಡಿಮೆಯಾಗಿಯೇನೂ ಈತ ಪ್ರೀತಿಸಿಲ್ಲ. ಈತನ ಆ ಪತ್ನಿ ಆ ಸಲ ಪ್ಲೇಗ್ ಮಾರಿಗೆ ಬಲಿಯಾದಳು. ಆ ಕ್ಷಣವೇ ಈತನ ತಲೆ ಕೆಟ್ಟಿತು. ವೈದ್ಯರ ವೆಚ್ಚವೇನು ಕಡಿಮೆಯಾಯಿತೇ! ಮೂರು-ನಾಲ್ಕು ನೂರಕ್ಕಿಂತಲೂ ಹೆಚ್ಚಾಗಿಯೇ ಆಗಿರಬೇಕು. ಇಷ್ಟಾಗಿಯೂ ಪತ್ನಿ

ಉಳಿದುಕೊಂಡಿದ್ದರೆ, ಅದಕ್ಕಾಗಿ ಚಿಂತಿಸುವ ಅಗತ್ಯವೇನೂ ಇರುತ್ತಿರಲಿಲ್ಲ. ಈತ ನಿಜವಾಗಿಯೂ ಭಗವಂತನ ದಯೆಗೆ ಅರ್ಹನಾಗಿದ್ದಾನೆಂದು ನಾನು ಹೇಳಿದ್ದು ಈ ಕಾರಣದಿಂದಾಗಿಯೇ. ದೇವರು ಅವಳನ್ನು ಹೇಗೆ ಕೊಂದನೋ ಹಾಗೆಯೇ ಇವನನ್ನು ರಕ್ಷಿಸಿಯೂ ತೀರುತ್ತಾನೆ. ಇಲ್ಲದೆ ಇದ್ದಲ್ಲಿ ಈ ಪ್ರಪಂಚ ನಡೆಯುವುದಾದರೂ ಹೇಗೆ ?"

ಇಷ್ಟು ಹೇಳಿ, ಶರತ್ ದೀರ್ಘವಾಗಿ ಉಸಿರನ್ನೆಳೆದುಕೊಂಡ. ಕೆಲವು ಕ್ಷಣಗಳವರೆಗೆ ಶೂನ್ಯವನ್ನೇ ನಿಟ್ಟಿಸುತ್ತಿದ್ದ. ಬಹುಶಃ ಅವನಿಗೆ ತನ್ನ ಪತ್ನಿಯ ನೆನಪಾಗಿದ್ದಿರಬೇಕು. ಆಕೆಯೂ ಇದೇ ಪ್ಲೇಗ್ ಮಾರಿಗೆ ಬಲಿಯಾಗಿದ್ದಳು. ಆಮೇಲೆ ಒಳಕ್ಕೆ ಹೋಗಿ ಚಹಾ ತೆಗೆದುಕೊಂಡು ಬಂದ. ಸ್ನೇಹ ತುಂಬಿದ ಕಣ್ಣುಗಳಿಂದ ನೋಡುತ್ತ ಹೇಳಿದ: "ನೋಡು, ನಾರದ ಮುನಿ. ನಿನಗೆ ಯಾವಾಗ ಏನು ಬೇಕಾದರೂ ನನಗೆ ಬಂದು ತಿಳಿಸಬೇಕು. ಹಾಗೇನಾದರೂ ನೀನು ಮಾಡದೆ ಹೋದರೆ ನಾನು ನಿನ್ನನ್ನು ಎಂದೂ ಕ್ಷಮಿಸುವುದಿಲ್ಲ. ಎಂದಾದರೂ ನೀನು ಹಸಿವಿನಿಂದ ಉಪವಾಸ ಇದ್ದೆಯೆಂದು ನನಗೆ ಗೊತ್ತಾದರೆ ಅಂದಿನಿಂದಲೇ ನನ್ನ ಮನೆಯ ಮೆಟ್ಟಿಲಲ್ಲಿ ನೀನು ಕಾಲಿರಿಸಕೂಡದು. ಇದನ್ನು ಚೆನ್ನಾಗಿ ನೆನಪಿಟ್ಟುಕೊ."

ಗದ್ಗದನಾಗಿ ನಾರದ ಮುನಿ ಹೇಳಿದ: "ಹಾಗೆಂದಾದರೂ ಆಗುವುದು ಸಾಧ್ಯವೇ, ದೇವರು ! ನಿಮ್ಮಂಥ ದಯಾಳುಗಳಿರುವಾಗ ನಾನು ಹಸಿದಿರುತ್ತೇನೆಯೆ ?

"ಹೌದು ಕಲ್ಲು-ಕಬ್ಬಿಣ, ಯಂತ್ರ-ಕೀಲು ಮೊದಲಾದವುಗಳಿಗೆ ಸಂಬಂಧಿಸಿದ ಕಷ್ಟದ ಕೆಲಸಗಳನ್ನಾದರೆ ಮಾಡಿಬಿಡುತ್ತೀಯೆ. ಈ ಸರಳವಾದ ಕೆಲಸವನ್ನು ಮಾಡಲು ಸಾಧ್ಯವಾಗುವುದಿಲ್ಲ, ಅಲ್ಲವೆ ? ಮಾಡುತ್ತೀಯೇ ತಾನೆ ?"

ಇಷ್ಟು ಹೇಳಿ ಶರತ್ ಪುಕ್ಕಾ ಸೇದತೊಡಗಿದ. ನಾರದ ಮುನಿ ಎಂಬುದು ಆ ವ್ಯಕ್ತಿಯ ನಿಜವಾದ ಹೆಸರಲ್ಲ. ಅವನೊಬ್ಬ ಸಾಮಾನ್ಯ ಮೇಸ್ತ್ರಿ. ಅವನು ಸೇವಿಸದಿದ್ದ ಮಾದಕ ವಸ್ತು ಯಾವುದು ? ಪಾಪದ ಪರಿಭಾಷೆಗೆ ಒಳಪಡುವಂಥ ಎಲ್ಲ ಕೆಲಸವನ್ನೂ ಅವನು ಅಥವಾ ಅವನ ಜೊತೆಗಾರರು ಸಾಕಷ್ಟು ಪ್ರಮಾಣದಲ್ಲಿ ಮಾಡಿಯೇ ಮುಗಿಸಿದ್ದರು. ಶನಿವಾರದಂದು ಹೆಂಡವನ್ನು ಕುಡಿದು ಸೋಮವಾರ ದವರೆಗೆ ಮೈಮೇಲೆ ಪ್ರಜ್ಞೆ ಇಲ್ಲದಂತೆ ಬಿದ್ದಿರುವುದು ಅವರಿಗೆ ತೀರ ಸಹಜವಾಗಿಯೇ ಇತ್ತು. ಆಮೇಲೆ ಕಾಯಿಲೆಯ ನೆಪದಲ್ಲಿ ರಜ ತೆಗೆದುಕೊಳ್ಳುತ್ತಿದ್ದರು.

ಹೆಂಡವನ್ನು ಕುಡಿದು ಅವರು ಅತಿರೇಕದಲ್ಲಿ ತೊಡಗುತ್ತಿದ್ದುದನ್ನು ಶರತ್ ಅದೆಷ್ಟು ಬಾರಿ ಕಂಡಿದ್ದನೋ ಏನೋ. ಆದ್ದರಿಂದಲೇ 'ಅಧಿಕಾರ' ಕೃತಿಯ ಸೃಷ್ಟಿಕರ್ತ ಹೀಗೆ ಬರೆಯಬಲ್ಲವನಾಗಿದ್ದ: "ಬರಿಯ ಮರದ ನೆಲೆಗಟ್ಟಿನ ಮೇಲೆ ಕುಳಿತು ಆರೇಳು ಜನ ಗಂಡಸರು ಹಾಗೂ ಎಂಟು-ಹತ್ತು ಮಂದಿ ಹೆಂಗಸರು ಒಟ್ಟಾಗಿ ಹೆಂಡವನ್ನು ಕುಡಿಯುತ್ತಿದ್ದರು. ಒಂದು ಮುರುಕಲು ಹಾರ್ಮೋನಿಯಮ್ ಮತ್ತು ಎಡಬದಿಯ ತಬಲಾ ನಡುವೆ ಬಿದ್ದಿದ್ದುವು. ಬಗೆಬಗೆಯಾದ ಸಣ್ಣ-ದೊಡ್ಡ ಬಣ್ಣಬಣ್ಣದ ಖಾಲಿ ಶೀಶೆಗಳು ನಾಲ್ಕು ದಿಕ್ಕುಗಳಲ್ಲಿಯೂ ಉರುಳಿಕೊಂಡು ಹೋಗುತ್ತಿದ್ದುವು. ವಯಸ್ಸಾದ ಹೆಂಗಸೊಬ್ಬಳು ಅತಿಯಾಗಿ ಕುಡಿದು ಒಂದು ಬದಿಯಲ್ಲಿ ಹೇಗೆ ಬಿದ್ದಿದ್ದಳೆಂದರೆ, ಆಕೆ ನಗ್ನಳಾಗಿದ್ದಳೆಂದೂ ಹೇಳಬಹುದಾಗಿತ್ತು.

ಅರುವತ್ತರಿಂದ ಹಿಡಿದು ಎಪ್ಪತ್ತೈದು ವರ್ಷದವರೆಗಿನ ಗಂಡಸರು-ಹೆಂಗಸರೆಲ್ಲ ಅದರಲ್ಲಿ ಸೇರಿದ್ದರು. ಆ ದಿವಸ ಭಾನುವಾರವಾಗಿತ್ತು. ರಜದ ದಿನವಲ್ಲವೆ! ಈರುಳ್ಳಿ-ಬೆಳ್ಳುಳ್ಳಿ ತರಕಾರಿ ಪಲ್ಯ ಮಾಡಿದರು. ಜೊತೆಜೊತೆಯಾಗಿ ಅಗ್ಗದ ಬರ್ಮನ್ ಮದ್ಯವನ್ನು ಸೇವಿಸಿದರು. ಬಣ್ಣಿಸಲಾಗದ ಆ ದುರ್ವಾಸನೆ ಮೂಗಿಗೆ ಬಡಿಯುತ್ತಲೇ ಅಪೂರ್ವನಿಗೆ ವಾಕರಿಕೆ ಬಂದಂತಾಯಿತು. ಕಡಿಮೆ ವಯಸ್ಸಿನ ಹೆಂಗಸೊಬ್ಬಳ ಕೈಯಲ್ಲಿ ಹೆಂಡದ ಲೋಟವಿತ್ತು. ಅದುವರೆಗೆ ಅವಳಿನ್ನೂ ಪಕ್ಕಾ ಕುಡುಕಿಯಾಗಿರಲಿಲ್ಲವೆಂದು ತೋರುತ್ತದೆ. ಏಕೆಂದರೆ ಕೆಲವೇ ದಿನಗಳ ಹಿಂದೆ ಅವಳು ಮನೆಬಿಟ್ಟು ಬಂದಿದ್ದಳು. ಅವಳು ಎಡಗೈಯಿಂದ ಮೂಗು ಮುಚ್ಚಿಕೊಂಡು ಬಹಳ ಕಷ್ಟದಿಂದ ಹೆಂಡದ ಲೋಟವನ್ನು ಬಾಯಿಗೆ ಬಗ್ಗಿಸಿಕೊಂಡಳು. ಹಲಗ ಪಟ್ಟಿಗಳ ನಡುವಣ ಸಂದಿಯಲ್ಲಿ ಮತ್ತೆ ಮತ್ತೆ ಉಗುಳತೊಡಗಿದಳು. ಒಬ್ಬ ಗಂಡಸು ಸರಸರನೆ ಅವಳ ಬಳಿಗೆ ಹೋಗಿ ತರಕಾರಿ ಪಲ್ಯವನ್ನು ಅವಳ ಬಾಯಿಗೆ ತುರುಕಿದ. ಭಾರತೀಯ ನಾರಿಯೊಬ್ಬಳು ತನ್ನ ಕಣ್ಣೆದುರಿಗೇ ಹೆಂಡ ಕುಡಿಯುತ್ತಿರುವುದನ್ನು ಕಂಡು ಅಪೂರ್ವ ಒಮ್ಮೆಗೇ ದಿಗ್ಭ್ರಾಂತನಂತಾದ."

ಆದರೆ ಶರತ್ ದಿಗ್ಭ್ರಾಂತನಾಗಲಿಲ್ಲ. ಏಕೆಂದರೆ ಇವರು ತನಗಿಂತ ಹೇಗೂ ಭಿನ್ನರಲ್ಲ ಎಂಬುದು ಅವನಿಗೆ ಗೊತ್ತಿತ್ತು. ಲೋಕದಲ್ಲಿ ಒಳ್ಳೆಯದು ಎಂಬ ಶಬ್ದವೇನಾದರೂ ಇದ್ದರೆ ಹಾಗೂ ಅದಕ್ಕೆ ಎಲ್ಲಿಯಾದರೂ ಅಗತ್ಯ ಎಂಬುದು ಇರುವುದಾದರೆ ಅದು ಇಲ್ಲಿಯೇ ಎಂಬುದೂ ಅವನಿಗೆ ಗೊತ್ತಿದ್ದುದರಿಂದ ಅವನು ಅವರ ಬಗ್ಗೆ ಅಷ್ಟು ಕಾಳಜಿ ವಹಿಸುತ್ತಿದ್ದ. ಜನರು ಅತಿರೇಕಕ್ಕೆ ಎಡೆಗೊಟ್ಟು ಬಾಳನ್ನು ನಾಶಮಾಡಿಕೊಳ್ಳುತ್ತಿರುವಾಗ ಅವರನ್ನು ತಿರಸ್ಕಾರದ ದೃಷ್ಟಿಯಿಂದ ನೋಡಲಾಗುವುದಿಲ್ಲ. ಪ್ರೀತಿಯಿಂದ ಅವರಿಗೆ ಬುದ್ಧಿವಾದವನ್ನು ಹೇಳಲಾಗುತ್ತದೆ. ಇಂಥವನೇ ಆಗಿದ್ದ ಒಬ್ಬ ವ್ಯಕ್ತಿ ಒಮ್ಮೆ ಅನಾರೋಗ್ಯದ ಕಾರಣವನ್ನು ಹೇಳಿಕೊಂಡು ರಜೆಯ ಅರ್ಜಿಯನ್ನು ಬರೆಯಿಸುವ ಸಲುವಾಗಿ ಯೋಗೇಂದ್ರನ ಎದುರಿಗೇ ಶರತ್‌ನ ಬಳಿಗೆ ಬಂದ. ಎಂದಿನಂತೆ ಶರತ್ ಅರ್ಜಿಯನ್ನು ಬರೆದುಕೊಟ್ಟ ಹಾಗೂ ಅವನು ಹೊರಟುಹೋದ. ಆಗ ಯೋಗೇಂದ್ರನು ಶರತ್‌ನನ್ನು ಕೇಳಿದ: "ಅನಾರೋಗ್ಯದ ಯಾವ ಲಕ್ಷಣಗಳೂ ಕಾಣಿಸುತ್ತಿಲ್ಲವಲ್ಲ!"

ಶರತ್ ನಕ್ಕು ಹೇಳಿದ: "ಇದ್ದರೆ ತಾನೇ ಕಾಣಿಸುವುದು, ಶನಿವಾರದಂದು ಸಂಜೆ ಭೂತ ತಲೆಯ ಮೇಲೆ ಹೇರಿಕೊಳ್ಳುತ್ತದೆ. ಆಮೇಲೆ ಎರಡು-ಮೂರು ದಿವಸ ಅದಕ್ಕೆ ಅಧೀನರಾಗಿಯೇ ಇರುತ್ತಾರೆ. ಎಷ್ಟೋ ಬುದ್ಧಿವಾದ ಹೇಳುತ್ತೇನೆ, ಈ ಶನಿವಾರವೂ ಭೂತವೇನಾದರೂ ಏರಿಕೊಂಡರೆ ನಾನೇ ಖುದ್ದಾಗಿ ಹೋಗಿ ನಿಮ್ಮ ಸಾಹೇಬರಿಗೆ ತಿಳಿಸಿಬಿಡುತ್ತೇನೆ, ನಿಮ್ಮ ಕೆಲಸವೂ ಹೋಗಿಬಿಡುತ್ತದೆ ಎಂದು ಬೆದರಿಕೆಯನ್ನೂ ಹಾಕುತ್ತೇನೆ. ಆಗ ಈ ಜನ ಬಗೆಬಗೆಯಾಗಿ ಆಣೆಪ್ರಮಾಣ ಮಾಡುತ್ತಾರೆ: ಇನ್ನು ಮುಂದೆ ಕುಡಿಯುವುದಿಲ್ಲ. ಇನ್ನು ಎಂದಾದರೂ ಕುಡಿದರೆ ಅಪ್ಪ-ಅಮ್ಮನ ರಕ್ತವನ್ನು ಕುಡಿದಂತೆ. ಆದರೆ ಅಪ್ಪ-ಅಮ್ಮಂದಿರ ರಕ್ತವೂ ಅವರನ್ನು ರಕ್ಷಿಸಲಾರದೆ ಹೋಗುತ್ತದೆ."

ಚಕಿತನಾಗಿ ಸರ್ಕಾರ ಕೇಳಿದ: "ಇಂಥ ಜನರ ಮಧ್ಯೆ ನೀವೇಕೆ ವಾಸಮಾಡುತ್ತೀರಿ ?"

ಯಾರಾದರೂ ತೀವ್ರ ಆಕ್ರಮಣವನ್ನು ಎಸಗಿದರೋ ಎಂಬಂತೆ, ಶರತ್ ಕಣ್ಣೆತ್ತಿ ಸರ್ಕಾರ್‌ನತ್ತ ನೋಡಿದ. ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು. "ಸರ್ಕಾರ್, ನಿಸ್ಸಂದೇಹವಾಗಿ ಈ ಜನರು ದುರದೃಷ್ಟಶಾಲಿಗಳು. ಇಷ್ಟಾಗಿಯೂ ಅವರು ಮನುಷ್ಯರೇ ಅಲ್ಲವೆ! ಇವರಿಗೆ ಸ್ವಲ್ಪವಾದರೂ ಒಳ್ಳೆಯದನ್ನು ಮಾಡದೆ, ನಾನು ಇವರನ್ನು ದುರುಗುಟ್ಟಿಕೊಂಡು ನೋಡಿದರೆ, ಇವರು ಮತ್ತಷ್ಟು ಕೆಟ್ಟುಹೋಗುತ್ತಾರೆ."

ಅವನು ಎಲ್ಲಿಯೋ ಮುಳುಗಿ ಹೋದಂತೆ ಇದ್ದ. ಅನೇಕ ಕ್ಷಣಗಳವರೆಗೆ ಹೀಗೆಯೇ ಆತ್ಮಪರವಶನಾಗಿ ಅವನು ಕುಳಿತೇ ಇದ್ದ. ಆಮೇಲೆ ಹೇಳಿದ: "ಯಾವುದೇ ಸ್ಥಿತಿಯಲ್ಲೂ ಮನುಷ್ಯನನ್ನು ತಿರಸ್ಕಾರದ ದೃಷ್ಟಿಯಿಂದ ನೋಡಬಾರದು. ಕೆಟ್ಟವರೆಂದು ತೋರುವಂಥ ವ್ಯಕ್ತಿಗಳನ್ನು ತಿದ್ದುವ ಪ್ರಯತ್ನ ಮಾಡಬೇಕು. ಇದು ತುಂಬ ದೊಡ್ಡ ಕೆಲಸ. ದೇವರ ಈ ರಾಜ್ಯದಲ್ಲಿ ಮನುಷ್ಯ ಎಷ್ಟು ಶಕ್ತಿಶಾಲಿಯಾಗಿದ್ದಾನೋ ಅಷ್ಟೇ ದುರ್ಬಲನೂ ಆಗಿದ್ದಾನೆ. ಯಾವತ್ತಾದರೂ ಒಂದು ಸೋಮವಾರದ ದಿವಸ ನೀನಿಲ್ಲಿಗೆ ಬಂದು ನೋಡಿದರೆ, ನಾನು ನಿಜ ಹೇಳುತ್ತಿದ್ದೇನೆಂಬುದನ್ನು ನೀನು ಕಣ್ಣಾರೆ ಕಾಣುತ್ತೀಯೆ. ತಲೆಯ ಮೇಲೇರಿದ್ದ ಭೂತ ಇಳಿದ ಮೇಲೆ ಲೋಕದ ಪರಿವೆ ಉಂಟಾಗುತ್ತದೆ. ಅರ್ಜಿ ಸಲ್ಲಿಸದಿದ್ದರೆ ಸಾಹೇಬರು ಕೆಲಸದಿಂದ ತೆಗೆದುಹಾಕಿಬಿಡುತ್ತಾರೆ. ಆಗ ಏನು ಮಾಡಲಾದೀತು ? ಸಂಬಳವನ್ನು ಮುರಿದುಕೊಂಡರೆ ಅಥವಾ ದಂಡವನ್ನು ವಿಧಿಸಿದರೆ ಅಷ್ಟೊಂದು ನಷ್ಟವೇನೂ ಆಗುವುದಿಲ್ಲ. ಹೀಗೆಂದು ಯೋಚಿಸುತ್ತ, ನಾಚಿಕೆಯಿಂದ ತಲೆತಗ್ಗಿಸಿಕೊಂಡು, ಅನಾರೋಗ್ಯದ ಅರ್ಜಿಯನ್ನು ಬರೆಸಿಕೊಳ್ಳಲು ನನ್ನ ಬಳಿಗೆ ಬರುತ್ತಾರೆ. ಆಗ ನಾನು ಅವರ ಕೆಟ್ಟ ಅಭ್ಯಾಸದ ವಿಚಾರವನ್ನು ಮರೆತುಬಿಡುತ್ತೇನೆ. ಅಯ್ಯೋ ಈ ದುರ್ಭಾಗ್ಯಶಾಲಿ ಮಾನವರು ಅದೆಷ್ಟು ಅಸಹಾಯರಾಗಿದ್ದಾರೆ ಎಂದಷ್ಟೇ ಯೋಚಿಸುತ್ತೇನೆ."

ಇದನ್ನು ಹೇಳುತ್ತ ಹೇಳುತ್ತ ಶರತ್‌ನ ಕಣ್ಣುಗಳು ಮತ್ತೆ ತುಂಬಿ ಬಂದುವು.

ಅವನು ಕೋಪಿಸಿಕೊಳ್ಳುತ್ತಿರಲಿಲ್ಲ ಎಂದೇನೂ ಅಲ್ಲ. ಆದರೆ ಎಂದೂ ಯಾರನ್ನೂ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿರಲಿಲ್ಲ. ಏಕೆಂದರೆ, ಬುದ್ಧಿ ಮತ್ತು ಹೃದಯ ವೈಶಾಲ್ಯದ ವಿಷಯದಲ್ಲಿ ಹೆಂಡ ಕುಡುಕರು ಕುಡಿಯದೆ ಇರುವವರಿಗಿಂತ ಕ್ಷುದ್ರರೆಂಬುದು ಯಾವುದೇ ರೀತಿಯಲ್ಲಿಯೂ ನಿಜವಲ್ಲ ಎಂಬುದನ್ನು ಅವನು ಒಪ್ಪುತ್ತಿದ್ದ. ಆದ್ದರಿಂದಲೇ ಅವರು ಅವನನ್ನು ಗೌರವಿಸುತ್ತಿದ್ದರು ಹಾಗೂ ಅವನನ್ನು 'ಹಾರುವರ ಅಣ್ಣಯ್ಯ' ಎಂದು ಕರೆಯುತ್ತಿದ್ದರು. ಅವರ ಜೊತೆಗೂಡಿ ಅವನೊಂದು ಭಜನೆಯ ತಂಡವನ್ನು ಕಟ್ಟಿದ್ದ. ಅವನ ಮನಸ್ಸು ಆಗಿನ್ನೂ ದೇವರ ಅಸ್ತಿತ್ವವನ್ನು ಸಂಪೂರ್ಣವಾಗಿ ಒಪ್ಪಿರಲಿಲ್ಲವಾದರೂ, ಅವರ ದುರ್ಗುಣಗಳನ್ನು ಬಿಡಿಸುವ ಉದ್ದೇಶದಿಂದ ಅವನು ಚೆನ್ನಾಗಿ ಭಜನೆಗಳನ್ನು ನಡೆಸುತ್ತಿದ್ದ ಹಾಗೂ ರಾಮಕೃಷ್ಣ ಮಿಶನ್ನಿನ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದ.

ಸ್ವತಃ ಮದ್ಯಪಾನ ಮಾಡುವ ಹಾಗೂ ಬಗೆಬಗೆಯಾದ ಇತರ ಅಪರಾಧಗಳನ್ನೆಸಗುವ ಕಾರಣಕ್ಕಾಗಿಯೇ ಯಾರು ಅಪವಾದವನ್ನು ಹೊತ್ತುಕೊಂಡಿದ್ದನೋ ಅವನೇ ಇತರರ ಇವೇ ದುರ್ಗುಣಗಳನ್ನು ಬಿಡಿಸುವ ಪ್ರಯತ್ನ ಮಾಡುವುದು ಆಶ್ಚರ್ಯಜನಕವಾಗಿ ತೋರುವುದಿಲ್ಲವೆ? ತನ್ನ ಮಿತ್ರರಿಗೆ ಆಗಿಂದಾಗ್ಗೆ ಬರೆದ ಪತ್ರಗಳಲ್ಲಿ ಅವನು ತನ್ನ ಈ ದುರ್ಗುಣಗಳನ್ನು ರಸಮಯವಾಗಿ ಬಣ್ಣಿಸಿದ್ದಾನೆ. ಇವುಗಳನ್ನು ಆಧಾರವಾಗಿಟ್ಟುಕೊಂಡೇ ಅನೇಕ ಮಂದಿ ನಂಬಲು ಸಾಧ್ಯವಾಗದಂಥ ಅನೇಕ ಘಟನೆಗಳನ್ನು ಸೃಷ್ಟಿಸಿಬಿಟ್ಟಿದ್ದಾರೆ. ಇವೆಲ್ಲ ಅತಿಶಯೋಕ್ತಿಪೂರ್ಣವಾಗಿರುವುದು ಮಾತ್ರವಲ್ಲ, ಸುಳ್ಳೂ ಕೂಡ ಆಗಿವೆ. ಅವನ ಹೃದಯಾಂತರಾಳದಲ್ಲಿ ಅನೇಕ ಶರತ್‌ರು ಆಸೀನರಾಗಿ ಕುಳಿತಿದ್ದರು ಹಾಗೂ ಈ ಕಾರಣದಿಂದಾಗಿಯೇ ತನ್ನ ಸುತ್ತ ಅವನೊಂದು ರಹಸ್ಯಮಯ ವಾತಾವರಣವನ್ನು ಸೃಷ್ಟಿಸಿಕೊಂಡಿರ ಬಯಸುತ್ತಿದ್ದ ಎಂಬುದಷ್ಟೇ ನಿಜವಾಗಿರುವಂತೆ ತೋರುತ್ತದೆ. ತನ್ನನ್ನು ತಾನು ಎಲೆಯ ಮರೆಯಲ್ಲಿರಿಸಿಕೊಳ್ಳುವ ಪ್ರವೃತ್ತಿ ಹಾಗೂ ಅವಮಾನಸದಲ್ಲಿಯೇ ಮುಳುಗಿದ್ದು, ನಿರ್ಲಕ್ಷ್ಯದಿಂದ ಕುಳಿತಿರುವ ಸಮಾಜದ ಬಗ್ಗೆ ಸೇಡು ತೀರಿಸಿಕೊಳ್ಳುವ ಭಾವನೆ - ಇವೇ ಅವನಿಂದ ಈ ಎಲ್ಲ ಕೆಲಸಗಳನ್ನೂ ಮಾಡಿಸಿಬಿಡುತ್ತಿದ್ದುವು. ಅವನು 'ಏನೋ' ಆಗಿದ್ದಾನೆ ಎಂಬುದನ್ನು ತೋರಿಸುವುದಷ್ಟೇ ಅವನ ಉದ್ದೇಶವಾಗಿತ್ತು. ಇದನ್ನು ಬಿಟ್ಟರೆ, ಕುಡಿದು ಮೈಮೇಲೆ ಪ್ರಜ್ಞೆ ಇಲ್ಲದಂತೆ ಆಗಿಬಿಟ್ಟಿರುವ ಸ್ಥಿತಿಯಲ್ಲಿ ಶರತ್‌ನನ್ನು ಕಂಡವರು ಬಹುಶಃ ಒಬ್ಬರೂ ಇಲ್ಲ. ಐವತ್ತು ವರ್ಷಗಳ ಬಳಿಕ[1] ಅವನ ಗೆಳೆಯನ ತಮ್ಮನೊಬ್ಬ ಹೀಗೆ ಹೇಳಿದ್ದ: "ಅಂದು ಅವರು ತುಂಬ ತಡವಾಗಿ ಹಿಂದಿರುಗಿದ್ದರು. ಮೆಸ್‌ನ ಬಾಗಿಲು ಮುಚ್ಚಿತ್ತು. ಮತ್ತೆ ಮತ್ತೆ ಕರೆದರೂ ಯಾರೂ ಅತ್ತ ಕಿವಿಗೊಡಲಿಲ್ಲ. ಕೊನೆಗೆ ನಾನೇ ಬಾಗಿಲು ತೆಗೆದೆ. ಅವರು ಒಳಗೆ ಬಂದರು. ಬಹಳ ಹೊತ್ತು ಕೂಗಿದ್ದುದರಿಂದ ಬಹುಶಃ ಅವರ ಆರೋಗ್ಯ ಕೆಟ್ಟಿತೋ ಏನೋ. ಅವರು ವಾಂತಿ ಮಾಡಿಕೊಂಡರು. ಅವರು ಕುಡಿದಿದ್ದರೂ, ಅವರಿಗೆ ಮೈಮೇಲೆ ಪ್ರಜ್ಞೆ ಇತ್ತು. ತುಂಬ ಪ್ರೀತಿಯಿಂದ ಅವರು ನನ್ನೊಡನೆ ಹೇಳಿದರು: "ತಮ್ಮಾ, ನನ್ನನ್ನು ಪ್ರೀತಿಸುವವನು ನೀನೊಬ್ಬನೇ!"

ಇತರರೂ ಕುಡಿಯುತ್ತಿದ್ದರು. ಅವನೂ ಕುಡಿಯುತ್ತಿದ್ದ. ಆದರೆ, ಈ ಕಾರಣದಿಂದಾಗಿಯೇ ಅವನೆಂದೂ ಗುರಿ ತಪ್ಪಿ ನಡೆಯಲಿಲ್ಲ. ಕೀಳು ಹಾಗೂ ಚರಿತ್ರಹೀನರೆಂದು ಹೇಳಲಾಗುವಂಥ ಜನರ ನಡುವೆ ವಾಸಿಸುತ್ತಿದ್ದನೆಂಬುದೇ ಅವನು ಮಾಡಿದ ಮಹಾಪರಾಧವಾಗಿ ಬಿಟ್ಟಿದ್ದಿತು. ಇಷ್ಟೇ ಅಲ್ಲ, ಅವಕಾಶ ದೊರೆತಾಗ ಅವನು ಜಾವಾ, ಸುಮಾತ್ರಾ, ಬೋರ್ನಿಯೋ ಮೊದಲಾದ, ಆಕಾಲದಲ್ಲಿ ಕೆಟ್ಟ ಹೆಸರನ್ನು ಹೊತ್ತುಕೊಂಡಿದ್ದ ದ್ವೀಪಗಳಿಗೆ ಪ್ರವಾಸ ಹೋಗಿ ಬರುತ್ತಿದ್ದ, ಅಲ್ಲಿಯ ಜನರ ನಡುವೆ ಅವರವನೆಂಬಂತೆ ಬಾಳು ನಡೆಸುತ್ತಿದ್ದ. ಈ ಪ್ರವೃತ್ತಿಯಿಂದಾಗಿ ಅವನು ಬಹಳಷ್ಟು ಕಳೆದುಕೊಂಡನೆಂಬುದು ನಿಜ, ಆದರೆ ಬಹಳಷ್ಟು ಗಳಿಸಿದನೆಂಬುದೂ ನಿಜ. ಮೈ ಜರ್ಜರಗೊಳ್ಳುತ್ತ ಹೋಯಿತು; ಆದರೆ ಅನುಭವದ ಕೋಶ ಬೆಳೆಯುತ್ತ ಹೋಯಿತು.

---

1. 1960

ಈ ಅನುಭವ ಮೈದಳೆದದ್ದು 'ಶ್ರೀಕಾಂತ' ಕಾದಂಬರಿಯಲ್ಲಿ, 'ಚರಿತ್ರಹೀನ' ಕಾದಂಬರಿಯಲ್ಲಿ, ಹಾಗೂ ಆ ಯುಗದ ಮನುಷ್ಯರ ಮನಸ್ಸನ್ನು ಸೂರೆಗೊಂಡ ಆ ಅನೇಕ ಕಥೆಗಳಲ್ಲಿ. ಇಂದಾದರೂ ಅದಕ್ಕೆ ಆ ಮೋಹದಿಂದ ಬಿಡುಗಡೆ ಪಡೆಯಲು ಸಾಧ್ಯವಾಗಿದೆಯೇ ?

8

ಶಾಂತಿಯ ಸಾವಿನ ಬಳಿಕ ಮತ್ತೆ ಮದುವೆ ಮಾಡಿಕೊಳ್ಳುವ ಆಲೋಚನೆಯನ್ನೇನೂ ಶರತ್ ಇಟ್ಟುಕೊಳ್ಳಲಿಲ್ಲ. ಸಾಕಷ್ಟು ವಯಸ್ಸೂ ಆಗಿತ್ತು. ಆಪತ್ತು-ವಿಪತ್ತುಗಳ ಚಕ್ರವ್ಯೂಹದಲ್ಲಿ ಸಿಲುಕಿ ಬಹುಶಃ ಅವನ ಯೌವನವೂ ನಷ್ಟವಾಗಿತ್ತು. ದಿನವಿಡೀ ಕಛೇರಿಯಲ್ಲಿ ದುಡಿಯುತ್ತಿದ್ದ. ಮನೆಗೆ ಹಿಂದಿರುಗಿದ ಮೇಲೆ ಚಿತ್ರ ಬರೆಯುತ್ತಿದ್ದ ಅಥವಾ ಬರವಣಿಗೆಯಲ್ಲಿ ತೊಡಗುತ್ತಿದ್ದ. ಆದರೂ ಸಭ್ಯ ಸಮಾಜದಲ್ಲಿ ಅವನಿಗೆ ಸಂಬಂಧಿಸಿದಂತೆ ಹರಡಿಕೊಳ್ಳುತ್ತಿದ್ದ ಬಗೆಬಗೆಯಾದ ಕಿಂವದಂತಿಗಳಿಗೆ ಕೊರತೆಯೇನೂ ಇರಲಿಲ್ಲ. ಶರತ್ ಕೀಳು ಜಾತಿಯ ಹೆಣ್ಣೊಬ್ಬಳನ್ನು ಇಟ್ಟುಕೊಂಡಿದ್ದಾನೆ ಎಂಬುದೂ ಅಂಥ ಕಿಂವದಂತಿಗಳಲ್ಲಿ ಒಂದಾಗಿತ್ತು. ಒಬ್ಬ ಹೇಳುತ್ತಿದ್ದ - "ಬಿರಾಜ್‌ಬಹೂ ಎಂಬುದು ಆ ಹೆಣ್ಣಿನ ಹೆಸರು."

ಇನ್ನೊಬ್ಬ ಹೇಳುತ್ತಿದ್ದ - "ಅವಳ ಹೆಸರು ನಯನತಾರಾ."

ಮತ್ತೊಬ್ಬ ಹೇಳುತ್ತಿದ್ದ - "ಇಲ್ಲ, ಇಲ್ಲ. ಅವಳ ಹೆಸರು ಶಶಿತಾರಾ."

ಅವರಿಗೆ ಇನ್ನೂ ಕೆಲವು ಹೆಸರುಗಳು ಗೊತ್ತಿದ್ದುವು. ಆದರೆ, ಯಾರೊಬ್ಬರೂ ಅವನ ಮನೆಗೆ ಹೋಗಿ ವಸ್ತುಸ್ಥಿತಿಯನ್ನು ಅರಿತುಕೊಳ್ಳುವ ಪ್ರಯತ್ನ ಮಾಡಲಿಲ್ಲ. ಸಭ್ಯ ವ್ಯಕ್ತಿಗಳು 'ಚರಿತ್ರಹೀನ'ನೊಬ್ಬನ ಮನೆಗೆ ಹೋಗುವುದು ಹೇಗೆ ಸಾಧ್ಯ? ಕೆಲಸದಿಂದಾಗಿ ಯಾರಿಗಾದರೂ ಹೋಗಲೇಬೇಕಾಗಿ ಬಂದರೆ, ಹೊರಗಿನ ಕೋಣೆಯಲ್ಲಿ ಕುಳಿತಿದ್ದು ಬಂದುಬಿಡುತ್ತಿದ್ದರು. ಮನೆಯಲ್ಲಿ ಯಾರೋ ಒಬ್ಬ ಹೆಂಗಸು ಇದ್ದಳೆಂಬುದನ್ನು ತಿಳಿದುಕೊಳ್ಳುವುದಷ್ಟೇ ಅವನಿಗೆ ಸಾಕಾಗುತ್ತಿತ್ತು. ಅವಳು ಅವನ ಹೆಂಡತಿಯಂತೂ ಅಲ್ಲವಲ್ಲ! ಆ ಸಲ ಮಾಘಮಾಸದ ಉತ್ಸವದ ಸಂದರ್ಭದಲ್ಲಿ ಭಜನೆಗೆ ಮೃದಂಗದ ಅಗತ್ಯ ಉಂಟಾಯಿತು. ಒಬ್ಬ ಸಹೋದ್ಯೋಗಿ ಹೇಳಿದ: "ಶರತ್‌ನ ಬಳಿ ಮೃದಂಗ ಇದೆ. ನಾನು ಅಲ್ಲಿಂದ ಅದನ್ನು ತೆಗೆದುಕೊಂಡು ಬರುತ್ತೇನೆ."

ಇದಕ್ಕೆ ಮೊದಲು ಅವನೆಂದೂ ಶರತ್‌ನ ಮನೆಗೆ ಬಂದಿರಲಿಲ್ಲ. ಅಂದು ಹೋದಾಗ ಶರತ್ ಅವನನ್ನು ಪ್ರುತ್ಪೂರ್ವಕವಾಗಿ ಸ್ವಾಗತಿಸಿದ. ಹೇಳಿದ: "ನನ್ನಿಂದ ಏನಾಗಬೇಕಾಗಿದೆ, ದಯವಿಟ್ಟು ತಿಳಿಸಿ."

ಆ ಬಂಧು ಹೇಳಿದ: "ಬ್ರಹ್ಮ ಸಮಾಜದ ಉತ್ಸವದ ಸಂದರ್ಭದಲ್ಲಿ ಭಜನೆಗೆ ಮೃದಂಗದ ಅಗತ್ಯ ಉಂಟಾಗಿದೆ. ನೀವು ಅದನ್ನು ಕೊಡಲು ಸಾಧ್ಯವೆ ?"

ಶರತ್ ಉತ್ತರಿಸಿದ: "ಆಗಲಿ, ಅದಕ್ಕೇನಂತೆ. ಅಲ್ಲಿ ನೇತು ಹಾಕಿದೆಯಲ್ಲ. ಅದು ನಿಮಗಾಗಿಯೇ ಮೀಸಲು."

ಆ ಬಂಧು ಕೇಳಿದ: "ಇದನ್ನು ಇಲ್ಲಿಂದ ತೆಗೆಸಿಕೊಂಡು ಹೋಗುವುದಕ್ಕೆ

ಯಾರಾದರೂ ಸಿಕ್ಕುತ್ತಾರೇನು ?"

ಅಂದು ಭಾನುವಾರವಾಗಿತ್ತು.ಅಲ್ಲಿನ ಆ ದಿನದ ಪರಿಸ್ಥಿತಿಯಲ್ಲಿ ಆಗ ಯಾರೂ ಸಿಕ್ಕುವುದು ಕಷ್ಟವಾಗಿತ್ತು. ಶರತ್ ಉತ್ತರವನ್ನು ಕೊಡುವುದರ ಒಳಗಾಗಿ, ಒಳಗಿನಿಂದ ಹೆಣ್ಣಿನ ಧ್ವನಿಯೊಂದು ಅಪಹಾಸ್ಯ ಮಾಡಿತು. "ಭಕ್ತರಾಗಿರುವವರಿಗೆ ಮೃದಂಗವನ್ನು ತೆಗೆದುಕೊಂಡು ಹೋಗುವುದಕ್ಕೆ ಬೇರೊಬ್ಬರ ಅಗತ್ಯವಾದರೂ ಏಕೆ ಉಂಟಾಗಬೇಕು ?"

ಇದು ತುಂಬ ತೀಕ್ಷ್ಣವಾದ ವ್ಯಂಗ್ಯವಾಗಿತ್ತು. ಆ ಬಂಧುವಿಗೆ ಅದರ ಪೆಟ್ಟು ತಗುಲಿತು. ಹೇಳಿದ: "ಹೌದು ನೀವು ಹೇಳಿದ್ದು ಸರಿ. ನಾನೇ ಇದನ್ನು ತೆಗೆದುಕೊಂಡು ಹೋಗುತ್ತೇನೆ."

ಅವನು ಮೃದಂಗವನ್ನು ತೆಗೆದುಕೊಂಡು ಹೊರಟುಹೋದ. ಜೊತೆಗೆ, ಶರತ್‌ನ ಮನೆಯಲ್ಲಿ ಧರ್ಮಪರಾಯಣೆಯಾಗಿರುವ ಹೆಂಗಸೊಬ್ಬಳು ಇದ್ದಾಳೆಂಬ ಮಾಹಿತಿಯನ್ನು ತೆಗೆದುಕೊಂಡುಹೋದ.

ಆ ಹೆಣ್ಣು ಬಳಕೆಯಲ್ಲಿರುವ ಅರ್ಥದಲ್ಲಿ ಶರತ್‌ನ ಪತ್ನಿಯಾಗಿರಲಿಲ್ಲ. ಹಿಂದೂಗಳ ಸಂಪ್ರದಾಯದಂತೆ ದಿಬ್ಬಣವನ್ನು ಕೊಂಡೊಯ್ದು ಹಾಗೂ ಅಗ್ನಿಗೆ ಪ್ರದಕ್ಷಿಣೆ ಹಾಕಿ ಅವನು ಅವಳನ್ನು ಮದುವೆಯಾಗಿರಲಿಲ್ಲ. ಆದರೆ, ಆಕೆ ಅವನ ಬಾಳ ಸಂಗಾತಿಯಾಗಿದ್ದಾಳೆಂಬುದರಲ್ಲಿ ಅನುಮಾನವಿರಲಿಲ್ಲ.

ಹಣ ಸಂಪಾದಿಸುವ ದೃಷ್ಟಿಯಿಂದ ಬಂಗಾಳದ ಕೃಷ್ಣದಾಸ ಅಧಿಕಾರಿ ಎಂಬಾತ ರಂಗೂನಿಗೆ ಬಂದಿದ್ದರು. ಅವರು ಮೇದಿನೀಪುರ ಜಿಲ್ಲೆಯ ನಿವಾಸಿಗಳಾಗಿದ್ದರು. ಅವರ ಜೊತೆಯಲ್ಲಿ ಅವರ ಮಗಳೂ ಇದ್ದಳು. ಅವಳ ಹೆಸರು ಮೋಕ್ಷದಾ. ಆ ಕನ್ಯೆಯ ವಿಚಾರದಲ್ಲಿ ಒಂದಲ್ಲ ಒಂದಲ್ಲ ಕಿಂವದಂತಿ ಹರಡಿಯೇ ಇರುತ್ತಿತ್ತು. ಆ ಕಿಂವದಂತಿ ಏನಾಗಿದ್ದಿರಬಹುದು ಎಂಬುದನ್ನು ಅನೇಕರು ಅನೇಕ ರೀತಿಗಳಲ್ಲಿ ಕಲ್ಪಿಸಿಕೊಂಡಿದ್ದರು. ಆದರೆ, ಅದೆಲ್ಲ ಕಲ್ಪನೆಯೇ ಹೊರತು, ಅದರಲ್ಲಿ ಸತ್ಯಾಂಶವೇನೂ ಇರಲಿಲ್ಲ. ಇಷ್ಟಾಗಿ, ಆಕೆ ಸ್ವಲ್ಪವೂ ಸುಂದರವಾಗಿರಲಿಲ್ಲ. ಹಾಲಿನಂಥ ಬಣ್ಣವಾಗಲೀ, ಚಿತ್ರಗಳಲ್ಲಿ ಕಾಣುವಂಥ ಕಣ್ಣುಗಳಾಗಲೀ ಆಕೆಗೆ ಇರಲಿಲ್ಲ. ಆದರೆ, ಆಕೆಯ ಮೈಕಟ್ಟು ಅದ್ಭುತವಾಗಿತ್ತು. ಮಳೆಯಲ್ಲಿ ನೆಂದ ಹೂವು-ಚಿಗುರಿನ ಲಾವಣ್ಯ ಆಕೆಯದಾಗಿತ್ತು. ಆಕೆ ತುಂಬ ಸ್ನೇಹಮಯಿಯೂ ಆಗಿದ್ದಳು. ತಂದೆ ಅಧಿಕಾರಿ ವಂಶಕ್ಕೆ ಸೇರಿದ್ದವರು. ಅಧಿಕಾರಿಗಳು ವೈಷ್ಣವ ಸಂಪ್ರದಾಯದ ಅನುಯಾಯಿಗಳೇ ಆದರೂ, ಕುಲೀನ ಬ್ರಾಹ್ಮಣರಲ್ಲ. ಮೇಲಾಗಿ ಅವರು ತುಂಬ ಬಡವರಾಗಿದ್ದುದರಿಂದ ವರದಕ್ಷಿಣೆ ಕೊಡುವುದು ಅವರಿಗೆ ಅಸಾಧ್ಯವೇ ಆಗಿತ್ತು. ಆದ್ದರಿಂದಲೇ ಆ ಬಡಪಾಯಿ ಹಣಸಂಪಾದಿಸುವ ದೃಷ್ಟಿಯಿಂದ ಇಲ್ಲಿಗೆ ಬಂದಿದ್ದರು. ಇಷ್ಟು ದೂರದ ಬರ್ಮಾದಲ್ಲಿ ಕಿಂವದಂತಿಗಳು ಯಾರಿಗೆ ತಾನೆ ತಿಳಿದಾವು ?

ಅಧಿಕಾರಿ ಯಾರ ಬಳಿ ತಂಗಿದ್ದರೋ ಆತ ಶರತ್‌ಗೂ ಗೆಳೆಯನಾಗಿದ್ದ. ಈ ಕಾರಣದಿಂದಾಗಿಯೇ ಅವನಿಗೆ ಅವರ ಪರಿಚಯ ಆಯಿತು. ಮತ್ತೊಬ್ಬರ ದುಃಖವನ್ನು ಕಂಡು ತಾನೂ ದುಃಖಿಯಾಗುವುದು ಅವನ ಸ್ವಭಾವವೇ ಆಗಿತ್ತು.

ಅಧಿಕಾರಿಗಳಿಗೆ ನೆರವಾಗುವ ಪ್ರಯತ್ನವನ್ನು ಅವನು ಮಾಡಿದ. ಆದರೆ, ಮೋಕ್ಷದಾಗೆ ಗಂಡು ಹುಡುಕಿಕೊಡುವುದು ಅವನಿಗೆ ಸಾಧ್ಯವಾಗಲಿಲ್ಲ. ಒಂದು ದಿನ ಕೃಷ್ಣದಾಸ್ ಶರತ್‌ನೊಂದಿಗೆ ಹೇಳಿದರು: "ಹುಡುಗಿ ವಯಸ್ಸಿಗೆ ಬಂದಿದ್ದಾಳೆ. ನಾನು ಇವಳನ್ನು ಕಟ್ಟಿಕೊಂಡು ಎಲ್ಲೆಲ್ಲಿ ಅಲೆಯಲಿ? ನಾನೋ ಬಡಬ್ರಾಹ್ಮಣ. ನೀವು ಕೃಪೆತೋರಿ ಇವಳನ್ನು ಸ್ವೀಕರಿಸಿದರೆ, ನನಗೆ ತುಂಬ ಉಪಕಾರ ಮಾಡಿದಂತಾಗುತ್ತದೆ."

ಶರತ್ ಇದಕ್ಕೆ ಸಿದ್ಧನಾಗಲು ಸಾಧ್ಯವಿರಲಿಲ್ಲ. ಹುಡುಗಿ ಅವನಿಗೆ ಗೊತ್ತಿತ್ತು. ಅವಳಿಗಾಗಿ ಏನಾದರೂ ಮಾಡಬೇಕೆಂದೂ ಅವನು ಇಚ್ಛಿಸುತ್ತಿದ್ದ. ಆದರೆ, ಅವನು ತಾನೇ ಅವಳನ್ನು ಮದುವೆಯಾಗುವ ಸ್ಥಿತಿಯಲ್ಲಿ ಇರಲಿಲ್ಲ. ಬಹುಶಃ ಆಗಲೂ ಶಾಂತಿದೇವಿಯ ನೆನಪು ಅವನನ್ನು ಕಾಡುತ್ತಿದ್ದಿರಬೇಕು.

ಇದ್ದಕ್ಕಿದ್ದಂತೆ ಈ ಅವಧಿಯಲ್ಲಿಯೇ ಅವನು ಕಾಯಿಲೆ ಬಿದ್ದ. ಅವನು ಯಾವಾಗಲೂ ರೋಗಿಯಾಗಿಯೇ ಇರುತ್ತಿದ್ದ. ಸ್ವತಂತ್ರವಾದ ಯಾವುದೇ ಹೊಣೆಗಾರಿಕೆಯೂ ಇಲ್ಲದ ಬಾಳಿನಲ್ಲಿ ಊಟ-ತಿಂಡಿಗಳ ವ್ಯವಸ್ಥೆ ಹೇಗಿರಬಹುದಾಗಿತ್ತೋ ಹಾಗೆಯೇ ಇತ್ತು ಅವನ ಊಟ-ತಿಂಡಿಗಳ ಏರ್ಪಾಟು ಸಹ. ಜೊತೆಗೆ ಅದು ಬರ್ಮಾ ಬೇರೆ-ಮಲೇರಿಯಾ ಮತ್ತು ಪ್ಲೇಗ್‌ಗಳ ನಿವಾಸಸ್ಥಾನ! ಅವನ ಜ್ವರ ತುಂಬ ತೀವ್ರವಾಗಿತ್ತು. ಆಗ, ಬಂಗಾಳಿ ಹೆಣ್ಣಿನ ಹೃತ್ಪೂರ್ವಕ ಸ್ನೇಹದೊಂದಿಗೆ ಮೋಕ್ಷದಾ ಅವನನ್ನು ನೋಡಿಕೊಂಡಳು. ಕೆಲವು ದಿನಗಳ ಬಳಿಕ, ಜ್ವರ ಕಡಿಮೆಯಾದಾಗ ನೋಡುತ್ತಾನೆ ಮೋಕ್ಷದಾ ತನ್ನ ತಲೆ ದಿಂಬಿನ ಬಳಿ ಕುಳಿತು "ಇವತ್ತು ಹೇಗಿದ್ದೀರಿ?" ಎಂದು ಕೇಳುತ್ತಿದ್ದಾಳೆ.

ಈ ಸ್ನೇಹಸಿಕ್ತ ಸಂಬೋಧನೆಯನ್ನು ಕೇಳಿದಾಗ ಶರತ್‌ಗೆ ಶಾಂತಿಯ ನೆನಪು ಬಂದಿತು. ತಾಯಿಯನ್ನು ಬಿಟ್ಟರೆ, ಅವನ ಬಾಳಿನಲ್ಲಿ ನಿಜವಾಗಿಯೂ ಸ್ನೇಹವನ್ನು ಸೂರೆಗೊಟ್ಟ ಇನ್ನೊಬ್ಬ ಹೆಣ್ಣು ಅವಳೇ ಆಗಿದ್ದಳು. ಇಂದು ಅದೇ ಸ್ನೇಹಸಿಕ್ತ ವಾಣಿ ಅವನ ಹೃದಯವನ್ನು ತೂಗುಯ್ಯಾಲೆಯಾಡಿಸಿತು. ದೃಷ್ಟಿಯಲ್ಲಿ ಕೃತಜ್ಞತೆಯನ್ನು ತುಂಬಿ ಅವನು ಹೇಳಿದ: "ಈಗ ಚೆನ್ನಾಗಿದ್ದೇನೆ. ನೀನು ನನಗೆ ತುಂಬ ಸೇವೆ ಮಾಡಿದ್ದೀಯೇ. ಎಲ್ಲ ಕಷ್ಟವನ್ನು ನೀನೇ ಸಹಿಸಿದಂತಾಯಿತು."

ಮೋಕ್ಷದಾಳ ಕಣ್ಣು ತುಂಬಿ ಬಂದಿತು. ಶರತ್‌ನ ತಲೆಯ ಮೇಲೆ ನಿಧಾನವಾಗಿ ಕೈಯಾಡಿಸುತ್ತ ತುಂಬಿ ಬಂದ ಕಂಠದಿಂದ ಹೇಳಿದಳು: "ನನ್ನಂಥ ದುರದೃಷ್ಟಶಾಲಿಗೆ ಅಂಥ ಹಿರಿಯ ಸೌಭಾಗ್ಯ ಎಲ್ಲಿ ದೊರೆಯಲು ಸಾಧ್ಯ?"

ಕ್ಷೀಣವಾಗಿದ್ದ, ಆದರೆ ಸ್ನೇಹಪೂರ್ಣವಾಗಿದ್ದ ಧ್ವನಿಯಲ್ಲಿ ಶರತ್ ಹೇಳಿದ: 'ಇಲ್ಲ, ಇಲ್ಲ, ನೀನು ದುರದೃಷ್ಟಶಾಲಿಯೇನೂ ಅಲ್ಲ. ನೀನು ಬಂಗಾಳಿ ಹೆಣ್ಣು. ನೀನು ಚಿರಸ್ನೇಹಮಯಿಯಾಗಿರುವಂಥವಳು."

ಆ ಬಳಿಕ ತನ್ನೊಡನೆಯೇ ತಾನು ಮಾತನಾಡಿಕೊಳ್ಳುತ್ತಿರುವಂತೆ ಹೇಳಿದ: "ನಿನಗೆ ಸೌಂದರ್ಯದ ವರವೇನೋ ದೊರೆತಿಲ್ಲ. ಆದರೆ ನಿನ್ನ ಹೃದಯದಲ್ಲಿ ಸ್ನೇಹದ ಸಾಗರವೇ ಅಡಗಿದೆ. ನೀನು ಯಾರ ಜೊತೆಯಲ್ಲಿರುತ್ತೀಯೋ ಅವನು ನಿಜಕ್ಕೂ ಧನ್ಯನಾಗುತ್ತಾನೆ. ನನ್ನ ತಾಯಿಯೂ ಹೀಗೆಯೇ ಇದ್ದಳು. ಆಕೆಯೂ ಹೃದಯಾಂತರಾಳದ ದೃಷ್ಟಿಯಿಂದ ರೂಪಸಿಯೇ ಆಗಿದ್ದಳು. ನೀನೂ ಆಕೆಯಂತೆಯೇ ಎತ್ತರದ ವ್ಯಕ್ತಿ."

ಮೋಕ್ಷದಾಗೆ ಏನೊಂದೂ ಸರಿಯಾಗಿ ಕೇಳಿಸಲಿಲ್ಲ. ಆದರೆ, ಶರತ್‌ನ ಕಪ್ಪು ಬಣ್ಣದ ಮುಖ ಬೆಳಗಿ ನಿಂತುದನ್ನು ಕಂಡಳು. ಅವಳ ಹೃದಯ ತುಂಬಿ ಬಂದಂತಾಯಿತು. ವಿಲಾಸಿ ಮೃತ್ಯುಂಜಯನನ್ನು ಗೆದ್ದುಬಿಟ್ಟಳು.[1] ಅವಳ ಪ್ರೀತಿಯ ನೆರಳಿನಲ್ಲಿ ಶರತ್‌ನ ಆರೋಗ್ಯ ನಿಧಾನವಾಗಿ ಸುಧಾರಿಸಿತು. ಕೃಷ್ಣದಾಸರಿಗೆ ತುಂಬ ಸಂತೋಷ ಆಗಿತ್ತು. ಇನ್ನು ತನ್ನ ಕಷ್ಟಗಳೆಲ್ಲ ದೂರವಾದುವು ಎಂಬ ನಂಬಿಕೆ ಅವರಲ್ಲಿ ಮೂಡಿದಂತೆ ತೋರಿತು. ಇಷ್ಟಾಗಿಯೂ, ಶರತ್ ಮದುವೆಗೆ ಒಪ್ಪಿರಲಿಲ್ಲ.

ಹೀಗಾಗಿ ಒಂದು ದಿನ ಕೃಷ್ಣದಾಸರು ಹೇಳಿದರು: "ನಿಮಗೆ ಮೋಕ್ಷದಾಳನ್ನು ಮದುವೆಯಾಗಲು ಇಷ್ಟವಿಲ್ಲದೆ ಇದ್ದರೆ, ತಾಯ್ನಾಡಿಗೆ ಹಿಂದಿರುಗಿ ಅವಳ ಮದುವೆಯನ್ನಾದರೂ ಮಾಡಲು ಸಾಧ್ಯವಾಗುವಂತೆ ನನಗೆ ಸ್ವಲ್ಪ ಹಣವನ್ನಾದರೂ ಕೊಡಿ."

ಶರತ್‌ನ ಬಳಿ ಅಷ್ಟೊಂದು ಹಣವೆಲ್ಲಿ ಬರಬೇಕು ? ಅಧಿಕಾರಿಗಳಿಗೆ ನೆರವಾಗಲು ಅವನಿಗೆ ಸಾಧ್ಯವಾಗಲಿಲ್ಲ. ಆದರೆ ಒಂದು ದಿನ ಏನೂ ಹೇಳದೆ ಕೇಳದೆ ಕೃಷ್ಣದಾಸ್ ಅಧಿಕಾರಿ ಮೋಕ್ಷದಾಳನ್ನು ಅವನ ಬಳಿ ಬಿಟ್ಟು ಭಾರತಕ್ಕೆ ಹಿಂದಿರುಗಿ ಬಿಟ್ಟಿದ್ದರು. ಮೋಕ್ಷದಾ ತುಂಬ ಕಾತರಗೊಂಡಿದ್ದಳು. ಶರತ್‌ನೂ ಉದ್ವಿಗ್ನನಾಗಿದ್ದ. ಆದರೂ, ಅವನು ಮೋಕ್ಷದಾಗೆ ಸಮಾಧಾನ ಹೇಳಿದ: "ನೀನು ದುಃಖಿಸುವ ಅಗತ್ಯವಿಲ್ಲ. ಬೇರೆ ಏನಾದರೂ ಏರ್ಪಾಟು ಮಾಡುವವರೆಗೆ, ನೀನು ಇಲ್ಲಿಯೇ ಇರಬಹುದು."

ಮೋಕ್ಷದಾ ಶರತ್‌ನ ಜೊತೆಯಲ್ಲಿ ಇರತೊಡಗಿದಳು. ಅವಳಿಗೆ ಸಂಬಂಧಿಸಿದಂತೆ ಮತ್ತೊಮ್ಮೆ ಬಗೆಬಗೆಯಾದ ಕಿಂವದಂತಿಗಳು ಹುಟ್ಟಿಕೊಳ್ಳತೊಡಗಿದುವು. ಒಂದು ದಿನ ಶರತ್ ಹೇಳಿದ: "ನಡಿ. ನಿನ್ನನ್ನು ಕಲ್ಕತ್ತೆಗೆ ಬಿಟ್ಟುಬರುತ್ತೇನೆ."

ಆದರೆ, ಹೇಳುವುದು ಎಷ್ಟು ಸುಲಭವಾಗಿತ್ತೋ ಮೋಕ್ಷದಾಳನ್ನು ಬಿಡುವುದು ಅಷ್ಟೇ ಕಷ್ಟವಾಗಿತ್ತು. ಬಾಲ್ಯದಿಂದಲೂ ಇತರರಿಗಾಗಿ ತನ್ನ ಪ್ರಾಣವನ್ನೇ ಸಂಕಟಕ್ಕೆ ಒಡ್ಡುತ್ತ ಬಂದಿದ್ದಂಥ ವ್ಯಕ್ತಿ ಈ ಬಡಪಾಯಿ ಹೆಣ್ಣಿನ ಕೈ ಬಿಡುವುದು ಹೇಗೆ ಸಾಧ್ಯ ! ಹೀಗಾಗಿ, ಶರತ್ ಒಂದು ದಿನ ಹಿಂದಿರುಗಿ ಬಂದು ಮೋಕ್ಷದಾಗೆ ಹೇಳಿದ: "ಈ ಹೊತ್ತು ನಾನು ನಿನಗೊಂದು ಗಂಡನ್ನು ಹುಡುಕಿಕೊಂಡು ಬಂದಿದ್ದೇನೆ."

ಮೋಕ್ಷದಾ ಒಮ್ಮೆಗೇ ಶರತ್‌ನನ್ನು ನೋಡುತ್ತ ಹಾಗೆಯೇ ನಿಂತುಬಿಟ್ಟಳು. ಮತ್ತೆ ಆಕೆಯ ಕಣ್ಣು ತುಂಬಿ ಬಂದಿತು. ಹೇಳಿದಳು: "ಈ ರೀತಿ ಮಾತನಾಡುವುದು ನಿಮಗೆ ಹಿಡಿಯುತ್ತದೆಯೆ ?"

ಶರತ್ ಹೇಳಿದ: "ಇಲ್ಲ, ಇಲ್ಲ, ನಾನೇನೂ ಹಾಸ್ಯ ಮಾಡುತ್ತಿಲ್ಲ. ನೀನೂ ತಪ್ಪಾಗಿ ತಿಳಿಯಬಾರದು. ಎಂದಾದರೂ ನೀನು ಮದುವೆಯಾಗಲೇಬೇಕಲ್ಲವೆ ? ನಿನಗಾಗಿ ನಾನು ಆರಿಸಿರುವ ವ್ಯಕ್ತಿ ನಿನ್ನನ್ನು ಆದರಿಸುತ್ತಾನೆ ಹಾಗೂ ನಿನ್ನ ವಿಷಯದಲ್ಲಿ ಕರುಣೆಯುಳ್ಳವನೂ ಆಗಿದ್ದಾನೆ."

ಮೋಕ್ಷದಾಗೆ ಮತ್ತಷ್ಟು ಆಶ್ಚರ್ಯವಾಯಿತು. ತಡೆದು ತಡೆದು ಹೇಳಿದಳು: "ಇದರ ಬಗ್ಗೆ ನನಗೇನೂ ಗೊತ್ತಿಲ್ಲ. ಆ ವ್ಯಕ್ತಿ ಯಾರು ? ಏನೂ ಗೊತ್ತಿಲ್ಲದೆ, ಆತನ ಬಗ್ಗೆ ನಾನು ಏನು ತಾನೇ ಹೇಳಲಿ ?"

---

1 ನೋಡಿ; ಮೊದಲ ಪರ್ವ, ಅಧ್ಯಾಯ 6

ತುಂಟಾಟದ ಮುಗುಳ್ನಗೆಯೊಡನೆ ಶರತ್ ಹೇಳಿದ: "ನೀನು ಆತನನ್ನು ನೋಡಿದ್ದೀಯೆ."

"ಏನು ?"

"ಹೌದು. ಅನೇಕ ಸಲ ನೋಡಿದ್ದೀಯೆ."

ಮೋಕ್ಷದಾಳ ತಲೆಯಲ್ಲಿ ಮಿಂಚೊಂದು ಹೊಳೆದಂತೆ ಆಯಿತು. ಆದರೂ ಅರಿಯದವಳಂತೆ ಇದ್ದುಕೊಂಡೇ ಅವಳು ಹೇಳಿದಳು: "ನನಗೇನೂ ಗೊತ್ತಿಲ್ಲ."

ಶರತ್ ಹೇಳಿದ: "ನಾನು ಗೊತ್ತಿಲ್ಲವೇನು ?"

ಮೋಕ್ಷದಾ ಕೂಡಲೇ ಕಣ್ಣೆತ್ತಿ ಶರತ್‌ನತ್ತ ನೋಡಿದಳು. ಅಪನಂಬಿಕೆ ಮತ್ತು ಆಶ್ಚರ್ಯಗಳಿಂದ ತುಂಬಿದ್ದ ಆ ದೃಷ್ಟಿ ಶರತ್‌ನ ಹೃದಯವನ್ನು ತುಂಬಿಬಿಟ್ಟಿತು. ಒಮ್ಮೆಗೇ ತುಂಬಿದ ಮೋಡದಂತೆ, ಕೆಳಬಾಗಿ ಶರತ್‌ನ ಕಾಲುಗಳಿಗೆ ನಮಸ್ಕರಿಸುವುದಕ್ಕೆ ಮೊದಲೇ, ನಡುವೆಯೇ ಆಕೆಯನ್ನು ತಡೆದು, ಶರತ್ ಕೇಳಿದ: "ನಿನಗೆ ಒಪ್ಪಿಗೆಯಾಗಿದೆಯೆ ?"

ಮೋಕ್ಷದಾ ಈಗಲೂ ಉತ್ತರ ಕೊಡಲಿಲ್ಲ. ಅವಳು ಹಾಗೆಯೇ ಬಾಗಿ ನಿಂತಿದ್ದಳು.

ಇಲ್ಲಿಂದ ಮುಂದಕ್ಕೆ ಹೇಳಬೇಕಾದುದೇನೂ ಉಳಿದಿರುವುದಿಲ್ಲ. ಶೈವ ಸಂಪ್ರದಾಯಕ್ಕೆ ಅನುಗುಣವಾಗಿ ಇಬ್ಬರೂ ಮದುವೆಯಾದರು. ಈ ಕಥೆ ಯಥಾವತ್ತಾಗಿ ಹೀಗೆಯೇ ನಡೆದಿರಲಾರದು. ಹೇಗೆ ನಡೆದಿರಬಹುದು ಎಂಬುದು ಯಾರಿಗೂ ಗೊತ್ತಿಲ್ಲ. ಆದರೆ, ಈ ಮದುವೆ ಸಾಮಾಜಿಕವಾದ ಹಾಗೂ ಕಾನೂನು ಸಮ್ಮತವಾದ ಮದುವೆಗಳಿಗಿಂತ ಯಾವ ರೀತಿಯಲ್ಲೂ ಕಡಿಮೆಯಾಗಿರಲಿಲ್ಲ. ಆದರೆ, ಬಾಜಾ-ಬಜಂತ್ರಿಗಳೊಂದಿಗೆ ಶಾಸ್ತ್ರ-ಸಂಪ್ರದಾಯಗಳಿಗೆ ಅನುಗುಣವಾಗಿ ನಡೆಯದ ಹೊರತು, ಸಮಾಜ ಈ ಸಂಗತಿಯನ್ನು ಒಪ್ಪುವುದಾದರೂ ಹೇಗೆ ಸಾಧ್ಯ ? ಒಪ್ಪದಿದ್ದರೆ ಬಿಡಲಿ. ಎಲ್ಲವನ್ನೂ ಕಳೆದುಕೊಂಡಿದ್ದವರ ನಡುವೆ ವಾಸ ಮಾಡುವ ಶರತ್ ಒಪ್ಪಿಕೊಂಡುಬಿಟ್ಟಿದ್ದ. ಅವನು ಮೋಕ್ಷದಾಗೆ ಹೇಳಿದ: "ಇಂದಿನಿಂದ ನೀನು ಹಿರಣ್ಮಯಿ. ಚೊಕ್ಕ ಚಿನ್ನದಂಥವಳು ! ಅದರ ಮೇಲೆ ಎಂದೂ ಯಾವ ಬಗೆಯ ಕೊಳೆಯೂ ಕೂಡುವುದಿಲ್ಲ. ನಿನ್ನ ಹೃದಯಾಂತರಾಳದ ಉಜ್ವಲ ರೂಪವನ್ನು ನಾನು ಕಂಡಿದ್ದೇನೆ. ಅದು ನನಗೆ ಶಕ್ತಿಯಾಗಿ ಪರಿಣಮಿಸುತ್ತದೆ, ಸ್ಫೂರ್ತಿಯಾಗಿ ಉಳಿಯುತ್ತದೆ."

ಮಾಲತಿಯೊಂದಿಗೆ ಸುರೇಂದ್ರನೂ ಹೀಗೆಯೇ ಹೇಳುತ್ತಾನೆ: "ನಿನ್ನನ್ನು ನಾನು ಮದುವೆಯಾಗಿದ್ದೇನೆ. ಇಷ್ಟು ದಿನಗಳ ಬಳಿಕ ನೀನಿಂದು ನನ್ನ ಹೆಂಡತಿಯಾದೆ. ಇನ್ನು ನೀನು ಓಡಿಹೋಗಲು ಸಾಧ್ಯವಿಲ್ಲ. ನಾನು ಇಂದು ನಿನ್ನ ಕೊರಳಿಗೆ ಹಾಕಿರುವ ಈ ಹಾರ ನಿನಗೆ ತೊಡಿಸಿರುವಂಥ ಬಂಧನದಿಂದ ನೀನು ಜನ್ಮ-ಜನ್ಮಾಂತರಗಳಲ್ಲೂ ಬಿಡಿಸಿಕೊಳ್ಳಲಾರೆ." ('ಶುಭದಾ')

ಕಾನೂನು ಸಮ್ಮತವಾದ ಪತ್ನಿಯಾಗಿರದಿದ್ದರೂ, ಅಂದಿನಿಂದ ಹಿರಣ್ಮಯಿ ಪತ್ನಿಯ ಹೊಣೆಗಾರಿಕೆಯನ್ನು ಪೂರ್ಣವಾಗಿ ಹೊತ್ತುಕೊಂಡಳು. ಮನಸ್ಸುಗಳು ಒಂದುಗೂಡುವುದೇ ನಿಜವಾದ ಮದುವೆ. ಮದುವೆಯ ಮಂತ್ರಗಳನ್ನು ದೇಶಭಾಷೆಯಲ್ಲಿ ಹೇಳಲಿ ಅಥವಾ ಸಂಸ್ಕೃತದಲ್ಲಿ ಹೇಳಲಿ, ಅದರಿಂದ ಆಗುವುದಾದರೂ ಏನು ?

ಯಾವ ರೀತಿಯಲ್ಲಿಯೂ ಪವಿತ್ರವೆಂದು ಹೇಳಲಾಗದಂಥ ರೀತಿಗಳಲ್ಲಿ ಈ ಲೋಕದಲ್ಲಿ ಗಂಡು-ಹೆಣ್ಣುಗಳ ಮಿಲನ ನಡೆದಿದೆ. ಆ ಎಲ್ಲ ಮಿಲನಗಳನ್ನೂ ಸಮಾಜ ಒಪ್ಪಿಕೊಂಡಿದೆ ಹಾಗೂ ಮದುವೆಯ ಮಂತ್ರಗಳನ್ನು ಪಠಿಸಿ, ಅವುಗಳನ್ನು ಪವಿತ್ರೀಕರಿಸಿಯೂ ಇದೆ. ಹೀಗಿರುವಾಗ, ಹಿರಣ್ಮಯೀ ದೇವಿ ಮಂತ್ರದೀಕ್ಷಿತ ಪತ್ನಿಯಾಗದಿದ್ದರೆ ಏನಾಯಿತು ? ಸಮಾಜ ಆಕೆಗೆ ಪತ್ನಿಯ ಸ್ಥಾನಮಾನಗಳನ್ನು ಕೊಡದಿದ್ದರೆ, ಅದರಿಂದ ಆಗುವ ವ್ಯತ್ಯಾಸವಾದರೂ ಏನು ? ಶರತ್‌ನ ವಿಷಯದಲ್ಲಿ ಆಕೆಯ ಹೃದಯದಲ್ಲಿ ಮೂಡಿದ್ದ ಆದರ, ಭಕ್ತಿ ಮತ್ತು ಶ್ರದ್ಧೆಗಳಿಗೆ ಕೊನೆಯೆಂಬುದೇ ಇರಲಿಲ್ಲ. ಅವನೂ ಆಕೆಯನ್ನು ಹೃತ್ಪೂರ್ವಕವಾಗಿ ಪ್ರೀತಿಸುತ್ತಿದ್ದ.

ಮತ್ತೊಮ್ಮೆ ಅವನ ಬಾಳಿನ ಅರ್ಥವೇ ಬದಲಾದಂತೆ ಆಯಿತು. ಪ್ರೇಮದ ಕಥೆಗಳನ್ನೇ ಕಟ್ಟಿ ಕಟ್ಟಿ ಹೇಳುವ ಅಗತ್ಯವೇನೂ ಈಗ ಇರಲಿಲ್ಲ. ತನ್ನ ವಿಷಯದಲ್ಲಿ ಅವನು ಅದೆಷ್ಟು ಇಂಥ ಕಥೆಗಳನ್ನು ಕಟ್ಟಿ ಹೇಳಿ ಪ್ರಚುರಗೊಳಿಸಿದ್ದನೋ ಏನೋ. ಅವನಲ್ಲಿ ಅಡಗಿದ್ದ ಆ ಅಲೆಮಾರಿ ಕತೆಗಾರ ಅವನ ವೈರಾಗ್ಯಶೀಲ ಮನಸ್ಸನ್ನು ಆಗಿಂದಾಗ್ಗೆ ಸೋಲಿಸಿಬಿಡುತ್ತಿದ್ದ. ಆಲೋಚಿಸಿ ನೋಡಿದರೆ, ಎರಡಕ್ಕೂ ಒಂದೇ ಆಧಾರ ಅಥವಾ ಆಲಂಬನೆ ಇದ್ದುದು ಗೊತ್ತಾಗುತ್ತಿತ್ತು. ಅಹಂಭಾವವೇ ಆ ಆಲಂಬನೆಯಾಗಿತ್ತು. ವೈಷ್ಣವಿ ಶ್ರೀಕಾಂತನೊಂದಿಗೆ ಹೀಗೆ ಹೇಳುತ್ತಾಳಲ್ಲವೆ; "ನಿನ್ನ ಈ ಉದಾಸೀನ ವೈರಾಗ್ಯಶೀಲ ಮನಸ್ಸು, ಜಗತ್ತಿನಲ್ಲಿ ಇದಕ್ಕಿಂತಲೂ ಹೆಚ್ಚಿನ ಅಹಂಭಾವದಿಂದ ಕೂಡಿರುವ ಮತ್ತೇನಾದರೂ ಆಗಿರಲು ಸಾಧ್ಯವೆ ?" ('ಶ್ರೀಕಾಂತ; ನಾಲ್ಕನೆಯ ಪರ್ವ)

ಕೆಲವು ದಿನಗಳ ಹಿಂದೆ, ತನ್ನ ಗೆಳೆಯ ವಿಭೂತಿಭೂಷಣ ಭಟ್ಟನಿಗೆ ಬರೆದ ಒಂದು ಪತ್ರದಲ್ಲಿ[1] ಹೀಗೆ ಬರೆದಿದ್ದ: "ನಾನು ಒಂದೂವರೆ ವರ್ಷಗಳವರೆಗೆ ಒಬ್ಬ ಹೆಣ್ಣಿನೊಂದಿಗೆ ಕೌಟುಂಬಿಕ ನೆಲೆಯನ್ನು ಕಂಡುಕೊಂಡು ವಾಸಮಾಡುತ್ತಿದ್ದೆ. ಅದೆಂಥ ಮೇರೆಯಿಲ್ಲದ ಹಾಗೂ ಆಳವಾದ ಪ್ರಣಯ ಆಗಿತ್ತು! ಆದರೆ ಒಂದು ದಿನ ಪ್ರೀತಿಯ ಜಗಳ ನಡೆಯಿತು. ಆ ಮುನಿಸನ್ನು ದೂರವಾಗಿಸುವ ಮೊದಲೇ, ನನ್ನ ಆ ಪ್ರೇಮಿಕೆ ಬೇರೊಬ್ಬ ಯೋಗ್ಯವ್ಯಕ್ತಿಯ ಕೊರಳಿಗೆ ಜಯಮಾಲೆಯನ್ನು ಹಾಕಿಬಿಟ್ಟಳು.

"ಇದೆಲ್ಲ ಏನಾಗಿಬಿಟ್ಟಿತು ಎಂಬುದರ ಮೀಮಾಂಸೆ ಮಾಡಲು ಇಂದೂ ನನಗೆ ಸಾಧ್ಯವಾಗಿಲ್ಲ. ಹೆಣ್ಣು ಬ್ರಹ್ಮದೇಶದವಳೇನೂ ಅಲ್ಲ, ಖಂಡಿತವಾಗಿಯೂ ನಮ್ಮ ನಾಡಿನವಳೇ. ಆದರೆ ಅವಳು ಅಗಸರ ಜಾತಿಗೆ ಸೇರಿದವಳೆಂಬುದು ಗೊತ್ತಾದಾಗ ಕಿವಿ ಹಿಡಿದುಕೊಂಡೆ; ಮೂಗು ಉಜ್ಜಿದೆ. ಇರಾವತಿ ನದಿಯಲ್ಲಿ ಸ್ನಾನ ಮಾಡಿ ಹೇಗೋ ಪ್ರಾಯಶ್ಚಿತ್ತ ಮಾಡಿಕೊಂಡೆ. ವಿರಹ ವೇದನೆಯಿಂದ ಬಿಡುಗಡೆ ಹೊಂದಲು ವೈದ್ಯರ ಪ್ರಮಾಣ ಪತ್ರವನ್ನು ಮುಂದೊಡ್ಡಿ ಕೈತೊಳೆದುಕೊಂಡೆ. ಹಾಂಕಾಂಗಿಗೆ ಹೊರಟುಬಂದೆ. ಚಂಡೀದಾಸನೂ ಹೀಗೆಯೇ ಏನೋ ಮಾಡಿ ವಿರಹ ವೇದನೆಯ ಭಾವಗೀತಾತ್ಮಕವಾದ ಕಾವ್ಯವನ್ನು ಬರೆದನೆಂದು ಕೇಳಿದ್ದೇನೆ. ಬಹಳ

---

1. 22 ಫೆಬ್ರುವರಿ 1908

ಹಿಂದೆಯೇ ಆರಂಭಿಸಿದ್ದ 'ಚರಿತ್ರಹೀನ' ಕಾದಂಬರಿಯನ್ನು ಈ ಬಾರಿ ಮುಗಿಸಿಬಿಡಬೇಕೆಂದು ನಾನೂ ನಿಶ್ಚಯಿಸಿಕೊಂಡಿದ್ದೇನೆ."

ಇಡೀ ಪತ್ರವನ್ನು ಓದಿದರೆ, ಕಥೆ ಕಲ್ಪಿತವಾದುದೆಂದೇನೂ ತೋರುವುದಿಲ್ಲ. ಆದರೆ, ಗಂಭೀರ ರೀತಿಯಲ್ಲಿ ಪರಿಹಾರದಲ್ಲಿ ತೊಡಗುವುದು ಅವನ ಸಹಜ ಸ್ವಭಾವವೇ ಆಗಿತ್ತು. ಹದಿನೆಂಟು ತಿಂಗಳ ಈ ಪ್ರಣಯ ಕಥೆಯಲ್ಲಿ ಸ್ವಲ್ಪವಾದರೂ ಸತ್ಯಾಂಶವಿದ್ದಿದ್ದರೆ ಶರತ್‌ಗೆ ಸಂಬಂಧಿಸಿದ ಅನೇಕ ಸಂಭಾವ್ಯ ಅಸಂಭಾವ್ಯ ರೋಮಾಂಚಕ ಕಥೆಗಳನ್ನು ವರ್ಣಿಸಿರುವ ಗಿರೀಂದ್ರನಾಥ ಸರ್ಕಾರ್ ಅವರು ಈ ನೈಜಕಥೆಯನ್ನು ಖಂಡಿತವಾಗಿಯೂ ಬಿಡುತ್ತಿರಲಿಲ್ಲ. ಆದ್ದರಿಂದ, ಕಿಶೋರ ವಯಸ್ಸಿನ ಪ್ರೇಮಿಕೆ ನೀರದಾಳ ಕಥೆಯಂತೆಯೇ ಈ ಇಡೀ ಕಥೆ ರೋಮಾಂಚಕ ಕಲ್ಪನೆ ಮಾತ್ರವೆಂದು ತೋರುತ್ತದೆ. ಮಹಾಕವಿ ಚಂಡೀದಾಸ ಅಗಸಗಿತ್ತಿಯೊಬ್ಬಳನ್ನು ಪ್ರೀತಿಸಿದ್ದ. ಶರತ್‌ನ ಕಲ್ಪನಾ ಲೋಕದಲ್ಲಿ ಆ ಪ್ರೇಮಕಥೆಯೇ ಬಲವಾಗಿ ಬೇರುಬಿಟ್ಟದ್ದಿರಬಹುದು. ಈ ಅಗಸಗಿತ್ತಿಯೊಬ್ಬಳೇ ಅವನ ಕಲ್ಪನಾಲೋಕದ ಪ್ರೇಮಿಕೆಯಾಗಿದ್ದಳೆಂದೇನೂ ಅಲ್ಲ. ಬಹು ದಿನಗಳ ಬಳಿಕ ಕಲ್ಕತ್ತೆಗೆ ಹಿಂದಿರುಗಿದ್ದಾಗ ತನ್ನ ಗೆಳೆಯ ಅಕ್ಷಯಕುಮಾರ್ ಸರ್ಕಾರ್‌ನೊಂದಿಗೆ[1] ಹೆಣ್ಣಿನ ವರ್ತನೆಯ ವಿಚಾರವನ್ನು ಸಮೀಕ್ಷಿಸುತ್ತ ಹೀಗೆಂದು ಹೇಳಿದ್ದ: ರಂಗೂನಿನಲ್ಲಿ ಬಂಗಾಳಿ ಹೆಂಗಸೊಬ್ಬಳು ಇದ್ದಳು. ಅವಳ ಗಂಡ ಕಾಯಿಲೆ ಬಿದ್ದಿದ್ದ. ನನ್ನೊಂದಿಗೆ ಅವಳು ಅದೆಷ್ಟು ಬಗೆಯಾಗಿ ಪ್ರೀತಿಯನ್ನು ತೋಡಿಕೊಂಡಿದ್ದಳು. ಅವಳ ಒಡನಾಟಕ್ಕಾಗಿ ನಾನು ತುಂಬ ಹಂಬಲಿಸಿದ್ದೆ. ಕೆಲವು ದಿವಸಗಳವರೆಗೆ ನನ್ನೊಂದಿಗೆ ಇದ್ದ ಬಳಿಕ, ಒಂದು ದಿನ ಇದ್ದಕ್ಕಿದ್ದಂತೆ ಮಾಯವಾಗಿ ಬಿಟ್ಟಳು. ಆಗ ನನ್ನ ಸ್ಥಿತಿ ಏನಾಗಿರಬೇಡ! ವಿರಹ ವ್ಯಥೆಯಿಂದ ನಾನು ಹುಚ್ಚನಂತಾಗಿ ಬಿಟ್ಟಿದ್ದೆ. ಆಗ ಮನೆಯ ಒಡತಿ ನನ್ನೊಂದಿಗೆ ಹೇಳಿದಳು: "ಯಾರಿಗಾಗಿ ಹೀಗೆ ಹುಚ್ಚನಾಗಿದ್ದೀಯಪ್ಪ? ತನ್ನ ಬಂಧುವಿಗಾಗಿ ಅವಳಿಗೆ ಹಣಬೇಕಿತ್ತು. ಆದ್ದರಿಂದ ನಿನ್ನ ಮೇಲೆ ಬಲೆ ಬೀಸಿದಳು. ಅವನ ಜೊತೆಯಲ್ಲಿ ಓಡಿಹೋದಳು. ಅವಳು ನಿನ್ನನ್ನು ಒಂದಿಷ್ಟೂ ಪ್ರೀತಿಸುತ್ತಿರಲಿಲ್ಲ."

ಈ ಕಥೆಗಳು ನಿಜವೋ, ಸುಳ್ಳೋ ಏನಾದರೂ ಆಗಿರಲಿ ಅವನ ಮಾನಸಿಕ ಅಧ್ಯಯನಕ್ಕೆ ಇವು ಒಳ್ಳೆಯ ಅವಕಾಶವನ್ನು ಒದಗಿಸುತ್ತವೆ. ಹೆಣ್ಣಿನ ಪ್ರೀತಿ ಗಂಡಿನಲ್ಲಿ ಸಾಹಸಭಾವನೆಯನ್ನು ಚೋದಿಸುತ್ತದೆ ಎಂದು ಭಾವಿಸುವವರಲ್ಲಿ ಅವನೂ ಒಬ್ಬನಾಗಿದ್ದ. ಅವನ ದೃಷ್ಟಿಯಲ್ಲಿ ಪ್ರೀತಿ ಎಂಬುದು ಶರೀರದ ಹಸಿವೆಯಾಗಿರದೆ, ತಾನು ಆರಾಧಿಸುವ ವ್ಯಕ್ತಿಗಾಗಿ ತನ್ನನ್ನೇ ಬಲಿದಾನ ಮಾಡುವುದು ಎಂಬುದಾಗಿತ್ತು. ಕಿಶೋರ ವಯಸ್ಸಿನ ಆ ವಿಫಲ ಪ್ರೇಮ ಪ್ರಕರಣದ ಅನಂತರ ಕನಿಷ್ಠ ಪಕ್ಷ ಒಮ್ಮೆಯಾದರೂ ಅವನು ನಿಜವಾಗಿಯೂ ಮತ್ತೊಬ್ಬ ವ್ಯಕ್ತಿಯನ್ನು ಪ್ರೀತಿಸಿದ್ದ. ಆ ದಿನಗಳಲ್ಲಿ ದುಷ್ಟರು ಸಾಮಾನ್ಯವಾಗಿ ಒಳ್ಳೆಯ ಮನೆತನದ ಹುಡುಗಿಯರನ್ನು ರಂಗೂನಿಗೆ ಹಾರಿಸಿಕೊಂಡು ಹೋಗಿಬಿಡುತ್ತಿದ್ದರು. ಗಾಯತ್ರಿ ಅಂಥ ಒಬ್ಬ ಯುವತಿ.

---

1 ಅವರು ತಮ್ಮ ದಿನಚರಿಯಲ್ಲಿ ಈ ಕಥೆಯನ್ನು ಉಲ್ಲೇಖಿಸಿದ್ದಾರೆ. 2-2-1930

ಅವಳ ಮೈಮಾಟ ಎಷ್ಟು ಆಕರ್ಷಕವಾಗಿತ್ತೋ ಅವಳ ಸೌಂದರ್ಯವೂ ಅಷ್ಟೇ ಮಾದಕವಾಗಿತ್ತು - ಬೆಂಕಿಯ ಕಿಡಿಯಂತೆ ಅದು ವೈಧವ್ಯದ ಬೂದಿಯಲ್ಲಿ ಅಡಗಿತ್ತು. ಬಹುಶಃ ತಂದೆ-ತಾಯಿಗಳು ಅವಳ ವಿಷಯದಲ್ಲಿ ಚೆನ್ನಾಗಿ ನಡೆದುಕೊಳ್ಳುತ್ತಿರಲಿಲ್ಲ. ಆದ್ದರಿಂದ ಅವಳು ಲಕ್ನೋದಲ್ಲಿದ್ದ ತನ್ನ ಚಿಕ್ಕಪ್ಪನ ಬಳಿ ಹೋಗಿ ಇರಬೇಕೆಂದು ಇಚ್ಛಿಸುತ್ತಿದ್ದಳು. ನೆರಮನೆಯಲ್ಲಿದ್ದ ನಂದದುಲಾಲ್‌ನೆಂಬ ಒಬ್ಬ ಯುವಕ ಅವಳನ್ನು ಚಿಕ್ಕಪ್ಪನ ಮನೆಗೆ ತಲುಪಿಸುವುದಾಗಿ ಅವಳಿಗೆ ಮಾತುಕೊಟ್ಟ. ಆದರೆ ಆದದ್ದೇನು ? ಲಕ್ನೋ ಕಡೆಗೆ ಹೋಗದೆ ರಂಗೂನಿನ ದಾರಿಯನ್ನು ಹಿಡಿದ. ಬಡಪಾಯಿ ಗಾಯಿತ್ರಿ ದಾರಿಯಲ್ಲಿ ಯಾರೊಡನೆ ತಾನೆ ತನ್ನ ಸ್ಥಿತಿಯನ್ನು ಹೇಳಿಕೊಂಡಾಳು ? ಹಡಗಿನಲ್ಲಿ ಒಬ್ಬ ಬರ್ಮೀ ಯುವಕನ ಪರಿಚಯ ಅವರಿಗೆ ಆಯಿತು. ಪಾಂಚ್ಕೌಡಿ ಎಂಬುದು ಅವನ ಹೆಸರು. ಗಾಯತ್ರಿ ತನ್ನ ಹೆಂಡತಿಯೆಂದು ನಂದದುಲಾಲ್ ಪಾಂಚ್‌ಕೌಡಿಗೆ ತಿಳಿಸಿದ. ಈ ಮುಖವಾಡದಲ್ಲಿಯೇ ಅವರು ರಂಗೂನಿನಲ್ಲಿ ಸುಪ್ರಸಿದ್ಧ ವಕೀಲರಾಗಿದ್ದ ಕುಂಜಬಿಹಾರಿ ಮುಖೋಪಾಧ್ಯಾಯರ ಮನೆಗೆ ಹೋಗಿ, ಅಲ್ಲಿಯೇ ತಂಗಿದರು. ಬಹುಶಃ ಮನೆಯ ಒಡತಿ ತೋರಿದ ಪ್ರೀತಿ ವಿಶ್ವಾಸಗಳಿಂದಾಗಿ ಗಾಯತ್ರಿಗೆ ಕಳೆದುಹೋಗಿದ್ದ ಧೈರ್ಯ ಮರಳಿ ಬಂದಂತಾಯಿತು. ಅವಳು ಆಕೆಯೊಂದಿಗೆ ಹೇಳಿದಳು: "ಅಮ್ಮಾ, ಇವನು ನನ್ನ ಗಂಡನಲ್ಲ. ನಾನೊಬ್ಬ ವಿಧವೆ. ಚಿಕ್ಕಪ್ಪನ ಮನೆಗೆ ತಲುಪಿಸುವ ನೆಪಹೂಡಿ, ಮೋಸದಿಂದ ನನ್ನನ್ನು ಇಲ್ಲಿಗೆ ಹಾರಿಸಿಕೊಂಡು ಬಂದಿದ್ದಾನೆ."

ಮನೆಯ ಒಡತಿ ಈ ಸಂಗತಿಯನ್ನು ಕೇಳಿ ಸ್ತಬ್ಧಳಾದಳು. ಆಕೆ ಕೂಡಲೇ ಗಿರೀಂದ್ರನಾಥ ಸರ್ಕಾರ್ ಅವರಿಗೆ ಹೇಳಿ ಕಳಿಸಿದಳು. ಅವರು ಬಂದ ನಂದದುಲಾಲನಿಗೆ ಚೆನ್ನಾಗಿ ಛೀಮಾರಿ ಹಾಕಿದರು. ಆಮೇಲೆ ಶರತ್ ಮತ್ತು ಇತರ ಗೆಳೆಯರ ನೆರವಿನಿಂದ ತಾಯ್ನಾಡಿಗೆ ಹಿಂದಿರುಗುವಂತೆ ಹೇಳಿ, ಅವನನ್ನು ಹಡಗಿನಲ್ಲಿ ಕೂರಿಸಿ ಕಳಿಸಿದರು. ಗಾಯತ್ರಿಯ ತಂದೆಗೂ ಕಾಗದ ಬರೆದು ತಿಳಿಸಲಾಯಿತು. ಆದರೆ, ಅದುವರೆಗೆ ಗಾಯತ್ರಿ ಇರುವುದಾದರೂ ಎಲ್ಲಿ ? ಮನೆಯ ಒಡತಿ ಅವಳನ್ನು ತನ್ನ ಬಳಿ ಇರಿಸಿಕೊಳ್ಳಲು ಸಿದ್ಧವಾಗಿರಲಿಲ್ಲ. ಹೀಗಾಗಿ ಗಿರೀಂದ್ರರು ಶರತ್ ವಾಸಿಸುತ್ತಿದ್ದ ಮೊಹಲ್ಲಾದಲ್ಲಿಯೇ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅವಳ ವಾಸಕ್ಕೆ ತಾತ್ಕಾಲಿಕ ವ್ಯವಸ್ಥೆ ಮಾಡಿದರು. ಪಾಂಚ್‌ಕೌಡಿ ಅವಳನ್ನು ನೋಡಿಕೊಳ್ಳುತ್ತಿದ್ದ. ಶರತ್‌ನೂ ರಾತ್ರಿಯ ಹೊತ್ತು ಪಾಂಚ್‌ಕೌಡಿಯ ಮನೆಗೆ ಹೋಗಿ ಮಲಗಿಕೊಳ್ಳುತ್ತಿದ್ದ.

ಗಾಯತ್ರಿಯ ತಂದೆಯಿಂದ ಒಂದು ದಿವಸ ಉತ್ತರವೂ ಬಂದಿತು. ಕುಲಟೆಯಾದ ತನ್ನ ಮಗಳನ್ನು ಯಾವುದೇ ಕಾರಣದಿಂದಲೂ ತಮ್ಮ ಮನೆಯಲ್ಲಿ ಇರಿಸಿಕೊಳ್ಳಲು ಆತ ಸಿದ್ಧನಾಗಿರಲಿಲ್ಲ. ತಂದೆಯತ್ತಣಿಂದ ನಿರಾಶರಾದ ಗಿರೀಂದ್ರರು ಗಾಯತ್ರಿಯ ಚಿಕ್ಕಪ್ಪನಿಗೆ ಕಾಗದ ಬರೆದರು. ಆದರೆ, ಈ ಮಧ್ಯೆ ಮತ್ತೆ ಮತ್ತೆ ಬಂದು ಹೋಗಿ ಮಾಡುತ್ತಿದ್ದುದರಿಂದ ಶರತ್ ಗಾಯತ್ರಿಯ ವಿಷಯದಲ್ಲಿ ಅನುರಕ್ತನಾದ. ಬಡಪಾಯಿ ವಿಧವೆ, ಅವಳಿಗೆ ಸಹಾಯಕರಾರೂ ಇಲ್ಲ ಎಂಬ ಕಾರಣದ ಮೇಲೆ ಬಹುಶಃ ಅವನ ಮನಸ್ಸಿನಲ್ಲಿ ಕರುಣೆ ಮೂಡಿಬಂದಿತ್ತೋ ಏನೋ ! ಆದ್ದರಿಂದಲೇ,

ಒಂದು ದಿನ ಅವನು ಗಾಯತ್ರಿಯ ವಿಷಯದಲ್ಲಿನ ತನ್ನ ಪ್ರೀತಿಯನ್ನು ತೋಡಿಕೊಳ್ಳುವ ಧೈರ್ಯತೋರಿದ. ಅವನು ಹೇಳಿದ: "ಈಗಂತೂ ವಿಧವಾ ವಿವಾಹಗಳು ನಡೆಯುತ್ತಲೇ ಇವೆ. ಇಷ್ಟಾಗಿಯೂ, ಸಮಾಜಕ್ಕೆ ಅದು ಒಪ್ಪಿಗೆಯಾಗಲಿಲ್ಲವೆಂದರೆ, ನಾವು ವೈಷ್ಣವ ಧರ್ಮವನ್ನು ಸ್ವೀಕರಿಸಬಹುದು."

ಗಾಯತ್ರಿಯ ದುಃಖಕ್ಕೆ ಮೇರೆಯೇ ಇರಲಿಲ್ಲ. ಅವಳು ಹೇಳಿದಳು: "ಶರತ್, ಕಳಚಿ ಬಿದ್ದಿರುವ ಹೂವು ದೇವರ ಪೂಜೆಗೆ ಅರ್ಹವಾಗಿರುವುದಿಲ್ಲ."

ಅವಳ ವಿಷಯದಲ್ಲಿ ಪ್ರೀತಿಯನ್ನು ತೋಡಿಕೊಂಡವನು ಶರತ್ ಒಬ್ಬನೇ ಅಲ್ಲ. ಪಾಂಚ್‌ಕೌಡಿಯ ಶ್ರೀಮಂತ ದಣಿಯೂ ಅವಳ ವಿಷಯದಲ್ಲಿ ಆಸಕ್ತನಾದ. ಒಂದು ದಿವಸ ವ್ಯಾಪಾರಕ್ಕೆ ಸಂಬಂಧಿಸಿದ ವಿಚಾರದಲ್ಲಿ ಪಾಂಚ್‌ಕೌಡಿಯನ್ನು ಹುಡುಕಿಕೊಂಡು ಅವನ ಮನೆಗೆ ಬಂದಾಗ, ಆ ಶ್ರೀಮಂತ ಆಕಸ್ಮಿಕವಾಗಿ ಅವಳನ್ನು ನೋಡಿ ಮುಗ್ಧನಾಗಿಬಿಟ್ಟ. ಅಂದಿನಿಂದಲೇ ಅವನು ಅವಳಿಗೆ ಬಗೆಬಗೆಯಾದ ಪ್ರಲೋಭನೆಗಳನ್ನು ಒಡ್ಡತೊಡಗಿದ. ಒಮ್ಮೆ ಯಾವುದಾದರೂ ಕಾಣಿಕೆಯನ್ನು ಕಳಿಸಿದರೆ, ಮತ್ತೊಮ್ಮೆ ಯಾವಳೋ ಕುಂಟಣಿಯನ್ನು ಕಳುಹಿಸುತ್ತಿದ್ದ. ಮತ್ತೊಂದು ದಿವಸ ಅವಳನ್ನು ಕರೆದೊಯ್ಯಲು ತನ್ನ ಗಾಡಿಯಲ್ಲಿ ತಾನೇ ಅಲ್ಲಿ ಬಂದಿಳಿದ. ಅವನಲ್ಲಿ ಶಕ್ತಿ ಇತ್ತು. ಶರತ್‌ನಲ್ಲಿ ಧೈರ್ಯವಿತ್ತು. ಗಾಯತ್ರಿಯನ್ನು ರಕ್ಷಿಸಲೆಂದು ಅವನು ಬಂದು ಎದುರಿಗೆ ನಿಂತ. ಆ ಕ್ಷಣದಲ್ಲಿ ಅವನು ಮನಸ್ಸಿನಲ್ಲಿಯೇ ರಾಜುವನ್ನು ನೆನಪು ಮಾಡಿಕೊಂಡಿದ್ದಿರಬೇಕು.

ಈ ಯುದ್ಧವನ್ನು ನೋಡಲು ಬಂದು ನೆರೆದಿದ್ದ ಜನಗಳ ಸಂಖ್ಯೆಯೂ ಕಡಿಮೆಯಾಗಿರಲಿಲ್ಲ. ರಕ್ತಪಾತವಾಗುವ ಸಂಭವವೂ ಇತ್ತು. ಆದರೆ, ಅಷ್ಟು ಹೊತ್ತಿಗೆ ಗಿರೀಂದ್ರರಿಗೆ ಸುದ್ದಿ ತಲುಪಿತ್ತು. ಕೆಲವೇ ಕ್ಷಣಗಳ ಬಳಿಕ ಅವರು ಅಲ್ಲಿಗೆ ಬಂದು ಸೇರಿದರು. ಅವರ ಜೊತೆಯಲ್ಲಿ ಕೆಲವರು ಲಾಠಿಧಾರಿಗಳೂ ಇದ್ದರು. ಅವರನ್ನು ಕಂಡೊಡನೆಯೇ ಜನರೆಲ್ಲ ಒಬ್ಬೊಬ್ಬರಾಗಿ ಅಲ್ಲಿಂದ ಕಾಲ್ತೆಗೆದರು. ಒಂದೆರಡು ದಿನಗಳಲ್ಲಿ ಗಾಯತ್ರಿಯ ಚಿಕ್ಕಪ್ಪನ ಪತ್ರವೂ ಬಂದಿತು. "ಗಾಯತ್ರಿಯನ್ನು ಲಕ್ನೋಗೆ ತಲುಪಿಸಿ ಬಿಡಿ" ಎಂದು ಆತ ಬರೆದಿದ್ದ.

ಅವಳು ಹೊರಟುಹೋದಳು. ಹೀಗೆ ಶರತ್‌ನ ಈ ಪ್ರಣಯ ಸಾಹಸವೂ ವಿಫಲವಾಯಿತು.

ಶರತ್‌ನೇ ಈ ಕಥೆಗೆ ಮೂಲವಲ್ಲವೆಂಬುದು ನಿಜವಾದರೂ, ಇದು ಸುಳ್ಳಾಗಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ, ಅವನ ವಿಷಯವಲ್ಲಿ ಬಗೆಬಗೆಯಾದ ಜನರು ಬಗೆಬಗೆಯಾದ ಕಥೆಗಳನ್ನು ಕಟ್ಟಿ ಹರಡುತ್ತಿದ್ದರು. ನಿಜವೆಂದೇ ಭಾವಿಸಿದರೂ, ಅದರಿಂದ ಆಗುವ ವ್ಯತ್ಯಾಸ ಅಷ್ಟರಲ್ಲಿಯೇ ಇದೆ. ಮಾನವರ ಬಾಳಿನಲ್ಲಿ ಇಂಥ ಅನೇಕ ಗೋಪನೀಯ - ಅಗೋಪನಿಯ ಅಥವಾ ಮುಚ್ಚಿಡಬೇಕಾದ ಹಾಗೂ ಮುಚ್ಚಿಡುವ ಅಗತ್ಯವಿಲ್ಲದಿರುವಂಥ ಅನೇಕ ಸಂದರ್ಭಗಳು ಒದಗಿ ಬರುತ್ತವೆ. ಮೇಲಾಗಿ ಶರತ್‌ಗಂತೂ ವಾಸ್ತವವಾಗಿ ಇಂಥ ಅನೇಕ ಕುಲೀನ ಹಾಗೂ ಅಕುಲೀನ ಹೆಣ್ಣುಗಳ ಪರಿಚಯ ಉಂಟಾಗಿಯೇ ಇತ್ತು. ಅವನೇನೂ ಯತಿ ಅಥವಾ ಸನ್ಯಾಸಿ ಆಗಿರಲಿಲ್ಲ! ಬೇರೊಬ್ಬರಿಗಾಗಿ ತಮ್ಮನ್ನೇ

ಅರ್ಪಿಸಿಕೊಂಡು ಬಿಡುವಂಥ ಆಕಾಂಕ್ಷೆ ಎಲ್ಲರ ಮನಸ್ಸಿನಲ್ಲಿಯೂ ಇದ್ದೇ ಇರುತ್ತದೆ. ಶರತ್‌ನಲ್ಲಿ ಇದು ಸ್ವಲ್ಪ ಹೆಚ್ಚಾಗಿಯೇ ಇತ್ತು. ವೇಶ್ಯೆಯರ ಮನೆಗಳಿಗೆ ಅವನು ಹೋಗುತ್ತಿದ್ದ. ಆದರೆ, ಅಲ್ಲಿಯೂ ಸೇವೆ-ಶುಶ್ರೂಷೆ ಅಗತ್ಯವಾಗುವಂಥ ಪ್ರಸಂಗಗಳು ಎದುರಾದರೆ ಅವನೆಂದೂ ಹಿಂದೆ ಸರಿಯುತ್ತಿರಲಿಲ್ಲ. ಒಮ್ಮೆ ತನ್ನ ಗೆಳೆಯರೊಂದಿಗೆ ರಂಗೂನಿನ ಪ್ರಸಿದ್ಧ ನರ್ತಕಿಯೊಬ್ಬಳ ಮನೆಗೆ ಹೋಗಿದ್ದ. ಅಲ್ಲಿ ಹೋಗಿ ನೋಡಿದರೆ ಅವಳು ಸಿಡುಬಿಗೆ ತುತ್ತಾಗಿದ್ದಳು. ಗೆಳೆಯರೆಲ್ಲ ಹಿಂದಿರುಗಿದರು. ಆದರೆ ಶರತ್ ಮಾತ್ರ ಅಲ್ಲಿಯೇ ಉಳಿದ. ಎಷ್ಟೇ ಪ್ರಯತ್ನಿಸಿದರೂ ಅವಳನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ ಹೋಯಿತು. ಶಾಸ್ತ್ರಾನುಗುಣವಾಗಿ ಅವಳ ಅಂತಿಮ ಸಂಸ್ಕಾರಗಳನ್ನು ನೆರವೇರಿಸಿಯೇ ಅವನು ಅಲ್ಲಿಂದ ಹಿಂದಿರುಗಿದ.

ಈ ಕಾರಣದಿಂದಾಗಿಯೇ ಸಭ್ಯರೆನಿಸಿಕೊಂಡಿದ್ದಂಥವರು ಅವನನ್ನು ಚರಿತ್ರಹೀನನೆಂದೂ, ಅಸ್ಪೃಶ್ಯನೆಂದೂ ಭಾವಿಸುತ್ತಿದ್ದರು, ಅವನನ್ನು ಭೇಟಿಯಾಗಲು ಎಂದೂ ಒಪ್ಪುತ್ತಿರಲಿಲ್ಲ. ಇದಕ್ಕಾಗಿ ಅವನೂ ಎಂದೂ ಪ್ರಯತ್ನಪಡಲಿಲ್ಲ. ಆದರೆ, ಅವನ ವೈಯಕ್ತಿಕ ಬದುಕಿಗೆ ಸಂಬಂಧಿಸಿದಂತೆ ಹೇಳಬಹುದಾದರೆ, ಗೃಹಸ್ಥ ಜೀವನದಲ್ಲಿ ಕಾಲಿರಿಸಿದ ಮೇಲೆ ಅವನ ಸೌಂದರ್ಯ ಪ್ರಜ್ಞೆ ಮತ್ತೆ ಎಚ್ಚರಗೊಂಡಿತ್ತು. ಪ್ರೀತಿ ಎಂಬುದು ಅವನ ಮನೆಯಲ್ಲಿ ಹೂವಿನ ಸುವಾಸನೆಯನ್ನು ಹರಡಿತ್ತು. ಪುಸ್ತಕಗಳ ವಿಷಯದಲ್ಲಿ ಅವನಿಗೆ ಪ್ರೀತಿ ಇತ್ತು, ಹೂವುಗಳ ವಿಷಯದಲ್ಲಿ ಪ್ರೀತಿ ಇತ್ತು. ಪಶು-ಪಕ್ಷಿಗಳ ವಿಷಯದಲ್ಲಿ ಪ್ರೀತಿ ಇತ್ತು. ಆ ಪ್ರೀತಿ ಈಗ ಸುವ್ಯವಸ್ಥಿತವೂ ಸಾಂದ್ರವೂ ಆಗಿ ಪರಿಣಮಿಸಿತ್ತು. ಹಿರಣ್ಮಯಿ ದೇವಿಯಿಂದಾಗಿ ಈ ಹಿಂದೂವಿನ ಮನೆಯಲ್ಲಿ ತುಳಸೀ ಗಿಡವೂ ಬಂದುಬಿಟ್ಟಿತು.

ಹಕ್ಕಿಗಳೂ ಅವನ ಬಳಿಯಲ್ಲಿ ಯಾವಾಗಲೂ ಇರುತ್ತಿದ್ದುವು. ಒಂದು ಮೈನಾ ಹಕ್ಕಿ ಇತ್ತು. ಅದನ್ನು ಅವನು ಪ್ರೀತಿಯಿಂದ 'ಮೌನಾ' ಎಂದು ಕರೆಯುತ್ತಿದ್ದ. ಇದ್ದಕ್ಕಿದ್ದಂತೆ ಒಂದು ದಿನ ಅದು ಸತ್ತು ಹೋಯಿತು. ತಮ್ಮ ಮಕ್ಕಳು ತೀರಿಕೊಂಡರೆ ಯಾರಿಗಾದರೂ ಎಷ್ಟು ದುಃಖವಾಗುತ್ತದೆಯೋ, ಅಷ್ಟೇ ದುಃಖ ಆಗ ಅವನಿಗಾಯಿತು. ಆಮೇಲೆ ಅವನು ಸಿಂಗಪುರದ ನೂರಿ ಹಕ್ಕಿಯೊಂದನ್ನು ತೆಗೆದುಕೊಂಡು ಬಂದ. 'ಬಾಟೂ ಬಾಬಾ' ಎಂದು ಅದಕ್ಕೆ ಪ್ರೀತಿಯಿಂದ ನಾಮಕರಣ ಮಾಡಿದ. ಅದಕ್ಕೆ ಮಾತನಾಡುವುದನ್ನು ಕಲಿಸಿದ. ರಾತ್ರಿ ಮತ್ತೆ ಮತ್ತೆ ಎದ್ದು ಕುಳಿತು ಅದಕ್ಕೆ ಉಣಿಸನ್ನು ತಿನ್ನಿಸುತ್ತಿದ್ದ. "ಹಕ್ಕಿಗೆ ರಾತ್ರಿಯ ಹೊತ್ತು ತಿನ್ನಿಸುತ್ತಾರೆಯೆ ?" ಎಂದು ಅವನ ಮಿತ್ರರು ಕೇಳುತ್ತಿದ್ದರು.

ಶರತ್ ಉತ್ತರಿಸುತ್ತಿದ್ದ: "ಹಕ್ಕಿಗಳು ಕಾಡಿನಲ್ಲಿರುತ್ತವೆ. ಮನಸ್ಸಿಗೆ ಬಂದಂತೆ ತಿನ್ನುತ್ತಿರುತ್ತವೆ. ಆದರೆ, ಅವು ನಮ್ಮ ಲೋಕಕ್ಕೆ ಬಂದು ವಾಸ ಮಾಡತೊಡಗಿದಾಗ, ನಮ್ಮಂತೆಯೇ ಊಟ ತಿಂಡಿ ತಿನ್ನಬೇಕಾಗುತ್ತದೆ. ಅವುಗಳಿಗೆ ನಾವೇ ನಮ್ಮ ಕೈಯಾರೆ ತಿನ್ನಿಸದಿದ್ದರೆ ಅವುಗಳಿಗೆ ಕೆಟ್ಟದ್ದೆನಿಸುತ್ತದೆ. ಅವುಗಳನ್ನು ಪ್ರೀತಿಸುವುದು ನಮಗೆ ಸಾಧ್ಯವಿಲ್ಲದಿದ್ದರೆ, ಅವುಗಳನ್ನು ಪಂಜರದಲ್ಲಿ ಕೂಡಿ ಹಾಕುವುದರಿಂದ ಆಗುವ ಪ್ರಯೋಜನವಾದರೂ ಏನು ?"

ಆ ಹಕ್ಕಿ ರಾತ್ರಿಯ ಹೊತ್ತು ತುಂಬ ಚೆನ್ನಾಗಿ ಹಾಡುತ್ತಲೂ ಇತ್ತು. ಅವನ್ನು

ಕೇಳಿದ ನೆರೆಹೊರೆಯುವರು, "ಶರತ್ ಬಾಬೂ, ರಾತ್ರಿ ನಿಮ್ಮ ಮನೆಯಲ್ಲಿ ಯಾರೋ 'ಸಖಿ ರೇ ಕೀ ಆರ್ ಬೋಲಿಬ ಆಮಿ' ಗೀತೆಯನ್ನು ಹಾಡುತ್ತಿದ್ದರಲ್ಲ! ಸ್ವರ ತುಂಬ ಇಂಪಾಗಿತ್ತು" ಎಂದು ಕೇಳುತ್ತಿದ್ದರು.

ಶರತ್ ನಕ್ಕು ಹೇಳುತ್ತಿದ್ದ: "ಅದೇ! ಬಾಟೂ ಬಾಬಾ ಹಾಡುತ್ತಾನಲ್ಲ."

ಮನೆಗೆ ಯಾರಾದರೂ ಬಂದಾಗ ಬಾಟೂ ಬಾಬಾ ಕೂಡಲೇ ಕೇಳುತ್ತಿದ್ದ: "ಯಾರು ಸ್ವಾಮಿ, ಯಾರು ನೀವು ?"

ಶರತ್ ಉತ್ತರಿಸುತ್ತಿದ್ದ: "ನಾನು."

ಆಗ ಬಾಟೂ ಬಾಬಾ ಕೂಗು ಹಾಕುತ್ತಿದ್ದ "ಬಾಟೂ ಟೂ ಟೂ ಟೂ."

ಶರತ್ ಈ ಹಕ್ಕಿಗಾಗಿ ಬೆಳ್ಳಿಯ ಕಂಬವನ್ನು ಚಿನ್ನದ ಸರಪಳಿಯನ್ನೂ, ಸ್ಪ್ರಿಂಗುಗಳನ್ನೊಳಗೊಂಡಿದ್ದ ಚಿನ್ನದ ಕಡಗವನ್ನೂ ಮಾಡಿಸಿದ್ದ. ತನ್ನ ಹಾಸಿಗೆಯ ಬಳಿಯೇ ಅದಕ್ಕೂ ಹಾಸಿಗೆಯನ್ನು ಒದಗಿಸಿದ್ದ. ಅದರ ಮೇಲೆ ತುಂಬ ಬೆಲೆಬಾಳು ವಂಥ ರೇಶ್ಮೆಯ ತಲೆದಿಂಬು, ಚಿಕ್ಕಗಾದಿ ಹಾಗೂ ಸೊಳ್ಳೆಯ ಪರದೆಗಳನ್ನೂ ಒದಗಿಸಲಾಗಿತ್ತು. ರಾತ್ರಿಯ ಹೊತ್ತು ಶರತ್ ಸರಪಳಿಯನ್ನು ಬಿಚ್ಚಿಬಿಡುತ್ತಿದ್ದ. ಆಗ ಬಾಟೂ ಬಾಬಾ ತನ್ನ ಕಂಬದ ಮೇಲಿನಿಂದ ಇಳಿದು ಬರುತ್ತಿದ್ದ. ಸೊಳ್ಳೆಯ ಪರದೆಯೊಳಗೆ ನುಸುಳಿಕೊಂಡು ತನ್ನ ಹಾಸಿಗೆಯ ಮೇಲೆ ಮಲಗುತ್ತಿದ್ದ.

ಈ ಬಾಟೂಬಾಬಾ ಎಷ್ಟು ಮುದ್ದಿನ ಹಕ್ಕಿಯಾಗಿತ್ತೋ ಅಷ್ಟೇ ಪ್ರಚಂಡ ಹಕ್ಕಿಯೂ ಆಗಿತ್ತು. ಶರತ್ ಅದರ ಕೊಕ್ಕಿಗೆ ಮುತ್ತುಕೊಟ್ಟರೆ, ಅದು ಅವನ ಕೊರಳಿನ ಬಳಿ ಬಂದು ಕುಳಿತು ತನ್ನ ತಲೆಯನ್ನು ಉಜ್ಜುತ್ತಿತ್ತು. ಅದೇ ಬೇರೆ ಯಾರಾದರೂ ಹೀಗೆ ಮಾಡಿದರೆ 'ಏಳನೆಯ ಮನೆ'ಯ ಧ್ವನಿಯಲ್ಲಿ ಅರಚುತ್ತ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಿತ್ತು. ಅವರ ಕೈಯನ್ನು ಕಚ್ಚಿಬಿಡುತ್ತಿತ್ತು. ಹೀಗಾಗಿ, ಹೊಸಬರಾರೂ ಮನೆಗೆ ಬರಲು ಸಾಧ್ಯವಾಗುತ್ತಿರಲಿಲ್ಲ. ಬಾಗಿಲು ಕಾಯುವ ನಾಯಿಯಂತೆ, ಅದು ಯಾವಾಗಲೂ ಎಚ್ಚರದಿಂದಿರುತ್ತಿತ್ತು. ಒಂದು ದಿವಸ ಮನೆಯಲ್ಲಿ ಯಾರೂ ಇಲ್ಲದಿದ್ದಾಗ ಕೆಲಸದವಳು ಮನೆಯೊಳಗೆ ನುಸುಳಿ ತುಪ್ಪವನ್ನು ಕದಿಯುವ ಪ್ರಯತ್ನದಲ್ಲಿ ತೊಡಗಿದಳು. ಯಾರ ಕಣ್ಣಿಗೂ ಇದು ಬೀಳುತ್ತಿಲ್ಲವೆಂಬುದು ಆಕೆಯ ಕಲ್ಪನೆಯಾಗಿತ್ತು. ಆದರೆ ಬಾಟೂಬಾಬ ಕೂಡಲೇ ಅರಚಿಕೊಳ್ಳತೊಡಗಿದ. ಇದು ಯಾವಾಗಲೂ ಅಬ್ಬರಿಸುತ್ತಿರುತ್ತದೆ ಎಂಬುದು ನೆರೆಹೊರೆಯವರಿಗೆಲ್ಲ ಗೊತ್ತಿತ್ತು. ಆದ್ದರಿಂದ, ಯಾರೂ ಅದರತ್ತ ಗಮನಕೊಡಲಿಲ್ಲ. ಕೆಲಸದವಳೂ ಸಮಾಧಾನದಿಂದಿದ್ದಳು. ಈ ಮಧ್ಯೆ ಬಾಟೂ ಬಾಬಾ ಕೊಕ್ಕಿನಿಂದ ಕುಟುಕಿ ಕುಟುಕಿ ಸರಪಳಿಯನ್ನು ತುಂಡರಿಸಿ ಹೊರಬಂದು, ಕೆಲಸದವಳ ಮೇಲೆ ಆಕ್ರಮಣವನ್ನೆಸಗಿತು. ಅದು ಎಷ್ಟು ಜೋರಾಗಿ ಕುಕ್ಕತೊಡಗಿತೆಂದರೆ, "ಅಯ್ಯೋ, ಕೊಂದುಬಿಟ್ಟೆಯಲ್ಲೋ, ಬಾಬಾ" ಎಂದು ಬೊಬ್ಬೆ ಹಾಕತೊಡಗಿದಳು.

ಆದರೆ ಅಲ್ಲಿಂದ ಓಡಿ ಹೋಗಲು ಬಾಟೂ ಬಾಬಾ ಅವಳಿಗೆ ಅವಕಾಶ ಕೊಡಲಿಲ್ಲ. ಆ ಹೊತ್ತಿಗೆ ಸರಿಯಾಗಿ ಶರತ್ ಮನೆಗೆ ಹಿಂದಿರುಗಿದ. ಕೆಲಸದವಳು ಮಾಲು ಸಮೇತ ಸಿಕ್ಕಿಬಿದ್ದಳು.

ಒಂದು ದಿನ ಈ ಬಾಟೂ ಬಾಬಾ ಸತ್ತು ಹೋಯಿತು. ಚಿನ್ನದ ಸರಪಳಿ ಅದರ ಕತ್ತಿಗೆ ನೇಣು ಬಿಗಿದಿತ್ತು. ಶರತ್ ತುಂಬ ದುಃಖಿತನಾದ. ನದಿಯ ತೀರಕ್ಕೆ ಅದನ್ನು ತೆಗೆದುಕೊಂಡು ಹೋಗಿ, ವಿಧಿಪೂರ್ವಕವಾಗಿ ಅದರ ದಹನ ಸಂಸ್ಕಾರವನ್ನು ನಡೆಸಿದ. ಅನೇಕ ದಿವಸಗಳವರೆಗೆ ಮನೆಯಿಂದ ಹೊರಗೆ ಹೊರಡಲೇ ಇಲ್ಲ. ಉಣ್ಣಲೂ ಇಲ್ಲ, ತಿನ್ನಲೂ ಇಲ್ಲ. ಹೊರಬಂದಾಗ ದುಃಖದಿಂದಾಗಿ ಅವನ ಹೃದಯ ಭಾರವಾಗಿತ್ತು. ಕೂದಲು ಕೆದರಿತ್ತು. "ಏನಾಯಿತು, ಶರತ್ ಬಾಬೂ ? ನೀವೇಕೆ ಇಷ್ಟು ದುಃಖಿಗಳಾಗಿದ್ದೀರಿ ?" ಎಂದು ಗೆಳೆಯರು ಕೇಳಿದರು.

ಶರತ್ ಉತ್ತರಿಸಿದ: "ನನ್ನ ಮಗು ಸತ್ತು ಹೋಯಿತು."

ಶರತ್ ಒಂದು ನಾಯಿಯನ್ನು ಸಾಕಿಕೊಂಡಿದ್ದ. ಅದು ಶುದ್ಧಾಂಗವಾಗಿ ಕಂತ್ರಿ ನಾಯಿಯಾಗಿತ್ತು, ಮೇಲಾಗಿ ತುಂಬ ಕುರೂಪಿ ಕೂಡ, ಜೊತೆಗೆ ಅನಾಗರಿಕ ವರ್ತನೆಯದು. ಆದರೆ, ಫಕೀರನೊಬ್ಬ ಹಿರಣ್ಮಯಿ ದೇವಿಯೊಂದಿಗೆ ಹೀಗೆಂದು ಹೇಳಿದ್ದ: "ಈ ನಾಯಿಯನ್ನು ಸಾಕಿಕೊಂಡರೆ ನಿಮ್ಮ ಭಾಗ್ಯ ಬೆಳಗುತ್ತದೆ."

ನಾಯಿಯಿಂದಾಗಿಯೋ ಅಥವಾ ಬೇರಾವ ಕಾರಣದಿಂದಲೋ, ಅವರ ಭಾಗ್ಯವೇನೋ ಖಂಡಿತವಾಗಿಯೂ ಬೆಳಗಿತು. ಆದ್ದರಿಂದ, ಆಕೆ ತುಂಬ ಪ್ರೀತಿಯಿಂದ ಅದಕ್ಕೆ 'ವಂಶೀವದನ' ಎಂದು ಹೆಸರಿಟ್ಟಳು. ಆದರೆ, ಪ್ರೀತಿಗೆ ಇಷ್ಟು ಸುಂದರವಾದ ಹೆಸರಿನ ಅಗತ್ಯವಿರುತ್ತದೆಯೆ ! ಯಾವುದೋ ಒಂದು ಚಿಕ್ಕ ಪುಟ್ಟ, ಅಡ್ಡಾದಿಡ್ಡ ಹೆಸರೇ ಪ್ರೀತಿಯ ಪ್ರತೀಕವಾಗಿ ಇರಬಲ್ಲದು. ಹೀಗಾಗಿ, ಶರತ್ ಅದಕ್ಕೆ 'ಭೇಲಿ' (ಅಂದರೆ ಬೆಲ್ಲದಮುದ್ದೆ ಎಂಬ ಅರ್ಥದ) ಹೆಸರನ್ನಿಟ್ಟಿದ್ದ. ಅದರ ವಿಷಯದಲ್ಲಿ ಅವನು ತೋರುತ್ತಿದ್ದ ಪ್ರೀತಿಗೆ ಮೇರೆಯೇ ಇರಲಿಲ್ಲ. ಅವನ ಹೃದಯದಲ್ಲಿ ಮಡುಗಟ್ಟಿದ್ದ ಪ್ರೀತಿ, ಹೊರಗೆ ಹರಿದು ಬರುವ ಮಾರ್ಗವನ್ನು ಒಂದೇ ಸಮನೆ ಹುಡುಕುತ್ತಲೇ ಇತ್ತು. ಲೋಕ ಪ್ರೀತಿಸುವುದು ಶ್ರೀಮಂತವಾಗಿರುವುದನ್ನು ಸುಂದರವಾಗಿರುವುದನ್ನು. ಆದರೆ, ಎಲ್ಲವನ್ನೂ ಕಳೆದುಕೊಂಡಿರುವಂಥವರನ್ನು, ಸುಂದರವಾಗಿಲ್ಲದವರನ್ನು ಮಾತ್ರವೇ ಪ್ರೀತಿಸುವುದಾಗಿ ಅವನು ತನ್ನ ಮನಸ್ಸಿನಲ್ಲಿಯೇ ತೀರ್ಮಾನಿಸಿದ.

## 9

'ಚರಿತ್ರಹೀನ' ಬಹುಶಃ ಕೊನೆಯ ಹಂತದಲ್ಲಿತ್ತು. 'ನಾರಿಯ ಇತಿಹಾಸ'ವೆಂಬ ಪ್ರಬಂಧವೂ ಕೊನೆಗೊಂಡಿತ್ತು. ಇವುಗಳನ್ನೇಕೆ ಪ್ರಕಟಿಸಬಾರದು ಎಂಬ ಆಲೋಚನೆ ಇದೇ ಮೊದಲಬಾರಿ ಅವನ ಮನಸ್ಸಿನಲ್ಲಿ ಮೂಡಿತು. ಭಾಗಲಪುರದ ಗೆಳೆಯರ ಪುಸ್ತಕಗಳೆಲ್ಲ ಅಚ್ಚಾಗುತ್ತಿವೆ. ಇವು ಅವುಗಳಿಗಿಂತ ಯಾವ ರೀತಿಯಲ್ಲಿಯೂ ಕಳಪೆಯಾದವಲ್ಲ. ಆದರೆ ಯಾರಿಗೆ ಬರೆಯುವುದು ಸೌರೀಂದ್ರನಿಗೋ, ಸುರೇಂದ್ರನಿಗೋ, ವಿಭೂತಿ ಭೂಷಣನಿಗೋ ಅಥವಾ ಪ್ರಮಥಭಟ್ಟನಿಗೋ ?

ಪ್ರಮಥಭಟ್ಟನ ವಿಷಯದಲ್ಲಿ ಅವನಿಗೆ ಎಲ್ಲರಿಗಿಂತಲೂ ಹೆಚ್ಚು ನಂಬಿಕೆ ಇತ್ತು. ಆದರೆ ಆಗಲೇ ಎಷ್ಟೋ ವರ್ಷಗಳಾಗಿ ಬಿಟ್ಟಿದ್ದುವು. ಅವನ ಬಗ್ಗೆ ಏನೊಂದೂ

ಗೊತ್ತಿರಲಿಲ್ಲ. ಕಲ್ಕತ್ತೆಯಲ್ಲಿಯೇ ಇದ್ದಾನೋ ಅಥವಾ..... ಎಂಬುದೂ ತಿಳಿದಿರಲಿಲ್ಲ.

ಅವನು ಯಾವುದೋ ಒಂದು ತೀರ್ಮಾನಕ್ಕೆ ಬರುವಷ್ಟರಲ್ಲಿ, ಇದ್ದಕ್ಕಿದ್ದಂತೆ ಒಂದು ದಿವಸ ಸಂಜೆ ಅವನ ಮನೆಗೆ ಬೆಂಕಿ ಬಿತ್ತು. ಕೆಳ ಅಂತಸ್ತಿನಲ್ಲಿ ಒಬ್ಬ ಅಗಸರವನು ವಾಸವಾಗಿದ್ದ. ಬೆಂಕಿ ಬಿದ್ದಾಗ ಎಲ್ಲರೂ ಮಲಗಿ ನಿದ್ರಿಸುತ್ತಿದ್ದರು. ನೆರೆಹೊರೆಯ ಆರ್ತನಾದ ಕಿವಿಗೆ ಬಿದ್ದಾಗಲೇ ಅವನು ಕಣ್ಣುಬಿಟ್ಟದ್ದು. ಅದನ್ನು ನೋಡಿ ಅವನು ಹತಪ್ರಭನಾದ. ಬೆಂಕಿ ಆಗಲೇ ಸಾಕಷ್ಟು ಹರಡಿಕೊಂಡಿತ್ತು. ಮೊಟ್ಟಮೊದಲು ಅವನು ಹಿರಣ್ಮಯಿದೇವಿ, ನಾಯಿ ಮತ್ತು ಹಕ್ಕಿಗಳನ್ನು ನಿರುಪದ್ರವಾಗಿದ್ದ ನೆಲೆಗೆ ತಲುಪಿಸಿ ಬಂದ. ಆಮೇಲೆ ಅತ್ಯಂತ ದುರ್ಲಭವಾಗಿದ್ದ ಹಾಗೂ ತುಂಬ ಪ್ರಯೋಜನಕಾರಿಯಾಗಿದ್ದಂಥ ಪುಸ್ತಕಗಳನ್ನು ಬಟ್ಟೆಗಳನ್ನೂ ಕಬ್ಬಿಣದ ಸಂದೂಕದಲ್ಲಿ ಹಾಕಿಕೊಂಡು ಕೆಳಗೆ ಓಡಿದ. ಆದರೆ, ಆ ಹೊತ್ತಿಗಾಗಲೇ ಬೆಂಕಿ ಮೇಲುಗಡೆಗೂ ಚಾಚಿಕೊಂಡಿತ್ತು. ಮರದ ಮನೆ ಧಗಧಗನೆ ಹತ್ತಿಕೊಂಡು ಉರಿಯತೊಡಗಿತ್ತು. ಇದನ್ನು ಕಂಡು ಅವನು ಆ ಸಂದೂಕವನ್ನು ಎಸೆದು ಬಿಟ್ಟ ಹಾಗೂ ಕೆಳಕ್ಕೆ ಹಾರಿದ. ಒಂದು ಮೂಲೆಯಲ್ಲಿ ನಿಂತುಕೊಂಡು ಅಗ್ನಿದಹನ ಲೀಲೆಯನ್ನು ನೋಡತೊಡಗಿದ. ಎದುರಿಗಿದ್ದ ಮೈದಾನದಲ್ಲಿ ಕುಳಿತು ವಾಯುಸೇವನೆ ಮಾಡುತ್ತಿದ್ದ ಅವನ ಕೆಲವು ಮಿತ್ರರು ಅಲ್ಲಿಗೆ ಓಡಿಬಂದರು. ತನ್ನ ಮನೆ ಹತ್ತಿಕೊಂಡು ಉರಿಯುತ್ತಿರುವುದನ್ನು ರೆಪ್ಪೆ ಹೊಡೆಯದೆ ನೋಡುತ್ತ ನಿಂತಿದ್ದ ಶರತ್‌ನನ್ನು ಅವರು ಕಂಡರು. ಸಹಾನುಭೂತಿ ತುಂಬಿ ಬಂದ ಹೃದಯದಿಂದ ಗೆಳೆಯನೊಬ್ಬ ಹೇಳಿದ: “ಶರತ್, ಮನೆಯ ಸಾಮಾನುಗಳೆಲ್ಲ ಅಲ್ಲಿಯೇ ಉಳಿದುಬಿಟ್ಟವೆ. ಪುಸ್ತಕಗಳು ತೈಲ ಚಿತ್ರಗಳು, ಹಸ್ತಪ್ರತಿಗಳು ಎಲ್ಲ ಹಾಳಾಗಿಬಿಟ್ಟವಲ್ಲ!”

ನಿರ್ಲಿಪ್ತ ಭಾವನೆಯಿಂದ ಶರತ್ ಉತ್ತರಿಸಿದ: “ಹೌದು, ಹಾಳಾಯಿತು. ಈಗ ಏನು ತಾನೆ ಮಾಡಲು ಸಾಧ್ಯ?”

ವಿದೇಶದ ಮಿತ್ರನೊಬ್ಬನ ಇಡೀ ಗ್ರಂಥ ಭಂಡಾರವನ್ನು ಅವನು ಸ್ವಲ್ಪ ಹಣ ಕೊಟ್ಟುಕೊಂಡುಕೊಂಡಿದ್ದ. ತುಂಬ ಶ್ರಮದಿಂದ ಮನೆಯನ್ನು ಸಜ್ಜುಗೊಳಿಸಿದ್ದ. ತುಂಬ ಶ್ರದ್ಧೆಯಿಂದ ತೈಲಚಿತ್ರಗಳನ್ನು ರಚಿಸಿದ್ದ. ದುರದೃಷ್ಟಶಾಲಿನಿಯರಾದ ನಾರಿಯರ ಇತಿಹಾಸವನ್ನು, 'ಚರಿತ್ರ ಹೀನ' ಕಾದಂಬರಿಯನ್ನು ಅದೆಷ್ಟು ವರ್ಷಗಳಿಂದ ಅವನು ಬರೆಯುತ್ತ ಬಂದಿದ್ದನೋ, ಎಲ್ಲವೂ ತನ್ನ ಕಣ್ಣೆದುರಿನಲ್ಲಿಯೇ ಭಸ್ಮವಾಗುತ್ತಿರುವುದನ್ನು ಕಂಡ ಕಂಡೂ ಮೌನವಾಗಿ ನಿಂತೇ ಇದ್ದ. ಉಳಿಸಿಕೊಳ್ಳಲು ಸಾಧ್ಯವಾದದ್ದು ಕೆಲವು ಪುಸ್ತಕಗಳನ್ನು, ತನ್ನ ಹೆಂಡತಿಯನ್ನು, ಹಕ್ಕಿಯನ್ನು ಮತ್ತು ನಾಯಿಯನ್ನು ಮಾತ್ರವೇ.

ಆ ಹೊತ್ತಿನಲ್ಲಿಯೇ ಆ ಆಗಸನ ಆರ್ತನಾದ ಕೇಳಿ ಬಂತು. ಪ್ರಾಣಭಯದಿಂದಾಗಿ, ತನ್ನ ಕುರಿಯನ್ನು ಬಿಚ್ಚಿಬಿಡುವುದನ್ನು ಅವನು ಮರೆತುಬಿಟ್ಟಿದ್ದ. ಶರತ್ ಕೂಡಲೇ ಓಡಿದ.

ಯಾರ ಅಡ್ಡಿಯನ್ನೂ ಅವನು ಲೆಕ್ಕಿಸಲಿಲ್ಲ. ಉರಿಯುತ್ತಿದ್ದ ಮನೆಯೊಳಗೆ ನುಗ್ಗಿದ. ಎಲ್ಲರೂ ಅಯ್ಯೋ, ಅಯ್ಯೋ ಎಂದು ಪರಿತಪಿಸತೊಡಗಿದರು. ಆದರೆ,

ಅದೇ ಕ್ಷಣದಲ್ಲಿಯೇ ಬೆಂಕಿ ಮತ್ತು ಹೊಗೆಯ ಆವರಣದ ಮಧ್ಯದಿಂದ ಕುರಿಮರಿಯನ್ನು ಎದೆಗೆ ಅವುಚಿಕೊಂಡು ಮಿಂಚಿನ ವೇಗದಲ್ಲಿ ಅವನು ಹೊರಬಂದ. ಆ ಕ್ಷಣಕ್ಕೆ ಸರಿಯಾಗಿ, ಉರಿಯುತ್ತಿದ್ದ ಆ ಮನೆ ಭಾರಿ ಸದ್ದಿನೊಂದಿಗೆ ಕುಸಿದುಬಿತ್ತು.

ಇನ್ನು ರಕ್ಷಿಸಿಡಲು ಏನೂ ಉಳಿದಿರಲಿಲ್ಲ. ಈ ಅಗ್ನಿದಹನದ ಬಗೆಗೂ ಅನೇಕರು ಅನೇಕ ಮಾತುಗಳನ್ನು ಹೇಳಿದ್ದಾರೆ. ಆದರೆ, ಇದರ ಬಗ್ಗೆ ಉಲ್ಲೇಖಿಸಿ, ಬಾಲ್ಯದ ತನ್ನ ಪ್ರೀತಿಯ ಗೆಳೆಯನಾಗಿದ್ದ ಪ್ರಮಥನಾಥ ಭಟ್ಟಾಚಾರ್ಯನಿಗೆ ಅವನು ಎರಡು ಕಾಗದಗಳನ್ನು ಬರೆದಿದ್ದ. ಇದಕ್ಕೆ ಮೊದಲು ಅವನಿಗೆ ಎಂದಾದರೂ ಬರೆದಿದ್ದನೋ ಇಲ್ಲವೋ ಎಂಬುದಕ್ಕೆ ಯಾವುದೇ ಅಸಂದಿಗ್ಧ ಸಾಕ್ಷಿ ದೊರೆಯುವುದಿಲ್ಲ. ಅನೇಕ ವರ್ಷಗಳ ಬಳಿಕ ಅವನಿಗೆ ಬರೆಯುತ್ತಿದ್ದನೆಂಬುದು ಈ ಕಾಗದಗಳಿಂದಲೂ ಗೊತ್ತಾಗುವಂತೆ ತೋರುತ್ತದೆ. ಈ ಅಗ್ನಿದಹನ ನಡೆದ ಒಂದು ತಿಂಗಳ ತರುವಾಯ[1] ಅವನು ಮೊದಲನೆಯ ಪತ್ರವನ್ನು ಬರೆದಿದ್ದ.

"ಈ ನಾಡಿಗೆ ಮಧ್ಯೆ ಮಧ್ಯೆ ಬಂದು ಹೋಗುತ್ತಿದ್ದೇನೆಂಬ ಬಗ್ಗೆ ಹಾಗೂ ಮುಂದೆಯೂ ಬರುತ್ತಿರಬೇಕೆಂಬ ಆಸೆಯನ್ನಿರಿಸಿಕೊಂಡಿದ್ದೇನೆಂಬ ಬಗ್ಗೆ ಪ್ರಮಥನಿಗೆ ಸೂಚನೆ ಕೊಡುತ್ತಿದ್ದೇನೆ. ಹಿಂದಿನ ಸಲ ಬಂದಿದ್ದಾಗ ಎರಡು ಸಲ ಪ್ರಮಥನ ನೆಲೆಯನ್ನು ಪತ್ತೆ ಹಚ್ಚಲು ಪ್ರಯತ್ನಿಸಿದೆ. ಆದರೂ ಸಾಧ್ಯವಾಗಲಿಲ್ಲ. ಈ ಕಾರಣದಿಂದಾಗಿಯೇ ಅವನನ್ನು ಭೇಟಿಯಾಗಲು ಸಾಧ್ಯವಾಗಲಿಲ್ಲ.

ನನ್ನ ಆರೋಗ್ಯ ಚೆನ್ನಾಗಿಲ್ಲ. ಏಕೆಂದರೆ, ಎರಡು ವರ್ಷಗಳ ಹಿಂದೆ ಹೃದಯ ರೋಗದಿಂದಾಗಿ ಬಹಳ ಕಷ್ಟಪಟ್ಟೆ. ಇಂದೂ ಬಹುಶಃ ನನ್ನ ಆರೋಗ್ಯ ಸರಿಹೋಗಿಲ್ಲ. ಆದರೂ, ನೋವು ಕಡಿಮೆಯಾಗಿದೆ. ಫೆಬ್ರುವರಿ 5 ರಂದು ರಾತ್ರಿ ನನ್ನ ಮನೆ ಮಠವೆಲ್ಲ ಉರಿದು ಬೂದಿಯಾಯಿತು. ಮನೆ ಸುಟ್ಟುಹೋದುದರಿಂದ ನಾನು ತುಂಬ ಕಷ್ಟಕ್ಕೆ ಸಿಕ್ಕಿಕೊಂಡಿದ್ದೇನೆ. ಒಂದೆರಡು ಸಾವಿರ ರೂಪಾಯಿಗಳಷ್ಟು ಬೆಲೆ ಬಾಳುವ ವಸ್ತುಗಳೇನೋ ಹಾಳಾದುವು. ಅಮೂಲ್ಯವಾದಂಥ ಒಂದು ಗ್ರಂಥಭಂಡಾರ ಹಾಗೂ ಹಸ್ತಪ್ರತಿಗಳು ಕೂಡ ನಾಶವಾಗಿಬಿಟ್ಟುವು. ಅವುಗಳನ್ನು ಈ ತಿಂಗಳ ಕೊನೆಯ ಹೊತ್ತಿಗೆ ಅಚ್ಚುಕೂಟಕ್ಕೆ ಕಳಿಸಬೇಕೆಂದು ಮನಸ್ಸಿನಲ್ಲಿಯೇ ಆಲೋಚಿಸಿದ್ದೆ. ಈ ಹೊರೆಯನ್ನು ಯಾರ ತಲೆಯ ಮೇಲೆ ಹೊರಿಸಲಿ ಎಂದು ಯೋಚಿಸಿದಾಗ ಅನೇಕ ಸಲ ಪ್ರಮಥನ ಹೆಸರೇ ಮನಸ್ಸಿನಲ್ಲಿ ಸುಳಿಯಿತು. ಆದರೆ ಅವನಿನ್ನೂ ಕಲ್ಕತ್ತೆಯಲ್ಲಿಯೇ ಇರಬಹುದೆಂಬ ವಿಚಾರ ಮನಸ್ಸಿನಲ್ಲಿ ಮೂಡಲೇ ಇಲ್ಲ. ಅಲ್ಲಿಯ ಎಲ್ಲ ಸುದ್ದಿಗಳೂ ಒಳ್ಳೆಯವೇ ಆಗಿರುತ್ತವೆಂದು ನಂಬಿದ್ದೇನೆ. ಮೇ ತಿಂಗಳಲ್ಲಿ ಮತ್ತೆ ಕಲ್ಕತ್ತೆಗೆ ಬರಲಿದ್ದೇನೆ."

ಹನ್ನೆರಡು ದಿವಸಗಳ ಬಳಿಕ[2] ಮತ್ತೆ ಎರಡನೆಯ ಪತ್ರವನ್ನು ಬರೆದ:

"ಪ್ರಮಥ್,

ನಿನ್ನ ಕಾಗದ ಸಿಕ್ಕಿದ ಕೂಡಲೇ ಅಂದೇ ಉತ್ತರವನ್ನು ಬರೆಯುತ್ತೇನೆ ಎಂಬಂತೆ ಆಗಲೇ ಇಲ್ಲ. ನನ್ನ ಸ್ವಭಾವವನ್ನು ಬಲ್ಲವರ ಮುಂದೆ ಇದಕ್ಕಿಂತ ಹೆಚ್ಚಾಗಿ

---

1. 11 ಮಾರ್ಚ್ 1912.
2. 22 ಮಾರ್ಚ್ 1912.

ಹೇಳುವುದು ವ್ಯರ್ಥ. ನಿನಗೆ ಅನೇಕ ಸಲ ನನ್ನ ನೆನಪು ಬಂದಿದೆ ಎಂಬುದು ನನಗೆ ಗೊತ್ತು. ಏಕೆಂದರೆ, ಯಾರನ್ನು ನೆನಪಿಸಿಕೊಳ್ಳುವುದರಿಂದ ನನಗೆ ಯಾವುದೇ ಪ್ರಯೋಜನವೂ ಇಲ್ಲವೋ, ಅಂಥವರೂ ನನ್ನನ್ನು ನೆನಪಿಸಿಕೊಳ್ಳುವಾಗ, ನೀನು ಖಂಡಿತವಾಗಿಯೂ ನನ್ನನ್ನು ನೆನಪಿಸಿಕೊಂಡಿರುತ್ತೀಯೆ. ನನ್ನ ಭಾಗ್ಯ ವಿಧಾತ ನಾನು ಇದುವರೆಗೆ ಅನುಭವಿಸಿದ ಶಾಸ್ತಿಗಳೆಲ್ಲಕ್ಕಿಂತಲೂ ಮಿಗಿಲಾದ ಶಾಸ್ತಿಯನ್ನು ನನ್ನ ಹಣೆಯಲ್ಲಿ ಬರೆದಿದ್ದಾನೆಂಬುದು, ನನ್ನ ಹುಟ್ಟನಿಂದಲೇ ನನಗೆ ತೋರುತ್ತಿದೆ. ನನ್ನ ಎಲ್ಲ ಪರಿಚಿತರು, ಆತ್ಮೀಯರು, ಸ್ವಜನರು, ಬಂಧು-ಬಾಂಧವರು ನನ್ನನ್ನು ಮರೆತುಬಿಟ್ಟಿದ್ದಾರೆಂದು ಭಾವಿಸಲು ನನಗೆ ಸಾಧ್ಯವಾಗಿದ್ದರೆ ನಾನು ಸುಖಿಯಾಗಿರುತ್ತಿದ್ದೆ. ನನಗೆ ಶಾಂತಿಯೂ ದೊರೆಯುತ್ತಿತ್ತು. ಇದಂತೂ ಆಗುವಂಥದ್ದಲ್ಲ. ನನ್ನನ್ನು ನೆನಪಿಸಿಕೊಳ್ಳುವಂಥವರು ನನ್ನನ್ನು ತಪಾಸಣೆ ಮಾಡಬಯಸುತ್ತಾರೆ, ನನ್ನ ಬಗ್ಗೆ ಟೀಕೆ-ಟಿಪ್ಪಣಿ ಮಾಡುತ್ತಾರೆ, ನನ್ನ ಪತನದ ಬಗ್ಗೆ ಒಂದೇ ಸಮನೆ ದುಃಖವನ್ನು ವ್ಯಕ್ತಪಡಿಸುತ್ತ ನಿಟ್ಟುಸಿರೆಳೆಯುತ್ತಾರೆ, ಮರ್ಮಾಂತಕವಾಗಿರುವ ನನ್ನ ದುಃಖದ ಹೊರೆಯನ್ನು ಅಕ್ಷಯವಾಗಿಸಿಬಿಡುತ್ತಾರೆ. ಜನ ನನ್ನ ಬಗ್ಗೆ ಏನೇನು ಆಸೆಗಳನ್ನಿರಿಸಿಕೊಂಡಿದ್ದರು. ಅವರ ಯಾವ ಆಸೆ ಈಡೇರಲಿಲ್ಲ. ಏನಾಗಿದ್ದರೆ ಅವರು ನನಗೆ ನಿಷ್ಕೃತಿಯನ್ನು ಕೊಡಲು ಸಾಧ್ಯವಾಗುತ್ತಿತ್ತು - ಇದನ್ನೆಲ್ಲ ಅವರು ನನಗೆ ತಿಳಿಸಿದ್ದರೆ, ನಾನು ಚಿರಕಾಲ ಅವರಿಗೆ ಕೃತಜ್ಞನಾಗಿರುತ್ತಿದ್ದೆ. ನೀನು ಹಿಂದಿನ ಸಂಗತಿಗಳನ್ನು ನೆನಪಿಸದೆ ಇದ್ದಿದ್ದರೆ ನಾನು ಇದನ್ನೆಲ್ಲ ಹೇಳುತ್ತಿರಲಿಲ್ಲ. ನಾನು ಸತ್ತುಹೋದೆ ಎಂಬ ಸಂಗತಿ ಎಂದಾದರೂ ಒಂದು ದಿನ ನಿನ್ನ ಕಣ್ಣಿಗೆ ಬಿದ್ದರೆ, ಆಗ ಅವರಿಗೆ ಹೋಗಿ ಹೇಳು.

ಇದರಿಂದ ನೀನು ದುಃಖಿಯಾಗಬೇಡ. ನಿನ್ನನ್ನು ಕಂಡರೆ ನನಗೆ ಭಯವೇನೂ ಇಲ್ಲ. ಏಕೆಂದರೆ, ನನ್ನ ಬಗ್ಗೆ ನ್ಯಾಯನಿರ್ಣಯ ಮಾಡುವ ಗುರುತರವಾದ ಹೊಣೆಯನ್ನು ಹೊತ್ತುಕೊಳ್ಳಲು ನೀನು ಇಚ್ಛಿಸುವುದಿಲ್ಲವೆಂದು ತೋರುತ್ತದೆ. ಆದ್ದರಿಂದಲೇ, ಇನ್ನಷ್ಟು ದಿವಸ ಜೀವಿಸಿದ್ದರೂ, ಅದರಿಂದ ನಿನಗೆ ಹಾನಿಯಾಗುತ್ತದೆಂದೇನೂ ನನಗೆ ಅನ್ನಿಸುವುದಿಲ್ಲ. ನೀನು ನನ್ನ ಗೆಳೆಯ, ಒಳ್ಳೆಯದನ್ನು ಹಾರೈಸುವಂಥವನು. ನ್ಯಾಯನಿರ್ಣಯ ಮಾಡಲು ಹೊರಟು, ನನಗೆ ದುಃಖವನ್ನುಂಟು ಮಾಡುವುದಿಲ್ಲವೆಂದು ನಂಬಿದ್ದೇನೆ.

ನನ್ನ ಬಗ್ಗೆ ತಿಳಿಯಲು ಇಚ್ಛಿಸುತ್ತಿದ್ದೀಯೆ, ಅಲ್ಲವೆ! ಸಂಕ್ಷೇಪವಾಗಿ ಇಷ್ಟನ್ನು ಹೇಳಬಹುದು. 1. ಊರಿನಿಂದಾಚೆ ಇರುವ ಬಯಲಿನಲ್ಲಿ ಹಾಗೂ ನದಿಯ ತೀರದಲ್ಲಿ ಇರುವ ಒಂದು ಚಿಕ್ಕಮನೆಯಲ್ಲಿ ನಾನು ವಾಸಮಾಡುತ್ತಿದ್ದೇನೆ. 2. ಉದ್ಯೋಗಿಯಾಗಿದ್ದೇನೆ. ತೊಂಬತ್ತು ರೂಪಾಯಿ ಸಂಬಳ ಬರುತ್ತಿದೆ. ಭತ್ಯೆ ಹತ್ತು ರೂಪಾಯಿ. ಒಂದು ಸಣ್ಣ ಅಂಗಡಿಯೂ ಇದೆ. ಹೇಗೋ ಖರ್ಚು-ವೆಚ್ಚ ಸರಿದೂಗುತ್ತಿದೆ. ಬಂಡವಾಳವೇನೂ ಇಲ್ಲ. 3. ಹೃದಯ ರೋಗ ಇದೆ. ಯಾವ ಕ್ಷಣದಲ್ಲಿಯಾದರೂ 4. ತುಂಬ ಓದಿದ್ದೇನೆ, ಹೆಚ್ಚೇನೂ ಬರೆದಿಲ್ಲ. ಕಳೆದ ಹತ್ತು ವರ್ಷಗಳಲ್ಲಿ ಶರೀರ ವಿಜ್ಞಾನ, ಜೀವ - ವಿಜ್ಞಾನ ಮನೋವಿಜ್ಞಾನ ಮತ್ತು ಇತಿಹಾಸಗಳನ್ನು ಅಭ್ಯಾಸ ಮಾಡಿದ್ದೇನೆ. ಶಾಸ್ತ್ರಗಳನ್ನೂ ಸ್ವಲ್ಪಮಟ್ಟಿಗೆ

ಓದಿಕೊಂಡಿದ್ದೇನೆ. ಬೆಂಕಿಯಿಂದಾಗಿ ನನ್ನದೆಲ್ಲವೂ ಉರಿದು ಬೂದಿಯಾಯಿತು - ಗ್ರಂಥ ಭಂಡಾರ ಹಾಗೂ 'ಚರಿತ್ರ ಹೀನ' ಕಾದಂಬರಿಯ ಹಸ್ತಪ್ರತಿ ಕೂಡ ಭಸ್ಮವಾದುವು. 'ನಾರಿಯ ಇತಿಹಾಸ' ಸುಮಾರು ನಾನೂರು-ಐನೂರು ಪುಟಗಳವರೆಗೆ ಸಾಗಿತ್ತು. ಅದೂ ಸುಟ್ಟುಹೋಯಿತು. ಈ ವರ್ಷ ಅದನ್ನು ಅಚ್ಚಿಸಬೇಕೆಂಬ ಆಸೆಯಿತ್ತು. ನನ್ನ ಮೂಲಕ ಏನಾದರೂ ಆಗುವುದು ಸಾಧ್ಯವಿಲ್ಲವೆಂದು ತೋರುತ್ತದೆ. ಆದ್ದರಿಂದಲೇ ಎಲ್ಲವೂ 'ಸ್ವಾಹಾ' ಆಗಿಬಿಟ್ಟಿತು. ಮತ್ತೆ ಏನಾದರೂ ಮಾಡಿಯೇನು ಎಂಬ ಉತ್ಸಾಹ ಉಳಿದಿಲ್ಲ. 'ಚರಿತ್ರ ಹೀನ' ಐನೂರು ಪುಟಗಳಲ್ಲಿ ಬಹುಮಟ್ಟಿಗೆ ಮುಗಿದುಹೋಗಿತ್ತು. ಎಲ್ಲವೂ ನಾಶವಾಗಿಬಿಟ್ಟಿತು.

ನಿಮ್ಮ ಕ್ಲಬ್ಬಿನ ವಿಚಾರ ತಿಳಿದು ತುಂಬ ಸಂತೋಷವಾಯಿತು. ಹೇಗಾದರೂ ಮಾಡಿ, ಮಧ್ಯೆ ಮಧ್ಯೆ ಬಿಡುವು ಮಾಡಿಕೊಂಡು ಬರೆಯುತ್ತಿರು. ನೀನೇ ಏನಾದರೂ ಮಾಡುವುದು ಒಳ್ಳೆಯದಲ್ಲವೆ? ಇಂದಿನ ಫ್ಯಾಷನ್ನಿನ ಯುಗದಲ್ಲಿ ಈ ಮಾತನ್ನು ಮರೆಯುವುದು ಸರಿಯಲ್ಲ.

ನಿನ್ನ ಸ್ವಭಾವವೇ ಹಾಗಿರುವುದರಿಂದ, ಇಷ್ಟೊಂದು ಜನರೊಂದಿಗೆ ನಿಕಟಪರಿಚಯವನ್ನು ಸ್ಥಾಪಿಸಿಕೊಂಡಿದ್ದೀಯೆ ಎಂಬುದು ಆಶ್ಚರ್ಯದ ವಿಷಯವೇನೂ ಅಲ್ಲ. ನಮ್ಮ ಹಳೆಯ ಸಾಹಿತ್ಯ ಸಭೆಯಲ್ಲಿ ಏಕಮಾತ್ರ ಸದಸ್ಯೆಯಾಗಿದ್ದ ನಿರುಪಮಾದೇವಿಯವರೊಬ್ಬರು ಮಾತ್ರ ಸಾಹಿತ್ಯ ಸೇವೆಯಲ್ಲಿ ನಿರತರಾಗಿದ್ದಾರೆ, ಉಳಿದವರೆಲ್ಲ ಅದನ್ನು ಕೈಬಿಟ್ಟಿದ್ದಾರೆ. ಹೌದು ತಾನೆ? ನನ್ನ ಹಳೆಯ ಕೃತಿಗಳಲ್ಲಿ ಯಾವುದೂ ಈಗ ನನ್ನ ಬಳಿ ಇಲ್ಲ. ಎಲ್ಲಿವೆ? ಇವೆಯೋ, ಇಲ್ಲವೋ ಒಂದು ಗೊತ್ತಿಲ್ಲ. ತಿಳಿದುಕೊಳ್ಳಬೇಕೆಂಬ ಇಚ್ಛೆಯೂ ನನಗಿಲ್ಲ.

ಇನ್ನೊಂದು ವಿಚಾರವನ್ನು ನಿನಗೆ ತಿಳಿಸಬೇಕಾಗಿದೆ. ಸುಮಾರು ಮೂರು ವರ್ಷಗಳ ಹಿಂದೆ ಹೃದಯ ರೋಗದ ಮೊದಲ ಚಿಹ್ನೆಗಳು ಕಾಣಿಸಿಕೊಂಡಿದ್ದುವು. ಆಗ ತೈಲ ಚಿತ್ರಗಳನ್ನು ಬರೆಯತೊಡಗಿದ್ದೆ. ಓದುವುದನ್ನು ಬಿಟ್ಟುಬಿಟ್ಟಿದ್ದೆ. ಈ ಮೂರು ವರ್ಷಗಳಲ್ಲಿ ಬಹಳಷ್ಟು ಚಿತ್ರಗಳನ್ನು ರಚಿಸಿದ್ದೆ. ಅವೂ ನಾಶವಾಗಿಬಿಟ್ಟಿವೆ. ಚಿತ್ರರಚನೆಯ ಸಾಮಗ್ರಿಗಳು ಮಾತ್ರವೇ ಉಳಿದಿವೆ. ಈಗ ನಾನು ಏನು ಮಾಡುವುದು ಸೂಕ್ತ ಎಂದರೆ ಹಾಗೆ ಮಾಡಲು ಕೆಲವು ದಿನಗಳ ಮಟ್ಟಿಗಾದರೂ ಪ್ರಯತ್ನಿಸುತ್ತೇನೆ. ಕಾದಂಬರಿ, ಇತಿಹಾಸ ಅಥವಾ ಚಿತ್ರಕಲೆ - ಇವುಗಳಲ್ಲಿ ಯಾವುದನ್ನು ಮತ್ತೆ ಆರಂಭಿಸಲಿ?

ನಿನ್ನ ಸ್ನೇಹದ
ಶರತ್

ಇದಕ್ಕೆ ಮೊದಲೂ ಅವನು ಕಾಗದಗಳನ್ನು ಬರೆದಿರಬೇಕು. ಆದರೆ, ಈ ಎರಡು[1] ಪತ್ರಗಳನ್ನು ಬಿಟ್ಟು, ಅವನ ಕಾಗದ ಪತ್ರಗಳು ಯಾವುವೂ ಯಾರ ಬಳಿಯಲ್ಲೂ

---

1 ಡಿಸೆಂಬರ್ 1902 ಪತ್ರವನ್ನು ಮಾವ ಗಿರೀಂದ್ರನಾಥನ ಹೆಸರಿಗೆ ಬರೆದಿದ್ದ. ಫೆಬ್ರವರಿ 1908ರ ಪತ್ರವನ್ನು ವಿಭೂತಿಭೂಷಣ ಭಟ್ಟನ ಹೆಸರಿಗೆ ಬರೆದಿದ್ದ.

ಉಳಿದಿಲ್ಲ. ಅವನ ಬಾಳಿನಲ್ಲಿ ಹೊಸ ಯುಗ ಕಾಲಿಟ್ಟಿತ್ತೆಂಬುದು ಈ ಎರಡು ಪತ್ರಗಳಿಂದಲೇ ನಮಗೆ ಸ್ಪಷ್ಟವಾಗಿ ಗೊತ್ತಾಗುತ್ತದೆ. ಕಳೆದ ಒಂಬತ್ತು ವರ್ಷಗಳಲ್ಲಿ ಅವನ ಸುತ್ತ ಕವಿದುಕೊಂಡಿದ್ದ ರಹಸ್ಯಮಯ ವಾತಾವರಣ ಈಗ ದೂರ ಸರಿಯುತ್ತಿರುವಂತೆ ತೋರತೊಡಗಿತು. ನನ್ನ ಪುಸ್ತಕಗಳೂ ಅಚ್ಚಾಗಬಲ್ಲವು ಎಂಬ ಆಲೋಚನೆ ಆತನ ಮನಸ್ಸಿನಲ್ಲಿ ಮೂಡಿತು. 'ಬಡೀ ದೀದಿ' ಪುಸ್ತಕಕ್ಕೆ ಐದು ವರ್ಷಗಳ ಹಿಂದೆ ದೊರೆತಿದ್ದ ಅಪೂರ್ವ ಸ್ವಾಗತ, ರವೀಂದ್ರನಾಥರಿಂದ ಅದಕ್ಕೆ ದೊರೆತಿದ್ದ ಮುಕ್ತಕಂಠದ ಪ್ರಶಂಸೆ – ಇವು ಖಂಡಿತವಾಗಿಯೂ ಅವನ ಮನಸ್ಸಿನಲ್ಲಿದ್ದ ನೈಚ್ಯಾನುಸಂಧಾನದ ಭಾವನೆಯನ್ನು ಹೊರಗಟ್ಟಿದ್ದುವು. ಆತ್ಮವಿಶ್ವಾಸ ಮೂಡಿಬಂದಿತ್ತು.

ಈ ಪತ್ರದಲ್ಲಿ ಚಹದ ಅಂಗಡಿಯೊಂದನ್ನು ಅವನು ತೆರೆದಿದ್ದ ಬಗ್ಗೆ ಉಲ್ಲೇಖವಿದೆ. ಅದು ನಿಜ. ಒಂದು ದಿನ ಅವನು ಕಛೇರಿಯ ತನ್ನ ಸಹೋದ್ಯೋಗಿಗಳೊಂದಿಗೆ ಇದ್ದಕ್ಕಿದ್ದಂತೆಯೇ ಹೇಳಿದ: "ನಾನು ಚಹದ ಅಂಗಡಿಯನ್ನು ಆರಂಭಿಸಿದ್ದೇನೆ."

ಸಹೋದ್ಯೋಗಿಗಳು ಅವನತ್ತ ನೋಡುತ್ತಲೇ ಇದ್ದರು. ಕನಸಿನ ಲೋಕದಲ್ಲಿ ವಿಹರಿಸುವ ಈ ಅಲೆಮಾರಿ ಅಂಗಡಿಯನ್ನು ಆರಂಭಿಸಬಲ್ಲನೆ? ಅಪನಂಬಿಕೆ ಧ್ವನಿಯಲ್ಲಿ ಗೆಳೆಯನೊಬ್ಬ ಕೇಳಿದ: "ನಿಜವಾಗಿಯೂ?"

"ನೋಡಲೇಬೇಕು ಅನ್ನುವುದಾದರೆ ನಡಿ ಹೋಗೋಣ"

ಕಛೇರಿ ಮುಚ್ಚಿದ ಬಳಿಕ ಒತ್ತಾಯದಿಂದ ಅವನು ತನ್ನ ನಾಲ್ಕಾರು ಮಂದಿ ಗೆಳೆಯರನ್ನು ತನ್ನ ಚಹದ ಅಂಗಡಿಗೆ ಕರೆದೊಯ್ದ. ಮನೆಯ ಹತ್ತಿರದಲ್ಲಿಯೇ ಇದ್ದ ಮರದ ಮನೆಯೊಂದರಲ್ಲಿ ನಿಜವಾಗಿಯೂ ಚಹದ ಅಂಗಡಿ ಇತ್ತು. ಗೆಳೆಯನೊಬ್ಬ ಹೇಳಿದ: "ಶರತ್, ಇನ್ನು ನೀನು ಕೆಲಸ ಬಿಟ್ಟುಬಿಡು. ಚಹದ ಅಂಗಡಿಯಲ್ಲಿ ಖುದ್ದಾಗಿ ಕುಳಿತುಕೊಳ್ಳದಿದ್ದರೆ, ಎರಡೇ ದಿನಗಳಲ್ಲಿ ಎಲ್ಲವೂ ಮುಗಿದುಹೋಗುತ್ತದೆ."

ಶರತ್ ಉತ್ತರಿಸಿದ: "ಇಲ್ಲವೋ, ನಾನೇ ಕುಳಿತಿರಬೇಕಾದ ಅಗತ್ಯವಿಲ್ಲ. ನಾನು ಏನು ಏರ್ಪಾಟು ಮಾಡಿದ್ದೇನೆ ಎಂಬುದು ನಿನಗೆ ಗೊತ್ತೆ? ಒಂದು ಡಬ್ಬ ಹಾಲಿಗೆ ಎಷ್ಟು ಸಕ್ಕರೆ ಬೆರೆಸಬೇಕು, ಅದರಿಂದ ಎಷ್ಟು ಬಟ್ಟಲು ಚಹ ಸಿದ್ಧವಾಗುತ್ತದೆ - ಇದನ್ನೆಲ್ಲ ನಾನು ಸರಿಪಡಿಸಿಬಿಟ್ಟಿದ್ದೇನೆ. ಬೆಳಿಗ್ಗೆ ಒಂದು ಡಬ್ಬ ಹಾಲನ್ನು ಕೊಂಡುಕೊಡುತ್ತೇನೆ. ಇಡೀ ದಿವಸ ಎಷ್ಟು ಹಾಲು ಖರ್ಚಾಗಿರುತ್ತದೆಯೋ ಅದರ ಆಧಾರದ ಮೇಲೆ ಸಂಜೆ ದುಡ್ಡು ವಸೂಲಿ ಮಾಡಿಬಿಡುತ್ತೇನೆ."

ಹೇಳಲು ಈ ಗಣಿತ ಎಷ್ಟು ಸುಲಭವಾಗಿತ್ತೋ, ಅದನ್ನು ಆಚರಣೆಗೆ ತರುವುದು ಅಷ್ಟೇ ಕಷ್ಟವಾಗಿತ್ತು. ಆ ಅಂಗಡಿಯನ್ನು ಬಹುಬೇಗ ಮುಚ್ಚಬೇಕಾಯಿತು.

## 10

ಮನೆ ಬೆಂಕಿಗೆ ಆಹುತಿಯಾದ ಬಳಿಕ ಅವನು ಕಲ್ಕತ್ತೆಗೆ ಬಂದ.[1] ಜೊತೆಯಲ್ಲಿದ್ದವರೆಂದರೆ ಅವನ ಹೆಂಡತಿ ಮತ್ತು ಅವನ ಪ್ರೀತಿಯ ನಾಯಿ. ಈಗ

1. ಅಕ್ಟೋಬರ್ 1902

ಅವನು ಆ ನಾಯಿಯನ್ನು ಜೊತೆಗೆ ಕರೆದುಕೊಂಡು ಕಲ್ಕತ್ತೆಯ ಹಾದಿಗಳಲ್ಲಿ ಎಲ್ಲರಿಗೂ ಕಾಣುವಂತೆ ಓಡಾಡುತ್ತಿದ್ದ. ಚಿಕ್ಕ ಗಡ್ಡ, ಕೆದರಿದ ತಲೆ, ಒರಟು ಪಂಚೆ, ಕಾಲಿನಲ್ಲಿ ಚಪ್ಪಲಿ, ಮೈಮೇಲೆ ಚೈನಾಕೋಟು-ಇವುಗಳನ್ನು ನೋಡಿದರೆ ಇವನು ಹಳ್ಳಿಗಾಡಿನ ಹುಂಬ ಎಂದು ಯಾರು ಬೇಕಾದರೂ ಹೇಳಬಹುದಾಗಿತ್ತು.

ಈ ಸಲ ಅವನು ಗೆಳೆಯರನ್ನು ಮತ್ತೆ ಮತ್ತೆ ಹುಡುಕಿಕೊಂಡು ಹೋಗಿ ಭೇಟಿಯಾದ. ಸೌರೀಂದ್ರಮೋಹನ ಮುಖರ್ಜಿ 'ಭಾರತೀ' ಪತ್ರಿಕೆಯ ಸಂಪಾದಕರಾಗಿದ್ದರು. ಅವನು ಅವರನ್ನು ಭೇಟಿಯಾಗಲು ಹೋದ. ಕಲ್ಕತ್ತೆಯನ್ನು ಬಿಟ್ಟು ಹೊರಟ ಬಳಿಕ ಬಹುಶಃ ಇದು ಅವರಿಬ್ಬರ ಮೊದಲ ಭೇಟಿಯಾಗಿತ್ತು. ಇಬ್ಬರೂ ಪರಸ್ಪರ ತುಂಬ ಮಾತುಕತೆಗಳನ್ನಾಡಿದರು. ಶರತ್ ಹೇಳಿದ: "ಚಿಕಿತ್ಸೆಗಾಗಿ ನಾನು ಕಲ್ಕತ್ತೆಗೆ ಬಂದಿದ್ದೆ. ನಿನ್ನನ್ನು ತುಂಬ ಹುಡುಕಿದೆ. ಆದರೂ ಭೇಟಿಯಾಗಲು ಸಾಧ್ಯವಾಗಲಿಲ್ಲ."

ಸೌರೀಂದ್ರ ಮೋಹನರು ಕೇಳಿದರು: "ನೀನು ಬರೆಯುವುದನ್ನೇಕೆ ನಿಲ್ಲಿಸಿದೆ. ನನಗೆ ಅರ್ಥವೇ ಆಗುತ್ತಿಲ್ಲ. ನಿನ್ನ ಬರವಣಿಗೆಯಿಂದ ಬಂಗಾಳಿ ಸಾಹಿತ್ಯ ಎಷ್ಟು ಸಮೃದ್ಧವಾಗಬಲ್ಲದು ಎಂಬುದು ನಿನಗೆ ಗೊತ್ತಿಲ್ಲ. ನೀನೊಬ್ಬ ಮಹಾ ಲೇಖಕನಾಗಬೇಕೆಂದು ನಿನ್ನ ಹಣೆಯಲ್ಲಿ ಬರೆದಿದೆ. 'ಭಾರತಿ'ಯಲ್ಲಿ 'ಬಡೀ ದೀದಿ' ಪ್ರಕಟವಾದಾಗ, ಅದು ರವೀಂದ್ರನಾಥರ ಕೃತಿ ಎಂದು ಭಾರಿ ಕೋಲಾಹಲವೇ ಉಂಟಾಗಿತ್ತು."

ಅವರು ಸಮಗ್ರವಾಗಿ ಆ ಕಥೆಯನ್ನು ಓದಿ ಹೇಳಿದರು. ರವೀಂದ್ರನಾಥರು ಅದರ ಬಗ್ಗೆ ಏನು ಹೇಳಿದ್ದರೆಂಬುದನ್ನು ಅವರು ತಿಳಿಸಿದರು. ಶರತ್‌ಗೆ ಈ ವಿಷಯ ಗೊತ್ತಿರಲಿಲ್ಲವೆಂದೇನೂ ಅಲ್ಲ. ಆದರೆ, ವಿಶ್ವಾಸಾರ್ಹ ರೂಪದಲ್ಲಿ ಗೆಳೆಯನ ಬಾಯಿಂದ ಕೇಳುವುದಕ್ಕೆ ತನ್ನದೇ ಆದ ಸೊಗಸಿರುತ್ತದೆಯಲ್ಲವೆ ? "ಹೋಗಿ ಸೇರಿದ್ದ ಆ ನಾಡಿನ ವಿಷಯದಲ್ಲಿ, ಉದ್ಯೋಗವನ್ನು ಪಡೆಯುವ ವಿಚಾರದಲ್ಲಿ ನಾನು ಹೇಗೆ ಹೇಗೋ ಸಿಕ್ಕಿಕೊಂಡ ವಿಭಿನ್ನ ಪರಿಸ್ಥಿತಿಗಳ ವಿಷಯದಲ್ಲಿ ಮನಸ್ಸು ಈಗ ಬೇಸತ್ತು ಬಿಟ್ಟಿದೆ" ಎಂದು ಹೇಳಿದ.

ಮುಖರ್ಜಿಯವರು ತುಂಬ ಒತ್ತಾಯದಿಂದ ಅವನನ್ನು ಮನೆಗೆ ಕರೆದುಕೊಂಡು ಹೋದರು. ಮಾವ ಉಪೇಂದ್ರನಾಥ ಗಂಗೂಲಿ, ಫಣೀಂದ್ರನಾಥಪಾಲ್ ಎಂಬ ಒಬ್ಬ ತರುಣ ಸಾಹಿತಿ ಹಾಗೂ ಇನ್ನೂ ಕೆಲವು ವ್ಯಕ್ತಿಗಳು ಅಲ್ಲಿ ಬಂದು ಸೇರಿದ್ದರು. ಕಾಳೀಪೂಜೆಯ ಹಬ್ಬದ ದಿನ ಅದಾಗಿತ್ತು. ಮಧ್ಯಾಹ್ನ ಎರಡು ಗಂಟೆ ಆಗಿತ್ತು. ಮನೆಯ ಮಕ್ಕಳೆಲ್ಲ ಬಾಣ-ಬಿರುಸು ಪಟಾಕಿಗಳನ್ನು ಹಚ್ಚುತ್ತ ಕೋಲಾಹಲ ಮಾಡುತ್ತಿದ್ದುವು. ಆದರೆ, ಶರತ್ ಸೌರೀಂದ್ರ ಮೋಹನರಿಗೆ ಹೇಳಿದ: "'ಬಡೀದೀದಿ'ಯನ್ನು ಒಂದು ಸಲ ಓದಿದರೆ, ಕೇಳುತ್ತೇನೆ. ಏನು ಕಥೆ ಬರೆದಿದ್ದೆ ಎಂಬುದು ಸರಿಯಾಗಿ ನೆನಪೇ ಇಲ್ಲ."

ಅನಂತರ ಚಾವಡಿಯಲ್ಲಿ ಹಾಸಿದ ರತ್ನಗಂಬಳಿಯ[1] ಮೇಲೆ ಮೈಚಾಚಿ ಮಲಗಿದ:

---

1 ಇದೇ ರತ್ನಗಂಬಳಿಯ ಮೇಲೆ ಕುಳಿತು, ಮುಖರ್ಜಿಯವರ ಬಾಯಿಂದಲೇ ಈ ಕಥೆ ಎಲ್ಲವನ್ನೂ ಕೇಳಿದೆ.

"ನೀನು ಓದು, ನಾನು ಕೇಳುತ್ತ ಇರುತ್ತೇನೆ."

ಸೌರೀಂದ್ರಮೋಹನರು ಕಥೆಯನ್ನು ಓದತೊಡಗಿದರು. ಕೇಳುತ್ತ ಕೇಳುತ್ತ ಶರತ್ ಭಾವಪರವಶನಾದ. ಕಣ್ಣುಗಳಲ್ಲಿ ನೀರು ತುಂಬಿ ಬಂತು. ಮಧ್ಯ ಮಧ್ಯ ಹೇಳುತ್ತಿದ್ದ: "ನಿಲ್ಲಿಸು, ನಿಲ್ಲಿಸು. ಇದು ನಾನೇ ಬರೆದಿದ್ದುದೇನು? ಅಷ್ಟು ಕೆಟ್ಟದಾಗಿಯೇನೂ ಬರೆದಿಲ್ಲವಲ್ಲ! ಕೇಳಿದ ಮೇಲೆ ಹೃದಯ ತುಂಬಿ ಬಂದಂತಾಯಿತು. ನನ್ನ ಕೈಯಿಂದಲೇ ನಾನು ಈ ಕಥೆಯನ್ನು ಬರೆದಿದ್ದೇನೆ! ನನಗೆ ಆಶ್ಚರ್ಯವಾಗುತ್ತಿದೆ."

ಮುಖರ್ಜಿ ಹೇಳಿದರು: "ಹೌದು. ಹೀಗೆ ಬರೆಯಬಲ್ಲಂಥವರು ಬರೆಯುವುದನ್ನು ಬಿಟ್ಟು ಕೈಕಟ್ಟಿಕೊಂಡು ಕುಳಿತುಬಿಟ್ಟರೆ ಅವರ ಅಪರಾಧವನ್ನು ಕ್ಷಮಿಸಲಾಗುವುದಿಲ್ಲ. ನೀನು ಬರೆಯುವುದನ್ನೇನಾದರೂ ಬಿಟ್ಟರೆ ಆತ್ಮಹತ್ಯೆ ಮಾಡಿಕೊಳ್ಳುತ್ತೀಯೆ ಎಂದು ನನಗೆ ತೋರುತ್ತದೆ. ನೀನೇನಾದರೂ ಬರೆಯದೆ ಹೋದರೆ ಭಾರಿ ಅನ್ಯಾಯ ಮಾಡಿದಂತಾಗುತ್ತದೆ ಎಂದು ರವೀಂದ್ರನಾಥರು ಹೇಳಿದ್ದಾರೆ."

ರೋಗಿಯ ಹಾಸಿಗೆಯ ಮೇಲೆ ಮಲಗಿಕೊಂಡಿದ್ದಂತೆಯೇ ತನ್ನ ಹೆಂಡತಿ ಶಾಂತಿಗೆ ಗೋಡೆಯ ಮೇಲೆ ತಗುಲಿ ಹಾಕಿದ್ದ ತನ್ನ ಭಾವಚಿತ್ರವನ್ನು ತೋರಿಸುತ್ತ, "ನಾಲ್ಕು ಮಂದಿ ಬ್ರಾಹ್ಮಣರ ಮೂಲಕ ಈ ಚಿತ್ರವನ್ನು ನದಿಯ ತೀರದಲ್ಲಿ ಸುಡಿಸಬಲ್ಲೆಯಾದರೆ, ಆಗ ನಿನಗೆ ನನ್ನ ಹೆಸರಿನ ಬೆಲೆ ಗೊತ್ತಾಗುತ್ತದೆ" ಎಂಬ ವರ್ಣನೆ ಬರುವ ಭಾಗದ ಕಥೆಯನ್ನು ಮುಖರ್ಜಿಯವರು ಓದುತ್ತಿದ್ದಾಗ, ಕಣ್ಣು ಮುಚ್ಚಿಕೊಂಡೇ ಶರತ್ ಹುಚ್ಚನಂತೆ ಎದ್ದು ಕುಳಿತ ಹಾಗೂ ಅವರ ಕೈ ಹಿಡಿದುಕೊಂಡು ಹೇಳಿದ: "ನಿಲ್ಲಿಸು."

ಅವನ ಗಂಟಲು ತುಂಬಿ ಬಂದಿತ್ತು. ಕೆಲವು ಕ್ಷಣಗಳವರೆಗೆ ಅವನು ಸದ್ದಿಲ್ಲದೆ ಕುಳಿತಿದ್ದ. ಆಮೇಲೆ ನಿಟ್ಟುಸಿರುಬಿಡುತ್ತ ಹೇಳಿದ: "ಈಗ ಮುಂದಕ್ಕೆ ಓದು."

ಮುಖರ್ಜಿಯವರು ಮತ್ತೆ ಓದಲು ಆರಂಭಿಸಿದರು. ಮತ್ತೆ ಅವನು ಮೈಚಾಚಿ ಮಲಗಿದ. ಹಾಗೆ ಕಣ್ಣುಮುಚ್ಚಿ ಮಲಗಿಕೊಂಡಿದ್ದೇ ಅವನು ಕಥೆಯ ಉಳಿದ ಭಾಗವನ್ನು ಓದಿಸಿ ಕೇಳಿದ. ಅದು ಮುಗಿದಾಗ ಹೇಳಿದ: "ಚೆನ್ನಾಗಿಯೇ ಬಂದಿದೆಯಲ್ಲ! ನಾನು ಮತ್ತೆ ಬರೆಯತೊಡಗುತ್ತೇನೆ. ನಾನು ಒಳ್ಳೆಯ ಕಥೆಗಳನ್ನು ಬರೆಯಬಲ್ಲೆನೆಂದು ನಿಮಗೆಲ್ಲ ನಂಬಿಕೆ ಇದೆಯೆ?"

ಮುಖರ್ಜಿ ಹೇಳಿದರು: "ಫಣೀಂದ್ರಪಾಲ್ ಈ ವರ್ಷ ಬಿ.ಎ. ಪಾಸು ಮಾಡಿದ್ದಾನೆ. ಸರ್ಕಾರಿ ಕೆಲಸಕ್ಕೆ ಸೇರಲು ಆತನಿಗೆ ಇಷ್ಟವಿಲ್ಲ. 'ಯಮುನಾ' ಎಂಬ ಹೆಸರಿನಲ್ಲಿ ಪತ್ರಿಕೆಯೊಂದನ್ನು ಹೊರತರಬೇಕೆಂದು ಯೋಚಿಸುತ್ತಿದ್ದಾನೆ. ಅದರ ಸಂಪಾದನ ಕಾರ್ಯಕ್ಕೆ ತನ್ನ ಬಾಳನ್ನು ಸಮರ್ಪಿಸಿಬಿಡಬೇಕೆಂಬ ಆಸೆ ಇದೆ. ಈತನ ಪತ್ರಿಕೆಗೆ ನೀನು ಬರೆಯಬೇಕು."

ಶರತ್ ಹೇಳಿದ: "ಸರಿ ನಾನೂ ಬರೆಯುತ್ತೇನೆ - ನೀವೆಲ್ಲರೂ ಬರೆಯುವುದಾದರೆ, ನೀವೆಲ್ಲರೂ ಅಂದರೆ ನಿರುಪಮಾ, ಸುರೇಂದ್ರ, ಗಿರೀಂದ್ರ, ವಿಭೂತಿಭೂಷಣ, ನೀನು, ನಿನ್ನ ತಂಗಿ, ಉಪೇಂದ್ರ ಎಲ್ಲರೂ ಬರೆದರೆ, ನಾನು ಖಂಡಿತವಾಗಿ ಬರೆಯುತ್ತೇನೆ. 'ನಾರಿಯ ಇತಿಹಾಸ' ಎಂಬ ಅದ್ಭುತ ಗ್ರಂಥವೊಂದನ್ನು ನಾನು ಬರೆದಿದ್ದೆ. ಫೂಲ್ಸ್‌ಕೇಪ್ ಆಕಾರದಲ್ಲಿ ಸುಮಾರು ಐನೂರು

ಹಾಳೆಗಳಷ್ಟಿತ್ತು. ಮನೆಗೆ ಬೆಂಕಿಬಿದ್ದಾಗ ಎಲ್ಲವೂ ಉರಿದು ಬೂದಿಯಾಯಿತು. ಅದು ಕಥೆಯೇನೂ ಅಲ್ಲ, ಆದರೆ, ಕಥೆ-ಕಾದಂಬರಿಗಳಿಗಿಂತಲೂ ಹೆಚ್ಚು ಆಕರ್ಷಕವಾಗಿತ್ತು. ಇತಿಹಾಸ ಮತ್ತು ಪುರಾತತ್ವಶಾಸ್ತ್ರಗಳಿಗೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಅನೇಕ ಜೀವನ ಚರಿತ್ರೆಗಳನ್ನು ಓದಿ, ಅದನ್ನು ಬರೆದಿದ್ದೆ. ಅದು ಉರಿದು ಬೂದಿಯಾದಾಗ ಮನಸ್ಸಿಗೆ ತುಂಬ ನೋವಾಯಿತು."

ಮುಖರ್ಜಿ ಕೇಳಿದರು: "ಏನು ಬರೆದಿದ್ದೆ ಎಂಬುದೇನೂ ನೆನಪಿಲ್ಲವೆ ?"

ಶರತ್ ಹೇಳಿದ: "ಅಷ್ಟೋ ಇಷ್ಟೋ ನೆನಪಿದೆ."

ಮುಖರ್ಜಿ ಹೇಳಿದರು: "ಅದೇನು ನೆನಪಿದೆಯೋ, ಅದನ್ನೇ ಆಧಾರ ವಾಗಿಟ್ಟುಕೊಂಡು ಮತ್ತೆ ಬರೆಯಲು ಪ್ರಾರಂಭಿಸು."

ಶರತ್ ಹೇಳಿದ: "ಬರೆಯುತ್ತೇನೆ. ಇನ್ನೊಂದು ಕಥೆ ಬರೆದಿದ್ದೇನೆ. ಅದೊಂದು ಭಾರಿ ಕಾದಂಬರಿಯೇ ಆಗುತ್ತದೆ. ಕಾಲುಭಾಗದಷ್ಟು ಬರೆದು ಮುಗಿಸಿದ್ದೇನೆ. ಅದನ್ನು ನಿನಗೆ ಓದಲು ಕೊಡುತ್ತೇನೆ. ಕಥೆಗೆ 'ಚರಿತ್ರ ಹೀನ' ಎಂದು ಹೆಸರಿಟ್ಟದ್ದೇನೆ. ಅದನ್ನು ಮುಗಿಸುವುದು ನನಗೆ ಸಾಧ್ಯವಾದರೆ, ಅದೊಂದು ಹೊಸ ಘಟನೆಯೇ ಆಗುತ್ತದೆ. ಎರಡು-ಮೂರು ತಿಂಗಳು ಬಿಟ್ಟು ಮತ್ತೊಮ್ಮೆ ಕಲ್ಕತ್ತೆಗೆ ಬರಲೇಬೇಕಾಗಿದೆ. ಬರುವಾಗ ಅದನ್ನು ಜೊತೆಯಲ್ಲಿ ತರುತ್ತೇನೆ. 'ನಾರಿಯ ಇತಿಹಾಸ'ವನ್ನು ಬರೆಯಲು ಸಾಧ್ಯವಾದರೆ, ಅದನ್ನು ಹಿಡಿದುಕೊಂಡು ಬರುತ್ತೇನೆ. ಈ ಸಲ ಬಂದಾಗ ಕಲ್ಕತ್ತೆಯಲ್ಲಿಯೇ ಕೆಲವು ದಿವಸಗಳ ಮಟ್ಟಿಗೆ ಇರುತ್ತೇನೆ."

'ಚರಿತ್ರಹೀನ' ಕಾದಂಬರಿಯ ಕೆಲವು ಹಾಳೆಗಳನ್ನು ಅವನು ತನ್ನೊಡನೆ ತಂದಿದ್ದ. ಆಗ 'ಸಾಹಿತ್ಯ' ಎಂಬ ಪತ್ರಿಕೆ ತುಂಬ ಹೆಸರು ಗಳಿಸಿತ್ತು. ಸಮಾಜಪತಿಯವರು ಆ ಪತ್ರಿಕೆಯ ಸಂಪಾದಕರಾಗಿದ್ದರು. 'ಚರಿತ್ರ ಹೀನ'ದ ಆ ಕೆಲವು ಹಾಳೆಗಳನ್ನು ಹಿಡಿದುಕೊಂಡು ಮಾವ ಉಪೇಂದ್ರರೊಡನೆ ಶರತ್ ಅವರನ್ನು ಭೇಟಿ ಮಾಡಿದ. ಫಣೀಂದ್ರನಾಥನೊಂದಿಗೂ ಆ ವಿಚಾರವನ್ನು ಚರ್ಚಿಸಿದರು. ಆದರೆ, ಆ ಹೊತ್ತಿಗೆ ಅದರ ರೂಪರೇಷೆಗಳೇನೂ ಸ್ಪಷ್ಟವಾಗಿರಲಿಲ್ಲ. ಸ್ವತಃ ಶರತ್‌ನೂ ಅದರ ಬಗ್ಗೆ ಏನೂ ಹೇಳಲಾರದವನಾಗಿದ್ದ. ಆದ್ದರಿಂದ, ಅದರ ಬಗ್ಗೆ ಕೊನೆಯ ತೀರ್ಮಾನ ಕೈಗೊಳ್ಳುವುದು ಸಾಧ್ಯವಾಗಲಿಲ್ಲ. ಆ ವಿಷಯದ ಬಗ್ಗೆ ಮತ್ತೆ ಬರೆಯುವುದಾಗಿ ತಿಳಿಸಿ, ಅವನು ರಂಗೂನ್‌ಗೆ ಹಿಂದಿರುಗಿದ. ಹಿಂದಿರುಗಿ ಬರುವುದಕ್ಕೆ ಮೊದಲು ಬರ್ಹಾಮ್‌ಪುರಕ್ಕೆ ಹೋಗಿ ವಿಭೂತಿಭೂಷಣ ಭಟ್ಟ ಮತ್ತು ನಿರುಪಮಾ ದೇವಿಯವರನ್ನು ಭೇಟಿಯಾಗಿ ಬರುವುದನ್ನು ಅವನು ಮರೆಯಲಿಲ್ಲ.

ಬಹುಬೇಗ ರಜ ತೆಗೆದುಕೊಂಡು ಅವನು ಮತ್ತೆ ಕಲ್ಕತ್ತೆಗೆ ಬಂದ. ಗೆಳೆಯರೊಂದಿಗೆ ಮತ್ತೆ ಸಂಪರ್ಕ ಏರ್ಪಟ್ಟಿದ್ದರೂ, ಈ ಸಲವೂ ಅವನು ಯಾರ ಮನೆಯಲ್ಲಿಯೂ ಉಳಿದುಕೊಳ್ಳಲಿಲ್ಲ. ಸಭ್ಯರೆಂದು ಹೇಳಿಕೊಳ್ಳುವವರು ತಂಗದಿರುವಂಥ ಜಾಗದಲ್ಲಿಯೇ ತಂಗಿದ್ದ. ಹಿಂದಿನ ಸಲ ಅವನು ಹೌಡಾ (ಹೌರಾ) ಬಳಿಯ ವೇಶ್ಯಾ ಗೃಹವೊಂದರಲ್ಲಿ ತಂಗಿದ್ದ. ಅವನನ್ನು ಹುಡುಕಿಕೊಂಡು ಮಾವ ಉಪೇಂದ್ರನಾಥರು ಅಲ್ಲಿಗೇ ಹೋಗಿ ತಲುಪಿದಾಗ ಹತ್ತಿರದಲ್ಲಿಯೇ ಇದ್ದ ಮನೆಯೊಂದರಲ್ಲಿ ಕನ್ನಡಿಯ ಮುಂದೆ ನಿಂತುಕೊಂಡು ಹೆಂಗಸೊಬ್ಬಳು ತಲೆ

ಬಾಚಿಕೊಳ್ಳುತ್ತಿದ್ದಳು. ಅವಳನ್ನೇ ಅವರು ಕೇಳಿದರು: "ಇಲ್ಲೇನಾದರೂ ಶರತ್‌ಚಂದ್ರ ಚಟ್ಟೋಪಾಧ್ಯಾಯ ಎಂಬುವವರು ತಂಗಿದ್ದಾರೆಯೆ? ಅವರು ರಂಗೂನ್‌ನಿಂದ ಬಂದಿದ್ದಾರೆ!"

ಆ ಹೆಂಗಸು ಉತ್ತರಿಸಿದಳು: "ಓಹ್, ನೀವು ದಾದಾ ಠಾಕುರ್[1] ಅವರ ಬಗ್ಗೆ ಕೇಳುತ್ತಿದ್ದೀರಲ್ಲವೆ? ಅವರು ಮೇಲುಗಡೆ ಇದ್ದಾರೆ. ಈ ಪಾವಟಿಗೆ ಇದೆಯಲ್ಲ, ಅದನ್ನು ಹತ್ತಿ ಹೋಗಿ, ಅಲ್ಲೇ ಎದುರಿಗೇ ಕಾಣಸುತ್ತಾರೆ."

ಉಪೇಂದ್ರನಾಥರು ಮೇಲೆ ಹೋಗಿ ನೋಡಿದರೆ, ಶರತ್ 'ಚರಿತ್ರಹೀನ' ಕಾದಂಬರಿಯನ್ನು ಬರೆಯುವುದರಲ್ಲಿ ಮಗ್ನನಾಗಿದ್ದಾನೆ.

ಬಹುದಿನಗಳ ಬಳಿಕ[2] ಫಣೇಂದ್ರನಾಥ ಪಾಲರು ಹೀಗೆ ಬರೆದರು: "ಅಂದಿನ ಘಟನೆ ನೆನಪಿಗೆ ಬರುತ್ತದೆ. ಉಪೇಂದ್ರನಾಥ ಗಂಗೋಪಾಧ್ಯಾಯರು ಶರತ್ ಕಲ್ಕತ್ತೆಗೆ ಬಂದಿದ್ದಾರೆಂಬ ಸುಳಿವು ನೀಡಿದ್ದರು. 'ನೆನ್ನೆ ನನ್ನ ಮನೆಗೆ ಬಂದಿದ್ದ, ಎಲ್ಲಿ ಇಳಿದುಕೊಂಡಿದ್ದೇನೆ ಎಂದೇನೂ ಅವನು ಹೇಳಿ ಹೋಗಲಿಲ್ಲ.' ಎಂದು ಹೇಳಿದ್ದರು. ಅವರನ್ನು ಹುಡುಕುವುದಾದರೂ ಹೇಗೆ? ಈ ವಿಷಯವಾಗಿ ಸಾಕಷ್ಟು ತಲೆಕೆಡಿಸಿಕೊಂಡೆವು. ಅಂತೂ ಇಂತೂ ಕೊನೆಗೆ ಅವರನ್ನು ಹುಡುಕಿಯೇಬಿಟ್ಟೆವು.

ಈ ಸಲ ಬರುವಾಗ 'ಚರಿತ್ರಹೀನ'' ಕಾದಂಬರಿಯ ಹಸ್ತಪ್ರತಿಯನ್ನು ತೆಗೆದುಕೊಂಡು ಬಂದಿದ್ದ. ಬಾದಾಮಿ ಬಣ್ಣದ ಫೂಲ್ಸ್‌ಕೇಪ್ ಆಕಾರದ ಸುಮಾರು 70-80 ಪುಟಗಳಷ್ಟಿದ್ದಿರಬಹುದು. ಮುಖರ್ಜಿಯೊಂದಿಗೆ ಅವನು ಹೇಳಿದ: "ಓದಿ ನೋಡು, ನಡೆಯುತ್ತದೆಯೋ, ಕುಂಟುತ್ತದೆಯೋ ಹೇಳು. ಇದೊಂದು ಭಾರಿ ಕಾದಂಬರಿಯೇ ಆಗುತ್ತದೆ. ನಿಮ್ಮೆಲ್ಲರ ಅಭಿಪ್ರಾಯವನ್ನು ತಿಳಿದ ಮೇಲೆಯೇ ಇದನ್ನು ಪೂರೈಸುತ್ತೇನೆ. ಇಲ್ಲಿಯವರೆಗೆ ಕಥೆಯಲ್ಲಿ ನಾಯಿಕೆಯ ಪ್ರವೇಶವೇ ಆಗಿಲ್ಲ. 'ಕಿರಣ್ಮಯಿ' ಇದರ ನಾಯಿಕೆ. ಇದೊಂದು ಹೊಸ ಘಟನೆಯೇ ಆಗುತ್ತದೆ."

'ಯಮುನಾ' ಪತ್ರಿಕೆಯ ಸಂಪಾದಕರಾಗಿದ್ದ ಫಣೇಂದ್ರನಾಥ ಪಾಲರಿಗೂ ಅವನು ಈ ಹಾಳೆಗಳನ್ನು ಓದಿ ಹೇಳಿದ್ದ. ಕೇಳುತ್ತ ಕೇಳುತ್ತ ಪಾಲ್ ಅದರಲ್ಲಿಯೇ ತನ್ಮಯರಾಗಿ ಬಿಟ್ಟಿದ್ದರು. ಮತ್ತೆ ಮತ್ತೆ ಅದನ್ನು ಪೂರೈಸಿಬಿಡಬೇಕೆಂದು ಒತ್ತಾಯಪಡಿಸುತ್ತ ಅವರು ಹೇಳಿದರು: "ನಾನು ಈ ಕಾದಂಬರಿಯನ್ನು ಖಂಡಿತವಾಗಿಯೂ 'ಯಮುನಾ'ದಲ್ಲಿ ಪ್ರಕಟಿಸಬಯಸುತ್ತೇನೆ."

'ಭಾರತೀ' ಮತ್ತು 'ಸಾಹಿತ್ಯ' ಪತ್ರಿಕೆಗಳ ಸಂಪಾದಕರೊಂದಿಗೂ ಇದರ ಪ್ರಕಟಣೆಯ ವಿಚಾರವಾಗಿ ಚರ್ಚೆ ನಡೆಯಿತು. ಯಾವುದೋ ಕಾರಣದಿಂದಾಗಿ ಆಗ 'ಸಾಹಿತ್ಯ'ದ ಸಂಪಾದಕರು ಅದನ್ನು ಒಪ್ಪಿಕೊಳ್ಳಲಾರದೆ ಹೋದರು. 'ಭಾರತಿ'ಯ ಹಕ್ಕೇನೋ ಮೊದಲಿನಿಂದಲೂ ಇದ್ದೇ ಇತ್ತು. ಏಕೆಂದರೆ, ಬೆಳಕಿಗೆ ಬಂದಿದ್ದ ಅವನ ಏಕೈಕ ಕೃತಿ 'ಬಡೀ ದೀದೀ' ಅದರಲ್ಲಿಯೇ ಅಚ್ಚಾಗಿತ್ತು. ಶರತ್‌ನನ್ನು ಮೊಟ್ಟಮೊದಲು ಬೆಳಕಿಗೆ ತಂದವರು 'ಭಾರತಿ'ಯ ಸಂಪಾದಕರೇ ಎಂಬುದನ್ನು ಇಲ್ಲಿ ಹೇಳಲೇಬೇಕು. ಮುಖರ್ಜಿಯವರು ಆ ಭಾಗವನ್ನು ತಾವು ಮೊದಲು ಓದಿ, ಆಮೇಲೆ ಅದನ್ನು

1. ಅಣ್ಣಯ್ಯ ಎಂಬ ಅರ್ಥದ ಗೌರವ ಸೂಚಕ ಸಂಭೋದನೆ.
2. 1938

ಸ್ವರ್ಣಕುಮಾರಿ ದೇವಿ ಅವರಿಗೆ ಕೊಟ್ಟರು. ಆಕೆಯಂತೂ ಓದಿ ಗದ್ಗದಗೊಂಡು ಹೇಳಿದರು: "ಇದೊಂದು ಅದ್ಭುತ ಕೃತಿ. ಆದರೆ, ಆ ಕೃತಿಯನ್ನು ಇಡಿಯಾಗಿ ಓದಿದ ಮೇಲೆ ತಾನೇ, ಏನಾದರೂ ಹೇಳಲು ಸಾಧ್ಯವಾಗುವುದು ? ಅದು ಪೂರ್ಣಗೊಂಡ ಬಳಿಕ ನನಗೆ ಕೊಡಿ. ನಾನು ಇದಕ್ಕೆ 100 ರೂ.ಗಳ ಮುಂಗಡವನ್ನು ಕೊಡಬಲ್ಲೆ."

ಈ ಸೂಚನೆ ಶರತ್‌ನಲ್ಲಿ ಒಂದಿಷ್ಟು ಉತ್ಸಾಹವನ್ನುಂಟು ಮಾಡಲಿಲ್ಲ. "ಈ ಕೃತಿ ಬೇಗ ಪೂರ್ಣವಾಗುವುದಿಲ್ಲ. ನಾನು ಚೆನ್ನಾಗಿ ಆಲೋಚಿಸಿ ಬರೆಯುತ್ತಿದ್ದೇನೆ. ಆದರೆ, ಕಿರಣಮಯಿಯ ಈ ಕಥೆಯನ್ನು ಬರೆದು ಮುಗಿಸಿದ ಮೇಲೆ, ಮಹಿಳೆಯೊಬ್ಬರು ಸಂಪಾದಕರಾಗಿರುವ ಪತ್ರಿಕೆಯಲ್ಲಿ ಪ್ರಕಟವಾಗಲು ಅರ್ಹವಾಗಿ ಉಳಿದಿರುತ್ತದೆಯೆ ? ಬಹುಶಃ ಇಲ್ಲ."

ಈಗ ಇನ್ನು ಉಳಿದಿದ್ದುದು 'ಯಮುನಾ' ಮಾತ್ರ. ಇದನ್ನು ಧಾರಾವಾಹಿಯಾಗಿ ಪ್ರಕಟಿಸಬೇಕೆಂದು ತೀರ್ಮಾನಿಸಲಾಯಿತು. ಪತ್ರಿಕೆಯ ಪುಟ ಸಂಖ್ಯೆಯನ್ನು ಹೆಚ್ಚಿಸಲೂ ಫಣೀಂದ್ರನಾಥರು ಒಪ್ಪಿದರು. ಆದರೆ, ಆ ಕೃತಿಯೋ ಇನ್ನೂ ಪೂರ್ಣವಾಗಿರಲಿಲ್ಲ. ಹೀಗಾಗಿ, ಯಮುನಾದಲ್ಲಿ 'ಬೋಝಾ' ಎಂಬ ಅವನ ಹಳೆಯ ಕಥೆಯನ್ನು ಅಚ್ಚಿಸಲಾಯಿತು.[1] 'ಬಡೀ ದೀದಿ'ಯ ಬಳಿಕ ಯಾವುದೇ ಪತ್ರಿಕೆಯಲ್ಲಿ ಅವನ ಹೆಸರಿನಲ್ಲಿ ಅಚ್ಚಾದ ಮೊಟ್ಟ ಮೊದಲ ಕೃತಿ ಇದು. ಆದರೆ, ಇದನ್ನು ಅಚ್ಚಿಸಲೂ ಯಾರೂ ಅವನ ಅನುಮತಿಯನ್ನು ಕೇಳಲಿಲ್ಲ. ಸುರೇಂದ್ರನಾಥರಿಂದ ಇದನ್ನು ಪಡೆದು, ಸೌರೀಂದ್ರ ಮೋಹನರು 'ಯಮುನಾ'ಗೆ ಕೊಟ್ಟುಬಿಟ್ಟಿದ್ದರು. ಈ ವಿಚಾರ ಶರತ್‌ಗೆ ತುಂಬ ವಿಷಾದವನ್ನುಂಟು ಮಾಡಿತು. ಅವನು ಕೂಡಲೇ ತನ್ನ ಗೆಳೆಯರಿಗೆ ಬರೆದ: "ಇನ್ನು ಮುಂದೆ ನನ್ನ ಅನುಮತಿ ಇಲ್ಲದೆ ನನ್ನ ಯಾವುದೇ ಹಳೆಯ ಬರಹವನ್ನೂ ಪ್ರಕಟಿಸಕೂಡದು."

ತನ್ನ ಹಿಂದಿನ ಬರಹಗಳು ಚೆನ್ನಾಗಿಲ್ಲವೆಂಬುದು ಅವನ ಅನಿಸಿಕೆಯಾಗಿತ್ತು. ಆದರೆ, ಅವನ ಗೆಳೆಯರು ಅವನ್ನು ಬೆಳಕಿಗೆ ತರಲು ಟೊಂಕಕಟ್ಟಿ ನಿಂತಿದ್ದರು. ಆದರೆ, ಐದು ವರ್ಷಗಳ ಹಿಂದೆ 'ಬಡೀ ದೀದೀ'ಯ ಪ್ರಕಟಣೆಯ ಸಂದರ್ಭದಲ್ಲಿ ಇವರೆಲ್ಲ ಏಕೆ ತೆಪ್ಪಗಿದ್ದರು ಎಂಬುದು ಅರ್ಥವಾಗುವುದಿಲ್ಲ. ಅವರು ಶರತ್‌ನನ್ನು ಹುಡುಕಲೂ ಇಲ್ಲ, ಶರತ್‌ನೂ ಅವರಿಗೆ ಬರೆಯಲು ಪ್ರಯತ್ನಿಸಲಿಲ್ಲ. 'ಬಡೀ ದೀದೀ'ಗೆ ಅಭೂತಪೂರ್ವ ಸ್ವಾಗತ ದೊರೆತದ್ದನ್ನು ಕಂಡು ಹಾಗೂ ರವೀಂದ್ರನಾಥರ ಪ್ರಶಂಸೆಯನ್ನು ಕೇಳಿ ಹೊಸ ಕೃತಿಗಳನ್ನು ರಚಿಸುವ ಹಾಗೂ ಹಳೆಯವನ್ನು ಅಚ್ಚಿಸುವ ಪ್ರವೃತ್ತಿ ಅವನಲ್ಲಿ ಎಚ್ಚರಗೊಳ್ಳಲಿಲ್ಲವೆಂಬುದು ಆಶ್ಚರ್ಯದ ಸಂಗತಿಯಲ್ಲವೆ ?

ಅಲ್ಲಿಯವರೆಗೂ ತನ್ನ ಬರವಣಿಗೆಯ ಬಗ್ಗೆ ಅವನಿಗೆ ನಂಬಿಕೆ ಮೂಡಿರಲಿಲ್ಲ ವೆಂದು ತೋರುತ್ತದೆ. ಬಹುಶಃ ರವೀಂದ್ರನಾಥರು ತನ್ನ ವಿಷಯದಲ್ಲಿ ಮಾಡಿದ ಪ್ರಶಂಸೆಯನ್ನು ಕೇಳಿದ ಮೇಲೆ, ಅವರಂತೆಯೇ ಬರೆಯಬೇಕೆನ್ನುವ ಪ್ರವೃತ್ತಿ ಮತ್ತಷ್ಟು ಪ್ರಬಲವಾಗಿ ಅವನ ಮನಸ್ಸಿನಲ್ಲಿ ಬೇರುಬಿಟ್ಟಿತು. ಕೆಲವೇ ದಿನಗಳ ಹಿಂದೆ ಅವರಿಗೆ ನೊಬೆಲ್ ಪ್ರಶಸ್ತಿ ದೊರೆತಿತ್ತು. ಅವರಿಗೆ ದೊರೆತ ಈ ಅಭೂತಪೂರ್ವ ಖ್ಯಾತಿ

---

1. ಅಕ್ಟೋಬರ್ - ಡಿಸಂಬರ್ 1912

ನಾಡು ತಲೆಯೆತ್ತಿ ನಡೆಯುವಂತೆ ಮಾಡಿತ್ತು. ಶರತ್ ತನ್ನ ಮುಂದೆ ಅದೇ ಹಿರಿಯ ಗುರಿಯನ್ನು ಇರಿಸಿಕೊಂಡಿದ್ದಿರಬೇಕು. 'ಚರಿತ್ರಹೀನ' ಕಾದಂಬರಿಯ ರಚನೆಯ ಹಿಂದಿರುವ ಸಾಧನೆಯ ಇತಿಹಾಸ ಅವನ ಈ ಬಯಕೆಗೆ ಸಾಕ್ಷಿಯಾಗಿದೆ.

ಈ ಸಲ ಕಲ್ಕತ್ತೆಗೆ ಬಂದ ಮೇಲೆ ಅವನ ಅಜ್ಞಾತವಾಸ ಬಹುಶಃ ಕೊನೆಗೊಂಡಂತೆ ಆಗಿತ್ತು. ಅಪರಿಚಯತ್ವದ ಅಂಧಕಾರದಿಂದ ಅವನು ಹೊರಬಂದಿದ್ದ. ಭರವಸೆಯನ್ನಿರಿಸಿಕೊಳ್ಳಬಹುದಾದಂಥ ಲೇಖಕನೆಂಬಂತೆ ಅವನು ಆಗಲೇ ಖ್ಯಾತಿಯನ್ನು ಗಳಿಸಿದ್ದ. ಕೆಲಸವನ್ನು ಬಿಟ್ಟುಬಿಡುವ ಬಗ್ಗೆಯೂ ಯೋಚಿಸುವಷ್ಟರ ಮಟ್ಟಿಗೆ ಅವನು ಪ್ರತಿಷ್ಠಿತ ಲೇಖಕನಾಗಿ ಪರಿಣಮಿಸಿದ್ದ. "ಬರೆಯುವುದರಿಂದಲೇ ತಿಂಗಳಿಗೆ ಒಂದು ನೂರು ರೂಪಾಯಿಗಳಷ್ಟು ಹಣವನ್ನು ಗಳಿಸಬಹುದಾದರೆ, ನಾನು ಕೆಲಸವನ್ನು ಬಿಟ್ಟು ಕಲ್ಕತ್ತೆಯಲ್ಲಿ ಬಂದು ನೆಲೆಸುತ್ತೇನೆ" ಎಂದು ಹೇಳಿಕೊಂಡ.

'ಭಾರತಿ'ಯ ಸಂಪಾದಕಿಯಾಗಿದ್ದ ಸ್ವರ್ಣಕುಮಾರಿ ದೇವಿ ಮತ್ತು 'ಯಮುನಾ'ದ ಸಂಪಾದಕರಾಗಿದ್ದ ಫಣೀಂದ್ರನಾಥ ಪಾಲ್ ಇಷ್ಟು ಆದಾಯಕ್ಕೆ ಏರ್ಪಾಟು ಮಾಡಲು ಒಪ್ಪಿಕೊಂಡರು. ಪಾಲ್ ಅವರು ಸಂಪೂರ್ಣವಾಗಿ ಶರತ್‌ನ ಭಕ್ತರಾಗಿಬಿಟ್ಟಿದ್ದರು. ಅವನಿಗಾಗಿ ಏನು ಮಾಡಲೂ ಅವರು ಸಿದ್ಧರಾಗಿದ್ದರು. ಅವರ ತಾಯಿಯೂ ಶರತ್‌ನನ್ನು ಪ್ರೀತಿಸತೊಡಗಿದ್ದರು. ಎದುರಿಗೆ ಕೂರಿಸಿಕೊಂಡು ಉಣಬಡಿಸುತ್ತಿದ್ದರು. ತನ್ನ ತಾಯಿ ತೀರಿಕೊಂಡ 15-16 ವರ್ಷಗಳ ತರುವಾಯ ಅವನಿಗೆ ಇಂಥ ಪ್ರೀತಿ ದೊರೆತಿತ್ತು. "ಫಣೀಂದ್ರ, ನಿಮ್ಮ ತಾಯಿಯ ರೂಪದಲ್ಲಿ ನಾನು ನನ್ನ ತಾಯಿಯ ಪ್ರೀತಿಯನ್ನು ಮತ್ತೆ ಪಡೆದಂತಾಗಿದೆ" ಎಂದು ಹೇಳಿದ್ದ.

ರಂಗೂನ್‌ಗೆ ಹಿಂದಿರುಗಿದ ಮೇಲೆ ಅವನು ಅಸ್ವಸ್ಥನಾದ ಸುದ್ದಿ ತಿಳಿದಾಗ, ಆ ತಾಯಿ ಅವನ ಕ್ಷೇಮ-ಸಮಾಚಾರವನ್ನು ತಿಳಿಯಲು ತುಂಬ ಕಾತರಳಾಗಿದ್ದಳು. ಆಗ ಮತ್ತೆ ಶರತ್ ಹೀಗೆ ಬರೆದಿದ್ದ: "ನಿಮ್ಮ ತಾಯಿ ನನ್ನ ಬಗ್ಗೆ ವಿಚಾರಿಸುತ್ತಿರುತ್ತಾರೆ ಎಂಬುದು ನನ್ನ ಪಾಲಿಗೆ ಮಹಾ ಸೌಭಾಗ್ಯದ ಸಂಗತಿಯೇ ಸರಿ. ನಾನು ಪೂರ್ಣವಾಗಿ ಆರೋಗ್ಯದಿಂದಿದ್ದೇನೆ ಎಂದು ಅವರಿಗೆ ತಿಳಿಸಿ. ಒಂದು ರೀತಿಯಲ್ಲಿ, ನನ್ನ ಬಗ್ಗೆ ವಿಚಾರಿಸಿಕೊಳ್ಳುವಂಥವರು ಈ ಲೋಕದಲ್ಲಿ ಯಾರೂ ಇಲ್ಲ. ಹೀಗಾಗಿ, ಯಾರಾದರೂ ನನ್ನ ಕಷ್ಟ-ಸುಖಗಳನ್ನು ವಿಚಾರಿಸಿಕೊಳ್ಳಲು ಇಚ್ಛಿಸಿದ್ದಾರೆಂಬುದನ್ನು ಕೇಳಿದರೆ ಕೃತಜ್ಞತೆಯಿಂದ ಹೃದಯ ತುಂಬಿ ಬರುತ್ತದೆ. ಈ ಲೋಕದಲ್ಲಿ ನನ್ನಂಥ ಹತಭಾಗ್ಯರು ಹಲವರಿಲ್ಲ...."

ಇದಾದ ಕೆಲವು ದಿನಗಳ ಬಳಿಕ, ರಂಗೂನ್‌ನಿಂದ ಅವನು ತನ್ನ ಗೆಳೆಯ ಪ್ರಮಥನಾಥನಿಗೆ ಒಂದು ಕಾಗದ ಬರೆದಿದ್ದ. ತನ್ನ ಶಕ್ತಿಯನ್ನು ಅವನು ಗುರುತಿಸಿಕೊಂಡಿದ್ದನೆಂಬುದು ಹಾಗೂ ನಿಯಮಿತ ರೂಪದಲ್ಲಿ ಬರವಣಿಗೆಯಲ್ಲಿ ತೊಡಗುವ ಹಾದಿ ನಿರಾತಂಕವಾಗಿ ಪರಿಣಮಿಸಿತ್ತೆಂಬುದು ಈ ಕಾಗದದಿಂದಲೂ ಸ್ಪಷ್ಟವಾಗುತ್ತದೆ. ಅದರಲ್ಲಿ ಹೀಗೆ ಬರೆದಿದ್ದ: "ಪ್ರಮಥ, ಅಹಂಭಾವದ ಒಂದು ಮಾತನ್ನು ಹೇಳಬಯಸುತ್ತೇನೆ. ದಯವಿಟ್ಟು ಕ್ಷಮಿಸು. ಹಾಗೆ ಮಾಡುವುದಾದಲ್ಲಿ ಮಾತ್ರ ಹೇಳುತ್ತೇನೆ. ರವೀಂದ್ರರನ್ನು ಬಿಟ್ಟರೆ ನನಗಿಂತ ಚೆನ್ನಾಗಿ ಯಾರೂ ಕಥೆ-ಕಾದಂಬರಿಗಳನ್ನು ಬರೆಯಲಾರರು. ಈ ಮಾತು ನಿನ್ನ ಅರಿವಿಗೆ ಬಂದಾಗಲೇ

ನನ್ನನ್ನು ಬರೆಯುವಂತೆ ಹೇಳು; ಅದಕ್ಕೆ ಮೊದಲು ಹೇಳಲೇಬೇಡ. ಇದು ನಾನೇ ಮಾಡುತ್ತಿರುವ ಒತ್ತಾಯ. ಈ ವಿಷಯದಲ್ಲಿ ಯಾರ ಸುಳ್ಳು ಸಹಾನುಭೂತಿಯೂ ನನಗೆ ಬೇಕಾಗಿಲ್ಲ; ನಿಜವಾದ ಅಭಿಪ್ರಾಯ ನನಗೆ ಬೇಕು."

ಮಾವ ಉಪೇಂದ್ರನಾಥರಿಗೆ ಬರೆದ ಕಾಗದದಲ್ಲಿ ಮತ್ತಷ್ಟು ಸ್ಪಷ್ಟವಾದ ಮಾತುಗಳಲ್ಲಿ ಬರೆದಿದ್ದ: "ರವೀಂದ್ರರನ್ನು ಬಿಟ್ಟರೆ, ಈ ಯುಗದಲ್ಲಿ ನನಗಿಂತ ಚೆನ್ನಾಗಿ ಜನಮನವನ್ನು ತಿಳಿದವರು ಬೇರೆ ಯಾರೂ ಇಲ್ಲ. ನಾನು ಅಹಂಕಾರ ಪಡುತ್ತಿದ್ದೇನೆ ಎಂದು ಭಾವಿಸಬೇಡ. ಇದನ್ನು ಆತ್ಮವಿಶ್ವಾಸವೆಂದಾದರೂ ಭಾವಿಸು, ಅಹಂಕಾರವೆಂದಾದರೂ ಭಾವಿಸು. ನನ್ನ ನಿಲುವು ಮಾತ್ರ ಇದೇ."[1]

ಅವನ ಈ ನಿಲುವು ಕೊನೆಯವರೆಗೂ ಹಾಗೆಯೇ ಇತ್ತು. ಅನೇಕ ವರ್ಷಗಳ ಬಳಿಕ, ಕಥಾಶಿಲ್ಪಿ ಶರತ್‌ಚಂದ್ರರು ಹೀಗೆಂದು ಹೇಳಿದ್ದರು: "ನನಗೆ ವಯಸ್ಸಾಯಿತು. ರವೀಂದ್ರನಾಥರಿಗೂ ವಯಸ್ಸಾಗಿದೆ. ನಮ್ಮ ತರುವಾಯ ಬಂಗಾಳಿ ಭಾಷೆಯ ಕಾದಂಬರಿ ಸಾಹಿತ್ಯದ ಸ್ಥಾನ ಬಹುಶಃ ಕೆಳಗಿಳಿದು ಬಿಡುತ್ತದೇನೋ ಎಂದು ಆಗಾಗ್ಗೆ ಅನುಮಾನ ಮೂಡುತ್ತಿರುತ್ತದೆ."

ಈ ಹೊತ್ತಿನಲ್ಲಿಯೇ ಬಂಗಾಳಿ ಸಾಹಿತ್ಯ ಲೋಕದಲ್ಲಿ ಕ್ರಾಂತಿಕಾರಿ ಘಟನೆಯೊಂದು ಸಂಭವಿಸಿತು. 'ಭಾರತ ವರ್ಷ' ಎಂಬ ಹೆಸರಿನ ಪತ್ರಿಕೆಯೊಂದು ಬಹುಬೇಗ ಹೊರಬರಲಿದೆಯೆಂಬ ಸುದ್ದಿ ಹರಡಿಕೊಂಡಿತು. ಸುಪ್ರಸಿದ್ಧ ನಾಟಕಕಾರರಾಗಿದ್ದ ದ್ವಿಜೇಂದ್ರಲಾಲ್ ರಾಯ್ ಅವರನ್ನು ಆ ಪತ್ರಿಕೆಯ ಸಂಪಾದಕರೆಂದು ಹೆಸರಿಸಲಾಯಿತು. ಅದರ ವಾರ್ಷಿಕ ಚಂದಾ ಆರು ರೂಪಾಯಿಗಳೆಂದೂ ನಿಗದಿಪಡಿಸಲಾಯಿತು. ಆಗ ಯಾವುದೇ ಪತ್ರಿಕೆಯ ವಾರ್ಷಿಕ ಚಂದಾ ಮೂರು ರೂಪಾಯಿ ಆರು ಆಣೆಗಳಿಂತ ಹೆಚ್ಚಾಗಿರಲಿಲ್ಲ. ತನ್ನ ಚಂದಾ ಹಣದ ಹೆಚ್ಚಳದಿಂದಾಗಿಯೇ 'ಭಾರತ ವರ್ಷ' ಆಶ್ಚರ್ಯ ಕುತೂಹಲ ಗಳನ್ನುಂಟುಮಾಡಿತು.

ಕೆಲವು ವರ್ಷಗಳ ಹಿಂದೆ ಕಲ್ಕತ್ತೆಯಲ್ಲಿ 'ಈವಿನಿಂಗ್ ಕ್ಲಬ್' ಎಂಬ ಹೆಸರಿನಲ್ಲಿ ಸಂಜೆಯ ಕೂಟವೊಂದು ಸ್ಥಾಪಿತವಾಗಿತ್ತು. ಇದಕ್ಕೆ ಅಧ್ಯಕ್ಷರಾಗಿದ್ದವರು ದ್ವಿಜೇಂದ್ರಲಾಲ್ ರಾಯ್ ಮತ್ತು ಸಂಪಾದಕತ್ವದ ಹೊಣೆ ಬಿದ್ದಿದ್ದುದು ಪ್ರಮಥನಾಥ ಭಟ್ಟಾಚಾರ್ಯರ ಮೇಲೆ. ಪ್ರಸಿದ್ಧ ಪ್ರಕಾಶಕರಾಗಿದ್ದ – 'ಗುರುದಾಸ ಚಟ್ಟೋಪಾಧ್ಯಾಯ ಅಂಡ್ ಸನ್ಸ್' ಸಂಸ್ಥೆಯ ಮಾಲೀಕರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯರು ಇದರ ಮುಖ್ಯ ಪೋಷಕರೂ ಬೆಂಬಲಿಗರೂ ಆಗಿದ್ದರು. ಅನೇಕ ಗಣ್ಯ ವಿದ್ವಾಂಸರು ಈ ಸಂಸ್ಥೆಯ ಇತರ ಸದಸ್ಯರಾಗಿದ್ದರು. ಕೂಟದ ವತಿಯಿಂದ ಪತ್ರಿಕೆಯೊಂದನ್ನು ಹೊರತರಬೇಕೆಂಬ ಸೂಚನೆಯನ್ನು ಪ್ರಮಥ ನಾಥರು ಮುಂದಿರಿಸಿದ್ದರು.

ಅಧ್ಯಕ್ಷರಾಗಿದ್ದ ದ್ವಿಜೇಂದ್ರಲಾಲ್ ರಾಯ್ ಅವರು ಹೀಗೆ ಹೇಳಿದ್ದರು: "ಇದರಿಂದ ನಮ್ಮ ಕೂಟಕ್ಕೆ ಆರ್ಥಿಕವಾಗಿ ನಷ್ಟವೇ ಆಗುತ್ತದೆ. ಎಲ್ಲಿಯವರೆಗೆ ಸದಸ್ಯರ ಸಂಖ್ಯೆ ನೂರರವರೆಗೆ ಸೀಮಿತವಾಗಿರುತ್ತದೆಯೋ ಅಲ್ಲಿಯವರೆಗೆ ಪತ್ರಿಕೆಯನ್ನು

1. 22 ಆಗಸ್ಟ್ 1913

ಹೊರತರುವುದು ಕೇವಲ ಮೂರ್ಖತೆಯ ವಿಚಾರವಾಗುತ್ತದೆ."

ಇತರ ಸದಸ್ಯರೂ ಅವರನ್ನು ಬೆಂಬಲಿಸಿದರು. ಆದರೆ, ಪ್ರಮಥನಾಥರು ಹಠವಾದಿಗಳಾಗಿದ್ದರು. ಕೂಟದ ವತಿಯಿಂದ ಅಲ್ಲದಿದ್ದರೇನಂತೆ! ಪತ್ರಿಕೆಯಂತೂ ಹೊರಬರಬಹುದಲ್ಲ! ರಾಯ್ ಅವರ ಸಂಪಾದಕತ್ವದಲ್ಲಿ 'ಭಾರತ ವರ್ಷ' ಎಂಬ ಹೆಸರಿನಲ್ಲಿ ಪತ್ರಿಕೆಯೊಂದನ್ನು ಹೊರತರಬೇಕೆಂದು ಅವರು ತೀರ್ಮಾನಿಸಿಯೇ ಬಿಟ್ಟರು. ತನ್ನ ಜೊತೆಗೂಡುವಂತೆ ಗೆಳೆಯನೂ ಸಹಪಾಠಿಯೂ ಆಗಿದ್ದ ಹರಿದಾಸ್ ಚಟ್ಟೋಪಾಧ್ಯಾಯರನ್ನು ಅವರು ಒಪ್ಪಿಸಿಬಿಟ್ಟರು. ಶರತ್‌ನನ್ನು ಬರೆಯುವಂತೆ ಮಾಡಬಲ್ಲೆವಾದರೆ, ಯಾವುದೇ ಚಿಂತೆಗೂ ಎಡೆ ಇರುವುದಿಲ್ಲವೆಂದು ಅವರಿಗೆ ಭರವಸೆ ಕೊಟ್ಟರು. ಬೇರಾವ ಪತ್ರಿಕೆಯೂ ಆಗ ಅದನ್ನು ಎದುರಿಸಿ ನಿಲ್ಲಲಾರದೆಂಬ ನಂಬಿಕೆಯನ್ನೂ ಮೂಡಿಸಿದರು.

ಶರತ್‌ನ ಲೇಖನಿಯ ವಿಷಯದಲ್ಲಿ ಅವನ ಗೆಳೆಯರಿಗೆ ಇಷ್ಟೊಂದು ನಂಬಿಕೆ ಇದ್ದಾಗ, ಅವನ ಮನಸ್ಸಿನಲ್ಲಿ ರವೀಂದ್ರನಾಥರಂತೆ ಬರೆಯಬೇಕೆಂಬ ಭಾವನೆ ಮೂಡಿದ್ದರೆ, ಅದು ಸ್ವಾಭಾವಿಕವಾದುದೇ. ಪ್ರಮಥನಾಥರು ಅವನ ಪರಮ ಮಿತ್ರನಾಗಿದ್ದರು. ಅವರ ಗೆಳೆಯರ ಬಳಿ ಹಣವೂ ಇತ್ತು. ಈ ಸುದ್ದಿ ತಿಳಿದಾಗ ಫಣೀಂದ್ರಪಾಲರು ಬೆಚ್ಚಿದರು. ಶರತ್ 'ಭಾರತ ವರ್ಷ'ಕ್ಕೆ ಬರೆಯತೊಡಗಿದರೆ 'ಯಮುನಾ'ದ ಗತಿಯೇನು ? ದುಡ್ಡು ತೆಗೆದುಕೊಳ್ಳದೆಯೇ ಅವನು 'ಯಮುನಾ'ಗೆ ಬರೆಯುತ್ತಾನೆಯೇ ?

ಈ ವಿಚಾರ ಶರತ್‌ಗೆ ತಿಳಿದಾಗ, ತಾನು 'ಯಮುನಾ'ಕ್ಕೆ ಬರೆಯುವುದಾಗಿಯೂ, ಹಣಕ್ಕೆ ಗುಲಾಮನಾಗುವುದಿಲ್ಲವೆಂದೂ, ಫಣೀಂದ್ರರಿಗೆ ಅವನು ಭರವಸೆ ಕೊಟ್ಟ. 'ಭಾರತ ವರ್ಷ' ಪ್ರಕಟಣೆಯನ್ನು ಇನ್ನೂ ಆರಂಭಿಸಿಲ್ಲವಾದ್ದರಿಂದ ಚಿಂತಿಸುವ ಆಗತ್ಯವಿಲ್ಲವೆಂದೂ ಅವರಿಗೆ ಸಮಾಧಾನ ಹೇಳಿದ.

## 11

ರಂಗೂನ್‌ಗೆ ಹಿಂದಿರುಗಿದ ಮೇಲೆ ಶರತ್ ಒಂದು ಕಥೆಯನ್ನು ಬರೆಯತೊಡಗಿದ. ಯೋಗೇಂದ್ರನಾಥ ಸರ್ಕಾರ್ ಅವರನ್ನು ಬಿಟ್ಟರೆ ಬೇರೆ ಯಾರಿಗೂ ಈ ರಹಸ್ಯ ಗೊತ್ತಿರಲಿಲ್ಲ. ಬರೆಯಲು ಸಾಧ್ಯವಾದಷ್ಟನ್ನು ಪ್ರತಿದಿನವೂ ಕಛೇರಿಗೆ ಹೋಗಿ ಅವರಿಗೆ ಓದಿ ಹೇಳುತ್ತಿದ್ದ. ಅವರು ಎಲ್ಲ ಕೆಲಸಗಳನ್ನೂ ಬಿಟ್ಟು ಅದನ್ನು ಕೇಳುತ್ತಿದ್ದರು. ಮೊದಲಿನಿಂದಲೂ ಅವರನ್ನು ಈ ಕಥೆ ಮರುಳುಗೊಳಿಸಿತ್ತು. ಅದು ಅವರನ್ನು ಎಷ್ಟರಮಟ್ಟಿಗೆ ಮರುಳುಗೊಳಿಸಿತ್ತೆಂದರೆ ಶರತ್‌ನ ಸ್ವಭಾವ ಗೊತ್ತಿದ್ದರೂ, ತಮ್ಮ ಇತರ ಗೆಳೆಯರೊಂದಿಗೆ ಅವರು ಈ ರಹಸ್ಯವನ್ನು ಹಂಚಿಕೊಳ್ಳತೊಡಗಿದರು. ಆದರೆ, ಯಾರಿಗೂ ನಂಬಿಕೆ ಮೂಡಲಿಲ್ಲ. ತಮ್ಮ ಜೊತೆಗಾರನಾದ ಗುಮಾಸ್ತನೊಬ್ಬ ಇಷ್ಟು ಒಳ್ಳೆಯ ಕಥೆ ಬರೆಯಬಲ್ಲನೆಂದು ಅವರು ಒಪ್ಪುವುದು ಹೇಗೆ ತಾನೆ ಸಾಧ್ಯವಿತ್ತು ? ಅಂಚೆ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದ ವಿಭೂತಿ ಭೂಷಣ ಭಟ್ಟರು ಮಾತ್ರ ಅವರ ಮಾತನ್ನು ನಂಬಿದರು. ಅವರೆಂದರು: "ಯೋಗೇಂದ್ರ, ನೀವು ಹೇಳುವುದೇನೋ ಸರಿ. ಶರತ್‌ನಲ್ಲಿ ಅಸಾಮಾನ್ಯ ಶಕ್ತಿ ಅಡಗಿದೆಯೆಂಬ ಅನುಮಾನ

ನನಗೆ ಬಹುದಿನಗಳಿಂದಲೂ ಇದ್ದೇ ಇತ್ತು. ಆದರಲ್ಲಿಯೂ ಆತನ ಚಿತ್ರರಚನೆಯನ್ನು ನೋಡಿದ ಮೇಲೆ ನನ್ನ ಈ ಅನುಮಾನ ಬಲಗೊಂಡಿತ್ತು. ನೀವು ಹೇಳುತ್ತಿರುವುದು ನಿಜವೇ ಆಗಿರಬೇಕೆಂದು ನಾನೀಗ ಭಾವಿಸುತ್ತಿದ್ದೇನೆ."

ಆದರೆ, ನಿಧಾನವಾಗಿ ಹತ್ತು ದಿನಗಳು ಕಳೆದು ಹೋದರೂ ಕಥೆ ಪೂರ್ಣಗೊಳ್ಳಲಿಲ್ಲ. ಅರ್ಧ ಮಾತ್ರ ಬರೆಯಲು ಸಾಧ್ಯವಾಗಿತ್ತು. ಒಂದು ಸಂಚಿಕೆಗೆ ಸಾಕಾಗಬಹುದೆಂದು ಯೋಚಿಸಿ, ಶರತ್ ಫಣೀಂದ್ರರಿಗೆ ಆ ಅರ್ಧಂಬರ್ಧವಾಗಿದ್ದ ಕಥೆಯನ್ನೇ ಕಳಿಸಿಬಿಟ್ಟ. 'ರಾಮೇರ್ ಸುಮತಿ' ಎಂದು ಅದಕ್ಕೆ ಹೆಸರಿಟ್ಟಿದ್ದ. ಅವನು ಒಂದೇ ಸಮ ಒಂದಲ್ಲ ಒಂದು ವಿಷಯವನ್ನು ಕುರಿತು ಬರೆಯುತ್ತಲೇ ಇದ್ದ. ಆದರೆ ಇದು ಅವನ ಹೊಸ ಬದುಕಿನ ಮೊದಲ ಕೃತಿಯಾಗಿತ್ತು. ಇದು ಕೈಸೇರಿದಾಗ 'ಯಮುನಾ'ದ ಸಂಪಾದಕರು ಗದ್ಗದಗೊಂಡರು. ಇದನ್ನು ಓದಿ ಓದುಗರು ಬೆರಗಾದರು, ಮೈಮರೆತರು. ಬಂಗಾಳದಲ್ಲಿ ಕೋಲಾಹಲವೇ ಉಂಟಾಯಿತು.

ಕಲ್ಕತ್ತೆಯಲ್ಲಿ ಒಂದು ದಿನ 'ಜಾಹ್ನವಿ' ಪತ್ರಿಕೆಯ ಕಛೇರಿಯಲ್ಲಿ ಅನೇಕ ಸಾಹಿತಿಗಳು ಒಂದುಗೂಡಿದ್ದರು. " 'ಯಮುನಾ'ದಲ್ಲಿ 'ರಾಮೇರ್ ಸುಮತಿ' ಎಂಬ ಹೆಸರನ್ನುಳ್ಳ ಅದ್ಭುತ ಕಥೆಯೊಂದು ಪ್ರಕಟವಾಗಿದೆ. ನಾನು ಇಂಥ ಕಥೆಯನ್ನು ಬೇರೆಲ್ಲಿಯೂ ಓದಿಲ್ಲ" ಎಂದು ಪ್ರಭಾತ್ ಕುಮಾರ್ ಗಂಗೋಪಾಧ್ಯಾಯರು ಆ ಗೋಷ್ಠಿಗೆ ತಿಳಿಸಿದರು.

ಅವರ ಈ ಮಾತನ್ನು ಕೇಳಿ ಎಲ್ಲರೂ ಆಶ್ಚರ್ಯ ಚಕಿತರಾದರು. ಹೇಮೇಂದ್ರ ಕುಮಾರ್ ರಾಯ್ ಕೇಳಿದರು: "ಯಾರ ಕಥೆ ?"

ಪ್ರಭಾತ್ ಕುಮಾರ್ ಉತ್ತರಿಸಿದರು: "ಯಾರೋ ಶರತ್‌ಚಂದ್ರ ಚಟ್ಟೋಪಾಧ್ಯಾಯ ಅನ್ನುವವರದು."

ಹೇಮೇಂದ್ರನಿಗೆ ಒಮ್ಮೆಗೇ ನಂಬಿಕೆ ಮೂಡಲಿಲ್ಲ. ಕೂಡಲೇ ಆ ಕಥೆಯನ್ನು ತೆಗೆದುಕೊಂಡು ಓದಲು ಕುಳಿತುಬಿಟ್ಟರು. ಈ ಬಗ್ಗೆ ಅವರು ಹೀಗೆಂದು ಬರೆದಿದ್ದಾರೆ: "ಓದುತ್ತ ಹೋದಂತೆ ಮನಸ್ಸಿನಲ್ಲಿ ಒಂದು ಬಗೆಯ ಅದ್ಭುತ ವಿಸ್ಮಯದ ಭಾವನೆ ತುಂಬಿಕೊಂಡಿತು. ಬಂಗಾಳಿ ಭಾಷೆಯಲ್ಲಿ ಖಂಡಿತವಾಗಿಯೂ ಎಂದೂ ಇಂಥ ಕಥೆ ಪ್ರಕಟವಾಗಿರಲಿಲ್ಲ. ಒಟ್ಟಾರೆ ಅಸಾಮಾನ್ಯ ದರ್ಜೆಯ ಲೇಖಕನ ಕೊಡುಗೆ ಎಂದು ತೋರಿತು. ಆದರೆ, ಈ ಶರತ್‌ಚಂದ್ರ ಚಟ್ಟೋಪಾಧ್ಯಾಯ ಯಾರು ? ಯಾವನೋ ಒಬ್ಬ ಲೇಖಕನ ಗುಟ್ಟಿನ ಹೆಸರೇ ಇದು ? ಯಾವನೇ ಹೊಸ ಲೇಖಕನ ಕೈ ಇಷ್ಟರಮಟ್ಟಿಗೆ ಪಳಗಿರುವುದು ಸಾಧ್ಯವಿಲ್ಲ. ರವೀಂದ್ರನಾಥರ ಮೊದಲ ರಚನೆಗಳಲ್ಲಿ ವಯೋ ಸಹಜವಾದ ದೌರ್ಬಲ್ಯಗಳಿಗೆ ಕೊರತೆಯೇನೂ ಇರಲಿಲ್ಲ. ಆದರೆ ಈ ಪ್ರತಿಭಾವಂತನ ಬಗೆಯೇ ಬೇರೆಯಾಗಿದೆಯಲ್ಲ! ಬಾತುಕೋಳಿಯ ಮರಿ ಹುಟ್ಟುತ್ತಲೇ ಈಜಬಲ್ಲದು. ಆದರೆ ಲೇಖನಿಯನ್ನು ಹಿಡಿದ ಕೂಡಲೇ ಸಾಹಿತಿಯಾದವನು ಇಂಥ ಪ್ರೌಢಕೃತಿಯನ್ನು ಸೃಷ್ಟಿಸಲಾರ. ಅದೆಷ್ಟು ಪ್ರಯತ್ನ ಮತ್ತು ಪರಿಶ್ರಮ, ಅದೆಷ್ಟು ಸುದೀರ್ಘಸಾಧನೆಯ ಬಳಿಕವೇ ಒಬ್ಬ ಶ್ರೇಷ್ಠ ಸಾಹಿತಿ ಪರಿಪೂರ್ಣತೆಯನ್ನು ಸಾಧಿಸಬಲ್ಲವನಾಗುತ್ತಾನೆ."

ಅವರು ಕೂಡಲೇ ಲೇಖಕನನ್ನು ಹುಡುಕತೊಡಗಿದರು. ಎರಡು ದಿನಗಳಲ್ಲಿಯೇ

ಶರತ್‌ಚಂದ್ರ ಚಟ್ಟೋಪಾಧ್ಯಾಯ ನಿಜವಾಗಿಯೂ ಒಬ್ಬ ಹೊಸ ಲೇಖಕ. ಆದರೆ ಯೌವನದ ಕಾಲಿರಿಸಿದಂದಿನಿಂದಲೂ ಅವನು ನಿಯತರೂಪದಲ್ಲಿ ಸದ್ದಿಲ್ಲದೆ ಸಾಹಿತ್ಯ ಸಾಧನೆಯಲ್ಲಿ ನಿರತನಾಗಿದ್ದ ಎಂಬುದನ್ನು ಅವರು ಕಂಡುಕೊಂಡರು. ಆರು ವರ್ಷಗಳಿಗೆ ಹಿಂದೆ ಅವನು ಬರೆದಿದ್ದ 'ಬಡೀ ದೀದೀ' ಭಾರತಿಯಲ್ಲಿ ಪ್ರಕಟವಾಗಿತ್ತು. ಆಗಲೂ ಅದು ಎಲ್ಲರ ಗಮನವನ್ನು ತನ್ನತ್ತ ಸೆಳೆದುಕೊಂಡಿತ್ತು ಎಂಬುದೂ ಅವರಿಗೆ ಗೊತ್ತಾಯಿತು.

ನಾಟಕಕಾರರಾಗಿದ್ದ ದ್ವಿಜೇಂದ್ರಲಾಲ ರಾಯ್ ಅವರೂ 'ರಾಮೇರ್ ಸುಮತಿ'ಯನ್ನು ಓದಿದರು. ಆನಂದ ಪರವಶರಾಗಿ ಅವರು 'ಈವಿನಿಂಗ್ ಕ್ಲಬ್'ನಲ್ಲಿ ಅದನ್ನು ಹೊಗಳಿದರು. "ಆತನ ಕೃತಿಗಳನ್ನು 'ಭಾರತ ವರ್ಷ'ಕ್ಕೆ ಪಡೆದುಕೊಳ್ಳಲು ನೀನು ಪ್ರಯತ್ನಿಸು. ಮುಂದೆ ಆತ ಬಂಗಾಳಿ ಸಾಹಿತ್ಯದಲ್ಲಿ ಹೊಸಯುಗವನ್ನು ಆರಂಭಿಸುತ್ತಾನೆ" ಎಂದು ಅವರು ಪ್ರಮಥನಾಥನಿಗೆ ಹೇಳಿದರು.

ಅಂದಿನ ಸುಪ್ರಸಿದ್ಧ ಕತೆಗಾರರಾಗಿದ್ದ ಪ್ರಭಾತ್‌ಕುಮಾರ್ ಮುಖೋಪಾಧ್ಯಾಯ ರನ್ನು ಶರತ್‌ಚಂದ್ರರ ಈ ಕಥೆ ಖಂಡಿತವಾಗಿಯೂ ಹಿಂದಕ್ಕೆ ತಳ್ಳಿಬಿಟ್ಟಿತು. ಹತ್ತಿಕ್ಕಲು ಸಾಧ್ಯವಿಲ್ಲದಿದ್ದಂಥ ತುಂಟನಾಗಿದ್ದ ರಾಮುನನ್ನು ಮನೆಯೊಳಗೆ ಕೂಡಿ ಹಾಕಿ, ಬೆತ್ತದಿಂದ ಬೆನ್ನಿನ ಮೇಲೆ ನರಾಯಣಿ ಬಾರಿಸುತ್ತ ಹೋಗುವ ಹಾಗೂ ಓಡೋಡುತ್ತ ರಾಮ ಅಳುತ್ತ ಇರುವ ದೃಶ್ಯದ ವರ್ಣನೆಯನ್ನು ಕಂಡು ದ್ವಿಜೇಂದ್ರಲಾಲ ರಾಯರು ಅದೆಷ್ಟು ಪ್ರಭಾವಿತರಾದರೆಂದರೆ "ಪ್ರಮಥ್ ಇದು ನಿಜಕ್ಕೂ ಫಸ್ಟ್ ಕ್ಲಾಸ್ ಭಾಷೆ. ನಾನು ಈ ವ್ಯಕ್ತಿಯನ್ನು ಭೇಟಿಯಾಗಬಯಸುತ್ತೇನೆ" ಎಂದು ಹೇಳಿದರು.

ಅವರು ನಾಟಕಕಾರರಾಗಿದ್ದರು. ಕಥೆಯ ನಾಟಕೀಯ ಸತ್ವ ಅವರ ಮನಸ್ಸನ್ನು ಮರುಳುಗೊಳಿಸಿತ್ತು. ಅದು ಅವರ ಮನಸ್ಸನ್ನು ಎಷ್ಟರಮಟ್ಟಿಗೆ ಸೆಳೆದಿತ್ತೆಂದರೆ, ಮಗಳು ಮಾಯಾಳನ್ನು ಕರೆದು " 'ರಾಮೇರ್ ಸುಮತಿ'ಯನ್ನು ಓದಿದಾಗ ನಿನಗೆ ಏನನ್ನಿಸಿತು ?" ಎಂದು ಕೇಳಿದರು.

ಮಾಯಾ, ಪಾಪ ಇನ್ನೂ ಚಿಕ್ಕ ಹುಡುಗಿ. "ತುಂಬ ಚೆನ್ನಾಗಿದೆ, ಅಪ್ಪ" ಎಂದಳು.

ರಾಯರು ನಕ್ಕು ಹೇಳಿದರು: "ತುಂಬ ಚೆನ್ನಾಗಿದೆ ಎಂದೇಕೆ ಹೇಳುತ್ತೀಯೆ. ಅದೊಂದು ಆಶ್ಚರ್ಯ, ಚಮತ್ಕಾರ ಎಂದು ಹೇಳು."

ರಾಯರ ಮಗ ದಿಲೀಪ್ ಕುಮಾರ್ ಕೂಡ ಈ ಕಥೆಯಿಂದ ಪ್ರಭಾವಿತರಾಗಿದ್ದರು. ಕೆಲವೇ ದಿನಗಳ ಹಿಂದೆ ಅವರು ಪ್ರಭಾತ್ ಮತ್ತು ಶರತ್ ಅವರ ವಿಷಯದಲ್ಲಿ ಪ್ರಮಥನಾಥರೊಂದಿಗೆ ಚರ್ಚೆ ನಡೆಸಿದ್ದರು. ಅವರು ಪ್ರಭಾತ್ ಕುಮಾರರನ್ನು ಮೆಚ್ಚಿಕೊಂಡಿದ್ದರೆ, ಪ್ರಮಥರು ಶರತ್‌ನನ್ನು ಮೆಚ್ಚಿಕೊಂಡಿದ್ದರು. ಆದರೆ, 'ರಾಮೇರ್ ಸುಮತಿ'ಯನ್ನು ಓದಿದ ತರುವಾಯ ದಿಲೀಪ್‌ಕುಮಾರ್ ಪ್ರಭಾತರನ್ನು ಸಂಪೂರ್ಣವಾಗಿ ಮರೆತುಬಿಟ್ಟರು. ಓದುತ್ತ ಇದ್ದಂತೆ ಉಕ್ಕಿಬರುತ್ತಿದ್ದ ಕಣ್ಣೀರಿನಲ್ಲಿ ಶಬ್ದಗಳು ಮಸುಕಾಗಿ ಬಿಡುತ್ತಿದ್ದುವು; ಅದರಲ್ಲಿಯೇ ಮುಳುಗಿಹೋಗುತ್ತಿದ್ದುವು. ಇಂಥ ಕಥೆಯನ್ನು ಯಾರೂ ಓದಿರಲಿಲ್ಲ. ತರುಣ ತರುಣಿಯರ ನಿಟ್ಟುಸಿರಾಗಲೀ, ಪೊಲೀಸ್-ಕಾರಖಾನರ ಅಬ್ಬರ-ಬಯ್ದಾಟಗಳಾಗಲೀ ಅದರಲ್ಲಿ ಇರಲಿಲ್ಲ. ಅದರಲ್ಲಿ ಇದ್ದುದೆಲ್ಲಾ ಮಾತೃಸ್ವರೂಪಳಾಗಿದ್ದ ಅತ್ತಿಗೆಯ ಪ್ರೀತಿ ಹಾಗೂ ಅತಿ ತುಂಟನಾಗಿದ್ದ

ಬಾಲಕನ ಕುರುಕ್ಷೇತ್ರ ಕಾಂಡ.

ಪ್ರಮಥರು ಕೇಳಿದರು: "ಏನಪ್ಪಾ, ಹೇಗಿದೆ ಶರತ್‌ಚಂದ್ರರ 'ರಾಮೇರ್ ಸುಮತಿ'? ಪ್ರಭಾತರಿಗಿಂತ ಅವರು ಕಮ್ಮಿ ಏನು?"

ಪುಲಕಿತರಾಗಿ ದಿಲೀಪ್ ಕೇಳಿದರು: "ಅವರು ಬರ್ಮಾದಲ್ಲಿ ಏಕಿದ್ದಾರೆ?"

ಪ್ರಮಥರು ಉತ್ತರಿಸಿದರು: "ಆತನೊಬ್ಬ ಮಹಾ ಹುಚ್ಚ. ಇಲ್ಲದಿದ್ದರೆ ಇಂಥ ದುಃಸ್ಥಿತಿ ಏಕೆ ಆಗುತ್ತಿತ್ತು? ಬರ್ಮಾ ಹೇಳಿಕೇಳಿ ಆಡು-ಕುರಿಗಳ ದೊಡ್ಡಿ. ದುಃಖದ ಸಂಗತಿಯನ್ನೇನು ಹೇಳಲಿ? ಆತ ರಂಗೂನಿನಲ್ಲಿದ್ದಾನೆ."

ದಿಲೀಪ್ ಹೇಳಿದರು: ಏನಂದಿರಿ? ರಂಗೂನ್ ಭಾರಿ ದೊಡ್ಡ ನಗರ. ಕಲ್ಕತ್ತೆಗಿಂತಲೂ ದೊಡ್ಡದು ಅನ್ನುತ್ತಾರೆ."

ದೊಡ್ಡದಾದರೆ ಏನಾಯಿತು? ದೊಡ್ಡಿಯಾಗಬಾರದು ಅಂತ ಇದೆಯೇನು? ಸುಂದರ ವನವೂ ಕಲ್ಕತ್ತೆಗಿಂತ ದೊಡ್ಡದಾಗಿಯೇ ಇದೆಯಲ್ಲವೆ? ಅಷ್ಟರಿಂದಲೇ ಅದು 'ಈಡನ್ ಗಾರ್ಡನ್' ಆಗಿ ಬಿಡುತ್ತದೆಯೆ?"

"ಅದೇನೋ ಆಗಲಾರದು. ಆದರೆ, ರಂಗೂನಿನ ವಿಷಯದಲ್ಲಿ ನಿಮಗೆ ಇಷ್ಟು ಕೋಪವೇಕೆ?

"ನನಗೆ ಕೋಪವೇನೂ ಇಲ್ಲ. ಆದರೂ ರಂಗೂನಿನ ವಿಷಯವನ್ನು ಯೋಚಿಸಿದರೇ ನನಗೆ ನಡುಕ ಉಂಟಾಗುತ್ತದೆ. ಅಲ್ಲಿಯ ಜನ ನಾಪ್ಪಿ[1] ತಿನ್ನುತ್ತಾರೆ. ಅದರ ದುರ್ವಾಸನೆಯನ್ನು ಸಹಿಸಲಾರದೆ ಭೂತಗಳೂ ಬೆದರಿ ಓಡುತ್ತವೆ. ಆತನಾದರೋ, ಆ ಕಿಷ್ಕಿಂಧೆಯಲ್ಲಿದ್ದುಕೊಂಡೂ ಓದುತ್ತಲೇ ಇರುತ್ತಾನೆ. 'ಲೋ ನ್ಯಾಡಾ[2] ಅಷ್ಟೊಂದು ಪುಸ್ತಕಗಳನ್ನು ಓದುವುದರಿಂದ ಏನು ಪ್ರಯೋಜನ? ನೀನು ಲೇಖನಿಯನ್ನು ಹಿಡಿದುಕೋ, ಲೇಖನಿಯನ್ನು ಕೈಗೆತ್ತಿಕೋ' ಎಂದು ಬರೆಯುತ್ತಲೇ ಇರುತ್ತೇನೆ. ಆದರೆ ನನ್ನ ಮಾತು ಕೇಳಬೇಕಲ್ಲ? ಈಚೆಗೆ ಅವನ ಮೇಲೆ ಇನ್ನೊಂದು ಭೂತ ಅಮರಿಕೊಂಡಿದೆ. ಅವನೀಗ ಚಿತ್ರಗಳನ್ನು ಬರೆಯತೊಡಗಿದ್ದಾನೆ."

"ಏನಂದಿರಿ? ಚಿತ್ರಗಳನ್ನು ಬರೆಯುತ್ತಾರೆಯೆ?"

"ಏನು ಅಂತ ಹೇಳಲಿ? ತಲೆಕೆಟ್ಟು ಹೋಗಿದೆ. ಕಲ್ಕತ್ತೆಗೆ ಬಂದು ಬಿಡು ಅಂತ ಹೇಳುತ್ತೇನೆ. ಆದರೆ ಅವನು ಬಾಯೇ ಬಿಡುವುದಿಲ್ಲ."

ಈ ಬಗೆಯ ಮಾತುಗಳಿಗೆ ಕೊನೆ ಎಂಬುದೇ ಇರಲಿಲ್ಲ. ಶರತ್‌ಚಂದ್ರ ಚಟ್ಟೋಪಾಧ್ಯಾಯ ಎಂಬ ಹೆಸರಿನಲ್ಲಿ ಅಸಾಮಾನ್ಯ ಪ್ರತಿಭಾಶಾಲಿಯಾದ ಕಥಾಶಿಲ್ಪಿಯೊಬ್ಬ ಜನ್ಮ ತಳೆದಿದ್ದಾನೆ, ಗತಕಾಲದ ದೀಪಗಳು ಆರಿಹೋಗಿವೆ[3] ಎಂದು ಅಂದು ಬಂಗಾಳಕ್ಕೆ ಅರಿವಾಯಿತು. 'ಯಮುನಾ' ಪತ್ರಿಕೆಯ ಚಂದಾದಾರರ ಸಂಖ್ಯೆ ವೇಗವಾಗಿ ಬೆಳೆಯತೊಡಗಿತು. ಅನೇಕ ಪತ್ರಿಕೆಗಳ ಸಂಪಾದಕರು ಕಥೆಗಳನ್ನು ಕಳಿಸಿಕೊಡುವಂತ ಶರತ್‌ಗೆ ಒತ್ತಾಯಪೂರ್ವಕವಾಗಿ ಕಾಗದಗಳನ್ನು ಬರೆಯತೊಡಗಿ

---

1 ಒಂದು ಬಗೆಯ ಕೊಳೆತ ಮೀನು.

2 ಶರತ್‌ನ ಅಡ್ಡ ಹೆಸರು.

3 ಓವೆನ್ ಲ್ಯಾಟಿಮೋರ್ ಹೀಗೆ ಬರೆದಿದ್ದಾನೆ: "ಹತ್ತನೆಯ ಶತಮಾನದಲ್ಲಿ ಇಸ್ಲಾಂ ಧರ್ಮ ಕಾಲಿಟ್ಟಿತು; ಗತಕಾಲದ ಎಲ್ಲ ದೀಪಗಳೂ ಆರಿಹೋದುವು."

ದರು. 'ಚರಿತ್ರ ಹೀನ' ಕಾದಂಬರಿಯನ್ನು ಪ್ರಕಟಿಸಲು ಒಪ್ಪದೆ ಹೋಗಿದ್ದ ಆ ಸಮಾಜಪತಿಗಳೂ ಕಾಗದ ಬರೆದರು. ಆಗ ಸಾಹಿತ್ಯ ಕ್ಷೇತ್ರದಲ್ಲಿ ಅವರು ದುಂದುಭಿಯನ್ನು ಮೊಳಗಿಸುತ್ತಿದ್ದರು. ಅವರ ಕೃಪೆಗೆ ಒಳಗಾದ ಲೇಖಕನ ಅದೃಷ್ಟ ಖುಲಾಯಿಸಿದಂತೆ ಆಗುತ್ತಿತ್ತು. ಅಂಥ ಪ್ರಬಲವ್ಯಕ್ತಿಯೊಬ್ಬ ಕಥೆ-ಕಾದಂಬರಿಗಳನ್ನು ಕಳಿಸಿಕೊಡುವಂತೆ ಒತ್ತಾಯಪಡಿಸಿ ವಿನಯಪೂರ್ವಕವಾಗಿ ಶರತ್‌ಚಂದ್ರರಿಗೆ ಕಾಗದ ಬರೆದುದನ್ನು ಕಂಡು, ಅವರ ಗೆಳೆಯರು ಮೂಕರಂತಾಗಿಬಿಟ್ಟರು. ಆದರೆ, ಶರತ್ ಸಂಪೂರ್ಣವಾಗಿ ನಿಸ್ಸಂಗಿಯಾಗಿಬಿಟ್ಟಿದ್ದ. ಕನಿಷ್ಠ ಪಕ್ಷ ಬಹಿರಂಗವಾಗಿಯಾದರೂ ಅವನು ಯಾವುದೇ ಬಗೆಯ ಉತ್ಸಾಹವನ್ನು ತೋರಲಿಲ್ಲ. ಗೆಳೆಯನೊಬ್ಬನಿಗೆ ಅವನು ಹೀಗೆ ಬರೆದಿದ್ದ: "ನನ್ನ ಆರೋಗ್ಯ ಸರಿಯಾಗಿಲ್ಲ. ಜೊತೆಗೆ, ಕಥೆ-ಕಾದಂಬರಿಗಳನ್ನು ಬರೆಯಬೇಕೆಂಬ ಹುಮ್ಮಸ್ಸೂ ಉಂಟಾಗುತ್ತಿಲ್ಲ. ಕಷ್ಟದಲ್ಲಿದ್ದು ಕೊಂಡೇ ನಾನು ಕಥೆಗಳನ್ನು ಬರೆಯಬೇಕಾಗಿ ಬಂದಿದೆ. ಆದರೂ ಬರೆಯುತ್ತಿದ್ದೇನೆ. ಈ ಮಧ್ಯೆ ಕಥೆಗಳನ್ನು ಕಳಿಸಿಕೊಡಬೇಕೆಂದು ಅನೇಕರು ಒತ್ತಾಯಮಾಡಿ ಬರೆಯುತ್ತಿದ್ದಾರೆ. ಆದರೆ, ನಾನು ನಿರುಪಾಯನಾಗಿದ್ದೇನೆ. ಇಷ್ಟೊಂದು ಕಥೆಗಳನ್ನು ಬರೆಯಲು ಕುಳಿತೆನೆಂದರೆ ಒದಿಗೆ ಮಂಗಳ ಹಾಡಿದಂತಾಗಿ ಬಿಡುತ್ತದೆ. ನಾನು ಪ್ರತಿ ದಿವಸ ಎರಡು ಗಂಟೆಗಳಿಗಿಂತ ಹೆಚ್ಚಾಗಿ ಬರೆಯುವುದಿಲ್ಲ. ಹತ್ತು-ಹನ್ನೆರಡು ಘಂಟೆ ಓದುತ್ತೇನೆ."

ಈ ಬಗೆಯ ಅಹಂಭಾವವಿದ್ದರೂ, ಬರೆಯುವ ಕೆಲಸ ಆರಂಭಗೊಂಡಿತ್ತು. ಹೃದಯಾಂತರಾಳದಲ್ಲಿ ಅಡಗಿದ್ದ ಬಯಕೆ ಎಚ್ಚರಗೊಂಡಿತ್ತು. ಹೀಗಾಗಿ, ಆರೋಗ್ಯ ಕೆಟ್ಟಿದ್ದರೂ ಅವನು ಒಂದೇ ಸಮ ಬರೆಯುತ್ತಲೇ ಇದ್ದ. 'ಯಮುನಾ'ದ ವಿಷಯದಲ್ಲಿ ಮೋಹಗೊಂಡಿದ್ದಂತೆ ತೋರುತ್ತಿತ್ತು. ಫಣೀಂದ್ರನಾಥರಿಗೆ ಅವನು ಹೀಗೆ ಬರೆದಿದ್ದ: "ಕಥೆ ಬರೆಯುವ ಅಭ್ಯಾಸ ಕಮ್ಮಿಯಾಗಿ ಬಿಟ್ಟದೆಯಾದರೂ, ಒಂದೆರಡು ತಿಂಗಳುಗಳಲ್ಲಿ ಸರಿಹೋಗುತ್ತದೆಂದು ಕೊಂಡಿದ್ದೇನೆ. ಪ್ರತಿ ತಿಂಗಳೂ (ಹತ್ತು-ಹನ್ನೆರಡು ಪುಟಗಳ) ಒಂದು ಸಣ್ಣ ಕಥೆಯನ್ನು, ಒಂದು ಪ್ರಬಂಧವನ್ನು ಕಳುಹಿಸಿಕೊಡುತ್ತೇನೆ. ಕಥೆಗಳು ಈಗೀಗ ತುಂಬ ತುಂಬ ಜನಪ್ರಿಯ ಪ್ರಕಾರವಾಗಿ ಪರಿಣಮಿಸಿರುವುದರಿಂದ ಕಥೆಗಳನ್ನು ಖಂಡಿತವಾಗಿ ಕಳಿಸಿಕೊಡುತ್ತೇನೆ."

ಮತ್ತೆ ಬರೆದ, ಮೂರು ಹೆಸರುಗಳಲ್ಲಿ ನನ್ನ ಕೃತಿಗಳನ್ನು ಕಳಿಸಿಕೊಡುತ್ತೇನೆ.

| | |
|---|---|
| 1. ವಿಮರ್ಶೆ ಪ್ರಬಂಧ ಇತ್ಯಾದಿ | ಅನಿಲಾ ದೇವಿ |
| 2. ಸಣ್ಣ ಕಥೆಗಳು | ಶರತ್‌ಚಂದ್ರ ಚಟ್ಟೋಪಾಧ್ಯಾಯ |
| 3. ನೀಳ್ಗತೆಗಳು | ಅನುಪಮಾ ದೇವಿ. |

ಒಂದೇ ಹೆಸರಿನಲ್ಲಿ ಎಲ್ಲ ರಚನೆಗಳೂ ಪ್ರಕಟವಾದರೆ, ಈ ವ್ಯಕ್ತಿಯನ್ನು ಬಿಟ್ಟರೆ ಈ ಸಂಪಾದಕರಿಗೆ ಬೇರಾವ ಲೇಖಕರೂ ಗತಿಯಿಲ್ಲ ಎಂದು ಓದುಗರು ಭಾವಿಸಿಯಾರು ಎಂದು ಅವನು ಈ ಸೂಚನೆ ಕೊಟ್ಟಿದ್ದ.

ಅನಿರೀಕ್ಷಿತವಾಗಿ ಒದಗಿಬಂದ ಈ ಜನಪ್ರಿಯತೆಯ ಮತ್ತೊಂದು ಪರಿಣಾಮವೂ ಉಂಟಾಯಿತು. ಅವನ ಗೆಳೆಯರು ತಮ್ಮ ಬಳಿ ಬಿದ್ದಿದ್ದ ಅವನ ಬಾಲ್ಯಕಾಲದ

ರಚನೆಗಳನ್ನೆಲ್ಲ ಈಗ ಹುಡುಕಿ ಹುಡುಕಿ ಹೊರತೆಗೆದು ಅಲ್ಲಿ ಇಲ್ಲಿ ಪ್ರಕಟಿಸತೊಡಗಿದರು. 'ಬೋರ್ಝಾ'ದ ಪ್ರಕಟಣೆಯ ಬಳಿಕ ಒಂದು-ಒಂದೂ ಕಾಲುವರ್ಷದ ಅವಧಿಯ ಒಳಗಾಗಿ 'ಬಾಲಸ್ಮೃತಿ', 'ಹರಿಚರಣ', 'ಕಾಶೀನಾಥ', 'ಅನುಪಮಾಳ ಪ್ರೇಮ', 'ಚಂದ್ರನಾಥ', 'ಬೆಳಕು-ನೆರಳು' ಇವೆಲ್ಲ 'ಸಾಹಿತ್ಯ' ಮತ್ತು 'ಯಮುನಾ'ಗಳಲ್ಲಿ ಬೆಳಕು ಕಂಡವು. ಆದರೆ, ಇದು ಶರತ್‌ಗೆ ಇಷ್ಟವಾಗಲಿಲ್ಲ. ತನ್ನ ಆ ರಚನೆಗಳು ಈಗ ಬೆಳಕು ಕಾಣುವುದು ಅವನಿಗೆ ಹಿಡಿಸುವ ವಿಚಾರವಾಗಿರಲಿಲ್ಲ. ಅವೆಲ್ಲ ಮಾಗದ ಸ್ಥಿತಿಯ ರಚನೆಗಳೆಂದು ಅವನು ಭಾವಿಸಿದ್ದ. ಭಾವನೆಯ ಅತಿಶಯ ಕೋಮಲತೆ ಹಾಗೂ ತಾರುಣ್ಯ ಸಹಜವಾದ ಅತಿಶಯೋಕ್ತಿಯೇ ಮೇಲುಗೈಯಾಗಿರುವುದು ಅವುಗಳಲ್ಲಿ ಎದ್ದುಕಾಣುತ್ತದೆ. ಮತ್ತೆ ಮತ್ತೆ ಅವನು ಕಾಗದಗಳ ಮೂಲಕ ತನ್ನ ಈ ಕೋಪ ಹಾಗೂ ವ್ಯಥೆಯನ್ನು ತೋಡಿಕೊಳ್ಳತೊಡಗಿದ:

"ಸಮಾಜಪತಿಗಳಿಗೆ 'ಕಾಶೀನಾಥ' ಕೃತಿಯನ್ನು ಕೊಟ್ಟು ನೀನು ಒಳ್ಳೆಯ ಕೆಲಸವನ್ನೇನೂ ಮಾಡಲಿಲ್ಲ. ಅದು 'ಭೋರ್ಝಾ'ಗೆ ಸರಿ ಜೋಡಿಯಾಗಿರುವಂಥದು. ಬಾಲ್ಯದಲ್ಲಿ ಅಭ್ಯಾಸಕ್ಕಾಗಿ ಬರೆದ ಕಥೆ ಅದು. ಅಚ್ಚಿಸುವುದಿರಲಿ, ಜನರಿಗೆ ಅದನ್ನು ತೋರಿಸುವುದೂ ಉಚಿತವಾಗುವುದಿಲ್ಲ. ಅದು ಅಚ್ಚಾಗಿ, ನನ್ನ ಹೆಸರು ಹಾಳಾಗದಿರಲೆಂಬುದೇ ನನ್ನ ಹಾರ್ದಿಕ ಇಚ್ಛೆ...."[1]

"ಈ ಸಲ 'ಸಾಹಿತ್ಯ' ನನ್ನ ಹೆಸರಿನಲ್ಲಿ ಅದೇನೇನು ಕಸ-ಕಡ್ಡಿಯನ್ನೆಲ್ಲ ಅಚ್ಚಿಸಿಬಿಟ್ಟಿದೆ. ಅದು ನನ್ನ ಬರಹವೆ? ನನಗೆ ಸ್ವಲ್ಪವೂ ನೆನಪಿಲ್ಲ. ಇದ್ದರೂ, ಅದನ್ನೇಕೆ ಅಚ್ಚಿಸಬೇಕು? ವ್ಯಕ್ತಿ ಬಾಲ್ಯದಲ್ಲಿ ಏನೇನೋ ಬರೆಯಬಹುದು. ಹಾಗೆಂದು ಅದನ್ನೆಲ್ಲ ಪ್ರಕಟಿಸಬೇಕೆ? ಅದನ್ನು ಅಚ್ಚಿಸಿ, ನಾನು ತಲೆತಗ್ಗಿಸುವಂತೆ ಮಾಡಿದ್ದೀಯೆ."[2]

" 'ದೇವದಾಸ್' ಚೆನ್ನಾಗಿಲ್ಲ. ಏನೇನೂ ಚೆನ್ನಾಗಿಲ್ಲ. ಸುರೇಂದ್ರ ಮೊದಲಾದ ಗೆಳೆಯರು ನನ್ನ ಎಲ್ಲ ರಚನೆಗಳನ್ನೂ ಹೊಗಳುತ್ತಾರೆ. ಅವರ ಈ ಹೊಗಳಿಕೆಗೆ ನನ್ನ ದೃಷ್ಟಿಯಲ್ಲಿ ಯಾವ ಬೆಲೆಯೂ ಇಲ್ಲ. ಅದನ್ನು ಅಚ್ಚಿಸಬೇಕೆಂಬುದೂ ನನ್ನ ಇಚ್ಛೆಯಾಗಿರಲಿಲ್ಲ."[3]

" 'ದೇವದಾಸ್' ಕಾದಂಬರಿಯನ್ನು ತೆಗೆದುಕೊಳ್ಳಬೇಡ. ತೆಗೆದುಕೊಳ್ಳುವ ಪ್ರಯತ್ನವನ್ನೂ ಮಾಡಬೇಡ. ನಿರಾಶೆಯ ಸ್ಥಿತಿಯಲ್ಲಿ ಅದನ್ನು ಬರೆದಿದ್ದುದು ಮಾತ್ರವಲ್ಲ. ಅದರ ಬಗ್ಗೆ ನನಗೆ ನಾಚಿಕೆಯೂ ಆಗುತ್ತದೆ. ಅದು ಅನೈತಿಕವಾಗಿದೆ. ಅದರಲ್ಲಿ ವೇಶ್ಯೆಯ ಪಾತ್ರ ಇದ್ದೇ ಇದೆಯಲ್ಲ, ಅದನ್ನು ಬಿಟ್ಟು ಬೇರೆ ಏನೇನೆಲ್ಲ ಇದೆ ಎಂಬುದನ್ನು ಹೇಳಲೂ ಮನಸ್ಸು ಬರುವುದಿಲ್ಲ. ನನ್ನ ಹಿಂದಿನ ಕೃತಿಗಳನ್ನು ಅಚ್ಚಿಸುವ ವಿಷಯದಲ್ಲಿ, ನನ್ನ ವಿಶೇಷ ಆಕ್ಷೇಪ ಉಂಟು. 'ಯಮುನಾ'ದ ಆಷಾಢಮಾಸದ ಸಂಚಿಕೆಯಲ್ಲಿ 'ಆಲೋ ಓ ಛಾಯಾ' ಎಂಬ ಹೆಸರಿನ ಅಪೂರ್ಣ ಕಥೆಯೊಂದು ಪ್ರಕಟವಾಗಿದೆ. ಅದು ನಾನು ಬರೆದಿರುವ ಕಥೆಯೇ ಏನು?.... ನನ್ನ

---

1 ಜನವರಿ 10, 1913

2 ಮಾಘ (ಜನವರಿ) 1913

3 ಏಪ್ರಿಲ್ 8, 1913

ಬಾಲ್ಯಕಾಲದ ಬರೆಹದ ಶೈಲಿಯನ್ನು ಅನುಕರಿಸಿ ಯಾರೋ ಬರೆದಿರಬೇಕೆಂದು ನನಗೆ ಅನ್ನಿಸತೊಡಗಿದೆ."[1]

ಈಗ ಅವನಲ್ಲಿ ರವೀಂದ್ರರಂತೆ ಬರೆಯಬಲ್ಲೆನೆಂಬ ಆತ್ಮವಿಶ್ವಾಸ ಮೂಡಿತ್ತು. ಆದ್ದರಿಂದ ತನ್ನ ಬಾಲ್ಯಕಾಲದ ರಚನೆಗಳನ್ನು ಅಚ್ಚಿಸಲೇ ಬೇಕೆಂದಾದರೆ, ಮತ್ತೊಮ್ಮೆ ಅವುಗಳನ್ನು ಕಣ್ಣಾಡಿಸಿ ನೋಡುವುದು ಅಗತ್ಯವೆಂದು ಅವನು ಇಚ್ಛಿಸಿದ್ದ. ಈ ದೃಷ್ಟಿಯಿಂದಲೇ, ಪುಸ್ತಕ ರೂಪದಲ್ಲಿ 'ಕಾಶೀನಾಥ' ಪ್ರಕಟವಾದಾಗ ಅದರಲ್ಲಿ ಅವನು ಸಾಕಷ್ಟು ತಿದ್ದುಪಡಿಗಳನ್ನು ಮಾಡಿದ. ಪತ್ರಿಕೆಗಳಲ್ಲಿ ಅಚ್ಚಾಗಿದ್ದಾಗ ಈ ಕೃತಿಯ ಕೊನೆಯಲ್ಲಿ ಕಾಶೀನಾಥನ ಹತ್ಯೆ ಹಾಗೂ ಕಮಲೆಯ ಆತ್ಮಹತ್ಯೆಯ ಪ್ರಸಂಗಗಳು ಬಂದಿದ್ದುವು; ಆದರೆ ಪುಸ್ತಕ ರೂಪದಲ್ಲಿ ಹೊರಬಂದಾಗ ಆ ಕಥೆ ಸುಖಾಂತವಾಗಿತ್ತು.

ಅದು 'ಸಾಹಿತ್ಯ' ಪತ್ರಿಕೆಯಲ್ಲಿ ಪ್ರಕಟವಾದಾಗ, ಹರಿಕೃಷ್ಣ ಮುಖೋಪಾಧ್ಯಾಯ ನೆಂಬ ಒಬ್ಬ ಯುವಕ ಅವನನ್ನು ಭೇಟಿಯಾಗಲು ಬಂದಿದ್ದ. ಅವನಿಗೆ ಈ ಕೃತಿ ತುಂಬ ಹಿಡಿಸಿತ್ತು. ಆದರೆ, ಅದರ ಅಂತ್ಯದ ಬಗ್ಗೆ ಅವನ ಆಕ್ಷೇಪವಿತ್ತು. ಅವನ ಈ ಆಕ್ಷೇಪವನ್ನು ಕೇಳಿದ ಕೂಡಲೇ ಶರತ್ ಹೀಗೆಂದು ಹೇಳಿದ: " 'ಕಾಶೀನಾಥ' ಮಾತ್ರವೇ ಅಲ್ಲ. 'ಸಾಹಿತ್ಯ'ದಲ್ಲಿ ಇನ್ನೂ ಅನೇಕ ಕಥೆಗಳು ಅಚ್ಚಾಗಿವೆ. ಅವೆಲ್ಲ ನನ್ನ ಬಾಲ್ಯಕಾಲದ ಕೃತಿಗಳು. ನನಗೆ ತಿಳಿಸದೆಯೇ, ಇದ್ದಕ್ಕಿದ್ದಂತೆಯೇ ಅದನ್ನು ಅಚ್ಚು ಮಾಡಿಬಿಟ್ಟಿದ್ದಾರೆ. ಕರಡನ್ನಾದರೂ ಓದಿದ್ದರೆ, ಒಮ್ಮೆ ಕೈ ಆಡಿಸಬಹುದಾಗಿತ್ತು."

ಹರಿಕೃಷ್ಣ ಸೂಚಿಸಿದ: "ಈಗ ಅದರ ಅಂತ್ಯವನ್ನು ಬದಲಾಯಿಸ ಲಾಗುವುದಿಲ್ಲವೆ ?"

ಶರತ್ ಹೇಳಿದ: "ಪುಸ್ತಕ ರೂಪದಲ್ಲಿ ಅದು ಅಚ್ಚಾಗುತ್ತದೆಯೋ ಇಲ್ಲವೋ ತಿಳಿಯದು. ಅಚ್ಚಾದರೆ ಖಂಡಿತವಾಗಿಯೂ ಅದನ್ನು ಬದಲಾಯಿಸುತ್ತೇನೆ."

'ಕಾಶೀನಾಥ' ಕೃತಿಯಲ್ಲಿ ಮಾತ್ರವಲ್ಲ, 'ಚಂದ್ರನಾಥ'ದಲ್ಲಿಯೂ ಅವನು ಸಾಕಷ್ಟು ಬದಲಾವಣೆಗಳನ್ನು ಮಾಡಿದ. ಇದರ ಪ್ರಕಟಣೆಯ ವಿಷಯದಲ್ಲಿ ಸಾಕಷ್ಟು ಕೋಲಾಹಲವೇ ಉಂಟಾಯಿತು. ಉಪೇಂದ್ರನಾಥರು ಅದನ್ನು 'ಯಮುನಾ'ದಲ್ಲಿ ಪ್ರಕಟಿಸಬೇಕೆಂದಿದ್ದರು. ಅದರಲ್ಲಿ ಈ ಸಂಬಂಧವಾದ ಜಾಹೀರಾತು ಕೂಡ ಅಚ್ಚಾಗಿತ್ತು. ಸುರೇಂದ್ರ ಮತ್ತು ಗಿರೀಂದ್ರನಿಗೆ ಇದು ತುಂಬ ವಿಷಾದವನ್ನುಂಟು ಮಾಡಿತು. ಉಪೇಂದ್ರರೊಂದಿಗೆ ಅವರು ಜಗಳವನ್ನೂ ಆಡಿದ್ದರು. 'ಚಂದ್ರನಾಥ' ಕೃತಿಯ ಹಸ್ತಪ್ರತಿಯನ್ನು ಅವರು ಅವರಿಂದಲೇ ತೆಗೆದುಕೊಂಡು ಹೋಗಿದ್ದರು. ಅವರು ಶರತ್‌ಗೆ ಪತ್ರ ಬರೆದರು. ಕೊನೆಗೆ ಈ ವಿಷಯದಲ್ಲಿ ಒಪ್ಪಂದ ಏರ್ಪಟ್ಟಿತು. ಅಚ್ಚಾಗಿರುವ ಭಾಗವನ್ನು ಬಿಟ್ಟು, ಉಳಿದ ಭಾಗವನ್ನು ತನಗೆ ಹಿಂದಿರುಗಿಸಬೇಕೆಂದೂ ಸೂಕ್ತ ತಿದ್ದುಪಡಿಗಳನ್ನು ಮಾಡಿ ಅದನ್ನು ತಾನು 'ಯಮುನಾ' ಕ್ಕೆ ಕಳಿಸುತ್ತ ಬರುವುದಾಗಿಯೂ ಅವನು ತಿಳಿಸಿದ.

ತಿದ್ದುಪಡಿ ಮಾಡಿದ ಭಾಗವನ್ನು ಫಣೀಂದ್ರನಾಥರಿಗೆ ಕಳಿಸಿಕೊಡುತ್ತ ಅವನು

1. ಜೂನ್ 25, 1913

ಹೀಗೆ ಬರೆದ: "ಕಥೆಯಾಗಿ ಚಂದ್ರನಾಥ ತುಂಬ ಚೆನ್ನಾಗಿದೆ. ಆದರೆ ಅದರಲ್ಲಿ ಅತಿರೇಕಗಳಿವೆ. ಬಾಲ್ಯ ಅಥವಾ ಯೌವನದಲ್ಲಿ ಈ ಬಗೆಯ ರಚನೆ ಸ್ವಾಭಾವಿಕವಾದುದು. ಈ ಕಾರಣದಿಂದಲೇ ಬಹುಶಃ ಹಾಗಾಗಿದೆ. ಈಗ ಕೈಗೆ ಸಿಕ್ಕಿ ಬಿಟ್ಟಿರುವುದರಿಂದ ಅದನ್ನು ಒಳ್ಳೆಯ ಕಾದಂಬರಿಯಾಗಿಸಿಬಿಡುವುದೇ ಉಚಿತವೆಂದು ಭಾವಿಸಿದ್ದೇನೆ. ಕನಿಷ್ಠಪಕ್ಷ ಅದರ ಗಾತ್ರ ಇಮ್ಮಡಿಯಾಗುವ ಸಂಭವವಿದೆ.... ಯಾವುದೇ ಬಗೆಯ ಅನೈತಿಕತೆಯೊಡನೆ ಆದಕ್ಕೆ ಸಂಬಂಧವಿಲ್ಲದಿರುವುದೇ ಅದರ ವೈಶಿಷ್ಟ್ಯ. ಇದನ್ನು ಎಲ್ಲರೂ ಓದಬಹುದು."[1]

ಯಾವ ವ್ಯಕ್ತಿಯ ಮೇಲೆ ಅನೈತಿಕತೆಯ ಆರೋಪವನ್ನು ಹೊರಿಸಲಾಗಿತ್ತೋ ಹಾಗೂ ಯಾರು ನೈತಿಕತೆಗೆ ಹೊಸ ಅರ್ಥವನ್ನು ಕೊಡಲು ಯತ್ನಿಸಿದರೋ ಆ ವ್ಯಕ್ತಿಯ ಮನಸ್ಸನ್ನು ಈಗ ಸ್ವತಃ ಆ ಪ್ರಶ್ನೆಯೇ ಹಿಡಿದು ಅಲ್ಲಾಡಿಸತೊಡಗಿತು. ದಿಕ್ಕುಗೆಟ್ಟ ಆ ಮೊದಲಿನ ಭಾವುಕತೆ ಹಾಗೂ ಆವೇಶಪೂರ್ಣ ಉಗ್ರತೆ ಈಗ ಸಂಯಮಿತ ರೂಪವನ್ನು ಪಡೆದುಕೊಳ್ಳತೊಡಗಿವೆಯೇನೋ ಎಂದು ತೋರತೊಡ ಗಿತ್ತು. ಹೀಗಾಗಿ, ಹೊಸ ಕೃತಿಗಳನ್ನು ಬರೆಯುವಾಗ ಅವನು ತುಂಬ ಶ್ರಮವಹಿಸುತ್ತಿದ್ದ. ಸರಿಯಾದ ಅರ್ಥವನ್ನು ಕೊಡಬಲ್ಲ, ಮನಸ್ಸಿಗೆ ಒಪ್ಪಿಗೆಯಾಗುವಂಥ ಶಬ್ದ ಸಿಕ್ಕುವವರೆಗೂ ಅವನು ಅದನ್ನು ಹೊಡೆದು ಹಾಕುತ್ತಲೇ ಇರುತ್ತಿದ್ದ. ಮನಸ್ಸಿನ ಸ್ವರದ ಜೊತೆಗೆ ಶಬ್ದದ ಸ್ವರದ ತಾಳಮೇಳಗಳು ಹೊಂದಿಕೊಳ್ಳುತ್ತಿವೆಯೋ ಇಲ್ಲವೋ ಎಂಬ ಬಗ್ಗೆ ಅವನು ತುಂಬ ಗಮನಕೊಡುತ್ತಿದ್ದ. ಅಂಥ ಶಬ್ದ ದೊರೆತಾಗಲೇ ಅವನಿಗೆ ಶಾಂತಿ ಸಿಕ್ಕುತ್ತಿತ್ತು. ಹೀಗಾಗಿ, ಅನೇಕ ವೇಳೆ ಪಸ್ತಪ್ರತಿಯಲ್ಲಿ ಅದೆಷ್ಟು ತಿದ್ದುಪಡಿಗಳು ಆಗಿರುತ್ತಿದ್ದವೆಂದರೆ ಬೇರೆ ಯಾರಿಗೂ ಅದನ್ನು ಓದಲೂ ಆಗುತ್ತಿರಲಿಲ್ಲ. ಒಮ್ಮೆ ಹಸ್ತಪ್ರತಿಯೊಂದನ್ನು ತನ್ನ ಪ್ರಿಯಮಿತ್ರನೂ ಸಹೋದ್ಯೋಗಿಯೂ ಆದ ಕುಮುದಿನೀ ಕಾಂತಕರ್ ಅವರ ಕೈಗೆ ಕೊಡುತ್ತ ಅವನು ಹೀಗೆ ಹೇಳಿದ್ದ: "ಇಲ್ಲಿ ನೋಡು. ಎಷ್ಟೊಂದು ಹೊಡೆದು ಹಾಕಿದ್ದೀನಿ. ಇನ್ನು ಹೊಡೆಯಲು ಜಾಗವೇ ಇಲ್ಲ. ಎಷ್ಟೇ ಪ್ರಯತ್ನಪಟ್ಟರೂ ಇದನ್ನು ನೀನು ಓದಲಾರೆ."

## 12

'ರಾಮೇರ್ ಸಮಿತಿ'ಯ ತರುವಾಯ 'ಪಥ ನಿರ್ದೇಶ್' (ದಾರಿ ತೋರು) ಎಂಬ ಕೃತಿಯ ರಚನೆಯನ್ನು ಪ್ರಾರಂಭಿಸಿದ. ಹಿಂದಿನಂತೆಯೇ ಪ್ರತಿದಿನ ಎಷ್ಟು ಬರೆಯಲು ಸಾಧ್ಯವಾಗುತ್ತಿತ್ತೋ ಅಷ್ಟನ್ನು ಕಛೇರಿಗೆ ತೆಗೆದುಕೊಂಡು ಹೋಗಿ, ಯೋಗೇಂದ್ರನಾಥರಿಗೆ ಓದಲು ಕೊಡುತ್ತಿದ್ದ. ಈ ಕೆಲಸ ಬಹುಶಃ ದಾ ಠಾಕುರನ ಚಹದ ಅಂಗಡಿಯಲ್ಲಿ ನಡೆಯುತ್ತಿತ್ತು. ಬಿಡುವಿನ ವೇಳೆಯಲ್ಲಿ ಎಲ್ಲರೂ ಚಹಾ ಕುಡಿಯಲು ಅಲ್ಲಿಗೆ ಹೋಗುತ್ತಿದ್ದರು. ಆಗಾಗ್ಗೆ ಮಾತುಕತೆ ಎಷ್ಟು ಸುದೀರ್ಘವಾಗಿ ಬಿಡುತ್ತಿತ್ತೆಂದರೆ ಬಿಡುವಿನ ಅವಧಿ ಎಂದೋ ಮುಗಿದು ಹೋಗಿರುತ್ತಿತ್ತು. ತಡವಾಗಿ

---

1 ಮೇ 3, 1913

ಬಂದರೆ ಸಿಂಹಳ ದೇಶದ ನಿವಾಸಿಯಾಗಿದ್ದ ವೃದ್ಧ ಸೂಪರಿಂಟೆಂಡೆಂಟ್ ಕೊಂಚ ಮುಗುಳ್ನಕ್ಕು ಹೇಳುತ್ತಿದ್ದ: "ಹೂಂ ಮತ್ತೆ ನೀವಿಬ್ಬರು ತಡವಾಗಿ ಬಂದಿರಾ!"

ಇಬ್ಬರೂ ನಾಚಿಕೆಯಿಂದ ಹುದುಗಿ ಹೋಗುತ್ತಿದ್ದರು. ಒಂದೆರಡು ದಿವಸಗಳವರೆಗೆ ಸಭ್ಯ ವ್ಯಕ್ತಿಗಳಂತೆ ಸಮಯಕ್ಕೆ ಸರಿಯಾಗಿ ಹಿಂದಿರುಗುತ್ತಿದ್ದರು. ಮತ್ತೆ ತಡವಾಗತೊಡಗುತ್ತಿತ್ತು. ಕಛೇರಿಯಲ್ಲಿ ತಡವಾಗುತ್ತಿದ್ದರೂ, 'ರಾಮನ ಸುಮತಿ'ಯೊಂದಿಗೆ ಶರತ್‌ನ ಸುಮತಿಯೂ ಈಗ ಹಿಂದಿರುಗಿ ಬಂದಿತ್ತು. ಹೊಸ ಕಥೆ 'ಪಥ ನಿರ್ದೇಶ' ಅವನ ದೃಷ್ಟಿಯಲ್ಲಿ 'ರಾಮೇರ್ ಸುಮತಿ'ಗಿಂತಲೂ ಚೆನ್ನಾಗಿತ್ತು. ಆದರೆ, ಯೋಗೇಂದ್ರನಾಥನ ದೃಷ್ಟಿಯಲ್ಲಿ ಅದರ ಅಂತ್ಯ ಸರಿಯಾಗಿರಲಿಲ್ಲ. ರಾಧಾಕೃಷ್ಣನ ಶುದ್ಧ ಪ್ರೇಮವನ್ನು ಉಲ್ಲೇಖಿಸುತ್ತಾ ಅವರು ಹೀಗೆಂದರು: "ಶರತ್, 'ನಾನು ವೈಷ್ಣವ'ನೆಂದು ನೀವು ಹೇಳಿಕೊಳ್ಳುತ್ತೀರಿ. ವೃಂದಾವನದ ಆ ಚಿರ ಕಿಶೋರ-ಕಿಶೋರಿಯರ ಪ್ರೇಮಲೀಲೆಯ ವಿಚಾರವನ್ನು ಕುರಿತು ನಾನು ಯೋಚಿಸುತ್ತಿದ್ದೇನೆ. ಅಲ್ಲಿ ಐಂದ್ರಿಯ ಭಾವನೆಗಳ ಯಾವುದೇ ಸಂಪರ್ಕವೂ ಇಲ್ಲ. ನಿಮ್ಮ ಬರವಣಿಗೆಯ ಸಾಮರ್ಥ್ಯವನ್ನು ನೋಡಿದರೆ, ಆ ಭಾವವನ್ನು ನೀವು ತುಂಬ ಚೆನ್ನಾಗಿ ಚಿತ್ರಿಸಬಲ್ಲಿರಿ ಎಂದು ತೋರುತ್ತದೆ.

ಶರತ್ ಉತ್ತರಿಸಿದ: "ನಿಮ್ಮ ಆಸಕ್ತಿ-ಅಭಿರುಚಿಗಳನ್ನು ಗಮನಿಸಿದರೆ, ಕಥೆ-ಕಾದಂಬರಿಗಳನ್ನು ಬರೆಯಲು ಸಾಧ್ಯವೇ ಆಗುವುದಿಲ್ಲ. ಎಲ್ಲವನ್ನು ನೀವು ಧರ್ಮ, ಮರ್ಮ ಹಾಗೂ ಕರ್ಮದ ದೃಷ್ಟಿಯಿಂದಲೇ ಅಳೆಯುತ್ತೀರಿ."

ಸರ್ಕಾರ್ ಹೇಳಿದರು: "ನೀವೇನೋ ಬರಹಗಾರರು, ನಾವಾದರೋ ಓದುಗರು. ನಮಗೂ ಅದು ಚೆನ್ನಾಗಿ ಕಾಣಬೇಕಲ್ಲವೇ ?"

ಗಂಭೀರವಾಗಿ ಶರತ್ ಉತ್ತರಿಸಿದ: "ಹೌದು. ಚೆನ್ನಾಗಿಯೇನೋ ಕಾಣಬೇಕು. ಆದರೆ, ಲೇಖಕನಲ್ಲಿ ತನ್ನದೇ ಆದ ಆಲೋಚನಾ ಸಾಮರ್ಥ್ಯವೂ ಇರುತ್ತದೆ. ಅನೇಕ ಜನ ಅನೇಕ ಬಗೆಯ ಮಾತುಗಳನ್ನು ಬಾಯಿಗೆ ಬಂದಂತೆ ಅಂದುಬಿಡುತ್ತಾರೆ. ಐದು ಜನರ ಒಲವು ನಿಲುವುಗಳನ್ನು ತಿಳಿದುಕೊಂಡು ಯಾವ ಕೆಲಸವನ್ನು ತಾನೆ ಮಾಡಲಾಗುತ್ತದೆ ? ಲೋಕ ಹೀಗೆ ಸಾಗುವುದಿಲ್ಲ."

ಮಾತುಕತೆ ಸ್ವಲ್ಪ ತೀವ್ರಸ್ವರೂಪವನ್ನೇ ಪಡೆದುಕೊಂಡಿತ್ತು. ಯೋಗೇಂದ್ರರು ಕೂಡಲೇ ಉತ್ತರ ಕೊಡಲಿಲ್ಲ. ಸ್ವಲ್ಪ ಕಾಲದ ಬಳಿಕ ಹೇಳಿದರು. "ನೀವು ಹೇಳುತ್ತಿರುವುದೇನೋ ಸರಿ, ಶರತ್. ಆದರೆ ಯಾರನ್ನಾದರೂ ಕೇಳಿದರೆ ಅವರು ಖಂಡಿತವಾಗಿಯೂ ತಮ್ಮ ಇಷ್ಟದ ಉತ್ತರವನ್ನು ಕೊಡುತ್ತಾರೆಂಬುದು ಇದಕ್ಕಿಂತಲೂ ಹೆಚ್ಚು ಸರಿಯಾದ ಸಂಗತಿ. ಅವನು ಶುದ್ಧಾಂಗವಾಗಿ ಹೊಗಳು-ಭಟ್ಟನ ಜಾಯಮಾನದವನಾಗಿರದಿದ್ದರೆ ತನಗೆ ಯಾವುದು ಇಷ್ಟವೆಂಬುದನ್ನೇ ಹೇಳುತ್ತಾನೆ."

ಶರತ್ ಮನಸ್ಸಿನಲ್ಲಿಯೇ ಕುದಿದ. ಆದರೂ ಸಾಧ್ಯವಾದಷ್ಟು ಮಟ್ಟಿಗೆ ಗಂಭೀರವಾಗಿ ಇರುವ ಪ್ರಯತ್ನ ಮಾಡುತ್ತ ಅವನೆಂದ: "ಹಾಗಾದರೆ ಹೇಳಿ, ಏನು ಮಾಡಿದರೆ ನಿಮಗೆ ಸಂತೋಷವಾಗುತ್ತದೆ ?"

ಯೋಗೇಂದ್ರರು ಉತ್ತರಿಸಿದರು: "ಅದನ್ನು ಈಗಾಗಲೇ ನಾನು ತಿಳಿಸಿದ್ದೇನೆ,

ಶರತ್. ಇಷ್ಟರ ಮೇಲೆ ನಿಮಗೆ ಹೇಗೆ ಇಷ್ಟವಾಗುತ್ತೋ ಹಾಗೆ ಮಾಡಿ. ನಾನು ಹೆಚ್ಚಿಗೆ ಏನು ಹೇಳಬೇಕಾಗಿಲ್ಲ."

"ಏನಾದರೂ ಮಾಡಲು ಸಾಧ್ಯವಾಗುತ್ತದೆಯೋ ಏನೋ, ನೋಡುತ್ತೇನೆ."

ಶರತ್ ಆ ಪ್ರಸಂಗವನ್ನು ಅಲ್ಲಿಗೇ ಕೊನೆಗಾಣಿಸಿದ. ಅವನಿಗೆ ಕೋಪ ಬಂದಿದೆಯೆಂದು ಯೋಗೇಂದ್ರರು ಭಾವಿಸಿದರು. ಹತ್ತಿರ ಬಂದು ಹೇಳಿದರು: "ಈ ಕಥೆಯ ಕೊನೆ ಏನೆಂಬುದನ್ನು ತಿಳಿಸಿ ನೀವು ಹೇಗೆ ನಿಮ್ಮ ಮನಸ್ಸನ್ನು ಹಗುರವಾಗಿಸಿಕೊಂಡುಬಿಟ್ಟರೋ ಹಾಗೆಯೇ ನಾನು ನನ್ನ ಮನಸ್ಸಿನಲ್ಲಿದ್ದ ಮಾತುಗಳನ್ನು ಹೇಳಿಬಿಟ್ಟೆ, ಶರತ್. ಆದರಿಂದ ನಿಮ್ಮ ಮನಸ್ಸಿಗೆ ನಿಜವಾಗಿಯೂ ನೋವಾಗಿದ್ದರೆ, ನಾನು ಆ ಮಾತುಗಳನ್ನು ಹಿಂದಕ್ಕೆ ತೆಗೆದುಕೊಂಡು ಬಿಡುತ್ತೇನೆ. ನಿಮ್ಮ ದೃಷ್ಟಿಯಲ್ಲಿ ಯಾವುದು ನಿಮಗೆ ಸರಿಯೆಂದು ತೋರುತ್ತದೆಯೋ ಅದನ್ನೇ ಏಕೆ ಮಾಡಬಾರದು ?"

"ಇಲ್ಲಪ್ಪ ಸರ್ಕಾರ್. ನನ್ನ ಮನಸ್ಸಿಗೆ ನೋವೇನೂ ಆಗಿಲ್ಲ. ನೀವು ಹೇಳಿದ ಮಾತು ತಪ್ಪೇನೂ ಅಲ್ಲವೆಂದು ನಾನು ಭಾವಿಸುತ್ತಿದ್ದೇನೆ. ಒಳ್ಳೆಯದು, ನೋಡೋಣ, ಏನು ಮಾಡಲು ಸಾಧ್ಯವಾಗುತ್ತದೆಯೋ ?"

"ಖಂಡಿತವಾಗಿಯೂ ಏನಾದರೂ ಮಾಡಲು ಸಾಧ್ಯವಾಗುತ್ತದೆ. ಖಂಡಿತ ವಾಗಿಯೂ ಸಾಧ್ಯ."

"ಮಾಡಲು ಸಾಧ್ಯವಾಗದಿದ್ದರೆ, ನನ್ನ ಮೇಲೆ ತಪ್ಪು ಹೊರಿಸಬೇಡಿ."

"ಸರಿ. ಈ ಮಾತೀಗ ಸರಿ ಹೋಯಿತು. ತಪ್ಪೆಲ್ಲ ನನ್ನದೇ ಅಲ್ಲವೆ ಶರತ್."

ಸರ್ಕಾರ್ ಹೀಗೆಂದು ಬರೆದಿದ್ದಾರೆ: "ಇಡೀ ಕಥೆಯನ್ನು ಮತ್ತೆ ಓದುವ ಅವಕಾಶ ದೊರೆತ ದಿವಸ, ಯಾವುದೋ ಮಾಂತ್ರಿಕ ಸ್ಪರ್ಶದಿಂದ ಕಥೆಯ ಅಂತ್ಯ ಹೇಗೆ ಬದಲಾಗಿಬಿಟ್ಟಿದೆ, ಇಡೀ ಕಥೆ ಎಷ್ಟು ಸಂಪದ್ಯುಕ್ತವಾಗಿಬಿಟ್ಟಿದೆ ಎಂದರೆ ಅದನ್ನು 'ಅನುಪಮ'[1]ವೆಂದೇ ಹೇಳಬೇಕು ಎಂದೆನ್ನಿಸಿತು.

'ಪಥ ನಿರ್ದೇಶ' ಒಂದು ಪ್ರೇಮಕಥೆ. ಹೇಮನಳಿನಿ ಹಾಗೂ ಅವಳ ತಾಯಿ ಗುಣೇಂದ್ರನ ಮನೆಯಲ್ಲಿ ಬಂದಿರುತ್ತಾರೆ. ಇಲ್ಲಿಯೇ ಹೇಮ ಮತ್ತು ಗುಣೇಂದ್ರನ ನಡುವೆ ಪ್ರೀತಿ ಚಿಗುರುತ್ತದೆ. ಇವರಿಬ್ಬರೂ ಪರಸ್ಪರ ಹೃದಯಪೂರ್ವಕವಾಗಿ ಬಯಸುತ್ತಿರುತ್ತಾರೆ. ಆದರೆ, ಗುಣೇಂದ್ರ ಬ್ರಹ್ಮಸಮಾಜಕ್ಕೆ ಸೇರಿದವನು. ಹೀಗಾಗಿ, ಹೇಮಳ ತಾಯಿ ಅವಳ ಇಚ್ಛೆಗೆ ವಿರುದ್ಧವಾಗಿ ಬೇರೆ ಕಡೆಗೆ ಕೊಟ್ಟು ಅವಳ ಮದುವೆಯನ್ನು ನಡೆಸಿಬಿಡುತ್ತಾಳೆ. ದೌರ್ಭಾಗ್ಯದಿಂದಾಗಿ ವರ್ಷದ ಒಳಗಾಗಿ ಅವಳು ವಿಧವೆಯಾಗಿ ಅಲ್ಲಿಗೇ ಹಿಂದಿರುಗಿ ಬರುತ್ತಾಳೆ. ತಾಯಿಯ ದುಃಖಕ್ಕೆ ಮೇರೆಯೇ ಇಲ್ಲವಾಗುತ್ತದೆ. ಆ ದುಃಖದಲ್ಲಿಯೇ ಅವಳಿಗೆ ತನ್ನ ತಪ್ಪು ಗೋಚರವಾಗುತ್ತದೆ. ಮೃತ್ಯುಶಯ್ಯೆಯಲ್ಲಿದ್ದಾಗ, ಗುಣೇಂದ್ರ ಹೇಮಳನ್ನು ಮರುವಿವಾಹ ಮಾಡಿಕೊಂಡು ಸುಖಿಯಾಗಿರಲೆಂದು ಇಚ್ಛಿಸುತ್ತಾಳೆ. ಇಷ್ಟಾಗಿಯೂ, ಅವಳು ಈ ಮಾತನ್ನು ತನ್ನ ಮಗಳಿಗೆ ಹೇಳಲಾರದೆ ಹೋಗುತ್ತಾಳೆ. ಆಕೆಯ ಸಾವಿನ ತರುವಾಯ, ಈ ಮಾತನ್ನು

1 'ಬ್ರಹ್ಮಪ್ರವಾಸೇ ಶರತ್‌ಚಂದ್ರ': ಯೋಗೇಂದ್ರನಾಥ ಸರ್ಕಾರ್.

ಹೇಳುವ ಧೈರ್ಯ ಗುಣೇಂದ್ರನಿಗೂ ಸಾಧ್ಯವಾಗುವುದಿಲ್ಲ. ಈ ರೀತಿ ಪ್ರೀತಿ ಮತ್ತು ಸಂಕೋಚಗಳ ನಡುವೆ ಅಂತರ್ಯುದ್ಧ ನಡೆಯುತ್ತ ಇರುತ್ತದೆ. ಕೊನೆಗೆ ಅವರಿಬ್ಬರೂ ತಮ್ಮ ನೈಜಪ್ರೇಮವನ್ನು ಮಹಿಮಾಪೂರ್ಣವಾಗಿಸುವ ಸಲುವಾಗಿ ಕಾಶಿಯಲ್ಲಿ ವಾಸಮಾಡಲು ತೆರಳುತ್ತಾರೆ.

ಮೊದಲಿಗೆ, ಹೇಮ ಮತ್ತು ಗುಣೇಂದ್ರರ ಮಿಲನದೊಂದಿಗೆ ಈ ಕಥೆ ಕೊನೆಗೊಂಡಿತ್ತು. ಅದನ್ನೇ ಯೋಗೇಂದ್ರನಾಥರು ಆಕ್ಷೇಪಿಸಿದ್ದರು. ಕೊನೆಗೆ ಸಾಕಷ್ಟು ಮನಮಂಥನದ ತರುವಾಯ ಶರತ್ ಯೋಗೇಂದ್ರರ ಸೂಚನೆಯನ್ನು ಅಂಗೀಕರಿಸಿದ್ದ. ಹೀಗಾಗಿ, ಗುಣೇಂದ್ರ ಕಾಶಿಗೆ ಹೊರಡುವ ಪ್ರಸ್ತಾವವನ್ನು ಮುಂದಿರಿಸಿದಾಗ, ಕಣ್ಣೀರು ಸುರಿಸುತ್ತ ಹೇಮ ಹೇಳುತ್ತಾಳೆ: "ಸರಿ, ಇದೇ ನಿನ್ನ ಕೊನೆಯ ನಿರ್ಧಾರವೆ? ಇದನ್ನು ನಾನು ಸಹಿಸಬಲ್ಲೆನೇ?"

ಗುಣೇಂದ್ರ ಹೇಳುತ್ತಾನೆ: "ಖಂಡಿತವಾಗಿಯೂ ಸಹಿಸಬಲ್ಲೆ. ಪ್ರೇಮವನ್ನು ಮಹಿಮಾಪೂರ್ಣವಾಗಿಸುವ ಸಲುವಾಗಿ ಅಗಲಿಕೆ ಎಂಬುದು ನಿನ್ನಂಥ ಅತುಳ ಐಶ್ವರ್ಯಶಾಲಿನಿಯ ಬಾಗಿಲ ಬಳಿ ಬಂದು ತನ್ನ ಕೈಗಳನ್ನು ಚಾಚಿ ನಿಂತಿದೆ, ಅದು ಸತ್ವಹೀನವಾದ ಕ್ಷುದ್ರಪ್ರೇಮದ ಗುಡಿಸಲಿನ ಬಳಿ ನಿರ್ಲಕ್ಷ್ಯದಿಂದ ಬಂದು ನಿಂತಿಲ್ಲ ಎಂಬುದನ್ನು ಅರಿತುಕೊಂಡಾಗ ನೀನು ಇದನ್ನು ಸಹಿಸಬಲ್ಲೆ. ಅತೃಪ್ತ ಕಾಮವೇ ಮಹತ್-ಪ್ರೇಮದ ಉಸಿರು, ಅದರ ಮೂಲಕವೇ ಅದು ಅಮರತ್ವವನ್ನು ಸಾಧಿಸಿ ಯುಗಯುಗಗಳಲ್ಲಿ ಅದೆಷ್ಟು ಕಾವ್ಯಗಳನ್ನು, ಅದೆಷ್ಟು ಮಾಧುರ್ಯವನ್ನು, ಅದೆಷ್ಟು ಅಮೂಲ್ಯವಾದ ಕಣ್ಣೀರ ಹನಿಗಳನ್ನು ಸಂಚಯಿಸಿ ಇಟ್ಟುಹೋಗುತ್ತದೆ ಎಂಬುದನ್ನು ಅರಿತಾಗ ನೀನು ಇದನ್ನು ಸಹಿಸಬಲ್ಲೆ. ರಾಧೆಯ ಶತವರ್ಷವ್ಯಾಪಿ ವಿರಹವೇ ವೈಷ್ಣವ ಕಾವ್ಯಗಳ ಉಸಿರು ಎಂಬುದು ಸಂಶಯಾತೀತವಾಗಿ ನಿನ್ನ ಅನುಭವಕ್ಕೆ ಬಂದಾಗ, ನೀನು ಇದನ್ನು ಖಂಡಿತವಾಗಿಯೂ ಸಹಿಸಬಲ್ಲೆ, ಹೇಮ. ಎದ್ದುಕುಳಿತುಕೊ. ನಡಿ, ಇಂದೇ ನಾವು ಕಾಶಿಗೆ ಹೊರಡೋಣ. ಉಳಿದಿರುವ ನಾಲ್ಕಾರು ದಿನಗಳ ನಿನ್ನ ಕೊನೆಗಾಲದ ಸೇವೆ ನಿನ್ನ ದೇವರ ಆಶೀರ್ವಾದದಿಂದ ಅಕ್ಷಯವಾಗಿ ಪರಿಣಮಿಸಿ, ನಿನ್ನನ್ನು ಜೀವನಪೂರ್ತಿ ಸುಮಾರ್ಗದಲ್ಲಿ ಶಾಂತಿಯಿಂದ ಇರಿಸುತ್ತದೆ."

ಈ ಅಂತ್ಯ ಯೋಗೇಂದ್ರರಿಗೆ ಮಾತ್ರ ಹಿಡಿಸಿತು ಎಂದೇನೂ ಅಲ್ಲ. ಸೌರೀಂದ್ರ ಮೋಹನರೂ ಇದನ್ನು ಹೊಗಳಿದರು. ಈ ಸಂಗತಿಯನ್ನು ಶರತ್ ಯೋಗೇಂದ್ರರಿಗೆ ತಿಳಿಸಿದಾಗ, ಅವರು ಗದ್ಗದರಾಗಿ ಹೇಳಿದರು: "ನೋಡಿದೆಯಾ, ನಾನು ಹೇಳಿದ ಹಾಗೆಯೇ ಆಯಿತಲ್ಲ!"

ಶರತ್ ಉತ್ತರಿಸಿದ: "ಹೌದು ಸರ್ಕಾರ್, ನೀನು ಹೇಳಿದ ಹಾಗೆಯೇ ಆಯಿತು. ಎಲ್ಲ ಸಂದರ್ಭಗಳಲ್ಲಿಯೂ ನಮ್ಮ ಆಲೋಚನೆಗಳು ಮಾತ್ರವೇ ದೋಷರಹಿತ ವಾಗಿರುತ್ತವೆಂಬುದು ಖಂಡಿತವಾಗಿಯೂ ನಿಜವಲ್ಲ."

ಒಮ್ಮೆ ಸೌರೀಂದ್ರರ ಸೂಚನೆಯಂತೆ ಶರತ್, 'ಬಡೀ ದೀದೀ'ಯ ಕೊನೆಯ ಎರಡು ಪಂಕ್ತಿಗಳನ್ನು ಹೊಡೆದು ಹಾಕಿದ್ದ. ಹರಿಕೃಷ್ಣರ ಸೂಚನೆಯಂತೆ 'ಕಾಶೀನಾಥ' ಕೃತಿಯ ಅಂತ್ಯವನ್ನು ಬದಲಾಯಿಸಿದ್ದ. ಈಗಲೂ ಯೋಗೇಂದ್ರರ ಸೂಚನೆಯಂತೆ 'ಪಥ ನಿರ್ದೇಶ'ವನ್ನು ಬೇರೊಂದು ರೀತಿಯಲ್ಲಿ ಕೊನೆಗಾಣಿಸಿದ್ದ. ಇತರರ

ಆಲೋಚನೆಗಳು ಅವನಿಗೆ ಚಿಂತನ-ಮಂಥನಕ್ಕೆ ಪ್ರೇರಣೆಯನ್ನು ಒದಗಿಸುತ್ತಿದ್ದುವು. ಅವುಗಳನ್ನು ಒಪ್ಪುವುದನ್ನು ಅಥವಾ ಬಿಡುವುದನ್ನು ಅವನು ಒಣಪ್ರತಿಷ್ಠೆಯ ವಿಚಾರವಾಗಿಸುತ್ತಿರಲಿಲ್ಲ. ರಾಷ್ಟ್ರಾಧ್ಯಕ್ಷ ಪದವಿಯಿಂದ ಮಾಡಿದ ತನ್ನ ಮೊಟ್ಟಮೊದಲನೆಯ ಭಾಷಣದಲ್ಲಿ ಅಬ್ರಹಾಂ ಲಿಂಕನ್ ತನ್ನ ಗೆಳೆಯ ಸೆವಾರ್ಡ್‌ನ ಸೂಚನೆಯ ಮೇರೆಗೆ ಭಾವನಾತ್ಮಕ ಸಂಸ್ಪರ್ಶಗುಣವನ್ನುಳ್ಳ ಕೆಲವು ಶಬ್ದಗಳನ್ನು ಸೇರಿಸಿದ್ದ. ಆ ಶಬ್ದಗಳನ್ನೇ ಜನ ಅನೇಕ ವರ್ಷಗಳವರೆಗೆ ನೆನಪಿಟ್ಟುಕೊಂಡಿದ್ದರು.

'ಪಥ ನಿರ್ದೇಶ'ದ ಈಗಿನ ಅಂತ್ಯವೇ ಶರತ್ ಸಾಹಿತ್ಯದ ಮೂಲಭಾವನೆಗೆ ಹತ್ತಿರವಾಗಿರುವಂಥದು. ಅವನ ಪ್ರೇಮ ಎಂದೂ ಮಿಲನದ ಅಭಾವದಲ್ಲಿಯೇ ಪೂರ್ಣತೆಯನ್ನು ಕಂಡುಕೊಂಡಿದೆ ಹಾಗೂ ವ್ಯಥೆಯಲ್ಲಿಯೇ ಮಧುರವಾಗಿ ಪರಿಣಮಿಸಿದೆ. ಸೂರದಾಸನ ರಾಧೆಯಂತೆ-

"ಮೇರೆ ನೈನಾ ವಿರಹ್ ಕೀ ಬೇಲಿ ಬಈ
ಸೀಂಚತ್ ನೀರ್ ನೈನ್ ಕೇ ಸಜನೀ ಮೂಲ ಪತಾಲ್ ಗಈ."
(ವಿರಹದ ಬಳ್ಳಿಯಾದವು ನನ್ನ ನಯನಗಳು
ಕಣ್ಣೀರ ಸಿಂಚನದಿಂದ ಇಳಿದುವು,
ಹೇ ಸಖಿ, ಪಾತಾಳದವರೆಗೆ ಅದರ ಬೇರುಗಳು)

ಸ್ವತಃ ಅವನಿಗೇ ಈ ಕಥೆ 'ರಾಮೇರ್ ಸುಮತಿ'ಗಿಂತ ಚೆನ್ನಾಗಿದೆ ಅನ್ನಿಸಿತ್ತು. ಆದರೆ, ಹಿಂದೂ ಸಮಾಜದ ವಿಧಿ-ನಿಷೇಧಗಳ ಮೂಲಕ ವಿಪರ್ಯಾಸವೂ ವಿಫಲವೂ ಆದ ಪ್ರೇಮದ ಆಳವಾದ ವೇದನೆ ಇದರಲ್ಲಿದೆಯಾದರೂ, ಪಾತ್ರಚಿತ್ರಣದ ದೃಷ್ಟಿಯಿಂದ ಈ ಕಥೆ 'ರಾಮೇರ್ ಸುಮತಿ'ಯ ಮುಂದೆ ಮಂಕಾಗಿ ಬಿಡುತ್ತದೆ ಎಂದು ಭಾವಿಸುವಂಥವರ ಸಂಖ್ಯೆ ಅಂದೂ ಕಡಿಮೆಯಾಗಿರಲಿಲ್ಲ (ಇಂದೂ ಕಡಿಮೆಯಾಗಿಲ್ಲ). ಅದರ ಅಂತ್ಯದ ಬಗೆಗೂ ಅವರು ಏಕಾಭಿಪ್ರಾಯವನ್ನು ಹೊಂದಿರಲಿಲ್ಲ. ಆದರೆ, ಸಾಹಿತ್ಯದ ಕ್ಷೇತ್ರದಿಂದ ಹೊರಗಿನವರಾಗಿದ್ದ ವಿಜ್ಞಾನಿಯೊಬ್ಬರು ಈ ಕಥೆಯ ಬಗ್ಗೆ ಮಾಡಿದ ಪ್ರಶಂಸೆ ಖಂಡಿತವಾಗಿಯೂ ತುಂಬ ಉತ್ಸಾಹವರ್ಧಕವಾಗಿತ್ತು. ಸುವಿಖ್ಯಾತ ವಿಜ್ಞಾನಿಗಳಾಗಿದ್ದ ಆಚಾರ್ಯ ಜಗದೀಶಚಂದ್ರ ಬೋಸು ಅವರು ಶರತ್‌ಗೆ ಹೀಗೆ ಬರೆದಿದ್ದರು: "ಸಫಲತೆ ಎಷ್ಟು ಕ್ಷುದ್ರವಾದುದು, ವಿಫಲತೆ ಎಷ್ಟು ಮಹತ್ತಾದುದು! ನಿಮ್ಮ 'ಪಥ-ನಿರ್ದೇಶ' ಕಥೆಯನ್ನು ಓದುತ್ತ ಓದುತ್ತ, ಇಷ್ಟೊಂದು ಕಷ್ಟಗಳ ಬಳಿಕ ನೀವೆಲ್ಲಿ ಸಫಲತೆಯ ಮೋಹವನ್ನು ಬಿಡಲಾರದೆ ಹೋದಿರೋ ಎಂದು ಭಯಪಡುತ್ತಿದ್ದೆ. ಉದಾತ್ತವಾದ ಮಾರ್ಗವನ್ನು ತೋರಿಸುವುದನ್ನು ನೀವು ಮರೆಯಲಿಲ್ಲ ಎಂದಾಗ ಅದೆಷ್ಟು ಸಂತೋಷವಾಯಿತು."[1]

'ಪಥ ನಿರ್ದೇಶ್'ಕ್ಕೆ ಅವನ ವೈಯಕ್ತಿಕ ಅನುಭವವೇ ಆಧಾರವಾಗಿತ್ತು ಎಂಬುದು ಬಹುಶಃ ಯಾರಿಗೂ ಗೊತ್ತಿರಲಿಲ್ಲ. ಪ್ರಮಥನಾಥನಿಗೆ ಅವನು ಹೀಗೆಂದು ಬರೆದಿದ್ದ:[2] "ಪಥ ನಿರ್ದೇಶವನ್ನು ಓದಿದೆಯೇನು? ಏನನ್ನಿಸಿತು? ಬಹುದಿನಗಳ ಹಿಂದಿನ

1 ಸೆಪ್ಟೆಂಬರ್ 14, 1913
2. ಮೇ 1915

ಗೋಪ್ಯ ಕಥೆಯೊಂದು ನೆನಪಿಗೆ ಬರುತ್ತದೆಯೇ..... ?"

ಇದಾದ ಮೇಲೆ ಅವನು ಇನ್ನೊಂದು ಕಥೆಯನ್ನು ಬರೆಯಲು ಆರಂಭಿಸಿದ. ಅದರ ಹೆಸರು: 'ಬಿಂದೋ ಕಾ ಲಲ್ಲಾ' (ಬಿಂದೋಳ ಮುದ್ದು ಮಗು). ಇದನ್ನು ಮೊದಲೇ ಕಲ್ಪಿಸಿಕೊಂಡಿದ್ದನೆಂಬುದರ ಸುಳಿವು ಅವನ ಒಂದು ಕಾಗದದಲ್ಲಿ ಸಿಕ್ಕುತ್ತದೆ " 'ರಾಮನ ಸುಮತಿ'ಯಂತೆ ಮನುಷ್ಯರಿಗೆ ಪಾಠವನ್ನು ಕಲಿಸಬಲ್ಲಂಥ ಪ್ರೇಮರಹಿತ ಬಂಗಾಳಿ ಕುಟುಂಬದ ಕಥೆಗಳನ್ನೊಳಗೊಂಡಿರುವ ಕಥಾಮಾಲಿಕೆಯೊಂದನ್ನು ಬರೆಯಬೇಕೆಂದು ನಿಶ್ಚಯಿಸಿದ್ದೇನೆ. ಬಂಗಾಳದ ಆದರ್ಶ ಅಂತಃಪುರ ಹೇಗಿರುತ್ತದೆ ಎಂಬುದೇ ಅದರಲ್ಲಿ ನಾನು ಪ್ರತಿಪಾದಿಸುವ ವಿಷಯವಾಗಿರುತ್ತದೆ. 'ಬಿಂದೋ ಕಾ ಲಲ್ಲಾ' ಎಂಬ ಕಥೆಯೊಂದನ್ನು ಬರೆದು ಕಳುಹಿಸಿದ್ದೇನೆ. ನಿನಗೆ ಅದನ್ನು ತೋರಿಸಬೇಕೆಂದು ಆಲೋಚಿಸಿದ್ದೆ. ಆದರೆ ಕಾಲಾವಕಾಶ ಇರಲಿಲ್ಲ. ಅದು ನಿನ್ನ 'ಭಾರತ ವರ್ಷ' ಪತ್ರಿಕೆಗೆ ಸೂಕ್ತವಾಗಿಲ್ಲದಿರಬಹುದು. ತುಂಬ ದೊಡ್ಡದಾಗಿ ಬಿಟ್ಟಿದೆ. ಆದ್ದರಿಂದ ಅದನ್ನು 'ಯಮುನಾ'ಗೆ ಕಳಿಸಿದ್ದೇನೆ.

'ರಾಮೇರ್ ಸುಮತಿ', 'ಪಥ ನಿರ್ದೇಶ' ಮತ್ತು 'ಬಿಂದೋ ಕಾ ಲಲ್ಲಾ' - ಒಂದಾದ ಮೇಲೆ ಒಂದರಂತೆ ಬರೆದು ಮುಗಿಸಿದ ಈ ಮೂರು ಕಥೆಗಳ ಬಗ್ಗೆ ಶರತ್ ಮತ್ತೆ ಮತ್ತೆ ತನ್ನ ಸ್ನೇಹಿತರಿಗೆ ಕಾಗದಗಳನ್ನು ಬರೆದಿದ್ದ. ಅವುಗಳಿಂದ ಆ ಕಾಲದಲ್ಲಿನ ಅವನ ಮನಃಸ್ಥಿತಿಯ ಅರಿವಾಗುತ್ತದೆ.

" 'ಬಿಂದೋ ಕಾ ಲಲ್ಲಾ' ನಿಮಗೆ ಇಷ್ಟವಾಗದೆ ಹೋಗಬಹುದು ಹಾಗೂ ಅದನ್ನು ಅಚ್ಚಿಸಲು ನೀವು ಹಿಂದೆ ಮುಂದೆ ನೋಡಬಹುದು ಎಂದು ನಾನು ಭಾವಿಸಿದ್ದೆ. ಆಮೇಲೆ ನನಗಾಗಿ ನಷ್ಟವನ್ನು ಹೊರಲು ಸಿದ್ಧರಾಗಿ ಅದನ್ನು ಅಚ್ಚಿಸುವಿರೆಂದು ಭಾವಿಸಿದ್ದೆ. ಈ ಅನುಮಾನದಿಂದಾಗಿಯೇ 'ನಿಮಗೆ ಹಿಡಿಸದೆ ಇದ್ದರೆ ಖಂಡಿತವಾಗಿಯೂ ಇದನ್ನು ಅಚ್ಚಿಸಬೇಡಿ' ಎಂದು ಮೊದಲೇ ನಿಮಗೆ ಎಚ್ಚರಿಕೆ ನೀಡಿದ್ದೆ."[1]

"ಶ್ರಮ, ಅಭಿರುಚಿ ಮತ್ತು ಕಲೆ - ಈ ಎಲ್ಲ ದೃಷ್ಟಿಗಳಿಂದಲೂ 'ಪಥ ನಿರ್ದೇಶ್' ಕಥೆಗೆ ಹೋಲಿಸಿದಾಗ 'ರಾಮೇರ್ ಸುಮತಿ' ಕೆಳಮಟ್ಟದ ತುಂಬ ಕೆಳಮಟ್ಟದ ರಚನೆಯಾಗುತ್ತದೆ. ಕೌಟುಂಬಿಕ ಕಥೆಯೊಂದನ್ನು ಬರೆಯಬೇಕೆಂದು ನಿರ್ಧರಿಸಿ, ಮಾದರಿಯ ರೂಪದಲ್ಲಿ 'ರಾಮನ ಸುಮತಿ' ಕಥೆಯನ್ನು ಬರೆದೆ. ಇದೇ ರೀತಿಯಲ್ಲಿ, ಹಿಂದೂ ಕುಟುಂಬದಲ್ಲಿ ಯಾವ ಯಾವ ಬಗೆಯ ವಾವೆಗಳಿವೆಯೋ ಅವುಗಳೆಲ್ಲದರ ಬಗ್ಗೆ ಒಂದೊಂದು ಕಥೆಯನ್ನು ಬರೆದು ಪುಸ್ತಕವನ್ನು ಪೂರೈಸುತ್ತೇನೆ. ಆದರೆ, ಅದು ನಾನು 'ಮಹಿಳೆಯರಿಗಾಗಿ ಮಾತ್ರ' ಬರೆದ ಕೃತಿಯಾಗಿರುತ್ತದೆ."[2]

" 'ಬಿಂದೋಳ ಮುದ್ದು ಮಗು' ಕಥೆಯನ್ನು ಓದಿ ನೋಡಿದೆಯೇನು ? ಅದು ಪ್ರೇಮ ಕಥೆಯೇನೂ ಅಲ್ಲ. ಸಂಪೂರ್ಣವಾಗಿ ಅದೊಂದು ಬಂಗಾಳಿ ಕುಟುಂಬದ ಕಥೆ. ಇದರಲ್ಲಿ ಒಂದು ಪಾತ್ರವಿದೆ. ಅದರ ನಿರ್ವಹಣೆಯ ಸಲುವಾಗಿಯೇ ಅದು ಸ್ವಲ್ಪ ಹೆಚ್ಚಾಗಿ ಬೆಳೆದುಬಿಟ್ಟಿದೆ. ಕಥೆಯನ್ನು ಓದಿ ಮುಗಿಸಿದಾಗ ಓದುಗರ ಮನಸ್ಸಿನಲ್ಲಿ

---

1. ಸೆಪ್ಟಂಬರ್ 14, 1913 (ಫಣೀಂದ್ರನಾಥರಿಗೆ ಬರೆದ ಕಾಗದ).
2. ಅಂಚೆ ಮುದ್ರೆ - ಮೇ 12, 1913

'ವಾಹ್, ಎಷ್ಟು ಸುಂದರವಾಗಿದೆ!' ಎಂಬ ಭಾವನೆ ಮೂಡದಿದ್ದರೆ ಆಗ ಅದೆಂಥ ಕಥೆ ? 'ರಾಮನ ಸುಮತಿ', 'ಪಥ ನಿರ್ದೇಶ್' ಹಾಗೂ 'ಬಿಂದೋಳ ಮುದ್ದು ಮಗು' ಇವೆಲ್ಲ ಇದೇ ಅಚ್ಚಿನಲ್ಲಿ ಎರಕಗೊಂಡಿವೆ. ಸರಿ, 'ಬಿಂದೋಳ ಮುದ್ದುಮಗು' ಕಥೆಯನ್ನು ಓದಿ, ಅದನ್ನು ನಿಮ್ಮ 'ಭಾರತ ವರ್ಷ'ಕ್ಕೆ ಕಳಿಸಿದ್ದರೆ ಅಚ್ಚಾಗುತ್ತಿತ್ತು ಎಂಬ ಧೈರ್ಯವನ್ನು ನನ್ನ ಎದೆಯಲ್ಲಿ ತುಂಬ ಬಲ್ಲೆಯಾದರೆ, ಅಂಥ ಕಥೆಗಳನ್ನು ಬರೆಯುತ್ತೇನೆಂದು ಭಾಷೆ ಕೊಡಬಯಸುತ್ತೇನೆ."[1]

".... ಸ್ವತಃ ಕಥೆಗಳನ್ನು ಬರೆಯುವಂಥವರಿಗೆ, 'ರಾಮನ ಸುಮತಿ'ಯಂಥ ಕಥೆಗಳನ್ನು ಸುಲಭವಾಗಿ ಬರೆಯಬಹುದಾದರೆ, 'ಪಥ ನಿರ್ದೇಶ'ದಂಥ ಕಥೆಯನ್ನು ಬರೆಯಲು ಹೆಚ್ಚಿನ ಧೈರ್ಯ ಅಗತ್ಯವಾಗುತ್ತದೆಂಬುದು ಚೆನ್ನಾಗಿ ಗೊತ್ತಿರುತ್ತದೆ. ಪ್ರಾಯಶಃ ಎಲ್ಲರೂ ಹಾಗೆ ಬರೆಯಲಾರರು. ತನ್ನ ಬಗ್ಗೆ ತಾನೇ ವಿಮರ್ಶೆ ಮಾಡಿಕೊಳ್ಳುವುದು ಹೇಗೆ ಸಾಧ್ಯ ? ಇಷ್ಟಾಗಿಯೂ, ಕಲ್ಕತ್ತೆಯಲ್ಲಿನ ಮತ್ತು ಈ ನಾಡಿನಲ್ಲಿನ ಜನರ ಅಭಿಪ್ರಾಯದಲ್ಲಿ ಎರಡು ಕಥೆಗಳೂ 'ಸೂಪರ್‌ಲೆಟೀವ್ ಡಿಗ್ರಿ'ಯಲ್ಲಿ 'ಎಕ್ಸಲೆಂಟ್' ಆಗಿವೆ. ಅದು 'ಆದರ್ಶಪ್ರಾಯವಾಗಿದೆ.[2] ಎಂದು ದ್ವಿಜೇಂದ್ರಲಾಲರು ಅಭಿಪ್ರಾಯಪಟ್ಟಿದ್ದಾರೆ.

ಅವನ ರಚನಾ ಪ್ರಕ್ರಿಯೆ, ಅವನ ಒಲವು-ನಿಲುವುಗಳು, ಅವನ ದ್ವಿಮುಖಿ ವ್ಯಕ್ತಿತ್ವ, ಸಾಹಿತ್ಯ ಸೃಷ್ಟಿಯ ಹಿಂದಿದ್ದ ಉದ್ದೇಶಗಳು - ಇವೆಲ್ಲ ಈ ಪಾತ್ರಗಳಲ್ಲಿ ಪ್ರತಿಬಿಂಬಿತವಾಗಿವೆ. ಈ ಕಥೆಗಳು ಬಂಗಾಳದ ಆ ಕಾಲದ ಪ್ರಬುದ್ಧ ಮನಸ್ಸುಗಳನ್ನು ಕಲಕಿಬಿಟ್ಟುವು. ಈ ಸಂಗತಿ ಅವನಿಗೆ ಅರಿವಾಗಿತ್ತು. ಹೀಗಾಗಿ, ಅವನ ಹೃದಯಾಂತರಾಳವಲ್ಲಿ ಅಡಗಿದ್ದ 'ಅಹಂ'ಭಾವ, ಅವನ ಸ್ವೇಚ್ಛಾನುಸಂಧಾನದ ಭಾವನೆಯನ್ನು ಮೆಟ್ಟಿ ನಿಂತಿತು. ಪ್ರಮಥನಾಥನ ಈ ಪತ್ರದಂಥ[3] ಅದೆಷ್ಟು ಪತ್ರಗಳು ಅವನಿಗೆ ಬಂದಿದ್ದುವೋ ಏನೋ. 'ಬಿಂದೋಳ ಮುದ್ದು ಮಗು' ಕಥೆಯನ್ನು ಓದಿದಾಗ ಅವನು ಹೀಗೆ ಬರೆದಿದ್ದ: "ಇದಕ್ಕಿಂತಲೂ ಒಳ್ಳೆಯ ಕಥೆ ಬಂಗಾಳಿ ಸಾಹಿತ್ಯದಲ್ಲಿ ಪ್ರಕಟವಾಗಿದೆಯೇ ಎಂಬ ಬಗ್ಗೆ ನನಗೆ ಸಂದೇಹವಿದೆ. 'ಇದು ಚೆನ್ನಾಗಿ ಬಂದಿಲ್ಲ' ಎಂದು ನೀನು ಬರೆದಿದ್ದೀಯೆ. ಅದರಲ್ಲಿ ಏನು ದೋಷವಿದೆ ಎಂಬುದು ನನಗೆ ಅರ್ಥವಾಗುತ್ತಿಲ್ಲ. 'ಭಾರತ ವರ್ಷ'ಕ್ಕೆ ಇದನ್ನು ಪ್ರಕಟಿಸುವ ಗೌರವ ದೊರೆಯದಂತೆ ಮಾಡುವ ಸಲುವಾಗಿಯೇ ನೀನು ಈ ಸಂಚು ಹೂಡಿದ್ದೀಯೆ. 'ಭಾರತ ವರ್ಷ'ವೇ ಏಕೆ, ಯಾವುದೇ ಪತ್ರಿಕೆಯಾದರೂ ಇದಕ್ಕಿಂತಲೂ ತುಂಬ ಕೆಟ್ಟದಾದ ಕಥೆಯನ್ನು ಅಚ್ಚಿಸಿ, ಧನ್ಯನಾದೆನೆಂದು ಭಾವಿಸಬಹುದು..... ಸರಿಯಾದ ಅರ್ಥದಲ್ಲಿ ನೀನೆಂದೂ ಗೃಹಸ್ಥನಾಗಿ ಇರಲೇ ಇಲ್ಲ, ಸದಾ ಉದಾಸೀನನಾಗಿಯೇ ಇದ್ದೆ. ಆದರೂ ಇಷ್ಟು ತೀಕ್ಷ್ಣವಾದ ಅವಲೋಕನ ದೃಷ್ಟಿ ಹಾಗೂ ಈ ಸೂಕ್ಷ್ಮಾತಿಸೂಕ್ಷ್ಮ ವಿವರಣೆಗಳು ನಿನಗೆಲ್ಲಿಂದ ಬಂದುವು ? ನಾನು ಮೂಕನಂತಾಗಿದ್ದೇನೆ. ಬರೆದಿರುವುದೆಲ್ಲ ನನಗೆ ಗೊತ್ತು. ನಮ್ಮ ಮನೆಯಲ್ಲಿಯೇ

1. ಏಪ್ರಿಲ್ 8, 1913
2. ಮೇ 10, 1913
3. ಜುಲೈ 19, 1913

ನಡೆದ ಘಟನೆಯೋ ಎಂಬಷ್ಟು ಜೀವಂತವಾಗಿದೆ."

ಮಹಾಲೇಖಕ ಟಾಲ್‌ಸ್ಟಾಯ್ ಅವರನ್ನು ಅವನ ನಾದಿನಿ ತಾನ್ಯಾ ಬಹುಮಟ್ಟಿಗೆ ಇದೇ ರೀತಿ ಪ್ರಶ್ನಿಸಿದ್ದಳು: "ಜಮೀನುದಾರರ, ತಂದೆಯರ, ಸೇನಾಧಿಪತಿಗಳ ಹಾಗೂ ಸಿಪಾಯಿಗಳ ಚಿತ್ರವನ್ನು ಮುಂದಿರಿಸುವಲ್ಲಿ ನೀವು ಸಮರ್ಥರು ಎಂಬುದನ್ನು ನಾನು ಬಲ್ಲೆ. ಆದರೆ, ಪ್ರೀತಿಯ ನೋವಿಗೆ ಒಳಗಾಗಿರುವ ಯುವತಿಯ ವೇದನೆಗೆ ಹಾಗೂ ತಾಯಿಯ ಭಾವನೆಗಳಿಗೆ ನೀವು ಹೇಗೆ ನುಡಿಗೊಡಬಲ್ಲಿರಿ ಎಂಬುದು ನನಗೆ ಅರ್ಥವಾಗುತ್ತಿಲ್ಲ."

ತಾನ್ಯಾಳ ಪ್ರೇಮದ ವ್ಯಥೆಯ ಪ್ರತಿಯೊಂದು ಕ್ಷಣವನ್ನೂ ಅವನು ಕಣ್ಣಾರೆ ಕಂಡಿದ್ದನೆಂಬುದು ಹಾಗೂ ಸ್ವತಃ ತನ್ನ ಪತ್ನಿಯಲ್ಲಿ ಅವನು ಹೆಣ್ಣನ್ನು ಪತ್ನಿಯ ರೂಪದಲ್ಲಿ ಹಾಗೂ ತಾಯಿಯ ರೂಪದಲ್ಲಿ ಕಂಡಿದ್ದನೆಂಬುದು ಆ ಮುಗ್ಧೆಗೆ ತಿಳಿದಿರಲಿಲ್ಲ. ಅದೆಷ್ಟು ಬಗೆಯ ವ್ಯಥೆಗಳನ್ನು ಶರತ್‌ನೂ ಕಣ್ಣಾರೆ ಕಂಡಿದ್ದನೋ ಏನೋ! ಅದೆಷ್ಟೋ ಕುಟುಂಬಗಳ ಸುಖದುಃಖಗಳಲ್ಲಿ ಅವನು ಭಾಗಿಯಾಗಿದ್ದ. ಮೊದಲ ಪ್ರೇಮದ ವಿಫಲತೆಯ ವೇದನೆಯನ್ನು ಹೃದಯದಲ್ಲಿ ತುಂಬಿಕೊಂಡು ಅವನು ಶಾಂತಿಯನ್ನು ಪತ್ನಿಯ ರೂಪದಲ್ಲಿ ಪಡೆದೂ ಇದ್ದ, ಕಳೆದುಕೊಂಡೂ ಇದ್ದ. ಆಮೇಲೆ ಬಾಳ ಜೊತೆಗಾರ್ತಿಯಾದ ಹಿರಣ್ಮಯಿಯ ಪ್ರೇಮದ ನೆರಳಿನಲ್ಲಿ ಈ ಅಲೆಮಾರಿ ಹಾಗೂ ಜಾತಿಬಾಹಿರ ವ್ಯಕ್ತಿ ಬಾಳಿನ ಹೊಸ ಅರ್ಥಗಳನ್ನು ಅರಸಿದ್ದ. ಆದರೆ, ತನ್ನನ್ನು ಅಡಗಿಸಿಡುವ ಕಲೆಯಲ್ಲಿ ಅವನು ಅದೆಷ್ಟು ಜಾಣನಾಗಿದ್ದನೆಂದರೆ ಜನರು ಕೊನೆಯವರೆಗೂ, ಅವನು ಅವಿವಾಹಿತನಾಗಿಯೇ ಇದ್ದನೆಂದು ಭಾವಿಸಿದ್ದರು. ಅನೇಕ ವರ್ಷಗಳ ತರುವಾಯ, ಹಿಂದಿಯ ಸುಪ್ರಸಿದ್ಧ ಲೇಖಕರಾಗಿದ್ದ ಜೈನೇಂದ್ರಕುಮಾರ್ ಅವರು ಬಹುಶಃ ತಾನ್ಯಾಳ ಧ್ವನಿಯಲ್ಲಿಯೇ ಹೀಗೆ ಬರೆದಿದ್ದರು: "ಪತ್ನಿಯ ರೂಪದಲ್ಲಿ ಹೆಣ್ಣನ್ನು ಪಡೆಯುದೆಯೇ ಹೋದ - ಪ್ರತಿಭೆಯನ್ನು ಪಡೆದಿದ್ದ, ಅರುವತ್ತೆರಡು ವರ್ಷ ವಯಸ್ಸನ್ನು ತಲುಪಿದ, ಪ್ರೀತಿಯಿಂದ ತುಂಬಿ ತುಳುಕುತ್ತಿದ್ದಂಥ ಆತ್ಮವನ್ನು ಪಡೆದಿದ್ದ, ಆದರೆ ಪತ್ನಿಯ ರೂಪದಲ್ಲಿ ಹೆಣ್ಣನ್ನು ಪಡೆಯದೆಯೇ ಹೋದ - ಆ ವ್ಯಕ್ತಿಯೇ ನಾರಿಯ ಹೃದಯವನ್ನು ಅದೆಷ್ಟು ಸ್ಪಂದನಶೀಲ ಹಾಗೂ ಸಂಪೂರ್ಣ ತನ್ಮಯತೆ ಭಾವನೆಯಿಂದ ಚಿತ್ರಿಸಿದ್ದಾನೆಂದರೆ ಬೇರಾವ ಗೃಹಸ್ಥನಿಗೂ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದಲೇ, ಈ ವೈರಾಗ್ಯಶೀಲ, ಆದರೂ ಸಂಸಾರಬದ್ಧ ಚೇತನದ ವಿಷಯದಲ್ಲಿ ನನ್ನ ಹೃದಯ ಉತ್ಕಂಠ ಜಿಜ್ಞಾಸೆಯಿಂದ ತುಂಬಿ ಬಂತು."

ಅನುಭವಗಳು ಎಲ್ಲರಿಗೂ ದೊರೆಯಬಹುದು. ಆದರೆ, ಅವನ್ನು ಅನುಭೂತಿಯಾಗಿ ರೂಪಾಂತರಗೊಳಿಸಬಲ್ಲ ಸೂಕ್ಷ್ಮ ಪರ್ಯಾವೇಕ್ಷಕ ದೃಷ್ಟಿ ಇಲ್ಲವಾದಲ್ಲಿ, ಕಲಾವಿದ ಹುಟ್ಟಿಬರುವುದಿಲ್ಲ. ಅಂಥ ದೃಷ್ಟಿ ಶರತ್‌ನಲ್ಲಿ ಬಾಲ್ಯದಿಂದಲೂ ಇತ್ತು. ಈ ಮೂರು ಕಥೆಗಳೇ ಅಲ್ಲದೆ, ಆ ದಿನಗಳಲ್ಲಿಯೇ ಅವನು 'ನಾರಿಯ ಮೌಲ್ಯ' ಎಂಬ ಒಂದು ಪ್ರಬಂಧವನ್ನೂ ಬರೆದಿದ್ದ. 'ಚರಿತ್ರಹೀನ'ದಂತೆಯೇ 'ನಾರಿಯ ಇತಿಹಾಸ'ವೆಂಬ ಸುದೀರ್ಘ ಪ್ರಬಂಧವೂ ಬೆಂಕಿಯಲ್ಲಿ ಉರಿದು ಬೂದಿಯಾಗಿತ್ತು. ಅದರ ನೆನಪಿನ ಆಧಾರದ ಮೇಲೆ ಅವನು ಈ

ಪ್ರಬಂಧವನ್ನು ಪುನರ್‌ರಚಿಸಿದ್ದ. ಅದು 'ಯಮುನಾ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಅಚ್ಚಾಗತೊಡಗಿತು.[1] ಆದರೆ, ಅದರಲ್ಲಿ ಲೇಖಕನ ರೂಪದಲ್ಲಿ ತನ್ನ ಹೆಸರನ್ನು ಅವನು ಕಾಣಿಸಲಿಲ್ಲ. ಅವನ ಅಕ್ಕ ಅನಿಲಾದೇವಿ ಇದರ 'ಲೇಖಕಿ'ಯಾದಳು. ಇದೇ ಹೆಸರಿನಲ್ಲಿ 'ನಾರಿಯರ ಬರಹಗಳು' ಎಂಬ ಶೀರ್ಷಿಕೆಯಲ್ಲಿ ಕೆಲವು ಲೇಖಕಿಯರ ಕೃತಿಗಳನ್ನು ಅವನು ವಿಮರ್ಶಿಸಿದ್ದ.

ಆಕೆಯ ಬಗ್ಗೆ ಚರ್ಚಿಸುತ್ತಾ, ಅವನು ಯೋಗೇಂದ್ರನಾಥರೊಂದಿಗೆ ಹೇಳಿದ: "ನನ್ನ ಅಕ್ಕನ ವಿಚಾರವನ್ನು ನಾನು ನಿಮಗೆ ಹೇಳಲೇ ಇಲ್ಲವೆಂದು ತೋರುತ್ತದೆ. ಈ ಲೇಖನ[2] ಆಕೆಯ ಹೆಸರಿನಲ್ಲಿ ಪ್ರಕಟವಾಗಬೇಕು. ಅವಳು ಚೆನ್ನಾಗಿ ಓದಿ-ಬರೆದು ಮಾಡಿದ್ದಾಳೆ. ಆದರೆ ಮನೆವಾರ್ತೆಯಲ್ಲಿ ಸಿಕ್ಕಿಕೊಂಡಿದ್ದಾಳೆ. ಹೀಗೆ ಚರ್ಚೆಮಾಡಲು ಅವಳಿಗೆ ಬಿಡುವೇ ದೊರೆಯುವುದಿಲ್ಲ."

ಈ ಲೇಖನ ಅವನ ಹೆಸರಿನಲ್ಲಿ ಪ್ರಕಟವಾಗಿರದಿದ್ದರೂ, ಅನೇಕ ಪರಿಚಿತರು ಹಾಗೂ ಅಪರಿಚಿತರು ಈ ಲೇಖನದ ಭಾವ ಹಾಗೂ ಭಾಷೆಯ ಬಾಗು-ಬಳುಕು-ಬೆಡಗುಗಳನ್ನು ಮೆಚ್ಚಿ ಅವನಿಗೆ ಕಾಗದಗಳನ್ನು ಬರೆದಿದ್ದರು. ಅವನ ಭಾಷೆ ಹಾಗೂ ಶೈಲಿಗಳೆರಡೂ ಈಗ ಓದುಗರಿಗೆ ಚೆನ್ನಾಗಿ ಪರಿಚಯವಾಗಿಬಿಟ್ಟಿದ್ದುವು. ಈ ಬಗೆಯಲ್ಲಿ ಹನ್ನೆರಡು 'ಮೌಲ್ಯ'ಗಳನ್ನು ಕುರಿತು ಬರೆಯಬೇಕೆಂದು ಅವನು ಆಲೋಚಿಸಿದ್ದ. 'ನಾರಿಯ ಮೌಲ್ಯ', 'ಧರ್ಮದ ಮೌಲ್ಯ', 'ದೇವರ ಮೌಲ್ಯ', 'ಮಾದಕತೆಯ ಮೌಲ್ಯ,' 'ಸುಳ್ಳಿನ ಮೌಲ್ಯ,' 'ಆತ್ಮದ ಮೌಲ್ಯ,' 'ಪುರುಷನ ಮೌಲ್ಯ,' 'ಸಾಹಿತ್ಯದ ಮೌಲ್ಯ', 'ಸಮಾಜದ ಮೌಲ್ಯ' 'ಅಧರ್ಮದ ಮೌಲ್ಯ', 'ವೇಶ್ಯೆಯ ಮೌಲ್ಯ' ಹಾಗೂ 'ಸತ್ಯದ ಮೌಲ್ಯ', ಎಂಬುವೇ ಆ ಹನ್ನೆರಡು ಮೌಲ್ಯಗಳಾಗಿದ್ದುವು.

ಕೆಲವು ದಿನಗಳ ಬಳಿಕ 'ಸಾಂಖ್ಯದ ಮೌಲ್ಯ' ಮತ್ತು 'ವೇದಾಂತದ ಮೌಲ್ಯ'ವೆಂಬ ಹೆಸರಿನ ಇನ್ನೆರಡು ಮೌಲ್ಯಗಳೂ ಈ ಯೋಜನೆಗೆ ಸೇರಿಕೊಂಡುವು. ಯೋಜನೆಗಳನ್ನು ರೂಪಿಸುವುದೇನೋ ಅವನಿಗೆ ಚೆನ್ನಾಗಿ ಗೊತ್ತಿತ್ತು. ಆದರೆ, ವಂಶಪಾರಂಪರ್ಯವಾಗಿ ಬಂದಿದ್ದ ಅಜಗರ ಪ್ರವೃತ್ತಿಯಿಂದಾಗಿ, ಅವುಗಳನ್ನು ಕಾರ್ಯರೂಪಕ್ಕೆ ತರುವುದನ್ನು ಅವನು ಕಲಿತಿರಲಿಲ್ಲ. ಹೆಸರು ಗೊತ್ತಾಗಿ ಬಿಡುತ್ತದೆಂಬ ನೆಪ ದೊರೆತು ಬಿಟ್ಟಿದ್ದರಿಂದ ಕೆಲಸ ಮಾಡದೆ ಇರುವುದು ಮತ್ತಷ್ಟು ಸುಲಭವಾಗಿ ಬಿಟ್ಟಿತು. ಆದದ್ದು ಇಷ್ಟು: 'ನಾರಿಯ ಮೌಲ್ಯ' ಪ್ರಬಂಧ ಅಮೂಲ್ಯವಾದುದೆಂದು ದ್ವಿಜೇಂದ್ರಲಾಲ್ ರಾಯ್ ಅವರು ತುಂಬ ಪ್ರಶಂಸಿಸಿದಾಗ ಪ್ರಮಥನಾಥರಿಗೆ ರಹಸ್ಯವನ್ನು ಕಾಯ್ದಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಅವರು ಶರತ್‌ನೇ ಅದರ ಲೇಖಕನೆಂಬುದನ್ನು ಬಹಿರಂಗಪಡಿಸಿದ್ದರು. ಬಹುಶಃ ಇದರತ್ತ ಕೈದೋರುತ್ತಲೇ ಶರತ್ ಹೀಗೆ ಬರೆದಿರಬೇಕು: "ನನ್ನ ಹೆಸರು ಜನಗಳಿಗೆ ಹೇಗೆ ಗೊತ್ತಾಯಿತು ಎಂದು ಯೋಚಿಸುತ್ತಿದ್ದೇನೆ. ಬಹುಶಃ ಫಣೀಂದ್ರನಿಂದ ಅಥವಾ ನಿನ್ನಿಂದ ಈ 'ಅನಿಷ್ಟ' ಸಂಭವಿಸಿರಬೇಕು. ಈಗ ಏನು ಮಾಡಲಿ ಎಂಬುದನ್ನು ತಿಳಿಸು. ಈ ಮೌಲ್ಯಗಳಲ್ಲಿ 'ವೇಶ್ಯೆಯ ಮೌಲ್ಯ' ಹಾಗೂ 'ಮಾದಕತೆಯ ಮೌಲ್ಯ'

---

1. 1913ರ ಏಪ್ರಿಲ್‌ನಿಂದ ಅಕ್ಟೋಬರ್‌ವರೆಗೆ.

2. ಇದು 18, ಮಾರ್ಚ್ 1924ರಂದು ಪುಸ್ತಕದ ರೂಪದಲ್ಲಿ ಪ್ರಕಟವಾಯಿತು.

ಪ್ರಬಂಧಗಳು ಉಳಿದೆಲ್ಲವುಗಳಿಗಿಂತ ಹೆಚ್ಚು ಚಿತ್ತಾಕರ್ಷಕವಾಗುತ್ತಿದ್ದುವು. ಅವುಗಳ ವಿಚಾರದಲ್ಲಿ ತಾನೆ, ಬಂಧು-ಬಾಂಧವರಿಗೆಲ್ಲ ಭಯಂಕರವಾದ ಆಕ್ಷೇಪ ಇರಬಹುದಾದದ್ದು. ಇವೆರಡನ್ನೂ ಅನಿಲಾಳ ಹೆಸರಿನಲ್ಲಿ ಬರೆಯುವುದು ಅವರಿಗೆ ಯಾವ ರೀತಿಯಲ್ಲೂ ಒಪ್ಪಿಗೆಯಾಗಿಲ್ಲ. 'ಎವೊಲ್ಯೂಷನ್ ಆಫ್ ದಿ ಐಡಿಯಾ ಆಫ್ ಸೋಲ್' ಎಂಬುದನ್ನು 'ನಾರಿಯ ಮೌಲ್ಯ'ದ ರೀತಿಯಲ್ಲಿಯೇ ಆರಂಭಿಸ ಬಹುದಲ್ಲವೇ ಎಂದು ಯೋಚಿಸುತ್ತಿದ್ದೇನೆ."

"ಹರ್ಬರ್ಟ್ ಸ್ಪೆನ್ಸರನ ಇಡೀ 'ಸಮನ್ವಯಾತ್ಮಕ ದರ್ಶನ'ದ ಬಗ್ಗೆ ಒಂದು ಸಮಾಲೋಚನಾತ್ಮಕ (ಅಲ್ಲ ವಿಮರ್ಶಾತ್ಮಕ) ಲೇಖನವನ್ನು ಬಂಗಾಳಿಯಲ್ಲಿ ಬರೆಯಬೇಕು ಹಾಗೂ ಸ್ಪೆನ್ಸರನಿಗೆ ಶತ್ರುಗಳಾಗಿರುವ ಹಾಗೂ ಮಿತ್ರರಾಗಿರುವ ಇತರ ಐರೋಪ್ಯ ದಾರ್ಶನಿಕರ ಬಗ್ಗೆ ಧಾರಾವಾಹಿಯಾಗಿ ಪ್ರಬಂಧಗಳನ್ನು ಬರೆಯಬೇಕು ಎಂದು ಆಗಾಗ ನಾನು ಇಚ್ಛಿಸಿದ್ದೇನೆ. 'ಸಾಂಖ್ಯ' ಮತ್ತು 'ವೇದಾಂತ', 'ದ್ವೈತ' ಮತ್ತು 'ಅದ್ವೈತ' ಇವುಗಳನ್ನು ಬಿಟ್ಟರೆ, ಬೇರಾವುದೇ ಬಗೆಯ ವಿಮರ್ಶೆ ನಮ್ಮ ನಾಡಿನ ಪತ್ರಿಕೆಗಳಲ್ಲಿ ಇರುವುದಿಲ್ಲ" ಎಂದೂ ಮತ್ತೆ ಬರೆದಿದ್ದರು.

ಶರತ್ ತುಂಬ ಓದಿ-ಬರೆದು ಆಲೋಚನೆ ಮಾಡುತ್ತಿದ್ದ ಎಂಬುದು ಇದರಿಂದ ಮತ್ತೊಮ್ಮೆ ಸ್ಪಷ್ಟವಾಗುತ್ತದೆ. ಆದರೆ, ಯಾವುದೋ ಕಾರಣದಿಂದಾಗಿ, ಮೂರು ವರ್ಷಗಳ ತರುವಾಯ 'ಸಮಾಜ ಧರ್ಮೇರ್ ಮೂಲ್ಯ' (ಸಮಾಜ ಧರ್ಮದ ಮೌಲ್ಯ) ಎಂಬುದನ್ನು ಬಿಟ್ಟು ಬೇರಾವುದೇ ಮೌಲ್ಯ ವಿಷಯಕವಾದ ಪ್ರಬಂಧವನ್ನು ಬರೆಯುವುದು ಅವನಿಗೆ ಸಾಧ್ಯವಾಗಲಿಲ್ಲ. ಕಥೆಗಳನ್ನು ಮಾತ್ರವೇ ಅವನು ಬರೆಯುತ್ತ ಬಂದಿದ್ದ. ಕಥೆಗಳನ್ನು ಬರೆಯುವ ಬಗ್ಗೆ ಮಿತ್ರರ ಒತ್ತಾಯ ಇದ್ದೇ ಇತ್ತು ಎಂಬುದೇನೋ ನಿಜ, ಅದರ ಜೊತೆಗೆ ಹಣಕಾಸಿನ ಒತ್ತಾಯವೂ ಇತ್ತು. ಪ್ರಬಂಧಗಳಿಗೆ ಬದಲಾಗಿ ಹಾಗೂ ಹೀಗೂ ಜೋಡಿಸಿ ನಾಲ್ಕಾರು ಕಥೆಗಳನ್ನು ಬರೆಯಲು ಸಾಧ್ಯವಾಗುವುದಾದರೆ, ತಮ್ಮ ಪ್ರಕಟಣೆಗಳ ಸಾವಿರ ಪ್ರತಿಗಳು ಸುಲಭವಾಗಿ ಖರ್ಚಾಗಿ ಬಿಡುತ್ತವೆಂಬುದು ಪ್ರಕಾಶಕರ ಅಭಿಪ್ರಾಯವಾಗಿತ್ತು.

ಈ ಪ್ರಬಂಧಗಳನ್ನು ಬರೆಯದೆ ಹೋದುದಕ್ಕೆ ವಿಭೂತಿಭೂಷಣ ಭಟ್ಟರೂ ಕಾರಣವಾದರು. ಅನೇಕರು 'ನಾರಿಯ ಮೌಲ್ಯ' ಪ್ರಬಂಧವನ್ನು ಪ್ರಶಂಸಿಸಿದ್ದರೆ, ವಿಭೂತಿಭೂಷಣರು ಅದನ್ನು ಖಂಡಿಸಿದ್ದರು. "ಮಿಸೆಸ್ ಪಂಕಸ್ಟ್‌ಳ ಆದರ್ಶವನ್ನು ಮುಂದಿರಿಸುವುದು ದುಸ್ಸಾಹಸದ ಕೆಲಸ. ಈ ಸ್ತ್ರೀ ನಾಮಧಾರಿ ಉದ್ಧತ ಮಹಾಪುರುಷನನ್ನು ಅಥವಾ ಸ್ತ್ರೀಯರ ಹಕ್ಕುಗಳನ್ನು ರಕ್ಷಿಸಲು ಹೊರಟಿರುವ 'ಡಾನ್ ಕ್ವಿಕ್ಸೋಟ್'ನ ಮಾತುಗಳನ್ನು ಖಂಡಿಸಿ ಬರೆಯಬೇಕೆಂದು ನಾನು ನಿರುಪಮಾಳಿಗೆ ಹೇಳಿದ್ದೇನೆ" ಎಂದು ಅವರು ಸೌರೀಂದ್ರ ಮೋಹನರಿಗೆ ಬರೆದಿದ್ದರು.

ಈ ಸುದ್ದಿ ತಿಳಿದಾಗ ಶರತ್‌ನ ಉತ್ಸಾಹಕ್ಕೆ ತಣ್ಣೀರೆರಚಿದಂತಾಯಿತು. ಈ ಬಗೆಯ ಪ್ರಬಂಧಗಳನ್ನು ಬರೆಯುವುದಿಲ್ಲವೆಂದು ಅವನು ತೀರ್ಮಾನಿಸಿದ. ಸೌರೀಂದ್ರರಿಗೆ ತನ್ನ ಈ ನಿರ್ಧಾರದ ಬಗೆಗಿನ ಸೂಚನೆ ಕೊಡುತ್ತ ಅವನು ಹೀಗೆ ಬರೆದ: "ನಿರುಪಮಾ ಈ ವಿಷಯದ ಬಗ್ಗೆ ಏನನ್ನೂ ಬರೆಯುವುದು ಬೇಡವೆಂದು ಪಂಟೂಗೆ (ವಿಭೂತಿಭೂಷ ಭಟ್ಟ) ಬರೆದಿದ್ದೇನೆ. ಎದುರು ಮಾತುಗಳನ್ನು ನಾನು ಸಹಿಸಲಾರೆ.

ಅದು ಬಯ್ಗುಳುಗಳ ಎರಚಾಟಿಕೆಯಂತಿರುತ್ತದೆ. ಏನಾದರೂ ಹೇಳಬೇಕೆಂದಿದ್ದರೆ ಮಾತುಕತೆಗಳಲ್ಲಿ ತಿಳಿಸಲಿ. ಅದರಲ್ಲಿ ಒಂದು ಅನುಕೂಲವಿರುತ್ತದೆ. ಉಭಯ ಪಕ್ಷಗಳೂ ಪರಸ್ಪರ ತಪ್ಪು ತಿಳಿಯಲು ಅವಕಾಶವಿರುವುದಿಲ್ಲ. ಅನುಮಾನಗಳೂ ಅಲ್ಲಿಯೇ ಕೊನೆಗೊಳ್ಳುತ್ತವೆ."

"ಎಲ್ಲರೂ ನನ್ನ ಕಥೆಗಳನ್ನು ಹೊಗಳುತ್ತಾರೆ. ಆದರೆ, ಕಡಿಮೆ ನೋವಿನಿಂದೇನೂ ನಾನು 'ನಾರಿಯ ಮೌಲ್ಯ' ಪ್ರಬಂಧವನ್ನು ಬರೆದಿಲ್ಲ." ಎಂದು ಅವನು ತನ್ನ ಗೆಳೆಯನೊಬ್ಬನೊಂದಿಗೆ ಹೇಳಿಕೊಂಡಿದ್ದ. ಆದರೆ, ನಾನಾ ಕಾರಣಗಳಿಂದ ಈ ಮೌಲ್ಯ ಪ್ರಬಂಧ ಮಾಲೆಯನ್ನು ಬರೆಯುವ ನಿರ್ಧಾರವನ್ನು ಅವನು ಇಲ್ಲಿಗೇ ಕೊನೆಗೊಳಿಸಬೇಕಾಯಿತು. ಇದನ್ನು ಸಾಹಿತ್ಯದ ದೌರ್ಭಾಗ್ಯವೆಂದೇ ಹೇಳಬೇಕು.

## 13

ಸಣ್ಣಪುಟ್ಟ ಕೃತಿಗಳ ಜೊತೆಜೊತೆಯಾಗಿ 'ಚರಿತ್ರಹೀನ' ಕಾದಂಬರಿಯ ಬರವಣಿಗೆ ಒಂದೇ ಸಮನೆ ನಡೆದಿತ್ತು. ಅದರ ಪ್ರಕಟಣೆಯ ವಿಷಯದಲ್ಲಿ ಸಾಕಷ್ಟು ಕೋಲಾಹಲವೂ ನಡೆದಿತ್ತು. ಅದು 'ಭಾರತ ವರ್ಷ'ದಲ್ಲಿ ಪ್ರಕಟವಾಗುವಂತಾದರೆ ಏನು ಮಾಡುವುದು ಎಂದು 'ಯಮುನಾ'ದ ಸಂಪಾದಕರಾಗಿದ್ದ ಫಣೀಂದ್ರನಾಥರು ಚಿಂತಿತರಾಗಿದ್ದರು. ಪ್ರಮಥನಾಥರು ಒಂದೇ ಸಮನೆ ಒತ್ತಾಯಪಡಿಸುತ್ತಿದ್ದರು: "'ಯಮುನಾ'ದ ಸಂಪಾದಕರಾದ ಫಣಿ ಬಾಬೂ ಯಾರೆಂಬುದು ನನಗೆ ಗೊತ್ತಿಲ್ಲ. ಆದರೆ, ನಮ್ಮ ಇಷ್ಟು ದಿನಗಳ ಪ್ರೀತಿ-ವಿಶ್ವಾಸಗಳ ನಡುವೆ ಅಡ್ಡಗೋಡೆಯಾಗಿ ನಿಲ್ಲುವಷ್ಟರಮಟ್ಟಿಗೆ ಅವರು ನಿನ್ನ ಮೇಲೆ ಪ್ರಭಾವ ಬೀರುತ್ತಿರುವುದನ್ನು ಕಂಡು ಮನಸ್ಸಿನಲ್ಲಿಯೇ ಹೊಟ್ಟೆಕಿಚ್ಚು ಮೂಡುತ್ತದೆ.... ಆದರೆ, ಹೊಸ 'ಯಮುನೆ'ಯ ಬಗೆಗಿನ ಪ್ರೀತಿಯಲ್ಲಿ ಹಳಬರನ್ನು ಹೀಗೆ ಸಂಪೂರ್ಣವಾಗಿ ಮರೆತುಬಿಡುವುದು ಸರಿಯಲ್ಲ.... 'ಚರಿತ್ರ ಹೀನ' ಖಂಡಿತವಾಗಿಯೂ ನಮಗೆ ಬೇಕು."

ಇತ್ತ ಪ್ರಮಥನಾಥರು ಹೀಗೆ ಒತ್ತಾಯ ಪಡಿಸುತ್ತಿದ್ದರೆ, ಅತ್ತ 'ಸಾಹಿತ್ಯ' ಪತ್ರಿಕೆಯ ಸಂಪಾದಕರು ಮೇಲಿಂದ ಮೇಲೆ ರಿಜಿಸ್ಟರ್ ಅಂಚೆಯಲ್ಲಿ ಕಾಗದಗಳನ್ನು ಕಳುಹಿಸುತ್ತಿದ್ದರು. 'ಯಮುನಾ'ದಲ್ಲಿಯಂತೂ 'ಚರಿತ್ರ ಹೀನ'ದ ಪ್ರಕಟಣೆಯ ಬಗ್ಗೆ ಜಾಹಿರಾತುಗಳೂ ಕಾಣಿಸಿಕೊಂಡಿದ್ದುವು. ಇಂಥ ಸ್ಥಿತಿಯಲ್ಲಿ ಶರತ್ ತುಂಬ ಗೊಂದಲಕ್ಕೆ ಸಿಕ್ಕಿಕೊಂಡ. ಪ್ರಮಥನಾಥರಿಗೆ ಅವನು ಹೀಗೆಂದು ಬರೆದ.

"ಶ್ರಾವಣ ಮಾಸದ ಸಂಚಿಕೆಯಿಂದ 'ಚರಿತ್ರ ಹೀನ' ಕಾದಂಬರಿಯನ್ನು ಆರಂಭಿಸುವುದಾಗಿ 'ಯಮುನಾ'ದ ವೈಶಾಖ ಮಾಸದ ಸಂಚಿಕೆಯಲ್ಲಿ ಜಾಹಿರಾತು ಕೂಡ ಪ್ರಕಟವಾಗಿದೆ. ಈ ಸ್ಥಿತಿಯಲ್ಲಿ ಹೇಳಲು ಇನ್ನೇನು ತಾನೆ ಉಳಿದಿದೆ ಎಂಬುದು ನನಗೆ ಗೊತ್ತಾಗುತ್ತಿಲ್ಲ. ನನ್ನನ್ನು ಒಂದು ಮಾತು ಕೇಳದೆ ಈ ವಿಷಯದ ಬಗ್ಗೆ ನೀನು ಹರಿದಾಸ ಬಾಬೂಗಳ ಜೊತೆ ಏಕೆ ಪ್ರಸ್ತಾಪಿಸಿದೆ ಎಂಬುದನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಅಸಾಧ್ಯವಾದುದಲ್ಲದೆ ಇದ್ದರೆ ನಿನಗಾಗಿ ನಾನು ಏನೆಲ್ಲ ವನ್ನು ಮಾಡಲು ಸಿದ್ಧನಾಗಿರುತ್ತೇನೆಂಬುದೂ ನಿನಗೆ ಗೊತ್ತು. ಈಗ ಈ ಸಂಕಟದಿಂದ ಹೇಗೆ ಪಾರಾಗಲು ಸಾಧ್ಯ ಎಂಬುದನ್ನು ತೀರ್ಮಾನಿಸುವುದು ಕಷ್ಟವಾಗಿದೆ.

ನನ್ನಿಂದಾಗಿ ನೀನು ತಲೆ ತಗ್ಗಿಸುವಂತಾಗುತ್ತದೆ ಹಾಗೂ ಕೆಟ್ಟ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಂತಾಗುತ್ತದೆ ಎಂಬುದಕ್ಕಾಗಿ ನಾನು ಈಗ ಇಬ್ಬಂದಿಗೆ ಒಳಗಾಗಿದ್ದೇನೆ. 'ಯಮುನಾ'ದಲ್ಲಿ ಅದನ್ನು ಪ್ರಕಟಿಸುವುದು ಸರಿಯೇ ಅಲ್ಲವೇ ಎಂಬ ಪ್ರಶ್ನೆ ಈಗ ಉದ್ಭವಿಸುವುದೇ ಇಲ್ಲ. ನಿನ್ನ ಗೌರವದ ಪ್ರಶ್ನೆಯೇ ನಿಜವಾದ ಪ್ರಶ್ನೆ. 'ಚರಿತ್ರ ಹೀನ' ಕಾದಂಬರಿಯ ಬರೆದಿರುವಷ್ಟು ಭಾಗವನ್ನು ಓದಿ ನೋಡುವ ಸಲುವಾಗಿ ನಿನಗೆ ಕಳಿಸಿಕೊಡಬೇಕೆಂದು ಯೋಚಿಸಿದ್ದೇನೆ. ಇದು ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾಗಲು ಅರ್ಹವಾಗಿದೆಯೆಂದು ನೀನು ನಿಜವಾಗಿಯೂ ಭಾವಿಸುವುದಾದರೆ, ಇದನ್ನು ಪ್ರಕಟಿಸು ಎಂದು ಹೇಳಬಲ್ಲೆ. ಹಾಗಲ್ಲದೆ, ಕೇವಲ ನನ್ನ ಒಳಿತಿಗಾಗಿ ಅದನ್ನು ಪ್ರಕಟಿಸಬೇಕೆಂದು ನೀನು ಪ್ರಯತ್ನಿಸುತ್ತಿರುವುದಾದರೆ, ಹಾಗೆ ಮಾಡುವುದು ಬೇಡ. ಸಾಹಿತ್ಯದ ಕ್ಷೇತ್ರದಲ್ಲಿ ನಾನು ಅಪೇಕ್ಷಿಸುವುದು ನಿರಪೇಕ್ಷ ಸತ್ಯವನ್ನು. ಇದರಲ್ಲಿ ಎಲ್ಲಿಯಾದರೂ ಏನಾದರೂ ಬದಲಾವಣೆಯಾಗಬೇಕೆಂದು ನೀನು ಬಯಸುವು ದಾದರೆ, ಅದು ಮಾತ್ರ ಸಾಧ್ಯವಾಗುವುದಿಲ್ಲ. ಹೆಸರನ್ನು ನೋಡಿಯೇ ಅದು 'ಚರಿತ್ರಹೀನ'ವಾಗಿದೆಯೆಂದು ಭಾವಿಸಿಬಿಡಬೇಡ. ನಾನೊಬ್ಬ ನೀತಿ ಶಾಸ್ತ್ರದ ವಿದ್ಯಾರ್ಥಿ, ನಿಜವಾದ ವಿದ್ಯಾರ್ಥಿ. ಇದನ್ನು ಓದಿ ಹಿಂದಿರುಗಿಸು. ಯಾವ ಸಂಕೋಚವೂ ಇಲ್ಲದೆ ನಿನ್ನ ಅಭಿಪ್ರಾಯವನ್ನು ತಿಳಿಸು. ನಾನು ಯಾವ ಗಂಭೀರ ಉದ್ದೇಶವನ್ನಿರಿಸಿಕೊಂಡಿದ್ದೇನೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊ. ಇದು ಅಂತಿಂಥ ಪುಸ್ತಕವೇನೂ ಅಲ್ಲ."[1]

ಹಸ್ತಪ್ರತಿಯನ್ನು ಪ್ರಮಥನಾಥರಿಗೆ ಕಳಿಸಿಯೂ ಬಿಟ್ಟ. ತಲುಪಿದ ಬಗ್ಗೆ ಅವರು ಕೂಡಲೇ ಪಾವತಿ ಪತ್ರ ಬರೆಯದಿದ್ದಾಗ ಅವನು ಹುಚ್ಚನಂತಾದ ಹಾಗೂ ಮೇಲಿಂದ ಮೇಲೆ ಪತ್ರಗಳನ್ನು ಬರೆಯತೊಡಗಿದ.

"ಪ್ರಮಥ್, 'ಚರಿತ್ರಹೀನ' ನಿನ್ನ ಕೈ ಸೇರಿತೇ ಇಲ್ಲವೇ ಎಂಬುದನ್ನೂ ತಿಳಿಸಲಿಲ್ಲ. ಅದನ್ನು ಓದಿದೆಯೋ ಇಲ್ಲವೊ ? ಏನನ್ನಿಸಿತು ? ಅದು ಚೆನ್ನಾಗಿಲ್ಲ ಎಂಬುದೇ ನಿನ್ನ ನಿಷ್ಪಕ್ಷಪಾತ ಅಭಿಪ್ರಾಯವಾಗಿದ್ದರೆ, ಅದನ್ನು ಉತ್ತಮ ಪಡಿಸಲು ಸಾಧ್ಯವಾಗುವಂಥ ರೀತಿಯಲ್ಲಿ ಪ್ರಯತ್ನಿಸುತ್ತೇನೆ. ಅದು ಚರಿತ್ರಹೀನವೇ ಹೊರತು ಷಟ್ಚಕ್ರ ಭೇದನೆಯಿಲ್ಲ. ಅದು ನೀತಿಶಾಸ್ತ್ರ, ಅದು ಮನೋವಿಜ್ಞಾನ, ಅದು ಧರ್ಮವೇನೂ ಅಲ್ಲ..." ಎಂಬುದನ್ನು ನಾನು ಮೊದಲೇ ನಿನಗೆ ತಿಳಿಸಿದ್ದೇನೆ."[2]

ಕೊನೆಗೆ ಪ್ರಮಥನಾಥರಿಂದ ಉತ್ತರ ಬಂದಿತು. ಕಾದಂಬರಿಯ ಮೊದಲಲ್ಲೇ ಮೆಸ್‌ನ ಸೇವಕಿಯೊಬ್ಬಳನ್ನು ತಂದು ನಿಲ್ಲಿಸುವುದು ಅವರಿಗೆ ಅಷ್ಟಾಗಿ ಹಿಡಿಸಲಿಲ್ಲ. ಆದರೆ, ಶರತ್ ತುಂಬ ಆತ್ಮವಿಶ್ವಾಸದಿಂದ ಉತ್ತರಿಸುತ್ತ ಹೀಗೆ ಬರೆದ: "ಮೊದಲಿಗೆ ಮೆಸ್‌ನ ಸೇವಕಿಯನ್ನು ತಂದು ನಿಲ್ಲಿಸುವ ಧೈರ್ಯ ಇರುವವನು, ಎಲ್ಲವನ್ನೂ ಚೆನ್ನಾಗಿಯೇ ಆಲೋಚಿಸಿ ಹಾಗೆ ಮಾಡಿರುತ್ತಾನೆ. ಅಂತ್ಯವನ್ನು ತಿಳಿಯದೆ, ಅವಳನ್ನು ಅಂದರೆ ಸಾವಿತ್ರಿಯನ್ನು ಮೆಸ್‌ನ ಸೇವಕಿ ಎಂಬಂತೆಯೇ ನೋಡುತ್ತೀಯೆ. ಪ್ರಮಥ್, ರತ್ನವನ್ನು ಗಾಜಿನ ಚೂರೆಂದು ಭಾವಿಸುವ ತಪ್ಪು ಮಾಡುತ್ತಿದ್ದೀಯೆ. ಕೌಂಟ್

1. 17, ಏಪ್ರಿಲ್ 1913
2. 3 ಮೇ 1913

ಲಿಯೋ ಟಾಲ್‌ಸ್ಟಾಯ್ ಅವರ 'ರಿಸರೆಕ್ಷನ್' ಕಾದಂಬರಿಯನ್ನು ಓದಿದ್ದೀಯೇನು? ಅವರ ಈ ಸರ್ವೋತ್ಕೃಷ್ಟ ಕೃತಿಯ ವಸ್ತು ಒಬ್ಬ ಸಾಮಾನ್ಯ ವೇಶ್ಯೆಗೆ ಸಂಬಂಧಿಸಿರುವಂಥದು. ನಮ್ಮ ದೇಶದಲ್ಲಿ ಆ ಕಲೆಯನ್ನು ಅರ್ಥಮಾಡಿಕೊಳ್ಳುವಂಥ ಕಾಲವಿನ್ನೂ ಬಂದಿಲ್ಲ.... ಅನಾವೃತವಾಗಿದೆಯೆಂಬ ಕಾರಣಕ್ಕಾಗಿಯೇ ನಾನು ಕಲೆಯನ್ನು ತಿರಸ್ಕಾರದ ದೃಷ್ಟಿಯಿಂದ ನೋಡುವುದಿಲ್ಲ. ಆದರೆ, ಸರಿಯಾದ ಯಾವ ಅರ್ಥದಲ್ಲಿ ಇದು ನೈತಿಕವೆಂದು ತೋರುತ್ತದೆಯೋ ಆ ರೀತಿಯಲ್ಲಿಯೇ ಇದನ್ನು ಉಪಸಂಹರಿಸುತ್ತೇನೆ.... ಈ ವಿಷಯದ ಬಗ್ಗೆ ಅಂದರೆ ಸೇವಕಿಯೊಬ್ಬಳಿಂದ ಇದನ್ನು ಆರಂಭಿಸುವುದು ಸೂಕ್ತವಾಗುವುದಿಲ್ಲವೆಂದು ಯಾರಾದರೂ ಇದಕ್ಕೆ ಮೊದಲು ನನ್ನನ್ನು ಎಚ್ಚರಿಸಿದ್ದರೆ, ಬೇರೊಂದು ಮಾರ್ಗವನ್ನು ಹಿಡಿಯಲು ನಾನು ಪ್ರಯತ್ನಿಸುತ್ತಿದ್ದೆನೋ ಏನೋ. ಆದರೆ, ಯಾರೂ ಆ ಮಾತನ್ನು ಹೇಳಲಿಲ್ಲ. ಈಗ ಕಾಲ ಮಿಂಚಿ ಹೋಗಿದೆ."[1]

ಈಗಲೂ ಹಸ್ತಪ್ರತಿಯನ್ನು ಹಿಂದಿರುಗಿಸುವಲ್ಲಿ ಪ್ರಮಥನಾಥರು ವಿಳಂಬ ಮಾಡುತ್ತಿದ್ದರು. ಇತ್ತ ಇತರ ಪತ್ರಿಕೆಗಳು ಮೇಲಿಂದ ಮೇಲೆ ಒತ್ತಾಯಪೂರ್ವಕವಾಗಿ ಪತ್ರಗಳನ್ನು ಬರೆಯುತ್ತಿದ್ದುವು. ಶರತ್ ಯಾವುದಾದರೂ ಪ್ರಲೋಭನೆಗೆ ಒಳಗಾಗಿಬಿಟ್ಟರೆ ಹೇಗೆ ಎಂದು ಫಣಿ ಬಾಬೂಗೆ ಚಿಂತೆಯಾಗಿತ್ತು. ಆದರೆ, 'ಚರಿತ್ರಹೀನ' ಕಾದಂಬರಿ 'ಯಮುನಾ'ದಲ್ಲಿಯೇ ಪ್ರಕಟವಾಗುತ್ತದೆಂದು ಶರತ್ ಮತ್ತೆ ಮತ್ತೆ ಆಶ್ವಾಸನೆ ಕೊಡುತ್ತಲೇ ಇದ್ದ.

ಕೊನೆಗೆ ದ್ವಿಜೇಂದ್ರಲಾಲ್ ರಾಯ್ ಅವರು ಅದನ್ನು ಓದಿ ನೋಡಿ ಹೀಗೆಂದರು: "ಇದು ತುಂಬ ಅಶ್ಲೀಲ ಕೃತಿ. ಯಾವುದೇ ಒಳ್ಳೆಯ ಪತ್ರಿಕೆಯಲ್ಲಿ ಇದನ್ನು ಅಚ್ಚಿಸುವಂತಿಲ್ಲ. ಸಭ್ಯ ಸಮಾಜದಲ್ಲಿ ಈ ಕಾದಂಬರಿಯನ್ನು ಪ್ರಕಟಿಸುವಂತಿಲ್ಲ." ಪ್ರಕಾಶಕರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯರೂ ಅದು ಅನೈತಿಕವಾದುದೆಂದೂ ಪ್ರಕಟಣೆಗೆ ಅನರ್ಹವಾಗಿರುವಂಥದೆಂದೂ ಅಭಿಪ್ರಾಯಪಟ್ಟರು. ಈ ಎಲ್ಲ ಸಂಗತಿಗಳನ್ನೂ ಉಲ್ಲೇಖಿಸುತ್ತ ಪ್ರಮಥನಾಥರು ಹೀಗೆಂದು ಬರೆದರು: "ಇದನ್ನು ಪ್ರಕಟಿಸಿದರೆ ಜನ ಇದನ್ನು ಖಂಡಿಸುತ್ತಾರೆ. ನೀನು ಇಂಥ ಅಶ್ಲೀಲ ಕಾದಂಬರಿಯನ್ನು ಬರೆಯಬಾರದಿತ್ತು."

ಈ ಪತ್ರವನ್ನು ಓದಿದಾಗ ಅವನಿಗೆ ತುಂಬ ಕೋಪ ಬಂತು. 'ಚರಿತ್ರ ಹೀನ'ದ ಹಸ್ತಪ್ರತಿಯನ್ನು ಕೂಡಲೇ ಹಿಂದಿರುಗಿಸುವಂತೆ ಸೂಚಿಸಿ, ಅವನು ಹೀಗೆ ಬರೆದ: "ವಿಶಿಷ್ಟ ಅಂಗಗಳನ್ನು ಜನರಿಗೆ ತೆರೆದು ತೋರಿಸುವುದಿಲ್ಲವೆಂಬುದು ನನಗೆ ಗೊತ್ತಿದೆ. ಆದರೆ, ಗಾಯಗೊಂಡಿರುವ ಅಂಗವನ್ನೂ ತೋರಿಸುವುದಿಲ್ಲವೆಂಬುದು ನನಗೆ ಗೊತ್ತಿಲ್ಲ. ಸಮಾಜದಲ್ಲಿ ಗಾಯಗಳಿಗೆ ಚಿಕಿತ್ಸೆ ಮಾಡುವ ಯಾವನಾದರೂ ಒಬ್ಬ ವೈದ್ಯನಿದ್ದರೆ, ಅವನು ಯಾರ ಮಾತನ್ನಾದರೂ ಕೇಳುತ್ತಾನೆಯೆ? ಕೀವು ತುಂಬಿಕೊಂಡಿರುವ ಗಾಯವನ್ನು ಮುಚ್ಚಿ ಇಡುವುದು ನೋಡುವವರ ದೃಷ್ಟಿಯಿಂದ ಒಳ್ಳೆಯದೆನ್ನಿಸಬಹುದು. ಆದರೆ ಗಾಯವಾಗಿರುವವನಿಗೆ ಅದರಿಂದ ಯಾವ

---

1. ಜ್ಯೇಷ್ಠ 1920, ಮೇ-ಜೂನ್ 1913

ಅನುಕೂಲವೂ ಆಗುವುದಿಲ್ಲ. ಸೌಂದರ್ಯಸೃಷ್ಟಿಗಿಂತಲೂ ಮಿಗಿಲಾದ ಮತ್ತೊಂದು ಮಹತ್ವಪೂರ್ಣ ಕರ್ತವ್ಯವೂ ಕಾದಂಬರಿಕಾರನಿಗೆ ಇರುತ್ತದೆ. ಗಾಯವನ್ನು ನೋಡುವುದೇ ಆ ಕರ್ತವ್ಯವಾದರೆ, ಅವನು ಹಾಗೆಯೇ ಮಾಡಬೇಕಾಗುತ್ತದೆ. ಆಸ್ಟಿನ್, ಮೇರಿ ಕಾರೆಲಿ ಮತ್ತು ಸಾರಾಗ್ರ್ಯಾಂಡ್ ಮೊದಲಾದವರು ಸಮಾಜದ ಅನೇಕ ಗಾಯಗಳ ಮೇಲಿನ ಪರದೆಯನ್ನು ಬದಿಗೆ ಸರಿಸಿದ್ದಾರೆ - ಅವನ್ನು ಗುಣಪಡಿಸುವುದಕ್ಕಾಗಿ ಅವರು ಹಾಗೆ ಮಾಡಿದ್ದಾರೆಯೇ ಹೊರತು, ಅವುಗಳನ್ನು ತೋರಿಸಿ ಜನರನ್ನು ಭಯಭೀತರನ್ನಾಗಿಸಲು ಅಥವಾ ಅವರ ಮನೋರಂಜನೆ ಮಾಡಲು ಅಲ್ಲ.... 'ಚರಿತ್ರಹೀನ' ಕಾದಂಬರಿಯನ್ನು ಬೇರೆ ಯಾರಾದರೂ ಒಬ್ಬರ ಹೆಸರಿನಲ್ಲಿ ಪ್ರಕಟಿಸಬೇಕೆಂದು ನೀನು ಸೂಚಿಸಿರುವುದನ್ನು ನೋಡಿ ನನಗೆ ಎಲ್ಲಕ್ಕಿಂತಲೂ ಹೆಚ್ಚು ದುಃಖವಾಯಿತು. ನಾನು ಇಷ್ಟೊಂದು ಕೀಳಾಗಿ ಬಿಟ್ಟಿದ್ದೇನೆಯೇ? ಒಳ್ಳೆಯದೋ ಕೆಟ್ಟದೋ ಹೇಗಾದರೂ ಇರಲಿ, ಇದರ ಪರಿಣಾಮವನ್ನು ನಾನೇ ಅನುಭವಿಸಬಯಸುತ್ತೇನೆ. ಅಷ್ಟೊಂದು ಕುರುಚಿಯುಕ್ತ ವಾಗಿದೆ ಎನ್ನುವುದಾದರೆ, ಖಂಡಿತವಾಗಿಯೂ ನನ್ನ ಹೆಸರಿನಲ್ಲಿಯೇ ಪ್ರಕಟ ವಾಗಬೇಕು. ಹೆಸರಿನಲ್ಲೇನಿದೆ? ಇದರ ಬಗ್ಗೆ ಯಾರಿಗೆ ಲೋಭವಿದೆ? ಈ ಲೋಭ ಇದ್ದಿದ್ದರೆ ಇಷ್ಟು ದಿವಸ ಮೌನವಾಗಿದ್ದುಕೊಂಡು ಕಷ್ಟಗಳನ್ನು ಸಹಿಸುತ್ತ ಇರಲಿಲ್ಲ."[1]

ಅವನ ನಿಶ್ಚಯ ಅದ್ಭುತರೂಪದಲ್ಲಿ ದೃಢಗೊಂಡಿತ್ತು. ಆದರೆ, ಪ್ರಕಟವಾಗುವ ಮೊದಲೇ ಇಷ್ಟು ತೀವ್ರ ಪ್ರತಿಕ್ರಿಯೆಯನ್ನುಂಟು ಮಾಡಿರುವ ಪುಸ್ತಕ, ಪ್ರಕಟವಾದ ಮೇಲೆ ಜನರ ತೀವ್ರ ಟೀಕೆಗಳಿಗೆ ಎಡೆ ಮಾಡಿಕೊಡುತ್ತದೆಂಬುದೂ ಅವನಿಗೆ ಗೊತ್ತಿತ್ತು. ಅವರಿಗೆ ಉತ್ತರವನ್ನು ಕೊಡುವ ಸಲುವಾಗಿ ಅವನು 'ರಿಸರೆಕ್ಷನ್' ಕಾದಂಬರಿಯನ್ನು ಮಾತ್ರವಲ್ಲದೆ, ರವೀಂದ್ರನಾಥರೇ ಮೊದಲಾದ ಇತರ ಸಾಹಿತಿಗಳ ಕೃತಿಗಳ ಉಲ್ಲೇಖಗಳನ್ನೂ ಆರಿಸಿದ್ದ. ಧಾರಾವಾಹಿಯಾಗಿ ಪ್ರಕಟವಾಗುವ ಕಾದಂಬರಿಯನ್ನು ಕುರಿತು ತೀವ್ರ ವಾದ-ವಿವಾದಗಳುಂಟಾದರೆ ಅದರಿಂದ ಚಂದಾದಾರರ ಸಂಖ್ಯೆ ಹೆಚ್ಚುತ್ತದೆಯೇ ಹೊರತು ಕಡಿಮೆಯೇನೂ ಆಗುವುದಿಲ್ಲವೆಂದು ಅವನು ಭಾವಿಸಿದ್ದ. ನಿಂದಿಸಿದರೂ, ಅದನ್ನು ಓದಲು ಜನ ಉತ್ಸುಕರಾಗಿಯೇ ಇರುತ್ತಾರೆ. ಹಾಗಲ್ಲವಾದರೆ, ನೀರಸವಾದ, ರಕ್ತಹೀನವಾದ ಕಾದಂಬರಿಗಳು ಹಗಲೂ ರಾತ್ರಿ ಅಚ್ಚಾಗುತ್ತಲೇ ಇರುತ್ತವೆ. ಅವುಗಳನ್ನು ಯಾರು ತಾನೆ ಓದುತ್ತಾರೆ?

ಅವನ ನಿಲುವು ಸರಿಯಾಗಿಯೇ ಇತ್ತು. 'ಯಮುನಾ'ದಲ್ಲಿ[2] 'ಚರಿತ್ರಹೀನ' ಕಾದಂಬರಿಯ ಮೊದಲ ಭಾಗ ಅಚ್ಚಾದಾಗ ಬೀಸಿದಂಥ ಬಿರುಗಾಳಿ ಹೆಚ್ಚಿನ ಸಂಖ್ಯೆಯ ಪುಸ್ತಕಗಳ ವಿಷಯದಲ್ಲಿ ಎಂದೂ ಬೀಸಿಲ್ಲ. ಫಣೀಂದ್ರನಾಥ ಪಾಲರು ಅವನಿಗೆ ಹೀಗೆಂದು ತಂತಿ ಕಳಿಸಿದರು: 'ಚರಿತ್ರ ಹೀನ್ ಕ್ರಿಯೇಟಿಂಗ್ ಅಲಾರ್ಮಿಂಗ್ ಸೆನ್ಸೇಷನ್."

ಶರತ್ ಮನಸ್ಸಿನಲ್ಲಿಯೇ ತುಂಬ ಆನಂದಪಟ್ಟ. ಬಂಗಾಳಿ ಕಾದಂಬರಿಗಳಿಂದ

1ಅಕ್ಟೋಬರ್ 1913

ಉದ್ಧರಣಗಳನ್ನು ಕೊಟ್ಟು, ಮತ್ತಷ್ಟು ತೀವ್ರವಾಗಿ ತನ್ನನ್ನು ರಕ್ಷಿಸಿಕೊಳ್ಳತೊಡಗಿದ. ಪ್ರಮಥನಾಥರಿಗೆ ಹೀಗೆಂದು ಬರೆದ:

"..... ಅದರಲ್ಲಿ ಏನಿದೆ ಎಂದು ಕೇಳಬಯಸುತ್ತೇನೆ. ಕಾರಣ ಏನೇ ಆಗಿರಲಿ, ಸಭ್ಯ ಅಥವಾ ಗೌರವಸ್ಥ ಮನೆತನದ ಹುಡುಗಿ ಮೆಸ್‌ನಲ್ಲಿ ಸೇವಕಿಯ ಕೆಲಸ ಮಾಡಿಕೊಂಡಿರುತ್ತಾಳೆ. ಒಬ್ಬ ಸಭ್ಯ ಯುವಕ ಆಕೆಯನ್ನು ಪ್ರೀತಿಸತೊಡಗುತ್ತಾನೆ. ಇಷ್ಟಾಗಿಯೂ, ಕೊನೆಯವರೆಗೂ ಆಕೆಗೆ ಗಟ್ಟಿಯಾದ ಆಸರೆ ದೊರೆಯುವುದಿಲ್ಲ. ರವೀಂದ್ರನಾಥರ 'ಚೋಖೇರ್ ವಾಲೀ'ಯಲ್ಲಿ ಗೌರವಸ್ಥ ಮನೆತನದ ವಿಧವೆ ತನ್ನ ಮನೆಯಲ್ಲಿಯೇ - ತನ್ನ ನೆಂಟರಿಷ್ಟರ ನಡುವೆಯೇ - ಹಾಳಾಗಿ ಬಿಡುತ್ತಾಳೆ. ಇಷ್ಟಾಗಿಯೂ, ಯಾರೂ ಅದರ ಬಗ್ಗೆ ಚಕಾರವನ್ನೂ ಎತ್ತಲಿಲ್ಲ. ಬಂಕಿಮಚಂದ್ರರ 'ವಸೀಯತ್ ನಾಮೇ'ಯಲ್ಲಿ (ಉಯಿಲು) ಬರುವ ರೋಹಿಣಿಯು ನೆನಪಿದೆ ತಾನೆ?.... ನನ್ನ 'ಚರಿತ್ರಹೀನ' ಒಂದರಲ್ಲಿ ಮಾತ್ರವೇ ಎಲ್ಲ ದೋಷಗಳೂ ತುಂಬಿಕೊಂಡಿವೆಯೆ?.... ಏನಾದರೂ ಆಗಲಿ ಇದನ್ನು ನಾನು ಒಪ್ಪುವುದಿಲ್ಲ. 'ಚರಿತ್ರಹೀನ' ಕೃತಿಯಲ್ಲಿ ಒಂದೇ ಒಂದು ಶಬ್ದವೂ ಅನೈತಿಕವಾಗಿಲ್ಲವೆಂದು ನಾನು ಭಾವಿಸಿರುವುದರಿಂದಲೇ ಇದನ್ನು ನಾನು ಒಪ್ಪುವುದಿಲ್ಲ. ಇದರಲ್ಲಿ ಕೆಲವರು ಕುರುಚಿಯನ್ನು ಕಾಣಬಹುದು. ಆದರೆ, ಜನ ಏನು ಹೇಳುತ್ತಿದ್ದಾರೋ ಅದು ಇದರಲ್ಲಿ ಇಲ್ಲ. ನಾನು ಇದಕ್ಕೆ 'ಚರಿತ್ರ ಹೀನ' ಎಂದು ಹೆಸರಿಟ್ಟಿದ್ದೇನೆ. ಆದ್ದರಿಂದ, ಇದರಲ್ಲಿ ಕುಂಡಲಿನೀ ಚಕ್ರವನ್ನು ಎಚ್ಚರಗೊಳಿಸುವಂಥ ಸಂಗತಿ ಇರಬೇಕೆಂಬ ನಿರೀಕ್ಷೆಯನ್ನು ಯಾರೂ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಇಷ್ಟಬಂದವರು ಓದಲಿ. ಹೆಸರನ್ನು ಕಂಡೇ ಹೆದರುವಂಥವರು ಇದನ್ನೇನೂ ಓದುವುದಿಲ್ಲ."

ತನ್ನಲ್ಲಿ ಅಡಗಿದ್ದ ಸಾಹಿತಿಯನ್ನು ಶರತ್ ಇದೀಗ ಕಂಡುಕೊಂಡಿದ್ದ.

## 14

ದ್ವಿಜೇಂದ್ರ-ಲಾಲ ರಾಯರು ಸರತ್‌ನ ಭಾರೀ ಪ್ರಶಂಸಕರೇ ಆಗಿದ್ದರು. ಅವನೂ ತನ್ನ ಎಲ್ಲ ಕೃತಿಗಳ ವಿಷಯದಲ್ಲಿಯೂ ಅವರ ಅಭಿಪ್ರಾಯವನ್ನೇ ಕೊನೆಯದೆಂದು ಭಾವಿಸುತ್ತಿದ್ದ. ಆದರೆ, ಆ ದಿನಗಳಲ್ಲಿ ಅವರು 'ಕಾವ್ಯದಲ್ಲಿ ವ್ಯಭಿಚಾರ' ನಡೆಸುವುದಕ್ಕೆ ವಿರುದ್ಧವಾಗಿ ಆಂದೋಳನ ಹೂಡಿದ್ದರು. ಹೀಗಾಗಿ, 'ಚರಿತ್ರ ಹೀನ' ಕೃತಿಯನ್ನು ಅವರು ಒಪ್ಪಲಾರದೆ ಹೋದರು. ತಲೆಮಾರುಗಳ ನಡುವಣ ಹೋರಾಟ ಪ್ರತಿಯುಗದಲ್ಲೂ ನಡೆಯುತ್ತಲೇ ಬಂದಿದೆ. ನೆಲೆಗೊಂಡಿರುವ ಮೌಲ್ಯಗಳು ಮತ್ತು ಪರಂಪರೆಗಳ ವಿರುದ್ಧ ಸಿಡಿದು ನಿಲ್ಲುವುದನ್ನು ಅವರ ತಲೆಮಾರಿನವರು ಅರ್ಥ ಮಾಡಿಕೊಳ್ಳುವುದು ಅಸಂಭವವೆಂದೇ ತೋರುತ್ತಿತ್ತು. ಅವರು ಬದುಕಿದ್ದು, ಇಡೀ ಕಾದಂಬರಿಯನ್ನು ಓದಲು ಅವರಿಗೆ ಸಾಧ್ಯವಾಗಿದ್ದರೆ ಅವರು ತಮ್ಮ ಅಭಿಪ್ರಾಯವನ್ನು ಬದಲಾಯಿಸುವ ಸಂಭವ ಇತ್ತು. ಏಕೆಂದರೆ, ಮೆಸ್‌ನಲ್ಲಿ ಸಾವಿತ್ರಿ ಸೇವಕಿಯಾಗಿದ್ದರೂ ನಿಜವಾದ ಸತಿ-ಸಾವಿತ್ರಿಯೇ ಆಗಿದ್ದಳು. ಅವಳು ಉಚ್ಚ ಕುಲಕ್ಕೆ ಸೇರಿದ ಸುಶೀಲೆಯೂ, ಸುಶಿಕ್ಷಿತೆಯೂ ಆದ ಕನ್ಯೆ. ಪರಿಸ್ಥಿತಿಗಳ ಒತ್ತಾಯದಿಂದಾಗಿ

ಅವಳು ಮೆಸ್‌ನಲ್ಲಿ ಸೇವಕಿಯಾಗುವುದು ಅನಿವಾರ್ಯವಾಗುತ್ತದೆ. ಇಷ್ಟಾಗಿಯೂ, ತನ್ನೆಲ್ಲ ದುಃಖ ಸಂಕಟಗಳ ನಡುವೆಯೂ ಅವಳ ಸತ್ಪಥವನ್ನು ಬಿಟ್ಟು ಚಲಿಸಲು ಶರತ್ ಅವಕಾಶ ಮಾಡಿಕೊಟ್ಟಿಲ್ಲ. ಕಿರಣಮಯಿಯ ದೈಹಿಕ ಪ್ರೇಮದೊಂದಿಗೆ ಹೋಲಿಸಿದರೆ ಸಾವಿತ್ರಿಯ ಪ್ರೇಮ ಅಭೌತಿಕವಾದುದು. ಅವಳು ಚಿರ ಆದರ್ಶವಾದಿನಿ. ಆದ್ದರಿಂದಲೇ, ಅವಳು ಕಾಲುಜಾರುವುದಿಲ್ಲ. ಆದರೆ, ಅಂದಿನ ಸಮಾಜ ಈ ಮಾತನ್ನು ಅರ್ಥಮಾಡಿಕೊಳ್ಳಲಾರದೆ ಹೋಯಿತು. ಉಚ್ಚ ಮಧ್ಯಮ ಆರ್ಥಿಕ ವರ್ಗದ ನಡೆನುಡಿಗಳೇ ಅಂದು ಎಲ್ಲರಿಗೂ ಪ್ರಿಯವಾಗಿದ್ದುವು. ಸಂಸ್ಕಾರಗಳ ಬಂಧನದಿಂದ ಬಿಡುಗಡೆಗೊಂಡು ತನ್ನ ಪೊಳ್ಳು ನೈತಿಕತೆಯೊಳಗೆ ಇಣುಕಿ ನೋಡುವುದು ಅಂದಿನ ಸಮಾಜಕ್ಕೆ ಸಾಧ್ಯವಾಗಿರಲಿಲ್ಲ. ಶರತ್ ನೈತಿಕತೆಯ ಈ ಬೂಟಾಟಿಕೆಯನ್ನು ಅರ್ಥ ಮಾಡಿಕೊಂಡು ಬಿಟ್ಟಿದ್ದ. ಅಷ್ಟೇ ಅಲ್ಲ, ಉಳಿದಂತೆ ಅವನು ನೈತಿಕತೆಯ ಅನುಯಾಯಿಯೇ. ಏಕೆಂದರೆ, ಕಿರಣಮಯಿಗೂ ಅಧಃಪತನದ ಹಾದಿಯಲ್ಲಿ ಮುಂದುವರಿಯಲು ಅವನು ಬಿಡುವುದಿಲ್ಲ. ದಿವಾಕರನೊಂದಿಗೆ ಒಂದೇ ಹಾಸಿಗೆಯಲ್ಲಿ ಮಲಗಿಯೂ, ಅವಳು ತನ್ನ ಚಾರಿತ್ರ್ಯವನ್ನು ಕಾಪಾಡಿಕೊಂಡೇ ಬಂದಳು.

'ಚರಿತ್ರ ಹೀನ' ಮಾತ್ರವಲ್ಲ, ಮೊದಲ ಆರು ತಿಂಗಳವರೆಗೂ 'ಭಾರತ ವರ್ಷ' ಪತ್ರಿಕೆಯಲ್ಲಿ ಅವನ ಯಾವ ಕೃತಿಯೂ ಅಚ್ಚಾಗಲಿಲ್ಲ. ದ್ವಿಜೇಂದ್ರಲಾಲ ರಾಯರು ತೀರಿಕೊಂಡದ್ದು ಇದಕ್ಕೆ ಒಂದು ಕಾರಣ. ನಿವೃತ್ತ ನ್ಯಾಯಾಧೀಶರೂ, ವಂಗೀಯ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದ ಶ್ರೀ ಶಾರದಾಚರಣ ಮಿತ್ರರು ಹೊಸ ಸಂಪಾದಕರಾಗಿ ನೇಮಕಗೊಳ್ಳುತ್ತಾರೆಂಬ ಸುದ್ದಿ ಇತ್ತು. ಆಗ ಶರತ್, ಪ್ರಮಥಬಾಬೂ ಅವರಿಗೆ ಹೀಗೆ ಬರೆದಿದ್ದ: "ದ್ವಿಜೇಂದ್ರ ಬಾಬೂಗಳು ಮಾಡಲು ಸಾಧ್ಯವಾಗಿದ್ದ ಕೆಲಸ ಶಾರದಾ ಬಾಬೂಗಳಿಂದ ಸಾಧ್ಯವಾದೀತೆ ? ಅವರು ತೀರಿಕೊಂಡಿದ್ದು ಮಾತ್ರವಲ್ಲ, ಅವರೊಡನೆ ಅವರ ಅಸಾಮಾನ್ಯ ಪ್ರಭಾವವೂ ಮಾಯವಾಗಿ ಬಿಟ್ಟಿತು. ಈಗ ಮತ್ತೆ ಏನನ್ನಾದರೂ ಬರೆದು ಕಳಿಸುವ ಎದೆಗಾರಿಕೆಯೂ ನನ್ನಲ್ಲಿ ಉಳಿದಿಲ್ಲ. ಅವರು ಬದುಕಿದ್ದಾಗ ಅವರ ಪ್ರಶಂಸೆಯನ್ನು ಪಡೆಯಬೇಕೆಂಬ ಪ್ರಲೋಭನೆಯಿಂದ ಬರೆಯುತ್ತಿದ್ದೆ. ಶಾರದಾ ಬಾಬುಗಳು ಇದು ಒಳ್ಳೆಯದು, ಅದು ಕೆಟ್ಟದ್ದು ಅಂದರೆ, ಅದಕ್ಕಿರುವ ಬೆಲೆಯಾದರೂ ಏನು ? ಅದನ್ನು ಯಾರು ತಾನೆ ಒಪ್ಪಿಯಾರು ?"

ಆದರೆ, ಶಾರದಾ ಬಾಬೂಗಳು ಅದರ ಸಂಪಾದಕರಾಗಲಿಲ್ಲ. ಕೊನೆಗೆ ಆ ಹೊಣೆಯನ್ನು (ರಾಯ್ ಬಹಾದುರ್) ಜಲಧರ್ ಸೇನ್ ಅವರು ಹೊರಬೇಕಾಗಿ ಬಂದಿತು ಹಾಗೂ ಅವರ ಸಂಪಾದಕತ್ವದಲ್ಲಿ ಸಕಾಲದಲ್ಲಿ ದಿವಂಗತ ದ್ವಿಜೇಂದ್ರಲಾಲ ರಾಯರ ಭಾವಚಿತ್ರದೊಂದಿಗೆ 'ಭಾರತ ವರ್ಷ'ದ ಮೊದಲ ಸಂಚಿಕೆ[1] ಹೊರಬಂದಿತು. ತನ್ನ ವಿನ್ಯಾಸ ಹಾಗೂ ಶ್ರೀಮಂತಿಕೆಯ ದೃಷ್ಟಿಯಿಂದ ಅದು ಎಲ್ಲರನ್ನೂ ಮುಗ್ಧರನ್ನಾಗಿಸಿತು. ಆದರೆ, ವಸ್ತುವಿನ ದೃಷ್ಟಿಯಿಂದ ಅದು ಶರತ್‌ಗೆ

---

1 ಜೂನ್ 1913 ಕೆಲಕಾಲದ ಮಟ್ಟಿಗೆ ಸೇನ್ ಅವರೊಂದಿಗೆ ಶ್ರೀ ಅಮೂಲ್ಯ ಚರಣ ವಿದ್ಯಾಭೂಷಣರೂ ಈ ಹೊಣೆಯನ್ನು ಹೊತ್ತುಕೊಂಡಿದ್ದರು.

ಅಷ್ಟೇನೂ ಹಿಡಿಸಲಿಲ್ಲ. ಪ್ರಮಥ ಬಾಬೂಗಳಿಗೆ ಅವನು ಹೀಗೆ ಬರೆದ: "ದ್ವಿಜೇಂದ್ರರು ಒಂದು ವರ್ಷದ ಮಟ್ಟಿಗಾದರೂ ಉಳಿದಿದ್ದರೆ, 'ಭಾರತ ವರ್ಷ', ಅಕ್ಷಯವಾಗಿ ಪರಿಣಮಿಸುತ್ತಿತ್ತು. ಈಗಲಾದರೋ ಅದರ ಸ್ಥಿರತೆಯ ಬಗ್ಗೆ ನಿಜವಾಗಿಯೂ ಅನುಮಾನ ಮೂಡತೊಡಗುತ್ತದೆ."

ಈ ಕಾರಣದಿಂದಾಗಿಯೂ ಅವನು ಅದಕ್ಕೆ ಬರೆಯದೆ ಇದ್ದಿರುವ ಸಂಭವವೂ ಹೆಚ್ಚಾಗಿದೆ. ಅವನ ಕೃತಿಯೊಂದನ್ನು ಅಚ್ಚಿಸುವ ಅವಕಾಶ ಅದಕ್ಕೆ ದೊರೆತದ್ದು ಡಿಸೆಂಬರ್ ತಿಂಗಳಿನಲ್ಲಿ. ಹಾಗೆ ಪ್ರಕಟವಾದ ಅವನ ಕೃತಿ 'ಬಿರಾಜ್ ಬಹೂ.'

'ಬಿರಾಜ್ ಬಹೂ' ಕೃತಿಯನ್ನು 'ಭಾರತ ವರ್ಷ'ಕ್ಕೆ ಕಳಿಸಿದ್ದು, ಫಣೀಂದ್ರರ ಚಿಂತೆಗೆ ಕಾರಣವಾಗುವುದು ಸಹಜವೇ ಆಗಿತ್ತು. ಶರತ್‌ಗೂ ಈ ಚಿಂತೆ ಅರ್ಥವಾಗುತ್ತಿತ್ತು. ಆದ್ದರಿಂದ, ಮತ್ತೆ ಮತ್ತೆ ಅವನು ಫಣೀಂದ್ರರಿಗೆ ನಂಬಿಕೆ ಮೂಡುವಂತೆ ಬರೆಯುತ್ತಿದ್ದ: "ನಿಮ್ಮ ಪತ್ರಿಕೆಯನ್ನು ನನ್ನದೆಂದು ನಾನು ಭಾವಿಸಿದ್ದೇನೆ. ಅದಕ್ಕೆ ಹಾನಿಯನ್ನುಂಟು ಮಾಡುವಂಥ ಯಾವುದೇ ಕೆಲಸವನ್ನೂ ನಾನು ಮಾಡುವುದಿಲ್ಲ. ಇರುವ ತೊಂದರೆಯೆಲ್ಲ ಪ್ರಮಥನಿಗೆ ಸಂಬಂಧಪಟ್ಟಿರುವುದು. ಆತ ನನಗೆ ಪರಿಚಿತನಾಗಿರುವುದು ಮಾತ್ರವಲ್ಲ, ನನ್ನ ಪರಮ ಆತ್ಮೀಯ ಬಂಧುವೂ ಹೌದು. ಬಹುಕಾಲದ ಅತಿಯಾದ ಸ್ನೇಹ-ವಿಶ್ವಾಸಗಳಿಗೆ ಅವನು ಪಾತ್ರನಾಗಿದ್ದಾನೆ. ಆದ್ದರಿಂದ ಯೋಚಿಸಬೇಕಾಗುತ್ತದೆ. ಯೋಚಿಸದೆ ಇರುವುದಾದರೂ ಹೇಗೆ ಸಾಧ್ಯ ?...."

ಈ ಕಾದಂಬರಿ ಬರ್ಮಾದ ಅವನ ಗೆಳೆಯರಿಗೂ ತುಂಬ ಮೆಚ್ಚಿಕೆಯಾಯಿತು. ಆದರೆ, ಅವರು ಬಿರಾಜಳ ಅಧಃಪತನವನ್ನು ಒಪ್ಪಲಾರದೆ ಹೋದರು. ಯೋಗೇಂದ್ರನಾಥ ಸರ್ಕಾರ್ ಹೀಗೆ ಬರೆದರು: "ಬಿರಾಜ್ ಆತ್ಮಘಾತಿನಿ ಯಾಗುವುದಕ್ಕೆ ಬದಲಾಗಿ ಕೈಕಾಲು ಕಟ್ಟಿ ನೀರಿನಲ್ಲಿ ಮುಳುಗಿಸಿದ್ದರೆ ಹಾಗೂ ಅದೇ ಸ್ಥಿತಿಯಲ್ಲಿ ಮೀನಿನ ಬೇಟೆಯಾಡುವ ಆ ಜಮೀನುದಾರ ಅವಳನ್ನು ತನ್ನ ದೋಣಿಗೆ ಎಳೆದುಕೊಂಡಿದ್ದರೆ, ಬಿರಾಜಳ ವಿಷಯದಲ್ಲಿ ಕಡಿಮೆ ಪಾಪವೇನಾದರೂ ಆಗುತ್ತಿತ್ತೇ ? ಗಂಡನ ವಿಷಯದಲ್ಲಿ ಮುನಿಸಿಕೊಂಡು ಹಿಂದೂ ನಾರಿ ಮನೆಯನ್ನು ಬಿಟ್ಟು ಹೋಗುವುದು ಹಾಗೂ ಅನಂತರದಲ್ಲಿ ಆತ್ಮಹತ್ಯೆಗಾಗಿ ಪ್ರಯತ್ನಿಸುವುದು ! ಸರ್ವನಾಶವೇ ಸರಿ ! ಇವೆರಡಕ್ಕಿಂತಲೂ ಹೆಚ್ಚಿನ ಪಾಪ ಈ ಲೋಕದ ಶಾಸ್ತ್ರಗಳಲ್ಲಿ ಎಲ್ಲಿಯಾದರೂ ಇದೆಯೆ ? ಗಂಡನ ವಿಷಯದಲ್ಲಿ ಮುನಿಸಿಕೊಂಡು, ತನ್ನ ಕುಲವನ್ನು ತ್ಯಜಿಸಿ ಹೊರಡುವುದರಲ್ಲಿ 'ಈಸ್ಟ್ ಲೀನ್'ನ ಪ್ರಭಾವ ಎಷ್ಟರಮಟ್ಟಿಗೆ ಆಗಿದೆಯೆಂದು ಯೋಚಿಸುತ್ತಿದ್ದೇನೆ. ಇಷ್ಟಾಗಿಯೂ ಈ ವಿಚಾರ ಪ್ರತ್ಯೇಕವಾದುದು."

ಶರತ್ ಇದಕ್ಕೆ ಈ ರೀತಿ ಉತ್ತರಿಸಿದ: "ಲೋಕದಲ್ಲಿ ಯಾವುದೂ ಅಸಾಧ್ಯವಲ್ಲ. ಶೇಕ್ಸ್‌ಪಿಯರರ ಕೃತಿಗಳನ್ನು ಚೆನ್ನಾಗಿ ಓದಿರುವಂಥವರು ಇದಕ್ಕೆ ಒಳ್ಳೆಯ ಪ್ರಮಾಣಗಳನ್ನು ಒದಗಿಸಬಲ್ಲರು. ಹೆಣ್ಣು ಗಂಡುಗಳ ಸ್ವಭಾವವನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವವರಲ್ಲಿ ಶೇಕ್ಸ್‌ಪಿಯರ್‌ನನ್ನು ಮೀರಿಸಬಲ್ಲಂಥ ಇನ್ನೊಬ್ಬ ವ್ಯಕ್ತಿ ಈ ಲೋಕದಲ್ಲಿ ಹುಟ್ಟಿದ್ದಾನೆಂದು ಹೇಳಬಲ್ಲೆಯಾ ?"

ಈ ಪ್ರಶ್ನೆಗೆ ಯೋಗೇಂದ್ರನಾಥ ಸರ್ಕಾರ್ ಅವರು ಯಾವ ಉತ್ತರವನ್ನೂ ಕೊಡಲಾರದೆ ಹೋದರು.

ಕಲ್ಕತ್ತೆಯ ಒಬ್ಬ ಗೆಳೆಯನೂ ಇದೇ ಬಗೆಯಲ್ಲಿ ಆಕ್ಷೇಪಿಸಿದ್ದ. ಆಗ ಶರತ್ ಇನ್ನೊಂದು ಮಾತನ್ನೂ ಹೇಳಿದ್ದ: "ದಿನಗಟ್ಟಲೆ ಉಪವಾಸ ಬಿದ್ದಿದ್ದಂಥ ಹಾಗೂ ಮಾನಸಿಕ ಚಿಂತೆಗಳಿಂದಾಗಿ ಮೈಮನಗಳೆರಡೂ ವಿಕಲಗೊಂಡಿದ್ದಂಥ ವ್ಯಕ್ತಿ ಕ್ಷಣಿಕ ಉತ್ತೇಜನೆಗೊಳಗಾಗಿ ಏನು ಬೇಕಾದರೂ ಮಾಡಬಲ್ಲ. ನಾನೇ ಕಣ್ಣಾರೆ ಇಂಥ ಸ್ಥಿತಿಯನ್ನು ನೋಡಿದ್ದೇನೆ."

ಬಹುಕಾಲದ ವರೆಗೆ ಗೃಹಸ್ಥಜೀವನವನ್ನು ನಡೆಸಿದ್ದಂಥ ರಮಣಿ, ಒಮ್ಮೆ ಕಾಲು ಜಾರಿದ ಬಳಿಕ, ಕೆಲವೇ ದಿನಗಳಲ್ಲಿ ನಾಚಿಕೆ ಸಂಕೋಚಗಳನ್ನು ಬದಿಗಿರಿಸಿ ಹೊಸ ಜೀವನಕ್ಕೆ ಹೇಗೆ ಹೊಂದಿಕೊಂಡುಬಿಡುತ್ತಾಳೋ ಹಾಗೆ ಹೊಂದಿಕೊಳ್ಳುವುದು ಗಂಡಸಿಗೆ ಸಾಧ್ಯವಾಗುವುದಿಲ್ಲವೆಂದು ಸ್ವಾನುಭವದ ಆಧಾರದ ಮೇಲೆ ಅವನು ಒಪ್ಪುತ್ತಿದ್ದ.

'ಬಿರಾಜ್ ಬಹೂ'ವನ್ನು ಬರೆದು ಮುಗಿಸಲು ಶರತ್‌ಗೆ ಒಂದು ತಿಂಗಳಿಗೂ ಹೆಚ್ಚು ಕಾಲ ಹಿಡಿಯಿತು. ಮೇರೆಯರಿಯದ ಧೈರ್ಯದೊಂದಿಗೆ ಹೊಡೆದು-ಹರಿದು ಅವನು ಬರೆಯುತ್ತ ಇದ್ದ ಹಾಗೂ ಸರ್ಕಾರ್ ಅವರಿಗೆ ಓದಿ ಹೇಳಿ ಅಭಿಪ್ರಾಯ ವಿನಿಮಯ ಮಾಡಿಕೊಳ್ಳುತ್ತಲೂ ಇದ್ದ. ತನ್ನ ಬರವಣಿಗೆಯ ವಿಧಾನದ ಬಗ್ಗೆ ಅವನು ಸರ್ಕಾರ್ ಅವರಿಗೆ ಹೀಗೆ ಹೇಳಿದ್ದ: "ನನ್ನ ಅಭಿವ್ಯಕ್ತಿ ಎಲ್ಲಿಯವರೆಗೂ ಸಹಜವೂ, ನಿರ್ಝರದಂತೆ ಇಳಿದು ಬರುವಂಥದೂ ಆಗುವುದಿಲ್ಲವೋ ಅಲ್ಲಿಯವರೆಗೆ ನನಗೆ ತೃಪ್ತಿಯಾಗುವುದಿಲ್ಲ. ರಾತ್ರಿ ಬರೆದದ್ದು ಬೆಳಿಗ್ಗೆ ತಪ್ಪೆಂದು ತೋರುತ್ತದೆ."

"ಈ ತಪ್ಪು ವ್ಯಾಕರಣದ ತಪ್ಪಲ್ಲ. ಇದು ಭಾವಗಳೊಂದಿಗೆ ಹೆಗಲೆಣೆಯಾಗಿ ಸಾಗಬೇಕಾದ ಭಾಷೆಯ ಕೊರತೆ. ಹಳ್ಳಿಯ ಗೋಷ್ಠಿಯ ಮಾತುಕತೆಗಳಲ್ಲಿ ಆಡುಮಾತಿನ ಬಂಗಾಳಿ ಭಾಷೆಯೇ ಹರಿಯುತ್ತದೆ. ಆ ಬಂಗಾಳಿಯನ್ನು ಯಾರಾದರೂ ಒಬ್ಬ ಕಾವ್ಯತೀರ್ಥನೋ ವಿದ್ಯಾಸಾಗರನೋ ಸಂಸ್ಕೃತಮಯವನ್ನಾಗಿಸಲು ಪ್ರಯತ್ನಿಸಿದಾಗ ಎಂಥ ಸ್ಥಿತಿ ಏರ್ಪಡುತ್ತದೆಯೋ ಅಂಥದೇ ಸ್ಥಿತಿಯಿಂದಾಗಿರುವ ತಪ್ಪು ಇದು. ಹೇಗಿರಬೇಕೋ ಹಾಗೆಯೇ ಇರಬೇಕು ಎಂಬುದೇ ಗಟ್ಟಿ ಮಾತು."

'ಬಿರಾಜ್ ಬಹೂ'ವಿನ ಮೊದಲ ಕಂತನ್ನು ಬರೆದು ಕಳಿಸುವ ಸಿದ್ಧತೆಯಲ್ಲಿದ್ದಾಗ ಅವನು ಯೋಗೇಂದ್ರನಾಥರನ್ನು ಕೇಳಿದ: "ಇದಕ್ಕೆ ಏನು ಹೆಸರಿಡೋಣ, ಹೇಳು."

ಸರ್ಕಾರ್ ಹೇಳಿದರು: " 'ಬಿರಾಜ್ ಮೋಹಿನಿ' ಎಂದರೆ ಸರಿಯಾಗಿರುತ್ತದೆ."

"ಇಲ್ಲಪ್ಪ. 'ಬಿರಾಜ್ ಬಹೂ' ಎಂಬುದು ಅದಕ್ಕಿಂತಲೂ ಚೆನ್ನಾಗಿರುವಂತೆ ನನಗನ್ನಿಸುತ್ತಿದೆ. ಮೋಹಿನಿಯ ಪಾತ್ರ ಅಷ್ಟೇನೂ ಮಹತ್ವಪೂರ್ಣವಾದುದಲ್ಲ. ಅವಳ ಹೆಸರನ್ನು ಅದರ ಜೊತೆಗೆ ಸೇರಿಸುವುದು ಸರಿಯೆಂದು ತೋರುವುದಿಲ್ಲ."

ಸರ್ಕಾರ್ ಹೇಳಿದರು: "ಅಂದರೆ, ಮೊದಲ ಸಲ ಯೋಗೇಂದ್ರ ಚಟರ್ಜಿಗಳ ಕಿರಿಯ ಸೊಸೆ, ಎರಡನೆಯ ಸಲ ಶಿವನಾಥಶಾಸ್ತ್ರಿಗಳ ನಡುವಣ ಸೊಸೆ, ಮೂರನೆಯ ಸಲ ಶರತ್ ಬಾಬೂಗಳ 'ಬಿರಾಜ್ ಸೊಸೆ', ಹೀಗಿರಬೇಕೆಂದಲ್ಲವೆ ನಿನ್ನ ಅಭಿಪ್ರಾಯ !"

"ಹಾಗಿರುವುದೇ ನಿಜವೆಂದಾಗ ಹಾಗೆಯೇ ಇರಲಿ. ನಿನ್ನ ಹತ್ತಿರ ಇದೊಂದು ಕಷ್ಟ.

ಅವರ ಕಿರಿಯ ಸೊಸೆ, ಇವರ ನಡುವಣ ಸೊಸೆ - ಯಾರಿಗೆ ಹೇಗೆ ಸಂತೋಷವಾದರೆ ಹಾಗೆಯೇ ಆಗಲಿ. ಅದರಿಂದ ನನಗೆ ಆಗುವ ನಷ್ಟವೇನು ?"

ಹೀಗೆಂದು ಹೇಳುತ್ತ ನೀಲಿ ಬಣ್ಣದ ಪೆನ್ಸಿಲ್‌ನಿಂದ ಹಸ್ತಪ್ರತಿಯ ಮೊದಲ ಹಾಳೆಯ ಮೇಲೆ ದಪ್ಪ ಅಕ್ಷರಗಳಲ್ಲಿ 'ಬಿರಾಜ್ ಬಹೂ' ಎಂದು ಬರೆದ. ಅದರ ಕೆಳಗೆ ಸಣ್ಣ ಅಕ್ಷರಗಳಲ್ಲಿ 'ಕಥೆ' ಎಂದು ಬರೆದ. ಇದನ್ನು ನೋಡಿ ಸರ್ಕಾರ್ ಪ್ರಶ್ನಿಸಿದರು: "ಇದು ಸಾಧ್ಯವಿಲ್ಲ. ಪ್ರಮಥನ ಕಾಗದದ ನೆನಪಿಲ್ಲವೇನು ? 'ಕಾದಂಬರಿ' ಎಂದು ಬರೆದುಬಿಡು."

ಶರತ್ 'ಕಥೆ' ಎಂಬುದನ್ನು ಹೊಡೆದು ಹಾಕಿ, ದೊಡ್ಡ ದೊಡ್ಡ ಅಕ್ಷರಗಳಲ್ಲಿ 'ಕಾದಂಬರಿ' ಎಂದು ಬರೆದ.[1]

ಬರಹಗಾರನಾಗಿ ಪ್ರಸಿದ್ಧನಾಗುತ್ತ ಬಂದಂತೆ, ಅವನ ಹಿರಿಮೆಯೂ ಹೆಚ್ಚುತ್ತ ಬಂದಿತ್ತು. ಅವನ ಗೆಳೆಯರು ಈಗೇನೂ ಉಪೇಕ್ಷೆಯಿಂದ ಅವನನ್ನು ರೇಗಿಸುತ್ತಿರಲಿಲ್ಲ. ಹಾಗೆ ಮಾಡುವ ಬದಲು, ಸ್ವದೇಶಿ ಆಂದೋಳನದ ನೇತಾರರಲ್ಲಿ ಒಬ್ಬರಾಗಿದ್ದ ಶ್ರೀ ಸುರೇಂದ್ರನಾಥ ಸೇನ್ ಅವರು ಭಾರತದಿಂದ ರಂಗೂನ್‌ಗೆ ಬಂದಿದ್ದಾಗ, ಅವರ ಗೌರವಾರ್ಥವಾಗಿ ಏರ್ಪಡಿಸಲಾಗಿದ್ದ ಸಭೆಗೆ ಶರತ್‌ನನ್ನೇ ಅಧ್ಯಕ್ಷನನ್ನಾಗಿಸಿದ್ದರು. ತನ್ನ ಬಾಳಿನಲ್ಲಿ ಇದೇ ಮೊದಲ ಬಾರಿಗೆ ಅವನು ಅಧ್ಯಕ್ಷನ ಕುರ್ಚಿಯಲ್ಲಿ ಕುಳಿತಿದ್ದ. ಆಗ ಅವನು ಅದೆಷ್ಟು 'ನರ್ವಸ್' ಆಗಿಬಿಟ್ಟಿದ್ದ! ಒಂದು-ಒಂದೂವರೆ ಸೇರು ತೂಕದ ಹಾರ ಕೊರಳಿಗೆ ಬಿದ್ದಿತ್ತು. ಅದರ ಭಾರದಿಂದಾಗಿ ನೆಟ್ಟಗೆ ನಿಲ್ಲಲೂ ಅವನಿಗೆ ಸಾಧ್ಯವಾಗದೆ ಹೋಗಿತ್ತು. ಅವನನ್ನು ನೋಡಿದರೆ ಕರುಣೆ ಉಕ್ಕಿಬರುತ್ತಿತ್ತು. ಭಾಷಣವನ್ನೇನೋ ಬರೆದು ಸಿದ್ಧಪಡಿಸಿದ್ದ; ಅದು ಸುಂದರವಾಗಿಯೂ ಇತ್ತು. ಆದರೆ ಅದನ್ನು ಸರಿಯಾಗಿ ಓದಲು ಅವನಿಗೆ ಸಾಧ್ಯವಾಯಿತೆ ?ಅವನ ಈ ಗಾಬರಿಗೆ ಅನೇಕ ಕಾರಣಗಳಿದ್ದುವು - ಶಾರೀರಿಕವಾದುವು ಹಾಗೂ ಮಾನಸಿಕವಾದುವು. ದೈಹಿಕವಾಗಿ ಅವನೀಗ ತುಂಬ ದುರ್ಬಲನಾಗಿದ್ದ. ಕೆಲವು ದಿನಗಳ ಹಿಂದಿನ ತನಕ ಅವನು ನಡೆಸಬೇಕಾಗಿ ಬಂದಿದ್ದಂಥ ಬಾಳಿನಲ್ಲಿ ಅವನ ಆರೋಗ್ಯ ಚೆನ್ನಾಗಿ ಇದ್ದಿದ್ದರೆ, ಅದು ಆಶ್ಚರ್ಯದ ಸಂಗತಿಯೇ ಆಗುತ್ತಿತ್ತು. ಜ್ವರ, ನರವ್ಯೂಹ ಸಂಬಂಧಿ ನೋವು ಹಾಗೂ ಅಜೀರ್ಣ - ಇವು ಅವನ ಶಾಶ್ವತ ಗೆಳೆಯರಾಗಿದ್ದುವು. ಜೊತೆಗೆ, ಅವನು ಅಫೀಮನ್ನೂ ಸೇವಿಸುತ್ತಿದ್ದ. ರಾತ್ರಿಯ ಹೊತ್ತು ಅದರ ಮತ್ತು ಸ್ವಲ್ಪ ಹೆಚ್ಚಾಗಿಯೇ ಇರುತ್ತಿತ್ತು. ಹೀಗಾಗಿ ಓದಿ-ಬರೆದು ಮಾಡುವಲ್ಲಿ ಆಗಿಂದಾಗ್ಗೆ ಅಡ್ಡಿ ಉಂಟಾಗುತ್ತಲೇ ಇರುತ್ತಿತ್ತು. ಈ ಕಾರಣದಿಂದಾಗಿಯೇ ಕಲ್ಕತ್ತೆಯಲ್ಲಿ ಬಂದಿರಬೇಕೆಂದು ಅವನ ಗೆಳೆಯರು ಅವನಿಗೆ ಒತ್ತಾಯಪೂರ್ವಕವಾಗಿ ಬರೆದಿದ್ದರು. ಆದರೆ, ಆಗ ಅವನಿಗೆ ಈ ಯಾವ ಮಾತೂ ಕೊಂಚವೂ ಹಿಡಿಸಿರಲಿಲ್ಲ. ಫಣೀಂದ್ರನಾಥರಿಗೆ ಅವನು ಹೀಗೆ ಉತ್ತರಿಸಿದ್ದ. "ಕೆಲಸವನ್ನು ಬಿಟ್ಟು, ಈ ಅನಾರೋಗ್ಯ ಪೀಡಿತ ಶರೀರವನ್ನು ಹೊತ್ತುಕೊಂಡು, ನೆಲೆ ಇಲ್ಲದವನಾಗಿರುವುದು ನನಗೆ ಇಷ್ಟವಿಲ್ಲ. ಯಾರ ಬಳಿಯಲ್ಲಾದರೂ ಬಂದಿರುವುದು ಸಂಪೂರ್ಣವಾಗಿ ಅಸಾಧ್ಯವಾದ ಸಂಗತಿ. ಆಸ್ಪತ್ರೆಯಲ್ಲಾದರೂ

---

1 'ಬ್ರಹ್ಮದೇಶೇ ಶರತ್‌ಚಂದ್ರ': ಯೋಗೇಂದ್ರನಾಥ ಸರ್ಕಾರ್

ಸಾಯುತ್ತೇನೆ, ಆದರೆ, ಯಾವುದೇ ಸ್ಥಿತಿಯಲ್ಲಾದರೂ ರೋಗಪೀಡಿತವಾಗಿರುವ ಈ ಶರೀರವನ್ನು ಕೊನೆಯ ಸಲವಾಗಿ ಯಾರ ಮನೆಯಲ್ಲಿಯೂ ಬಿಡುವುದಿಲ್ಲ. ಹಾಗೆ ಮಾಡುವುದು ನನಗೆ ಹೇಸಿಕೆಯನ್ನುಂಟು ಮಾಡುತ್ತದೆ.... ಹಾಗೇನಾದರೂ ಹೋಗಬೇಕಾಗಿ ಬಂದರೆ, ನಾನು ನನ್ನ ಅಕ್ಕನ ಮನೆಗೆ ಹೋಗಿ ಇರುತ್ತೇನೆ. ಒಂದು ರೀತಿಯಲ್ಲಿ ಅದೇ ನನ್ನ ಮನೆ-ಮಠ. ಅವಳ ಸ್ವಭಾವವೂ ತುಂಬ ಒಳ್ಳೆಯದು. ಅಲ್ಲಿಯೇ ಬಂದಿರಬೇಕೆಂದು ಮತ್ತೆ ಮತ್ತೆ ಒತ್ತಾಯಮಾಡಿ ಬರೆಯುತ್ತಿದ್ದಾಳೆ. ಆದರೆ, ಅನಾರೋಗ್ಯಪೀಡಿತ ಶರೀರವನ್ನು ಹೊತ್ತುಕೊಂಡು ನಾನೆಲ್ಲಿಯೂ ಹೋಗಬಯಸುವುದಿಲ್ಲ. ಇದ್ದಕ್ಕಿದ್ದಂತೆ ಎಲ್ಲಿಯಾದರೂ ಸತ್ತು, ಯಾರಿಗಾದರೂ ತೊಂದರೆಯುಂಟು ಮಾಡಿಯೇನು ಎಂಬ ಭಯ ಯಾವಾಗಲೂ ನನ್ನನ್ನು ಕಾಡುತ್ತಿರುತ್ತದೆ."

ಆದರೆ, ಪ್ರಮಥನಾಥನಿಗೆ ಹೀಗೆಂದು ಬರೆದಿದ್ದ: "..... ಒಮ್ಮೆಯಾದರೂ ಭೇಟಿಯಾಗಬೇಕೆಂಬುದೇ ನನ್ನ ಕೊನೆಯ ಇಚ್ಛೆ. ಬಂದಾಗ ನಿನ್ನ ಮನೆಯಲ್ಲಿಯೇ ಇಳಿದುಕೊಳ್ಳುತ್ತೇನೆ. ಸತ್ತರೆ ಸದ್ಗತಿ ದೊರೆಯುತ್ತದೆ. ಬ್ರಾಹ್ಮಣರ ಹೆಗಲಿನ ಮೇಲೆ ಏರಿಕೊಂಡು, ಪರಮ ಮಿತ್ರನ ಮುಖವನ್ನು ನೋಡಿ, ಕೊನೆಯ ಸೇವೆಯನ್ನು ಸ್ವೀಕರಿಸಿ, ನೀಮ್‌ತಲ್ಲಾ ಶ್ಮಶಾನಕ್ಕೆ ಹೋಗಬೇಕು."

ಅವನ ಕಾಗದಗಳಲ್ಲಿ ಇಂಥ ಅನೇಕ ವಿಸಂಗತಿಗಳನ್ನು ಹುಡುಕಬಹುದು. ನಿಜವಾದ ಸಂಗತಿ ಏನೆಂದರೆ ದಿನೇ ದಿನೇ ರಂಗೂನ್ ಬಿಟ್ಟು ಹೊರಡಬೇಕೆಂಬ ಆತುರ ಹೆಚ್ಚುತ್ತ ಇತ್ತು. ಕಛೇರಿಯ ಕೆಲಸ ಮತ್ತು ಸಾಹಿತ್ಯ ರಚನೆಯ ನಡುವೆ ಸಂಘರ್ಷ ಉಂಟಾಗುತ್ತಿದ್ದುದು ಇದಕ್ಕೆ ಕಾರಣ. ಒಂದು ಕಾಗದದಲ್ಲಿ ತನ್ನ ಹಿರಿಯ ಅಧಿಕಾರಿ ನ್ಯೂಮಾರ್ಶನನ್ನು ಕಟುವಾಗಿ ನಿಂದಿಸುತ್ತ ಹೀಗೆ ಬರೆದ: "ಎಂದಾದರೂ ಎಲ್ಲಿಂದಲಾದರೂ 'ರಿಮೈಂಡರ್' ಬಂದರೆ, ಆರು ತಿಂಗಳಿಗೆ ಹತ್ತು ರೂಪಾಯಿ ಲೆಕ್ಕದಲ್ಲಿ ದಂಡವನ್ನು ವಿಧಿಸಲಾಗುತ್ತದೆ. ಇದು ನಮ್ಮ ಕಛೇರಿಯಲ್ಲಿರುವ ನಿಯಮ. ಇದು ಇಂಥ ಆರಾಮದ ಕೆಲಸ.... ಮೂರು ನಾಲ್ಕು ದಿವಸಗಳ ಹಿಂದೆ ನಡೆದ ಒಂದು ಘಟನೆ. ಇದ್ದಕ್ಕಿದ್ದಂತೆ ನನಗೆ ಸಂಬಂಧಿಸಿದ ಒಂದು ರಿಮೈಂಡರ್ ಬಂದಿತು. ಇಷ್ಟೊಂದು ಕೆಲಸಗಳಲ್ಲಿ ಸಣ್ಣಪುಟ್ಟ ಕೆಲಸಗಳ ಕಡೆ ಗಮನ ಕೊಡಲು ನನಗೆ ಸಾಧ್ಯವಾಗುವುದಿಲ್ಲ. ಇದು ನಮ್ಮ ಸಬ್-ಆಡಿಟರ್ ಭೌಮಿಕ್ ಬಾಬೂ ಹಾಗೂ ಪೆರಿಯ ಸ್ವಾಮಿಯವರು ಮಾಡಿದ್ದ ತಪ್ಪು. ಆದರೆ, ಎಲ್ಲ ತಪ್ಪನ್ನೂ ನಾನೇ ಹೊತ್ತುಕೊಂಡೆ. ಕಣ್ತಪ್ಪಿನಿಂದ ಹೀಗಾಗಿದೆ ಎಂದು ಉತ್ತರ ಕೊಟ್ಟೆ. ಈ ಮಧ್ಯೆ ನನ್ನ ರಾಜೀನಾಮೆ ಪತ್ರವನ್ನು ಬರೆದು ಇಟ್ಟುಕೊಂಡಿದ್ದೆ. ಹತ್ತು ರೂಪಾಯಿ ಹಾಳಾಗುತ್ತದೆ ಎಂದು ನನಗೆ ಚೆನ್ನಾಗಿ ಗೊತ್ತಿತ್ತು. ಈ ಅಪಮಾನವನ್ನು ಸಹಿಸಿಕೊಂಡೂ ಕೆಲಸ ಮಾಡಬಯಸುವಂಥವನು ಬೇಕಾದರೆ ಮಾಡಲಿ. ನಾನಂತೂ ಇದನ್ನು ಹೇಗೂ ಸಹಿಸಲಾರೆ. ಆದರೆ, ನ್ಯೂಮಾರ್ಶ್ ಏಕೆ ಒಂದು ಮಾತನ್ನೂ ಆಡಲಿಲ್ಲ ಎಂಬುದು ನನಗೆ ಗೊತ್ತಿಲ್ಲ. ಇದು ನನ್ನ ದೌರ್ಭಾಗ್ಯವೋ ಸೌಭಾಗ್ಯವೋ ಎಂಬುದೂ ನನಗೆ ಗೊತ್ತಿಲ್ಲ. ರಾಜೀನಾಮೆ ಪತ್ರವನ್ನು ಕೊಡಲು ಸಾಧ್ಯವಾಗಲಿಲ್ಲ. ಆದರೆ, ಕೆಲಸ ಮಾಡಲೂ ಆಗಲಿಲ್ಲ. ಓದುವುದು-ಬರೆಯುವುದು ಅಸಾಧ್ಯವಾಗುವಂತೆ

ತೋರುತ್ತಿದೆ. ಇಷ್ಟು ದಿನ ಕೆಲಸ ಮಾಡಿದ್ದೇನೆ. ಆದರೆ ಇಂಥ ಭಯಂಕರ ಸ್ಥಿತಿಯಲ್ಲಿ ಎಂದೂ ಸಿಕ್ಕಿಹಾಕಿಕೊಂಡಿರಲಿಲ್ಲ. ಅಂದು, ಆವೇಶಕ್ಕೆ ಒಳಗಾಗಿ ಹಾಗೂ ನಾಚಿಕೆ ಮತ್ತು ಸಂಕೋಚಗಳನ್ನು ಬದಿಗಿರಿಸಿ, ಹೇಗಾದರೂ ಮಾಡಿ ಕಲ್ಕತ್ತೆಯಲ್ಲಿ ಯಾವುದಾದರೂ ಒಂದು ಕೆಲಸವನ್ನು ಕೊಡಿಸಿ ಎಂದು ಮಿತ್ರರಿಗೆ ಕಾಗದವನ್ನು ಬರೆದೆ. ರಾಜೀನಾಮೆ ಕೊಟ್ಟು ಬರುವುದಾಗಿ ತಿಳಿಸಿದೆ. ಇನ್ನೂ ಅವರಿಂದ ಉತ್ತರ ಬರಲು ಸಮಯ ಹಿಡಿಯುತ್ತದೆ. ಆದರೆ, ಬೇಗನೆ ಈ ಸಾಹೇಬ ಇಲ್ಲಿಂದ ಹೋಗದಿದ್ದರೆ - ಅವನು ಇಲ್ಲಿಂದ ಹೋಗುತ್ತಾನೆಂಬ ಆಸೆಯನ್ನು ಇಟ್ಟುಕೊಳ್ಳು ವಂತಿಲ್ಲ - ಆ ಪರಿಸ್ಥಿತಿಯಲ್ಲಿ ನಾನೇ ಕೆಲಸವನ್ನು ಬಿಡಬೇಕಾಗುತ್ತದೆ. ದರಿದ್ರದವನು ಇನ್ನೊಂದು ಕಛೇರಿಗೆ ಅರ್ಜಿಯನ್ನು 'ಫರ್ವಾರ್ಡ್' ಮಾಡುವುದಿಲ್ಲ. ಅನೇಕ ದುಷ್ಟರನ್ನು ನೋಡಿದ್ದೇನೆ. ಆದರೆ ಇಂಥವನ ವಿಚಾರವನ್ನು ಕೇಳಿಯೂ ಇಲ್ಲ...."

ಕೆಲಸವನ್ನು ಬಿಡುವ ಆಲೋಚನೆ ಮನಸ್ಸಿನಲ್ಲಿ ಮೂಡಿದ್ದರೆ, ಅದರಲ್ಲಿ ಅಸಹಜವಾದುದೇನೂ ಇಲ್ಲ. ಆದರೆ, ಅಧಿಕಾರಿಗಳ ಬಗೆಗಿನ ಅವನ ಆಕ್ರೋಶ ಅತಿಶಯೋಕ್ತಿಪೂರ್ಣವಾದುದು. ಸಾಹಿತ್ಯ ಸೃಷ್ಟಿಯತ್ತ ಮನಸ್ಸು ಹರಿಸಿದರೆ, ಕಛೇರಿಯ ಕೆಲಸದ ವಿಷಯದಲ್ಲಿ ನಿರ್ಲಕ್ಷ್ಯ ಉಂಟಾಗಬಹುದಿತ್ತು. ಯಾವನೇ ಅಧಿಕಾರಿ ಇಂಥ ನಿರ್ಲಕ್ಷ್ಯವನ್ನು ಸಹಿಸಲಾರ. ಶರತ್ ವರ್ಣಿಸಿರುವಷ್ಟರ ಮಟ್ಟಿಗೆ ನ್ಯೂಮಾರ್ಶ್ ಕೆಟ್ಟವನೇನೂ ಆಗಿರಲಿಲ್ಲ. ವಾಸ್ತವವಾಗಿ ಇದುವರೆಗೆ ಅವನು ಸಹಿಸುತ್ತ ಬಂದಿದ್ದ ತೆರೆಮರೆಯ, ತುಚ್ಛ ಹಾಗೂ ಅವಹೇಳನಪೂರ್ಣವಾದ ಬಾಳಿ ನಿಂದ ಬಿಡುಗಡೆ ಹೊಂದುವ ಆನಂದವೇ ಅವನನ್ನು ಕಲ್ಕತ್ತೆಯತ್ತ ಸೆಳೆಯುತ್ತಿತ್ತು. ಕೆಲಸ ಸರ್ಕಾರಿಯದಾಗಿರಬೇಕೆ ಅಥವಾ ಖಾಸಗಿಯದಾಗಿರಬೇಕೆ ಎಂಬುದರ ಬಗ್ಗೆಯೂ ಅವನು ಸ್ವಲ್ಪವೂ ತಲೆ ಕೆಡಿಸಿಕೊಂಡಿರಲಿಲ್ಲ. ಆದರೆ, ಯಾವುದಾದರೂ ಸಾಹಿತ್ಯಿಕ ಪತ್ರಿಕೆಯಲ್ಲಿ ಕೆಲಸ ಸಿಕ್ಕರೆ ಅದಕ್ಕಿಂತ ಉತ್ತಮವಾದುದು ಬೇರೇನೂ ಇರಲಾರದು ಅವನು ಭಾವಿಸಿದ್ದ. ಅವನು ಹೀಗೆ ಬರೆದಿದ್ದ: "ಇಷ್ಟು ದೊಡ್ಡ ದೊಡ್ಡ ಪತ್ರಿಕೆಗಳು ಹೊರಬರುತ್ತಿವೆ. ಯಾರೂ ನನ್ನನ್ನು ಉಪ-ಸಂಪಾದಕನಾಗಿ ನೇಮಿಸಿ ಕೊಳ್ಳಲಾರರೆ? ನಾನು ಅವರಿಗಾಗಿ ತುಂಬ ಕೆಲಸ ಮಾಡಬಲ್ಲೆ. ದೊಡ್ಡ ಕಥೆ, ಧಾರಾವಾಹಿ ಕಾದಂಬರಿ, ಪ್ರಬಂಧ, ವಿಮರ್ಶೆ - ಇವನ್ನೆಲ್ಲ ನಾನು ಒದಗಿಸಬಲ್ಲೆ. ಇವುಗಳನ್ನು ಮಾತ್ರವಲ್ಲದೆ, ಚಿತ್ರಗಳನ್ನು ಪರೀಕ್ಷಿಸಬಲ್ಲೆ, ಹಾಡಿನ ಸ್ವರ-ಪ್ರಸ್ತಾರದ ತಪ್ಪುಗಳನ್ನು ತಿಳಿಸಬಲ್ಲೆ; ವೈಜ್ಞಾನಿಕ ಹಾಗೂ ಸಾಹಿತ್ಯಿಕ ಬರಹಗಳನ್ನು ವಿಮರ್ಶಿ ಸಲೂ ಬಲ್ಲೆ. ಹತ್ತರಿಂದ ಐದರವರೆಗೆ ಶ್ರಮವಹಿಸಿ ದುಡಿಯುತ್ತೇನೆ. ಬರ್ಮಾ ಈಗ ನನಗೆ ಆಕರ್ಷಕವಾಗಿ ಉಳಿದಿಲ್ಲ. ಸ್ವದೇಶಕ್ಕೆ ಹಿಂದಿರುಗಬೇಕೆಂದು ಮನಸ್ಸಾಗುತ್ತಿದೆ."

ರಂಗೂನಿನ ಗೌರವಸ್ಥ ಬಂಗಾಳಿ ಸಮಾಜದಲ್ಲಿ ಈಗಲೂ ಅವನಿಗೆ ಗೌರವವಿರಲಿಲ್ಲ. ಸಭ್ಯ ಹಾಗೂ ಪ್ರತಿಷ್ಠಿತ ಜನರ ದೃಷ್ಟಿಯಲ್ಲಿ ಅವನ ಕೆಲಸಗಳು ನಿಂದನೀಯವೂ, ಅಸಭ್ಯವಾಗುವೂ ಆಗಿ ಪರಿಗಣಿತವಾಗಿದ್ದುವು. ಹೀಗಾಗಿ, ಅವರು ಅವನನ್ನು ಅಲೆಮಾರಿ ಹಾಗೂ ಚರಿತ್ರಹೀನನೆಂದು ಭಾವಿಸಿದ್ದರು. ಒಮ್ಮೆ ಒಬ್ಬ ಯುವಕ ಕಲ್ಕತ್ತೆಯಿಂದ ಬಂದು ಅವನ ನೆರೆಮನೆಯಲ್ಲಿ ತಂಗಿದ್ದ.[1] ಅವನು ಮಟ್ಟಿಲ

1. 1913

ಮೇಲೆ ಸದ್ದಿಲ್ಲದೆ ನಿಂತು ರಸ್ತೆಯತ್ತ ನೋಡುತ್ತಿದ್ದ. ಶರತ್ ಬಂದು ಹೋಗಿ ಮಾಡುವಾಗ ಅವನನ್ನು ನೋಡುತ್ತಿದ್ದ. ಒಂದು ದಿವಸ ಅವನಿಗೆ ಸುಮ್ಮನಿರಲು ಆಗಲಿಲ್ಲ. ಅವನನ್ನು ಕೇಳಿದ: "ಒಬ್ಬರೇ ಸದ್ದಿಲ್ಲದೆ ನಿಂತುಕೊಂಡಿದ್ದು ರಸ್ತೆಯಲ್ಲಿ ಏನನ್ನು ನೋಡುತ್ತ ಇರುತ್ತೀರಿ ?"

ಯುವಕ ಉತ್ತರಿಸಿದ: "ನಾನು ಇಲ್ಲಿಗೆ ಹೊಸಬ. ನನಗೆ ಯಾರ ಪರಿಚಯವೂ ಇಲ್ಲ."

"ನಿಮ್ಮ ಹೆಸರೇನು ?"

"ಪವಿತ್ರ ಗಂಗೋಪಾಧ್ಯಾಯ !"

ಶರತ್ ಹೇಳಿದ: "ನನ್ನ ಹೆಸರು ಶರತ್ ಚಟರ್ಜಿ. 'ಅಕೌಂಟೆಂಟ್ ಜನರಲ್' ಅವರ ಕಛೇರಿಯಲ್ಲಿ ನಾನು ಗುಮಾಸ್ತನಾಗಿದ್ದೇನೆ. ನಾಳೆ ನೀವು ನನ್ನ ಮನೆಗೆ ಬನ್ನಿ."

ಬಯಸದೆ ಬಂದ ಈ ಆಹ್ವಾನವನ್ನು ಅವನು ನಿರಾಕರಿಸಲಾರದೆ ಹೋದ. ಮಾರನೆಯ ದಿವಸ ಹೇಳಿದ್ದ ಹೊತ್ತಿಗೆ ಸರಿಯಾಗಿ ಬಾಗಿಲ ಬಳಿ ಬಂದು ನಿಂತು ತಟ್ಟಿದ. ಶರತ್ ತಾನೇ ಬಾಗಿಲನ್ನು ತೆರೆಯಲು ಮುಂದೆ ಬಂದ. ಯುವಕ ಒಳಗೆ ಬಂದು ನೋಡಿದ: ಗೋಡೆಯ ಒಂದು ಬದಿಗೆ ಪುಸ್ತಕಗಳಿಂದ ತುಂಬಿದ್ದ ಒಂದು 'ರ್‍ಯಾಕ್' ಇತ್ತು. ಇನ್ನೊಂದು ಬದಿಗೆ ಮೇಜು-ಕುರ್ಚಿಗಳಿದ್ದುವು. ಮೇಜಿನ ಮೇಲೆ ಮರದ ಚೌಕಾಕಾರದ 'ಪೆನ್ ಸ್ಟ್ಯಾಂಡ್' ಇತ್ತು. ಅದರಲ್ಲಿ ಐದಾರು ಫೌಂಟನ್ ಪೆನ್ನುಗಳನ್ನು ಅಂದವಾಗಿ ಜೋಡಿಸಿಡಲಾಗಿತ್ತು. ಫೂಲ್‌ಸ್ಕೇಪ್ ಆಕಾರದ ಚರ್ಮದ ಹೊದಿಕೆಯನ್ನುಳ್ಳ ಗಟ್ಟಿರಟ್ಟಿನ ಪ್ರತಿಯೊಂದಿತ್ತು. ಪ್ಯಾಡಿನ ಮೇಲೆ ಗೋಳಾಕಾರದಲ್ಲಿ 'ಶರತ್' ಎಂದು ಬರೆಯಲಾಗಿದ್ದ 'ಮಾನೋಗ್ರಾಮ್' ಇತ್ತು. ಪ್ಯಾಡಿನ ಕಾಗದದ ಮೇಲೆ ಸುಂದರವಾದ ಸಣ್ಣಸಣ್ಣ ಮುತ್ತಿನಂಥ ಬಂಗಾಳಿ ಅಕ್ಷರಗಳಲ್ಲಿ ಏನನ್ನೋ ಬರೆಯಲಾಗಿತ್ತು.

ಆ ಅಕ್ಷರಗಳಲ್ಲಿ ಏನೋ ಒಂದು ಆಕರ್ಷಣೆ ಇದ್ದು, ಅದನ್ನು ಓದಬೇಕೆಂಬ ಮನಸ್ಸಾಗುತ್ತಿತ್ತು. ಆದರೆ, ಅದೇ ಹೊತ್ತಿಗೆ ಹಿಂದಿರುಗಿ, ಶರತ್ ಹೇಳಿದ: "ಅಯ್ಯೋ, ಬಿಡಿ! ಅದೊಂದು ಹುಚ್ಚು. ಅದನ್ನೇನೂ ನೋಡಬೇಡಿ. ಇತ್ತ ಬನ್ನಿ. ಸ್ವಲ್ಪ ಗೋಷ್ಠಿ ಸೇರಲಿ. ಇನ್ನೂ ಕೆಲವು ಸ್ನೇಹಿತರು ಬಂದಿದ್ದಾರೆ."

ಪಕ್ಕದ ಮನೆಗೆ ಹೋಗಿ ನೋಡಿದರೆ, ಚದುರಂಗದ ಹಾಸಿನ ಬಳಿ ನಾಲ್ಕಾರು ಮಂದಿ ಕುಳಿತಿದ್ದಾರೆ. ಅವರಲ್ಲಿ ಒಬ್ಬ ಬರ್ಮೀಯನೂ ಇದ್ದಾನೆ. ಶರತ್ ಅವನೊಂದಿಗೆ ಹೇಳಿದ: "ನೀವು ಇಲ್ಲಿ ಕುಳಿತುಕೊಳ್ಳಿ. ಈಗಲೇ ಬರುತ್ತೇನೆ."

ಅವನು ಅಲ್ಲಿ ಕುಳಿತುಕೊಂಡ. ಕೆಲವು ಕ್ಷಣಗಳ ಬಳಿಕ ಶರತ್ ಹಿಂದಿರುಗಿದಾಗ, ಅವನ ಕೈಯಲ್ಲಿ ಒಂದು ಪುಸ್ತಕ ಇತ್ತು. ಅದನ್ನು ತೋರಿಸುತ್ತ ಹೇಳಿದ: " 'ಸಾಹಿತ್ಯ' ಮಾಸ ಪತ್ರಿಕೆಯಲ್ಲಿ ಪವಿತ್ರ ಗಂಗೂಲಿ ಎಂಬ ಹೆಸರಿನಲ್ಲಿ ಪ್ರಕಟವಾಗಿರುವ ಕವಿತೆ ನಿಮ್ಮದೇ ಏನು ?"

ಯುವಕ ಉತ್ತರವನ್ನೇನೂ ಕೊಡದೆ, ತಲೆತಗ್ಗಿಸಿದ. ಈಗ ತಿಳಿಸಬೇಕಾದುದೇನೂ ಬಾಕಿ ಇರಲಿಲ್ಲ. ಶರತ್ ಹೇಳಿದ: "ಈಗ ನಮ್ಮ ಮನೆಗೆ ಒಬ್ಬ ಕವಿಯೂ ಬಂದಂತಾಯಿತು."

ಒಮ್ಮೆಗೇ, ಅದೇ ಹೊತ್ತಿಗೆ ಸರಿಯಾಗಿ, ಆ ಯುವಕನ ಆತಿಥೇಯನಾಗಿದ್ದ ವ್ಯಕ್ತಿಯ ಮನೆಯ ನೌಕರ ಅಲ್ಲಿಗೆ ಬಂದು ಹೇಳಿದ: "ಬಾಬೂಜಿ ನಿಮ್ಮನ್ನು ಈಗಲೇ ಬರಹೇಳುತ್ತಿದ್ದಾರೆ."

ಅವನು ಹತಪ್ರಭನಾಗಿ ಅಲ್ಲಿಂದ ಹೊರಟುಹೋದ. ಅವನಿಗೆ ಏಕೆ-ಏನು ಎಂಬುದೇನೂ ಅರ್ಥವಾಗಲಿಲ್ಲ. ಅಲ್ಲಿಗೆ ಹೋಗಿ ಸೇರಿದಾಗ ಆ ಮಿತ್ರ ತುಂಬ ತಿರಸ್ಕಾರದ ಧ್ವನಿಯಲ್ಲಿ ಹೇಳಿದ: "ಇದೇನೋ ನಿನ್ನ ಕೆಲಸ! ಆ ಗುಂಪಿನೊಂದಿಗೆ ಹೋಗಿ ಸೇರಿಕೊಂಡಿದ್ದೆಯಾ? ನನ್ನ ಮಾತು ಕೇಳುವುದಾದರೆ ಅಲ್ಲಿಗೆ ಹೋಗದಿದ್ದರೇ ಒಳ್ಳೆಯದು. ಮೊದಲನೆಯದಾಗಿ ಇದು ವಿದೇಶ, ಅದರಲ್ಲಿಯೂ ರಂಗೂನ್! ಇದು ಒಳ್ಳೆಯ ಜಾಗವಲ್ಲ."

ಅವನ ಬಾಲ್ಯದ ಗೆಳೆಯ ಪ್ರಮಥನಾಥ ಭಟ್ಟಾಚಾರ್ಯರು 'ಭಾರತ ವರ್ಷ' ಪತ್ರಿಕೆಯ ಸಂಪಾದಕ ವಿಭಾಗದಲ್ಲಿದ್ದರು. ಅವನು ಅಲ್ಲಿಗೆ ಹೋಗಬಹುದಿತ್ತು. ಆದರೆ, 'ಚರಿತ್ರಹೀನ' ಕಾದಂಬರಿಯ ಪ್ರಕಟಣೆಯ ವಿಷಯದಲ್ಲಿ ಮೂಡಿದ್ದ ಕಹಿ ವಾತಾವರಣದಿಂದಾಗಿ, ಅವನ ಮನಸ್ಸು ಅದರತ್ತ ಇನ್ನೂ ಹರಿಯುತ್ತಿರಲಿಲ್ಲ. 'ಯಮುನಾ' ಪತ್ರಿಕೆಯೇ ಅವನ ತಲೆಯಲ್ಲಿ ತುಂಬಿಕೊಂಡಿತ್ತು. ಆಗಾಗ್ಗೆ ಕವಿತೆಯೊಂದನ್ನು ಬಿಟ್ಟರೆ, ಉಳಿದ ಎಲ್ಲ ಅಂಕಣಗಳನ್ನೂ ಬರೆದು 'ಯಮುನಾ'ದ ಪುಟಗಳನ್ನು ತುಂಬಿಸುತ್ತಿದ್ದ. ನಡುನಡುವೆ ಪ್ರಮಥರಿಗೆ ಪತ್ರ ಬರೆದು ತನ್ನ ವ್ಯಥೆಯನ್ನು ತೋಡಿಕೊಳ್ಳುತ್ತಿದ್ದ. ಆದರೆ, ಆ ವ್ಯಥೆಯಲ್ಲಿಯೂ 'ಯಮುನಾ'ದ ಬಗೆಗಿನ ಪ್ರೀತಿಯೇ ಪ್ರಮುಖವಾಗಿತ್ತು.

"ನನ್ನ 'ಯಮುನೆ'ಯನ್ನು ನೀನು ಪ್ರೀತಿಸು ಎಂದು ನಿನ್ನನ್ನು ಕೋರುತ್ತೇನೆ. 'ಭಾರತ ವರ್ಷ' ಹೇಗೆ ನಿನ್ನದೋ, ಹಾಗೆಯೇ 'ಯಮುನಾ' ನನ್ನದು. ಅದಕ್ಕೆ ಹಾನಿಯಾಗದಂತೆ, ಅದರ ಉನ್ನತಿ ಸಾಧಿತವಾಗುವಂತೆ, ಅದರತ್ತ ನಿನ್ನ ದೃಷ್ಟಿ ಹರಿಸು. ಫಣೀಂದ್ರರ ವಿಷಯದಲ್ಲಿ ನೀನು ಕೋಪಿಸಿಕೊಳ್ಳಬೇಡ. ಆತ ಒಳ್ಳೆಯ ಮನುಷ್ಯ. ನಾನು-ನೀನು ಯಾರು? ಹಾಗೂ ಕಳೆದ ಇಪ್ಪತ್ತು ವರ್ಷಗಳಿಂದಲೂ ಹೇಗೆ ಆತ್ಮೀಯತೆಯ ಸೂತ್ರದಲ್ಲಿ ಬಂಧಿತರಾಗಿದ್ದೇವೆ ಎಂಬುದು ಆತನಿಗೆ ಹೇಗೆ ಗೊತ್ತಾದೀತು? ನಾವು ಸ್ನೇಹಿತರೆಂದು ಈ ಲೋಕ ಭಾವಿಸುತ್ತಿದೆ. ಆದರೆ, ಯಾರ ನಡುವೆ ಮೈತ್ರಿ ಇದೆ ಹಾಗೂ ಅದೆಂಥ ಮೈತ್ರಿ ಎಂಬುದು ಆ ಬಡಪಾಯಿಗೆ ಹೇಗೆ ಗೊತ್ತಾದೀತು? ನನ್ನ-ನಿನ್ನ ಮಾತುಕತೆಗಳು ನಮ್ಮಿಬ್ಬರನ್ನು ಬಿಟ್ಟು ಬೇರೆ ಯಾರಿಗೂ ಗೊತ್ತಿಲ್ಲ, ಪ್ರಮಥ."

"ನಾನೊಬ್ಬನೇ 'ಯಮುನಾ' ಪತ್ರಿಕೆಯನ್ನು ನಡೆಸಲಾರೆ. ಆದ್ದರಿಂದ ನನ್ನೆಲ್ಲ ಶಿಷ್ಯರನ್ನೂ ಈ ಕಾರ್ಯದಲ್ಲಿ ತೊಡಗಿಸಿದ್ದೇನೆ. ನಿರುಪಮಾ, ಸುರೇಂದ್ರ, ಗಿರೀಂದ್ರ ಹಾಗೂ ಭಾಗಲಪುರದ ಒಂದಿಬ್ಬರು ಸಾಹಿತಿಗಳು - ಇವರೆಲ್ಲ ಬರೆಯತೊಡಗಿದ್ದಾರೆ. 'ಯಮುನಾ'ದ ಹಣೆಯಲ್ಲಿ ಏನು ಬರೆದಿದೆ ಎಂಬುದನ್ನು ನೋಡಬೇಕು. ನೀನೇ ಅವರಿಗೆಲ್ಲ 'ಗುರುದೇವ'ನಂತೆ; ನೀನು ಏನು ಹೇಳುತ್ತೀಯೋ ಅದನ್ನು ನಾವು ಮಾಡಿಯೇ ತೀರುತ್ತೇವೆ ಎಂದು ಅವರೆಲ್ಲ ಹೇಳುತ್ತಾರೆ. ಇದೊಂದೇ ನಮಗಿರುವ ಆಸೆ."

'ಯಮುನಾ'ದ ಬಗೆಗಿನ ಅವನ ಕಾಳಜಿಗೆ ಮೇರೆಯೇ ಇರಲಿಲ್ಲ. ಹಳೆಯ ಶಿಷ್ಯರು ಮತ್ತು ಗೆಳೆಯರನ್ನು ಮಾತ್ರವಲ್ಲದೆ, ಹೊಸ ಗೆಳೆಯರನ್ನೂ 'ಯಮುನಾ'ಕ್ಕೆ ಬರೆಯಲು ಹಾಗೂ ತಮ್ಮಿಂದ ಸಾಧ್ಯವಾದುದೇನನ್ನಾದರೂ ಮಾಡಲು ಒತ್ತಾಯ ಪಡಿಸುತ್ತಿದ್ದ. ಈ ಸಂದರ್ಭದಲ್ಲಿ, ಆ ದಿನಗಳಲ್ಲಿ ಪ್ರಕಟವಾಗುತ್ತಿದ್ದಂಥ ಕಥೆಗಳನ್ನೂ ಅವನು ವಿಮರ್ಶಿಸುತ್ತಿದ್ದ. ಸೌರೀಂದ್ರ ಮೋಹನರಿಗೆ ಹೀಗೆಂದು ಬರೆದಿದ್ದ:

"ಇಂದು ಮಾಸ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಸಣ್ಣ ಕಥೆಗಳಲ್ಲಿ, ಹದಿನೈದು ಆಣೆಯಷ್ಟು ಭಾಗದ ಕಥೆಗಳ ಬಗ್ಗೆ ವಿಮರ್ಶಿಸುವ ಅಗತ್ಯವೇ ಇಲ್ಲ. ಕಾರ್ತಿಕ ಮಾಸದಲ್ಲಿ ಅದೆಷ್ಟು ಕಥೆಗಳು ಅಚ್ಚಾಗಿವೆ. ಆದರೆ, ಅದರಲ್ಲಿ ಒಂದೂ ಸುಂದರವಾಗಿಲ್ಲ. ಅವುಗಳಲ್ಲಿ ಬಹುಪಾಲಿನವು ಓದಲೂ ಅರ್ಹವಾಗಿಲ್ಲ. ಯಾವುದರಲ್ಲಿಯೂ ವಸ್ತುವೂ ಇಲ್ಲ, ಭಾವವೂ ಇಲ್ಲ, ಕೇವಲ ಸತ್ವಹೀನ ಆಡಂಬರ ಮಾತ್ರವಿದೆ. ಘಟನೆಗಳನ್ನು ಸೃಷ್ಟಿಸಿದ್ದಾರೆ. ಬಲವಂತವಾಗಿ ಕರುಣೆಯನ್ನು ಹುಟ್ಟಿಸುವ ಪ್ರಯತ್ನ ಮಾಡಿದ್ದಾರೆ. ಮುದಿ ವೇಶ್ಯೆಯನ್ನು ಅಲಂಕರಿಸಿ ಯುವತಿಯೆಂದು ಹೇಳುತ್ತ, ಲೋಕದ ಕಣ್ಣಿಗೆ ಮಣ್ಣೆರಚುವ ಪ್ರಯತ್ನ ಮಾಡಿದ್ದಾರೆ. ಇದನ್ನು ನೋಡಿದರೆ, ಮನಸ್ಸಿನಲ್ಲಿ ಆಸೆಯೇ ಇಂಗಿ ಹೋಗುತ್ತದೆ, ಲಜ್ಜೆ-ಕರುಣೆ ಮೂಡುತ್ತದೆ. ಆ ಎಲ್ಲ ಲೇಖಕರೂ ಸಣ್ಣ ಕಥೆಗಳನ್ನು ಬರೆಯಲು ಪ್ರಯತ್ನಿಸುವುದನ್ನು ನೋಡಿದರೆ, ಅವರು ಬೇರೆ ಏನು ಬೇಕಾದರೂ ಆಗಿರಲಿ, ಮಾನಸಿಕವಾಗಿ ಆರೋಗ್ಯವಂತರಾಗಿಯಂತೂ ಇಲ್ಲ ಎಂಬ ಭಾವನೆ ನನ್ನ ಮನಸ್ಸಿನಲ್ಲಿ ಮೂಡುತ್ತದೆ. ಈಗೀಗ ಸಣ್ಣ ಕಥೆಗಳ ಸ್ಥಿತಿ ಎಷ್ಟು ಕೆಟ್ಟು ಹೋಗಿದೆ!"

ಸಾಹಿತ್ಯ ಈ ದುಃಸ್ಥಿತಿಯಿಂದ ದೂರಾಗಲಿ ಹಾಗೂ 'ಯಮುನಾ' ಎಲ್ಲ ದೃಷ್ಟಿಗಳಿಂದಲೂ ಸಂಪದ್ಯುಕ್ತವಾಗಲಿ ಎಂಬುದೇ ಆಗ ಅವನ ಮನಸ್ಸಿನಲ್ಲಿದ್ದ ಏಕೈಕ ಬಯಕೆಯಾಗಿತ್ತು.

## 15

ಮಾರನೆಯ ವರ್ಷ[1] ಆರು ತಿಂಗಳ ರಜೆಯನ್ನು ಪಡೆದು ಕಲ್ಕತ್ತೆಗೆ ಬಂದಾಗ, ಆ ಬರುವಿಕೆ ಯಾರೋ ಒಬ್ಬ ವಿಜಯಿ ರಾಜಕುಮಾರನ ಆಗಮನದಂತೆಯೇ ಆಗಿತ್ತು. ಅವನ ಪ್ರಶಂಸಕರು ಹಾಗೂ ನಿಂದಕರು - ಇಬ್ಬರ ಸಂಖ್ಯೆಗೂ ಮಿತಿಯೇ ಇರಲಿಲ್ಲ. ಆದರೆ, ಈ ಸಲವೂ ಅವನು ತನ್ನ ಯಾವ ಗೆಳೆಯರ ಬಳಿಯೂ ತಂಗಲಿಲ್ಲ. ತನ್ನನ್ನು ಬೇರೆಯವರಿಗೆ ಪರಿಚಯಿಸಿಕೊಳ್ಳುವುದರಲ್ಲಿ ಎಂದಿನಂತೆ ಅವನು ಉದಾಸೀನನಾಗಿಯೇ ಇದ್ದ. ನಡೆ-ನುಡಿ ಹಾಗೂ ವೇಷ-ಭೂಷಣಗಳಲ್ಲಿ ಅವನು ಸಂಪೂರ್ಣವಾಗಿ ಹಳ್ಳಿಗನಂತೆಯೇ ಕಾಣುತ್ತಿದ್ದ. ಇಷ್ಟಾಗಿಯೂ ಗೆಳೆಯರನ್ನು ಭೇಟಿಯಾಗುವುದು ಹಾಗೂ ಗುಂಪುಗೂಡಿ ಹರಟೆಕೊಚ್ಚುವುದು ಅವನಿಗೆ ತುಂಬ ಪ್ರಿಯವಾಗಿತ್ತು. ಪ್ರತಿದಿನ ಸಂಜೆ 'ಯಮುನಾ'ದ ಕಛೇರಿಯಲ್ಲಿ ಅನೇಕ ಸಾಹಿತಿಗಳು ಒಂದುಗೂಡುತ್ತಿದ್ದರು. ಅವರಲ್ಲಿ ಕತೆಗಾರರೂ ಕವಿಗಳೂ ಆಗಿದ್ದ ಸುಧೀಂದ್ರನಾಥ ಠಾಕುರ್ ಅವರೂ ಒಬ್ಬರಾಗಿದ್ದರು. ಶರತ್‌ನ ವಿಷಯದಲ್ಲಿ ಅವರಿಗಿದ್ದ ಅಭಿಮಾನಕ್ಕೆ

1. ಜೂನ್ 1914

ಮೇರೆಯೇ ಇರಲಿಲ್ಲ. ಅವನ ನಡೆ-ನುಡಿ, ಮಾತುಕತೆ, ಹಾಸ್ಯ-ವಿನೋದ ಎಲ್ಲವೂ ಅವರಿಗೆ ತುಂಬ ಸಂತೋಷವನ್ನುಂಟುಮಾಡುತ್ತಿದ್ದುವು.

ಈ ಗೋಷ್ಠಿಯಲ್ಲಿ ಸಾಹಿತ್ಯಿಕ ವಿಮರ್ಶೆ ಮಾತ್ರವೇ ನಡೆಯುತ್ತಿರಲಿಲ್ಲ, ಯಾವುದೇ ಅಡ್ಡಿ ಆತಂಕಗಳಿಲ್ಲದೆ ಹಾಸ್ಯ-ವಿನೋದಗಳ ಹೊಳೆಯೂ ಹರಿಯುತ್ತಿತ್ತು. ಆ ಕ್ಷಣದಲ್ಲಿಯೇ ಕಥೆಗಳನ್ನು ಕಲ್ಪಿಸಿ ಹೇಳುವುದರಲ್ಲಿಯಂತೂ ಶರತ್ ನಿಸ್ಸೀಮನೇ ಆಗಿದ್ದ. ಪ್ರತಿಯೊಂದು ಕಥೆಯ ಕೊನೆಯಲ್ಲೂ, "ಇದು ನನ್ನ ಜೀವನದಲ್ಲಿ ನಡೆದ ನಿಜವಾದ ಘಟನೆ" ಎಂದು ಹೇಳುತ್ತಿದ್ದ.

ಸುಧೀಂದ್ರರು ನಕ್ಕು ಹೇಳುತ್ತಿದ್ದರು: "ಇಲ್ಲ, ಇಲ್ಲ, ಶರತ್! ಇದನ್ನು ನೀನು ಕಲ್ಪಿಸಿ ಹೇಳುತ್ತಿದ್ದೀಯೆ"

ಶರತ್ ಉತ್ತರಿಸುತ್ತಿದ್ದ: "ನೋಡಿ, ಕಥೆ ಬರೆದರೆ, ಯೋಚಿಸಿ ಬರೆಯುತ್ತೀಯೆ ಎನ್ನುತ್ತೀರಿ, ಬಾಯಿ ಮಾತಿನಲ್ಲಿಯೇ ಹೇಳಿದರೂ ಕಲ್ಪನೆ ಎಂದು ಹೇಳುತ್ತೀರಿ. ಇಲ್ಲ, ಸ್ವಾಮಿ ಇದು ನಿಜವಾಗಿಯೂ ನಡೆದ ಘಟನೆ. ನಿಮಗೆ ನಂಬಿಕೆ ಮೂಡಿಲ್ಲದೆ ಇದ್ದರೆ ಪ್ರಮಾಣವನ್ನು ಸಾಕ್ಷಿಗಳನ್ನೂ ಒದಗಿಸಬಲ್ಲೆ."

ಪ್ರಮಾಣ ಮತ್ತು ಸಾಕ್ಷಿಗಳ ಅಗತ್ಯ ಬಹುಶಃ ಎಂದೂ ಉಂಟಾಗಲೇ ಇಲ್ಲ. ಆದರೆ, ಈ ಕಥೆಗಳ ಹಿಂದೆ ಒಂದಲ್ಲ ಒಂದು ರೂಪದಲ್ಲಿ ಸ್ವಾನುಭವ ಅಡಗಿರುತ್ತಿತ್ತು ಎಂಬುದರಲ್ಲಿ ಕಿಂಚಿತ್ತೂ ಸಂದೇಹವಿರಲಿಲ್ಲ. ಅನುಭವದ ಈ ಮೂಲಗಳು ಅವನಿಗೆ ಸಹಜವಾಗಿಯೇ ಲಭ್ಯವಾಗುತ್ತಿದ್ದುವು. ಈ ದೃಷ್ಟಿಯೇ ಅವನ ಬಂಡವಾಳವಾಗಿತ್ತು.

ಒಂದು ದಿವಸ ಸಂಜೆ ಸೌರೀಂದ್ರರ ಹಾದಿಯನ್ನು ಕಾಯುತ್ತ ಅವನು ತನ್ನ ಕಛೇರಿಯ ಹೊರಗೆ ಸುತ್ತಾಡುತ್ತಿದ್ದ. ಎಲ್ಲರೂ ಹೊರಟುಹೋಗಿದ್ದರು. ಆದರೆ ಕೈದಿಗಳನ್ನು ಕರೆದೊಯ್ಯುವ ಸಲುವಾಗಿ ಕಾಂಪೌಂಡಿನಲ್ಲಿ ಜೈಲಿನ ವಾಹನ ಬಂದು ನಿಂತಿತ್ತು. ಅಂದು ಯಾರೋ ಒಬ್ಬ ಪಕ್ಕಾ ಕಳ್ಳನ ಪ್ರಕರಣ ಬಂದಿತ್ತು. ಅವನಿಗೆ ಎರಡು ವರ್ಷಗಳ ಶಿಕ್ಷೆ ಆಗಿತ್ತು. ಸೌರೀಂದ್ರ ಮೋಹನರೇ ಅವನ ವಕೀಲರಾಗಿದ್ದರು. ಅವರು ಹೊರಗೆ ಬಂದೊಡನೆಯೇ, ಅವರ ಕಕ್ಷಿದಾರನ ಉಪಪತ್ನಿ ಕಾಲಿಗೆರಗಿದಳು. 'ಇಂದು ರಾತ್ರಿಯೇ ಹಣ ತೆಗೆದುಕೊಂಡು ನಿಮ್ಮ ಬಳಿ ಬರುತ್ತೇನೆ. ತಾವು ಕೂಡಲೇ ತೀರ್ಪಿನ ಪ್ರತಿಯನ್ನು ಪಡೆದು, ಹೈಕೋರ್ಟಿನಲ್ಲಿ ಅಪೀಲು ಹಾಕಲು ದಯವಿಟ್ಟು ಏರ್ಪಾಟು ಮಾಡಿ. ವಾದಿಸಲು ತುಂಬ ದೊಡ್ಡ ವಕೀಲರನ್ನೇ ಗೊತ್ತುಮಾಡಿ" ಎಂದಳು.

ಆಕೆಗೆ ತಿಳಿಯಹೇಳುತ್ತ ಸೌರೀಂದ್ರ ಮೋಹನರೆಂದರು: "ಅಪೀಲು ಮಾಡುವುದರಿಂದ ಫಲವೇನೂ ದೊರೆಯಲಾರದು. ವ್ಯರ್ಥವಾಗಿ ದುಡ್ಡು ನಷ್ಟವಾಗುತ್ತದೆ."

ಆಕೆ ಹೇಳಿದಳು: "ಫಲ ದೊರೆಯಲಿ ಬಿಡಲಿ, ನಾನು ಪ್ರಾಣವನ್ನೇ ಪಣವಾಗಿಟ್ಟು ಹೋರಾಡುತ್ತೇನೆ. ದುಡ್ಡಿನ ಚಿಂತೆ ಮಾಡಬೇಡಿ. ನನ್ನ ಹತ್ತಿರ ಇರುವ ಎಲ್ಲ ಒಡವೆಗಳನ್ನು ಮಾರಿಬಿಡುತ್ತೇನೆ."

ಸೌರೀಂದ್ರರ ಯಾವ ತರ್ಕವೂ ಅವಳ ತಲೆಗೆ ಹಿಡಿಯಲೇ ಇಲ್ಲ. ಅಷ್ಟು ಹೊತ್ತಿಗೆ ಪೊಲೀಸಿನವರು ಆ ವ್ಯಕ್ತಿಯನ್ನು ವಾಹನದ ಬಳಿಗೆ ಕರೆದುಕೊಂಡು ಬಂದರು. ಆ

ಹೆಂಗಸು ಕೂಡಲೇ ಅಲ್ಲಿಗೆ ಧಾವಿಸಿ, ಅಳತೊಡಗಿದಳು. ಅಳುತ್ತ-ಅಳುತ್ತಲೇ ಅವಳು ಪೊಲೀಸಿನವರ ಕೈಗೆ ನಾಲ್ಕಾರು ರೂಪಾಯಿಗಳನ್ನು ತುರುಕಿದಳು. ಅವಳ ಪ್ರಣಯಿ ಹೇಳಿದ: "ನೋಡು, ಹೈಕೋರ್ಟಿಗೆ ಹೋಗಬೇಡ. ಬಾಬೂಜಿಯವರು ಹೇಳುತ್ತಿರುವ ಮಾತನ್ನು ಕೇಳು. ವ್ಯರ್ಥವಾಗಿ ಹಣವನ್ನು ಖರ್ಚು ಮಾಡಿದರೆ, ನೀನು ಎರಡು ವರ್ಷಗಳನ್ನು ಹೇಗೆ ಕಳೆಯಲು ಸಾಧ್ಯ ?"

ಅವಳು ಅವನ ಮಾತನ್ನು ಕೇಳುತ್ತಲೇ ಇದ್ದಳು. ಪೊಲೀಸ್ ವಾಹನ ಅಲ್ಲಿಂದ ಹೊರಟ ಕೂಡಲೇ ಅವಳು ಮತ್ತೆ ಸೌರೀಂದ್ರರ ಕಡೆ ತಿರುಗಿ ಹೇಳಿದಳು: "ರಾತ್ರಿ ಹಣ ತೆಗೆದುಕೊಂಡು ನಿಮ್ಮ ಮನೆಗೆ ಬರುತ್ತೇನೆ. ಬೇಡವೆಂದು ಹೇಳುವುದು ಅವನ ಕರ್ತವ್ಯವಾಗಿತ್ತು. ಅದನ್ನು ಅವನು ಪೂರೈಸಿದ್ದಾನೆ. ನನ್ನ ಕರ್ತವ್ಯವನ್ನು ನಾನು ಪೂರೈಸುತ್ತೇನೆ."

ಶರತ್ ಇದೆಲ್ಲವನ್ನೂ ನೋಡುತ್ತಿದ್ದ, ಕೇಳುತ್ತಿದ್ದ. ಸೌರೀಂದ್ರರು ಅವನೊಂದಿಗೆ ಹೇಳಿದರು: "ಆ ಹೆಂಗಸು ಭಾರಿ ಗಟ್ಟಿಗಿತ್ತಿ. ಈ ಘಟನೆಯಿಂದ ಅವಳ ಮನದಾಳದ ಪರಿಚಯ ನನಗೆ ಆಯಿತು. ಸಮಾಜದ ದೃಷ್ಟಿಯಲ್ಲಿ ಈ ಜನರು ತಿರಸ್ಕೃತರು, ಬಹಿಷ್ಕೃತರು. ಆದರೆ, ಇವರ ಮನಸ್ಸಿನ ಒಳಗೆ ಬೆಳಗುತ್ತಿರುವ ಆ ಮಾನವ ಅದೆಷ್ಟು ದೊಡ್ಡವನು ! ತಮ್ಮ ಗಂಡಂದಿರು ಇಂಥ ಕಷ್ಟಕ್ಕೆ ಸಿಕ್ಕಿಕೊಂಡಾಗ ಅನೇಕ ಸಾಧ್ವಿಯರು ವಿಚಲಿತರಾಗಿಬಿಟ್ಟು ತಮ್ಮ ಸರ್ವಸ್ವವನ್ನು ತ್ಯಜಿಸಲು ಹಿಂದೆಗೆಯುತ್ತಾರೆ ಈಕೆಯಾದರೋ ಪತಿತಳಾಗಿರುವ ಹೆಣ್ಣು. ಇಂಥ ಪತಿತೆಯರ ಕಥೆ ಅದೆಂದು ನಮ್ಮ ಸಾಹಿತ್ಯದಲ್ಲಿ ಸ್ಥಾನವನ್ನು ಗಳಿಸಿಕೊಳ್ಳುತ್ತದೆಯೋ ಏನೋ !"

ಈ 'ಪತಿತ ನಾರಿ'ಗೆ ಸಾಹಿತ್ಯದಲ್ಲಿ ಗೌರವವನ್ನು ಕಲ್ಪಿಸಿಕೊಡುವ ಸಲುವಾಗಿ ಅವನು ತನ್ನ ಜೀವಮಾನದ ಉದ್ದಕ್ಕೂ ಪ್ರಯತ್ನಿಸಿದ. ಬರ್ಮಾದಲ್ಲಿ ಇದ್ದಾಗ 'ಸಣ್ಣ ಜನರು' ಎಂದು ಕರೆಯಲಾಗುವ ಈ ವರ್ಗಕ್ಕೆ ಸೇರಿದ ಅನೇಕ ವ್ಯಕ್ತಿಗಳು ಅವನ ಜೀವನದಲ್ಲಿ ಬಂದು ಹೋದರು. ಅವರ ನಡುವೆ ಅನೇಕ ರೂಪಗಳಲ್ಲಿ ಅವನ ಸಂಬಂಧ ಏರ್ಪಟ್ಟಿತ್ತು. ಅವುಗಳಲ್ಲಿ ಹೋಮಿಯೋಪಥಿ ವೈದ್ಯನ ರೂಪವೂ ಒಂದು. ಈ ರೂಪದಲ್ಲಿಯೇ ಅವನು ಕಾಮಿನಿ ಎಂಬ ಹೆಂಗಸನ್ನು ಭೇಟಿಯಾಗಿದ್ದ. ಆಕೆ ಬಂಗಾಳದಲ್ಲಿ ಒಂದು ಒಳ್ಳೆಯ ಕುಟುಂಬದ ಸೊಸೆಯಾಗಿದ್ದಳು. ಆದರೆ, ಒಂದು ದಿನ ಎಲ್ಲವನ್ನೂ ಬಿಟ್ಟು, ತನ್ನ ಗಂಡನನ್ನೂ ಬಿಟ್ಟು, ಒಬ್ಬ ಕಮ್ಮಾರನೊಂದಿಗೆ ಹೊರಟುಬಂದಳು. ಆ ಕಮ್ಮಾರನ ಹೆಸರು ಶೀತಲಚಂದ್ರ. ಕಾಂಚರಾಪಾಡಾದ ರೈಲು ಕಾರ್ಖಾನೆಯಲ್ಲಿ ಅವನು ಕೆಲಸ ಮಾಡುತ್ತಿದ್ದ. ಆಕಸ್ಮಿಕವಾಗಿ ರಂಗೂನ್‌ನಲ್ಲಿ ಒಳ್ಳೆಯ ಕೆಲಸ ಸಿಕ್ಕಿದಾಗ, ಅವನು ಬಂಗಾಳವನ್ನು ಬಿಟ್ಟುಬಂದ. ಜೊತೆಯಲ್ಲಿ ಕಾಮಿನಿ ಇದ್ದಳು. ಆಕೆಗೆ ಆಗ ಇಪ್ಪತ್ತನಾಲ್ಕು ವರ್ಷ ವಯಸ್ಸಾಗಿತ್ತು. ಆದರೆ, ಆಕೆಯ ಆರೋಗ್ಯ ಎಷ್ಟು ಚೆನ್ನಾಗಿತ್ತೆಂದರೆ, ಮೊದಲ ಯೌವನದ ಎಲ್ಲ ಆವೇಶವನ್ನು ಆಕೆ ತನ್ನ ಒಡಲಿನಲ್ಲಿ ಬಂಧಿಸಿ ಇಟ್ಟಿದ್ದಾಳೋ ಎಂಬಂತೆ ತೋರುತ್ತಿತ್ತು.

ಅವರು ಶರತ್‌ಬಾಬೂವಿನ ಮನೆಯ ಬಳಿಯಲ್ಲೇ ವಾಸವಾಗಿದ್ದರು. ಕಛೇರಿಗೆ ಹೋಗುವಾಗ ನಿತ್ಯವೂ ಅವನು ಅವರನ್ನು ನೋಡುತ್ತಿದ್ದ. ಅವರು ತುಂಬ ಸುಖಿಗಳಾಗಿದ್ದಂತೆ ಅವನಿಗೆ ತೋರುತ್ತಿತ್ತು. ಶೀತಲಚಂದ್ರನ ಮೇಲೆ ಕಾಮಿನಿ ಎಷ್ಟು

ಪ್ರಭಾವ ಬೀರಿದ್ದಳೆಂದರೆ ಅವನು ಮದ್ಯಪಾನ ಮಾಡುವುದನ್ನು ಬಿಟ್ಟುಬಿಟ್ಟಿದ್ದ.

ಈ ಕಾರಣದಿಂದಾಗಿ ಕಾಮಿನಿಯ ವಿಷಯದಲ್ಲಿ ಶರತ್‌ನ ಮನಸ್ಸಿನಲ್ಲಿ ಮತ್ತಷ್ಟು ಶ್ರದ್ಧೆ ಮೂಡಿತ್ತು. ಒಂದು ದಿನ ಕಛೇರಿಯಿಂದ ಹಿಂದಿರುಗಿದಾಗ, ಕಾಮಿನಿ ಇವನ ಹಾದಿಯನ್ನೇ ನೋಡುತ್ತ ಬಾಗಿಲವಾಡವನ್ನು ಹಿಡಿದುಕೊಂಡು ನಿಂತಿದ್ದಳು. ಅವನು ಬಳಿಗೆ ಬಂದಾಗ ಅಳುತ್ತ ಅವಳು ಹೇಳಿದಳು: "ಅಣ್ಣಯ್ಯ, ನನ್ನ ಅದೃಷ್ಟಕ್ಕೆ ಬೆಂಕಿ ಬಿತ್ತು. ನಾಲ್ಕು ದಿನಗಳಿಂದ ಅವರು ಸಿಡುಬಿನ ಬೇನೆಯಿಂದ ನರಳುತ್ತಿದ್ದಾರೆ. ಹಾಗೆಯೇ ಸರಿಹೋಗಬಹುದು ಎಂದುಕೊಂಡಿದ್ದೆ. ಆ ಅಂಟು ಜಾಡ್ಯಕ್ಕೆ ನಿಮ್ಮನ್ನು ಎಳೆಯುವುದಿಲ್ಲ. ಆದರೆ, ನೆನ್ನೆ ರಾತ್ರಿಯಿಂದ ಜ್ವರ ಅಸಾಧ್ಯವಾಗಿ ಬಿಟ್ಟಿದೆ. ಇಡೀ ಮೈಯಲ್ಲಿ ಮೈಲಿ ಎದ್ದಿರುವುದರಿಂದ, ಅವರನ್ನು ಗುರುತಿಸಲೂ ಸಾಧ್ಯವಾಗ ದಂತಾಗಿದೆ. ನೋವಿನಿಂದ ಒದ್ದಾಡುತ್ತಿದ್ದಾರೆ. ನನ್ನ ಕೈಲಿ ಅವರನ್ನು ನೋಡಲೂ ಸಾಧ್ಯವಾಗುತ್ತಿಲ್ಲ. ದಯವಿಟ್ಟು ನೀವು ಏನಾದರೂ ಔಷಧಿಯನ್ನು ಕೊಡಿ."

ಇಷ್ಟು ಹೇಳಿ, ಅವನ ಕಾಲು ಹಿಡಿದುಕೊಳ್ಳಲು ಅವಳು ಮುಂದೆ ಬಂದಳು. ಸ್ವಲ್ಪ ಹಿಂದಕ್ಕೆ ಸರಿದು ಶರತ್ ಹೇಳಿದ: "ನಾನು ಈಗಲೇ ಬರುತ್ತೇನೆ. ನೀನೇನೂ ಚಿಂತಿಸಬೇಡ."

ಮನೆಗೆ ಹೋಗಿ ತನ್ನ ಹೋಮಿಯೋಪಥಿ ಔಷಧಿಗಳ ಪೆಟ್ಟಿಗೆಯನ್ನು ತೆಗೆದುಕೊಂಡು, ಅವನು ಶೀತಲಚಂದ್ರನ ಬಳಿಗೆ ಧಾವಿಸಿದ. ಅವನು ಅಲ್ಲಿ ಕಂಡ ಪರಿಸ್ಥಿತಿಯನ್ನು ವರ್ಣಿಸಲೂ ಸಾಧ್ಯವಾಗುವುದಿಲ್ಲ. ಕೆಲವೇ ದಿನಗಳ ಅನಾರೋಗ್ಯದಿಂದಾಗಿ ವ್ಯಕ್ತಿಯ ಮುಖ ಅದೆಷ್ಟು ಬೀಭತ್ಸವಾಗಬಲ್ಲದು! ಕಣ್ಣು ಸಹ ಕಾಣಿಸದಂತಾಗಿತ್ತು. ಅವನನ್ನು ಗುರುತಿಸುವುದು ನಿಜಕ್ಕೂ ಕಷ್ಟವಾಗಿತ್ತು. ಕಾಮಿನಿ ಹೇಗೋ ತನ್ನ ಮುಖವನ್ನು ಅವನ ವಿಕೃತ ಮುಖದತ್ತ ತಂದು ಹೇಳಿದಳು: "ಇಲ್ಲಿ ನೋಡಿ. ಅಣ್ಣಯ್ಯ ಬಂದಿದ್ದಾರೆ. ಇನ್ನು ಯಾವ ಭಯಕ್ಕೂ ಆಸ್ಪದವಿಲ್ಲ. ಅವರ ಔಷಧಿಯ ಒಂದು ಗುಟುಕು ಕುಡಿದ ಒಡನೆಯೇ ನೋವೆಲ್ಲ ಮಾಯವಾಗಿ ಬಿಡುತ್ತದೆ."

ರೋಗಿಯ ಉತ್ಸಾಹವನ್ನು ಹೆಚ್ಚಿಸುವ ಸಲುವಾಗಿ ಆಕೆ ಶರತ್‌ಬಾಬೂವಿನ ಔಷಧವನ್ನು ತುಂಬ ಹೊಗಳತೊಡಗಿದಳು. ಹೇಗೋ ರೋಗಿಯಿಂದ ಅವನ ಪರಿಸ್ಥಿತಿಯನ್ನು ತಿಳಿದು ತನ್ನ ಅರಿವಿಗೆ ಅನುಗುಣವಾಗಿ ಶರತ್ ಅವನಿಗೆ ಔಷಧಿಯನ್ನು ಕೊಟ್ಟು ಬಂದ. ಆಮೇಲೆ ಹಲವು ದಿನಗಳವರೆಗೆ ಬೆಳಗ್ಗೆ ಸಂಜೆ ಹೋಗಿ ಅವನನ್ನು ನೋಡಿಕೊಂಡು ಬರುತ್ತಿದ್ದ. ಆದರೆ ರೋಗ ಕಡಿಮೆಯಾಗಲೇ ಇಲ್ಲ. ನೋವು ಹೆಚ್ಚುತ್ತಲೇ ಹೋಯಿತು. ಆಮೇಲೆ ಬೇರೆ ವೈದ್ಯರು ಬಂದರು. ಆದರೆ ಯಾರೂ ಶೀತಲಚಂದ್ರನನ್ನು ಉಳಿಸಲಾರದೆ ಹೋದರು. ಆಗ ಕಾಮಿನಿ ಅದೆಷ್ಟು ಹೃದಯವಿದ್ರಾವಕವಾಗಿ ವಿಲಪಿಸಿದ್ದಳು! ದುಃಖದಿಂದ ಅವಳು ಹುಚ್ಚಿಯಂತಾಗಿದ್ದಳು. ಅನಾರೋಗ್ಯದ ಅವಧಿಯಲ್ಲಿ ಆಹಾರ-ನಿದ್ರೆಗಳನ್ನು ತೊರೆದು ಹಗಲೂ ರಾತ್ರಿ ಅವಳು ತನ್ನ ಪ್ರೇಮಿಯನ್ನು ಹೇಗೆ ಸೇವಿಸಿದ್ದಳು! ಯಾವ ಸತಿ-ಸಾಧ್ವಿಯೂ ತನ್ನ ಗಂಡನನ್ನು ಈ ರೀತಿ ಸೇವಿಸಲಾರಳು.

ಶರತ್‌ನ ಹೃದಯ ಕರಗಿತು. ಹೇಗೋ ಅಂತಿಮ ಸಂಸ್ಕಾರವನ್ನು

ಮುಗಿಸಿದ್ದಾಯಿತು. ಮಾರನೆಯ ದಿವಸ ಕಛೇರಿಗೆ ಹೋಗುವಾಗ ನೋಡಿದರೆ, ಕಾಮಿನಿಯ ಮನೆಗೆ ಬೀಗ ಬಿದ್ದಿತ್ತು. ಅವನಿಗೆ ಆಶ್ಚರ್ಯವಾಯಿತು. ಅಕ್ಕಪಕ್ಕದವರನ್ನು ಕೇಳಿದಾಗ, ನೆನ್ನೆ ರಾತ್ರಿಯೇ ಅವಳು ಮನೆಬಿಟ್ಟು ಹೊರಟು ಹೋದಳೆಂದು ತಿಳಿದುಬಂದಿತು. ಎಲ್ಲಿಗೆ ಹೋದಳು ಎಂಬುದು ಯಾರಿಗೂ ಗೊತ್ತಿರಲಿಲ್ಲ.

ಆ ವಸತಿಯಲ್ಲಿ ಹೀಗೆಯೇ ಏನಾದರೂ ಆಗುತ್ತಲೇ ಇರುತ್ತಿತ್ತು. ಕ್ರಮೇಣ ಶರತ್ ಈ ಸಂಗತಿಯನ್ನು ಮರೆತೂಬಿಟ್ಟ. ಮುಂದೆ ಎರಡು ವರ್ಷಗಳು ಹೇಗೆ ಕಳೆದುಹೋದುವೆಂಬುದು ಗೊತ್ತೇ ಆಗಲಿಲ್ಲ. ಈ ಮಧ್ಯೆ ಅವನು ತನ್ನ ನೆಲೆಯನ್ನೂ ಬದಲಾಯಿಸಬೇಕಾಯಿತು. ಹೊಸ ಮೆಸ್‌ನಲ್ಲಿ ಬಿಡಾರ ಹೂಡಿ, ತನ್ನ ಸ್ವಭಾವಕ್ಕನುಗುಣವಾಗಿ ಅವನು ಸುತ್ತಾಡಿಕೊಂಡು ಬರಲು ಹೊರಟ. ದಾರಿಯಲ್ಲಿ ಒಂದು ಹಿಟ್ಟು-ಬೇಳೆ ಅಂಗಡಿ ಇತ್ತು. ಅಲ್ಲಿಗೇ ಹೋದ. ಆಶ್ಚರ್ಯ! ಗಿರಾಕಿಗಳಿಗೆ ಸಾಮಾನುಗಳನ್ನು ತೂಗಿ ಕೊಡುತ್ತಿದ್ದ ಆ ಹೆಂಗಸು ಕಾಮಿನಿಯೇ ಆಗಿದ್ದಳು.

ಕಾಮಿನಿ ಈ ರೂಪದಲ್ಲಿ! ಮೈಮೇಲೆ ಒಡವೆಗಳನ್ನು ಹೇರಿಕೊಂಡಿದ್ದಾಳೆ. ಆರೋಗ್ಯ ಎಂದಿನಂತೆ ನಳನಳಿಸುತ್ತಿದೆ. ಮುಖದ ಮೇಲೆ ಅದೇ ಮಾದಕ ಹಾಸ್ಯ ಕಂಗೊಳಿಸುತ್ತಿದೆ. ಶೀತಲಚಂದ್ರನ ಕಾಮಿನಿ ಇವಳೇ ಏನು? ದುಃಖದಲ್ಲಿ ಹುಚ್ಚಳಾಗಿದ್ದ ಆ ಕಾಮಿನಿ ಇವಳೇ ಏನು?

ಅವನು ಇನ್ನೂ ಯೋಚಿಸುತ್ತಲೇ ಇದ್ದ. ಅಷ್ಟರಲ್ಲಿ ಕಾಮಿನಿ ಅವನನ್ನು ನೋಡಿಬಿಟ್ಟಳು. ಅವಳು ತಲೆಯ ಮೇಲೆ ಮುಂಜೆರಗನ್ನೆಳೆದುಕೊಂಡು, ನಿಧಾನವಾಗಿ ಅವನ ಬಳಿಗೆ ಬಂದು, ಅವನ ಪಾದಗಳಿಗೆ ನಮಸ್ಕರಿಸಿದಳು. ಆಮೇಲೆ ಮುಗುಳ್ನಗುತ್ತ ಕೇಳಿದಳು: "ಅಣ್ಣಯ್ಯ, ಆನಂದವಾಗಿದ್ದೀರಿ ತಾನೆ?"

ಶರತ್ ಹೇಳಿದ: "ಹೌದು, ನಾನು ಚೆನ್ನಾಗಿದ್ದೇನೆ. ನೀನು ಹೇಗಿದ್ದೀಯೇ, ಹೇಳು. ಏನು ಸಮಾಚಾರ? ನೋಡಿದರೆ, ಆನಂದವಾಗಿರುವಂತೆ ಕಾಣುತ್ತದೆ. ಹೌದು ತಾನೆ?"

ಕಾಮಿನಿ ಹೇಳಿದಳು: "ನಿಮ್ಮ ಆಶೀರ್ವಾದದಿಂದ ಚೆನ್ನಾಗಿದ್ದೀನಿ, ಅಣ್ಣಯ್ಯ."

ಹಿಂದಿನ ಸಂಗತಿಗಳೆಲ್ಲ ನೆನಪು ಬಂದಂತೆ ಆಯಿತು. ಕಣ್ಣುಗಳು ತುಂಬಿ ಬಂದುವು. ಗದ್ಗದ ಕಂಠದಿಂದ ಹೇಳಿದಳು: "ಜವರಾಯನ ಕರೆಯನ್ನು ಯಾರು ತಾನೇ ತಪ್ಪಿಸಲು ಸಾಧ್ಯವಾಗುತ್ತದೆ, ಅಣ್ಣಯ್ಯ? ಅವರನ್ನು ಕಾಪಾಡುವ ಸಲುವಾಗಿ ನೀವು ಏನುತಾನೆ ಮಾಡಲಿಲ್ಲ?"

ಮುಂದಕ್ಕೆ ಅವಳಿಗೆ ಮಾತನಾಡಲು ಸಾಧ್ಯವಾಗದೆ ಹೋದಂತೆ ತೋರಿತು. ಸುಧಾರಿಸಿಕೊಳ್ಳಲು ಅವಳಿಗೆ ಕೆಲವು ಕ್ಷಣಗಳೇ ಬೇಕಾದುವು. ಮತ್ತೆ ಶಾಂತಸ್ವರದಲ್ಲಿ ಹೇಳಿದಳು: "ಈತ ಅವರ ಮಾವನ ಕಡೆಯ ಸೋದರ. ಬಹುದಿನಗಳಿಂದ ರಂಗೂನ್‌ನಲ್ಲಿಯೇ ಇದ್ದಾರೆ. ಕಷ್ಟದ ಸಮಯದಲ್ಲಿ ಬಂದು ವಿಚಾರಿಸಿ ಕೊಳ್ಳುತ್ತಿದ್ದರು. ನೀವು ಇವರನ್ನು ನೋಡಿರಬೇಕಲ್ಲವೆ, ಅಣ್ಣಯ್ಯ? ಅವರಿಗೆ ಹುಶಾರಿಲ್ಲದೆ ಇದ್ದಾಗ ಇವರು ಆಗಾಗ್ಗೆ ಬಂದು ಹೋಗಿ ಮಾಡುತ್ತಿದ್ದರು. ಇವರಿಗೆ ಇಬ್ಬರು ಚಿಕ್ಕ ಚಿಕ್ಕ ಮಕ್ಕಳಿದ್ದಾರೆ. ಆ ಬಡಪಾಯಿಗಳ ತಾಯಿ ತೀರಿಕೊಂಡಿದ್ದಾಳೆ.

ಓಹ್, ಆ ಮಕ್ಕಳ ಮುಖವನ್ನು ನೋಡಿಕೊಂಡು ಮತ್ತೆ ನಾನು ಗೃಹಸ್ಥ ಜೀವನದಲ್ಲಿ ಕಾಲಿರಿಸಬೇಕಾಯಿತು. ಇಲ್ಲವಾದರೆ, ನನ್ನೊಬ್ಬಳ ಹೊಟ್ಟೆ ಹೊರೆಯಲು ಏನಾದರೊಂದು ಕೆಲಸ ಹುಡುಕಿಕೊಳ್ಳುತ್ತಿದ್ದೆ. ಈತ ತುಂಬ ಒಳ್ಳೆಯ ವ್ಯಕ್ತಿ, ಅಣ್ಣಯ್ಯ. ಅವರಂತೆಯೇ ಇದ್ದಾರೆ. ನನ್ನನ್ನು ತುಂಬ ಗೌರವಿಸುತ್ತಾರೆ. ತುಂಬ ಪ್ರೀತಿಸುತ್ತಾರೆ."

ತುಂಬ ಹೊತ್ತಿನವರೆಗೆ ಕಾಮಿನಿ ಅದೇನೇನನ್ನು ಹೇಳುತ್ತ ಹೋದಳೋ ಏನೋ. ಈ ಕೂಡಿಕೆಯಲ್ಲಿ ಕಾಮಿನಿ ತುಂಬ ಸುಖವಾಗಿದ್ದಾಳೆಂದು ಶರತ್‌ಗೆ ಅರ್ಥವಾಯಿತು. ತನ್ನ ಹೊಸ ಪ್ರೇಮಿಯನ್ನು ಅವಳು ನಿಜವಾಗಿಯೂ ಪ್ರೀತಿಸುತ್ತಿರುವಂತೆ ತೋರಿತು. ಶೀತಲಚಂದ್ರ ಹಾಸಿಗೆ ಹಿಡಿದಿದ್ದಾಗ ಒಬ್ಬ ವ್ಯಕ್ತಿ ನಿಜವಾಗಿಯೂ ಅಲ್ಲಿಗೆ ಬಂದು ಹೋಗಿ ಮಾಡುತ್ತಿದ್ದನೆಂಬುದು ಅವನಿಗೆ ನೆನಪು ಬಂದಿತು. ಕೇಳಿದ: "ಈತ ಆ ನಿವಾರಣನೇ ಏನು? ಅವನು ಹೆಸರು ನಿವಾರಣ ಎಂದೇ ಇರಬೇಕಲ್ಲವೆ?"

ಕಾಮಿನಿ ನಕ್ಕಳು. ಮುಂದಲೆಯ ಮೇಲಿನ ಸೆರಗನ್ನು ಮತ್ತಷ್ಟು ಎಳೆದುಕೊಂಡು ಹೇಳಿದಳು. "ಅಣ್ಣಯ್ಯ, ನಿಮಗೆ ಎಲ್ಲವೂ ಗೊತ್ತೇ ಇದೆಯಲ್ಲ!"

ಒಂದು ಕ್ಷಣದ ಮಟ್ಟಿಗೆ ಶರತ್ ಯಾವುದೋ ಲೋಕದಲ್ಲಿ ಮುಳುಗಿ ಬಿಟ್ಟವನಂತಾದ. ಶೀತಲಚಂದ್ರನ ಸಂಸಾರದಲ್ಲಿ ಅವನು ಕಾಮಿನಿಯನ್ನು ನೋಡಿದ್ದ. ಅಲ್ಲಿ ಅವಳು ತುಂಬ ಸುಖದಿಂದ್ದಳು. ಆಮೇಲೆ ಶೀತಲಚಂದ್ರನಿಗೆ ಸಿಡುಬು ಎದ್ದಾಗ, ಅವನ ಬಳಿಯಲ್ಲಿ ಕುಳಿತಿದ್ದ ಕಾಮಿನಿಯನ್ನು ಕಂಡಿದ್ದ. ಅನ್ನ-ನಿದ್ದೆಗಳಿಲ್ಲದೆ, ಚಿಂತೆಯಿಂದ ಸೊರಗಿ, ಸುಟ್ಟ ಕಟ್ಟಿಗೆಯಂತೆ ಕಾಂತಿಹೀನಳಾಗಿ ಬಿಟ್ಟಿದ್ದಳು. ಅದೇ ಕಾಮಿನಿಯನ್ನು ಈಗ ನಿವಾರಣನ ಮನೆಯಲ್ಲಿ ಕಂಡಿದ್ದ. ಅವಳ ಅಂಗಾಂಗಗಳಲ್ಲಿ ವಸಂತದ ಸುಳಿಗಾಳಿ ಬೀಸಿದಂತಿತ್ತು. ಮತ್ತಷ್ಟು ಪುಟಕ್ಕಿಟ್ಟಂತಾಗಿ ಅವಳ ರೂಪ-ಲಾವಣ್ಯಗಳು ಅಸಾಮಾನ್ಯವೆಂಬಂತಾಗಿ ಪರಿಣಮಿಸಿದ್ದುವು. ಅವಳು ಶೀತಲಚಂದ್ರನನ್ನು ಪ್ರೀತಿಸುತ್ತಿದ್ದಳು, ನಿವಾರಣನನ್ನು ಪ್ರೀತಿಸುತ್ತಿದ್ದಾಳೆ; ಕಾಂಚನಪಾಡಾದಲ್ಲಿ ತಾನು ತ್ಯಜಿಸಿಬಂದಿದ್ದ ಆ ಗಂಡನನ್ನು ಖಂಡಿತವಾಗಿ ಪ್ರೀತಿಸುತ್ತಿದ್ದಿರಬೇಕು.

ಅವನ ಮನಸ್ಸು ಮತ್ತೆ ಎಲ್ಲೋ ಹೋಯಿತು. ಮತ್ತೊಂದು ಕಥೆ ಅವನಿಗೆ ನೆನಪಾಗತೊಡಗಿತು. ಅವನು ಹೊಸಪೇಟೆಯಲ್ಲಿದ್ದ ಒಬ್ಬ ತರುಣ ಬಂಗಾಳಿ ಯುವಕ. ಅವನು ಹೆಸರು ಏನಾದರೂ ಆಗಿರಬಹುದು. ಸೌಕರ್ಯಕ್ಕಾಗಿ ಅವನನ್ನು ದುಲಾಲ್‌ಚಂದ್ ಎಂದು ಕರೆಯಬಹುದು. ಕಲ್ಕತ್ತೆಯ ಯಾವುದೋ ಒಂದು ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದ. ಕುದುರೆ ಪಂದ್ಯದಲ್ಲಿ ಬಾಜಿಕಟ್ಟುವ ಹುಚ್ಚು ಅವನಿಗಿತ್ತು. ಮದ್ಯಪಾನದ ಹುಚ್ಚಂತೂ ಇದ್ದೇ ಇತ್ತು. ಇದರ ಪರಿಣಾಮವಾಗಿ ಅವನು ತುಂಬ ಸಾಲ ಮಾಡಿಕೊಂಡಿದ್ದ. ಸಾಲ ಕೊಟ್ಟಿದ್ದವರ ಒತ್ತಾಯ ಹಾಗೂ ಕಾಬೂಲಿನ ಪಠಾಣರ ಲಾಠಿಗೆ ಬೆದರಿ ಒಂದು ದಿನ ಅವನು ಬರ್ಮಾಕ್ಕೆ ಓಡಿಬಂದ. ಇದೇ ರೀತಿ ಸಾಲ ಹೊತ್ತುಕೊಂಡು, ಕಛೇರಿಯ ಹಣವನ್ನು ಎತ್ತಿಹಾಕಿ ಅನೇಕ ಸಾಲ-ಸೋಲ ಜಗಳಗಳಿಗೆ ಸಿಲುಕಿಕೊಂಡಿದ್ದ ಅನೇಕ ಬಂಗಾಳಿಗಳು ಬೈರಾಗಿಗಳಾಗಿ ನೇರವಾಗಿ ಬರ್ಮಾಕ್ಕೆ ಬಂದಿಳಿಯುತ್ತಿದ್ದರು. ಏಕೆಂದರೆ, ಇಲ್ಲಿ ಅವರ ಮೇಲೆ

ಮೊಕದ್ದಮೆ ಹೂಡಲು ಸಾಧ್ಯವಾಗುತ್ತಿರಲಿಲ್ಲ. ಹೀಗೆ ಓಡಿಬಂದ ದುಲಾಲ್‌ಚಂದ್ ನೇರವಾಗಿ ಮಾಂಡಲೆಗೆ ಬಂದು, ಅಲ್ಲಿಯ ಮರದ ಕಾರ್ಖಾನೆಯೊಂದರಲ್ಲಿ ಗುಮಾಸ್ತನ ಕೆಲಸ ಮಾಡತೊಡಗಿದ. ಕಾರ್ಖಾನೆ ಒಬ್ಬ ಬರ್ಮೀಯನಿಗೆ ಸೇರಿತ್ತು. ಅವನಿಗೆ ಇಂಗ್ಲಿಷ್ ಭಾಷೆಯಲ್ಲಿ ಲೆಕ್ಕವಿಡಲು ಬರುತ್ತಿರಲಿಲ್ಲ. ದುಲಾಲ್‌ಚಂದನಿಗೆ ಇಂಗ್ಲಿಷ್ ಚೆನ್ನಾಗಿ ಬರುತ್ತಿತ್ತು. ಚೆನ್ನಾಗಿ ಮನಸ್ಸಿಟ್ಟು ಅವನು ಕೆಲಸ ಮಾಡತೊಡಗಿದ. ಮಾಲೀಕನ ಮನಸ್ಸಿಗೆ ಅವನು ತುಂಬ ಹಿಡಿಸಿದ. ಅವನ ಪ್ರಪಂಚ ತುಂಬ ಕಿರಿದಾಗಿತ್ತು. ಅವನು, ಅವನ ಮಗಳು ಹಾಗೂ ಅಳಿಯ. ಅಳಿಯ ಕೆಲಸಕ್ಕೆ ಬಾರದ ಗುಂಪಿಗೆ ಸೇರಿದವನಾಗಿದ್ದ. ಮೋಜುಮಾಡುವುದಷ್ಟೇ ಅವನ ಉದ್ಯೋಗವಾಗಿತ್ತು. ಇದರಿಂದಾಗಿ, ಆ ಮಾಲಿಕ ದುಲಾಲ್‌ಚಂದನ ವಿಷಯದಲ್ಲಿ ಮತ್ತಷ್ಟು ಪ್ರಸನ್ನನಾಗಿದ್ದ. ಅವನೇ ಆತನಿಗೆ ಸಲಹೆಗಾರನೂ ಆಗಿಬಿಟ್ಟ. ಅವನು ಅಲ್ಲಿಯೇ ಇರತೊಡಗಿದ.

ಮಾಲೀಕನ ಮನೆ ತುಂಬ ದೂರದಲ್ಲಿಯೇನೂ ಇರಲಿಲ್ಲ. ರಜೆಯ ದಿನಗಳಲ್ಲಿ ದುಲಾಲ್‌ಚಂದ್ ಮಾಲೀಕನ ಮನೆಯಲ್ಲಿ ಅತಿಥಿಯಾಗಿರುತ್ತಿದ್ದ. ಅಲ್ಲಿ ಕೆಲಸಕ್ಕೆ ಸಂಬಂಧಿಸಿದಂತೆ ತುಂಬ ಮಾತುಕತೆಗಳು ನಡೆಯುತ್ತಿದ್ದುವು. ಜೊತೆಗೆ, ಮಾಲೀಕನ ಮಗಳೊಡನೆ ಹಾಸ್ಯ-ವಿನೋದದ ಮಾತುಗಳೂ ನಡೆಯುತ್ತಿದ್ದುವು. ಬರ್ಮೀ ಹುಡುಗಿಯರು ಭಾರತೀಯ ಹುಡುಗಿಯರಂತೆ ನಾಚಿಕೆಯ ಸ್ವಭಾವದವರೇನೂ ಅಲ್ಲ.

ಕೆಲವು ವರ್ಷಗಳು ಕಳೆದುಹೋದುವು. ಇದ್ದಕ್ಕಿದ್ದಂತೆ ಒಂದು ದಿನ ಆ ಅಳಿಯ ತೀರಿಕೊಂಡ. ಅವನ ವಿಷಯದಲ್ಲಿ ಮೊದಲಿನಿಂದಲೂ ಯಾರಿಗೂ ಸಮಾಧಾನವಿರಲಿಲ್ಲ. ಅವನು ಸತ್ತದ್ದರಿಂದ ಅವರು ಸಮಾಧಾನವಾಗಿ ಉಸಿರಾಡುವಂತೆಯೇ ಆಯಿತು. ಮತ್ತೆ ಇನ್ನೊಂದು ವರ್ಷ ಕೂಡ ಕಳೆದಿರಲಿಲ್ಲ. ಆ ಮಾಲೀಕನೂ ತೀರಿಕೊಂಡ. ಈಗ ಅವನ ಮಗಳೇ ಎಲ್ಲಕ್ಕೂ ವಾರಸುದಾರಳಾಗಿದ್ದಳು. ಆದರೆ, ನಿಜವಾಗಿಯೂ ಮಾಲೀಕನಾಗಿದ್ದವನು ದುಲಾಲ್‌ಚಂದನೇ. ಇದುವರೆಗೂ ಅವನೇ ಎಲ್ಲ ಕೆಲಸಗಳನ್ನೂ ಮಾಡುತ್ತ ಬಂದಿದ್ದ. ಈಗಲೂ ಅವನೇ ಅವೆಲ್ಲವನ್ನೂ ಮಾಡುತ್ತ ಇದ್ದ. ಒಂದೆರಡು ತಿಂಗಳು ಕಳೆಯುವುದರ ಒಳಗಾಗಿ, ತನ್ನನ್ನು ಮದುವೆಯಾಗುವಂತೆ ಆ ಹುಡುಗಿ ಅವನಿಗೆ ಸೂಚಿಸಿದಳು.

ದುಲಾಲ್‌ಚಂದನಿಗೆ ಸ್ವರ್ಗವೇ ಕೈಗೆಟುಕಿದಂತಾಯಿತು. ಅವನು ಕೂಡಲೇ ಒಪ್ಪಿಕೊಂಡ. ಆ ಬರ್ಮೀ ಹೆಣ್ಣಿನ ಪ್ರೀತಿಯಲ್ಲಿ ದುಲಾಲ್‌ಚಂದ್ ಮುಳುಗಿಯೇ ಹೋದಂತೆ ತೋರಿತು. ಈಗಂತೂ ಅವನು ರಾಜನಂತೆಯೇ ಇದ್ದ. ನಿಜವಾದ ರಾಜನಂತೆಯೇ ಆಗಿದ್ದ. ಆ ಹೆಣ್ಣು ಅವನನ್ನು ಒಂದೇ ಮನಸ್ಸಿನಿಂದ ಒಲಿದಳು. ಹೀಗೆ ಸುಖಸಾಗರದಲ್ಲಿ ತೇಲುತ್ತ ಹಲವು ವರ್ಷಗಳೇ ಕಳೆದುಹೋದುವು. ಒಂದು ದಿನ ಇದ್ದಕ್ಕಿದ್ದಂತೆ ದುಲಾಲ್‌ಚಂದ್ ತನ್ನ ಹೆಂಡತಿಯೊಂದಿಗೆ ಹೇಳಿದ: "ಇನ್ನು ಇಲ್ಲಿಯೇ ಇರಬೇಕಾಗಿರುವುದರಿಂದ, ಬಂಗಾಳದಲ್ಲಿ ಇರುವ ಆಸ್ತಿಯನ್ನೆಲ್ಲ ಮಾರಿ ಹಣವನ್ನು ತಂದುಬಿಡುತ್ತೇನೆ. ಅಲ್ಲಿ ವಯಸ್ಸಾದ ತಾಯಿ ಮತ್ತು ವಿಧವೆಯಾಗಿರುವ ತಂಗಿ ಇದ್ದಾರೆ. ಅವರಿಗಾಗಿ ಏನಾದರೂ ಒಂದು ವ್ಯವಸ್ಥೆ ಮಾಡಿಯೇ ತೀರಬೇಕು."

ಅವಳು ತುಂಬ ಸಂತೋಷದಿಂದ ಹೋಗಿ ಬರಲು ಅವನಿಗೆ ಅನುಮತಿ ಕೊಟ್ಟಳು. ದುಲಾಲ್‌ಚಂದ್‌ಗೆ ಮದುವೆಯಾಗಿದ್ದು, ಅವನ ಹೆಂಡತಿ ಇನ್ನೂ ಬದುಕಿದ್ದಾಳೆ ಹಾಗೂ ಅವನಿಗೆ ಮಕ್ಕಳೂ ಇದ್ದಾರೆ ಎಂಬುದು ಅವಳಿಗೆ ಗೊತ್ತಿರಲಿಲ್ಲ. ದುಲಾಲ್‌ಚಂದ್ ತುಂಬ ಎಚ್ಚರಿಕೆಯಿಂದ ಈ ರಹಸ್ಯವನ್ನು ಕಾಪಾಡಿಕೊಂಡು ಬಂದಿದ್ದ. ಗಂಡನನ್ನು ಬೀಳ್ಕೊಡುವಾಗ ಆ ಹೆಣ್ಣು ಅವನಿಗೆ ಮತ್ತೆ ಎರಡು-ಮೂರು-ಸಾವಿರ ರೂಪಾಯಿಗಳನ್ನು ಕೊಟ್ಟಳು. ಜೊತೆಗೆ, ಕಾರ್ಖಾನೆಯ ಹಣವೆಲ್ಲ ಅವನ ಬಳಿಯೇ ಇರುತ್ತಿತ್ತು. ಅವನು ಆ ಲೆಕ್ಕದಿಂದ ಹತ್ತು ಸಾವಿರ ರೂಪಾಯಿಗಳನ್ನು ತೆಗೆದುಕೊಂಡ. ಹೀಗೆ ಹನ್ನೆರಡು ಹದಿಮೂರು ಸಾವಿರ ರೂಪಾಯಿಗಳನ್ನು ಒಟ್ಟುಗೂಡಿಸಿಕೊಂಡು ಅವನು ಕಲ್ಕತ್ತೆಗೆ ತೆರಳಿದ. ಸ್ಟೀಮರ್ ಘಟ್ಟದವರೆಗೆ ಬಂದು ಅವಳು ಅವನನ್ನು ಬೀಳ್ಕೊಟ್ಟಳು. ಹೊರಡುವ ಕ್ಷಣ ಹತ್ತಿರ ಹತ್ತಿರ ಬರುತ್ತಿದ್ದಂತೆ, ಅವಳು ತುಂಬ ವಿಹ್ವಲಳಾಗತೊಡಗಿದ್ದಳು. ತಡೆಯಲಾಗದೆ ಅವಳು ಕಣ್ಣೀರು ಸುರಿಸತೊಡಗಿದಳು. ನೋಡನೋಡುತ್ತಿದ್ದಂತೆಯೇ ಅವಳು ಬಿಕ್ಕಿಬಿಕ್ಕಿ ಅಳತೊಡಗಿದಳು. ಅವಳನ್ನು ಸಮಾಧಾನಪಡಿಸಲು ದುಲಾಲ್‌ಚಂದ್ ತುಂಬ ಪ್ರಯತ್ನಿಸಿದ. "ಒಂದು ತಿಂಗಳ ಒಳಗಾಗಿ ನಾನು ಖಂಡಿತವಾಗಿಯೂ ಹಿಂದಿರುಗಿಬರುತ್ತೇನೆ. ನನ್ನ ಮಾತನ್ನು ನಂಬು. ಅಲ್ಲಿರಲು ನನಗೆ ಮನಸ್ಸಾದರೂ ಹೇಗೆ ಬಂದೀತು" ಎಂದು ಹೇಳಿದ.

"ನಿಮ್ಮನ್ನು ಹೋಗಗೊಡಲು ನನ್ನ ಮನಸ್ಸಿಗೆ ಸ್ವಲ್ಪವೂ ಇಷ್ಟವಿಲ್ಲ. ಆದರೆ ಏನು ಮಾಡಲಿ ? ನೀವು ನಿಮ್ಮ ಕರ್ತವ್ಯವನ್ನು ಮಾಡಿ ಮುಗಿಸಬೇಕಾಗಿದೆಯಲ್ಲ ! ಆದಷ್ಟು ಬೇಗ ಅದನ್ನೆಲ್ಲ ಮುಗಿಸಿಕೊಂಡು ಬಂದುಬಿಡಿ. ನೀವಿಲ್ಲದೆ ನಾನಿರಲಾರೆ" ಎಂದು ಅವಳು ಹೇಳಿದಳು.

ಕೊನೆಗೆ, ಹಡಗು ಹೊರಡುವ ವೇಳೆ ಸಮೀಪಿಸಿತು. ಹೇಗೋ ಅವಳಿಂದ ತನ್ನನ್ನು ಬಿಡಿಸಿಕೊಂಡು ದುಲಾಲ್‌ಚಂದ್ ಹಡಗನ್ನೇರಿದ. ಆಮೇಲೆ, ಕ್ರಮೇಣ ಅವನು ಕಣ್ಣಿಂದ ಮರೆಯಾದ. ಶಾಶ್ವತವಾಗಿ ಅವನು ಅವಳ ಕಣ್ಣಿಂದ ಮರೆಯಾಗಿ ಬಿಟ್ಟ. ಅವನು ಮತ್ತೆ ಬರ್ಮಾಕ್ಕೆ ಹಿಂದಿರುಗಿ ಬರಲೇ ಇಲ್ಲ. ದುಲಾಲ್‌ಚಂದ್ ಎಂಬುದು ಅವನ ನಿಜವಾದ ಹೆಸರೇನೂ ಆಗಿರಲಿಲ್ಲ. ತನ್ನ ಈ ಹೆಂಡತಿಗೆ ಅವನು ಕೊಟ್ಟಿದ್ದ ವಿಳಾಸವೂ ಸುಳ್ಳು ವಿಳಾಸವೇ ಆಗಿತ್ತು. ತಿಂಗಳು ಕಳೆಯಿತು, ವರ್ಷವೂ ಕಳೆಯಿತು. ಮೂರು ನಾಲ್ಕು ವರ್ಷಗಳವರೆಗೆ, ಅವನು ಹಿಂದಿರುಗಬಹುದೆಂಬ ಆಸೆಯನ್ನು ಹೃದಯದಲ್ಲಿ ತುಂಬಿಕೊಂಡಿದ್ದು ಆಕುಲನಯನಗಳಿಂದ, ವ್ಯಾಕುಲಚಿತ್ತದಿಂದ ಅವಳು ಸಮುದ್ರದತ್ತ ನೋಡುತ್ತಲೇ ಇದ್ದಳು. ಆ ನಕಲಿ ವಿಳಾಸದಲ್ಲಿ ಅವನನ್ನು ಪತ್ತೆ ಹಚ್ಚಲೂ ಅವಳು ತುಂಬ ಪ್ರಯತ್ನಿಸಿದಳು. ಆದರೆ, ಅದರಿಂದ ಯಾವ ಲಾಭವೂ ಆಗಲಿಲ್ಲ. ಅವಳು ತುಂಬ ದುಃಖಿತಳಾಗಿ, ಕೊನೆಗೆ ಸಾವನ್ನಪ್ಪಿದಳು.

ಇಂಥ ಘಟನೆಗಳಿಗೆ ಕೊನೆ ಮೊದಲೆಂಬುದೇ ಇರಲಿಲ್ಲ. ಈ ಪಾತ್ರಗಳನ್ನು ಅವನು ತುಂಬ ಹತ್ತಿರದಿಂದ ನೋಡಿದ್ದ. ಇವೇ ಅವನ ಕತೆಗಳಿಗೂ ಮೂಲವಾಗಿ ಪರಿಣಮಿಸಿದುವು. ದುಲಾಲ್‌ಚಂದನ ಈ ಕಥೆ ಕಲೆಗಾರನ ಲೇಖನಿಯ ಮಾಂತ್ರಿಕಸ್ಪರ್ಶವನ್ನು ಪಡೆದು 'ಶ್ರೀಕಾಂತ'ದಲ್ಲಿ (ಎರಡನೆಯ ಭಾಗ) ಅದೆಷ್ಟು

ಮಾರ್ಮಿಕವಾಗಿ ಪರಿಣಮಿಸಿದೆ. ಅವನ ಸಾಹಿತ್ಯದಲ್ಲಿ ಬರ್ಮೀನಾರಿಯರ ಸಂಖ್ಯೆಯೇನೋ ತುಂಬ ಕಮ್ಮಿಯಾಗಿದೆ. ಆದರೆ, ಅವರ ವಿಚಾರದಲ್ಲಿ ಅವನು ಇರಿಸಿಕೊಂಡಿದ್ದ ಶ್ರದ್ಧೆ-ಗೌರವಗಳಿಗೆ ಆಳವನ್ನು ಅಳೆಯಲೂ ಸಾಧ್ಯವಿಲ್ಲ. ಅವರ ಸೌಂದರ್ಯದ ಬಗ್ಗೆ ಮಾತ್ರವೇ ಅವನು ಮುಗ್ಧನಾಗಿರಲಿಲ್ಲ. ಅವರ ಸ್ವತಂತ್ರ ಪ್ರವೃತ್ತಿಯನ್ನು ಕಂಡು ಹೊಟ್ಟೆಕಿಚ್ಚುಪಟ್ಟಿದ್ದೂ ಉಂಟು: "ಮೊಗದೆರೆಯ ಜಂಜಾಟವಿಲ್ಲ, ಗಂಡಸರನ್ನು ಕಂಡೊಡನೆಯೇ ವೇಗವಾಗಿ ಓಡಿಹೋಗುವ ಉದ್ವಿಗ್ನತೆಯಲ್ಲಿ ಎಡವಿಬೀಳುವ ಚಿಂತೆಯಿಲ್ಲ; ನಾಚಿಕೆ ಮತ್ತು ಇಬ್ಬಂದಿಯ ಲವಲೇಶವೂ ಇಲ್ಲ. ಝರಿಯ ಮುಕ್ತ ಪ್ರವಾಹದಂತೆ ಸ್ವಚ್ಛಂದವಾಗಿ ಅಡೆತಡೆಗಳಿಲ್ಲದೆ ಹರಿದುಹೋಗುವ ಸ್ವತಂತ್ರ ಪ್ರವೃತ್ತಿ ಇದು. ಹೆಣ್ಣುಗಳಿಗೆ ಇಷ್ಟೊಂದು ಸ್ವಾತಂತ್ರ್ಯವನ್ನು ಕೊಟ್ಟಿರುವುದರಿಂದಾಗಿ ಆ ನಾಡಿನ ಪುರುಷರು ವಂಚಿತರಾಗಿದ್ದರೇನು ? ಅವರನ್ನು ಮೇಲಿನಿಂದ ಕೆಳಗಿನವರೆಗೂ ಬಂಧಿಸಿಟ್ಟು ಅವರ ಬಾಳನ್ನು ಪಂಗುವಾಗಿಸಿ ನಾವು ಲಾಭ ಪಡೆದಿರುವುದಾದರೂ ಏನು ? ನಮ್ಮ ಸ್ತ್ರೀಯರೂ ಎಂದಾದರೂ ಒಂದು ದಿನ....."

1903ರಿಂದ 1912ರವರೆಗೆ ಬಹುಶಃ ಅವನು ಕತ್ತಲಿನಲ್ಲಿಯೇ ಅಡಗಿದ್ದ. ಆದರೆ, ತನ್ನನ್ನು ಖ್ಯಾತಿಯ ಶಿಖರಕ್ಕೆ ಕೊಂಡೊಯ್ಯುವಂಥ ಬಾಳಿಗೆ ಈ ಅವಧಿಯಲ್ಲಿ ತನ್ನನ್ನು ತಾನೇ ಅವನು ಸಿದ್ಧಪಡಿಸಿಕೊಂಡ. ಬರಹಗಾರನಿಗೆ ಮಾನವನ ಅಧ್ಯಯನ ಅತ್ಯಗತ್ಯವಾದ ಸಿದ್ಧತೆ. ಎಲ್ಲವನ್ನೂ ಕಳೆದುಕೊಂಡಿದ್ದ ಜನಗಳ ನಡುವೆ ಇದ್ದುಕೊಂಡು, ಅವನು ಇದೇ ಅಧ್ಯಯನದಲ್ಲಿ ತೊಡಗಿದ್ದ. ಅವರೊಡನೆ ತನ್ನನ್ನು ಸಂಪೂರ್ಣವಾಗಿ ಒಂದಾಗಿಸಿಕೊಂಡು, ಅವನು ಅವರ ಭಾವನೆಗಳನ್ನು ಅಧ್ಯಯನ ಮಾಡಿದ್ದ; ತನ್ನ ಬಾಳಿನ ಉದ್ದೇಶದ ದಿಕ್ಕನ್ನು ಅರಸಿಕೊಂಡಿದ್ದ.

## 16

'ಯಮುನಾ'ದ ಕಛೇರಿಯಲ್ಲಿ ನಡೆಯುತ್ತಿದ್ದ ಸಾಹಿತ್ಯಗೋಷ್ಠಿಗಳಲ್ಲಿಯೇ ಅವನಿಗೆ ಆ ಯುಗದ ಅನೇಕ ಸಾಹಿತಿಗಳ ಪರಿಚಯ ಆಯಿತು. ಅವರಲ್ಲಿ ಹೇಮೆಂದ್ರ ಕುಮಾರ್ ರಾಯ್ ಅವರೂ ಒಬ್ಬರು. ಅವರು 'ಯಮುನಾ'ದ ಸಂಪಾದಕರಾಗಿದ್ದ ಫಣೀಂದ್ರನಾಥ ಪಾಲ್ ಅವರಿಗೆ ನೆರವು ನೀಡುತ್ತಿದ್ದರು. ಒಂದು ದಿನ ಸಂಜೆ ಅವರು ಲೇಖನಗಳನ್ನು ಓದುತ್ತಿದ್ದಾಗ, ಶರತ್ ಅಲ್ಲಿಗೆ ಬಂದ. ಇದಕ್ಕೆ ಮೊದಲು ಅವರಿಬ್ಬರಿಗೂ ನೇರವಾದ ಪರಿಚಯ ಆಗಿರಲೇ ಇಲ್ಲ. ಹೇಮೇಂದ್ರರು ಕಣ್ಣೆತ್ತಿ ನೋಡಿದರು. ಸಂಪೂರ್ಣವಾಗಿ ಸಾಧಾರಣವೆನ್ನಬಹುದಾದ ಮುಖ; ಸಾಮಾನ್ಯವಾದ, ತೆಳ್ಳಗಿನ ಒಣಗಿಕೊಂಡಿದ್ದ, ರೋಗಿಷ್ಟ ಶರೀರ. ಕಪ್ಪು ಬಣ್ಣದ ಆ ವ್ಯಕ್ತಿ ಚಪ್ಪಲಿಯನ್ನು ಮೆಟ್ಟಿಕೊಂಡು, ಕುರೂಪಿಯಾಗಿದ್ದ ಕಂತ್ರಿನಾಯಿಯೊಂದನ್ನು ಹಿಡಿದುಕೊಂಡು ತನ್ನೆದುರು ನಿಂತಿದ್ದಾನೆ. ತಲೆಯಲ್ಲಿ ಬೆಳೆದಿರುವ, ಎಣ್ಣೆ ಕಾಣದ ಕೆದರಿದ ಕೂದಲು, ತೆಳುವಾದ ಚಿಕ್ಕ ಗಡ್ಡ, ಬಟ್ಟೆಗಳೋ ಅರ್ಧಂಬರ್ಧ ಕೊಳೆಯಾಗಿವೆ. ಉಪೇಕ್ಷೆಯ ಭಾವದೊಂದಿಗೆ ಅವರು ಕೇಳಿದರು: "ಯಾರು ಬೇಕು ?"

"ಫಣೀಂದ್ರ ಬಾಬು."

"ಅವರಿನ್ನೂ ಬಂದಿಲ್ಲ."

"ಹಾಗಾದರೆ, ನಾನಿಲ್ಲಿ ಸ್ವಲ್ಪ ಹೊತ್ತು ಕುಳಿತಿರಬಹುದೆ ?"

ಇವನು ಯಾವುದೋ ಕಛೇರಿಯ ಜವಾನನಾಗಿರಬೇಕೆಂದು ಹೇಮೇಂದ್ರರು ಭಾವಿಸಿದರು. ಕುರ್ಚಿ ಇರುವುದು ಸಾಹಿತಿಗಳಿಗಾಗಿಯಲ್ಲವೆ! ಆದ್ದರಿಂದ, ಏನೂ ಹೇಳಿಕೇಳಿ ಮಾಡದೆ, ಒಂದು ಬೆಂಚಿನತ್ತ ಅವರು ಕೈ ತೋರಿದರು. ಆಮೇಲೆ, ತಮ್ಮ ಕೆಲಸದಲ್ಲಿ ಅವರು ಮಗ್ನರಾದರು. ಸಾಕಷ್ಟು ಹೊತ್ತು ಹಿಡಿಯಿತು. ಶರತ್ ಆ ನಾಯಿಮರಿಯೊಂದಿಗೆ ಆಟವಾಡುತ್ತ ಇದ್ದ. ಒಮ್ಮೆ ಆ ನಾಯಿ ಹೇಮೇಂದ್ರ ಬಾಬೂಗಳ ಬಳಿಗೆ ಹೋಗಿ, ಅವರ ಪಂಚೆಯನ್ನು ಹಿಡಿದುಕೊಳ್ಳಲು ಪ್ರಯತ್ನಿಸಿತು. ಅವರು ಅಸಹ್ಯಪಟ್ಟುಕೊಂಡು ಹೇಳಿದರು: "ಛೀ, ಛೀ, ಕಛೇರಿಯಲ್ಲಿ ಈ ಕಂತ್ರಿ ನಾಯಿ...."

ಅಷ್ಟು ಹೊತ್ತಿಗೆ ಸರಿಯಾಗಿ ಫಣೀಂದ್ರ ಬಾಬುಗಳು ಒಳಗೆ ಬಂದರು. ಶರತ್‌ನನ್ನು ಕಂಡು ಅವರು ವ್ಯಾಕುಲಗೊಂಡರು. "ಇದೇನು ಶರತ್‌ಬಾಬೂ! ಇಲ್ಲಿ ಬೆಂಚಿನ ಮೇಲೆ ಏಕೆ ಕುಳಿತುಕೊಂಡಿದ್ದೀರಿ ?" ಎಂದು ಕೇಳಿದರು.

ಬೆರಳಿನಿಂದ ಹೇಮಂದ್ರರನ್ನು ತೋರಿಸುತ್ತಾ ಹಾಗೂ ಮುಗುಳ್ನಗೆಯನ್ನು ಚೆಲ್ಲುತ್ತಾ ಶರತ್ ಹೇಳಿದ: "ನಾನು ಇಲ್ಲಿಯೇ ಕುಳಿತಿರಬೇಕೆಂದು ಅವರು ಆಜ್ಞೆ ಮಾಡಿದರು."

ಫಣಿಬಾಬೂ ಹೇಳಿದರು: "ಇಲ್ಲ, ಇಲ್ಲ. ದಯವಿಟ್ಟು ಈ ಕುರ್ಚಿಯಲ್ಲಿ ಕುಳಿತುಕೊಳ್ಳಿ. ಇದೇನು ಹೇಮೇಂದ್ರ ಬಾಬುಗಳೆ, ಶರತ್‌ಬಾಬೂಗಳನ್ನು ಗುರುತಿಸಲು ನಿಮಗೆ ಸಾಧ್ಯವಾಗಲಿಲ್ಲವೆ ?"

ಅಪ್ರತಿಭರಾಗಿ ಹೇಮೇಂದ್ರರೆಂದರು: "ದಯವಿಟ್ಟು ಕ್ಷಮಿಸಿ. ನಾನು ಹೇಗೆ ತಾನೇ ಗುರುತಿಸಲಿ ? ನಾನೆಂದೂ ಇವರನ್ನು ನೋಡಿಯೇ ಇರಲಿಲ್ಲವಲ್ಲ! ಯಾವನೋ ಕಛೇರಿಯ ಜವಾನ ಇದ್ದಿರಬೇಕೆಂದು ಭಾವಿಸಿದೆ."

ಈ ಮಾತನ್ನು ಕೇಳಿ ಶರತ್ ಗಟ್ಟಿಯಾಗಿ ನಕ್ಕ. ಆದರೆ, ಈ ಪ್ರಸಂಗದ ತರುವಾಯ ಅವರಿಬ್ಬರಲ್ಲಿ ಆಳವಾದ ಸ್ನೇಹ ಉಂಟಾಯಿತು. ಸಾಹಿತ್ಯ ಗೋಷ್ಠಿಗಳಿಗೆ ಇಬ್ಬರೂ ಜೊತೆಜೊತೆಯಾಗಿ ಹೋಗಿ ಬಂದು ಮಾಡುತ್ತಿದ್ದರು. ಕಥೆಗಳನ್ನು ಹೇಳುವಾಗ ಶರತ್ ಒಂದೆರಡು ಬಾರಿ ಅಫೀಮಿನ ದೊಡ್ಡ ಗುಳಿಗೆಗಳನ್ನು ಬಾಯಿಗೆ ಎಸೆದುಕೊಳ್ಳುತ್ತಿದ್ದ. ಭಯಮಿಶ್ರಿತ ಆತುರದಿಂದ ಒಮ್ಮೆ ಹೇಮೇಂದ್ರರು ಕೇಳಿದರು: "ನೀವು, ಇದೇನು ಮಾಡುತ್ತಿದ್ದೀರಿ ?"

ಶರತ್ ಉತ್ತರಿಸಿದ: "ಅಫೀಮ್ ತಿನ್ನುತ್ತೇನೆ. ನೀವೂ ಸುಂದರವಾಗಿ ಬರೆಯಬೇಕೆಂದಿದ್ದರೆ, ನನ್ನಂತೆಯೇ ಅಫೀಮ್ ತಿನ್ನಿ."

ಹೇಮೇಂದ್ರರು ಹೇಳಿದರು: "ದಯವಿಟ್ಟು ಕ್ಷಮಿಸಿ ಸ್ವಾಮಿ. ಇಂಥ ಒಂದೇ ಒಂದು ಗುಳಿಗೆಯನ್ನು ನುಂಗಿದರೂ ಸಾಕು. ಆಮೇಲೆ ಸುಂದರವಾಗಿ ಬರೆಯಲು ಸಮಯವೇ ಸಿಕ್ಕುವುದಿಲ್ಲ. ಸುದ್ದಿ ಸಿಕ್ಕಿದ ಕೂಡಲೇ ಯಮದೂತರು ಓಡೋಡಿ ಬರುತ್ತಾರೆ."

ಆದರೆ, ಶರತ್‌ಗೆ ಈ ವಿಷಯದ ಬಗ್ಗೆ ಯಾವ ಚಿಂತೆಯೂ ಇರಲಿಲ್ಲ. ಆಗಾಗ್ಗೆ ಅವನು ಹತ್ತು ಹನ್ನೆರಡು ಘಂಟೆಗಳವರೆಗೆ ಬಳಲಿಕೆಯೇ ಇಲ್ಲದೆ ಕಥೆ ಹೇಳಿಕೊಂಡು ಹೋಗುತ್ತಿದ್ದ. ರಾತ್ರಿ ಎರಡು-ಮೂರು ಘಂಟೆಗೆ ಮನೆಗೆ ಹಿಂದಿರುಗುತ್ತಿದ್ದ. ಕೆಟ್ಟ ಹೆಸರಿನ ಗಲ್ಲಿಯೊಂದರಲ್ಲಿ ವಾಸಮಾಡುತ್ತಿದ್ದ. ಕೆಲವೊಮ್ಮೆ ಹೇಮೇಂದ್ರರು ಅವನ ಜೊತೆಯಲ್ಲಿ ಬರುತ್ತಿದ್ದರು. ಆಗ ಹಾದಿ ಸವೆಸುವಾಗ ಶರತ್ ತನ್ನ ಬಾಳಿನ ವಿಚಿತ್ರ ಕಥೆಯನ್ನು ಹೇಳುತ್ತ ಹೋಗುತ್ತಿದ್ದ. ಹೇಮೇಂದ್ರರು ಆಶ್ಚರ್ಯದಿಂದ ಅವನತ್ತ ನೋಡುತ್ತಿದ್ದರು ಹಾಗೂ ಎಂಥ ಸರಳ ಸ್ವಭಾವದ ವ್ಯಕ್ತಿ ಈತ; ಏನೊಂದನ್ನೂ ಮುಚ್ಚಿಡುವುದಿಲ್ಲವಲ್ಲ ಎಂದು ಯೋಚಿಸುತ್ತಿದ್ದರು. ಶರತ್ ಒಮ್ಮೆ ಹೇಳಿದ: "ಹೇಮೇಂದ್ರ, ನಾನು ಸೇವಿಸದೆ ಇರುವ ಮಾದಕವಸ್ತು ಯಾವುದೂ ಇಲ್ಲ. ನಾನು ಕಾಲಿರಿಸದೆ ಇದ್ದಂಥ ಕೆಟ್ಟ ಜಾಗ ಯಾವುದೂ ಇಲ್ಲ. ಇಷ್ಟೆಲ್ಲ ಮಾಡಿಯೂ ನಾನು ನನ್ನ ವಿಷಯದಲ್ಲಿ ಸೋಲನ್ನೊಪ್ಪಲಿಲ್ಲವೆಂಬುದನ್ನು ಕುರಿತು ಯೋಚಿಸಿದಾಗ ಅನೇಕ ವೇಳೆ ಮೂಕನಂತಾಗಿ ಬಿಡುತ್ತೇನೆ. ನನ್ನ ಹೃದಯದ ಒಳಗಿದ್ದ ಮಾನವ ಸದಾ ನಿರ್ಮುಕ್ತನಾಗಿದ್ದ."

ಆದರೆ, ಜನ ಸಾಮಾನ್ಯರು ಇಷ್ಟು ಆಳವಾಗಿ ಯಾರದಾದರೂ ಹೃದಯದಲ್ಲಿ ಇಣುಕಿ ನೋಡಬಲ್ಲರೆ ? ರಂಗೂನಿನಲ್ಲಿ ಆಗಿದ್ದಂತೆಯೇ ಕಲ್ಕತ್ತೆಯಲ್ಲಿಯೂ ಅವನ ಸುತ್ತ ಅಪವಾದಗಳ ಬಲೆ ಹರಡಿಕೊಳ್ಳುತ್ತಲೇ ಹೋಯಿತು. ಜನರು ಅವನನ್ನು, ಚರಿತ್ರಹೀನ, ವೇಶ್ಯಾಗಾಮಿ, ಕುಡುಕ ಎಂದೆಲ್ಲ ಜರಿದರು. ಒಮ್ಮೆ ಹೀಗಾಯಿತು. ಸಂಜೆಯ ಮಳೆಯಿಂದಾಗಿ ಕಲ್ಕತ್ತೆಯ ಎಲ್ಲ ರಸ್ತೆಗಳೂ ನದಿಗಳಂತೆ ನೀರಿನಿಂದ ತುಂಬಿ ನಿಂತುವು. ಅಂದು ಗೋಷ್ಠಿ ನಡೆಯಲಿಲ್ಲ. ಒಂಬತ್ತು ಘಂಟೆಯ ಹೊತ್ತಿಗಾಗಲೇ ರಸ್ತೆಗಳೆಲ್ಲ ನಿರ್ಜನವಾಗಿ ಪರಿಣಮಿಸಿದ್ದುವು. ಶರತ್ ಮತ್ತು ಹೇಮೇಂದ್ರರು ಮನೆಗೆ ಹಿಂದಿರುಗತೊಡಗಿದಾಗ ರಸ್ತೆಯಲ್ಲಿ ಮಂಡಿಯುದ್ದ ನೀರು ನಿಂತಿತ್ತು. ಆಕಸ್ಮಿಕವಾಗಿ ಒಬ್ಬ ಯುವತಿ ಮುಂದೆ ಮುಂದೆ ಹೋಗುತ್ತಿದ್ದಳು. ಶರತ್ ನಿಧಾನವಾಗಿ ಹೆಜ್ಜೆಹಾಕುತ್ತಿದ್ದ. ನೀರಿನಲ್ಲಿ ವೇಗವಾಗಿ ಚಲಿಸಲು ಸಾಧ್ಯವಾಗುವುದಿಲ್ಲವಷ್ಟೆ. ಇವರು ಆ ಹೆಣ್ಣಿನತ್ತ ಕಣ್ಣೆತ್ತಿಯೂ ನೋಡಿರಲಿಲ್ಲ. ಆದರೂ, ಮಾರನೆಯ ದಿವಸ ಕಛೇರಿಗೆ ಹೋದೊಡನೆಯೇ ನೆನ್ನೆ ರಾತ್ರಿ ಶರತ್ ಮತ್ತು ಹೇಮೇಂದ್ರರು ವೇಶ್ಯೆಯೊಬ್ಬಳ ಹಿಂದಹಿಂದೆ ಅಲೆಯುತ್ತಿದ್ದರು ಎಂಬ ಕಿಂವದಂತಿ ಎಲ್ಲ ಕಡೆಯೂ ಹರಡಿಕೊಂಡಿದ್ದುದು ಶರತ್‌ನ ಅರಿವಿಗೆ ಬಂದಿತು.

ಈ ವದಂತಿ ಕಿವಿಗೆ ಬಿದ್ದಾಗ ಹೇಮೇಂದ್ರರು ಹಾಸ್ಯದಲ್ಲಿ ಅದನ್ನು ಹಾರಿಸಿಬಿಟ್ಟರು. ಆದರೆ ಶರತ್, ತುಂಬ ಕೋಪಾವಿಷ್ಟನಾದ: "ಛಿಃ, ಛಿಃ, ಇಂಥ ಹತಭಾಗ್ಯರೂ ಇದ್ದಾರಲ್ಲ! ಅಕಾರಣವಾಗಿಯೇ ನಮ್ಮ ಹೆಸರಿನ ಮೇಲೆ ಇಷ್ಟು ಭಾರಿ ಅಪವಾದವನ್ನು ಹೊರಿಸಿಬಿಟ್ಟರು. ನಾನೋ ಮುದುಕ, ಹೇಮೇಂದ್ರ ಇನ್ನೂ ಹುಡುಗ. ಸ್ವಲ್ಪವಾದರೂ ಯೋಚಿಸಬೇಕಿತ್ತು."

ಆಗ ಅವನ ಮುಖಭಂಗಿಯನ್ನು ನೋಡಿದ್ದರೆ ಈ ಕಿಂವದಂತಿಯನ್ನು ಹರಡಿದ ವ್ಯಕ್ತಿ ಏನಾದರೂ ಎದುರಿಗೆ ಇದ್ದಿದ್ದರೆ ಅವನ ಕೈಕಾಲು ಮುರಿದು ಹಾಕುವ ಸಾಧ್ಯತೆ ಇದ್ದೇ ಇತ್ತು ಎಂಬಂತೆ ತೋರುತ್ತಿತ್ತು. ವೇಶ್ಯೆಯರ ಮನೆಗಳಲ್ಲಿಯೇ ಹೋಗಿ

ಇರುತ್ತಿದ್ದಂಥ ವ್ಯಕ್ತಿ ಇಂಥ ಅಪವಾದದ ಬಗ್ಗೆ ಇಷ್ಟೊಂದು ತಲೆ ಕೆಡಿಸಿಕೊಳ್ಳುವುದು ಆಶ್ಚರ್ಯದ ಸಂಗತಿಯಲ್ಲವೆ ? ಈ ಘಟನೆಯ ವರ್ಣನೆಯಲ್ಲಿ ಅತಿಶಯೋಕ್ತಿಯೂ ಇರಬಹುದು. ಆದರೆ, ಸದಾಚಾರಿಯಾಗಬೇಕೆಂಬ ಬಯಕೆ ಅವನಿಗೆ ಅರಿವಿಲ್ಲ ದಂತೆಯೇ ಅವನ ವೈರಾಗ್ಯಶೀಲ ಮನಸ್ಸನ್ನು ಕ್ರಮೇಣ ಆವರಿಸಿಕೊಳ್ಳತೊಡಗಿತ್ತು ಎಂಬುದಂತೂ ನಿಜ. ಅವನು ದುಸ್ಸಾಹಸಿಯಾಗಿದ್ದನೆಂಬುದು ನಿಜ; ಆದರೆ ಬಂಡುಕೋರನೇನೂ ಆಗಿರಲಿಲ್ಲ. ಆದ್ದರಿಂದಲೇ ಈ ವಿರೋಧಾಭಾಸವನ್ನು ಕಾಣುತ್ತೇವೆ.

ಅವನಿಗೆ ಪರಿಚಯವಾದ ಇನ್ನೊಬ್ಬ ಮಹತ್ವದ ವ್ಯಕ್ತಿಯೆಂದರೆ 'ಭಾರತ ವರ್ಷ'ದ ಸಂಪಾದಕರೂ ಪ್ರಸಿದ್ಧರೂ ಆಗಿದ್ದ ರಾಯ್ ಬಹಾದುರ್ ಜಲಧರ್ ಸೇನ್ ಅವರು. ಅವರೇ ಸ್ವತಃ ಗೆಳೆಯನೊಬ್ಬನ ಜೊತೆಯಲ್ಲಿ, ಅವನನ್ನು ಭೇಟಿಯಾಗಲು 'ಯಮುನಾ' ಪತ್ರಿಕೆಯ ಕಛೇರಿಗೆ ಬಂದಿದ್ದರು. ಶರತ್‌ನನ್ನು ಪರಿಚಯಿಸಿಕೊಡುವ ದೃಷ್ಟಿಯಿಂದ ಫಣೀಂದ್ರರು ಏನೋ ಹೇಳಬೇಕೆಂದಿದ್ದಾಗ, ಅವನು ಹೇಳಿದ: "ಅವರ ನನ್ನ ಪರಿಚಯ ತುಂಬ ಹಳೆಯದು."

ಆಶ್ಚರ್ಯಚಕಿತರಾಗಿ ಜಲದರ್‌ಸೇನರು ಹೇಳಿದರು: "ನನಗೇನೂ, ಏನೂ ನೆನಪಾಗುತ್ತಿಲ್ಲ."

ಶರತ್ ಹೇಳಿದ: " 'ಕುಂತಲೀನ ಪ್ರಶಸ್ತಿ ಸ್ಪರ್ಧೆ'ಗೆ ಕೆಲವು ವರ್ಷಗಳ ಹಿಂದೆ ತಾವು ತೀರ್ಪುಗಾರರಾಗಿದ್ದರೆಂಬುದೂ, ಅದರಲ್ಲಿ 'ಮಂದಿರ' ಎಂಬ ಕಥೆಗೆ ಮೊದಲ ಬಹುಮಾನ ಬಂದಿತ್ತೆಂಬುದೂ ತಮಗೆ ನೆನಪಿರಬೇಕು."

ಜಲಧರ್ ಸೇನ್ ಹೇಳಿದರು: "ಹೌದು, ಹೌದು, ನೆನಪಿದೆ. ಅದಕ್ಕೆ ಸುಮಾರು ನೂರೈವತ್ತು ಕಥೆಗಳು ಬಂದಿದ್ದುವು. ಅವುಗಳಲ್ಲಿ 'ಮಂದಿರ' ನನಗೆ ತುಂಬ ಹಿಡಿಸಿತ್ತು. 'ಈ ಲೇಖಕ ಬರೆಯುತ್ತ ಇದ್ದರೆ, ಮುಂದೊಂದು ದಿನ ಯಶಸ್ವಿಯಾಗುತ್ತಾನೆ' ಎಂದು ಅದರ ಮೇಲೆ ನಾನು ಬರೆದಿದ್ದೆ. ಆದರೆ, ಆ ಕಥೆಯನ್ನು ಬರೆದಿದ್ದಾತ ಭಾಗಲಪುರದ ಸುರೇಂದ್ರನಾಥ ಗಂಗೋಪಾಧ್ಯಾಯ ಎಂಬಾತ."

ನಗುತ್ತ ಶರತ್ ಹೇಳಿದ: "ನಾನೇ ಆ ಕಥೆಯನ್ನು ಬರೆದಿದ್ದೆ. ಆದರೆ, ನನ್ನ ಹೆಸರು ಕೊಡಲು ಸಂಕೋಚವಾಗಿತ್ತು. ಆದ್ದರಿಂದ ಮಾವ ಸುರೇಂದ್ರನಾಥನ ಹೆಸರು ಕೊಟ್ಟಿದ್ದೆ. ಹೀಗಾಗಿ ನನ್ನ ನಿಮ್ಮ ಪರಿಚಯ ಸಾಕಷ್ಟು ಹಳೆಯದೇ ಆಯಿತಲ್ಲವೆ ?"

ಜಲಧರ್ ಸೇನ್ ಹೇಳಿದರು: "ಇದು ನನಗೆ ಕಡಿಮೆ ಗೌರವದ ಸಂಗತಿಯೇನೂ ಅಲ್ಲ. ನಾನು ಅಂದೇ ರತ್ನವನ್ನು ಗುರುತಿಸಿಬಿಟ್ಟಿದ್ದೆ."

ಈ ಭೇಟಿ ಬಹುಬೇಗ ಗಾಢವಾದ ಗೆಳೆತನವಾಗಿ ಮಾರ್ಪಟ್ಟಿತು. ಬೇರೆಲ್ಲರಿಗಿಂತ ಹೆಚ್ಚಾಗಿ ಶರತ್‌ನ ಸಾಹಿತ್ಯ ಸೃಷ್ಟಿಯ ಶ್ರೇಯಸ್ಸು ಯಾರಿಗಾದರೂ ದೊರೆಯಬೇಕಾಗಿದ್ದರೆ ಅದು ಈ ಜಲಧರ್ ಸೇನ್ ಅವರಿಗೇ. ಬಹು ದಿನಗಳ ಬಳಿಕ[1] ಶರತ್‌ನೇ ಈ ಮಾತನ್ನು ಒಪ್ಪಿಕೊಂಡ: "ಜಲಧರ್ ಸೇನ್ ಅವರು ನನ್ನ

1. 1933

ಕೃತಿಗಳಿಗಾಗಿ ಇಷ್ಟೊಂದು ಹೊಡೆದಾಟ ನಡೆಸದೆ ಇದ್ದಿದ್ದರೆ, ಗುರುವಿನಂತೆ ಮೇಲಿಂದ ಮೇಲೆ ನನ್ನನ್ನು ಒತ್ತಾಯಪಡಿಸದೆ ಇದ್ದಿದ್ದರೆ ನನ್ನಂಥ ಸೋಮಾರಿಯ ಅರ್ಧದಷ್ಟೇನು ಕಾಲುಭಾಗದಷ್ಟು ಕೃತಿಗಳೂ ಬೆಳಕು ಕಾಣುತ್ತಿರಲಿಲ್ಲ."

ಈ ಅವಧಿಯಲ್ಲಿಯೇ ಅವನು ರವೀಂದ್ರನಾಥರನ್ನು ಭೇಟಿಯಾದ. ಅವನು ಅವರ ಮಹಾಭಕ್ತನಾಗಿದ್ದ. ರವೀಂದ್ರನಾಥರಿಗೂ ಶರತ್‌ನ ಪ್ರತಿಭೆಯ ಪರಿಚಯವಾಗಿತ್ತು. ಈಚೆಗೆ ತಾನೆ ಅವರು ಅವನ 'ಪಂಡಿತ ಮೋಶಾಯ್' ಕಥೆಯನ್ನು ಓದಿದ್ದರು.[1] ಈ ಬಗ್ಗೆ ಅಸಿತಕುಮಾರ್ ಹಲ್ದಾರ್ ಅವರು ಹೀಗೆ ಬರೆದಿದ್ದಾರೆ: " 'ಪಂಡಿತ್ ಮೋಶಾಯ್' ಅನ್ನು ಓದಿದ ಮೇಲೆ ಅವರು ನನ್ನೊಂದಿಗೆ ಹೀಗೆ ಹೇಳಿದ್ದರು - 'ನಾನು ಬಹುದಿನಗಳಿಂದ ಅಲ್ಲಿಯದು ಇಲ್ಲಿಯದನ್ನು ಓದುವುದನ್ನು ಬಿಟ್ಟು ಬಿಟ್ಟಿದ್ದೇನೆ. ಆದರೆ, ಈ ಕೃತಿಯ ಲೇಖಕನ ಲೇಖನಿ ನನಗೆ ಮರುಭೂಮಿಯಲ್ಲಿನ ಹಚ್ಚಹಸುರಿನ ನೆಲೆಯಂತೆ ತೋರುತ್ತದೆ.' ಈ ಮಾತು ನನಗೆ ಚೆನ್ನಾಗಿ ನೆನಪಿದೆ.

"ಆಮೇಲೆ ಸ್ವತಃ ಅವರೇ ಶರತ್‌ನನ್ನು ಭೇಟಿಯಾಗಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದರು. ಕಲ್ಕತ್ತೆಗೆ ಹಿಂದಿರುಗಿದ ಮೇಲೆ, ಒಂದು ದಿವಸ ಅವರೆದುರಿನಲ್ಲಿ, ನಾಚುತ್ತಿದ್ದ ಶರತ್‌ಚಂದ್ರರನ್ನು ತಂದು ನಿಲ್ಲಿಸಿದಾಗ ಒಂದು ವಿಚಿತ್ರ ದೃಶ್ಯವೇ ಎದುರಾಯಿತು."

ಆ ಮೊದಲ ಭೇಟಿಯಲ್ಲಿ ಗುರು-ಶಿಷ್ಯರ ನಡುವೆ ಏನು ಮಾತುಕತೆ ನಡೆಯಿತು ಎಂಬುದು ಯಾರಿಗೂ ಗೊತ್ತಿಲ್ಲ. ಕವಿ ಗುರುವಿನ ಆ ಗರಿಮಾಮಯ ರೂಪ, ಗೌರವರ್ಣ, ನೀಳವಾದ ಗಡ್ಡ, ಅಳ್ಳಕವಾದ ಬಟ್ಟೆಬರೆಗಳು, ಹಾಗೂ ಕಂಚಿನ ಕಂಠ ಇವುಗಳನ್ನು ಕಂಡು, ಖಂಡಿತವಾಗಿಯೂ ಇವರು ಬೇರೊಂದು ಲೋಕದ ಜೀವಿಯೆಂದು ಅವನು ಭಾವಿಸಿದ್ದಿರಬಹುದು. ಅವರ ಈ ರೂಪದ ಬಗ್ಗೆ ಜೀವನ ಪರ್ಯಂತ ಅವನು ಆಶ್ಚರ್ಯಚಕಿತನಾಗಿಯೇ ಇದ್ದ.

ಅವನ ಆರ್ಥಿಕ ಸ್ಥಿತಿಯೇನೂ ಚೆನ್ನಾಗಿರಲಿಲ್ಲ. ಹೀಗಾಗಿ 'ರಾಮೇರ್ ಸುಮತಿ', 'ಪಥ ನಿರ್ದೇಶ' ಹಾಗೂ 'ಬಿಂದೂರ್ ಛೇಲೆ' ಎಂಬ ಮೂರು ಕಥೆಗಳ ಹಾಗೂ 'ಬಿರಾಜ್ ಬಹೂ' ಕಾದಂಬರಿಯ ಪ್ರಕಟಣೆಯ ಎಲ್ಲ ಹಕ್ಕುಗಳನ್ನೂ ಹರಿದಾಸ ಚಟ್ಟೋಪಾಧ್ಯಾಯರಿಗೆ ಮಾರಿಬಿಟ್ಟ. ಈ ಎರಡೂ ಪುಸ್ತಕಗಳಿಗೆ ಸಂಬಂಧಿಸಿದಂತೆ ಅವನಿಗೆ ಒಟ್ಟು 300 ರೂಪಾಯಿಗಳು ದೊರೆತುವು. ಅಂದಿನ ದೃಷ್ಟಿಯಲ್ಲಿ ಈ ವ್ಯವಹಾರ ಅಂಥ ಕೆಟ್ಟ ವ್ಯವಹಾರವೇನೂ ಆಗಿರಲಿಲ್ಲ.

ಇದೇ ಅವಧಿಯಲ್ಲಿ ಫಣೀಂದ್ರನಾಥರ ಮೂಲಕ 'ಪರಿಣೀತಾ' 'ಪಂಡಿತ್‌ಜೀ' 'ಚಂದ್ರನಾಥ', 'ಕಾಶೀನಾಥ', 'ನಾರಿಯ ಮೌಲ್ಯ', ಮತ್ತು 'ಚರಿತ್ರಹೀನ' ಕೃತಿಗಳ ಪ್ರಕಟಣೆಯ ಹಕ್ಕುಗಳನ್ನು ಎಂ.ಸಿ. ಸರ್ಕಾರ್ ಅಂಡ್ ಸನ್ಸ್ ಅವರಿಗೆ ಬಿಟ್ಟುಕೊಟ್ಟ. ಈ ಹಕ್ಕುಗಳು ಒಂದು ಆವೃತ್ತಿಗೆ ಮಾತ್ರ ಸೀಮಿತವಾಗಿದ್ದುವು.

ಸ್ವತಃ ಫಣೀಂದ್ರನಾಥರೇ ಶರತ್‌ನ ಕೃತಿಗಳನ್ನು ಪ್ರಕಟಿಸಬಯಸಿದ್ದರು. ಆದರೆ, ಆಗ ಅವರು ಆ ಸ್ಥಿತಿಯಲ್ಲಿ ಇರಲಿಲ್ಲ. ಶರತ್‌ಗಂತೂ ದುಡ್ಡಿನ ಅಗತ್ಯ ಹೆಚ್ಚಾಗಿತ್ತು.

---

1. ಅಕ್ಟೋಬರ್ 1914ರಲ್ಲಿ ಪ್ರಯಾಗಕ್ಕೆ ಹೋಗುವಾಗ ಅವರು ಇದನ್ನು ಓದಿದ್ದರು. ಇದು ಸೆಪ್ಟಂಬರ್ 15, 1914 ರಂದು ಪ್ರಕಟವಾಗಿತ್ತು

ಹೀಗಾಗಿ, ಅವರು ಸುಧೀರ್ ಚಂದ್ರ ಸರ್ಕಾರ್ ಅವರನ್ನು ಒತ್ತಾಯಪಡಿಸಿದರು. ಸರ್ಕಾರ್ ಅವರು ಶರತ್‌ಗೆ ಇನ್ನೂರು ರೂಪಾಯಿಗಳನ್ನು ಮುಂಗಡವಾಗಿ ಕೊಟ್ಟರು. ಶರತ್ ಯಾವ ರೀತಿಯಲ್ಲೂ 'ಯಮುನಾ'ದಿಂದ ಬೇರೆಯಾಗಬಾರದೆಂಬ ಉದ್ದೇಶವೂ ಫಣೀಂದ್ರನಾಥರ ಒತ್ತಾಯದ ಹಿಂದೆ ಅಡಗಿತ್ತು.

ಈ ಕೃತಿಗಳಲ್ಲಿ 'ಬಿಂದೋಳ ಮುದ್ದುಮಗು' ಮತ್ತು ಇತರ ಕಥೆಗಳು, 'ಪರಿಣೀತಾ' ಮತ್ತು 'ಪಂಡಿತ್‌ಜೀ'[1] ಕೃತಿಗಳು ಶರತ್‌ನ ಕಲ್ಕತ್ತಾ ಪ್ರವಾಸದ ಅವಧಿಯಲ್ಲಿಯೇ ಪ್ರಕಟವಾದುವು. 'ಬಿರಾಜ್ ಬಹೂ'[2] ಇಲ್ಲಿಗೆ ಬರುವ ಮುಂಚೆಯೇ ಪ್ರಕಟವಾಗಿತ್ತು. 'ನಿಷ್ಕೃತಿ'[3], 'ಕತ್ತಲು ಮತ್ತು ಬೆಳಕು', 'ಮುಂಝಲೀ ದೀದೀ' (ನಡುವಿನ ಅಕ್ಕ), 'ದರ್ಪಚೂರ್ಣ' ಇವೇ ಮೊದಲಾದ ಹಳೆಯ ಮತ್ತು ಹೊಸ ಕೃತಿಗಳು ಬೆಳಕಿಗೆ ಬಂದ ಕಾಲವೂ ಇದೇ.

'ಯಮುನಾ' ಶರತ್‌ಗೆ ಹಣವನ್ನು ಕೊಡಬಹುದಾದಂಥ ಸ್ಥಿತಿಯಲ್ಲಿರಲಿಲ್ಲ. ಹಣ ದೊರೆಯಬಹುದಾಗಿದ್ದುದು 'ಭಾರತ ವರ್ಷ'ದಿಂದ. ಮೇಲಾಗಿ, ಅಲ್ಲಿ ಅವನ ಪರಮ ಮಿತ್ರರಾಗಿದ್ದ ಪ್ರಮಥನಾಥ ಭಟ್ಟರಿದ್ದರು. ಹೊಸ ಸಂಪಾದಕರಾಗಿದ್ದ ಜಲಧರ್ ಸೇನ್ ಅವರೂ ಅವನನ್ನು ತುಂಬ ಪ್ರೀತಿಸುತ್ತಿದ್ದರು. 'ಭಾರತ ವರ್ಷ'ದ ಇಡೀ ತಂಡ ಶರತ್‌ನ ಪ್ರಶಂಸಕರಿಂದಲೇ ಕೂಡಿತ್ತು. ಫಣೀಂದ್ರನಾಥರಿಗೆ ಇದೆಲ್ಲವೂ ಗೊತ್ತಿತ್ತು. ಈ ಕಾರಣದಿಂದಾಗಿಯೇ ಅವರು ಹೆದರುತ್ತಲೂ ಇದ್ದರು. ಆದ್ದರಿಂದಲೇ ಅವರು ಶರತ್‌ನನ್ನು 'ಯಮುನಾ'ದ ಸಂಪಾದಕನ ಸ್ಥಾನದಲ್ಲಿಯೂ ಕೂರಿಸಿಬಿಟ್ಟರು. ಅದರಲ್ಲಿ ಅಧಿಕೃತವಾಗಿ ಈ ಜಾಹೀರಾತು ಪ್ರಕಟವಾಯಿತು:

"ಸುಪ್ರಸಿದ್ಧ ಕಾದಂಬರಿಕಾರರೂ ಕತೆಗಾರರೂ ಆದ ಶ್ರೀ ಶರಚ್ಚಂದ್ರ ಚಟ್ಟೋಪಾಧ್ಯಾಯ ಅವರು ಈ ತಿಂಗಳಿಂದ 'ಯಮುನಾ'ದ ಸಂಪಾದನ ಕಾರ್ಯದಲ್ಲಿ ಸಹಕರಿಸಲಿದ್ದಾರೆಂಬುದನ್ನು ಕೇಳಿ, 'ಯಮುನಾ'ದ[4] ಓದುಗರು ಸಂತೋಷಪಡುತ್ತಾರೆಂದು ನಂಬಿದ್ದೇವೆ. 'ಯಮುನಾ'ದ ಓದುಗರಿಗೆ ಶರತ್‌ಬಾಬೂ ಸಾಕಷ್ಟು ಪರಿಚಿತರಾಗಿಯೇ ಇದ್ದಾರೆ. ಆದ್ದರಿಂದ, ಪರಿಚಿತರನ್ನು ಮತ್ತೆ ಪರಿಚಯಿಸಿಕೊಡುವ ಅಗತ್ಯವಿಲ್ಲ."

ಆದರೆ, ಇದರಿಂದ ಲಾಭವೇನೂ ಆಗಲಿಲ್ಲ. ಅವರನ್ನು ನಿಲ್ಲಿಸಿಕೊಳ್ಳುವ ಸಲುವಾಗಿ ಫಣೀಂದ್ರರು ಮಾಡಿದ ಆ ಇತರ ಪ್ರಯತ್ನಗಳಿಂದಲೂ ಯಾವ ಲಾಭವೂ ಆಗಲಿಲ್ಲ. ತುಂಬ ಒತ್ತಾಯಪೂರ್ವಕವಾಗಿ ಬೇಡವೆಂದು ಹೇಳಿದ್ದರೂ 'ಅವರು ಬಡೀ ದೀದೀ'ಯನ್ನು ಪುಸ್ತಕದ ರೂಪದಲ್ಲಿ ಪ್ರಕಟಿಸಿಬಿಟ್ಟಿದ್ದರು.[5] ಆಗ ಶರತ್ ಹೀಗೆಂದು ಬರೆದಿದ್ದ:[6] "ನೀವು ಕಳಿಸಿಕೊಟ್ಟ ಬಡೀ ದೀದೀ ತಲುಪಿತು. ಕೆಟ್ಟದಾಗಿಯೇನೂ ಇಲ್ಲ.

---

1 'ಬಿಂದೋ ಕಾ ಲಲ್ಲಾ' ಜುಲೈ 1914ರಲ್ಲಿ, 'ಪರಿಣೀತಾ' ಆಗಸ್ಟ್ 10, 1914, 'ಪಂಡಿತ್‌ಜೀ' ಸೆಪ್ಟೆಂಬರ್ 15, 1914

2 'ಬಿರಾಜ್ ಬಹೂ' ಮೇ 1914ರಲ್ಲಿ.

3ಈ ಮೂರು ಕಥೆಗಳೂ, 'ಯಮುನಾ'ದಲ್ಲಿ 1914ರಲ್ಲಿ ಅಚ್ಚಾಗಿದ್ದುವು.

4 ಜೂನ್ 1914

5 ಸೆಪ್ಟೆಂಬರ್ 30, 1913

6 ಅಕ್ಟೋಬರ್ 10, 1913

ಆದರೆ, ಬಾಲ್ಯ ಕಾಲದ ಈ ಕೃತಿಯನ್ನು ಅಚ್ಚಿಸದೆಯೇ ಇದ್ದರೆ ಚೆನ್ನಾಗಿರುತ್ತಿತ್ತು."

ಈ ರೂಪದಲ್ಲಿ ಹೊರಬಂದ ಆತನ ಮೊದಲ ಕೃತಿ ಇದಾಗಿತ್ತು. ಆದರೆ, ಅವರು ಬಯಸಿದ್ದಂತೆ, ಅದರ ಮಾರಾಟವಾಗಲಿಲ್ಲ. ಎಂಟು ಆಣೆ ಬೆಲೆ ಇರಿಸಿದ್ದರೂ, ವರ್ಷದಲ್ಲಿ ನಾನೂರು ಪ್ರತಿಗಳನ್ನೂ ಮಾರಲಾಗಲಿಲ್ಲ. ಮನೆ ಮನೆಗೆ ಹೋಗುತ್ತಿದ್ದರು. ಆದರೆ, ಅಂದಿನ ಓದುಗರ ದೃಷ್ಟಿಯಲ್ಲಿ ಆ ಪುಸ್ತಕ 'ಚರಿತ್ರ ಹೀನ'ದಂತೆಯೇ ಅಶ್ಲೀಲವೆಂದು ಪರಿಗಣಿತವಾಗಿತ್ತು.

ಇಲ್ಲಿ ಈ ಸ್ಥಿತಿ ಇದ್ದರೆ, ಅಲ್ಲಿ 'ಯಮುನಾ'ದೊಂದಿಗೆ ಶರತ್‌ನ ಸಂಬಂಧ ಮುರಿದು ಬೀಳಬೇಕೆಂದು ಸದಾ ಪ್ರಯತ್ನಿಸುತ್ತಿದ್ದ ಅವನ ಮಿತ್ರರು ಈ ಪುಸ್ತಕದಿಂದ ಫಣೀಂದ್ರರು ಸಾಕಷ್ಟು ಹಣ ಕಮಾಯಿಸುತ್ತಿದ್ದಾರೆಂದು ಅವನಿಗೆ ತಿಳಿಸಿದರು. ಶರತ್ ಅವರ ಈ ಮಾತನ್ನು ನಂಬಿದ. ಈ ನಂಬಿಕೆಗೆ ಒಂದು ಕಾರಣವೂ ಇತ್ತು. ಗುರುದಾಸನ ಅಂಗಡಿಯಲ್ಲಿ ಅವನ ಪುಸ್ತಕಗಳ ಮಾರಾಟ ಚೆನ್ನಾಗಿ ನಡೆಯುತ್ತಿತ್ತು. ಒಂದು ದಿವಸ ಅವನು 'ಯಮುನಾ'ದ ಕಛೇರಿಗೆ ಹೋದಾಗ ಫಣೀಂದ್ರನಾಥರು ಅಲ್ಲಿ ಇರಲಿಲ್ಲ. ಅವರ ನೆಂಟನೊಬ್ಬ ಅಲ್ಲಿ ಕುಳಿತಿದ್ದ. ಶರತ್ ಅವನೊಂದಿಗೆ ಹೇಳಿದ: " 'ಬಡೀ ದೀದಿ'ಯ ಎಲ್ಲ ಪ್ರತಿಗಳನ್ನೂ ನನಗೆ ಕೊಟ್ಟುಬಿಡಿ. ಅವು ನನ್ನವು."

ಆ ನೆಂಟ ಉತ್ತರಿಸಿದ: "ಪುಸ್ತಕಗಳನ್ನು ಬೀರುವಿನಲ್ಲಿಟ್ಟು ಬೀಗ ಹಾಕಿದ್ದಾರೆ. ಬೀಗದ ಕೈ ನನ್ನ ಹತ್ತಿರ ಇಲ್ಲ. ಅವರು ಬಂದ ಮೇಲೆ, ಅವರಿಗೆ ಹೇಳಿ ನೀವು ಪುಸ್ತಕಗಳನ್ನು ತಗೆದುಕೊಂಡು ಹೋಗಬಹುದು.

ಶರತ್ ತುಂಬ ಉದ್ವಿಗ್ನನಾಗಿದ್ದ. "ನಾನು ಇನ್ನು ಕಾಯಲು ಸಾಧ್ಯವಿಲ್ಲ. ಬೀಗದ ಕೈ ಇಲ್ಲದಿದ್ದರೆ ತಂತಿಯಿಂದ ಬೀಗ ತೆಗೆದು ಅವನ್ನು ತೆಗೆದುಕೊಂಡು ಹೋಗುತ್ತೇನೆ."

ಇಷ್ಟು ಹೇಳಿ ಅವನು ತಂತಿಯಿಂದ ಬೀರುವಿನ ಬೀಗವನ್ನು ತೆಗೆದ. ಪ್ರತಿಗಳೆಲ್ಲವನ್ನೂ ಒಬ್ಬ ಕೂಲಿಯ ತಲೆಯ ಮೇಲೆ ಹೊರಿಸಿಕೊಂಡು ತೆಗೆದುಕೊಂಡುಹೋದ. ಹಿಂದಿರುಗಿ ಬಂದಾಗ ಈ ಸುದ್ದಿಯನ್ನು ಕೇಳಿ ಫಣೀಂದ್ರನಾಥರಿಗೆ ತುಂಬ ದುಃಖವಾಯಿತು. ಅವರು ಅಂದು ಸಂಜೆಯೇ ಸೌರೀಂದ್ರ ಮೋಹನರೊಂದಿಗೆ ಈ ಘಟನೆಯ ಬಗ್ಗೆ ಚರ್ಚಿಸಿದರು. ಅವರಿಗೂ ತುಂಬ ಬೇಸರವಾಯಿತು. ಶರತ್‌ನನ್ನು ಕರೆಸಿ ಅವರು ಹೀಗೆಂದು ಹೇಳಿದರು: "ನೀನು ಮಾಡಿರುವುದು ಅಪರಾಧ, ಕಳ್ಳತನ ಎಂಬುದು ನಿನಗೆ ಗೊತ್ತೇನು? ಫಣೀಂದ್ರನಾಥರು ತಮ್ಮ ಸ್ವಂತ ವೆಚ್ಚದಿಂದ ಈ ಪುಸ್ತಕಗಳನ್ನು ಅಚ್ಚಿಸಿದ್ದಾರೆ. ಅದು ಅವರ ಆಸ್ತಿ. ಅವರೇನಾದರೂ ಪೊಲೀಸರಿಗೆ ದೂರುಕೊಟ್ಟರೆ ನಿನ್ನನ್ನು ಜೈಲುಕೋಣೆಗೆ ತಳ್ಳುತ್ತಾರೆ. ನೀನು ಫಣೀಂದ್ರರಿಗೆ ಯಾಕೆ ಹೇಳಲಿಲ್ಲ, ಬೇಕು ಅಂದಿದ್ದರೆ ಅವರು ನಿನಗೆ ಹಣವನ್ನು ಕೊಡಬಹುದಾಗಿತ್ತು. ಹಾಗೆ ಮಾಡಲು ಅವರು ಯಾವಾಗಲೂ ಸಿದ್ಧರಾಗಿದ್ದರು. ನೀನಂತೂ ಅವರ ಮನೆಯವನಂತೆಯೇ ಇದ್ದೆ. ನಿನಗಾಗಿ ಅವರು ಏನು ತಾನೇ ಮಾಡಲಿಲ್ಲ?"

ಹೀಗೆ ತಿಳಿಸಿ ಹೇಳಿದ ಮೇಲೆ, ತಾನು ನಿಜವಾಗಿಯೂ ತಪ್ಪು ಮಾಡಿದೆ ಎಂಬುದು

ಶರತ್‌ಗೆ ಮನದಟ್ಟಾಯಿತು. ಅವನಿಗೆ ತುಂಬ ನಾಚಿಕೆಯಾಯಿತು. ಆದರೂ, ಆ ಬಳಿಕವೂ 'ಯಮುನಾ'ದೊಂದಿಗೆ ಅವನ ಸಂಬಂಧ ಎಂದಿನಂತೆ ಆಗದೆ ಹೋಯಿತು. ಆ ಬಳಿಕ ಅವನು 'ಭಾರತ ವರ್ಷ'ಕ್ಕೆ ಮಾತ್ರವೇ ಬರೆಯತೊಡಗಿದ.

ನಿಜವಾಗಿಯೂ ಹೀಗೆ ಆಗಿತ್ತೆ? ಅವನ ಬಾಳಿನೊಂದಿಗೆ ಹೆಣೆದುಕೊಂಡಿರುವ ಇತರ ಅನೇಕ ಕಿಂವದಂತಿಗಳಂತೆ ಈ ಘಟನೆಯೂ ಇನ್ನೊಂದು ಕಿಂವದಂತಿಯೇ ಆಗಿರಲಿಲ್ಲವೆ? ಫಣೀಂದ್ರನಾಥರಿಂದ ಅವನು ಒಂದು ಕಾಸನ್ನೂ ಪಡೆದಿರಲಿಲ್ಲ. ಅವನ ರಚನೆಗಳಿಂದಾಗಿಯೇ 'ಯಮುನಾ'ದ ಚಂದಾದಾರರ ಸಂಖ್ಯೆ 200 ರಿಂದ 2000ಕ್ಕೆ ಏರಿತ್ತು. ಬಡವರನ್ನು ಕಂಡರೆ ಕರಗಿಯೇ ಹೋಗುತ್ತಿದ್ದ, ಹಣದ ಬಗ್ಗೆ ಮೋಹವೇ ಇಲ್ಲದಿದ್ದ ಆ ವ್ಯಕ್ತಿ ಹೀಗೆ ಕಳ್ಳತನದಂಥ ರೀತಿಯಲ್ಲಿ ಪುಸ್ತಕಗಳನ್ನು ತೆಗೆಸಿಕೊಂಡು ಬಂದನೆಂಬ ಮಾತಿನಲ್ಲಿ ಒಮ್ಮೆಗೇ ನಂಬಿಕೆಯೇ ಮೂಡುವುದಿಲ್ಲ. ಪಣತೆತ್ತು ಅವನನ್ನು ಕೊಂಡಿರುವ ಸಂಭವವಂತೂ ಇರಲಿಲ್ಲ. ಒಂದು ದಿನ ಅವನು ಪ್ರಮಥನೊಂದಿಗೆ ಹೇಳಿದ್ದ: ಇಡೀ ಕಲ್ಕತ್ತೆಯೇ ಒಂದಾಗಿ ಬಂದರೂ ನನ್ನನ್ನು ಕೊಂಡುಕೊಳ್ಳಲಾರದು; ನಿನ್ನ ಕುಟುಂಬವಂತೂ ತುಂಬ ಚಿಕ್ಕದು.

ಶರತ್‌ನನ್ನು ಬೆಳಕಿಗೆ ತಂದ ಶ್ರೇಯಸ್ಸು ಹೆಚ್ಚಾಗಿ ಸಲ್ಲಬೇಕಾಗಿರುವುದು ಫಣೀಂದ್ರನಾಥರಿಗೇ. ಎಂಬುದು ಅಸಂದಿಗ್ಧ ಸತ್ಯ. ತುಂಬ ಅಭಿಮಾನದಿಂದ ಫಣೀಂದ್ರನಾಥರು ಒಮ್ಮೆ ಹೇಳಿದ್ದರು: "ಶರತ್‌ನನ್ನು ಗುರುತಿಸಿದವರು ಹಲವರಾದರೂ, ಅದನ್ನು ಸಾರಿ ಹೇಳುವ ಧೈರ್ಯವನ್ನು ಯಾರೂ ಮಾಡಲಾರದ ಹೋದರು. 'ಸಾಹಿತ್ಯ' ಪತ್ರಿಕೆಯ ಸಂಪಾದಕರಾದ ಸಮಾಜಪತಿಗಳು 'ಚರಿತ್ರಹೀನ' ಕಾದಂಬರಿಯನ್ನು ಪ್ರಶಂಸಿಸಿದರಾದರೂ, ಅದನ್ನು ತಮ್ಮ ಪತ್ರಿಕೆಯಲ್ಲಿ ಅಚ್ಚಿಸುವ ದಿಟ್ಟತನವನ್ನು ತೋರಲಾರದೆ ಹೋದರು. 'ನಾರಿಯ ಮೌಲ್ಯ'ವನ್ನು ನಾರಿಯೊಬ್ಬಳ ಹೆಸರಿನಲ್ಲಿ ಅಚ್ಚಿಸಲು ಯಾರೂ ಸಿದ್ಧರಾಗಿರಲಿಲ್ಲ. ನಾನು ಅಚ್ಚಿಸಿದೆ. ಅದೆಷ್ಟು ಬಯ್ಗುಳನ್ನು ನಾನು ಕೇಳಬೇಕಾಯಿತು! ಆದರೂ ನಾನು ಬೆದರಲಿಲ್ಲ."

ಹಾಗಾದರೆ, 'ಯಮುನಾ'ದ ಸಂಬಂಧವನ್ನು ಕಡಿದುಕೊಂಡ ಪ್ರಸಂಗದಲ್ಲಿನ ತಪ್ಪೆಲ್ಲವೂ ಶರತ್‌ನದೇ ಏನು? ಗೆಳೆಯನ ಬಗೆಗಿನ ಪ್ರೀತಿ ಹಾಗೂ ಹಣಕಾಸಿನ ಅನುಕೂಲಕ್ಕಾಗಿ ಮಾತ್ರವೇ 'ಭಾರತ ವರ್ಷ'ದತ್ತ ಅವನು ಆಕರ್ಷಿತನಾದನೆ? ಇವು ಪ್ರಬಲ ಕಾರಣಗಳಾಗಿದ್ದುವು ಎಂಬುದರಲ್ಲಿ ಅನುಮಾನವೇನೂ ಇಲ್ಲ. ಬರ್ಮಾದ ವಿಷಯದಲ್ಲಿ ಅವನ ಮನಸ್ಸು ಬೇಸರಗೊಂಡಿತ್ತು. ಬಂಗಾಳಕ್ಕೆ ಹಿಂದಿರುಗಿಬಂದ ಮೇಲೆ ಹಣದ ಅಗತ್ಯ ಉಂಟಾಗಿಯೇ ಇತ್ತು. ಇದಕ್ಕಾಗಿ ಶರತ್‌ನ ಮೇಲೆ ತಪ್ಪು ಹೊರಿಸಲು ಸಾಧ್ಯವಾಗುವುದಿಲ್ಲ. ಆದರೆ, ಈ ಎಲ್ಲ ಕಾರಣಗಳಿಗಿಂತಲೂ ಮಿಗಿಲಾದ ಕಾರಣ ಒಂದಿತ್ತು. ಹಾಗೂ ಅದು ಕಡಿಮೆ ಮಹತ್ವದ್ದೇನೂ ಆಗಿರಲಿಲ್ಲ. ಫಣೀಂದ್ರನಾಥರು ತುಂಬ ಅನುಮಾನ ಪ್ರಕೃತಿಯವರಾಗಿದ್ದರು. ಮತ್ತೆ ಮತ್ತೆ ಆಶ್ವಾಸನೆ ಕೊಟ್ಟರೂ, 'ಭಾರತ ವರ್ಷ'ದಂಥ ಪತ್ರಿಕೆ ಇರುವಾಗ ತಮ್ಮ ಚಿಕ್ಕ ಪತ್ರಿಕೆಗೆ ಶರತ್ ಬರೆಯದೆ ಹೋಗಬಹುದು ಎಂಬ ಚಿಂತೆ ಅವರನ್ನು ಕಾಡುತ್ತಲೇ ಇತ್ತು. ಚಿಂತೆ ಇದ್ದಲ್ಲಿ, ಅದು ಸಹಜವೇ. ಆದರೆ, ಅದು ತನ್ನ ಮೇರೆಯನ್ನು ದಾಟಿ ಹೋಗಿತ್ತು. ಮಾರನೆಯ ವರ್ಷ ರಂಗೂನ್‌ನಿಂದ ಬರೆದ ಪತ್ರವೊಂದರಲ್ಲಿ[1] ಈ

ಸಂಬಂಧವನ್ನು ಕಡಿದುಕೊಂಡುದರ ಬಗ್ಗೆ ಶರತ್ ಬರೆದಿರುವ ಮಾತುಗಳು ಫಣೀಂದ್ರನಾಥರ ನೆರವಿಗೆ ಬರುವಂಥವೇನೂ ಇಲ್ಲ.

" 'ಯಮುನಾ' ಈಗ ಹೇಗೆ ನಡೆಯುತ್ತಿದೆ? ಫಣೀಂದ್ರ ಪುಸ್ತಕವನ್ನು ಅಚ್ಚಿಸಿದ್ದಾನೆ. 'ನಾನು ನಿಮ್ಮ ಕಥೆಯೊಂದನ್ನು ಮುವ್ವತ್ತು ನಲವತ್ತು ಸಲ ಓದಿ ಬಾಯಿಪಾಠ ಮಾಡಿಕೊಂಡು ಬಿಟ್ಟಿದ್ದೇನೆ. ನಿಮ್ಮ ಕೃತಿಗಳು ನನಗೆ ಆದರ್ಶಪ್ರಾಯವಾಗಿದೆ.' ಎಂದು ಅವನು ಹೇಳುತ್ತಾನೆ. ಇಷ್ಟೊಂದು ಗುರುಭಕ್ತಿ! ಆದರೂ, ಅಚ್ಚಾದ ಪುಸ್ತಕದ ಒಂದೇ ಒಂದು ಪ್ರತಿಯನ್ನೂ ನನಗೆ ಕಳಿಸಿಕೊಟ್ಟಿಲ್ಲ! ನಾನು ಅವನ ಎಲ್ಲ ರಚನೆಗಳನ್ನು ಓದಿದ್ದೇನೆ, ಅವು ಹೇಗಿವೆ ಎಂಬುದು ನನಗಿಂತ ಚೆನ್ನಾಗಿ ಯಾರಿಗೆ ಗೊತ್ತಿರಲು ಸಾಧ್ಯ? ಅನೇಕ ಕಾರಣಗಳಿಂದಾಗಿ, ನಾನು ಅವನೊಂದಿಗೆ ಯಾವುದೇ ಸಂಬಂಧವನ್ನೂ ಇರಿಸಿಕೊಂಡಿಲ್ಲ."

ಬಹುದಿನಗಳ ಬಳಿಕ ಫಣೀಂದ್ರನಾಥರು ಹೀಗೆಂದು ಹೇಳಿದ್ದರು: "ಪ್ರತಿಯೊಂದು ಕೂಟಕ್ಕೂ ಒಂದು ಉದ್ದೇಶ ಇದ್ದೇ ಇರುತ್ತದೆ. ಶರತ್ ಮತ್ತು 'ಯಮುನಾ'ಗಳ ಕೂಟದ ಉದ್ದೇಶ ನೆರವೇರಿತು. ಈಗ ಮಧುರೆಯ ರಾಜಸಿಂಹಾಸನದ ಕರೆ ಬಂದು ಅವನು ವ್ರಜಧಾಮವನ್ನು ಬಿಟ್ಟು ಹೊರಟನೆಂದರೆ ಮರ್ಮಾಂತಿಕ ವೇದನೆಯನ್ನು ಅನುಭವಿಸಿಯೂ ವ್ರಜವಾಸಿಗಳು ಅವನ ಮೇಲೆ ಆಕ್ಷೇಪವನ್ನು ಹೊರಿಸಲಾಗದು."

ರೂಪಕ ಉಚಿತವಾಗಿಲ್ಲದಿರಬಹುದು, ಆದರೆ ಉದ್ದೇಶದ ವಿಚಾರವಂತೂ ಖಂಡಿತವಾಗಿಯೂ ಸತ್ಯ.

## 17

ಇದ್ದಕ್ಕಿದ್ದಂತೆಯೇ ತಂತಿ ಬಂದುದರಿಂದ, ರಜೆ ಮುಗಿಯುವುದಕ್ಕೂ ಮೊದಲೇ, ಒಂಟಿಯಾಗಿಯೇ ಶರತ್ ರಂಗೂನಿಗೆ ಹಿಂದಿರುಗಬೇಕಾಯಿತು. ಬಂದ ಒಡನೆಯೇ ತನ್ನ ಪ್ರಸಿದ್ಧ ಕೃತಿಯಾದ 'ಪಲ್ಲೀ ಸಮಾಜ'ದ ಕೆಲಸವನ್ನು ಆರಂಭಿಸಿದಂತೆ ತೋರುತ್ತದೆ. ಆದರೆ, ಗೃಹಿಣಿ ಇಲ್ಲದೆ ಇದ್ದುದರಿಂದ ಅವನಿಗೆ ತುಂಬ ತೊಂದರೆಯಾಯಿತು. ಆದ್ದರಿಂದ ಕೆಲವೇ ದಿನಗಳ ಬಳಿಕ ಪ್ರಮಥನಿಗೆ ಬರೆದ ಪತ್ರದಲ್ಲಿ ಹೀಗೆಂದು ಬರೆದಿದ್ದ: "ಆಕೆಯನ್ನು ಕಳಿಸಿಬಿಡಬೇಕೆಂದು ಕೋರುತ್ತೇನೆ. ನನ್ನ ಕೆಲಸ ಸಾಗುತ್ತಿಲ್ಲ. ಆಕೆಗೂ ಹಸಿವು ಬಾಯಾರಿಕೆ ನಿದ್ದೆ ಒಂದೂ ಇಲ್ಲವಾಗಿದೆಯಂತೆ.... ಆಕೆ ಬರದಿದ್ದರೆ, ಬರವಣಿಗೆ ಸಾಗುವುದಿಲ್ಲ. ಮನೆಗೆ ಹೋಗಲು ಸಾಧ್ಯವಾಗುವುದಿಲ್ಲ. ಎಲ್ಲರೂ ನೋಡಬಯಸುತ್ತಾರೆ. ಅದರಿಂದಲೇ ಎಲ್ಲ ತೊಂದರೆಗಳೂ ಉಂಟಾಗುತ್ತವೆ. ನಾನು ಯಾವ ಪರಿಸ್ಥಿತಿಯಲ್ಲಿ ಬರೆದೇನೋ ಅಂಥದೇ ಪರಿಸ್ಥಿತಿ ಇಲ್ಲವಾದಲ್ಲಿ ಏನೂ ಆಗುವುದಿಲ್ಲ."[1]

ವಾಸ್ತವ ಜೀವನದಿಂದ ಅವನು ಹೇಗೆ ಪಾತ್ರಗಳನ್ನು ಘಟನೆಗಳನ್ನೂ ಆಯ್ದುಕೊಳ್ಳುತ್ತಿದ್ದ ಎಂಬುದಕ್ಕೆ 'ಪಲ್ಲೀ ಸಮಾಜ' ಮತ್ತೊಂದು ಉದಾಹರಣೆ. ಇದರಲ್ಲಿ ಶವದಹನ ಮತ್ತು ಪ್ರಾಯಶ್ಚಿತ್ತದ ಘಟನೆಗಳು ಬರುತ್ತವೆ. ಆ ದಿನಗಳಲ್ಲಿ

---

1 ನವೆಂಬರ್ 15, 1915

ಬಂಗಾಳದಲ್ಲಿ ಗೂರಲು ಮೊದಲಾದ ಅನೇಕ ರೋಗಗಳಿಗೆ ತುತ್ತಾದ ರೋಗಿಗಳಿಗೆ ಪ್ರಾಯಶ್ಚಿತ್ತ ಸಂಸ್ಕಾರವನ್ನು ನಡೆಸುವ ಪದ್ಧತಿ ಇತ್ತು. ಇದನ್ನು ಉಲ್ಲೇಖಿಸುತ್ತ ಕಾದಂಬರಿಯ ಒಂದು ಪಾತ್ರವಾದ ಗೋಪಾಲ್ ಸರ್ಕಾರ್ ಎಂಬಾತ ರಮೇಶನೊಂದಿಗೆ ಹೀಗೆ ಹೇಳುತ್ತಾನೆ. "ಈ ಹುಡುಗನ ತಂದೆಯಾದ ದ್ವಾರಕಾ ಚಕ್ರವರ್ತಿ ಗೂರಲು ರೋಗದಿಂದಾಗಿ ಆರು ತಿಂಗಳಿಂದ ಹಾಸಿಗೆ ಹಿಡಿದಿದ್ದರು. ಇಂದು ಬೆಳಿಗ್ಗೆ ಅವರು ತೀರಿಕೊಂಡರು. ಅವರಿಗೆ ಪ್ರಾಯಶ್ಚಿತ್ತವಾಗಿರಲಿಲ್ಲ. ಆದ್ದರಿಂದ, ಯಾರೂ ಆ ಹೆಣವನ್ನು ಮುಟ್ಟಲೂ ಇಚ್ಛಿಸುತ್ತಿಲ್ಲ. ಈಗ ಅದನ್ನು ಮಾಡುವುದು ತುಂಬ ಅಗತ್ಯವಾಗಿ ಪರಿಣಮಿಸಿದೆ. ಕಾಮಿನಿಯ ತಾಯಿ ಆರು ತಿಂಗಳಿಂದ ಒಂದೇ ಸಮನೆ ಈ ಬಡ ಬ್ರಾಹ್ಮಣನ ಕುಟುಂಬಕ್ಕೆ ನೆರವು ನೀಡುತ್ತ ಬಂದಿದ್ದಾಳೆ. ತನ್ನ ಸರ್ವಸ್ವವನ್ನು ಆಕೆ ಇದಕ್ಕೆ ಅರ್ಪಿಸಿದ್ದಾಳೆ. ಈಗ ಆಕೆಯ ಬಳಿ ಏನೂ ಉಳಿದಿಲ್ಲ. ಆದ್ದರಿಂದ, ಈಗ ಈ ಹುಡುಗನನ್ನು ಕರೆದುಕೊಂಡು ಆಕೆ ನಿಮ್ಮ ಬಳಿಗೆ ಬಂದಿದ್ದಾಳೆ."

ಸ್ವಲ್ಪ ಹೊತ್ತು ಸುಮ್ಮನಿದ್ದು ರಮೇಶ ಕೇಳಿದ: "ಈಗ ಆಗಲೇ ಎರಡು ಘಂಟೆ ಆಗಿದೆ. ಪ್ರಾಯಶ್ಚಿತ್ತ ಆಗಲಿಲ್ಲ ಎಂದರೆ ಹೆಣ ಹಾಗೆಯೇ ಬಿದ್ದಿರಬೇಕೇನು ?"

ಸರ್ಕಾರ್ ನಗುತ್ತ ಹೇಳಿದ: "ಬಾಬೂಜಿ, ಬೇರೆ ದಾರಿ ಎಲ್ಲಿದೆ ? ಶಾಸ್ತ್ರಕ್ಕೆ ವಿರುದ್ಧವಾಗಿ ಕೆಲಸ ನಡೆಯುವಂತೆಯಂತೂ ಇಲ್ಲ. ಜೊತೆಗೆ ಈ ವಿಷಯದಲ್ಲಿ ಹಳ್ಳಿಯ ಜನರ ಮೇಲೆ ತಪ್ಪು ಹೊರಿಸಲು ತಾನೆ ಹೇಗೆ ಸಾಧ್ಯವಾದೀತು ? ಏನಾದರೂ ಆಗಲಿ, ಹೆಣ ಹಾಗೆಯೇ ಬಿದ್ದಿರಲು ಸಾಧ್ಯವಿಲ್ಲ. ಹೇಗಾದರೂ ಮಾಡಿ ಇವರು ಆ ಕೆಲಸವನ್ನು ಮಾಡಿಯೇ ತೀರಬೇಕು. ಆದ್ದರಿಂದಲೇ ಭಿಕ್ಷೆ ಎತ್ತಿ ...... (ಕಾಮಿನಿಯ ತಾಯಿಯತ್ತ ತಿರುಗಿ ನೋಡುತ್ತ) ಬೇರೆಲ್ಲಿಯಾದರೂ ಹೋಗಿದ್ದೆಯೇನು ?"

ಹುಡುಗ ಮುಷ್ಟಿಯನ್ನು ತೆರೆದು ಒಂದು ನಾಲ್ಕಾಣೆ ಬಿಲ್ಲೆ ಮತ್ತು ನಾಲ್ಕು ಕಾಸುಗಳನ್ನು ತೋರಿಸಿದ. ಕಾಮಿನಿಯ ತಾಯಿ ಹೇಳಿದಳು: "ಮುಖರ್ಜಿಯವರ ಮನೆಯಲ್ಲಿ ನಾಲ್ಕಾಣೆ ಕೊಟ್ಟರು. ಹಲ್ದಾರ್ ಅವರು ನಾಲ್ಕು ಕಾಸುಗಳನ್ನು ಕೊಟ್ಟಿದ್ದಾರೆ. ಆದರೆ, ಒಂಬತ್ತು ಪಾವಲಿಗಳಿಗಿಂತ ಕಮ್ಮಿಯಾದರೆ ಈ ಕೆಲಸ ನಡೆಯುವಂತೆಯೇ ತೋರುವುದಿಲ್ಲ. ಆದ್ದರಿಂದ, ಬಾಬೂಜಿ ದಯವಿಟ್ಟು..."

ರಮೇಶ್ ಕೂಡಲೇ ಹೇಳಿದ: "ಸರಿ, ನೀವೆಲ್ಲ ಮನೆಗೆ ಹೋಗಿ, ಇನ್ನು ಎಲ್ಲಿಗೂ ನೀವು ಹೋಗಬೇಕಾಗಿಲ್ಲ. ನಾನು ಈಗಲೇ ಅಗತ್ಯವಾದ ಏರ್ಪಾಟು ಮಾಡಿ, ಜನರನ್ನು ಕಳಿಸಿಕೊಡುತ್ತೇನೆ."

ಈ ಘಟನೆಯನ್ನು ಚಿತ್ರಿಸುವಾಗ ಶರತ್‌ಗೆ ತನ್ನ ಒಬ್ಬ ಅಜ್ಜ ಮಹೇಂದ್ರನಾಥರ ಸಾವಿನ ಸಂದರ್ಭ ಖಂಡಿತವಾಗಿ ನೆನಪಿಗೆ ಬಂದಿರಬೇಕು. ಅನೇಕ ವರ್ಷಗಳ ಹಿಂದೆ, ಜಗದ್ಧಾತ್ರಿಯ ಪೂಜೆಯ ಸಂದರ್ಭದಲ್ಲಿ ಬ್ರಾಹ್ಮಣರಿಗೆ ಬಡಿಸುವ ಸಲುವಾಗಿ ಅವನು ಅಜ್ಜನ ಮನೆಗೆ ಹೋಗಿದ್ದಾಗ, ಮುಖ್ಯಸ್ಥನೊಬ್ಬ ಆಕ್ಷೇಪವೆತ್ತಿದನೆಂಬ ಕಾರಣದಿಂದಾಗಿ, ಇದೇ ಅಜ್ಜ ಬಡಿಸದಂತೆ ಅವನನ್ನು ತಡೆದಿದ್ದ. ಅವರೇ ತೀರಿಕೊಂಡಾಗಲೂ ಬ್ರಾಹ್ಮಣರು ಗಲಭೆಯನ್ನೆಬ್ಬಿಸಿದ್ದರು. ಅವರು ರೋಗಗ್ರಸ್ತ

ರಾಗಿದ್ದರು. ಜ್ವರದೊಂದಿಗೆ ರಕ್ತವೂ ವಾಂತಿಯಾಗುತ್ತಿತ್ತು. ಇದು 'ರಕ್ತ ಪಿತ್ತ' ಎಂದು ವೈದ್ಯನೊಬ್ಬ ಹೇಳಿದ. ಹಳೆಯ ಕಂದಾಚಾರಗಳ ಅನುಯಾಯಿಗಳಾಗಿದ್ದ ಹಲವು ಮಂದಿ ಮುಖ್ಯಸ್ಥರು ಮತ್ತೆ ಮತ್ತೆ ಬಂದು ಹೋಗಿ ಮಾಡತೊಡಗಿದರು. ಪರಿಸ್ಥಿತಿ ಒಂದೇ ಸಮನೆ ಕೆಡುತ್ತ ಹೋಗಿತ್ತು. ಆಗ ಒಂದು ದಿನ ಇದ್ದಕ್ಕಿದ್ದಂತೆ ಈ ಮುಖ್ಯಸ್ಥರಲ್ಲಿ ಯಾರೂ ಬರಲಿಲ್ಲ. ಅವರ ಸಂದೇಶ ಮಾತ್ರ ಬಂದಿತು - "ಬೇಗ ಪ್ರಾಯಶ್ಚಿತ್ತ ಮಾಡಿಬಿಡಿ. ಇಲ್ಲದೆ ಹೋದರೆ ಶವದಹನದ ಸಂದರ್ಭದಲ್ಲಿ ತೊಂದರೆಯುಂಟಾಗುತ್ತದೆ."

"ಏನು ತೊಂದರೆ ?"

"ರೋಗಿ ರಕ್ತ ವಾಂತಿ ಮಾಡುತ್ತಾನೆ. ಯಾರೂ ಅವನನ್ನು ಮುಟ್ಟುವುದೂ ಇಲ್ಲ."

ಮನೆಯಲ್ಲಿ ಎಲ್ಲೆಡೆಗಳಲ್ಲಿಯೂ ಸಾವಿನ ನೆರಳು ಅಲೆಯುತ್ತಿತ್ತು. ಎಲ್ಲರೂ ದುಃಖಿಸುತ್ತಿದ್ದರು. ಈ ವಿಷಯದ ಬಗ್ಗೆ ಹಿರಿಯರಾರೂ ಕಿವಿಗೊಡಲಿಲ್ಲ. ಆದರೂ ಕಿವಿಕಚ್ಚು ಮಾತು ನಡೆದೇ ಇತ್ತು. ಮಹೇಂದ್ರನಾಥರ ಆರೋಗ್ಯ ಸುಧಾರಿಸಲಿಲ್ಲ. ಅಷ್ಟಮಿಯಂದು ಅವರು ಕೊನೆಯುಸಿರನ್ನೆಳೆದರು. ಎದುರು ತಂಡದವರಿಗೆ ಬೇಕಾಗಿದ್ದುದೂ ಇದೇ. ಅವರ ಸಂತೋಷಕ್ಕೆ ಮೇರೆಯೇ ಇರಲಿಲ್ಲ. ಅಷ್ಟಮಿಯಂದು ಪ್ರಾಯಶ್ಚಿತ್ತ ಮಾಡಲು ಅವಕಾಶವಿಲ್ಲದೆ ಇರುವುದರಿಂದ, ಹೆಣ ಅಲ್ಲಿಯೇ ಬಿದ್ದಿರುತ್ತದೆ. ಮುಖ್ಯಸ್ಥರೆಲ್ಲ ತಂತಮ್ಮ ಮನೆಗಳಿಗೆ ಹೋಗಿ ಆದೇಶವೊಂದನ್ನು ಜಾರಿ ಮಾಡಿಬಿಟ್ಟರು. ಇದರ ಪರಿಣಾಮವಾಗಿ ಶವದಹನ ಕಾರ್ಯಕ್ಕೆ ಜನರನ್ನು ಹುಡುಕುವುದು ಒಂದು ಸಮಸ್ಯೆಯೇ ಆಯಿತು. ಶ್ಮಶಾನ ಅಲ್ಲಿಗೆ ಎರಡು-ಎರಡೂವರೆ ಮೈಲಿಗಳಷ್ಟು ದೂರದಲ್ಲಿತ್ತು. ರಸ್ತೆಯೂ ಚೆನ್ನಾಗಿರಲಿಲ್ಲ. ಗಂಗೂಲಿ ಕುಟುಂಬ ಕಷ್ಟಕ್ಕೆ ಸಿಕ್ಕಿಕೊಂಡಿತು. ಆದರೆ, ಶರತ್‌ನ ಇನ್ನೊಬ್ಬ ಅಜ್ಜ ಅಘೋರನಾಥರು ಮಹಾ ಧೈರ್ಯಶಾಲಿಗಳಾಗಿದ್ದರು. ಅವರು ಹೇಳಿದರು: "ಹಿಂದೂ ಶಾಸ್ತ್ರ ಕಾಮಧೇನುವಿನಂತಿದೆ. ನಿಮಗೆ ಏನು ಬೇಕೋ ಅದೇ ದೊರೆಯುತ್ತದೆ. ಅನೇಕ ಮುನಿಗಳು ಅನೇಕ ಅಭಿಪ್ರಾಯಗಳನ್ನು ಸೂಚಿಸಿದ್ದಾರೆ. ಹೆದರಬೇಡಿ. ಖಂಡಿತವಾಗಿಯೂ ಏನಾದರೂ ಏರ್ಪಾಟು ಆಗಿಯೇ ತೀರುತ್ತದೆ."

ಕೊನೆಗೆ ಏರ್ಪಾಟು ಆಗಿಯೇ ಬಿಟ್ಟಿತು. ತರ್ಕರತ್ನ ಮಹಾಶಯನೊಬ್ಬ ಹೇಳಿದ: "ಆ ನನ್ಮಗ ಕಾವ್ಯತೀರ್ಥನಿಗೆ ನ್ಯಾಯ ಏನು ಗೊತ್ತಿದೆ ? ಅವನಿಗೆ ಹ್ರಸ್ವ-ದೀರ್ಘಗಳ ಪರಿಜ್ಞಾನ ಸಹ ಇಲ್ಲ. ಅಷ್ಟಮಿ, ಚತುರ್ದಶಿ ಹಾಗೂ ಶನಿವಾರ ಮತ್ತು ಮಂಗಳವಾರಗಳಂದು ಬದುಕಿರುವ ದೇಹಕ್ಕೆ ಪ್ರಾಯಶ್ಚಿತ್ತ ಮಾಡುವಂತಿಲ್ಲ. ಹೆಣವನ್ನು ಕೊಳೆಯಲು ಬಿಡುವುದು ಹಿಂದೂಗಳ ಶಾಸ್ತ್ರಕ್ಕೆ ಹಾಗೂ ನ್ಯಾಯಕ್ಕೆ ವಿರುದ್ಧವಾದುದು. ಹೀಗಾಗುವುದು ಸಾಧ್ಯವಿಲ್ಲ. ಯುಕ್ತಿಯೇ ಎಲ್ಲಕ್ಕಿಂತ ಹಿರಿದಾದುದುದು.

"ಯುಕ್ತಿ-ಹೀನೇ ವಿಚಾರೇ ತು ಧರ್ಮಹಾನಿ ಪ್ರಜಾಯತೇ."

ತರ್ಕರತ್ನರು ಪ್ರಾಯಶ್ಚಿತ್ತದ ಕ್ರಮವನ್ನು ಬರೆದುಕೊಟ್ಟರು ಹಾಗೂ ಅವರ ಶಿಷ್ಯ ಬಂದು ಪ್ರಾಯಶ್ಚಿತ್ತವನ್ನು ಮಾಡಿಸಿಯೇ ಬಿಟ್ಟ. ಆಗ ಮಾತ್ರವೇ ಶವ ಮನೆಯಿಂದ

ಕದಲಿತು.[1]

ಈ ಕಾದಂಬರಿಯ ರಚನಾವಿಧಾನ ಹಾಗೂ ಕಥಾನಕದ ವಿಕಾಸವನ್ನು ಕುರಿತು ಚರ್ಚಿಸುತ್ತ ಶರತ್ ತನ್ನೊಬ್ಬ ಮಿತ್ರನೊಂದಿಗೆ ಹೀಗೆ ಹೇಳಿದ್ದ:[2] " 'ಪಲ್ಲಿ ಸಮಾಜ'ವನ್ನು ನಾನು ಬೇರೊಂದು ರೀತಿಯಲ್ಲಿ ಕೊನೆಗಾಣಿಸಿದ್ದೇನೆ. ಅಂದು ಅದನ್ನು ಯಾವ ರೀತಿಯಲ್ಲಿ ಕೊನೆಗೊಳಿಸಿ ಕಳಿಸಿಕೊಟ್ಟಿದ್ದನೋ ಅದು ಚೆನ್ನಾಗಿಲ್ಲವೆಂದು ಅನ್ನಿಸಿದ್ದರಿಂದ, ಬೇರೊಂದು ರೀತಿಯಲ್ಲಿ ಅದರ ಉಪಸಂಹಾರವನ್ನು ಮುಂದಿರಿಸಿದ್ದೇನೆ. ಈ ವಿಚಾರವನ್ನು ನಾನು ತಪ್ಪದೆ ತಿಳಿಸಬೇಕು. 'ಸರಸ' ಶಬ್ದಕ್ಕೆ ನಾನು ಏನು ಅರ್ಥವನ್ನು ಇರಿಸಿಕೊಂಡಿದ್ದೇನೋ, ಅದರ ಹತ್ತಿರವೂ ಈ ಕಥೆ ಸುಳಿಯುವುದಿಲ್ಲ. ತುಂಬ ಕಗ್ಗಂಟುಗಳಿಂದ ಕೂಡಿದ ವಸ್ತುವಿನಿಂದ ಇದರ ಹಾಸು-ಹೊಕ್ಕುಗಳು ಹೆಣೆಯಲ್ಪಟ್ಟಿವೆ. ಒಂದೆರಡು ಸ್ವಾರಸ್ಯಕರವಾದ ಕಥೆಗಳೂ ಇರಬೇಕು. ಪ್ರಬಂಧಗಳನ್ನೇನೋ ಬಹುಮಂದಿ ಓದುತ್ತಾರೆ."

ಮತ್ತೊಂದು ಕಾಗದದಲ್ಲಿ ಹೀಗೆ ಬರೆದಿದ್ದ: "ಜನರು ಹಳ್ಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಆಸಕ್ತಿ ವಹಿಸಬೇಕು ಎಂಬುದು ನನ್ನ ಇಚ್ಛೆ. ಈ ಪುಸ್ತಕದಲ್ಲಿ ಒಂದು ಮೂಲಭೂತ ವಿಷಯವನ್ನು - ಅಂದರೆ, ಮದುವೆಯನ್ನು - ಕುರಿತು ಏನನ್ನೂ ಹೇಳಿಲ್ಲ. ಈ ವಿಷಯವನ್ನು ಬೇರೊಂದು ಪುಸ್ತಕದಲ್ಲಿ ಎತ್ತಿಕೊಳ್ಳಬೇಕೆಂದು ಇಚ್ಛಿಸಿದ್ದೇನೆ. ಅಲ್ಲಿ ಜನಗಳು 'ಪಲ್ಲೀ ಸಮಾಜ'ವನ್ನು ಹೇಗೆ ಸ್ವೀಕರಿಸಿದ್ದಾರೆ ಎಂಬುದು ನನಗೆ ಗೊತ್ತಿಲ್ಲ..... ಅದನ್ನು ತಿಳಿಯಬೇಕೆಂಬ ಆಸೆ ಇದೆ."

'ಪಲ್ಲೀ ಸಮಾಜ'ದಲ್ಲಿ ದುಃಖ-ಸಂಕಟಗಳಿಂದ ಪೀಡಿತವಾಗಿರುವ, ಸಂಕೀರ್ಣ ಸಾಂಸ್ಕೃತಿಕ ಆವರಣದಲ್ಲಿ ಬಂಧಿತವಾಗಿರುವ, ಪರಂಪರೆಯಿಂದ ಅಥವಾ ತಲೆಮಾರುಗಳಿಂದ ಸಾಗಿಬಂದಿರುವ ಕುಸಂಸ್ಕಾರಗಳಿಂದ ಆವೃತವಾಗಿರುವ ಬಂಗಾಳದ ಕೆಳ ಮಧ್ಯಮವರ್ಗದ ರೈತ ಸಮುದಾಯದ ನೇರ, ಸರಳ ಹಾಗೂ ಯಥಾರ್ಥ ಚಿತ್ರಣ ಕಾಣದೊರೆಯುತ್ತದೆ. ಹಳ್ಳಿಯನ್ನು ಅವನು ತುಂಬ ಪ್ರೀತಿಸುತ್ತಿದ್ದ. ಅದನ್ನು ಆಧಾರವಾಗಿರಿಸಿಕೊಂಡೇ ಅವನು ಈ ಪುಸ್ತಕವನ್ನು ಬರೆದ.

ಆದರೆ ಹಳ್ಳಿಯ ಬಗ್ಗೆ ಹಳ್ಳಿಯ ಜನಗಳೇ ಬರೆಯಬೇಕೆಂಬ ಮಾತನ್ನು ಅವನು ಒಪ್ಪಿದ್ದಾನೆ. ಕಲ್ಕತ್ತಾ ನಗರದ ಮಹಾ ಜನಗಳು ಕಲ್ಪಿಸಿಕೊಂಡು ಬರೆಯುವಂಥದಕ್ಕಿಂತ ಅದು ಹೆಚ್ಚು ಸತ್ಯವಾಗಿರುತ್ತದೆ. ಹಳ್ಳಿಯಲ್ಲಿ ಹರಡಿಕೊಂಡಿರುವ ಅಜ್ಞಾನಕ್ಕೆ ಪ್ರತೀಕಾರವನ್ನೆಸಗುವುದು ಜ್ಞಾನ ಪ್ರಸಾರದಿಂದ ಮಾತ್ರವೇ ಸಾಧ್ಯ. ಈ ಕೆಲಸವನ್ನು ಮಾಡಬಯಸುವಂಥವರು ಹಳ್ಳಿಯಿಂದ ಹೊರಬಂದು ವಿದೇಶಗಳಿಗೆ ಹೋಗಿ ಮೊದಲು ಮನುಷ್ಯರಾಗಿ ಬರಬೇಕು. ಆದರೆ, ಹಳ್ಳಿಗಳಲ್ಲಿ ಕುಳಿತು ಹಾಗೂ ಹಳ್ಳಿಗಳ ಒಳ್ಳೆಯ-ಕೆಟ್ಟ ಜನರೊಂದಿಗೆ ಚೆನ್ನಾಗಿ ಬೆರತೇ ಈ ಕೆಲಸ ಮಾಡಬೇಕು.[3]

ಬರ್ಮಾದಲ್ಲಿ 'ಪಲ್ಲೀ ಸಮಾಜ'ಕ್ಕೆ ಸ್ವಾಗತ ದೊರೆಯಿತಾದರೂ, ಕಲ್ಕತ್ತಾದಲ್ಲಿ

---

1 'ಶರತ್‌ಚಂದ್ರರ್ ಜೀವನೇರ್ ಏಕ್ ದಿಕ್' (ಮೊದಲ ಭಾಗ): ಸುರೇಂದ್ರನಾಥ ಗಂಗೂಲಿ, ಪು. 17

2 ಸೆಪ್ಟೆಂಬರ್ 22, 1915

3 ಮಾರ್ಚ್ 10, 1916ರ ಒಂದು ಪತ್ರ.

ಕಟುವಾದ ಟೀಕೆ ವ್ಯಕ್ತವಾಯಿತು. ವಿಧವೆಯಾಗಿದ್ದ ರಮಾ ರಮೇಶನನ್ನು ಏಕೆ ಪ್ರೀತಿಸತೊಡಗಿದಳು ಎಂಬುದರ ಬಗ್ಗೆ ಬಗೆಬಗೆಯಾದ ಜನರು ಬಗೆಬಗೆಯಾದ ಆಕ್ಷೇಪಗಳನ್ನೆತ್ತತೊಡಗಿದರು. ಸಾಹಿತ್ಯದ ಒಬ್ಬ ಪ್ರವೀಣ ವಿಮರ್ಶಕ 'ಸಾಹಿತ್ಯದ ಆರೋಗ್ಯ ರಕ್ಷಣೆ' ಎಂಬ ಗ್ರಂಥದಲ್ಲಿ ರಮಾಳನ್ನು ಹೀಗೆ ಖಂಡಿಸಿದ್ದಾನೆ: "ಜಾಗೀರುದಾರಿಣಿ, ನೀನು ಬುದ್ಧಿವಂತಳಲ್ಲವೆ? ನಿನ್ನ ಬುದ್ಧಿಬಲದಿಂದಾಗಿಯೇ ತಂದೆಯ ಜಮೀನುದಾರಿಯ ಆಡಳಿತ ವ್ಯವಸ್ಥೆಯನ್ನು ನಿರ್ವಹಿಸಲು ನಿನಗೆ ಸಾಧ್ಯವಾಯಿತು. ಅಂಥ ನೀನೇ ನಿನ್ನ ಬಾಲ್ಯದ ಗೆಳೆಯನಾದ ಪರಪುರುಷ ರಮೇಶನನ್ನು ಪ್ರೀತಿಸಿಬಿಟ್ಟೆಯಲ್ಲ! ಇದೇ ಏನು ನಿನ್ನ ಬುದ್ಧಿವಂತಿಕೆ, ಛೀ."

ಈ ಆಕ್ರಮಣಕ್ಕೆ ಇನ್ನೊಂದು ಮುಖವೂ ಇತ್ತು - ರಮಾ ಮತ್ತು ರಮೇಶ ಪರಸ್ಪರ ಅಷ್ಟೊಂದು ಪ್ರೀತಿಸತೊಡಗಿದ್ದರೆ, ಲೇಖಕ ಅವರ ಮದುವೆಯನ್ನೇಕೆ ಮಾಡಿಸಿಬಿಡಲಿಲ್ಲ? ಈ ಎಲ್ಲ ಆಕ್ಷೇಪಗಳಿಗೆ ಉತ್ತರಕೊಡುತ್ತ ಶರತ್ ಹೀಗೆ ಬರೆದಿದ್ದಾನೆ: " 'ಪಲ್ಲಿ ಸಮಾಜ' ಎಂಬ ಹೆಸರಿನಲ್ಲಿ ನಾನು ಒಂದು ಸಣ್ಣ ಪುಸ್ತಕವನ್ನು ಬರೆದಿದ್ದೇನೆ. ಅದರಲ್ಲಿ ವಿಧವೆ ರಮಾ ತನ್ನ ಬಾಲ್ಯಕಾಲದ ಗೆಳೆಯನಾದ ರಮೇಶನನ್ನು ಪ್ರೀತಿಸುತ್ತಾಳೆ. ಇದಕ್ಕಾಗಿ ನಾನು ತುಂಬ ಟೀಕೆ-ಟಿಪ್ಪಣಿಗಳನ್ನೂ, ಖಂಡನೆಯನ್ನೂ ಸಹಿಸಬೇಕಾಗಿ ಬಂದಿದೆ. ಇಷ್ಟೊಂದು ಕೆಟ್ಟ ನೀತಿಗೆ ಆಸರೆಯನ್ನು ಕೊಡುವುದಾದಲ್ಲಿ ಹಳ್ಳಿಯಲ್ಲಿ ಹೆಸರಿಗೂ ಒಬ್ಬ ವಿಧವೆ ಇರುವುದಿಲ್ಲವೆಂದು ಒಬ್ಬ ಮಹಾ ವಿಮರ್ಶಕ ಆಕ್ಷೇಪವನ್ನು ಹೊರಿಸಿದ್ದಾನೆ. ಸಾವು-ಬದುಕು ಇವುಗಳ ವಿಚಾರವನ್ನು ಹೇಳಲಾಗುವುದಿಲ್ಲ. ಆದರೆ, ಪ್ರತಿಯೊಬ್ಬ ಗಂಡನಿಗೂ ಇದು ದುಶ್ಚಿಂತೆಯ ವಿಚಾರವಾಗುತ್ತದೆ ಎಂಬುದು ಆತನ ಅಭಿಪ್ರಾಯ. ಇದಕ್ಕೆ ಇನ್ನೊಂದು ಮುಖವೂ ಇದೆಯಲ್ಲವೆ! ಇದಕ್ಕೆ ಆಸರೆಯನ್ನು ಕೊಡುವುದರಿಂದ ಒಳ್ಳೆಯದಾಗುತ್ತದೆಯೋ ಅಥವಾ ಕೆಟ್ಟದಾಗುತ್ತದೆಯೋ? ಹಿಂದೂ ಸಮಾಜ ಸ್ವರ್ಗಕ್ಕೆ ಹೋಗುತ್ತದೆಯೋ ಅಥವಾ ನರಕಕ್ಕೋ - ಇದರ ಮೀಮಾಂಸೆಯ ಹೊಣೆ ನನ್ನ ಮೇಲಿಲ್ಲ. ರಮಾಳಂಥ ಹೆಣ್ಣು ಹಾಗೂ ರಮೇಶ್‌ನಂಥ ಗಂಡುಗಳು ಯಾವುದೇ ಸಮಾಜದಲ್ಲಿ ಹಿಂಡುಹಿಂಡಾಗಿ ಹುಟ್ಟುವುದಿಲ್ಲ. ಅವರ ಸಮ್ಮಿಲಿತ ಪವಿತ್ರ ಜೀವನವನ್ನು ಕಲ್ಪಿಸಿಕೊಳ್ಳುವುದು ಕಷ್ಟವೇನೂ ಅಲ್ಲ. ಆದರೆ, ಹಿಂದೂ ಸಮಾಜದಲ್ಲಿ ಈ ಪರಿಹಾರಕ್ಕೆ ಎಡೆ ಇರಲಿಲ್ಲ. ಇದರಿಂದಾದ ಪರಿಣಾಮವೇನೆಂದರೆ ಇಷ್ಟು ಹಿರಿಯ, ಉದಾತ್ತ ಸ್ವಭಾವದ ನರನಾರಿಯರು ಈ ಜೀವನದಲ್ಲಿ ವಿಫಲರೂ, ನಿರುಪಯೋಗಿಗಳೂ, ಪಂಗುಗಳೂ ಆಗಿಬಿಟ್ಟದ್ದಾರೆ. ವೇದನೆಯ ಈ ಸುದ್ದಿಯನ್ನು ಮನುಷ್ಯರ ಹೃದಯದ ಮುಚ್ಚಿದ ಬಾಗಿಲಿನವರೆಗೆ ತಲುಪಿಸುವುದು ನನಗೆ ಸಾಧ್ಯವಾಗಿದ್ದರೆ, ಇದಕ್ಕಿಂತ ಹೆಚ್ಚಿನದೇನೂ ನನಗೆ ಬೇಕಾಗಿಲ್ಲ. ಇದರಿಂದಾಗುವ ಲಾಭ-ನಷ್ಟಗಳನ್ನು ತೂಗಿನೋಡುವುದು ಸಮಾಜದ ಹೊಣೆಯೇ ಹೊರತು ಸಾಹಿತಿಯ ಹೊಣೆಯಲ್ಲ. ರಮಾಳ ನಿರುಪಯುಕ್ತ ಜೀವನದಂತೆ ನನ್ನ ಈ ಕೃತಿ ಸದ್ಯದಲ್ಲಿ ನಿರುಪಯುಕ್ತವಾಗಬಹುದು. ಆದರೆ, ಭವಿಷ್ಯದ ನ್ಯಾಯಾಲಯದಲ್ಲಿ ಎಂದಾದರೂ ಒಂದು ದಿನ ನಿರ್ದೋಷಿಯೊಬ್ಬನಿಗೆ ಇಷ್ಟೊಂದು ಭಾರಿ ಶಿಕ್ಷೆಯನ್ನು ವಿಧಿಸಿರುವುದು ಯಾವ ರೀತಿಯಲ್ಲೂ ಒಪ್ಪಿಗೆಯಾಗುವುದಿಲ್ಲ. ಈ ಮಾತನ್ನು ನಾನು

ಖಚಿತವಾಗಿ ಹೇಳಬಲ್ಲೆ. ಈ ಆತ್ಮವಿಶ್ವಾಸ ನನ್ನಲ್ಲಿ ಇಲ್ಲದಿದ್ದರೆ, ಸಾಹಿತ್ಯದೇವಿಯ ಲೇಖನಿ ಅಂದೇ ಸನ್ಯಾಸವನ್ನು ಸ್ವೀಕರಿಸಿಬಿಡುತ್ತಿತ್ತು."[1]

'ಪಲ್ಲಿ ಸಮಾಜ'ದ ಬಗ್ಗೆ ಮಾತ್ರವಲ್ಲದೆ, ತನ್ನ ಇನ್ನೆರಡು ಕಾದಂಬರಿಗಳ ರಚನೆಯ ವಿಷಯದಲ್ಲಿಯೂ ಅವನು ಗಮನಹರಿಸಿದ್ದ: 'ಗೃಹದಾಹ' ಮತ್ತು 'ಶ್ರೀಕಾಂತ' - ಇವೇ ಆ ಕಾದಂಬರಿಗಳು. 'ಗೃಹದಾಹ'ದ ಬಗ್ಗೆ ಅನೇಕ ಕಿಂವದಂತಿಗಳು ಹಬ್ಬಿಕೊಂಡಿದ್ದುವು. ಇದಕ್ಕೆ ಅವನೇ ಕಾರಣವಾಗಿಯೂ ಇದ್ದ. ಯಾವಾಗ ಯಾವ ಮಾತನ್ನು ಆಡುತ್ತಿದ್ದ. ಯಾವಾಗ ಅದನ್ನು ಖಂಡಿಸಿ ಬೇರೊಂದು ಮಾತನ್ನು ಹೇಳುತ್ತಿದ್ದ ಎಂಬುದರ ಪರಿವೆಯೇ ಇರುತ್ತಿರಲಿಲ್ಲವೆಂದೇನೂ ಅಲ್ಲ. ಬಹುಶಃ ತಿಳಿದೂ ತಿಳಿದೇ ಅವನು ಹೀಗೆ ಮಾಡುತ್ತಿದ್ದ. ಹೀಗೆ ಮಾಡುವುದರಲ್ಲಿ ಅವನಿಗೆ ಆನಂದವೂ ಉಂಟಾಗುತ್ತಿತ್ತು. ಒಂದು ಕಾಗದದಲ್ಲಿ ಅವನು ಹೀಗೆ ಬರೆದಿದ್ದ: " 'ಗೋರಾ' ಕಾದಂಬರಿಯ ಪರೇಶ್ ಬಾಬೂವಿನ ಪಾತ್ರದಿಂದ ಈ ಕಥೆಯ ಭಾವವನ್ನು ಎತ್ತಿಕೊಂಡಿದ್ದೇನೆ - ಅಂದರೆ, ನನ್ನ ದೃಷ್ಟಿಯಲ್ಲಿ ಇದು ಅನುಕರಣ. ಆದರೆ ಇದನ್ನು ಯಾರೂ ಪತ್ತೆ ಹಚ್ಚಲಾರರು. ಇದೊಂದು ಸಾಮಾಜಿಕ ಕೌಟುಂಬಿಕ ಕಥೆ. ಇದು ಸುಂದರವಾಗಿ ಮೂಡುತ್ತದೆಂಬ ಬಗ್ಗೆ ನನ್ನ ಮನಸ್ಸಿನ ತುಂಬ ಉತ್ಸಾಹವಿದೆ. ಆದರೆ ಏನು ಹೋಗಿ ಏನಾಗುತ್ತದೆ ಎಂಬುದನ್ನೂ ಹೇಳಲಾರೆ."

ಅವನು ರವೀಂದ್ರರಿಂದ ತುಂಬ ಪ್ರಭಾವಿತನಾಗಿದ್ದನೆಂಬುದಕ್ಕೆ ಇಂಥ ಪತ್ರಗಳಿಂದ ನಿಜವಾಗಿಯೂ ಸಮರ್ಥನೆ ದೊರೆಯುತ್ತದೆ. ಸ್ವಲ್ಪ ಮಟ್ಟಿಗೆ ಅವನು ಆ ಪ್ರಭಾವದ ಹಿಡಿತದಲ್ಲಿಯೇ ಇರುತ್ತಿದ್ದ. ಯಾವುದೇ ಒಂದು ಕೃತಿಯನ್ನು ರಚಿಸುವ ಸಂದರ್ಭದಲ್ಲಿ ಈ ಕೃತಿ ರವೀಂದ್ರನಾಥರ ಇಂಥ ಕೃತಿಗಿಂತ ಚೆನ್ನಾಗಿರಬೇಕು ಅಥವಾ ಕನಿಷ್ಠ ಪಕ್ಷ ಅದರಂತೆಯಾದರೂ ಆಗಲೇಬೇಕು ಎಂಬ ಭಾವನೆ ಅವನ ಅವಚೇತನದಲ್ಲಿ ಖಂಡಿತವಾಗಿಯೂ ಅಲೆದಾಡುತ್ತಲೇ ಇರುತ್ತಿತ್ತು. ಮತ್ತೆ ಮತ್ತೆ ಅವನು ತನ್ನ ಗೆಳೆಯರಿಗೆ ಹೀಗೆಂದು ಬರೆಯುತ್ತಿದ್ದ: "ರವೀಂದ್ರನಾಥರನ್ನು ಬಿಟ್ಟರೆ ಬೇರೆ ಯಾರೂ ಇಂಥ ಕೃತಿಯನ್ನು ರಚಿಸಲಾರರು ಎಂಬ ನೆಚ್ಚು ನಿಮ್ಮಲ್ಲಿ ಮೂಡಿದಾಗ ಮಾತ್ರವೇ ನನ್ನ ಕೃತಿಯನ್ನು ಕಳಿಸಿಕೊಡುವಂತೆ ನನ್ನನ್ನು ಕೇಳಿ."

ಅವನ ಅಂತರ್ಯದಲ್ಲಿ ಬೀಡುಬಿಟ್ಟಿದ್ದ ಈ ವಿಚಿತ್ರ ಮನೋಗ್ರಂಥಿ ಅವನಿಂದ ಈ ಬಗೆಯ ಅನೇಕ ಕೆಲಸಗಳನ್ನು ಮಾಡಿಸುತ್ತಿತ್ತು.

ಕಲ್ಕತ್ತೆಗೆ ಹಿಂದಿರುಗುವುದಕ್ಕೆ ಮೊದಲೇ 'ಶ್ರೀಕಾಂತ' ಕಾದಂಬರಿಯ ರಚನೆ ಆರಂಭಗೊಂಡಿತ್ತು. ಧಾರಾವಾಹಿಯಾಗಿ ಅದು 'ಭಾರತ ವರ್ಷ'ದಲ್ಲಿ ಪ್ರಕಟವಾಗುತ್ತಲೂ ಇತ್ತು. ಅವನು ತನ್ನ ಇತರ ಕೃತಿಗಳಂತೆ, ಇದನ್ನೂ ಕಛೇರಿಯ ಕೆಲಸದಲ್ಲಿದ್ದ ಅವಧಿಯಲ್ಲೇ ಆರಂಭಿಸಿದ್ದ. ಅವನ ಮೊದಲ ಕಥೆಗಳೊಂದಿಗೆ ಯೋಗೇಂದ್ರನಾಥ ಸರ್ಕಾರ್ ಅವರ ಹೆಸರು ಹೇಗೆ ಸೇರಿಕೊಂಡಿದೆಯೋ ಹಾಗೆಯೇ 'ಶ್ರೀಕಾಂತ' ಕಾದಂಬರಿಯೊಂದಿಗೆ ಕುಮುದಿನೀ ಕಾಂತಕರ್ ಅವರ ಹೆಸರು ಸೇರಿಕೊಂಡಿದೆ. ಈ ಕಾದಂಬರಿಯಲ್ಲಿನ ಶ್ರೀಕಾಂತ ಸ್ವತಃ ಅವನೇ ಹಾಗೂ ರಾಜಲಕ್ಷ್ಮಿ

1. 'ಸಾಹಿತ್ಯ ಮೇಂ ಆರ್ಟ್ ಔರ್ ದುರ್ನೀತಿ' (ಸಾಹಿತ್ಯದಲ್ಲಿ ಕಲೆ ಮತ್ತು ದುರ್ನೀತಿ) ಎಂಬ ಪ್ರಬಂಧದಿಂದ.

ಅವನ ಪ್ರೇಯಸಿ ಎಂಬುದು ಬಹುಜನರ ನಂಬಿಕೆ. ಈ ರಾಜಲಕ್ಷ್ಮಿಯನ್ನು ಅರಸುವ ಪ್ರಯತ್ನದಲ್ಲಿ ಅದೆಷ್ಟು ಮಂದಿ ಹುಚ್ಚರಾದರೋ ಏನೋ. ಆದರೆ, ಆಕೆಯನ್ನು ಯಾರೂ ಎಲ್ಲಿಯೂ ಗುರುತಿಸಲಾರದೆ ಹೋದರು. ಅರಸುವುದಾದರೂ ಹೇಗೆ ಸಾಧ್ಯವಿತ್ತು? ಆಕೆ ಲೇಖಕನ ಕಲ್ಪನೆ - ಅತೃಪ್ತ ಕಾಮನೆಗಳ ಕಲ್ಪನೆ- ಮಾತ್ರವಷ್ಟೇ ಆಗಿದ್ದಳಲ್ಲವೆ! ತನ್ನ ಬಾಲ್ಯ ಕಾಲದ ಗೆಳತಿಯಾಗಿದ್ದ ಧೀರೂಳನ್ನು ಆಧಾರ ವಾಗಿರಿಸಿಕೊಂಡು ಮೊದಲು 'ದೇವದಾಸ್' ಕಾದಂಬರಿಯ ಪಾರ್ವತಿಯನ್ನು ಹಾಗೂ ಅನಂತರದಲ್ಲಿ 'ಶ್ರೀಕಾಂತ' ಕಾದಂಬರಿಯ ರಾಜಲಕ್ಷ್ಮಿಯನ್ನು ಅವನು ಚಿತ್ರಿಸಿದ್ದ. ಯೌವನದ ಮೊದಲ ಚರಣದಲ್ಲಿ ವಿಫಲಗೊಂಡಿದ್ದ ಅವನ ಆ ಪ್ರೇಮ ಪ್ರಕರಣದ ನಾಯಿಕೆಯೂ ರಾಜಲಕ್ಷ್ಮಿಯಾಗಿದ್ದಿರಬಹುದು. ಮುಜಫರಪುರದ ರಾಜಬಾಲಾ ಏಕಾಗಿರಬಾರದು?

ಈ ರೀತಿ ಅನೇಕ ವ್ಯಕ್ತಿಗಳು ಅನೇಕ ಬಗೆಯ ಮಾತುಗಳನ್ನಾಡಿರುವುದು ಮಾತ್ರವಲ್ಲ, ಸ್ವತಃ ಅವನ ಬಾಯಿಯಿಂದಲೂ ಇಂಥ ಅದೆಷ್ಟೋ ಮಾತುಗಳನ್ನು ಆಡಿಸಿಬಿಟ್ಟಿದ್ದಾರೆ. ಕೆಲವರು ಹಿರಣ್ಮಯೀ ದೇವಿಯೇ ರಾಜಲಕ್ಷ್ಮಿ ಎಂದು ಭಾವಿಸಿದ್ದಾರೆ. ಪ್ರೀತಿಯಿಂದ ಆಕೆಯನ್ನು ಅವನು ಎಂದಾದರೂ 'ಲಕ್ಷ್ಮೀ' ಎಂದು ಕರೆದಿದ್ದಿರಬಹುದು. ಸರಿ ಇಷ್ಟರ ಆಧಾರದಿಂದಲೇ ಆಕೆಯನ್ನು ರಾಜಲಕ್ಷ್ಮಿ ಎಂದು ತೀರ್ಮಾನಿಸಿಬಿಟ್ಟರು. ಒಬ್ಬ ಗೆಳೆಯನಂತೂ "ಮದುವೆ ಮಾಡಿಸಿ ಈ ಮಹಾ ಪ್ರೇಮಕ್ಕೆ ನೀವು ಅಗೌರವವನ್ನೆಸಗಿದ್ದೀರಿ. ಪುಣ್ಯ ಭಾಗೀರಥಿಯ ಅನಿರ್ಬಂಧಿತ ಸ್ವಚ್ಛ ಜಲವಾಗಿದ್ದಂಥದಕ್ಕೆ ನೀವು ಅಣೆಕಟ್ಟನ್ನು ಕಟ್ಟಿ ಅದಕ್ಕೊಂದು ಕೆರೆಯ, ಹಳ್ಳದ ರೂಪವನ್ನು ಕೊಟ್ಟಿದ್ದೀರಿ" ಎನ್ನುವವರೆಗೂ ಹೋಗಿದ್ದ.

ಕೆಲವು ಕ್ಷಣಗಳವರೆಗೆ ಮೌನವಾಗಿದ್ದು ಶರತ್ ಇಷ್ಟು ಮಾತ್ರ ಹೇಳಿದ: "ಬೇರಾವ ದಾರಿಯೂ ಇರಲಿಲ್ಲವಲ್ಲ! ಆದರೆ, ಆಕೆಯನ್ನು ನಾನೇನೂ ಕೈಬಿಟ್ಟಿಲ್ಲವಲ್ಲ!"

ಇದನ್ನು ನಿಜವೆಂದು ಒಪ್ಪಲು ಸಾಧ್ಯವಾಗುತ್ತದೆಯೆ? ಖಂಡಿತವಾಗಿ ಒಪ್ಪಲು ಸಾಧ್ಯವಾಗುವುದಿಲ್ಲ. ಈ ಸಂಗತಿ ನಿಜವಾಗಿದ್ದರೆ, ತನ್ನ ಒಂದು ಕಾಗದದಲ್ಲಿ ಅವನು ಹೀಗೇಕೆ ಬರೆಯುತ್ತಿದ್ದ:[1] "ರಾಜಲಕ್ಷ್ಮಿ ಎಲ್ಲಿ ಸಿಕ್ಕುತ್ತಾಳೆ? ಅದೆಲ್ಲ ಮನಸ್ಸಿನಲ್ಲಿಯೇ ಕಲ್ಪಿಸಿದಂಥ ಕಾಲ್ಪನಿಕ ಕಥೆ. 'ಶ್ರೀಕಾಂತ' ಎಂಬುದು ಒಂದು ಕಾದಂಬರಿಯಷ್ಟೇ. ಸುಳ್ಳು ವದಂತಿಗಳನ್ನು ಕೇಳದಿರುವುದೇ ಮೇಲು."

ಆದರೆ, ಇದನ್ನು ಅರಸಲೆಂದೇ ಹೊರಟಿದ್ದವರು, ಈ ನಿಷೇಧವನ್ನು ಕಂಡು ತೆಪ್ಪಗಿರುವುದು ಹೇಗೆ ತಾನೆ ಸಾಧ್ಯವಾಗಬಹುದಿತ್ತು? ಅವರು ಹಿರಣ್ಮಯೀ ದೇವಿಯವರ ಬಳಿಗೆ ಹೋಗಿ ಕೇಳುತ್ತಿದ್ದರು: "ರಾಜಲಕ್ಷ್ಮಿ ನೀವೇ ಅಲ್ಲವೆ?"

ಇಂಥ ಪ್ರಶ್ನೆಗಳನ್ನು ಕೇಳಿ ಕೇಳಿ ಆಕೆ ಎಷ್ಟು ನೊಂದುಕೊಂಡರೆಂದರೆ ಜನರ ಜೊತೆ ಬೆರೆಯುವುದನ್ನೇ ಆಕೆ ನಿಲ್ಲಿಸಿಬಿಟ್ಟರು. ಆ ಬಡಪಾಯಿ 'ಶ್ರೀಕಾಂತ' ಕಾದಂಬರಿಯ ರಾಜಲಕ್ಷ್ಮಿಯಂತೆ ರೂಪಸಿಯೂ ಆಗಿರಲಿಲ್ಲ, ಶ್ರೀಮಂತಳೂ ಆಗಿರಲಿಲ್ಲ. ನೃತ್ಯ-ಗಾಯನಗಳ ಮಾತು ಹಾಗಿರಲಿ, ಮಾತುಕತೆಗಳಲ್ಲಿಯೂ ಆಕೆ ಚತುರೆಯೇನೂ ಆಗಿರಲಿಲ್ಲ. ಆಕೆ ತುಂಬ ಸರಳ, ಸಾಮಾನ್ಯ ಹಾಗೂ ಅವಿದ್ಯಾವಂತ

1. ಆಗಸ್ಟ್ 14, 1916 (ಲೀಲಾರಾನೀ ಗಂಗೋಪಾಧ್ಯಾಯ)

ನಾರಿಯಾಗಿದ್ದರೂ, ತುಂಬ ಧರ್ಮಪರಾಯಣೆಯೂ, ಪತಿವ್ರತೆಯೂ, ಸೇವಾ ಶೀಲೆಯೂ ಆದ ಮಹಿಳೆಯಾಗಿದ್ದರು. 'ಶರತ್‌ಚಂದ್ರರ ವಿಷಯದಲ್ಲಿ ಆಕೆಗೆ ತುಂಬ ಪ್ರೀತಿಯಿತ್ತು, ಶ್ರದ್ಧೆಯಿತ್ತು. ಆ ದಿಕ್ಕು ತಪ್ಪಿದ, ಆಸರೆ ಇಲ್ಲದಿದ್ದ ವ್ಯಕ್ತಿಯ ಬಾಳನ್ನು ಸುಖಮಯವಾಗಿಸಲು ಆಕೆ ತನ್ನ ದೃಷ್ಟಿಯಲ್ಲಿ ಹಾಗೂ ತಿಳುವಳಿಕೆಯಲ್ಲಿ ಸಾಧ್ಯವಿದ್ದುದೆಲ್ಲವನ್ನೂ ಮಾಡಿದರು. ಭಾವುಕ ಮನೋವೃತ್ತಿ ಸಾಮಾನ್ಯವಾಗಿ ಅತಿರೇಕಕ್ಕೆ ಬಲಿಯಾಗುತ್ತದೆ. ಆದರೆ, ತನ್ನ ಯೌವನ ಕಾಲದಲ್ಲಿ ಉಪೇಕ್ಷೆ ಮತ್ತು ಅಪಮಾನಗಳಿಂದಾಗಿ ದಿಕ್ಕು ತಪ್ಪಿದವನಾಗಿ ಬಾಳನ್ನು ವ್ಯರ್ಥವಾಗಿಸುತ್ತಿದ್ದ ಶರತ್ ಮೊದಲಿಗೆ ಶಾಂತಿದೇವಿಯ ಹಾಗೂ ಅನಂತರದಲ್ಲಿ ಹಿರಣ್ಮಯೀ ದೇವಿಯ ಸಂಪರ್ಕವನ್ನು ಪಡೆದು ಜೀವಂತಿಕೆಯಿಂದ ಕೂಡಿದ ಸಾಹಿತ್ಯದ ಪರಿಕಾರನಾಗಿ ಪರಿಣಮಿಸಿದ; ಇದಕ್ಕೆ ಆ ಮಹಿಳೆಯರ ತಪಸ್ಯಾಮಯ ಶ್ರದ್ಧೆಯೇ ಕಾರಣವಾಯಿತು. ಅವನು ತೇಜಸ್ಸಿನ ಪುಂಜವಾಗಿದ್ದ. ತೇಜಸ್ಸಿನ ಪುಂಜಕ್ಕೆ ನಾರಿಯ ಸ್ಪರ್ಶ ಬೇಕೇ ಬೇಕು. ಇಲ್ಲವಾದಲ್ಲಿ ಆ ತೇಜಸ್ಸು ಅವನನ್ನು ಸುಟ್ಟು ಬೂದಿ ಮಾಡಿ ಬಿಡುವುದಲ್ಲದೆ, ಅವನ ಸುತ್ತಮುತ್ತ ಇರುವುದೆಲ್ಲವನ್ನೂ, ದಿಕ್ಕು ತಪ್ಪಿಸಿ, ನಾಶಪಡಿಸುತ್ತಿರುತ್ತದೆ.

ಶ್ರೀಕಾಂತನೂ ಶರತ್‌ನಂತೆಯೇ ಅಲೆಮಾರಿ ಎಂಬುದರಲ್ಲಿ ಅನುಮಾನವೇನೂ ಇಲ್ಲ. ಅಷ್ಟೇ ಅಲ್ಲ, ಈ ಕಾದಂಬರಿಯಲ್ಲಿ ವರ್ಣಿಸಲಾಗಿರುವ ಅನೇಕ ಘಟನೆಗಳಿಗೆ ನಿಜ ಜೀವನದ ಘಟನೆಗಳೇ ಆಧಾರವಾಗಿಯೂ ಇವೆ. ತನ್ನ ಒಬ್ಬ ಗೆಳೆಯನೊಂದಿಗೆ ಈ ವಿಷಯದ ಬಗ್ಗೆ ಮಾತನಾಡುತ್ತ ಒಮ್ಮೆ ಅವನು ಹೀಗೆ ಹೇಳಿದ್ದ: "ನೀವು ನನ್ನ ಕಾದಂಬರಿಯನ್ನು ಓದುವಾಗ ದಯವಿಟ್ಟು ಘಟನೆಗಳು ಮತ್ತು ಪರಿಸ್ಥಿತಿಗಳ ಮೇಲೆ ಹೆಚ್ಚು ಒತ್ತು ಕೊಡಬೇಡಿ. ಘಟನೆಯನ್ನು ನಾನು ಕಾದಂಬರಿಯ ನಿಜವಾದ ವಸ್ತುವೆಂದು ಭಾವಿಸುವುದೇ ಇಲ್ಲ. ಪಾತ್ರ ಚಿತ್ರಣವೇ ನನ್ನ ಏಕೈಕ ಉದ್ದೇಶ. ಅದರ ಜೊತೆಯಲ್ಲಿ ಘಟನೆಗಳು ತಾವಾಗಿಯೇ ಹೆಣೆದುಕೊಂಡು ಬರುತ್ತವೆ. ಅದಕ್ಕಾಗಿ ಪ್ರಯತ್ನಿಸಬೇಕಾಗಿ ಬರುವುದಿಲ್ಲ. ನನ್ನ ಪಾತ್ರಗಳ ಅಂತರಾಳದಲ್ಲಿ ಯಾವ ಯಾವ ಸ್ಥಳಗಳು ಯಥಾರ್ಥವಾಗಿರಬಹುದೋ, ಅವೆಲ್ಲ ಪಾತ್ರ ಚಿತ್ರಣಕ್ಕೆ ಹಿನ್ನೆಲೆಯ ರೂಪದಲ್ಲಿ ಇರುತ್ತವೆಯೇ ಹೊರತು, ಅದಕ್ಕಿಂತ ಹೆಚ್ಚೇನೂ ಅಲ್ಲ."

ಈ ಘಟನೆಗಳ ಬಗ್ಗೆ ತನ್ನ ಒಬ್ಬ ಗೆಳೆಯನೊಂದಿಗೆ ಚರ್ಚಿಸುತ್ತಿದ್ದಾಗ 'ಶ್ರೀಕಾಂತ' ಕಾದಂಬರಿಯಲ್ಲಿ ಸ್ವಲ್ಪ ಮಟ್ಟಿಗೆ ತನ್ನ ಕಥೆಯೂ ಇದೆ ಎಂಬುದನ್ನು ಅವನು ಒಪ್ಪಿಕೊಂಡಿದ್ದ. ಜೀವನದ ಯಾವುದೇ ಘಟನೆಯನ್ನು ಸಾಹಿತ್ಯದ ನೆಲಗೆ ತರುವಾಗ ಅನೇಕವೇಳೆ ಬಿಡಿಬಿಡಿಯಾಗಿರುವ ಘಟನೆಗಳನ್ನು ಸಂಬದ್ಧಗೊಳಿಸಲು ಅಥವಾ ಅವುಗಳಿಗೆ ಪೂರ್ಣರೂಪದಲ್ಲಿ ಕಥೆಯ ರೂಪವನ್ನು ಕೊಡಲು ಕಲ್ಪನೆಯ ನೆರವನ್ನು ಪಡೆದುಕೊಳ್ಳಲೇಬೇಕಾಗುತ್ತದೆ. ಅವನು ಹೀಗೆ ಹೇಳಿದ್ದ: "ನೀನೊಬ್ಬ ಅಧ್ಯಾಪಕ. ನಿನ್ನ ವಿದ್ಯಾರ್ಥಿಯೊಬ್ಬನಿಗೆ 'ನನ್ನ ಹಳ್ಳಿ' ಎಂಬ ವಿಷಯದ ಬಗ್ಗೆ ಒಂದು ಪ್ರಬಂಧವನ್ನು ಬರೆದುಕೊಂಡು ಬರುವಂತೆ ಹೇಳುತ್ತೀಯೆ ಎಂದಿಟ್ಟುಕೊ. ಆ ಹಳ್ಳಿಯಲ್ಲಿ ಯಾವುದೇ ನದಿಯಾಗಲೀ, ದೇವಸ್ಥಾನವಾಗಲೀ ಇರುವುದಿಲ್ಲ. ಆದರೆ, ಅವನು ಒಳ್ಳೆಯ ಅಂಕಗಳನ್ನು ಪಡೆಯಬೇಕೆಂದು ಇಚ್ಛಿಸಿರುತ್ತಾನೆ. ಅವನೇನು ಮಾಡುತ್ತಾನೆಂಬುದನ್ನು ಕುರಿತು ಯೋಚಿಸು. ಅಕ್ಕಪಕ್ಕದ ಹಳ್ಳಿಗಳಲ್ಲಿ ತಾನು

ನೋಡಿರುವ ನದಿಗಳನ್ನು, ದೇವಸ್ಥಾನಗಳನ್ನು ತನ್ನ ಹಳ್ಳಿಯೊಂದಿಗೆ ಬೆಸೆಯುತ್ತ ಅವನು ತನ್ನ ಪ್ರಬಂಧವನ್ನು ಬರೆದು ಮುಗಿಸುತ್ತಾನೆ. ಸಾಹಿತ್ಯದ ವಿಷಯದಲ್ಲಿಯೂ ಇದೇ ಮಾತು ಅನ್ವಯಿಸುತ್ತದೆ."

ಇಲ್ಲಿ 'ಶ್ರೀಕಾಂತ' ಕಾದಂಬರಿಯಲ್ಲಿ ವರ್ಣಿಸಲಾಗಿರುವ ಕೆಲವು ಘಟನೆಗಳ ಬಗ್ಗೆಯೂ ಚರ್ಚಿಸಬಹುದು. ಇಂದ್ರನಾಥ ಇದರಲ್ಲಿ ಬರುವ ಒಂದು ಪಾತ್ರ. ಅವನು ಶ್ರೀಕಾಂತನ ಬಾಲ್ಯದ ಗೆಳೆಯ. ಭಾಗಲಪುರದಲ್ಲಿನ ತನ್ನ ಬಾಲ್ಯದ ಗೆಳೆಯ ರಾಜೇಂದ್ರನಾಥ ಮಜೂಮದಾರ್ ಉರ್ಫ್ ರಾಜುವನ್ನೇ ಶರತ್ ಇಂದ್ರನಾಥನ ರೂಪದಲ್ಲಿ ಚಿತ್ರಿಸಿದ್ದಾನೆಂದು ಒಂದು ತಂಡದವರು ಹೇಳುತ್ತಾರೆ. ರಾಜು ಮತ್ತು ಇಂದ್ರನಾಥ ಇಬ್ಬರ ಸ್ವಭಾವವೂ ಒಂದೇ ಬಗೆಯದಾಗಿದೆ. ಇದನ್ನು ಸ್ವತಃ ಶರತ್ ಒಪ್ಪಿಕೊಂಡಿದ್ದುಂಟು.

ಈ ಇಂದ್ರನಾಥ ಶರತ್‌ನ ಹುಟ್ಟೂರಾದ ದೇವಾನಂದಪುರದಲ್ಲಿನ ಸತೀಶಚಂದ್ರ ಭಟ್ಟಾಚಾರ್ಯನಲ್ಲದೆ ಬೇರೆ ಯಾರೂ ಅಲ್ಲವೆಂದು ಇನ್ನೊಂದು ತಂಡ ವಾದಿಸುತ್ತದೆ. ಹಳ್ಳಿಯಲ್ಲಿದ್ದಾಗ ಶರತ್‌ಗೆ ಸತೀಶಚಂದ್ರನ ಸಂಪರ್ಕ ಉಂಟಾಗಿತ್ತು. ಬಹುಮತ ರಾಜೇಂದ್ರನಾಥನ ಪರವಾಗಿಯೇ ಇದೆಯಾದರೂ, ಇಂದ್ರನಾಥನ ಪಾತ್ರ ಸೃಷ್ಟಿಗೆ ಶರತ್ ವಾಸ್ತವಲೋಕದ ಇಬ್ಬರು ವ್ಯಕ್ತಿಗಳನ್ನು ಆಧಾರವಾಗಿಸಿ ಕೊಂಡಿದ್ದನೆಂದು ಭಾವಿಸಿದರೆ ಆಗುವ ನಷ್ಟವಾದರೂ ಏನು ?

ಇದೇ ರೀತಿ ಅನ್ನದಾ ದೀದಿಯ ವಾಸ್ತವಿಕ ಅಸ್ತಿತ್ವವನ್ನೂ ಶರತ್ ಅಲ್ಲಗಳೆಯು ವುದಿಲ್ಲ. ಆಕೆ ದೇವಾನಂದಪುರದಲ್ಲಿದ್ದ ಅವನ ವಾವೆಯ ಸೋದರಿಯಾಗಿದ್ದವಳೇ ಅಥವಾ ಭಾಗಲಪುರದ ಯಾವಳೋ ಒಬ್ಬಳು ಹುಡುಗಿಯೇ ಎಂಬ ಪ್ರಶ್ನೆ ಅಸಂಗತವಾದುದು. ಅನೇಕ ವಾಸ್ತವಿಕ ಎಡೆಗಳೂ ಹೆಸರು ಬದಲಾಯಿಸಿಕೊಂಡು 'ಶ್ರೀಕಾಂತ' ದಲ್ಲಿ ಕಾಣಿಸಿಕೊಂಡಿವೆ. ಅನೇಕ ಘಟನೆಗಳನ್ನು ಅವನು ತನ್ನ ಸೌಲಭ್ಯಕ್ಕನುಗುಣವಾಗಿ ಬದಲಾಯಿಸಿಬಿಟ್ಟಿದ್ದಾನೆ. ಅವನ ಲೇಖನಿಯ ಚಮತ್ಕಾರ ಅವನ್ನು ಎಷ್ಟು ಮನೋಹರವಾಗಿಸಿಬಿಟ್ಟಿದೆಯೆಂದರೆ ನಿಜ ಯಾವುದು ಎಂಬುದನ್ನು ಪತ್ತೆ ಹಚ್ಚುವುದು ಅಸಾಧ್ಯವಾಗಿಬಿಟ್ಟಿದೆ. ತನ್ನ ಸ್ವಭಾವವನ್ನು ತಾನೇ ಚಿತ್ರಿಸುವುದು ತುಂಬ ದುಸ್ತರವಾದ ಕೆಲಸ. ಯಾವುದೇ ವಸ್ತುವನ್ನು ಚೆನ್ನಾಗಿ ನೋಡಬೇಕಾದರೆ, ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಸ್ವಲ್ಪಮಟ್ಟಿನ ದೂರವೂ, ಪ್ರತ್ಯೇಕತೆಯೂ ಅಗತ್ಯವಾಗುತ್ತದೆ. ಕಣ್ಣಿಗೆ ತೀರ ಹತ್ತಿರವಾಗಿದ್ದರೆ ಅದನ್ನು ಚೆನ್ನಾಗಿ ನೋಡಲು ಸಾಧ್ಯವಾಗುತ್ತದೆಯೆ ? ಕಲಾವಿದನೊಬ್ಬನಿಗೆ ತನ್ನ ಚಿತ್ರವನ್ನೇ ರಚಿಸುವುದು ಎಷ್ಟು ಕಷ್ಟವೋ, ತನ್ನನ್ನೇ ಚಿತ್ರಿಸಿಕೊಳ್ಳುವುದು ಲೇಖಕನಿಗೂ ಅಷ್ಟೇ ಕಷ್ಟವಾಗುತ್ತದೆ.

ಶ್ರೀಕಾಂತನ ಪಾತ್ರದಲ್ಲಿ ಶರತ್ ತನ್ನನ್ನೇ ಚಿತ್ರಿಸಿಕೊಂಡಿದ್ದಾನೆಯೇ ಇಲ್ಲವೇ ಎಂಬ ಪ್ರಶ್ನೆಗೆ ನೇರವಾದ ಉತ್ತರವನ್ನು ಕೊಡಬೇಕೆಂದರೆ ಅದು ಸಕ್ಕರೆಯನ್ನು 'ಸಂದೇಶ'[1] ವೆಂದು ಕರೆಯಬಹುದೇ ಎಂಬ ಪ್ರಶ್ನೆಗೆ ಕೊಡುವ ಉತ್ತರದಂತೆಯೇ ಆಗುತ್ತದೆ.

---

1 ಒಡೆಸಿದ ಹಾಲು ಹಾಗೂ ಸಕ್ಕರೆಯನ್ನು ಬಳಸಿ ತಯಾರಿಸುವ ಒಂದು ಜನಪ್ರಿಯ ಬಂಗಾಳಿ ಸಿಹಿತಿಂಡಿ. ಮಾವ ಉಪೇಂದ್ರನಾಥ ಗಂಗೂಲಿ ಅವರೂ ಈ ಲೇಖಕನೊಂದಿಗೆ ಇದೇ ಮಾತನ್ನು ಹೇಳಿದ್ದರು.

ಸಕ್ಕರೆಯನ್ನು 'ಸಂದೇಶ'ವೆನ್ನಬಹುದಾದರೆ, ಶ್ರೀಕಾಂತನ ಪಾತ್ರದಲ್ಲಿ ಶರತ್ ತನ್ನನ್ನು ಖಂಡಿತವಾಗಿಯೂ ಚಿತ್ರಿಸಿಕೊಂಡಿದ್ದಾನೆ ಎಂದೇ ಹೇಳಬೇಕಾಗುತ್ತದೆ. ಹಾಗಲ್ಲ ವಾದರೆ, ನಡುನಡುವೆ ಇಣುಕು ನೋಟಗಳು ಕಾಣದೊರೆಯುತ್ತವೆಂಬುದಷ್ಟೇ ಸತ್ಯ. ಪಾತ್ರ ಸೃಷ್ಟಿಯನ್ನೇ ಅವನು ಕಾದಂಬರಿಯ ಮಹತ್ವಪೂರ್ಣ ಅಂಶವೆಂದು ಭಾವಿಸಿದ್ದ. ಘಟನೆಗಳು ಅನಾಯಾಸವಾಗಿಯೇ ಬಂದು ಸೇರಿಕೊಳ್ಳುತ್ತಿದ್ದುವು. ಅಲ್ಲಲ್ಲಿ ವಾಸ್ತವಿಕತೆಯ ಸುಳಿವು ದೊರೆಯಬಹುದು. ಆದರೆ, ಅದು ಪಾತ್ರಸೃಷ್ಟಿಗೆ ಹಿನ್ನೆಲೆಯಾಗಿಯೇ ಉಳಿದುಕೊಂಡಿರುತ್ತದೆ. ಎಲ್ಲ ಲೇಖಕರೂ ತಮ್ಮ ಅನುಭವಗಳನ್ನು ಆಧಾರವಾಗಿರಿಸಿಕೊಂಡೇ ಕೃತಿಗಳನ್ನು ರಚಿಸುತ್ತಾರೆ. ಹೀಗೆ ನೋಡಿದರೆ, ಅವರ ಪ್ರತಿಯೊಂದು ಕೃತಿಯೂ ಅವರ ಆತ್ಮಕಥೆಯೇ ಆಗಿರುತ್ತದೆ. ಆದರೆ, ಕಾದಂಬರಿಯ ಮಾಧ್ಯಮವನ್ನು ಆಶ್ರಯಿಸಿ, ಪ್ರಚ್ಛನ್ನ ರೂಪದಲ್ಲಿ ಆತ್ಮಕಥೆಯನ್ನು ಬರೆಯುವುದನ್ನು ಶರತ್ ಹೇಡಿತನವೆಂದು ಭಾವಿಸುತ್ತಿದ್ದ. ಬಹುದಿನಗಳ ಬಳಿಕ ಹಿಂದಿಯ ಸುಪ್ರಸಿದ್ಧ ಕತೆಗಾರರಾದ ಇಳಾಚಂದ್ರ ಜೋಶಿಯವರೊಂದಿಗೆ ಅವನು ಹೀಗೆ ಹೇಳಿದ್ದ: "ಜೀವನವನ್ನು ವ್ಯಾಪಕವಾಗಿಯೂ, ಆಳವಾಗಿಯೂ ನೋಡುವ ಶಕ್ತಿ ಇಲ್ಲದವರು ಹಾಗೂ ತಮ್ಮ ಅಹಂನ ನಾಲ್ಕು ಗೋಡೆಗಳ ಹೊರಗೆ ಇಣುಕಿ ನೋಡಿ ಬಾಳಿನ ಸಿಂಹಾವಲೋಕನ ಮಾಡಬಲ್ಲ ಶಕ್ತಿ ಇಲ್ಲದವರು, ತಮ್ಮ ಕಲೆಯಲ್ಲಿ ನಿರಪೇಕ್ಷತೆಯನ್ನು ತರಲು ಅಸಮರ್ಥರಾಗುತ್ತಾರೆ. ಅಂಥವರು ಮಾತ್ರವೇ ಬಾಳಿನ ಗುಪ್ತ ಕಥೆಗೆ ಕಾದಂಬರಿಯ ರೂಪವನ್ನು ಕೊಡುತ್ತಾರೆ."

"ನನಗೆ ವೈಯಕ್ತಿಕವಾಗಿ ಪರಿಚಯವಿರುವಂಥ ಬಾಳಿನ ರೂಪಗಳನ್ನು ಮಾತ್ರವೇ ನಾನು 'ಶ್ರೀಕಾಂತ'ದಲ್ಲಿ ವರ್ಣಿಸಿದ್ದೇನೆ. ಹತ್ತಿರದಿಂದ ನೋಡಲು ನನಗೆ ಅವಕಾಶ ದೊರೆತಿದ್ದಂಥ ಪಾತ್ರಗಳನ್ನು ಮಾತ್ರವೇ ನಾನು ಆಯ್ದುಕೊಂಡಿದ್ದೇನೆ. ಇದರ ಅರ್ಥ ಇದು ನನ್ನ ಆತ್ಮಕಥೆ ಎಂದೇನೂ ಅಲ್ಲ. ಇಷ್ಟಾಗಿಯೂ ಜನರ ಈ ಮನೋವೃತ್ತಿಯನ್ನು ಅರಿತು ನಾನು ಸಂತೋಷಪಟ್ಟಿದ್ದೇನೆ. ಏಕೆಂದರೆ, ನನ್ನ ಪಾತ್ರಗಳು ಓದುಗರಿಗೆ ಜೀವಂತವಾಗಿ ತೋರುತ್ತವೆ. ಹಾಗೂ ಬಾಳಿನ ವರ್ಣನೆ ಹಾಗೂ ಪಾತ್ರ ಸೃಷ್ಟಿಗಳೆರಡೂ ವಾಸ್ತವಿಕ ಜೀವನಕ್ಕೆ ತುಂಬ ಹತ್ತಿರವಾಗಿವೆ ಎಂಬುದು ಇದರಿಂದ ಪ್ರಮಾಣಿತವಾಗುತ್ತದೆ" ಎಂದು ಸ್ಪಷ್ಟವಾಗಿ ಹೇಳಿದ್ದೂ ಉಂಟು.

ಮಾವ ಸುರೇಂದ್ರನಾಥರು ಹೀಗೆಂದು ಬರೆದಿದ್ದಾರೆ: "ಶರತ್‌ಚಂದ್ರರು ಸಾಹಿತ್ಯದಲ್ಲಿ ತಮ್ಮನ್ನು ಎಷ್ಟರಮಟ್ಟಿಗೆ ಪ್ರಕಟಿಸಿಕೊಂಡಿದ್ದಾರೋ, ಜೀವನ ಚರಿತ್ರೆಯ ರೂಪದಲ್ಲಿ ಅಷ್ಟು ಮಾತ್ರವೇ ಬೇಕಾದಷ್ಟು ಆಗಿದೆ; ಸ್ವತಂತ್ರ ಅಥವಾ ಬೇರೊಂದು ಜೀವನ ಚರಿತ್ರೆಯಾಗಲಿ ಇಲ್ಲ ಎಂದು ಅನೇಕರು ಹೇಳುತ್ತಾರೆ. ಆದರೆ ಶರತ್‌ಚಂದ್ರರು ಸಾಹಿತ್ಯದಲ್ಲಿ ತಮ್ಮನ್ನು ಅದ್ಭುತ ರೂಪದಲ್ಲಿ ಅಡಗಿಸಿಟ್ಟಿದ್ದಾರೆ. ಈ ಸಂಗತಿಯನ್ನು ಅರಿಯದವರಿಂದ ತಪ್ಪಾಗುವುದು ಸಹಜವೇ."

ತನ್ನ ಪ್ರತಿಯೊಂದು ಕೃತಿಯ ವಿಷಯದಲ್ಲೂ ಆಗುತ್ತಿದ್ದಂತೆ, 'ಶ್ರೀಕಾಂತ'ದ ವಿಷಯದಲ್ಲಿಯೂ ಅವನಿಗೆ ನಂಬಿಕೆ ಮೂಡಿರಲಿಲ್ಲ. ತನ್ನ ಪ್ರಕಾಶಕರಿಗೆ ಅವನು

ಹೀಗೆಂದು ಬರೆದಿದ್ದ: "ಶ್ರೀಕಾಂತನ ಅಲೆದಾಟದ ಕಥೆ ನಿಜವಾಗಿಯೂ ಅಚ್ಚಿಸಲು ಅರ್ಹವಾಗಿದೆಯೆಂದು ನಾನು ಭಾವಿಸಿರಲಿಲ್ಲ. ಈಗಲೂ ಹಾಗೆಂದು ಭಾವಿಸಿಲ್ಲ. ಆದರೂ, ಯಾರಾದರೂ ಇದನ್ನು ಅಚ್ಚಿಸಬಹುದು ಎಂದು ಯೋಚಿಸಿದ್ದೆ. ಅದೇ ಆಸೆಯಿಂದ ಬರೆದೂ ಇದ್ದೆ.... ಆದರ ಆರಂಭದಲ್ಲಿಯೇ ಇರುವ ಶ್ಲೇಷಾರ್ಥಗಳೆಲ್ಲ ಯಾವುದೇ ಸ್ಥಿತಿಯಲ್ಲಿಯೂ ನಿಮ್ಮ ಪತ್ರಿಕೆಯಲ್ಲಿ ಎಡೆಯನ್ನು ದೊರಕಿಸಿ ಕೊಳ್ಳಲಾರವು ಎಂಬುದು ಗೊತ್ತಿರುವ ಸಂಗತಿಯೇ. ಆದರೆ, ಬೇರೆ ಯಾವುದೇ ಪತ್ರಿಕೆಯಲ್ಲಿ ಬಹುಶಃ ಈ ಆಕ್ಷೇಪ ಏಳಲಾರದು ಎಂಬ ಭರವಸೆ ನನಗಿತ್ತು. ಆದ್ದರಿಂದ ಅದನ್ನು ನಿಮ್ಮ ಮುಖಾಂತರ ಕಳಿಸಿದ್ದೆ. ನೀವು ಬರಿ ಎಂದರೆ ಮತ್ತಷ್ಟು ಬರೆಯುತ್ತೇನೆ. ಹೇಳಬೇಕಾದ ಮಾತುಗಳು ತುಂಬ ಇವೆ. ಆದರೆ ವೈಯಕ್ತಿಕವಾದ[1] ಶ್ಲೇಷೆ-ವಿದ್ರೂಪಗಳು ಇಲ್ಲಿಯವರೆಗೆ ಮಾತ್ರ ಬರುತ್ತವೆ. ಕೊನೆಯವರೆಗೆ ಎಲ್ಲ ಸಂಗತಿಗಳನ್ನೂ ನಿಜವಾಗಿಯೇ ಹೇಳಲಾಗುತ್ತದೆ. ಯಾವುದೇ ಸ್ಥಿತಿಯಲ್ಲಾದರೂ ಸರಿ, ನನ್ನ ಹೆಸರು ಪ್ರಕಟವಾಗಕೂಡದು.... ಶ್ರೀಕಾಂತನ ಆತ್ಮಕಥೆಯೊಂದಿಗೆ ಇದರ ಸಂಬಂಧ ಇದ್ದೇ ಇರುತ್ತದೆ. ಆದರೆ, ಇದು ಮೂಲತಃ ಅಲೆದಾಟದ ಕಥೆ."[2]

ಕೆಲವು ದಿನಗಳ ಬಳಿಕ ಅವನು ಮತ್ತೆ ಬರೆದ: "ಅಭಯುವನ್ನಿತ್ತರೆ ಈ ವಿಷಯವಾಗಿ ಒಂದು ಮಾತನ್ನು ಹೇಳಬಯಸುತ್ತೇನೆ. ಸಂಪಾದಕವರ್ಗ ಈ ಕಥೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸುವುದು ಬೇಡ. ಪ್ರಕಟವಾಗುವ ಹಾಗೂ ಪ್ರಕಟವಾಗಿರುವ ಕೃತಿಗಳಿಗಿಂತ ಬಹಳ ಕೆಳಮಟ್ಟದ ಸ್ಥಾನವನ್ನು ಪಡೆಯುವಂಥ ಅನರ್ಹತೆಯೇನೂ ಇದಕ್ಕಿಲ್ಲ ಎಂದು ನಂಬಿದ್ದೇನೆ. ಅನೇಕ ಸಾಮಾಜಿಕ ಇತಿಹಾಸಗಳು ಇದರ ಭವಿಷ್ಯದ ಗರ್ಭದಲ್ಲಿ ಅಡಗಿವೆ. ನನ್ನ ತುಂಬ ಶ್ರಮ ಹಾಗೂ ಪ್ರಯತ್ನಗಳ ಫಲವಾದ ಈ ಕೃತಿ ಕನಿಷ್ಠ ಪಕ್ಷ ಗೆಳೆಯರ ಆದರವನ್ನು ಪಡೆಯಲಾದರೂ ಅರ್ಹವಾಗಿಯೇ ಇದೆ. ಆರಂಭವೇನೋ ಚೆನ್ನಾಗಿಲ್ಲವೆಂಬುದು ನಿಜ. ವಾಸ್ತವವಾಗಿರುವ ಪ್ರತಿಯೊಂದು ಸಂಗತಿಯ ಆರಂಭವೂ ಕೆಟ್ಟದಾಗಿಯೇ ಇರುತ್ತದೆ. ಇದೇ ನಾನು ಕೊಡಬಯಸಿದ್ದ ವಿವರಣೆ. ಈ ಸಲ ಇದು ಅಚ್ಚಾಗುತ್ತದೆ ತಾನೆ? ಕೈ ಬರಹವನ್ನು ಮುದ್ರಿತ ಅಕ್ಷರಗಳಲ್ಲಿ ಕಾಣಬಯಸುವ ಆಸೆಯಿಂದಲೇ ಅದನ್ನು ಕಳಿಸಿದ್ದೇನೆ."[3]

ಈ ಕಥೆಗೂ ಶ್ರೀಕಾಂತನ ಆತ್ಮಕಥೆಗೂ ಸಂಬಂಧವಿದೆ ಎಂಬುದನ್ನು ಅವನು ಈ ಕಾಗದಗಳಲ್ಲಿ ಸೂಚಿಸಿದ್ದಾನೆ. ಆದರೆ ಕಾದಂಬರಿಗೂ ವಾಸ್ತವ ಜೀವನಕ್ಕೂ ಇರುವಷ್ಟು ಸಂಬಂಧವೇ ಈ ಕಥೆಗೂ ಅದಕ್ಕೂ ಇರುವುದು. ಅವನ ಬಾಳು ಅಷ್ಟು ರೋಮಾಂಚಕವಾಗಿ, ಅಷ್ಟು ವೈವಿಧ್ಯಪೂರ್ಣವಾಗಿ ಇದ್ದುದರಿಂದ, 'ಶ್ರೀಕಾಂತ' ಕಾದಂಬರಿಯನ್ನು ಓದಿ ಈ ಬಗೆಯ ಭ್ರಮೆಗೆ ಸಿಲುಕುವುದು ಅಸಹಜವೇನೂ ಅಲ್ಲ. ಶ್ರೀಕಾಂತನೇನೂ ಶರತ್ ಅಲ್ಲ. ಆದರೆ ಇಬ್ಬರ ಸ್ವಭಾವದಲ್ಲಿ ಅದ್ಭುತವಾದ ಸಾಮ್ಯವಿದೆ ಎಂಬುದನ್ನು ಒಪ್ಪಲೇಬೇಕಾಗುತ್ತದೆ. ಇದನ್ನು ಸಹಜವಾಗಿಯೇ

1 ಪುಸ್ತಕದಲ್ಲಿ ಈ ಅಂಶಗಳು ಬೆಳಕು ಕಂಡಿಲ್ಲ.

2 ನವೆಂಬರ್ 15, 1915ರ ಪತ್ರ.

3 ಡಿಸಂಬರ್ 7, 1915

ಆತ್ಮಕಥಾ ಮೂಲವಾದ ಕಾದಂಬರಿಗಳ ಶ್ರೇಣಿಯಲ್ಲಿ ಇರಿಸಬಹುದು.

ಒಮ್ಮೆ ಆತ ಹೀಗೆ ಹೇಳಿದ್ದ: "ಜನ ನನ್ನ ಕೃತಿಗಳಲ್ಲಿ ನನ್ನನ್ನು ಅರಸುತ್ತಾರೆ. ಕೆಲವರು ನಾನು ಕಟ್ಟಾ ಹಿಂದೂ ಎನ್ನುತ್ತಾರೆ; ಕೆಲವರು ನಾನು ನಾಸ್ತಿಕ ಎನ್ನುತ್ತಾರೆ. 'ಚರಿತ್ರಹೀನ' ನನ್ನ ಕಥೆಯೆಂದು ಕೆಲವರು ಹೇಳಿದರೆ, 'ಶ್ರೀಕಾಂತ' ನನ್ನ ಆತ್ಮಕಥೆಯೆಂದು ಇನ್ನು ಕೆಲವರು ಹೇಳುತ್ತಾರೆ. ನನಗೆ ಸಂಬಂಧಿಸಿದಂತೆ ಈ ವಿತಂಡವಾದವಲ್ಲ ನಡೆಯುತ್ತಿದೆ. ನಾನಾದರೋ ದೂರ ನಿಂತು ನಗುತ್ತ ಇದ್ದೇನೆ."

ಪ್ರತಿಯೊಬ್ಬ ಚೈತನ್ಯಶೀಲ ವ್ಯಕ್ತಿಯ ಹಣೆಯ ಬರಹವೂ ಇದೇ ಆಗಿರುತ್ತದೆ. ಸಂತನೆಂದು ಯಾವ ಗಾಂಧೀಜಿಯನ್ನು ವರ್ಣಿಸಿದರೋ ಅದೇ ಗಾಂಧೀಜಿಯನ್ನು ಬೂಟಾಟಿಕೆಯವನು, ಅಹಂಕಾರಿ ಹಾಗೂ ಮೋಸಗಾರನೆಂದೂ ಕರೆದರು. ಗಾಂಧೀಜಿಯಂಥ ವ್ಯಕ್ತಿ ಮಾತ್ರ ಇದೆಲ್ಲ ಆಗಿರುವುದು ಸಾಧ್ಯ. ಎಲ್ಲವೂ ಆಗ ಬೇಕಾದರೆ ಕೆಚ್ಚು ಬೇಕು. ಆ ಕೆಚ್ಚು ಶರತ್‌ನಲ್ಲಿತ್ತು. ಅವನು ಬಾಳಿನಲ್ಲಿ ಬಹಳ ದುಃಖವನ್ನು ಅನುಭವಿಸಿದ್ದ. ಬಹಳಷ್ಟು ಪಾಪಕಾರ್ಯಗಳನ್ನೂ ಎಸಗಿದ್ದ. ಆದರೆ, ಅವುಗಳಿಂದ ಮೇಲೆದ್ದು, ಅವನ್ನು ಅನುಭವವಾಗಿ ರೂಪಾಂತರಿಸಿಕೊಳ್ಳಬಲ್ಲ ಚೈತನ್ಯವೂ ಅವನಲ್ಲಿತ್ತು. ಏಕೆಂದರೆ, ಅವನು ಭೋಕ್ತಾರ ಮಾತ್ರನಾಗಿರಲಿಲ್ಲ, ದ್ರಷ್ಟಾರನೂ ಆಗಿದ್ದ. ಆದ್ದರಿಂದಲೇ, ಕೊನೆಗಾದರೂ ಸಾಹಿತ್ಯಕ್ಷೇತ್ರ ಅವನನ್ನು ಅರಸಿಕೊಂಡಿತು. ಪರಂಪರೆಯನ್ನು ಒಂದಲ್ಲ ಒಂದು ರೂಪದಲ್ಲಿ ವಿರೋಧಿಸುವಂಥವರು, ಆಂತರ್ಯದ ಅಜ್ಞಾತ ಶಕ್ತಿಗಳನ್ನು ಹೊರಗಟ್ಟುತ್ತಾರೆ. ಅವುಗಳ ಪರಿಣಾಮ ಏನಾಗಬಹುದೆಂಬುದು ಯಾರಿಗೂ ಗೊತ್ತಿರುವುದಿಲ್ಲ. ಶಕ್ತಿಶಾಲಿಯಾದವನಿಗೆ, ಅರ್ಹನಾದವನಿಗೆ ಸ್ವಾತಂತ್ರ್ಯವೂ ಒಳ್ಳೆಯದೇ. ಶರತ್‌ನಲ್ಲಿ ಮೇರೆಯರಿಯದ ಶಕ್ತಿಯಿತ್ತು. ಹಾಗಾಗಿ ಅವನು ಸೃಜನಶೀಲನಾದ.

## 18

ಈಗಲೂ ಅವನು ರಂಗೂನ್‌ನಲ್ಲಿಯೇ ಕೆಲಸ ಮಾಡುತ್ತಿದ್ದ. ಆದರೆ ಅವನ ಮನಸ್ಸು ಅಲ್ಲಿರಲಿಲ್ಲ. ಕಛೇರಿಯ ಕಟ್ಟುಪಾಡಿನ ನಿಯಮಗಳಿಗೂ ಸ್ವತಂತ್ರ ಮನೋವೃತ್ತಿಗೂ ಯಾವುದೇ ಹೊಂದಾಣಿಕೆಯೂ ಇರುವುದಿಲ್ಲ. ಕೆಲಸವನ್ನು ಬಿಟ್ಟು ಬರಬೇಕೆಂದು ಕಲ್ಕತ್ತೆಯ ಹರಿದಾಸ ಚಟ್ಟೋಪಾಧ್ಯಾಯರು ಮತ್ತೆ ಮತ್ತೆ ಒತ್ತಾಯಿಸಿ ಬರೆಯುತ್ತಿದ್ದರು. ಅವನಿಗೆ ಮಾಹೆಯಾನ ಒಂದು ನೂರು ರೂಪಾಯಿಗಳು ದೊರೆಯುವಂಥ ವ್ಯವಸ್ಥೆ ಮಾಡಲು ಸಾಧ್ಯವಾಗುತ್ತದೆಂದು ಅವರು ಅವನಿಗೆ ನಂಬಿಕೆಯನ್ನುಂಟು ಮಾಡಿದ್ದರು. ಈ ಎಲ್ಲ ಸಂಗತಿಗಳ ಪರಿಣಾಮವೇನಾಯಿತು ಅಂದರೆ ಯಾವಾಗಲೂ ಕೆಟ್ಟಿರುತ್ತಿದ್ದ ಅವನ ಆರೋಗ್ಯ ಮತ್ತಷ್ಟು ಕೆಡತೊಡಗಿತು. ದೈಹಿಕ ಅಸಾಮರ್ಥ್ಯಕ್ಕೆ ಮಾನಸಿಕವಾದ ಆಸರೆಯೂ ದೊರೆತುಬಿಟ್ಟಾಗ, ಅದು ಗುಣಮುಖವಾಗುವ ಎಲ್ಲ ಸಂಭವವೂ ನಷ್ಟವಾಗಿ ಬಿಡುತ್ತದೆ. ಅವನು ಮತ್ತೆ ಮತ್ತೆ ತನ್ನ ಗೆಳೆಯರಿಗೆ ಬರೆಯತೊಡಗಿದ: "ಈ ಸಲ ಆರೋಗ್ಯ ಮತ್ತಷ್ಟು ಕೆಟ್ಟಿದೆ. ಜೀವನವಿಡೀ ಹಂಗುವಾಗಿ ಉಳಿದುಬಿಟ್ಟೇನೆಂಬ ಭಯವೂ ಉಂಟಾಗತೊಡಗಿದೆ. ಮಾನಸಿಕ ಚಂಚಲತೆಯಿಂದಾಗಿ ಏನು ಬರೆಯಲೂ ಇಚ್ಛೆಯುಂಟಾಗುವುದಿಲ್ಲ. ನನ್ನ

ಈ ಕಡ್ಡಿಯಂಥ ಶರೀರದಲ್ಲಿ ಈ ಬಗೆಯ ತೀವ್ರವಾದ ರೋಗಕ್ಕೆ ಎಡೆದೊರೆಯಬಹುದೆಂದು ನಾನೆಂದೂ ಯೋಚಿಸಿರಲಿಲ್ಲ."

ಮತ್ತೆ ಬರೆದ: "ಇಲ್ಲಿ ಗುಣಮುಖನಾಗುವ ನಂಬಿಕೆ ಇಲ್ಲ. ಶರೀರದ ಇತರ ಅಂಗಗಳನ್ನಾದರೂ ಸರಿಯಾಗಿರಿಸಿ, ಭಗವಂತ ಪಂಗುವಾಗಿ ಉಳಿಯುವ ಶಿಕ್ಷೆಯನ್ನು ವಿಧಿಸಿದರೆ, ಅದು ಒಳ್ಳೆಯದೇ. ಮಧ್ಯೆ ಮಧ್ಯೆ ಎರಡು ಕಾಲುಗಳನ್ನೂ ಮಡಚಿಕೊಂಡು, ಕೈಗಳಿಂದ ಮಾತ್ರವೇ ಕೆಲಸ ಮಾಡುವಂತೆ ಹೇಳುತ್ತಾರೆ."

ಅವನ ಕಾಲುಗಳು ಊದಿಕೊಳ್ಳುತ್ತಿದ್ದುವು. ಏನು ಮಾಡಿದರೂ ಸರಿಹೋಗುತ್ತಿರಲಿಲ್ಲ. ಬರ್ಮಾವನ್ನು ಬಿಟ್ಟು ಹೊರಟರೆ ಮಾತ್ರ ಈ ರೋಗ ದೂರವಾಗಬಹುದೆಂದು ವೈದ್ಯರು ತಿಳಿಸಿದ್ದರು. ಅವನು ಅತಿಯಾಗಿ ಅಫೀಮ್ ಸೇವಿಸುತ್ತಿದ್ದ. ಇದರಿಂದಾಗಿಯೂ ಅವನ ಆರೋಗ್ಯ ಕೆಟ್ಟಿತ್ತು. ಬಹುಶಃ ಯಾರೋ ಹೇಳಿದ್ದರ ಮೇಲೆ ಅವನು ಒಮ್ಮೆ ಅಫೀಮ್ ಸೇವನೆಯನ್ನು ಬಿಟ್ಟುಬಿಡುವ ಪ್ರಯತ್ನ ಮಾಡಿದ್ದ. ಆಗ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತ್ತು. ಮತ್ತೆ ಸೇವಿಸತೊಡಗಿದ ಮೇಲೆಯೇ ಪ್ರಾಣ ಉಳಿಯುವಂತಾಯಿತು. ಅಫೀಮಿನ ಚಟಕ್ಕೆ ಬಲಿಯಾದವರು ಒಮ್ಮೆಗೇ ಅದನ್ನು ಬಿಡಲಾರರು. ಈ ಸಂಗತಿಯನ್ನು ಅವನು ತನ್ನ ಒಂದು ಕಾಗದದಲ್ಲಿ[1] ಉಲ್ಲೇಖಿಸಿದ್ದ: "ನಾನು ಅಫೀಮ್ ಸೇವನೆಯನ್ನು ಬಿಟ್ಟುಬಿಡುವ ಪ್ರಯತ್ನ ಮಾಡಿದ್ದರಿಂದಲೇ ಬಹುಶಃ ನನಗೆ ಇಷ್ಟೊಂದು ಕಷ್ಟ ಉಂಟಾಗಿದೆ. ಇನ್ನೆಂದೂ ಅಫೀಮನ್ನು ಬಿಡುವ ಮಾತನ್ನು ನಾನು ಆಡುವುದಿಲ್ಲ. ಮತ್ತೆ ಚೆನ್ನಾಗಿ ಅಫೀಮ್ ಸೇವನೆಯನ್ನು ಪ್ರಾರಂಭಿಸಿದ ಮೇಲೆಯೇ ಕಾಲುಗಳು ಸರಿ ಹೋದುವು. ಈಗ ಅದರ ಪ್ರಮಾಣವನ್ನು ಮತ್ತಷ್ಟು ಹೆಚ್ಚಿಸಿದರೆ ಬಹುಶಃ ಕೈಗಳೂ ಸರಿ ಹೋಗಬಹುದು. ಅಫೀಮ್ ಸೇವನೆಯನ್ನು ಕಡಿಮೆ ಮಾಡಿದ್ದರಿಂದ ತಲೆ ಖಾಲಿಯಾಗಿ ಬಿಟ್ಟಿದ್ದಂತೆ ತೋರುತ್ತಿತ್ತು. ಮತ್ತೆ ನಿಧಾನವಾಗಿ ತುಂಬಿಕೊಂಡಂತೆ ಆಗುತ್ತಿದೆ. ಎಂಥ ವಸ್ತು ಇದು! ನೀವೂ ಇದರ ಸೇವನೆಯನ್ನು ಪ್ರಾರಂಭಿಸಬೇಕು. ಪ್ರತಿಯೊಬ್ಬ ಸಭ್ಯ ವ್ಯಕ್ತಿಯೂ ಅಫೀಮ್ ಸೇವಿಸಬೇಕು ಎಂದು ನಾನು ಭಾವಿಸುತ್ತೇನೆ."

ಅಫೀಮಿನ ಚರ್ಚೆಯನ್ನು ಇಲ್ಲಿಗೇ ಬಿಡೋಣ. ಹಾಸ್ಯ ಮಾಡುವುದು ಅವನ ಸ್ವಭಾವವೇ ಆಗಿತ್ತು. ಆದರೆ ಬರ್ಮಾ ಬಿಟ್ಟು ಹೊರಡಬೇಕೆಂದು ಅವನೀಗ ತೀರ್ಮಾನಿಸಿ ಬಿಟ್ಟಿದ್ದ. ಹರಿದಾಸ ಚಟ್ಟೋಪಾಧ್ಯಾಯರಿಗೆ ಅವನು ಹೀಗೆ ಬರೆದ: "ನೀವು ನನಗೇನು ಕೊಡಬೇಕೆಂದಿದ್ದೀರೋ ಅದು ನನಗೆ ಯಥೇಚ್ಛವಾದ ಮೊತ್ತ ಆಗಿದೆ. ಈ ವರ್ಷದ ಒಳಗಾಗಿ ಸತ್ತು ಹೋಗದಿದ್ದರೆ, ಹಣಕಾಸಿನ ಸಾಲನ್ನು ತೀರಿಸಲು ಸಾಧ್ಯವಾಗಬಹುದೇನೋ ಆದರೆ, ಕೃತಜ್ಞತೆಯ ಋಣವನ್ನು ತೀರಿಸಲು ಸಾಧ್ಯವಾಗುವುದಿಲ್ಲವಲ್ಲ!..... ನಾನು ಒಂದು ವರ್ಷ ರಜೆ ತೆಗೆದುಕೊಳ್ಳುವ ಯೋಜನೆಯನ್ನು ಹಾಕಿಕೊಳ್ಳುತ್ತಿದ್ದೇನೆ. ನೀವು 200 ರೂ.ಗಳನ್ನು ಕಳಿಸಿಕೊಟ್ಟರೆ, ಹಿಂದಿರುಗಲು ಅನುಕೂಲವಾಗುತ್ತದೆ. ಈ ಹತಭಾಗ್ಯ ಸ್ಥಳವನ್ನು ಬಿಟ್ಟು ಬರುವಲ್ಲಿ ನನಗಾಗಿ ನೀವು ಹೊರಬೇಕಾಗಿ ಬಂದಿರುವ ಆರ್ಥಿಕ ಹೊಣೆಯಿಂದ ನಿಮ್ಮನ್ನು ಮುಕ್ತರನ್ನಾಗಿಸಲು ನಾನು ಈ ವರ್ಷವೇ ಪ್ರಯತ್ನಿಸುತ್ತೇನೆ."[1]

1 ಅಕ್ಟೋಬರ್ 5, 1915

ಆಗಾಗ್ಗೆಯಂತೂ ಈ ಅಹಂಕಾರಿ ತುಂಬ ಕರುಣೆಗೆ ಪಾತ್ರನಾಗುವಂಥವನೂ ಆಗಿಬಿಡುತ್ತಿದ್ದ. ಪೆಂಗುವಾಗಿ ಬಿಡುವ ಹಾಗೂ ಹಣವನ್ನು ಕಳಿಸಿಕೊಡಬೇಕೆಂಬ ವಿಚಾರವನ್ನು ಅವನು ಮತ್ತೆಮತ್ತೆ ಬರೆದಿದ್ದಾನೆ. ಕೊನೆಗೆ ಹರಿದಾಸ್ ಅವರು ಹಣವನ್ನು ಕಳಿಸಿದಾಗ, ಏಪ್ರಿಲ್ 11ರಂದು ಅಲ್ಲಿಂದ ಹೊರಡಲಿರುವುದಾಗಿ ತಿಳಿಸಿದ. ಯಾವುದೇ ಕೆಲಸಕ್ಕೆ ಕೈಹಾಕುವ ಇಚ್ಛೆಯೂ ಉಂಟಾಗದಷ್ಟರ ಮಟ್ಟಿಗೆ ಮನಸ್ಸಿನಲ್ಲಿ ಹೋರಾಟ ನಡೆಯುತ್ತಿತ್ತು. ಕೈಹಾಕಿದರೂ ಅದು ಸರಿಯಾಗಿ ಆಗುತ್ತಿರಲಿಲ್ಲ. ಇನ್ನು ಅವನು ಬರೆಯುವುದು ಕಲ್ಕತ್ತೆಗೆ ಹೋಗಿ ಸೇರಿದ ಮೇಲೆಯೇ.

ಈ ಅವಧಿಯಲ್ಲಿಯೇ ರಂಗೂನ್‌ನಲ್ಲಿ ಮತ್ತೊಂದು ಪ್ರಕರಣ ನಡೆಯಿತು. ಇದರಿಂದಾಗಿ, ಅವನು ಅಂತಿಮವಾಗಿ ಅಲ್ಲಿಂದ ಹೊರಡುವುದು ಅನಿವಾರ್ಯವೇ ಆಯಿತು. ಅವನ ಮನಸ್ಸು ಕಛೇರಿಯ ಕೆಲಸದಲ್ಲಿ ಆಸಕ್ತಿ ತೋರುತ್ತಿರಲಿಲ್ಲ. ಕೆಲಸ ಹಾಗೆಯೇ ಬಿದ್ದಿರುತ್ತಿತ್ತು. ಇದರ ಬಗೆಗಿನ ವರದಿ ಮೇಲಿನ ಅಧಿಕಾರಿಗಳಿಗೆ ತಲುಪುತ್ತಿತ್ತು. ಅನೇಕ ಸಲ ಅವನಿಗೆ ಎಚ್ಚರಿಕೆ ನೀಡಲಾಯಿತು. ಆದರೆ, ಇವುಗಳು ಯಾವ ಪರಿಣಾಮವನ್ನು ಬೀರಲಿಲ್ಲ. ಕೊನೆಗೆ ಒಂದು ದಿನ ಈ ವಿಷಯದ ಬಗ್ಗೆ ಕಛೇರಿಯ ಮೇಲ್ವಿಚಾರಕರಾಗಿದ್ದ ಮೇಜರ್ ಬರ್ನಾರ್ಡ್ ಅವರೊಂದಿಗೆ ಭಾರಿ ಜಗಳವೇ ಆಯಿತು.

ಅವರು ಯಾವುದೋ ಒಂದು ಕಡತವನ್ನು ಕೇಳಿದ್ದರು. "ಅದರ ಬಗ್ಗೆ ನನಗೇನೂ ಗೊತ್ತಿಲ್ಲ. ಅದು ನನ್ನ ಬಳಿ ಇಲ್ಲ" ಎಂದು ಶರತ್ ಉತ್ತರಿಸಿದ. ಆದರೆ, ಹುಡುಕಿದಾಗ ಅದು ಅವನ ಮೇಜಿನ ಖಾನೆಯಲ್ಲಿಯೇ ಸಿಕ್ಕಿತು. ಇದನ್ನು ಕಂಡು ಮೇಲ್ವಿಚಾರಕರು ಕೋಪದಿಂದ ಉರಿದೆದ್ದರು. ಹಾಗಾಗುವುದು ಸಹಜವೇ ಆಗಿತ್ತು. ಬಹುಶಃ ಸ್ವಲ್ಪ ಅತಿಯಾಯಿತೆಂದೇ ತೋರುತ್ತದೆ. ಕೈಕೈ ಮಿಲಾಯಿಸುವಂಥ ಪರಿಸ್ಥಿತಿಯೂ ಬಂದಿತು. ಆದರೆ, ಶರತ್ ನರಪೇತಲನಾಗಿದ್ದ. ಬರ್ನಾರ್ಡ್ ಅವರು ಎಷ್ಟು ಆರೋಗ್ಯವಾಗಿದ್ದರೋ ಅವರ ಮೈಕಟ್ಟೂ ಅಷ್ಟೇ ಚೆನ್ನಾಗಿತ್ತು. ಶರತ್‌ಗೆ ಸಾಕಷ್ಟು ಪೆಟ್ಟಾಯಿತು. ಬಟ್ಟೆಗಳು ರಕ್ತದಿಂದ ಒದ್ದೆಯಾದುವು. ವರದಿ ದೊಡ್ಡ ಸಾಹೇಬರವರೆಗೆ ಹೋಯಿತು. ಪರಿಶೀಲನ ನಡೆಸಿದಾಗ ಬರ್ನಾರ್ಡ್ ಅವರ ವರ್ತನೆಯೇ ಮಿತಿ ಮೀರಿದ್ದುದಾಗಿ ಕಂಡು ಬಂದಿತು. ಕೂಡಲೇ ಅವರು ಆತನನ್ನು ಅಮಾನತ್ತಿನಲ್ಲಿರಿಸಿದರು. ಆಮೇಲೆ ಆತನಿಗೆ 90 ರೂಪಾಯಿಗಳ ಜುಲ್ಮಾನೆಯನ್ನು ವಿಧಿಸಲಾಯಿತೆಂದೂ, ವಸೂಲಾದ ಮೇಲೆ ಆ ಹಣವನ್ನು ಶರತ್‌ಗೆ ಕೊಡಬೇಕೆಂದು ಆದೇಶವನ್ನು ಹೊರಡಿಸಲಾಗಿತ್ತೆಂದೂ ಹೇಳಲಾಗಿದೆ.

ವರದಿ ಅಕೌಂಟೆಂಟ್ ಜನರಲ್ ಅವರಿಗೆ ತಲುಪಿದಾಗ, "ನೀನು ಬರ್ನಾರ್ಡ್‌ನ ವರ್ತನೆಯ ಬಗ್ಗೆ ನಿನ್ನ ಪ್ರತಿಭಟನೆಯನ್ನು ಸೂಚಿಸಲು ಬಂದಿದ್ದರೆ, ಅವನಿಗೆ ವಿರುದ್ಧವಾಗಿ ನಾನು ಕ್ರಮ ತೆಗೆದುಕೊಳ್ಳುತ್ತೇನೆ. ಆದರೆ, ನೀನು ಮಾನವತೆಯ ನೆಲೆಯಿಂದಲೂ ಕೆಳಗೆ ಬಿದ್ದಿದ್ದೀಯೆ. ಅವನ ಏಟಿಗೆ ಪ್ರತಿಯಾಗಿ ನೀನೂ ಏಟು ಹಾಕಿ, ಆಮೇಲೆ ಇಲ್ಲಿಗೆ ಬಂದಿದ್ದರೆ, ನಾನು ಮೆಚ್ಚಿಕೊಳ್ಳುತ್ತಿದ್ದೆ" ಎಂದು

1. ಜನವರಿ 15, 1916

ತಿಳಿಸಿದರೆಂದೂ ಹೇಳಲಾಗಿದೆ.

ಈ ವಿವರಣೆ ಎಳೆಎಳೆಯಲ್ಲೂ ಸರಿಯಾಗಿಲ್ಲದಿರಬಹುದು. ಆದರೆ, ಘಟನೆ ನಡೆದದ್ದಂತೂ ನಿಜ. ಇದು ಒಂಟೆಯ ಬೆನ್ನಿನ ಮೇಲಿನ ಕೊನೆಯ ಹುಲ್ಲು ಕಡ್ಡಿಯಂತಾಯಿತು ಎಂಬುದೂ ನಿಜ. ರಂಗೂನನ್ನು ಬಿಟ್ಟು ಹೊರಡಬೇಕೆಂದು ಶರತ್ ದೃಢನಿಶ್ಚಯ ಮಾಡಿದ. ಗೆಳೆಯರು ಅವನೊಂದಿಗೆ ಹೀಗೆಂದರು: “ನೀನೊಬ್ಬ ಕತೆಗಾರ. ಇಷ್ಟೊಂದು ಪ್ರಸಿದ್ಧಿ ಗಳಿಸಿದ್ದೀಯೆ. ಇಷ್ಟಾಗಿಯೂ, ಈ ಕಛೇರಿಯಲ್ಲಿ ಏಕೆ ಕೊಳೆಯುತ್ತಿದ್ದೀಯೆ ? ಕೆಲಸವನ್ನು ಬಿಟ್ಟು ಬರವಣಿಗೆಯತ್ತ ಗಮನ ಹರಿಸುವುದೇ ಇದಕ್ಕಿಂತ ಒಳ್ಳೆಯದು.”

ಸಾಹಿತ್ಯದ ಕ್ಷೇತ್ರದಲ್ಲಿ ಕೀರ್ತಿ ಇತ್ತು. ‘ಅರ್ಥ’ವೂ ಇತ್ತು, ಆದರೆ, ಕಛೇರಿಯ ಕೆಲಸವನ್ನು ಉಪೇಕ್ಷಿಸುವುದು ಅನಿವಾರ್ಯವೂ ಆಗಿತ್ತು. ಹೆಚ್ಚು ಶ್ರಮವಹಿಸಿ ದುಡಿಯುವ ಅಭ್ಯಾಸ ಅವನಿಗೆ ಇರಲೇ ಇಲ್ಲ. ಆರೋಗ್ಯಪೂರ್ಣವಾಗಿ ಕೆಟ್ಟಿತ್ತು. ಅವನು ಕೆಲಸಕ್ಕೆ ರಾಜೀನಾಮೆ ಕೊಟ್ಟ. ಬಹುಶಃ ಒಂದು ವರ್ಷದ ರಜೆ ಬಾಕಿಯಿತ್ತು. ಅದನ್ನು ಪಡೆದುಕೊಂಡು, ಅವನು ಕಲ್ಕತ್ತೆಗೆ ಹೊರಟುಬಿಟ್ಟ. ಇದಾದ ಮೇಲೆ ಮತ್ತೆಂದೂ ಅವನು ಬರ್ಮಾಕ್ಕೆ ಬರಲಿಲ್ಲ. ಆದರೆ, ಕಥಾಶಿಲ್ಪಿ ಶರತ್‌ಚಂದ್ರ ಬರ್ಮಾದಲ್ಲಿಯೇ ಮರುಹುಟ್ಟು ಪಡೆದನೆಂಬುದನ್ನು ಇತಿಹಾಸಕಾರರು ಹೇಗೆ ಮರೆಯಲು ಸಾಧ್ಯ ? ‘ಶ್ರೀಕಾಂತ’, ‘ಚರಿತ್ರಹೀನ’, ‘ಚವಿ ಮತ್ತು ಅಧಿಕಾರ’ - ಇವೆಲ್ಲವುಗಳ ಮೇಲೆಯೂ ಈ ಬಾಳಿನ ಅಚ್ಚಳಿಯದ ಮುದ್ರೆ ಬಿದ್ದಿದೆ. ಬೌದ್ಧಿಕವಾಗಿ ಎತ್ತರದ ನೆಲೆಯಲ್ಲಿದ್ದಂಥ ವ್ಯಕ್ತಿಗಳ ಸಂಪರ್ಕವೂ ಬರ್ಮಾ ಪ್ರವಾಸದ ಅವಧಿಯಲ್ಲಿ ಅವನಿಗೆ ದೊರೆತಿತ್ತು. ಆದರೆ ಅವನ ಬಹುಪಾಲು ಜೊತೆಗಾರರಲ್ಲ ಯಾವುದೇ ಮಹತ್ವವಿಲ್ಲದಂಥವರೂ, ಅಪ್ರಸಿದ್ಧರೂ ಆಗಿದ್ದರು. ಅವರಿಂಥ ಪ್ರೋತ್ಸಾಹ ಪಡೆದು ಈ ಬಡವನೂ, ಅರ್ಧ ಸುಶಿಕ್ಷಿತನೂ, ಅಲೆಮಾರಿಯೂ ಆದ ಯುವಕ, ಅವನ ಹಾದಿಯನ್ನು ಎದುರು ನೋಡುತ್ತಿದ್ದಂಥ ಸಾಹಿತ್ಯದ ಮಹಾನ್ ಕ್ಷೇತ್ರದಲ್ಲಿ ಹೆಜ್ಜೆಯನ್ನಿರಿಸಿದ.

ಬರ್ಮಾ ಬಿಟ್ಟು ಹೊರಡುವುದಕ್ಕೆ ಮೊದಲಿನ ನಾಲ್ಕು ತಿಂಗಳ ಅವಧಿಯ ಒಳಗಾಗಿ ಅವನ ಇನ್ನೂ ಮೂರು ಪುಸ್ತಕಗಳು ಹೊರಬಂದಿದ್ದುವು. ‘ಮಂಝಲೀ ದೀದೀ’ ಮತ್ತು ಇತರ ಕಥೆಗಳು, ‘ಪಲ್ಲೀ-ಸಮಾಜ’ ಮತ್ತು ‘ಚಂದ್ರನಾಥ’ - ಇವೇ ಆ ಮೂರು ಪುಸ್ತಕಗಳು.

ಹಾದಿಯ ಹುಡುಕಾಟ ಕೊನೆಗೊಂಡಂತೆ ಇತ್ತು.

# ಮೂರನೆಯ ಭಾಗ
# ಹಾದಿಯ ಕೊನೆ

ಶರತ್ ಕಲ್ಕತ್ತೆಯನ್ನು ಬಿಟ್ಟು ರಂಗೂನಿನ ಹಾದಿಯನ್ನು ಹಿಡಿದಾಗ ತಿರಸ್ಕೃತನೂ, ಉಪೇಕ್ಷೆಗೆ ಗುರಿಯಾದವನೂ, ಅಸಹಾಯನೂ ಆಗಿದ್ದ. ಆದರೆ, ಹದಿಮೂರು ವರ್ಷಗಳ ಬಳಿಕ ಕಲ್ಕತ್ತೆಗೆ ಹಿಂದಿರುಗಿದಾಗ ಖ್ಯಾತಿವೆತ್ತ ಕಥಾಶಿಲ್ಪಿಯ ರೂಪದಲ್ಲಿ ಚಿರಪರಿಚಿತನಾಗಿದ್ದ. ಈಗ ಅವನು 'ಅವನು' ಆಗಿರದ 'ಅವರು' ಎಂಬ ನೆಲೆಯಲ್ಲಿ ನೆಲೆಗೊಂಡಿದ್ದ.

ಬಂಗಾಳಿಗಳು ಅವರ ವಿಷಯದಲ್ಲಿ ಎಷ್ಟು ಉತ್ಸುಕರಾಗಿದ್ದರು ಹಾಗೂ ಅದಾವ ಬಗೆಯಲ್ಲಿ ಅವರನ್ನು ಸ್ವಾಗತಿಸಿದರೆಂದರೆ, ಆ ಸಂಗತಿ ನಿಜಕ್ಕೂ ಯಾವನೇ ಸಾಹಿತಿಗೆ ಈರ್ಷ್ಯೆಯ ವಸ್ತುವಾಗಬಹುದಿತ್ತು. ನಾಟಕಕಾರರಾಗಿದ್ದ ದ್ವಿಜೇಂದ್ರಲಾಲ್ ರಾಯರು ಶರತ್‌ನ ಪ್ರಶಂಸಕರೇ ಆಗಿದ್ದರು. ಆದರೆ, (ಮುಂದೆ ಸಂಗೀತಕಾರರಾಗಿ ಪ್ರಸಿದ್ಧಿಯನ್ನು ಗಳಿಸಿದ) ಅವರ ಮಗ ದಿಲೀಪ ಕುಮಾರ್ ರಾಯ್ ಅವರು ಈ ವಿಷಯದಲ್ಲಿ ಅವರನ್ನು ಮೀರಿಸಿ, ಶರತ್‌ನ ಭಕ್ತರೇ ಆಗಿದ್ದರು. 'ಚರಿತ್ರಹೀನ' ಕಾದಂಬರಿ ಯಿಂದಾಗಿ ಶರತ್‌ರಿಗೆ ಕೆಟ್ಟ ಹೆಸರು ಬಂದಾಗ, ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಶರತ್ ಅವರ ಪಾಲಿಗೆ 'ನಾಯಕ'ನೇ ಆಗಿಬಿಟ್ಟರು. ಅವರು ಕಲ್ಕತ್ತೆಗೆ ಏಕೆ ಹಿಂದಿರುಗಿ ಬರಬಾರದು ಎಂದು ಅವರು ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದರು. ಜನಗಳು ತುಚ್ಛವಾದುದನ್ನೂ ತಿಂದು ಬಾಳುವಂಥ ವಿದೇಶದಲ್ಲಿ ಅವರು ಏಕಾಗಿ ನವೆಯುತ್ತಿದ್ದಾರೆ ಎಂದೂ ಯೋಚಿಸುತ್ತಿದ್ದರು.

ಶರತ್‌ಬಾಬೂ ಕಲ್ಕತ್ತೆಗೆ ಹಿಂದಿರುಗುತ್ತಾರೆಂಬ ಸುದ್ದಿಯನ್ನು ಕೇಳಿದಾಗ ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ರಾತ್ರಿಯ ಹೊತ್ತು ನಿದ್ರೆಯೂ ಬರುತ್ತಿರಲಿಲ್ಲ. ಆ ಅಪೂರ್ವ ಕಥಾಗಂಧರ್ವ ಏಳು ಸಮುದ್ರಗಳನ್ನೂ ಹದಿಮೂರು ನದಿಗಳನ್ನೂ ದಾಟಿ ಯಾವಾಗ ಬಂದಾರು ಎಂದೇ ಅವರು ಯೋಚಿಸುತ್ತಿದ್ದರು.

ಕೊನೆಗೆ ಶರತ್ ಆಗಮಿಸಿದರು ಹಾಗೂ ಅವರನ್ನು ಭೇಟಿಯಾಗಲು ದಿಲೀಪ್‌ಕುಮಾರ್ ರಾಯ್ ಬಂದರು. ಗುರುದಾಸ್ ಗ್ರಂಥಾಲಯದ ಮೇಲಿನ ಅಟ್ಟದ ಕಿರುಕೋಣೆಯೊಂದರಲ್ಲಿ ಅವರು ಮೊದಲಿಗೆ ಶರತ್‌ಬಾಬೂಗಳನ್ನು ಕಂಡರು. ಅವರ ಸುತ್ತಲೂ ಪುಸ್ತಕಗಳು ರಾಶಿರಾಶಿಯಾಗಿ ಬಿದ್ದಿದ್ದುವು. ಅವುಗಳ ನಡುವೆ ಅವರು ಕುಳಿತಿದ್ದರು. ಕಪ್ಪು ಬಣ್ಣ, ಹೋತನಗಡ್ಡದಂಥ ಗಡ್ಡ, ಸಣಕಲು ಶರೀರ, ಆದರೆ, ಆ ಎರಡು ಕಣ್ಣುಗಳು ಅದೆಷ್ಟು ತೀಕ್ಷ್ಣ; ಅದೆಷ್ಟು ಮೊನಚಾದ ಮೂಗು! ಇಷ್ಟಾಗಿಯೂ ಮುಖದಲ್ಲಿ ಕೊಂಚವೂ ಕಳೆಯಿಲ್ಲ. ಅತ್ಯಂತ ನೀರಸ ವೇಷ...

ದಿಲೀಪ್ ಕುಮಾರರ ಅರಳಿ ನಿಂತಿದ್ದ ಹೃದಯ ಒಂದು ಕ್ಷಣದ ಮಟ್ಟಿಗೆ ಮುರುಟಿಕೊಂಡಂತಾಯಿತು. ಆದರೂ, ನಮಸ್ಕರಿಸುವ ಸಲುವಾಗಿ ಬಾಗಿ ಪಾದ ಧೂಳಿಯನ್ನೆತ್ತಿಕೊಂಡರು ಹಾಗೂ ಸ್ವಲ್ಪ ಮಟ್ಟಿಗೆ ಅಂಜುತ್ತಲೇ ಹೇಳಿದರು: "ತಾವು....!"

ಶರತ್‌ಬಾಬೂ ನಕ್ಕು ಹೇಳಿದರು: "ಹೌದು, ನಾನೇ ಶರತ್‌ಚಂದ್ರ ನನ್ನನ್ನು ನೋಡಿ ನಿನಗೆ ವಿಷಾದ ಉಂಟಾಯಿತು. ನನ್ನ ಮುಖ ರಾಜಪುತ್ರನ ಮುಖದಂತೆ ಬೆಳಗುತ್ತ ಇದ್ದಿರಬಹುದೆಂದು ನೀನು ಯೋಚಿಸಿದ್ದಿರಬೇಕು. ಹೌದಲ್ಲವೆ? ಹಾಗಂದೇ ಯೋಚಿಸಿದ್ದೆಯಲ್ಲವೆ?"

ದಿಲೀಪ್ ನಾಚುತ್ತ ಉತ್ತರಿಸಿದರು: "ಇಲ್ಲ, ಇಲ್ಲ. ಹಾಗೇನೂ ಇಲ್ಲ. ಆದರೂ...."

ಆದರೆ ಆಳವಾದ ಸ್ನೇಹ ರೂಪವನ್ನಷ್ಟೇ ಎಂದೂ ಬಯಸುವುದಿಲ್ಲ. ನೋಡಿದ ಕೂಡಲೇ ನೋಡಿದವರ ಗಮನವನ್ನು ಸೆಳೆಯುವಂಥ ಒಂದು ಬಗೆಯ ವಿಲಕ್ಷಣತೆ ಅವರಲ್ಲಿತ್ತು. ಇತ್ತ ದಿಲೀಪರಂತೂ ಅವರ ಕೃತಿಗಳ ಉಪಾಸಕರೇ ಆಗಿದ್ದರಲ್ಲ! ಬಹು ಬೇಗ ಅವರ ಹಾರ್ದಿಕವಾದ ಸರಳತೆ, ಕಪಟವರಿಯದ ಸ್ನೇಹ ಹಾಗೂ ಸಂತರಲ್ಲಿ ಕಾಣುವಂಥ ನಿಷ್ಕಪಟ ಮನೋವೃತ್ತಿ ದಿಲೀಪರ ಮನಸ್ಸನ್ನು ಗೆದ್ದುಬಿಟ್ಟಿತು. ಈ ಬಗೆಯ ಶ್ರದ್ಧೆ ಮೂಡಲು ಕಾರಣವಾಗಿದ್ದ ಇನ್ನೊಂದು ಸಂಗತಿಯೆಂದರೆ ಅವರ ಇಂಪಾದ ಕಂಠ. ಸ್ವಂತ ದಿಲೀಪ್ ಕುಮಾರರೂ ಒಳ್ಳೆಯ ಗಾಯಕರೇ ಆಗಿದ್ದರು. ತಮ್ಮ ತಂದೆ ರಚಿಸಿದ್ದ ಕೀರ್ತನೆಗಳನ್ನು ಹಾಡುವುದರಲ್ಲಿ ಹಾಗೂ ಹಿಂದೂಸ್ತಾನಿ ಸಂಗೀತದಲ್ಲಿ ಅವರಿಗೆ ಒಳ್ಳೆಯ ಪರಿಶ್ರಮವಿತ್ತು. 'ಓ ಜೇ ಗಾನ ಗೇಪಿ - ಗೇಪಿ ಚೋಲೇ ಜಾಪಿ' ಎಂಬ ತಮ್ಮ ತಂದೆಯ ಗೀತೆಯನ್ನು ಅವರು ಹಾಡಿದಾಗ, ಅದೆಷ್ಟು ಬಾರಿ ಕೇಳಿದರೂ ಶರತ್‌ಬಾಬೂಗಳಿಗೆ ತೃಪ್ತಿಯೇ ಉಂಟಾಗುತ್ತಿರಲಿಲ್ಲ. "ಮತ್ತೊಮ್ಮೆ ಹಾಡು, ಮಂಟೂ, 'ಜೇ ದೇವತಾ ಭಿಖಾರಿ, ಮಾನವ ದುಯಾರೇ, ದೇಖೇ ಜಾರೇ ತೋರಾ ದೇಖ್ ಜಾ' ಎಂಬ ಆ ಪಂಕ್ತಿಯಿಂದ ಮತ್ತೊಮ್ಮೆ ಹಾಡು. ಓಹ್, ನಿಮ್ಮ ತಂದೆ ಕವಿ ಮಾತ್ರರಾಗಿರಲಿಲ್ಲ. ಭಕ್ತರೂ ಆಗಿದ್ದರು. ಇಲ್ಲವಾಗಿದ್ದರೆ ಇಂಥ ಹಾಡನ್ನು ರಚಿಸುವುದು ಅವರಿಗೆ ಸಾಧ್ಯವೇ ಆಗುತ್ತಿರಲಿಲ್ಲ" ಎಂದು ಹೇಳುತ್ತಿದ್ದರು.

'ಚಂದ್ರಗುಪ್ತ' ನಾಟಕದ ಈ ಹಾಡು ಅವರಿಗೆ ಪ್ರಿಯವಾದ ಮತ್ತೊಂದು ಕೀರ್ತನೆಯಾಗಿತ್ತು.:

"ಆರ ಕೇನ ಮೀಛೇ ಆಶಾ, ಮೀಛೇ ಭಾಲಬಾಸಾ, ಮೀಛೇ ಕೇನತಾರ ಭಾವನಾ ।
ಸೇ ಜೇ ಸಾಗರೇರ ಮಣಿ ಆಕಾಶೇರ ಚಾಂದ್ ಆಮೀ ತೋ ತಾಹಾರೇ ಪಾಬನಾ॥"

ಕಲ್ಕತ್ತೆಗೆ ಹಿಂದಿರುಗಿದ ಬಳಿಕ ಶರತ್ ಬಾಬೂ ಮೊದಲಿಗೆ ಶಿವಪುರದ ಮೊದಲನೆಯ ಅಡ್ಡರಸ್ತೆಯ (ನೀಲಕಮಲ ಕುಂಡೂ ಗಲ್ಲಿ) ಆರನೆಯ ನಂಬರಿನ ಮನೆಯಲ್ಲಿ ತಂಗಿದ್ದರು. ಅನಂತರ ಶಿವಪುರದ ಮೊದಲನೆ ಅಡ್ಡರಸ್ತೆಯ ನಾಲ್ಕನೆಯ

ನಂಬರಿನ ಮನೆಯಲ್ಲಿ ಖಾಯಮ್ಮಾಗಿ ನೆಲೆಸಿದರು. ಮನೆಯೂ ಚಿಕ್ಕದಾಗಿತ್ತು. ಕೈಯಲ್ಲಿ ಕಾಸೂ ಇರಲಿಲ್ಲ. ಆದರೆ, ಅವರ ಸೌಂದರ್ಯ ಪ್ರೇಮ ಹಿಂದಿನಂತೆಯೇ ಜೀವಂತವಾಗಿತ್ತು. ಕೂಡುವ ಕೋಣೆಯಲ್ಲಿ ಮಧ್ಯಮ ಎತ್ತರದ ಒಂದು ಮೇಜಿತ್ತು. ಅದರ ಮೂರೂ ಬದಿಗಳಲ್ಲಿ ಮೂರು ಕುರ್ಚಿಗಳನ್ನೂ ಉಳಿದ ಇನ್ನೊಂದು ಬದಿಯಲ್ಲಿ ಒಂದು ಬೆಂಚನ್ನೂ ಹಾಕಲಾಗಿತ್ತು. ಮೇಜಿನ ಮೇಲೆ ಸುಂದರವಾಗಿ ರಟ್ಟು ಕಟ್ಟಲಾಗಿದ್ದ ಎರಡು ಹಸ್ತಪ್ರತಿಗಳೂ ಸುಂದರವಾದ ಒಂದು ಪೆನ್ನು ನೆಲೆ, ಕೆಂಪು ಹಾಗೂ ಕಪ್ಪು ಶಾಯಿಯ ಮಸಿ ಕುಡಿಕೆಗಳೂ, ನಾಲ್ಕು ಲೇಖನಿಗಳೂ, ಬೆಲೆಬಾಳುವಂಥ ಎರಡು ಫೌಂಟನ್ ಪೆನ್ನುಗಳೂ, ಕ್ರಮವಾಗಿ ಜೋಡಿಸಿ ಇರಿಸಲಾಗಿದ್ದ ವಿಜ್ಞಾನದ ಹಾಗೂ ಅರ್ಥಶಾಸ್ತ್ರದ ಹಲವಾರು ಪುಸ್ತಕಗಳೂ ಅಲಂಕರಿಸಿ ಇಟ್ಟಂತೆ ಕಾಣಿಸುತ್ತಿದ್ದುವು.

ಬಳಿಯಲ್ಲಿಯೇ ದೊಡ್ಡದಾದ ಹುಕ್ಕಾದ ನಳಿಕೆಯೂ ಇರುತ್ತಿತ್ತು. ನಡುನಡುವೆ ಕೂಗುಹಾಕಿ ಸೇವಕನನ್ನು ಕರೆಯುವ ವಿಚಾರವನ್ನೆಂದೂ ಅವರು ಮರೆಯುತ್ತಿರಲಿಲ್ಲ.

ಕಲ್ಕತ್ತೆಯನ್ನು ಬಿಟ್ಟು ತೆರಳುವ ಮುನ್ನ, ತನ್ನ ದೂರದ ನೆಂಟರ ಹಾಗೂ ಗೆಳೆಯರ ಬಳಿ ಅನಾಥರಂಬಂತೆ ತಾನು ಬಿಟ್ಟು ಹೋಗಿದ್ದ ತನ್ನ ಸೋದರ-ಸೋದರಿಯರನ್ನು ಅವರು ಮೊಟ್ಟಮೊದಲು ತಮ್ಮ ಬಳಿಗೆ ಕರೆಸಿಕೊಂಡರು. ಕಿರಿಯ ಸೋದರ ಪ್ರಕಾಶಚಂದ್ರ ಆ ಹೊತ್ತಿನಲ್ಲಿ ಅಗ್ರದ್ವೀಪದಲ್ಲಿದ್ದರು. ಅವರು ಈಗ ತಮ್ಮ ಅಣ್ಣನ ಬಳಿ ಬಂದಿರತೊಡಗಿದರು. ನಡುವಣ ಸೋದರ ಪ್ರಭಾಸಚಂದ್ರರು ಕೆಲಸವನ್ನು ಬಿಟ್ಟು ಸನ್ಯಾಸಿಯಾಗಿ ಬಿಟ್ಟಿದ್ದರು. ಈಗ ಅವರು ವೃಂದಾವನದ ರಾಮಕೃಷ್ಣ ಸೇವಾಶ್ರಮದ ಸಂಚಾಲಕರಾಗಿದ್ದರು. ಕಲ್ಕತ್ತೆಗೆ ಯಾವಾಗ ಬಂದರೂ, ಅವರು ತಮ್ಮ ಪೂರ್ವಾಶ್ರಮದ ಅಣ್ಣಂದಿರಾದ ಶರತ್ ಬಾಬೂಗಳ ಮನೆಯಲ್ಲಿಯೇ ತಂಗುತ್ತಿದ್ದರು. ಅವರ ಅಕ್ಕ ಅನಿಲಾ ದೇವಿ ಹತ್ತಿರದಲ್ಲಿಯೇ ಇದ್ದ 'ಸಾಮತಾ ಬೇಡ' ಎಂಬ ಪಸರಿನ ಹಳ್ಳಿಯಲ್ಲಿ ವಾಸವಾಗಿದ್ದರು. ಗಂಡ ಮತ್ತು ಮಕ್ಕಳೊಡನೆ ಆಕೆ ಆಗಿಂದಾಗ್ಗೆ ಬಂದು ತನ್ನ ಸೋದರನನ್ನು ನೋಡಿಕೊಂಡು ಹೋಗುತ್ತಿದ್ದರು. ಆಕೆಯ ಕುಟುಂಬದ ಒತ್ತಾಸೆಯಿಂದಾಗಿಯೇ ಅವರ ತಂಗಣೆಗೆ ಏರ್ಪಾಟು ಆಗಿತ್ತು.

ಕೊನೆಯ ತಂಗಿ ಸುಶೀಲಾಳನ್ನು ಅವರು ಮನೆಯ ಒಡತಿಯ ಬಳಿ ಬಿಟ್ಟು ಬಂದಿದ್ದರು. ಚಿಕ್ಕ ಮಾವ ವಿಪ್ರದಾಸರಿಗೆ ಬಹುಶಃ ಇದು ಹಿಡಿಸಲಿಲ್ಲ. ಅವರು ಆಕೆಯನ್ನು ತಮ್ಮ ಮನೆಗೆ ಕರೆದೊಯ್ದಿದ್ದರು. ಅವರೇ ಆಕೆಯ ಮದುವೆಯನ್ನೂ ಮಾಡಿ ಮುಗಿಸಿದ್ದರು. ಆಸನ್ ಸೋಲಿನ ಇದ್ದಿಲು ವ್ಯಾಪಾರಿಯ ಕುಟುಂಬಕ್ಕೆ ಆಕೆಯನ್ನು ಮದುವೆ ಮಾಡಿಕೊಡಲಾಗಿತ್ತು. ಶರತ್ ಬಾಬೂಗಳು ಕಲ್ಕತ್ತೆಗೆ ಹಿಂದಿರುಗಿದಾಗ, ಪ್ರಕಾಶಚಂದ್ರರು ಆಕೆಯನ್ನು ನೋಡಿಕೊಂಡು ಬರಲು ಹೋಗಿದ್ದರು. ಆದರೆ, ಯಾವುದೋ ಒಂದು ಮಾತನ್ನೆತ್ತಿಕೊಂಡು ಆಕೆ ಪ್ರಕಾಶ ಚಂದ್ರರೊಂದಿಗೆ ಕಟುವಾದ ಮಾತುಗಳನ್ನಾಡಿದಳೆಂದು ಹೇಳಲಾಗಿದೆ. ಹೀಗಾಗಿ, ಅವರು ಹಾಗೆಯೇ ಹಿಂದಿರುಗಿದರು. ಕಾರಣ ಏನಾದರೂ ಆಗಿರಲಿ, ಸುಶೀಲಾ ಎಂದೂ ಅವರ ಹತ್ತಿರ ಸುಳಿಯಲೇ ಇಲ್ಲ.

ಈ ಒಂದು ಅಪವಾದವನ್ನು ಬಿಟ್ಟರೆ, ಚೆದರಿ ಹೋಗಿದ್ದ ತಮ್ಮ ಕುಟುಂಬವನ್ನು

ಒಂದುಗೂಡಿಸಲು ಶರತ್‌ಚಂದ್ರರು ತಮ್ಮಿಂದ ಸಾಧ್ಯವಿದ್ದುದನ್ನೆಲ್ಲ ಮಾಡಿದರು. ಕೆಲವೇ ದಿನಗಳ ಬಳಿಕ ಅವರ ಸೋದರಿಯ ಮಗಳ ಮದುವೆ ನಡೆಯಿತು. ಹಿಂದೂಗಳ ಸಂಪ್ರದಾಯಕ್ಕನುಗುಣವಾಗಿ ಅವರು 'ಊಟ' ಕೊಡಬೇಕಾಗಿತ್ತು. ಆದರೆ, ಅವರ ಬಳಿ ಹಣವಿರಲಿಲ್ಲ. ಆಗ ಅವರು ತಮ್ಮ ಪ್ರಕಾಶಕರಿಗೆ ಹೀಗೆಂದು ಬರೆದರು: "ನನ್ನ ಸೋದರಿಯ ಮಗಳ ಮದುವೆ ಈ ಶುಕ್ರವಾರ ಅಲ್ಲ ಬರುವ ಶುಕ್ರವಾರ ನಡೆಯಲಿದೆ. ನನ್ನ ಮೇಲೆ ದೊಡ್ಡದೊಂದು ಜವಾಬ್ದಾರಿಯೂ ಇದೆ. ಇಷ್ಟು ದಿನಗಳವರೆಗೆ, ನಾನು ನಮ್ಮ ಸಮಾಜದಿಂದ ಹೊರಹಾಕಲ್ಪಟ್ಟವನಾಗಿದ್ದೇನೆಂಬ ಸಂಗತಿಯನ್ನು ನಿಮಗೆ ತಿಳಿಸಿರಲಿಲ್ಲ. ಕೆಲಸ ಕಾರ್ಯಗಳು ನಡೆಯುವ ಆ ಮನೆಗೆ ಹೋಗುವುದು ಸರಿಯಲ್ಲ. ಏನಾಗುತ್ತದೆಂಬ ಬಗ್ಗೆ ನನಗೆ ಚಿಂತೆಯಿಲ್ಲ. ಆದರೆ, ನಾನು ಒಂದಿಷ್ಟು ಹಣವನ್ನಾದರೂ ಕೊಡಬಯುಸುತ್ತೇನೆ. ನಾನು ಬರಬಾರದೆಂಬುದೇ ಅವರ ಮನಸ್ಸಿನಲ್ಲಿ ಅಡಗಿರುವ ಆಲೋಚನೆ, ನನಗೆ ನಾನೂರು ರೂಪಾಯಿ ಕಡಿಮೆ ಬಿದ್ದಿದೆ. ನನಗೆ ಅಷ್ಟು ಹಣ ಬೇಕು."[1]

ತಮ್ಮ ಸೋದರಿಯನ್ನು ಅವರೆಷ್ಟು ಪ್ರೀತಿಸುತ್ತಿದ್ದರು ಎಂಬುದು ಈ ಕಾಗದದಿಂದ ಸ್ಪಷ್ಟವಾಗುತ್ತದೆ. ಜಾತಿಯಿಂದ ಅವರನ್ನು ಹೊರಹಾಕಿದ್ದುದರಿಂದ (ಬಾಳಿನ ಪರ್ಯಂತ ಅವರು ಜಾತಿಯಿಂದ ಬಹಿಷ್ಕೃತರಾಗಿಯೇ ಇದ್ದರು) ಅವರು ಆ ಸಮಾರಂಭಗಳಲ್ಲಿ ಭಾಗವಹಿಸಲು ಸಾಧ್ಯವಿರಲಿಲ್ಲ. ಹೀಗಾಗಿ, ಅವರು ಇಷ್ಟಪಟ್ಟಿದ್ದರೆ 'ಊಟ' ಹಾಕುವ ಈ ಹೊಣೆಯಿಂದ ಅವರು ಸುಲಭವಾಗಿಯೇ ತಪ್ಪಿಸಿಕೊಳ್ಳಬಹುದಾಗಿತ್ತು. ಆದರೆ, ಅವರ ಹೃದಯದಲ್ಲಿ ಅಡಗಿದ್ದ 'ಅಲೆಮಾರಿ' ಬಳಲಿಹೋಗಿದ್ದನೋ ಅಥವಾ ಆ 'ಅಲೆಮಾರಿ'ಯ ಹಿಡಿತದಿಂದ ಮುಕ್ತರಾಗಲು ಅವರೇ ಇಚ್ಛಿಸುತ್ತಿದ್ದರೋ, ಈಗಂತೂ ಕುಟುಂಬದ ವ್ಯಕ್ತಿಯಾಗಬೇಕೆಂಬ ಆಸೆ ಅವರ ಹೃದಯದಲ್ಲಿ ಎಚ್ಚರಗೊಂಡಿತ್ತು. ಆದ್ದರಿಂದಲೇ, ಈ ಅಪಮಾನವನ್ನು ನುಂಗಿಕೊಂಡೂ, ಹಣವನ್ನು ಕಳಿಸಿಕೊಡುವ ಆ ಸೂಚನೆಯನ್ನು ಅವರು ಅಲ್ಲಗಳೆಯಲಿಲ್ಲ. ಆದರೆ, ಇದರ ಜೊತೆಯಲ್ಲಿಯೇ ತಮ್ಮನ್ನು ಜಾತಿಯ ಒಳಕ್ಕೆ ಸೇರಿಸಿಕೊಳ್ಳಬೇಕೆಂದು ಕೋರಿ, ಆ ದಿಕ್ಕಿನಲ್ಲಿ ಅವರೆಂದೂ ಪ್ರಯತ್ನ ನಡೆಸಲಿಲ್ಲ. ತಮ್ಮನ್ನು ಜಾತಿಯ ಒಳಕ್ಕೆ ಸೇರಿಸಿಕೊಳ್ಳುವ ಪ್ರಯತ್ನ ನಡೆಸುವಂಥವರಿಗೂ ಅವರು ಯಾವುದೇ ಪ್ರೋತ್ಸಾಹ ಕೊಡಲಿಲ್ಲ. ಅನೇಕ ಜನ ಅನೇಕ ಬಗೆಯ ಸಲಹೆಗಳನ್ನು ಮುಂದಿಟ್ಟುಕೊಂಡು ಬಂದರು. ಹಾಗೂ ಬರುತ್ತಲೇ ಇದ್ದರು. ಯಾರೋ ಒಬ್ಬ ಆಂಗ್ಲ ಶಾಲೆಗೆ ಐನೂರು ರೂಪಾಯಿಗಳ ಚಂದಾ ಹಣ ಕೊಡಬೇಕೆಂಬ ಸೂಚನೆಯನ್ನು ಮುಂದಿರಿಸಿದ. ಕೊಳದ ಪಕ್ಕ ಸ್ನಾನಘಟ್ಟವನ್ನು ನಿರ್ಮಿಸಿದರೆ ಅವರನ್ನು ಮತ್ತೆ ಜಾತಿಯ ಒಳಕ್ಕೆ ಸೇರಿಸಿಕೊಳ್ಳಬಹುದೆಂಬ ಸೂಚನೆಯನ್ನು ಮತ್ತೊಬ್ಬ ಅವರ ಮುಂದಿರಿಸಿದ. ಆದರೆ, ಯಾವುದೇ ಷರತ್ತನ್ನು ಒಪ್ಪಲೂ ಅವರು ಸಿದ್ಧರಿರಲಿಲ್ಲ. ಈ ರೂಪದಲ್ಲಿ ಲಂಚ ಕೊಡುವುದನ್ನು ಅವರ ಅಭಿಮಾನಶೀಲ ಮನೋವೃತ್ತಿ ಎಂದೂ ಸಹಿಸಲು ಸಾಧ್ಯವಿರಲಿಲ್ಲ.

---

1. 29, ಜೂನ್ 1916

ಕುಟುಂಬದ ಜನರೊಡನೆ ಮಾತ್ರವಲ್ಲದೆ, ನೆರೆಹೊರೆಯ ಜನರೊಡನೆ ಪರಿಚಯವನ್ನು ಬೆಳೆಸಿಕೊಳ್ಳಲೂ ಅವರು ಮುಂದಾದರು. ಸಾಮಾನುಗಳನ್ನು ಕೊಳ್ಳುತ್ತ ಬಂದಂತೆ, ಮೋದೀ ಶರತ್ ಸೇಠ್ ಎಂಬುವರ ಪರಿಚಯ ಅವರಿಗಾಯಿತು. ಆತನೊಡನೆ ಆಗಿಂದಾಗ್ಗೆ ಅವರು ಇಸ್ಪೀಟು ಆಟವಾಡುತ್ತಿದ್ದರು. ಗುಡುಗುಡಿ ಕುಡಿಯುತ್ತಿದ್ದರು. ಮೂರನೆಯ ಯಾಮದಿಂದ ಹಿಡಿದು ಸರಿ ರಾತ್ರಿಯವರೆಗೆ ಆಟವಾಡುತ್ತಲೇ ಇರುತ್ತಿದ್ದರು. ಆತನನ್ನು ಎದ್ದು ಹೋಗಲು ಬಿಡುತ್ತಲೇ ಇರಲಿಲ್ಲ. "ಹೊಸದಾಗಿ ಇಲ್ಲಿಗೆ ಬಂದಿದ್ದೇನೆ. ಯಾರ ಪರಿಚಯವೂ ಇಲ್ಲ. ಎಲ್ಲಿ ಹೋಗಿ ಕುಳಿತುಕೊಳ್ಳಲಿ? ಸರಿ, ನಿನ್ನ ಅಂಗಡಿಯಲ್ಲೇ ಕುಳಿತು ಕೊಳ್ಳುತ್ತೇನೆ" ಎಂದು ಹೇಳುತ್ತಿದ್ದರು.

ದಿನ ಕಳೆದಂತೆ ಪರಿಚಯದ ಈ ಕ್ಷೇತ್ರ ವಿಸ್ತಾರಗೊಳ್ಳುತ್ತ ನಡೆಯಿತು. ಜನರು ಅವರ ಮನೆಗೂ ಬಂದು ಹೋಗಿ ಮಾಡತೊಡಗಿದರು. ಅವರಲ್ಲಿ ಅನೇಕ ಮಂದಿ ಬಹುಮಟ್ಟಿಗೆ ಅವರ ಬಳಿಯೇ ಒಂದುಗೂಡಿರುತ್ತಿದ್ದರು. ಬೆಂಚಿನ ಮೇಲೆ ಕುಳಿತುಕೊಂಡು, ಗುಡುಗುಡಿ ಎಳೆಯುತ್ತ ಅವರು ಕಥೆಗಳನ್ನು ಹೇಳುತ್ತಿದ್ದರು. ಒಂದು ತಂತಿಯ ತಂಬೂರಿಯನ್ನು ನುಡಿಸುತ್ತ ಹಾಡುವ ವೈಷ್ಣವ ಸಾಧುಗಳನ್ನು ಅವರು ತುಂಬ ಗೌರವಿಸುತ್ತಿದ್ದರು. ಅವರ ಸಂಗೀತವನ್ನು ಕೇಳುತ್ತ ಕೇಳುತ್ತ ಅವರು ಅದರಲ್ಲಿಯೇ ತನ್ಮಯರಾಗಿ ಬಿಡುತ್ತಿದ್ದರು. ಆದರೆ, ಇತರ ಭಿಕ್ಷುಕರತ್ತ ಅವರು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಗೋಲಿಯಾಟವನ್ನಾಡುವ ವಯಸ್ಸು ಎಂದೋ ಕಳೆದುಹೋಗಿತ್ತು. ಆದರೆ, ಸಕ್ರಿಯ ಪ್ರೇಕ್ಷಕನಾಗುವ ಆಸೆಯೇನೋ ಈಗಲೂ ಅವರ ಹೃದಯದಲ್ಲಿತ್ತು.

ಈ ಅವಧಿಯಲ್ಲಿಯೇ ಸರೋಜ್ ರಂಜನ್ ಬಂದೋಪಾಧ್ಯಾಯ ಹಾಗೂ ಅಕ್ಷಯ ಕುಮಾರ್ ಸರ್ಕಾರ್ ಅವರ ಪರಿಚಯ ಉಂಟಾಯಿತು. ಈ ಪರಿಚಯ ಬಹುಬೇಗ ಆಳವಾದ ಸ್ನೇಹವಾಗಿ ಪರಿಣಮಿಸಿತು. ಸರೋಜ್ ರಂಜನ್ ಯಾವುದೋ ಒಂದು ಉನ್ನತ ಹುದ್ದೆಯಲ್ಲಿದ್ದರು. 'ಅರಕ್ಷಣೀಯಾ' ಎಂಬ ಕೃತಿಗೆ ಅವರು ಮುನ್ನುಡಿ ಬರೆದಿದ್ದಾರೆ. ಇತಿಹಾಸ ಅಧ್ಯಾಪಕರಾಗಿದ್ದ ಅಕ್ಷಯ ಸರ್ಕಾರ್ ತಪ್ಪದೆ ದಿನಚರಿ ಬರೆಯುತ್ತಿದ್ದರು. ಆ ದಿನಚರಿಯಲ್ಲಿ ಶರತ್ ಬಾಬೂಗಳ ಬಗ್ಗೆ ಬಹಳಷ್ಟು ಬರೆಯಲಾಗಿದೆ. ಶರತ್‌ಚಂದ್ರರು 'ಶೇಷ ಪ್ರಶ್ನೆ'ಯಲ್ಲಿ ಅಧ್ಯಾಪಕ ಅಕ್ಷಯನನ್ನು ಚಿತ್ರಿಸುವ ಸಂದರ್ಭದಲ್ಲಿ ಖಂಡಿತವಾಗಿಯೂ ಈ ಆದರ್ಶವಾದಿ ಬಂಧುವನ್ನು ನೆನಪಿನಲ್ಲಿರಿಸಿಕೊಂಡಿದ್ದರು.

ಹೆಚ್ಚಿಗೆ ಬರೆಯಲು ಅವರಿಗೆ ಸಾಧ್ಯವೇ ಆಗುತ್ತಿರಲಿಲ್ಲ. ಹಾಗೆ ನೋಡಿದರೆ, ಇದು ಅವರ ಸ್ವಭಾವವೇ ಆಗಿತ್ತು. ಒತ್ತಾಯಪಡಿಸುವವರ ಸಂಖ್ಯೆಯೇನೋ ಹೆಚ್ಚಾಗಿತ್ತು. ಆದರೆ ಎಲ್ಲರನ್ನೂ ತೃಪ್ತಿಪಡಿಸುವುದು ಅವರಿಗೆ ಅಸಾಧ್ಯವೇ ಆಗಿತ್ತು. ಅವರನ್ನು ಬಲ್ಲವರಾಗಿದ್ದಂಥವರು ಹಾಗೂ ಅವರ ಪರಮಭಕ್ತರಾಗಿದ್ದಂಥವರು ಮಾತ್ರವೇ ಅವರಿಂದ ಬರೆಸಬಲ್ಲವರಾಗಿರುತ್ತಿದ್ದರು. ಅಂಥವರಲ್ಲಿ ಅಗ್ರಗಣ್ಯರೆಂದರೆ 'ಭಾರತ ವರ್ಷ' ಪತ್ರಿಕೆಯ ಹೆಸರಾಂತ ಸಂಪಾದಕರಾದ ರಾಯ್ ಬಹಾದುರ್ ಜಲಧರ್

ಸೇನ್ ಅವರು. 'ವೈಕುಂಠನ ಉಯಿಲು'[1] 'ಅರಕ್ಷಣೀಯಾ'[2] 'ಶ್ರೀಕಾಂತ', 'ನಿಷ್ಕೃತಿ' ಹಾಗೂ 'ಸಮಾಜ ಧರ್ಮದ ಮೌಲ್ಯ'ಮೊದಲಾದ ಅವರ ಅನೇಕ ಕೃತಿಗಳು 'ಭಾರತ ವರ್ಷ'ದಲ್ಲಿಯೇ ಪ್ರಕಟವಾಗಿದ್ದುವು. 'ನಿಷ್ಕೃತಿ'ಯ ಒಂದು ಭಾಗ 'ಘರ್‌ಭಾಂಗಾ' (ಗೃಹಭಂಗ) ಎಂಬ ಹೆಸರಿನಲ್ಲಿ 'ಯಮುನಾ'ದಲ್ಲಿಯೂ ಅಚ್ಚಾಗಿತ್ತು.

'ಅರಕ್ಷಣೀಯಾ' ಒಂದು ಮಾರ್ಮಿಕ ಕಥೆ. ಮೊದಲಿಗೆ ನಾಯಿಕೆಯ ಆತ್ಮಹತ್ಯೆಯೊಂದಿಗೆ ಆ ಕಥೆ ಕೊನೆಗೊಂಡಿತ್ತು. ಆಕೆ ತುಂಬ ಕುರೂಪಿಯಾಗಿದ್ದಳು. ಅವಳನ್ನು ನೀರಿನಲ್ಲಿ ಮುಳುಗಿಸುವುದರ ಮೂಲಕವೇ ಅವಳ ಮಾರ್ಮಿಕ ವ್ಯಥೆಗೆ ಮಂಗಳವನ್ನು ಹಾಡಬಹುದೆಂದು ಕಥೆಗಾರ ಭಾವಿಸಿದ್ದ. ಆದರೆ ಕಥೆಯ ಈ ಅಂತ್ಯ ಓದುಗರಿಗೂ ಹಿಡಿಸಲಿಲ್ಲ. ಸ್ವತಃ ಕಥೆಗಾರನಿಗೂ ಚೆನ್ನಾಗಿ ತೋರಲಿಲ್ಲ. ಅದರಲ್ಲಿಯೂ ಪ್ರಕಾಶಕರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯರಿಗೆ ಇದು ಸ್ವಲ್ಪವೂ ಹಿಡಿಸಲಿಲ್ಲ. ಹೀಗಾಗಿ, ಪುಸ್ತಕದ ರೂಪದಲ್ಲಿ ಪ್ರಕಟವಾಗುವ ಹೊತ್ತಿಗೆ ಈ 'ಅರಕ್ಷಣೀಯಾ'ಳಿಗೂ ಒಬ್ಬ ರಕ್ಷಕ ದೊರೆತುಬಿಟ್ಟ. ರೂಪವಿಹೀನೆಯಾದ ಕಲ್ಯಾಣಿ ಮಾನಸಿಕವಾಗಿ ವರಿಸಿದ್ದಂಥ ಅತುಲನೇ ಆರಕ್ಷಕನಾಗಿದ್ದ. ಈ ಬದಲಾವಣೆಯ ಬಗ್ಗೆ ವಿವರಣೆ ನೀಡುತ್ತ ಅವರು ಹೀಗೆಂದಿದ್ದಾರೆ: "ಸ್ತ್ರೀಯಲ್ಲಿ (ಆತ್ಮಹತ್ಯೆಯ) ಈ ರೋಗ ಮತ್ತಷ್ಟು ಹೆಚ್ಚದಿರುವುದೇ ಒಳ್ಳೆಯದು."

ಆದರೆ, ಅತುಲನು ಜ್ಞಾನದಾಳನ್ನು ಮದುವೆಯಾದನೆಂದು ಕಥೆಗಾರ ಈಗಲೂ ನಿಚ್ಚಳವಾಗಿ ಹೇಳಲೇ ಇಲ್ಲ. ಇದೇ ವಿಷಯದ ಬಗ್ಗೆ ಓದುಗರು ಮತ್ತೆ ಮತ್ತೆ ಅವರನ್ನು ಪ್ರಶ್ನಿಸುತ್ತಿದ್ದರು: "ಕೊನೆಗೆ ಅವರಿಬ್ಬರ ಗತಿ ಏನಾಯಿತು ? ಅವರಿಬ್ಬರೂ ಮದುವೆಯಾದರೆ ?"

ಒಂದು ದಿನವಂತೂ ಎರಡು ತಂಡಗಳ ನಡುವೆ ಇದು ವಿವಾದದ, ಬಾಜಿಕಟ್ಟುವ ವಿಷಯವಾಗಿ ಪರಿಣಮಿಸಿತು. ವಿಷಯ ಶರತ್‌ಬಾಬೂಗಳವರೆಗೂ ಬಂದು ತಲುಪಿತು. ಅವರು ಪೇಚಿಗೆ ಸಿಕ್ಕಿಕೊಂಡರು. ಹರಿದಾಸರೊಂದಿಗೆ ಹೀಗೆಂದರು: "ನಿನ್ನಿಂದಾಗಿಯೇ ಇದೆಲ್ಲ ಆಯಿತು. ಇಲ್ಲದೆ ಹೋಗಿದ್ದರೆ, ಜ್ಞಾನದಾ ನೀರಿನಲ್ಲಿ ಮುಳುಗಿ ಸತ್ತು ಹೋಗಿದ್ದಳು. ಸತ್ತು ಹೋಗಿದ್ದರೆ, ಬಡಪಾಯಿ ಅತುಲನೂ ಆ ಕಪ್ಪು ಹುಡುಗಿಗೆ ಗಂಟು ಬೀಳುವುದು ತಪ್ಪುತ್ತಿತ್ತು. ಕಥೆಗಾರನಿಗೂ ಪ್ರಕಾಶಕರಿಗೂ ತೊಂದರೆ ತಪ್ಪುತ್ತಿತ್ತು. ಈಗ ಏನೆಂದು ಉತ್ತರ ಕೊಡಲಿ? ದಿನವೂ ಇಂಥ ಕಾಗದಗಳು ಬರುತ್ತಲೇ ಇವೆ. ಸರಿ, ಇದಾದ ಮೇಲೆ ಶರತ್ ಬಾಬೂಗಳಿಗೂ ಅವರಿಗೂ ಭೇಟಿಯಾಗಲೇ ಇಲ್ಲ. ಆದ್ದರಿಂದ ಮುಂದೆ ಏನಾಯಿತೆಂಬುದು ಗೊತ್ತಿಲ್ಲ."

ಆದರೆ, ಅರಕ್ಷಣೀಯಾಳನ್ನು ರಕ್ಷಿಸುವುದರ ಮೂಲಕ ಶರತ್ ಬಾಬೂಗಳು ತಮ್ಮ ಸಿದ್ಧಾಂತವನ್ನೇನೋ ರಕ್ಷಿಸಿಕೊಂಡರು. ಆದರೆ ಕಲೆಗೆ ಖಂಡಿತವಾಗಿಯೂ ಕ್ಷತಿಯುಂಟಾಯಿತೆಂದೇ ಹೇಳಬೇಕು. ಏಕೆಂದರೆ, ದುರಂತ ರೂಪದಲ್ಲಿಯೇ ಆ ಕಾದಂಬರಿಗೆ ಸಾರ್ಥಕತೆ ಲಭ್ಯವಾಗಿತ್ತು. ಇಷ್ಟಾಗಿಯೂ, ಅಂದಿನ ಸಮಾಜದಲ್ಲಿ

1. ಪುಸ್ತಕದ ರೂಪದಲ್ಲಿ ಪ್ರಕಟವಾದದ್ದು: 5 ಜೂನ್ 1916
2. 20 ನವೆಂಬರ್ 1916.



ಢಾಕಾ ವಿಶ್ವವಿದ್ಯಾಲಯದಿಂದ ಡಿ.ಲಿಟ್ ಪದವಿ
ಸ್ವೀಕರಿಸಿದಾಗ ಶರತ್‌ಚಂದ್ರರು



'ಬಿರಾಜ್ ಬಹೂ' ಬರೆದಾಗ
ಶರತ್‌ಚಂದ್ರರು



ಕೇದಾರನಾಥ, ಶರತ್‌ಚಂದ್ರ, ರವಿಂದ್ರನಾಥ ಟಾಗೂರ್ ಹಾಗೂ ರಾಮಾನಂದ



ಶರತ್‌ಚಂದ್ರರು 'ಚರಿತ್ರ ಹೀನ' ಬರೆದಾಗ



ಸಾಮತಬೇಡದ ಮನೆಯಲ್ಲಿ ಜೋಪಾನವಾಗಿ ಇರಿಸಿರುವ ಅವರು ಬಳಸುತ್ತಿದ್ದ ಕೆಲವು ವಸ್ತುಗಳು



ಕೊಲ್ಕತ್ತಾದ ಅಶ್ವಿನಿ ದತ್ತ ರಸ್ತೆಯಲ್ಲಿ ಶರತ್‌ಚಂದ್ರರು ಕಟ್ಟಿಸಿದ ಮನೆ



ಶರತ್‌ಚಂದ್ರರ ಅಂತಿಮ ಸಂಸ್ಕಾರ ನಡೆದ ಸ್ಥಳದಲ್ಲಿ ಅವರ ನೆನಪಿನ ಸ್ಮಾರಕ



'ಬಂಗವಾಣಿ' ಪತ್ರಿಕೆಯಲ್ಲಿ ಪ್ರಕಟವಾದ 'ಪಥೇರ್ ದಾಬಿ'ಯ ಹಸ್ತಪ್ರತಿಯ ಮೊದಲ ಪುಟ. ಇದರಲ್ಲಿ ಶರತ್‌ಚಂದ್ರರು ಹೀಗೆ ಬರೆದಿದ್ದಾರೆ: ''ಇದರ ಎರಡನೇ ಭಾಗವನ್ನು ನಾನು ಪೂರ್ತಿ ಮಾಡಲಾಗದಿದ್ದರೆ, ನನ್ನ ದೇಶದಲ್ಲಿ ಬೇರೆ ಯಾರಾದರೂ ಇದನ್ನು ಪೂರ್ತಿ ಮಾಡುತ್ತಾರೆ.''

ಹಾಗೂ ಸಮಾಜದ ಒಳಗಿನ ಘಟಕವಾದ ಕುಟುಂಬದಲ್ಲಿ ನಡೆಯುತ್ತಿದ್ದ ಅತ್ಯಾಚಾರ ಮತ್ತು ಹಿಂಸೆಗಳ ಮಾರ್ಮಿಕ ಚಿತ್ರವನ್ನು ಶರತ್‌ಚಂದ್ರರು ಇದರ ಮೂಲಕ ಮುಂದಿರಿಸಿದ್ದಾರೆ. ಮೇಲಿನ ವರ್ಗಕ್ಕೆ ಸೇರಿದ ಹಿಂದೂ ಸಮಾಜದ ವಿವಾಹ ಸಂಬಂಧವಾದ ಸಂಪ್ರದಾಯಗಳು ಹಾಗೂ ಆಚರಣೆಗಳು ಇಂದಿಗೆ ಎಷ್ಟರಮಟ್ಟಿಗೆ ಘಾತಕ ಸ್ವರೂಪದವಾಗಿವೆ, ಬಾಳನ್ನು ಅವು ಹೇಗೆ ಅತ್ಯಂತ ನಿಷ್ಠುರವೂ ನೈತಿಕತಾ ವಿಹೀನವೂ ಆಗಿಸುತ್ತವೆ - ಇವೇ ಮೊದಲಾದ ವಿಚಾರಗಳನ್ನು ಶರತ್‌ಚಂದ್ರರು ತುಂಬ ಸಹೃದಯತೆಯಿಂದಲೂ, ಸಂಯಮದಿಂದಲೂ ಚಿತ್ರಿಸಿದ್ದಾರೆ. ರೂಪವಿಹೀನತೆಯೂ ಪಿತೃವಿಹೀನೆಯೂ ಧನವಿಹೀನೆಯೂ ಆದ ಜ್ಞಾನದಾ ತನ್ನ ಚಾರಿತ್ರ್ಯ ಮತ್ತು ಸಹನಶೀಲತೆಯಿಂದಾಗಿ ಪ್ರತಿಯೊಬ್ಬ ಸಹೃದಯ ಓದುಗನ ಹೃದಯವನ್ನು ಕರಗಿಸಿಬಿಡುತ್ತಾಳೆ.

ಅವರು ಇನ್ನೊಂದು ಕಾದಂಬರಿಯನ್ನೂ ಬರೆಯುತ್ತಿದ್ದರು. ಆದರೆ, ಬರೆದು ಮುಗಿಸುವ ಮುನ್ನವೇ ಅದನ್ನು ಅವರ ಮೆಚ್ಚಿನ ನಾಯಿ ಭೇಲೂ ನಾಶಪಡಿಸಿಬಿಟ್ಟಿತು. ಬರೆಯುತ್ತ ಕುಳಿತಿದ್ದಂತೆಯೇ ಒಮ್ಮೆ ಯಾವುದೋ ಒಂದು ಅತ್ಯಗತ್ಯವಾದ ಕೆಲಸದ ಮೇಲೆ ಅವರು ಎಲ್ಲಿಗೋ ಹೋಗಬೇಕಾಗಿ ಬಂತು. ಅವಸರದಲ್ಲಿ ಕೋಣೆಯ ಚಿಲಕ ಹಾಕುವುದನ್ನು ಅವರು ಮರೆತುಬಿಟ್ಟಿದ್ದರು. ಹಿಂದಿರುಗಿ ಬಂದು ನೋಡಿದರೆ, ಕಾದಂಬರಿಯ ಹಸ್ತಪ್ರತಿ ಕೋಣೆಯಲ್ಲಿ ಚೂರುಚೂರಾಗಿ ಹರಿದುಹೋಗಿ ಚೆಲ್ಲಾಪಿಲ್ಲಿಯಾಗಿ ಹರಡಿಬಿದ್ದಿತ್ತು. ಕಣ್ಣೀರು ತುಳುಕಿ ಬಂತು. ಅವರ ಅಭಿಪ್ರಾಯದಲ್ಲಿ ಅದು ಅವರ ಸರ್ವಶ್ರೇಷ್ಠ ಕೃತಿಯಾಗಬಹುದಾಗಿತ್ತು. ಇಡೀ ಆರು ತಿಂಗಳ ಕಾಲ ಸಂಪೂರ್ಣ ನಿಷ್ಠೆಯಿಂದ ದುಡಿದು ಅವರು ಅದನ್ನು ಬರೆದು ಮುಗಿಸಿದ್ದರು. 'ಮಾಲಿನಿ' ಎಂಬುದು ಅದಕ್ಕೆ ಅವರಿಟ್ಟಿದ್ದ ಹೆಸರು. ಮತ್ತೆ ಅವರು ಅದನ್ನು ಬರೆಯಲಾರದೆ ಹೋದರು.

ಈ ಅವಧಿಯಲ್ಲಿಯೇ ಜೋರಾಸಾಂಕೋದಲ್ಲಿ ರವೀಂದ್ರನಾಥರ ಪೈತೃಕ ಭವನದಲ್ಲಿ 'ವಿಚಿತ್ರಾ'ದ ಸಭೆಗಳು ನಡೆಯುತ್ತಿದ್ದುವು. ರವೀಂದ್ರನಾಥರು ಮತ್ತು ಅವನೀಂದ್ರನಾಥರು ಮಾತ್ರವಲ್ಲದೆ, ಇನ್ನೂ ಅನೇಕ ಚಿರಪರಿಚಿತ ಸಾಹಿತಿಗಳೂ, ಕಲೆಗಾರರೂ ಅದರಲ್ಲಿ ಭಾಗವಹಿಸುತ್ತಿದ್ದರು. ನಡುನಡುವೆ ಶರತ್‌ಚಂದ್ರರೂ ಅಲ್ಲಿಗೆ ಹೋಗಿಬರುತ್ತಿದ್ದರು. ಇದನ್ನೇ ಆಧಾರವಾಗಿಟ್ಟುಕೊಂಡು ಒಂದು ವಿಚಿತ್ರವಾದ ವದಂತಿಯೂ ಆ ದಿನಗಳಲ್ಲಿ ಹುಟ್ಟಿಕೊಂಡಿತು. ಪ್ರತಿಸಲವೂ ಯಾರಾದರೂ ಒಬ್ಬರ ಚಪ್ಪಲಿಗಳು ಕಳುವಾಗುತ್ತಿವೆಯೆಂದು ಹೇಳಲಾಗುತ್ತಿತ್ತು. ಇದು ಎಲ್ಲರಿಗೂ ಚಿಂತೆಯನ್ನುಂಟುಮಾಡಿತ್ತು. 'ಶರತ್‌ಚಂದ್ರರೂ ಈ ವದಂತಿಯನ್ನು ಕೇಳಿದ್ದರು. ಅಂದು ಅವರು ತಮ್ಮ ಹೊಸ ಚಪ್ಪಲಿಯನ್ನು ಹಾಕಿಕೊಂಡು ಹೋಗಿದ್ದರು. ಅವರು ಸದ್ದಿಲ್ಲದಂತೆ ಅವನ್ನು ಕಳಚಿ ದಿನಪತ್ರಿಕೆಯ ಹಾಳೆಯಲ್ಲಿ ಸುತ್ತಿಟ್ಟುಕೊಂಡರು. ಕವಿ ಸತ್ಯೇಂದ್ರನಾಥದತ್ತರು ಇದೆಲ್ಲವನ್ನೂ ನೋಡುತ್ತಿದ್ದರು. ಅವರು ಹಾಗೆಯೇ ಈ ಸುದ್ದಿಯನ್ನು ರವೀಂದ್ರರ ಕಿವಿಗೆ ಹಾಕಿದರು. ಸ್ವಲ್ಪಹೊತ್ತಿನ ಬಳಿಕ ರವೀಂದ್ರರು ಶರತ್‌ಚಂದ್ರರನ್ನು ಪ್ರಶ್ನಿಸಿದರು: "ಶರತ್, ನಿನ್ನ ಕೈಯಲ್ಲಿರುವ ಪೊಟ್ಟಣದಲ್ಲಿ ಏನಿದೆ ?"

"ಹೀಗೆಯೇ ಯಾವುದೋ ಒಂದು ವಸ್ತುವಿದೆ!"
"ಏನು ವಸ್ತು ಅದು? ಯಾವುದಾದರೂ ಪುಸ್ತಕವೇನು?"
"ಹೌದು."
"ಅದು ಯಾವ ಪುಸ್ತಕ? ಬಹುಶಃ 'ಪಾದುಕಾ ಪುರಾಣ'ವೇ ಇರಬೇಕು!"

ಶರತ್‌ಚಂದ್ರರು ಹತಪ್ರಭರಾಗಿ, ಅವಾಕ್ಕಾಗಿ ಕುಳಿತರು. ಆದರೆ, ಸಭೆಯಲ್ಲಿ ನಗೆಯ ಅಟ್ಟಹಾಸ ಮೊಳಗಿತು.

**2**

ಶರತ್‌ಚಂದ್ರರ ಬಾಳಿನ ಸ್ವರ್ಣಯುಗ ಈಗ ಕಾಲಿರಿಸಿದಂತಾಗಿತ್ತು. ನೋಡುನೋಡುತ್ತಿದ್ದಂತೆಯೇ ಅವರ ಕೃತಿಗಳು ಬಂಗಾಳದ ಜನಸಮುದಾಯವನ್ನು ಆವರಿಸಿಕೊಂಡುಬಿಟ್ಟವು. ಒಂದಾದ ಮೇಲೆ ಒಂದರಂತೆ 'ಶ್ರೀಕಾಂತ'[1] (ಮೊದಲ ಭಾಗ), 'ದೇವದಾಸ್'[2], 'ನಿಷ್ಕೃತಿ'[3], 'ಚರಿತ್ರಹೀನ'[4] ಮತ್ತು 'ಕಾಶೀನಾಥ'[5] ಪುಸ್ತಕ ರೂಪದಲ್ಲಿ ಹೊರಬರತೊಡಗಿದುವು. 'ಏಕಾದಶ ವೈರಾಗೀ', 'ಶ್ರೀಕಾಂತ' (ಎರಡನೆಯ ಭಾಗ), 'ಗೃಹದಾಹ', 'ಸ್ವಾಮೀ', 'ದತ್ತಾ', 'ಆಮಾರ್ ಆಶಯ್' ಮೊದಲಾದುವುಗಳ ರಚನೆ ಹಾಗೂ ಪತ್ರಿಕೆಯಲ್ಲಿ ಅವುಗಳ ಪ್ರಕಟಣೆ ಕೂಡ ನಡೆದಿತ್ತು. ತಮ್ಮ ತಮ್ಮ ಅಭಿರುಚಿ ಹಾಗೂ ದೃಷ್ಟಿಕೋನಗಳಿಗೆ ಅನುಗುಣವಾಗಿ ಓದುಗರು ಮತ್ತು ವಿಮರ್ಶಕರು ಇವುಗಳಲ್ಲಿ ಒಂದೊಂದನ್ನೂ ಹಾಡಿಹೊಗಳಿದರು.

ಬರೆಯುವ ಹೊತ್ತಿನಲ್ಲಿ ಅವರು ತುಂಬ ಚಿಂತನ-ಮಂಥನದಲ್ಲಿ ತೊಡಗಿರುತ್ತಿದ್ದರು. ಅವರ ಹಸ್ತಪ್ರತಿಗಳು ಈ ಮಾತಿಗೆ ಸಾಕ್ಷಿಯಾಗಿವೆ. ನಡುನಡುವೆ ತಿದ್ದುಪಡಿಗಳನ್ನು ಮಾಡುತ್ತಿದ್ದುದಲ್ಲದೆ, ಅಲ್ಲಲ್ಲಿ ಇತರ ಭಾಷೆಗಳಲ್ಲಿಯೂ ಬರೆಯುತ್ತ ಹೋಗುತ್ತಿದ್ದರು. 'ಶ್ರೀಕಾಂತ' ಕಾದಂಬರಿಯ ಹಸ್ತಪ್ರತಿಯಲ್ಲಿ ಒಂದು ಕಡೆ ಅವರು ಹಿಂದಿನ ಮತ್ತು ಫ್ರೆಂಚ್ ಭಾಷೆಯಲ್ಲಿ ಕೆಲವು ಪಂಕ್ತಿಗಳನ್ನು ಬರೆದಿದ್ದಾರೆ. 'ದೇವದಾಸ್' ಕಾದಂಬರಿಗೆ ಸಂಬಂಧಿಸಿದಂತೆ ವಾದ-ವಿವಾದಗಳು ನಡೆದಾಗ, ಒಮ್ಮೆ ಅವರು ಹೀಗೆಂದು ಹೇಳಿಯೂ ಇದ್ದರು: " 'ದೇವದಾಸ' ಕಾದಂಬರಿಯ ಸೃಷ್ಟಿಯಲ್ಲಿ ನನ್ನ ಹೃದಯದ ಸಮಾವೇಶವಿದ್ದರೆ, 'ಶ್ರೀಕಾಂತ' ಕಾದಂಬರಿಯ ಸೃಷ್ಟಿಯಲ್ಲಿ ಬುದ್ಧಿಯ ಸಮಾವೇಶವಿದೆ."

ಶರತ್‌ಚಂದ್ರರು ತಮ್ಮ ಯೌವನ ಕಾಲದಲ್ಲಿ ಎಷ್ಟು ಸ್ವತಂತ್ರ ಮನೋವೃತ್ತಿಯವರಾಗಿದ್ದರೋ, ಪ್ರೌಢರಾಗುತ್ತ ಬಂದಂತೆ ಅಷ್ಟೇ ಆಚಾರವಾದಿಗಳಾಗಿ ಪರಿಣಮಿಸಿದರು. ದೇವದಾಸನ ಆತ್ಮಘಾತುಕ ಭಾವುಕತೆಯನ್ನು ಅಷ್ಟೊಂದು ನಿಷ್ಕಪಟವಾಗಿಸಿ ಹಾಗೂ ಮಹತ್ತರವಾಗಿಸಿ, ಆದರ್ಶವೆಂಬಂತೆ ಸ್ಥಾಪಿಸಬಾರದು

---

[1] 12 ಫೆಬ್ರುವರಿ 1917 [2] 30 ಜೂನ್ 1917
[3] 1 ಜುಲೈ 1917. [4] 11 ನವೆಂಬರ್ 1917.
[5] 'ಕಾಶೀನಾಥ' (1 ಸೆಪ್ಟೆಂಬರ್ 1917) ದಲ್ಲಿ ಈ ಆರು ಇತರ ಕಥೆಗಳೂ ಇವೆ: ಬೆಳಕು-ನೆರಳು, ಮಂದಿರ, ಬೋಝಾ, ಅನುಪಮಾಳ ಪ್ರೇಮ, ಬಾಲ್ಯದ ನೆನಪು, ಮತ್ತು ಪರಿಚರಣ

ಎಂದು ಬಹುಶಃ ಅವರಿಗೆ ಅನ್ನಿಸಿತ್ತು. ಆದ್ದರಿಂದಲೇ, ಈಗ ಅವರಿಗೆ ಅದು ಅಷ್ಟು ಪ್ರಿಯವಾದ ಕೃತಿಯಾಗಿ ಉಳಿದಿರಲಿಲ್ಲ. ಆದರೆ, 'ದೇವದಾಸ್' ಕಾದಂಬರಿಯನ್ನು ರಚಿಸುತ್ತಿದ್ದ ಕಾಲದಲ್ಲಿ ನಿಜವಾಗಿಯೂ ಪ್ರೇಮದ ವೇದನೆಯಿಂದ ಅವರು ವ್ಯಾಕುಲರಾಗಿದ್ದರೆಂಬುದರಲ್ಲಿ ಅನುಮಾನವೇನೂ ಇಲ್ಲ. ಅದು ಅಪರಿಪಕ್ವ ಕಿಶೋರ ಹೃದಯದ ವೇದನೆಯಾಗಿತ್ತೆಂಬುದರಲ್ಲಿಯೂ ಸಂದೇಹವಿಲ್ಲ. ಅವರ ಪ್ರೇಯಸಿಯೂ ಬಹುಶಃ ರಕ್ತಮಾಂಸಗಳಿಂದ ಕೂಡಿದ ಯಾವ ಹೆಣ್ಣೂ ಅಲ್ಲ. ಹಾಗೇನಾದರೂ ನಿಜ ಜೀವನದ ವ್ಯಕ್ತಿ ಆಕೆ ಆಗಿದ್ದರೆ, ಆಕೆಯ ಬಳಿಗೆ ತಲುಪುವ ಯಾವ ಹಾದಿಯೂ ಅವರಿಗೆ ತೆರೆದಿರಲಿಲ್ಲ. ಯೌವನದಲ್ಲಿ ಕಾಲಿರಿಸುವ ಸಮಯದಲ್ಲಿ ಸಾಮಾನ್ಯವಾಗಿ ಎಲ್ಲರ ವಿಷಯದಲ್ಲಿ ಆಗುವಂತೆ ಅವರ ವಿಷಯದಲ್ಲಿಯೂ ಆಯಿತು. ಆದರೆ, ಪ್ರೇಮದ ಕ್ಷೇತ್ರದಲ್ಲಿ ಅವರು ಯಶಸ್ವಿಯಾಗಲಾರದೆ ಹೋದರು, ಹಾಗೂ ಅದೇ ವಿಫಲಪ್ರೇಮ, ನಾನಾ ಸಾಮಾಜಿಕ ಆಘಾತಗಳ ನಡುವೆ ಸಿಕ್ಕು, 'ದೇವದಾಸ' ಕಾದಂಬರಿಯಲ್ಲಿ ಕಾಣಿಸಿಕೊಂಡಿತು. ಆದ್ದರಿಂದಲೇ ಅದರ ನಿಟ್ಟುಸಿರು ಹಾಗೂ ಅದರ ತೀವ್ರ ವೇದನೆ ಮನಸ್ಸನ್ನು ಕಲಕಿಬಿಡುತ್ತದೆ. ವಿಯೋಗದ ಸಾರ್ಥಕತೆಯ ದೃಷ್ಟಿಯಿಂದಲೂ ವಿದ್ವಾಂಸರು ಅದಕ್ಕೆ ವ್ಯಾಖ್ಯಾನವನ್ನೊದಗಿಸುವ ಪ್ರಯತ್ನ ಮಾಡಿದ್ದಾರೆ. ಸುಪ್ರಸಿದ್ಧ ಗಾಂಧೀವಾದಿ ಚಿಂತಕರಾದ ಜೈನೇಂದ್ರಕುಮಾರ್ ಅವರು ದೇವದಾಸನನ್ನು ಅತ್ಯಂತ ಸಂಯಮಿಯೆಂದು ಸಿದ್ಧಪಡಿಸಿ ತೋರಿಸುತ್ತಾ ಹೀಗೆಂದು ಬರೆದಿದ್ದಾರೆ: "ಮೈ ವಿರೂಪಗೊಂಡರೂ ವಿದ್ರೋಹವನ್ನೆಸಗಿದರೂ ಮನಸ್ಸಿನ ಆ ದೃಢ ಬ್ರಹ್ಮಚರ್ಯೆ ಪರಿಶುದ್ಧವಾಗಿಯೇ ಉಳಿದುಕೊಂಡಿತಲ್ಲವೆ! ಹಾಗೆ ಆದದ್ದು ಒಪ್ಪಿಕೊಂಡ ವಿಯೋಗಶಕ್ತಿಯ ಸಾಮರ್ಥ್ಯದಿಂದಲೇ ಅಲ್ಲವೇ! ವಿಯೋಗವನ್ನು ದೇವದಾಸ್ ಮತ್ತಷ್ಟು ಪೂರ್ಣರೂಪದಲ್ಲಿ ಒಪ್ಪಿಕೊಳ್ಳುವುದು ಸಾಧ್ಯವಾಗಿದ್ದರೆ ಅವನಂಥ ಇನ್ನೊಬ್ಬ ಯೋಗಿ ಪುರುಷನನ್ನು ಕಾದಂಬರಿ ಸಾಹಿತ್ಯದಲ್ಲಿ ಕಾಣುವುದು ಬಹುಶಃ ಸಾಧ್ಯವೇ ಆಗುತ್ತಿರಲಿಲ್ಲವೆಂದೂ ನಾನು ಹೇಳಬಯಸುತ್ತೇನೆ. ಆ ನೆಲೆಯನ್ನು ತಲುಪಲಿಲ್ಲವೆಂಬ ಕಾರಣಕ್ಕಾಗಿಯೇ ನಾವು ಸುಲಭವಾಗಿ ನಮ್ಮ ಕಣ್ಣುಗಳಿಗೆ ಮೋಸ ಮಾಡಿಕೊಂಡು ಬಿಡುವುದೇನು ? ಯಾವ ಪ್ರಮಾಣದಲ್ಲಿ ಅವನು ಆ ವಿಯೋಗವನ್ನು ಒಪ್ಪಿಕೊಂಡಿದ್ದನೋ - ವಾಸ್ತವವಾಗಿ ಅವನು ಹೆಚ್ಚಿನ ಪ್ರಮಾಣದಲ್ಲಿ ಹಾಗೆ ಮಾಡಿದ್ದ - ಅಷ್ಟರಮಟ್ಟಿಗೆ ವಿಯೋಗ ಅವನಿಗೆ ಪರವಾಗಿಯೇ ಪರಿಣಮಿಸಿತು ಹಾಗೂ ಅದರಲ್ಲಿ ದೇವದಾಸ್ ಮೇಲೇರಿ ನಿಂತ. ದೇವದಾಸ್ ಪಾರ್ವತಿಯ ನಾಮಸ್ಮರಣೆಯಲ್ಲಿಯೇ ಮುಳುಗಿದ್ದ. ಆದರೆ, ವಿವಾಹಿತಳಾದ ಪಾರ್ವತಿ ರಾತ್ರಿಯ ಏಕಾಂತದಲ್ಲಿ ಸಂಪೂರ್ಣ ಭಾವನೆಯಿಂದ ಅವನಿಗೆ ಆತ್ಮಸಮರ್ಪಣೆ ಮಾಡಿಕೊಳ್ಳಲು ಸಿದ್ಧವಿರುವುದಾಗಿ ತಿಳಿಸಿದಾಗ, ನಿಬಿಡವಾದ ಅಧಮ ಆಚರಣೆಗಳಲ್ಲಿಯೇ ಮುಳುಗಿದ್ದ ದೇವದಾಸನು ಮಾಡಿದ್ದಾದರೂ ಏನು ? ಪಾರ್ವತಿಯನ್ನು ಸ್ವೀಕರಿಸಿದನೆ ? ಇಲ್ಲ, ಸ್ವೀಕರಿಸಲಿಲ್ಲ. ಢೇವರ ವಿಗ್ರಹದಂತೆ ಆಕೆಯನ್ನು ತನ್ನಿಂದ ದೂರವಾಗಿಯೇ ಇರಿಸಿದ್ದ. ದೇವರ ಬಗೆಗಿನ ಭಕ್ತಿಯನ್ನು ಮಾತ್ರವೇ ಅವರು ತಮ್ಮದಾಗಿಸಿಕೊಳ್ಳಬಯಸಿದರು. ದೇವರ ವಿಗ್ರಹವನ್ನೇ ಪಡೆದುಕೊಳ್ಳಬೇಕೆಂದು ಅವರು ಸ್ಪರ್ಧೆಗೆ ನಿಲ್ಲಲಿಲ್ಲ."

ಪ್ರೇಮದ ಈ ಪ್ರಗಾಢತೆ ಮನಸ್ಸನ್ನು ಸ್ಪರ್ಶಿಸುತ್ತದೆಯೇ ಹೊರತು, ಅದರಲ್ಲಿ ಅನುಭವಿಸಬೇಕಾಗಿ ಬಂದ ಸೋಲು-ಗೆಲುವುಗಳಲ್ಲ. ಅಷ್ಟೇ ಅಲ್ಲ, ನಿಜವಾದ ಪ್ರೇಮ ಒಂದುಗೂಡಿಸುವುದು ಮಾತ್ರವಲ್ಲ, ಒಬ್ಬರಿಂದ ಇನ್ನೊಬ್ಬರನ್ನು ದೂರವಾಗಿಸಿಬಿಡುತ್ತದೆಯೆಂಬುದೂ ನಿಜ.

ಗುರುದೇವ ರವೀಂದ್ರನಾಥ ಠಾಕೂರರೇ 'ನಿಷ್ಕೃತಿ'ಯನ್ನು ಹಾಡಿಹೊಗಳಿದ್ದರು. ಆದರೆ, 'ಚರಿತ್ರಹೀನ'ದ ಬಗ್ಗೆ ಎದ್ದ ಬಿರುಗಾಳಿಯಂತೂ ನಿಜಕ್ಕೂ ಅದ್ಭುತವಾಗಿತ್ತು. 'ಯಮುನಾ'ದಲ್ಲಿ ಅದನ್ನು ಸಂಪೂರ್ಣವಾಗಿ ಅಚ್ಚಿಸಲು ಸಾಧ್ಯವಾಗಿರಲಿಲ್ಲ. ಪುಸ್ತಕದ ರೂಪದಲ್ಲಿ ಹೊರಬರುವುದೂ ತುಂಬ ತಡವೇ ಆಯಿತು. ಅವರು ತುಂಬ ನಿಧಾನವಾಗಿ ಅಚ್ಚಿಸಬೇಕಾದ ಮಾಹಿತಿಯನ್ನು ಕಳಿಸುತ್ತಿದ್ದರು. ಇಡೀ ಹಸ್ತಪ್ರತಿಯನ್ನು ಪಡೆದುಕೊಳ್ಳದೆಯೇ ಸುಧೀರ್ ಚಂದ್ರ ಸರ್ಕಾರ್ ಅವರು ಅಚ್ಚಿನ ಕೆಲಸವನ್ನು ಆರಂಭಿಸಿಬಿಟ್ಟಿದ್ದರು. 'ಚರಿತ್ರಹೀನ' ಕಾದಂಬರಿಯಿಂದಾಗಿ ಎದ್ದಿದ್ದ ಕೋಲಾಹಲ, ಅದರ ಮಾರಾಟದ ವಿಷಯದಲ್ಲಿ ಸಹಾಯಕವಾದೀತೆಂದು ಅವರು ನಂಬಿದ್ದರು. ಆದರೆ, ತಿಂಗಳು ತಿಂಗಳುಗಳೇ ಕಳೆದು ಹೋದುವಾದರೂ ಶರತ್‌ಚಂದ್ರರು ಮುಂದಿನ ಪುಟಗಳನ್ನು ಕಳಿಸಲಾರದೆ ಹೋದರು. ಸರ್ಕಾರ್ ಅವರು ಮತ್ತೆ ಮತ್ತೆ ಕಾಗದಗಳನ್ನು ಬರೆಯುತ್ತಿದ್ದರು. ಇತ್ತ, ಶರತ್ ಉತ್ತರದ ರೂಪದಲ್ಲಿ ಹೀಗೆ ಬರೆಯುತ್ತಿದ್ದರು: "ತಡವಾಗುವುದರಿಂದ ಎಷ್ಟು ನಷ್ಟವಾಗುತ್ತದೆಂಬುದು ನನಗೆ ಗೊತ್ತಿಲ್ಲವೇನು ? ಬಹುಶಃ ಇಡೀ ಕಾದಂಬರಿಯನ್ನೇ ಮತ್ತೆ ಬರೆಯಬೇಕಾಗಿ ಬರಬಹುದು. ಹೀಗೆ ಮಾಡುವುದರಿಂದಾಗಿ ಒಂದೆರಡು ತಿಂಗಳು ತಡವಾಗಬಹುದು. ಹಾಗೆ ಆದರೂ ಒಳ್ಳೆಯದೆ, ಇಷ್ಟಾಗಿಯೂ, ಅಚ್ಚಿನ ಕೆಲಸ ನಿಂತು ಹೋಗದಂತೆ, ಮುಂದಿನ ಅಂಚೆಯಲ್ಲಿ ಕೆಲವು ಪುಟಗಳನ್ನು ಕಳಿಸಿಕೊಡುತ್ತೇನೆ. ಸಾಕಷ್ಟು ಹೆಚ್ಚು ಪುಟಗಳನ್ನೇ ಕಳಿಸಿಕೊಡುವ ಸಂಭವವೂ ಇದೆ. ಇನ್ನೂ ಒಂದು ಮಾತಿದೆ. ಮತ್ತೆ ಬರೆಯತೊಡಗಿರುವುದರಿಂದ, ಹಿಂದೆ ಈಗಾಗಲೇ ಹೇಳಿರುವುದನ್ನೇ ಮತ್ತೆ ಎಲ್ಲಿಯಾದರೂ ಹೇಳಿಬಿಟ್ಟೇನೆಂಬ ಭಯವೂ ಉಂಟಾಗುತ್ತಿದೆ. ಅಚ್ಚಾಗಿರುವಷ್ಟು ಭಾಗವೂ ಸಂಪೂರ್ಣವಾಗಿ ನನ್ನ ಕೈಸೇರಿಲ್ಲ. ಅದೆಲ್ಲವನ್ನೂ ರಿಜಿಸ್ಟರ್ ಅಂಚೆಯಲ್ಲಿ ಕಳಿಸಿಕೊಟ್ಟರೆ ನನ್ನ ಶ್ರಮ ಕಾಲುಭಾಗದಷ್ಟಾದರೂ ಕಡಿಮೆಯಾಗುತ್ತದೆ. ಅವಸರ ಅವಸರವಾಗಿ ಬರೆದರೇನೋ ಹದಿನೈದು ದಿವಸಗಳಲ್ಲಿ ಎಲ್ಲವನ್ನೂ ಬರೆದು ಮುಗಿಸಬಹುದು. ಆದರೆ, ಹಾಗೆ ಮಾಡುವುದು ಸರಿಯೆ ? ಇಷ್ಟಾಗಿಯೂ, ಎಷ್ಟೇ ತಡವಾದರೂ, ಮಾಘಮಾಸದ ಕೊನೆಯ ಹೊತ್ತಿಗೆ ಅಚ್ಚಿನ ಕೆಲಸ ಮುಗಿದುಹೋಗುತ್ತದೆ."

ಮೂರು ತಿಂಗಳ ಬಳಿಕ ಮತ್ತೆ ಹೀಗೆಂದು ಬರೆದರು: "ಮನಸ್ಸು ಎಷ್ಟು ಗಲಿಬಿಲಿಗೊಂಡಿದೆಯೆಂದರೆ ಯಾವ ಕೆಲಸಕ್ಕೆ ಕೈ ಹಚ್ಚಲೂ ಮನಸ್ಸಾಗುತ್ತಿಲ್ಲ. ಕೈಹಚ್ಚಿದರೂ ಅದು ಚೆನ್ನಾಗಿ ಆಗುವುದಿಲ್ಲ, ಅರ್ಧ, ಮೂರನೆಯ ಒಂದು ಭಾಗದಷ್ಟು, ಕಾಲು ಭಾಗದಷ್ಟು ಹೀಗೆ ಹಿಂದೆಯೇ ಬರೆದಿಟ್ಟಿರುವ ನನ್ನ ಅನೇಕ ಕೃತಿಗಳಿವೆಯಲ್ಲ, ಅವನ್ನೇ ಹೇಗೆ ಹೇಗೋ ಜೋಡಿಸಿ ಪೂರೈಸುತ್ತಿದ್ದೇನೆ. ಆದರೆ, 'ಚರಿತ್ರ ಹೀನ'ದ ವಿಷಯದಲ್ಲಿ ಹೀಗೆ ಮಾಡಲು ನನಗೆ ಮನಸ್ಸಾಗಲಿಲ್ಲ.

ಆದ್ದರಿಂದಲೇ, ಇಷ್ಟು ದಿನಗಳವರೆಗೆ ಎರಡೆರಡು ಅಧ್ಯಾಯಗಳನ್ನು ಕಳಿಸುತ್ತ ಇದ್ದೆ. ಇಲ್ಲದೆ ಹೋದರೆ, ಈ ಸಲ ನನ್ನ ಹತ್ತಿರವೇ ಕುಳಿತುಕೊಂಡು ಎಲ್ಲವನ್ನೂ ಸರಿಪಡಿಸಿಕೊಂಡು ಬಿಡು. ಆಯುರ್ವೇದ ಚಿಕಿತ್ಸೆಗಾಗಿ ನಾನು ಕಲ್ಕತ್ತೆಗೆ ಬರಲಿದ್ದೇನೆ. ಒಂದು ವರ್ಷ ಇರುತ್ತೇನೆ. ಏಪ್ರಿಲ್ 11 ರಂದು ಹೊರಡಲಿದ್ದೇನೆ."

ಇದಾದ ಬಳಿಕವೂ, 'ಚರಿತ್ರ ಹೀನ' ಪ್ರಕಟವಾಗಬೇಕಾದರೆ ಒಂದು ವರ್ಷವೇ ಹಿಡಿಯಿತು. ಬರ್ಮಾಕ್ಕೆ ಹೊರಡುವುದಕ್ಕಿಂತಲೂ ಬಹಳ ಹಿಂದೆಯೇ ಅದನ್ನು ಬರೆಯಲು ಆರಂಭಿಸಿದ್ದರು. ಸುಮಾರು ಹದಿನೈದು ವರ್ಷಗಳವರೆಗೆ ಅದನ್ನು ಸತತವಾಗಿ ಬರೆಯುತ್ತಲೇ ಇದ್ದರು. ಆದರೆ, ಒಮ್ಮೆ ಮನೆಗೆ ಬೆಂಕಿ ಬಿದ್ದಾಗ ಆ ಹಸ್ತಪ್ರತಿ ಸುಟ್ಟು ಬೂದಿಯಾಗಿ ಹೋಗಿತ್ತು. ಆಮೇಲೆ, ನೆನಪಿನಿಂದಲೇ ಮತ್ತೆ ಅವರು ಅದನ್ನು ಬರೆಯತೊಡಗಿದರು. ಅದಕ್ಕೂ ಐದಾರು-ವರ್ಷಗಳೇ ಹಿಡಿದುವು.

ಅದು ಹೊರಬಂದ ಕೂಡಲೇ ಬಂಗಾಳದಲ್ಲಿ ಕೋಲಾಹಲವೇ ಉಂಟಾದಂತೆ ಆಯಿತು. 'ಉಪಾಸನಾ' ಪತ್ರಿಕೆ ಅದನ್ನು ಕಟುವಾಗಿ ಟೀಕಿಸುತ್ತ, ಧರ್ಮ ಹಾಗೂ ಸಮಾಜವನ್ನು ಸಂಪೂರ್ಣವಾಗಿ ಹಾಳುಗೆಡವುವಂಥ ಪ್ರಯತ್ನವನ್ನೆಸಗಲಾಗಿದೆಯೇನೋ ಎಂಬಂತೆ ಅವರ ಮೇಲೆ ತೀವ್ರ ಆಕ್ರಮಣವನ್ನೇ ಎಸಗಿತು. 'ಚರಿತ್ರಹೀನ' ಕಾದಂಬರಿಯಲ್ಲಿ ಯಾವ ಬಗೆಯ ಹೆಣ್ಣಿನ ಪಾತ್ರ ಸೃಷ್ಟಿಯಾಗಿತ್ತೋ, ಅಂಥದಕ್ಕೆ ಸಮಾಜದಲ್ಲಿ ಎಂದೂ ಯಾವ ಕೊರತೆಯೂ ಇರಲಿಲ್ಲ. ಇತ್ತ, ಶರತ್‌ಚಂದ್ರರೇನೋ ಧರ್ಮಪ್ರಾಣರಾದ ಹಿಂದೂಗಳಂತೆ ಆ ಎಲ್ಲ ಚರಿತ್ರಹೀನರ ಚಾರಿತ್ರ್ಯವನ್ನು ರಕ್ಷಿಸಿದ್ದರು. ಆದರೆ, ಸಮಾಜದ ಆ ಧರ್ಮಪ್ರಾಣರಾದ ಹಿಂದೂಗಳೇ ಅವರಿಗೆ ವಿರುದ್ಧವಾಗಿ ಎದ್ದು ನಿಂತರು. ಒಂದು ದಿವಸ, ಅವರು ಮನೆಯ ಪಡಸಾಲೆಯಲ್ಲಿ ಕುಳಿತು ಧೂಮಪಾನ ಮಾಡುತ್ತಿದ್ದರು. ಆಗ ಮೂರು-ನಾಲ್ಕು ಮಂದಿ ಯುವಕರು 'ಚರಿತ್ರಹೀನ'ದ ಒಂದು ಪ್ರತಿಯನ್ನು ಹಿಡಿದುಕೊಂಡು ಅಲ್ಲಿಗೆ ಬಂದರು. ಶರತ್‌ಚಂದ್ರರು ಹುಕ್ಕಾದ ನಳಿಕೆಯನ್ನು ಬಾಯಿಂದ ಹೊರತೆಗೆದಿರಿಸುತ್ತ ಕೇಳಿದರು: "ಹೇಳಿ ಸ್ವಾಮಿ, ಏನು ಸಮಾಚಾರ? ಇಷ್ಟು ದೂರ ಬಂದಿದ್ದೀರಲ್ಲ!"

ತುಂಬ ಕೋಪದಲ್ಲಿದ್ದ ಒಬ್ಬ ಯುವಕ ಪ್ರಶ್ನಿಸಿದ: "ಈ 'ಚರಿತ್ರಹೀನ' ನಿಮ್ಮ ಕೃತಿಯೇ ತಾನೇ?"

"ಹೌದು."

"ಇಂಥ ಪುಸ್ತಕಗಳನ್ನು ಬರೆಯುವುದಾದರೆ ನೀವು ಈ ಮೊಹಲ್ಲಾದಲ್ಲಿ ಇರುವಂತಿಲ್ಲ. ಇದು ಸಭ್ಯ ಜನಗಳು ವಾಸ ಮಾಡುವಂಥ ಮೊಹಲ್ಲಾ."

ಮತ್ತೊಬ್ಬ ಯುವಕ ಮತ್ತಷ್ಟು ಏರಿಸಿದ ಧ್ವನಿಯಲ್ಲಿ ಕೇಳಿದ: "ಸಾವಿತ್ರಿ ಮತ್ತು ಕಿರಣ್ಮಯಿ ಅಂಥವರನ್ನು ಬಿಟ್ಟು ಸಮಾಜದಲ್ಲಿ ಮತ್ತಷ್ಟು ಒಳ್ಳೆಯ ಪಾತ್ರಗಳಾವುವೂ ನಿಮ್ಮ ಕಣ್ಣಿಗೇ ಬೀಳಲಿಲ್ಲವೇ?"

ಶರತ್‌ಚಂದ್ರರು ಮನಸ್ಸಿನಲ್ಲಿಯೇ ಮುಗುಳ್ನಕ್ಕರು. "ಅದು ಸರಿ. ಬನ್ನಿ, ಮೊದಲು ನೀವೆಲ್ಲ ಕುಳಿತುಕೊಳ್ಳಿ."

ಇನ್ನೊಬ್ಬ ಯುವಕ ಹೇಳಿದ: "ನಿಮ್ಮ ಈ ಪುಸ್ತಕದ ಗತಿ ಏನಾಗುತ್ತದೆ ಎಂಬುದನ್ನು ನಿಮಗೆ ತೋರಿಸಿಕೊಡುವುದಕ್ಕಾಗಿಯೇ ನಾವಿಲ್ಲಿಗೆ ಬಂದಿದ್ದೇವೆ."

ಆ ಯುವಕರು ಶರತ್‌ಚಂದ್ರರ ಎದುರಿನಲ್ಲಿಯೇ 'ಚರಿತ್ರಹೀನ' ಕಾದಂಬರಿಯನ್ನು ಹರಿದು ಹಾಕಿ, ಅದಕ್ಕೆ ಬೆಂಕಿ ಹಚ್ಚಿದರು. ನೊಂದ ಮನಸ್ಸಿನಿಂದ ಅವರು ಅದನ್ನು ನೋಡುತ್ತ ಕುಳಿತಿದ್ದರು. ಕೋಪಗೊಂಡಿದ್ದ ಆ ಯುವಕರನ್ನು ಸಮಾಧಾನಪಡಿಸಲು ಯತ್ನಿಸುತ್ತ ಅವರೆಂದರು: "ಸಾವಿತ್ರಿ ಭೋಜನಾಲಯದ ವಾಸಿಯಲ್ಲ. ಅವಳು ಆ ಭೋಜನಾಲಯದ ಸರ್ವಸ್ವ. ತನ್ನ ಪ್ರೀತಿಯಿಂದ ಅವಳು ಎಲ್ಲರನ್ನೂ ತನ್ನವರನ್ನಾಗಿಸಿಕೊಂಡಿದ್ದಾಳೆ. ಸತೀಶನೂ ಅವಳವನಾಗಿ ಬಿಟ್ಟಿದ್ದಾನೆ. ಅದೆಷ್ಟು ಸಲ, ಅದೆಷ್ಟು ಬಗೆಯಲ್ಲಿ ಅವನು ಅವಳನ್ನು ತನ್ನವಳನ್ನಾಗಿಸಿಕೊಳ್ಳುವ ಇಚ್ಛೆಯನ್ನು ವ್ಯಕ್ತಪಡಿಸಿದ್ದಾನೆ. ಆದರೂ, ಸಾವಿತ್ರಿ ಅವನನ್ನು ದೂರದಲ್ಲಿಯೇ ಇರಿಸಿದ್ದಾಳೆ. ಅವಳು ಅವನನ್ನು ಅದೆಷ್ಟು ಪ್ರೀತಿಸುತ್ತಿದ್ದಳು! ಆದರೂ ಅವನನ್ನು ತನ್ನವನನ್ನಾಗಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಸರೋಜಿನಿಯೊಂದಿಗೆ ಅವನ ಮದುವೆ ನಡೆಸಿ ಅವನನ್ನು ಸಂಸಾರಿಯಾಗಿಸಿದಳು."

ಇದ್ದಕ್ಕಿದ್ದಂತೆ ಒಬ್ಬ ಯುವಕ ಹೇಳಿದ: "ಸರಿ, ಕಿರಣ್ಮಯಿಯ ಬಗ್ಗೆ ಏನು ಹೇಳುತ್ತೀರಿ ?"

ಶರತ್‌ಚಂದ್ರರು ಹೀಗೆ ಉತ್ತರಿಸಿದರು: "ನೋಡಿ, ಕಿರಣ್ಮಯಿಯ ಪಾತ್ರದ ಮೂಲಕ ನಾನು ನಾರೀಜೀವನದ ವ್ಯರ್ಥತೆಯನ್ನು ತೋರಿಸಿ ಕೊಡಬಯಸಿದ್ದೇನೆ. ಕಿರಣ್ಮಯಿ ಮತ್ತು ಹಾರಾನ್ ಬಾಬೂ ಅವರ ಗೃಹಸ್ಥ ಜೀವನ ತುಂಬ ಕರುಣಾಜನಕವಾಗಿದೆ. ಗಂಡನ ಪ್ರೀತಿಯನ್ನು ಆಕೆ ಪಡೆಯಲೇ ಇಲ್ಲ. ಮನೆಯಲ್ಲಿ ಗಂಡನಿದ್ದಾನೆ, ಅತ್ತೆಯಿದ್ದಾಳೆ. ಹೆಂಡತಿಗೆ ಪಾಠ ಹೇಳಿಕೊಡುವುದರಲ್ಲಿಯೇ ಸುಖವನ್ನು ಕಾಣುವ ಒಬ್ಬ ದಾರ್ಶನಿಕನೂ ಇದ್ದಾನೆ. ಇನ್ನೊಬ್ಬಳು ಮಹಾ ಸ್ವಾರ್ಥಿ. ಸೊಸೆಯಿಂದ ಚೆನ್ನಾಗಿ ಕೆಲಸ ತೆಗೆಯುತ್ತಾಳೆ. ಕಿರಣ್ಮಯಿ ವಿರುದ್ಧ ಸ್ವಭಾವದ ಗಂಡು-ಹೆಣ್ಣುಗಳಿಬ್ಬರ ಪ್ರೇಮರಹಿತ ಒಕ್ಕೂಟವನ್ನು ಹಿಂದೂ ಸಮಾಜ ವ್ಯವಸ್ಥೆಯ ನಿಯಮವೆಂದು ಒಪ್ಪಿ ನಡೆಯುವುದಿಲ್ಲ. ಅಲ್ಲಿಂದಲೇ ಕಿರಣ್ಮಯಿಯ ಜೀವನದ ದುರಂತ ಆರಂಭಗೊಳ್ಳುತ್ತದೆ."

ಆದರೆ, ಆ ಯುವಕರು ಅರ್ಥ ಮಾಡಿಕೊಳ್ಳುವ ಸಲುವಾಗಿಯೇನೂ ಬಂದಿರಲಿಲ್ಲ. ಈ ಪುಸ್ತಕ ಸಮಾಜದ ದೃಷ್ಟಿಯಿಂದ ವರ್ಜ್ಯವಾದುದೆಂದು ಅವರು ಒಪ್ಪಿಬಿಟ್ಟಿದ್ದರು. ಸಾಹಿತಿ ಶರತ್‌ಚಂದ್ರರನ್ನು ತಿರಸ್ಕಾರದ ದೃಷ್ಟಿಯಿಂದ ನೋಡುವುದಷ್ಟೇ ಅವರಿಗೆ ಸಾಧ್ಯವಿತ್ತು. ಅವರೆಲ್ಲ ಹೊರಟುಹೋದ ಬಳಿಕ, ಬೂದಿಯ ರಾಶಿಯನ್ನೇ ನೋಡುತ್ತ ಕುಳಿತಿದ್ದರು. ಮನಸ್ಸಿನಲ್ಲಿಯೇ ಅವರು ಹೀಗೆಂದು ಹೇಳಿಕೊಂಡರು: "ಬಡಪಾಯಿ ಯುವಕರು! ತಾವೇನು ಮಾಡಿದೆವೆಂಬುದು ಅವರಿಗೆ ಗೊತ್ತಿಲ್ಲ. 'ಚರಿತ್ರಹೀನ'ದ ಈ ಬೂದಿ ಅದನ್ನು ಈ ಮೊದಲು ಅದು ತಲುಪಲು ಸಾಧ್ಯವಾಗದೆ ಇದ್ದಂಥ ಎಡೆಗಳಿಗೂ ತಲುಪಿಸಿಬಿಡುತ್ತದೆ."

ಈ ಘಟನೆಯ ಸತ್ಯತೆಯ ಬಗ್ಗೆ ಸಂದೇಹವನ್ನು ವ್ಯಕ್ತಪಡಿಸಲಾಗಿದೆ. ಸತ್ಯವಲ್ಲದೆ ಇದ್ದರೂ ಸರಿ, ಆದರೆ, ಯಾವ ವ್ಯಕ್ತಿಯ ವಿಷಯದಲ್ಲಿ ಈ ಕಥೆಯನ್ನು ಕಲ್ಪಿಸಲಾಗಿದೆಯೋ ಆ ವ್ಯಕ್ತಿಯ ಶಕ್ತಿಯ ಬಗ್ಗೆ ಸಂದೇಹವಿರುವುದಂತೂ ಸಾಧ್ಯವಿಲ್ಲ.

ಈ ಕಥೆಯನ್ನು ಸೃಷ್ಟಿಸಲಾಗಿರುವ ಆ ವಾತಾವರಣದ ವಿಷಯದಲ್ಲಿಯೂ ಸಂದೇಹ ತಳೆಯುವುದು ಸಾಧ್ಯವಿಲ್ಲ. ಒಂದು ಬಾಯಿಂದ ಮತ್ತೊಂದು ಬಾಯಿಗೆ ಸಾಗುತ್ತ ಹೋದಂತೆ ಪ್ರತಿಯೊಂದು ಕಿಂವದಂತಿಯೂ ಕಲ್ಪನೆಯ ಅದೆಷ್ಟು ಬಣ್ಣಗಳನ್ನು ಮೈಗೂಡಿಸಿಕೊಳ್ಳುತ್ತ ಹೋಗುತ್ತದೆಯೋ, ಬಲ್ಲವರಾರು? ಆದರೆ, ಮನೆಮನೆಗಳಲ್ಲಿ ಗೋಷ್ಠಿ-ಸಭೆಗಳಲ್ಲಿ 'ಚರಿತ್ರಹೀನ'ದ ಬಗ್ಗೆ ಉಂಟಾಗಿದ್ದಂಥ ವಾದವಿವಾದವನ್ನು, ಮೂಡಿದ್ದ ಕೋಲಾಹಲವನ್ನು ಹೋಲುವಂಥ ಬೇರೊಂದು ಪ್ರಸಂಗ ಇರಲಿಲ್ಲ. ಒಬ್ಬರು ವ್ಯಂಗ್ಯವಾಗಿ ಹೀಗೆ ಬರೆದದ್ದೂ ಉಂಟು: "ಸಾವಿತ್ರಿಯಂಥ ಹೆಣ್ಣು ಸಿಕ್ಕಿದ್ದರೆ ನಾವೂ ಮೆಸ್ಸಿನಲ್ಲಿಯೇ ಇರುತ್ತಿದ್ದವು." ಶರತ್‌ಚಂದ್ರರು ಅವರಿಗೆ ಹೀಗೆಂದು ಉತ್ತರಿಸಿದರು: "ಸತೀಶನಾಗಬೇಕಾದ್ದು ಅಗತ್ಯ. ಹಾಗಾಗದೆ, ಸಾವಿತ್ರಿಯ ಹೃದಯವನ್ನು ಗೆಲ್ಲಲು ಸಾಧ್ಯವಾಗುವುದಿಲ್ಲ.... ಅಪ್ಪಾ, ಸಾವಿತ್ರಿ ದಾಸಿಯರ ವರ್ಗಕ್ಕೆ ಸೇರಿದ ಹೆಣ್ಣು ಅಲ್ಲ ಎಂಬುದನ್ನು ಅರ್ಥಮಾಡಿಕೊಳ್ಳಲಾರದೆ ಹೋದಿರಲ್ಲ. ವಿಪತ್ತಿಗೆ ಸಿಲುಕಿದ್ದಾಗ ಲಕ್ಷ್ಮಿಯೂ ಒಬ್ಬ ಬ್ರಾಹ್ಮಣನ ಮನೆಯಲ್ಲಿ ದಾಸಿಯಾಗಿರಬೇಕಾಗಿ ಬಂದಿತ್ತು ಎಂದು ಪುರಾಣಗಳಲ್ಲಿ ಹೇಳಿದೆ. ಉತ್ತರೆಗೆ ನೃತ್ಯ-ಸಂಗೀತಗಳನ್ನು ಹೇಳಿಕೊಡುತ್ತಿದ್ದಾಗ ಅರ್ಜುನ ಶಿಖಂಡಿಯಾಗಿದ್ದನೆಂಬ ಕಥೆಯನ್ನು ಕೇಳಿ, ಅಂಥ ಶಿಖಂಡಿ ಸಿಕ್ಕಿದರೆ ಎಲ್ಲ ಹೆಂಗಸರೂ ನೃತ್ಯ-ಸಂಗೀತಗಳನ್ನು ಕಲಿಯಲು ಮೇಲೆಬಿದ್ದು ಬರುತ್ತಾರೆಂದೇನೂ ಹೇಳಲಾಗುವುದಿಲ್ಲ, ಅಲ್ಲವೆ? ಎಲ್ಲ ಸಮುದಾಯಗಳಲ್ಲಿಯೂ ಇರುವಂತೆ, ವೇಶ್ಯೆಯರಲ್ಲಿಯೂ ಮೇಲು-ಕೀಳು ಎಂಬ ವರ್ಗಗಳು ಇದ್ದೇ ಇರುತ್ತವೆ...."

ಅವರ ಪರಮಸ್ನೇಹಿತರಾಗಿದ್ದವರಲ್ಲಿಯೂ ಕೆಲವರು 'ಚರಿತ್ರಹೀನ' ಕಾದಂಬರಿಯ ವಿಷಯದಲ್ಲಿ ಅಸಂತುಷ್ಟರಾಗಿದ್ದರು. ಕುಮುದಿನೀಕಾಂತ ಕರ್ ಅವರು ವಿಕ್ಷುಬ್ಧರಾಗಿ ಕೇಳಿದರು: "ನೀವು ಇಂಥ ದೃಶ್ಯಗಳನ್ನು ಸಾಹಿತ್ಯದಲ್ಲಿ ಏಕೆ ತರುತ್ತೀರಿ?"

ಶರತ್‌ಚಂದ್ರರು ಹೀಗೆಂದು ಉತ್ತರಿಸಿದರು: "ನಾನು ಹೊಸದೇನನ್ನೂ ಬರೆದಿಲ್ಲವಲ್ಲ. ಲೋಕದಲ್ಲಿ ಇವೆಲ್ಲವೂ ಹಿಂದಿನಿಂದಲೂ ಇದ್ದೇ ಇವೆ."

"ಲೋಕದಲ್ಲಿ ಇನ್ನೂ ಏನೇನೋ ಇವೆ. ಆದರೆ, ಅದನ್ನೆಲ್ಲ ಚರ್ಚಿಸಲು ಸಾಧ್ಯವೆ? ಅದನ್ನೆಲ್ಲ ಹೀಗೆ ಚಿತ್ರಿಸಲಾದೀತ? ಜನರಿಗೆ ಏನಾದರೂ ಕಾಣಿಕೆ ಕೊಡಬೇಕು. ಅದನ್ನು ಬಿಟ್ಟು, ಇದೇನು ಸರ್ವನಾಶ ಮಾಡಿಬಿಟ್ಟದ್ದೀರಿ? ಮುಂಬರುವ ಜನಾಂಗಗಳು ಇದರಿಂದ ಏನನ್ನು ಕಲಿತಾರು?"

ಈ ಬಗೆಯ ಆರೋಪ-ಪ್ರತ್ಯಾರೋಪಗಳಿಗೆ ಕೊನೆ ಎಂಬುದೇ ಇರಲಿಲ್ಲ. ಆದರೆ, ಅವರಿಗೆಲ್ಲ ಶರತ್‌ಚಂದ್ರರು ಕೊಡುತ್ತಿದ್ದ ಉತ್ತರ ತುಂಬ ಸಂಕ್ಷಿಪ್ತವಾಗಿರುತ್ತಿತ್ತು: "ನಾನು ಬರೆದಿರುವುದು 'ಚರಿತ್ರಹೀನ'ನ ಕಥೆಯನ್ನೇ ಹೊರತು ಉತ್ತಮ ಚಾರಿತ್ರ್ಯದವನ ಕಥೆಯನ್ನಲ್ಲ."

ವೈಯಕ್ತಿಕ ಆರೋಪಗಳಲ್ಲಿ ತೊಡಗಿದಂಥ ಪ್ರಸಂಗಗಳ ಸಂಖ್ಯೆಯೂ ಕಡಿಮೆಯಾಗಿರಲಿಲ್ಲ. ಇದು ಎಲ್ಲಿಯವರೆಗೆ ಹೋಯಿತೆಂದರೆ, ಶರತ್ ಚಟರ್ಜಿ ಎಂಬ ಯಾರೋ ಒಬ್ಬ ವ್ಯಕ್ತಿ ಹಣವನ್ನು ಕದ್ದನೆಂಬ ಸುದ್ದಿ ಪತ್ರಿಕೆಯಿಂದ ಬಂದಾಗ,

ಈ ಹಣವನ್ನು ಕದ್ದಿರುವ ಶರತ್ ಮತ್ತು ಕಾದಂಬರಿಕಾರ ಶರತ್ ಇಬ್ಬರೂ ಒಬ್ಬನೇ ವ್ಯಕ್ತಿ ಎಂದು ಅವರ ವಿರೋಧಿಗಳು ಪ್ರಚಾರ ನಡೆಸಿದರು.

ಒಂದೆಡೆ ಅವರ ವಿರುದ್ಧವಾಗಿ ಇಷ್ಟು ತೀವ್ರವಾದ ಅಪಪ್ರಚಾರ ನಡೆಯಿತಾದರೂ, ಇನ್ನೊಂದು ಕಡೆ ಅನೇಕ ವ್ಯಕ್ತಿಗಳು ಅವರ ಹೃದಯದ ಹತ್ತಿರ ಬರುವ ಪ್ರಯತ್ನವನ್ನೂ ನಡೆಸಿದರು. ಬಹು ದಿನಗಳ ಬಳಿಕ ಧರ್ಮನಿಷ್ಠನಾದ ಒಬ್ಬ ವ್ಯಕ್ತಿ ಒಂದು ಗೋಷ್ಠಿಯಲ್ಲಿ[1] ಅವರೊಡನೆ ಹೀಗೆಂದು ಹೇಳಿದ: "ನೀವು ಬಾಯಲ್ಲಿ ಏನೇ ಹೇಳಿದರೂ, ನಿಮ್ಮ ಕೃತಿಗಳನ್ನು ಓದಿದಾಗ, ಸನಾತನ ಧರ್ಮದ ಘನತೆಗೆ ಕುಂದು ತರುವುದು ನಿಮ್ಮ ಉದ್ದೇಶವಲ್ಲ ಎಂದು ನನಗೆ ಅನ್ನಿಸುತ್ತದೆ. 'ಚರಿತ್ರಹೀನ' ಕಾದಂಬರಿಯಲ್ಲಿ ಬರುವ ಆ ಹುಡುಗಿ 'ಸ್ಟೀಮರ್'ನಲ್ಲಿ ಒಬ್ಬ ಹುಡುಗನೊಂದಿಗೆ ಒಂದೇ ಹಾಸಿಗೆಯಲ್ಲಿ ಮಲಗಿದ್ದರೂ, ತನ್ನ ಶೀಲ ಹಾಳಾಗಲೂ ಅವಕಾಶ ಕೊಡಲಿಲ್ಲ ಎಂಬುದನ್ನು ಕಂಡಾಗ, ಸನಾತನ ಧರ್ಮವನ್ನು ನೀವು ಗೌರವಿಸುವುದಿಲ್ಲವೆಂದು ನಾವು ಹೇಳಲು ಸಾಧ್ಯವಾದೀತೆ ?"

ಶರತ್‌ಚಂದ್ರರು ಹೇಳಿದರು: "ನನ್ನ ಉದ್ದೇಶವೇನೆಂಬುದನ್ನು ನೀವು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ನೀವು ಹೇಳಿದಿರಲ್ಲ, ಹಾಗೇನೂ ನಾನು ಮಾಡುವುದಿಲ್ಲ. ಕಿರಣ್ಮಯಿ ತನ್ನ ಶೀಲವನ್ನು ಹಾಳು ಮಾಡಿಕೊಂಡಿದ್ದರೂ, ನನಗೆ ಅದರಿಂದ ನಷ್ಟವೇನೂ ಆಗುತ್ತಿರಲಿಲ್ಲ. ಆದರೆ, ಆ ಪಾತ್ರ ಸಂಪೂರ್ಣವಾಗಿ ಅಸಹಜವಾಗಿ ಬಿಡುತ್ತಿತ್ತು. ಯಾವುದೋ ಒಂದು ಹಠಕ್ಕಾಗಿ ಅವಳು ಯಾವ ಹುಡುಗನೊಂದಿಗೆ ಓಡಿಬಂದಿದ್ದಳೋ ಆ ಹುಡುಗನನ್ನು ಇನ್ನೂ ವಯಸ್ಸಿಗೆ ಬಾರದ ಹುಡುಗನೆಂದೇ ಹೇಳಬೇಕಾಗುತ್ತದೆ. ಅವನು ಯಾವ ರೀತಿಯಲ್ಲಿಯೂ ತನಗೆ ಸರಿದೊರೆಯಾದವನೆಂದು ಅವಳು ಭಾವಿಸಿರಲಿಲ್ಲ. ಇಂಥ ಓದು ಬರಹಬಲ್ಲ ಸುಶಿಕ್ಷಿತ ನಾರಿ ಅಂಥ ಹುಡುಗನಿಂದ ತನ್ನ ಶೀಲ ಹಾಳಾಗಲು ಅವಕಾಶ ಮಾಡಿಕೊಟ್ಟಿದ್ದರೆ, ಆ ಪಾತ್ರವೇ ಹಾಳಾಗಿಬಿಡುತ್ತಿತ್ತು."

ಕಿರಣ್ಮಯಿಯ ಪಾತ್ರದ ಬಗೆಗಿನ ಈ ವ್ಯಾಖ್ಯೆ ಮಾನವ ಮನಸ್ಸಿನ ರಹಸ್ಯವನ್ನು ಬಲ್ಲ ಕಲಾವಿದನೊಬ್ಬನ ವ್ಯಾಖ್ಯೆಯಾಗಿದೆಯೇ ಹೊರತು ಯಾರೋ ಒಬ್ಬ ಸಮಾಜಸುಧಾರಕನ ಅಥವಾ ಧರ್ಮಭೀರು ವ್ಯಕ್ತಿಯ ವ್ಯಾಖ್ಯೆಯಾಗಿಲ್ಲ. ಪ್ರಮಥ ಚೌಧರಿಯವರು ಕಿರಣ್ಮಯಿಯ ಈ ಪಾತ್ರ ಚಿತ್ರಣವನ್ನು ಕಂಡು ಮುಗ್ಧರಾಗಿ ಬಿಟ್ಟಿದ್ದರು. ಅವರು ಹೀಗೆಂದು ಬರೆದಿದ್ದರು: "ಸಾಮಾನ್ಯ ಲೇಖಕ ಇಂಥ ಚಿತ್ರಣವನ್ನೆಂದೂ ಕೊಡಲಾರ."

ಈ ಪುಸ್ತಕದ ಬಗ್ಗೆ ಜನ ಅದೆಷ್ಟು ತಲೆಕೆಡಿಸಿಕೊಂಡಿದ್ದರು ! "ಆ 'ಚರಿತ್ರಹೀನ'ನ ಕೃತಿಗಳನ್ನು ಓದಬೇಡಿ" ಎಂದು ಪಾಲಕರು ತಮ್ಮ ಮಕ್ಕಳು ಮರಿಗಳಿಗೆ ಮತ್ತೆ ಮತ್ತೆ ತಾಕೀತು ಮಾಡುತ್ತಿದ್ದರು. ಆದರೆ, ಯಾವುದರ ಬಗ್ಗೆ ಇಷ್ಟೊಂದು ನಿಷೇಧವನ್ನು ವಿಧಿಸಲಾಗುತ್ತಿತ್ತೋ, ಆ ಕೃತಿಯನ್ನೇ ಓದಬೇಕೆಂದು ಎಲ್ಲರೂ ಹಾತೊರೆಯುತ್ತಿದ್ದರು. ಒಮ್ಮೆ ತಮ್ಮ ತರಗತಿಯ ಒಬ್ಬ ವಿದ್ಯಾರ್ಥಿಯ ಕೈಯಲ್ಲಿ 'ಚರಿತ್ರಹೀನ' ಕಾದಂಬರಿ ಇದ್ದುದನ್ನು ಕಂಡು ಪ್ರಾಧ್ಯಾಪಕರು ತುಂಬ ಕೋಪಗೊಂಡರು.

1 ನವೆಂಬರ್ 1930, ಚಂದನನಗರ

ಅವರೆಂದರು: "ಓಹೋ, ಇದು 'ಚರಿತ್ರಹೀನ' ಕಾದಂಬರಿಯಲ್ಲವೆ! ಇದನ್ನು ನೀನು ಓದಕೂಡದು."

ವಿದ್ಯಾರ್ಥಿ ಉತ್ತರಿಸಿದ: "ಸರ್, ಈ ಕೃತಿಯ ಲೇಖಕರು ತುಂಬ ಪ್ರಸಿದ್ಧರಾಗಿದ್ದಾರೆ."

ಪ್ರಾಧ್ಯಾಪಕರೆಂದರು: "ಇರಬಹುದು. ಆದರೆ, ಈ ಪುಸ್ತಕ ತುಂಬ ಕೆಟ್ಟದ್ದು."

ವಿದ್ಯಾರ್ಥಿ ಮತ್ತೆ ಕೇಳಿದ: "ಸರ್, ಈ ಪುಸ್ತಕ ಕೆಟ್ಟದ್ದೆಂದು ನೀವು ಹೇಗೆ ಹೇಳಬಲ್ಲಿರಿ? ನೀವು ಇದನ್ನು ಓದಿದ್ದೀರೇನು?

ಪ್ರಾಧ್ಯಾಪಕರು ಹೇಳಿದರು: "ಹೌದು, ನಾನಿದನ್ನು ಓದಿದ್ದೇನೆ, ಆದ್ದರಿಂದಲೇ ಹೇಳುತ್ತ ಇದ್ದೇನೆ. ನನ್ನ ಮಗ ಇದನ್ನು ದಿಂಬಿನಡಿ ಬಚ್ಚಿಟ್ಟುಕೊಂಡು ಓದುತ್ತ ಇದ್ದ. ನಿನ್ನೆ ನಾನು ಇದನ್ನು ನೋಡಿದ ಮೇಲೆ, ಇಡಿಯಾಗಿ ಅದನ್ನು ಓದಿಯೇ ಮುಗಿಸಿದೆ.ಅದರಲ್ಲಿ ಏನಿದೆ ಎಂಬುದನ್ನು ತಿಳಿದುಕೊಳ್ಳುವ ಇಚ್ಛೆ ನನಗಿತ್ತು.

ವಿದ್ಯಾರ್ಥಿ ಹೇಳಿದ: "ಸರ್, ಹಾಗಾದರೆ, ನಾನೂ ಇದನ್ನು ಓದಿ ನೋಡುತ್ತೇನೆ. ಕೆಟ್ಟದ್ದಾಗಿದ್ದರೆ ಇನ್ನೆಂದೂ ಇದನ್ನು ಮತ್ತೆ ಓದುವುದಿಲ್ಲ."

ಆದರೆ, 'ಚರಿತ್ರಹೀನ' ಕಾದಂಬರಿಯನ್ನು ಓದಿ, ಶರತ್‌ಚಂದ್ರರನ್ನು ತನ್ನ ಗುರುವೆಂದೂ, ರಕ್ಷಕನೆಂದೂ ಭಾವಿಸಿಕೊಂಡಿದ್ದಂಥ ಒಬ್ಬ ಮಹಿಳೆಯನ್ನು ಅವರು ಒಮ್ಮೆ ಆಕಸ್ಮಿಕವಾಗಿ ಭೇಟಿಯಾದರು. ಅವರೆಲ್ಲ ಕಾಶಿಗೆ ಬಂದಿದ್ದರು. ಅಲ್ಲಿಯ ನಿವಾಸಿಗಳಾಗಿದ್ದ ಬಂಗಾಳಿಗಳು ಇವರ ಗೌರವಾರ್ಥವಾಗಿ ಸಮಾರಂಭವೊಂದನ್ನು ಏರ್ಪಡಿಸಿದ್ದರು. ಹೂವು-ಹಣ್ಣುಗಳಿಗೆ, ಶ್ರೀಗಂಧವೇ ಮೊದಲಾದ ಪರಿಮಳ ದ್ರವ್ಯಗಳಿಗೆ, ಊದುಬತ್ತಿಯಂಥ ಸುಗಂಧಕಾರಕಗಳಿಗೆ ಈ ಬಗೆಯ ಯಾವುದೇ ವಸ್ತುಗಳಿಗೆ ಯಾವುದೇ ಕೊರತೆಯೂ ಇರಲಿಲ್ಲ. ನಿಜವಾಗಿಯೂ ಅದು ಪ್ರೀತಿಪೂರ್ವಕವಾದ ಸನ್ಮಾನ ಸಮಾರಂಭವೇ ಆಗಿತ್ತು. ಹಿಂದಿರುಗುವ ಹೊತ್ತಿನಲ್ಲಿ ಅನೇಕರು ಅವರನ್ನು ಮುತ್ತಿಕೊಂಡರು. ಅವರಲ್ಲಿ ಇಬ್ಬರು ಮಹಿಳೆಯರೂ ಸೇರಿದ್ದರು. ಅವರಿಬ್ಬರೂ ವಿಧವೆಯರಾಗಿದ್ದರು. ಒಬ್ಬಾಕೆಗೆ ವಯಸ್ಸಾಗಿತ್ತು; ಇನ್ನೊಬ್ಬಾಕೆ ತರುಣಿಯಾಗಿದ್ದಳು. ಅವಕಾಶ ದೊರೆತೊಡನೆಯೇ ಆ ತರುಣಿ ಅವರ ಬಳಿಗೆ ಬಂದಳು. ಅವರಿಗೆ ನಮಸ್ಕರಿಸಿ, ಬಹುದಿನಗಳ ಪರಿಚಯವಿದ್ದವಳೋ ಎಂಬಂತೆ ಅವರನ್ನು ನೋಡತೊಡಗಿದಳು. ಇಂಪಾದ ದನಿಯಲ್ಲಿ ಆಕೆ ಹೀಗೆಂದಳು: "ನೀವು ನನ್ನನ್ನು ಕಾಪಾಡಿದ್ದೀರಿ. ನೀವು ನನ್ನ ಗುರುಗಳು. ನಾನು ನಿಮಗೆ ತುಂಬ ಕೃತಜ್ಞಳಾಗಿದ್ದೇನೆ."

ಬೆಚ್ಚಿನಿಂತ ಶರತ್‌ಚಂದ್ರರೆಂದರು: "ನಾನು ನಿನ್ನನ್ನು ಕಾಪಾಡಿದೆನೆ? ಯಾವಾಗ, ಎಲ್ಲಿ? ನಾನಂತೂ ಇದಕ್ಕೆ ಮೊದಲು ನಿನ್ನನ್ನು ನೋಡಿಯೂ ಇಲ್ಲವಲ್ಲ!"

ತರುಣಿಯ ಮೈಬಣ್ಣ ತಾವರೆಗೆಂಪಾಗಿದ್ದಂತೆ, ಮುಖವೂ ಕಾಂತಿಯುತವಾಗಿತ್ತು. ಆಕೆ ಶರತ್‌ಚಂದ್ರರಿಗೆ ತನ್ನ ಕಥೆಯನ್ನು ಹೇಳಿದಳು: "ನಮ್ಮ ತಂದೆ ಬಂಗಾಳದ ಹೊರಗೆ ಯಾವುದೋ ಒಂದು ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ಮೊದಲಿನಿಂದಲೂ ನಾನು ತಂದೆಯ ಜೊತೆಯಲ್ಲಿಯೇ ಇದ್ದೇನೆ. ನನಗೆ ಎರಡು ವರ್ಷ ವಯಸ್ಸಾಗಿದ್ದಾಗ ನಮ್ಮ ತಾಯಿ ತೀರಿಕೊಂಡಿದ್ದರು. ಅಂದಿನಿಂದಲೂ ನಮ್ಮ

ತಂದೆಯೇ ನನ್ನ ಸಾಕಿ ಬೆಳೆಸಿದ್ದಾರೆ. ಹದಿನೇಳು ವರ್ಷವಾಗಿದ್ದಾಗ ನನಗೆ ಮದುವೆಯಾಯಿತು. ಆದರೆ, ಇದೇ ಕಾಶಿಯಲ್ಲಿ ಕೇವಲ ಮೂರು ದಿವಸಗಳ ಜ್ವರದಿಂದ ನರಳಿ ನನ್ನ ಗಂಡ ಕೊನೆಯುಸಿರೆಳೆದರು. ಮತ್ತೆ ನಾನು ತಂದೆಯ ಬಳಿಗೆ ಹೋದೆ. ದುಃಖವನ್ನು ಮರೆಸುವ ಸಲುವಾಗಿ, ಅವರು ಮತ್ತೆ ನನ್ನನ್ನು ಓದಿಸತೊಡಗಿದರು.

"ಅವರಿಗೆ ಒಬ್ಬ ಶಿಷ್ಯನಿದ್ದ. ಅವನು ನಮ್ಮ ಮನೆಯಲ್ಲಿಯೇ ವಾಸವಾಗಿದ್ದ. ನಮ್ಮ ತಂದೆಗೆ ಅವನನ್ನು ಕಂಡರೆ ತುಂಬ ವಿಶ್ವಾಸವಿತ್ತು. ತರಗತಿಯಲ್ಲಿ ಎಂದು ಯಾರ ಉಪನ್ಯಾಸವಿದೆ ಎಂಬುದರ ಬಗೆಗಿನ ಮಾಹಿತಿಯೆಲ್ಲ ಅವನ ಬಳಿಯೆ ಇರುತ್ತಿತ್ತು. ಅಗತ್ಯವಾಗಿದ್ದ ಎಲ್ಲ ಪುಸ್ತಕಗಳೂ ಅವನ ಹತ್ತಿರವೇ ಇರುತ್ತಿದ್ದುವು. ಟಿಪ್ಪಣಿ ಪುಸ್ತಕಗಳನ್ನೂ ಅವನು ಸರಿಯಾಗಿ ಇಟ್ಟುಕೊಂಡಿರುತ್ತಿದ್ದ. ನಾನು ಅವನ ಹತ್ತಿರ ಗಣಿತ ಮತ್ತು ಸಾಹಿತ್ಯ ಹೇಳಿಸಿಕೊಳ್ಳುತ್ತಿದ್ದೆ.

"ಹೀಗೆಯೇ ಒಂದೂವರೆ ವರ್ಷ ಕಳೆಯಿತು. ಈ ಒಡನಾಟಗಳಿಂದಾಗಿ ನಮ್ಮಿಬ್ಬರಲ್ಲೂ ಸಾಕಷ್ಟು ಬದಲಾವಣೆಗಳಾಗಿದ್ದುವು. ಆ ಹುಡುಗನಿಗೆ ಈ ವಿಚಾರ ಅರ್ಥವಾಗಿತ್ತು. 'ಇನ್ನು ಮುಂದೆ ಪಾಠ ಹೇಳಿಕೊಡಲು ನನಗೆ ಸಾಧ್ಯವಿಲ್ಲ' ಎಂದು ಒಂದು ದಿವಸ ನಮ್ಮ ತಂದೆಗೆ ಹೇಳಿದ.

"ನಮ್ಮ ತಂದೆಯವರಿಗೆ ಎಲ್ಲವೂ ಅರ್ಥವಾಯಿತು. ನನ್ನ ಮೇಲೆ ಅವರಿಗೆ ತುಂಬ ಕೋಪ ಬಂದಿತು. ಈ ಕಾರಣದಿಂದಾಗಿಯೇ ಅವರು ನನ್ನನ್ನು ಕಲ್ಕತ್ತೆಯ ವರಾಹನಗರಕ್ಕೆ ಕಳಿಸಿದರು. ಆದರೂ ನನ್ನ ಮನಸ್ಸು ಅಲ್ಲಿಯೇ ಸಿಕ್ಕಿಕೊಂಡಿತ್ತು. ಕೆಲವೇ ಕೆಲವು ದಿನಗಳು ಕಳೆದಿದ್ದಿರಬಹುದು. ಅಷ್ಟರಲ್ಲಿಯೇ ಅದು ಹೇಗೋ ನಮ್ಮ ನಡುವೆ ಪತ್ರ ವ್ಯವಹಾರ ಆರಂಭವಾಗಿಬಿಟ್ಟಿತ್ತು. ಮುಂದೆ ಒಂದು ದಿನ ಆ ಹುಡುಗನೂ ಕಲ್ಕತ್ತೆಗೆ ಬಂದುಬಿಟ್ಟ. ಈಗ ನಾವು ನಿಯಮಿತ ರೂಪದಲ್ಲಿ ಭೇಟಿಯಾಗತೊಡಗಿದೆವು. ಏನಾದರೂ ಸರಿ, ನಾವಿಬ್ಬರೂ ಎಲ್ಲಿಗಾದರೂ ಓಡಿಹೋಗಬೇಕು ಹಾಗೂ ಶಾಶ್ವತವಾಗಿ ಒಂದಾಗಿಬಿಡಬೇಕೆಂದು ನಾವು ತೀರ್ಮಾನಿಸಿಕೊಂಡ ಆ ದಿನವೂ ಬಂದುಬಿಟ್ಟಿತು.

"ಆ ದಿನವನ್ನು ಗೊತ್ತುಪಡಿಸಿಕೊಂಡೆವು. ಅಂದು ರಾತ್ರಿ ನಾನು ಎದ್ದಿರಬೇಕೆಂದೂ, ಎರಡು ಘಂಟೆಯ ಹೊತ್ತಿಗೆ ಅವನು ವಾಹನವನ್ನು ತೆಗೆದುಕೊಂಡು ಬರುವುದೆಂದೂ, ಕೆಳಗೆ ನಾನು ಮಲಗುವ ಕೋಣೆಯ ಕಿಟಕಿಯನ್ನು ಅವನು ತಟ್ಟುವುದೆಂದೂ, ನಾನು ಶಾಶ್ವತವಾಗಿ ಮನೆಯಿಂದ ಹೊರಬೀಳುವುದೆಂದೂ ನಾವು ತೀರ್ಮಾನಿಸಿಕೊಂಡಿದ್ದೆವು...."

ಒಂದು ಕ್ಷಣದ ಮಟ್ಟಿಗೆ ತಡೆದು, ಆ ಹುಡುಗಿ ಮುಂದುವರಿದು ಹೇಳಿದಳು: "ಅಂದು ನಡೆದ ಸಂಗತಿಯನ್ನು ನಾನು ಸುಲಭವಾಗಿ ಮರೆಯಲಾರೆ. ಆ ಇಡೀ ದಿನ ಒಂದು ವಿಚಿತ್ರ ಬೇಗುದಿಯಲ್ಲಿ, ಚಿಂತೆಯಲ್ಲಿ ಹಾಗೂ ಉದ್ವೇಗದಲ್ಲಿ ಕಳೆದುಹೋಯಿತು. ರಾತ್ರಿಯಿಡೀ ಎಚ್ಚರವಾಗಿರಬೇಕಾಗಿತ್ತು. ಸಂಜೆ ನಾನು ನನ್ನ ಸೋದರ ಮಾವನ ಮಗನಿಗೆ ಹೇಳಿದೆ: ಗ್ರಂಥಾಲಯದಿಂದ ನನಗಾಗಿ ಯಾವುದಾದರೂ ಒಂದು ಒಳ್ಳೆಯ ಕಾದಂಬರಿಯನ್ನು ತಂದುಕೊಡು."

"ಅದನ್ನು ಓದುತ್ತ ಎಚ್ಚರವಾಗಿರಬಹುದೆಂದು ಭಾವಿಸಿದ್ದೆ. ಹೀಗಾಗಿ, ಸಾಕಷ್ಟು ದೊಡ್ಡ ಕಾದಂಬರಿಯನ್ನೇ ತರುವಂತೆ ಹೇಳಿದ್ದೆ. ಅವನು ಒಂದು ಕಾದಂಬರಿಯನ್ನು ತೆಗೆದುಕೊಂಡು ಬಂದ. ಅದು ಸಾಕಷ್ಟು ಬೃಹದಾಕಾರದ ಕಾದಂಬರಿಯೇ ಆಗಿತ್ತು. 'ಚರಿತ್ರಹೀನ' ಎಂದು ಅದಕ್ಕೆ ಹೆಸರಿಡಲಾಗಿತ್ತು. ಓದುತ್ತಿದ್ದಂತೆಯೇ ನನ್ನ ಎದೆ ಹೊಡೆದುಕೊಳ್ಳತೊಡಗಿತು. ಇದೆಂಥ ಪ್ರಕೃತಿಯ ಪರಿಹಾಸ್ಯ? ನಾನು 'ಚರಿತ್ರ ಹೀನ'ಳಾಗುವುದಕ್ಕಾಗಿಯೇ ಮನೆಬಿಟ್ಟು ಹೊರಡುತ್ತಿಲ್ಲವಷ್ಟೆ?

"ಊಟ ತಿಂಡಿಯ ಕಾರ್ಯಗಳೆಲ್ಲ ಮುಗಿದ ಮೇಲೆ, ಎಲ್ಲರೂ ಮಲಗಲು ತೆರಳಿದರು. ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು, ಕೋಣೆಯ ಅಗುಳಿಯನ್ನು ಹಾಕಿದೆ. ಓದತೊಡಗಿದೆ. ಪುಸ್ತಕವನ್ನು ಓದಿ ಮುಗಿಸುವ ಹೊತ್ತಿಗೆ ರಾತ್ರಿಯ ಎರಡು ಘಂಟೆಯಾಗಿತ್ತು. ಅಷ್ಟು ಹೊತ್ತಿಗೆ ನನ್ನ ಕರ್ತವ್ಯವೇನೆಂಬುದನ್ನು ನಾನು ನಿಶ್ಚಯಿಸಿಕೊಂಡಿದ್ದೆ. 'ಚರಿತ್ರಹೀನ' ಕಾದಂಬರಿಯ ಕಿರಣ್ಮಯಿ ನನ್ನನ್ನು ಉದ್ಧರಿಸಿದಳು. ಹೊತ್ತಿಗೆ ಸರಿಯಾಗಿ ಕಿಟಕಿಯ ಮೇಲೆ ಬೆರಳಿನ ಸದ್ದು ಮೂಡಿ ಬಂದಿತು. ಅವನು ಬಂದಿದ್ದಾನೆ ಎಂಬುದು ಗೊತ್ತಾಯಿತು. ಕಿಟಕಿಯ ಬಳಿ ಬಂದು ನಿಂತು, 'ದಯವಿಟ್ಟು ನನ್ನನ್ನು ಕ್ಷಮಿಸು. ನಾನು ನಿನ್ನೊಡನೆ ಬರಲಾರೆ' ಎಂದು ಬೇಡಿಕೊಂಡೆ.

"ಆಗ ಅವನ ಮುಖದಲ್ಲಿ ಮೂಡಿ ನಿಂತ ನಿರಾಶೆಯ ಚಿತ್ರವನ್ನು ನಾನೆಂದೂ ಮರೆಯಲಾರೆ. ಅವನಿಗೆ ಕಾಲ ಕೆಳಗಿನ ನೆಲವನ್ನು ಕಸಿದುಕೊಂಡಂಥ ಅನುಭವವಾಗಿರಬೇಕು. ಹೇಗೋ ಕಷ್ಟಪಟ್ಟು

ಅವನು ಹೇಳಿದ: ಎಲ್ಲ ಏರ್ಪಾಡೂ ಆಗಿದೆ. ರೈಲಿನ ಟಿಕೆಟ್ಟನ್ನೂ ಕೊಂಡು ಆಗಿದೆ."

ನಾನು ಕೈ ಮುಗಿದು ಕೇಳಿಕೊಂಡೆ: "ನನ್ನಿಂದ ತಪ್ಪಾಯಿತು. ದಯವಿಟ್ಟು ನನ್ನನ್ನು ಕ್ಷಮಿಸಿಬಿಡು. ನಾನು ನಿನ್ನೊಡನೆ ಬರಲಾರೆ."

"ವಿವಶನಾಗಿ, ವಿಕಲಚಿತ್ತನಾಗಿ ಅವನು ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿದ್ದ. ಆಮೇಲೆ ನಿಟ್ಟುಸಿರುಬಿಡುತ್ತ ಅಲ್ಲಿಂದ ಹೊರನಡೆದ. ಆಮೇಲೆ ಅವನ ಗತಿ ಏನಾಯಿತು ಎಂಬುದು ನನಗೆ ಗೊತ್ತಿಲ್ಲ. ನಾನೂ ನನ್ನ ಅಜ್ಜಿಯೊಂದಿಗೆ ಕಾಶಿಗೆ ಬಂದುಬಿಟ್ಟೆ. ಇಲ್ಲಿಗೆ ಬಂದು ಈಗಾಗಲೇ ಒಂದು ವರ್ಷ ಆಗುತ್ತ ಬಂದಿದೆ. ನಿಮ್ಮ ಕಿರಣ್ಮಯಿಯೇ ನನ್ನನ್ನು ಕಾಪಾಡಿದಳು ಎಂದು ಇವತ್ತು ನಾನು ಭಾವಿಸುತ್ತಿದ್ದೇನೆ. ನಿಮ್ಮ 'ಚರಿತ್ರ ಹೀನ' ಕಾದಂಬರಿಯನ್ನು ಅಂದು ಓದಿದಾಗಿನಿಂದಲೂ, ನಿಮ್ಮನ್ನು ನೋಡಬೇಕೆಂದು ತುಂಬ ಆಸೆಪಡುತ್ತಿದ್ದೆ. ಆದರೆ, ಕಾಶಿಯ ವಿಶ್ವನಾಥ ಇಷ್ಟು ಬೇಗ ನನ್ನ ಆಸೆಯನ್ನು ನೆರವೇರಿಸುತ್ತಾನೆ ಅಂದುಕೊಂಡಿರಲಿಲ್ಲ. ಅಂದು ನಿಮ್ಮ 'ಚರಿತ್ರ ಹೀನ' ಕಾದಂಬರಿಯನ್ನು ಓದದೆ ಹೋಗಿದ್ದರೆ, ಇಂದು ಎಲ್ಲಿ ಹಾಳಾಗಿರುತ್ತಿದ್ದೇನೋ ಏನೋ! ನನ್ನ ಗತಿ ಏನಾಗಿರುತ್ತಿತ್ತೋ ಏನೋ? ಅದನ್ನು ನಾನು ಯೋಚಿಸಲೂ ಆರೆ. ತಾವು ನನ್ನನ್ನು ಕಾಪಾಡಿದಿರಿ. ನಿಮಗೆ ನಾನು ಚಿರಕೃತಜ್ಞಳು."

ಅಂದು ನಿಜಕ್ಕೂ ಶರತ್‌ಚಂದ್ರರ ಹೃದಯ ಗದ್ಗದವಾಗಿ ಬಿಟ್ಟಿತು. ಆ ಕಾದಂಬರಿಗಾಗಿ ಅದೆಷ್ಟು ಕೆಟ್ಟ-ಕೊಳಕು ಮಾತುಗಳನ್ನು ಅವರು ಸಹಿಸಬೇಕಾಗಿ

ಬಂದಿತ್ತು! ಅವರ ಮೇಲೆ ನಿಂದನೆಯ, ದ್ರೋಹದ ಹಾಗೂ ಆರೋಪದ ಬಿರುಗಾಳಿಯೇ ಹಾದುಹೋಗಿತ್ತು. ಆದರೆ, ಈ ಹುಡುಗಿಯ ಕಥೆಯನ್ನು ಕೇಳಿ ಅವರ ಮನಸ್ಸಿಗೆ ಅದೆಷ್ಟು ಸಮಾಧಾನವಾಯಿತೋ! ಕನಿಷ್ಠ ಪಕ್ಷ ಆ ಒಬ್ಬ ಹುಡುಗಿಯನ್ನಾದರೂ ಅವರು ಕಾಪಾಡಿದ್ದರು.

ಹೀಗೆ ಈ ಕಾದಂಬರಿಯ ಬಗ್ಗೆ ಅನೇಕ ಮೂಲಗಳಿಂದ ಅನೇಕ ಬಗೆಯ ಕಥೆಗಳು ಹುಟ್ಟಿಕೊಂಡು, ಪ್ರಚಾರವನ್ನು ಪಡೆದಿದ್ದುವು. ಅವುಗಳಲ್ಲಿ ಕೆಲವು ಸುಳ್ಳಾಗಿರುವ ಸಂಭವವೂ ಇದೆ. ಆದರೆ, ಬಿರುಗಾಳಿ ಬೀಸಿತ್ತು ಹಾಗೂ ಅದು ಸಾಕಷ್ಟು ಪ್ರಬಲವಾಗಿಯೇ ಇತ್ತು ಎಂಬುದಂತೂ ಸತ್ಯ.

'ಚರಿತ್ರಹೀನ' ಕಾದಂಬರಿ ಅವರ ಕಲ್ಪನೆಯಲ್ಲಿ ಮೂಡಿ ನಿಂತಾಗ, ಅವರು ದೇವಾನಂದಪುರದಲ್ಲಿ ವಾಸವಾಗಿದ್ದರು. ಆಗ ಸುರಬಾಲೆಯಂಥ ಹೆಣ್ಣಿನ ಸಂಪರ್ಕ ಅವರಿಗೆ ದೊರೆತಿತ್ತು. ಅದನ್ನು ಜನ ತಪ್ಪಾಗಿ ಭಾವಿಸಿದ್ದರಿಂದಲೇ ಅವರು ಅಲ್ಲಿಂದ ಜಗನ್ನಾಥಪುರಿಗೆ ಓಡಿ ಬಂದಿದ್ದರು. ದಾರಿಯಲ್ಲಿ ಭೇಟಿಯಾದ ಹೆಣ್ಣನ್ನು ಆಧಾರವಾಗಿಟ್ಟುಕೊಂಡೇ ಅವರು ಸಾವಿತ್ರಿಯ ಪಾತ್ರವನ್ನು ರೂಪಿಸಿದ್ದರು. ಹೀಗೆ ಆ ಪಾತ್ರ ನಿಜ ಜೀವನದ್ದೇ ಆಗಿತ್ತು. ಅವರ ಕಲ್ಪನೆ ಮಾಡಿದ್ದು ಇಷ್ಟನ್ನು ಮಾತ್ರ. ಆಕೆಯನ್ನು 'ಮೆಸ್'ನಲ್ಲಿ ಸೇವಕಿಯಾಗಿಸಿ, ಸತೀಶನಿಗೂ ಅವಳಿಗೂ ಸಂಬಂಧವನ್ನು ಗಂಟು ಹಾಕಿದ್ದು.

ಅವರ ಮಾವ ಸುರೇಂದ್ರನಾಥರು ಸುರಬಾಲೆಯ ಬಗ್ಗೆ ಅವರಿಂದಲೇ ಈ ಮಾತುಗಳನ್ನು ಹೇಳಿಸಿದ್ದಾರೆ: "ನನ್ನ ಪ್ರವೃತ್ತಿಗಳಿಗೆ ಒಂದು ದಾರಿಯನ್ನು ತೋರಿದ ಗುರು ಈ ಸುರಬಾಲೆ. ಈ ಪಾತ್ರದ ಹೊರ ರೂಪರೇಷೆಗಳನ್ನು ಗುರುತಿಸಿಕೊಳ್ಳಲು ನಾನೇನೂ ಕಷ್ಟಪಡಬೇಕಾಗಲಿಲ್ಲ. ಅವಳೊಬ್ಬ ಸದ್ಗೃಹಿಣಿ-ಸಾಧ್ವಿ. ತನ್ನ ಗಂಡನ ಬಗ್ಗೆ ಅವಳಿಗೆ ಅದೆಂಥ ಗೌರವ, ಅದೆಂಥ ಪ್ರೀತಿ ಹಾಗೂ ಅದೆಂಥ ಸೆಳೆತ ಇತ್ತೋ ಅದಕ್ಕೆ ಅನುಗುಣವಾಗಿಯೇ ಆ ಪಾತ್ರ ಕೊನೆಗೊಂಡಿದೆ. ಎಲ್ಲ ಕಡೆಗಳಿಂದಲೂ ಧನ್ಯೆ, ಧನ್ಯೆ ಎಂಬ ಮಾತು ಮೊಳಗಿತು.... ಗಂಡನ ಪಾದಗಳಲ್ಲಿ ತಲೆಯಿರಿಸಿ ಅವಳು ಹೋಗಿಬಿಟ್ಟಳು. ಆದರೆ, ಆ ಸುರಬಾಲೆಯಿಂದ ನಾನು ಕಲಿತ ಪಾಠವನ್ನು ಆಧಾರವಾಗಿಟ್ಟುಕೊಂಡು ಕಿರಣ್ಮಯಿಯ ಪಾತ್ರವನ್ನು ಕಲ್ಪಿಸಿದ್ದೇನೆ. ಅದರಲ್ಲಿ ಏನಾದರೂ ತಪ್ಪು ಉಳಿದುಕೊಂಡಿದ್ದರೆ, ಆ ತಪ್ಪು ನನ್ನದು. ಸುರಬಾಲೆಗೆ ಸಂಪೂರ್ಣವಾಗಿ ವೈದೃಶ್ಯದಂತಿರುವ ಪಾತ್ರವನ್ನು ಕಲ್ಪಿಸುವುದಕ್ಕಾಗಿ ನಾನು ಹಾಗೆ ಮಾಡಬೇಕಾಗಿ ಬಂತು. ಸ್ತ್ರೀ ಸಮುದಾಯದ ಬಗೆಗೆ ನನ್ನಲ್ಲಿ ನೀವು ಕಾಣುವ ಎಚ್ಚರಕ್ಕೆ ಆ ಸುರಬಾಲೆಯೇ ಕಾರಣ ಎಂಬುದು ಮೂಲಭೂತವಾದ ಸಂಗತಿ. ಅವಳಿಗೆ ನಾನು ಎಂದೆಂದೂ ಶ್ರದ್ಧೆಯಿಂದ ತಲೆಬಾಗುತ್ತೇನೆ. ಈ ಪಾತ್ರಚಿತ್ರಣವೇ ನಾನು ಆಕೆಗೆ ಸಲ್ಲಿಸಿದ ಗುರುದಕ್ಷಿಣೆ."[1]

ಈ ಸುರಬಾಲೆಯಿಂದಾಗಿಯೇ ಅವರು ದೇವಾನಂದಪುರವನ್ನು ಅಷ್ಟೊಂದು ಪ್ರೀತಿಸುತ್ತಿದ್ದುದು. 'ಚರಿತ್ರಹೀನ' ಕಾದಂಬರಿಯಲ್ಲಿ ಆಕೆಯನ್ನು ಅಮರಳಾಗಿ

---

1'ಶರತ್-ಪರಿಚಯ': ಸುರೇಂದ್ರನಾಥ, ಪು. 65

ಸುವುದರ ಮೂಲಕ ಅವರು ಮಾತೃಭೂಮಿಯ ಋಣವನ್ನು ತೀರಿಸಿದಂತೆ ತೋರುತ್ತದೆ.

ಅವರ ಅಜ್ಜನ ಮನೆಯ ಕುಟುಂಬದಲ್ಲಿ ಸುರಬಾಲಾ ಎಂಬುದು ಯಾರೋ ಒಬ್ಬರ ಹೆಸರಾಗಿಯೂ ಇತ್ತು. ಆಕೆಯನ್ನು ಸ್ಮರಿಸುವ ಸಲುವಾಗಿಯೇ ಅವರು ಆ ಪಾತ್ರಕ್ಕೆ ಅದೇ ಹೆಸರನ್ನಿಟ್ಟರು. ಇದೇ ಕುಟುಂಬದಲ್ಲಿ ಕಿರಣ ಶಶಿ ಎಂಬ ಇನ್ನೊಬ್ಬ ಹೆಣ್ಣು ಮಗಳೂ ಇದ್ದಳು. ಆಕೆಯೂ ಯಾವುದೋ ಒಂದು ಹಂತದವರೆಗೆ ಈ ಕಾದಂಬರಿಯ ಹಿಂದಿನ ಪ್ರೇರಣೆಯಾಗಿದ್ದಿರಬಹುದು. ಆಕೆಯ ನಡೆನುಡಿಗಳೂ ಕಿರಣ್ಮಯಿಯ ನಡೆನುಡಿಗಳಂತೆಯೇ ಇದ್ದುವೇ ಎಂಬುದಕ್ಕೆ ಇಂದು ಯಾವ ಸಾಕ್ಷ್ಯವೂ ಉಳಿದಿಲ್ಲ. ತಾವು ಕಂಡು ಕೇಳಿದ್ದ ಹೆಸರುಗಳನ್ನು ತಮ್ಮ ಕೃತಿಗಳಲ್ಲಿ ಬಳಸಿಬಿಡುವುದು ಶರತ್‌ಚಂದ್ರರ ಸ್ವಭಾವವೇ ಆಗಿತ್ತು.

ಆದರೆ, ಸತೀಶನಂತೂ ಅವರ ಬಾಲ್ಯದ ಗೆಳೆಯನಾಗಿದ್ದ ರಾಜುವಿನ ಪ್ರತಿಬಿಂಬವೇ ಆಗಿರುವಂತೆ ತೋರುತ್ತದೆ. "ಎಲ್ಲೆಲ್ಲಿ ಸಂಗೀತ-ವಾದ್ಯಗಳು ಮೊಳಗು ತ್ತಿದ್ದುವೋ, ಎಲ್ಲೆಲ್ಲಿ ನಾಟಕಗಳ ಮತ್ತು ವಾದ್ಯವೃಂದಗಳ ಪೂರ್ವಾಭ್ಯಾಸ ನಡೆಯುತ್ತಿತ್ತೋ, ಎಲ್ಲೆಲ್ಲಿ ಕ್ರಿಕೆಟ್-ಫುಟ್‌ಬಾಲ್‌ನಂಥ ಪದ್ಯಗಳು ನಡೆಯು ತ್ತಿದ್ದುವೋ ಅಲ್ಲೆಲ್ಲ ಸತೀಶ ಅದೆಷ್ಟು ದಿನಗಳನ್ನು ಕಳೆಯುತ್ತಾನೆ! ಎಲ್ಲಿ ಹೊಡೆದಾಟ-ಬಡಿದಾಟ ಮಾಡಬೇಕಾಗಿದೆ, ಎಲ್ಲಿ ನಾಟಕವನ್ನಾಡುವುದಕ್ಕಾಗಿ ಸ್ಟೇಜ್ ಕಟ್ಟಬೇಕಾಗಿದೆ, ಯಾರ ಮನೆಯಲ್ಲಿ ಶೋಕ ಕವಿದುಕೊಂಡಿದೆ, ಯಾರ ಹೆಣವನ್ನು ಸುಡುವುದಕ್ಕಾಗಿ ಮಸಣಕ್ಕೆ ಒಯ್ಯಬೇಕಾಗಿದೆ, ಯಾರ ಮೇಲೆ ಕಷ್ಟಸಂಕಟಗಳು ಎರಗಿವೆ, ಯಾರಿಗಾಗಿ ಹಣವನ್ನು ಒಂದುಗೂಡಿಸಬೇಕಾಗಿದೆ - ಇದನ್ನೆಲ್ಲ ಹುಡುಕುತ್ತಿರುವುದು ಹಾಗೂ ಈ ಬಗೆಯ ಕೆಲಸಗಳಲ್ಲಿ ಎಲ್ಲರಿಗೂ ಮುಂದಾಳಾಗಿರುವುದು ಸತೀಶನ ಕೆಲಸವೇ ಆಗಿಬಿಟ್ಟಿತ್ತು. ಸತೀಶ ಕೊಳಲನ್ನೂದಿದನೆಂದರೆ ನೆಲದ ಮೇಲೆ ಹಾಯಾಗಿ ಮಲಗಿರುತ್ತಿದ್ದ ಬೆಳದಿಂಗಳೂ ನಿದ್ದೆಯನ್ನು ಬಿಟ್ಟೇಳುತ್ತಿತ್ತು."

ಈ ಎಲ್ಲ ಆಧಾರಸಹಿತ ಹಾಗೂ ಆಧಾರ ರಹಿತ ವದಂತಿಗಳ ಅರ್ಥ ಇಷ್ಟು: ಅರಿವು-ಅನುಭವಗಳೇ ಸದಾ ಅವರ ಕೃತಿಗಳಿಗೆ ಆಧಾರವಾಗಿರುತ್ತಿದ್ದುವು. ಬಾಲ್ಯದಲ್ಲಿ ಲೇಖನಿ ಹಿಡಿಯುವುದನ್ನು ಅವರು ಅಭ್ಯಾಸ ಮಾಡಿಕೊಳ್ಳುತ್ತಿದ್ದಾಗಲೇ ಅವರ ಗುರುಗಳಾಗಿದ್ದ ಪಾಂಚ್‌ಕೌಡೀ ಬಂದೋಪಾಧ್ಯಾಯರು ಅವರೊಡನೆ ಹೀಗೆಂದಿದ್ದರು: "ನೀನು ಏನು ಬೇಕಾದರೂ ಬರಿ. ನನಗೆ ಸಂತೋಷವೇ. ಆದರೆ, ಈ ಮೂರು ಮಾತುಗಳನ್ನು ನಿನಗೆ ತಿಳಿಸಬಯಸುತ್ತೇನೆ. ಏನು ಬರೆದರೂ ಅದಕ್ಕೆ ನಿನ್ನ ಅನುಭವವೇ ಆಧಾರವಾಗಿರಬೇಕು, ಎರಡನೆಯದಾಗಿ, ಬರೆದದ್ದನ್ನು ಯಾರಿಗೂ ತೋರಿಸಿ-ಗೀರಿಸಿ ಮಾಡಬೇಡ; ಮೂರನೆಯದಾಗಿ, ನಿನ್ನ ಲೇಖನಿಯನ್ನು ವೈಯಕ್ತಿಕ ನಿಂದನೆಗೆ ಬಳಸಬೇಡ."

ಈ ಎಲ್ಲ ಸಂಗತಿಗಳೂ ಮೊದಲಿನಿಂದಲೇ ಅವರಲ್ಲಿ ಮನೆಮಾಡಿಕೊಂಡಿದ್ದುವು. ಗುರುಗಳ ಅಪ್ಪಣೆಯಾದ ಮೇಲೆ ಅವರ ಈ ಆಲೋಚನೆಗಳು ಮತ್ತಷ್ಟು ಆಳವಾಗಿ ಬೇರುಬಿಟ್ಟುವು. ಆದರೆ, ಅವರ ಈ ಅರಿವು-ಅನುಭವಗಳನ್ನೇ ಪ್ರಶ್ನಿಸಿ, ಅವರ ಮೇಲೆ

ಎರಗಲೂ ಜನರು ಹಿಂದೆಗೆಯಲಿಲ್ಲ. ಒಬ್ಬ ವಿಮರ್ಶಕ ಹೀಗೆ ಬರೆದಿದ್ದ: "ನಮ್ಮ ನಾಡಿನ ಒಬ್ಬ ಹೆಸರಾಂತ ಕಾದಂಬರಿಕಾರರ ಕೈಯಿಂದ ಸಮಾಜದ ಹೊರಗಿನ ಈ ಹೆಣ್ಣುಗಳ ಸುಂದರ ಚಿತ್ರಗಳು ತುಂಬ ಚೆನ್ನಾಗಿ ಮೂಡಿಬಂದಿವೆ. ಇವೆಲ್ಲ ಇವರ ವೈಯಕ್ತಿಕ ಅರಿವು-ಅನುಭವಗಳನ್ನು ಪರಿಚಯಿಸಿಕೊಡುವಂಥವೇ ಆಗಿವೆ ಎಂದು ಹೇಳಲಾಗಿದೆ."

ಈ ಆರೋಪದ ಹಲ್ಲಿನ ಕಚ್ಚು ಅದೆಷ್ಟೇ ತೀವ್ರವಾದುದಾದರೂ ಆಗಿರಲಿ, ಮಾನವೀಯ ಅಧ್ಯಯನದ ದಿಕ್ಕಿನಲ್ಲಿ ಅದೊಂದು ಒಳ್ಳೆಯ ದಾಖಲೆಯೇ ಆಗಿದೆ. 'ಕಾಶೀನಾಥ' ಕಾದಂಬರಿಯ ಪ್ರಕಟಣೆಯೊಂದಿಗೆ ಶರತ್‌ಚಂದ್ರರ ಇನ್ನೊಂದು ಉದಾತ್ತ ರೂಪದ ಕಥೆಯೂ ಸೇರಿಕೊಂಡಿದೆ. ಈ ಪುಸ್ತಕದ ಎಲ್ಲ ಹಕ್ಕುಗಳನ್ನೂ ಅವರು ತಮ್ಮ ಪ್ರಿಯ ಬಂಧುಗಳಾಗಿದ್ದ ಪ್ರಮಥನಾಥ ಭಟ್ಟಾಚಾರ್ಯರಿಗೆ ಬಿಟ್ಟುಕೊಟ್ಟಿದ್ದರು. ರೋಗ ಪೀಡಿತರಾದ ಬಳಿಕ, ಆರೋಗ್ಯ ಲಾಭಕ್ಕಾಗಿ ಪ್ರಮಥನಾಥರು ಛತ್ರಪುರಕ್ಕೆ ಹೊರಟುಹೋಗಿದ್ದರು. ಮೊದಲಲ್ಲಿ ಅವರ ಆರೋಗ್ಯ ಸ್ವಲ್ಪಮಟ್ಟಿಗೆ ಸುಧಾರಿಸಿತಾದರೂ, ಆ ಮೇಲೆ ಅವರು ತುಂಬ ಅಸ್ವಸ್ಥರೇ ಆದರು. ಅವರು ಭುವಾಲಿಯ 'ಸ್ಯಾನಿಟೋರಿಯಂ'ಗೆ ಹೋಗಬೇಕಾಗಿ ಬಂತು. ಅಲ್ಲಿಯೂ ಅವರ ಆರೋಗ್ಯ ಸ್ವಲ್ಪವೂ ಸುಧಾರಿಸಲಿಲ್ಲ. ದಿನೇ ದಿನೇ ಅದು ಕೆಡುತ್ತಲೇ ಹೋಯಿತು. ಆಗ ಅವರು ಹಣಕಾಸಿನ ದೃಷ್ಟಿಯಿಂದಲೂ ತುಂಬ ಕೆಟ್ಟ ಸ್ಥಿತಿಯಲ್ಲೇ ಇದ್ದರು. ಈ ಸುದ್ದಿ ತಿಳಿದೇ ಶರತ್‌ಚಂದ್ರರು 'ಕಾಶೀನಾಥ' ಕಾದಂಬರಿಯ ಹಕ್ಕುಗಳೆಲ್ಲವನ್ನೂ ಅವರಿಗೆ ಬಿಟ್ಟುಕೊಟ್ಟಿದ್ದರು. ಈ ಕೊಡುಗೆಯ ಸುದ್ದಿ ತಮಗೆ ತಿಳಿದಾಗ, ಪ್ರಮಥನಾಥರು ಹರಿದಾಸ್ ಅವರಿಗೆ ಹೀಗೆಂದು ಬರೆದರು: "ನಿನ್ನೆ ನಿನ್ನ ಪತ್ರ ಕೈಸೇರಿದಾಗ ನಾನೆಷ್ಟು ಹತಪ್ರಭನಾದೆ ಎಂಬುದನ್ನು ವಿವರಿಸಿ ಹೇಳಲು ಸಾಧ್ಯವಿಲ್ಲ. ಬಾಳಿನಲ್ಲಿ ಈ ಬಗೆಯ ಸಹಾನುಭೂತಿ ಹಾಗೂ ಸಹಾಯಗಳನ್ನು ಪಡೆದ ಅಭ್ಯಾಸ ನನಗಿಲ್ಲ. ಯಾರೇ ಆಗಲೀ ಏಕಾಗಿ ಹಾಗೂ ನನ್ನಲ್ಲಿ ಅದೇನು ಅರ್ಹತೆ ಇದೆ ಎಂದು ನನ್ನ ನೆರವಿಗೆ ಧಾವಿಸಿಯಾರು? ಅನರ್ಹತೆಯೂ ಒಂದು ವಿಶಿಷ್ಟ ಗುಣವೇ ಎಂದು ನನಗೀಗ ತೋರುತ್ತಿದೆ. ಶರತ್‌ನ ಎಲ್ಲಾ ಕೆಲಸಗಳೂ ವಿಚಿತ್ರವಾಗಿರುತ್ತವೆ. ಅವನ ಪರಿಚಯವಾದಂದಿನಿಂದಲೂ ಇಂಥದನ್ನೆಲ್ಲ ನೋಡುತ್ತಲೇ ಇದ್ದೇನೆ. ಅವನ ಕೆಲಸ ಅವನ ವ್ಯಕ್ತಿತ್ವಕ್ಕೆ ತಕ್ಕಂತೆಯೇ ಇದೆ. ಅದನ್ನು ಬೇರೆ ಯಾವುದಕ್ಕೂ ಹೋಲಿಸಿ ನೋಡುವುದು ಸಾಧ್ಯವಿಲ್ಲ. ಈ ಅನಿರೀಕ್ಷಿತವಾದ ಹಾಗೂ ಹಿಂದೆಂದೂ ನಾನು ಕಂಡಿರದಿರುವಂಥ ಸಹಾನುಭೂತಿಗೆ ಯಾವ ವಿಧದಲ್ಲಿಯೂ ನಾನು ಅರ್ಹನಲ್ಲ. ಓಹ್! ಶರತ್‌ನ ಈ ಕೆಲಸ! ಇಂದು ಲೋಕವೇ ಹೊಸ ರೂಪದಲ್ಲಿ ನನ್ನ ಮುಂದೆ ಬಂದು ನಿಂತಿದೆ. ಶರತ್‌ನ ಬಗ್ಗೆ ನಾನು ಏನು ತಾನೆ ಹೇಳಲಿ? ಅವನೊಬ್ಬ ದೇವತೆ. ಜೀವನವಿಡೀ ಶ್ರಮಿಸಿದ್ದರೂ ನಾನು ನನ್ನ ಕುಟುಂಬಕ್ಕೆ ಮಾಡಲು ಸಾಧ್ಯವಾಗದೆ ಹೋಗುತ್ತಿದ್ದಂಥ ಉಪಕಾರವನ್ನು ನೀವೆಲ್ಲ ಮಾಡಿಬಿಟ್ಟಿದ್ದೀರಿ. ನಿಮ್ಮೆಲ್ಲರಿಗೂ ನನ್ನ ಕೋಟಿ ಕೋಟಿ ನಮಸ್ಕಾರಗಳು. ಈಗ ನೀವೆಲ್ಲ ನನಗಿಂತ ದೊಡ್ಡವರಾಗಿಬಿಟ್ಟಿದ್ದೀರಿ. ನೀವು ದಾನಿಗಳು, ನಾನು ಭಿಕಾರಿ...."

ಪ್ರೀತಿಸುವ ಸಾಮರ್ಥ್ಯ ಶರತ್‌ಚಂದ್ರರಲ್ಲಿ ಅದ್ಭುತವೂ, ಅಸಾಧಾರಣವೂ ಆಗಿತ್ತು. ಗೆಳೆಯರಿಗಾಗಿ ಏನನ್ನಾದರೂ ಮಾಡಲು ಅವರು ಸದಾ ಹಾತೊರೆಯುತ್ತಿದ್ದರು. ಕೆಲವು ವರ್ಷಗಳ ಹಿಂದೆ[1] ತಮ್ಮ ಬಾಲ್ಯದ ಗೆಳೆಯರಾಗಿದ್ದ ವಿಭೂತಿ ಭೂಷಣರಿಗೆ ಅವರು ಚಿನ್ನದ ಪೆನ್ನನ್ನು ಕಳಿಸಿದ್ದರು. ನಿರುಪಮಾಗೆ 'ವಾಟರ್ ಮನ್' ಪೆನ್ನನ್ನು ಕಳಿಸಿದ್ದರು. ವಿಭೂತಿ ಭೂಷಣರು ಹೀಗೆಂದು ಬರೆದಿದ್ದರು: "ಚಿನ್ನದ ಲೇಖನಿಯಿಂದ ನಾನು ಹೇಗೆ ಬರೆಯಲಿ?"

ಶರತ್‌ಚಂದ್ರರು ಹೀಗೆಂದಿದ್ದರು: "ನೀನು ಬರೆಯಲು ಇದನ್ನೇ ಬಳಸಬೇಕು."

ವಿಭೂತಿ ಭೂಷಣರು ಮತ್ತೆ ಬರೆದಿದ್ದರು: "ಇದಾದರೋ ಒಡವೆಯಂತಿದೆ. ಬರೆಯಲು ಇದನ್ನು ಬಳಸಲಾರೆ. ನೀನು ಬರೆಯಲು ಬಳಸುವಂಥ ಇನ್ನೊಂದು ಲೇಖನಿಯನ್ನು ಕಳಿಸಿಕೊಡು."

ಕೂಡಲೇ ಅಂಥ ಇನ್ನೊಂದು ಲೇಖನಿ ಅವರನ್ನು ತಲುಪಿತು.

ವಿಭೂತಿಭೂಷಣರಿಗೆ ಮಾತ್ರವಲ್ಲ, ಸುರೇಂದ್ರ ಮಾವ, ಗಿರೀಂದ್ರ ಮಾವ, ಯೋಗೇಶ ಮಜೂಮದಾರ್, ಸೌರೀಂದ್ರನಾಥ ಮುಖರ್ಜಿ ಮೊದಲಾದ ಬಾಲ್ಯದ ಎಲ್ಲ ಗೆಳೆಯರಿಗೂ ಲೇಖನಿಗಳನ್ನು ಸಿದ್ಧವಾಗಿಟ್ಟಿದ್ದರು. ಕೊಡಲು ಇದಕ್ಕಿಂತಲೂ ಉತ್ತಮವಾದ ವಸ್ತು ತಮ್ಮ ಬಳಿ ಇಲ್ಲವೆಂದು ಅವರು ಭಾವಿಸಿದ್ದರು.

3

'ಚರಿತ್ರ ಹೀನ' ಪ್ರಕಟಣೆಯ ಅನಂತರ ಮೂರು ವರ್ಷಗಳಲ್ಲಿ ಅವರ ಇನ್ನೂ ಮೂರು ಶ್ರೇಷ್ಠ ಕೃತಿಗಳು - ಅಂದರೆ, 'ಸ್ವಾಮೀ'[2] ('ಏಕಾದಶ ವೈರಾಗಿಗಳು' ಎಂಬುದೂ ಸೇರಿದ ಲಘುಬರೆಹಗಳ ಸಂಕಲನ) 'ದತ್ತಾ'[3] ಮತ್ತು 'ಶ್ರೀಕಾಂತ'[4] (ಎರಡನೆಯ ಭಾಗ) - ಓದುಗರ ಕೈಸೇರಿದ್ದವು. ಅವರ ಕೃತಿಗಳು ಸಾಮಾನ್ಯ ಜನರನ್ನು ಮಾತ್ರವೇ ಈ ರೀತಿ ಮರುಳುಗೊಳಿಸಿದ್ದುವು ಎಂದಲ್ಲ, ಅಂದಿನ ಎಲ್ಲ ಹೆಸರಾಂತ ಚಿಂತಕರ ಸಂಪರ್ಕವೂ ಏರ್ಪಡತೊಡಗಿತ್ತು. ಇಷ್ಟಾಗಿಯೂ, ಯಾರಾದರೂ ದೊಡ್ಡ ವ್ಯಕ್ತಿಯ ಬಳಿಗೆ ಹೋಗುವಾಗ ಅವರಿಗೆ ತುಂಬ ಸಂಕೋಚವೇ ಆಗುತ್ತಿತ್ತು: "ನನ್ನ ಸ್ವಭಾವ ಎಂಥದೋ! ದೊಡ್ಡ ವ್ಯಕ್ತಿಗಳ ಮನೆಗೆ ಹೋಗಬೇಕಾದ ಪ್ರಸಂಗ ಬಂದೊಡನೆಯೇ ಇಬ್ಬಂದಿ ಹಾಗೂ ಸಂಕೋಚ ಉಂಟಾಗಿ, ಮನಸ್ಸು ಮುದುಡಿ ಹೋಗುತ್ತದೆ. ಹೀಗಾಗಿ, ಹೋಗಬೇಕು, ಹೋಗಬೇಕು ಎಂದುಕೊಂಡರೂ ಹೋಗಲೂ ಆಗುವುದೇ ಇಲ್ಲ"[5] ಎಂದು ಅವರೇ ಒಂದು ಪತ್ರದಲ್ಲಿ ಹೇಳಿಕೊಂಡಿದ್ದಾರೆ. ಆದರೂ, ಸಂಪರ್ಕ ಹೆಚ್ಚುತ್ತಲೇ ನಡೆದಿತ್ತು. ಒಂದು ಕಡೆ ರವೀಂದ್ರನಾಥ ಠಾಕೂರ್, ಪ್ರಮಥ ಚೌಧರಿ, ಅಮೃತಲಾಲ ಬಸು, ಕ್ಷೀರೋದ ಪ್ರಸಾದ ವಿದ್ಯಾವಿನೋದ ಮತ್ತು ಸತ್ಯೇಂದ್ರ ನಾಥ ದತ್ತರಂಥ ಸಾಹಿತ್ಯ ಕ್ಷೇತ್ರದ

---

[1] 1913
[2] 28, ಫೆಬ್ರವರಿ 1918,
[3] 2 ಸೆಪ್ಟೆಂಬರ್ 1918
[4] 28, ಸೆಪ್ಟೆಂಬರ್ 1918
[5] 25.10.1917

ಮಹಾಮನೀಷಿಗಳು ಇದ್ದರೆ, ಇನ್ನೊಂದು ಕಡೆ ಸೌರೀಂದ್ರ ಮೋಹನ ಮುಖರ್ಜಿ, ಹೇಮೇಂದ್ರಕುಮಾರ ರಾಯ್, ಮಣಿಲಾಲ್ ಗಾಂಗುಲಿ, ಪವಿತ್ರ ಗಂಗೂಲಿ, ಅಮಲ ಹೋಮ ಮತ್ತು ದಿಲೀಪಕುಮಾರ ರಾಯ್ ಅವರಂಥ ಮಿತ್ರರು ಇದ್ದರು. ಆಧುನಿಕ ಪಂಥಕ್ಕೆ ಸೇರಿದವರಾಗಿದ್ದ ಶೈಲಜಾನಂದ ಮುಖೋಪಾಧ್ಯಾಯ, ಕಾಜೀ ನಜರುಲ್ ಇಸ್ಲಾಮ್, ಅಚಿಂತ್ಯ ಕುಮಾರ ಸೇನಗುಪ್ತ, ಪ್ರೇಮೇಂದ್ರ ಮಿತ್ರ ಮತ್ತು ನೃಪೇಂದ್ರ ಕೃಷ್ಣ ಚಟ್ಟೋಪಾಧ್ಯಾಯ ಮೊದಲಾದವರು ಆಗಿಂದಾಗ್ಗೆ ಬಂದು ಅವರನ್ನು ಭೇಟಿಯಾಗುತ್ತಿದ್ದರು ಹಾಗೂ ಸಾಹಿತ್ಯ ಸಂಬಂಧವಾದ ಚರ್ಚೆಗಳಲ್ಲಿ ತೊಡಗುತ್ತಿದ್ದರು. ಸಾಹಿತ್ಯ ಕ್ಷೇತ್ರದ ಹೊರಗೂ, ಪರಿಚಯದ ವಲಯ ವಿಸ್ತಾರಗೊಳ್ಳುತ್ತ ನಡೆದಿತ್ತು. ಬರ್ಮಾದಲ್ಲಿನ ಅವರ ಪ್ರಿಯಬಂಧು ಕುಮುದಿನೀಕಾಂತ ಕರ್ ಅವರು ಯಾವುದೋ ಕಷ್ಟದಲ್ಲಿ ಸಿಕ್ಕಿಕೊಂಡಿದ್ದರು. ಆಗ ಅವರು ಶರತ್‌ಚಂದ್ರರಿಗೆ ಹೀಗೆ ಬರೆದಿದ್ದರು: "ಬಲರಾಮ ಅಯ್ಯರ್, ಮೋನಿ ಮಿತ್ತರ್, ಉಪೇನ್ ಮಜೂಮದಾರ್ ಅವರಂಥ ಅನೇಕರಿಗೆ ನಾನು ಪತ್ರವನ್ನು ಬರೆಯಬಲ್ಲೆ. ಇಂಥ ಇನ್ನೂ ಹಲವು ಅಧಿಕಾರಿಗಳಿದ್ದಾರೆ. ಆದರೆ ಏನು ಬರೆಯಲಿ, ಯಾರಿಗೆ ಬರೆಯಲಿ? ಸ್ವಲ್ಪ ಸಮಾಧಾನವಾಗಿ ಯೋಚಿಸಿ ತಿಳಿಸು."[1]

ಇಲ್ಲಿಯೂ ತಮ್ಮ ಮೊಹಲ್ಲಾದಲ್ಲಿ ಅವರು ಸಾಹಿತ್ಯ ಸಂಘವನ್ನು ಸ್ಥಾಪಿಸಿದ್ದರು. ಸಮಾರಂಭಗಳ ಅಧ್ಯಕ್ಷತೆ ವಹಿಸುವಂತೆ ಅವರು ಅಂದಿನ ಹೆಸರಾಂತ ಸಾಹಿತಿಗಳನ್ನು ಕೋರಿ, ಕರೆದುಕೊಂಡು ಬರುತ್ತಿದ್ದರು. ಕವಿಗುರು ರವೀಂದ್ರನಾಥ ಠಾಕೂರರಿಗೆ ಅವರು ಬರೆದ ಮೊದಲ ಪತ್ರ ಬಹುಶಃ ಈ ಆಹ್ವಾನಕ್ಕೆ ಸಂಬಂಧಿಸಿದ್ದೇ ಆಗಿತ್ತು: "ಅನೇಕ ದಿವಸಗಳವರೆಗೆ ಸತತವಾಗಿ ಆಲೋಚಿಸಿದರೂ, ನಮ್ಮ ಈ ಸಂಘ ತಮ್ಮ ಪಾದಧೂಳಿಯಿಂದ ಪವಿತ್ರವಾಗುವ ಸಂಭವ ಇದೆಯೋ ಇಲ್ಲವೇ ಎಂಬುದನ್ನು ತೀರ್ಮಾನಿಸಲು ನಮಗೆ ಸಾಧ್ಯವಾಗಿಲ್ಲ. ಈ ಬಾರಿ ತಾವು ಮನೆಗೆ ಬಂದಾಗ, ತಾವು ಅನುಮತಿ ಕೊಟ್ಟಲ್ಲಿ, ತಮ್ಮ ಬಳಿಗೆ ಬಂದು ನಮ್ಮ ಕೋರಿಕೆಯನ್ನು ಬಿನ್ನವಿಸುತ್ತೇವೆ."[2]

ಗೋಷ್ಠಿಗಳನ್ನು ಸೇರಿಸುವುದರಲ್ಲಿಯಂತೂ ಅವರು ಸಿದ್ಧಹಸ್ತರೇ ಆಗಿದ್ದರು. ಅವರ ಬಾಲ್ಯಕಾಲದ ಗೆಳೆಯರೂ ಈ ಗೋಷ್ಠಿಗಳಿಗೆ ಬರುತ್ತಿದ್ದರು. ಅವರ ಮಟ್ಟಿಗೆ ಅವರೆಲ್ಲ ಅದೇ ಪ್ರೀತಿಯ, ಹಾಸ್ಯ ಸ್ವಭಾವದ, ಸಹಜ, ರೈತಾಪಿ ಜನರಾಗಿದ್ದರು. ಅದೇ ನಗು, ಅದೇ ಚಂಚಲತೆ, ಅದೇ ಗಡಿಬಿಡಿ. ವಯಸ್ಸಿಗೂ ಇಲ್ಲಿ ಯಾವುದೇ ಅರ್ಥ ಇರಲಿಲ್ಲ. ಅಂದು ವಿಭೂತಿಭೂಷಣರು ತಮ್ಮ ಗೆಳೆಯರಾಗಿದ್ದ ಅತುಲ ಚಂದ್ರದತ್ತರೊಂದಿಗೆ ಅವರನ್ನು ಕಾಣಲು ಬಂದಿದ್ದರು. ಬಾಗಿಲನ್ನು ತೆರೆದೊಡನೆಯೇ ತುಂಬ ಕುರೂಪಿಯಾಗಿದ್ದ ಭೇಲೂ ಎಂಬಾತ ಇವರನ್ನು ಸ್ವಾಗತಿಸಿದ. ಶರತ್‌ಚಂದ್ರರು ತಮ್ಮ ಏಕಾಂತಕ್ಕೆ ಭಂಗಬರದಿರಲೆಂದೇ ಈ ಯಮದೂತನನ್ನು ಇಲ್ಲಿ ಇರಿಸಿಕೊಂಡಿದ್ದಾರೇನೋ ಎಂದು ವಿಭೂತಿಭೂಷಣರಿಗೆ ತೋರಿತು. ಆಗಲೇ ಅವರ ಧ್ವನಿಯನ್ನು ಕೇಳಿ, ಗಟ್ಟಿಯಾದ ಧ್ವನಿಯಲ್ಲಿ ಅವರ ಹೆಸರು ಹಿಡಿದು ಕೂಗುತ್ತ

---

1 21.9.1916 (ಪ್ರಮಥ ಚೌಧರಿಯವರಿಗೆ ಬರೆದ ಪತ್ರ.

2 6, ಡಿಸಂಬರ್ 1917 (29 ಪುಷ್ಯ 1324)

ಶರತ್‌ಚಂದ್ರರು ಹೊರಗೆ ಬಂದರು. ಆದರೆ, ವಿಭೂತಿಭೂಷಣರನ್ನು ಕಂಡೊಡನೆಯೇ ಎಲ್ಲವೂ ಬದಲಾಗಿಬಿಟ್ಟಿತು. ಅವರು ಸ್ವಲ್ಪಹೊತ್ತು ಇದ್ದು ಹೋಗೋಣವೆಂದುಕೊಂಡು ಬಂದಿದ್ದರು. ಆದರೆ, ಅವರು ಹಿಂದಿರುಗುವ ಹೊತ್ತಿಗೆ ಮೂರು ಹಗಲು ಮತ್ತು ಮೂರು ರಾತ್ರಿಗಳು ಉರುಳಿಹೋಗಿದ್ದುವು. ಮಾತನಾಡುತ್ತ ಇದ್ದಂತೆಯೇ ಇಷ್ಟೊಂದು ಸುದೀರ್ಘ ಅವಧಿ ಅದೆಲ್ಲಿಂದ ಬಂದು ಅದೆಲ್ಲಿಗೆ ಹಾದುಹೋಗಿಬಿಟ್ಟಿತು ಎಂಬುದೇ ಗೊತ್ತಾಗಲಿಲ್ಲ. ಒಂದು ಸಂಗತಿಯಾದ ಮೇಲೆ ಇನ್ನೊಂದು ಸಂಗತಿ, ಪ್ರತಿ ಘಂಟೆಗೂ ತಂಬಾಕು ಸೇವನೆ, ನಡುನಡುವೆ ಊಟ-ತಿಂಡಿಗಳಿಗೆ ಸಾಕಷ್ಟು ಏರ್ಪಾಡು - ಈ ಅತಿಯಾದ ಉಪಚಾರ ಆ ಗೆಳೆಯರಿಗೆ ಪೇಚಾಟವನ್ನುಂಟುಮಾಡಿತು. ಆದರೆ, ಶರತ್‌ಚಂದ್ರರ ಪ್ರೀತಿಗೆ ಬಿಡುವೆಂದರೇನೆಂಬುದೇ ಗೊತ್ತಿರಲಿಲ್ಲ. ಗಡಿಯಾರ ನಿಂತು ಹೋಗುತ್ತಿತ್ತು, ಇಲ್ಲವೇ ಅದನ್ನು ಬೋರಲಾಗಿ ಇಟ್ಟು ಬಿಡಲಾಗುತ್ತಿತ್ತು. ವಿಭೂತಿಭೂಷಣರು ಹೇಳಿದರು: "ಶರತ್! ನಿಮ್ಮ ಈ ಶಿಷ್ಟಾಚಾರವನ್ನರಿಯದ ನಾಯಿಯೇ ನಮಗೆ ಸ್ವಾಗತ ಕೋರಿದ್ದನ್ನು ಕಂಡು, ನೀವು ಕಾಲಭೈರವನ ಸಾಧನೆಯಲ್ಲಿ ಮುಳುಗಿದ್ದೀರಿ ಎಂದು ಭಾವಿಸಿಕೊಂಡುಬಿಟ್ಟಿದ್ದೆ. ಆದರೆ, ಈಗ ಹಿಂದಿನ ಆ ನಟರಾಜನ ಮೂರ್ತಿಯೇ ಇಲ್ಲಿದೆ ಎಂಬುದು ನನಗೆ ಅರಿವಾಗುತ್ತಿದೆ."

ಶರತ್‌ಚಂದ್ರರು ಏನೂ ಹೇಳಲಿಲ್ಲ. ಮುಖಕ್ಕೆ ಮುಖಕೊಟ್ಟು ಆ ನಾಯಿಯನ್ನು ಮುದ್ದಾಡತೊಡಗಿದರು. ಅದೆಂಥ ಅದ್ಭುತ ದೃಶ್ಯ! ಅದೆಷ್ಟು ಮಂದಿ ಪರಿಚಿತ ಹಾಗೂ ಅಪರಿಚಿತ ವ್ಯಕ್ತಿಗಳು ಇಂಥ ಗೋಷ್ಠಿಗಳಲ್ಲಿ ಅವರಿಂದ ಅದೆಷ್ಟು ಕಥೆಗಳನ್ನು ಕೇಳಿದ್ದರೋ! ಅವರ ಈ ಗೋಷ್ಠಿಗಳ ಕಥೆಗಳು - ಅವುಗಳಲ್ಲಿ ನಿಜವೆಷ್ಟೋ ಸುಳ್ಳೆಷ್ಟೋ - ಅವರ ಸಾಹಿತ್ಯಕ್ಕಿಂತಲೂ ಕಡಿಮೆ ಸ್ವಾರಸ್ಯದವೇನೂ ಅಲ್ಲ.

ಆಗ ಬಂಗಾಳದಲ್ಲಿ ಅನೇಕ ಮಾಸ ಪತ್ರಿಕೆಗಳು ಪ್ರಕಟವಾಗುತ್ತಿದ್ದುವು. ಅವುಗಳಲ್ಲಿ ಹೊಸ ಪಂಥದ ಹೊಸ ದನಿಯ ಪ್ರತೀಕವಾಗಿದ್ದ ಪತ್ರಿಕೆಯೆಂದರೆ 'ಭಾರತಿ', 'ಸಬುಜ ಪತ್ರ' ಎಂಬ ಇನ್ನೊಂದು ಪತ್ರಿಕೆ ಆಡುನುಡಿಯ ಪ್ರಸಾರವನ್ನು ಮುಖ್ಯೋದ್ದೇಶವಾಗಿರಿಸಿಕೊಂಡಿತ್ತು. (ಶರತ್‌ಚಂದ್ರರು ಆಡುನುಡಿಯ ಬಳಕೆ ಮಾಡಿದ್ದು ಅವರ ಅಪಾರ ಜನಪ್ರಿಯತೆಗೆ ಮೂಲಭೂತ ಕಾರಣವಾಯಿತೆಂಬುದು ನಿಜವಾದರೂ, ಈ 'ಸಬುಜ ಪತ್ರ' ಅವರನ್ನು ವಿರೋಧಿಸಿತು). 'ಪ್ರವಾಸೀ' ಪತ್ರಿಕೆಗೂ ರವೀಂದ್ರನಾಥ ಠಾಕೂರರಿಗೂ ತುಂಬ ನಿಕಟ ಸಂಬಂಧವಿತ್ತು. ಅದರಲ್ಲಿ ಅವರ ಕೃತಿಗಳೇ ಹೆಚ್ಚಾಗಿ ಪ್ರಕಟವಾಗುತ್ತಿದ್ದುವು. 'ಭಾರತ ವರ್ಷ' ಪತ್ರಿಕೆಗೆ ಶರತ್‌ಚಂದ್ರರೇ ಪ್ರಮುಖ ಬರೆಹಗಾರರಾಗಿದ್ದರು. 'ನಾರಾಯಣ' ಪತ್ರಿಕೆಗೆ ವಿಪಿನ್‌ಪಾಲ್ ಮೊದಲಾದವರು ಮುಖ್ಯ ಲೇಖಕರಾಗಿದ್ದರು. ಬ್ಯಾರಿಸ್ಟರ್ ಚಿತ್ತರಂಜನ್ ದಾಸ್ ಅವರು 'ನಾರಾಯಣ'ದ ಸಂಪಾದಕರಾಗಿದ್ದರು. ಅಲೀಪುರದ ಬಾಂಬ್‌ಸ್ಫೋಟದ ಒಳಸಂಚಿನ ಪ್ರಕರಣದಲ್ಲಿ ಆರೋಪಿಗಳಾಗಿದ್ದ ಅರವಿಂದ ಘೋಷ್ ಅವರ ಪ್ರತಿವಾದೀ-ವಕೀಲರಾಗಿ ಅವರ ಖ್ಯಾತಿ ಬಹುದೂರದವರೆಗೆ ಹರಡಿತ್ತು. ಅವರು ಕವಿಗಳೂ ಆಗಿದ್ದರು. ಅವರು ರಾಜಕೀಯದಲ್ಲಿ ಮುಳುಗದೆ ಹೋಗಿದ್ದರೆ, ಖಂಡಿತವಾಗಿಯೂ ಒಬ್ಬ ಭಕ್ತ ಹಾಗೂ ರಹಸ್ಯವಾದಿ ಕವಿಯ

ರೂಪದಲ್ಲಿ ಅವರು ಒಳ್ಳೆಯ ಹೆಸರನ್ನು ಗಳಿಸುತ್ತಿದ್ದರು. 'ನಾರಾಯಣ' ಪತ್ರಿಕೆಯನ್ನು ಆರಂಭಿಸಿದ್ದೂ ಅವರೇ. ಈ ಪತ್ರಿಕೆ 'ಸಬುಜ ಪತ್ರ'ಕ್ಕೆ ಪ್ರತಿಸ್ಪರ್ಧಿ ಎಂದು ಭಾವಿಸಲಾಗಿತ್ತು. ಬ್ಯಾರಿಸ್ಟರ್ ದಾಸ್ ಅವರು ರವೀಂದ್ರನಾಥರ ಮೇಲಾಗಿದ್ದ ಪಾಶ್ಚಾತ್ಯ ಪ್ರಭಾವ ಅವರ ಸಾಹಿತ್ಯಕ್ಕೆ ಉಪಕಾರಕವಾದುದಲ್ಲವೆಂಬ ಭಾವನೆಯನ್ನು ಇರಿಸಿಕೊಂಡಿದ್ದುದೇ ಅದಕ್ಕೆ ಮುಖ್ಯ ಕಾರಣವಾಗಿತ್ತು. "ರವೀಂದ್ರನಾಥರು ಪಾಶ್ಚಾತ್ಯರಿಂದ ಅನೇಕ ಸಂಗತಿಗಳನ್ನು ಸ್ವೀಕರಿಸಿದ್ದಾರೆ. ಅವರಿಂದಾಗಿಯೇ ಬಂಗಾಳೀ ಸಾಹಿತ್ಯದಲ್ಲಿ ವೈವಿಧ್ಯ ಕಾಣಿಸಿಕೊಂಡಿತು ಹಾಗೂ ಅದು ಸಮೃದ್ಧವೂ ಆಯಿತು ಎಂಬುದರಲ್ಲಿ ಅನುಮಾನವೇನೂ ಇಲ್ಲ. ಆದರೆ, ಈ ಕಾರಣದಿಂದಾಗಿಯೇ ಬಂಗಾಳದ ತನ್ನದೇ ಆದ ಸಂಸ್ಕೃತಿ ಹಾಗೂ ರಾಷ್ಟ್ರೀಯ ಚೇತನ ಅರಳಿ ನಿಲ್ಲಲಾರದೆ ಹೋಯಿತು. ಪಶ್ಚಿಮದ ಕಣ್ಣು ಕೋರೈಸುವ ಬೆಳಕಿನಿಂದ ನಾವು ಪ್ರಭಾವಿತರಾಗುವುದು ಯಾವುದೇ ಸ್ಥಿತಿಯಲ್ಲೂ ನಮಗೆ ಗೌರವವನ್ನು ತಂದು ಕೊಡಲಾರದು" ಎಂಬುದು ಅವರ ಅಭಿಪ್ರಾಯವಾಗಿತ್ತು.

ವಿಶುದ್ಧ ದೇಶಪ್ರೇಮವೇ ಅವರ ಸಾಹಿತ್ಯಕ್ಕೆ ಪ್ರೇರಣೆಯ ಮೂಲಸ್ರೋತವಾಗಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಪ್ರಾಚೀನ ಪರಂಪರೆಗಳ ಬಗೆಗೆ ಅವರಿಗಿದ್ದ ಆಳವಾದ ಗೌರವ ಅವರ ಬರೆಹಗಳಲ್ಲಿ ಎದ್ದು ಕಾಣುತ್ತಿತ್ತು. ಈ ಕಾರಣದಿಂದಾಗಿಯೇ ಅವರು ಶರತ್‌ಚಂದ್ರರತ್ತ ಸರಿದರು. ಒಂದು ದಿನ ಅವರು ಶರತ್‌ಚಂದ್ರರಿಗೆ ಪತ್ರ ಬರೆದು, 'ನಾರಾಯಣ'ಕ್ಕಾಗಿ ನಿಮ್ಮ ಯಾವುದಾದರೂ ಒಂದು ಕೃತಿಯನ್ನು ಕಳಿಸಿಕೊಡಿ ಎಂದು ಕೋರಿದರು.

ಶರತ್‌ಚಂದ್ರರು ವಿಶೇಷವಾಗಿ ಅವರಿಗೆಂದೇ ಒಂದು ಕಥೆಯನ್ನು ಬರೆದರು. ಅದನ್ನು ಕಳಿಸಿಕೊಡುತ್ತಾ, ಈ ಕಥೆಗೆ ಹೆಸರುಕೊಡುವ ಹೊಣೆಯನ್ನು ನಿಮಗೇ ಬಿಟ್ಟಿದ್ದೇನೆ ಎಂದು ಅವರು ದಾಸ್ ಅವರಿಗೆ ಪತ್ರ ಬರೆದಿದ್ದರು.

ದಾಸ್ ಅವರು ಈ ಕಥೆಗೆ 'ಸ್ವಾಮೀ'[1] ಎಂಬ ಶೀರ್ಷಿಕೆಯನ್ನು ಕೊಟ್ಟರು. ಅದರ ನಾಯಕ ವೈಷ್ಣವ ಆದರ್ಶಗಳ ಸಾಕಾರರೂಪವೇ ಆಗಿದ್ದಾನೆ. ಈ ಕಥೆ ಪ್ರಕಟವಾದ ಬಳಿಕ, ಬ್ಯಾರಿಸ್ಟರ್ ದಾಸ್ ಅವರು ಸಂಭಾವನೆಯ ರೂಪದಲ್ಲಿ ಅವರಿಗೆ ಒಂದು ಖಾಲಿ ಚೆಕ್ಕನ್ನು ಕಳಿಸಿಕೊಟ್ಟು ಹೀಗೆಂದು ಬರೆದಿದ್ದರು: "ನಿಮ್ಮಂಥ ಕಥಾಶಿಲ್ಪಿಯ ಕೃತಿಗೆ ಹಣದಿಂದ ಬೆಲೆಗಟ್ಟಲು ಸಾಧ್ಯವಿಲ್ಲ. ನಿಮ್ಮ ಕಥೆಗೆ ಸಂಭಾವನೆಯಾಗಿ ಈ ಚೆಕ್ಕನ್ನು ಕಳಿಸುತ್ತಿದ್ದೇನೆ. ದಯವಿಟ್ಟು ಇದನ್ನು ಸ್ವೀಕರಿಸಿ. ನಿಮಗೆ ಇಷ್ಟ ಬಂದಷ್ಟು ಮೊತ್ತವನ್ನು ಇದರಲ್ಲಿ ನಮೂದಿಸಿಕೊಳ್ಳಿ. ಯಾವುದೇ ಬಗೆಯ ಸಂಕೋಚವನ್ನು ಇರಿಸಿಕೊಳ್ಳಬೇಡಿ."

ಶರತ್‌ಚಂದ್ರರ ಮನಸ್ಸು ಮಾರು ಹೋಯಿತು. ಒಬ್ಬ ಲೇಖಕನ ವಿಷಯದಲ್ಲಿ ಅವರು ಅದೆಂಥ ಅಪರಿಮಿತವಾದ ವಿಶ್ವಾಸವನ್ನು ತೋರಿದ್ದರು! ಬಯಸಿದಷ್ಟು ಮೊತ್ತವನ್ನು ಅವರು ಅದರಲ್ಲಿ ಬರೆದುಕೊಳ್ಳಬಹುದಾಗಿತ್ತು. ರವೀಂದ್ರನಾಥರನ್ನು ಬಿಟ್ಟರೆ, ಅವರೇ ಬಂಗಾಳದ ಸರ್ವಶ್ರೇಷ್ಠ ಲೇಖಕರಾಗಿದ್ದರಲ್ಲವೆ! ಅವರ ಜನಪ್ರಿಯತೆ ಆಗಂತೂ ತುತ್ತ ತುದಿಯನ್ನು ತಲುಪಿತ್ತು. ಜನರಿಗೆ ಅವರ ಹೆಸರು

1 ಆಗಸ್ಟ್ 1917

ಗೊತ್ತಿರದೆ ಇದ್ದರೂ, ಅವರ ಕೃತಿಗಳು ಅವರಿಗೆ ಚಿರಪರಿಚಿತವಾಗಿಬಿಟ್ಟಿದ್ದುವು.

ಒಮ್ಮೆ ಉತ್ತರ ಪ್ರದೇಶಕ್ಕೆ ಬಂದುಹೋಗಿ ಮಾಡುತ್ತಿದ್ದ ಬಂಗಾಳಿ ಕಂಟ್ರಾಕ್ಟುದಾರರೊಬ್ಬರು ಕಾರ್ಯಾರ್ಥವಾಗಿ ಕಲ್ಕತ್ತೆಗೆ ಬಂದು, ತಮ್ಮ ನೆಂಟರ ಮನೆಯಲ್ಲಿ ಉಳಿದುಕೊಂಡರು. ಆ ಕುಟುಂಬದ ಹೆಣ್ಣು ಮಗಳೊಬ್ಬಳು ಒಂದು ದಿನ ಅವರೊಂದಿಗೆ ಹೀಗೆಂದಳು: "ಮಾಮ, ಒಂದು ಕೆಲಸ ಮಾಡುತ್ತೀರಾ ? ನಮ್ಮ ಮನೆಗೆ ಬರುವ ದಾರಿಯ ತಿರುವಿನ ಬಳಿ ಇರುವ ಕೆಂಪು ಮನೆಗೆ ಶರತ್‌ಚಂದ್ರರು ಆಗಾಗ್ಗೆ ಬರುತ್ತಿರುತ್ತಾರೆ. ನೀವು ಅವರನ್ನು ಒಮ್ಮೆ ಭೇಟಿಮಾಡಿ ಬನ್ನಿ."

ಆಶ್ಚರ್ಯದಿಂದ ಅವರು ಕೇಳಿದರು: "ಯಾವ ಶರತ್‌ಚಂದ್ರ ?"

"ಶರತ್‌ಬಾಬೂ, ಅವರೇ ನಮ್ಮ ಶರತ್‌ಚಂದ್ರರು."

ಈ 'ನಮ್ಮ ಶರತ್‌ಚಂದ್ರ'ರು ಯಾರು ಎಂಬುದು ಆ ಕಂಟ್ರಾಕ್ಟರ್ ಮಹಾಶಯರಿಗೆ ಆಗಲೂ ಅರ್ಥವಾಗಲಿಲ್ಲ. ಆ ಹುಡುಗಿಯ ತಂದೆಯೂ ಬಗೆಬಗೆಯಾಗಿ ಶರತ್‌ಚಂದ್ರರನ್ನು ಪರಿಚಯಿಸಿಕೊಟ್ಟರು. ಆದರೆ ಈ ಎಲ್ಲ ಪರಿಚಯವೂ ವ್ಯರ್ಥವಾಯಿತು. ಕೊನೆಗೆ ಅವರು ಹೀಗೆಂದರು: "ಅದೇ ಶರತ್ ಕಣಪ್ಪ. 'ಶ್ರೀಕಾಂತ' ಎಂಬ ಹೆಸರನ್ನು ಕೇಳಿಲ್ಲವೆ ?"

ಈ ಮಾತನ್ನು ಕೇಳಿದೊಡನೆಯೇ ಕಂಟ್ರಾಕ್ಟರ್ ಮಹಾಶಯರು ಹೀಗೆಂದರು: "ಓ, ಆ ಅಲೆಮಾರಿ ಹುಡುಗನ ? ಅವನು ತನ್ನ ಹೆಸರನ್ನು 'ಶ್ರೀಕಾಂತ' ಎಂದು ಬದಲಾಯಿಸಿಕೊಂಡು ಬಿಟ್ಟಿರುವಂತೆ ಕಾಣುತ್ತದೆ."

ಹೆಸರನ್ನು ಬದಲಾಯಿಸಿರಲಿ ಬಿಟ್ಟಿರಲಿ, ಅವರ ಕೃತಿಗಳು ಜನಪ್ರಿಯತೆಯ ತುತ್ತ ತುದಿಯನ್ನು ತಲುಪಿದ್ದುವು. ಬಹುಪಾಲು ಜನರು ಲೇಖಕನನ್ನು ನೋಡಿಯೇ ಇರಲಿಲ್ಲ. ಆದರೆ ಅವರ ಕೃತಿಗಳನ್ನು ಓದಿ ಮುಗಿಸುವ ವಿಚಾರದಲ್ಲಿ ವಿದ್ಯಾರ್ಥಿಗಳು, ವಿದೇಶೀಯರು, ಗೃಹಿಣಿಯರು, ವ್ಯಾಪಾರಿಗಳು ಇವರೆಲ್ಲ ಒಬ್ಬರೊಡನೊಬ್ಬರು ಸ್ಪರ್ಧಿಸಲು ಉತ್ಸುಕರಾಗಿದ್ದಾರೇನೋ ಎಂಬಂತೆ ತೋರುತ್ತಿತ್ತು. ವಿದ್ಯಾರ್ಥಿಗಳು ತಮ್ಮ ಪರೀಕ್ಷೆಯ ಪುಸ್ತಕಗಳ ಕೆಳಗೆ 'ಶ್ರೀಕಾಂತ' 'ಚರಿತ್ರಹೀನ', 'ದೇವದಾಸ್' ಮೊದಲಾದ ಕಾದಂಬರಿಗಳನ್ನು ಬಚ್ಚಿಟ್ಟುಕೊಂಡಿರುತ್ತಿದ್ದರು. ಸೊಸೆ ಲಕ್ಷ್ಮಿಯ ತಲೆದಿಂಬಿನ ಅಡಿಯಲ್ಲಿ ಕಾಡಿಗೆ ಮತ್ತು ಕುಂಕುಮಗಳಿಂದ ಅಲಂಕೃತವಾದ 'ಪಲ್ಲೀ ಸಮಾಜ', 'ಬಿರಾಜ್ ಬಹೂ' ಹಾಗೂ 'ಬಿಂದೂರ್ ಛೇಲೇ' ಮೊದಲಾದ ಕೃತಿಗಳು ಕಾಣದೊರೆತರೆ, ಅದೇನೂ ಆಶ್ಚರ್ಯದ ಸಂಗತಿಯೇನೂ ಆಗುತ್ತಿರಲಿಲ್ಲ. ಅಷ್ಟೇ ಅಲ್ಲ, ಪ್ರತಿದಿನ 'ರಾಮಾಯಣ'ದ ವಾಚನ ನಡೆಸುತ್ತಿದ್ದಂಥ ಕೋಮಟಿಯ ಅಂಗಡಿಯಲ್ಲೂ 'ಬಡೀ ದೀದೀ', 'ಪಂಡಿತ್ ಮೋಶಾಯ್' ಅಥವಾ 'ಶ್ರೀಕಾಂತ' ಕಾಣದೊರೆಯುತ್ತಿತ್ತು. ಅವರ ಪಾತ್ರಗಳು ನಿಜ ಜೀವನದಿಂದ ಎದ್ದು ಬಂದಂಥವಾಗಿದ್ದುದು ಹಾಗೂ ಯಾವುದೋ ಕೃತಕ ನಿಯಮ-ನಿಬಂಧನೆಗೊಳಪಟ್ಟು ನಿರ್ಮಿಸಿದಂಥವಾಗಿರದಿದ್ದುದು ಇವೇ ಅವರ ಈ ಜನಪ್ರಿಯತೆಗೆ ಕಾರಣವಾಗಿದ್ದುವು. ಅವುಗಳಿಗೂ ಶರತ್‌ಚಂದ್ರರಿಗೂ ಪ್ರೇಮದ ಆತ್ಮೀಯ ಸಂಬಂಧವಿರುತ್ತಿತ್ತು - ಅಂದರೆ, ಅವು ಹಾರ್ದಿಕವಾಗಿ ಮೂಡಿಬಂದಂಥವಾಗಿರುತ್ತಿದ್ದುವೇ ಹೊರತು, ಬೌದ್ಧಿಕವಾಗಿ ನಿರ್ಮಿಸಿದಂಥವಾಗಿರುತ್ತಿರಲಿಲ್ಲ. ಹೀಗಾಗಿ, ಅವರು ತಮ್ಮವರು ಎಂಬ

ಭಾವನೆ ಉಂಟಾಗುತ್ತಿತ್ತು. ಚಿಂತನೆಯ ಹೊರೆ ನಡುವೆ ನುಗ್ಗಲು ಅವರು ಅವಕಾಶಮಾಡಿಕೊಡುತ್ತಿರಲಿಲ್ಲ. ಪ್ರೀತಿಯ ಈ ಅನನ್ಯತೆಯೇ ಕಲೆಗಾರನ ಹಿರಿಮೆಯ ಒರೆಗಲ್ಲಾಗಿರುತ್ತದೆ.

ಇದರಿಂದಾಗಿ ಓದುಗರು ಆ ಪಾತ್ರಗಳಲ್ಲಿ ಅದೆಷ್ಟು ತನ್ಮಯರಾಗಿ ಬಿಡುತ್ತಿದ್ದರೆಂದರೆ, ಈ ಪಾತ್ರಗಳನ್ನು ಸೃಷ್ಟಿಸಿದ ಲೇಖಕನೂ ಒಬ್ಬನಿದ್ದಾನೆ ಎಂಬುದನ್ನು ಮರೆತೇ ಬಿಡುತ್ತಿದ್ದರು. ವಿದ್ಯಾರ್ಥಿಗಳು ಗುಂಪುಗೂಡಿ ಅವರ ಕೃತಿಗಳನ್ನು ಓದುತ್ತಿದ್ದರು, ಇಷ್ಟಾಗಿಯೂ ಅವರೆಲ್ಲಿದ್ದಾರೆ, ಏನು ಮಾಡಿಕೊಂಡಿದ್ದಾರೆ ಎಂಬುದು ಹೆಚ್ಚು ಜನರಿಗೆ ತಿಳಿದಿರಲಿಲ್ಲ. ಅನೇಕರು ಅವರನ್ನು ಅಲೆಮಾರಿಯೆಂದೂ ಇಂದು ಬಿಹಾರದಲ್ಲಿದ್ದರೆ, ನಾಳೆ ಕಾಶಿಯಲ್ಲಿ, ನಾಡಿದ್ದು ಬರ್ಮಾದಲ್ಲಿ ಇರುವಂಥವರೆಂದೂ ಭಾವಿಸುತ್ತಿದ್ದರು.

ಶರತ್‌ಚಂದ್ರರು ಇಷ್ಟೊಂದು ಜನಪ್ರಿಯರಾಗಿಬಿಟ್ಟಿದ್ದರು! ಇಷ್ಟಾಗಿಯೂ ಅವರು ದಾಸ್ ಅವರ ಖಾಲಿ ಚೆಕ್ಕಿನಲ್ಲಿ ಒಂದುನೂರು ರೂಪಾಯಿಗಳ ಮೊತ್ತವನ್ನು ಮಾತ್ರ ಭರ್ತಿ ಮಾಡಿದರು. ಹಣದ ಮೌಲ್ಯ ಸಂಪೂರ್ಣವಾಗಿ ಸಾಮಯಿಕವಾಗಿರುವಂಥದು. ನಿಜವಾದ ಬೆಲೆ ದೊರೆತದ್ದು ದೇಶಬಂಧು ಅವರೊಂದಿಗೆ ಉಂಟಾದ ಪರಿಚಯ ದಿಂದ. ಒಂದು ಪ್ರತಿಭೆ ತೋಳುಚಾಚಿ, ಮುಕ್ತ ಹೃದಯದಿಂದ ಇನ್ನೊಂದು ಪ್ರತಿಭೆಯನ್ನು ಆಲಿಂಗಿಸಿಕೊಂಡಿತು.

ನಮ್ಮ ನಾಡಿನಲ್ಲಿ ಮಾತ್ರವಲ್ಲದ, ವಿದೇಶಗಳಲ್ಲಿಯೂ ಅವರ ಪ್ರತಿಭೆಯ ಕಥೆ ಮೆಲ್ಲಮೆಲ್ಲನೆ ಹರಡಿಕೊಳ್ಳತೊಡಗಿತು. ಲಂಡನ್ನಿನ ಸುಪ್ರಸಿದ್ಧ ಪತ್ರಿಕೆಯಾದ 'ದಿ ಟೈಮ್ಸ್' ತನ್ನ 'ಸಾಹಿತ್ಯಿಕ ಪುರವಣಿ'ಯಲ್ಲಿ 'ಬಿಂದೂರ್ ಛೇಲೇ' ಮತ್ತು 'ಮಝಲೀ ದೀದೀ' ಎಂಬ ಎರಡು ಕಥಾಸಂಗ್ರಹಗಳ ಬಗೆಗಿನ ಪ್ರಶಂಸಾತ್ಮಕ ವಿಮರ್ಶೆಯನ್ನು ಪ್ರಕಟಿಸಿತು.[1] ವಿಮರ್ಶಕರು ಇವರನ್ನು ಮೊಪಾಸನಿಗೆ ಹೆಗಲೆಣೆಯಾಗಿ ನಿಲ್ಲಬಲ್ಲಂಥ ಕಥೆಗಾರನೆಂದು ಪರಿಗಣಿಸಿದ್ದರು. ಹೆಣ್ಣಿನ ಪಾತ್ರ ಚಿತ್ರಣದಲ್ಲಿ ಹಾಗೂ ಮಕ್ಕಳ ಮನಸ್ಸನ್ನೂ ತೆರೆದು ತೋರುವುದರಲ್ಲಿ ಸಿದ್ಧಹಸ್ತರೆಂದು ಆ ವಿಮರ್ಶೆಯಲ್ಲಿ ಅವರನ್ನು ವಿಶೇಷವಾಗಿ ಹಾಡಿಹೊಗಳಲಾಗಿತ್ತು. ಈ ಅಪರೂಪದ ವಿಮರ್ಶೆಯಲ್ಲಿ ಅಂಥ ಆಳವೇನೂ ಇರದಿದ್ದರೂ, ಅವರ ಪ್ರತಿಭೆಯನ್ನು ಗುರುತಿಸಿದ್ದು, ಆ ವಿಮರ್ಶಕ ಮಾಡಿದ ಒಳ್ಳೆಯ ಕೆಲಸವೇ ಆಗಿತ್ತು.

ಇದೇ ಹೊತ್ತಿಗೆ ಅನೇಕ ಕಥೆಗಳು ಮಾತ್ರವಲ್ಲದೆ 'ದತ್ತಾ' ಮತ್ತು 'ಶ್ರೀಕಾಂತ' ಕಾದಂಬರಿಯ ಎರಡನೆಯ ಭಾಗ ಪ್ರಕಟಗೊಂಡುವು. 'ದತ್ತಾ' ಕೃತಿಯಿಂದಾಗಿ ಅವರು ಸಾಕಷ್ಟು ಅವಹೇಳನವನ್ನು ಸಹಿಸಿಕೊಳ್ಳಬೇಕಾಗಿ ಬಂತು. ಈ ಕೃತಿಯಲ್ಲಿ ಅವರು ಸ್ವಲ್ಪಮಟ್ಟಿಗೆ 'ಬ್ರಹ್ಮ ಸಮಾಜ'ವನ್ನು ಟೀಕಿಸಿದ್ದಾರೆ. ಇದರಿಂದಾಗಿ ಬ್ರಹ್ಮ ಸಮಾಜದ ಅನುಯಾಯಿಗಳೂ ಕತ್ತಿಹಿರಿದು ನಿಂತರು. ಈ ಹೊತ್ತಿನಲ್ಲಿಯೇ ಒಂದು ಸುಶಿಕ್ಷಿತ ಬ್ರಹ್ಮ ಸಮಾಜೀ ಕುಟುಂಬ ಶರತ್‌ಚಂದ್ರರನ್ನು ತನ್ನ ಮನೆಗೆ ಕರೆದಿತ್ತು. ಅವರೀಗ ದ್ವಂದ್ವಕ್ಕೊಳಗಾದರು. ಹೋದರೆ ಯಾವುದಾದರೂ ಅಪ್ರಿಯಘಟನೆ ಸಂಭವಿಸಬಹುದು, ಹೋಗದಿದ್ದರೆ ತಮ್ಮನ್ನು ಹೇಡಿ ಎಂದು ಭಾವಿಸಬಹುದು.

---

1 ಜುಲೈ 1918

ಕೊನೆಗೂ ಅವರು ಅಲ್ಲಿಗೆ ಹೋದರು. ಅಲ್ಲಿ ಅವರಿಗೆ ಭವ್ಯವಾದ, ಹೃತ್ಪೂರ್ವಕವಾದ ಸ್ವಾಗತವೇ ದೊರೆಯಿತು. ಸಿಂಗಾರ-ಅಲಂಕರಣಗಳ ಕೊರತೆಯೂ ಇರಲಿಲ್ಲ. ಹೆಂಗಸರೂ ತುಂಬ ಪ್ರೀತ್ಯಾದರಗಳಿಂದ ಅವರನ್ನು ಬೆಲೆಬಾಳುವ ಆಸನದಲ್ಲಿ ಕೂಡಿಸಿದರು. ಆ ಬಳಿಕ ಸುಂದರವಾದ ವಿಶೇಷಣಗಳನ್ನು ಬಳಸಿ, ಅವರನ್ನು ಹಾಡಿಹೊಗಳಿದರು. ಮುಂದೆ ಊಟದ ಸರದಿ ಬಂದಿತು. ಇದುವರೆಗೂ ಕಾಣದಿದ್ದುದನ್ನು ಅವರು ಅಲ್ಲಿ ಕಂಡರು. ಎಡಗಡೆ ಬೆಳ್ಳಿಯ ತಟ್ಟೆಯಲ್ಲಿ ತಮ್ಮ 'ದತ್ತಾ' ಕಾದಂಬರಿಯನ್ನು ಇರಿಸಿದ್ದುದನ್ನು ಅವರು ಕಂಡರು. ತನ್ನ ಯೋಜನೆ ಅಯಶಸ್ವಿಯಾದಾಗ ರಾಸಬಿಹಾರಿ ತನ್ನ ಮಗನನ್ನು ದಂಡಿಸುವ ಪ್ರಸಂಗದ ವರ್ಣನೆ ಬಂದಿದ್ದ ಪುಟವನ್ನು ತೆರೆದಿಡಲಾಗಿತ್ತು. ಆ ಸಾಲುಗಳ ಕೆಳಗೆ ಕೆಂಪು ಬಣ್ಣದ ಪೆನ್ಸಿಲ್‌ನಿಂದ ಗೆರೆ ಎಳೆಯಲಾಗಿತ್ತು.

ಅವರಿಗೆ ಎಲ್ಲವೂ ಅರ್ಥವಾಯಿತು. ಆದರೆ, ತಮಗೇನೂ ಅರ್ಥವಾಗಲಿಲ್ಲ ಎಂಬಂತೆಯೇ ಅವರು ನಡೆದುಕೊಂಡರು. ಚೆನ್ನಾಗಿ ಊಟ ಮಾಡಿದರು, ಮುಕ್ತ ಮನಸ್ಸಿನಿಂದ ಮಾತನಾಡಿದರು ಹಾಗೂ ಅಲ್ಲಿಂದೆದ್ದು ಬಂದರು.

ಹೀಗೆ ಮಾಡುವುದರ ಮೂಲಕ ಅವರಿಗೆ ಚೆನ್ನಾಗಿ ಅವಹೇಳನ ಮಾಡಿದಂತೆ ಆಯಿತು ಎಂದು ಬ್ರಹ್ಮಸಮಾಜದ ಆ ಮಹಿಳೆಯರು ಭಾವಿಸಿದ್ದಿರಬಹುದು. ಆದರೆ, ವಾದ-ವಿವಾದಗಳನ್ನು ಮೀರಿ ನಿಂತಿರುವಂಥ, ತಾತ್ವಿಕವಾಗಿರುವುದಕ್ಕಿಂತಲೂ ಹೆಚ್ಚಾಗಿ ಪ್ರಸಾದಮಯ ದೃಷ್ಟಿಕೋನವನ್ನು ಮೆರೆದಿರುವಂಥ ಸೃಜನಶೀಲ ಲೇಖಕ ಇಂಥ ಅವಹೇಳನೆಯಿಂದ ಚಿಂತೆಗೀಡಾಗುವುದು ಎಲ್ಲಿಯಾದರೂ ಸಾಧ್ಯವೆ ?

ಅವರ ಎಲ್ಲ ಕೃತಿಗಳೊಂದಿಗೂ ಒಂದಲ್ಲ ಒಂದು ಇತಿಹಾಸ ಸೇರಿಕೊಂಡೇ ಇದೆ. ಆ ಇತಿಹಾಸಗಳಲ್ಲಿ ಅಂಥ ಸ್ವಾರಸ್ಯವೇನೂ ಇಲ್ಲ. 'ಸಾಹಿತ್ಯ' ಪತ್ರಿಕೆಯ ಸಂಪಾದಕರಾಗಿದ್ದ ಸಮಾಜಪತಿಯವರಿಗೂ ಅವರಿಗೂ ತುಂಬಾ ಹಿಂದಿನಿಂದಲೂ ಪರಿಚಯವಿತ್ತು. ತುಂಬ ಕಟು ವಿಮರ್ಶಕರೆಂದು ಅವರು ಹೆಸರು ಗಳಿಸಿದ್ದರು. ಶರತ್‌ಚಂದ್ರರ ಮೇಲೂ ಆಗಿಂದಾಗ್ಗೆ ಇಂಥ ಕೃಪೆ ತೋರಲು ಅವರು ಹಿಂದೆಗೆ ಯುತ್ತಿರಲಿಲ್ಲ. 'ಸಾಹಿತ್ಯ'ದ ಒಂದು ಸಂಚಿಕೆಯಲ್ಲಿ ಅವರು ಶರತ್‌ಚಂದ್ರರ ಬಗ್ಗೆ ತುಂಬ ತೀಕ್ಷ್ಣವಾಗಿ ವಿಡಂಬನೆ ಮಾಡಿದ್ದರು. ಅವರ ನಾಯಿಯನ್ನು ಈ ವಿಡಂಬನೆಗೆ ವಸ್ತುವಾಗಿಸಿಕೊಂಡಿದ್ದರು. ಅದರಲ್ಲಿ ಅವರು ಹೀಗೆ ಬರೆದಿದ್ದರು: "ಶರತ್‌ಚಂದ್ರ ಚಟ್ಟೋಪಾಧ್ಯಾಯ ಎಂಬ ಹೆಸರಿನ ಹೊಸ ಲೇಖಕರೊಬ್ಬರು ಉದಯಿಸಿದ್ದಾರೆ. ಅವರ ಹೃದಯದಲ್ಲಿ ಮೋಹ-ಮಮತೆಗಳು ತುಂಬಿಕೊಂಡಿವೆ. ಅಂದು ಕಾರ್ನವಾಲಿಸ್ ರಸ್ತೆಯಲ್ಲಿ ಅವರು ಒಂದು ಕಂತ್ರಿನಾಯಿಗೆ ಕಟ್ಲೆಟ್‌ಕೊಂಡು ತಿನ್ನಿಸುತ್ತಿದ್ದರು. ಹತ್ತಿರದಲ್ಲಿಯೇ ಒಬ್ಬ ಭಿಕ್ಷುಕ ಅರೆಕಾಸಿಗಾಗಿ ಅವರನ್ನು ಪರಿಪರಿಯಾಗಿ ಬೇಡುತ್ತಿದ್ದ. ಆದರೆ, ಈ ದಯಾಳು ಶರತ್‌ಚಂದ್ರರ ದೃಷ್ಟಿ ಅವನತ್ತ ಹರಿಯಲೇ ಇಲ್ಲ."

ತಾವು ಬಹಳ ಕಾಲದಿಂದಲೂ 'ಸಾಹಿತ್ಯ'ಕ್ಕಾಗಿ ಏನನ್ನೂ ಬರೆದಿಲ್ಲವೆಂದೂ, ಈ ಕಾರಣದಿಂದಾಗಿಯೇ ಈ ಅಪ್ರಿಯ ಬೆಳವಣಿ ನಡೆಯುತ್ತಿದೆಯೆಂದೂ ಅವರಿಗೆ ಅರ್ಥವಾಯಿತು. ಆಗ ವಸುಮತಿ ಸಾಹಿತ್ಯ ಮಂದಿರದ ವತಿಯಿಂದ ಪ್ರಕಟವಾಗಲಿದ್ದ

'ಆಗಮನೀ' ಎಂಬ ವಾರ್ಷಿಕ ಪೂಜಾ ವಿಶೇಷಾಂಕದ ಸಂಪಾದನಕಾರ್ಯದ ಹೊಣೆ ಸಮಾಜಪತಿಯವರ ಮೇಲೆ ಬಿದ್ದಿತು. ಅದಕ್ಕಾಗಿ ಶರತ್‌ಚಂದ್ರರು ಒಂದು ಕಥೆಯನ್ನು ಬರೆದುಕೊಡಬೇಕೆಂಬುದು ಅವರ ಒತ್ತಾಯವಾಗಿತ್ತು. ಇದು ಒಂದು ಒಳ್ಳೆಯ ಅವಕಾಶವೂ ಆಗಿತ್ತು. ಸಮಾಜಪತಿಯವರನ್ನು ಸಂತುಷ್ಟಗೊಳಿಸುವ ಸಲುವಾಗಿ ಅವರು 'ಛವಿ'[1] ಎಂಬ ಕಥೆಯನ್ನು ಬರೆದರು. ಇದರಲ್ಲಿ ಒಬ್ಬ ಬರ್ಮಾದ ಕಲಾವಿದ ಹಾಗೂ ಅವರ ಶ್ರೀಮಂತ ಪ್ರೇಯಸಿಯ ಕಥೆ ಇದೆ. ಈ ಕಥೆಯನ್ನು ರಚಿಸುವಾಗ ಅವರ ಮನಸ್ಸಿನಲ್ಲಿ ಬರ್ಮಾದ ಆ ಚಿತ್ರಕಾರನೂ ಖಂಡಿತವಾಗಿ ಇದ್ದಿರಬೇಕು. ಆದರೆ, ವಾಸ್ತವವಾಗಿ ಈ ಕಥೆಗೆ ಆಧಾರವಾಗಿರುವುದು ಅವರು ಬಾಲ್ಯಕಾಲದಲ್ಲಿ ಬರೆದ 'ಕೋರೇಲ ಗ್ರಾಮ' ಎಂಬ ಒಂದು ಕಥೆ.ಬಾಲ್ಯಕಾಲದ ಈ ಕಥೆಗಳು ಉತ್ತಮವಾಗಿಲ್ಲವೆಂಬುದು ಅವರ ಅನಿಸಿಕೆಯಾಗಿತ್ತು. ಆದ್ದರಿಂದ ಸಾಧ್ಯವಿದ್ದಷ್ಟು ಮಟ್ಟಿಗೆ, ಎಲ್ಲವನ್ನೂ ಅವರು ಮತ್ತೆ ತಿದ್ದಿಬರೆಯಲು ಪ್ರಯತ್ನಿಸಿದರು. ಈ 'ಕೋರೇಲಗ್ರಾಮ'ವೇ ಹೊಸರೂಪದಲ್ಲಿ 'ಛವಿ' ಎಂಬ ಹೆಸರಿನಲ್ಲಿ ಪ್ರಕಟವಾಯಿತು. 'ಕೋರೇಲಗ್ರಾಮ'ದ ಹಿನ್ನೆಲೆಯೂ ವಿದೇಶೀಯವೇ ಆಗಿತ್ತು. ಲಂಡನ್ನಿನ ಬಳಿಯ ಒಂದು ಕಿರುಹಳ್ಳಿಯ ವಾತಾವರಣವನ್ನು ಆಧಾರವಾಗಿಟ್ಟುಕೊಂಡು ಅದನ್ನು ಬರೆಯಲಾಗಿತ್ತು. ಪಾತ್ರಗಳೂ ಆಂಗ್ಲರೇ ಆಗಿದ್ದರು. ಇದಕ್ಕೆ ತದ್ವಿರುದ್ಧವಾಗಿ 'ಛವಿ' ಕಥೆಯಲ್ಲಿನ ವಾತಾವರಣ ಬರ್ಮಾ ದೇಶದ್ದಾಗಿದ್ದು, ಅದರಲ್ಲಿಯ ಪಾತ್ರಗಳೂ ಬರ್ಮೀಯರೇ ಆಗಿದ್ದಾರೆ.ಶರತ್‌ಚಂದ್ರರು ಲಂಡನ್ನಿಗೇನೂ ಹೋಗಿರಲಿಲ್ಲ. ಆದರೆ, ಬರ್ಮಾದಲ್ಲಿ ಅವರು ಹದಿಮೂರು ವರ್ಷ ವಾಸವಾಗಿದ್ದರು. ಹೀಗಾಗಿ, ಹೊಸ ಕಥೆಗೆ ಅವರು ಬರ್ಮೀಯರ ಜೀವನವನ್ನೇ ಆಧಾರವಾಗಿಸಿಕೊಂಡರು.

ಸೌರೀಂದ್ರ ಮೋಹನ ಮುಖರ್ಜಿಯವರೂ ಶರತ್‌ಚಂದ್ರರ ಕೃತಿಯನ್ನು ಪ್ರಕಟಿಸಬೇಕೆಂದು ಇಚ್ಛಿಸಿದರು - ಆದರೆ, ಸಮಾಜಪತಿಯವರ ಶೈಲಿಯಲ್ಲಲ್ಲ. ಅವರು ಶರತ್‌ಚಂದ್ರರಿಗೆ ಹೀಗೆಂದು ಹೇಳಿದರು: "ನಿಮ್ಮ ಮೊಟ್ಟ ಮೊದಲ ಕೃತಿಯಾದ 'ಬಡೀ ದೀದೀ' 'ಭಾರತೀ' ಪತ್ರಿಕೆಯಲ್ಲಿಯೇ ಪ್ರಕಟವಾಗಿತ್ತು. ಅದರ ಮೂಲಕವೇ ಬಂಗಾಳದ ಜನತೆಗೆ ನಿಮ್ಮ ಪರಿಚಯ ಉಂಟಾಯಿತು. ಆದ್ದರಿಂದ 'ಭಾರತಿ'ಗೆ ನಿಮ್ಮ ಮೇಲೆ ವಿಶೇಷವಾದ ಹಕ್ಕಿದೆ. ಈ ಹಕ್ಕಿನ ಆಧಾರದ ಮೇಲೆಯೇ ನಾನು ನಿಮ್ಮಿಂದ ಕಥೆಯೊಂದನ್ನು ನಿರೀಕ್ಷಿಸುತ್ತಿದ್ದೇನೆ. ನೀವು ಕೇಳಿದಷ್ಟು ಹಣವನ್ನು ಕೊಡಲೂ ನಾನು ಸಿದ್ಧನಾಗಿದ್ದೇನೆ."

ಶರತ್‌ಚಂದ್ರರು ನಕ್ಕು ಹೇಳಿದರು: "ನಿಮ್ಮಿಂದ ಹಣ ತೆಗೆದುಕೊಳ್ಳಲೆ! ಇಲ್ಲ, ಸಾಧ್ಯವಿಲ್ಲ. ನಾನು ನಿಮಗೆ ಒಂದು ಕಥೆ ಕೊಡುತ್ತೇನೆ."

ಅವರು 'ಭಾರತಿ'ಗಾಗಿ 'ವಿಲಾಸಿನೀ' ಎಂಬ ಕಥೆಯನ್ನು ಬರೆದರು. ಇದರಲ್ಲಿ ಅವರು ತಮ್ಮ ಬಾಳನ್ನೇ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಸಂಪೂರ್ಣವಾಗಿ ಸತ್ಯವಲ್ಲವಾದರೂ, ಅದಕ್ಕೆ ಆಧಾರಪ್ರಾಯವಾಗಿರುವ ಘಟನೆಗಳೆಲ್ಲವೂ ಸತ್ಯವೇ ಆಗಿವೆ. ದಿನಚರಿಯ ರೂಪದಲ್ಲಿ ಈ ಕಥೆಯನ್ನು ಬರೆಯಲಾಗಿದೆ. ಇದು ಹಳ್ಳಿಯ ಬಾಲಕನೊಬ್ಬನ ದಿನಚರಿ. ನೇಡಾ ಎಂಬುದು ಆ ಬಾಲಕನ ಹೆಸರು. ಈ 'ನೇಡಾ'

---

1 ವಾರ್ಷಿಕ ಪೂಜಾ ವಿಶೇಷಾಂಕ 'ಆಗಮನೀ' 1326 (ಅಕ್ಟೋಬರ್ 1919)

ಎಂಬುದು ಅವರಿಗೆ ಬಳಸುತ್ತಿದ್ದ ಅಡ್ಡ ಹೆಸರು. ತಮ್ಮ ಹೆಸರನ್ನೇ ಬಳಸುವ ಮೂಲಕ ಕಥೆಯ ಪ್ರಾಮಾಣಿಕತೆಯನ್ನೂ ಅದಕ್ಕೂ ತಮಗೂ ಇರುವ ಸಂಬಂಧವನ್ನೂ ಸ್ಪಷ್ಟಪಡಿಸುವುದು ಅವರ ಉದ್ದೇಶವಾಗಿರುವಂತೆ ತೋರುತ್ತದೆ. ಮೃತ್ಯುಂಜಯ ಎಂಬುವನು ನಿಜ ಜೀವನದ ವ್ಯಕ್ತಿಯಾಗಿದ್ದು, ಬಾಲ್ಯದಲ್ಲಿ ಅವನು ತುಂಬ ಪರಿಚಿತನಾಗಿದ್ದನೆಂಬುದನ್ನು ಅವರು ಮರೆಯಲಾಗಲಿಲ್ಲ. ಅಂತೆಯೇ, ಅಂದಿನ ಸಮಾಜದ ಮಮತಾರಹಿತವಾದ ಕ್ರೂರ ಶಕ್ತಿಯ ವಿಚಾರವೂ ಅವರಿಗೆ ನೆನಪಿತ್ತು. ಈ ಕಥೆಯಲ್ಲಿ ಕಾಯಸ್ಥ ವಂಶದ ಕುವರನಾಗಿದ್ದ ಮೃತ್ಯುಂಜಯನೊಂದಿಗೆ ಅಸ್ಪೃಶ್ಯ ಮುಸಲ್ಮಾನ ಕನ್ಯೆಯಾಗಿದ್ದ ವಿಲಾಸಿಯ ವಿವಾಹವನ್ನು ಏರ್ಪಡಿಸುವ ಮೂಲಕ ಶರತ್‌ಚಂದ್ರರು ತಮ್ಮ ಕೆಚ್ಚೆದೆಯ ಸ್ವಭಾವವನ್ನು ಪರಿಚಯಿಸಿಕೊಟ್ಟರು. ಬಾಳಿನ ಬಗೆಗಿನ ಅವರ ದೃಷ್ಟಿಕೋನ ಸಾಹಿತ್ಯರೂಪದಲ್ಲಿ ನಿಚ್ಚಳವಾಗಿ ಮೂಡದೆ ಹೋಗಿದ್ದರೆ, ಹಾಗೆ ಮಾಡುವುದು ಎಂದಿಗೂ ಸಾಧ್ಯವಾಗುತ್ತಿರಲಿಲ್ಲ. ದತ್ತಚಿತ್ತನಾಗಿ ವ್ಯಕ್ತಿ ಸಾಹಿತ್ಯ ರಚನೆಯಲ್ಲಿ ತೊಡಗಿದಾಗ ಕೇವಲ ಹಿಂದುವೂ ಆಗಿರುವುದಿಲ್ಲ. ಮುಸಲ್ಮಾನನೂ ಆಗಿರುವುದಿಲ್ಲ. ಆಗ ಎಲ್ಲರಿಗೂ ಪರಿಚಿತವಾಗಿರುವ ತನ್ನ 'ಅಹಂ'ನಿಂದ ಅವನು ತುಂಬ ದೂರಹೋಗಿಬಿಡುತ್ತಾನೆ, ಹಾಗಾಗದೆ ಇದ್ದಲ್ಲಿ ಅವನ ಸಾಹಿತ್ಯ ರಚನೆ ವ್ಯರ್ಥವಾಗಿ ಬಿಡುತ್ತದೆ ಎಂಬುದು ಅವರ ನಂಬಿಕೆಯೇ ಆಗಿತ್ತು.

ಸಂಪಾದಕರು-ಪ್ರಕಾಶಕರು ಮಾತ್ರವೇ ಅವರ ಕೃತಿಗಳನ್ನು ಇಷ್ಟಪಡುತ್ತಿದ್ದರು ಎಂದಲ್ಲ. ಪೇಟೆಯಲ್ಲಿಯೂ ಅವರ ಪುಸ್ತಕಗಳ ಬಗೆಗಿನ ಬೇಡಿಕೆ ಒಂದೇ ಸಮನೆ ಹೆಚ್ಚುತ್ತ ಇತ್ತು. ಅವರ ಎಲ್ಲ ಕೃತಿಗಳನ್ನೂ ಸಮಗ್ರ ಸಾಹಿತ್ಯ ಸಂಪುಟಗಳ ರೂಪದಲ್ಲಿ ಕಡಿಮೆ ಬೆಲೆಯಲ್ಲಿ ಹೊರತರುವ ಯೋಜನೆಯೊಂದನ್ನು ವಸುಮತಿ ಸಾಹಿತ್ಯ ಮಂದಿರದ ವ್ಯವಸ್ಥಾಪಕರಾಗಿದ್ದ ಸತೀಶಚಂದ್ರ ಮುಖೋಪಾಧ್ಯಾಯ ಅವರು ಮುಂದಿರಿಸಿದರು. ಇಚ್ಛೆ ಇದ್ದರೂ ಹೆಚ್ಚು ಬೆಲೆಯ ಪುಸ್ತಕಗಳನ್ನು ಕೊಳ್ಳುವುದು ಈ ಬಡದೇಶದಲ್ಲಿ ಎಲ್ಲರಿಗೂ ಸಾಧ್ಯವಾಗುವುದಿಲ್ಲವೆಂಬುದನ್ನು ಅವರು ಒತ್ತಿ ಹೇಳಿದರು. ಆದರೆ, ಶರತ್‌ಚಂದ್ರರು ಈ ಯೋಜನೆಯನ್ನು ಕೂಡಲೇ ಒಪ್ಪಲಾರದೆ ಹೋದರು. ಸಮಗ್ರ ಕೃತಿ ಸಂಪುಟಗಳು ಹೊರಬಂದ ಮೇಲೆ, ಬಿಡಿಬಿಡಿಯಾಗಿ ಹೊರಬರುವ ತಮ್ಮ ಕೃತಿಗಳ ಮಾರಾಟ ಕಮ್ಮಿಯಾಗಿಬಿಡುತ್ತದೆಂಬ ಭಯ ಅವರಿಗಿತ್ತು. ಆದರೆ, ಪ್ರಕಾಶಕರು ಈ ತರ್ಕವನ್ನು ಒಪ್ಪಲು ಸಿದ್ಧರಾಗಿರಲಿಲ್ಲ. ಇದಕ್ಕೆ ಬದಲಾಗಿ, ಸಮಗ್ರ ಕೃತಿ ಸಂಪುಟಗಳ ಮಾರಾಟದಿಂದ ಮೂರು ವರ್ಷಗಳಲ್ಲಿ ಇಪ್ಪತ್ತೈದರಿಂದ ಮುವ್ವತ್ತು ಸಾವಿರ ರೂಪಾಯಿಗಳಷ್ಟು ಸಂಭಾವನೆ ದೊರೆಯುತ್ತದೆ ಎಂದೂ ಅವರು ತಿಳಿಸಿದರು. ಶರತ್‌ಚಂದ್ರರಿಗೆ ಹಣದ ಅಗತ್ಯವಿತ್ತು. ಹೊಟ್ಟೆಯ ಪಾಡಿಗಾಗಿ ಒಂದೇ ಸಮನೆ ಬರೆಯುತ್ತ ಹೋಗುವುದು ಅವರಿಗೆ ಹಿಡಿಸುತ್ತಿರಲಿಲ್ಲ. ಇಷ್ಟೊಂದು ಹಣ ದೊರೆತರೆ ಬರವಣಿಗೆಯನ್ನು ಮಾಡಲೇಬೇಕಾದ ಅಗತ್ಯತೆಯಿಂದಲೂ ಆ ಶ್ರಮದಿಂದಲೂ ಮುಕ್ತಿ ದೊರೆಯುತ್ತಿತ್ತು. ಅವರು ಪಾಶ್ಚಾತ್ಯ ರಾಷ್ಟ್ರಗಳಿಗೂ ಹೋಗಿ ಬರಬೇಕೆಂದು ಬಯಸಿದ್ದರು. ಆದರೆ, ತಮ್ಮ ಕೃತಿಗಳ ಸ್ಥಾಯಿ ಪ್ರಕಾಶಕರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯ ಅವರಿಗೆ ಯಾವ ರೀತಿಯಿಂದಲೂ ನಷ್ಟವಾಗುವುದು ಅವರಿಗೆ ಇಷ್ಟವಿರಲಿಲ್ಲ.

ಅನಿಶ್ಚಿತತೆಯ ಈ ತೊಳಲಾಟದಲ್ಲಿಯೇ ಕೆಲವು ತಿಂಗಳುಗಳು ಕಳೆದು ಹೋದುವು. ತಾವೇ ಸ್ವತಃ ತಮ್ಮ ಸಮಗ್ರಕೃತಿ ಸಂಪುಟಗಳನ್ನು ಹೊರತರಬೇಕು ಅಥವಾ ಬೇರೆಯವರಿಂದ ಪ್ರಕಟಪಡಿಸಬೇಕು ಎಂಬುದು ಅವರ ಇಚ್ಛೆಯಾಗಿತ್ತೇನೋ. ಆದರೆ, ಕೊನೆಗೆ ವಸುಮತಿ ಸಾಹಿತ್ಯ ಮಂದಿರಕ್ಕೇ ಅನುಮತಿ ಕೊಡಬೇಕೆಂದು ಅವರು ತೀರ್ಮಾನಿಸಿದರು. ಸತೀಶಚಂದ್ರರಿಗೆ ನಿರಾಶೆಯನ್ನುಂಟು ಮಾಡಿ, ಬೇರೆ ಎಲ್ಲಿಂದಲೋ ತಮ್ಮ ಕೃತಿ ಸಂಪುಟಗಳನ್ನು ಹೊರತರುವುದು ಗೌರವ ತರುವಂಥ ಕಾರ್ಯವಾಗುವುದಿಲ್ಲವೆಂದೂ ಅವರಿಗೆ ತೋರಿತು. ಶರತ್ - ಗ್ರಂಥಾವಳಿಯ ಮೊದಲ ಭಾಗ ಹೊರಬಂದಿತು[1] ಇದರಲ್ಲಿ 'ದತ್ತಾ', 'ಪರಿಣೀತಾ 'ಶ್ರೀಕಾಂತ' (ಮೊದಲ ಭಾಗ) 'ಅರಕ್ಷಣೀಯಾ', 'ಏಕಾದಶ ವೈರಾಗೀ', 'ಮಝಲೀ ದೀದೀ' ಮತ್ತು 'ಮೊಕದ್ದಮೆಯ ಪರಿಣಾಮ' ಕೃತಿಗಳು ಸೇರಿದ್ದುವು. ಸಮಗ್ರ ಕೃತಿ ಸಂಪುಟದಿಂದ ಅವರಿಗೆ ತುಂಬ ಹಣವೂ ದೊರೆಯಿತು. ಓದುಗರ ಸಂಖ್ಯೆಯೂ ಹೆಚ್ಚಿತು. ಹಿಂದಿನ ಆವೃತ್ತಿಗಳ ಮಾರಾಟದ ಮೇಲೆ ಇದು ಕೆಟ್ಟ ಪರಿಣಾಮವನ್ನೇನೂ ಉಂಟು ಮಾಡಲಿಲ್ಲ. ಮುಂದೆ ಇದರ ಇತರ ಭಾಗಗಳೂ ಹೊರಬರ ತೊಡಗಿದುವು.[2] ಒಂದೇ ವರ್ಷದ ಒಳಗಾಗಿ ನಾಲ್ಕು ಭಾಗಗಳೂ ಮಾರುಕಟ್ಟೆಯನ್ನು ಸೇರಿದುವು. ಒಂದೊಂದು ಭಾಗದ ಐದು ಸಾವಿರ ಪ್ರತಿಗಳನ್ನು ಅಚ್ಚಿಸಲಾಗಿತ್ತು. ಕೆಲವೇ ತಿಂಗಳುಗಳಲ್ಲಿ ಪ್ರತಿಗಳು ಮಾರಾಟವಾಗಿ ಬಿಡುತ್ತಿದ್ದುವು. ಆ ದಿನಗಳಲ್ಲಿ ನಮ್ಮ ನಾಡಿನಲ್ಲಿ ಸಾಕಷ್ಟು ಹಣವಿತ್ತು. ಮೊದಲ ಮಹಾಯುದ್ಧದ ಬಳಿಕ ಸಣಬಿನ ಬೆಲೆ ಹೆಚ್ಚಿದ್ದುದೇ ಇದಕ್ಕೆ ಕಾರಣವಾಗಿತ್ತು. ಬಂಗಾಳ ಸೆಣಬಿನ ಬೆಳೆಗೆ ಹೆಸರಾಗಿತ್ತು. ಹೆಚ್ಚಿನ ಪ್ರಮಾಣದ ಹಣದಿಂದಾಗಿ, ಜನರ ಜೀವನ ಮಟ್ಟವೂ ಮೇಲೇರತೊಡಗಿತ್ತು. ಗಾಜಿನ ಕುಪ್ಪಿಗೆ ಬದಲಾಗಿ ಹರಿಕೇನ್ ಲಾಟೀನುಗಳು ಬಳಕೆಗೆ ಬಂದಿದ್ದುವು. ಹುಲ್ಲು ಛಾವಣಿಗೆ ಬದಲಾಗಿ ತಗಡಿನ ಹಾಳೆಗಳ ಛಾವಣಿ ಕಾಣಿಸಿಕೊಳ್ಳತೊಡಗಿತ್ತು. ಹೀಗಾಗಿ ಜನರು ಪುಸ್ತಕಗಳನ್ನೂ ಕೊಳ್ಳತೊಡಗಿದ್ದರು. ಓದುವ ಆಸೆ ಇತರ ಕಡೆಗಳಿಗಿಂತಲೂ ಬಂಗಾಳದಲ್ಲಿ ಯಾವಾಗಲೂ ಹೆಚ್ಚಾಗಿಯೇ ಇದೆಯಲ್ಲವೆ!

ಈ ಅಭೂತಪೂರ್ವ ಯಶಸ್ಸಿನಿಂದ ಪ್ರಚೋದಿತರಾದ ವಸುಮತಿ ಸಾಹಿತ್ಯ ಮಂದಿರದ ಒಡೆಯರು ಬಿಡಿಬಿಡಿಯಾಗಿ ಈ ಕೃತಿಗಳನ್ನು ಹೊರತರಲೂ ಅನುಮತಿ ಕೊಡಬೇಕೆಂದು ಶರತ್‌ಚಂದ್ರರನ್ನು ಒತ್ತಾಯಿಸಿದರು. ಆದರೆ, ಅದಕ್ಕೆ ಶರತ್‌ಚಂದ್ರರು ಏನೂ ಮಾಡಿದರೂ ಒಪ್ಪಿಗೆ ಕೊಡಲಿಲ್ಲ. "ಬಾಳಿನ ಆ ಮೊದಲ ಹಂತದಲ್ಲಿ ಹರಿದಾಸ್ ಅವರು ನನಗೆ ನೆರವಾಗಿದ್ದಾರೆ. ಈಗ ನಾನು ಅವರಿಂದ ನನ್ನ ಪುಸ್ತಕಗಳನ್ನು ಹಿಂತೆಗೆದುಕೊಳ್ಳಲಾರೆ. ವಸುಮತಿ ಪ್ರಕಾಶನದವರು ಸಮಗ್ರ ಸಂಪುಟವನ್ನು ಮಾತ್ರ ಅಚ್ಚಿಸಬಹುದು. ಬಿಡಿ ಪುಸ್ತಕಗಳನ್ನು ಹರಿದಾಸ್ ಅವರೇ ಅಚ್ಚಿಸಬೇಕು" ಎಂದು ಹೇಳಿದರು.

---

1 20 ಅಕ್ಟೋಬರ್ 1919.

2. ಎರಡನೆಯ ಭಾಗ: 20 ಜನವರಿ 1920; ಮೂರನೆಯ ಭಾಗ: 18 ಜೂನ್ 1920; ನಾಲ್ಕನೆಯ ಭಾಗ: 25 ಸೆಪ್ಟೆಂಬರ್ 1920.

ಹೊಸ ಪ್ರಕಾಶಕರಿಂದ ಅವರಿಗೆ ಪ್ರತಿವರ್ಷವೂ ಎಂಟು ಸಾವಿರ ರೂಪಾಯಿಗಳಷ್ಟು ಸಂಭಾವನೆ ದೊರೆಯುತೊಡಗಿತು. ಹಿಂದಿನ ಪ್ರಕಾಶಕರು ಪ್ರತಿ ವರ್ಷವೂ ಕೊಡುತ್ತಿದ್ದ ಆರು ಸಾವಿರ ರೂಪಾಯಿಗಳ ಸಂಭಾವನೆಯಲ್ಲೂ ಯಾವುದೇ ಕಡಿತ ಉಂಟಾಗಲಿಲ್ಲ. ಬಾಲ್ಯ ಕಾಲದಲ್ಲಿ ಪರೀಕ್ಷಾ ಶುಲ್ಕವನ್ನು ಒಂದು ಗೂಡಿಸುವುದೂ ಸಾಧ್ಯವಾಗದೆ ಹೋಗಿದ್ದಂಥ ಹಾಗೂ ಹೊಟ್ಟೆಯ ಪಾಡಿಗಾಗಿ ನೌಕರಿಯನ್ನು ಅರಸಿ ಯೌವನ ಕಾಲವನ್ನು ವ್ಯರ್ಥಗೊಳಿಸಿದ್ದಂಥ ಶರತ್‌ಚಂದ್ರರು ಈಗ ಶ್ರೀಮಂತರಾಗಿ ಬಿಟ್ಟಿದ್ದರು. ಮೂರು-ನಾಲ್ಕು ವರ್ಷಗಳ ಹಿಂದಷ್ಟೇ ಮಾಹೆಯಾನಾ ಒಂದು ನೂರು ರೂಪಾಯಿಗಳನ್ನು ಗಳಿಸಲು ಅವರು ಒದ್ದಾಡಬೇಕಾದ ಪರಿಸ್ಥಿತಿ ಇತ್ತು. ಆದರೆ, ಈಗ ಅವರಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗಳಿಗಿಂತಲೂ ಹೆಚ್ಚು ಹಣ ದೊರೆಯುತೊಡಗಿತ್ತು. ಇಷ್ಟೊಂದು ಹಣ ಕೈಸೇರಿದರೂ, ತಮ್ಮ ಹಿಂದಿನ ಬಡತನದ ಸ್ಥಿತಿಯನ್ನು ಮರೆಯಲಾರದೆ ಹೋದರು. ಬಡತನದ ಬವಣೆಯನ್ನು ಅವರು ಸ್ವತಃ ಸಹಿಸಿದ್ದರು, ಅನುಭವಿಸಿದ್ದರು. ಆದ್ದರಿಂದ ಇಷ್ಟೊಂದು ಹಣ ಕೈಸೇರತೊಡಗಿದಾಗಲೂ ಅವರು ಅದನ್ನು ಕೂಡಿಡುವ ಪ್ರಯತ್ನವನ್ನೆಂದೂ ಮಾಡಲಿಲ್ಲ, ಗೆಳೆಯರಿಗೆ ನೆರವಾಗಲು ಅವರು ಸದಾ ತುದಿಗಾಲ ಮೇಲೆ ನಿಂತಿರುತ್ತಿದ್ದರು. ಈಗ ನೆರೆಹೊರೆಯ ಕಡುಬಡವರತ್ತಲೂ ಅವರ ದೃಷ್ಟಿ ಹರಿಯಿತು. ಒಮ್ಮೆ ಎಂದಿನಂತೆ ಕಥೆಗಾಗಿ ಒತ್ತಾಯಿಸಲು 'ಭಾರತ ವರ್ಷ' ಪತ್ರಿಕೆಯ ಸಂಪಾದಕರಾಗಿದ್ದ ಜಲಧರ ಸೇನ್ ಅವರು ಶರತ್‌ಚಂದ್ರರ ಮನೆಗೆ ಬಂದಿದ್ದರು. ನೋಡಿದರೆ, ಮನೆಯಲ್ಲಿನ ಎಲ್ಲ ಮೂಲೆಗಳಲ್ಲೂ ಪಂಚೆಗಳು ಮತ್ತು ಸೀರೆಗಳು ಹರಡಿಕೊಂಡಿವೆ. ಸೇವಕ ಅವುಗಳನ್ನು ಕಟ್ಟಿಡುವ ಪ್ರಯತ್ನ ಮಾಡುತ್ತ ಇದ್ದಾನೆ. ಅವುಗಳ ನಡುವೆ ಅವರು ಕುರ್ಚಿಯ ಮೇಲೆ ಕುಳಿತಿದ್ದಾರೆ. ಒಂದಾಣೆ, ಎರಡಾಣೆ ಮತ್ತು ನಾಲ್ಕಾಣೆಗಳನ್ನು ಎಣಿಸಿ ಎಣಿಸಿ ಗುಡ್ಡೆಗುಡ್ಡೆಯಾಗಿ ಇಡುತ್ತಿದ್ದಾರೆ. ಆಶ್ಚರ್ಯಚಕಿತರಾಗಿ ಸೇನ್ ಕೇಳಿದರು: "ಇದೇನು ಮಾಡುತ್ತಿದ್ದೀಯ, ಶರತ್!"

ಶರತ್‌ಚಂದ್ರರು ಉತ್ತರಿಸಿದರು: "ಅಣ್ಣಯ್ಯ, ಹತ್ತು ಘಂಟೆಯ ರೈಲಿನಲ್ಲಿ ಅಕ್ಕನ ಮನೆಗೆ ಹೋಗುತ್ತಿದ್ದೇನೆ."

ಸೇನ್ ಅವರು ಹೇಳಿದರು: "ಅಲ್ಲೇನೋ ವ್ರತವೋ ಆಚರಣೆಯೋ ನಡೆಯಲಿದೆ ಎಂದು ತೋರುತ್ತದೆ. ಅದಕ್ಕೆಂದೇ ಇಷ್ಟೊಂದು ಬಟ್ಟೆ ಮತ್ತು ಚಿಲ್ಲರೆ ತೆಗೆದುಕೊಂಡು ಹೋಗುತ್ತಿದ್ದೀಯಾ ?"

ಶರತ್‌ಚಂದ್ರರು ಹೇಳಿದರು: "ಇಲ್ಲ ಅಣ್ಣಯ್ಯ. ಅಕ್ಕನ ಮನೆಯಲ್ಲಿ ಅಂಥ ಯಾವ ವ್ರತಾಚರಣೆಯೂ ಇಲ್ಲ."

ಸೇನ್ ಅವರು ಕೇಳಿದರು: "ವ್ರತಾಚರಣೆಯೇನೂ ಇಲ್ಲದಿದ್ದರೆ, ಈ ಸಾಮಾನುಗಳನ್ನೆಲ್ಲ ಏಕೆ ತೆಗೆದುಕೊಂಡು ಹೋಗುತ್ತಿದ್ದೀಯೆ ?"

ಶರತ್‌ಚಂದ್ರರು ನೊಂದ ಮನಸ್ಸಿನಿಂದ ಹೇಳಿದರು: "ಅಣ್ಣಯ್ಯ, ಅಕ್ಕನ ಊರಿನಲ್ಲಿ ಹಾಗೂ ಅದರ ಸುತ್ತಮುತ್ತಲೂ ಬಡವರ ಸ್ಥಿತಿ ಹೇಗಿದೆ ಎಂಬುದು ನಿಮಗೆ ಗೊತ್ತೆ? ಅವರಿಗೆ ತಿನ್ನಲು ಅನ್ನವಿಲ್ಲ, ಹೊದೆಯಲು ಬಟ್ಟೆಯಿಲ್ಲ, ಇಲ್ಲಿರುವ...."

ಇಷ್ಟು ಹೇಳಿ, ಅವರು ಸುಮ್ಮನಾಗಿಬಿಟ್ಟರು. ಕಂಠ ತುಂಬಿ ಬಂದಿತ್ತು; ಕಣ್ಣುಗಳಿಂದ ಕಣ್ಣೀರು ತೊಟ್ಟಿಡತೊಡಗಿತ್ತು.

ಈ ಪರದುಃಖ ಕಾತರತೆಯೇ ಅವರ ಸಾಹಿತ್ಯದಲ್ಲೂ ಮೊಳಗಿದೆ. ಇದರಿಂದಾಗಿಯೇ ಅವರು ಅಷ್ಟೊಂದು ಜನಪ್ರಿಯರಾದರು. 'ಶ್ರೀಕಾಂತ' ಅಲೆಮಾರಿಯಾಗಿದ್ದರೂ, ದುಃಖದ ಕಷ್ಟಕೋಟಲೆಗಳ ನಡುವೆಯೇ ತನ್ನ ದಾರಿಯನ್ನು ಕಂಡುಕೊಳ್ಳುತ್ತಾನೆ; ಅನ್ಯಾಯವಾಗುತ್ತಿರುವುದನ್ನು ಕಂಡಾಗ ಅವನ ಹೃದಯ ಕುದಿದೇಳುತ್ತದೆ' ಎಂಬುದು ಅವರ ಓದುಗರಿಗೆ ಚೆನ್ನಾಗಿ ಗೊತ್ತಾಗಿ ಬಿಟ್ಟಿತ್ತು. ಅವರ ಆಲೋಚನೆಗಳ ಅಂತರಾಳದಲ್ಲಿ ಹೇಗೋ ಅವರ ಜೀವನದಲ್ಲಿಯೂ ಹಾಗೆಯೇ ನೋವಿನ ಹೊನಲು ಹರಿಯುತ್ತಲೇ ಬಂದಿತ್ತು.

ತಮಗಾಗಿ ಅವರು ಹಣವನ್ನು ಖರ್ಚು ಮಾಡುತ್ತಲೇ ಇರಲಿಲ್ಲವೆಂದಲ್ಲ. ಈಗ ಅವರ ಜೀವನದ ಮಟ್ಟವೂ ಮೇಲೇರಿಬಿಟ್ಟಿತ್ತು. ಸಮೃದ್ಧಿಯೊಂದಿಗೆ ಸೌಂದರ್ಯ ಪಿಪಾಸೆ ಮತ್ತಷ್ಟು ತೀವ್ರವಾಗಿ ಪರಿಣಮಿಸಿತ್ತು. ಅಕ್ಕನ ಊರಿನ ಹತ್ತಿರ 'ಪಾಣಿತ್ರಾಸ' ಎಂಬಲ್ಲಿ ಸಾವಿರದ ಒಂದು ನೂರು ರೂಪಾಯಿಗಳನ್ನು ಕೊಟ್ಟು ಮನೆಗಾಗಿ ನಿವೇಶನವನ್ನು ಕೊಂಡರು, ಅಂತೆಯೇ, ಅಂದಿನ ತುಂಬ ದುಬಾರಿ ಷೂ ಎನಿಸಿದ್ದ ರ್‍ಯಾಕ್ ಷೂವನ್ನೂ, ಕೊಂಡುಕೊಂಡರು.[1] ಅಂದು ಅವರ ಮಾವ ಉಪೇಂದ್ರನಾಥ ಗಂಗೂಲಿ ಅವರು ಅವರನ್ನು ನೋಡಿಕೊಂಡು ಹೋಗಲೆಂದು ಬಂದಿದ್ದರು. ಚಹ, ಹರಟೆ, ಊಟ-ತಿಂಡಿ, ವಿಶ್ರಾಂತಿ - ಇವೆಲ್ಲ ಎಂದಿನಂತೆಯೇ ನಡೆದುವು. ಆದರೆ, ಇದೆಲ್ಲ ಆದ ಬಳಿಕ ಶರತ್‌ಚಂದ್ರರು ಒಮ್ಮೆಗೇ ಹೇಳಿದರು: "ನಡಿ ಉಪೀನ್, ಇವತ್ತು ಸ್ವಲ್ಪ ವ್ಯಾಪಾರ ಮಾಡಬೇಕಾಗಿದೆ."

ಉಪೇಂದ್ರನಾಥರು ಕೇಳಿದರು: 'ಏನು ವ್ಯಾಪಾರ ?'

ಶರತ್‌ಚಂದ್ರರು ಹೇಳಿದರು: "ವೈಟ್‌ನ ಅಂಗಡಿಯಲ್ಲಿ ಒಂದು ಜೊತೆ ರ್‍ಯಾಕ್ ಷೂ ಕೊಂಡುಕೊಳ್ಳಬೇಕು. ಅದು ಸುಖಕರವಾಗಿರುವಷ್ಟೇ ಗಟ್ಟಿಮುಟ್ಟಾಗಿಯೂ ಇದೆಯೆಂದು ಹೇಳುತ್ತಾರೆ."

ಆ ಬೂಡ್ಸಿಗೆ ಮುವ್ವತ್ತೆರಡೂವರೆ ರೂಪಾಯಿ ಬೆಲೆ ಇತ್ತು. ಇದರಿಂದಲೇ ಅದು ಹೇಗಿತ್ತು ಹಾಗೂ ಎಷ್ಟು ಉಪಯೋಗಿಯಾಗಿತ್ತು ಎಂಬುದನ್ನು ಊಹಿಸಿ ಕೊಳ್ಳಬಹುದು. ಅದನ್ನು ಕೊಳ್ಳಲೆಂದೇ ಮಾವನ ಜೊತೆಯಲ್ಲಿ ಸ್ಟೀಮರ್‌ನಲ್ಲಿ ಕಲ್ಕತ್ತೆಗೆ ಹೊರಟರು. ಆಗ ಅವರ ಕಾಲಿನಲ್ಲಿ ಹರಿದುಹೋಗಿದ್ದ ಎಕ್ಕಡಗಳಿದ್ದುವು. ಅವು ಹೊಸವಾಗಿದ್ದಾಗ ಅವುಗಳ ಬಣ್ಣ ಹೇಗಿದ್ದಿರಬಹುದೆಂಬುದರ ಬಗ್ಗೆ ಏನನ್ನೂ ಹೇಳಲು ಸಾಧ್ಯವಿಲ್ಲದಂತಾಗಿತ್ತು. ಈಗಂತೂ ಅದು ಇಲ್ಲಿ ಕಪ್ಪಾಗಿ, ಅಲ್ಲಿ ಬಾದಾಮಿ ಬಣ್ಣವಾಗಿ ಕಾಣುತ್ತಿತ್ತು. ದೊಡ್ಡ ಮನೆಗಳಲ್ಲಿ ಇಂಥ ಚಪ್ಪಲಿಗಳನ್ನು ಶೌಚಗೃಹಕ್ಕೆ ಹೋಗಲು ಮಾತ್ರ ಬಳಸುತ್ತಾರೆ. ನಡೆದು ಬಂದಿದ್ದರಿಂದ ಚಪ್ಪಲಿಗಳ ಮೇಲೆ ಮಾತ್ರವಲ್ಲದೆ ಕಾಲಿನ ಮೇಲೂ ಧೂಳು ಕವಿದುಕೊಂಡಿತ್ತು. ಧೂಳಿನ ಕಾಲುಚೀಲವನ್ನೇ ಧರಿಸಿಕೊಂಡಿದ್ದಂತೆ ತೋರುತ್ತಿತ್ತು. ಗಂಗಾನದಿಯನ್ನು ದಾಟಿ ಮಾತನಾಡುತ್ತ ಆಡುತ್ತ ಅಂಗಡಿಯ ಬಳಿ ಬಂದು ಸೇರಿದಾಗ ಅವರ ಮಾವ

1. 1920ರ ಆರಂಭದಲ್ಲಿ

ಹೀಗೆಂದರು: "ಶರತ್, ನಿನ್ನ ಈ ಕಾಲುಗಳನ್ನು ನೋಡಿದರೆ ಅಂಗಡಿಯವನು ನಿನಗೆ ಆ ದುಬಾರಿ ಷೂಗಳನ್ನು ತೋರಿಸುವುದೇ ಇಲ್ಲ."

ಶರತ್‌ಚಂದ್ರರು ಕೊಂಚ ಉದ್ವಿಗ್ನರಾದರು. ಮತ್ತೆ ಮತ್ತೆ ಕಾಲು ಕೊಡಹುತ್ತ, ಅವುಗಳನ್ನು ಒರಸುತ್ತ ಇದ್ದರು. ಆದರೂ ವಿಶೇಷ ವ್ಯತ್ಯಾಸವೇನೂ ಉಂಟಾಗಲಿಲ್ಲ. ಕೊನೆಗೆ ಹೀಗೆಂದರು: "ನಡಿ, ಒಳಗೆ ಹೋಗೋಣ. ನಮ್ಮ ಹತ್ತಿರ ಹಣವಂತೂ ಇದೆ. ನಾಲ್ಕಾರು ನೋಟುಗಳನ್ನು ಮುಖದ ಮೇಲೆ ಎಸೆದು ಹೇಳೋಣ - 'ತೊಗೋ ಇಲ್ಲಿದೆ ದುಡ್ಡು, ಕಾಲನ್ನೇಕೆ ನೋಡುತ್ತೀಯೆ ?' "

ಆದರೆ, ಅಂಗಡಿಯ ಒಳಗೆ ಹೋದಮೇಲೆ ಅವರಿಗೆ ಕೊಂಚವೂ ಪೇಚಾಟವಾಗಲಿಲ್ಲ. ಅದು ವಿದೇಶೀಯರ ಅಂಗಡಿಯಾಗಿತ್ತು. ದೇಶೀಯರ ಅಂಗಡಿಯಾಗಿದ್ದರೆ, "ಇವತ್ತು ಬೇಡಿ, ಇನ್ನೆಂದಾದರೂ ಬನ್ನಿ" ಎಂದು ಖಂಡಿತವಾಗಿಯೂ ಹೇಳಿಬಿಡುತ್ತಿದ್ದರು. ಅಂದಿನ ದಿನಗಳಲ್ಲಿ ಚೀಣೀಯರ ಅಂಗಡಿಗಳಲ್ಲಿಯೂ ಇಂಥದೇ ದುಃಸ್ಥಿತಿ ಇತ್ತು. ಬಂಗಾಳಿಗಳು ತಮ್ಮ ತಾಯ್ನುಡಿಯಲ್ಲಿ ಅವನನ್ನು ಬಯ್ದುಕೊಂಡು ಸಂತೋಷಪಟ್ಟುಕೊಳ್ಳುತ್ತಿದ್ದರು, ರ್‍ಯಾಕ್ ಷೂ ಹಾಕಿಕೊಂಡಿರುವ ಯಾವುದೇ ವ್ಯಕ್ತಿಗೆ ದೊರೆಯಬಹುದಾಗಿದ್ದಂಥ ಸ್ವಾಗತವೇ ಇವರಿಗೂ ದೊರೆಯಿತು. ಎಷ್ಟಾದರೂ ಆಂಗ್ಲರು ವ್ಯಾಪಾರಿಗಳಲ್ಲವೆ! ಕಾಲಿನಲ್ಲಿದ್ದ ಧೂಳಾಗಲೀ ಹರಿದಿದ್ದ ಎಕ್ಕಡವಾಗಲೀ ಆ ಆಂಗ್ಲ ವ್ಯಾಪಾರಿಯನ್ನು ಬೆಚ್ಚಿಸಲಿಲ್ಲ. ಕಂಕುಳಲ್ಲಿ ಎಂಟು-ಹತ್ತು ಜೊತೆ ಬೂಡ್ಸುಗಳನ್ನು ತುರುಕಿಕೊಂಡು ಅವನು ಕ್ಷಣಮಾತ್ರದಲ್ಲಿ ಹಾಜರಾದ. ಆಮೇಲೆ, ಅವರ ಮುಂದೆ ಮಂಡಿಯೂರಿ ಕುಳಿತುಕೊಂಡು ಒಂದೊಂದು ಜೊತೆಯನ್ನು ಕಾಲಿಗೆ ಹಾಕಿ ಸರಿಹೊಂದುತ್ತದೆಯೋ ಎಂಬುದನ್ನು ಪರೀಕ್ಷಿಸತೊಡಗಿದ. ಶರತ್‌ಚಂದ್ರರಿಗೆ ಯಾವುದೂ ಯಾವ ರೀತಿಯಲ್ಲಿಯೂ ತೃಪ್ತಿಯನ್ನು ತಂದುಕೊಡಲಿಲ್ಲ. ಅವನು ಮತ್ತೆ ನಾಲ್ಕೈದು ಜೊತೆ ಬೂಡ್ಸುಗಳನ್ನು ತೆಗೆದುಕೊಂಡು ಬಂದ. ಕೊನೆಗೆ ಒಂದು ಜೊತೆ ಶರತ್‌ಚಂದ್ರರಿಗೆ ತೃಪ್ತಿಯನ್ನುಂಟು ಮಾಡಿತು. ಅದನ್ನು ಹಾಕಿಕೊಂಡು ಅವರು ಸಂತೋಷಪಟ್ಟರು. ಆ ವ್ಯಾಪಾರಿ ಅದರ ಲೇಸನ್ನು ಚೆನ್ನಾಗಿ ಕಟ್ಟಿ ಹೇಳಿದ: "ಸ್ವಲ್ಪ ಓಡಾಡಿ ನೋಡಿ ನನಗೇನೋ ಈ ಜೊತೆ ಸರಿಯಾಗಿರುವಂತೆ ತೋರುತ್ತದೆ."

ಶರತ್‌ಚಂದ್ರರು ಅವನು ಹೇಳಿದಂತೆಯೇ ಮಾಡಿದರು. ಆಮೇಲೆ ಹೇಳಿದರು: "ಇದೆಂಥ ಚಮತ್ಕಾರ! ಬೂಡ್ಸನ್ನು ಹಾಕಿಕೊಂಡಿದ್ದೇನೆ ಎಂದು ಅನ್ನಿಸುತ್ತಲೇ ಇಲ್ಲ."

ಹೀಗೆಂದು ಹೇಳುತ್ತ ಅವರು ತಮ್ಮ ಪರ್ಸಿನಿಂದ ಹತ್ತರ ನಾಲ್ಕು ನೋಟುಗಳನ್ನು ಹೊರತೆಗೆದರು. ಅದನ್ನು ತೆಗೆದುಕೊಂಡು ಆ ವ್ಯಾಪಾರಿ ಒಂದೆರಡು ಕ್ಷಣಗಳಲ್ಲಿಯೇ ನಗದು ಪಾವತಿ ಮೆಮೋ ಮತ್ತು ಉಳಿದ ಏಳೂವರೆ ರೂಪಾಯಿ ಚಿಲ್ಲರೆಯನ್ನು ತೆಗೆದುಕೊಂಡು ಬಂದ. ಶರತ್‌ಚಂದ್ರರು ಎದ್ದು ನಿಂತು, ಹೇಳಿದರು: "ಇನ್ನು ಹೋಗೋಣವೆ, ಮಾವ ?"

ಆ ಉದ್ಯೋಗಿ ಕೇಳಿದ: "ನಿಮ್ಮ ಚಪ್ಪಲಿಗಳನ್ನು ಪೆಟ್ಟಿಗೆಯಲ್ಲಿ ಇಟ್ಟುಕೊಡಲೆ ?"

"ಇಲ್ಲ, ಅದರ ಅಗತ್ಯವೇನೂ ಇಲ್ಲ."

ಹೀಗೆಂದು ಹೇಳಿ ಅವರು ಅಂಗಡಿಯಿಂದ ಹೊರಬಂದರು. ಹಳೆಯ ಚಪ್ಪಲಿ

ಮತ್ತು ಹೊಸ ಪೆಟ್ಟಿಗೆ - ಒಂದು ಇನ್ನೊಂದರ ಮುಖವನ್ನು ನೋಡುತ್ತ ಅಂಗಡಿಯಲ್ಲೇ ಬಿದ್ದಿದ್ದುವು. ಬೂಡ್ಸಿನ ಪೆಟ್ಟಿಗೆಯನ್ನು ಹೊರುವ ಕಷ್ಟದಿಂದ ಪಾರಾಗಲು ಅವರು ಹಳೆಯ ಚಪ್ಪಲಿಯನ್ನು ಅಲ್ಲಿಯೇ ಬಿಟ್ಟು, ಹೊಸ ಬೂಡ್ಸನ್ನು ಹಾಕಿಕೊಂಡು ಹೊರಟುಬಿಟ್ಟರು.

ಈ ಬದಲಾವಣೆ ಬೂಡ್ಸಿನ ವ್ಯಾಪಾರಕ್ಕೆ ಮಾತ್ರವೇ ಸೀಮಿತವಾಗಿರಲಿಲ್ಲ. ಅವರ ಎಲ್ಲ ಉಡುಗೆ-ತೊಡುಗೆಗಳಲ್ಲಿ, ರೂಪಾಲಂಕಾರಗಳಲ್ಲಿ ಬದಲಾವಣೆ ಉಂಟಾಗಿತ್ತು. ಬಟ್ಟೆಬರೆಗಳ ವಿಷಯದಲ್ಲಿ ಯಾವುದೇ ಕಾಳಜಿಯೂ ಇರದಿದ್ದ ಹಿಂದಿನ ಹಳ್ಳಿಯ ಶರತ್‌ಚಂದ್ರರು ಅವರಾಗಿರಲಿಲ್ಲ. ಇಂದಿನ ಅವರ ವೇಷ-ಭೂಷಣಗಳು ಸಂಪೂರ್ಣವಾಗಿ ಭಿನ್ನವಾಗಿದ್ದುವು. ಕೆದರಿದ ತಲೆ, ಗುಂಡಿಗಳಿಲ್ಲದ ಅಂಗಿ, ಭುಜದ ಮೇಲಿನ ಕೊಳೆಯಾದ ಅಂಗವಸ್ತ್ರ ಬಿದುರಿನ ಕೋಲಿನ ಕೊಡೆ, ಕಾಲುಗಳಲ್ಲಿ ಹರಿದ ಚಪ್ಪಲಿ ಈ ವೇಷದ ಶರತ್‌ಗೆ ಬದಲಾಗಿ ಈಗ ಸ್ನಿಗ್ಧತೆಯನ್ನು ಹೊರಸೂಸುವ ಮುಖದ ಡಬ್ಬಲ್-ಬ್ರೆಸ್ಟ್‌ನ ಮಿಂಚುವ ಅಂಗಿಯ, ಬೆಲೆಬಾಳುವ ಸರ್ಜ್ ಕೋಟಿನ, ಚೆಲುವೆ ಮಾಡಿದ ಶಾಂತಿಪುರಿ ಪಂಚೆಯ, ಕಾಲುಗಳಲ್ಲಿ ಧರಿಸಿದ ಕೆಂಪು ಚಪ್ಪಲಿಯ ಅಥವಾ ಲೇಸು ಕಟ್ಟಿದ ಬೂಡ್ಸಿನ, ಕೈಯಲ್ಲಿ ಬೆಳ್ಳಿ ಹಿಡಿಯ ಬೆತ್ತವನ್ನು ಹಿಡಿದಿರುವ, ಕಣ್ಣುಗಳಿಗೆ ಚಿನ್ನದ ಚೌಕಟ್ಟಿನ ಕನ್ನಡಕವನ್ನು ಹಾಕಿಕೊಂಡಿರುವ ಹಾಗೂ ಗಡ್ಡವನ್ನು ಬಿಟ್ಟಿರುವ ಶರತ್‌ಚಂದ್ರರನ್ನು ಕಾಣಬಹುದಾಗಿತ್ತು.

ಆದರೆ, ಈ ವೇಷ-ಭೂಷಣಗಳು ಅವರ ಸ್ವಭಾವದ ಉಚ್ಛೃಂಖಲತೆಯನ್ನು ಹಾಗೂ ಶರೀರದ ಆರೋಗ್ಯವನ್ನು ಸರಿಪಡಿಸಬಲ್ಲವಾಗಿದ್ದುವೆ? ಈಗಲೂ ಸ್ವಲ್ಪ ಅಪಥ್ಯ ಮಾಡಿದರೂ ಜ್ವರ ಬಂದು ಬಿಡುತ್ತಿತ್ತು. ಆಗಿಂದಾಗ್ಗೆ ಇತರ ರೋಗಗಳೂ ಬಂದೆರಗುತ್ತಿದ್ದುವು. ಒಂದು ದಿವಸ ಬಲಗಾಲಿನ ಮಂಡಿಯ ಕೆಳಗೆ ಅಸಾಧ್ಯವಾದ ಉರಿ ಮತ್ತು ನವೆ ಉಂಟಾಗಿ ಅವರು ತುಂಬ ಉದ್ವಿಗ್ನರಾಗಿದ್ದರು. ಎಕ್ಸಿಮಾ ಅಂಟಿಕೊಂಡು ಬಿಟ್ಟಿದೆಯೋ ಎಂಬ ಅನುಮಾನ ಉಂಟಾಯಿತು. ಬೆರಿ-ಬೆರಿ ರೋಗ ತಟ್ಟಿದ ಬಗಗೂ ಶಂಕೆ ಉಂಟಾಯಿತು. ಈ ರೋಗ ಯಾವುದು ಏನು ಎಂಬುದು ಅವರಿಗೆ ಗೊತ್ತೇ ಇರಲಿಲ್ಲ. ಟಿಂಕ್ಚರ್-ಅಯೋಡಿನ್ ಹಚ್ಚಲಾರಂಭಿಸಿದರು. ಅನೇಕ ಬಾರಿ ಇದನ್ನು ಲೇಪಿಸಿದ್ದರಿಂದ, ಅದು ಉಗ್ರರೂಪವನ್ನು ಧರಿಸಿತು. ವೈದ್ಯರು ಅವರನ್ನು ತರಾಟೆಗೆ ತೆಗೆದುಕೊಂಡರು: "ನಿಮಗೆ ಸ್ವಲ್ಪವೂ ತಾಳ್ಮೆ ಇಲ್ಲವೆ? ಕಾಸ್ಟಿಕ್ ಅಥವಾ ಆಸಿಡ್-ಗೀಸಿಡ್, ಯಾವುದನ್ನು ಬೇಕಾದರೂ ನೀವು ಹಚ್ಚಿಕೊಳ್ಳುವುದಾದರೆ, ಇದೋ ನಾನು ಇಲ್ಲಿಂದ ಹೊರಟೆ" ಎಂದರು.

ಆಮೇಲೆ ವೈದ್ಯರು ಶಾಂತರಾಗಿ, ಔಷಧ ಲೇಪನ ಹಾಗೂ ಮಾಲೀಸುಗಳತ್ತ ಗಮನ ಹರಿಸಿದರು. ಶರತ್‌ಚಂದ್ರರು ಎರಡು ಕಾಲುಗಳನ್ನೂ ದಿಂಬಿನ ಮೇಲಿಟ್ಟು ಸದ್ದಿಲ್ಲದೆ ಮಲಗಿಕೊಂಡರು. ಈ ಘಟನೆಯನ್ನು ಉಲ್ಲೇಖಿಸುತ್ತಾ ಅವರು ತಮ್ಮ ಶಿಷ್ಯೆಯೊಬ್ಬಳಿಗೆ ಸುದೀರ್ಘ ಪತ್ರವೊಂದನ್ನು ಬರೆದರು. ಈ ಪತ್ರದಲ್ಲಿ ಅವರು ತಮ್ಮ ಆರೋಗ್ಯವನ್ನು ಮಾತ್ರವಲ್ಲದೆ, ಅನೇಕ ಸಾಮಾಜಿಕ ವಿಚಾರಗಳನ್ನೂ ಕುರಿತು ಚರ್ಚಿಸಿದ್ದಾರೆ. ಜೊತೆಗೆ, ಇದು ಅವರ ದಾಂಪತ್ಯ ಜೀವನದ ಮೇಲೂ ಬೆಳಕು ಚೆಲ್ಲುತ್ತದೆ. "ನಾನೆಂದೂ ಆಮ್ಲತೆಯ ರೋಗಿಯಾಗಿರಲಿಲ್ಲ. ಅದೆಷ್ಟು ಕಮ್ಮಿ ಊಟ

ಮಾಡುತ್ತೇನೆಂದರೆ, ತಾನೂ ಎಲ್ಲಿ ಹಸಿವಿನಿಂದ ಸಾಯುಬೇಕಾಗುತ್ತದೋ ಎಂದು ಹೆದರಿ, ಅದು ನನ್ನ ಹತ್ತಿರವೇ ಸುಳಿಯುವುದಿಲ್ಲ. ಒಂದು ದಿವಸ ಮನೆಯಲ್ಲಿಯೇ ಮಾಡಿಗ 'ಸಂದೇಶ'[1]ವನ್ನು ಬಲವಂತವಾಗಿ ತಿನ್ನಿಸಿಬಿಟ್ಟರು. ಇಂದೂ ಅದರ ತೇಗು ಬರುತ್ತಿದೆ. ನಾನಂತೂ ಸುವಿಖ್ಯಾತ ಸೋಮಾರಿ. ಅಗಿದು ತಿನ್ನಬೇಕಾಗುತ್ತದಲ್ಲ ಎಂಬ ಭಯದಿಂದ ಯಾವುದೇ ವಸ್ತುವನ್ನೂ ಬಡಪೆಟ್ಟಿಗೆ ಬಾಯಿಗೆ ಹಾಕಿ ಕೊಳ್ಳುವುದಿಲ್ಲ. ನಾನು ಈ ಅತ್ಯಾಚಾರವನ್ನು ಹೇಗೆ ಸಹಿಸಲಿ? ಆದರೆ, ಮನೆಯ ಜನರಿಗೆ ಇದು ಅರ್ಥವೇ ಆಗುವುದಿಲ್ಲ. ಸರಿಯಾಗಿ ಊಟಮಾಡದಿರುವುದರಿಂದಲೇ ನಾನು ಸಣಕಲಾಗಿ ಇದ್ದೇನೆಂದು ಅವರು ಭಾವಿಸಿದ್ದಾರೆ, ಚೆನ್ನಾಗಿ ಊಟ ಮಾಡಿದರೆ, ಅವರಂತೆಯೇ ನಾನೂ ಭಾರಿ ಆನೆಯಂತಾಗಿ ಬಿಡಬಹುದೆಂದು ನಂಬಿದ್ದಾರೆ.

"ದಿವಂಗತ ಗಿರೀಶ್ ಬಾಬೂ ಅವರು ತಮ್ಮ 'ಅಬೂ ಹಸನ್'ನಲ್ಲಿ ಲಕ್ಷಕ್ಕೊಂದು ಎಂಬಂಥ ಮಾತನ್ನು ಹೇಳಿದ್ದಾರೆ: 'ಅಬಲೆಯರು ತುಂಬ ವಿವಶರಾಗಿರುತ್ತಾರೆ; ಸತ್ತರೂ ಪರವಾಗಿಲ್ಲವೆಂದು ತಿಂದು ಹಾಕುತ್ತಾರೆ,' ಹೆಣ್ಣು ಜಾತಿಯನ್ನು ಅವರು ಚೆನ್ನಾಗಿ ಗುರುತಿಸಿದ್ದರು. ಇಂದಿಗೆ ಇಪ್ಪತ್ತು ವರ್ಷಗಳಿಂದಲೂ ಹಿಂದಿನಿಂದಲೂ ನಾವು ಕೇವಲ ಊಟ-ತಿಂಡಿಗಳಿಗಾಗಿಯೇ ಬಡಿದಾಡುತ್ತ ಬಂದಿದ್ದೇವೆ. 'ಅವರು ಸರಿಯಾಗಿ ಊಟ ತಿಂಡಿ ಮಾಡುವುದಿಲ್ಲ, ಊಟ-ತಿಂಡಿ ಮಾಡದೆ ಸಣ್ಣಗಾಗಿ ಬಿಟ್ಟಿದ್ದಾರೆ. ಈ ಮನೆವಾರ್ತೆ ಮತ್ತು ಅಡಿಗೆ ಇರುವುದೆಲ್ಲ ಯಾರಿಗಾಗಿ? ಕಣ್ಣುಗಳು ಕೊಂಡೊಯ್ಯುತ್ತ ಹೋಗಿ ವಿರಾಗಿಣಿಯಾಗಿ ಬಿಡುತ್ತೇನೆ' ಎಂದೆಲ್ಲ ಹೇಳುತ್ತಲೇ ಬಂದಿದ್ದಾರೆ.

"ನಾನೆನ್ನುತ್ತೇನೆ: 'ಅಮ್ಮಾ ತಾಯಿ! ವಿರಾಗಿಣಿಯಾಗುವುದಿದ್ದರೆ, ಬೇಗ ಆಗಿಬಿಡು. ನೀನಾದರೋ ನನ್ನನ್ನು ಬೆದರಿಸಿಯೇ ಕಡ್ಡಿಯಂತೆ ಒಣಗಿಸಿಬಿಡುತ್ತಿದ್ದೀಯೆ.'

"ವಾಸ್ತವವಾಗಿ ಯಾರೂ ನನ್ನ ದುಃಖವನ್ನು ಕಣ್ಣುಬಿಟ್ಟು ನೋಡಲೇ ಇಲ್ಲ. ಎಲ್ಲಿಯಾದರೂ ನಿಜವಾದ ಸುಖ ಎಂಬುದಿದ್ದರೆ ಅಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬನನ್ನು ಊಟ-ತಿಂಡಿ ಮಾಡುವಂತೆ ಇಷ್ಟೊಂದು ಜೋರು-ಜಬರ್ದಸ್ತು ಮಾಡುವುದಿಲ್ಲ ವೆಂದು ನಾನು ಸಾಮಾನ್ಯವಾಗಿ ಆಲೋಚಿಸುತ್ತಿರುತ್ತೇನೆ. ಹಾಗೇನಾದರೂ ಜೋರು-ಜಬರ್ದಸ್ತು ಮಾಡುವುದೇ ನಿಜವಾದರೆ, ನಾನು ನರಕಕ್ಕೆ ಹೋಗಲು ಇಷ್ಟಪಡುತ್ತೇನೆ.

"ಸುಮಾರು ಇಪ್ಪತ್ತು ದಿವಸಗಳ ಹಿಂದೆ, ನಾಯಿಗಳ ಜಗಳವನ್ನು ಬಿಡಿಸಲು ಹೋದಾಗ, ಎಲ್ಲಿಂದಲೋ ಬಂದ ಬೋಳು ನಾಯಿಯೊಂದು ನನ್ನ ಮುಂಗೈಗೆ ಬಾಯಿ ಹಾಕಿಬಿಟ್ಟಿತು. ಆ ದರಿದ್ರ ನಾಯಿ ಎಷ್ಟು ಕೃತಘ್ನವಾಗಿದೆ! ಅದನ್ನು ನನ್ನ 'ಭೇಲು'ವಿನ ಬಾಯಿಂದ ಬಿಡಿಸಲೆಂದೇ ನಾನು ಅಲ್ಲಿಗೆ ಹೋಗಿದ್ದೆ. ಹೆದರಿಕೆಯಿಂದಾಗಿ ಯಾರಿಗೂ ಹೇಳಿರಲಿಲ್ಲ. ಗಾಯವೇನೋ ಒಣಗಿಹೋಗಿತ್ತು. ಆದರೆ, ನೆನ್ನೆಯಿಂದ ನೋವು ಕಾಡುತ್ತಿದೆ. ಮುದುಕನಾಗಿಬಿಟ್ಟಿದ್ದೇನೆ ಎಂಬುದೇ ಸಂತೋಷದ ಸಂಗತಿ. ಅದೆಷ್ಟು ಬಗೆಯ ದುಃಖ ದೈನ್ಯ ಮತ್ತು ಆಪತ್ತು-ವಿಪತ್ತುಗಳ ನಡುವೆ ನಲವತ್ತು ವರ್ಷಗಳನ್ನು ಕಳೆದಿದ್ದೇನೋ! ನಮ್ಮ ವಂಶದಲ್ಲಿ ಯಾರೂ

1 ಬಂಗಾಳದ ಒಂದು ವಿಶಿಷ್ಟ ಸಿಹಿ ತಿಂಡಿ - ಅನುವಾದಕನ ಅಡಿಟಿಪ್ಪಣಿ

ನಲವತ್ತರ ಅಂಚನ್ನು ಸಮೀಪಿಸಿರಲಿಲ್ಲವೆಂದು ಕೇಳಿದ್ದೇನೆ. ಕನಿಷ್ಠ ಪಕ್ಷ ಈ ವಿಷಯದಲ್ಲಿಯಾದರೂ ನಾನು ನನ್ನ ತಂದೆ ತಾತಂದಿರನ್ನು ಮೀರಿಸಿದ್ದೇನೆ. ನನಗೆ ಇನ್ನೇನು ತಾನೆ ಬೇಕು.... ?"[1]

ಸಮಗ್ರ ಕೃತಿ ಸಂಪುಟದ ನಾಲ್ಕು ಭಾಗಗಳ ಜೊತೆಗೆ, ಈ ಅವಧಿಯಲ್ಲಿ 'ಛವಿ'[2] ಎಂಬ ಹೆಸರಿನ ಸಣ್ಣ ಕಥೆಗಳ ಸಂಕಲನವೂ ಪ್ರಕಟವಾಯಿತು. 'ಗೃಹದಾಹ'[3] ಮತ್ತು 'ಬಾಮನ್ ಕೀ ಬೇಟೀ'[4] ಎಂಬ ಹೆಸರಿನ ಈ ಎರಡು ಕಾದಂಬರಿಗಳೂ ಪುಸ್ತಕ ರೂಪದಲ್ಲಿ ಹೊರಬಂದುವು. 'ದೇನಾ-ಪಾವನಾ' ಮತ್ತು 'ಶ್ರೀಕಾಂತ' ಕಾದಂಬರಿಗಳು ಧಾರಾವಾಹಿಗಳ ರೂಪದಲ್ಲಿ ಅಚ್ಚಾಗುತ್ತಿದ್ದುವು. 'ಛವಿ' ಕಥಾಸಂಕಲನದಲ್ಲಿ 'ಛವಿ' ಮತ್ತು 'ವಿಲಾಸೀ' ಎಂಬ ಕಥೆಗಳ ಜೊತೆಗೆ 'ಮುಕದ್ದಮ ಕಾ ಪರಿಣಾಮ್' ಎಂಬ ಕಥೆಯೂ ಸೇರಿಕೊಂಡಿದೆ. ನಿಮ್ನ ವರ್ಗದ ಕೈವರ್ತ ಸಮಾಜದ ಕುಟುಂಬದ ಚಿತ್ರಣ ಈ ಕಥೆಯಲ್ಲಿ ಕಾಣದೊರೆಯುತ್ತದೆ. ಈ ಬಗೆಯ ಕಥೆಗಳನ್ನು ಅವರು ಹೆಚ್ಚಿನ ಸಂಖ್ಯೆಯಲ್ಲೇನೂ ಬರೆದಿಲ್ಲ.

'ಬಾಮನ್ ಕೀ ಬೇಟಿ' ಎಂಬ ಕಾದಂಬರಿ ಶಿಶಿರ್ ಪಬ್ಲಿಷಿಂಗ್ ಹೌಸ್‌ನ ವತಿಯಿಂದ ಪ್ರಕಟವಾಗುತ್ತಿದ್ದ ಕಾದಂಬರಿ ಮಾಲೆಯಲ್ಲಿ ಪ್ರಕಟವಾಗಿತ್ತು. ಇದು ಯಾವ ಪತ್ರಿಕೆಯಲ್ಲೂ ಪ್ರಕಟವಾಗಿರಲಿಲ್ಲ. ಬರೆಯುವುದಕ್ಕೆ ಮೊದಲು ಅವರು ಇದರ ವಿಷಯವಾಗಿ ರವೀಂದ್ರನಾಥ ಠಾಕೂರರೊಂದಿಗೆ ಚರ್ಚಿಸಿದ್ದರು. ಒಮ್ಮೆ ಅವರನ್ನು ಭೇಟಿ ಮಾಡಿದ್ದಾಗ ಹೀಗೆಂದಿದ್ದರು: "ನಾನು 'ಬಾಮನ್ ಕೀ ಬೇಟಿ' ಎಂಬ ಕಾದಂಬರಿಯನ್ನು ಬರೆಯುತ್ತಿದ್ದೇನೆ. ಈ ವಿಷಯದಲ್ಲಿ ನನಗೆ ಅನೇಕ ವೈಯಕ್ತಿಕ ಅನುಭವಗಳಾಗಿವೆ. ಕುಲೀನತೆ ಎಂಬುದು ಸಮಾಜದಲ್ಲಿ ಏನು ಅನರ್ಥವನ್ನುಂಟುಮಾಡಿದೆ ಎಂಬುದನ್ನು ಬರೆಯಬೇಕೆಂದು ಇಚ್ಛಿಸಿದ್ದೇನೆ."

ರವೀಂದ್ರರು ಹೇಳಿದರು: "ಈಗ ಕುಲೀನತೆ ಎಂಬುದು ಇಲ್ಲವೇ ಇಲ್ಲ. ಒಬ್ಬ ವ್ಯಕ್ತಿ ನೂರು ಮದುವೆಗಳನ್ನು ಮಾಡಿಕೊಳ್ಳುವಂತೆಯೂ ಇಲ್ಲ. ಮತ್ತೆ ಇದನ್ನು ಪುನರಾವೃತ್ತಿ ಮಾಡುವುದರಿಂದ ದೊರೆಯುವ ಲಾಭವಾದರೂ ಏನು ? ಆದರೂ, ಧೈರ್ಯವಿದ್ದರೆ ಬರಿ. ಆದರೆ, ಯಾವುದೇ ಸುಳ್ಳು ಕಲ್ಪನೆಯನ್ನು ತುರುಕಬೇಡ."

ಸುಳ್ಳು ಕಲ್ಪನೆಯನ್ನು ಮುಂದಿರಿಸುವುದರಲ್ಲಿ ಶರತ್‌ಚಂದ್ರರಿಗೆ ಎಂದೂ ನಂಬಿಕೆ ಇರಲಿಲ್ಲ. ಹೂಳಿರುವ ಹೆಣವನ್ನು, ಹೊರತೆಗೆಯುವುದೂ ಅವರ ಉದ್ದೇಶವಾಗಿರಲಿಲ್ಲ. ಆದರೆ, ಕುಲೀನತೆಯ ಪದ್ಧತಿ ಅವರಿಗೆ ತುಂಬ ಚುಚ್ಚುತ್ತಿತ್ತು. ಇಂದಿಗೂ ಒಂದಲ್ಲ ಒಂದು ರೂಪದಲ್ಲಿ ಅದು ಅಸ್ತಿತ್ವದಲ್ಲಿದೆ. ತಾವು ಬ್ರಾಹ್ಮಣರು ಎಂಬ ಕಾರಣಕ್ಕಾಗಿಯೇ ತಮ್ಮನ್ನು ಗೌರವಾರ್ಹರೆಂದು ಪರಿಗಣಿಸಿಕೊಳ್ಳುವಂಥವರ ಹಾಗೂ ಬ್ರಾಹ್ಮಣರಲ್ಲಿ ಪರಿಶುದ್ಧ ರಕ್ತ ಹರಿಯುತ್ತಿದೆಯೆಂದು ಭಾವಿಸುತ್ತಿರುವಂಥವರ ಧೋರಣೆ ಸಂಪೂರ್ಣವಾಗಿ ತಪ್ಪು. ಅವರು ಸ್ವತಃ ಕಂಡದ್ದನ್ನು, ಅನುಭವಿಸಿದ್ದನ್ನು ಮಾತ್ರವೇ ಅದರಲ್ಲಿ ಕಂಡರಿಸಿದ್ದಾರೆ. ಕುಲೀನತೆ ಎಂಬುದು ಒಳ್ಳೆಯದೇ ಕೆಟ್ಟದೇ ಎಂಬ ಬಗ್ಗೆ ಅವರು ಯಾವುದೇ ತೀರ್ಮಾನವನ್ನೂ

---

[1] 14 ಆಗಸ್ಟ್ 1919. [2] 16 ಜನವರಿ 1920
[3] 20 ಮಾರ್ಚ್ 1920 [4] ಸೆಪ್ಟಂಬರ್ 1920

ಕೈಗೊಂಡಿಲ್ಲ. 'ವೈದ್ಯ'ರೊಂದಿಗೆ 'ಕಾಯಸ್ಥ'ರ ಮದುವೆ ನಡೆಸಿ ಎಂದು ಅವರೇನೂ ಹೇಳುವುದಿಲ್ಲ. ಇಷ್ಟಾಗಿಯೂ ಯಾರಾದರೂ ಹಾಗೆ ಮಾಡಿದರೆ ಅದಕ್ಕೆ ಅಡ್ಡಿಯನ್ನುಂಟು ಮಾಡಬೇಡಿ. ಅವನು ಒಳ್ಳೆಯದನ್ನು ಮಾಡಿದನೋ ಕೆಟ್ಟದ್ದನ್ನು ಮಾಡಿದನೋ ಎಂಬುದು ಹಾಗಿರಲಿ, ಅವನು ಕಪಟಿಯಲ್ಲ ಎಂಬುದಂತೂ ಸತ್ಯ. ವಿಧವೆಯಾಗಿರುವಂಥ ಹುಡುಗಿಯರಿಗೆ ಮರುಮದುವೆ ಮಾಡಿ ಎಂದು ಅನೇಕ ಜನ ಬಾಯಿ ಮಾತಿನಲ್ಲಿ ಹೇಳುತ್ತ ಇರುತ್ತಾರೆ. ಆದರೆ, ತಮ್ಮ ಹುಡುಗಿಯರೇನಾದರೂ ವಿಧವೆಯಾಗಿಬಿಟ್ಟರೆ, "ನೋಡಿ ನಾವಂತೂ ಹೀಗೆ ಮಾಡುವುದಿಲ್ಲ. ನಾವು ಇನ್ನೂ ನಾಲ್ಕು ಹುಡುಗಿಯರಿಗೆ ಮದುವೆ ಮಾಡಬೇಕಾಗಿದೆ" ಇವೇ ಮೊದಲಾದ ಮಾತುಗಳನ್ನಾಡತೊಡಗುತ್ತಾರೆ.

ಈ ಬಗೆಯ ಬೂಟಾಟಿಕೆಗಳನ್ನು ಅವರು ಒಳ್ಳೆಯದೆಂದು ಭಾವಿಸುತ್ತಿರಲಿಲ್ಲ. ಹೀಗಾಗಿ, ಅವರೆಂದೂ ಸುಳ್ಳು ಕಲ್ಪನೆಗಳನ್ನು ಆಧಾರವಾಗಿಟ್ಟುಕೊಂಡು ತಮ್ಮ ಪಾತ್ರಗಳನ್ನು ಕಡೆದು ನಿಲ್ಲಿಸುತ್ತಿರಲಿಲ್ಲ.

ಈ ಕಾದಂಬರಿಗೆ ತಮಗೆ ಎಲ್ಲಿಂದ ಪ್ರೇರಣೆ ದೊರೆಯಿತು ಎಂಬ ಬಗ್ಗೆ ಅವರು ತಮ್ಮ ಅನೇಕ ಗೆಳೆಯರೊಂದಿಗೆ ಪ್ರತ್ಯೇಕವಾಗಿ ಚರ್ಚಿಸಿದ್ದಾರೆ. ಒಂದು ಕಡೆ ಅವರು ಹೀಗೆ ಹೇಳಿದ್ದಾರೆ: ಒಮ್ಮೆ ಇದ್ದಕ್ಕಿದ್ದಂತೆ ಹಳ್ಳಿಯಲ್ಲಿ ಸುತ್ತಾಡಿಕೊಂಡು ಬರಬೇಕೆಂಬ ಆಸೆ ಉಂಟಾಯಿತು. ಆಗ ಸ್ಟೀಮರಿನ ನೆರವು ಪಡೆದು ಅಲ್ಲಿಗೆ ಹೋದೆ. ಅಲ್ಲಿಗೆ ಹೋಗಿ ಸೇರಿದಾಗ ತುಂಬ ಹೊತ್ತಾಗಿಬಿಟ್ಟಿತ್ತು. ಹಸಿವು-ಬಾಯಾರಿಕೆಗಳಿಂದ ಬಳಲಿಕೆ ಉಂಟಾಗಿತ್ತು. ಹಳ್ಳಿಯೊಳಗೆ ಹೋಗಿ ಒಬ್ಬ ವರ್ತಕನ ಅಂಗಡಿಯಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡೆ. ಆಮೇಲೆ ಉಪಾಹಾರವನ್ನು ತೆಗೆದುಕೊಂಡೆ. ಆ ಬಳಿಕ ಹಳ್ಳಿಯೊಳಗೆ ಇನ್ನೂ ಸ್ವಲ್ಪ ದೂರ ಹೋಗಿ, ಒಬ್ಬ ಬ್ರಾಹ್ಮಣನ ಮನೆಯನ್ನು ತಲುಪಿದೆ. ಮನೆಯೊಡತಿ ಒಬ್ಬ ವಯಸ್ಸಾದ ವಿಧವೆ. ಮಧ್ಯಾಹ್ನದ ಹೊತ್ತಿಗೆ ಹಸಿದ ಅತಿಥಿಯೊಬ್ಬ ಆಗಮಿಸಿದ್ದನ್ನು ಕಂಡು, ಅಲ್ಲಿಯೇ ಸ್ನಾನ ಮಾಡಬೇಕೆಂದೂ, ಭೋಜನ ಮಾಡಬೇಕೆಂದೂ ಆಕೆ ಒತ್ತಾಯಪಡಿಸಿದಳು. ಶರತ್‌ಚಂದ್ರರು ಕೊಳದಲ್ಲಿ ಸ್ನಾನ ಮಾಡಿಕೊಂಡು ಬಂದು ನೋಡಿದರೆ, ಅಡುಗೆಯ ಎಲ್ಲ ವ್ಯವಸ್ಥೆಯೂ ಆಗಿತ್ತು. ಒಲೆ ಹೊತ್ತಿಸುವುದಕ್ಕಾಗಿ ಆಕೆ ಇವರನ್ನು ನಿರೀಕ್ಷಿಸುತ್ತಿದ್ದಳು. "ನೀವು ಅಡುಗೆ ಮಾಡಿಕೊಳ್ಳುತ್ತೀರಾ ?" ಎಂದು ಆಕೆ ಕೇಳಿದಳು.

ಕುಲೀನ ಬ್ರಾಹ್ಮಣರ ಮನೆಯಲ್ಲಿ ನಮ್ಮ ಕೈಯಿಂದಲೇ ಅಡುಗೆ ಮಾಡಿಕೊಳ್ಳಬೇಕಾಗಿ ಬಂದಿರುವುದಕ್ಕೆ ಕಾರಣವೇನು ಎಂಬುದು ಅರ್ಥವಾಗಲಿಲ್ಲ. ಇಷ್ಟಾಗಿಯೂ, ಕೊಂಚ ಆಶ್ಚರ್ಯ ಮತ್ತು ಸಂಶಯಗಳಿಂದ ಅವರು ಭೋಜನ ಮಾಡಿ ಮುಗಿಸಿ, ಆಕೆಯಿಂದ ಬೀಳ್ಕೊಂಡರು. ಹಿಂದಿರುಗಿ ಬರುವಾಗ ಆ ಮೊದಲ ಅಂಗಡಿಯ ವರ್ತಕ ಹೀಗೆಂದು ಪ್ರಶ್ನಿಸಿದ: "ಠಾಕುರ್, ಜಾತಿ ಬಿಟ್ಟು ಬಂದಿರಿ ತಾನೆ ?"

ಅವನನ್ನು ಕೇಳಿದಾಗ, ಕುಲೀನ ಬ್ರಾಹ್ಮಣರ ಮನೆತನಕ್ಕೆ ಸೇರಿದ್ದ ಆ ಹುಡುಗಿ ಕೆಳಜಾತಿಯ ಶೂದ್ರನೊಬ್ಬನನ್ನು ಮದುವೆಯಾಗಿದ್ದಳೆಂದು ತಿಳಿಯಿತು. ಈ ಘಟನೆಯೇ ಪುಸ್ತಕವನ್ನು ಬರೆಯಬೇಕೆಂಬ ಆಲೋಚನೆಗೆ ಇಂಬುಕೊಟ್ಟಿತು.

ಇನ್ನೊಂದು ಕಡೆ ಅವರು ಅವಿನಾಶಚಂದ್ರ ಘೋಷಾಲ್ ಅವರಿಗೆ ಹೀಗೆಂದು ತಿಳಿಸಿದ್ದಾರೆ: "ಯಾವ ಒಂದು ಘಟನೆಯನ್ನು ಆಧಾರವಾಗಿಟ್ಟುಕೊಂಡು ನಾನು 'ಬಾಮನ್ ಕೀ ಬೇಟಿ' ಕಾದಂಬರಿಯನ್ನು ರಚಿಸಿದೆನೋ, ಆ ಘಟನೆಯ ಬಗ್ಗೆ ತಿಳಿಸಲು ನನಗೆ ಯಾವ ಅಭ್ಯಂತರವೂ ಇಲ್ಲ. ಅನೇಕರ ಹೆಸರು ಹೇಳಿ ನೀನು ಕೇಳಿರುವ ಈ ಪ್ರಶ್ನೆಗೆ ನಿನಗೆ ಉತ್ತರ ದೊರೆಯಬಹುದು ಎಂದು ನನಗೆ ತೋರುತ್ತದೆ. ಕೋಲಾಘಾಟ್ ನಿಲ್ದಾಣದ ಬಳಿ ಒಬ್ಬ ಹೆಂಗಸು ವೀಳ್ಯವನ್ನು ಮಾರುತ್ತಾಳೆ. ಅನೇಕ ಹೆಂಗಸರು ವೀಳ್ಯವನ್ನು ಯಾವ ರೀತಿ ಮಾರುತ್ತಾರೋ ಆ ಬಗೆಯವಳಲ್ಲ ಇವಳು ಎಂದು ಅನ್ನಿಸುತ್ತದೆ. ಈ ಕಾರಣದಿಂದಾಗಿಯೇ ನನ್ನ ಮನಸ್ಸಿನಲ್ಲಿ ಕುತೂಹಲ ಮೂಡಿತು. ಅವಳೊಂದಿಗೆ ಮಾತನಾಡಿದೆ. ಅವಳು ನನ್ನ ಬಗ್ಗೆ ವಿಶ್ವಾಸ ತೋರಿದ್ದಾಳೆ. 'ಬಾಮನ್ ಕೀ ಬೇಟೀ'ಯಲ್ಲಿ ಪ್ರಿಯ ಮುಖರ್ಜಿಯ ತಾಯಿಯ ಚಿತ್ರಣ ಬಂದಿದೆಯಲ್ಲ, ಅದರಲ್ಲಿ ಆಕೆಗೊಂದು ಕಳಂಕ ಅಂಟಿಕೊಂಡಿದೆ. ಆ ಪಾತ್ರದ ಹಿನ್ನೆಲೆಯಲ್ಲಿರುವವಳು ಈ ಹೆಂಗಸೇ. ಅವಳ ಮಗ ಉನ್ನತ ಹುದ್ದೆಯಲ್ಲಿ ಇದ್ದಾನೆ. ಅವಳ ಆತ್ಮೀಯ ಬಂಧುಗಳು ಈಕೆ ಹುಚ್ಚಿಯಾಗಿ ಓಡಿಹೋಗಿಬಿಟ್ಟಿದ್ದಾಳೆ ಅಥವಾ ಸತ್ತು ಹೋಗಿದ್ದಾಳೆ ಎಂದು ಭಾವಿಸಿಕೊಂಡಿದ್ದಾರೆ. ಸಮಸ್ಯೆ ಇಷ್ಟಕ್ಕೇ ಕೊನೆಗೊಂಡಿತೇ ಎಂಬುದನ್ನೀಗ ಹೇಳು ? ಆ ಉನ್ನತ ಹುದ್ದೆಯಲ್ಲಿರುವ ವ್ಯಕ್ತಿ, ಮನೆತನದ ಗೌರವದ ದೃಷ್ಟಿಯಿಂದ 'ಕುಲೀನ ವ್ಯಕ್ತಿ'ಯಲ್ಲವೆ ? ಏಕಲ್ಲ! ಯಾವ ದುಃಖದಿಂದಾಗಿ ತನ್ನ ತಾಯಿ ಮನೆ ಬಿಟ್ಟು ಓಡಿ ಬಂದಿದ್ದಾಳೆಂಬುದು ಹಾಗೂ ಮನೆಗೆ ಹಿಂದಿರುಗುವುದಿಲ್ಲವೆಂಬುದು ಆತನಿಗೆ ಗೊತ್ತಿಲ್ಲ."

ಇನ್ನೂ ಇಂಥ ಅನೇಕ ಸಂಗತಿಗಳನ್ನು ಅವರು ಕಂಡಿದ್ದಿರಬಹುದು ಹಾಗೂ ಅಂಥ ಅನೇಕ 'ಅನುಭವ'ಗಳ ಪರಿಣಾಮವಾಗಿಯೇ ಈ ಕಾದಂಬರಿಯನ್ನು ರಚಿಸಿರಬಹುದು. ಅವರು ಯಾವುದೋ ಒಂದು ಘಟನೆಯನ್ನು ಆಧಾರವಾಗಿಟ್ಟುಕೊಂಡು, ಆ ಕೂಡಲೇ ಏನನ್ನೂ ರಚಿಸಿಬಿಡುತ್ತಿರಲಿಲ್ಲ. ಅನೇಕ ವರ್ಷಗಳವರೆಗೆ ಇಂಥ ಘಟನೆಗಳು ಅವರ ತಲೆಯಲ್ಲಿ ಸುಳಿದಾಡುತ್ತ ಇರುತ್ತಿದ್ದುವು. 'ಗೃಹದಾಹ' ಕಾದಂಬರಿಯನ್ನು ಬರೆಯಲು ಅವರು ಅನೇಕ ವರ್ಷಗಳನ್ನೇ ತೆಗೆದುಕೊಂಡರು. ಆರು ವರ್ಷಗಳ ಹಿಂದೆ[1] ತಮ್ಮ ಬಾಲ್ಯದ ಗೆಳೆಯರಾಗಿದ್ದ ಪ್ರಮಥ ಬಾಬೂ ಅವರಿಗೆ ಹೀಗೆಂದು ಬರೆದಿದ್ದರು: " 'ಗೃಹದಾಹ' ಎಂಬ ಹೆಸರಿನಲ್ಲಿ ಒಂದು ಕಾದಂಬರಿಯನ್ನು ಬರೆದಿದ್ದೇನೆ."

ಒಮ್ಮೆ ಅವರು ಹೀಗೆ ಹೇಳಿದ್ದುದೂ ಉಂಟು: "ಈ ಕಾದಂಬರಿ ರವೀಂದ್ರರ 'ಘರೇ-ಬಾಹಿರೇ'ಗಿಂತ ಒಂದು ಗುಲಗಂಜಿಯಷ್ಟೂ ಕಮ್ಮಿಯಾಗುವುದಿಲ್ಲ."

ಆಗ ಹೇಮೇಂದ್ರಕುಮಾರ್ ರಾಯ್ ಅವರು ಶರತ್‌ಚಂದ್ರರನ್ನು ಹೀಗೆಂದು ಕೇಳಿದ್ದರು: "ನೀವು ನಿಮ್ಮ ಆ ಕಾದಂಬರಿಯನ್ನು ಬರೆದು ಮುಗಿಸಿದ್ದೀರಾ ?"

ಈ ವಿಷಯವನ್ನು ಉಲ್ಲೇಖಿಸುತ್ತಾ ಹೇಮೇಂದ್ರಕುಮಾರರು ಹೀಗೆ ಬರೆದಿದ್ದಾರೆ: "ಕಾದಂಬರಿಯನ್ನು ಬರೆಯಲು ಆರಂಭಿಸಿದಾಗ, 'ಘರೇ-ಬಾಹಿರೇ' ಗೆ ಹೆಗಲೆಣೆಯಾಗಿರುವಂಥ ಕೃತಿಯನ್ನು ತಾವು ರಚಿಸಿಲ್ಲ ಎಂಬುದನ್ನು ಸ್ವತಃ ಅವರೇ

1. 13 ಮಾರ್ಚ್ 1914

ಕಂಡುಕೊಂಡಿದ್ದರು. ಸತ್ಯವನ್ನು ನುಡಿಯುವುದರಿಂದ ಆಗುವ ನಷ್ಟವಾದರೂ ಏನು ? 'ಘರೇ-ಬಾಹಿರೇ'ಗೆ ಹೋಲಿಸಿದರೆ 'ಗೃಹದಾಹ' ಏನೇನೂ ಅಲ್ಲ; ಅಷ್ಟೇ ಅಲ್ಲ, ಶರತ್‌ಚಂದ್ರರ ಕಥಾ ಸಾಹಿತ್ಯದಲ್ಲೂ ಇದಕ್ಕೆ ಅಂಥ ಉನ್ನತ ಸ್ಥಾನವೇನೂ ಇಲ್ಲ."

ಶರತ್‌ಚಂದ್ರರು ತಮಗಿಂತಲೂ ಹಿಂದಿನವರಾದ ಇಬ್ಬರು ಕಾದಂಬರಿಕಾರರಿಗೆ ಅಂದರೆ, ಬಂಕಿಮಚಂದ್ರರಿಗೆ ಮತ್ತು ರವೀಂದ್ರನಾಥ ಠಾಕೂರರಿಗೆ - ಋಣಿಯಾಗಿದ್ದಾರೆಂಬುದರಲ್ಲಿ ಅನುಮಾನವೇನೂ ಇಲ್ಲ. ಯಾವುದೋ ಕಾರಣದಿಂದಾಗಿ ಗಂಡನು ಹೆಂಡತಿಯ ವಿಷಯದಲ್ಲಿ ಉದಾಸೀನನಾಗಿದ್ದರೆ, ಅವನು ದಾರಿ ತಪ್ಪಿಬಿಡುವುದು ಸಹಜವೇ. ಬಂಕಿಮ ಚಂದ್ರರ 'ಚಂದ್ರಶೇಖರ' ಕಾದಂಬರಿಗೆ ಹಾಗೂ ರವೀಂದ್ರರ 'ಘರೇ-ಬಾಹಿರೇ'ಗೆ ಇದೇ ಸಂಗತಿ ಆಧಾರಪ್ರಾಯವಾಗಿದೆ. 'ಗೃಹದಾಹ'ದಲ್ಲಿಯೂ ಮಹಿಮ್ ಮತ್ತು ಅಚಲಾ ಅವರ ಮೂಲಕ ಶರತ್‌ಚಂದ್ರರೂ ಇದೇ ಸತ್ಯವನ್ನು ಪ್ರತಿಪಾದಿಸಬಯಸಿದ್ದಾರೆ. ಆದರೆ, ಅವರ ಅಭಿಜ್ಞತೆ ಮತ್ತು ರಚನಾಕೌಶಲಗಳು ಸಂಪೂರ್ಣವಾಗಿ ಮೌಲಿಕವಾದಂಥವು. 'ಗೃಹದಾಹ' ಶ್ರೇಷ್ಠ ಕೃತಿಯೇ ಎಂಬ ವಿಚಾರದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಇತಿಹಾಸಕಾರರಾಗಿರುವ ಸುಕುಮಾರ ಸೇನ್ ಮತ್ತು ಹೇಮೇಂದ್ರಕುಮಾರ್ ರಾಯ್ ಅವರ ಅಭಿಪ್ರಾಯಗಳು ಒಂದೇ ಆಗಿವೆ. ಆದರೆ, ಸುರೇಂದ್ರನಾಥ್ ಮೊದಲಾದ ಇತರ ಅನೇಕ ವ್ಯಕ್ತಿಗಳ ಅಭಿಪ್ರಾಯದಲ್ಲಿ 'ಗೃಹದಾಹ'ದಲ್ಲಿ ಶರತ್‌ಚಂದ್ರರ ಚಿಂತನಶೀಲತೆಯ ಗಂಭೀರ ಪರಿಚಯ ದೊರೆಯುವುದು ಮಾತ್ರವಲ್ಲ, ಅವರ ಸಾಹಿತ್ಯದಲ್ಲಿಯೇ ಉನ್ನತ ಸ್ಥಾನವೂ ಅದಕ್ಕೆ ದೊರೆಯುತ್ತದೆ. ಖಂಡಿತವಾಗಿಯೂ ಅದೊಂದು ಶ್ರೇಷ್ಠ ಕೃತಿ. ಬಹಲ ಕಾಲದ ಬಳಿಕ[1] ಡಾ. ರಮೇಶ ಚಂದ್ರ ಮಜೂಮದಾರರು ಅವರನ್ನು ಹೀಗೆಂದು ಪ್ರಶ್ನಿಸಿದ್ದರು: "ನಿಮ್ಮ ಕಾದಂಬರಿಗಳಲ್ಲಿ ಯಾವುದನ್ನು ನೀವು ಉತ್ತಮವಾದುದೆಂದು ಭಾವಿಸುತ್ತೀರಿ ?"

ಶರತ್‌ಚಂದ್ರರು ಕೂಡಲೇ ಹೇಳಿದ್ದರು: "ಕಲೆಯ ದೃಷ್ಟಿಯಿಂದ 'ಗೃಹದಾಹ' ಕಾದಂಬರಿ ದೋಷರಹಿತವಾಗಿದೆ."

ಡಾ. ಮಜೂಮದಾರರಿಗೆ ಅವರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಾಗಲಿಲ್ಲ. ಅದು ಅವರ ಶ್ರೇಷ್ಠ ಕೃತಿಯಾಗಿರಲಿ ಅಥವಾ ಇಲ್ಲದಿರಲಿ, 'ಘರೇ-ಬಾಹಿರೇ' ಅಥವಾ 'ಗೋರಾ' ಕಾದಂಬರಿಯ ಪರೇಶ ಬಾಬೂ ಅದಕ್ಕೆ ಪ್ರೇರಣೆಯನ್ನು ಒದಗಿಸಿರಲಿ ಅಥವಾ ಇಲ್ಲದಿರಲಿ, ಅದು ಅಂದಿನ ಸಮಾಜವನ್ನು - ಅದರಲ್ಲಿಯೂ 'ಬ್ರಹ್ಮ ಸಮಾಜ'ವನ್ನು ಕಲಕಿಬಿಟ್ಟಿತು ಎಂಬುದರಲ್ಲಿ ಅನುಮಾನವೇನೂ ಇಲ್ಲ. ಬ್ರಹ್ಮ ಸಮಾಜೀಯರು ತಮ್ಮ ಗ್ರಂಥಾಲಯಗಳಿಗೆ ಈ ಪುಸ್ತಕ ಬರಲು ಅವಕಾಶವನ್ನೇ ಕೊಡುತ್ತಿರಲಿಲ್ಲ. ಒಮ್ಮೆ ಯಾರೋ ಒಬ್ಬರು ಬ್ರಹ್ಮಸಮಾಜದ ಗ್ರಂಥಾಲಯವೊಂದರ ಮುಖ್ಯಸ್ಥರನ್ನು ಕೇಳಿದರು: "ಸರಿ ಸ್ವಾಮಿ, ನೀವು ಶರತ್‌ಚಂದ್ರರ 'ಗೃಹದಾಹ'ವನ್ನು ಓದಿದ್ದೀರಾ ?"

ಈ ಪ್ರಶ್ನೆಯನ್ನು ಕೇಳಿದೊಡನೆಯೇ ಆ ವೃದ್ಧರು ತಮ್ಮ ಎರಡೂ ಕಿವಿಗಳನ್ನು

---

1. 1925 ರಲ್ಲಿ

ಬೆರಳುಗಳಿಂದ ಮುಚ್ಚಿಕೊಂಡು, "ಛೀ, ಛೀ, ಅದೂ ಒಂದು ಪುಸ್ತಕವೆ ? ಅದನ್ನು ಯಾರಾದರೂ ಗೌರವಸ್ಥರು ಓದುತ್ತಾರೆಯೇ ?" ಎಂದು ಹೇಳಿದರು.

ಅವರು ಮತ್ತೆ ಪ್ರಶ್ನಿಸಿದರು: " 'ಗೃಹದಾಹ'ದ ವಿಚಾರ ಹಾಗಿರಲಿ. ನಿಮ್ಮ ಗ್ರಂಥಾಲಯದಲ್ಲಿ ಶರತ್‌ಚಂದ್ರರ ಇತರ ಯಾವ ಯಾವ ಪುಸ್ತಕಗಳಿವೆ ?"

ಆ ವೃದ್ಧರು ಹೇಳಿದರು: "ಲೈಬ್ರರಿಯಲ್ಲಿ ಶರತ್‌ಚಂದ್ರರ ಯಾವ ಪುಸ್ತಕವೂ ಇಲ್ಲ. ಅವುಗಳನ್ನು ಓದಿದರೆ, ತರುಣ-ತರುಣಿಯರಿಗೆ ಮಾನಸಿಕ ಅಧೋಗತಿ ಉಂಟಾಗಿಬಿಡಬಹುದು. ಆದ್ದರಿಂದ, ನಾವು ಅವರ ಯಾವ ಪುಸ್ತಕವನ್ನೂ ಇಟ್ಟಿಲ್ಲ."

ಒಮ್ಮೆ ಹಲವು ಬ್ರಾಹ್ಮ-ಮಹಿಳೆಯರು ಅವರನ್ನು ಕಾಣಲು ಬಂದರು. ಅವರು ಶರತ್‌ಚಂದ್ರರ ಪರಮಭಕ್ತರೇ ಆಗಿದ್ದರು. ಆದರೆ, ಅಚಲಾಳ ಪಾತ್ರ ಅವರ ಮನಸ್ಸಿಗೆ ಭಾರಿ ನೋವನ್ನುಂಟು ಮಾಡಿತ್ತು. ಶರತ್‌ಚಂದ್ರರು ಸಂಪ್ರದಾಯಬದ್ಧ ದೃಷ್ಟಿಕೋನದಿಂದ ಅಚಲಾಳ ಪಾತ್ರವನ್ನು ಚಿತ್ರಿಸಿದ್ದಾರೆಂಬುದು ಅವರೆಲ್ಲರ ನಂಬಿಕೆಯಾಗಿತ್ತು. ಇದರಿಂದ ಬ್ರಹ್ಮ ಸಮಾಜಕ್ಕೆ ಅಪಮಾನವಾದಂತಾಗಿದೆ ಎಂದೂ ಅವರು ನಂಬಿದ್ದರು. ಆದರೆ, ಶರತ್‌ಚಂದ್ರರು ಎಂದೂ ಸಂಪ್ರದಾಯ ಶೀಲರಾಗಿರಲಿಲ್ಲ. ಅವರ ಮಾತನ್ನು ಕೇಳಿ, ಅವರು ಹೀಗೆಂದರು: "ಮುಂದಿನ ಆವೃತ್ತಿಯಲ್ಲಿ ನಾನು ಇದನ್ನೆಲ್ಲ ಸರಿಪಡಿಸಿಬಿಡುತ್ತೇನೆ."

ಆ ಮಹಿಳೆಯರೆಲ್ಲ ಸಂತೋಷದಿಂದ ಹಿಂದಿರುಗಿದರು. ಆಗ ಅಲ್ಲಿದ್ದ ಅವರ ಗೆಳೆಯರೊಬ್ಬರು ಅವರನ್ನು ಕೇಳಿದರು: "ನೀವು ಏನು ತಿದ್ದುಪಡಿ ಮಾಡಲಿದ್ದೀರಿ ?"

ಶರತ್‌ಚಂದ್ರರು ಹೀಗೆಂದು ಉತ್ತರಿಸಿದರು: "ಅಚಲಾಗೆ ಸಂಬಂಧಿಸಿದಂತೆ 'ಆಜೀವನ ತೃಷ್ಣಾ' ಎಂದು ಬರೆದಿರುವುದನ್ನು 'ಆಜೀವಪಿಪಾಸೆ' ಎಂದು ಬದಲಾಯಿಸುತ್ತೇನೆ."

ಸಮಾಜದಲ್ಲಿ ಆಗಲೂ ಶರತ್‌ಚಂದ್ರರಿಗೆ ಕ್ರಾಂತಿಕಾರಿ, ಆಚಾರಹೀನ ಮತ್ತು ನಿರೀಶ್ವರವಾದಿ ಎಂಬ ಪ್ರಥೆಯೇ ಅಂಟಿಕೊಂಡಿತ್ತು. ಆದರೆ, ವಾಸ್ತವವಾಗಿ ಅವರು ಶುದ್ಧಾಂಗವಾಗಿ ಧರ್ಮಭೀರುವಾದ ವ್ಯಕ್ತಿಯೇ ಆಗಿದ್ದರು. ಸ್ವತಃ ಅವರೇ ಈ ಸಂಗತಿಯನ್ನು ಒಪ್ಪಿಕೊಂಡಿದ್ದಾರೆ: "ಮ್ಲೇಚ್ಛ ಭಾವನೆಗಳಿಂದ ಕೂಡಿರುವ ನಾನು ಸರಿಯಾದ ಹಿಂದುವೇ ಅಲ್ಲ ಎಂದು ಕೆಲವರು ಹೇಳಿದ್ದಾರೆ. ಹಿಂದೂ ಧರ್ಮದ ಮೇಲೆ ನಾನೆಂದೂ ಗದಾಪ್ರಹಾರ ಮಾಡಿಲ್ಲ. ಅದರ ಅನುದಾರತೆಯನ್ನಷ್ಟೇ ಖಂಡಿಸಿದ್ದೇನೆ. ಅನೇಕರು ನನ್ನನ್ನು ಖಂಡಿಸುವುದಾಗಿಯೂ ಬೆದರಿಕೆ ಹಾಕಿದರು. ಆದರೆ, ಇದೂವರೆಗೂ ಯಾರೂ ಏನನ್ನೂ ಮಾಡಿಲ್ಲ. ಆಗ ಒಬ್ಬ ವ್ಯಕ್ತಿ ಹೀಗೆಂದು ಬರೆದಿದ್ದರು: 'ನಾನು ಹೃದಯದಿಂದ ಬ್ರಹ್ಮ ಸಮಾಜಿಯಾಗಿದ್ದೇನೆ, ಆದರೆ, ಹೊರನೋಟಕ್ಕೆ ಹಿಂದುವಾಗಿದ್ದೇನೆ. ನನ್ನ ಕತ್ತಿನಲ್ಲಿ ತುಲಸೀ ಮಣಿಗಳ ಮಾಲೆಯೂ ಇದೆ. ಸಂಧ್ಯಾವಂದನೆ ಮಾಡದೆ ಒಂದು ತೊಟ್ಟು ನೀರನ್ನೂ ನಾನು ಕುಡಿಯುವುದಿಲ್ಲ. ಇಷ್ಟಾಗಿಯೂ ಅವರು ನನ್ನನ್ನು ಅದೆಷ್ಟು ಬಯ್ದಿದ್ದಾರೆ, ಗೊತ್ತೆ ? ನಾನು ಹೊರಗಿನ ವೇಷ ಹಾಕಿ ಕೊಂಡಿರುವವನೆಂದು ಹಂಗಿಸಿದ್ದಾರೆ."

ಸಂಧ್ಯಾವಂದನೆ ಮಾಡುವುದರ ಹಾಗೂ ಯಾರ ಕೈಯಲ್ಲೂ ಒಂದು ಹನಿ ನೀರನ್ನೂ ಕುಡಿಯದಿರುವುದರ ಬಗೆಗಿನ ಮಾತುಗಳಲ್ಲಿ ಅತಿಶಯೋಕ್ತಿ

ಇದ್ದಿರಬಹುದು. ಆದರೆ, ಅವರ ಕೊರಳಿನಲ್ಲಿ ಮಾಲೆಯಂತೂ ಇತ್ತು. ಅವರ ಬದುಕಿನ ರೀತಿನೀತಿಗಳಿಂದ ಹಾಗೂ ಆಗಿಂದಾಗ್ಗೆ ತಮ್ಮ ಕೃತಿಗಳಲ್ಲಿ ಸಮಾಜವನ್ನು ಕಟುವಾಗಿ ಟೀಕಿಸುತ್ತಿದ್ದುದರಿಂದ ಈ ಬಗೆಯ ಅನೇಕ ಅಪವಾದಗಳು ಹುಟ್ಟಿಕೊಂಡಿದ್ದಂತೆ ತೋರುತ್ತದೆ. ಮೊದಲಿಗೆ ಜನರು ಅವರನ್ನು ಬ್ರಹ್ಮ ಸಮಾಜೀಯರೆಂದೇ ಭಾವಿಸಿದ್ದರು. ಆದರೆ, 'ಗೃಹದಾಹ'ದಲ್ಲಿ ಬ್ರಹ್ಮ ಸಮಾಜದ ಆಷಾಡಭೂತಿನವನ್ನು ಖಂಡಿಸಿದಾಗ, ಆ ಜನರೂ ಇವರ ವಿಷಯದಲ್ಲಿ ಕುಪಿತರಾಗಿಬಿಟ್ಟರು.

ತುಂಬ ಜನಪ್ರಿಯರಾಗಿ ಬಿಟ್ಟಿದ್ದುದರಿಂದ, ಜನಸಾಮಾನ್ಯರು - ಅದರಲ್ಲಿಯೂ ವಿದ್ಯಾರ್ಥಿಗಳು - ಅವರ ಒಂದೊಂದು ನಡೆನುಡಿಯ ಮೇಲೂ ಕಣ್ಣಿಟ್ಟಿರುತ್ತಿದ್ದರು, ಅವರನ್ನು ಅರ್ಥೈಸಲೂ ಪ್ರಯತ್ನಿಸುತ್ತಿದ್ದರು. ಅವರು ವಾರಣಾಸಿಗೆ ಹೋದಾಗ,[1] ಅನೇಕ ವಿದ್ಯಾರ್ಥಿಗಳು ಅವರನ್ನು ಕಾಣಲು ಬಂದರು. ಅನೇಕ ವಿಷಯಗಳ ಬಗ್ಗೆ ಅವರೊಡನೆ ವಿಚಾರ-ವಿನಿಮಯ ನಡೆಸಿದರು. ಬಂದು ಅವರೆಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ಅವರು ವಿಶ್ವನಾಥನ ದೇವಸ್ಥಾನಕ್ಕೂ ಹೋದರು. ಆಗ ಅಲ್ಲಿ ಮಂಗಳಾರತಿ ನಡೆಯುತ್ತಿತ್ತು. ಅವರು ಒಂದು ಮೂಲೆಗೆ ಹೋಗಿ ನಿಂತುಕೊಂಡರು. ಮಂಗಳಾರತಿ ಆದ ಬಳಿಕ, ದೇವರ ದರ್ಶನ ಮಾಡದೆಯೇ ಅವರು ಮೌನವಾಗಿ ಹಿಂದಿರುಗಿದರು. ವಿದ್ಯಾರ್ಥಿಯೊಬ್ಬ ಕೇಳಿದ: "ನಿಮ್ಮ ಕಾದಂಬರಿಗಳನ್ನು ಓದಿದರೆ, ನೀವು ಕನ್ಸರ್ವೇಟೀವ್ ಅಥವಾ ಆರ್ಥೋಡಾಕ್ಸ್ ಅಲ್ಲವೆಂದು ತೋರುತ್ತದೆ. ಹೀಗಿರುವಾಗ, ನೀವೇಕ ದೇವಸ್ಥಾನಕ್ಕೆ ಹೋಗಿದ್ದಿರಿ ?"

ಶರತ್‌ಚಂದ್ರರು ಉತ್ತರಿಸಿದರು: "ದೇವರ ಬಗ್ಗೆ ನನ್ನ ಹೃದಯದಲ್ಲಿ ಅಂಥ ಶ್ರದ್ಧೆಯೇನೂ ಇಲ್ಲ. ಆದರೆ, ನಾನು ಭಕ್ತರನ್ನು ಪ್ರೀತಿಸುತ್ತೇನೆ. ಓದಿ-ಬರೆಯಲು ಬಾರದ ಹಳ್ಳಿಗನ ನಿಜವಾದ ಭಕ್ತಿಯಲ್ಲಿ ದೈವತ್ವವಿರುತ್ತದೆ. ಅದನ್ನು ನೋಡಲೆಂದೇ ನಾನು ಅಲ್ಲಿಗೆ ಹೋಗಿದ್ದೆ. ಅದನ್ನು ನೋಡಿದಾಗ, ಕೃತಕೃತ್ಯನಾದ ಅನುಭವ ನನಗೆ ಉಂಟಾಗುತ್ತದೆ."

ಅವರ ಪತ್ನಿ ತುಂಬ ಧಾರ್ಮಿಕ ಮನೋವೃತ್ತಿಯುಳ್ಳವರೂ, ನಿಷ್ಠಾವಂತೆಯೂ ಆಗಿದ್ದರು. ವ್ರತ-ಉದ್ಯಾಪನೆಗಳಲ್ಲಿಯೇ ಅವರ ಬಹಳಷ್ಟು ಕಾಲಕಳೆದು ಹೋಗುತ್ತಿತ್ತು. ಆಕೆಯ ಧಾರ್ಮಿಕ ಆಚರಣೆಗಳಿಗೆ ಶರತ್‌ಚಂದ್ರರು ಎಂದೂ ಅಡ್ಡಿಯನ್ನುಂಟು ಮಾಡಲಿಲ್ಲ. ಆಕೆಯ ಈ ನಂಬಿಕೆಗಳಿಗೆ ಅಡ್ಡಿಬಾರದಿರುವ ಸಲುವಾಗಿಯೇ ಸುಡು ಬೇಸಿಗೆಯಲ್ಲಿಯೂ ಅವರು ವಾರಾಣಸಿಯಲ್ಲಿ ತಂಗಿದ್ದರು.

ಜ್ಯೋತಿಷದ ವಿಷಯದಲ್ಲಿಯೂ ಅವರ ನಿಲುವು ಹೀಗೇ ಇತ್ತು. ನಂಬಿಕೆ ಇಲ್ಲದಿದ್ದರೂ ಅವರು ಅದರಲ್ಲಿ ಆಸಕ್ತಿ ತೋರುತ್ತಿದ್ದರು. ವಾರಣಾಸಿಯಲ್ಲಿ ಒಬ್ಬ ಜ್ಯೋತಿಷಿ ಅವರ ಜನ್ಮ ಕುಂಡಲಿಯನ್ನು ನೋಡಿ, ಅವರ ಕಳೆದ ಬಾಳಿನ ಎಲ್ಲ ಘಟನೆಗಳನ್ನೂ ಸವಿಸ್ತಾರವಾಗಿ ತಿಳಿಸಿದ್ದ. ಆತ ಹೀಗೆಂದು ಹೇಳಿದ್ದ: "ಇದು ಯಾರೋ ಒಬ್ಬ ಮಹಾಯೋಗಿಯ ಅಥವಾ ರಾಜಸದೃಶ ವ್ಯಕ್ತಿಯ ಕುಂಡಲಿ. ಧರ್ಮಸ್ಥಾನದಲ್ಲಿ ಬೃಹಸ್ಪತಿ ಹೀಗೆ ಪೂರ್ಣವಾಗಿ ನೆಲೆಗೊಂಡಿರುವುದನ್ನು ನಾನು

1. 1920ರಲ್ಲಿ (ಮಾರ್ಚ್ ಅಥವಾ ಏಪ್ರಿಲ್)

ಹಿಂದೆಂದೂ ಕಂಡೇ ಇಲ್ಲ. ಆಯಸ್ಸು ನಲವತ್ತೆಂಟು ವರ್ಷ ಅಥವಾ ತೀರ ಹೆಚ್ಚೆಂದರೆ ಐವತ್ತೈದು ವರ್ಷ. ನಲವತ್ತೆಂಟನೆಯ ವರ್ಷದಲ್ಲಿ ಮುಕ್ತರಾಗದಿದ್ದರೆ, ಆ ಬಳಿಕ ಲೌಕಿಕ ಆಸಕ್ತಿಯನ್ನು ತ್ಯಜಿಸಿ, ಐವತ್ತಾರನೆಯ ವರ್ಷದಲ್ಲಿ ಶರೀರತ್ಯಾಗ ಮಾಡುತ್ತಾರೆ."

ಇನ್ನೊಬ್ಬ ಜ್ಯೋತಿಷಿ ಇವರು ತುಂಬ ಧರ್ಮನಿಷ್ಠ ವ್ಯಕ್ತಿಯೆಂದೇ ತಿಳಿಸಿದ್ದ. ಇದು ವಾಸ್ತವ ಸಂಗತಿಯೂ ಹೌದು. ತಮ್ಮ ಸಾಹಿತ್ಯದಲ್ಲಿ ಎಲ್ಲಿಯೂ, ಒಂದು ಕ್ಷಣದ ಮಟ್ಟಿಗಾದರೂ ಅವರು ಸನಾತನ ಧರ್ಮದ ಹಿರಿಮೆಯನ್ನು ಲೇವಡಿ ಮಾಡಿಲ್ಲ. ಜನಿವಾರ-ಧಾರಣೆಯನ್ನೂ ಅವರು ಸಮರ್ಥಿಸಿದ್ದಾರೆ. ಧರ್ಮದ ಮೂಲ ಕಟ್ಟಳೆಗಳನ್ನು ಅವರೆಂದೂ ವಿರೋಧಿಸಿಲ್ಲ. ಅವರು ಖಂಡಿಸಿದ್ದು ಅರ್ಥರಹಿತ ಆಚರಣೆಗಳನ್ನು, ಕೆಟ್ಟ ರೀತಿ-ನೀತಿಗಳನ್ನು ಕುರುಡು ಅನುಸರಣೆಯನ್ನು ಹಾಗೂ ಮೂಢನಂಬಿಕೆಗಳನ್ನು, ಸಾಮಾಜಿಕ ನಿಷೇಧಗಳಿಂದಾಗಿ ಸಹಗಮನ ಪದ್ಧತಿ ಇಲ್ಲವಾಗಿದ್ದರೂ, ಸಹಗಮನ ಮಾಡದ ಹೆಣ್ಣು ಹೆಣ್ಣು ಅಲ್ಲವೇ ಅಲ್ಲವೆಂದು ಅವರೆಂದೂ ಒಪ್ಪುವವರಾಗಿರಲಿಲ್ಲ. ಈ ಸಂಕೀರ್ಣ ಭೇದ-ಬುದ್ಧಿಯನ್ನು ಅವರು ತ್ಯಜಿಸಿದ್ದರು. ಮನುಷ್ಯ ಧರ್ಮಕ್ಕೆ ಇದು ಅಪಮಾನವೆಸಗುವಂತಿದ್ದುದೇ ಇದಕ್ಕೆ ಕಾರಣವಾಗಿತ್ತು. ಪರಿಸ್ಥಿತಿ ವಶನಾಗಿ ತತ್ಕಾಲೀನ ಧರ್ಮ ಮತ್ತು ಸಮಾಜದ ದೃಷ್ಟಿಯಿಂದ ಕೆಟ್ಟದೆನ್ನಬಹುದಾದಂಥ ಕಾರ್ಯವನ್ನೇನಾದರೂ ಮಾಡಿದರೆ, ಆ ವ್ಯಕ್ತಿ ನಿಜವಾಗಿಯೂ ಕೆಟ್ಟವನೇನೂ ಆಗಿರುವುದಿಲ್ಲ ಎಂಬುದು ಅವರ ನಿಲುವಾಗಿತ್ತು. ಅವನ ವ್ಯಕ್ತಿತ್ವದ ಉಜ್ವಲ ಮುಖವಾಗಿರುವ ಆ ಮನುಷ್ಯ ಧರ್ಮವೇನೂ ಸತ್ತು ಹೋಗುವುದಿಲ್ಲ. ಪರಿಸ್ಥಿತಿ ವಶನಾಗಿ ಅಥವಾ ಕ್ಷಣಿಕ ಪ್ರಮಾದದಿಂದಾಗಿ ಮಾಡಿದ ತಪ್ಪಿಗಾಗಿ ಅವನನ್ನು ಅಪಮಾನಗೊಳಿಸಿದಾಗ ಹಾಗೂ ದಂಡಿಸಿದಾಗ ಅದು ನಿಜವಾಗಿಯೂ ಸಾಯುತ್ತದೆ. ವ್ಯಕ್ತಿಯ ಹೊರ ರೂಪವನ್ನು ಮೀರಿ, ಒಳಗನ್ನು ಪ್ರವೇಶಿಸಿದಾಗ ಅಲ್ಲಿ ಆ ವ್ಯಕ್ತಿಯ ನಿಜರೂಪ ಅಬಾಧಿತವಾಗಿರುತ್ತದೆ ಎಂಬುದನ್ನು ಕಂಡುಕೊಳ್ಳಬಹುದು. ಹೊರನೋಟಕ್ಕೆ ಪತಿತಳಾಗಿರುವ ವ್ಯಕ್ತಿಯ ಪಾಲಿಗೆ ಪತನವೆಂಬುದು ಸತ್ಯವೇ ಸರಿ. ಆದರೆ, ಹೊರಗಿನ ಈ ಪತನದ ಹಿಂದೆ ಆಕೆಯ ಪರಿಪೂರ್ಣ ನಾರೀತ್ವ ಅಕ್ಷುಣ್ಣವಾಗಿರುತ್ತದೆ ಎಂಬುದೂ ಸತ್ಯವೇ. ಇವೆರಡೂ ಮನುಷ್ಯನ ರೂಪಗಳೇ. ಇವೆರಡನ್ನೂ, ಸಮಾನ ರೂಪದಲ್ಲಿ ಯಾವುದು ಮುಂದಿರಿಸುತ್ತದೆಯೋ ಅದೇ ವಾಸ್ತವತಾವಾದ.

4

ಶರತ್‌ಚಂದ್ರರು ಜನಪ್ರಿಯತೆಯ ತುತ್ತತುದಿಯನ್ನು ತಲುಪಿದ್ದ ಅವಧಿಯಲ್ಲಿಯೇ ಅವರ ಬಾಳಿನಲ್ಲಿ ಇನ್ನೊಂದು ಕ್ರಾಂತಿಯೂ ಮೂಡಿಬಂದಿತು. ಇಡೀ ದೇಶವೇ ಹೊಸದಾಗಿ ಮಗ್ಗಲು ಬದಲಾಯಿಸತೊಡಗಿತ್ತು. ರಾಜನೀತಿಯ ಕ್ಷಿತಿಜದಲ್ಲಿ ಶೀಘ್ರವಾಗಿ ಹೊಸ ಪರಿಸ್ಥಿತಿಗಳು ಕಾಣಿಸಿಕೊಳ್ಳತೊಡಗಿದ್ದುವು. ಬ್ರಿಟಿಷರ ಚಕ್ರವರ್ತಿತ್ವಕ್ಕೆ ನಡೆನುಡಿಯನ್ನು ಹಾಸುವ ಪ್ರತಿಜ್ಞೆಯನ್ನು ಕೈಗೊಂಡಿದ್ದ ಕಾಂಗ್ರೆಸ್ ಪಕ್ಷ ತನ್ನ ಪರೆಯನ್ನು ಕಿತ್ತೊಗೆದಿತ್ತು. ಮೊದಲ ವಿಶ್ವಯುದ್ಧ ಕೊನೆಗೊಂಡ ಬಳಿಕ,

ಭಾರತದ ಹಾರ್ದಿಕ ಸಹಕಾರಕ್ಕೆ ಬದಲಾಗಿ ಆ ಸರ್ಕಾರ ಭಾರತಕ್ಕೆ ರೌಲತ್ ಕಾಯ್ದೆಯ ಕೊಡುಗೆಯನ್ನು ಕೊಟ್ಟಿದ್ದೇ ಇದಕ್ಕೆ ಕಾರಣವಾಯಿತು. ದಕ್ಷಿಣ ಆಫ್ರಿಕಾದಲ್ಲಿನ ವರ್ಣಭೇದ ನೀತಿಯ ವಿರುದ್ಧವಾಗಿ ಹೋರಾಡುತ್ತಿದ್ದ ಮಹಾತ್ಮಗಾಂಧೀಜಿಯವರು ಹೀಗೆಂದು ಘೋಷಿಸಿದರು: "ರೌಲತ್ ಆಯೋಗದ ಶಿಫಾರಸಿಗೆ ಮಸೂದೆಯ ರೂಪವನ್ನು ಕೊಟ್ಟಿದ್ದೇ ಆದರೆ, ನಾನು ಸತ್ಯಾಗ್ರಹವನ್ನು ಆರಂಭಿಸುತ್ತೇನೆ."

ಅವರು ದೇಶಾದ್ಯಂತ ಸಂಚಾರ ಮಾಡಿದರು. ಆಗ ಅವರ ಕಾರ್ಯಕ್ರಮಕ್ಕೆ ದೊರೆತಂಥ ಅಭೂತಪೂರ್ವ ಸ್ವಾಗತ ಬಹುಶಃ ಮುಂದೆಂದೂ ಕಾಣಲೂ ದೊರೆಯಲಿಲ್ಲ. ಎಲ್ಲರೂ ತುಂಬ ಉತ್ಸಾಹದಿಂದ ಆ ಆಂದೋಳನದಲ್ಲಿ ಭಾಗ ವಹಿಸಿದರು. 1919ರ ಏಪ್ರಿಲ್‌ನಲ್ಲಿ ಪಂಜಾಬಿನಲ್ಲಿ ನಡೆದ ಅಮಾನುಷ ಘಟನೆಗಳು ಇಡೀ ದೇಶವನ್ನೇ ನಡುಗಿಸಿದುವು. ಏಪ್ರಿಲ್ 13ರ ವೈಶಾಖಿಯ ದಿನದಂದು ಅಮೃತಸರದ ಜಾಲಿಯನ್‌ವಾಲಾ ಬಾಗ್‌ನಲ್ಲಿ ಒಂದು ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿತ್ತು. ಇಪ್ಪತ್ತು ಸಾವಿರ ಮಂದಿ ಹೆಂಗಸರೂ-ಗಂಡಸರೂ ತಮ್ಮ ನಾಯಕರ ಭಾಷಣವನ್ನು ಕೇಳುತ್ತಿದ್ದರು. ಜನರಲ್ ಡಯರ್ ಭಾರಿ ಸೈನ್ಯದೊಂದಿಗೆ ಬಂದು ಆ ಪ್ರದೇಶವನ್ನು ಆಕ್ರಮಿಸಿ ನಿಂತ. ಗುಂಡು ಹಾರಿಸುವ ಮುನ್ನ, ಚದುರಿ ಹೋಗಲು ಅವನು ಜನರಿಗೆ ಕೇವಲ ಎರಡು ನಿಮಿಷಗಳ ಅವಕಾಶವನ್ನು ಕೊಟ್ಟ. ಹೊರಗೆ ಹೋಗಲು ಇದ್ದುದು ಒಂದು ಇಕ್ಕಟ್ಟಾದ ಬಾಗಿಲು. ಓಡಿಹೋಗಬೇಕೆಂದು ಇಚ್ಛಿಸಿದ್ದರೂ, ಓಡಿ ಹೋಗಲು ಸಾಧ್ಯವಿರಲಿಲ್ಲ. ನೂರಾರು ಜನರು ಕ್ಷಣಮಾತ್ರದಲ್ಲಿ ಸತ್ತರು. ಸಾವಿರಾರು ಮಂದಿ ಗಾಯಗೊಂಡರು. ಅವರಿಗೆ ನೆರವಾಗುವ ಎಲ್ಲ ಪ್ರಯತ್ನಗಳನ್ನು ವಿಫಲಗೊಳಿಸಲಾಯಿತು.

ಈ ಘಟನೆ ರಾಷ್ಟ್ರದ ಆತ್ಮಾಭಿಮಾನಕ್ಕೇ ಆಘಾತವನ್ನುಂಟುಮಾಡಿತು. ವಿಷಧರ ಭುಜಂಗನಂತೆ ಅದು ಕೆರಳಿ ಹುಚ್ಚಾಯಿತು. ಸರ್ಕಾರದ ಪರವಾಗಿದ್ದ ಮಹಾಮಹಾ ವ್ಯಕ್ತಿಗಳೆಲ್ಲ ಅಂದು ಕ್ರಾಂತಿಕಾರಿಗಳಾಗಿ ಪರಿಣಮಿಸಿದರು. ರವೀಂದ್ರನಾಥ ಠಾಕೂರರ ಹೃದಯ ಈ ಘಟನೆಯಿಂದ ಅದೆಷ್ಟು ವಿಚಲಿತವಾಯಿತೆಂದರೆ ಅವರು ಬ್ರಿಟಿಷ್ ಸರ್ಕಾರ ತಮಗೆ ನೀಡಿದ್ದ 'ಸರ್' ಪ್ರಶಸ್ತಿಯನ್ನು ಹಿಂದಿರುಗಿಸಿದರು. ರವೀಂದ್ರರ ಈ ಕಾರ್ಯ ಶರತ್‌ಚಂದ್ರರಿಗೆ ತುಂಬ ಹಿಡಿಸಿತು. ಪಂಜಾಬಿನ ಇಂಗ್ಲಿಷ್ ದಿನಪತ್ರಿಕೆಯಾಗಿದ್ದ 'ಟ್ರಿಬ್ಯೂನ್'ನ ಸಂಪಾದಕರಾಗಿದ್ದ ಅಮಲ್ ಹೋಮ್ ಅವರಿಗೆ ಒಂದು ಪತ್ರ ಬರೆದು ಅದರಲ್ಲಿ ಹೀಗೆಂದು ತಿಳಿಸಿದರು: "ನೀವೂ ತುಂಬ ಕಷ್ಟಕ್ಕೆ ಸಿಕ್ಕಿಕೊಂಡಿದ್ದಿರೆಂದು ಅಂದು 'ಭಾರತಿ'ಯ ಕೂಟದಲ್ಲಿ ಕೇಳಿದೆ. ಆಂಗ್ಲರ ಹಿಂಸಾಚಾರದ ಆ ಸಾಕಾರ ಮೂರ್ತಿಯನ್ನು ತುಂಬ ಹತ್ತಿರದಿಂದ ನೋಡಿದಿರಲ್ಲ, ಅದೇನೂ ಕಡಿಮೆ ಲಾಭದ ಸಂಗತಿಯಲ್ಲ. ನಮ್ಮ ಮೋಹವನ್ನು ತುಂಡರಿಸಲು ಇದು ಅಗತ್ಯವೂ ಆಗಿತ್ತು. ಅವರು ಎಷ್ಟು ನಿರ್ದಯಿಗಳೂ, ಪಶುಸಮಾನರೂ ಆಗಬಲ್ಲರು ಎಂಬುದನ್ನು ನಾವು ಅರಿತುಕೊಳ್ಳಬೇಕು. ಇತಿಹಾಸದ ಪುಟಗಳಿಂದ ಒಮ್ಮೆ ಈ ಸಂಗತಿಯನ್ನು ಅರ್ಥಮಾಡಿಕೊಂಡಿದ್ದೆವು. ಈ ಸಲ ನಮಗೆ ಅದರ ನೇರ ಅನುಭವವೇ ಆಯಿತು. ನಮಗೆ ಆದ ಇನ್ನೊಂದು ಲಾಭವೆಂದರೆ ನಾಡಿನ ಈ ವೇದನೆಯ ಮಧ್ಯೆ ನಾವು ರವೀಂದ್ರರನ್ನು ಹೊಸ ರೂಪದಲ್ಲಿ ಪಡೆದದ್ದು. ಈ ಸಲ

ಅವರೊಬ್ಬರು ಮಾತ್ರವೇ ನಮ್ಮ ಆತ್ಮಾಭಿಮಾನವನ್ನು ರಕ್ಷಿಸಿದ್ದಾರೆ. ರವೀಂದ್ರರು ನೈಟ್ ಪ್ರಶಸ್ತಿಯನ್ನು ಸ್ವೀಕರಿಸಿದಾಗ ತಾವು ಕಣ್ಣೀರು ಸುರಿಸಿದ್ದುದಾಗಿ ಚಿತ್ತರಂಜನದಾಸ್ ಅವರು ಒಮ್ಮೆ ನನ್ನೊಡನೆ ಹೇಳಿದ್ದರು. 'ಈಗ ನಮ್ಮ ಎದೆ ಹತ್ತು ಮೊಳದಷ್ಟು ದೊಡ್ಡದಾಗಿದೆಯೇ ಇಲ್ಲವೇ' ಎಂದು ಅವರನ್ನು ಭೇಟಿಯಾದಾಗ ಕೇಳುತ್ತೇನೆ."

ದೇಶಬಂಧು ಚಿತ್ತರಂಜನದಾಸ್ ಅವರು ಸ್ವತಃ ಘೃತ್ಪೂರ್ವಕವಾಗಿ ಈ ಆಂದೋಳನಕ್ಕೆ ಧುಮುಕಿದ್ದರು. ರಾಷ್ಟ್ರೀಯ ಕಾಂಗ್ರೆಸ್ಸಿನ ಅಮೃತಸರದ ಅಧಿವೇಶನದಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡರು. ಶರತ್‌ಚಂದ್ರರಿಗೂ ದೇಶಬಂಧು ಅವರಿಗೂ ತುಂಬ ನಿಕಟವಾದ ಸ್ನೇಹವಿತ್ತು. ಹೀಗಾಗಿ, ಶರತ್‌ಚಂದ್ರರು ಬಹುಬೇಗ ಅದರತ್ತ ಆಕರ್ಷಿತರಾದರು. ಜಾಲಿಯನ್‌ವಾಲಾಬಾಗ್‌ನಲ್ಲಿ ನಡೆದ ಹತ್ಯಾಕಾಂಡವನ್ನು ವಿರೋಧಿಸಿ, ಹಾವಡಾದಲ್ಲಿ ನಡೆದ ಬೃಹತ್ ಸಭೆಯಲ್ಲಿ ಅವರು ನೇರವಾಗಿ ಭಾಗವಹಿಸಿದರು. ಹೀಗೆ, ದೇಶಬಂಧು ದಾಸ್ ಅವರೊಡನೆ ತಮಗಿದ್ದ ಸಂಬಂಧ ಕೇವಲ ಸಾಹಿತ್ಯಿಕ ಸಂಬಂಧವಾಗಿ ಉಳಿಯಲು ಅವರು ಅವಕಾಶ ಕೊಡಲಿಲ್ಲ.

ಶರತ್‌ಚಂದ್ರರ ರಾಜಕೀಯ ಒಲವು ಯಾವಾಗಲೂ ಕ್ರಾಂತಿ ದಳದ ಪರವಾಗಿಯೇ ಇತ್ತು. ಲೋಕಮಾನ್ಯರ ವಿಷಯದಲ್ಲಿ ಅವರಿಗೆ ನಿಜವಾದ ಶ್ರದ್ಧೆ ಇತ್ತು. 'ಹರಿಲಕ್ಷ್ಮಿ'ಯಲ್ಲಿ ನಡುವಣ ಸೊಸೆ ನಾಚುತ್ತ, ನಗುತ್ತ ಹೀಗೆನ್ನುತ್ತಾಳೆ: "ತಿಲಕ್ ಅವರ ಚಿತ್ರವನ್ನು ನೋಡಿ ನೋಡಿ ಕಸೂತಿ ಹೆಣೆಯುವ ಪ್ರಯತ್ನವನ್ನೇನೋ ಮಾಡಿದೆ ಅಕ್ಕ, ಆದರೆ, ಏನನ್ನೂ ಹೆಣೆಯಲು ಆಗಲಿಲ್ಲ" ಹೀಗೆಂದು ಹೇಳುತ್ತ, ಎದುರು ಗೋಡೆಯಲ್ಲಿ ತೂಗು ಹಾಕಿದ್ದ ಭಾರತ ಕೌಸ್ತುಭ ಲೋಕಮಾನ್ಯ ಬಾಲ ಗಂಗಾಧರ ತಿಲಕರ ಚಿತ್ರದತ್ತ ಬೆರಳು ತೋರುತ್ತಾಳೆ. ಜುಲೈ 31ರ ನಡುರಾತ್ರಿಯಲ್ಲಿ ಇದೇ ತಿಲಕರು ತೀರಿಕೊಂಡಾಗ, ವ್ಯಾಕುಲಚಿತ್ತರಾದ ಶರತ್‌ಚಂದ್ರರು ಹೀಗೆಂದು ಬರೆದರು: "ತಿಲಕರು ನಮಗೆ ಅಣ್ಣ ಮಾತ್ರವಾಗಿರಲಿಲ್ಲ. ಬಂಧು ಮಾತ್ರವಾಗಿರಲಿಲ್ಲ, ನೇತಾರರು ಮಾತ್ರವಾಗಿರಲಿಲ್ಲ, ಈ ನಮ್ಮ ಇಪ್ಪತ್ತೆರಡು ಕೋಟಿ ಜನರ ಮಲಿನ ಲಲಾಟದ ಮೇಲಿನ ಶುಭ್ರ ಗೌರವಪೂರ್ಣ ತಿಲಕವೂ ಆಗಿದ್ದರು. ಆ ತಿಲಕ ಇಂದು ಅಳಿಸಿಹೋಗಿದೆ. ನಾವು ಅನಾಥರಾಗಿ ಬಿಟ್ಟಿದ್ದೇವೆ.

ಮೊದಲಿಗೆ ಬಂಗಾಳ ಗಾಂಧೀಜಿಯವರೊಂದಿಗೆ ಸಂಪೂರ್ಣವಾಗಿ ಏಕಾಭಿಪ್ರಾಯ ವನ್ನು ಹೊಂದಿರಲಿಲ್ಲ. ದೇಶಬಂಧು ಅವರು ಅಸಹಕಾರ ಆಂದೋಳನಕ್ಕೆ ವಿರುದ್ಧವಾಗಿಯೇ ಇದ್ದರು. ಇಷ್ಟಾಗಿಯೂ, ಪಂಜಾಬಿನ ಕೇಸರಿ ಲಾಲಾ ಲಜಪತ್‌ರಾಯ್ ಅವರ ಅಧ್ಯಕ್ಷತೆಯಲ್ಲಿ ಕಲ್ಕತ್ತೆಯಲ್ಲಿ ನಡೆದ ಕಾಂಗ್ರೆಸ್ ಪಕ್ಷದ ವಿಶೇಷ ಅಧಿವೇಶನದಲ್ಲಿ ಗಾಂಧೀಜಿಯವರ ಪ್ರಸ್ತಾವ ಅನುಮೋದಿತವಾಯಿತು.[1] ಅಂದಿನ ವಾತಾವರಣವೇ ಹಾಗಿತ್ತು. ಭಾರತ ಸರ್ಕಾರ 'ಹಂಟರ್ ಕಮಿಟಿ'ಯ ವರದಿಯ ಬಗೆಗಿನ ಬಹುಮತಾಭಿಪ್ರಾಯವನ್ನು ಒಪ್ಪಿಕೊಂಡಿತ್ತು. ಅಧಿಕಾರಿಗಳ ಕರಾಳ ಕೃತ್ಯಗಳಿಗೆ ಕತ್ತಲಿನ ಪರದೆಯನ್ನೆಳೆಯುವುದು ಅದರ ಉದ್ದೇಶವಾಗಿತ್ತು.

---

1. 1920ರ ಸೆಪ್ಟೆಂಬರ್ 4 ರಿಂದ 9

ಸರ್ಕಾರದ ಮೇಲೆ ಮಾತಿಗೆ ತಪ್ಪಿದ ಆರೋಪವನ್ನು ಹೊರಿಸಿ, ಈ ಪ್ರಸ್ತಾವದಲ್ಲಿ ಹೀಗೆಂದು ಹೇಳಲಾಗಿತ್ತು: "ಎಲ್ಲಿಯವರೆಗೆ ಸರ್ಕಾರ ತಪ್ಪುಗಳನ್ನು ತಿದ್ದಿಕೊಳ್ಳುವುದಿಲ್ಲವೋ ಹಾಗೂ ಸ್ವರಾಜ್ಯದ ಸ್ಥಾಪನೆಯಾಗುವುದಿಲ್ಲವೋ ಅಲ್ಲಿಯವರೆಗೆ, ಗಾಂಧೀಜಿಯವರು ಹಾಕಿಕೊಟ್ಟಿರುವ ಕ್ರಮಿಕ ಅಹಿಂಸಾತ್ಮಕ ಅಸಹಕಾರದ ನೀತಿಯಸ್ನು ಅಂಗೀಕರಿಸುವುದನ್ನು ಹಾಗೂ ತಮ್ಮದಾಗಿಸಿಕೊಳ್ಳುವುದನ್ನು ಬಿಟ್ಟು ಭಾರತೀಯರಿಗೆ ಬೇರಾವ ಮಾರ್ಗವೂ ಇರುವುದಿಲ್ಲವೆಂಬುದು ಈ ಅಧಿವೇಶನದ ಅಭಿಪ್ರಾಯವಾಗಿದೆ. ಇದುವರೆಗೆ ಜನಾಭಿಪ್ರಾಯವನ್ನು ರೂಪಿಸಿರುವ ಹಾಗೂ ಅದನ್ನು ಪ್ರತಿನಿಧಿಸಿರುವ ಆ ವ್ಯಕ್ತಿಗಳಿಂದಲೇ ಇದರ ಆರಂಭವೂ ಆಗಬೇಕಾಗಿರುವುದರಿಂದ ಹಾಗೂ ಜನರಿಗೆ ತಾನು ನೀಡಿರುವ ಪದವಿಗಳಿಂದ ಮತ್ತು ಸಮ್ಮಾನಗಳಿಂದ, ತನ್ನ ನಿಯಂತ್ರಣದಲ್ಲಿರುವ ಶಾಲೆಗಳು, ನ್ಯಾಯಾಲಯಗಳು ಮತ್ತು ಕೌನ್ಸಿಲ್ಲುಗಳಿಂದ ಸರ್ಕಾರ ತನ್ನ ಶಕ್ತಿಯನ್ನು ಸಂಘಟಿಸಿಕೊಳ್ಳಲಿರುವುದರಿಂದ ಹಾಗೂ ಆಂದೋಳನವನ್ನು ಮುನ್ನಡೆಸುವಲ್ಲಿ ಕನಿಷ್ಠ ತಮ್ಮ ಅಪಾಯಕ್ಕೆ ಎಡೆಯಿರುವುದು ಅಪೇಕ್ಷಣೀಯವಾಗಿರುವುದರಿಂದ ಹಾಗೂ ಅಪೇಕ್ಷಿತ ಉದ್ದೇಶ ಸಾಧನೆಗಾಗಿ ಕನಿಷ್ಠತಮ ತ್ಯಾಗಕ್ಕೆ ಮಾತ್ರವೇ ಕರೆ ನೀಡಬೇಕಾಗಿರುವುದರಿಂದ ಈ ಅಧಿವೇಶನ ಹುಮ್ಮಸ್ಸಿನಿಂದ ಹೀಗೆಂದು ಸಲಹೆ ನೀಡುತ್ತದೆ...."

ಈ ಸಲಹೆಯ ಮೇರೆಗೆ ಸರ್ಕಾರದ ಪ್ರಶಸ್ತಿಗಳನ್ನು ಹಿಂದಿರುಗಿಸುವುದು, ನ್ಯಾಯಾಲಯಗಳನ್ನು, ಶಾಲಾಕಾಲೇಜುಗಳನ್ನು, ಕೌನ್ಸಿಲ್ಲುಗಳನ್ನು, ಸರ್ಕಾರಿ ಸಭೆಗಳನ್ನು ಹಾಗೂ ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವುದು ಅಗತ್ಯವಾಗಿತ್ತು. ಅಂತೆಯೇ, ಸ್ವದೇಶಿ ವಸ್ತುಗಳನ್ನು ಹಾಗೂ ಚರಕಾವನ್ನು ಪುರಸ್ಕರಿಸುವುದೂ ಅಗತ್ಯವಾಗಿತ್ತು.

ಈ ಪ್ರಸ್ತಾವಕ್ಕೆ ಬಂಗಾಳದ ಬಿಪಿನಚಂದ್ರ ಪಾಲ್ ಅವರು ಒಂದು ತಿದ್ದುಪಡಿಯನ್ನು ಸೂಚಿಸಿದರು ಹಾಗೂ ದೇಶಬಂಧು ಚಿತ್ತರಂಜನದಾಸ್ ಅವರು ಅದನ್ನು ಸಮರ್ಥಿಸಿದರು. ಇದರಂತೆ, ಭಾರತದ ಶಿಷ್ಟಮಂಡಳಿಯೊಡನೆ ಕಲೆತು ಮಾತುಕತೆ ನಡೆಸಬೇಕೆಂದು ಬ್ರಿಟನ್ನಿನ ಪ್ರಧಾನ ಮಂತ್ರಿಗೆ ತಿಳಿಸಲಾಗಿತ್ತು. ಆದರೆ, ಈ ತಿದ್ದುಪಡಿ ಅಂಗೀಕೃತವಾಗಲಿಲ್ಲ. ಅಸಹಕಾರ ಆಂದೋಳನದ ಬಗೆಗಿನ ಪ್ರಸ್ತಾವದ ಅಂಗೀಕಾರದ ಪರಿಣಾಮವಾಗಿ, ಮುಂದೆ ನಡೆದ ಚುನಾವಣೆಯನ್ನು ಮತದಾರರು ಬಹಿಷ್ಕರಿಸಿದರು. ಈ ಬಹಿಷ್ಕಾರ, ಮುಂದಿನ ಅನೇಕ ವರ್ಷಗಳ ಇತಿಹಾಸದ ಮೇಲೆ ಪ್ರಬಲವಾದ ಪರಿಣಾಮವನ್ನು ಖಂಡಿತವಾಗಿಯೂ ಉಂಟುಮಾಡುತ್ತದೆ ಎಂದು ಸರ್ಕಾರವೂ ಒಪ್ಪಬೇಕಾಗಿ ಬಂದಿತು. ಆದರೆ ಆಗಿನ್ನೂ ಅಸಹಕಾರ ಆಂದೋಳನದ ಈ ಕಾರ್ಯಕ್ರಮದ ಬಗೆಗೆ ಅಂತಿಮವಾಗಿ ಆಲೋಚನೆ ಮಾಡಿರಲಿಲ್ಲ.

ಮೂರು ತಿಂಗಳ ತರುವಾಯ, ಡಿಸೆಂಬರ್‌ನಲ್ಲಿ ನಾಗಪುರದಲ್ಲಿ ಕಾಂಗ್ರೆಸ್ ಪಕ್ಷದ ವಾರ್ಷಿಕ ಅಧಿವೇಶನ ನಡೆಯಿತು. ಅಸಹಕಾರ ಆಂದೋಳನದ ಪ್ರಸ್ತಾವ ಅನುಮೋದಿತವಾಗುವುದು ದೇಶಬಂಧು ಅವರಿಗೆ ಇಷ್ಟವಿರಲಿಲ್ಲ. ಈ ಅಧಿವೇಶನಕ್ಕಾಗಿ ಅವರು ತಮ್ಮ ಸ್ವಂತ ಖರ್ಚಿನಲ್ಲಿ ಇನ್ನೂರ ಐವತ್ತು ಪ್ರತಿನಿಧಿಗಳ ತಂಡವನ್ನು ಕರೆದುಕೊಂಡು ಬಂದಿದ್ದರು. ಆದರೆ, ಇಲ್ಲಿಯೂ ಗಾಂಧೀಜಿಯವರ ವ್ಯಕ್ತಿತ್ವಕ್ಕೇ

ವಿಜಯ ಲಭಿಸಿತು. ಇದು ಎಲ್ಲಿಯ ತನಕ ಹೋಯಿತೆಂದರೆ, ಇದುವರೆಗೆ ಇದನ್ನು ವಿರೋಧಿಸುತ್ತಿದ್ದ ದೇಶಬಂಧು ಅವರೇ ಈ ಪ್ರಸ್ತಾವವನ್ನು ಮಂಡಿಸಿದರು ಹಾಗೂ ಲಾಲಾ-ಲಜಪತ್‌ರಾಯ್ ಅವರು ಇದನ್ನು ಸಮರ್ಥಿಸಿದರು. ರಾಷ್ಟ್ರೀಯ ಆಂದೋಳನಕ್ಕಾಗಿ ಹೆಚ್ಚು ಹೆಚ್ಚಾಗಿ ತ್ಯಾಗ ಮಾಡಬೇಕೆಂದು ಈ ಪ್ರಸ್ತಾವದ ಮೂಲಕ ಒತ್ತಾಯಪಡಿಸಲಾಗಿತ್ತು. ಸರ್ಕಾರದೊಂದಿಗೆ ಅಸಹಕರಿಸುವ ವಿಷಯದಲ್ಲಿ ಎಲ್ಲ ಸಾರ್ವಜನಿಕ ಸಂಸ್ಥೆಗಳೂ ತಮ್ಮೆಲ್ಲ ಗಮನವನ್ನು ಕೇಂದ್ರೀಕರಿಸಬೇಕು ಎಂದೂ, ಜನತೆಯ ನಡುವೆ ಪರಸ್ಪರ ಸಂಪೂರ್ಣ ಸಹಕಾರವನ್ನು ಏರ್ಪಡಿಸಬೇಕು ಎಂದೂ ವಿಶೇಷವಾಗಿ ಒತ್ತಿ ಹೇಳಲಾಗಿತ್ತು.

ತಮ್ಮ ವಕೀಲಿ ವೃತ್ತಿಯನ್ನು ಬಿಟ್ಟುಬಿಡುವುದಾಗಿ ದೇಶಬಂಧು ದಾಸ್ ಅವರು ಘೋಷಿಸಿದರು. ಅವರ ಆದಾಯ ಮತ್ತು ಐಶ್ವರ್ಯಕ್ಕೆ ಮೇರೆ ಎಂಬುದೇ ಇರಲಿಲ್ಲ. ಅವರು ಅಂಥ ಹಿರಿಯ ವಕೀಲರಾಗಿದ್ದರು. ಹೀಗಾಗಿ ಅವರ ಈ ಘೋಷಣೆ ಇಡೀ ರಾಷ್ಟ್ರವನ್ನೇ ಕದಡಿಬಿಟ್ಟಿತು. ನೋಡುನೋಡುತ್ತಿದ್ದಂತೆಯೇ ಅವರ ಮನೆ ಒಂದು ರಾಜಕೀಯ ಸಂಸ್ಥೆಯಾಗಿ ಬಿಟ್ಟಿತು, ಪರಾಮರ್ಶೆ, ಸಂಘಟನೆ ಮತ್ತು ಪ್ರಚಾರ ಕಾರ್ಯಗಳ ಕೇಂದ್ರವೂ ಆಯಿತು. ಶರತ್‌ಚಂದ್ರರು ಆ ದಿನಗಳಲ್ಲಿ ಬಾಜೇ ಶಿವಪುರದಲ್ಲಿ ವಾಸವಾಗಿದ್ದರು. ಅವರು ಮನಃಪೂರ್ವಕವಾಗಿ ಅಸಹಕಾರ ಚಳವಳಿಗೆ ಬೆಂಬಲ ಕೊಟ್ಟರು. ಅವರನ್ನು ಹಾವಡಾ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರನ್ನಾಗಿ ಆರಿಸಿದ್ದು ಮಾತ್ರವಲ್ಲದೆ, ಬಂಗಾಳದ ಪ್ರದೇಶ ಕಾಂಗ್ರೆಸ್ ಸಮಿತಿ ಹಾಗೂ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಗಳ ಸದಸ್ಯರನ್ನಾಗಿಯೂ ಆಯ್ಕೆ ಮಾಡಲಾಯಿತು. ಹೀಗಾಗಿ, ಈ ಚಳವಳಿಯನ್ನು ನಡೆಸುವ ಹೊಣೆಗಾರಿಕೆಯೂ ಅವರದೇ ಆಯಿತು. ಈ ಹೊಣೆಗಾರಿಕೆಯನ್ನು ಅವರು ಮುಕ್ತ ಮನಸ್ಸಿನಿಂದ ಅಂಗೀಕರಿಸಿದರು. ಬಹುಮಟ್ಟಿಗೆ ಪ್ರತಿದಿನ ಬೆಳಿಗ್ಗೆ ಶಿವಪುರದಿಂದ ಕಲ್ಕತ್ತೆಗೆ ಬರುತ್ತಿದ್ದರು ಹಾಗೂ ಅಸಹಕಾರ ಚಳುವಳಿಯನ್ನು ಸಂಘಟಿಸುವ ಬಗ್ಗೆ ದೇಶಬಂಧು ಅವರೊಂದಿಗೆ ಹಾಗೂ ಇತರ ಕಾರ್ಯಕರ್ತರುಗಳೊಂದಿಗೆ ಸಮಾಲೋಚನೆ ನಡೆಸುತ್ತಿದ್ದರು. ಈ ಕಾರ್ಯಕರ್ತರಲ್ಲಿ ಪ್ರಮುಖರಾಗಿದ್ದವರೆಂದರೆ, ಡಾ. ಯತೀಂದ್ರ ಮೋಹನ ದಾಸಗುಪ್ತ, ಸುಭಾಷ್ ಚಂದ್ರಬೋಸ್, ಹೇಮಂತ ಕುಮಾರ ಸರ್ಕಾರ್ ಮತ್ತು ನಿರ್ಮಲ ಚಂದ್ರ 'ಚಂದ್ರ' ಅವರುಗಳು. 'ಚಂದ್ರ ಅವರೊಡನೆ ಅವರಿಗೆ ತುಂಬ ಘನಿಷ್ಠ ಸಂಬಂಧವಿತ್ತು. ಇಬ್ಬರೂ ವಾಕ್ಪಟುಗಳಾಗಿದ್ದರು, ಸರಳಜೀವಿಗಳಾಗಿದ್ದರು, ಹೊಗೆಸೊಪ್ಪಿನ ಹಾಗೂ ರವೀಂದ್ರನಾಥ ಠಾಕೂರರ ಪರಮಭಕ್ತರಾಗಿದ್ದರು.

ಸಲಹೆ ಕೊಡುವುದರಲ್ಲಿ ಶರತ್‌ಚಂದ್ರರು ತುಂಬ ಕುಶಲಿಗಳಾಗಿದ್ದರು, ಯಾವುದಾದರೂ ಜಟಿಲ ಸಮಸ್ಯೆಯ ಬಗ್ಗೆ ಎಲ್ಲರೂ ತಲೆಕೆಡಿಸಿಕೊಂಡಿದ್ದಾಗ, ಅವರು ಚಹಾಪಾನದಲ್ಲಿ ಹಾಗೂ ಚುಟ್ಟಾ ಸೇವನೆಯಲ್ಲಿ ಮಗ್ನರಾಗಿರುತ್ತಿದ್ದರು. ಇತರ ವ್ಯಕ್ತಿಗಳು ಕಂಗೆಟ್ಟಿದ್ದಾಗ, ಅವರು ತುಂಬ ಸಹಜವೆಂಬಂತೆ ಸಮಸ್ಯೆಗೆ ಪರಿಹಾರವನ್ನು ಸೂಚಿಸಿ ಎಲ್ಲರನ್ನೂ ಆಶ್ಚರ್ಯಚಕಿತರನ್ನಾಗಿಸುತ್ತಿದ್ದರು. ಮನೆಗೆ ಹಿಂದಿರುಗುವ ಹೊತ್ತಿಗೆ ರಾತ್ರಿಯ ಬಹುಭಾಗ ಕಳೆದುಹೋಗಿರುತ್ತಿತ್ತು. ಬಳಲಿದ ಮೈಯನ್ನು ಹೊತ್ತು, ಟ್ಯಾಕ್ಸಿಯಲ್ಲಿ ಕುಳಿತು ಮನೆಗೆ ಹಿಂದಿರುಗಿದ್ದನ್ನು ಕಂಡಾಗ,

ಅವರು ವಿರೋಧಿಗಳು ಹೀಗೆನ್ನುತ್ತಿದ್ದರು: "ಅಲ್ಲಿ ನೋಡಿ, ಶರತ್ ಬಾಬೂ ಹೇಗೆ ಕುಡಿದು ತೂರಾಡುತ್ತ ಬರುತ್ತಿದ್ದಾರೆ."

ಈ ನಾಲ್ಕೈದು ವರ್ಷಗಳಲ್ಲಿ ಅವರಿಗೆ ಅಸಂಖ್ಯಾತ ಸಾಹಿತ್ಯಪ್ರೇಮಿಗಳು ದೊರೆತಂತೆಯೇ ಹೆಚ್ಚಿನ ಸಂಖ್ಯೆಯಲ್ಲಿ ವಿರೋಧಿಗಳೂ ಹುಟ್ಟಿಕೊಂಡರು. ಹೊತ್ತು-ಗೊತ್ತು ಇಲ್ಲದೆ ಗೇಲಿ ಮಾಡಲೂ ಅವರು ಹಿಂದೆಗೆಯುತ್ತಿರಲಿಲ್ಲ. ಅವರ ಚಾರಿತ್ರ್ಯದ ಬಗ್ಗೆ ಕುಹಕವನ್ನಾಡುವುದು - ಅದರಲ್ಲಿಯೂ ಅವರನ್ನು ಕುಡುಕರೆಂದು ಸಾಧಿಸಿ ತೋರಿಸಿ ಹೀಗಳೆಯುವುದು - ಅವರ ಬಳಿ ಇದ್ದ ಮಹಾ ಅಸ್ತ್ರವಾಗಿತ್ತು. ಅನೇಕ ದಿವಸಗಳ ಬಳಿಕ[1] ದೇಶಬಂಧು ದಾಸ್ ಅವರು ಶರತ್‌ಚಂದ್ರರಿಗೆ ರಾಧಾಕೃಷ್ಣರ ಒಂದು ವಿಗ್ರಹವನ್ನು ಕೊಟ್ಟು, ಅದನ್ನು ಮನೆಯಲ್ಲಿ ಪ್ರತಿಷ್ಠಾಪಿಸಿಕೊಳ್ಳುವಂತೆ ತಿಳಿಸಿದರು. ದಾಸ್ ಅವರ ಮನೆಯಲ್ಲಿ ಒಮ್ಮೆ ಅಮೃತಶಿಲೆಯ ರಾಧಾಕೃಷ್ಣರ ವಿಗ್ರಹವನ್ನು ನೋಡಿದಾಗ, ಶರತ್‌ಚಂದ್ರರು ಅದು ತುಂಬ ಚೆನ್ನಾಗಿದೆಯೆಂದು ಮನಸಾರೆ ಹೊಗಳಿದರೆಂದೂ, ಆಗ ದೇಶಬಂಧುಗಳು ಆ ವಿಗ್ರಹವನ್ನೇ ಅವರಿಗೆ ಉಡುಗೊರೆಯಾಗಿ ಕೊಟ್ಟರೆಂದೂ ಹೇಳಲಾಗಿದೆ.[2] ಆ ವಿಗ್ರಹ ತುಂಬ ಭಾರ ವಾಗಿತ್ತು. ಅದನ್ನು ತೆಗೆದುಕೊಂಡು ಅವರು ನಡುರಾತ್ರಿಯ ಹೊತ್ತಿಗೆ ಮನೆಗೆ ಹಿಂದಿರುಗಿದರು. ಮನೆಗೆ ಬರುವುದು ಸಾಮಾನ್ಯವಾಗಿ ತಡವಾಗುತ್ತಲೇ ಇತ್ತು. ಅಂದು ಅವರ ಜೊತೆಯಲ್ಲಿ ಶೈಲೇಶ ವಿಶೀ ಅವರಿದ್ದರು. ಅವರ ನೆರವಿನಿಂದಲೇ ಅವರು ಆ ವಿಗ್ರಹವನ್ನು ಟ್ಯಾಕ್ಸಿಯಲ್ಲಿ ಇಟ್ಟುಕೊಂಡರು ಹಾಗೂ ಟ್ಯಾಕ್ಸಿಯಿಂದ ಇಳಿಸಿಕೊಂಡರು. ಅದರ ಭಾರದಿಂದಾಗಿ ಅವರು ತತ್ತರಿಸುವಂತಾಯಿತು. ದಾರಿಯಲ್ಲಿ ಹೋಗುತ್ತಿದ್ದ ವ್ಯಕ್ತಿಯೊಬ್ಬ ಅವರನ್ನು ಈ ಸ್ಥಿತಿಯಲ್ಲಿ ಕಂಡ. ಆ ವಿಗ್ರಹ ಅವನ ಕಣ್ಣಿಗೆ ಬೀಳಲಿಲ್ಲ. ಅವನು ಬೆಳಿಗ್ಗೆ ಸಹಜವಾಗಿಯೇ ಪ್ರಚಾರವನ್ನು ಆರಂಭಿಸಿದ: "ಶರತ್‌ಚಂದ್ರರು ರಾತ್ರಿ ಕುಡಿದು ತೂರಾಡುತ್ತ ಬಂದರು. ಅವರನ್ನು ಹಿಡಿದುಕೊಂಡು ಟ್ಯಾಕ್ಸಿಯಿಂದ ಇಳಿಸಿಕೊಳ್ಳುತ್ತಿದ್ದರು. ಅವರಿಗೆ ನಡೆಯಲೂ ಸಾಧ್ಯವಾಗುತ್ತಿರಲಿಲ್ಲ."

ಲೇಖಕನ ಬಾಳುವೆ ಅವನ ವೈಯಕ್ತಿಕ ವಿಚಾರ. ಅದರ ಬಗ್ಗೆ ಆಕ್ಷೇಪಿಸುವುದರಿಂದ ಆಗುವ ಲಾಭವಾದರೂ ಏನು? ಅವನಿಗೆ ಬೆಲೆಗಟ್ಟಬೇಕಾದ್ದು ಅವನ ಕೃತಿಗಳ ಆಧಾರದ ಮೇಲೆ. ಆದರೆ, ಛಿದ್ರಾನ್ವೇಷಣೆಯೇ ಮನುಷ್ಯ ಸ್ವಭಾವ. ಹುಡುಕಿದರೂ ತಪ್ಪು ಸಿಗದೆ ಹೋದಾಗ, ಅವನು ಅದನ್ನು ಕಲ್ಪಿಸಿಕೊಳ್ಳಲೂ ಸಿದ್ಧನಾಗುತ್ತಾನೆ. ಆದರೆ, ತಮ್ಮ ಎಂದಿನ ಸ್ವಭಾವದಂತೆ, ಈ ಬಗೆಯ ಆರೋಪಗಳಿಗೆ ವಿರುದ್ಧವಾಗಿ ಅವರು ಏನನ್ನೂ ಹೇಳುತ್ತಿರಲಿಲ್ಲ. ಮೌನವಾಗಿದ್ದು ಈ ಬಗೆಯ ಅಪಖ್ಯಾತಿ ಹರಡಲೂ ಅವಕಾಶ ಮಾಡಿಕೊಡುತ್ತಿದ್ದರು. ಅವರ ಬಗ್ಗೆ ಅದೆಂಥೆಂಥ ಸುಳ್ಳು ಸುದ್ದಿಗಳು ಹರಡಿಕೊಂಡಿದ್ದುವೋ ಏನೋ. ಅಸಹಕಾರ ಚಳವಳಿಯಲ್ಲಿ ಭಾಗವಹಿಸುವ ತನಕವೂ ಅವರು ಮದ್ಯವನ್ನು ಸೇವಿಸುತ್ತಿದ್ದರೆಂದು ಅವರ ಹತ್ತಿರದ ಮಿತ್ರರು ನಂಬಿದ್ದರು. ಲೋಟಕ್ಕೆ ಬಗ್ಗಿಸಿಕೊಂಡು ಕುಡಿಯುತ್ತಿದ್ದರು, ಶೀಶೆಯನ್ನೇ

1 22, ಆಗಸ್ಟ್ 1924 (ರಾತ್ರಿ ಹನ್ನೆರಡು ಘಂಟೆ)

2 ವಿಪ್ಲವೀ ಶರತ್‌ಚಂದ್ರೇರ್ ಜೀವನ ಪ್ರಶ್ನೆ - ಶೈಲೇಶ್ ವಿಶಿ, ಪು. 129

ಬಾಯಿಗೆ ಒಡ್ಡಿಕೊಂಡು ಕುಡಿಯುತ್ತಿದ್ದರು, ಹಾಲು-ಅನ್ನ ತಿನ್ನುವಂತೆ ಅನ್ನಕ್ಕೆ ಶಾಂಪೇನ್ ಹಾಕಿಕೊಂಡು ತಿನ್ನುತ್ತಿದ್ದರು, ಗಾಜಿನ ಗೋಲಿಯಷ್ಟು ಅಫೀಮು ಬೆರೆಸಿಕೊಂಡು ಕುಡಿಯುತ್ತಿದ್ದರು, ಗಾಜಿನ ಅಥವಾ ಪಿಂಗಾಣಿಯ ದೊಡ್ಡ ದೊಡ್ಡ ಬಟ್ಟಲುಗಳಿಗೆ ಬಗ್ಗಿಸಿಕೊಂಡು ಕುಡಿಯುತ್ತಿದ್ದರು..... ಇಂಥ ಕಥೆಗಳಿಗೆ ಕೊನೆ ಮೊದಲೆಂಬುದೇ ಇರಲಿಲ್ಲ.

ಯಾವ ವ್ಯಕ್ತಿಯ ವಿಷಯದಲ್ಲಿ ಇಂಥ ಕಲ್ಪನೆಗಳು ಹುಟ್ಟಿಕೊಳ್ಳಬಹುದೋ ಆತ ಅದೆಂಥ ವಿಲಕ್ಷಣ ವ್ಯಕ್ತಿಯಾಗಿರಬೇಕು! ಆದರೆ, ಆಶ್ಚರ್ಯದ ಸಂಗತಿಯೆಂದರೆ ಅವರು ಹೀಗೆ ಮಾಡುತ್ತಿದ್ದುದನ್ನು ಕಣ್ಣಾರೆ ಕಂಡಂಥವರು ಯಾರೂ ಇರಲಿಲ್ಲ. ಎಲ್ಲರೂ ಅವರಿವರು ಹೇಳಿದ್ದನ್ನು ಕೇಳಿದ್ದವರೇ. ಅವರು ಮದ್ಯವನ್ನು ಸೇವಿಸುತ್ತಿದ್ದರು, ಬಾಲ್ಯದಿಂದಲೇ ಅವರಿಗೆ ಇದು ಅಭ್ಯಾಸವಾಗಿತ್ತು ಎಂಬುದಕ್ಕೆ ನಮಗೆ ಸಾಕ್ಷ್ಯ ದೊರೆಯುತ್ತದೆ. ಆದರೆ, ಅವರ ವಿಷಯದಲ್ಲಿ ಹಬ್ಬಿಕೊಂಡಿದ್ದ ಗಾಳಿ ಸುದ್ದಿಯಂತೆ, ಅವರೆಂದೂ ಕುಡುಕ ಅಥವಾ ಮದ್ಯವ್ಯಸನಿಯಾಗಿರಲಿಲ್ಲ. ಕಲ್ಕತ್ತೆಗೆ ಹಿಂದಿರುಗುವ ಹೊತ್ತಿಗೆ ಅವರು ಮದ್ಯಪಾನವನ್ನು ಸಂಪೂರ್ಣವಾಗಿ ತ್ಯಜಿಸಿದ್ದರು. ಹಿಂದಿಯ ಹೆಸರಾಂತ ಸಾಹಿತಿಗಳಾದ ಇಳಾಚಂದ್ರ ಜೋಶಿಯವರು ಒಮ್ಮೆ ಅವರನ್ನು ಭೇಟಿಯಾಗಲು ಹೋಗಿದ್ದರು.[1] ಅದೂ ಇದೂ ಮಾತನಾಡುತ್ತ, ಅವರು ಇದನ್ನು ಕೇಳಿದ್ದರು: "ನಿಮ್ಮ ಬಾಳಿನಲ್ಲಿ ನೀವು ಎಂದಾದರೂ ಮದ್ಯಪಾನದ ಅನುಭವವನ್ನು ಪಡೆದಿದ್ದೀರಾ ?"

"ಹಲವು ಭಾರಿ!"

"ನಿಮ್ಮ ದೇವದಾಸ್ ಎಷ್ಟರಮಟ್ಟಿಗೆ ಮದ್ಯದಲ್ಲಿ ಮುಳುಗಿರುತ್ತಿದ್ದನೋ ಅಷ್ಟರಮಟ್ಟಿಗೆ ನೀವೂ ಮದ್ಯಪಾನದಲ್ಲಿ ಮುಳುಗಿದ್ದುಂಟೇನು ?"

ಅವರು ಮುಗುಳ್ನಕ್ಕು ಹೇಳಿದರು: "ಬಾಳಿನಲ್ಲಿ ನಾನು ಅನೇಕ ಸಣ್ಣ-ಪುಟ್ಟ ತಪ್ಪುಗಳನ್ನು ಮಾಡಿದ್ದೇನೆ. ಆದರೆ, ನಾನು ಆ ನನ್ನ ಮೂರ್ಖತೆಯನ್ನು ಅತಿಯತ್ತ ಎಂದೂ ಕೊಂಡೊಯ್ಯಲಿಲ್ಲ. ಮದ್ಯವನ್ನು ನಾನೆಂದೂ ಮೈಮರೆಸುವಂಥ ಸಾಧನ ವೆಂಬಂತೆ ಸ್ವೀಕರಿಸಿಲ್ಲ. ಉದ್ದಕ್ಕೂ ಔಷಧದ ರೂಪದಲ್ಲಿಯೇ ಅದನ್ನು ತೆಗೆದು ಕೊಂಡಿದ್ದೇನೆ - ಯಾವುದೋ ದೈಹಿಕ ರೋಗದ ಬಗೆಗಿನ ಔಷಧದ ರೂಪದಲ್ಲಲ್ಲ, ನನ್ನ ಸ್ವಭಾವದ ಒಂದು ಕೊರತೆಯನ್ನು ತುಂಬಿಕೊಳ್ಳುವ ಸಲುವಾಗಿ, ನಾನು ಸ್ವಭಾವತಃ ಅಂತರ್ಮುಖಿ, ಬೌದ್ಧಿಕವಾಗಿ ಸಾಮಾಜಿಕ ಜೀವನವನ್ನು ಸಂಪೂರ್ಣವಾಗಿ ನನ್ನದಾಗಿಸಿಕೊಂಡಿದ್ದರೂ, ವ್ಯಾವಹಾರಿಕವಾಗಿ ಸಮಾಜದಿಂದ ಹಾಗೂ ಜನಸಮುದಾಯದಿಂದ ದೂರ ಓಡಿಹೋಗಿ ಬಿಡಬೇಕೆಂದೇ ಬಯಸುವಂಥವನು. ಸಮಾಜದ ನಡುವೆ ಇದ್ದಾಗ ತುಂಬ ಅಸಂತೋಷದ ಅನುಭವ ನನಗೆ ಆಗುತ್ತ ಇರುತ್ತದೆ. ಹೀಗಾಗಿ, ಆಗಾಗ ಔಷಧದ ಪ್ರಮಾಣದಲ್ಲಿ ಸ್ವಲ್ಪ ಮದ್ಯವನ್ನು ತೆಗೆದುಕೊಳ್ಳುತ್ತೇನೆ, ಆಗ ನಾನು ಸಮಾಜದಲ್ಲಿ ಸಾಮಾಜಿಕ ವ್ಯಕ್ತಿಗಳಂತೆಯೇ ಇರತೊಡಗುತ್ತೇನೆ ಹಾಗೂ ಸಹಜ ಭಾವನೆಗಳೊಂದಿಗೆ ಸಂಪರ್ಕಗಳನ್ನು

1. 1922ರಲ್ಲಿ

ಬೆಳೆಸಿಕೊಳ್ಳಲು ಸಮರ್ಥನಾಗುತ್ತೇನೆ.[1] ಈಚೆಗೆ ಕಳೆದ ಎರಡು-ಮೂರು ತಿಂಗಳುಗಳಿಂದ ಒಂದೇ ಒಂದು ಹನಿಯಷ್ಟು ಮದ್ಯವನ್ನೂ ನಾನು ಕುಡಿದಿಲ್ಲ."

"ನಿಮ್ಮ ಯಾವುದೇ ಕೃತಿಯನ್ನು ಕಥೆಯನ್ನೋ ಕಾದಂಬರಿಯನ್ನೋ - ಬೇಗ ಪೂರೈಸಬೇಕೆಂದು ಇಚ್ಛಿಸಿದ್ದು, ಬರೆಯಲು ಸ್ಫೂರ್ತಿಯೇ ಬರದೆ ಹೋಗಿ, ಆ ಸ್ಥಿತಿಯಲ್ಲಿ ಮದ್ಯವನ್ನು ಸೇವಿಸಿ, ಈ ಬಗೆಯ ಕೃತ್ರಿಮ ಉಪಾಯದಿಂದ ಸ್ಫೂರ್ತಿಯನ್ನು ಪಡೆದು ಬರೆಯಲು ಕುಳಿತುಕೊಂಡಂಥ ಸಂದರ್ಭ ಎಂದಾದರೂ ಏರ್ಪಟ್ಟಿದೆಯೆ ?"

"ಎಂದೂ ಇಲ್ಲ, ಕುಡಿದ ಬಳಿಕ ಬರೆಯುವ ಸ್ಫೂರ್ತಿ ನನಗೆಂದೂ ದೊರೆತಿಲ್ಲ. ಆ ಸ್ಥಿತಿಯಲ್ಲಿ ನಾನು ಕೇವಲ ಅನುಭವನ ಕಾರ್ಯದಲ್ಲಿ ತೊಡಗಿರುತ್ತೇನೆ. ಆ ಸ್ಥಿತಿಯಲ್ಲಿ ಯಾವುದಾದರೂ ಮಹತ್ವಪೂರ್ಣ ಭಾವನೆ ಅಥವಾ ಆಲೋಚನೆ ನನ್ನ ಮನಸ್ಸಿನಲ್ಲಿ ಮೂಡತೊಡಗಿದರೆ, ಆಗ ಹತ್ತಿರದಲ್ಲಿ ಹಾಳೆ ಮತ್ತು ಲೇಖನಿ ಇದ್ದರೆ, ಅದನ್ನು ಖಂಡಿತವಾಗಿಯೂ ಗುರುತು ಹಾಕಿಕೊಳ್ಳುತ್ತೇನೆ."

ಇಷ್ಟಾಗಿಯೂ, ವದಂತಿಗಳಿಗೆ ಕೊನೆ ಎಂಬುದೇ ಇರಲಿಲ್ಲ. ಗುರುದೇವ ರವೀಂದ್ರನಾಥ ಠಾಕೂರರ ಎದುರಿಗೂ ಕುಡಿಯುತ್ತಾರೆ ಹಾಗೂ ವೇಶ್ಯೆಯ ಜೊತೆಯಲ್ಲಿ ಹಾಡುತ್ತಾರೆ, ವಾದ್ಯ ನುಡಿಸುತ್ತಾರೆ ಎಂದೆಲ್ಲ ವದಂತಿ ಹರಡಿತ್ತು. ಅವರ ಬಳಿ ಒಂದು ಅಪೂರ್ವವಾದ 'ಪಂಚ ರತ್ನಿ'-ಅಂದರೆ, ಬೆಳ್ಳಿಯ ಹುಕ್ಕಾ-ಇದೆ; ಅದರ ಮೇಲೆ ಬೆಳ್ಳಿಯ ಚಿಲುಮೆ ಇದೆ; ಆ ಚಿಲುಮೆಯಲ್ಲಿ ನಾಲ್ಕು ಖಾನೆಗಳಿವೆ; ಒಂದರಲ್ಲಿ ಗಾಂಜಾ, ಇನ್ನೊಂದರಲ್ಲಿ ಭಂಗಿ ಸೊಪ್ಪು, ಮೂರನೆಯದರಲ್ಲಿ ಅಫೀಮು ಮತ್ತು ನಾಲ್ಕನೆಯದರಲ್ಲಿ ಹೊಗೆಸೊಪ್ಪು ತುಂಬಿರುತ್ತದೆ; ಹುಕ್ಕಾದಲ್ಲಿಯೂ ಮದ್ಯ ತುಂಬಿರುತ್ತದೆ ಎಂಬ ಒಂದು ವಿಚಿತ್ರವಾದ ವಂದತಿಯೂ ಹರಡಿಕೊಂಡಿತ್ತು.

ಇಂಥ ಎಲ್ಲ ವದಂತಿಗಳ ಉಗಮಸ್ಥಾನ ಅವರ ಬಳಿಯಲ್ಲಿಯೇ ಇದ್ದಿತ್ತು. ಅನೇಕ ಸಲ ಅನೇಕ ವ್ಯಕ್ತಿಗಳೊಂದಿಗೆ ತುಂಬ ಗಂಭೀರವಾಗಿ(?) ತಾವು ಅತಿಯಾಗಿ ಮದ್ಯಪಾನ ಮಾಡುವ ಮಾತನ್ನು ಅವರು ಹೇಳಿದ್ದರು ಇಲ್ಲವೇ ಅವರ ಗೆಳೆಯರು ಅವರ ಬಾಯಿಂದ ಅಂಥ ಮಾತನ್ನು ಹೇಳಿಸಿದ್ದರು. ಅವರು ಮೋಜು ಮಾಡುವ ಬಗೆಗಿನ ಕಲ್ಪನೆಗಳಿಗೂ ಕೊನೆ ಮೊದಲೆಂಬುದಿರಲಿಲ್ಲ. ಬಹು ದಿನಗಳ ಮೊದಲು ರಂಗೂನಿನಿಂದ ತಮ್ಮ ಗೆಳೆಯನೊಬ್ಬನಿಗೆ ಬರೆದಿದ್ದ ಪತ್ರದಲ್ಲಿ ಅವರು ಹೀಗೆಂದಿದ್ದರು: "ಬಾಟಲ ಮೇಲೆ ಬಾಟಲು ಮದ್ಯವನ್ನು ಕುಡಿದು ಆವೇಶಭರಿತನಾಗಿ 'ದೇವದಾಸ್' ಕಾದಂಬರಿಯನ್ನು ಬರೆದಿದ್ದೇನೆ."[2]

ಆದರೆ, ಇದಕ್ಕೂ ಬಹಳ ಹಿಂದೆಯೇ ಬರೆದಿದ್ದ ಇನ್ನೊಂದು ಪತ್ರದಲ್ಲಿ ಹೀಗೆಂದು ಹೇಳಿದ್ದರು:[3] "ಆರು ತಿಂಗಳಿಂದಲೂ ಮದ್ಯವನ್ನು ಮುಟ್ಟಿಲ್ಲ. ಶರೀರ ಈಗ

---

1. ಶ್ರೀ ಅಮಲ್ ಹೋಮ್ ಅವರೂ ಈ ಲೇಖಕನೊಂದಿಗೆ ಇದೇ ಅರ್ಥದ ಮಾತುಗಳನ್ನು ಹೇಳಿದ್ದರು.

2 1913ರಲ್ಲಿ

3 ಫೆಬ್ರವರಿ 22, 1908

ಸ್ವಲ್ಪಮಟ್ಟಿಗೆ ಆರೋಗ್ಯದಿಂದ ಕೂಡಿರುವಂತೆ ತೋರುತ್ತದೆ. ಮದ್ಯವನ್ನು ಮುಟ್ಟದೆಯೇ ಇದ್ದರೆ, ಬಹುಬೇಗ ಸರಿಹೋಗಿಬಿಡುವಂತೆ ಕಾಣುತ್ತದೆ."

ರಂಗೂನಿನಲ್ಲಿ ತಾವು ಹೇಗೆ ಮದ್ಯಪಾನದ ಅಭ್ಯಾಸವನ್ನು ತೊರೆದರು ಎಂಬುದನ್ನು ಉಲ್ಲೇಖಿಸುತ್ತ, ತಮ್ಮ ಗೆಳೆಯರಾಗಿದ್ದ ಹರಿದಾಸ ಶಾಸ್ತ್ರಿಗಳೊಂದಿಗೆ ಒಮ್ಮೆ ಅವರು ಹೀಗೆ ಹೇಳಿದ್ದರು: "ನನ್ನನ್ನು ಭೇಟಿಯಾಗಲು ಶ್ರೀರಾಮಪುರದಿಂದ ಬಂದಿದ್ದಾಕೆ ಎಂಥ ಅದ್ಭುತ ಹುಡುಗಿ ಎಂಬುದು ನಿಮಗೆ ಗೊತ್ತೇನು ?"

ಹರಿದಾಸರೆಂದರು: "ಇಲ್ಲ."

ಶರತ್ ಹೇಳಿದರು: "ಆ ಹುಡುಗಿ ನನ್ನ ಬಳಿಗೆ ಬಂದಳು. 'ತುಂಬ ದಿವಸದಿಂದ ನಿಮ್ಮನ್ನು ಭೇಟಿಯಾಗಬೇಕೆಂಬ ಆಸೆ ಇತ್ತು. ಆದರೆ, "ನೀನು ಒಳ್ಳೆಯ ಮನೆತನದ ಹುಡುಗಿ, ನೀನು ಶರತ್ ಅವರನ್ನು ಭೇಟಿಯಾಗಲು ಹೇಗೆ ಸಾಧ್ಯ! ಅದೆಷ್ಟು ಧೈರ್ಯ ನಿನಗೆ ?" ಎಂದು ನನ್ನ ಆತ್ಮೀಯರು ನನಗೆ ಹೇಳಿದ್ದರು' ಎಂದಳು. ಇದನ್ನೆಲ್ಲ ತಿಳಿಸಿ, ಅವಳು ನನ್ನನ್ನು ಪ್ರಶ್ನಿಸಿದಳು: 'ಯಾವ ಯುವತಿಯೂ ನಿಮ್ಮನ್ನು ಭೇಟಿಯಾಗದಷ್ಟು ನೀವು ಕೆಟ್ಟವರಾಗಿದ್ದೀರಿ ಎಂಬುದು ನಿಜವೇನು ?' ನಾನು ನಕ್ಕು ಹೇಳಿದೆ: 'ಹತ್ತು ವರ್ಷಗಳಷ್ಟು ಹಿಂದಿನ ಶರತ್ ಬಗ್ಗೆ ಈ ಮಾತನ್ನಾಡಿದ್ದರೆ, ಅದರ ಬಗ್ಗೆ ನಾನು ಏನನ್ನೂ ಹೇಳುತ್ತಿರಲಿಲ್ಲ. ಏಕೆಂದರೆ, ಆಗ ನಾನು ಅತಿಯಾಗಿ ಮದ್ಯಪಾನ ಮಾಡುತ್ತಿದ್ದೆ. ಹಗಲೂ-ರಾತ್ರಿ ಅಮಲಿನಲ್ಲಿ ಮುಳುಗಿರುತ್ತಿದ್ದೆ. ಆದರೂ, ಆಗಲೂ ಎಂದೂ ಯಾವ ಹೆಣ್ಣನ್ನೂ ನಾನು ಅಪಮಾನಿಸಿಲ್ಲ ಎಂದು ಹೇಳಬಲ್ಲೆ. ಈಗಂತೂ ನಾನು ನಿನ್ನ ಅಣ್ಣನಂತೆ ಇದ್ದೇನೆ. ನಿರ್ಭಯವಾಗಿ ನೀನು ನನ್ನ ಬಳಿಗೆ ಬರಬಹುದು."

ಹರಿದಾಸ ಶಾಸ್ತ್ರಿಗಳು ಕೇಳಿದರು: "ಅತಿಯಾಗಿ ಮದ್ಯಪಾನ ಮಾಡುತ್ತಿದ್ದಿರೇನು ?"

ಶರತ್‌ಚಂದ್ರರು ಹೇಳಿದರು: "ಹೌದಪ್ಪ! ಕುಡಿಯುತ್ತಿದ್ದೆ. ಆದರೆ ಒಂದು ದಿವಸ ಅದನ್ನು ಬಿಟ್ಟುಬಿಟ್ಟೆ."

"ಹೇಗೆ ಬಿಟ್ಟಿರಿ ?"

"ಸರಿ, ಹೇಳುತ್ತೇನೆ, ಕೇಳಿ. ಇನ್ನೊಬ್ಬ ಚಟರ್ಜಿಯೂ ಇದ್ದರು, ಬರ್ಮಾದ ಮತ್ತೊಬ್ಬ ಗೆಳೆಯರಿದ್ದರು. ನಾವು ಮೂವರು ಒಟ್ಟಿಗೆ ಕುಡಿಯುತ್ತಿದ್ದೆವು. ಇದ್ದಕ್ಕಿದ್ದಂತೆ ಅವರೊಮ್ಮೆ ಅಸ್ವಸ್ಥರಾದರು. ಮದ್ಯ ಸೇವಿಸಕೂಡದೆಂದು ವೈದ್ಯರು ನಿರ್ಬಂಧವನ್ನು ವಿಧಿಸಿದರು. ರಜೆ ಪಡೆದುಕೊಂಡು ಅವರು ವೈದ್ಯಕೀಯ ಚಿಕಿತ್ಸೆ ಮಾಡಿಸಿಕೊಳ್ಳತೊಡಗಿದರು. ಒಂದು ದಿವಸ ಹೀಗಾಯಿತು. ರಾತ್ರಿ ಸುಮಾರು ಹನ್ನೊಂದು ಘಂಟೆಯ ಹೊತ್ತಿಗೆ ಆ ಇನ್ನೊಬ್ಬ ಚಟರ್ಜಿ ನನ್ನ ಮನೆಗೆ ಬಂದು ಕೂಗು ಹಾಕಿದರು. ಏನು ಎಂದು ಕೇಳಿದಾಗ, 'ಅಂಗಡಿಗಳೆಲ್ಲ ಮುಚ್ಚಿವೆ' ಎಂದೂ 'ನನಗೆ ತುಂಬ ಬಾಯಾರಿದೆ ಸ್ವಲ್ಪ ಮದ್ಯ ಬೇಕು ಎಂದೂ ಹೇಳಿದರು. ನನ್ನ ಹತ್ತಿರ ಇದ್ದಷ್ಟು ಮದ್ಯದಿಂದ ಅವರ ಬಾಯಾರಿಕೆ ಇಂಗಲಿಲ್ಲ. 'ನಡೆಯಪ್ಪ, ನಮ್ಮ ಆ ಬರ್ಮಾದ ಗೆಳೆಯನ ಹತ್ತಿರ ಹೋಗೋಣ' ಎಂದು ಹೇಳಿದರು.

"ನಾನು ಒಪ್ಪಲಿಲ್ಲ. ಆದರೆ, ಅವರು ಬಿಡಬೇಕಲ್ಲ! ನಾನು ಅವರ ಜೊತೆಯಲ್ಲಿ ಹೋಗಲೇ ಬೇಕಾಯಿತು. ರಾತ್ರಿಯ ಒಂದು ಘಂಟೆ ಆಗಿ, ಎಷ್ಟೋ ಹೊತ್ತಾಗಿತ್ತು.

ತುಂಬ ಹೊತ್ತು ಕೂಗು ಹಾಕಿದ ಮೇಲೆ ನಮ್ಮ ಗೆಳೆಯನ ಮಡದಿ ಕಿಟಕಿಯಿಂದ ಇಣುಕಿ ನೋಡಿ ಹೀಗೆ ಹೇಳಿದಳು: 'ನನ್ನ ಯಜಮಾನರ ಆರೋಗ್ಯ ಸರಿಯಿಲ್ಲ. ದಯವಿಟ್ಟು ತಾವು ಹೊರಟುಹೋಗಿ.'

'ಆದರೆ, ಅಷ್ಟು ಹೊತ್ತಿಗೆ ನಮ್ಮ ಧ್ವನಿಯನ್ನು ಕೇಳಿ ಆ ಗೆಳೆಯ ಎಚ್ಚರಗೊಂಡಿದ್ದ. 'ಬಾಗಿಲು ತೆಗಿ. ನಮ್ಮ ಮನೆಯಲ್ಲಿ ಒಂದು ಬಾಟಲ್ ಇದೆ. ಅದು ಈಗ ನನಗೇನೂ ಬೇಕಾಗಿಲ್ಲ. ನಾನಂತೂ ಈಗ ಮದ್ಯವನ್ನು ಮೂಸಿಯೂ ನೋಡುವುದಿಲ್ಲವಲ್ಲ" ಎಂದು ಆತ ತನ್ನ ಮಡದಿಯನ್ನು ಒತ್ತಾಯಪಡಿಸಿದ.

"ನಾನೇನೂ ಮೈಮರೆತಿರಲಿಲ್ಲ. ಹಿಂದಿರುಗಿ ಹೋಗೋಣವೆಂದು ಆಗಲೂ ನಾನು ಆತನನ್ನು ಒತ್ತಾಯಪಡಿಸಿದೆ. ಆದರೆ ಚಟರ್ಜಿ ನನ್ನ ಮಾತಿಗೆ ಸೊಪ್ಪು ಹಾಕಲಿಲ್ಲ. ಒಳಕ್ಕೆ ಹೋಗಿ ನಾವೆಲ್ಲರೂ ಒಂದು ಪುಟ್ಟ ಮೇಜಿನ ಬಳಿ ಕುಳಿತೆವು. ತನ್ನ ಗಂಡನ ಮೇಲೆ ಕಣ್ಣಿಡುವುದಕ್ಕಾಗಿ ಆಕೆಯೂ ಅಲ್ಲಿಯೇ ಬಂದು ಕುಳಿತಳು. ಆದರೆ, ದಿನವಿಡೀ ದುಡಿದಿದ್ದುದರಿಂದಾಗಿ ಆಕೆ ಬಹುಬೇಗ ತೂಕಡಿಸತೊಡಗಿದಳು. ಇದನ್ನು ಕಂಡು, ಮದ್ಯವನ್ನು ಕುಡಿಯುವಂತೆ ಚಟರ್ಜಿ ಆ ಗೆಳೆಯನಿಗೆ ಸಂಕೇತ ಮಾಡಿದ. ಆದರೆ, ತನ್ನ ಹೆಂಡತಿಯತ್ತ ದೃಷ್ಟಿಹರಿಸಿ, ಆತ ಒಲ್ಲೆನೆಂದು ಹೇಳಿದ. ಆಮೇಲೆ, ಗೆಳೆಯನ ಆ ಹೆಂಡತಿಗೆ ನಿಜವಾಗಿಯೂ ನಿದ್ದೆ ಬಂದಿತು. ಚಟರ್ಜಿ ಮತ್ತೆ ಒತ್ತಾಯಪಡಿಸಿದ. ಆ ಗೆಳೆಯ ಈ ಒತ್ತಾಯವನ್ನು ನಿರಾಕರಿಸಲಾರದೆ ಹೋದ. ಒಂದು ಸುತ್ತು, ಎರಡು ಸುತ್ತು ಆಯಿತು. ಮೂರನೆಯ ಸುತ್ತು ಕುಡಿಯುತ್ತಿದ್ದಂತೆಯೇ ಮದ್ಯದ ಬಟ್ಟಲು ಅವನ ಕೈಯಿಂದ ಜಾರಿ ಬಿತ್ತು. ಹಾ, ಹಾ ಎಂದು ಭಯಂಕರವಾಗಿ ನರಳುತ್ತ ಅವನೂ ನೆಲದ ಮೇಲೆ ಉರುಳಿ ಬಿದ್ದ. ಈ ಸದ್ದನ್ನು ಕೇಳಿ ಆತನ ಹೆಂಡತಿ ಮತ್ತು ಮಕ್ಕಳೆಲ್ಲ ಎದ್ದರು. ಆ ಗೆಳೆಯನ ಎದೆಯ ಮೇಲೆ ಹೊರಳಾಡುತ್ತ ಆಕೆ ಚೀತ್ಕಾರ ಮಾಡಿದಳು. ಆ ಚಿತ್ಕಾರವನ್ನು ಕೇಳಿದೊಡನೆಯೇ ನಮ್ಮ ಅಮಲು ಇಳಿದು ಹೋಯಿತು. ರಾತ್ರಿಯಿಡೀ ಪೊಲೀಸು ಠಾಣೆ ವಿಚಾರಣೆ ಇದೇ ಆಯಿತು. ಮಾರನೆಯ ದಿವಸ ಆ ಗೆಳೆಯನ ಅಂತ್ಯ ಸಂಸ್ಕಾರವೂ ಆಯಿತು. ಅಲ್ಲಿಂದ ಹಿಂದಿರುಗಿದ ಮೇಲೆ ಇನ್ನು ಮುಂದೆ ಮದ್ಯಪಾನ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದೆ. ಚಟರ್ಜಿಯೂ ಪ್ರತಿಜ್ಞೆ ಮಾಡಿದ. ಆದರೆ, ಅದರಂತೆ ನಡೆದುಕೊಳ್ಳಲಾರದೆ ಹೋದ. ಹರಿದಾಸ್ ಒಬ್ಬ ಸಭ್ಯ ವ್ಯಕ್ತಿ. ಹೆಂಡತಿ ಮಕ್ಕಳ ಜೊತೆ ಸುಖವಾಗಿ ನಿದ್ದೆ ಮಾಡುತ್ತಿದ್ದ ಎಂದಿಟ್ಟುಕೊಳ್ಳಿ. ರಾತ್ರಿ ಒಂದು ಘಂಟೆಯ ಹೊತ್ತಿಗೆ ಇಬ್ಬರು ಅವನ ಮನೆಗೆ ನುಗ್ಗಿ ಅವನನ್ನು ಕೊಂದು ಹಾಕಿದರು ಅನ್ನಿ. ಅದಕ್ಕೂ ಇದಕ್ಕೂ ವ್ಯತ್ಯಾಸವೇನು ಬಂತು? ಇಂಥ ಭಯಂಕರ ಘಟನೆ ನಡೆದ ಬಳಿಕವೂ ಕುಡುಕನಿಗೆ ಜ್ಞಾನೋದಯವಾಗದೆ ಇದ್ದರೆ, ಇನ್ನು ಯಾವಾಗ ಆದೀತು?"

ಇಳಾಚಂದ್ರ ಜೋಶಿ ಅವರೊಂದಿಗೆ ಹೇಳಿದ ಮಾತುಗಳಿಗೂ ಈ ವರ್ಣನೆಗೂ ಒಂದಿಷ್ಟು ಹೊಂದಾಣಿಕೆ ಇಲ್ಲವೆಂಬುದು ನಿಜ. ಆದರೆ, ಆಯಾ ಪ್ರಸಂಗಗಳಲ್ಲಿ ಈ ಎರಡೂ ಹೇಳಿಕೆಗಳಲ್ಲಿ ಸಾಕಷ್ಟು ಸತ್ಯವಿರುವಂತೆ ತೋರುತ್ತದೆ. ಶರತ್‌ಚಂದ್ರರ ಇಡೀ ಜೀವನವೇ ವಿರೋಧಾಭಾಸಗಳಿಂದ ತುಂಬಿದ್ದು, ಅವುಗಳ ನಡುವೆ ಸತ್ಯವನ್ನು

ಕಂಡುಕೊಳ್ಳುವುದೂ ತುಂಬ ಕಷ್ಟವೇ ಆಗಿದೆ. ಅವರವೆಂದು ಹೇಳಲಾಗಿರುವ ಈ ಹೇಳಿಕೆಗಳು ನಿಜವೋ ಸುಳ್ಳೋ ಏನಾದರೂ ಆಗಿರಲಿ, ಮದ್ಯಪಾನ ಮಾಡುವುದನ್ನು ಬಿಡಬೇಕೆಂದು ಅವರು ಅನೇಕ ಸಲ ಪ್ರಯತ್ನಿಸಿದರೆಂಬುದೂ ಭಾರತಕ್ಕೆ ಹಿಂದಿರುಗಿದ ಬಳಿಕ ಅವರು ಕುಡಿಯಬೇಕೆಂದೇ ಎಂದೂ ಕುಡಿಯಲಿಲ್ಲವೆಂಬುದೂ ನಿಜ. ಆಗಾಗ್ಗೆ ಸ್ನಾಯು-ತಂತುಗಳನ್ನು ಉತ್ತೇಜಿಸುವುದಕ್ಕಾಗಿ ಔಷಧದ ರೂಪದಲ್ಲಿ ಒಂದೆರಡು ಪೆಗ್‌ನಷ್ಟು ಮದ್ಯಪಾನ ಮಾಡುತ್ತಿದ್ದುದುಂಟು. ತಮ್ಮ ಒಳಗಿನ ನೈಚ್ಯಾನು ಸಂಧಾನವನ್ನು ಮೀರಿ ನಿಂತು, ಸಮಾಜದಲ್ಲಿ ಒಬ್ಬ ಸ್ವಸ್ಥ ಸಾಮಾಜಿಕ ವ್ಯಕ್ತಿಯಂತೆ ವರ್ತಿಸಲು ಇದರಿಂದ ಅವರಿಗೆ ಸಾಧ್ಯವಾಗುತ್ತಿತ್ತು.

ಲೇಖಕ ತನ್ನ ಕೃತಿಯಲ್ಲಿ ಒಂದಲ್ಲ ಒಂದು ರೂಪದಲ್ಲಿ ತನ್ನನ್ನು ಹಾಗೂ ತನ್ನ ಭಾವನೆಗಳನ್ನು ಚಿತ್ರಿಸಿಯೇ ಇರುತ್ತಾನೆ. ಅವರ ಕೃತಿಗಳಲ್ಲಿ ಕುಡುಕರ ಅನೇಕ ಪಾತ್ರಗಳು ಬರುತ್ತವೆಯಾದರೂ ಅವರಲ್ಲಿ ದೇವದಾಸನೊಬ್ಬನೇ ನಿಜಕ್ಕೂ ಮದ್ಯವ್ಯಸನಿಯಂತೆ ಕಾಣುತ್ತಾನೆ. ಪ್ರೇಮದ ವಿಷಯದಲ್ಲಿ ನಿರಾಶನಾಗಿರುವ ಅವನು, ಆ ನಿರಾಶೆಯನ್ನು ಮರೆಯುವ ಸಲುವಾಗಿಯೇ ಕುಡಿತಕ್ಕೆ ಶರಣಾಗುತ್ತಾನೆ. ಬಹುಶಃ ಇದೇ ರೀತಿ ಶರತ್‌ಚಂದ್ರರೂ ಒಂದು ದಿವಸ ಕುಡಿಯಲು ಆರಂಭಿಸಿದ್ದಿರಬೇಕು. 'ದೇವದಾಸ್' ಕಾದಂಬರಿಯನ್ನು ಬರೆದಾಗ ಅವರಿಗೆ ಹದಿನೇಳು ವರ್ಷ ವಯಸ್ಸಾಗಿತ್ತು. ಪ್ರೇಮಪಾಶಕ್ಕೆ ಸಿಲುಕಿಕೊಳ್ಳುವುದಕ್ಕೆ ಇದಕ್ಕಿಂತಲೂ ಉತ್ತಮವಾದ ವಯಸ್ಸುಂಟೆ? ಎಲ್ಲ ಕಡೆಗಳಲ್ಲೂ ಉಪೇಕ್ಷೆಗೆ, ಅಪಮಾನಕ್ಕೆ ಒಳಗಾಗಿ ಬಿಟ್ಟಾಗ ಕುಡಿತಕ್ಕೆ ಶರಣಾಗುವುದು ಸಹಜವೆಂದೇ ತೋರುತ್ತದೆ. ದೇವದಾಸ್ ಮಾಡಿದ್ದೂ ಇವನ್ನೇ. ಆದರೆ, ತಮ್ಮ ಮುಂದಿನ ಕೃತಿಗಳಲ್ಲಿ ಅವರು ಇಂಥ ಪಾತ್ರಗಳನ್ನು ಸೃಷ್ಟಿಸಲಿಲ್ಲ. 'ಚರಿತ್ರ ಹೀನ' ಕಾದಂಬರಿಯ ಸತೀಶ ಕುಡಿಯುತ್ತಾನೆಂಬುದು ನಿಜ. ಆದರೆ, ಅದನ್ನು ಬಿಟ್ಟುಬಿಡುವ ದಿಕ್ಕಿನಲ್ಲಿಯೇ ಅವನು ಸತತವಾಗಿ ತನ್ನ ಪ್ರಯತ್ನಗಳನ್ನು ಮುಂದುವರಿಸಿರುತ್ತಾನೆ. ಒಂದು ದಿವಸ, ಸಾವಿತ್ರಿಯ ಎದುರಿಗೆ, ಮದ್ಯಪಾನ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿ, ಆ ಚಟದಿಂದ ಮುಕ್ತನಾಗಿ ಬಿಡುತ್ತಾನೆ. 'ದೇನಾ-ಪಾವನಾ'ದಲ್ಲಿ ಬರುವ ಕುಡುಕ ಜಮೀನುದಾರ ಜೀವಾನಂದನೂ ಒಂದು ದಿವಸ ತುಂಬಿದ ಮದ್ಯದ ಬಟ್ಟಲನ್ನು ಹಿಂದಿರುಗಿಸಿ ಬಿಡುತ್ತಾನೆ ಹಾಗೂ ತನ್ನಿಂದ ತಾನೇ ಮದ್ಯಕ್ಕೆ ಬದಲಾಗಿ ಚಹಾ ಕುಡಿದು ಮನೆಯಿಂದ ಹೊರಬೀಳುತ್ತಾನೆ. 'ಪಥೇರ್ ದಾಬೀ' ಕಾದಂಬರಿಯಲ್ಲಿ ಬರುವ ಕವಿ ಶಶಿಯೂ ನವತಾರಾಳ ಹಾಗೂ ವೈದ್ಯರ ಮಾತನ್ನು ಕೇಳಿ, ಮದ್ಯಪಾನ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡುತ್ತಾನೆ.

ಮದ್ಯಪಾನ ಕೆಟ್ಟದೆಂದು ಒಪ್ಪಿದರೂ, ಕವಿಗಳಿಗೆ ಹಾಗೂ ಗುಣವಂತರಾದ ಇಂಥ ವಿಶಿಷ್ಟ ವ್ಯಕ್ತಿಗಳಿಗೆ ಮದ್ಯಪಾನ ಮಾಡಲು ವಿನಾಯಿತಿ ಇರಬೇಕೆಂಬ ವಿಚಾರ ಅವರಿಗೆ ಒಪ್ಪಿಗೆಯಾಗಿರುವಂತೆ ತೋರುತ್ತದೆ. ಬಹುಶಃ 'ಪಥೇರ್ ದಾಬೀ' ಕಾದಂಬರಿಯ ವೈದ್ಯನ ಮೂಲಕ ಅವರೇ ಈ ಮಾತುಗಳನ್ನು ಆಡುತ್ತಿರುವಂತೆ ತೋರುತ್ತದೆ. "ಇದಕ್ಕಿಂತಲೂ ಬೇರೆಯಾಗಿ ನಿಲ್ಲುವವರೆಂದರೆ ಕವಿಗಳು ಮತ್ತು ವಿಶಿಷ್ಟ ಗುಣವುಳ್ಳ ವ್ಯಕ್ತಿಗಳು. ಅವರ ಜಾತಿಯೇ ಬೇರೆ. ಅವರ ಒಳಿತುಕೆಡುಕುಗಳು ನಮ್ಮ

ಒಳಿತು-ಕೆಡುಕುಗಳು ಅಭಿನ್ನವೆಂಬಂತೆ ಒಂದರೊಡನೊಂದು ಬೆರೆಯುವುದೇ ಇಲ್ಲ. ಒಳಿತು-ಕೆಡುಕುಗಳ ಬಗೆಗಿನ ಲೋಕದ ರೀತಿನೀತಿಗಳಿಂದ ಅವರಿಗೆ ವಿನಾಯಿತಿ ಕೊಟ್ಟು ಬಿಡಬೇಕೆಂಬುದು ಇದರ ಅರ್ಥವಲ್ಲ. ಅವರ ಸದ್ಗುಣಗಳ ಫಲವನ್ನು ನಾವೆಲ್ಲ ಒಟ್ಟಾಗಿ ಸೇರಿ ಅನುಭವಿಸಿ, ಆನಂದಿಸುತ್ತೇವೆ, ಆದರೆ ನಮ್ಮ ದುರ್ಗುಣಗಳ ಫಲವನ್ನು ಅವರು ಮಾತ್ರವೇ ಅನುಭವಿಸುತ್ತಾರೆ."

ಶರತ್‌ಚಂದ್ರರು ಈ ಬೇರೆ ಜಾತಿಗೆ ಸೇರಿದ ವ್ಯಕ್ತಿಯಾಗಿದ್ದರು. ಅವರು ಪ್ರತ್ಪೂರ್ವಕವಾಗಿ ಈ ಆಂದೋಳನದಲ್ಲಿ ಪಾಲ್ಗೊಂಡಿದ್ದರು. ಅವರು ಈ ಕ್ಷೇತ್ರವನ್ನು ಪ್ರವೇಶಿಸಿದ್ದು ಹಲವು ಕಾರಣಗಳಿಂದ ತುಂಬ ಮಹತ್ವದ ಸಂಗತಿಯೇ ಆಗಿತ್ತು. ಅವರು ಸಾಹಿತಿಯಾಗಿದ್ದರು. ಸಾಮಾನ್ಯವಾಗಿ ಸಾಹಿತಿಗಳು ರಾಜಕೀಯದ ಕೆಸರು ನೆಲದಿಂದ ದೂರವಾಗಿಯೇ ಇರುತ್ತಾರೆ. ಆದರೆ, ಭಾರತದ ಸ್ವಾತಂತ್ರ್ಯಕ್ಕಾಗಿ ಗಾಂಧೀಜಿಯವರು ನಡೆಸಿದ್ದ ಆಂದೋಳನ ಒಣ ರಾಜಕೀಯ ಮಾತ್ರವಾಗಿರಲಿಲ್ಲವೆಂದು ಅವರು ನಂಬಿದ್ದರು. ಅದನ್ನು ಅವರು ನಾಡಿನ ಮುಕ್ತಿಯ ವ್ರತವೆಂದು ಭಾವಿಸಿದ್ದರು. ನಾಡಿನ ದಾಸ್ಯವನ್ನು ಸಹಿಸಿಕೊಳ್ಳುವಂಥವನು ಸಾಹಿತಿಯೇ ಅಲ್ಲವೆಂದೂ ಅವರು ನಂಬಿದ್ದರು. ಆದ್ದರಿಂದಲೇ ಅವರ ಸಾಹಿತ್ಯದಲ್ಲಿ ನಾಡಿನ ಹಾಗೂ ಮಾನವನ ಬಗೆಗಿನ ಪ್ರೀತಿ, ಪರಿಷ್ಕೃತ ರೂಪದಲ್ಲಿ ಕಾಣಸಿಕೊಳ್ಳುತ್ತದೆ. ನಾಡಿನ ಮತ್ತು ಮಾನವನ ಬಗೆಗಿನ ಈ ಪ್ರೀತಿಯಿಂದಾಗಿಯೇ ಅವರು ಅಸಹಕಾರ ಚಳವಳಿಯಿಂದ ದೂರವಾಗಿರಲಾರದೆ ಹೋದರು. ಅವರ ಇತರ ಕೆಲವು ಸಾಹಿತಿ ಮಿತ್ರರು ಅವರೊಂದಿಗೆ ಹೀಗೆಂದು ಹೇಳಿದರು: "ನೀವಂತೂ ಸಾಹಿತಿಗಳು, ಸಾಹಿತ್ಯ-ಚರ್ಚೆ ನಿಮ್ಮ ಕೆಲಸವೇ ಹೊರತು ರಾಜಕೀಯವಲ್ಲ."

ಶರತ್‌ಚಂದ್ರರು ಹೀಗೆಂದು ಉತ್ತರಿಸಿದರು: "ಇದು ನಿಮ್ಮ ತಪ್ಪು ಕಲ್ಪನೆ. ರಾಜಕೀಯದಲ್ಲಿ ಪಾಲ್ಗೊಳ್ಳುವುದು ದೇಶವಾಸಿಗಳ ಕರ್ತವ್ಯ. ಅದರಲ್ಲಿಯೂ ನಮ್ಮ ನಾಡಿನ ಈ ಆಂದೋಳನ ನಾಡಿನ ಬಿಡುಗಡೆಯ ಆಂದೋಳನವಾಗಿಬಿಟ್ಟಿದೆ. ಜನಾಭಿಪ್ರಾಯವನ್ನು ಜಾಗೃತಗೊಳಿಸುವ ಗುರುತರವಾದ ಹೊಣೆ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಸಾಹಿತಿಗಳದ್ದೇ ಆಗಿದೆ. ಯುಗಯುಗಗಳಿಂದಲೂ ಅವರೇ ಮಾನವನ ಮನಸ್ಸಿನಲ್ಲಿ ಬಿಡುಗಡೆಯ ಆಕಾಂಕ್ಷೆಯನ್ನು ಒಡಮೂಡಿಸುತ್ತ ಬಂದಿದ್ದಾರೆ. ನಿಮ್ಮ ಮಾತನ್ನು ಒಪ್ಪಿಕೊಳ್ಳುವುದೇ ಆದರೆ, ವಕೀಲರು, ವೈದ್ಯರು, ವಿದ್ಯಾರ್ಥಿಗಳೆಲ್ಲರೂ ಇದೇ ತರ್ಕವನ್ನು ಮುಂದಿರಿಸುತ್ತಾರೆ. ಆಗ ರಾಜಕೀಯವನ್ನು ಕೈಗೆತ್ತಿಕೊಳ್ಳುವವರು ಯಾರು ?"

ದೇಶದ ಬಿಡುಗಡೆಯ ಆಂದೋಳನದಲ್ಲಿ ಶರತ್‌ಚಂದ್ರರಿಗೆ ಪೂರ್ಣ ವಿಶ್ವಾಸವಿತ್ತು. ಆದರೆ, ಈ ಆಂದೋಳನದ ಎಲ್ಲ ಕಾರ್ಯಕ್ರಮಗಳಲ್ಲಿಯೂ ಅವರಿಗೆ ಸಂಪೂರ್ಣ ಶ್ರದ್ಧೆ ಇರಲಿಲ್ಲ, ಅಂಥ ಆಸ್ಥೆಯೂ ಇರಲಿಲ್ಲ. ಅದರಲ್ಲಿಯೂ ಚರ್ಖಾ ಕಾರ್ಯಕ್ರಮದ ಬಗ್ಗೆಯಂತೂ ಅವರಿಗೆ ಎಳ್ಳಷ್ಟೂ ನಂಬಿಕೆ ಇರಲಿಲ್ಲ. ಇಷ್ಟಾಗಿಯೂ ಅವರು ಸತತವಾಗಿ ನೂಲುತ್ತಲೇ ಇದ್ದರು ಹಾಗೂ ಖಾದಿ ಬಟ್ಟೆಗಳನ್ನೇ ಧರಿಸುತ್ತಿದ್ದರು. ಅಲ್ಲಲ್ಲಿ ಚರ್ಖಾ ಕೇಂದ್ರಗಳನ್ನು ಸ್ಥಾಪಿಸುವುದಕ್ಕಾಗಿ ಅವರು ತಮ್ಮ ಕೈಯಿಂದಲೇ ಸಾಕಷ್ಟು ಹಣವನ್ನು ವೆಚ್ಚ ಮಾಡಿದ್ದರು. ತಮಗೆ ನಂಬಿಕೆ ಇರಲಿ

ಅಥವಾ ಇಲ್ಲದಿರಲಿ, ಖಾದಿಯನ್ನೇ ತೊಡಬೇಕೆಂದು ಕಾಂಗ್ರೆಸ್ ಪಕ್ಷ ಗೊತ್ತುಪಡಿಸಿದ ಮೇಲೆ, ಹಾಗೆ ಮಾಡಲೇಬೇಕೆಂಬುದು ಅವರ ಸಿದ್ಧಾಂತವಾಗಿತ್ತು. ಇಲ್ಲವಾದಲ್ಲಿ, ಶಿಸ್ತು ಉಳಿಯುವುದಾದರೂ ಹೇಗೆ? ಈ ಕಾರಣದಿಂದಾಗಿಯೇ ಅವರು ನೂಲುತ್ತಿದ್ದರು - ತುಂಬ ಚೆನ್ನಾಗಿಯೂ ನೂಲುತ್ತಿದ್ದರು. ಅದೆಷ್ಟು ಚೆನ್ನಾಗಿ ನೂಲುತ್ತಿದ್ದರೆಂದರೆ ಒಮ್ಮೆ ಸುಪ್ರಸಿದ್ಧ ವಿಜ್ಞಾನಿ ಆಚಾರ್ಯ ಪ್ರಫುಲ್ಲ ಚಂದ್ರರಾಯ್ ಅವರು ಶರತ್‌ಚಂದ್ರರು ನೂತ ದಾರದಿಂದ ತಯಾರಿಸಿದ ಬಟ್ಟೆಯನ್ನು ತಲೆಯ ಮೇಲಿಟ್ಟುಕೊಂಡು ಕುಣಿದಾಡಿಬಿಟ್ಟಿದ್ದರು.

ವಿಜ್ಞಾನಿ ಪ್ರಫುಲ್ಲಚಂದ್ರರಾಯ್ ಅವರು ಸಾಹಿತಿ ಶರತ್‌ಚಂದ್ರರ ಮಹಾ ಅಭಿಮಾನಿಗಳಾಗಿದ್ದರು. ಅವರ ಬಗ್ಗೆ ಶರತ್‌ಚಂದ್ರರೂ ತುಂಬ ಗೌರವವನ್ನಿಟ್ಟು ಕೊಂಡಿದ್ದರು. ಈ ಇಬ್ಬರು ಮಹಾ ವ್ಯಕ್ತಿಗಳ ಮೊದಲ ಭೇಟಿ ಒಂದು ಅಸಾಧಾರಣ ಘಟನೆ ಎಂಬಂತೆ ಪ್ರಚಾರವನ್ನು ಪಡೆದಿತ್ತು. ಒಮ್ಮೆ ಯಾವುದೋ ಒಂದು ಸಂದರ್ಭದಲ್ಲಿ, ಶರತ್‌ಚಂದ್ರರನ್ನು ಭೇಟಿಯಾಗಬೇಕೆಂಬ ತಮ್ಮ ಆಸೆಯನ್ನು ತಮ್ಮ ವಿದ್ಯಾರ್ಥಿಗಳ ಮುಂದೆ ಅವರು ಹೇಳಿಬಿಟ್ಟಿದ್ದರು. ಕೂಡಲೇ ಒಬ್ಬ ವಿದ್ಯಾರ್ಥಿ ಶರತ್‌ಚಂದ್ರರ ಬಳಿಗೆ ಓಡಿ ಬಂದು, ಎಂದಾದರೂ ಒಂದು ದಿವಸ ರಾಯ್ ಅವರನ್ನು ಭೇಟಿಯಾಗಲು ತಾವು ಬಿಡುವು ಮಾಡಿಕೊಂಡು ಬರಬೇಕೆಂದು ಕೋರಿದ.

ಶರತ್‌ಚಂದ್ರರೂ ಸ್ವತಃ ಈ ವಿಷಯದಲ್ಲಿ ತುಂಬ ಆಸಕ್ತರಾಗಿದ್ದರು. ಆದ್ದರಿಂದ ಅವರು ಆ ಕ್ಷಣವೇ ಆ ವಿದ್ಯಾರ್ಥಿಯೊಂದಿಗೆ ಹೊರಟುಬಿಟ್ಟರು.

ವಿಜ್ಞಾನ ಕಾಲೇಜಿನ ಮಹಡಿಯ ಒಂದು ಕೋಣೆಯಲ್ಲಿ ರಾಯ್ ಅವರು ಇರುತ್ತಿದ್ದರು. ಇಬ್ಬರೂ ನೇರವಾಗಿ ಅಲ್ಲಿಗೇ ಹೋದರು. ಆಗ ರಾಯ್ ಅವರು ತಮ್ಮ ಪುಟ್ಟ ಮಂಚದ ಮೇಲೆ ಕುಳಿತುಕೊಂಡು, ಯಾವುದೋ ಕೆಲಸ ಮಾಡುವುದರಲ್ಲಿ ಮಗ್ನರಾಗಿದ್ದರು. ಮಂಚದ ಹತ್ತಿರವೇ ಎರಡು ಕುರ್ಚಿಗಳಿದ್ದುವು. ಆದರೆ, ಎರಡರ ಮೇಲೂ ಕಾಗದ ಪತ್ರಗಳು ತುಂಬಿಕೊಂಡಿದ್ದುವು. ಕುಳಿತು ಕೊಳ್ಳಲು ಎಲ್ಲಿಯೂ ಒಂದಿಷ್ಟು ಜಾಗವಿರಲಿಲ್ಲ. ಮಂಚದ ಕೊನೆಯಲ್ಲಿ ಕುಳಿತುಕೊಳ್ಳಲೆಂದು ಮುಂದಾದಾಗ, ಕೋಪಗೊಂಡು ರಾಯ್ ಅವರು ಅರಚಿದರು: "ಏಯ್ ಇದೇನು ಮಾಡುತ್ತಿದ್ದೀರಿ? ಏನು ಮಾಡುತ್ತಿದ್ದೀರಿ? ಮಂಚದ ಮೇಲೆ ಕುಳಿತುಕೊಳ್ಳಬೇಡಿ."

ಶರತ್‌ಚಂದ್ರರು ನಿಂತೇ ಇದ್ದರು. ವಿದ್ಯಾರ್ಥಿಗೆ ಉಂಟಾದ ಲಜ್ಜೆಗೆ ಮೇರೆಯೇ ಇರಲಿಲ್ಲ. ಅವನು ಓಡಿಹೋಗಿ ಕುರ್ಚಿಯೊಂದನ್ನು ಎತ್ತಿಕೊಂಡು ಬಂದ. ಶರತ್‌ಚಂದ್ರರು ಅದರ ಮೇಲೆ ಕುಳಿತುಕೊಂಡರು. ಈಗ ರಾಯ್ ಅವರು ಶರತ್‌ಚಂದ್ರರತ್ತ ನೋಡುತ್ತ ಎಂದಿನಂತೆ ಮಾಮೂಲಿ ಪ್ರಶ್ನೆಯೊಂದನ್ನು ಕೇಳಿದರು: "ಈಗ ಏನು ಮಾಡುತ್ತಿದ್ದೀಯೆ?"

ಶರತ್‌ಚಂದ್ರರೆಂದರು: "ಅಷ್ಟೋ ಇಷ್ಟೋ ಬರೆಯುವ ಪ್ರಯತ್ನ ಮಾಡುತ್ತಿದ್ದೇನೆ?"

ಅವನಿಗೆ ಪ್ರೋತ್ಸಾಹ ನೀಡುವ ಧ್ವನಿಯಲ್ಲಿ ಪ್ರಫುಲ್ಲಚಂದ್ರರು ಹೀಗೆಂದರು:

"ಸಂತೋಷ ಮುಂದುವರಿಸಿಕೊಂಡು ಹೋಗು, ಚೆನ್ನಾಗಿ ಬರಿ. ಆದರೆ, ಅಚ್ಚಿಸಲು ಮಾತ್ರ ಆತುರಪಡಬೇಡ"

ಅವರನ್ನು ತಮ್ಮ ಯಾರೋ ಹಳೆಯ ಶಿಷ್ಯನೆಂದು ಭಾವಿಸಿಕೊಂಡಿದ್ದರೆಂಬುದು ರಾಯ್ ಅವರ ಮಾತುಕತೆಗಳಿಂದ ಸ್ಪಷ್ಟವಾಗಿತ್ತು. ವಿನಯದಿಂದ ಶರತ್‌ಚಂದ್ರರು ಹೇಳಿದರು: "ಅಚ್ಚಿಸಲು ಅರ್ಹವಾಗಿರುವಂಥದೇನನ್ನೂ ಬರೆದಿಲ್ಲ. ಪ್ರಯತ್ನ ನಡೆಸಿದ್ದೇನೆ, ಅಷ್ಟೆ."

ಶರತ್‌ಚಂದ್ರರನ್ನು ಕರೆದುಕೊಂಡು ಬಂದಿದ್ದ ಶಿಷ್ಯನಿಗೆ ಇನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಪ್ರಫುಲ್ಲ ಚಂದ್ರರ ಬಳಿಗೆ ಬಂದು ಅವನು ಹೇಳಿದ: "ಇವರು ಶರತ್‌ಚಂದ್ರರು ಸಾರ್."

ಈ ಮಾತನ್ನು ಕೇಳಿದ ಕೂಡಲೇ ಪ್ರಫುಲ್ಲ ಚಂದ್ರ ರಾಯ್ ಅವರು ಕನ್ನಡಕವನ್ನು ಮೇಲೇರಿಸಿ ಶರತ್‌ಚಂದ್ರರನ್ನು ಮೇಲಿನಿಂದ ಕೆಳಕ್ಕೆ ಒಮ್ಮೆ ಚೆನ್ನಾಗಿ ನೋಡಿದರು. ಆ ಬಳಿಕ ಎದ್ದು ಬಾಗಿಲ ಬಳಿಗೆ ಓಡಿ ಬಂದು, ತಮ್ಮ ಅಚ್ಚುಮೆಚ್ಚಿನ ಶಿಷ್ಯರನ್ನೆಲ್ಲ ಹೆಸರು ಹಿಡಿದು ಕರೆಯತೊಡಗಿದರು. ಕ್ಷಣಮಾತ್ರದಲ್ಲಿ ಅಲ್ಲೊಂದು ದೊಡ್ಡ ಗುಂಪೇ ಸೇರಿಬಿಟ್ಟಿತು. ಅವರನ್ನೆಲ್ಲ ಕರೆದುಕೊಂಡು ಸೇನಾಪತಿಗಳಂತೆ ಮುಂದೆ ಮುಂದೆ ಹೆಜ್ಜೆಹಾಕುತ್ತ ಅವರು ಆ ಕೋಣೆಯನ್ನು ಪ್ರವೇಶಿಸಿದರು. ಶರತ್‌ಚಂದ್ರರತ್ತ ಬೆರಳು ತೋರುತ್ತ ಅವರೆಂದರು: "ಅಲ್ಲಿ ನೋಡಿ, ಯಾರು ಕುಳಿತಿದ್ದಾರೆ, ಗೊತ್ತೆ? ಇವರೇ ಶ್ರೀ ಶರತ್‌ಚಂದ್ರ ಚಟ್ಟೋಪಾಧ್ಯಾಯ ಅವರು. ಅಲ್ಲಿ ನೋಡಿ, ಅಲ್ಲಿರುವುದೆಲ್ಲ ಅವರ ಪುಸ್ತಕಗಳೇ. ಇಂದು ಸ್ವತಃ ಇಲ್ಲಿಗೆ ದಯಮಾಡಿಸಿದ್ದಾರೆ. ಚೆನ್ನಾಗಿ ನೋಡಿ. ಅವರ ಪಾದಧೂಳಿಯನ್ನು ಮುಡಿಗಿಟ್ಟುಕೊಳ್ಳಿ."

ಆ ಬಳಿಕ ಶರತ್‌ಚಂದ್ರರ ಬಳಿ ಬಂದು ಕುಳಿತುಕೊಂಡು, ಅಂತರಂಗದ ಗೆಳೆಯನೋ ಎಂಬಂತೆ ಅವರೊಡನೆ ವಿಶ್ವಾಸದಿಂದ ಮಾತನಾಡತೊಡಗಿದರು. "ನಿಮ್ಮ ಪುಸ್ತಕಗಳನ್ನು ಓದಿದ ಮೇಲೆ, ಅದೆಷ್ಟೋ ಸಲ ನಿಮ್ಮನ್ನು ಕಂಡು ಮಾತನಾಡಬೇಕೆಂದು ಆಸೆಪಟ್ಟಿದ್ದೇನೆ. ಇಷ್ಟು ದಿವಸಗಳ ಬಳಿಕ ಇಂದು ಆ ಆಸೆ ನೆರವೇರಿದೆ" ಎಂದರು.

ಅಪರಿಚಯದಿಂದಾಗಿ ಮೊದಲಲ್ಲಿ ತಮ್ಮಿಂದ ಆಗಿದ್ದ ತಪ್ಪಿಗೆ ಕ್ಷಮೆ ಕೋರಬೇಕೆಂಬ ಪರಿವೆಯೂ ಅವರಲ್ಲಿ ಉಳಿಯದಷ್ಟು ಆತ್ಮೀಯವಾಗಿ ಈ ಮಾತುಕತೆ ನಡೆಯತೊಡಗಿತ್ತು. ಸ್ನೇಹ ಇರುವೆಡೆಯಲ್ಲಿ ಕ್ಷಮೆಗೆ ಯಾವುದೇ ಅರ್ಥವೂ ಇರುವುದಿಲ್ಲ.

ಅವರ ಇಡೀ ಜೀವನದಂತೆ ಈ ಭೇಟಿಯೂ ರೋಮಾಂಚಕಾರಿಯಾಗಿತ್ತು. ಮಹಾತ್ಮ ಗಾಂಧೀಜಿಯವರೊಡನೆ ನಡೆದ ಅವರ ಮೊದಲ ಭೇಟಿಯೂ ಬಹುಶಃ ಇಷ್ಟೇ ರೋಮಾಂಚಕವಾಗಿದ್ದಿರಬೇಕು. ಆದರೆ, ಅದರ ಯಾವುದೇ ವಿವರಣೆಯನ್ನು ಯಾರೂ ಬರೆದಿಟ್ಟಿಲ್ಲ. ಬಹಳ ಹಿಂದೆಯೇ ರಂಗೂನಿನಲ್ಲಿ ಅವರು ಮಹಾತ್ಮ ಗಾಂಧೀಜಿಯವರನ್ನು ನೋಡಿದ್ದರು. ಅವರ ಸ್ವಾಗತ ಸಮಾರಂಭದ ವರದಿಯನ್ನು ಅವರೇ ಬರೆದಿದ್ದರು. ಆ ವರದಿ 'ರಂಗೂನ್ ಗೆಜೆಟ್'ನಲ್ಲಿ ಅಚ್ಚಾಗಿತ್ತು. ಆದರೆ, ಭಾರತದಲ್ಲಿ ಗಾಂಧೀಜಿಯವರೊಡನೆ ಆದ ಅವರ ಭೇಟಿಯ ಬಗೆಗಿನ ವಿವರಣೆ

ನಮಗೆ ದೊರೆತಿರುವುದು ಚರ್ಖಾಕ್ಕೆ ಸಂಬಂಧಿಸಿದಂತೆ ನಡೆದ ಮಾತುಕತೆಗಳ ಬಗೆಗೆ. ರಾಯ್ ಅವರಂತೆಯೇ ಗಾಂಧೀಜಿಯವರೂ ಅವರು ನೂತಿದ್ದ ನೂಲಿನ ಬಗೆಗೆ ಮೆಚ್ಚಿಕೆ ವ್ಯಕ್ತಪಡಿಸಿದ್ದರು. ಅಸಹಕಾರ ಚಳವಳಿಯ ಅಂಗವಾಗಿ ಅವರು ಕಲ್ಕತ್ತೆಗೆ ಬಂದಿದ್ದಾಗ, ಒಂದು ದಿವಸ 'ಸರ್ವೆಂಟ್' ಕಛೇರಿಯನ್ನು ನೋಡಲು ಬಂದಿದ್ದರು. ದೇಶಬಂಧು ಚಿತ್ತರಂಜನದಾಸ್ ಅವರ ಮನೆಯಿಂದ ಇನ್ನೂ ಕೆಲವು ವ್ಯಕ್ತಿಗಳು ಅವರೊಡನೆ ಬಂದಿದ್ದರು. ಆಗ ಶ್ಯಾಮಸುಂದರ ಚಕ್ರವರ್ತಿ ಅವರು ಬಂಗಾಳದ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಅವರೂ ಇದ್ದರು, ಶರತ್‌ಚಂದ್ರರೂ ಇದ್ದರು. ಆ ಕಛೇರಿಗೆ ಬಂದ ಮೇಲೆ ಎಲ್ಲರೊಡನೆ ಚರ್ಖಾದಲ್ಲಿ ನೂಲುವ ತಮ್ಮ ಇಚ್ಛೆಯನ್ನು ಗಾಂಧೀಜಿ ವ್ಯಕ್ತಪಡಿಸಿದರು.

ಚರ್ಖಾಗಳು ಬಂದುವು. ಎಲ್ಲರೂ ನೂಲ ತೊಡಗಿದರು. ಗಾಂಧೀಜಿಯವರ ದೃಷ್ಟಿ ತುಂಬ ತೀಕ್ಷ್ಣವಾಗಿತ್ತು. ಶರತ್‌ಚಂದ್ರರು ತೆಗೆಯುತ್ತಿದ್ದ ನೂಲು ತುಂಬ ಸುಂದರವಾಗಿತ್ತೆಂಬುದನ್ನು ಅವರು ಕೂಡಲೇ ಕಂಡುಕೊಂಡರು. ಇದಕ್ಕೆ ವಿರುದ್ಧವಾಗಿ ಶ್ಯಾಮಸುಂದರ ಬಾಬೂಗಳ ನೂಲು ತುಂಬ ದಪ್ಪವಾಗಿತ್ತು. ಪರಿಹಾಸ್ಯದ ಧ್ವನಿಯಲ್ಲಿ ಅವರು ಹೇಳಿದರು: "ಇಲ್ಲಿ ನೋಡಿ, ಬಂಗಾಳ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ಹಗ್ಗದಷ್ಟು ದಪ್ಪನಾದ ನೂಲನ್ನು ತೆಗೆಯುತ್ತಿದ್ದಾರೆ."

ಈ ಮಾತನ್ನು ಕೇಳಿ ಎಲ್ಲರೂ ನಕ್ಕರು. ಶರತ್‌ಚಂದ್ರರೆಂದರು: "ದೇವಾಲಯಕ್ಕೆ ತುಂಬ ಹತ್ತಿರದಲ್ಲಿರುವವರು ದೇವರಿಗೆ ತುಂಬ ದೂರವಾಗಿರುತ್ತಾರೆ."

ಗಾಂಧೀಜಿಯವರು ಕೇಳಿದರು: "ಶರತ್ ಬಾಬೂ, ಚರ್ಖಾ ಕಾರ್ಯಕ್ರಮದ ಬಗ್ಗೆ ನಿಮಗೆ ನಂಬಿಕೆ ಇಲ್ಲವೆ?"

"ಇಲ್ಲ. ಎಳ್ಳಷ್ಟೂ ನಂಬಿಕೆಯಿಲ್ಲ."

ಗಾಂಧೀಜಿಯವರೆಂದರು: "ಆದರೆ, ಅನೇಕ ಚರ್ಖಾ ಪ್ರೇಮಿಗಳಿಗಿಂತಲೂ ಚೆನ್ನಾಗಿ ನೀವು ನೂತಿದ್ದೀರಲ್ಲ!"

ಶರತ್‌ಚಂದ್ರರೆಂದರು: "ನನಗೆ ಪ್ರೀತಿ ಇರುವುದು ಚರ್ಖಾದ ಬಗೆಗಲ್ಲ, ನಿಮ್ಮ ಬಗೆಗೆ. ನಾನೂ ನೂಲುವುದನ್ನು ಕಲಿತದ್ದಕ್ಕೂ ಇದೇ ಕಾರಣ."

ಗಾಂಧೀಜಿಯವರು ನಕ್ಕರು. "ಸ್ವರಾಜ್ಯ ಸಾಧನೆಗೆ ಇದರಿಂದ ಸಹಾಯ ದೊರೆಯುತ್ತದೆಂಬ ವಿಚಾರದಲ್ಲಿಯೂ ನಿಮಗೆ ನಂಬಿಕೆ ಇಲ್ಲವೆ?" ಎಂದು ಕೇಳಿದರು.

ಶರತ್‌ಚಂದ್ರರೂ ನಗುತ್ತ ಹೇಳಿದರು: "ಇಲ್ಲ, ನನಗೆ ನಂಬಿಕೆ ಇಲ್ಲ. ನನ್ನ ಅಭಿಪ್ರಾಯದಲ್ಲಿ ಸ್ವರಾಜ್ಯ ಸಾಧನೆಗೆ ಸಹಾಯ ದೊರೆಯಬಹುದಾಗಿರುವುದು ಸೈನಿಕರಿಂದಲೇ ಹೊರತು, ಚರ್ಖಾಗಳಿಂದಲ್ಲ."

ಈ ಮಾತನ್ನು ಕೇಳಿ ಗಾಂಧೀಜಿ ಜೋರಾಗಿ ನಕ್ಕರು.

ಒಮ್ಮೆ ದೇಶಬಂಧು ಚಿತ್ತರಂಜನ ದಾಸ್ ಅವರೂ ಇದೇ ಪ್ರಶ್ನೆಯನ್ನು ಕೇಳಿದ್ದರು: "ನಿಮಗೆ ಚರ್ಖಾ ಕಾರ್ಯಕ್ರಮದ ಬಗ್ಗೆ ನಂಬಿಕೆ ಇದೆಯೆ?"

ಶರತ್‌ಚಂದ್ರರು ಹೀಗೆಂದು ಹೇಳಿದ್ದರು: "ನಿಮ್ಮ ಯಾವ ನಂಬಿಕೆಯ ವಿಚಾರವನ್ನು ಹೇಳುತ್ತಿದ್ದೀರೋ ಆ ನಂಬಿಕೆ ನನಗಿಲ್ಲ."

ದೇಶಬಂಧು ಅವರು ಕೇಳಿದ್ದರು: "ಏಕಿಲ್ಲ?"

ಶರತ್‌ಚಂದ್ರರೆಂದಿದ್ದರು: "ಬಹು ದಿನಗಳಿಂದ ಬಹಳಷ್ಟು ನೂಲನ್ನು ನೂತಿರುವುದರಿಂದಲೇ ಈ ಭಾವನೆ ಉಂಟಾಗಿರುವಂತೆ ತೋರುತ್ತದೆ."

ಒಂದು ಕ್ಷಣದ ಮಟ್ಟಿಗೆ ಸುಮ್ಮನಿದ್ದು ದೇಶಬಂಧು ಅವರು ಹೀಗೆಂದಿದ್ದರು: "ಈ ನಾಡಿನ ಮುವ್ವತ್ತು ಕೋಟಿ ಜನರಲ್ಲಿ ಕನಿಷ್ಠ ಪಕ್ಷ ಐದು ಕೋಟಿ ಜನರು ನೂಲು ತೆಗೆಯತೊಡಗಿದರೂ ಏಳು ಕೋಟಿ ರೂಪಾಯಿಗಳಷ್ಟು ಬೆಲೆಯ ನೂಲು ಸಿದ್ಧವಾಗಬಲ್ಲದು."

ಶರತ್‌ಚಂದ್ರರು ಹೀಗೆಂದಿದ್ದರು: "ಆಗಬಹುದು. ಹತ್ತು ಲಕ್ಷ ಮಂದಿ ಒಂದು ಮನೆಯ ನಿರ್ಮಾಣಕ್ಕೆ ಕೈಹಾಕಿದರೆ ಒಂದೂವರೆ ಸೆಕೆಂಡಿನಲ್ಲಿ ಮನೆ ಸಿದ್ಧವಾಗುತ್ತದೆ. ಆಗಬಹುದು, ಅಲ್ಲವೆ? ನೀವು ಇದನ್ನು ನಂಬಬಲ್ಲಿರಾ?"

ದೇಶಬಂಧು ಅವರೆಂದಿದ್ದರು: "ಇವೆರಡೂ ಒಂದೇ ಬಗೆಯುವಲ್ಲ. ಆದರೆ, ನಿಮ್ಮ ಅಭಿಪ್ರಾಯ ಏನೆಂಬುದನ್ನು ನಾನು ಅರ್ಥಮಾಡಿಕೊಂಡಿದ್ದೇನೆ. 'ಒಂಬತ್ತು ಮಣ ಎಣ್ಣೆಯೂ ಸಿಗುವುದಿಲ್ಲ, ರಾಧೆಯೂ ನರ್ತಿಸುವುದಿಲ್ಲ' ಎಂಬಂತಾಯಿತು. ಆದರೂ, ನನಗೆ ಇದರಲ್ಲಿ ನಂಬಿಕೆ ಇದೆ. ಚರ್ಖಾದಲ್ಲಿ ನೂಲುವುದನ್ನು ಕಲಿತುಕೊಳ್ಳಬೇಕೆಂದು ನನಗೆ ತುಂಬ ಆಸೆ ಇದೆ. ಆದರೆ, ನನಗಿರುವ ಕಷ್ಟ ಏನಪ್ಪ ಅಂದರೆ, ಕೈಯಿಂದ ಮಾಡಬಹುದಾದ ಯಾವ ಕೆಲಸದಲ್ಲಿಯೂ ನನ್ನಲ್ಲಿ ಚುರುಕುತನವೇ ಇಲ್ಲ."

ಶರತ್‌ಚಂದ್ರರು ಹೀಗೆಂದಿದ್ದರು: "ದೇವರು ನಿಮ್ಮನ್ನು ಕಾಪಾಡಲಿ."

ಆದರೂ, ತಮಗೆ ನಂಬಿಕೆ ಇರಲಿ ಅಥವಾ ಇಲ್ಲದಿರಲಿ, ಚರ್ಖಾ ಕಾರ್ಯಕ್ರಮಕ್ಕೆ ಅರ್ಥಪೂರ್ಣತೆಯನ್ನು ತಂದುಕೊಡಲು ಅವರು ಎಲ್ಲ ಬಗೆಯಿಂದಲೂ ಶ್ರಮಿಸಿದರು. ಶ್ರೀಮಂತಿಕೆ ಇಲ್ಲವಾಯಿತು, ರೇಷ್ಮೆಯ ಬಟ್ಟೆಗಳು ಇಲ್ಲವಾದುವು. ಖಾದಿ ಬಟ್ಟೆಗಳು ಹಾಗೂ ಎಣ್ಣೆಯಲ್ಲಿ ಕರಿದ ಪಕೋಡಾ ಮತ್ತು ಕಚೌಡಿಗಳಷ್ಟೇ ಅವರ ಪಾಲಿಗೆ ಉಳಿದುವು. ಅಷ್ಟೇ ಅಲ್ಲ, ಹುರಿದ ಕಡಲೆಯನ್ನು ತಿಂದುಕೊಂಡೇ ಹಳ್ಳಿ ಹಳ್ಳಿಗಳಿಗೆ ಹೋಗಿ ಚರ್ಖಾ ಕಾರ್ಯಕ್ರಮದ ಬಗೆಗೆ ಪ್ರಚಾರ ಮಾಡಿದರು. ಸ್ವತಃ ಅವರೂ ನೂಲುತ್ತಿದ್ದರು, ಮನೆಯವರೆಲ್ಲರೂ ನೂಲುತ್ತಿದ್ದರು. ಸೇವಕರೂ ನೂಲುತ್ತಿದ್ದರು. ಇತರ ಕೆಲಸಗಳ ವಿಷಯದಲ್ಲಿ ಮೈಗಳ್ಳತನವನ್ನೂ ಮಾಡುತ್ತಿದ್ದರು. ಶರತ್‌ಚಂದ್ರರು ಕೇಳುತ್ತಿದ್ದರು: "ಯಾಕಪ್ಪ, ಆ ಕೆಲಸ ಮಾಡಿಲ್ಲ?"

"ನೂಲುತ್ತಿದ್ದೆ" ಎಂದು ಉತ್ತರ ಬರುತ್ತಿತ್ತು.

ಶರತ್‌ಚಂದ್ರರು ಏನುತಾನೆ ಮಾಡಿಯಾರು! ದೇಶೋದ್ಧಾರದ ಕೆಲಸದಲ್ಲಿ ತೊಡಗಿದ್ದನಲ್ಲವೆ! ಆದರೆ ಇದು ಇಷ್ಟಕ್ಕೇ ಕೊನೆಗಾಣುತ್ತಿರಲಿಲ್ಲ. ಮಾವ ಸುರೇಂದ್ರನಾಥರು ಈ ಆಂದೋಳನಕ್ಕೆ ಧುಮುಕಿದ್ದರು. ಒಂದು ದಿನ ಅವರು ತಮ್ಮ ಅಧ್ಯಾಪಕ ಹುದ್ದೆಗೆ ರಾಜೀನಾಮೆ ಕೊಟ್ಟು, ಶರತ್‌ಚಂದ್ರರ ಬಳಿ ಬಂದು ಇರತೊಡಗಿದರು. ಕೆಲಸ ಮಾಡುವುದರ ಜೊತೆಗೆ, ಚರ್ಖಾದ ವಿಷಯದಲ್ಲಿ ಮಾವ ಮತ್ತು ಅಳಿಯನ ನಡುವೆ ಸಾಕಷ್ಟು ವಾಗ್ವಾದ ನಡೆಯುತ್ತಿತ್ತು. ಒಂದು ದಿನ ಶರತ್‌ಚಂದ್ರರೆಂದರು: "ಮಾವ, ನೀವು ಸಮಾಜದ ಸೇವೆ ಮಾಡುತ್ತಿದ್ದಿರಲ್ಲ, ಅದು

ಈ ಚರ್ಖಾ ಆಂದೋಳನಕ್ಕಿಂತ ತುಂಬ ಶ್ರೇಷ್ಠವಾದುದಾಗಿತ್ತು. ನಾನು ಸಾಹಿತ್ಯ ರಚನೆಯಲ್ಲಿ ತೊಡಗಿದ್ದೇನಲ್ಲ, ಅದು ಖಂಡಿತವಾಗಿಯೂ ಚರ್ಖಾದಲ್ಲಿ ನೂಲುವುದಕ್ಕಿಂತಲೂ ಹೆಚ್ಚು ಶ್ರೇಷ್ಠವಾದ ಕಾರ್ಯ. ನಾನು ನನ್ನ ಎಲ್ಲ ಕೆಲಸವನ್ನೂ ಬಿಟ್ಟು, ರಾಟೆ ಹಿಡಿದು ಕೂತರೆ, ಅದರಿಂದ ದೇಶಕ್ಕೇನು ಲಾಭವಾಗುತ್ತದೆ ?"

ಸುರೇಂದ್ರನಾಥರು ಉತ್ತರಿಸಿದರು: "ಬಹಳ ನಷ್ಟವೇನೂ ಆಗುವುದಿಲ್ಲ."

"ಅಂದರೆ ?"

ಸುರೇಂದ್ರನಾಥರೆಂದರು: "ರಜೆಯ ದಿವಸ ನಾನು ರಾಟೆ ನೂತರೆ, ಅದರಲ್ಲಿ ಅನ್ಯಾಯವೇನು ಬಂತು ? ರಾಟೆ ನೂತರೆ ಅನ್ಯಾಯ ಮಾಡಿದಂತಾಗುತ್ತದೆ, ರಾಟೆ ನೂಲುವವರನ್ನು ಜೈಲಿಗೆ ಹಾಕುತ್ತೇವೆ ಎಂದೇನಾದರೂ ಸರ್ಕಾರ ಹೇಳಿದರೆ, ಆಗಲೂ ನಾನು ಖಂಡಿತವಾಗಿಯೂ ನೂಲುತ್ತೇನೆ ಮತ್ತು ಜೈಲಿಗೆ ಹೋಗುತ್ತೇನೆ. ನಮ್ಮ ನಾಡಿನ ಅಜ್ಜಿ-ಮುತ್ತಜ್ಜಿಯವರೆಲ್ಲ ರಾಟೆ ನೂಲುತ್ತ ಬಂದಿದ್ದಾರೆ. ಇದರಲ್ಲಿ ತಪ್ಪೇನಿದೆ ?"

ಶರತ್‌ಚಂದ್ರರು ಹೇಳಿದರು: "ಭಾರತ ತನಗೆ ತೊಡಲು ಬೇಕಾಗುವಷ್ಟು ಬಟ್ಟೆಯನ್ನು ಸ್ವತಃ ಉತ್ಪಾದಿಸಿಕೊಳ್ಳುವುದಾದರೆ, ಅದರಿಂದ ನಮಗೆ ಲಾಭವೇ ಆಗುತ್ತದೆ, ನಷ್ಟವಾಗುವುದು ಅವರಿಗೆ. ಆದ್ದರಿಂದಲೇ ನೂಲುವುದನ್ನು ಅವರು ಅನ್ಯಾಯವೆಂದು ಭಾವಿಸುತ್ತಾರೆ."

"ಅವರ ಈ ಭಾವನೆಯನ್ನು ನಾನು ಘೋರ ಅನ್ಯಾಯವೆಂದು ಭಾವಿಸುತ್ತೇನೆ. ಶಾಲೆಯಲ್ಲಿ ರಾಟೆ ನೂಲಬಾರದು ಎಂದು ಹೇಳುವುದಾದರೆ ನಾನು ಅಧ್ಯಾಪಕ ವೃತ್ತಿಯನ್ನೇ ಬಿಡಲು ಸಿದ್ಧ. ಆದ್ದರಿಂದಲೇ ಅಲ್ಲವೆ, ನಾನು ಕೆಲಸಬಿಟ್ಟು ಬಂದಿರುವುದು ?"

ಶರತ್‌ಚಂದ್ರರೆಂದರು: "ನೀವು ಯಾವ ಅನ್ಯಾಯವನ್ನೂ ಮಾಡಿಲ್ಲ."

ಆದರೆ, ರಾಟೆಯಿಂದ ಮಾತ್ರವೇ ಸುರೇಂದ್ರ ಮಾಮಾ ಅವರ ಕೆಲಸ ಸಾಗಲಿಲ್ಲ. ಒಂದು ದಿವಸ ಅವರು ಹೀಗೆಂದರು: "ಶರತ್, ರಾಟೆಯಿಂದಷ್ಟೇ ಏನೂ ಆಗುವುದಿಲ್ಲ. ಮಗ್ಗದ ಮೇಲೂ ಕೂಡಬೇಕಾಗುತ್ತದೆ."

ಶರತ್‌ಚಂದ್ರರು ಕೂಡಲೇ ಕಾರ್ಯೋನ್ಮುಖರಾದರು. ಭಾಗಲ್ಪುರದಲ್ಲಿ ಆರೇಳು ಮಗ್ಗಗಳನ್ನು ಸ್ಥಾಪಿಸಲಾಯಿತು. ಮುಂಗಡವನ್ನು ಕೊಟ್ಟು ಬಂಗಾಳದ ಒಳ್ಳೊಳ್ಳೆಯ ನೇಕಾರರನ್ನು ಕರೆಸಲಾಯಿತು. ನಾಲ್ಕಾರು ದಿನಗಳು ಕಳೆಯುವಷ್ಟರಲ್ಲಿಯೇ ಅವರಿಗೆ ಕೊಟ್ಟಿದ್ದ ಮುಂಗಡದ ಹಣದಷ್ಟು ಕೆಲಸ ಆಗಿಮುಗಿಯುವದರ ಒಳಗಾಗಿಯೇ - ಅವರ ಮನೆಗಳಿಂದ ಕಾಗದಗಳು ಬರತೊಡಗಿದುವು. ಒಬ್ಬನ ಮಗನಿಗೆ ಹುಷಾರಿಲ್ಲ, ಇನ್ನೊಬ್ಬನ ಹೆಂಡತಿಯ ಆರೋಗ್ಯ ಸರಿಯಿಲ್ಲ, ಸಾಕಷ್ಟು ದುಡ್ಡಿಲ್ಲದೆ ಇದ್ದುದರಿಂದ ಮತ್ತೊಬ್ಬನ ಮನೆಯಲ್ಲಿ ಔಷಧೋಪಚಾರ ನಡೆದಿರಲಿಲ್ಲ. ಹೀಗಾಗಿ, ಮತ್ತಷ್ಟು ಹಣಬೇಕು ಎಂಬ ಬೇಡಿಕೆ!

ಹಣವನ್ನೇನೋ ಕೊಟ್ಟದ್ದಾಯಿತು. ಆದರೆ, ಕಾಗದಗಳು ಬರುವುದು ನಿಲ್ಲಲೇ ಇಲ್ಲ. ಜನಗಳಿಲ್ಲದೆ ಇರುವುದರಿಂದ ಬಲಿತು ನಿಂತ ಧಾನ್ಯ ಗದ್ದೆಯಲ್ಲಿ ಉದುರಿ ಹೋಗುತ್ತಿದೆ, ಕೂಡಲೇ ಹೊರಟು ಬನ್ನಿ ಎಂದು ಕಾಗದಗಳು ಬರತೊಡಗಿದುವು.

ಯಾರೋ ಒಬ್ಬರು ಮೊಕದ್ದಮೆ ಹೂಡಿದ್ದಾರೆ, ನ್ಯಾಯಾಲಯದಲ್ಲಿ ಪ್ರತಿವಾದ ಹೂಡಲು ಬರಲೇಬೇಕಾಗಿದೆ. ಇಲ್ಲವಾದರೆ ಸರ್ವನಾಶವಾಗಿಬಿಡುತ್ತದೆ - ಹೀಗೆಂದು ಇನ್ನೊಬ್ಬನಿಗೆ ಕಾಗದ ಬಂದಿರುತ್ತಿತ್ತು. ಇಂಥ ಕಾಗದಗಳನ್ನು ಹಿಡಿದುಕೊಂಡು ನೇಕಾರರು ಅವರ ಮುಂದೆ ಬಂದು ನಿಲ್ಲುತ್ತಿದ್ದರು. ಬೇರೆ ದಾರಿಯಿಲ್ಲದೆ, ಅವರಿಗೆ ದಾರಿಯ ಖರ್ಚಿಗೆಂದು ಹಣಕೊಟ್ಟು, ರಜಕೊಟ್ಟು ಮನೆಗೆ ಕಳಿಸಬೇಕಾಗುತ್ತಿತ್ತು. ಆದರೆ, ಹೀಗೆ ಹೋದವರು ಯಾರೂ ಹಿಂದಿರುಗಿ ಬರುತ್ತಿರಲಿಲ್ಲ. ಇತ್ತ ನೇಯ್ಗೆ ಮನೆಗಳಲ್ಲಿ ಗೆದ್ದಲು ಹುಳುಗಳ ಕಾಟ ವಿಪರೀತವಾಗಿ ಪರಿಣಮಿಸುತ್ತಿತ್ತು. ನಿರಾಶರಾಗಿ ಸುರೇಂದ್ರ ಮಾಮಾ ಅವರೆಂದರು: "ಬಿಡು, ಇವೆಲ್ಲ ಇನ್ನೊಬ್ಬರನ್ನು ನಂಬಿ ನಡೆಸಬಹುದಾದ ಕೆಲಸಗಳಲ್ಲ. ಇದಕ್ಕೆ ಬದಲಾಗಿ ಬೆಂಕಿ ಪೊಟ್ಟಣದ ಕಾರ್ಖಾನೆಯನ್ನು ತೆರೆಯುವುದೇ ಉತ್ತಮ. ದೇಶದ ಸೇವೆಯನ್ನು ಮಾಡಿದಂತಾಯಿತು, ಲಾಭವೂ ದೊರೆತಂತಾಯಿತು. ಏನೇ ಆಗಲಿ, ಇನ್ನು ಹೊರಗಿನಿಂದ ಜನರನ್ನಂತೂ ಕರೆಸುವುದಿಲ್ಲ. ನಾವೇ ಕಲಿತು ಎಲ್ಲ ಕೆಲಸವನ್ನು ಮಾಡೋಣವಂತೆ. ನಿಷ್ಕರಾಗಿರುವಂಥ ಹುಡುಗರಿಗೆ ಕೆಲಸ ಕಲಿಸಿಕೊಡೋಣ."

ಶರತ್‌ಚಂದ್ರರು ಹೇಳಿದರು: "ಗವಾರ ಮೇಸ್ತ್ರಿಯೂ ಚರ್ಖಾ ತಯಾರಿಸಬಲ್ಲ. ಆದರೆ, ಬೆಂಕಿಪಟ್ಟಿಗೆ ತಯಾರಿಸುವ ಯಂತ್ರಕ್ಕೆ ಎಷ್ಟು ಹಣ ಬೇಕಾಗುತ್ತದೆಂಬುದು ಗೊತ್ತೇನು ?"

ಸುರೇಂದ್ರ ಮಾಮಾ ಹೇಳಿದರು: "ಏಳು ನೂರು ರೂಪಾಯಿ ಆಗಬಹುದು."

ಶರತ್ ಕೇಳಿದರು: "ಕುಮಿಲ್ಲಾದಿಂದ ಅದನ್ನು ಹಡಗಿನಲ್ಲಿ ಹೇರಿಕೊಂಡು ಬರಲು ಎಷ್ಟು ವೆಚ್ಚ ತಗಲುತ್ತದೆ ?"

ಸುರೇಂದ್ರ ಮಾಮಾ ಹೇಳಿದರು: "ಅದು ನನಗೆ ಗೊತ್ತಿಲ್ಲ. ಆದರೂ ಅಷ್ಟೇನೂ ಹೆಚ್ಚು ವೆಚ್ಚ ತಗಲುವುದಿಲ್ಲವೆಂದು ತೋರುತ್ತದೆ. ಎಂಬತ್ತು ರೂಪಾಯಿಗಳ ವೆಚ್ಚದಲ್ಲಿ ರಾಸಾಯನಿಕ ವಸ್ತುಗಳನ್ನೆಲ್ಲ ಕೊಳ್ಳಬಹುದು."

ಶರತ್‌ಚಂದ್ರರೆಂದರು: "ಸರಿ, ನಾನು ಒಂದು ಸಾವಿರ ರೂಪಾಯಿ ಕೊಡುತ್ತೇನೆ. ಅದೇ ಕೆಲಸವನ್ನು ಮಾಡಿ."

ಬೆಂಕಿಪೊಟ್ಟಣದ ಕಾರ್ಖಾನೆ ಆರಂಭವಾಯಿತು. ಆದರೆ, ಹಿಂದೂಗಳಲ್ಲಿ ಯಾರ ಮಕ್ಕಳೂ ಕೆಲಸ ಕಲಿಯಲು ಮುಂದೆ ಬರಲಿಲ್ಲ. ಕೆಲವೇ ಕೆಲವು ಮುಸಲ್ಮಾನರ ಹುಡುಗರು ಸಿಕ್ಕಿದರು. ಅವರು ಹೇಳಿದರು: "ನಾವು ಕೆಲಸವನ್ನೇನೋ ಕಲಿಯುತ್ತೇವೆ. ಆದರೆ, ಅದಕ್ಕೂ ನೀವು ಕೂಲಿ ಕೊಡಬೇಕು."

ಸಾಕಷ್ಟು ಹೇಳಿ-ಕೇಳಿ ಆದ ಮೇಲೆ ನಾಲ್ಕಾಣೆ ದಿನಗೂಲಿ ಕೊಡಬೇಕೆಂದು ತೀರ್ಮಾನಕ್ಕೆ ಬರಲಾಯಿತು. ಕೆಲಸವೇನೋ ಜೋರಾಗಿ ಶುರುವಾಯಿತು. ಆದರೆ, ಒಂದು ದಿವಸ ಆಕಸ್ಮಿಕವಾಗಿ ಮದ್ದಿಗೆ ಬೆಂಕಿ ತಗುಲಿತು. ಒಬ್ಬನ ಕೈ ಸುಟ್ಟಿತು, ಇನ್ನೊಬ್ಬನ ಕಾಲು ಸುಟ್ಟಿತು, ಮತ್ತೊಬ್ಬನ ಮುಖ ಸುಟ್ಟಿತು. ಬೆಂಕಿ ಪೊಟ್ಟಣದ ಕಾರ್ಖಾನೆಯೂ ಬಂದಾಯಿತು. ಶರತ್‌ಚಂದ್ರರು ಹಿಂದಿರುಗಿ ಹೋದರು.

## 5

ಚರ್ಖಾ ಕಾರ್ಯಕ್ರಮದಲ್ಲಿ ಅವರಿಗೆ ನಂಬಿಕೆ ಇತ್ತೋ ಇಲ್ಲವೋ, ಮೊದಲಿಗಂತೂ ಅಸಹಕಾರ ಚಳವಳಿಯ ಬಗ್ಗೆ ಅವರು ತುಂಬ ನಂಬಿಕೆ ಇರಿಸಿಕೊಂಡಿದ್ದರು. ದೇಶಬಂಧು ಅವರ ಮನೆಯಲ್ಲಿ ಒಂದು ದಿವಸ ಅವರು ಗಾಂಧೀಜಿಯವರೊಡನೆ ಹೀಗೆಂದರು: "ಮಹಾತ್ಮಾಜಿ, ತಾವು ಅಸಹಕಾರವೆಂಬ ಅಭೇದ್ಯ ಅಸ್ತ್ರವನ್ನು ಕಂಡುಹಿಡಿದಿದ್ದೀರಿ. ಜನರು ಸರ್ಕಾರದೊಂದಿಗೆ ಸಹಕರಿಸದಿದ್ದರೆ, ಒಂದೇ ದಿವಸದಲ್ಲಿ ಅದು ಉರುಳಿ ಬೀಳುತ್ತದೆ. ಆಗ ನಾವು ಒಂದು ವರ್ಷದಲ್ಲಲ್ಲ, ಇಪ್ಪತ್ತನಾಲ್ಕು ಘಂಟೆಗಳಲ್ಲಿಯೇ ಸ್ವರಾಜ್ಯವನ್ನು ಸಾಧಿಸಬಹುದು."

ಈ ಕಾರ್ಯಕ್ರಮದ ಬಗ್ಗೆ ಅವರು ನಿಜವಾಗಿಯೂ ತುಂಬ ಉತ್ಸಾಹದಿಂದಿದ್ದರು. ವಿದೇಶಿ ವಸ್ತ್ರಗಳು, ವಸ್ತುಗಳು ಮತ್ತು ಪುಸ್ತಕಗಳನ್ನು ಬಹಿಷ್ಕರಿಸುವ ಬಗ್ಗೆ ಅವರು ಪೂರ್ಣ ಒಲವು ತೋರಿದ್ದರು. ರವೀಂದ್ರನಾಥ ಠಾಕೂರರು 'ಸರ್' ಪ್ರಶಸ್ತಿಯನ್ನು ಹಿಂದಿರುಗಿಸಿದಾಗ ಅವರಿಗೆ ತುಂಬ ಸಂತೋಷವಾಗಿತ್ತು. ಆದರೆ, ಕಾಂಗ್ರೆಸ್ ಪಕ್ಷ ಕರೆ ನೀಡಿದ ಮೇಲೂ ಸರ್ ಪ್ರಫುಲ್ಲ ಚಂದ್ರರಾಯ್ ಅವರು ಹಾಗೆ ಮಾಡದೆ ಇದ್ದಾಗ, ಅವರಿಗೆ ತುಂಬ ದುಃಖ ಉಂಟಾಯಿತು. ಆಗ ಅವರು ಹೀಗೆಂದರು: "ಚಂದ್ರನಲ್ಲಿಯೂ ಕಳಂಕವಿದೆ. ಅವರು 'ಸರ್' ಪ್ರಶಸ್ತಿಯನ್ನು ಹಿಂದಿರುಗಿಸಲೇಬೇಕು. ಅವರಂಥ ಮಹಾದೇಶಭಕ್ತರು ಇಂಥ ಪ್ರಶಸ್ತಿಗಳನ್ನು ತಿರಸ್ಕರಿಸದಿದ್ದರೆ, ಈ ದುಃಖ ನನ್ನ ಹೃದಯದಿಂದ ಎಂದೂ ಹೇಗೂ ದೂರವಾಗುವುದಿಲ್ಲ."

ಆಚಾರ್ಯ ಪ್ರಫುಲ್ಲ ಚಂದ್ರರನ್ನು ಅವರು ಬಹುವಾಗಿ ಪ್ರೀತಿಸುತ್ತಿದ್ದುದು ಅವರ ದುಃಖ ಮತ್ತಷ್ಟು ಹೆಚ್ಚಲು ಕಾರಣವಾಗಿತ್ತು. ವಿದೇಶಿ ವಸ್ತುಗಳ ಜೊತೆಗೆ ವಿದೇಶಿ ಪ್ರಶಸ್ತಿಗಳನ್ನು ಬಹಿಷ್ಕರಿಸಿದರೆ, ಸ್ವಾತಂತ್ರ್ಯ ಬರುವ ದಿನ ಹತ್ತಿರವಾಗುತ್ತದೆ ಎಂಬುದು ಅವರ ದೃಢ ವಿಶ್ವಾಸವಾಗಿತ್ತು. ವಿದೇಶಿ ಪ್ರಶಸ್ತಿಯನ್ನು ಪಡೆದು ತಾವು ಧನ್ಯರಾದೆವೆಂದು ಭಾವಿಸುವಂಥ ವ್ಯಕ್ತಿಗಳು ತುಂಬ ಸಣ್ಣವರೆಂದೂ, ಅವರನ್ನು ಗೌರವಿಸುವಂಥ ವ್ಯಕ್ತಿಗಳು ನಾಡಿನ ಶತ್ರುಗಳೆಂದೂ ಅವರು ಭಾವಿಸಿದ್ದರು.

ಅಸಹಕಾರ ಚಳವಳಿಯ ದಿನಗಳಲ್ಲಿ ದೇಶಬಂಧು ಅವರ ಮುಂದೆ ವಿಚಿತ್ರ ಸಮಸ್ಯೆಯೊಂದು ಎದ್ದು ನಿಂತಿತ್ತು. ಪುರುಷರು ಈ ಹೋರಾಟಕ್ಕೆ ಧುಮುಕಿದಂತೆಯೇ, ನಾರಿಯರೂ ಇದರಲ್ಲಿ ಪಾಲ್ಗೊಳ್ಳಲು ಆತುರರಾಗಿದ್ದರು. ಈ ವಿಷಯದಲ್ಲಿಯೇ ದೇಶಬಂಧು ಅವರು ಚಿಂತೆಗೊಳಗಾಗಿದ್ದರು - ಅದರಲ್ಲಿಯೂ ಅವರನ್ನು ಒಂದು ವ್ಯವಸ್ಥೆಗೆ ಒಳಪಡಿಸುವ ವಿಚಾರ ಅವರನ್ನು ಕಾಡತೊಡಗಿತ್ತು. ಕೊನೆಗೆ ಅವರು ಶರತ್‌ಚಂದ್ರರಿಗೆ ಹೇಳಿದರು: "ಈ ಹೊಣೆಯನ್ನು ನಿಮಗೆ ವಹಿಸುತ್ತೇನೆ. ಅವರಿಗಾಗಿ ಪ್ರತ್ಯೇಕ ಏರ್ಪಾಟು ಮಾಡಬೇಕು."

ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲೇನೂ ಇರಲಿಲ್ಲ. ಶರತ್‌ಚಂದ್ರರು ಅವರಿಗಾಗಿ ಭವಾನೀಪುರದಲ್ಲಿ 'ನಾರೀ ಕರ್ಮ ಮಂದಿರ'ವನ್ನೂ ಅಂದರೆ 'ಮಹಿಳೆಯರ

ಕಾರ್ಯಕ್ಷೇತ್ರವನ್ನು - ಸ್ಥಾಪಿಸಿದರು ಹಾಗೂ ಇದನ್ನು ನಡೆಸಿಕೊಂಡುಬರುವ ಹೊಣೆಯನ್ನು ದೇಶಬಂಧು ಅವರ ಸೋದರಿ ಊರ್ಮಿಲಾದೇವಿ ಅವರಿಗೆ ವಹಿಸಿದರು. ಮುಂದೆ ಮಹಿಳೆಯರ ಸಂಖ್ಯೆ ಇನ್ನಷ್ಟು ಹೆಚ್ಚಿತ್ತು. ಆದರೆ, ಶರತ್‌ಚಂದ್ರರಿಗೆ ಸಂಖ್ಯಾವೃದ್ಧಿಯಲ್ಲಿ ಮಾತ್ರವೇ ನಂಬಿಕೆ ಇರಲಿಲ್ಲ. ಈ ಬಗ್ಗೆ ಅವರು ಹೀಗೆಂದು ಹೇಳುತ್ತಿದ್ದರು: "ಯುಗ-ಯುಗಗಳಿಂದಲೂ ಯಾರು ಮನೆಯಿಂದ ಹೊರಗೇ ಕಾಲಿರಿಸಿಲ್ಲವೋ, ಅಡುಗೆ ಮನೆ ಮತ್ತು ಹೆರಿಗೆ ಮನೆಯನ್ನು ಬಿಟ್ಟು ಬೇರಾವುದೇ ಕಾರ್ಯಕ್ಷೇತ್ರವೂ ಯಾರ ಪಾಲಿಗೆ ಇಲ್ಲವಾಗಿದೆಯೋ ಅವರ ಮಧ್ಯದಿಂದ ಸ್ವಾತಂತ್ರ್ಯಸಂಗ್ರಾಮದ ಸಾವಿರಾರು ಸೈನಿಕರು ಹೇಗೆ ಮೂಡಿ ಬರಲು ಸಾಧ್ಯ? ಆದರೆ, ಕೆಸರಿನಲ್ಲಿ ಕಮಲ ಅರಳಿ ನಿಲ್ಲುವಂತೆ, ಒಂದಲ್ಲ ಒಂದು ದಿನ ಅಂತಃಪುರದಿಂದಲೂ ಅಮರ ಯೋಧರು ಮೂಡಿ ಬರುತ್ತಾರೆ."

ಗಾಂಧೀಜಿಯವರ ಕರೆಗೆ ಓಗೊಟ್ಟು, ಗಂಡಸರ ಭುಜಕ್ಕೆ ಭುಜಕೊಟ್ಟು ರಣರಂಗಕ್ಕೆ ಸಾಮೂಹಿಕ ರೂಪದಲ್ಲಿ ಮುನ್ನುಗ್ಗಲು ಮಹಿಳೆಯರು ಮುಂದೆ ಬಂದದ್ದು ಇದೇ ಮೊದಲಾಗಿತ್ತು. ಪುರುಷರೂ-ಮಹಿಳೆಯರೂ ಜೊತೆಜೊತೆಯಾಗಿ ಇದ್ದರೆ, ಅಪ್ರಿಯವಾದ ಘಟನೆಗಳೇನೂ ನಡೆಯುವುದಿಲ್ಲವೆ? - ಈ ಅನುಮಾನ ಅನೇಕರನ್ನು ಚಿಂತೆಗೀಡು ಮಾಡಿತ್ತು. ಶರತ್‌ಚಂದ್ರರು ಈ ಸಂದರ್ಭದಲ್ಲಿ ಸ್ಪಷ್ಟವಾದ ಮಾತುಗಳಲ್ಲಿ ಹೀಗೆಂದು ಹೇಳಿದ್ದರು: "ಪಂಜಿನ ಉರಿಯುವ ಬೆಳಕಿನಲ್ಲಿ ಕತ್ತಲು ಇಲ್ಲವಾಗಿ ಬಿಡುತ್ತದೆಂಬ ಮಾತೇನೋ ಎಲ್ಲರಿಗೂ ಗೊತ್ತಿದೆ. ಆದರೆ, ಅದು ಉಂಟು ಮಾಡುವ ಕಿಂಚಿತ್ ಪ್ರಮಾಣದ ಕಮಟು ವಾಸನೆಯತ್ತ ಯಾರ ಗಮನವಾದರೂ ಹರಿಯುತ್ತದೆಯೆ? ಜಲ ಪ್ರವಾಹ ಉಕ್ಕಿ ಹರಿಯುವುದರಿಂದ ನೆಲ ಫಲವತ್ತಾಗುತ್ತದೆ. ಆ ನೀರಿನೊಂದಿಗೆ ಸ್ವಲ್ಪ ಕಸವೂ ತೇಲಿ ಬಂದರೆ, ಅದಕ್ಕಾಗಿ ನಾವು ತಲೆ ಕೆಡಿಸಿಕೊಳ್ಳಬೇಕೆ?"

ಶಿವಪುರ-ಇನ್‌ಸ್ಟಿಟ್ಯೂಟಿನಲ್ಲಿ ಭಾಷಣ ಮಾಡುತ್ತ ಅವರು ಅನುಮಾನಕ್ಕೆ ಎಡೆ ಇಲ್ಲದಂತೆ ಹೇಳಿದರು: "ಯಾವ ಪ್ರಯತ್ನದಲ್ಲಿ, ಯಾವ ಸಂಘಟನೆಯಲ್ಲಿ ನಾಡಿನ ಮಹಿಳೆಯರು ಪಾಲ್ಗೊಂಡಿಲ್ಲವೋ, ಯಾವುದಕ್ಕೆ ಅವರ ಸಹಾನುಭೂತಿ ಲಭ್ಯವಾಗಿಲ್ಲವೋ, ಯಾವ ಸತ್ಯವನ್ನು ಕಂಡುಕೊಳ್ಳುವ ಯಾವುದೇ ಜ್ಞಾನವನ್ನಾಗಲೀ, ತರಬೇತಿಯನ್ನಾಗಲಿ ಧೈರ್ಯವನ್ನಾಗಲೀ ಇದುವರೆಗೆ ನಾವು ಯಾರಿಗೆ ದೊರೆಕಿಸಿಕೊಟ್ಟಿಲ್ಲವೋ ಆ ಮಹಿಳೆಯರನ್ನು ಮನೆಯ ಪರಿಧಿಯಲ್ಲಿ ಮಾತ್ರವೇ ಕೂರಿಸಿ, ರಾಟೆ ತಿರುಗಿಸುವ ಕಾರ್ಯಕ್ಕೆ ಮಾತ್ರವೇ ಹಚ್ಚುವುದರಿಂದ ದೊಡ್ಡದೇನನ್ನೂ ನಾವು ಸಾಧಿಸಲಾರೆವು. ಹೆಣ್ಣನ್ನು ಕೇವಲ ಹೆಣ್ಣಾಗಿ ಮಾತ್ರ ಇಟ್ಟು ಮನುಷ್ಯಳಾಗಲೂ ಅವಳಿಗೆ ಅವಕಾಶವನ್ನೇ ಕೊಡಲಿಲ್ಲವೋ, ಆ ತಪ್ಪಿಗೆ ದೇಶಕ್ಕೆ ಸ್ವರಾಜ್ಯ ಬರುವುದಕ್ಕೆ ಮುನ್ನವೇ ನಾವು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗಿದೆ. ಯಾವ ದೇಶ ತನ್ನ ಅತಿಯಾದ ಸ್ವಾರ್ಥಕ್ಕಾಗಿಯೇ ಇದುವರೆಗೆ ಹೆಣ್ಣಿನ ಸತೀತ್ವವನ್ನೇ ಬೃಹತ್ತಾಗಿಸಿ ನೋಡಿಕೊಂಡು ಬಂದಿದೆಯೋ, ಆಕೆಯ ಮನುಷ್ಯತ್ವದ ಬಗೆಗೆ

ಗಮನವನ್ನೇ ಹರಿಸದೆ ಹೋಗಿದೆಯೋ ಆ ದೇಶ ಮೊದಲು ತನ್ನ ಈ ಋಣವನ್ನು ತೀರಿಸಬೇಕಾಗಿದೆ."[1]

ಈ ಹಿಡಿಮಂದಿ ಮಹಿಳೆಯರು ಪಿಕೆಟಿಂಗ್ ಮಾಡಿ ಬಂಧಿತರಾದಾಗ, ದಾವಾನಲ ಭುಗಿಲೆದ್ದಂತೆ ಆಯಿತು. ಸಾವಿರಾರು ಮಂದಿ ಸ್ವಯಂ ಸೇವಕರಾಗಲು ಹಾಗೂ ಬಂಧಿತರಾಗಲು ಮುನ್ನುಗ್ಗಿ ಬಂದರು.

ಸರ್ಕಾರಿ ಶಾಲೆಗಳನ್ನು ಮತ್ತು ಕಾಲೇಜುಗಳನ್ನು ಬಹಿಷ್ಕರಿಸುವುದು ಚಳವಳಿಯ ಒಂದು ಪ್ರಮುಖ ಅಂಶವಾಗಿತ್ತು. ಸರ್ಕಾರಿ ಶಾಲಾಕಾಲೇಜುಗಳಿಂದ ತಮ್ಮ ಮಕ್ಕಳನ್ನು ಹಿಂತೆಗೆದುಕೊಳ್ಳಬೇಕೆಂದು ಕಾಂಗ್ರೆಸ್ ಪಕ್ಷ ವಿದ್ಯಾರ್ಥಿಗಳ ತಂದೆ-ತಾಯಿಯರಿಗೆ ಹಾಗೂ ಪಾಲಕರಿಗೆ ಕರೆಕೊಟ್ಟಿತು. ಈ ಕರೆ ಒಳ್ಳೆಯ ಪರಿಣಾಮವನ್ನುಂಟುಮಾಡಿತು. ನೋಡುನೋಡುತ್ತಿದ್ದಂತೆಯೇ ಅಸಂಖ್ಯಾತ ವಿದ್ಯಾರ್ಥಿಗಳು ಶಾಲೆ ಕಾಲೇಜುಗಳಿಂದ ಹೊರಬಂದರು. ದೇಶಬಂಧು ದಾಸ್ ಅವರು ವೆಲಿಂಗ್ಟನ್ ಚೌಕದಲ್ಲಿನ 'ಫರ್‌ವೀಜ್ ಭವನ'ದ ವಿಶಾಲ ಉಪ್ಪರಿಗೆಯಲ್ಲಿ 'ಗೌಡೀಯ ಸರ್ವವಿದ್ಯಾ ಆಯತನ'ವೆಂಬ ಹೆಸರಿನಲ್ಲಿ ರಾಷ್ಟ್ರೀಯ ವಿಶ್ವವಿದ್ಯಾನಿಲಯದ ಸ್ಥಾಪನೆಯನ್ನು ಘೋಷಿಸಿದರು ಹಾಗೂ ಅದಕ್ಕಾಗಿ ಅಲ್ಲಿಯೇ 'ಕಲ್ಕತ್ತಾ ವಿದ್ಯಾ ಮಂದಿರ'ವೆಂಬ ರಾಷ್ಟ್ರೀಯ ವಿದ್ಯಾಲಯವನ್ನು ಸ್ಥಾಪಿಸಿದರು.[2] ಮಹಾತ್ಮ ಗಾಂಧೀಜಿಯವರು ಇದನ್ನು ಉದ್ಘಾಟಿಸಿದರು. ಸುಭಾಷ್ ಚಂದ್ರ ಬೋಸರನ್ನು ಈ ಸಂಸ್ಥೆಯ ಪ್ರಿನ್ಸಿಪಾಲರಾಗಿಯೂ, ಶರತ್‌ಚಂದ್ರರನ್ನು ಬಂಗಾಳಿ ಭಾಷೆಯ ಮುಖ್ಯ ಅಧ್ಯಾಪಕರನ್ನಾಗಿಯೂ ನೇಮಿಸಲಾಯಿತು. ತಮ್ಮ ಹಿಂದಿನ ಚಿರಪರಿಚಿತ ಕಾರ್ಯಗಳೆಲ್ಲವನ್ನೂ ಬದಿಗಿರಿಸಿ, ಶರತ್‌ಚಂದ್ರರು ಈ ಹೊಸ ಪಾಠ ಶಾಲೆಯನ್ನು ವ್ಯವಸ್ಥೆಗೊಳಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಈಗ ನಾಡಿನ ಬಿಡುಗಡೆಯ ಹೋರಾಟವೇ ಎಲ್ಲಕ್ಕಿಂತಲೂ ಮಿಗಿಲಾದ ಪ್ರಶ್ನೆಯಾಗಿತ್ತು. ಆದರೆ, ಶಾಲಾಕಾಲೇಜುಗಳನ್ನು ಬಹಿಷ್ಕರಿಸುವ ಚಳವಳಿಯಲ್ಲಿ ಅವರು ಎಷ್ಟು ಉತ್ಸಾಹವನ್ನು ತೋರುತ್ತಿದ್ದರೋ ಅಷ್ಟೇ ವಿರೋಧ ಅದಕ್ಕೆ ವ್ಯಕ್ತವಾದದ್ದು ಸುಪ್ರಸಿದ್ಧ ಶಿಕ್ಷಣವೇತ್ತರಾಗಿದ್ದ ಸರ್ ಆಶುತೋಷ್ ಮುಖೋಪಾಧ್ಯಾಯ ಅವರಿಂದ ಹಾಗೂ ರವೀಂದ್ರನಾಥ ಠಾಕೂರ್ ಅವರಿಂದ. ಸರ್ ಆಶುತೋಷ್ ಅವರ ನಿಲುವನ್ನು ವಿರೋಧಿಸುತ್ತ ದೇಶಬಂಧು ದಾಸ್ ಅವರು ಹೀಗೆಂದರು: "ಶಿಕ್ಷಣ ಕಾಯಬಹುದು, ಆದರೆ ಸ್ವರಾಜ್ಯ ಕಾಯುವಂತಿಲ್ಲ."

ಶರತ್‌ಚಂದ್ರರ ನಿಲುವೂ ಇದೇ ಆಗಿತ್ತು. ಆದ್ದರಿಂದಲೇ ಕವಿ ಗುರುವಿನ ವಿಷಯದಲ್ಲಿ ತಮಗೆ ಅನನ್ಯವೆಂಬಂಥ ಶ್ರದ್ಧೆ-ಗೌರವಗಳು ಇದ್ದರೂ, ಈ ವಿಷಯದಲ್ಲಿ ತೆಪ್ಪಗಿರುವುದು ಅವರಿಗೆ ಸಾಧ್ಯವಾಗಲಿಲ್ಲ. ಯೂರೋಪಿನ ಪ್ರವಾಸದಿಂದ ಹಿಂದಿರುಗಿದ ಬಳಿಕ, ಮೊದಲು ಆಶ್ರಮ ವಾಸಿಗಳ ಮುಂದೆ ಹಾಗೂ ಅನಂತರದಲ್ಲಿ ರಾಷ್ಟ್ರೀಯ ಶಿಕ್ಷಣ ಪರಿಷತ್ತು, ಯೂನಿವರ್ಸಿಟಿ ಇನ್‌ಸ್ಟಿಟ್ಯೂಟ್

---

1 ಪುಷ್ಯ 1328 (ಡಿಸಂಬರ್ 1921 ಮತ್ತು ಜನವರಿ 1922)

2 ಫೆಬ್ರುವರಿ 4, 1921

ಮುಂತಾದ ಕಡೆಗಳಲ್ಲಿ 'ಶಿಕ್ಷಣದ ಏಕತೆ' ಎಂಬ ಪ್ರಬಂಧವನ್ನು[1] ಮಂಡಿಸಿದಾಗ ವ್ಯಥೆಗೆ ಒಳಗಾದ ಶರತ್‌ಚಂದ್ರರ ಮನಸ್ಸಿಗೆ ತಮ್ಮ ನಿಲುವೇ ಸರಿಯೆಂದು ತೋರಿತು. ಬಾಳಿನಲ್ಲಿ ಇದೇ ಮೊದಲ ಬಾರಿಗ ಅವರು ಕವಿ ಗುರುಗಳೊಂದಿಗೆ ಸಂಘರ್ಷಕ್ಕೆ ನಿಂತಂತಾಯಿತು. ಈ ಪ್ರಬಂಧದಲ್ಲಿ ಕವಿ ಗುರುಗಳು ಗಾಂಧೀಜಿಯವರ ನಿಲುವನ್ನು ಸ್ಪಷ್ಟವಾದ ಮಾತುಗಳಲ್ಲಿ ವಿರೋಧಿಸಿರಲಿಲ್ಲವಾದರೂ, ಗಾಂಧೀಜಿಯವರು ಪಾಶ್ಚಾತ್ಯ ಜ್ಞಾನವಿಜ್ಞಾನಗಳನ್ನು ಖಂಡಿಸುತ್ತಿರುವುದು ಆಧುನಿಕ ಭಾರತಕ್ಕೆ ಸಂಬಂಧಿಸಿದಂತೆ ಸರಿಯಾದ ಸಲಹೆಯಾಗಲಾರದು ಎಂಬುದೇ ಅವರ ಪ್ರಬಂಧದ ಆಶಯವಾಗಿತ್ತು. ಈ ನಿಲುವನ್ನು ಖಂಡಿಸುತ್ತ ಶರತ್‌ಚಂದ್ರರು 'ಗೌಡೀಯ ಸರ್ವವಿದ್ಯಾ ಆಯತನ'ದಲ್ಲಿ ಮಂಡಿಸಿದ 'ಶಿಕ್ಷಣದ ವಿರೋಧ'[2] ಎಂಬ ಸುದೀರ್ಘ ಪ್ರಬಂಧದ ಕೊನೆಯಲ್ಲಿ ಹೇಳಿದ ಈ ಮಾತುಗಳು ಅವರ ವಿಚಾರ ಧಾರೆಯ ಮೂಲಮಂತ್ರಗಳೇ ಆಗಿವೆ:

" 'ಸ್ಟ್ಯಾಂಡರ್ಡ್ ಆಫ್ ಲಿವಿಂಗ್' ಅನ್ನು (ಜೀವನದ ಮಟ್ಟವನ್ನು) ಎತ್ತರಿಸುವುದೇ ಪಾಶ್ಚಾತ್ಯ ಸಂಸ್ಕೃತಿಯ ಮೂಲ ಮಂತ್ರ.... ಅವರ ಸಾಮಾಜಿಕ ನೀತಿಯ ಬಗ್ಗೆ ನೀವು ಯಾವ ವ್ಯಾಖ್ಯೆಯನ್ನು ಬೇಕಾದರೂ ಕೊಡಿ, ಶ್ರೀಮಂತಿಕೆಯನ್ನು ಸಾಧಿಸುವುದೇ ಅದರ ಗುರಿ. ಅವರ ಸಾಮಾಜಿಕ ವ್ಯವಸ್ಥೆ, ಅವರ ಸಂಸ್ಕೃತಿ ಹಾಗೂ ಅರ್ಥಶಾಸ್ತ್ರದ ಸಾಮಾನ್ಯ ಪರಿಚಯವನ್ನು ಹೊಂದಿರುವಂಥ ವ್ಯಕ್ತಿಗಳೂ ಈ ಮಾತನ್ನು ಒಪ್ಪದಿರಲಾರರು. ಶ್ರೀಮಂತಿಕೆಯನ್ನು ಸಾಧಿಸುವ ಈ ಧ್ಯೇಯದ ಅರ್ಥ ತಾವು ಹಣವನ್ನು ಸಂಚಯಿಸುವುದು ಮಾತ್ರವಲ್ಲ, ನೆರೆಹೊರೆಯವರನ್ನು ನಿರ್ಧನರನ್ನಾಗಿಸುವುದು ಈ ಧ್ಯೇಯದ ಇನ್ನೊಂದು ಅರ್ಥ. ಹಾಗೇನೂ ಇಲ್ಲವಾದರೆ, ಶ್ರೀಮಂತಿಕೆಯನ್ನು ಸಾಧಿಸುವ ಅವರ ಧ್ಯೇಯಕ್ಕೆ ಯಾವುದೇ ಅರ್ಥ ಇಲ್ಲದಂತಾಗುತ್ತದೆ. ಹೀಗಾಗಿ, ಯಾವುದಾದರೂ ಒಂದು ಬೃಹತ್ ರಾಷ್ಟ್ರ ಶ್ರೀಮಂತಿಕೆಯನ್ನು ಸಾಧಿಸಬೇಕೆಂದು ಹೊರಟಿದ್ದೇ ಆದರೆ, ಇದರ ನೇರ ಪರಿಣಾಮವೆಂಬಂತೆ ಇತರ ರಾಷ್ಟ್ರಗಳನ್ನು ಬಡತನದ ತೆಕ್ಕೆಗೆ ನೂಕದೆ ಬೇರೆ ದಾರಿಯೇ ಇರುವುದಿಲ್ಲ..... ಇದೇ ಅವರ ಇಡೀ ಸಂಸ್ಕೃತಿಯ ಅಡಿಗಲ್ಲು. ಈ ಅಡಿಗಲ್ಲಿನ ಮೇಲೆ ನಿಂತಿರುವ ಅವರ ಮಹಾಸೌಧ ಆಕಾಶವನ್ನು ಚುಂಬಿಸುತ್ತಿದೆ. ಅವರ ಇಡೀ ಶಿಕ್ಷಣ ವ್ಯವಸ್ಥೆ ಹಾಗೂ ಎಲ್ಲ ಸಾಧನಗಳೂ ಇದರಲ್ಲಿಯೇ ತೊಡಗಿವೆ. ಇಂದು ನಮ್ಮ ಮಾತನ್ನು ಕೇಳಿ, ನಮ್ಮ ಋಷಿಗಳ ಮಾತುಗಳನ್ನು ಕೇಳಿ ಅವರು ತಮ್ಮ ಇಡೀ ಸಂಸ್ಕೃತಿಯ ಕೇಂದ್ರವನ್ನು ಹಿಡಿದು ಅಲುಗಿಸುತ್ತಾರಯೆ ? ನಮ್ಮ ಮತ್ತು ಅವರ ಸಂಪರ್ಕ ಏರ್ಪಟ್ಟು ಅನೇಕ ಯುಗಗಳೇ ಕಳೆದಿವೆ. ಆದರೂ, ನಮ್ಮ ಸಂಸ್ಕೃತಿಯ ಲವಲೇಶವೂ ತಮ್ಮನ್ನು ಸೋಂಕದಂತೆ ಅವರು ನೋಡಿಕೊಂಡಿದ್ದಾರೆ.... ಇಂದು ಅವರು ಭಾರತದ ಆದಿಭೌತಿಕ ಸತ್ಯಗಳಿಗೆ ಬದಲಾಗಿ ಆಧ್ಯಾತ್ಮಿಕ ತತ್ವಗಳನ್ನು ಅರಸುವ ನಾಟಕವನ್ನು ಆಡುತ್ತಿದ್ದರೆ, ಅದನ್ನು ಕಂಡು ನಾವು

---

1 ಆಗಸ್ಟ್ 10, 1921

2 ಈ ಪ್ರಬಂಧ 'ಸುದೇಶ್ ಔರ್ ಸಾಹಿತ್ಯ' ಎಂಬುದರಲ್ಲಿ ಸಂಕಲಿತವಾಗಿದ. ಮೊದಲು ಇದು 'ಬಾಂಗ್ಲಾರ್ ಕಥಾ' (ಸಪ್ಟಂಬರ್ 30, 1921) ಎಂಬುದರಲ್ಲಿ ಅಚ್ಚಾಗಿತ್ತು.

ಆನಂದ ತುಂದಿಲರಾಗಬೇಕೆ ಅಥವಾ ಜಾಗರೂಕರಾಗಬೇಕೆ ಎಂಬುದು ನಿಜಕ್ಕೂ ನಾವು ಆಲೋಚಿಸಬೇಕಾದ ಸಂಗತಿ.

"ಐರೋಪ್ಯ ಶಿಕ್ಷಣ ಹಾಗೂ ಭಾರತೀಯ ಶಿಕ್ಷಣಗಳ ನಡುವಣ ನಿಜವಾದ ವಿರೋಧ ಅಡಗಿರುವುದು ಇಲ್ಲಿಯೇ. ನಮ್ಮ ಋಷಿಗಳ ವಚನಗಳು ಅದೆಷ್ಟೇ ಚೆನ್ನಾಗಿರಲಿ, ಅವುಗಳನ್ನು ಅವರೆಂದೂ ಸ್ವೀಕರಿಸುವುದಿಲ್ಲ. ಅವು ಅವರ ಸಂಸ್ಕೃತಿಗೆ 'ಹೊಂದ'ದ ವಿಚಾರಗಳು. ತಮ್ಮ ಶಿಕ್ಷಣವನ್ನಾದರೂ ಅವರು ನಮಗೆ ಕೊಡುತ್ತಾರೆಯೆ ? ಅದೂ ಇಲ್ಲ.... ಕೊಟ್ಟರೂ, ಯಾವುದನ್ನು ಹಾಗೂ ಎಷ್ಟನ್ನು ಭಿಕ್ಷೆ ಎಂಬಂತೆ ಕೊಡುತ್ತಾರೋ ಅದನ್ನು ಸ್ವೀಕರಿಸದಿರುವುದೇ ಮೇಲು. ಉಳಿದ ಅಂಶಗಳು ನಮ್ಮ ಸಂಸ್ಕೃತಿಗೆ ಅನುಗುಣವಾಗಿಲ್ಲದಿದ್ದರೆ ಅವು ವ್ಯರ್ಥವಷ್ಟೇ ಅಲ್ಲ, ಕಸಕಡ್ಡಿಯಂತಾಗುತ್ತವೆ. ಇತರರ ಅನ್ನವನ್ನು ಕಸಿದುಕೊಂಡು ತಿನ್ನುವುದನ್ನೇ ಅವರಂತೆ ನಾವು ಮೌಳೀಭೂತ ಸಂಸ್ಕೃತಿಯೆಂದು ಭಾವಿಸುವುದಿಲ್ಲವಾದರೆ, ಅದೆಷ್ಟೇ ಸತ್ಯವಾದರೂ ಅವರ ಆ ಮಾರಣ ಮಂತ್ರದ ವಿಷಯದಲ್ಲಿ ನಾವು ನಿರ್ಲೋಭದಿಂದಿರುವುದೇ ಒಳ್ಳೆಯದು.

"ಇನ್ನೊಂದು ಮಾತನ್ನು ಹೇಳಿ ಈ ಪ್ರಬಂಧವನ್ನು ಕೊನೆಗಾಣಿಸುತ್ತೇನೆ. ವಿದ್ಯೆ ಮತ್ತು ವಿದ್ಯಾಲಯ - ಇವೆರಡೂ ಒಂದೇ ಅಲ್ಲ. ಶಿಕ್ಷಣ ಮತ್ತು ಶಿಕ್ಷಣ ವಿಧಾನ-ಇವೆರಡೂ ಬೇರೆ ಬೇರೆ ಸಂಗತಿಗಳು. ಒಂದನ್ನು ತ್ಯಜಿಸಿದರೆ, ಇನ್ನೊಂದನ್ನೂ ತ್ಯಜಿಸಿದಂತಾಗುವುದಿಲ್ಲ. ವಿದ್ಯಾಲಯವನ್ನು ಬಿಟ್ಟು ಹೊರಬರುವುದೇ ವಿದ್ಯಾರ್ಜನೆಯ ಮಹಾಮಾರ್ಗವೂ ಆಗಬಹುದು. ಸಮಗ್ರ ದೃಷ್ಟಿಯಿಂದ ನೋಡಿದರೆ, ಈ ಮಾತು ವಿಪರ್ಯಾಸದಂತೆ ತೋರಿದರೂ, ಅದು ಸತ್ಯವಾಗುವುದು ಅಸಂಭವವೆಂದೇನೂ ತೋರುವುದಿಲ್ಲ. ಎಣ್ಣೆ ನೀರಿನೊಂದಿಗೆ ಬೆರೆಯುವುದಿಲ್ಲ. ಈ ಎರಡು ವಸ್ತುಗಳೂ ತದ್ವಿರುದ್ಧ ಸ್ವಭಾವದವಾಗಿರುವುದೇ ಇದಕ್ಕೆ ಕಾರಣ. ಎಣ್ಣೆಯ ದೀಪವನ್ನು ಉರಿಸುತ್ತಿರುವಾಗ, ಅದಕ್ಕೆ ನೀರನ್ನು ಎರಚುವುದು ಎಣ್ಣೆಯನ್ನು ಸಂಪೂರ್ಣವಾಗಿ ಉರಿಸಿಬಿಡುವ ಉದ್ದೇಶವನ್ನೇ ಹೊಂದಿರುತ್ತದೆ. ಈ ತತ್ತ್ವವನ್ನು ಅರಿಯದಿರುವಂಥ ವ್ಯಕ್ತಿಗಳು, ಸ್ವಲ್ಪ ಮಟ್ಟಿನ ಧೈರ್ಯವನ್ನಾದರೂ ಇರಿಸಿಕೊಂಡಿರುವುದು ಉತ್ತಮ."

ಈ ಪ್ರಬಂಧದಲ್ಲಿ ಶರತ್‌ಚಂದ್ರರು ಕವಿಗುರುಗಳಿಗೆ ಕೊಟ್ಟ ಒಂದು ಪೆಟ್ಟಂತೂ ತುಂಬ ಸ್ವಾರಸ್ಯಕರವಾಗಿದೆ. ಅವರು ಹೀಗೆಂದು ಹೇಳಿದ್ದರು: "ಬಂಗಾಳೀ ಸಾಹಿತ್ಯದಲ್ಲಿ 'ಗೋರಾ' ಎಂಬ ಹೆಸರಿನ ತುಂಬ ಪ್ರಸಿದ್ಧವಾದ ಕಾದಂಬರಿಯೊಂದಿದೆ. ಕವಿಗಳು ಒಮ್ಮೆಯಾದರೂ ಅದನ್ನು ಓದಿ ನೋಡಿದರೆ, ಅದರ ಮಹಾಸ್ವದೇಶ ಭಕ್ತನಾದ ಲೇಖಕ ಗೋರಾನ ಬಾಯಿಂದ ಈ ಮಾತುಗಳನ್ನು ಹೇಳಿಸಿರುವುದನ್ನು ಕಾಣಬಹುದು: "ನಿಂದನೆ ಎಂಬುದು ಪಾಪ; ಮಿಥ್ಯಾನಿಂದನೆ ಎಂಬುದು ಇನ್ನೂ ಪಾಪ; ನಮ್ಮ ನಾಡಿನ ಬಗೆಗಿನ ಮಿಥ್ಯಾ ನಿಂದನೆಗೆ ಸಮನಾದ ಪಾಪ ಇಡೀ ಜಗತ್ತಿನಲ್ಲಿಯೇ ಬೇರಾವುದೂ ಇಲ್ಲ."[1]

---

1. 1921

ಸ್ವತಃ ಗಾಂಧೀಜಿಯವರೂ ಕವಿಗುರುಗಳಿಗೆ ಬಹುಮಟ್ಟಿಗೆ ಇಂಥ ಉತ್ತರವನ್ನೇ ಕೊಟ್ಟಿದ್ದರು:

"ಇಂದು ಜನ ಇಂಗ್ಲಿಷ್ ಭಾಷೆಯನ್ನು ಓದುತ್ತಿರುವುದು ವ್ಯಾಪಾರೀ ಬುದ್ಧಿಯಿಂದ. ಅದರಿಂದ ದೊರೆಯುತ್ತದೆಂದು ಹೇಳಲಾಗಿರುವ ರಾಜಕೀಯ ಲಾಭಕ್ಕಾಗಿಯೇ ಅದನ್ನು ಓದುತ್ತಿದ್ದಾರೆ. ಇಂಗ್ಲಿಷ್ ಭಾಷೆಯನ್ನು ಕಲಿಯದಿದ್ದರೆ ಸರ್ಕಾರಿ ನೌಕರಿ ದೊರೆಯುವುದಿಲ್ಲವೆಂದು ನಮ್ಮ ವಿದ್ಯಾರ್ಥಿಗಳು ಭಾವಿಸ ತೊಡಗಿದ್ದಾರೆ. ಒಳ್ಳೆಯ ಗಂಡು ದೊರೆಯುವಂತಾಗಲಿ ಎಂಬ ಉದ್ದೇಶದಿಂದ ಹುಡುಗಿಯರಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸುತ್ತಿದ್ದೇವೆ. ಆಂಗ್ಲರೊಂದಿಗೆ ಆಂಗ್ಲ ಭಾಷೆಯಲ್ಲಿ ಮಾತನಾಡುವಂತಾಗಬೇಕೆಂದೇ ಹುಡುಗಿಯರು ಇಂಗ್ಲೀಷ್ ಭಾಷೆಯನ್ನು ಕಲಿಯಬಯಸುತ್ತಾರೆ. ಇಂಥ ಅನೇಕ ಉದಾಹರಣೆಗಳನ್ನು ನಾನು ಬಲ್ಲೆ. ತಮ್ಮ ಹೆಂಡತಿ ಇತರ ಗೆಳೆಯರೊಂದಿಗೆ ಹಾಗೂ ತಮ್ಮೊಂದಿಗೆ ಇಂಗ್ಲಿಷ್‌ನಲ್ಲಿ ಮಾತನಾಡದೆ ಇರುವುದರಿಂದ ವ್ಯಥಿತರಾಗಿರುವಂಥ ಅನೇಕ ಪತಿವರ್ಯರನ್ನು ನಾನು ಕಂಡಿದ್ದೇನೆ. ಇಂಗ್ಲಿಷ್ ಭಾಷೆಯನ್ನೇ ತಮ್ಮ ಮಾತೃಭಾಷೆಯನ್ನಾಗಿ ಕಲಿಯದಿದ್ದರೆ ಭಾರತಕ್ಕೆ ಸ್ವಾತಂತ್ರ್ಯ ದೊರೆಯುವ ಸಂಭವವೇ ಇಲ್ಲವೆಂದು ಭಾವಿಸಿರುವಂಥ ನೂರಾರು ಮಂದಿ ತರುಣರು ಇದ್ದಾರೆ. ಶಿಕ್ಷಣವೆಂದರೆ ಇಂಗ್ಲಿಷ್ ಭಾಷೆಯ ಬಗೆಗಿನ ಜ್ಞಾನವನ್ನು ಗಳಿಸುವುದರ ಹೊರತು ಬೇರೇನೂ ಅಲ್ಲವೆಂಬ ತಪ್ಪು ಕಲ್ಪನೆಯೂ ಸಮಾಜದಲ್ಲಿ ಬೇರುಬಿಟ್ಟಿದೆ. ನನ್ನ ಅಭಿಪ್ರಾಯದಲ್ಲಿ ಇದೆಲ್ಲ ನಮ್ಮ ದಾಸ್ಯದ ಹಾಗೂ ಅಧಃಪತನದ ಸ್ಪಷ್ಟ ನಿದರ್ಶನ. ನಮ್ಮ ದೇಶಭಾಷೆಗಳು ಉಪೇಕ್ಷೆಗೆ ಈಡಾಗಿರುವುದನ್ನು ಹಾಗೂ ಈ ಭಾಷೆಗಳಲ್ಲಿನ ವಿದ್ವಾಂಸರು ಮತ್ತು ಲೇಖಕರು ಹೊಟ್ಟೆಯ ಪಾಡಿಗಾಗಿ ಪರದಾಡುತ್ತಿರುವುದನ್ನು ನಾನು ನೋಡಲಾರೆ. ತಂದೆ-ತಾಯಿಗಳು ತಮ್ಮ ಮಕ್ಕಳಿಗೂ, ಗಂಡಂದಿರು ತಮ್ಮ ಹೆಂಡತಿಯರಿಗೂ ತಮ್ಮ ಭಾಷೆಯನ್ನು ಬಿಟ್ಟು, ಇಂಗ್ಲಿಷ್ ಭಾಷೆಯಲ್ಲಿ ಪತ್ರ ಬರೆಯುವುದನ್ನು ನಾನು ಹೇಗೆ ಸಹಿಸಿಕೊಳ್ಳಬಲ್ಲೆ ?

"ಕವಿ ಸಾಮ್ರಾಟರಂತೆ ನಾನೂ ಇನಿಗೊರಲ ಹಕ್ಕಿಯ ಸ್ವಾತಂತ್ರ್ಯವನ್ನು ಕಂಡು ಮುಗ್ಧನಾಗುತ್ತೇನೆ. ತೆರೆದ ಗಾಳಿಯ ಬಗೆಗೆ ನನಗೂ ಆಸಕ್ತಿ ಇದೆ. ಎಲ್ಲ ಕಡೆಗಳಲ್ಲೂ ಎದ್ದು ನಿಂತಿರುವ ಗೋಡೆಗಳು ನನ್ನ ಮನೆಯನ್ನು ಸುತ್ತುವರಿದಿರಬೇಕೆಂದಾಗಲೀ, ಅದರ ಕಿಟಕಿ ಮತ್ತು ಬಾಗಿಲುಗಳನ್ನೆಲ್ಲ ಮುಚ್ಚಿಬಿಡಬೇಕೆಂದಾಗಲೀ ನಾನು ಬಯಸುವುದಿಲ್ಲ. ನನ್ನ ಮನೆಯ ಸುತ್ತಲೂ ದೇಶ-ವಿದೇಶಗಳ ಸಂಸ್ಕೃತಿಯ ಗಾಳಿ ಬೀಸುತ್ತಿರಲಿ ಎಂದೇ ನಾನೂ ಬಯಸುತ್ತೇನೆ. ಆದರೆ, ಈ ಗಾಳಿ ನೆಲದಿಂದಲೇ ನನ್ನನ್ನು ಕಿತ್ತೆಸೆಯುವಂತಾಗುವುದು ಹಾಗೂ ತಲೆಕೆಳಗಾಗಿ ನನ್ನನ್ನು ಬೀಳಿಸುವುದು ನನಗೆ ಇಷ್ಟವಿಲ್ಲ. ಇನ್ನೊಬ್ಬರ ಮನೆಯಲ್ಲಿ ಅತಿಥಿಯಾಗಿ ಅಥವಾ ಭಿಕ್ಷುಕನಾಗಿ ಅಥವಾ ಗುಲಾಮನಂತೆ ಇರಲು ನಾನು ಸಿದ್ಧನಿಲ್ಲ. ಸುಳ್ಳು ಪ್ರತಿಷ್ಠೆಗೆ ಮರುಳಾಗಿ ಅಥವಾ ಪೊಳ್ಳು ಸಾಮಾಜಿಕ ಪ್ರತಿಷ್ಠೆಯನ್ನು ಗಳಿಸುವ ಸಲುವಾಗಿ ನಮ್ಮ ನಾಡಿನ ಸೋದರಿಯರ ಮೇಲೆ ಇಂಗ್ಲಿಷ್ ಭಾಷೆಯ ಅರ್ಥರಹಿತ ಹೊರೆಯನ್ನು ಹೊರಿಸಲು ನಾನು ನಿರಾಕರಿಸುತ್ತೇನೆ. ನಮ್ಮ ನಾಡಿನ ತರುಣ ತರುಣಿಯರಿಗೆ ಸಾಹಿತ್ಯಾಭಿರುಚಿ

ಇದ್ದರೆ, ಜಗತ್ತಿನ ಇತರ ಭಾಷೆಗಳಂತೆ ಇಂಗ್ಲಿಷ್ ಭಾಷೆಯನ್ನೂ ಕಲಿಯಲಿ ಎಂದು ನಾನು ಇಚ್ಛಿಸುತ್ತೇನೆ. ತಾವು ಇಂಗ್ಲಿಷ್ ಭಾಷೆಯನ್ನು ಕಲಿತಿದ್ದರ ಫಲವನ್ನು ಡಾ. ಬೋಸ್, ರಾಯ್ ಮತ್ತು ಕವಿ ಸಾಮ್ರಾಟರಂತೆ ಭಾರತಕ್ಕೆ ಹಾಗೂ ಇಡೀ ಜಗತ್ತಿಗೆ ಅವರು ತಂದುಕೊಡುವಂತಾಗಬೇಕೆಂದು ನಾನು ಇಚ್ಛಿಸುತ್ತೇನೆ. ಭಾರತದ ಯಾವನೇ ವ್ಯಕ್ತಿ ತನ್ನ ಮಾತೃಭಾಷೆಯನ್ನು ಮರೆಯುವುಗಲೀ ಅದನ್ನು ಅವಹೇಳನೆ ಮಾಡುವುದಾಗಲೀ ಅಥವಾ ಅತ್ಯುತ್ತಮ ಆಲೋಚನೆಗಳನ್ನು ತನ್ನ ಭಾಷೆಯಲ್ಲಿ ಮುಂದಿಡಲು ಸಾಧ್ಯವಾಗುವುದಿಲ್ಲವೆಂದು ಅದರ ವಿಚಾರದಲ್ಲಿ ನಾಚಿಕೆಪಟ್ಟುಕೊಳ್ಳುವುದಾಗಲೀ ನನಗೆ ಹಿಡಿಸುವುದಿಲ್ಲ.... ತಮ್ಮ ದೇಶಬಾಂಧವರಿಂದಾಗಿ ವಿದೇಶಗಳಲ್ಲಿ ವಿಷಾದವನ್ನು ವ್ಯಕ್ತಪಡಿಸಬೇಕಾಗಿ ಬರುವ ಅಥವಾ ತಲೆತಗ್ಗಿಸಬೇಕಾಗಿ ಬರುವಂಥ ಅಥವಾ ಕೀಳಾಗಿ ಪರಿಗಣಿಸಲ್ಪಡುವಂಥ ಯಾವ ಕೆಲಸಕ್ಕೂ ಹಿಂದೂಸ್ತಾನ ಇಂದು ಕೈಹಾಕಿಲ್ಲವೆಂಬುದನ್ನು ಸ್ವಲ್ಪ ಕಾಲ ತಾಳ್ಮೆಯಿಂದಿದ್ದರೆ ಕವಿ ಸಾಮ್ರಾಟರೇ ಕಾಣಬಹುದು. ಈ ಚಳವಳಿಯ ಅಂಗವಾಗಿ ಅಲ್ಲಲ್ಲಿ ನಡೆದಿರುವ ಕೆಲವೊಂದು ಘಟನೆಗಳನ್ನೇ ಈ ಚಳವಳಿಯ ನಿಜವಾದ ಸ್ವರೂಪವೆಂದು ದಯವಿಟ್ಟು ಭಾವಿಸಬಾರದೆಂದು ನಮ್ರತಾ ಪೂರ್ವಕವಾಗಿ ಅವರಿಗೆ ಎಚ್ಚರಿಕೆ ಕೊಡಬಯಸುತ್ತೇನೆ. ಡ್ಯಯರ್ ಅಥವಾ ಓಡ್ವೈಯರ್ ಅವರ ಕುಕೃತ್ಯಗಳನ್ನೇ ಆಧಾರವಾಗಿಟ್ಟುಕೊಂಡು ಆಂಗ್ಲರಿಗೆ ಬೆಲೆ ಕಟ್ಟುವುದು ಹೇಗೆ ತಪ್ಪಾಗುತ್ತದೆಯೋ ಹಾಗೆಯೇ ಲಂಡನ್ನಿನ ವಿದ್ಯಾರ್ಥಿಗಳು ಮಾಡಿದರೆಂದು ಹೇಳಲಾಗಿರುವ ವಿವೇಕ ದೂರವಾದ ಕೃತ್ಯಗಳ ಅಥವಾ ಮಾಲೇಂಗಾವ್‌ಗಳು ನಡೆದ ಅತ್ಯಾಚಾರಗಳ ಆಧಾರದ ಮೇಲೆ ಅಸಹಕಾರ ಚಳವಳಿಗೆ ಬೆಲೆಗಟ್ಟುವುದೂ ತಪ್ಪಾಗುತ್ತದೆ."[1]

ಕವಿಗಳು ಆಗಲೂ ಸುಮ್ಮನಾಗಲಿಲ್ಲ. 'ಸತ್ಯದ ಸವಾಲು' ಎಂಬ ಇನ್ನೊಂದು ಪ್ರಬಂಧವನ್ನು ಅವರು ಯೂನಿವರ್ಸಿಟಿ ಇನ್‌ಸ್ಟಿಟ್ಯೂಟ್‌ನಲ್ಲಿ ಮಂಡಿಸಿದರು.[2] ಇದರಲ್ಲಿ ಅವರು ಸ್ಪಷ್ಟವಾಗಿ ಹಾಗೂ ಸಂಪೂರ್ಣವಾಗಿ ಅಸಹಕಾರ ಚಳವಳಿಯನ್ನೂ ಚರ್ಖಾ ಕಾರ್ಯಕ್ರಮವನ್ನೂ ಅಲ್ಲಗಳೆದರು. ಶರತ್‌ಚಂದ್ರರ ಹಾಗೂ ಕವಿವರ್ಯರ ಚಿಂತನೆಗಳಲ್ಲಿ ವಾಸ್ತವವಾಗಿ ವಿರೋಧದ ಅಥವಾ ಭಿನ್ನಾಭಿಪ್ರಾಯದ ಎಡೆ ಎಲ್ಲಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯ ದೊರೆತರೆ ಎಲ್ಲವೂ ದೊರೆಯಬಲ್ಲದು ಎಂಬುದು ಶರತ್‌ಚಂದ್ರರ ನಿಲುವಾಗಿತ್ತು. 'ಪಥೇರ್ ದಾಬೀ' ಕಾದಂಬರಿಯ ಸವ್ಯಸಾಚಿ ಇದೇ ಮಾತನ್ನು ಹೇಳುತ್ತಾನೆ: "ಭಾರತಿ, ನನಗೆ ಬೇಕಾಗಿರುವುದು ದೇಶದ ಮಂಗಳವೂ ಅಲ್ಲ, ದೇಶದ ಸಮೃದ್ಧಿಯೂ ಅಲ್ಲ. ದೇಶ ಸ್ವತಂತ್ರವಾಗಬೇಕೆಂದು ನಾನು ಬಯಸುತ್ತೇನೆ." ಇದಕ್ಕೆ ವಿರುದ್ಧವಾಗಿ, ಮಾನವನ ಮನಸ್ಸಿನಲ್ಲಿ ಬಿಡುಗಡೆಯ ಭಾವನೆ ಮೂಡಿದರೆ, ಸ್ವಾತಂತ್ರ್ಯ ತಾನಾಗಿ ದೊರೆಯುತ್ತದೆ ಎಂಬುದು ಕವಿವರ್ಯರ ನಿಲುವಾಗಿತ್ತು.

ಶಾಲೆ-ಕಾಲೇಜುಗಳನ್ನು ಬಹಿಷ್ಕರಿಸುವ ವಿಚಾರಕ್ಕೆ ಮಾತ್ರವೇ ಇದು

---

1 'ಅಂಗ್ರೇಜೀ ವಿದ್ಯಾ ಔರ್ ರವಿ ಬಾಬೂ' (ಇಂಗ್ಲಿಷ್ ಶಿಕ್ಷಣ ಮತ್ತು ರವೀಂದ್ರರು) - 'ಹಿಂದೀ ನವಜೀವನ' ಜೂನ್ 13, 1921.

2 ಆಗಸ್ಟ್ 26, 1921

ಸೀಮಿತವಾಗಿರಲಿಲ್ಲ. ನಗರ-ನಗರಗಳಲ್ಲಿ ಹಳ್ಳಿ-ಹಳ್ಳಿಗಳಲ್ಲಿ ಅಸಹಕಾರ ಚಳವಳಿಯ ಇತರ ಕಾರ್ಯಕ್ರಗಳನ್ನೂ ತುಂಬ ಉತ್ಸಾಹದಿಂದ ಜಾರಿಗೆ ತರುತ್ತಿದ್ದರು. ವಿದೇಶಿ ವಸ್ತ್ರಗಳನ್ನು ಸುಡುವ ಕಾರ್ಯದಲ್ಲಿ ದಾಸ್ಯದ ಹೊದಿಕೆಯನ್ನೇ ಸುಟ್ಟು ಉರುಹುತ್ತಿರುವಂತೆ ತೋರುತ್ತಿತ್ತು. ವಕೀಲರು ಗಡಿಬಿಡಿಯಿಂದ ವಕೀಲಿ ವೃತ್ತಿಯನ್ನು ತ್ಯಜಿಸುತ್ತಿದ್ದರು. ರಾಷ್ಟ್ರೀಯ ಪಂಚಾಯತಿಗಳು ನೆಲೆಗೊಳ್ಳುತ್ತಿದ್ದುವು. ಶರತ್‌ಚಂದ್ರರೂ ತಮ್ಮ ಸಾಹಿತ್ಯ ಸೃಷ್ಟಿಯನ್ನು ಬದಿಗಿರಿಸಿ ದೇಶಬಂಧು ಅವರ ಬಳಿಗೆ ಓಡುತ್ತಿದ್ದರು. ಅವರ ಪತ್ರಿಕೆಯಲ್ಲಿ ಪ್ರಕಟವಾಗಬೇಕಿದ್ದ ಮಾಹಿತಿಯನ್ನು ಸಂಕಲಿಸುವುದರಲ್ಲಿ ಹಾಗೂ ಅವುಗಳ ಸಂಪಾದನ ಕಾರ್ಯದಲ್ಲಿ ಸಹಕರಿಸುತ್ತಿದ್ದುದು ಮಾತ್ರವಲ್ಲದೆ, ಅದನ್ನು ಯೋಜಿಸುವ ಕೆಲಸವನ್ನೂ ಮಾಡುತ್ತಿದ್ದರು. ಇಷ್ಟಾಗಿಯೂ, ಭಾಷಣ ಮಾಡುವುದು ಅವರಿಗೆ ಸುಲಭದ ಕೆಲಸವಾಗಿರಲಿಲ್ಲವೆಂಬುದು ಸುಭಾಷ್ ಚಂದ್ರ ಬೋಸರ ಒಂದು ಕಾಗದದಿಂದ ಸ್ಪಷ್ಟವಾಗುತ್ತದೆ.[1] ಶರತ್‌ಚಂದ್ರರ ನೆರೆಹೊರೆಯವರಾಗಿದ್ದ ಭೋಲಾನಾಥ್ ರಾಯ್ ಎಂಬುವವರಿಗೆ ಬೋಸರು ಈ ಪತ್ರವನ್ನು ಬರೆದಿದ್ದರು. ಅದರಲ್ಲಿ ಅವರು ಹೀಗೆಂದು ಬರೆದಿದ್ದರು: "ಶರತ್‌ಚಂದ್ರರು ಮತ್ತೊಮ್ಮೆ ಭಾಷಣ ಮಾಡಲಿದ್ದಾರೆಂದು ನಾನು ಅನೇಕರಿಗೆ ಭರವಸೆ ಕೊಟ್ಟಿದ್ದೇನೆ. ಇನ್ನೊಮ್ಮೆ ಸಭೆ ನಡೆಯದಿದ್ದರೆ, ನನ್ನ ಮಾತನ್ನು ಉಳಿಸಿಕೊಂಡಂತಾಗುವುದಿಲ್ಲ, ನನ್ನ ಮಾತಿಗೆ ಬೆಲೆಯೂ ಇರುವುದಿಲ್ಲ."

ಈ ರೀತಿ ದಿನಗಳು, ವಾರಗಳು ಮತ್ತು ತಿಂಗಳುಗಳು ಉರುಳಿ ಹೋಗುತ್ತಿದ್ದುವು. ಇಡೀ ದೇಶದಲ್ಲಿ ಹೊಸ ಚೈತನ್ಯ ಮೂಡಿ, ಮಾರ್ದೊಳಗುತ್ತಿತ್ತು. ಹಿಂದೂ-ಮುಸಲ್ಮಾನರು ಒಂದೇ ಪ್ರಾಣ, ಎರಡು ಶರೀರ ಎಂಬಂತೆ ಒಂದುಗೂಡತೊಡಗಿದ್ದರು. 'ವಂದೇ ಮಾತರಮ್' ಮತ್ತು 'ಅಲ್ಲಾ ಹೋ ಅಕ್ಬರ್' ಎಂಬ ಸಂಯುಕ್ತ ಜಯಘೋಷ ಭಾರತದ ಭಾಗ್ಯಾಕಾಶದಲ್ಲಿ ಮೊಳಗುತ್ತಿತ್ತು. ಈ ಬಗೆಯ ಉತ್ಸಾಹ-ಉಲ್ಲಾಸ, ಉದ್ದಾಮ ಕಾರ್ಯಶಕ್ತಿ, ಮೃತ್ಯುಂಜಯಕಾರಿ ಆಶಾವಾದ ಹಾಗೂ ಸ್ನೇಹ-ದೀಪ್ತಿ ಮತ್ತೆಂದೂ ಕಂಡುಬರಲಿಲ್ಲ, 'ಒಂದು ವರ್ಷದ ಒಳಗಾಗಿ ಸ್ವರಾಜ್ಯ' ಎಂಬ ಗಾಂಧೀಜಿಯವರ ಜಯಘೋಷ ಜೀವನದ ಸಂಜೀವಿನಿ ಮಂತ್ರವೇ ಆಗಿಬಿಟ್ಟಿತ್ತು. 'ತಿಲಕ್ ಸ್ವರಾಜ್ಯ ನಿಧಿ'ಗಾಗಿ ಒಂದು ಕೋಟಿ ರೂಪಾಯಿಗಳನ್ನು ಕೂಡಿಸಬೇಕೆಂಬ ಕರೆಗೆ ಓಗೊಟ್ಟು ಜನರು ಅವರ ಮೇಲೆ ನಿಜವಾಗಿಯೂ ಹಣದ ಮಳೆಯನ್ನೇ ಸುರಿಸಿದರು. ಬಂಗಾಳ ಹಿಂದೆ ಬೀಳುವುದು ಸಾಧ್ಯವ ? ಮಹಿಳೆಯರು ತಮ್ಮ ಒಡವೆಗಳನ್ನೂ ಬಿಚ್ಚಿ ಅವರ ಜೋಳಿಗೆಗೆ ಹಾಕಿದರು.

ಅತ್ತ ಸರ್ಕಾರದ ಚಿಂತೆಗೆ ಮೇರೆಯೇ ಇರಲಿಲ್ಲ. ದಮನ ಚಕ್ರದ ವೇಗ ತೀವ್ರದಿಂದ ತೀವ್ರತರವಾಗತೊಡಗಿತು. ಜನತೆಯ ಉತ್ಸಾಹದಲ್ಲಿಯೂ ಇಂಥದೇ ತೀವ್ರತೆ ಕಾಣಿಸಿಕೊಂಡಿತು. ಇಂಗ್ಲೆಂಡಿನ ಯುವರಾಜರು ವರ್ಷದ ಕೊನೆಯ ಹೊತ್ತಿಗೆ ಭಾರತಕ್ಕೆ ಬರಲಿದ್ದರು. ಅವರು ಆಗಮಿಸಿದಾಗ ಯಾವುದೇ ಬಗೆಯ ಸ್ವಾಗತವನ್ನು ಕೋರಕೂಡದೆಂದು ಅಖಿಲ ಭಾರತೀಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿ

1 ಅಂಜಯ ಮುದ್ರ: ಸಪ್ಟೆಂಬರ್ 24, 1922

ನಿರ್ಧರಿಸಿತು. ನಾಡು ಈ ಆಜ್ಞೆಯನ್ನು ಪರಿಪಾಲಿಸಿತು. ಆದರೆ, ಕ್ರೈಸ್ತರು ಮತ್ತು ಪಾರಸಿಗಳು ಇದನ್ನು ವಿರೋಧಿಸುತ್ತಿದ್ದರು. ಈ ಕಾರಣದಿಂದಾಗಿ ಮುಂಬಯಿಯಲ್ಲಿ ಭಯಂಕರವಾದ ದಂಗೆಯೇ ಉಂಟಾಯಿತು. ಗಾಂಧೀಜಿಯವರಿಗೆ ತುಂಬ ದುಃಖವಾಯಿತು. ಮಾತು ಮತ್ತು ಕೃತಿಗಳೆರಡರಲ್ಲಿಯೂ ಅಹಿಂಸೆಯನ್ನು ಪಾಲಿಸಬೇಕೆಂಬ ಷರತ್ತಿಗೊಳಪಟ್ಟು ಸವಿನಯ ಆಜ್ಞೋಲ್ಲಂಘನೆಯ ಚಳವಳಿಯನ್ನು ನಡೆಸಲು ಕಾರ್ಯಕಾರಿ ಸಮಿತಿ ಬಂಗಾಳಕ್ಕೆ ಅನುಮತಿಯನ್ನು ಕೊಟ್ಟಿತ್ತು.

ದೇಶಬಂಧು ಅವರು ಬಂಗಾಳದಲ್ಲಿ ಈ ಚಳವಳಿಯ ಸಂಚಾಲಕರಾಗಿದ್ದರು. ಪೇಟೆಗಳಲ್ಲಿ ಖಾದಿವಸ್ತ್ರಗಳನ್ನು ಮಾರುವುದಕ್ಕಾಗಿ ಹೊರಟ ಸ್ವಯಂಸೇವಕರಲ್ಲಿ ಅವರ ಮಗನೂ ಒಬ್ಬನಾಗಿದ್ದ. ಅವರೆಲ್ಲರನ್ನೂ ಬಂಧಿಸಲಾಯಿತು. ಆ ಬಳಿಕ ಅವರ ಪತ್ನಿ ವಾಸಂತೀ ದೇವಿ ಮತ್ತು ಸೋದರಿ ಊರ್ಮಿಲಾ ದೇವಿ ಈ ಚಳವಳಿಯ ನೇತೃತ್ವವನ್ನು ವಹಿಸಿಕೊಂಡರು. ಯುವರಾಜರೂ ಆ ಹೊತ್ತಿಗೇ ಕಲ್ಕತ್ತಾಗೆ ಆಗಮಿಸಿದರು. ಅಂದು ಹರತಾಳವನ್ನು ಆಚರಿಸಬೇಕೆಂದು ವಾಸಂತೀ ದೇವಿ ಅವರು ಕರೆಕೊಟ್ಟಿದ್ದುದರಿಂದ ಸರ್ಕಾರ ಅವರನ್ನು ಬಂಧಿಸಿತು. ಬಂಗಾಳದಲ್ಲಿ ಉತ್ಸಾಹದ ಬಿರುಗಾಳಿ ಬೀಸಿದಂತಾಯಿತು. ಶರತ್‌ಚಂದ್ರರ ಉತ್ಸಾಹಕ್ಕಂತೂ ಮೇರೆಯೇ ಇರಲಿಲ್ಲ. 'ಭಾರತ ವರ್ಷ' ಪತ್ರಿಕೆಯ ಸಂಪಾದಕರಾಗಿದ್ದ ಜಲಧರ ಸೇನ್ ಅವರು ಶರತ್‌ಚಂದ್ರರ ಮೇಲೆ ತುಂಬ ಪ್ರೀತಿಯನ್ನಿಟ್ಟುಕೊಂಡಿದ್ದರು. ಮತ್ತೆ ಮತ್ತೆ ನಿರಾಶರಾಗಬೇಕಾಗಿ ಬಂದರೂ, ಲೇಖನವನ್ನು ಕೇಳಲು ಅವರ ಬಳಿಗೆ ಬರುವುದನ್ನು ಮಾತ್ರ ಅವರು ನಿಲ್ಲಿಸಲಿಲ್ಲ. ಅಂದೂ ಅವರು ಬಂದಿದ್ದರು. "ಶರತ್, ನೀನು ಬರೆದು ತುಂಬ ದಿವಸಗಳೇ ಆಯಿತಲ್ಲ. ಈಗಲಾದರೂ ಮತ್ತೆ ಬರೆಯಲು ಆರಂಭಿಸು" ಎಂದರು.

ಶರತ್‌ಚಂದ್ರರು ಆಗ ಹುಕ್ಕಾ ಸೇದುತ್ತಿದ್ದರು. ಅದನ್ನು ಬದಿಗೆ ಸರಿಸುತ್ತ ಅವರೆಂದರು: "ಬರೆಯಬೇಕು ಎಂದಿರಾ? ಯಾರಿಗಾಗಿ ಬರೆಯಲಿ? ಏನು ಬರೆಯಲಿ? ಏಕಾಗಿ ಬರೆಯಲಿ? ಬರೆದು ಏನು ಪ್ರಯೋಜನ? ವಾಸಂತೀ ದೇವಿಯನ್ನೂ, ಅವರ ಏಕೈಕ ಪುತ್ರನನ್ನು ಎಲ್ಲರೆದುರಿಗೆ ರಾಜಮಾರ್ಗದಲ್ಲಿ ಒಬ್ಬ ಸಾರ್ಜೆಂಟ್ ಬಂಧಿಸಿದ. ಇಷ್ಟಾಗಿಯೂ, ಬಂಗಾಳಿಗಳು ಅಂದು ವೈಸ್‌ರಾಯ್ ಅವರ ಮನೆಗೆ ದಯಮಾಡಿಸಿ ಭೂರಿ ಭೋಜನವನ್ನು ಸವಿದು ಬಂದರು. ಈಗಲೂ ಜನ ವಿದೇಶಿ ಬಟ್ಟೆಗಳನ್ನು ತೊಡುತ್ತಿದ್ದಾರೆ; ಈಗಲೂ ಅದೇ ಸರ್ಕಾರದ ತಾಬೇದಾರಿ ಮಾಡುತ್ತಿದ್ದಾರೆ, ಈಗಲೂ ಕೋರ್ಟು-ಕಛೇರಿಗಳಲ್ಲಿ ವಕೀಲರು-ಬ್ಯಾರಿಸ್ಟರುಗಳು ಅನ್ಯೋನ್ಯವಾಗಿ ಕೆಲಸ ಮಾಡುತ್ತಿದ್ದಾರೆ. ನಾವೆಲ್ಲ ದಾಸಾನುದಾಸರು ಬಾಡಿಗೆಯ ಕುದುರೆಗಳು, ಹಣಕೊಟ್ಟು ಕೊಂಡಿರುವ ಗುಲಾಮರು. ಇದು ನಮಗೆಲ್ಲ ನಾಚಿಕೆಗೇಡಿನ ಸಂಗತಿ."

ಘಟನೆಗಳು ತೀವ್ರಗತಿಯಲ್ಲಿ ನಡೆದುಹೋಗುತ್ತಿದ್ದುವು. ಬಂಗಾಳದ ಗವರ್ನರ್ ಆಗಿದ್ದ ಲಾರ್ಡ್ ರೋನಾಲ್ಡ್‌ಸೇ ಒಪ್ಪಂದದ ಮಾತುಕತೆಗಳಿಗಾಗಿ ದೇಶಬಂಧು ದಾಸ್ ಅವರನ್ನು ಆಹ್ವಾನಿಸಿದ. ಆದರೆ, ಇದರಿಂದ ಯಾವ ಪರಿಣಾಮವೂ ಉಂಟಾಗಲಿಲ್ಲ. ದೇಶಬಂಧು ಅವರನ್ನು ಬಂಧಿಸಲಾಯಿತು. ಇತರ ಅನೇಕ ನೇತಾರರನ್ನು

ಬಂಧಿಸಲಾಯಿತು. ಶರತ್‌ಚಂದ್ರರನ್ನು ಇನ್ನೂ ಬಂಧಿಸಿರಲಿಲ್ಲ. ಶಚಿನಂದನ ಚಟ್ಟೋಪಾಧ್ಯಾಯ ಅವರು ಈ ಪ್ರಸಂಗದ ಬಗ್ಗೆ ಹೀಗೆ ಬರೆದಿದ್ದಾರೆ: "ಪರಿಸ್ಥಿತಿಯ ಪ್ರಕೋಪ ತೀವ್ರತರವಾಗುತ್ತ ನಡೆದಿದ್ದಾಗ ಒಮ್ಮೆ ಅವರು ಹೇಮಂತಕುಮಾರ ಸರ್ಕಾರ್ ಅವರನ್ನು ಕೇಳಿದ್ದರು: 'ಹೇಮಂತ್, ಜೈಲಿನಲ್ಲಿ ಅಫೀಮ್ ಸೇವಿಸಲು ಅವಕಾಶ ಕೊಡುತ್ತಾರೆಯೆ?

" 'ಇಲ್ಲ.'

" 'ಹೊಗೆಸೊಪ್ಪು ಸೇವಿಸಲು ಅವಕಾಶ ಉಂಟೇ?'

" 'ಇಲ್ಲ. ಇದಕ್ಕೂ ಅವಕಾಶವಿಲ್ಲ.'

" 'ಹಾಗಾದರೆ, ನಾನು ಜೈಲಿಗೆ ಹೋಗಲಾರೆ.'

"ದೇಶಬಂಧು ಅವರನ್ನು ಆಗಿನ್ನೂ ಬಂಧಿಸಿರಲಿಲ್ಲ. ಈ ಮಾತುಕತೆಯನ್ನು ಕೇಳಿ, ಅವರು ನಕ್ಕು ಪ್ರಶ್ನಿಸಿದರು: 'ಯಾಕೆ ಆಗುವುದಿಲ್ಲ?'

ಶರತ್‌ಚಂದ್ರರೆಂದರು: 'ಬಂದೀಖಾನೆ ಸಭ್ಯ ವ್ಯಕ್ತಿಗಳು ಇರಬಹುದಾದಂಥ ಜಾಗವಲ್ಲ ಎಂದು ತೋರುತ್ತದೆ. ಅದು ನನಗೆ ಸರಿ ಹೋಗುವುದಿಲ್ಲ. ಸರ್ಕಾರ ಗುಂಡು ಹಾರಿಸಿದರೆ, ಅದಕ್ಕೆ ಎದೆಯೊಡ್ಡಿ ನಿಲ್ಲಬಲ್ಲೆ. ಆದರೆ ಕುರಿಗಳ ಗುಂಪಿನಲ್ಲಿ ಕುಳಿತು ಜಪಮಣಿ ಎಣಿಸುತ್ತ ಹಗಲು ರಾತ್ರಿಗಳನ್ನು ಕಳೆಯುತ್ತ ತಿಂಗಳುಗಟ್ಟಲೆ ಕೊಳೆಯುತ್ತ ಬಿದ್ದಿರುವುದು ನನಗೆ ಸಾಧ್ಯವಿಲ್ಲ.' "

ಪ್ರಚಲಿತವಾಗಿದ್ದ ಅರ್ಥದಲ್ಲಿ ವಾಸ್ತವವಾಗಿ ಶರತ್‌ಚಂದ್ರರು ಜನನಾಯಕ ರಾಗಿರಲಿಲ್ಲ. ಅವರು ಗೆಳೆಯರೂ, ಸಲಹೆಗಾರರೂ ಆಗಿದ್ದರು. ಅಲ್ಲಿಯವರೆಗೆ 'ಕಾಂಗ್ರೆಸ್ ಸ್ವಯಂಸೇವಕ ಮಂಡಲಿ'ಯನ್ನು ಮಾತ್ರವೇ ಕಾನೂನು ಬಾಹಿರ ಸಂಸ್ಥೆಯೆಂದು ಘೋಷಿಸಲಾಗಿತ್ತು. ಇಡಿಯಾಗಿ ಕಾಂಗ್ರೆಸ್ ಪಕ್ಷವನ್ನೇನೂ ಬಹಿಷ್ಕರಿಸಿರಲಿಲ್ಲ. ಶರತ್‌ಚಂದ್ರರು ಸ್ವಯಂ ಸೇವಕ ದಳದ ಸದಸ್ಯರೇನೂ ಆಗಿರಲಿಲ್ಲ. ಆದ್ದರಿಂದ ಅವರನ್ನು ಬಂಧಿಸುವ ಪ್ರಶ್ನೆಯೇ ಇರಲಿಲ್ಲ. ಅವರು ಒಂದೇ ಸಮನೆ ಕಾಂಗ್ರೆಸ್‌ನ ಕೆಲಸವನ್ನು ಮಾಡುತ್ತ ಇದ್ದರು.

ಅಲ್ಲಿಯವರೆಗೆ ಶರತ್‌ಚಂದ್ರರು ಗಡ್ಡ ಬಿಟ್ಟಿದ್ದರು. ಒಂದು ದಿನ ಇದ್ದಕ್ಕಿದ್ದಂತೆ ಅವರು 'ಸರ್ವೆಂಟ್' ಕಛೇರಿಗೆ ಬಂದಾಗ, ಗಡ್ಡ ಬೋಳಿಸಿದ್ದ ಅವರ ಮುಖವನ್ನು ನೋಡಿ ಆಶ್ಚರ್ಯಚಕಿತರಾಗಿ ಸಂಪಾದಕ ಶ್ಯಾಮಸುಂದರ ಚಕ್ರವರ್ತಿಯವರು ಕೇಳಿದರು: "ಬನ್ನಿ, ಬನ್ನಿ, ಇದೇನು? ನಿಮ್ಮ ಗಡ್ಡ ಎಲ್ಲಿ ಹೋಯಿತು?"

ಶರತ್‌ಚಂದ್ರರು ಉತ್ತರಿಸಿದರು: "ಈಗೀಗ ಈ ಚಳವಳಿಯಲ್ಲಿ ಯಾವ ಅಪರಾಧಕ್ಕಾಗಿ ಹಿಂದೂವಿಗೆ ಆರುತಿಂಗಳ ಶಿಕ್ಷೆಯನ್ನು ವಿಧಿಸಲಾಗುತ್ತದೆಯೋ ಅದೇ ಅಪರಾಧಕ್ಕಾಗಿ ಮುಸಲ್ಮಾನನಿಗೆ ಎರಡುಪಟ್ಟು ಹೆಚ್ಚು ಶಿಕ್ಷೆಯನ್ನು ವಿಧಿಸಲಾಗುತ್ತಿದೆ. ಆದ್ದರಿಂದ ನಾನೀಗ ಹಿಂದೂ ಆಗಿಬಿಟ್ಟಿದ್ದೇನೆ."

ಈ ಮಾತನ್ನು ಕೇಳಿ ಎಲ್ಲರೂ ಗೊಳ್ಳೆಂದು ನಕ್ಕರು. ಆದರೆ, ಸೆರೆವಾಸದ ಭಯ ಅವರ ಉಪಚೇತನದಲ್ಲಿ ಬೇಡುಬಿಟ್ಟಿತ್ತೆಂಬುದು ಅವರ ಈ ವಿನೋದ ಪ್ರಿಯತೆಯಿಂದಲೂ ಸ್ಪಷ್ಟವಾಗುತ್ತದೆ.

ಯುವರಾಜರು ಆಗಮಿಸುವುದಕ್ಕೆ ಕೆಲವು ದಿವಸಗಳ ಮೊದಲು ಮತ್ತೊಮ್ಮೆ

ಒಡಂಬಡಿಕೆಯ ಮಾತುಕತೆಗಳು ನಡೆದುವು. ಆಗ ದೇಶಬಂಧುದಾಸ್ ಅವರನ್ನು ಅಲೀಪುರದ ಸೆರೆಮನೆಯಲ್ಲಿಡಲಾಗಿತ್ತು. ಪಂಡಿತ ಮದನಮೋಹನ ಮಾಲವೀಯ ಅವರ ನೇತೃತ್ವದಲ್ಲಿ ಒಂದು ಶಿಷ್ಟ ಮಂಡಳಿ ವೈಸ್‌ರಾಯ್ ಅವರನ್ನು ಭೇಟಿ ಮಾಡಿತು. ಈ ಮಾತುಕತೆಗಳ ಬಳಿಕ, ಜೈಲಿನಲ್ಲಿದ್ದ ದೇಶಬಂಧು ಅವರೊಡನೆ ದೂರವಾಣಿಯ ಮೂಲಕ ಮಾತುಕತೆ ನಡೆಸಲಾಯಿತು. ಅಹಮದಾಬಾದಿನಲ್ಲಿದ್ದ ಗಾಂಧೀಜಿಯವರ ಅಭಿಪ್ರಾಯವನ್ನು ಪಡೆದುಕೊಳ್ಳಲಾಯಿತು. ಆದರೆ, ಬಂದಿಗಳನ್ನು ಬಿಡುಗಡೆ ಮಾಡುವ ವಿಷಯದ ಬಗ್ಗೆ ಹಾಗೂ ಪಿಕೆಟಿಂಗ್ ನಡೆಸುವ ಹಕ್ಕನ್ನು ಉಳಿಸಿಕೊಂಡಿರುವ ಬಗ್ಗೆ ಒಮ್ಮತಕ್ಕೆ ಬರಲಾಗಲಿಲ್ಲ.

ಯುವರಾಜರು ಕಲ್ಕತ್ತೆಗೆ ಆಗಮಿಸಿದರು.[1] ಆದರೆ, ಈ ಮಹಾನಗರ ಶ್ಮಶಾನವೋ ಎಂಬಂತೆ ಸದ್ದಿಲಿತನದ ಆವರಣವನ್ನು ಹೊದ್ದು ಕುಳಿತಿತ್ತು. ಕಟುಕರ ಅಂಗಡಿಗಳು ಕೂಡ ಮುಚ್ಚಿದ್ದುವು. ಸ್ವತಃ ದೇಶಬಂಧು ಅವರು ಹರತಾಳದ ಕಾರ್ಯಕ್ರಮದ ಸಂಚಾಲಕರಾಗಿದ್ದರು. ಮಾವ ಉಪೇಂದ್ರನಾಥ್ ಅವರನ್ನು ಜೊತೆಗಿಟ್ಟುಕೊಂಡು ಶರತ್‌ಚಂದ್ರರು ಬರಿಗಾಲಿನಲ್ಲಿ ಓಡಾಡುತ್ತ ಹೌರಾ ಸೇತುವೆಯ ಬಳಿ ಸೇರಿದ್ದ ಅಪಾರ ಜನಸ್ತೋಮವನ್ನು ನಿಯಂತ್ರಿಸುವ ಕೆಲಸ ಮಾಡುತ್ತಿದ್ದರು. ಇಷ್ಟೊಂದು ಸಂಪೂರ್ಣವೆಂಬಂಥ ಹರತಾಳ ಮತ್ತೊಂದೂ ನಡೆಯಲಿಲ್ಲ. ಇದರ ಯಶಸ್ಸು ಆಂಗ್ಲರನ್ನು ಕ್ರುದ್ಧರನ್ನಾಗಿಸಿತು. ಸರ್ಕಾರದ ದಮನಕಾರಿ ಕಾರ್ಯಾಚರಣೆಗಳೂ ಚುರುಕುಗೊಂಡುವು. ಇದರೊಡನೆ ಅಸಹಕಾರ ಚಳವಳಿಯೂ ಮತ್ತಷ್ಟು ತೀವ್ರವಾಗಿ ಪರಿಣಮಿಸಿತು.

ಇಂಥ ವಾತಾವರಣದಲ್ಲಿಯೇ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನ ಅಹಮದಾಬಾದಿನಲ್ಲಿ ನಡೆಯಿತು. ದೇಶಬಂಧು ದಾಸ್ ಅವರನ್ನು ಅಧ್ಯಕ್ಷ ಸ್ಥಾನಕ್ಕೆ ಆರಿಸಲಾಯಿತು. ಆದರೆ, ಸರ್ಕಾರ ಅವರನ್ನು ಜೈಲಿನಲ್ಲಿಟ್ಟಿತ್ತು. ಹೀಗಾಗಿ, ಹಕೀಮ್ ಅಜಮಲ್ ಖಾನ್ ಅವರನ್ನು ಬದಲಿ ಸಭಾಧ್ಯಕ್ಷರೆಂದು ಆರಿಸಲಾಯಿತು. ಭಾರತದ ಕೋಗಿಲೆ ಎಂದು ಹೆಸರುಗಳಿಸಿದ್ದ ಶ್ರೀಮತಿ ಸರೋಜಿನಿ ನಾಯ್ಡು ಅವರು ದೇಶಬಂಧು ಅವರ ಭಾಷಣವನ್ನು ಓದಿ ಹೇಳಿದರು. ಭಾರತೀಯ ರಾಷ್ಟ್ರ ಸಂಘದ ವ್ಯಾಪಕ ಸಿಂಹಾವಲೋಕನವನ್ನು ಮುಂದಿರಿಸುತ್ತ ದೇಶಬಂಧು ಅವರು ಹೀಗೆಂದಿದ್ದರು: "ಪಾಶ್ಚಾತ್ಯ ಸಂಸ್ಕೃತಿಯನ್ನು ಆತ್ಮೀಕರಿಸಿಕೊಳ್ಳಲು ಸಿದ್ಧವಾಗುವುದಕ್ಕೆ ಮೊದಲು ನಮ್ಮ ಸಂಸ್ಕೃತಿ ತನ್ನನ್ನು ತಾನು ಕಂಡುಕೊಳ್ಳುವುದು ಒಳ್ಳೆಯದು."

'ಗವರ್ನ್‌ಮೆಂಟ್ ಆಫ್ ಇಂಡಿಯಾ ಆಕ್ಟ್' ಬಗ್ಗೆ ಟೀಕೆ-ಟಿಪ್ಪಣಿ ಮಾಡುತ್ತ, ಅವರು ಹೀಗೆಂದು ಘೋಷಿಸಿದ್ದರು: "ಸರ್ಕಾರದೊಂದಿಗೆ ಸಹಕರಿಸುವುದಕ್ಕೆ ಈ ಕಾಯ್ದೆಯನ್ನು ಆಧಾರವಾಗಿ ಅಂಗೀಕರಿಸಬೇಕೆಂದು ನಾನು ನಿಮಗೆ ಶಿಫಾರಸು ಮಾಡಲಾರೆ. ಗೌರವವನ್ನು ಕಳೆದುಕೊಂಡು ಶಾಂತಿಯನ್ನು ಕೊಳ್ಳಲು ನಾನು ಸಿದ್ಧನಿಲ್ಲ. ಈ ಕಾಯ್ದೆಯ ಪೂರ್ವ ಪೀಠಿಕೆ ಎಲ್ಲಿಯವರೆಗೆ ಬದಲಾಗುವುದಿಲ್ಲವೋ, ನಮ್ಮ ಮನೆಯ ಆಡಳಿತವನ್ನು, ನಮ್ಮ ಸ್ವತಂತ್ರ ವ್ಯಕ್ತಿತ್ವದ ವಿಕಾಸವನ್ನು, ನಮ್ಮ ಅದೃಷ್ಟದ ಒಳಗಿನ ತೀರ್ಮಾನವನ್ನು ನಾವೇ ಕೈಗೊಳ್ಳುವ ನಮ್ಮ ಹಕ್ಕನ್ನು

1. ಸೆಪ್ಟಂಬರ್ 24, 1921

ಎಲ್ಲಿಯವರೆಗೆ ಒಪ್ಪಿಕೊಳ್ಳುವುದಿಲ್ಲವೋ, ಅಲ್ಲಿಯವರೆಗೆ ಒಡಂಬಡಿಕೆಯ ಯಾವುದೇ ಶರತ್ತಿನ ಬಗ್ಗೆ ಆಲೋಚಿಸಲೂ ನಾನು ಸಿದ್ಧನಿಲ್ಲ."

ಚಳವಳಿಯನ್ನು ಕೊನೆಗೊಳಿಸುವ ಪ್ರಶ್ನೆಯೇ ಇರಲಿಲ್ಲ. ನಾಡಿನ ಮೂಲೆಮೂಲೆಗಳಲ್ಲಿ ಅಹಿಂಸಾತ್ಮಕ ಕ್ರಾಂತಿಯ ಜ್ವಾಲೆ ಭುಗಿಲೇಳುವುದರಲ್ಲಿತ್ತು. ಆದರೆ, ಈ ಹೊತ್ತಿಗೆ ಸರಿಯಾಗಿ ನಡೆಯಬಾರದಿದ್ದಂಥ ಘಟನೆಯೊಂದು ನಡೆದುಹೋಯಿತು. ತೀವ್ರ ಗತಿಯಲ್ಲಿ ಚಲಿಸುತ್ತಿದ್ದ ಕಾಲಚಕ್ರ ಒಮ್ಮೆಗೇ ಸ್ತಬ್ಧವಾಗಿ ಬಿಟ್ಟಂತಾಯಿತು.

ಗೋರಖ್‌ಪುರ ಜಿಲ್ಲೆಯ ಚೌರಿಚೌರಾ ಗ್ರಾಮದಲ್ಲಿ ಕಾಂಗ್ರೆಸ್ ಪಕ್ಷದ ಒಂದು ಮೆರವಣಿಗೆ ನಡೆಯಿತು.[1] ಈ ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ದಂಗೆಯಾಗಿ ಬಿಟ್ಟಿತು. ಆ ಬಳಿಕ ಜನರ ಗುಂಪು ಇಪ್ಪತ್ತೊಂದು ಮಂದಿ ಸಿಪಾಯಿಗಳನ್ನು ಮತ್ತು ಒಬ್ಬ ಠಾಣೇದಾರನನ್ನು ಠಾಣೆಯಲ್ಲಿ ಕೂಡಿಹಾಕಿ ಬೆಂಕಿ ಇಟ್ಟಿತು. ಹೊರಬರಲು ಯಾರಿಗೂ ಅವಕಾಶ ಕೊಡಲಿಲ್ಲ. ಅವರೆಲ್ಲ ಸುಟ್ಟು ಬೂದಿಯಾದರು.

ಇದಕ್ಕೆ ಮೊದಲು ಮುಂಬಯಿ ಮತ್ತು ಮದ್ರಾಸ್ ನಗರಗಳಲ್ಲಿಯೂ ಈ ಬಗೆಯ ದಂಗೆಗಳು ನಡೆದಿದ್ದುವು. ಅವುಗಳಲ್ಲಿ ಸುಮಾರು ಐವತ್ತಮೂರು ಮಂದಿ ಸತ್ತಿದ್ದರು, ನಾನೂರು ಮಂದಿ ಗಾಯಗೊಂಡಿದ್ದರು. ಈ ದಂಗೆಗಳಿಂದಾಗಿ ಗಾಂಧೀಜಿಯವರು ತುಂಬ ತುಂಬ ದುಃಖಿತರಾಗಿದ್ದರು. ಬಾರ್ದೋಲಿಯಲ್ಲಿ ಕಾರ್ಯಕಾರಿ ಸಮಿತಿಯ ಸಭೆ ನಡೆಯಿತು.[2] ಸಾಮೂಹಿಕ ಸತ್ಯಾಗ್ರಹವನ್ನು ಆರಂಭಿಸುವ ಆಲೋಚನೆಯನ್ನು ಕೈಬಿಡಬೇಕೆಂದು ಆ ಸಭೆಯಲ್ಲಿ ತೀರ್ಮಾನಿಸಲಾಯಿತು. ಬಂಧನಕ್ಕೆ ಒಳಗಾಗುವಂಥ ಹಾಗೂ ಶಿಕ್ಷೆ ವಿಧಿಸಲಾಗುವಂಥ ಯಾವುದೇ ಕಾರ್ಯವನ್ನು ಮಾಡಕೂಡದೆಂದು ಕಾಂಗ್ರೆಸ್ ಪಕ್ಷದ ಸದಸ್ಯರಿಗೆ ಒತ್ತಿ ಹೇಳಲಾಯಿತು. ರಚನಾತ್ಮಕ ಕಾರ್ಯಕ್ರಮವೊಂದನ್ನು ಸಿದ್ಧಪಡಿಸಲಾಯಿತು. ಇದರ ಮೇರೆಗೆ ಕಾಂಗ್ರೆಸ್ ಪಕ್ಷಕ್ಕೆ ಒಂದು ಕೋಟಿ ಸದಸ್ಯರನ್ನು ನೋಂದಾಯಿಸುವ, ಚರ್ಖಾ ಕಾರ್ಯಕ್ರಮಕ್ಕೆ ಪ್ರಚಾರ ಕೊಡುವ, ರಾಷ್ಟ್ರೀಯ ವಿದ್ಯಾಲಯಗಳನ್ನು ಸ್ಥಾಪಿಸುವ, ಮಾದಕ ವಸ್ತು ನಿಷೇಧ ನೀತಿಗೆ ಪ್ರಚಾರ ಕೊಡುವ ಹಾಗೂ ಗ್ರಾಮ ಪಂಚಾಯಿತಿಗಳನ್ನು ಏರ್ಪಡಿಸುವ ಕಾರ್ಯಗಳೇ ತುಂಬ ಮುಖ್ಯವಾಗಿದ್ದುವು.

ರಚನಾತ್ಮಕ ಕಾರ್ಯಕ್ರಮಗಳ ಮೂಲಕ, ನಾಡಿನಲ್ಲಿ ಮತ್ತೆ ಅಹಿಂಸೆಯ ವಾತಾವರಣವನ್ನು ನೆಲೆಗೊಳಿಸಲು ಗಾಂಧೀಜಿ ಇಚ್ಛಿಸಿದ್ದರು. ಆದರೆ, ಸೆರೆಮನೆಗಳಲ್ಲಿದ್ದ ಅನೇಕ ಹಿರಿಯ ನಾಯಕರಿಗೆ ಗಾಂಧೀಜಿಯವರು ಚಳವಳಿಯನ್ನು ಒಮ್ಮೆಗೇ ತಣ್ಣಗಾಗಿಸಿಬಿಟ್ಟರು ಎಂದನಿಸಿತು. ಪಂಡಿತ್ ಮೋತೀಲಾಲ ನೆಹರೂ ಮತ್ತು ಲಾಲಾ ಲಜಪತ್‌ರಾಯ್ ಅವರು ಜೈಲಿನಿಂದಲೇ ಗಾಂಧೀಜಿಯವರಿಗೆ ಸುದೀರ್ಘ ಪತ್ರಗಳನ್ನು ಬರೆದರು. ಒಂದೆಡೆ ನಡೆದ ಪಾಪ ಕಾರ್ಯಕ್ಕಾಗಿ ಇಡೀ ದೇಶಕ್ಕೆ ಶಿಕ್ಷೆಯನ್ನು ವಿಧಿಸುವ ಹಕ್ಕು ನಿಮಗಿಲ್ಲ ಎಂದು ಅವರು ತಿಳಿಸಿದರು. ದೇಶಬಂಧು ದಾಸ್ ಅವರ ನಿಲುವೂ ಇದೇ ಆಗಿತ್ತು. ಶರತ್‌ಚಂದ್ರರ ಅಭಿಪ್ರಾಯವೂ

1 ಫೆಬ್ರವರಿ 5, 1922.

2 ಫೆಬ್ರುವರಿ 11, 1922

ಇದೇ ಆಗಿತ್ತು. ಶಚಿನಂದನ್ ಅವರು ಈ ಪ್ರಸಂಗದ ಬಗ್ಗೆ ಹೀಗೆ ಬರೆದಿದ್ದಾರೆ: "ಅವರಿಗೆ ಗಾಂಧೀಜಿಯವರ ಈ ತೀರ್ಮಾನದಿಂದ ತುಂಬ ದುಃಖ ಉಂಟಾಯಿತು. ಅವರೆಂದರು: 'ಗಾಂಧೀಜಿಯವರು ಭಯಂಕರವಾದ ತಪ್ಪು ಮಾಡಿಬಿಟ್ಟಿದ್ದಾರೆ. ಈ ಸ್ಥಿತಿಯಲ್ಲಿ ಚಳವಳಿಯನ್ನು ಸ್ಥಗಿತಗೊಳಿಸುವುದರ ಅರ್ಥ ಚಳವಳಿಯನ್ನು ಅಪ ಮೃತ್ಯುವಿಗೆ ದೂಡುವುದೆಂದಲ್ಲದೆ ಬೇರೇನೂ ಆಗುವುದಿಲ್ಲ. ಜನತಾ ಆಂದೋಳನ ಒಮ್ಮೆಗೇ ತಣ್ಣಗಾಗಿ ಬಿಟ್ಟಿದೆ. ಅದನ್ನು ಮತ್ತೆ ಮರುಕೊಳಿಸುವುದು ಸಾಧ್ಯವೇ ಆಗುವುದಿಲ್ಲ. ಈ ಆಂದೋಳನದಿಂದ ಖಂಡಿತವಾಗಿಯೂ ಸ್ವರಾಜ್ಯ ದೊರೆಯುತ್ತ ದೆಂದು ಭಾವಿಸಿದ್ದೆವು. ಆದರೆ, ಗಾಂಧೀಜಿಯವರು ಇದನ್ನು ಆರಂಭಿಸಲೇ ಇಲ್ಲ.... ಆವೇಶಕ್ಕೊಳಗಾದ ಜನರ ಕೈಗೆ ಸಿಕ್ಕು ಕೆಲವು ಸಿಪಾಯಿಗಳು ಉರಿದು ಬೂದಿಯಾದರು, ನಿಜ. ಆದರೆ, ಅದರಿಂದ ಏನಾಯಿತು? ಇದಕ್ಕಾಗಿ ಇಡೀ ಭರತಖಂಡದ ಆಂದೋಳನವನ್ನೇ ನಿಲ್ಲಿಸಿಬಿಡಬೇಕೆ? ಇಂಥ ಬೃಹತ್ ರಾಷ್ಟ್ರದ ಬಿಡುಗಡೆಯ ಹೋರಾಟದಲ್ಲಿ ರಕ್ತಪಾತ ಆಗುವುದೇ ಇಲ್ಲವೇನು? ಖಂಡಿತ ವಾಗಿಯೂ ಆಗಿಯೇ ತೀರುತ್ತದೆ. ನಾಲ್ಕು ಕಡೆ ರಕ್ತದ ಗಂಗೆ ಹರಿಯುತ್ತದೆ. ಆ ರಕ್ತದ ಹೊನಲಿನಲ್ಲಿಯೇ ಸ್ವಾತಂತ್ರ್ಯದ ಕೆಂಪು ಕಮಲ ಅರಳಿ ನಿಲ್ಲುತ್ತದೆ. ಇದಕ್ಕಾಗಿ ಇದೆಂಥ ಕ್ಷೋಭೆ, ಇದೆಂಥ ದುಃಖ, ಇದೆಂಥ ಅನುತಾಪ?.... ಅಹಿಂಸೆ ಎಂಬುದು ತುಂಬ ಪವಿತ್ರವಾದ ಪರಿಕಲ್ಪನೆ ಎಂಬುದು ನಿಜ. ಆದರೆ, ಸ್ವಾತಂತ್ರ್ಯ ಸಾಧನೆ ಅದಕ್ಕಿಂತಲೂ ಹೆಚ್ಚು, ಅದಕ್ಕಿಂತಲೂ ನೂರುಪಟ್ಟು ಪವಿತ್ರವಾದುದು.' "

ಸತ್ಯಾಗ್ರಹವನ್ನು ನಿಲ್ಲಿಸಿಬಿಟ್ಟಿದ್ದರಿಂದ, ತುಡಿಯುತ್ತಿದ್ದ ಉತ್ಸಾಹದ ಮುಖಕ್ಕೆ ತಣ್ಣೀರನ್ನೆರಚಿದಂತಾಯಿತು. ಸರ್ಕಾರ ಇಂಥ ಕ್ಷಣಕ್ಕಾಗಿಯೇ ಕಾದುಕೊಂಡಿತ್ತು. ಅದು ಗಾಂಧೀಜಿಯವರನ್ನು ಬಂಧಿಸಿತು;[1] ರಾಜದ್ರೋಹದ ಆಪಾದನೆಯನ್ನು ಅವರ ಮೇಲೆ ಹೊರಿಸಿ ಆರು ವರ್ಷಗಳ ಸೆರೆಮನೆಯ ಶಿಕ್ಷೆಯನ್ನು ವಿಧಿಸಿತು. ಭರತ ಖಂಡದ ಮೂಲೆಮೂಲೆಗಳಲ್ಲೂ ಬೆಂಕಿಯನ್ನು ಹೊತ್ತಿಸಿದ್ದ, ನಲವತ್ತು ಕೋಟಿ ಭಾರತೀಯರ ನೇತಾರರಾಗಿದ್ದ ಗಾಂಧೀಜಿ, ಆ ಬೆಂಕಿಯನ್ನು ತಮ್ಮ ಕೈಯಾರೆ ಆರಿಸಲು ಹೋಗಿ, ಅದರ ಪರಿಣಾಮವೆಂಬಂತೆ ಯರವಡಾ ಜೈಲಿನ ಮುಂಬಾಗಿಲ ಬಳಿ ಬಂದು ನಿಂತರು. ಬಾಗಿಲು ತೆರೆಯಿತು. ದೃಢವಾದ ಹೆಜ್ಜೆಗಳನ್ನು ಇಡುತ್ತ ಬಡಕಲು ಶರೀರದ ಈ ಮಹಾ ಮಾನವ ಸೆರೆಮನೆಯೊಳಕ್ಕೆ ನಡೆದರು. ಬಾಗಿಲು ಮುಚ್ಚಿತು. ಸವಿನಯ ಆಂದೋಳನದ ಮೊದಲ ಅಂಕದ ಮೇಲೆ ಪರದೆ ಬಿದ್ದಿತು. ಸತ್ಯಾಗ್ರಹ ನಿಂತು ಹೋದದ್ದು ಶರತ್‌ಚಂದ್ರರಿಗೆ ತುಂಬ ದುಃಖವನ್ನುಂಟು ಮಾಡಿತ್ತು. ಆದರೆ ಸರ್ಕಾರ ಗಾಂಧೀಜಿಯವರನ್ನು ಸೆರೆಮನೆಗೆ ದೂಡಿದಾಗ, 'ಮಹಾತ್ಮಾಜೀ' ಎಂಬ ಹೆಸರಿನಲ್ಲಿ ಅವರೊಂದು ಲೇಖನವನ್ನು ಬರೆದರು. ಕೆಲವೇ ದಿನಗಳ ಹಿಂದೆ ಗಾಂಧೀಜಿಯವರ ಬಗ್ಗೆ ಅಸಂತುಷ್ಟನಾಗಿದ್ದ ವ್ಯಕ್ತಿಯೇ ಅವರ ಆಂತರ್ಯವನ್ನು ಒಳಹೊಕ್ಕು ನೋಡಿ ಸತ್ಯವನ್ನು ಕಂಡುಕೊಂಡು, ಅದನ್ನು ಪೂರ್ಣ ಶ್ರದ್ಧೆಯಿಂದ ಬಹಿರಂಗಪಡಿಸಬಲ್ಲವನೂ ಆಗಿದ್ದನೆಂಬುದನ್ನು ಈ ಲೇಖನ

---

1 ಮಾರ್ಚ್ 13, 1922

ಸ್ಪಷ್ಟಪಡಿಸುತ್ತದೆ. ಈ ಮಾತುಗಳಲ್ಲಿ ಅವರ ವೇದನೆಯಲ್ಲಿ ಮಡುಗಟ್ಟಿರುವಂತೆ ತೋರುತ್ತದೆ:

"ಈ ನಿರ್ಭಾಗ್ಯ ದೇಶದಲ್ಲಿ ಎಂಥ ಕಾನೂನು ಇದೆ ಎಂದರೆ ಅದರ ಬಗೆಗಿನ ಅಪರಾಧಕ್ಕಾಗಿ ಅನನ್ಯ ಭಾವದಿಂದ ಸತ್ಯನಿಷ್ಠನಾಗಿರುವಂಥ 'ಕಾಯೇನ ವಾಚಾ ಮನಸಾ' ಹಿಂಸೆಯನ್ನು ತ್ಯಜಿಸಿರುವಂಥ ಎಲ್ಲಿಯೂ ಎಳ್ಳಷ್ಟು ಸ್ವಾರ್ಥವೆಂಬುದು ಇಲ್ಲದಿರುವಂಥ, ಆರ್ತರಿಗಾಗಿ ನೊಂದಿರುವವರಿಗಾಗಿ ಸನ್ಯಾಸಿಯಾಗಿರುವಂಥ ಈ ವ್ಯಕ್ತಿಯೂ ಇಂದು ಜೈಲಿಗೆ ಹೋಗಬೇಕಾಗಿ ಬಂದಿದೆ."[1]

## 6

ಅಂದು ಜಲಧರ್ ದಾದಾ ಅವರು ಶರತ್‌ಚಂದ್ರರನ್ನು ಕಾಣಲು ಬಂದಿದ್ದರು. ಶರತ್‌ಚಂದ್ರರು ತಲ್ಲೀನರಾಗಿ ಏನೋ ಬರೆಯುತ್ತಿದ್ದುದನ್ನು ಕಂಡರು. ಮುಖದಲ್ಲಿ ಪ್ರಸನ್ನತೆ ಇದೆ; ಕಣ್ಣುಗಳು ಬೆಳಗುತ್ತಿವೆ, ಲೇಖಿನ ಸರಸರನೆ ಓಡುತ್ತಿದೆ. ಪಕ್ಕದಲ್ಲೇ ಇರಿಸಿದ್ದ ಹುಕ್ಕಾದ ಕಡೆಗೂ ಅವರ ಗಮನ ಹರಿದಿಲ್ಲ. ಚಿಲುಮೆಯ ಬೆಂಕಿಯೂ ತಣ್ಣಗಾಗಿ ಬಿಟ್ಟಿದೆ. ಇದನ್ನು ಕಂಡು ಜಲಧರ್ ಅವರಿಗೆ ತುಂಬ ಸಂತೋಷವಾಯಿತು. ಸಂತೋಷದಿಂದ ತುಂಬಿ ತೊನೆಯುತ್ತ, ಕೈಯಲ್ಲಿದ್ದ ಲಾಠಿಯಿಂದ ಮೇಜನ್ನು ಕುಟ್ಟಿ ಶರತ್‌ಚಂದ್ರರನ್ನು ಆಶ್ಚರ್ಯಚಕಿತರನ್ನಾಗಿಸುತ್ತ ಹೇಳಿದರು: "ತುಂಬ ಸಂತೋಷ ಶರತ್, ಇಷ್ಟು ದಿವಸಗಳ ಬಳಿಕ ಲೇಖನಿಯನ್ನು ಮುಟ್ಟಿದ್ದೀಯಲ್ಲ! ಬರೆಯುತ್ತಿದ್ದೀಯಲ್ಲ!"

ತಲೆ ಎತ್ತಿ ಶರತ್‌ಚಂದ್ರರೆಂದರು: "ಹೌದು ಅಣ್ಣಯ್ಯ, ಬರೆಯುತ್ತಿದ್ದೇನೆ."

ಜಲಧರ್ ಸಂತುಷ್ಟರಾಗಿ, ಪಕ್ಕದಲ್ಲಿಯೇ ಇದ್ದ ಕುರ್ಚಿಯ ಮೇಲೆ ಕುಳಿತುಕೊಂಡರು. "ಏನು ಬರೆಯಲು ಪ್ರಾರಂಭಿಸಿದ್ದೀಯೆ ?" ಎಂದು ಕೇಳಿದರು.

ದೊಡ್ಡಣ್ಣನಂತಿದ್ದ ಈ ಗೆಳೆಯನ ಬಗ್ಗೆ ಶರತ್‌ಚಂದ್ರರು ಮನಸ್ಸಿನಲ್ಲಿಯೇ ಸಂಕೋಚವನ್ನು ಅನುಭವಿಸಿದರು. ಉಲ್ಲಾಸರಹಿತವಾಗಿದ್ದಂಥ ಮುಗುಳ್ನಗೆಯನ್ನು ಬೀರುತ್ತ ಅವರೆಂದರು: "ಕಥೆ, ಕಾದಂಬರಿಯನ್ನೇನೂ ಬರೆಯುತ್ತಿಲ್ಲ, ಅಣ್ಣಯ್ಯ, ದೇಶಬಂಧು ಅವರಿಗೆ ಜೈಲಿನಿಂದ ಬಿಡುಗಡೆಯಾಗಿದೆ.[2] ಅದಕ್ಕಾಗಿ ಸಾರ್ವಜನಿಕ ಅಭಿನಂದನೆ ನಡೆಯಲಿದೆ. ಆ ಸಮಾರಂಭಕ್ಕಾಗಿ ಅಭಿನಂದನ ಪತ್ರವನ್ನು ಸಿದ್ಧಪಡಿಸುತ್ತಿದ್ದೇನೆ.

ಒಂದೇ ಕ್ಷಣದಲ್ಲಿ ಜಲಧರ್ ದಾದಾ ಅವರ ಮುಖ ಕಳಾಹೀನವಾಗಿ ಪರಿಣಮಿಸಿತು. ತುಂಬ ಹೊತ್ತು ಮೌನವಾಗಿದ್ದ ಬಳಿಕ, ನಿಧಾನವಾಗಿ ಅವರು ಹೀಗೆಂದರು: "ಇಲ್ಲ, ನಿನ್ನ ಗಮನವನ್ನು ಬೇರೆಡೆ ಸೆಳೆಯುವ ಇಚ್ಛೆ ನನಗಿಲ್ಲ. ಒಟ್ಟಿನಲ್ಲಿ, ನಿನ್ನನ್ನು ಕಳೆದುಕೊಂಡಂತೆಯೇ ಆಯಿತು."

ಸವಿನಯ ಆಂದೋಳನಕ್ಕೆ ಹೊಸ ರೂಪವನ್ನು ಕೊಡುವ ಪರಿಕಲ್ಪನೆಯನ್ನು ತುಂಬಿಕೊಂಡೇ ದೇಶಬಂಧು ಅವರು ಜೈಲಿನಿಂದ ಹೊರಬಂದಿದ್ದರು.

---

1 ನೋಡಿ: ಅನುಬಂಧ.

2 ಜೂನ್ 1922.

'ಕೌನ್ಸಿಲ್ಸ್'ಗಳಲ್ಲಿ ಕಾಂಗ್ರೆಸ್ಸಿಗರು ಪ್ರವೇಶಿಸಬೇಕೆಂಬ ಸೂಚನೆಯನ್ನು ಅವರು ಮುಂದಿರಿಸಿದರು. ಅಸಹಕಾರದ ಗಾಳಿ ಬೀಸುತ್ತಿದ್ದ ಆ ಅವಧಿಯಲ್ಲಿ ಈ ಸೂಚನೆ ಎಲ್ಲರನ್ನೂ ಆಶ್ಚರ್ಯಗೊಳಿಸುವಂಥದಾಗಿತ್ತು. ಆದರೆ, ಶರತ್‌ಚಂದ್ರರು ದೇಶಬಂಧು ಅವರ ಬೆಂಬಲಿಗರಾಗಿಯೇ ಉಳಿದರು. ಅವರು ಪರಿಷತ್ತುಗಳನ್ನು ನಾಶ ಮಾಡಿಬಿಡಬಯಸಿದ್ದರು-ಹೊರಗಿನಿಂದಲ್ಲ, ಅದರ ಒಳಗೆ ಪ್ರವೇಶಿಸಿ. ಅವರು ಹೀಗೆಂದು ಹೇಳಿದರು: "ಬದಲಾಗಿರುವ ಈ ಪರಿಷತ್ತುಗಳು ನೌಕರಶಾಹಿಯ ಮುಖದ ಮೇಲಿನ ಪರದೆಗಳು. ಇವನ್ನು ಕಿತ್ತೆಸೆಯುವುದು ನಮ್ಮ ಕರ್ತವ್ಯ. ಈ ಪರಿಷತ್ತುಗಳನ್ನು ನಾಶಮಾಡಿಬಿಡುವುದೇ ನಮ್ಮ ಅತ್ಯಂತ ಪರಿಣಾಮಕಾರಿ ಬಹಿಷ್ಕಾರ ಕಾರ್ಯಕ್ರಮವಾಗುತ್ತದೆ. ಪರಿಷತ್ತಿನಲ್ಲಿ ನಮಗೆ ಬಹುಮತ ದೊರೆತಾಗ ಮಾತ್ರವೇ ಹಾಗೆ ಮಾಡುವುದು ಸಾಧ್ಯವಾಗುತ್ತದೆ. ನಾವು ತಥ್ಯಗಳ ಆಧಾರದ ಮೇಲೆ ಮುನ್ನಡೆದಿದ್ದೇವೆಯೇ ಹೊರತು ಕಲ್ಪನೆಯ ಬೆನ್ನೇರಿಯಲ್ಲ ಎಂಬುದು ಚುನಾವಣೆಗಳಲ್ಲಿ ಸ್ಪರ್ಧಿಸಿದಾಗ ಹೊರಬರುವ ಫಲಿತಾಂಶಗಳಿಂದ ಸ್ಪಷ್ಟವಾಗುತ್ತದೆ. ನಮಗೆ ಬಹುಮತ ದೊರೆಯುತ್ತದೆಂದು ನನಗೆ ಪೂರ್ಣ ವಿಶ್ವಾಸವಿದೆ."

ಬಂಗಾಳದಲ್ಲಿ ಈ ಸೂಚನೆಗಳಿಗೆ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ಇದರ ಪರಿಣಾಮವಾಗಿ ಶರತ್‌ಚಂದ್ರರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಡಬೇಕಾಗಿ ಬಂದಿತು.[1] ಕಾಂಗ್ರೆಸ್ ಪಕ್ಷ ಇಬ್ಭಾಗವಾಯಿತು. ಪರಿವರ್ತನವಾದಿಗಳು ಮತ್ತು ಯಥಾಸ್ಥಿತಿವಾದಿಗಳು ಎಂಬ ಎರಡುಬಣಗಳೇ ಏರ್ಪಟ್ಟುವು. ಸ್ವತಃ ದೇಶಬಂಧುಗಳೇ ಅಧ್ಯಕ್ಷರಾಗಿದ್ದ ಗಯಾ ಅಧಿವೇಶನದಲ್ಲಿ[2] ಈ ಪ್ರಶ್ನೆ ತುಂಬ ಉಗ್ರರೂಪದಲ್ಲಿ ಮುಂದೆ ಬಂದಿತು. ಆಗ ಶರತ್‌ಚಂದ್ರರು ಅಖಿಲ ಭಾರತೀಯ ಕಾಂಗ್ರೆಸ್ ಕಮಿಟಿಯ ಸದಸ್ಯರಾಗಿದ್ದರು. ಅಸ್ವಸ್ಥರಾದುದರಿಂದ ಅವರು ಮಧ್ಯದಲ್ಲಿಯೇ ಕಲ್ಕತ್ತೆಗೆ ಹಿಂದಿರುಗಿ ಬಂದಿದ್ದರು. ಆದರೆ, ಕೌನ್ಸಿಲ್ - ಪ್ರವೇಶದ ಕಾರ್ಯಕ್ರಮವನ್ನು ಅವರು ಪ್ರಬಲವಾಗಿ ಸಮರ್ಥಿಸಿದ್ದರು. "ಅಸಹಕಾರ ಚಳವಳಿಯನ್ನು ಇದ್ದಕ್ಕಿದ್ದಂತೆ ನಿಲ್ಲಿಸಿಬಿಟ್ಟಿದ್ದರಿಂದ ಕವಿದುಕೊಂಡಿರುವ ಘೋರ ನಿರಾಶೆಯ ವಾತಾವರಣದಿಂದ ಮುಕ್ತರಾಗಲು ಇರುವ ಏಕೈಕ ಉಪಾಯ ಇದು" ಎಂದು ಅವರು ಹೇಳಿದ್ದರು.

ಸುತ್ತಲೂ ಆವರಿಸಿಕೊಂಡಿದ್ದ ಪ್ರತಿಭಟನೆಯ, ಅಪ್ರಿಯಕರ ಟೀಕೆ ಟಿಪ್ಪಣಿಗಳ ಮತ್ತು ಅಶಿಷ್ಟ ಅಥವಾ ಅಸಭ್ಯ ಆಕ್ರಮಣಗಳ ಮಧ್ಯೆಯೂ ಅವರು ಸತತವಾಗಿ ದೇಶಬಂಧು ಅವರಿಗೆ ಬೆಂಬಲವಾಗಿ ನಿಂತರು. ತಾವು ಕಂಡುಕೊಂಡಿರುವ ಸತ್ಯವನ್ನು ಸತತವಾಗಿ ಪ್ರಚಾರ ಮಾಡಿಕೊಂಡು ಹೋಗಬೇಕೆಂದು ಅವರು ದೇಶಬಂಧು ಅವರನ್ನು ಹುರಿದುಂಬಿಸುತ್ತಿದ್ದರು.

ದೇಶಬಂಧು ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸ್ಪಷ್ಟ ಹಾಗೂ ನಿಸ್ಸಂಕೋಚಭಾವದಿಂದ 'ಪರಿಷತ್ತುಗಳಲ್ಲಿ ಪ್ರವೇಶ' ಮಾಡಬೇಕೆಂಬ ತಮ್ಮ ಸೂಚನೆಯನ್ನು ಮಂಡಿಸಿದರು. ಆದರೆ, ಅದು ಅಂಗೀಕಾರವನ್ನು ಪಡೆಯಲಾರದೆ

1 ಜುಲೈ 14, 1922
2 ಡಿಸೆಂಬರ್ 26, 1922

ಹೋಯಿತು. ಆಗ ಅವರು ಕೂಡಲೇ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಪಂಡಿತ ಮೋತೀಲಾಲ ನೆಹರೂ ಅವರ ಸಹಕಾರದೊಂದಿಗೆ ಸ್ವರಾಜ್ಯ ಪಕ್ಷಕ್ಕೆ ಅಡಿಗಲ್ಲನ್ನು ಹಾಕಿದರು.[1] ಮುಂದೆ ಎಂದಾದರೂ ಒಂದು ದಿನ ಈ ದೇಶ ನನ್ನ ಕಾರ್ಯಕ್ರಮವನ್ನು ಖಂಡಿತವಾಗಿಯೂ ಅಂಗೀಕರಿಸುತ್ತದೆ ಎಂದು ಅವರು ಘೋಷಿಸಿದರು.

ಬಿರುಗಾಳಿಯ ವೇಗದಿಂದ ಅವರು ಇಡೀ ದೇಶವನ್ನು ಸುತ್ತಿದರು. ಈ ಸಂಚಾರದಲ್ಲಿ ನಡೆಸಿದ ಪ್ರಚಾರದ ಮಟ್ಟದ ಬಗ್ಗೆ ಭಿನ್ನಾಭಿಪ್ರಾಯಕ್ಕೆ ಎಡೆ ಇರಬಹುದು. ರಾಜಕೀಯ ಆವೇಶದಲ್ಲಿ ಮಾನವತೆಗೆ ಅಪೋಹ ಉಂಟಾಗುತ್ತದೆ ಎಂಬುದೂ ನಿಶ್ಚಿತ. ಬಹುಬೇಗ ಒಂದಲ್ಲ ಒಂದು ರೂಪದಲ್ಲಿ ದೇಶವೇ ಅವರಕಾರ್ಯಕ್ರಮವನ್ನು ಅಂಗೀಕರಿಸಿತು ಎಂಬುದರಲ್ಲಿಯೂ ಅನುಮಾನವಿಲ್ಲ. ಕೆಲವು ದಿನಗಳ ಬಳಿಕ ಮುಂಬಯಿಯಲ್ಲಿ ಕಾರ್ಯಕಾರಿ ಸಮಿತಿಯ ಹಾಗೂ ಸರ್ವೋಚ್ಚ ಸಮಿತಿಯ ಸಭೆಗಳು ನಡೆದುವು.[2] ಸರ್ವಾನುಮತದಿಂದ ದೇಶಬಂಧು ಅವರನ್ನು ಸರ್ವೋಚ್ಚ ಸಮಿತಿಯ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಎಲ್ಲ ಕಾಂಗ್ರೆಸ್ಸಿಗರೂ ಪರಸ್ಪರ ಭಿನ್ನಾಭಿಪ್ರಾಯವನ್ನು ಮರೆತು, ಒಂದೇ ಮುಂಚೂಣೆಯನ್ನು ಏರ್ಪಡಿಸಿಕೊಳ್ಳಬೇಕು ಎಂಬ ಸೂಚನೆ ಆ ಸರ್ವೋಚ್ಚ ಸಮಿತಿಯಲ್ಲಿ ಅಂಗೀಕೃತವಾಯಿತು. ಪುರುಷೋತ್ತಮ ದಾಸ್ ಟಂಡನ್ ಅವರು ಮಂಡಿಸಿದ ಈ ಸೂಚನೆಯನ್ನು ಜವಾಹರಲಾಲ ನೆಹರೂ ಅವರು ಸಮರ್ಥಿಸಿದ್ದರು. ಗಯಾದಲ್ಲಿ ಅಂಗೀಕರಿಸಿದ್ದ ಗೊತ್ತುವಳಿಯ ಬಗ್ಗೆ ಇನ್ನು ಮುಂದೆ ಯಾವುದೇ ಬಗೆಯ ಪ್ರಚಾರವನ್ನು ಕೈಗೊಳ್ಳಕೂಡದೆಂದು ಕಾಂಗ್ರೆಸ್ ಪಕ್ಷ ನಿರ್ದೇಶನವನ್ನು ಕೊಟ್ಟಿದೆ ಎಂದೂ ಈ ಸೂಚನೆಯಲ್ಲಿ ಹೇಳಲಾಗಿತ್ತು.

ಕಾಂಗ್ರೆಸ್ ಪಕ್ಷದ ಒಳಗೆ ವಿಷಮಯ ವಾತಾವರಣವನ್ನು ಸೃಷ್ಟಿಸುತ್ತಿದ್ದಂಥ ಆ ಅಪ್ರಿಯ ಸಂಘರ್ಷಕ್ಕೆ ಮಂಗಳವನ್ನು ಹೇಳುವ ಹೊಸ ನಾಂದಿಯ ಪ್ರಯತ್ನ ಇದಾಗಿತ್ತು. ದೇಶಬಂಧು ಅವರಿಗೆ ಭಾರಿ ವಿರೋಧ ಕಂಡುಬಂದಿದ್ದುದು ಸ್ವತಃ ಅವರ ಪ್ರಾಂತ್ಯದಲ್ಲಿಯೇ. ಮುಂಬಯಿಯಲ್ಲಿ ಸರ್ವೋಚ್ಚ ಸಮಿತಿಯ ಸಭೆ ನಡೆಯುವುದಕ್ಕೆ ಎರಡು ವಾರಗಳ ಮೊದಲು ಬಾರೀಸಾಲ್ ನಗರದಲ್ಲಿ ಬಂಗಾಳದ ಪ್ರಾದೇಶಿಕ ಸಮಿತಿಯ ಸಭೆಗಳು ನಡೆದಿದ್ದುವು.[3] ಶಚಿನಂದನ್ ಅವರು ಈ ಬಗ್ಗೆ ಹೀಗೆ ಬರೆದಿದ್ದಾರೆ: "ದೇಶಬಂಧು ಅವರು ತಮ್ಮ ತಂಡದ ಬಲದೊಡನೆ ಅಲ್ಲಿಗೆ ಬಂದಿದ್ದರು. ಶರತ್ರೂ ಅವರ ಜೊತೆಗಿದ್ದರು. ಅವರೆಲ್ಲರೂ ಸಾಮಾನ್ಯ ಸದಸ್ಯರೊಂದಿಗೆ ಕುಳಿತಿದ್ದರು. ವೇದಿಕೆಯ ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಯಾರೂ ದೇಶಬಂಧು ಅವರನ್ನು ಒತ್ತಾಯಿಸಲಿಲ್ಲ. ಶ್ಯಾಮಸುಂದರ ಚಕ್ರವರ್ತಿಗಳು ಸಭಾಧ್ಯಕ್ಷರಾಗಿದ್ದರು. ಸಭಾಧ್ಯಕ್ಷರ ಒಂದು ತೀರ್ಮಾನದ ವಿಷಯದಲ್ಲಿ ಮಾತನಾಡಲು ದೇಶಬಂಧು ಅವರು ಎದ್ದು ನಿಂತರು. ಶ್ಯಾಮಬಾಬೂ ಅವರು

1 ಜನವರಿ 1, 1923.
2 ಮೇ 25-27, 1923
3 ಮೇ 13, 1923

ಇನ್ನೊಂದು ಕಡೆಗೆ ಮುಖ ತಿರುಗಿಸಿಕೊಂಡು ಹೇಳಿದರು: "ನಾನು 'ಆ ಮನುಷ್ಯ'ನ ಮಾತನ್ನು ಕೇಳುವುದಿಲ್ಲ."

ಅಭಿಮಾನಭಂಗದಿಂದಾಗಿ ದೇಶಬಂಧು ಅವರ ಕಣ್ಣುಗಳು ಕೋಪದಿಂದ ಕೆಂಪಾದುವು. ಅವರು ಹೀಗೆಂದರು: "ಶ್ಯಾಮ ಬಾಬೂ, ನಾನು ಬಹುದಿನಗಳಿಂದ ಬ್ಯಾರಿಸ್ಟರ್‌ಗಿರಿ ಮಾಡುತ್ತ ಬಂದಿದ್ದೇನೆ. 'ನಿಮ್ಮ ಮಾತನ್ನು ಕೇಳುವುದಿಲ್ಲ'ವೆಂದು ನನಗೆ ಹೇಳುವ ಧೈರ್ಯ ಹೈಕೋರ್ಟಿನ ಯಾವ ಜಡ್ಜಿಗೂ ಇರಲಿಲ್ಲ. ಇಂದು ನೀವು ಈ ಮಾತನ್ನು ಹೇಳುತ್ತಿದ್ದೀರಾ ?"

ಶರತ್‌ಚಂದ್ರರೂ ಎದ್ದು ನಿಂತರು. ಅವರು ಹೇಳತೊಡಗಿದರು: "ಶ್ಯಾಮಬಾಬೂ, ನೀವು ದೇಶಬಂಧು ಅವರನ್ನು 'ಆ ಮನುಷ್ಯ' ಎಂದು ಕರೆದಿರಾ ? 'ಮಹಾನುಭಾವ'ರು ಎಂಬ ಶಬ್ದವನ್ನು ಬಳಸಲೂ ನಿಮಗೆ ಆಗಲಿಲ್ಲವೆ ?"

ಈ ಅಪಮಾನವನ್ನು ಸಹಿಸಿಕೊಳ್ಳುವುದು ಶರತ್‌ಚಂದ್ರರಿಗೆ ಸಾಧ್ಯವಿರಲಿಲ್ಲ. ರಾಜ್ಯದಲ್ಲಿರುವ ವ್ಯಕ್ತಿ ಎಂಥ ದಪ್ಪ ಚರ್ಮವನ್ನು ಹೊಂದಿರಬೇಕೋ ಅಂಥ ದಪ್ಪ ಚರ್ಮದ ವ್ಯಕ್ತಿ ಅವರಾಗಿರಲಿಲ್ಲ. ಕೋಪದಿಂದ ಕುದಿಯುತ್ತ ಅವರು ಸಭಾತ್ಯಾಗ ಮಾಡಿದರು. ಎಲ್ಲರೂ ಮನೆಗೆ ಹಿಂದಿರುಗಿ ಬಂದಾಗ, ಆವೇಶದಿಂದ ಅವರು ಅಂಗಳದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ನಡೆದಾಡುತ್ತಿರುವುದನ್ನು ಕಂಡರು. ಆಲೀಪುರದ ಬಾಂಬ್ ಸ್ಫೋಟದ ಮೊಕದ್ದಮೆಯಲ್ಲಿ ವಿಖ್ಯಾತರಾಗಿ ಪರಿಣಮಿಸಿದ್ದ ಆಪಾದಿತರಾಗಿದ್ದ ಉಪೇಂದ್ರನಾಥ ಗಂಗೋಪಾಧ್ಯಾಯರ ಬಳಿಗೆ ಬಂದು ಅವರು ಹೀಗೆ ಹೇಳಿದರು: "ಉಪೇನ್, ನೀನಂತೂ ಬಾಂಬ್-ತಂಡದ ನಾಯಕನಾದ್ದೆ. ನನಗಾಗಿ ಒಂದು ಬಾಂಬ್ ತಯಾರಿಸಿಕೊಡಬಲ್ಲೆಯಾ ?"

ಉಪೇಂದ್ರ ದಾ ಕೇಳಿದರು: "ಬಾಂಬೆ! ಬಾಂಬ್ ತೆಗೆದುಕೊಂಡು ನೀವೇನು ಮಾಡುವಿರಿ ?"

"ಶ್ಯಾಮೂ ಚಕೋತಿ[1]ಯ ತಲೆಯ ಮೇಲೆ ಎಸೆದು ಅವನನ್ನು ಕೊಂದು ಹಾಕಿಬಿಡುತ್ತೇನೆ.' ನಾನು ನಿನ್ನ ಮುಖ ನೋಡಲು ಇಚ್ಛಿಸುವುದಿಲ್ಲ." ಎಂದು ಅವನು ನನಗೆ ಹೇಳಿದ್ದಾನೆ. ಅಯ್ಯೋ ನಮ್ಮಪ್ಪ ಅವನ ಬಾರೇಂದ್ರೋ ಬ್ರಾಹ್ಮಣ' ಬ್ರಾಹ್ಮಣರಲ್ಲಿ ಬಾರೇಂದ್ರೋಗಳು ಹಾಗೂ ರೋಗಗಳಲ್ಲಿ....."

ಹೇಳಬಾರದ ಇನ್ನೂ ಅನೇಕ ಮಾತುಗಳನ್ನು ಅವರು ಹೇಳಿಬಿಟ್ಟರು. ಅವರು ಆಡಿದ ಮಾತುಗಳು ಇತರ ಎಲ್ಲರಿಗೂ ನಗೆ ಬರಿಸುವಂಥವಾಗಿದ್ದುವು. ಹೀಗಾಗಿ, ಎಲ್ಲರ ಸಮ್ಮಿಲಿತ ಅಟ್ಟಹಾಸದಿಂದ ಆ ಕೋಣೆ ಮೊಳಗಿತು. ಶರತ್‌ಚಂದ್ರರು ಮತ್ತಷ್ಟು ಕೋಪಗೊಂಡು ಹೇಳಿದರು: "ನಿಮಗೆ ನಗು ಬರುತ್ತಿದೆಯಲ್ಲವೆ! ನನ್ನನ್ನು ಹೀಗೆ ಅಪಮಾನಿಸಿದ್ದಾನೆ. ಆದರೂ ನಿಮಗೆ ನಗು ಬರುತ್ತದೆಯಲ್ಲವೆ! ಯಾರಾದರೂ ಸಭ್ಯ ವ್ಯಕ್ತಿಯನ್ನು ರಾಜಕೀಯದಲ್ಲಿ ಹೀಗೆ ಅಪಮಾನಿಸುತ್ತಾರೆಯೆ! ನಾನಿನ್ನು ರಾಜಕೀಯದಲ್ಲಿ ಇರಲಾರೆ. ಸಾಕಷ್ಟು ನೋಡಿದ್ದಾಯಿತು. ಇನ್ನು ನನ್ನಿಂದ ಸಾಧ್ಯವಿಲ್ಲ."

ಪ್ರೀತಿಯಿಂದ ಅವರ ಒಂದು ಕೈ ಹಿಡಿದುಕೊಂಡು ದೇಶಬಂಧು ಅವರು

---

1 'ಚಕ್ರವರ್ತಿ' ಎಂಬುದರ ಆಡುಮಾತಿನ ರೂಪ. - ಅನುವಾದಕನ ಅಡಿಟಿಪ್ಪಣಿ.

ಹೇಳಿದರು: "ಸರಿ, ನೀವು ಹಾಗೆಯೇ ಮಾಡಿ. ನೀವು ಈ ರಾಜಕೀಯವನ್ನು ಬಿಟ್ಟುಬಿಡಿ. ನೀವು ಸಾಹಿತಿಗಳು, ಶಿಲ್ಪಿಗಳು, ನಿಮ್ಮ ಅನುಭೂತಿ ತುಂಬ ಸೂಕ್ಷ್ಮವಾದುದು. ಇಷ್ಟೊಂದು ದುಃಖವನ್ನೂ, ಇಷ್ಟೊಂದು ಅಪಮಾನವನ್ನು ನೀವು ಸಹಿಸಲಾರಿರಿ. ನೀವು ಕಾಂಗ್ರೆಸ್ ಪಕ್ಷವನ್ನೂ, ರಾಜಕೀಯವನ್ನೂ ಈಗಿಂದೀಗಲೇ ಬಿಟ್ಟುಬಿಡಿ."

ಶರತ್‌ಚಂದ್ರರು ಒಂದು ಕುರ್ಚಿಯ ಮೇಲೆ ಹೋಗಿ ಕುಳಿತುಕೊಂಡರು. ಹುಕ್ಕಾ ಸಿದ್ಧವಾಗಿತ್ತು. ಒಂದೆರಡು ದಮ್ಮೆಳೆದು ಕೇಳಿದರು: "ಆದರೆ, ಹೇಗೆ ಬಿಡಲಿ?"

ಒಮ್ಮೆಗೇ ಅವರ ಕಂಠ ದುಃಖದಿಂದ ತುಂಬಿ ಬಂತು. ಕಣ್ಣುಗಳು ತುಂಬಿ ಬಂದುವು. ಹೃದಯಾಂತರಾಳದಿಂದ ಒಂದು ದೀರ್ಘ ನಿಃಶ್ವಾಸ ಹೊರಬಂತು. "ಎಲ್ಲ ಕಡೆಗಳಿಂದಲೂ ಕಷ್ಟಗಳು ಬಂದು ಕವಿದುಕೊಳ್ಳುತ್ತಿರುವ ಈ ನಿಮ್ಮ ಅಸಹಾಯಕ ಸ್ಥಿತಿಯಲ್ಲಿ, ನಿಮ್ಮನ್ನು ಆ ಕಷ್ಟಗಳ ನಡುವೆ ಬಿಟ್ಟುಬಿಟ್ಟು, ಓಡಿ ಹೋಗಿ ಹೇಗೆ ತಾನೆ ನನ್ನ ಆತ್ಮರಕ್ಷಣೆ ಮಾಡಿಕೊಳ್ಳಲಿ? ನನ್ನ ವ್ಯಥೆ ತುಂಬ ಸಾಮಾನ್ಯವಾದುದು. ಆದರೆ, ನೀವಂತೂ ದುಃಖಗಳ ದಾವಾನಲದ ನಡುವೆ ಸಿಕ್ಕಿಕೊಂಡಿದ್ದೀರಿ. ಇಲ್ಲ. ನಿಮ್ಮನ್ನು ಬಿಟ್ಟು ನಾನು ಓಡಿಹೋಗಲಾರೆ."

ಇಷ್ಟು ಹೇಳಿ, ಅವರು ಜೋರಾಗಿ ಹುಕ್ಕಾದ ದಮ್ಮೆಳೆಯ ತೊಡಗಿದರು.

ಈ ಸಂದರ್ಭದಲ್ಲಿಯೇ ಬಂಗಾಲಿ ಸಾಹಿತ್ಯ ಪರಿಷತ್ತಿನ ಸ್ಥಳೀಯ ಶಾಖೆ ಅವರನ್ನು ಸನ್ಮಾನಿಸಿತು. ಆ ಸಭೆಯಲ್ಲಿ ದೇಶಬಂಧು ಅವರು, ಸುಭಾಷ್ ಚಂದ್ರ ಬೋಸ್ ಅವರು, ಕಿರಣ ಶಂಕರರಾಯ್ ಅವರು ಹಾಗೂ ಇತರ ಅನೇಕ ಪ್ರತಿಷ್ಠಿತರು ಪಾಲ್ಗೊಂಡಿದ್ದರು. ಅಭಿನಂದನೆಗೆ ಉತ್ತರ ಕೊಡುವಾಗಲೂ ದೇಶದ ವಿಚಾರವನ್ನು ಅವರು ಮರೆಯಲಿಲ್ಲ. ಅವರು ಹೀಗೆಂದರು: "ಯಾವುದನ್ನು ನಾವು ಮಹಾ ಸಾಹಿತ್ಯವೆಂದು ಕರೆಯುತ್ತೇವೆಯೋ ಅದು ಇಂದು ನಮ್ಮ ದೇಶದಲ್ಲಿ ಸೃಷ್ಟಿಯಾಗಲಾರದು. ಏಕೆಂದರೆ, ರಾಜಕೀಯವಾಗಿ, ಸಾಮಾಜಿಕವಾಗಿ ಯಾವ ದೃಷ್ಟಿಯಿಂದಲೂ ನಾವು ಸ್ವತಂತ್ರರಾಗಿಲ್ಲ. ಆ ಬಿಡುಗಡೆ, ಆ ಸ್ವಾತಂತ್ರ್ಯ ದೊರೆತ ದಿವಸವೇ ಆನಂದದ ಅಂತರಾಳದಿಂದ ಆ ಸಾಹಿತ್ಯದ ಸೃಷ್ಟಿಯಾಗುತ್ತದೆ."

ನಾಡಿನ ಬಿಡುಗಡೆಯ ಬಗೆಗಿನ ಅವರ ಈ ಅನುರಕ್ತಿ ನೈಜವಾದುದಾಗಿತ್ತು. ಆದ್ದರಿಂದಲೇ, 'ಕಾಯೇನ ವಾಚಾ ಮನಸಾ' ಈ ಹೋರಾಟದಲ್ಲಿ ಸಹಕರಿಸುವ ಸಲುವಾಗಿ ಅವರು ದೇಶಬಂಧು ಅವರ ಅನುಯಾಯಿಯಾಗಿದ್ದರು.

ಇಷ್ಟೊಂದು ವಿಷಮಯವಾದ ವಾತಾವರಣವಿದ್ದರೂ, ಇಷ್ಟೊಂದು ತಿಕ್ಕಾಟವಿದ್ದರೂ ದೇಶಬಂಧು ಅವರು ಮುಂಬಯಿಯಲ್ಲಿ ಸಮಿತಿಯ ಸದಸ್ಯರು ತಮ್ಮ ದೃಷ್ಟಿಕೋನವನ್ನು ಒಪ್ಪುವಂತೆ ಮಾಡಿದ್ದರು. ಇದಾದ ಬಳಿಕ ಮೌಲಾನಾ ಅಬುಲ್ ಕಲಾಮ್ ಆಜಾದ್ ಅವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸಿನ ಒಂದು ವಿಶಿಷ್ಟ ಹಾಗೂ ಹಲವು ದೃಷ್ಟಿಗಳಿಂದ ಅತ್ಯಂತ ಮಹತ್ವಪೂರ್ಣವೆನ್ನಬಹುದಾದ ಅಧಿವೇಶನ ದೆಹಲಿಯಲ್ಲಿ ನಡೆಯಿತು.[1] ಇದರಲ್ಲಿ ಪಾಲ್ಗೊಳ್ಳುವ ಸಲುವಾಗಿ ದಿಲೀಪ್‌ಕುಮಾರ್ ರಾಯ್ ಮತ್ತು ಸುಭಾಷ್ ಚಂದ್ರಬೋಸ್ ಅವರೊಂದಿಗೆ ಶರತ್‌ಚಂದ್ರರೂ ದೆಹಲಿಗೆ

---

1 ಸಪ್ಟೆಂಬರ್ 15, 1923

ಬಂದರು. ಕಾಂಗ್ರೆಸ್ಸಿನ ಎರಡು ಬಣಗಳ ನಡುವೆ ಈ ಅಧಿವೇಶನದಲ್ಲಿ ಅಂತಿಮವಾಗಿ ಒಪ್ಪಂದವೊಂದು ಏರ್ಪಟ್ಟಿತು. ಮುಂದಿನ ಚುನಾವಣೆಗಳಿಗೆ ನಿಲ್ಲುವ ಹಾಗೂ ತಂತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಹಕ್ಕನ್ನು ಬಳಸುವ ಸ್ವಾತಂತ್ರವನ್ನು ಎಲ್ಲರಿಗೂ ನೀಡಲಾಯಿತು. ಪರಿಷತ್ತುಗಳನ್ನು ಪ್ರವೇಶಿಸುವ ಬಗೆಗೆ ನಡೆಯುತ್ತಿದ್ದ ಎಲ್ಲ ವಿರುದ್ಧ ಪ್ರಚಾರವನ್ನು ನಿಲ್ಲಿಸಲಾಯಿತು. ವಿಧಾನ ಮಂಡಲವನ್ನು ಪ್ರವೇಶಿಸಿ, ಎಲ್ಲ ಸುಧಾರಣೆಗಳನ್ನೂ ನಿರರ್ಥಕವೆಂದು ಸಾಧಿಸಿತೋರಿಸುವುದು ದೇಶಬಂಧು ಅವರ ಇಚ್ಛೆಯಾಗಿತ್ತು. ಅವರು ಹೀಗೆಂದರು: "ನಮ್ಮ ರಕ್ತವನ್ನು ಹೀರುತ್ತಿರುವ ಆ ಸುಧಾರಣೆಗಳನ್ನು ನಾಶಮಾಡುವುದಕ್ಕಾಗಿ ನಾನು ಅಲ್ಲಿಗೆ ಹೋಗುತ್ತೇನೆ, ಇಲ್ಲವಾದರೆ ಅಲ್ಲಿಗೆ ಸುತರಾಂ ಹೋಗುವುದೇ ಇಲ್ಲ, ಇದೇ ನನ್ನ ನಿಲುವು. ಈ ಒಪ್ಪಂದದ ಪ್ರಸ್ತಾವದಲ್ಲಿ ಅಹಿಂಸಾತ್ಮಕ ಅಸಹಕಾರದ ಸಿದ್ಧಾಂತಗಳನ್ನು ಒತ್ತಿ ಹೇಳಿರುವುದು ನನಗೆ ತುಂಬ ಸಂತೋಷವನ್ನುಂಟುಮಾಡಿದೆ. ಪರಿಷತ್ತಿನಲ್ಲಿ ನಮಗೆ ಬಹುಮತ ದೊರೆಯದೆ ಹೋದರೆ, ನಾನು ಆ ಸ್ಥಾನಗಳನ್ನು ಖಾಲಿಯಾಗಿಯೇ ಇಡುತ್ತೇನೆ. ಅವು ಅಸಹಕಾರದ ಬೆಳಗುತ್ತಿರುವ ದೀಪಗಳಂತೆ ಕೆಲಸ ಮಾಡುತ್ತವೆ.

ಇದಾದ ತರುವಾಯ, ಬಹುಬೇಗ ಬಂಗಾಳದ ಪರಿಷತ್ತಿನ ಚುನಾವಣೆಗಳು ಬಂದುವು. "ನೀವು ಹಾವಡಾದಿಂದ ಚುನಾವಣೆಗೆ ನಿಂತುಕೊಳ್ಳಿ" ಎಂದು ದೇಶಬಂಧು ಅವರು ಶರತ್‌ಚಂದ್ರರಿಗೆ ಹೇಳಿದರು.

ಶರತ್‌ಚಂದ್ರರು ಜೋರಾಗಿ ನಕ್ಕು ಹೇಳಿದರು: "ನೀವು ಹಾಸ್ಯ ಮಾಡುತ್ತಿದ್ದೀರೇನೋ! ನಾನು ಪರಿಷತ್ತಿನ ಚುನಾವಣೆಗೆ ನಿಂತುಕೊಳ್ಳುವುದ ?"

"ಏಕೆ ನಿಂತುಕೊಳ್ಳಬಾರದು ?"

"ಇಲ್ಲ, ಇಲ್ಲ. ಅದರಿಂದೇನಾದೀತು ? ನಾನೊಬ್ಬ ಸಾಮಾನ್ಯ ಲೇಖಕ. ಚುನಾವಣೆಗೆ ನಿಲ್ಲಲು ನಾನು ಅರ್ಹನೆ ? ಜನ ಏನೆಂದಾರು ?"

ದೇಶಬಂಧು ಅವರು ಆಶ್ಚರ್ಯದಿಂದ ಕೇಳಿದರು: "ನೀವೇನು ಹೇಳುತ್ತಿದ್ದೀರಿ, ಶರತ್ ಬಾಬೂ ?"

ಶರತ್‌ಚಂದ್ರರು ಉತ್ತರಿಸಿದರು: "ಸರಿಯಾಗಿಯೇ ಹೇಳುತ್ತಿದ್ದೇನೆ. ದೇಶಕ್ಕಾಗಿ ನಾನು ಏನು ತಾನೆ ಮಾಡಿದ್ದೇನೆ ? ಜೈಲಿಗೆ ಹೋಗಲಿಲ್ಲ, ವಕೀಲಿ-ಬ್ಯಾರಿಸ್ಟರ್‌ಗಿರಿ ಬಿಡಲಿಲ್ಲ. ಯಾವುದೇ ಬಗೆಯ ದೇಶ-ಬಾಹಿರತ್ವವನ್ನು ಅನುಭವಿಸಲಿಲ್ಲ, ತ್ಯಾಗವನ್ನು ಮಾಡಿಲ್ಲ. ನಿಮಗೆ ನನ್ನ ಮೇಲೆ ಪ್ರೀತಿ-ವಿಶ್ವಾಸಗಳಿವೆ ಎಂಬುದು ನನ್ನ-ನಿಮ್ಮ ವೈಯಕ್ತಿಕ ವಿಚಾರ. ನೀವೂ ಸ್ವತಃ ಕವಿಗಳು, ಸಾಹಿತಿಗಳು. ಹೀಗಾಗಿ, ಸಾಹಿತಿಯ ರೂಪದಲ್ಲಿ ನೀವು ನನ್ನನ್ನು ಪ್ರೀತಿಸುತ್ತೀರಿ. ಸ್ನೇಹಸಂಬಂಧದ ದೃಷ್ಟಿಯಿಂದ ನಾನು ನಿಮಗೆ ಪ್ರಿಯವ್ಯಕ್ತಿಯಾಗಿರಬಹುದು. ಆದರೆ, ನಾಡಿನ ಜನತೆ ನನ್ನನ್ನು ಹೇಗೆ ಪ್ರಿಯವ್ಯಕ್ತಿ ಎಂದು ಪರಿಗಣಿಸಲು ಸಾಧ್ಯ ? ನಾನು ನನ್ನ ಸಾಮಾನ್ಯ ಸಾಹಿತ್ಯಿಕ ಸಾಧನೆಯನ್ನು ರಾಜಕೀಯದ ಬಂಡವಾಳವನ್ನಾಗಿ ಮಾಡಿಕೊಳ್ಳಲು ಇಷ್ಟ ಪಡುವುದಿಲ್ಲ. ಅದರಲ್ಲಿಯೂ ಇಂಗ್ಲಿಷ್‌ನಲ್ಲಿ ಭಾಷಣ ಮಾಡುವುದು ಮತ್ತು ಕೇಳುವುದು - ಇವೇ ಪರಿಷತ್ತಿನ ಕೆಲಸಗಳು. ಈ ಎರಡು ಕೆಲಸಗಳಲ್ಲಿಯೂ ನನಗೆ ಆಸಕ್ತಿಯಿಲ್ಲ. ದಯವಿಟ್ಟು ನನ್ನನ್ನು ಬಿಟ್ಟುಬಿಡಿ. ಜನತೆ ಮುಕ್ತ ಮನಸ್ಸಿನಿಂದ

ಅಂಗೀಕರಿಸಬಹುದಾಗಿರುವಂಥ ಬೇರೆ ಯಾರನ್ನಾದರೂ ನಿಲ್ಲಿಸಿ. ಈಗಲೇ ನಿಮ್ಮ ಕಷ್ಟಗಳಿಗೆ ಕೊನೆ ಮೊದಲಿಲ್ಲದಂತಾಗಿದೆ. ಸಲಹೆಗಾರರಾಗಿರುವಂಥವರ ಮೇಲೆ ನಿಮ್ಮ ಇಷ್ಟಾನಿಷ್ಟಗಳನ್ನು ಹೊರಿಸಿ, ನಿಮ್ಮ ಕಷ್ಟಗಳನ್ನು ಇನ್ನಷ್ಟು ಹೆಚ್ಚಿಸಿಕೊಳ್ಳಬೇಡಿ."

ಕಥಾಶಿಲ್ಪಿ ಶರತ್‌ಚಂದ್ರರು ಮಾತ್ರವೇ ಇಂಥ ಮಾತುಗಳನ್ನು ಹೇಳಬಹುದಾಗಿತ್ತು. ಆಗ ಅವರು ತಮ್ಮ ಖ್ಯಾತಿಯ ಶಿಖರವನ್ನು ತಲುಪಿದ್ದರು. ಜನರ ನಾಲಿಗೆಯ ಮೇಲೆ ಅವರ ಹೆಸರು ನಲಿಯುತ್ತಿತ್ತು. ಬಹುಶಃ ಅವರು ಸುಲಭವಾಗಿ ಪರಿಷತ್ತಿನ ಸದಸ್ಯರೂ, ಹಾವಡಾ ಪುರಸಭಾ ಸಮಿತಿಯ ಅಧ್ಯಕ್ಷರೂ ಆಗಬಹುದಿತ್ತು. ಆದರೆ, ಅವರ ಸ್ವಭಾವಕ್ಕೆ ಶಾಶ್ವತವಾಗಿ ಅಂಟಿಕೊಂಡಿದ್ದ ಆಲಸ್ಯ ಹಾಗೂ ಕಥಾಶಿಲ್ಪಿಯ ವೈರಾಗ್ಯಶೀಲ ಮನಸ್ಸು ಇಂಥದನ್ನೆಲ್ಲ ಮಾಡಲುಬಿಟ್ಟರೆ ತಾನೆ! ಆದ್ದರಿಂದಲೇ ಅವರು ತಮ್ಮ ಸಾಹಿತ್ಯ ಸಾಧನೆಯನ್ನು ರಾಜಕೀಯದ ಬಂಡವಾಳವನ್ನಾಗಿ ಮಾಡಿಕೊಳ್ಳಲು ಎಡೆಗೊಡಲಿಲ್ಲ. ಹಾಗೆ ಮಾಡಿದ್ದು ಉಚಿತವೂ ಆಗಿತ್ತು.

ಕಲ್ಕತ್ತಾ ನಗರಸಭೆಯ ಪುನರ್-ರಚನೆಯಾದ ಸಂದರ್ಭದಲ್ಲಿ ದೇಶಬಂಧು ಅವರು ಬಹುತೇಕ ಸ್ಥಾನಗಳನ್ನು ಅವಿರೋಧವಾಗಿಯೇ ಪಡೆದುಕೊಂಡರು. ಅವರು ಕಲ್ಕತ್ತೆಯ ಮೊದಲ ಮೇಯರು ಆದರು. ಆದರೆ, ಶರತ್‌ಚಂದ್ರರು ಮಾತ್ರ ಹಿಂದಿನಂತೆಯೇ ಹಿಂದೆಯೇ ಉಳಿದಿದ್ದರು. ದಾಸ್‌ಬಾಬೂ ಅವರು 'ಫಾರ್ವರ್ಡ್' ಎಂಬ ದಿನಪತ್ರಿಕೆಯನ್ನು ಪ್ರಾರಂಭಿಸಿದಾಗ[1] ಅದರ ಶೇರುಗಳನ್ನು ಮಾರಾಟ ಮಾಡುವುದರಲ್ಲಿ ಅವರಿಗೆ ಯಥೋಚಿತವಾದ ನೆರವು ನೀಡಿದರು. ಚಂದಾ ಸಂಗ್ರಹಿಸುವ ಕೆಲಸವಂತೂ ಅವರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ, ಗ್ರಾಮ ಸಂಘಟನೆಗಾಗಿ ಮೂರು ಲಕ್ಷ ರೂಪಾಯಿಗಳನ್ನು ಸಂಗ್ರಹಿಸುವ ಮನವಿಯನ್ನು ದೇಶಬಂಧು ಅವರು ಹೊರಡಿಸಿದಾಗ, ಶರತ್‌ಚಂದ್ರರು ಅವರ ಜೊತೆಯಲ್ಲಿ ಮನೆಮನೆಗೂ ಹೋಗಿ ಭಿಕ್ಷೆ ಬೇಡಿದರು.

ಒಂದು ದಿವಸ, ಆಗಲೇ ರಾತ್ರಿಯಾಗಿ ಬಿಟ್ಟಿತ್ತು. ಹೊರಗೆ ಮಳೆ ಸುರಿಯುತ್ತಿತ್ತು. ಆಗ ದೇಶಬಂಧು ದಾಸ್, ಸುಭಾಷ್ ಚಂದ್ರಬೋಸ್ ಮತ್ತು ಶರತ್‌ಚಂದ್ರರು ಸಿಯಾಲ್‌ದಹದ ಬಳಿಯ ಒಬ್ಬ ದೊಡ್ಡ ಮನುಷ್ಯನ ಮನೆಯ ದಿವಾನ್‌ಖಾನೆಯಲ್ಲಿ ಕುಳಿತಿದ್ದರು. ಆತನಿಂದ ಸ್ವಲ್ಪ ಹಣ ದೊರೆಯಬಹುದೆಂಬ ಎಣಿಕೆ ಅವರದಾಗಿತ್ತು. ಒಮ್ಮೆಗೇ ಶರತ್‌ಚಂದ್ರರು ಅಸಹನೆಯಿಂದ ಹೇಳಿದರು: "ಇದೇನು ನಿಮ್ಮೊಬ್ಬರ ಹೊಣೆ ಮಾತ್ರವೆ? ನಾಡಿನ ಜನರಿಗೆ ನೆರವಾಗುವ ವಿಷಯದಲ್ಲಿ ಇಷ್ಟೊಂದು ಅನಾಸಕ್ತರಾಗಿದ್ದರೆ, ಹಾಗೆಯೇ ಇರಲಿ ಬಿಡಿ."

ದೇಶಬಂಧು ಅವರ ಮನಸ್ಸಿಗೆ ನೋವಾಯಿತು. ಅವರೆಂದರು: "ಇದು ಸರಿಯಲ್ಲ ಶರತ್‌ಬಾಬೂ. ತಪ್ಪು ನಮ್ಮದೇ. ಕೆಲಸ ಮಾಡುವ ವಿಧಾನವೇ ನಮಗೆ ಗೊತ್ತಿಲ್ಲ. ನಮ್ಮ ಧ್ಯೇಯ ಏನೆಂಬುದನ್ನು ಮನದಟ್ಟಾಗುವಂತೆ ವಿವರಿಸಿ ಹೇಳಲು ನಾವು ಅಸಮರ್ಥರಾಗಿದ್ದೇವೆ. ಬಂಗಾಳಿಗಳು ಭಾವುಕರಾಗಿರಬಹುದು. ಆದರೆ ಅವರೆಂದೂ ಕೃಪಣರಾಗಿ ವರ್ತಿಸುವುದಿಲ್ಲ. ನಮ್ಮ ಧ್ಯೇಯ ಮನದಟ್ಟಾದಂದು ಅವರು ತಮ್ಮ

---

1 ಅಕ್ಟೋಬರ್ 23, 1923

ಸರ್ವಸ್ವವನ್ನೂ ತಂದು ನಮ್ಮ ಕೈಗೆ ಒಪ್ಪಿಸುತ್ತಾರೆ."

ಆಚಾರ್ಯ ಪ್ರಫುಲ್ಲಚಂದ್ರರಾಯ್ ಅವರೂ ಇಂಥ ಆಶಾವಾದಿಗಳೇ ಆಗಿದ್ದರು. ಅವರ ಮಾತುಗಳಲ್ಲಿಯೇ ಹೇಳಬೇಕೆಂದರೆ, "ಮಹಿಳಾ ಕಾರ್ಯಮಂದಿರದ ಇಬ್ಬರು ಕಾರ್ಯಕರ್ತೆಯರನ್ನೂ, ಡಾ. ಪ್ರಫುಲ್ಲಚಂದ್ರರಾಯ್ ಅವರನ್ನೂ ಕರೆದುಕೊಂಡು ಭಯಂಕರವಾದ ಬಿರುಗಾಳಿ ಮಳೆಯಲ್ಲಿ ಆಮತಾ ಜಿಲ್ಲೆಯ ಕಡೆಗೆ ಹೊರಟೆವು..... ನಾವೆಲ್ಲ ಹೋಗಿಬರುವುದಕ್ಕೆ ಐವತ್ತು ರೂಪಾಯಿ ಖರ್ಚು ಬಂತು.... ಪೊಲೀಸರಿಗೂ ಇಷ್ಟೇ ಖರ್ಚು ಬಂದಿರಬೇಕು.... ಪುರೋಗಾಮಿ ಸ್ವಭಾವದವರಿರುವ ಜಾಗ ಅದಾಗಿತ್ತು. ಅನೇಕ ಮಂದಿ ಶ್ರೀಮಂತರು ಅಲ್ಲಿ ವಾಸವಾಗಿದ್ದರು. ಇಷ್ಟಾಗಿಯೂ ಸ್ಥಳೀಯ ಮಗ್ಗ ಹಾಗೂ ಚರ್ಖಾ ವಿಕಾಸ ಯೋಜನೆಗಳಿಗಾಗಿ ಚಂದಾ ಸಂಗ್ರಹಿಸಲು ಹೊರಟಾಗ ನಮಗೆ ಭರವಸೆ ದೊರೆತದ್ದು ಮೂರು ರೂಪಾಯಿ ಐದು ಆಣೆಗಳಷ್ಟು. ಇದಾದ ಮೇಲೆ, ಅಲ್ಲಿಯ ಇಬ್ಬರು ವಕೀಲರು ವಿದೇಶಿ ವಸ್ತುಗಳನ್ನು ಕೊಳ್ಳುವುದಿಲ್ಲವೆಂಬುದನ್ನು ಬಹಳ ಶ್ರಮದಿಂದ ಆಚಾರ್ಯ ರಾಯ್ ಅವರು ಪತ್ತೆ ಹಚ್ಚಿದರು. ಅವರ ಮಾತಿಗೆ ಮಾರು ಹೋಗಿ ಮತ್ತೊಬ್ಬ ವ್ಯಕ್ತಿಯೂ ಮುಂದೆಂದೂ ತಾನು ವಿದೇಶಿ ಬಟ್ಟೆಗಳನ್ನು ಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿದ.... ಪ್ರಫುಲ್ಲಚಂದ್ರರು ಪ್ರಫುಲ್ಲವದನರಾಗಿ ಪಿಸುಮಾತಿನಲ್ಲಿ ನನ್ನ ಕಿವಿಯಲ್ಲಿ ಹೇಳಿದರು. "ಇದು ಪುರೋಗಾಮಿ ದೃಷ್ಟಿಯುಳ್ಳ ಜಿಲ್ಲೆ. ಸ್ವಲ್ಪ ಇದರತ್ತ ಕಣ್ಣಿಟ್ಟಿರಿ...."

ಅಂದೂ ಅವರು ಬಾಯಿ ಮುಚ್ಚಿಕೊಂಡಿದ್ದರು. ಬಂಗಾಳದ ಬಗ್ಗೆ ದೇಶಬಂಧು ಅವರ ಈ ಪ್ರೀತಿಯನ್ನು ಕಂಡು ಇಂದೂ ಅವರು ಬಾಯಿ ಮುಚ್ಚಿಕೊಂಡರು. ಅವರಿಬ್ಬರ ನಡುವಣ ಸಂಬಂಧದಲ್ಲಿ ಒಂದು ವೈಶಿಷ್ಟ್ಯವಿತ್ತು. ದೇಶಬಂಧು ಅವರ ಜೊತೆಗೆ ಅನೇಕರಿದ್ದರು. ಆದರೆ, ಅವರೆಲ್ಲ ಅವರ ಶಿಷ್ಯರೇ ಆಗಿದ್ದರು. ಅವರೆಲ್ಲ ಅವರ ವಿಷಯದಲ್ಲಿ ಶ್ರದ್ಧಾ-ಭಕ್ತಿಗಳನ್ನು ಇರಿಸಿಕೊಂಡಿದ್ದರು. ಗೆಳೆತನದ ಸೌಹಾರ್ದ ಅವರಿಗೆ ದೊರೆಯುತ್ತಿದ್ದುದು ಶರತ್‌ಚಂದ್ರರಿಂದ ಮಾತ್ರವೆ. ಪೆಟ್ಟಿನ ಮೇಲೆ ಪೆಟ್ಟು ಬಿದ್ದು ಅವರು ವ್ಯಾಕುಲರಾದಾಗ, ಅವರ ಚೇತನವನ್ನು ಅರಳಿಸಬಲ್ಲ ಶಕ್ತಿ ಇದ್ದುದು ಶರತ್‌ಚಂದ್ರರಿಗೆ ಮಾತ್ರ. ಹಣಕಾಸಿನ ನೆರವು ನೀಡಲೂ ಅವರು ಹಿಂದೆಮುಂದೆ ನೋಡಿದ್ದಿಲ್ಲ. ಭಾರಿ ಮೊತ್ತದ ಚೆಕ್ಕನ್ನು ಮಾತಿಲ್ಲದೆ ದೇಶಬಂಧು ಅವರ ಕೈಯಲ್ಲಿಟ್ಟುಬಿಡುತ್ತಿದ್ದರು.

ತಾರಕೇಶ್ವರದ ಅಂದಿನ ಮಹಂತರಾಗಿದ್ದ ಸತೀಶಗಿರಿ ಅವರ ವಿರುದ್ಧವಾಗಿ ಮಹಾವೀರ ದಳಕ್ಕೆ ಸೇರಿದ್ದ ಸ್ವಾಮಿ ಸಚ್ಚಿದಾನಂದ ಮತ್ತು ಸ್ವಾಮಿ ವಿಶ್ವಾನಂದ ಅವರು ಸತ್ಯಾಗ್ರಹ ಚಳವಳಿಯನ್ನು ನಡೆಸಿದ್ದರು.[1] ಇವರಿಬ್ಬರೂ ಸುಧಾರಣಾವಾದಿಗಳಾಗಿದ್ದರು. ಆದರೆ ಮಹಂತರ ಶಕ್ತಿಯೇನೂ ಕಡಿಮೆಯಾಗಿರಲಿಲ್ಲ. ಆದ್ದರಿಂದ ಆ ಇಬ್ಬರು ಸ್ವಾಮಿಗಳೂ ದೇಶಬಂಧುಗಳ ಬಳಿಗೆ ಓಡಿ ಬಂದರು. ಒಂದು ದಿವಸ ಈ ಇಬ್ಬರು ಸ್ವಾಮಿಗಳಲ್ಲಿಯೇ ಯಾವುದೋ ಅಂಶದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯ ಉಂಟಾಗಿ ಬಿಟ್ಟಿತು. ದೇಶಬಂಧು ಅವರು ಭಾರಿಭಾರಿ ಒಡಂಬಡಿಕೆಗಳನ್ನು

1. 1924ರಲ್ಲಿ

ಮೂಡಿಸಿದ್ದಂಥವರು. ಆದರೆ, ಆ ಇಬ್ಬರು ಸ್ವಾಮಿಗಳ ನಡುವೆ ಒಡಂಬಡಿಕೆಯನ್ನುಂಟು ಮಾಡುವುದು ಅವರಿಗೆ ಸಾಧ್ಯವೇ ಆಗಲಿಲ್ಲ. ಈ ವಿಚಾರದಲ್ಲಿ ಅವರು ಸೋತುಹೋಗಿದ್ದರು. ಅಂದು ಈ ಇಬ್ಬರು ಸ್ವಾಮಿಗಳೂ ಕೂಗಾಡುತ್ತ ತಮ್ಮ ತಮ್ಮ ನಿಲುವನ್ನು ಪ್ರತಿಪಾದಿಸುತ್ತಿದ್ದರು. ಅದೃಷ್ಟವಶಾತ್ ಅಂದು ಶರತ್‌ಚಂದ್ರರೂ ಅಲ್ಲಿಯೇ ಇದ್ದರು. ದೇಶಬಂಧು ಅವರ ವ್ಯಥೆಗೆ ಮೇರೆಯೇ ಇರಲಿಲ್ಲ. "ಶರತ್ ಬಾಬೂ, ಇವತ್ತು ಖಂಡಿತವಾಗಿಯೂ ನಾನು ಪ್ರಾಣ ಬಿಡಬೇಕಾಗುತ್ತದೆ" ಎಂದರು.

ಶರತ್‌ಚಂದ್ರರು ಹೇಳಿದರು: "ಅದೇನೋ ನಿಜವೆ."

ಈ ಮಾತನ್ನು ಕೇಳಿ ದೇಶಬಂಧು ಅವರು ಆಶ್ಚರ್ಯಚಕಿತರಾದರು. ಶರತ್‌ಚಂದ್ರರು ಹೇಳುತ್ತ ಹೋದರು: "ಇಬ್ಬರು ಹೆಂಡಂದಿರನ್ನಿಟ್ಟುಕೊಂಡು ಸಂಸಾರ ನಡೆಸುವ ವ್ಯಕ್ತಿಗೆ ಪ್ರಾಣ ಸಂಕಟ ಉಂಟಾಗುವುದು ಸಹಜವೇ. ನೀವಂತೂ ಇಬ್ಬರೂ ಸ್ವಾಮಿಗಳನ್ನಿಟ್ಟುಕೊಂಡು ಸಂಸಾರಮಾಡಲು ಹೊರಟಿದ್ದೀರಿ. ನೀವು ಪ್ರಾಣ ಬಿಡದಿದ್ದರೆ, ಇನ್ನು ಯಾರು ಪ್ರಾಣ ಬಿಡಲು ಸಾಧ್ಯ ?"

ಈ ಗಂಭೀರ ತರ್ಕವನ್ನು ಕೇಳಿ ಅಲ್ಲಿದ್ದ ಎಲ್ಲ ವ್ಯಕ್ತಿಗಳೂ ಕೇಕೆ ಹಾಕಿ ನಕ್ಕರು. ಇಬ್ಬರು ಸ್ವಾಮಿಗಳೂ ಮುಕ್ತಕಂಠದಿಂದ ಇದರಲ್ಲಿ ಪಾಲ್ಗೊಂಡರು. ಬಹುಶಃ ಈ ಕಾರಣದಿಂದಾಗಿಯೇ ಆಮೇಲೆ ಅವರಿಬ್ಬರ ನಡುವೆ ಒಡಂಬಡಿಕೆ ಆದಂತೆ ತೋರುತ್ತದೆ.

ಶರತ್‌ಚಂದ್ರರ ಹಾಸ್ಯಪ್ರವೃತ್ತಿ ನಿಜವಾಗಿಯೂ ಎದ್ದುಕಾಣುವಂಥದೇ ಆಗಿತ್ತು. ಅನೇಕ ವೇಳೆ ಅವರ ಈ ಹಾಸ್ಯಪ್ರವೃತ್ತಿ ಕ್ಲಿಷ್ಟ ಕಾಲದಲ್ಲಿ ಇಡೀ ವಾತಾವರಣವನ್ನೇ ಬದಲಾಯಿಸಿಬಿಡುತ್ತಿತ್ತು. ಆ ದಿನಗಳಲ್ಲಿ ಅನೇಕರು ದಪ್ಪ ಖಾದಿ ಬಟ್ಟೆಗಳನ್ನೇ ತೊಡುತ್ತಿದ್ದರು. ಅನಿಲಬರಣರಾಯ್ ಅವರು ಒರಟು ಖಾದಿಯ ಒಂದು ಮೇಲಂಗಿಯನ್ನು ಮಾತ್ರ ಹಾಕಿಕೊಳ್ಳುತ್ತಿದ್ದರು. ಆದರೆ ಇದಕ್ಕೆ ತದ್ವಿರುದ್ಧವಾಗಿ ಸುಭಾಷ್ ಚಂದ್ರಬೋಸರ ಅಣ್ಣಂದಿರಾಗಿದ್ದ ಶರತ್‌ಚಂದ್ರ ಬೋಸ್ ಅವರು ತುಂಬ ನವಿರಾದ ಖಾದಿ ಪಂಚೆ, ಅಂಗಿ ಮತ್ತು ಮೇಲು ವಸ್ತ್ರವನ್ನು ಬಳಸುತ್ತಿದ್ದರು. ಹಾಗೆ ನೋಡಿದರೆ ಅವರು ಭಾರಿ ಇಸಮೇ ಆಗಿದ್ದರು. ಪಂಚೆ ಹಿಮ್ಮಡಿಯವರೆಗೂ ಬಂದಿರುತ್ತಿತ್ತು. ಪಂಜಾಬಿ ಅಂಗಿಯೂ ಸಾಕಷ್ಟು ಉದ್ದವಾಗಿರುತ್ತಿತ್ತು. ಅದರ ಮೇಲೆ ಮೇಲುವಸ್ತ್ರವನ್ನು ಹೊದ್ದಿರುತ್ತಿದ್ದರು. ಒಂದು ದಿವಸ ಯಾರೋ ಹಾಸ್ಯಕ್ಕಾಗಿ ಕೇಳಿದರು: "ಶರತ್ ಬಾಬೂ, ನಿಮ್ಮ ಈ ನವಿರಾದ ಖಾದಿ ಎಲ್ಲಿ ತಯಾರಾಗುತ್ತದೆ ?"

ತಾವು ನವಿರಾದ ಖಾದಿ ಬಟ್ಟೆಗಳನ್ನು ಧರಿಸುವುದರ ಬಗ್ಗೆ ಈ ವ್ಯಕ್ತಿ ಆಕ್ಷೇಪವನ್ನೆತ್ತುತ್ತಿದ್ದಾನೆ ಎಂದು ಶರತ್ ಬಾಬೂ ಭಾವಿಸಿಕೊಂಡರು. ಕೋಪದಿಂದ ಹೇಳಿದರು: "ಭಾಗಲ್ಪುರದಲ್ಲಿ."

ಯಾವುದೋ ಅಪ್ರಿಯ ಘಟನೆ ನಡೆಯಲಿದೆ ಎಂಬ ಅನುಭವವಾಗತೊಡಗಿತ್ತು. ಅಷ್ಟರಲ್ಲಿ ಸಾಹಿತಿ ಶರತ್‌ಚಂದ್ರರೆಂದರು: "ಸ್ವಾಮಿ, ನಮ್ಮಲ್ಲಿ ಎಲ್ಲ ನಮೂನೆಗಳೂ ಇವೆ. ವೈವಿಧ್ಯ ಇರುವುದೇ ಒಳ್ಳೆಯದು. ಅನಿಲಬರಣ ರಾಯ್ ಅವರ ಖಾದಿ 'ಮದರ್ ಟಿಂಕ್ಚರ್' ಇದ್ದಂತಿದೆ. ಶರತ್‌ಚಂದ್ರ ಬೋಸ್ ಅವರದು ಅದರ 'ಟೂ

ಹ್ರಂಡ್ರೆಡ್ತ್ ಡೈಲೂಷನ್ ಅಷ್ಟೆ."

ಹೋಮಿಯೋಪಥಿ ಔಷಧಗಳ ಬಗೆಗಿನ ಸಿದ್ಧಾಂತದ ಈ ಉದಾಹರಣೆಯಿಂದ ಇಡೀ ವಾತಾವರಣವೇ ಬದಲಾಗಿ ಬಿಟ್ಟಿತು. ಎಲ್ಲರೂ ಕೇಕೆ ಹಾಕಿ ನಕ್ಕರು. ಶರತ್‌ಚಂದ್ರ ಬೋಸ್ ಅವರೂ ಆ ವ್ಯಂಗ್ಯದ ನೋವನ್ನು ಮರೆತು ನಗತೊಡಗಿದರು.

ಆದರೆ, ಆಗಾಗ್ಗೆ ಈ ವ್ಯಂಗ್ಯ ತುಂಬ ತೀಕ್ಷ್ಣವಾಗಿ ಬಿಡುತ್ತಿತ್ತು. ದೆಹಲಿ ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲಿ ಶರತ್‌ಚಂದ್ರರು ತಮ್ಮ ಇತರ ಕೆಲವು ಗೆಳೆಯರೊಡನೆ ಪ್ರೇಕ್ಷಣೀಯ ಸ್ಥಳಗಳನ್ನು ನೋಡಲು ಹೋಗಿದ್ದರು. ಒಂದು ದಿವಸ ಅವರೆಲ್ಲರೂ ಕುತುಬ್ ಮೀನಾರ್ ಬಳಿ ಇದ್ದ ಕರಾಳ ಜಲಕುಂಡವನ್ನು ನೋಡಲು ಹೋದರು. ಮೂರು ಮಹಡಿಯಷ್ಟು ಎತ್ತರದಿಂದ ಅದರೊಳಕ್ಕೆ ಧುಮುಕುವ ತರುಣ ಪಂಡನೊಬ್ಬ ಕೂಡಲೇ ಅವರ ಮುಂದೆ ಬಂದು ನಿಂತ. ಸುಭಾಷ್‌ಚಂದ್ರರು ಅವನಿಗೆ ಒಂದು ರೂಪಾಯಿಕೊಟ್ಟರು. ಅವನು ಕೂಡಲೇ ಕೆಳಕ್ಕೆ ಜಿಗಿದ. ಅಬ್ಬಾ, ಅದೆಂಥ ರೋಮಾಂಚಕ ದೃಶ್ಯ! ಸಣ್ಣ ಬಾವಿಯಷ್ಟು ವ್ಯಾಸ, ಜಿಪುಣನ ಹಣದಷ್ಟು ಬೆಳಕು, ಸ್ವಲ್ಪ ಅತ್ತ-ಇತ್ತ ಆದರೂ ಮೂಳೆ-ಮಾಂಸ ಒಂದೂ ಉಳಿಯುತ್ತಿರಲಿಲ್ಲ. ಆದರೆ ಆ ಪಂಡ ಮತ್ತೆ ಬಂದು ಹಣ ಕೇಳತೊಡಗಿದ. "ಇನ್ನೊಂದು ರೂಪಾಯಿ ಕೊಡಿ. ಇನ್ನೊಂದು ಸಲ ಜಿಗಿಯುತ್ತೇನೆ" ಎಂದ.

ಸುಭಾಷ್ ಚಂದ್ರರು, ಕಿರಣ್‌ಶಂಕರ್ ರಾಯ್ ಅವರು ಹಾಗೂ ದಿಲೀಪ್ ಕುಮಾರ್ ರಾಯ್ ಅವರು ಬೇಡವೆಂದು ಎಷ್ಟು ಒತ್ತಾಯಿಸಿದರೂ, ಕೇಳದೆ ಶರತ್‌ಚಂದ್ರರು ಅವನ ಕೈಗೆ ಇನ್ನೊಂದು ರೂಪಾಯಿ ಹಾಕಿ "ಜಿಗಿ" ಎಂದರು.

ಆಶ್ಚರ್ಯಚಕಿತರಾಗಿ ಸುಭಾಷ್‌ಚಂದ್ರರೆಂದರು: "ಯಾಕಪ್ಪ, ಈಗ ತಾನೇ ನೋಡಿದಿರಲ್ಲ!"

ಶರತ್‌ಚಂದ್ರರು ನಗುತ್ತ ಹೇಳಿದರು: "ಯಾರಿಗೆ ಗೊತ್ತು? ಈ ಸಲ ಅತ್ತ-ಇತ್ತ ಏನಾದರೂ ಆದರೆ ಪೆಟ್ಟೇ ಬೀಳಬಹುದು ಅಥವಾ ಮುಳುಗಿಯೇ ಹೋಗಬಹುದು. ಹಾಗೇನಾದರೂ ಆದರೆ ಒಬ್ಬ ದುಸ್ಸಾಹಸಿ ಪಂಡನಾದರೂ ಕಡಿಮೆ ಯಾದಂತಾಗುತ್ತದೆ."

ಇಲ್ಲಿಂದ ಅವರು ತಮ್ಮ ಕಿರಿಯ ತಮ್ಮ ಪ್ರಭಾಸಚಂದ್ರ (ಸ್ವಾಮಿ ದೇವಾನಂದ)ರಿದ್ದ ಊರಾದ ವೃಂದಾವನಕ್ಕೆ ಹೋದರು. ಜೊತೆಯಲ್ಲಿ ಅನೇಕ ಗೆಳೆಯರಿದ್ದರು. ಒಂದು ದಿವಸ ಎಲ್ಲರೂ ರಾಧಾಕುಂಡವನ್ನು ನೋಡಲು ಹೋದರು. ಅವರನ್ನು ನೋಡಿ ಅನೇಕ ಪಂಡರು ಅವರ ಬಳಿಗೆ ಬಂದು, ಹಣಕ್ಕಾಗಿ ಕಾಡತೊಡಗಿದರು. ಅವರಿಗೆ ಏನು ಕೊಡಬೇಕೆಂಬುದೇ ಯಾರಿಗೂ ಅರ್ಥವಾಗಿಲ್ಲ. ಆದರೆ, ಶರತ್‌ಚಂದ್ರರು ಕೂಡಲೇ ಎರಡು ರೂಪಾಯಿ ತೆಗೆದು ಅವರ ಮಧ್ಯೆ ಎಸೆದರು. ಎರಡು ರೂಪಾಯಿ ಎಸೆದುಬಿಟ್ಟರಲ್ಲ ಎಂದು ಎಲ್ಲರೂ ಆಶ್ಚರ್ಯಗೊಂಡಿದ್ದರು. ಶರತ್‌ಚಂದ್ರರೆಂದರು: "ನೋಡಲಿಲ್ಲವೇನು? ಆ ಹಣಕ್ಕೆ ಅವರೆಲ್ಲ ಹೇಗೆ ಮುಗಿಬಿದ್ದರು! ನಾನು ಶಾಶ್ವತವಾಗಿ ಅವರ ನಡುವೆ ಜಗಳ ತಂದು ಹಾಕಿದ್ದೇನೆ. ಆ ಹಣ ಯಾರಿಗೆ ಸೇರಬೇಕೆಂದು ಅವರೆಂದೂ ತೀರ್ಮಾನಿಸಲಾರರು."

ಈ ಬಗೆಯ ತಮಾಷೆಗಳ ಬಗ್ಗೆ ಅವರ ಮನಸ್ಸಿನಲ್ಲಿ ಅದೆಂಥ ತಿರಸ್ಕಾರ ತುಂಬಿಕೊಂಡಿತ್ತೆಂಬುದನ್ನು ಕ್ರೂರ ಹಾಸ್ಯದ ಈ ನಿದರ್ಶನಗಳು ನಿಚ್ಚಳವಾಗಿ ತೆರೆದುತೋರುವುದಿಲ್ಲವೆ?

7

ಶರತ್‌ಚಂದ್ರರು ಈಗ ಕತ್ತಿನವರೆಗೂ ರಾಜಕೀಯದಲ್ಲಿ ಮುಳುಗಿದ್ದರು. ಸಾಹಿತ್ಯದತ್ತ ಹಾಗೂ ಕುಟುಂಬದತ್ತ ಅವರ ಗಮನ ಹರಿಯುತ್ತಲೇ ಇರಲಿಲ್ಲ. ಅವರ ಪತ್ನಿ ಮತ್ತು ಅವರ ಎಲ್ಲ ಗೆಳೆಯರೂ ಈ ವಿಷಯದ ಬಗ್ಗೆ ವ್ಯಥೆಗೊಂಡಿದ್ದರು. ಸಾಹಿತ್ಯ ಸಾಧಕರಾಗಿದ್ದ, ಗೋಷ್ಠಿಗಳನ್ನು ಸೇರಿಸುವುದರಲ್ಲಿ ಸಿದ್ಧಹಸ್ತರಾಗಿದ್ದ, ಪಟಂಗ ಭೇಲೂಪಿಗಾಗಿ ಹಾಗೂ ತಮ್ಮ ಪ್ರಾಣಪ್ರಿಯ ಹಕ್ಕಿಗಾಗಿ ಏನನ್ನೂ ಸಹಿಸಲು ಸಿದ್ಧರಾಗಿರುತ್ತಿದ್ದ ಆ ಶರತ್‌ಚಂದ್ರರಿಗೆ ಏನಾಗಿ ಬಿಟ್ಟಿತು? ಈ ನಿಜವಾದ ಶರತ್‌ಚಂದ್ರರನ್ನು ರಾಜಕೀಯ ನುಂಗಿಹಾಕಿಬಿಟ್ಟಿತ್ತು. ಆದರೆ, ಅವರು ಏನೂ ಬರೆಯುತ್ತಲೇ ಇರಲಿಲ್ಲ ಎಂದಲ್ಲ. ಸಮಗ್ರ ಗ್ರಂಥಾವಳಿಯ[1] ಐದನೆಯ ಭಾಗದ ಜೊತೆಗೆ, 'ನಾರಿಯ ಮೌಲ್ಯ' ಎಂಬ ಸಂದರ್ಭ ಗ್ರಂಥವೂ, 'ದೇನಾ-ಪಾವನಾ' ಎಂಬ ಕಾದಂಬರಿಯೂ ಇದೇ ಅವಧಿಯಲ್ಲಿ ಪ್ರಕಟವಾದುವು. 'ಶ್ರೀಕಾಂತ' ಕಾದಂಬರಿಯ ಮೂರನೆಯ ಭಾಗ, 'ಪಥೇರ್ ದಾಬೀ', 'ನವವಿಧಾನ' ಮತ್ತು 'ಜಾಗರಣ' ಎಂಬ ನಾಲ್ಕು ಕಾದಂಬರಿಗಳನ್ನು ಅವರು ಬರೆಯಲು ಆರಂಭಿಸಿದ್ದೂ ಈ ಅವಧಿಯಲ್ಲಿಯೇ. 'ಮಹೇಶ' ಹಾಗೂ 'ನಿರ್ಭಾಗ್ಯನ ಸ್ವರ್ಗ' ಎಂಬ ಅವರ ಎರಡು ಸುಪ್ರಸಿದ್ಧ ಕಥೆಗಳೂ ಈ ಅವಧಿಯಲ್ಲಿಯೇ ಬೆಳಕು ಕಂಡವು.

ಇವುಗಳೇ ಅಲ್ಲದೆ, ಅದರ ಕೆಲವು ಪ್ರಸಿದ್ಧ ಭಾಷಣಗಳು ಮತ್ತು ಲೇಖನಗಳು ಈ ಅವಧಿಯಲ್ಲಿಯೇ ಪ್ರಕಟವಾದುವು. 'ಶ್ರೀಕಾಂತ' ಕಾದಂಬರಿಯ ಮೊದಲ ಭಾಗದ ಇಂಗ್ಲಿಷ್ ಅನುವಾದವೂ ಈ ಅವಧಿಯಲ್ಲಿಯೇ ಹೊರಬಂದಿತು.[2] ಕೆ.ಸಿ. ಸೇನ್ ಮತ್ತು ಥಿಯೋಡೋಸಿಯಾ ಟಾಮಸನ್ ಅವರು ಈ ಅನುವಾದವನ್ನು ಸಿದ್ಧಪಡಿಸಿದ್ದರು. ಇ.ಜೆ. ಟಾಮಸನ್ ಇದಕ್ಕೆ ಮುನ್ನುಡಿ ಬರೆದಿದ್ದರು ಹಾಗೂ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಇದನ್ನು ಹೊರತಂದಿತ್ತು.

'ದೇನಾ-ಪಾವನಾ' ಕಾದಂಬರಿಯ ಜೊತೆಗೆ ಒಂದು ಮಧುರವಾದ ಕಥೆಯೂ ಸೇರಿಕೊಂಡಿದೆ. 'ಬಿಂದೋ ಕಾ ಲಲ್ಲಾ'ವನ್ನು ಓದಿ ಪ್ರಸಿದ್ಧ ನಾಟಕಕಾರರಾಗಿದ್ದ ಕ್ಷಿರೋದ ಪ್ರಸಾದ ವಿದ್ಯಾ ವಿನೋದರು ಕೋಪಗೊಂಡಿದ್ದರು. ಅದನ್ನು ಓದದೆಯೇ ಅವರು ಕೋಪಗೊಂಡಿದ್ದಂತೆ ಕಾಣುತ್ತದೆ. ಏಕೆಂದರೆ ಸಾಹಿತ್ಯದ ಸ್ವಾಸ್ಥ್ಯರಕ್ಷಣೆ ಎಂಬ ತಮ್ಮ ಪುಸ್ತಕದಲ್ಲಿ ಯತೀಂದ್ರ ಮೋಹನ ಸಿಂಹರು ಅವರನ್ನು ಅನೀತಿಯ ಪ್ರಚಾರಕರೆಂದು ಸಿದ್ಧಪಡಿಸಲು ತಮ್ಮ ಪ್ರಾಣವನ್ನೇ ಪಣವಾಗಿ ಒಡ್ಡಿ ಪ್ರಯತ್ನ

1 ಸಮಗ್ರ ಗ್ರಂಥಾವಳಿ: ಫೆಬ್ರುವರಿ 21, 1923, 'ನಾರಿಯ ಮೌಲ್ಯ': ಏಪ್ರಿಲ್ 1923 'ದೇನಾ-ಪಾವನಾ': ಆಗಸ್ಟ್ 14, 'ಮಹೇಶ': ಸೆಪ್ಟೆಂಬರ್ 1922: 'ನಿರ್ಭಾಗ್ಯನ ಸ್ವರ್ಗ': ಜನವರಿ 1923.

2. 1922

ನಡೆಸಿದ್ದರು. ಆದರೆ 'ದತ್ತಾ' ಕಾದಂಬರಿಯನ್ನು ಓದಿ ಅವರು ಮುಗ್ಧರಾಗಿಬಿಟ್ಟರು. ಆ ಮೇಲೆ ಅವರು 'ದೇನಾ-ಪಾವನಾ' ಕಾದಂಬರಿಯನ್ನೂ ಓದಿದರು. ಎಂಥ ಭಾಷೆ! ಎಂಥ ಪಾತ್ರಚಿತ್ರಣ! ಎಂದು ಅವರು ಮಾರುಹೋಗಿಬಿಟ್ಟರು. ನಳಿನೀಕಾಂತ ಸರ್ಕಾರ್ ಅವರೊಂದಿಗೆ ಅವರು ಹೀಗೆಂದರು: "ನಾನು ಶರತ್ ಬಾಬೂ ಅವರನ್ನು ಭೇಟಿ ಮಾಡಬಯಸುತ್ತೇನೆ."

"ಏಕೆ ?"

"ಅವರಿಗೆ ಗೌರವವನ್ನು ಸಲ್ಲಿಸಿ, ಅಭಿನಂದಿಸುತ್ತೇನೆ."

ವಯಸ್ಸಿನಿಂದಲೂ ಹಿರಿಯರಾಗಿದ್ದ ಆ ಸಾಹಿತಿ ಇದಕ್ಕಿಂತಲೂ ಹೆಚ್ಚಾಗಿ ಇನ್ನೇನನ್ನು ತಾನೆ ಹೇಳಬಹುದಾಗಿತ್ತು? ವಾಸ್ತವವಾಗಿ ಅವರಿಬ್ಬರೂ ಭೇಟಿ ಯಾದಾಗ, ಕ್ಷೀರೋದರು ಶರತ್‌ಚಂದ್ರರನ್ನು ಎಷ್ಟು ಬಲವಾಗಿ ಅಪ್ಪಿಕೊಂಡರೆಂದರೆ, ಅವರಿಂದ ಬೇರೆಯಾಗಲು ಮನಸ್ಸೇ ಇಲ್ಲವೇನೋ ಎಂದೆನಿಸುತ್ತಿತ್ತು.

ಈ ಅವಧಿಯ ಅವರ ಕೃತಿಗಳ ಮೇಲೆ ರಾಜಕೀಯ ಅಭಿಜ್ಞತೆಯ ಸ್ಪಷ್ಟವಾದ ಮುದ್ರೆ ಬಿದ್ದಿರುವುದು ಎದ್ದು ಕಾಣುತ್ತದೆ. ಅವರ ತಲೆಯಲ್ಲಿ ಅನುಭವಗಳ ವಿಶಾಲ ಕೋಶಗಳೇ ಇದ್ದುವು. ಅವು ಅವರಿಗೆ ಪ್ರೇರಣೆಯನ್ನು ಹೊಳಪನ್ನು ನೀಡುತ್ತಿದ್ದುವು. ಬಡತನ, ಜಮೀನುದಾರರ ಅತ್ಯಾಚಾರಗಳು ಹಾಗೂ ಸ್ವಾತಂತ್ರ್ಯದ ಬಗೆಗಿನ ಅದಮ್ಯ ಆಕಾಂಕ್ಷೆ-ಇವೆಲ್ಲ ಈ ಕೃತಿಗಳಲ್ಲಿ ಮೂಡಿನಿಂತಿವೆ. 'ಮಹೇಶ' ಎಂಬ ಕಥೆಯನ್ನು ಓದಿ ಅರವಿಂದರು ಹೀಗೆಂದಿದ್ದರು: "ಎಂಥ ಬೆರಗುಗೊಳಿಸುವಂಥ ರಚನಾಶೈಲಿ! ಎಂಥ ಮಹಾ ಸೃಜನಶೀಲ ಕಥಾಶಿಲ್ಪಿ! ಮಾನವ ಹೃದಯದಲ್ಲಿ ಗಂಭೀರ ಭಾವಾ ವೇಗವನ್ನು ಮೂಡಿಸುವುದರಲ್ಲಿ ಸಮರ್ಥರು ಇವರು."

ಆಶ್ಚರ್ಯದ ಸಂಗತಿಯೆಂದರೆ ಈ ಕಥೆ ಜಿಲ್ಲಾ ಮಂಡಳಿಯಿಂದ ನೆರವು ಪಡೆಯುತ್ತಿದ್ದ, ಸರ್ಕಾರದ ಅಭಿಪ್ರಾಯವನ್ನು ಪ್ರಚಾರ ಮಾಡುತ್ತಿದ್ದ 'ಪಲ್ಲೀಶ್ರೀ' ಎಂಬ ಪತ್ರಿಕೆಯಲ್ಲಿ ಪ್ರಕಟವಾದದ್ದು. ಇದನ್ನು ಓದಿ ಹಿಂದೂ ಜಮೀನುದಾರನೊಬ್ಬ ಹೀಗೆ ಆಕ್ಷೇಪವನ್ನೆತ್ತಿದ್ದ: "ಜಿಲ್ಲಾ ಮಂಡಳಿಯಿಂದ ನೆರವು ಪಡೆಯುತ್ತಿರುವ ಪತ್ರಿಕೆಯಲ್ಲಿ ಇಂಥ ಕಥೆಯನ್ನು ಅಚ್ಚಿಸಬಾರದು. ಇದರಿಂದಾಗಿ ಪ್ರಜೆಗಳು ಜಮೀನುದಾರರ ವಿರುದ್ಧ ಸಿಟೆದು ನಿಲ್ಲುತ್ತಾರೆ - ಅಂದರೆ, ದೇಶದ ಸರ್ವನಾಶ ಆಗಿಬಿಡುತ್ತದೆ."

ಈ ಕಥೆ ಈ ಪತ್ರಿಕೆಯಲ್ಲಿ ಹೇಗೆ ಪ್ರಕಟವಾಯಿತು ಎಂಬುದಕ್ಕೂ ಒಂದು ಇತಿಹಾಸವಿದೆ. ಶರತ್‌ಚಂದ್ರರ ನೆರೆಯವರಾಗಿದ್ದ ಅಕ್ಷಯಬಾಬೂಗಳು ಹುಗ್ಲೀ ಸರ್ಕಾರಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. 'ಪಲ್ಲೀಶ್ರೀ'ಗೆ ಸಂಪಾದಕರಾಗ ಬೇಕೆಂದು ಅವರನ್ನು ಒತ್ತಾಯಪಡಿಸಲಾಗಿತ್ತು. ಈ ಪತ್ರಿಕೆಗಾಗಿ ಒಂದು ಕಥೆಯನ್ನು ಬರೆದುಕೊಡುವಂತೆ ಅವರು ಶರತ್‌ಚಂದ್ರರನ್ನು ಕೋರಿದ್ದರು. 'ಮಹೇಶ್ ಎಂಬುದೇ ಅವರು ಇದಕ್ಕಾಗಿ ಬರೆದ ಕಥೆ. ಈ ಕಥೆ ಅವರ ಸಾಹಿತ್ಯದಲ್ಲಿ ಮಾತ್ರವಲ್ಲದೆ, ವಿಶ್ವಸಾಹಿತ್ಯದಲ್ಲಿಯೇ ಶ್ರೇಷ್ಠ ಕೃತಿಯಾಗಬಹುದೆಂಬ ಕಲ್ಪನೆಯೂ ಆ ಕ್ಷಣದಲ್ಲಿ ಅವರ ಮನಸ್ಸಿನಲ್ಲಿ ಮೂಡಿದ್ದಿರಲಾರದು. ಆದರೆ, ಅಕ್ಷಯ ಬಾಬೂ ಅವರಿಗೆ ಈ ಸತ್ಯದ ಅರಿವಾಗಿತ್ತು. ಇಷ್ಟು ಸುಂದರವಾದ ಕಥೆ ಇಂಥ ಪತ್ರಿಕೆಯಲ್ಲಿ

ಮಾತ್ರವೇ ಪ್ರಕಟವಾಗುವುದು ಅವರಿಗೆ ಇಷ್ಟವಿರಲಿಲ್ಲ. ಆದ್ದರಿಂದ 'ಮಹೇಶ' ಕಥೆ 'ಪಲ್ಲೀಶ್ರೀ'ಯ ಜೊತೆ ಜೊತೆಗೆ 'ಬಂಗವಾಣೀ' ಪತ್ರಿಕೆಯಲ್ಲಿಯೂ ಪ್ರಕಟವಾಗುವಂತೆ ಅವರೇ ಖುದ್ದಾಗಿ ಏರ್ಪಾಡು ಮಾಡಿದ್ದರು.

'ನಿರ್ಭಾಗ್ಯನ ಸ್ವರ್ಗ' ಕಥೆಯಲ್ಲಿ ಶರತ್‌ಚಂದ್ರರು, ಬಡತನದ ಬವಣೆಗೆ ಒಳಗಾಗಿದ್ದ ದೂಲೇ ಸಮಾಜದ ದಾರುಣ ಚಿತ್ರವನ್ನು ಕೊಟ್ಟಿದ್ದಾರೆ. ಇವರ ಶವಗಳಿಗೆ ಅಗ್ನಿಸಂಸ್ಕಾರ ಮಾಡುವ ವಾಡಿಕೆ ಇಲ್ಲ. ಆದರೆ, ಚಿತೆಯಲ್ಲಿ ಬೆಂದು ಬೂದಿಯಾಗಿ ಸ್ವರ್ಗವನ್ನೇರುವುದು ಕಂಗಾಲಿಯ ತಾಯಿಯ ಕೊನೆಯ ಬಯಕೆಯಾಗಿತ್ತು. ಅವಳ ಆ ಆಸೆ ನೆರವೇರಲೇ ಇಲ್ಲ. ಹಳ್ಳದಲ್ಲಿ ಮಣ್ಣು ಮಾಡಿಸಿಕೊಂಡೇ ಅವಳು ಪರಮಗತಿಯನ್ನು ಕಾಣಬೇಕಾಯಿತು. ತಾವೇ ಕೈಯಾರೆ ನೆಟ್ಟು ಬೆಳೆಸಿದ್ದ ಮರವನ್ನು ಕಡಿದುಕೊಳ್ಳಲೂ ಅವರಿಗೆ ಸಾಧ್ಯವಾಗಲಿಲ್ಲ. ಕೆಳಜಾತಿಗೆ ಸೇರಿದ ದೂಲೇಗಳು ಎಂದಾದರೂ ಕಾಯಸ್ಥ ಬ್ರಾಹ್ಮಣರೊಂದಿಗೆ ಹೆಗಲೆಣೆಯಾಗಿ ನಿಲ್ಲಲು ಸಾಧ್ಯವೆ?

'ಪಥೇರ್ ದಾಬೀ' ಅವರ ವೈಯಕ್ತಿಕ ರಾಜಕೀಯ ನಂಬಿಕೆಗಳ ಪ್ರತೀಕವಾಗಿದೆ. ತಮ್ಮ ಅಲೆಮಾರಿ ಜೀವನದ ಅಂಗವಾಗಿ ಅವರು ಅನೇಕ ದೇಶಗಳಲ್ಲಿ ಸಂಚರಿಸಿದ್ದರು. ಅದರ ಅನುಭವವೇ ಅದರಲ್ಲಿ ಸಂಚಿತವಾಗಿರುವಂತೆ ತೋರುತ್ತದೆ. ಅವರು ಇದನ್ನು ಬರೆಯುತ್ತಿದ್ದ ಕಾಲದಲ್ಲಿ ಬಂಗಾಳದ ಕ್ರಾಂತಿಕಾರಿ ಚಳವಳಿಯಂತೂ ಅವರ ಕಣ್ಣೆದುರಿಗೆ ನಡೆಯುತ್ತಿತ್ತು. ಸುಪ್ರಸಿದ್ಧ ರಷ್ಯನ್ ಲೇಖಕ ಮ್ಯಾಕ್ಸಿಂ ಗಾರ್ಕಿಯ 'ತಾಯಿ' ಎಂಬ ಕಾದಂಬರಿಯೂ ಅವರ ಕಣ್ಣೆದುರಿನ ಮುಂದೆ ಇತ್ತು. "ಗಾರ್ಕಿಯ ಕೃತಿಗಳನ್ನು ಓದಿದ ಬಳಿಕ ನನಗೆ ಹೇಗೆ ಅನ್ನಿಸಿದೆ: ಜೀವನದ ಬಗೆಗಿನ ಎಂಥ ಹಿಡಿತ ಆತನಲ್ಲಿ ಕಾಣದೊರೆಯುತ್ತದೆಯೋ ಅಂಥ ಹಿಡಿತ ದಾಸ್ತಾಯವಸ್ಕಿಯಲ್ಲಾಗಲೀ ಬೇರಾವ ಲೇಖಕರಲ್ಲಾಗಲೀ ಕಂಡುಬರುವುದಿಲ್ಲ" ಎಂಬುದು ಅವರ ನಿಲುವೇ ಆಗಿತ್ತು.

ಆಗತಾನೆ ಹೊರಬಂದಿದ್ದ ಅವರ ಕಥೆಗಳ ಸಂಕಲನವಾದ 'ಕ್ರೀಚರ್ ದಟ್ ವಾಸ್ ಒನ್ಸ್ ಮ್ಯಾನ್' ಅನ್ನು ಶರತ್‌ಚಂದ್ರರು ಓದಿದ್ದರು. ಅದನ್ನು ಓದಿ ಅವನು ಹೀಗೆಂದಿದ್ದರು: "ಈ ಕಥೆಗಳಲ್ಲಿ ಬಾಳಿನ ಬಗೆಗಿನ ಒಂದು ಹೊಸ ದೃಷ್ಟಿಕೋನವಿದೆ; ಹೊಸ ಭಾವಧಾರೆ ಇದೆ; ಹೊಸ ಶೈಲಿ ಇದೆ; ಹೊಸ ತಂತ್ರವಿದೆ. ಗಾರ್ಕಿ ಮಾನವತೆಗಾಗಿ ಹೊಸ ಸಂದೇಶವೊಂದನ್ನು ಹೊತ್ತು ತಂದಿದ್ದಾನೆ."

ಇಳಾಚಂದ್ರ ಜೋಶಿ ಹೀಗೆ ಬರೆದಿದ್ದಾರೆ: "ಆ ಹೊತ್ತಿಗೆ ಅವರು ಪತಿತ ನರ-ನಾರಿಯರ ಯುಗವನ್ನು ದಾಟಿ ಬಂದಿದ್ದರು. ತಮ್ಮ ಸಾಹಿತ್ಯ ರಚನೆಯ ಮೂರನೆಯ ಚರಣವನ್ನು ಅವರು ಪ್ರವೇಶಿಸಿದ್ದರು. 'ಪಥೇರ್ ದಾಬೀ'ಯ ಕೆಲವು ಪರಿಚ್ಛೇದಗಳನ್ನು ಅವರು ಬರೆದು ಮುಗಿಸಿದ್ದರು. ಅದಕ್ಕೆ ಅವರೀಗ ಹೊಸ ತಿರುವು ಕೊಡಬಯಸಿದ್ದರು. ಆದರೆ, ಗಾರ್ಕಿ ಬಲವಾಗಿ ಅವರ ಮನಸ್ಸನ್ನು ಆವರಿಸಿಕೊಂಡುಬಿಟ್ಟಿದ್ದ. 'ಪಥೇರ್ ದಾಬೀ'ಯ ಮೇಲೆ ಖಂಡಿತವಾಗಿಯೂ ಗಾರ್ಕಿಯ ಪ್ರಭಾವ ಬಿದ್ದಿದೆ. ಇಬ್ಬರ ಬಾಳಿನಲ್ಲೂ ಯಾವುದೋ ಒಂದು ಹಂತದವರೆಗೆ ಸಾಮ್ಯ ಕಾಣ ದೊರೆಯುತ್ತದೆ. ಇಬ್ಬರೂ ಬಹುದಿನಗಳವರೆಗೆ ಅಲೆಮಾರಿತನದ ಬಾಳನ್ನು ನಡೆಸಿದ್ದವರು. ಇಬ್ಬರೂ ಬಾಳನ್ನು ತುಂಬ ಹತ್ತಿರದಿಂದ

ಕಂಡಿದ್ದವರು. ಇಬ್ಬರೂ ಬಿಡುಗಡೆಯ ಆಂದೋಳನದ ಪ್ರಬಲ ಸಮರ್ಥಕರಾಗಿದ್ದಂಥವರು. ವೈಯಕ್ತಿಕವಾಗಿ ಅಹಿಂಸೆಯ ಹಾದಿಯಲ್ಲಿ ನಡೆಯುತ್ತಿದ್ದರಾದರೂ, ನಾಡಿನ ಬಿಡುಗಡೆಗಾಗಿ ಹಿಂಸೆಯ ಹಾದಿಯನ್ನು ಹಿಡಿದಿದ್ದವರನ್ನು ಶರತ್‌ಚಂದ್ರರು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದರು."

ಅವರ ಅಪೂರ್ಣ ಕಾದಂಬರಿ 'ಜಾಗರಣ'ವೂ[1] ರಾಜಕೀಯ ಅಭಿಜ್ಞತೆಗೆ ಪ್ರಮಾಣ ವನ್ನೊದಗಿಸುತ್ತದೆ. ಸುಮಾರು ಎರಡು ವರ್ಷಗಳವರೆಗೆ ಅದು 'ವಸುಮತಿ'ಯಲ್ಲಿ ಅಚ್ಚಾಗುತ್ತಿತ್ತು. ಆದರೆ, ಅದನ್ನು ಮುಗಿಸಲು ಅವರಿಗೆ ಸಾಧ್ಯವಾಗಲಿಲ್ಲ. ಹಾಗೇನಾದರೂ ಆಗಿದ್ದರೆ, ಆ ಕಾದಂಬರಿ ತುಂಬ ಮಹತ್ವದ್ದಾಗಿರುತ್ತಿತ್ತು. ಅದರ ಶೈಲಿ ಪ್ರೌಢವಾಗಿದೆ ಎಂಬುದಷ್ಟೇ ಇದಕ್ಕೆ ಕಾರಣವಲ್ಲ; ಅದರಲ್ಲಿ ಪ್ರಕಟವಾಗಿರುವ ರಾಜಕೀಯ ಚಿಂತನೆಗಳು ಭವಿಷ್ಯವಾಣಿಯಂತಿರುವುದೂ ಇದಕ್ಕೆ ಕಾರಣ. ಸಾಹಿತಿ ಅನಂತಕಾಲದ ಒಡೆಯನಾಗಿರುತ್ತಾನೆ. ಮುಂಬರುವ ಯುಗವನ್ನು ಕಲ್ಪಿಸಿ ಕೊಳ್ಳುವುದು ಅವನಿಗೆ ಅಸಾಧ್ಯವೇನೂ ಅಲ್ಲ. ಈ ಕಾದಂಬರಿಯಲ್ಲಿ ಒಂದು ಕಡೆ ನಾಯಿಕೆಯ ತಂದೆಯಾಗಿರುವ ಜಮೀನುದಾರ ಹೀಗೆನ್ನುತ್ತಾನೆ: "ಪ್ರಜೆಗಳ ಮನಃಸ್ಥಿತಿಯಲ್ಲಿ ಭಾರಿ ಬದಲಾವಣೆಯಾಗಿದೆ. ಈಗ ಇದು ಶಿಕ್ಷಣದ ಪರಿಣಾಮವಾಗಿರಲಿ ಅಥವಾ ಯುಗಧರ್ಮವಾಗಿರಲಿ ಅಥವಾ ಜಮೀನುದಾರರ ಅತ್ಯಾಚಾರಗಳ ಪರಿಣಾಮವೇ ಆಗಿರಲಿ, ಜನತೆಯಂತೂ ಜಮೀನುದಾರಿ ಪದ್ಧತಿ ಕೊನೆಗಾಣಬೇಕೆಂದು ಬಯಸುತ್ತಿದೆ. ಎರಡು ದಿನ ತಡವಾಗಬಹುದು ಅಥವಾ ಎರಡು ದಿನ ಮೊದಲಾಗಬಹುದು - ಜಮೀನುದಾರಿ ಪದ್ಧತಿ ಖಂಡಿತವಾಗಿಯೂ ಇಲ್ಲವಾಗುತ್ತದೆ. ಜಮೀನುದಾರಿ ಪದ್ಧತಿ ಇಲ್ಲಿಂದ ಕಾಲ್ದೆಗೆಯಲೇಬೇಕು. ಅದನ್ನು ನೀನು ಯಾವ ರೀತಿಯಿಂದಲೂ ಉಳಿಸಲಾರೆ."

ಜಮೀನುದಾರಿ ಪದ್ಧತಿಯನ್ನು ಕೊನೆಗಾಣಿಸುವ ಬಗ್ಗೆ ಇಷ್ಟು ಸ್ಪಷ್ಟವಾದ ಅಭಿಪ್ರಾಯವನ್ನು ಆಗ ಬಹುಶಃ ಯಾವ ಕತೆಗಾರನೂ ವ್ಯಕ್ತಪಡಿಸಿರಲಿಲ್ಲ. ಇದನ್ನು ಏಕೆ ಮುಗಿಸಲು ಸಾಧ್ಯವಾಗಲಿಲ್ಲವೋ ನಮಗೆ ತಿಳಿಯದು. ಅವರ ಬಾಳಿಗೆ ಶಾಶ್ವತವಾಗಿ ಅಂಟಿಕೊಂಡಿದ್ದ ಆಲಸ್ಯವೇ ಇದಕ್ಕೆ ಕಾರಣವಾಗಿದ್ದಿರಬಹುದು. ದೇಶಬಂಧು ಅವರು ತೀರಿಕೊಂಡ ತರುವಾಯ ರಾಜಕೀಯದಲ್ಲಿ ಅವರ ಮನಸ್ಸು ಆಸಕ್ತಿಯನ್ನು ಕಳೆದುಕೊಂಡಿದ್ದು ಇದಕ್ಕೆ ಕಾರಣವಾಗಿರಬಹುದು. 'ಬಂಗಬಾಣೀ' ಪತ್ರಿಕೆಯವರು ಮತ್ತೆ ಮತ್ತೆ ಒತ್ತಾಯ ಪಡಿಸಿದ್ದರಿಂದಲೇ ತುಂಬ ಕಷ್ಟದಿಂದ ಅವರು 'ಪಥೇರ್ ದಾಬೀ' ಕಾದಂಬರಿಯನ್ನು ಮುಗಿಸಿಕೊಟ್ಟಿದ್ದರು.

'ನವವಿಧಾನ'[2] ಹಳೆಯ ಶೈಲಿಯ ಪುಸ್ತಕ. ಇದರಲ್ಲಿ ಹೊಸ ಅಧಿಕಾರಶಾಹಿ ಸಂಸ್ಕೃತಿಗೆ ವಿರುದ್ಧವಾಗಿ ಪ್ರಾಚೀನ ಹಿಂದೂ ರೀತಿ-ನೀತಿಗಳ (ಕರ್ಮಕಾಂಡದ್ದಲ್ಲ) ವಿಜಯ ಪತಾಕೆಯನ್ನು ಹಾರಿಸಲಾಗಿದೆ. ಬಹುಶಃ ಶರತ್‌ಚಂದ್ರರಿಗೆ ಸ್ವತಃ ಈ ಸಂಗತಿ

---

1. 1923ರ ಅಕ್ಟೋಬರ್‌ನಿಂದ 1925 ಎಪ್ರಿಲ್‌ವರೆಗೆ. ಅವರು ತೀರಿಕೊಂಡ ಬಳಿಕ ನನೀ ಮಾಧವ ಮುಖರ್ಜಿ ಅವರು (ಅಮರನಾಥ ಎಂಬ ಹೆಸರಿನಲ್ಲಿ) ಈ ಕಾದಂಬರಿಯನ್ನು ಪೂರ್ಣಗೊಳಿಸಿದರು. ಆದರೆ, ಶರತ್‌ಚಂದ್ರರ ಕಲ್ಪನೆ ಮತ್ತು ಪ್ರತಿಭೆಯ ಎತ್ತರ ಅವರಿಗೆ ನಿಲುಕಲಾರದೆ ಹೋಯಿತು.
2. ಮಾರ್ಚ್ 1922

ಅರಿವಾಗಿದ್ದಿರಬೇಕು. ಒಂದು ದಿನ ಅಸಮಂಜಸ ಮುಖೋಪಾಧ್ಯಾಯರು ಅವರನ್ನು ಕೇಳಿದರು: "ನಿಮ್ಮ ಕೃತಿಗಳಲ್ಲಿ ಯಾವುದು ನಿಮಗೆ ತುಂಬ ಇಷ್ಟವಾಗಿದೆ?"

ಅವರು ಕೂಡಲೇ ಉತ್ತರಿಸಿದರು: "ನವವಿಧಾನ."

ಆಮೇಲೆ ಕೆಲವು ಕ್ಷಣಗಳವರೆಗೆ ಸುಮ್ಮನಿದ್ದು, ಹೇಳಿದರು: "ಆಶ್ಚರ್ಯವಾಯಿತಲ್ಲವೆ? ಈ ಪುಸ್ತಕವನ್ನು ಯಾರೂ ಆದರಿಸುವುದಿಲ್ಲ. ಆದ್ದರಿಂದಲೇ, ನಾನು ಅನಾದರಕ್ಕೆ ಒಳಗಾಗಿರುವ ಈ ಪುಸ್ತಕವನ್ನು ಪಸರಿಸಿದೆ. ನೋಡಿ, ನೀವೂ ಲೇಖಕರು, ನಿಮ್ಮ ಬರೆಹಗಳಲ್ಲಿಯೂ ಒಳ್ಳೆಯವೂ, ಕೆಟ್ಟವು ಮತ್ತು ಸಾಮಾನ್ಯವಾದುವು ಎಲ್ಲ ಇವೆ."

ಸಾಹಿತ್ಯಿಕ ಧೋರಣೆಗಳನ್ನು ಕುರಿತು ಚರ್ಚಿಸಲು ಅನೇಕರು ಅವರ ಬಳಿಗೆ ಬರುತ್ತಿದ್ದರು. ಹಿಂದಿಯ ತರುಣ ಲೇಖಕರಲ್ಲಿ ಒಬ್ಬರಾಗಿದ್ದ ಇಳಾಚಂದ್ರ ಜೋಶಿ ಅವರೂ ಅಂಥವರಲ್ಲಿ ಒಬ್ಬರಾಗಿದ್ದರು. ಶರತ್‌ಚಂದ್ರರ ಬಗ್ಗೆ ಅವರಿಗೆ ತುಂಬ ಗೌರವವಿತ್ತು. ಸಾಕಷ್ಟು ಹುಡುಕಾಟದ ಬಳಿಕ ಅವರು ಶರತ್‌ಚಂದ್ರರ ಮನೆಯನ್ನು ಪತ್ತೆ ಹಚ್ಚಿದರು.[1] ಅಲ್ಲಿ ಹೋಗಿ ನೋಡಿದಾಗ, ಮಧ್ಯ ವಯಸ್ಸಿನ ವ್ಯಕ್ತಿಯೊಬ್ಬರು ಹಲ್ಲುಜ್ಜುತ್ತಿದ್ದುದನ್ನು ಕಂಡರು. "ನಾನು ಶರತ್‌ಚಂದ್ರರನ್ನು ಕಾಣಬೇಕೆಂದಿದ್ದೇನೆ" ಎಂದು ಜೋಶಿ ಹೇಳಿದರು.

"ಹೇಳಿ, ಏನಾಗಬೇಕು? ನಾನೇ ಅವನು" ಎಂದು ಅವರು ಉತ್ತರಿಸಿದರು.

ತುಂಬ ಗೌರವದಿಂದ ಕೈ ಮುಗಿದು, ಸಂಕೋಚ ತುಂಬಿದ ಧ್ವನಿಯಲ್ಲಿ ಜೋಶಿಯವರೆಂದರು: "ನಿಮ್ಮ ಕೃತಿಗಳನ್ನು ಓದಿ, ನಾನು ತುಂಬ ಪ್ರಭಾವಿತನಾಗಿದ್ದೇನೆ. ಬಹಳ ಕಾಲದಿಂದ ನಿಮ್ಮನ್ನು ಭೇಟಿ ಮಾಡಬೇಕೆಂಬ ಆಸೆ ತೀವ್ರವಾಗಿತ್ತು. ಇಂದು ಆ ಆಸೆ ಪೂರೈಸಿತು...."

ಅವರನ್ನು ನಡುವೆಯೇ ತಡೆದು ಆ ವ್ಯಕ್ತಿ ಹೇಳಿದರು: "ಓಹ್, ನೀವು ಕಾದಂಬರಿಕಾರ ಶರತ್‌ಚಂದ್ರ ಚಟರ್ಜಿಯವರನ್ನು ಭೇಟಿಯಾಗಬಯಸುತ್ತೀರಲ್ಲವೆ? ಅವರು ಆ ಕಡೆ ವಾಸವಾಗಿದ್ದಾರೆ. ಆ ಗಲ್ಲಿಯ ಎಡಬದಿಯಲ್ಲಿ ಕೆಂಪು ಮನೆ ಕಾಣಿಸುತ್ತಿದೆಯಲ್ಲ, ಅಲ್ಲಿ ಅವರು ಸಿಕ್ಕುತ್ತಾರೆ."

ಹಾಗಾದರೆ, ಈ ವ್ಯಕ್ತಿ ತನಗೆ ಪ್ರಿಯರಾಗಿದ್ದ ಶರತ್‌ಚಂದ್ರರಲ್ಲ!

ನಿರಾಶರಾದ ಜೋಶಿಯವರು ಆ ದಿಕ್ಕಿಗೆ ನಡೆದರು, ತೋರಿಸಿದ್ದ ಆ ಮನೆಯ ಬಳಿ ತಲುಪಿ, ಅಂಗಳದಲ್ಲಿ ನಿಂತುಕೊಂಡರು. ಎದುರಿಗೆ ಒಂದು ಸಣ್ಣ ಕೊಠಡಿ ಇತ್ತು. ಮೂರು-ನಾಲ್ಕು ಮಂದಿ ಒಂದು ಮೇಜಿಗೆ ಮುತ್ತಿದಂತೆ ಕುಳಿತು ಚದುರಂಗದಾಟವನ್ನು ಆಡುವುದರಲ್ಲಿ ಮಗ್ನರಾಗಿದ್ದರು. ಜೋಶಿಯವರು ಅಲ್ಲಿಂದಲೇ ಕೂಗು ಹಾಕಿದರು: "ಪ್ರಸಿದ್ಧ ಕಾದಂಬರಿಕಾರರಾದ ಶರತ್‌ಚಂದ್ರರು ಈ ಮನೆಯಲ್ಲಿ ವಾಸವಾಗಿದ್ದಾರೇನು?"

ಧ್ವನಿಯನ್ನು ಕೇಳಿ ಮಧ್ಯ ವಯಸ್ಸಿನ ವ್ಯಕ್ತಿಯೊಬ್ಬರು ತಲೆ ಎತ್ತಿ ಇವರತ್ತ ನೋಡಿದರು. ಆ ವ್ಯಕ್ತಿಯ ತಲೆಯ ಅರ್ಧದಷ್ಟು ಕೂದಲು ನರೆತಿತ್ತು, ಗಡ್ಡ-ಮೀಸೆಗಳನ್ನು ತೆಗೆದಿತ್ತು, ಮುಖದ ಮೇಲೆ ಬಿಳಿಯ ಕೂದಲಿನ ಕೂಳೆಗಳು

1 ಮಾರ್ಚ್ 1922

ಅಲ್ಲಲ್ಲಿ ಕಾಣಿಸುತ್ತಿದ್ದುವು; ಅವರು ಒಳಅಂಗಿ ಮತ್ತು ಪಂಚೆಯನ್ನುಟ್ಟಿದ್ದರು. ಅವರು ಕೇಳಿದರು: "ಹೇಳಿ ಸ್ವಾಮಿ, ಏನು ಆಗಬೇಕಿತ್ತು? ಬನ್ನಿ, ಕುಳಿತುಕೊಳ್ಳಿ."

ಒಳಗೆ ಪ್ರವೇಶಿಸುತ್ತ ಜೋಶಿಯವರೆಂದರು: "ನಾನು ಅವರನ್ನೇ ಸ್ವಲ್ಪ ನೋಡಬೇಕಿತ್ತು."

"ಕುಳಿತುಕೊಳ್ಳಿ. ನಾನೇ ಶರತ್‌ಚಂದ್ರ."

"ಪ್ರಸಿದ್ಧ ಕಾದಂಬರಿಕಾರರಾದ ಶರತ್‌ಚಂದ್ರರು.... ?"

ಒಮ್ಮೆ ಆಗಲೇ ಮೋಸ ಹೋಗಿದ್ದುದರಿಂದ ಜೋಶಿಯವರು ಈ ರೀತಿ ಅಸಂಬದ್ಧವಾಗಿ ಪ್ರಶ್ನಿಸಿದರು. ತುಂಬ ಸಜ್ಜನಿಕೆಯಿಂದ ಮುಗುಳ್ನಗುತ್ತ ಶರತ್‌ಚಂದ್ರರು ಹೇಳಿದರು: "ಹೌದು, ಒಂದು ರೀತಿಯಲ್ಲಿ ಪ್ರಸಿದ್ಧನೇ ಹೌದು."

ಅಲ್ಲಿ ಏಕಾಂತವಿರಲಿಲ್ಲ. ಜೋಶಿಯವರಿಗೆ ಸಂಕೋಚವಾಗುತ್ತಿತ್ತು. ಇದನ್ನು ಕಂಡು ಶರತ್‌ಚಂದ್ರರೆಂದರು: "ನಡೆಯಿರಿ, ನನ್ನ ಮನೆ ಹತ್ತಿರದಲ್ಲಿಯೇ ಇದೆ. ಅಲ್ಲಿಗೇ ಹೋಗೋಣ."

ಹಾಗಾದರೆ, ಇದೂ ಅವರ ಮನೆಯಲ್ಲ!

ಶರತ್‌ಚಂದ್ರರು ತಮ್ಮ ಮನೆಯ ಬಳಿ ಬಂದಾಗ, ಅವರ ಜೊತೆಯಲ್ಲಿದ್ದ ಜೋಶಿಯವರನ್ನು ಕಂಡು ನಾಯಿ ಭೇಲೂ ವಿಕಾರಸ್ವರದಲ್ಲಿ ಬೊಗಳಲಾರಂಭಿಸಿತು. ಶರತ್‌ಚಂದ್ರರು ಪ್ರೀತಿಯಿಂದ ಗದರಿಸಿದ ಮೇಲೆ ಅದು ತೆಪ್ಪಗಾಯಿತು. ಅವರು ಹೋಗಿ ಕುಳಿತ ಕೋಣೆ, ಹಾಗೆ ನೋಡಿದರೆ ತುಂಬ ದೊಡ್ಡ ಕೋಣೆಯೇ ಆಗಿತ್ತು. ಆದರೆ ಅಲ್ಲಿ ವಿಶೇಷ ಎನ್ನಬಹುದಾದಂಥ ಪೀಠೋಪಕರಣಗಳಾಗಲೀ, ಯಾವುದೇ ಬಗೆಯ ಅಲಂಕರಣವಾಗಲೀ ಇರಲಿಲ್ಲ. ನಾಲ್ಕಾರು, ಕುರ್ಚಿಗಳು, ಒಂದು ಬೆಂಚು, ಗೋಡೆಗೆ ಅಂಟಿದಂತೆ ಇರಿಸಿದ್ದ ಕೆಲವು ತೆರೆದ ಬೀರುಗಳು ಅಲ್ಲಿದ್ದುವು. ಆ ಬೀರುಗಳಲ್ಲಿ ಪುಸ್ತಕಗಳನ್ನು ಜೋಡಿಸಿ ಇಡಲಾಗಿತ್ತು. ಅಲ್ಲಿದ್ದುದೆಲ್ಲ ಇಷ್ಟೇ. ಆದರೆ ಏಕಾಂತವಿತ್ತು. ಆದ್ದರಿಂದ ಅದು ಜೋಶಿಯವರ ಮನಸ್ಸಿಗೆ ಹಿಡಿಸಿತು. ಆರಾಮವಾಗಿ ಒಬ್ಬರ ಎದುರಿಗೊಬ್ಬರು ಕುಳಿತುಕೊಂಡರು. ಅಷ್ಟು ಹೊತ್ತಿಗೆ ಸೇವಕನೊಬ್ಬ ಹುಕ್ಕಾ ಸಿದ್ಧಪಡಿಸಿಕೊಂಡು ಬಂದಿಟ್ಟ. ಶರತ್‌ಚಂದ್ರರು ಆರಾಮವಾಗಿ ಹುಕ್ಕಾ ಸೇದುತ್ತ ಪ್ರೀತಿ ತುಂಬಿದ ದನಿಯಲ್ಲಿ ಹೇಳಿದರು: "ಈಗ ಹೇಳಿ"

ಜೋಶಿಯವರು ಇದೇ ಮೊದಲಸಲ ಅವರನ್ನು ಭೇಟಿಯಾಗಿದ್ದುದು. ಆದರೂ, ಕೇಳಲು ಅವರ ಬಳಿ ಸಾಕಷ್ಟು ಪ್ರಶ್ನೆಗಳಿದ್ದುವು. ಮಾತನಾಡುವುದರಲ್ಲಿ ಶರತ್‌ಚಂದ್ರರಂತೂ ಎತ್ತಿದ ಕೈ ಆಗಿದ್ದರು. ಅಂದು ಅದೆಷ್ಟು ವಿಷಯಗಳ ಬಗ್ಗೆ ಅವರು ಚರ್ಚಿಸಿದರೋ ಏನೋ. ಸತೀತ್ವ ಮತ್ತು ನಾರೀತ್ವ; ಶ್ರೀಕಾಂತ ಮತ್ತು ಅನ್ನದಾ ಅಕ್ಕ; ಕಾದಂಬರಿಯಲ್ಲಿ ವಾಸ್ತವಿಕತೆ, ಜೀವನದಲ್ಲಿ ವಾಸ್ತವಿಕತೆ - ಹೀಗೆ ಜೋಶಿಯವರು ಒಂದಾದ ಮೇಲೆ ಒಂದರಂತೆ ಪ್ರಶ್ನೆಗಳನ್ನು ಕೇಳುತ್ತ ಹೋದರು. ಕಲೆಯ ಬಗ್ಗೆ ತಮ್ಮ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತ ಶರತ್‌ಚಂದ್ರರೆಂದರು: "ನಮ್ಮಲ್ಲಿ ಕಲ್ಯಾಣದ ಮತ್ತು ಮಂಗಳದ ಭಾವನೆಗಳಿಗೆ ಕಲೆಯಲ್ಲಿ ಪ್ರಮುಖ ಸ್ಥಾನ ನೀಡಲಾಗಿದೆ. ಆದ್ದರಿಂದ, ಯಾವ ಕಲಾತ್ಮಕ ಸತ್ಯದ ಹಿನ್ನೆಲೆಯಲ್ಲಿ ಈ ಭಾವನೆ ಇಲ್ಲವೋ ಅದರ ಬಗ್ಗೆ ನನ್ನ ಮನಸ್ಸಿನಲ್ಲಿ ಎಂದೂ ಆದರದ ಭಾವ ಇದ್ದಿಲ್ಲ. ನಾನು

ಕಲೆಯನ್ನೆಂದೂ ಕ್ರೀಡೆಯ ಕೌತುಕದ ರೂಪದಲ್ಲಿ ಪರಿಭಾವಿಸಿಲ್ಲ. ನಾನು ಅದನ್ನು ಮಾನವ ಜೀವನದ ಚರಮ ಸಾಧನೆಯೆಂದು ಭಾವಿಸಿದ್ದೇನೆ."

ತಮ್ಮ ಬಾಳಿನ ಕಳೆದ ಅವಧಿಯ ಬಗೆಗಿನ ಅನೇಕ ಕಥೆಗಳನ್ನು ಶರತ್‌ಚಂದ್ರರು ಅವರಿಗೆ ಹೇಳಿದರು. ಈ ಸಂದರ್ಭದಲ್ಲಿ ರವೀಂದ್ರನಾಥರ ಬಗ್ಗೆ ಚರ್ಚಿಸುವುದೂ ಸಹಜವೇ ಆಗಿತ್ತು. ಜೋಶಿಯವರು ಕೇಳಿದರು: "ನಿಮ್ಮ ಬಹಳಷ್ಟು ಕೃತಿಗಳಲ್ಲಿ ವೇಶ್ಯೆಯರನ್ನೂ ಅಸತಿಯರೆಂದು ಕರೆಯುಬಹುದಾದ ನಾರಿಯರನ್ನೂ ನಾಯಿಕೆಯರನ್ನಾಗಿ ಆರಿಸಿಕೊಂಡಿದ್ದೀರಿ. ನಿಮ್ಮ ವೈಯಕ್ತಿಕ ಅಭಿರುಚಿ ಅಥವಾ ಸಹಾನುಭೂತಿಯೇ ಇದಕ್ಕೆ ಕಾರಣವಾಗಿದೆಯೆ? ಅಥವಾ ಯಾವುದಾದರೂ ಆದರ್ಶಾತ್ಮಕ ಉದ್ದೇಶದಿಂದ ಪ್ರೇರಿತರಾಗಿ, ನಿಮ್ಮ ಸೈದ್ಧಾಂತಿಕ ನಿಲುವಿನ ಸಮರ್ಥನೆಗಾಗಿಯೇ ಇಂಥ ಪಾತ್ರಗಳನ್ನು ಚಿತ್ರಿಸಿದ್ದೀರಾ?"

ಸಹಜವೆಂಬಂತೆ ಶರತ್‌ಚಂದ್ರರು ಉತ್ತರಿಸಿದರು: "ಎರಡೂ ನಿಜ. ವೈಯಕ್ತಿಕವಾಗಿ ಅಂಥ ಪಾತ್ರಗಳ ನಿಕಟ ಸಂಪರ್ಕ ಉಂಟಾಗಿದೆ. ಆದ್ದರಿಂದಲೇ, ವೇಶ್ಯೆಯರೇ ಸಮಾಜದಲ್ಲಿ ಅತ್ಯಂತ ಹೆಚ್ಚು ಶೋಷಿತರಾದ ಹಾಗೂ ಅತ್ಯಂತ ಹೆಚ್ಚು ಅತ್ಯಾಚಾರ-ಪೀಡಿತರಾದ ನಾರಿಯರು ಎಂಬ ತೀವ್ರವಾದ ಭಾವನೆ ನನ್ನಲ್ಲಿ ಮೂಡಿದೆ. ಆರ್ಥಿಕ ವಿಷಮತೆಯಿಂದಾಗಿ ಯಾವ ಕೊಳಕಾದ ಹಾಗೂ ಹೇಯವಾದ ಬಾಳನ್ನು ನಡೆಸುತ್ತಿದ್ದಾರೋ, ಅದರಿಂದ ಬಿಡುಗಡೆ ಪೊಂದಲು ಪ್ರಜ್ಞಾಪೂರ್ವಕವಾಗಿ ಹಾಗೂ ಅಪ್ರಜ್ಞಾಪೂರ್ವಕವಾಗಿ ಸದಾಕಾಲವೂ ಅವರು ಒದ್ದಾಡುತ್ತಲೇ ಇರುತ್ತಾರೆ. ಅದರ ಈ ಒದ್ದಾಟವನ್ನು ಕಾಣುವ ಅವಕಾಶ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ದೊರೆಯುವುದಿಲ್ಲ. ಎಂದಾದರೂ, ಯಾರಿಗಾದರೂ, ಕಾರಣಾಂತರದಿಂದ ಅಂಥ ಅವಕಾಶ ದೊರೆತರೆ, ಅದನ್ನು ಅವನು ತನ್ನ ಬಾಳಿನ ಪರ್ಯಂತ ಮರೆಯಲಾಗುವುದಿಲ್ಲ. ಅವರ ಅಂತರಾಳದ ಈ ಮೂಲಭೂತ ವಿದ್ರೋಹಕ್ಕೆ ಮಾತುಗೊಡಬೇಕೆಂದು ನಾನು ಬಹಳ ಹಿಂದೆಯೇ ತೀರ್ಮಾನಿಸಿದ್ದೆ. ನನ್ನ ಆ ಉದ್ದೇಶವನ್ನು ಕಾರ್ಯರೂಪಕ್ಕೆ ತರಲು ನಾನು ಎಲ್ಲ ವಿಧದಿಂದಲೂ ಪ್ರಯತ್ನಿಸಿದ್ದೇನೆ."

ಜೋಶಿಯವರೆಂದರು: "ನಿಮ್ಮ ಬಗ್ಗೆ ವ್ಯಂಗ್ಯಮಾಡುತ್ತ ಒಮ್ಮೆ ರವೀಂದ್ರರು ತಮ್ಮ ಒಂದು ಲೇಖನದಲ್ಲಿ ಹೀಗೆಂದು ಬರೆದಿದ್ದರು: 'ಕಲೆ ವಿಶುದ್ಧವಾದ ಆನಂದಮೂಲಕ ಸೌಂದರ್ಯದೊಂದಿಗೆ ಸಂಬಂಧವನ್ನಿರಿಸಿಕೊಂಡಿರುತ್ತದೆ. ಅದರ ನೆಲೆ ಇರುವುದು ಚೀತಪುರದ ಕೊಳಕು ಗಲ್ಲಿಗಳಲ್ಲಲ್ಲ, ವಾಣಿಯ ಪರಮಪವಿತ್ರ ಮಂದಿರದಲ್ಲಿ.' ಇದರ ಬಗ್ಗೆ ನೀವೇನು ಹೇಳಬಯಸುತ್ತೀರಿ?"

ಶರತ್‌ಚಂದ್ರ ಹೇಳಿದರು: "ಆ ಲೇಖನದಲ್ಲಿ, ಯಾವುದೋ ಅಜ್ಞಾತ ಕಾರಣದಿಂದಾಗಿ ರವೀಂದ್ರರು ಗೋಜಲಿನಲ್ಲಿ ಸಿಲುಕಿಕೊಂಡು ಬಿಟ್ಟಿದ್ದರು. ಇಲ್ಲವಾದರೆ, ಅವರಂಥ ಮಹಾದ್ರಷ್ಟಾರರು ಕಲೆಯಕ್ಷೇತ್ರ ಮತ್ತು ಉದ್ದೇಶದ ವ್ಯಾಪಕತೆಯ ಬಗ್ಗೆ ಅನಭಿಜ್ಞರಾಗಿರುತ್ತಾರೆಂದು ನಾನಂತೂ ನಂಬಲಾರೆ. ಆ ಲೇಖನದಲ್ಲಿ ಸ್ವತಃ ತಾವೇ ಹಿಂದೆ ಹೇಳಿದ್ದಂಥ ಮಾತುಗಳನ್ನೂ ಖಂಡಿಸಿದ್ದಾರೆ. ಅವರು ಆನಂದ ಮೂಲಕ ಸೌಂದರ್ಯಾನುಭೂತಿಯ ಕವಿಯಾಗಿದ್ದರು, ಈಗಲೂ

ಆಗಿದ್ದಾರೆ ಎಂಬ ಮಾತಿನಲ್ಲಿ ಸಂದೇಹವೇನೂ ಇಲ್ಲ. ಜೊತೆಗೆ, ದುಃಖ-ದೈನ್ಯ, ಬಡತನ, ಶೋಷಣೆ ಮತ್ತು ಅತ್ಯಾಚಾರಗಳಿಂದ ನೊಂದು ನಿಟ್ಟುಸಿರುಬಿಡುತ್ತಿರುವ ಬಾಳಿನ ಕಠೋರ ವಾಸ್ತವಿಕತೆಯ ಮುಖವನ್ನೂ ಅವರು ಉಪೇಕ್ಷಿಸಿಲ್ಲ. ಯಾವ ಕವಿ ತಮ್ಮ ಒಂದು ಕವಿತೆಯಲ್ಲಿ ವೇಶ್ಯೆಯರನ್ನು ಮತ್ತು ಇತರ ಪತಿತ ಸ್ತ್ರೀಯರನ್ನು ಸತಿ-ಶಿರೋಮಣಿಗಳೆಂದು ಪರಿಗಣಿಸಿದ್ದಾರೋ, 'ಪತಿತಾ' ಎಂಬ ಹೆಸರಿನ ಕವಿತೆಯಲ್ಲಿ ವೇಶ್ಯೆಯ ಹೃದಯಾಂತರಾಳದಲ್ಲಿ ನಿಹಿತವಾಗಿರುವ ದೇವತ್ವವನ್ನು ಅತ್ಯಂತ ಹೃದಯಸ್ಪರ್ಶಿರೂಪದಲ್ಲಿ ಹೊರಹೊಮ್ಮಿಸಿದ್ದಾರೋ ಅವರೇ ಇಂದು ಚೀತಪುರದ ಕೊಳಕು ಗಲ್ಲಿಗಳಿಗೂ ಕಲೆಗೂ ಯಾವುದೇ ಸಂಬಂಧವಿಲ್ಲವೆಂದು ಹೇಳಿದರೆ, ಅವರ ಈ ಲೇಖನದ ಹಿಂದೆ ಯಾವುದೋ ರಹಸ್ಯಪೂರ್ಣ ಕಾರಣವಿದೆ ಎಂಬ ಸಂದೇಹ ಉಂಟಾಗುವುದು ಸಹಜ. ಆ ಕಾರಣ ವೈಯಕ್ತಿಕವಾದುದೂ ಆಗಿರಬಹುದು."

ಆ ವೈಯಕ್ತಿಕ ಕಾರಣ ಯಾವುದು ಎಂಬುದು ಸ್ಪಷ್ಟವಾಗಿ ಯಾರಿಗೂ ಗೊತ್ತಿಲ್ಲ. ಆದರೆ, ಋಷಿಕುಮಾರ ತನ್ನ ಪುಣ್ಯದೃಷ್ಟಿಯ ಸಂಸ್ಪರ್ಶದಿಂದ 'ಪತಿತೆ'ಯ ಅಂತರ್ಯದಲ್ಲಿ ಸುಪ್ತವಾಗಿದ್ದ ದೇವತ್ವವನ್ನು ಜಾಗೃತಗೊಳಿಸಿದಂತೆಯೇ, 'ದೇವದಾಸ' ಕಾದಂಬರಿಯಲ್ಲಿನ ಚಂದ್ರಮುಖಿಯ ಅಂತರ್ಯದಲ್ಲಿ ಸುಪ್ತವಾಗಿದ್ದ ದೇವತೆಯೂ, ಚರಿತ್ರಹೀನನಾದರೂ ಸರಳ ಸ್ವಭಾವದವನಾಗಿದ್ದ ದೇವದಾಸನ ನಿಷ್ಕಳಂಕ ಆತ್ಮದ ಸಂಸ್ಪರ್ಶದಿಂದ ಜಾಗೃತನಾಗಿದ್ದನೆಂಬುದರಲ್ಲಿಯೂ ಅನುಮಾನ ವಿಲ್ಲ. ಇದೇ ಶರತ್ ಸಾಹಿತ್ಯದ ವೈಶಿಷ್ಟ್ಯ. ಆದರೆ, ಅವರಿಗೂ ಕವಿಗುರುಗಳಿಗೂ ಒಂದು ವ್ಯತ್ಯಾಸವಿದೆ. ದೇವತ್ವವನ್ನು ಎಚ್ಚರಿಸುವುದಕ್ಕೆ ತಪೋವನದ ಪವಿತ್ರ ವಾತಾವರಣ ಸೂಕ್ತವಾದುದೆಂದು ರವೀಂದ್ರರು ಭಾವಿಸಿದರೆ, ಶರತ್‌ಚಂದ್ರರು ಅದೇ ದೇವತ್ವವನ್ನು ಚೀತಪುರದ ಕೊಳಕುಗಲ್ಲಿಗಳಲ್ಲಿ ಅರಸಿಬಿಡುತ್ತಾರೆ. ಇದು ಆಭಿಜಾತ್ಯ ಮತ್ತು ವ್ರಾತ್ಯಸಂಸ್ಕಾರಗಳ ನಡುವಣ ಅಂತರವೇ ಆಗಿದೆ. ಈ ಕಾರಣದಿಂದಾಗಿಯೇ ಶರತ್‌ಚಂದ್ರರು ಕೀಳಾಗದೆ, ಉದಾತ್ತರೇ ಆಗಿ ಪರಿಣಮಿಸುತ್ತಾರೆ. ರವೀಂದ್ರರು ಆನಂದದಮೂಲಕ ಸೌಂದರ್ಯಾನುಭೂತಿಯ ಕವಿಗಳಾಗಿದ್ದರು. ಸಾಹಿತ್ಯದ ಮೂಲಕ ಅವರು ವಿಶ್ವಮಾನವನನ್ನು ಅರಸಬಯಸುತ್ತಿದ್ದರು. ಇದಕ್ಕೆ ತದ್ವಿರುದ್ಧವಾಗಿ, ಶರತ್‌ಚಂದ್ರರು ತಮ್ಮ ನೆಲಕ್ಕೆ ಅಂಟಿಕೊಂಡವರಾಗಿದ್ದರು. ಈ ಕಾರಣದಿಂದಾಗಿಯೇ ಸವಿನಯ ಉಲ್ಲಂಘನೆಯ ಚಳವಳಿಯ ವಿಷಯದಲ್ಲಿ ಒಮ್ಮೆ ಅವರಿಬ್ಬರ ಮಧ್ಯೆ ತೀವ್ರವಾದ ಭಿನ್ನಾಭಿಪ್ರಾಯಗಳುಂಟಾಗಿದ್ದುವು. ಇಷ್ಟೆಲ್ಲ ಆದರೂ, ತಮ್ಮ ಗುರುದೇವರ ವಿಷಯದಲ್ಲಿ ಅವರ ಶ್ರದ್ಧೆ ಕೊಂಚವೂ ಮಸುಕಾಗಲಿಲ್ಲ. ತಮ್ಮ ವಿಷಯದಲ್ಲಿ ಗುರುದೇವರು ತುಂಬ ಅಪ್ರಸನ್ನರಾಗಿದ್ದಾರೆ ಎಂಬುದನ್ನು ಕೇಳಿದಾಗ, ಅವರು ಅವರಿಗೆ ಒಂದು ಪತ್ರ ಬರೆದಿದ್ದರು:

"ಶ್ರೀಚರಣಗಳಲ್ಲಿ:

"ತಾವು ನನ್ನ ವಿಷಯದಲ್ಲಿ ತುಂಬ ಅಸಂತುಷ್ಟರಾಗಿದ್ದೀರೆಂದು ಹುಡುಗರು ಹೇಳುತ್ತಿದ್ದರು. ಆವೇಶಕ್ಕೊಳಗಾಗಿ ಕೋಪದಿಂದ ನಿಮ್ಮ ವಿಷಯದಲ್ಲಿ ನಾನು ಏನಾದರೂ ತಪ್ಪು ಮಾತು ಆಡಿರಬಹುದು. ಆದರೆ, ಇದು ಸುಳ್ಳೋ ನಿಜವೋ

ಎಂಬುದನ್ನು ಪರೀಕ್ಷಿಸಲು ತಮ್ಮ ಬಳಿಗೆ ಬಂದಿದ್ದಂಥ ವ್ಯಕ್ತಿಗಳು ಕಡಿಮೆ ಅಪರಾಧವನ್ನೇನೂ ಮಾಡಿಲ್ಲ. ಇಂಗ್ಲೆಂಡಿನ ವರ್ತನೆಯಿಂದ ತಾವು ಕ್ಷುಬ್ಧರಾಗಿದ್ದೀರಿ; ಪಂಜಾಬಿನ ಬಗೆಗಿನ ಆ ಪತ್ರದಿಂದಾಗಿ ಇದೆಲ್ಲ ಆಗಿದೆ; ಆ ಪತ್ರವನ್ನು ಬರೆಯದೆ ಹೋಗಿದ್ದರೆ ಹೀಗೆಲ್ಲ ಆಗುತ್ತಲೇ ಇರಲಿಲ್ಲ - ಈ ಮಾತುಗಳನ್ನೆಲ್ಲ ನಾನು ಹಾಗೆ-ಹಾಗೆಯೇ ಹೇಳಿದ್ದೇನೆ ಎಂಬುದು ನನಗೆ ನೆನಪಿಲ್ಲ. ಸಾಮಾನ್ಯವಾಗಿ ನಾನು ಸುಳ್ಳನ್ನು ಸೃಷ್ಟಿಸಿ ಹೇಳುವುದಿಲ್ಲ. ಆದರೆ, ಹೀಗೇನೂ ಹೇಳುವ ಸಂಭವವೇ ಇಲ್ಲ ಎಂದೇನೂ ಅಲ್ಲ. ಈ ಸಲ ವಿದೇಶದಿಂದ ಹಿಂದಿರುಗಿದ ಮೇಲೆ ನೀವು ತುಂಬ ಬದಲಾಗಿ ಬಿಟ್ಟಿದ್ದೀರಿ; ಬಂಗಾಳದ ಜನಗಳ ಬಗ್ಗೆ ಹಿಂದೆ ಇದ್ದಂಥ ಸ್ನೇಹ-ಮಮಕಾರಗಳು ಇಂದು ನಿಮ್ಮಲ್ಲಿ ಇಲ್ಲ; ಚರ್ಖಾ, ಅಸಹಕಾರ ಆಂದೋಳನ ಮೊದಲಾದುವುಗಳ ವಿಷಯದಲ್ಲಿ ನಿಮಗೆ ಸ್ವಲ್ಪವೂ ಆಸಕ್ತಿ ಅಥವಾ ನಂಬಿಕೆ ಇಲ್ಲ, ಇವೇ ಮೊದಲಾದ ಮಾತುಗಳನ್ನು ನಾನು ಖಂಡಿತವಾಗಿಯೂ ಹೇಳಿದ್ದೇನೆ.

"ಒಂದು ದಿವಸ ನಿಮ್ಮಲ್ಲಿಂದ ನಾನು ಕೋಪಗೊಂಡೇ ಹಿಂದಿರುಗಿ ಬಂದಿದ್ದೆ. ಅದಾದ ಬಳಿಕ ಬಹುಶಃ ಸುಳ್ಳು ಸಂಗತಿಗಳ ಪ್ರಚಾರ ಮಾಡಿರಬಹುದು. ಜನ ತಪ್ಪು ತಿಳಿದುಕೊಳ್ಳುವುದಾದಲ್ಲಿ, ತಿಳಿದುಕೊಳ್ಳಲಿ ಎಂಬ ಭಾವನೆ ಬಹುಶಃ ನನ್ನ ಮನಸ್ಸಿನಲ್ಲಿತ್ತೇನೋ.

"ನಿಮ್ಮ ವಿಷಯದಲ್ಲಿ ನಾನು ತುಂಬ ತಪ್ಪಾಗಿ ನಡೆದುಕೊಂಡಿದ್ದೇನೆ. ಆದರೆ, ಇದು ನನ್ನ ಮೊದಲ ತಪ್ಪಾಗಿರುವುದರಿಂದ ದಯವಿಟ್ಟು ಕ್ಷಮಿಸಿಬಿಡಿ. ನಿಮ್ಮನ್ನು ಬಿಟ್ಟರೆ, ಬೇರಾವ ದೊಡ್ಡ ಮನುಷ್ಯನ ಮನೆಗೂ ನಾನಾಗಿ ಹೋಗುವುದಿಲ್ಲ. ಆದರೆ, ನನ್ನ ತಪ್ಪಿನಿಂದಾಗಿಯೇ ಆ ಹಾದಿಯೂ ಇಂದು ನನಗೆ ಮುಚ್ಚಿ ಹೋಗಿದೆ. ಯೋಚಿಸಿದರೆ ದುಃಖವಾಗುತ್ತದೆ.

"ನಿಮ್ಮ ಅನೇಕ ಶಿಷ್ಯರಲ್ಲಿ ನಾನೂ ಒಬ್ಬನಾಗಿದ್ದೇನೆ. ಅವರಂತೆಯೇ ಇಲ್ಲಿಯ ತನಕ ನಾನೆಂದೂ ನಿಮ್ಮನ್ನು ನಿಂದಿಸಿಲ್ಲ. ಆದರೆ, ಈ ಸಲ ಅದೇನು ಅನಿಷ್ಟ ಬಡಿದುಕೊಂಡಿತ್ತೋ ನನಗೆ ಗೊತ್ತಿಲ್ಲ."[1]

ಮೂರು ದಿವಸಗಳ ಬಳಿಕ ಮತ್ತೆ ಹೀಗೆಂದು ಬರೆದರು:

"ಶ್ರೀ ಚರಣಗಳಲ್ಲಿ:

"ಕ್ಷುದ್ರ ಸ್ವಾರ್ಥಕ್ಕಾಗಿ ನೀವು ನಾಡಿಗೆ ಅಮಂಗಳವನ್ನುಂಟು ಮಾಡುತ್ತೀರಿ ಎಂಬಂಥ ಮಹಾ ಆರೋಪವನ್ನೇ ನಾನು ಮಾಡಿದ್ದಲ್ಲಿ, ಆಬಳಿಕ ಪತ್ರ ಬರೆದು ನಿಮ್ಮ ಕ್ಷಮೆಯನ್ನು ಕೋರುವುದು ವಿಡಂಬನೆ ಮಾತ್ರವಲ್ಲ, ನಿಮ್ಮ ಹೆಸರನ್ನು ಕೆಡಿಸುವ ಕ್ರಮವೂ ಆಗುತ್ತದೆ. ಹೀಗಾಗಿ, ನಿಮ್ಮ ಪತ್ರದ ಧಾಟಿ ಇಷ್ಟೊಂದು ಕಠೋರವಾದರೆ, ಅದರಲ್ಲಿ ಆಶ್ಚರ್ಯವೇನೂ ಇಲ್ಲ. ನನ್ನ ಭಾರಿ ಅಪರಾಧದ ಮಾತನ್ನು ಯಾರು ನಿಮ್ಮ ಕಿವಿಗೆ ಹಾಕಿದ್ದಾರೋ ಅವರು ಇದಕ್ಕೆ ಯಾವುದೇ ಮಿತಿಯನ್ನು ಉಳಿಸಿಲ್ಲ.

"ಇಷ್ಟಾದ ಮೇಲೆ, ನಾನೇನು ಹೇಳಲಿ? ನನ್ನ ನಮಸ್ಕಾರಗಳನ್ನು ದಯವಿಟ್ಟು ಸ್ವೀಕರಿಸಿ."[2]

---

1 ಮೇ 9, 1922

2 ಮೇ 12, 1922

ತಮ್ಮ ದೃಷ್ಟಿಯಿಂದ ಶರತ್‌ಚಂದ್ರರು ಖಂಡಿತವಾಗಿಯೂ ಶ್ರೀಮಂತರಾಗಿದ್ದರು. ಆದರೆ, ಆ ಹಣ ಹೇಗೆ ಖರ್ಚಾಗುತ್ತಿತ್ತೆಂಬುದು ಹೆಚ್ಚು ಜನರಿಗೆ ಗೊತ್ತಿಲ್ಲ. ಅಲ್ಲಯನ್ಸ್ ಬ್ಯಾಂಕ್ ಆಫ್ ಇಂಡಿಯಾ ಅವರಿಗೆ ಪ್ರಿಯವಾದ ಬ್ಯಾಂಕ್ ಆಗಿತ್ತು. ಅವರು ಗಳಿಸಿದ ಹಣವೆಲ್ಲ ಈ ಬ್ಯಾಂಕಿನಲ್ಲಿಯೇ ಇರುತ್ತಿತ್ತು. ಅವರ ಮಾತಿನಂತೆ ನೆರಹೊರೆಯ ಎಲ್ಲ ರೈತರೂ, ಪರಿಚಿತ ವ್ಯಕ್ತಿಗಳೂ ಇದೇ ಬ್ಯಾಂಕಿನಲ್ಲಿ ವ್ಯವಹಾರ ಇಟ್ಟುಕೊಂಡಿದ್ದರು. ಅನಿರೀಕ್ಷಿತವಾಗಿ ಆ ಬ್ಯಾಂಕ್ ಒಂದು ದಿನ ದಿವಾಳಿ ಎದ್ದಿತು. ಶರತ್‌ಚಂದ್ರರಿಗೆ ತುಂಬ ಪೇಚಿನ ಪರಿಸ್ಥಿತಿ ಉಂಟಾಯಿತು. ಅವರು ಮನೆ ಕಟ್ಟಿಸುತ್ತಿದ್ದರು. ಅದಿನ್ನೂ ಪೂರ್ಣವಾಗಿರಲಿಲ್ಲ. ಆದರೆ, ತಮ್ಮ ಮಾತಿನಂತೆ ಈ ಬ್ಯಾಂಕಿನಲ್ಲಿ ಹಣ ಇಟ್ಟಿದ್ದವರ ಬಗ್ಗೆ ಅವರಿಗೆ ಚಿಂತೆಯಾಗಿತ್ತೇ ಹೊರತು, ತಮ್ಮ ಮನೆಯ ಬಗ್ಗೆ ಅವರಿಗೆ ಅಷ್ಟಾಗಿ ಚಿಂತೆ ಇರಲಿಲ್ಲ. ಪಾಪ, ಆ ಬಡಪಾಯಿಗಳು ಎಲ್ಲವನ್ನೂ ಕಳೆದುಕೊಂಡು ಬೀದಿಯ ಪಾಲಾಗಿದ್ದರು. ಶರತ್‌ಚಂದ್ರರಿಗೆ ಅವರ ದುಃಸ್ಥಿತಿಯನ್ನು ನೋಡಲು ಸಾಧ್ಯವಾಗಲಿಲ್ಲ. ಕಾನೂನಿನ ಹೊಣೆಗಾರಿಕೆಯೇನೂ ಇಲ್ಲದಿದ್ದರೂ, ಬ್ಯಾಂಕು ಅವರ ಹಣವನ್ನು ಕೊಡದೆ ಇದ್ದರೆ, ತಾವೇ ಅವರ ಒಂದೊಂದು ಕಾಸಿನ ಋಣವನ್ನು ತೀರಿಸಬೇಕೆಂದು ತೀರ್ಮಾನಿಸಿದರು.

ತಮ್ಮ ಈ ಆಲೋಚನೆಗೆ ವ್ಯಾವಹಾರಿಕ ರೂಪವನ್ನು ಕೊಡಲು ಅವರು ಭಾರಿ ಕಷ್ಟಪಡಬೇಕಾಗಿ ಬರುತ್ತಿತ್ತು. ಆದರೆ, ಅದೃಷ್ಟವಶಾತ್, ಆ ಬ್ಯಾಂಕಿನಲ್ಲಿ ಹಣವನ್ನಿಟ್ಟಿದ್ದವರಲ್ಲಿ ಆಂಗ್ಲರ ಸಂಖ್ಯೆಯೇ ತುಂಬ ಹೆಚ್ಚಾಗಿದ್ದುದರಿಂದ, ಸರ್ಕಾರ ಬ್ಯಾಂಕಿನ ನೆರವಿಗೆ ಬಂತು. ಎಲ್ಲ ಖಾತೆದಾರರಿಗೂ ಅವರು ಇಟ್ಟಿದ್ದ ಹಣದ ಅರ್ಧದಷ್ಟು ಮೊತ್ತ ವಾಪಸು ದೊರೆಯಿತು. ಇಷ್ಟಾಗಿಯೂ, ಉಳಿದ ಅರ್ಧದಷ್ಟು ಹಣವನ್ನು ತುಂಬಿಕೊಡಲು ಶರತ್‌ಚಂದ್ರರು ತುಂಬ ಕಷ್ಟಪಡಬೇಕಾಗಿ ಬಂತು.

ಅನಿರೀಕ್ಷಿತವಾಗಿ ಆ ಹೊತ್ತಿನಲ್ಲಿಯೇ ಅವರ ಗೆಳೆಯರೂ, ರವೀಂದ್ರರ ಅನಂತರ ಹೆಸರಿಸಬೇಕಾಗಿದ್ದಂಥ ಸಾಹಿತಿಯೂ ಆಗಿದ್ದ ಬಂಗಾಳದ ಸುವಿಖ್ಯಾತ ಕವಿ ಸತ್ಯೇಂದ್ರನಾಥ ದತ್ತರು ಕೊನೆಯುಸಿರೆಳೆದರು.[1] ಅವರ ಕೆಲವು ಕವಿತೆಗಳನ್ನು ಸ್ವತಃ ರವೀಂದ್ರರೇ ಇಂಗ್ಲಿಷ್ ಭಾಷೆಗೆ ಅನುವಾದಿಸಿದ್ದರು. ಅವರ ನಿಧನಕ್ಕೆ ಸಂತಾಪವನ್ನು ಸೂಚಿಸುವ ಸಲುವಾಗಿ ಸರಸ್ವತೀ ಇನ್‌ಸ್ಟಿಟ್ಯೂಟ್ ವತಿಯಿಂದ ಥಿಯೋಸಾಫಿಕಲ್ ಸೊಸೈಟಿಯ ಸಭಾಂಗಣದಲ್ಲಿ ಕರೆಯಲಾಗಿದ್ದ ಸಂತಾಪಸೂಚಕ ಸಭೆಯ ಅಧ್ಯಕ್ಷತೆಯನ್ನು ಶರತ್‌ಚಂದ್ರರೇ ವಹಿಸಬೇಕಾಗಿತ್ತು. ಭಾಷಣ ಮಾಡಲು ಅವರು ತುಂಬ ಹೆದರುತ್ತಿದ್ದರು. ಆದರೆ, ಈ ಸಲ ತಪ್ಪಿಸಿಕೊಳ್ಳುವುದು ಅವರಿಗೆ ಸಾಧ್ಯವಾಗಲಿಲ್ಲ. ಈ ಹೊಣೆಯನ್ನು ಅವರು ಒಪ್ಪಿಕೊಳ್ಳಲೇಬೇಕಾಗಿ ಬಂತು. ಸತ್ಯೇಂದ್ರರ ಬಗ್ಗೆ ಅವರ ಹೃದಯದಲ್ಲಿ ಸಹಜ, ಮಮಕಾರವಿದ್ದುದೂ ಬಹುಶಃ ಇದಕ್ಕೆ ಕಾರಣವಾಗಿತ್ತು. ಇಷ್ಟಾಗಿಯೂ, ಹೊತ್ತಿಗೆ ಸರಿಯಾಗಿ ಸಭೆಗೆ ಬರಲು ಅವರಿಗೆ ಸಾಧ್ಯವಾಗಲಿಲ್ಲ. ಸಾಕಷ್ಟು ತಡವಾಗಿ ಬಿಟ್ಟಾಗ, ಹಿರಿಯರೊಬ್ಬರನ್ನು ಅಧ್ಯಕ್ಷಾಸನದಲ್ಲಿ ಕೂಡಿಸಿ ಸಭೆಯ ಕಾರ್ಯಕ್ರಮವನ್ನು ಆರಂಭಿಸಲಾಯಿತು. ಆ ಹೊತ್ತಿಗೆ ಅವರು

1. 1922

ಬರುತ್ತಿದ್ದುದು ಕಂಡಿತು. ಹಂಗಾಮಿ ಸಭಾಧ್ಯಕ್ಷರು ಕೂಡಲೇ ತಮ್ಮ ಸ್ಥಾನವನ್ನು ತೆರವು ಮಾಡಿಕೊಟ್ಟರು. ತುಂಬ ಒತ್ತಾಯ ಪಡಿಸಿದರೂ, ಸಭಾಧ್ಯಕ್ಷರಾಗಿ ಮುಂದುವರಿಯಲು ಅವರು ಒಪ್ಪಲಿಲ್ಲ. ಶರತ್‌ಚಂದ್ರರು ಅಧ್ಯಕ್ಷಾಸನವನ್ನು ಒಪ್ಪಿಕೊಳ್ಳಲೇ ಬೇಕಾಯಿತು. ಒಬ್ಬೊಬ್ಬರಾಗಿ ಎಲ್ಲ ಭಾಷಣಕಾರರೂ ಭಾಷಣ ಮಾಡಿಯಾದ ಮೇಲೆ, ಸಭಾಧ್ಯಕ್ಷರಾಗಿ ಕೆಲವು ಮಾತುಗಳನ್ನಾಡಲು ಅವರು ಎದ್ದು ನಿಂತರು, ಮೇಜಿನ ಮೇಲೆ ಎರಡೂ ಕೈಗಳನ್ನೂರಿ ಕೆಳಕ್ಕೆ ಬೆನ್ನು ಬಾಗಿ ಅವರು ನಿಂತರು. ಆ ಬಳಿಕ ಅಸ್ಪಷ್ಟ ಧ್ವನಿಯಲ್ಲಿ ಅವರು ಏನೇನೋ ಗೊಣಗಿದರು. ಕೆಲವು ಕ್ಷಣಗಳ ಬಳಿಕ, ತಮ್ಮ ಧ್ವನಿ ಜನರಿಗೆ ಕೇಳಿಸುತ್ತಲೇ ಇಲ್ಲವೆಂಬುದು ಅರಿವಾದಾಗ, ದನಿಯನ್ನು ಎತ್ತರಿಸಿ ಅವರೆಂದರು: "ಇದೇನೋ ನಿಜ. ಸತ್ಯೇಂದ್ರನಾಥರ ನಿಧನದಿಂದಾಗಿ ಇಂದು ನಮ್ಮ ಬಂಗಾಳಿ ಸಾಹಿತ್ಯ ಸಮುದಾಯದಲ್ಲಿ ಶೋಕಸಾಗರ ಉಕ್ಕಿ ಹರಿದಿದೆ. ನಾವೆಲ್ಲ ಸ್ವಲ್ಪ ಕಾಲ ಆನಂದದಿಂದ ಅತ್ತಿದ್ದೇವೆ. ಸರಿ, ನಮ್ಮ ಕರ್ತವ್ಯವನ್ನು ನೆರವೇರಿಸಿದಂತಾಯಿತು. ಇನ್ನು ನಾವೆಲ್ಲ ಮನೆಗೆ ಹೋಗೋಣ."

ಕೇಳುತ್ತಿದ್ದವರು ಬೆಚ್ಚಿ ಮೂಕರಂತಾಗಿ ಬಿಟ್ಟರು. ಆದರೆ, ಶರತ್‌ಚಂದ್ರರು ಹೇಳುತ್ತಲೇ ಹೋದರು: "ಸತ್ಯೇಂದ್ರನಾಥರು ಎಷ್ಟು ಜನಪ್ರಿಯ ಕವಿಗಳಾಗಿದ್ದರು ಎಂಬುದನ್ನು ನಾವಿಂದು ಕಂಡುಕೊಂಡಿದ್ದೇವೆ. ಇಂದು ಅವರಿಗಾಗಿ ಎಲ್ಲೆಡೆಗಳಲ್ಲಿಯೂ ಸಂತಾಪ-ಸಭೆಗಳು ನಡೆಯುತ್ತಿವೆ. ಆದರೆ, ಸತ್ಯೇಂದ್ರರೂ ಯಾವುದಾದರೂ ಸಾಹಿತ್ಯಿಕ ಸಭೆಗೆ ಅಧ್ಯಕ್ಷರಾಗುವ ಅರ್ಹತೆಯನ್ನು ಪಡೆದಿದ್ದರು ಎಂಬುದು ಅವರು ಜೀವಂತವಾಗಿದ್ದಾಗ ಯಾವ ಸಭಾ ಸಂಯೋಜಕರಿಗೂ ಹೊಳೆಯಲಿಲ್ಲ. ದೊಡ್ಡ ದೊಡ್ಡ ರಾಜಮಹಾರಾಜರುಗಳನ್ನು, ಉನ್ನತ ಪದಾಧಿಕಾರಿಗಳನ್ನು ಅಧ್ಯಕ್ಷ ಸ್ಥಾನದಲ್ಲಿ ಕೂಡಿಸಲಾಗುತ್ತಿತ್ತು. ಸಾಹಿತಿಯ ಕೃತಿಗಳನ್ನು ಓದುವುದೇ ಅವನಿಗೆ ಗೌರವವನ್ನು ತೋರುವ ಒಂದು ಮಾರ್ಗ. ಇಲ್ಲಿಯವರೆಗೆ ನಿಮ್ಮಲ್ಲಿ ಯಾರು ಯಾರು ಸತ್ಯೇಂದ್ರ ಬಾಬೂ ಅವರ ಪುಸ್ತಕಗಳನ್ನು ಓದಿದ್ದೀರಿ? ಇದನ್ನು ಕಂಡುಕೊಂಡಾಗ ಮಾತ್ರವೆ, ನಿಮ್ಮ ಶ್ರದ್ಧಾ-ಗೌರವಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಹುದು. ಅನೇಕರಿಗೆ ಅವರ ಎಲ್ಲ ಪುಸ್ತಕಗಳ ಹೆಸರೂ ಗೊತ್ತಿಲ್ಲ. ಅವರ ಕೃತಿಗಳನ್ನು ಓದದೆಯೇ ಅವರು ಎಷ್ಟು ದೊಡ್ಡ ಕವಿಗಳು ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಮನ್ಮಥ ಬಾಬುಗಳು ಅವರ ಬಗ್ಗೆ ತುಂಬ ಹೊತ್ತು ಮಾತನಾಡಿದ್ದಾರೆ. ಅವರು ಬಹುಶಃ ಸತ್ಯೇಂದ್ರರ ಕೃತಿಗಳನ್ನು ಓದಿರಬಹುದು. ಇನ್ನೂ ಅನೇಕ ವ್ಯಕ್ತಿಗಳು ಮಾತನಾಡಿದ್ದಾರೆ, ಚೆನ್ನಾಗಿಯೇ ಮಾತನಾಡಿದ್ದಾರೆ. ನಜರುಲ್ ಅವರು ಗೀತೆಯನ್ನು ಹಾಡಿದ್ದಾರೆ, ಚೆನ್ನಾಗಿಯೆ ಹಾಡಿದ್ದಾರೆ. ನಳಿನಿ ಈ ಸಲ ನೀನು ಹಾಡು, ಚೆನ್ನಾಗಿಯೇ ಹಾಡುತ್ತೀಯೆ...."

ತುಂಬ ಕಷ್ಟದಿಂದ ಅವರು ಇಷ್ಟೊಂದು ಮಾತನಾಡಿದ್ದರು. ಆದರೆ, ಇಂಥ ಸಂದರ್ಭದಲ್ಲಿಯೂ ಮುಚ್ಚು ಮರೆಯಿಲ್ಲದೆ ಮಾತನಾಡುವ ತಮ್ಮ ಪ್ರವೃತ್ತಿಯನ್ನು ಅವರು ಹತ್ತಿಕ್ಕಲಾರದೆ ಹೋದರು. ಸತ್ಯದ ಬಗೆಗಿನ ಅವರ ಈ ನಿರ್ಭಯತೆ ಅವರು ಒಳ್ಳೆಯ ಲೇಖಕರೆಂಬುದನ್ನು ಮಾತ್ರವಲ್ಲ, ಒಳ್ಳೆಯ ವ್ಯಕ್ತಿಯೂ ಹೌದೆಂಬುದನ್ನು ತೋರಿಸಿಕೊಡುತ್ತದೆ.

ಅವರು ಗೆಳೆಯರ ಬಳಗದ ಒಲವುಳ್ಳ ವ್ಯಕ್ತಿಯಾಗಿದ್ದರು. ಆದರೆ, ಸಭೆ ಸಮಿತಿಗಳೆಂದರೆ ಅವರಿಗೆ ಆಗುತ್ತಲೇ ಇರಲಿಲ್ಲ. ಅವರ ಬಾಲ್ಯದ ಗೆಳೆಯರಾದ ವಿಭೂತಿಭೂಷಣ ಭಟ್ಟರು ಮತ್ತು ಲೇಖಕಿಯಾಗಿಯೂ ಹೆಸರುಗಳಿಸಿದ್ದ ಅವರ ಸೋದರಿ ನಿರುಪಮಾ ದೇವಿ ಬಹರಾಮಪುರದಲ್ಲಿ ವಾಸವಾಗಿದ್ದರು. ಅವರನ್ನು ಕಂಡುಬರುವ ಸಲುವಾಗಿ ಅವರು ಒಮ್ಮೆ ಅಲ್ಲಿಗೆ ಹೋಗಿದ್ದರು. ಅವರು ಹೋದಲ್ಲೆಲ್ಲ ಜನಗಳು ಮುತ್ತಿಕೊಳ್ಳುತ್ತಿದ್ದರು. ಇಲ್ಲಿಯೂ ಅವರ ಗೌರವಾರ್ಥ ಒಂದು ಸನ್ಮಾನ ಸಭೆಯನ್ನು ಏರ್ಪಡಿಸಲಾಯಿತು. ಮಹಾರಾಜಕುಮಾರ ಶ್ರೀಶಚಂದ್ರ ನಂದಿ ಅವರು ಆ ನೌಕಾಸಭೆಯಲ್ಲಿ ಅವರ ಹಾದಿಯನ್ನು ಎದುರು ನೋಡುತ್ತಿದ್ದರು. ಆದರೆ 'ಉತ್ಸವ-ಮೂರ್ತಿ'ಯೇ ನಾಪತ್ತೆಯಾಗಿದ್ದರು.

ಅವರು ಯಾರಿಗೂ ತಿಳಿಯದಂತೆ ಕವಿ ಯತೀಂದ್ರನಾಥರೊಂದಿಗೆ ಮುರ್ಷಿದಾಬಾದ್ ನಗರವನ್ನು ನೋಡಲು ಹೋಗಿದ್ದರು. ಸಭೆ ಐದು ಘಂಟೆಗೆ ನಡೆಯಲಿತ್ತು. ಅವರು, ಮೂರು ಘಂಟೆಯವರೆಗೆ ಅಲ್ಲಿ-ಇಲ್ಲಿ ಸುತ್ತಾಡುತ್ತಿದ್ದರು. ಸುಸ್ತಾದಾಗ ಗಂಗಾ ನದಿಯ ದಡಕ್ಕೆ ಹೋಗಿ ಕುಳಿತುಕೊಂಡರು. ಯತೀಂದ್ರರು ಹೇಳಿದರು: "ಅಣ್ಣಯ್ಯ, ನಾವಿನ್ನು ಹಿಂದಿರುಗಬೇಕು. ಆಗಲೇ ಮೂರು ಘಂಟೆ ಆಗಿ ಹೋಗಿದೆ."

ಶರತ್‌ಚಂದ್ರರೆಂದರು: "ಸಭೆ ಇರುವುದು ಐದು ಘಂಟೆಗಲ್ಲವೆ ? ನಾಲ್ಕು ಘಂಟೆ ಆಗಲಿ ಬಿಡು."

ನಾಲ್ಕು ಘಂಟೆಯೂ ಹೊಡೆಯಿತು. ಆದರೆ, ಮಾತಿಗೆ ಕೊನೆ ಎಂಬುದೆ ಇರಲಿಲ್ಲ. ಯತೀಂದ್ರರು ಮತ್ತೆ ಹೇಳಿದರು: "ಅಣ್ಣಯ್ಯ, ಈಗಲಾದರೂ ಹೊರಡದೆ ಇದ್ದರೆ, ಐದು ಘಂಟೆಗೆ ತಲುಪಲು ಸಾಧ್ಯವೇ ಆಗುವುದಿಲ್ಲ."

ಶರತ್‌ಚಂದ್ರರು ಹೇಳಿದರು: "ನೀನು ಅದೆಷ್ಟು ಸಭೆಗಳನ್ನು ನೋಡಿದ್ದೀಯೆ ? ಯಾವುದಾದರೂ ಸಭೆ ಹೊತ್ತಿಗೆ ಸರಿಯಾಗಿ ಆರಂಭವಾಗುತ್ತದೆಯೆ ? ಇರಲಿ, ಕುಳಿತುಕೊ. ಸಭೆ ತಾನೆ !"

ಆ ಹೊತ್ತಿಗೆ ಸರಿಯಾಗಿ ಗಂಗೆಯಲ್ಲಿ ಒಂದು ಹೆಣ ತೇಲಿ ಬಂತು. ಒಮ್ಮೆಗ್ರೇ ಅವರು ಉದಾಸೀನರಾಗಿಬಿಟ್ಟರು. ರೆಪ್ಪೆಯನ್ನೂ ಮಿಟುಕಿಸದೆ ಅವರು ಅದನ್ನು ನೋಡುತ್ತ ಇದ್ದುಬಿಟ್ಟರು. ಮಾನವನ ಜೀವನದರ್ಶನದ ಬಗೆಗೆ ಮಾತನಾಡತೊಡಗಿದರು. ಯತೀಂದ್ರರ ಕಣ್ಣು ಗಡಿಯಾರದಲ್ಲಿ ನೆಟ್ಟಿತ್ತು. ಆದರೆ, ಶರತ್‌ಚಂದ್ರರ ದೃಷ್ಟಿ ಆ ಶವದತ್ತಣಿಂದ ಸರಿದು ಅದಾವ ಅದೃಶ್ಯ ಸಂಗತಿಯಲ್ಲಿ ಹೋಗಿ ಸೇರಿತ್ತೋ ? ಯತೀಂದ್ರರು ಹೇಳಿದರು: "ಅಣ್ಣಯ್ಯ, ಐದು ಘಂಟೆಯೂ ಹೊಡೆದುಬಿಟ್ಟಿತು."

"ಐದು ಘಂಟೆ ಆಗಿಬಿಟ್ಟಿತೆ ! ಅಲ್ಲಿಗೆ ಹೋಗುವ ಹೊತ್ತಿಗೆ ಆರು ಘಂಟೆ ಆಗಿಯೇ ತೀರುತ್ತದೆ. ಇನ್ನು ಅಲ್ಲಿಗೆ ಹೋಗಿ ಮಾಡುವುದೇನು ?"

ಯತೀಂದ್ರರೆಂದು: "ಹೋಗಬೇಕು ಅಣ್ಣಯ್ಯ, ಎಲ್ಲರೂ ದಾರಿ ಕಾಯುತ್ತಿರುತ್ತಾರೆ."

ಅದೇ ನಿರ್ವಿಕಾರ ಭಾವನೆಯಿಂದ ಶರತ್‌ಚಂದ್ರರು ಉತ್ತರಿಸಿದರು: "ನಿನಗೇನು

ಹುಚ್ಚು ಹಿಡಿದಿದೆಯೇ? ಸಭೆ ಇದ್ದದ್ದು ಐದು ಘಂಟೆಗೆ. ಅವರೆಲ್ಲ ಆರೂವರೆ ಘಂಟೆಯವರೆಗೂ ಕುಳಿತಿರುತ್ತಾರೇನು? ಯಾರಿಗೂ ಬೇರೆ ಏನೂ ಕೆಲಸವಿಲ್ಲವೇನು? ಎಲ್ಲರೂ ಹೊರಟುಹೋಗಿರುತ್ತಾರೆ. ಈಗ ಅಲ್ಲಿಗೆ ಹೋಗುವುದು ವ್ಯರ್ಥ. ಅಲ್ಲಿಗೆ ಹೋಗುವುದಕ್ಕಿಂತ ಇಲ್ಲಿಯೇ ಕುಳಿತು, ಇಷ್ಟ ಬಂದಂತೆ ಮಾತನಾಡೋಣ."

ಇದು ಇಂಥ ಏಕೈಕ ಘಟನೆಯೇನೂ ಆಗಿರಲಿಲ್ಲ. ಮತ್ತೆ ಮತ್ತೆ ಅವರು ಹೀಗೆಯೇ ಮಾಡುತ್ತಿದ್ದರು. ಮಾತು ಕೊಟ್ಟು, ಹೊತ್ತಿಗೆ ಸರಿಯಾಗಿ ಮನೆಯಿಂದ ಮಾಯವಾಗಿ ಬಿಡುತ್ತಿದ್ದರು. ಒಂದು ದಿವಸ ಮಧ್ಯಾಹ್ನದ ಹೊತ್ತಿಗೆ ಸರಿಯಾಗಿ ಅವರು ನರೇಂದ್ರ ದೇವ್ ಅವರು ಮನೆಗೆ ಬಂದರು. ಅವರು ಕೇಳಿದರು: "ಇದೇನಪ್ಪ, ಈ ಸುಡು ಬಿಸಿಲಿನಲ್ಲಿ ಬಂದದ್ದು? ಏನು ಸಮಾಚಾರ?"

"ಏನು ಹೇಳಲಿ! ಒಂದು ಸಭೆಗೆ ಹೋಗಬೇಕಾಗಿದೆ. ಅದಕ್ಕೋಸ್ಕರವಾಗಿಯೇ ಓಡಿ ಬಂದಿದ್ದೀನಿ. ಅವರು ನೋಡಿಕೊಂಡು ವಾಪಸ್ಸು ಹೋಗುತ್ತಾರೆ."

"ಅದು ಸರಿ, ಆದರೆ, ನಿಮ್ಮ ಬಗ್ಗೆ ಏನು ತಿಳಿದುಕೊಳ್ಳುತ್ತಾರೆ?"

"ಏನು ಬೇಕಾದರೂ ತಿಳಿದುಕೊಳ್ಳಲಿ. ನಾನಂತೂ ಹೋಗಲಾರೆ."

"ಆದರೆ, ಬರುತ್ತೇನೆ ಅಂತ ಮಾತುಕೊಟ್ಟಿಲ್ಲವ?"

"ನಾನೇನು ಮನಃಪೂರ್ವಕವಾಗಿ ಮಾತುಕೊಟ್ಟಿದ್ದೇನೆ? ಒತ್ತಾಯಪಡಿಸಿ ಅವರೇ ಮಾತು ತೆಗೆದುಕೊಂಡಿದ್ದರು."

ಕೆಲವು ವರ್ಷಗಳ ಬಳಿಕ[1] ವಾಥಾಗಾರದ ಹರಿಪದ ಸಾಹಿತ್ಯ ಮಂದಿರದ ಪುರಲಿಯಾ ಅಧಿವೇಶನಕ್ಕೆ ಹೋಗಿಯೂ, ಅದರಲ್ಲಿ ಪೂರ್ಣವಾಗಿ ಪಾಲ್ಗೊಳ್ಳಲಾರದೆ ಹೋದರು. ಸಮ್ಮೇಳನ ಕೆಲವು ದಿವಸಗಳವರೆಗೆ ನಡೆಯಿತು. ಆದರೆ ಒಂದೆರಡು ಸಲ ಮಾತ್ರ ಅಲ್ಲಿಗೆ ಹೋಗಿದ್ದರು. ಇಡೀ ಅವಧಿಯನ್ನು ಮಾವ ಡಾ. ಸತ್ಯೇಂದ್ರನಾಥ ಗಾಂಗುಲಿ ಅವರೊಡನೆಯೇ ಕಳೆದರು.

ಇದನ್ನು ಮೊದಲ ದರ್ಜೆಯ ಬೇಜವಾಬ್ದಾರಿಕೆ ಎನ್ನಬಹುದು. ಆದರೆ, ಸಾಹಿತಿ ಯಾವುದಾದರೂ ಜವಾಬ್ದಾರಿಯನ್ನು ಹೊತ್ತಿರುತ್ತಾನೆಯೆ? ತಮ್ಮ ಅಲೆಮಾರಿ ಜೀವನದ ಒಂದು ಅಂಗವಾಗಿಯೇ ಇದ್ದ, ತಮ್ಮ ಸಹಜ ದೌರ್ಬಲ್ಯವನ್ನು ಮರೆಮಾಚುವ ಅವಕಾಶ ಶರತ್‌ಚಂದ್ರರಿಗೆ ಈ ಮೂಲಕ ದೊರೆಯುತ್ತಿತ್ತು. ಆದರೆ, ಈ ಅಭಿಪ್ರಾಯ ವ್ಯಕ್ತಿನಿಷ್ಠವಾದುದಲ್ಲವೆ? ಇಷ್ಟೊಂದು ಜನಪ್ರಿಯನಾಗಿದ್ದ ಸಾಹಿತಿ ಯನ್ನು ಎಲ್ಲರೂ ತಮ್ಮ ನಡುವೆ ಕಾಣಬಯಸುತ್ತಿದ್ದರು. ಅವರ ಅನುಕೂಲ-ಅನಾನುಕೂಲಗಳ ಪರಿವೆಯೇ ಇರುತ್ತಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಲೇಖಕ ತಪ್ಪಿಸಿಕೊಳ್ಳುವ ಉಚಿತವಾದ ಅಥವಾ ಅನುಚಿತವಾದ ಯಾವುದೇ ಮಾರ್ಗವನ್ನು ಕಂಡುಕೊಂಡರೆ, ಅದನ್ನು ನಿಂದನೀಯವಾದುದೆಂದು ಹೇಳಲಾಗುವು ದಿಲ್ಲ. ಮೇಲಾಗಿ, ಶರತ್‌ಚಂದ್ರರು ಸಭೆ-ಸಮಿತಿಗಳನ್ನು ಕಂಡರೆ ನಿಜವಾಗಿಯೂ ಹೆದರಿಕೊಳ್ಳುತ್ತಿದ್ದರು. ಭಾಷಣ ಮಾಡಲೇಬೇಕಾಗಿ ಬಂದರೆ, ತುಂಬ ನಿಧಾನವಾಗಿ

---

1 ಏಪ್ರಿಲ್ 1928ರಲ್ಲಿ

ಮಾತನಾಡುತ್ತಿದ್ದರು. ಮಾತನಾಡುತ್ತ ಇದ್ದಂತೆಯೇ ಕುಳಿತು ಬಿಡುತ್ತಿದ್ದರು. ಕುಳಿತುಕೊಂಡೇ ಮಾತನಾಡುತ್ತಿದ್ದು, ಒಮ್ಮೆಗೇ ಎದ್ದು ನಿಲ್ಲುತ್ತಿದ್ದರು.

8

ಶರತ್‌ಚಂದ್ರರು ಎಂದೂ ನಿಯತರೂಪದಲ್ಲಿ ಬರೆಯಲಾರದೆ ಹೋಗುತ್ತಿದ್ದರು. ಅವರನ್ನು ಒತ್ತಾಯಮಾಡಿ ಬರೆಸುತ್ತಿದ್ದರು. ಪತ್ರಿಕೆಗಳ ಸಂಪಾದಕರು ಮತ್ತೆ ಮತ್ತೆ ಮನೆಗೆ ಬಂದು, ಧರಣೆ ಮಾಡುತ್ತಿದ್ದರು. ಒತ್ತಾಯ ಪಡಿಸುವುದಕ್ಕಾಗಿಯೇ ಮತ್ತೆ ಮತ್ತೆ ಬರುತ್ತಿದ್ದರು. 'ಭಾರತ ವರ್ಷ' ಪತ್ರಿಕೆಯ ಸಂಪಾದಕರಾಗಿದ್ದ ರಾಯ್ ಬಹಾದುರ್ ಜಲಧರ್‌ಸೇನ್ ಅವರು ಬಂದು, ಶರತ್‌ಚಂದ್ರರ ಸೇವಕನಾಗಿದ್ದ ಭೋಲಾನನ್ನು ಹೆಸರು ಹಿಡಿದು ಕರೆಯುತ್ತಿದ್ದರು. "ಅರೇ ಭೋಲಾ, ಚಹಾ ತೆಗೆದುಕೊಂಡು ಬಾ. ಒಳಗೆ ಹೋಗಿ ಅಮ್ಮಾ ಅವರಿಗೆ ಹೇಳು. ಇವತ್ತು ನಾನು ಇಲ್ಲಿಯೇ ಊಟ-ಸ್ನಾನ ಎಲ್ಲ ಮಾಡುತ್ತೇನೆ."

ಇಷ್ಟು ಹೇಳಿ ಅವರು ಬಟ್ಟೆ ತೆಗೆದು, ಒಂದು ದಿಂಬಿಗೆ ಒರಗಿಕೊಂಡು ಮಲಗಿ ಚುಟ್ಟಾ ಸೇದಲು ತೊಡಗುತ್ತಿದ್ದರು.

ಶರತ್‌ಚಂದ್ರರು ಇದೆಲ್ಲವನ್ನೂ ನೋಡುತ್ತಿದ್ದರು, ಮುಗುಳ್ನಕ್ಕು ಕೇಳುತ್ತಿದ್ದರು. "ಏನು ಸಮಾಚಾರಾನಪ್ಪ! ಇದೆಲ್ಲದರ ಅರ್ಥ ಏನು ?"

"ಅರ್ಥ ಇಷ್ಟೆ. ಐದು ಘಂಟೆಗೆ ಚಹಾ ಕುಡಿದೇ ಇಲ್ಲಿಂದ ಹೊರಡುತ್ತೇನೆ. ನಿನ್ನ ಲೇಖನವನ್ನೂ ತೆಗೆದುಕೊಂಡೇ ಹೋಗುತ್ತೇನೆ. ಆದ್ದರಿಂದ, ಈಗ ಕಾಲವನ್ನು ಹಾಳು ಮಾಡದೆ ಬರೆಯಲು ಪ್ರಾರಂಭ ಮಾಡು."

'ವಿಚಿತ್ರಾ' ಪತ್ರಿಕೆಗಾಗಿ ತುಳಸೀ ಅವರು ಲೇಖನವನ್ನು ತೆಗೆದುಕೊಂಡು ಬರುತ್ತಿದ್ದರು. ಈತ ರೈಲ್ವೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಉಪೇಂದ್ರನಾಥರು ಖುದ್ದಾಗಿ ರೈಲ್ವೆ ನಿಲ್ದಾಣಕ್ಕೆ ಬಂದು ಲೇಖನವನ್ನು ತೆಗೆದುಕೊಂಡು ಹೋಗುತ್ತಿದ್ದರು. ಶರತ್‌ಚಂದ್ರ ತಮ್ಮ ಕಡೆ ಗಮನ ಹರಿಸದೆ, ಆಲಸ್ಯ ತೋರಿಯಾರು ಎಂಬ ಭಯದಿಂದ ಅವರೇ ಖುದ್ದಾಗಿ ಹೋಗುತ್ತಿದ್ದರು.

ಇವರು ಹೀಗೆ ಒತ್ತಾಯಪಡಿಸದಿದ್ದರೆ, ಅವರು ಬರೆಯುವ ಸಂಭವವೇ ಇರುತ್ತಿರಲಿಲ್ಲವೇನೋ. ಈ ಮಾತಿಗೆ ಸಾಕ್ಷಿ ಎಂಬಂತೆ, ಅವರ ಅದೆಷ್ಟೋ ಕೃತಿಗಳು ಅಪೂರ್ಣವಾಗಿ ಉಳಿದುಬಿಟ್ಟಿವೆ. ಕಾಶಿಯ ಪ್ರವಾಸದ ಸಂದರ್ಭದಲ್ಲಿ ಅವರು ಸಾಹಿತಿ ಕೇದಾರನಾಥ ಬಂದೋಪಾಧ್ಯಾಯ ಅವರನ್ನು ಭೇಟಿಯಾಗಿದ್ದರು. ಬಹುಬೇಗ ಈ ಭೇಟಿ ಸ್ನೇಹವಾಗಿ ಪರಿಣಮಿಸಿತು. ಈ ಕೇದಾರ ಬಾಬೂಗಳೇ ತಮ್ಮ 'ಪ್ರವಾಸ ಜ್ಯೋತಿ' ಪತ್ರಿಕೆಗೆ ಬರೆಯುವಂತೆ ಶರತ್‌ಚಂದ್ರರನ್ನು ಆಹ್ವಾನಿಸಿದರು. ಅವರಿಗೆ ಒಂದು ಕಾದಂಬರಿಯನ್ನು ಬರೆದುಕೊಡುವುದಾಗಿ ಮಾತುಕೊಟ್ಟರು. ಆದರೆ, ಮತ್ತೆ ಮತ್ತೆ ಒತ್ತಾಯಿಸಿದ ಮೇಲೆ, ಒಂದೇ ಒಂದು ಕಂತಿನಷ್ಟು, ಬರಹವನ್ನು ಕಳಿಸಿಕೊಡಲು ಅವರಿಗೆ ಸಾಧ್ಯವಾಗಿತ್ತು. ಆಗ ಒಮ್ಮೆ ಅವರು ಒಂದು ಪತ್ರದಲ್ಲಿ ಹೀಗೆ ಬರೆದಿದ್ದರು:

"ನಿಮ್ಮೊಡನೆ ನನ್ನ ವ್ಯವಹಾರ ಸಾಕಷ್ಟು, ನಿಂದನೀಯವಾಗಿ ಬಿಟ್ಟಿದೆ. ಆದರೆ, ಅನಿವಾರ್ಯ ಕಾರಣಗಳಿಂದಾಗಿಯೇ ಹೀಗಾಗಿದೆ. ಮುಂದೆ ಮತ್ತೆಂದೂ ಹೀಗಾಗಲಾರದೆಂದು ನಂಬಿದ್ದೇನೆ. ಮೊದಲ ಕಾರಣವೆಂದರೆ, ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದುದು. ಯಾವುದೂ ಮನಸ್ಸಿಗೆ ಹಿಡಿಸುತ್ತಿರಲಿಲ್ಲ. ಆ ಬಳಿಕ, ಆರೋಗ್ಯ ಸುಧಾರಿಸಿದಾಗ, ಇತರ ತೊಂದರೆಗಳು ಎದುರಾದುವು. ನಿಮಗೆ ಈ ತಿಂಗಳು ಒಂದು ಕೃತಿಯನ್ನು ಕಳಿಸಬಹುದಾಗಿತ್ತು. ಆದರೆ, 'ಭಾರತ ವರ್ಷ'ಕ್ಕೆ ಕಳಿಸದೆ ಇದ್ದುದರಿಂದ, ನಿಮಗೂ ಕಳಿಸಲು ಸಾಧ್ಯವಾಗಲಿಲ್ಲ. ಅವರಿಗೆ ಕಳುಹಿಸಿಕೊಡದೆ, ನಿಮಗೆ ಮಾತ್ರವೇ ಕಳಿಸಿಕೊಟ್ಟಿದ್ದರೆ, ಅವರಿಗೆ ಅಪಾರ ವ್ಯಥೆಯುಂಟಾಗುತ್ತಿದ್ದುದು ಮಾತ್ರವಲ್ಲ, ಅಪಮಾನ ಮಾಡಿದಂತೆಯೂ ಆಗುತ್ತಿತ್ತು.

"ಈ ತಿಂಗಳಿಂದ ಎಲ್ಲವೂ ಮತ್ತೆ ನಿಯತ ರೂಪವನ್ನು ಪಡೆದುಕೊಳ್ಳಲಿದೆ. ನನ್ನೊಡನೆ ಯಾವುದೇ ವ್ಯವಹಾರ ನಡೆಸಿರುವಂಥವರಿಗೆಲ್ಲ ಇಂಥದೇ ಅನುಭವ ಉಂಟಾಗಿದೆ. ನಾನು ಸ್ವತಃ ಅನ್ಯಾಯವನ್ನೆಸಗುತ್ತಿರುವುದು ಮಾತ್ರವಲ್ಲದೆ, ನಾಲ್ಕಾರು ವ್ಯಕ್ತಿಗಳೂ ನಗೆಪಾಟಲಿಗೆ ಗುರಿಯಾಗುವಂತೆ ಮಾಡುತ್ತಿದ್ದೇನೆ. ಇದನ್ನು ನೀವು ಉದಾರತೆಯಿಂದ ಕ್ಷಮಿಸಬೇಕು. ನನ್ನ ಸ್ವಭಾವವೇ ಹಾಗಾಗಿ ಬಿಟ್ಟಿದೆ....

"ಸಾಧ್ಯವಾದಷ್ಟು ಬೇಗ (ಮುಂದಿನ ಕಂತನ್ನು) ಕಳಿಸಿಕೊಡಲಿದ್ದೇನೆ. ಈ ವಿಷಯದ ಬಗ್ಗೆ ಈ ಬಾರಿ ನೀವು ನಿಶ್ಚಿಂತರಾಗಿರಬಹುದು."[1]

ಆದರೆ, ಹಾಗೆ ಆಗಲೇ ಇಲ್ಲ. ಅವರಿಗೆ ಏನನ್ನೂ ಕಳಿಸಲು ಸಾಧ್ಯವಾಗಲಿಲ್ಲ, ಈ ಅಸಮರ್ಥತೆ ಎಂಬುದು ಅವರ ಸ್ವಭಾವದ ಅಂಗವೇ ಆಗಿಬಿಟ್ಟಿತ್ತು. ಕಾರಣಗಳು ಅನೇಕವಾಗಿದ್ದುವು; ಇದ್ದೂ ಇರುತ್ತವೆ. ಗುಂಪು-ಗೋಷ್ಠಿಗಳಲ್ಲಿ ಮುಳುಗಿರುವಂಥ ವ್ಯಕ್ತಿಗೆ ಕಾಲನಿಷ್ಠೆ ಅಥವಾ ನಿಯಮನಿಷ್ಠೆ ಎಂಬುದು ಬಹುಮಟ್ಟಿಗೆ ಅರ್ಥರಹಿತವಾದ ಸಂಗತಿಯೆ. ಇದೇ ಕೇದಾರ ಬಾಬೂಗಳ ಜೊತೆಯಲ್ಲಿ ಹರಟೆ ಹೊಡೆಯುತ್ತ ಅವರು ಹಲವಾರು ದಿವಸಗಳನ್ನು ನೂಕಿದ್ದರು. ಕೇದಾರನಾಥರ ಆರೋಗ್ಯ ಸರಿಯಿರಲಿಲ್ಲ. ವಾಯು ಸಂಚಾರ ಅವರಿಗೆ ತುಂಬ ಅಗತ್ಯವಾಗಿತ್ತು. ಎಂಟು ಗಂಟೆಗೆ ಬರುವಂತೆ ಟಾಂಗಾದವನಿಗೆ ಹೇಳಿಕಳಿಸಿದರು.

ಅವನೇನೋ ಹೊತ್ತಿಗೆ ಸರಿಯಾಗಿ ಬಂದ. ಆದರೆ, ಆಗಿನ್ನೂ ಚಹಾ ಸೇವನೆ ನಡೆಯುತ್ತಿತ್ತು. ಅನೇಕ ತರುಣರು ಅವರನ್ನು ಕಾಣಲು ಬಂದಿದ್ದರು. ಹನ್ನೆರಡು ಘಂಟೆಯಾಗಿ ಬಿಟ್ಟಿತು. 'ಸರಿ, ಇದು ಹೊರಗೆ ಹೊರಡುವ ಹೊತ್ತೆ! ಹೋಗಲಿ, ನಾಲ್ಕು ಘಂಟೆಗೆ ಬಂದುಬಿಡು! ಏನೂ ಯೋಚನೆ ಮಾಡಬೇಡ! ಇಡೀ ದಿವಸದ ಬಾಡಿಗೆ ಕೊಡುತ್ತೇನೆ!' ಎನ್ನುತ್ತಿದ್ದರು. ಟಾಂಗಾವಾಲಾ ಎರಡು ದಿವಸ ಹೀಗೆ ಬಂದ. ರಾತ್ರಿಯ ಹನ್ನೊಂದು ಘಂಟೆಯವರೆಗೂ ಕಾದ. ಇಡೀ ದಿವಸದ ಬಾಡಿಗೆ ತೆಗೆದುಕೊಂಡು ಹೋದ. ಅವರಿಗೆ ಹೊರಗೆ ಹೊರಡಲು ಸಾಧ್ಯವೇ ಆಗುತ್ತಿರಲಿಲ್ಲ. ಸಾಧ್ಯವೂ ಆಗಲಿಲ್ಲ.

ಇಂಥ ವ್ಯಕ್ತಿ ಅಫೀಮನ್ನೂ ಸೇವಿಸತೊಡಗಿದರೆ ಕೇಳಬೇಕೆ?..... ಮೊದಲೇ ಹಾಗಲಕಾಯಿ, ಅದರ ಜೊತೆಗೆ ಬೇವಿನಕಾಯಿಯೂ ಸೇರಿಕೊಂಡರೆ....?

---

1. ನವೆಂಬರ್ 1920

ಇನ್ನೊಂದು ಸಂದರ್ಭದಲ್ಲಿ, ತಮ್ಮ ಈ ಚಿರಪರಿಚಿತ ಅಸಮರ್ಥತೆಯ ಬಗ್ಗೆ ವಿವರಣೆ ಕೊಡುತ್ತ, ಕವಿ ಗಿರಿಜಾ ಕುಮಾರರಿಗೆ ಬರೆದ ಪತ್ರದಲ್ಲಿ, ಅವರು ತಮ್ಮ ಮನಸ್ಸಿನಲ್ಲಿದ್ದ ಮಾತನ್ನು ಮತ್ತಷ್ಟು ಸ್ಪಷ್ಟವಾಗಿ ಹೇಳಿದ್ದಾರೆ.

"ಬೇರೊಬ್ಬರ ಎದುರಿಗೆ ನನ್ನ ತಪ್ಪುಗಳ ಬಗ್ಗೆ ವಿವರಣೆಯನ್ನು ಕೊಡುವ ಅವಕಾಶ ನನಗೆ ಇದೆಯೋ ಇಲ್ಲವೋ, ನಿಮ್ಮ ಎದುರಿಗಂತೂ ಇದ್ದೇ ಇದೆ ಎಂಬುದು ನನ್ನ ನಂಬಿಕೆ. ನೀವು ಯಾವುದೋ ಒಂದು ಮಾಸಪತ್ರಿಕೆಯ ಅಥವಾ ವಾರಪತ್ರಿಕೆಯ ಸಂಪಾದಕರು ಮಾತ್ರವಲ್ಲ, ಸ್ವತಃ ಕವಿಯೂ ಹೌದು ಎಂಬುದು ಇದಕ್ಕೆ ಕಾರಣ. ಅಂದರೆ, ನೀವು ನನ್ನ ಸಗೋತ್ರಿಗಳು, ಸ್ವಜಾತಿಯವರು. ಸಾಹಿತ್ಯ ಸೇವೆಯಲ್ಲಿ ದೊರೆಯುವ ಆನಂದವೆಂಥದು, ಉಂಟಾಗುವ ದುಃಖವೆಂಥದು ಎಂಬುದನ್ನು ನೀವು ಬಲ್ಲಿರಿ. ಸಾಹಿತ್ಯ ಸೇವೆಯಲ್ಲಿ ತೊಡಗಿರುವಂಥ ವ್ಯಕ್ತಿಯ ದುಃಸ್ಥಿತಿ ಏನೆಂಬುದು ನಿಮಗೆ ಗೊತ್ತು. ಸಾಹಿತಿಯ ಒಳ-ಹೊರಗುಗಳೆಲ್ಲವೂ ಒಂದೇ ಸೂತ್ರದಲ್ಲಿ ಪೋಣಿಸಲ್ಪಟ್ಟಿರುವುದಿಲ್ಲ ಎಂಬುದನ್ನು ನಿಮಗೆ ವಿವರಿಸಿ ಹೇಳಬೇಕಾಗಿಲ್ಲ. ಒಂದನ್ನು ಪ್ರಮಾಣವಾಗಿಸಿಕೊಂಡು ಇನ್ನೊಂದರ ಬಗ್ಗೆ ಚಿಂತಿಸುವುದು ಸಾಧ್ಯವಾಗುವುದಿಲ್ಲ. ಶಾರೀರಿಕ ಆರೋಗ್ಯ ಚೆನ್ನಾಗಿರುವಂತೆ ಕಂಡರೂ, ಮನಸ್ಸು ಸಂಪೂರ್ಣವಾಗಿ ದಿವಾಳಿಯಾಗಿ ಬಿಟ್ಟಿರುತ್ತದೆ, ಮೆದುಳಂತೂ ಮರುಭೂಮಿಯಂತಾಗಿ ಬಿಟ್ಟಿರುತ್ತದೆ, ಅದನ್ನು ಕುಲುಕಿ-ಅಲುಗಾಡಿಸಿ ಮಾಡುವುದರಿಂದ 'ಭಾವ'ಕ್ಕೆ ಬದಲಾಗಿ 'ಅಭಾವ'ದ ರಸರಹಿತ ಬೂಸಾ ಮಾತ್ರವೇ ಹೊರಬರಲಿಚ್ಛಿಸುತ್ತದೆ - ಇಂಥ ವಿಡಂಬನೆಯ ಸ್ಥಿತಿಯೂ ಉಂಟಾಗಿರುತ್ತದೆ. ಇಂದು ಇದೇ ದುಃಸ್ಥಿತಿ ನನಗೊದಗಿದೆ."

ಅನೇಕ ಬಗೆಗಳಲ್ಲಿ ವಿವರಣೆಯನ್ನು ಕೊಡಬಹುದು, ಕೊಡುತ್ತಿದ್ದುದೂ ಉಂಟು. ಆದರೆ, ಅವರಿಂದ ಕೃತಿಗಳನ್ನು ಪಡೆದುಕೊಳ್ಳಬೇಕಾದರೆ, ಸಂಪಾದಕರು ಅನೇಕ ವೇಳೆ ಒತ್ತಾಯದ ಋಜುಮಾರ್ಗವನ್ನು ಕೈಬಿಟ್ಟು, ದುರಾಗ್ರಹದ ಕುಟಿಲಮಾರ್ಗವನ್ನೇ ಅನುಸರಿಸುವುದು ಅಗತ್ಯವಾಗುತ್ತಿತ್ತು. 'ಬಿಜಲೀ' ಪತ್ರಿಕೆಯ ಸಂಪಾದಕರಾದ ನಳಿನೀಕಾಂತ ಸರ್ಕಾರ್ ಅವರು 'ಪೂಜಾ ವಿಶೇಷಾಂಕ'ಕ್ಕಾಗಿ[1] ತಮ್ಮ ಕೃತಿಯನ್ನು ಕೊಡುವಂತೆ ಆ ಸಲ ಬಹಳ ಮುಂಚಿತವಾಗಿಯೇ ಶರತ್‌ಚಂದ್ರರಿಗೆ ಕೋರಿಕೆಯನ್ನು ಸಲ್ಲಿಸಿದ್ದರು.

ಶರತ್‌ಚಂದ್ರರೆಂದಿದ್ದರು: "ನಿಮ್ಮ ಪತ್ರಿಕೆಗೆ ನಾನು ಖಂತವಾಗಿಯೂ ಬರೆದುಕೊಡುತ್ತೇನೆ."

ಇಂಥ ಆಶ್ವಾಸನೆ ದೊರೆತದ್ದರಿಂದ, ತಾನು ಕೃತಾರ್ಥನಾದನೆಂಬ ಭಾವನೆ ನಳಿನೀಕಾಂತ ಬಾಬೂಗಳಿಗೆ ಉಂಟಾಗಿತ್ತು. ಒಂದು ವಾರದ ಬಳಿಕ ಅವರು ಮತ್ತೆ ಬಂದರು. ಅವರ ಆತಿಥ್ಯದಲ್ಲಿ ಯಾವುದೇ ಬಗೆಯ ಕೊರತೆಯೂ ಉಂಟಾಗಲಿಲ್ಲ. ಮಾತುಗಳಿಗೆ ಕೊನೆ ಎಂಬುದೂ ಇರಲಿಲ್ಲ. ಸನ್ಯಾಸಿಗಳ ತಂಡದ ಕಥೆ, ಸೂಳೆಗೇರಿಗಳಲ್ಲಿನ ತಮ್ಮ ವಾಸ, ಯಾತ್ರಾತಂಡ, ಸಂಗೀತಾದಿ ಗೋಷ್ಠಿಗಳು, ನಾಟಕಗಳು - ತಮ್ಮ ಹಿಂದಿನ ಬಾಳುವೆಗೆ ಸಂಬಂಧಿಸಿದ ಈ ಹಾಗೂ ಇನ್ನೆಷ್ಟು

---

1. ದೀಪಾವಳಿ ವಿಶೇಷ ಸಂಚಿಕೆ - ಅನುವಾದಕನ ಅಡಿಟಿಪ್ಪಣಿ

ಕಥೆಗಳನ್ನು ಅವರು ನಳಿನೀಕಾಂತರಿಗೆ ಹೇಳಿದರೋ ಏನೋ. ಬೀಳ್ಕೊಳ್ಳುವ ಹೊತ್ತಿನಲ್ಲಿ ನಳಿನೀಕಾಂತರು ಕೇಳಿದರು: "ಅಪ್ಪಾ, ನನಗೊಂದು ಲೇಖನ ಕೊಡುವುದಾಗಿ ಹೇಳಿರುವುದು ನೆನಪಿದೆ ತಾನೆ?"

"ಚೆನ್ನಾಗಿ ನೆನಪಿದೆ. ನಿಮಗೊಂದು ಲೇಖನ ಕೊಡುತ್ತೇನೆ" ಎಂದು ಉತ್ತರ ಕೊಟ್ಟರು.

ದಿನಗಳು ಉರುಳಿದುವು, ತಿಂಗಳುಗಳು ಉರುಳಿದುವು. ನಳಿನೀಕಾಂತರು ಬರುತ್ತಲೇ ಇದ್ದರು. ಆತಿಥ್ಯ, ಸ್ನೇಹ, ಕಥೆ, ಮಾತುಕತೆ ಎಲ್ಲವೂ ನಡೆಯುತ್ತಲೇ ಇದ್ದುವು. ಲೇಖನವನ್ನು ಬರೆಯಲಾಗಲಿಲ್ಲವೆಂದರೆ, ಬರೆಯಲು ಆಗಲೇಇಲ್ಲ. ಕೊನೆಗೆ ಹೆಸರನ್ನು ಹಾಕುವ ಹೊತ್ತು ಬಂದಿತು. ಅದೇ ಉತ್ಸಾಹದಿಂದ ಶರತ್‌ಚಂದ್ರ ರೆಂದರು: "ಖಂಡಿತವಾಗಿಯೂ ಲೇಖನ ಕೊಡುತ್ತೇನೆ ಎಂದು ಹೇಳಿದ ಮೇಲೆ ಕೊಟ್ಟೇಕೊಡುತ್ತೇನೆ. ಆದ್ದರಿಂದ, ಹೆಸರು ಹಾಕುವುದಕ್ಕೇನು ಕಷ್ಟ? ಏನು ತೊಂದರೆ?"

ಹೆಸರೂ ಅಚ್ಚಾಗಿ ಬಿಟ್ಟಿತ್ತು. ಆದರೆ, ಲೇಖನ ಮಾತ್ರ ದೊರೆತಿರಲಿಲ್ಲ. ಕೊನೆಗೆ ಒಂದು ದಿವಸ ಯಾವುದಾದರೂ ಒಂದನ್ನು ತೀರ್ಮಾನಿಸಲೇ ಬೇಕಾಯಿತು. ಅಂದು ನಳಿನೀಕಾಂತರಿಗೆ ದೊರೆತದ್ದು ಈ ಪತ್ರ ಮಾತ್ರ:

" 'ಬಿಜಲೀ' ಸಂಪಾದಕರಿಗೆ

ನಿಮಗೆ ಎಲ್ಲ ಶುಭವೂ ಉಂಟಾಗಲಿ.

ನಿಮ್ಮ 'ಬಿಜಲೀ' ಪತ್ರಿಕೆಯಲ್ಲಿ ನಾಡಿನ ಅನೇಕ ಸಮಸ್ಯೆಗಳ ಬಗೆಗಿನ ಟೀಕೆ ಟಿಪ್ಪಣಿಗಳು ಅಚ್ಚಾಗುತ್ತವೆ. ಅಂಥವನ್ನು ಓದುವ ಸದವಕಾಶವೂ ನನಗೆ ಸಾಕಷ್ಟು ದೊರೆತಿದೆ. ಈ ವಿಶೇಷಾಂಕಕ್ಕೆ ಅವುಗಳ ಬಗ್ಗೆಯೇ ಏನನ್ನಾದರೂ ಬರೆಯಬೇಕೆಂದು ಆಲೋಚಿಸಿದ್ದೆ. ಆದರೆ, ಶರೀರ ಎಷ್ಟು ದುರ್ಬಲವಾಗಿಬಿಟ್ಟಿದೆಯೆಂದರೆ ನನ್ನಿಂದ ಏನನ್ನೂ ಬರೆಯಲು ಸಾಧ್ಯವಾಗಲಿಲ್ಲ. ನಿಮ್ಮ ಪತ್ರಿಕೆಯೂ ನಿಂತು ಹೋಗುವುದಿಲ್ಲ, ನಾನೂ ಸಾಯುವುದಿಲ್ಲ ಎಂಬುದೇ ನಮಗಿರುವ ಭರವಸೆ. ಆರೋಗ್ಯ ಸುಧಾರಿಸಿದ ಕೂಡಲೇ ಬರೆಯಲು ಪ್ರಾರಂಭಿಸುತ್ತೇನೆ. ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲವೆಂಬ ದುಃಖ ನನ್ನನ್ನು ಕಾಡುತ್ತಿದೆ. ಇದರ ಬಗ್ಗೆ ನೀವು ಕೋಪಗೊಂಡರೆ, ನನ್ನ ದುಃಖ ಇನ್ನಷ್ಟು ಹೆಚ್ಚುತ್ತದೆ. ನೀವು ನನ್ನ ವಿಷಯದಲ್ಲಿ ಹಾಗೆ ಕೋಪಮಾಡಿಕೊಳ್ಳುವುದಿಲ್ಲವೆಂದು ನನಗೆ ಚೆನ್ನಾಗಿ ಗೊತ್ತು.

ನಿಮ್ಮವನೇ ಆದ

ಶರತ್‌ಚಂದ್ರ ಚಟ್ಟೋಪಾಧ್ಯಾಯ"

ಆ ವರ್ಷದ 'ಪೂಜಾ ವಿಶೇಷಾಂಕ'ದಲ್ಲಿ ಈ ಪತ್ರವೇ ಅಚ್ಚಾಯಿತು. ಮುಂದಿನ ವರ್ಷದ 'ಪೂಜಾ ವಿಶೇಷಾಂಕ'ಕ್ಕಾಗಿ ಲೇಖನವನ್ನು ಕೊಡುವಂತೆ ಮತ್ತೆ ಒತ್ತಾಯಪಡಿಸಲಾಯಿತು. ಮತ್ತೆ ಅದೇ ಕಥೆಯ ಪುನರಾವರ್ತನೆ ಆಯಿತು. ಮತ್ತೆ ಕೊನೆಗೆ, ಕೊನೆಯ ತಾರೀಖನ್ನು ಗೊತ್ತುಪಡಿಸಲಾಯಿತು. ಅಂದು ನಳಿನೀಕಾಂತರು ಶರತ್‌ಚಂದ್ರರ ಮನೆಗೆ ಹೋದರೆ, ಅಲ್ಲಿ ಅತಿಥಿಗಳ ಗುಂಪೇ ನೆರೆದಿತ್ತು.

ಶರತ್‌ಚಂದ್ರರೆಂದರು: "ನೋಡಿ, ಈ ಗುಂಪಿನಲ್ಲಿ ಏನಾದರೂ ಬರೆಯಲು ಸಾಧ್ಯವಾಗುತ್ತದೆಯೆ ?"

ಎರಡು ಕ್ಷಣಗಳವರೆಗೆ ಸುಮ್ಮನಿದ್ದು ನಳಿನೀಕಾಂತರೆಂದರು: "ಲೇಖನ ಸಿಕ್ಕುವುದಿಲ್ಲವೆಂದು ನನಗೆ ಗೊತ್ತೇ ಇತ್ತು. ಆದರೆ, ಇಂದು ನಾನು ಬಂದಿರುವುದೇ ಬೇರೆ ಉದ್ದೇಶದಿಂದ."

"ಅದೇನು ?"

"ಅಪ್ಪಾ, 'ಬಿಜಲೀ' ಪತ್ರಿಕೆಯುವರು ಕೊಡುವಷ್ಟರಿಂದಲೇ ಹೊಟ್ಟೆ ತುಂಬುವುದಿಲ್ಲ. ಸಣ್ಣ-ಪುಟ್ಟ ಮಕ್ಕಳಿಗೆ ಒಂದಿಷ್ಟು ಸಂಗೀತ ಹೇಳಿಕೊಟ್ಟು, ಹೊಟ್ಟೆಪಾಡು ಮಾಡಿಕೊಳ್ಳುತ್ತೇನೆ. ರಾಮಕೃಷ್ಣಪುರದಲ್ಲಿರುವ ಒಬ್ಬ ಗೌರವಸ್ಥರಿಗೆ ಇಂಥ ಒಬ್ಬರು ಸಂಗೀತದ ಮೇಷ್ಟ್ರು ಬೇಕಾಗಿದೆಯಂತೆ. ಅವರು ನಿಮ್ಮ ಬಳಿ ಬರುತ್ತಿರುತ್ತಾರೆ. ನೀವು ಅವರಿಗೆ ಒಂದು ಮಾತು ಹೇಳಿದರೆ, ಈ ಕೆಲಸ ಆಗಿಬಿಡುತ್ತದೆ."

ಲೇಖನ ಕೊಡುವ ಹೊಣೆಯಿಂದ ಇಷ್ಟು ಸುಲಭವಾಗಿ ಬಿಡುಗಡೆ ದೊರೆಯುತ್ತದೆ ಎಂದು ಶರತ್‌ಚಂದ್ರರು ಭಾವಿಸಿರಲಿಲ್ಲ. ಅವರಿಗೆ ತುಂಬ ಸಂತೋಷವಾಯಿತು. ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಕೂಡಲೇ ಹೊರಡಲೂ ಅವರು ಸಿದ್ಧರಾಗಿಬಿಟ್ಟರು. ನಳಿನೀಕಾಂತರು ಟ್ಯಾಕ್ಸಿ ತೆಗೆದುಕೊಂಡು ಬಂದರು. ಆದರೆ, ಇದೇನು ಅವರು ಹೋಗುತ್ತಲೇ ಇದ್ದಾರೆ! ಹೋಗಬೇಕಾಗಿದ್ದ ಜಾಗ ಬಂದು, ಹಿಂದೆ ಹೋಗಿಬಿಟ್ಟಿತು! ಟ್ಯಾಕ್ಸಿ ನಿಲ್ಲುತ್ತಲೇ ಇಲ್ಲ. ಶರತ್‌ಚಂದ್ರರು ಕೇಳಿದರು: "ಅಪ್ಪಾ, ನಾವೆಲ್ಲಿಗೆ ಹೋಗುತ್ತಿದ್ದೇವೆ ?"

ನಳಿನೀಕಾಂತರೆಂದರು: "ನನ್ನ ಮೆಸ್ ಹತ್ತಿರ ಬಂದು ಬಿಟ್ಟಿದೆ. ಬಂದೇ ಬಿಟ್ಟಿದ್ದೇವ ಎಂದ ಮೇಲೆ ಇನ್ನೇನು? ನನ್ನ ಮನೆಗೆ ದಯವಿಟ್ಟು ಬನ್ನಿ. ಈ ಅದೃಷ್ಟ ದೊರತಿರುವಾಗ, ಒಂದು ಕಪ್ ಚಹಾ ಕುಡಿದು ನನ್ನನ್ನು ಇನ್ನಷ್ಟು ಕೃತಾರ್ಥನನ್ನಾಗಿ ಮಾಡಿ."

ಮೇಲೆ ಹೋದ ಬಳಿಕ, ನಳಿನೀಕಾಂತರು ಶರತ್‌ಚಂದ್ರರನ್ನು ಗೌರವದಿಂದ ಒಂದು ದೊಡ್ಡ ಕೋಣೆಗೆ ಕರೆದುಕೊಂಡು ಹೋಗಿ ಕೂಡಿಸಿದರು. ಚಹಾಕ್ಕೆ ಮತ್ತು ಊಟಕ್ಕೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಬರುವಂತೆ ಹೇಳಿದರು. ಅವೆಲ್ಲ ಬಂದ ಮೇಲೆ, ಅವುಗಳ ಜೊತೆಗೆ ಒಂದು ಪ್ಯಾಕೆಟ್ ಸಿಗರೇಟ್, ಬೆಂಕಿಪೊಟ್ಟಣ, ಬರೆಯುವ ಪ್ಯಾಡು, ಮತ್ತು ಫೌಂಟೇನ್ ಪೆನ್ನನ್ನು ಅವರ ಎದುರಿಗೆ ತಂದಿಟ್ಟರು. ಆಶ್ಚರ್ಯ ಚಕಿತರಾದ ಶರತ್‌ಚಂದ್ರರು ಕೇಳಿದರು: "ಇದೆಲ್ಲ ಏನು ?"

ನಳಿನೀಕಾಂತರು ಶಾಂತಭಾವದಿಂದ ಉತ್ತರಿಸಿದರು: "ಅಪ್ಪಾ, ಚಹಾ ಕುಡಿದು, ದಯವಿಟ್ಟು ನನ್ನ (ಪತ್ರಿಕೆಗೆ) ಲೇಖನವನ್ನು ಬರೆದುಕೊಡಿ. ಲೇಖನವನ್ನು ಬರೆದುಕೊಡದೆ ಇದ್ದರೆ, ನಿಮಗೆ ಬಿಡುಗಡೆಯೂ ದೊರೆಯುವುದಿಲ್ಲ. ಈ ಕೋಣೆಯ ಬಾಗಿಲನ್ನು ಮುಚ್ಚಿ, ನಾನು ಪಕ್ಕದ ಕೋಣೆಯಲ್ಲಿ ಕಾಯುತ್ತ ಇರುತ್ತೇನೆ. ಲೇಖನ ಪೂರ್ಣವಾದ ಮೇಲೆ, ನನಗೆ ಕೂಗು ಹಾಕಿ. ಬಾಗಿಲನ್ನು ತೆಗೆಯುತ್ತೇನೆ."

ಹೀಗೆಂದು ಹೇಳುತ್ತ ಅವರು ಹೊರ ನಡೆದರು ಹಾಗೂ ಬಾಗಿಲನ್ನು

ಮುಚ್ಚಿಕೊಂಡರು. ವಿಸ್ಮಯ-ವಿಮೂಢರಾದ ಶರತ್‌ಚಂದ್ರರು ತಮ್ಮತ್ತಲೇ ನೋಡುತ್ತಿದ್ದಾರೆಂಬುದನ್ನು ಅವರು ಹೊರಹೋಗುವಾಗ ಗಮನಿಸಿದರು. ಹೊರಗೆ ಬರಲು ಬೇರಾವ ದಾರಿಯೂ ಇರಲಿಲ್ಲ. ಕೊಠಡಿಯಲ್ಲಿ ಬಂಧಿತರಾಗಿ ಶರತ್‌ಚಂದ್ರರು ಲೇಖನ ಬರೆಯುತ್ತಿದ್ದಾರೆ ಎಂಬ ಸುದ್ದಿ ನಾಲ್ಕು ಕಡೆಗಳಲ್ಲಿಯೂ ಹರಡಿಕೊಂಡಿತು. ಮೂರು ಘಂಟೆಯ ಬಳಿಕ ಬಾಗಿಲ ಮೇಲೆ ಸದ್ದಾಯಿತು. ಒಳಗಿನಿಂದ ಶರತ್‌ಚಂದ್ರರು ಕೂಗು ಹಾಕಿದರು. ನಳಿನೀ, ಬಾಗಿಲು ತೆಗೆ ?

ಬಾಗಿಲು ತೆರೆಯಿತು. ಶರತ್‌ಚಂದ್ರರು ಲೇಖನವನ್ನು ಕೈಯಲ್ಲಿ ಹಿಡಿದುಕೊಂಡು ನಿಂತಿದ್ದರು. ಆಗ ಅವರು ಹೀಗೆಂದರು: "ನೀನು ಕೃತಾರ್ಥನಾದೆಯಪ್ಪ. ನಿನ್ನ ಲೇಖನವನ್ನು ತೆಗೆದುಕೊ."

'ಕೆಲವು ದಿನಗಳ ಅಲೆದಾಟದ ಕಥೆ' ಎಂಬುದು ಆ ಲೇಖನದ ಶೀರ್ಷಿಕೆಯಾಗಿತ್ತು. ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಳ್ಳುವ ಸಲುವಾಗಿ ಅವರು ದೆಹಲಿಗೆ ಹೋಗಿದ್ದರಲ್ಲವೆ! ಇದು ಅದರ ಬಗೆಗಿನ ಸ್ವಾರಸ್ಯಪೂರ್ಣ ಪ್ರವಾಸಕಥನವಾಗಿತ್ತು. ಆದರೆ, ಆಶ್ಚರ್ಯದ ಸಂಗತಿಯೆಂದರೆ, ಅವರು ನಳಿನೀಕಾಂತರ ಈ ವರ್ತನೆಯ ಬಗ್ಗೆ ಸ್ವಲ್ಪವೂ ಕೋಪ ಮಾಡಿಕೊಳ್ಳಲಿಲ್ಲ. ಹಿಂದಿನಂತೆಯೇ ನಗುನಗುತ್ತ ನಳಿನೀಕಾಂತರೊಂದಿಗೆ ಅವರು ಶಿವಪುರಕ್ಕೆ ಹಿಂದಿರುಗಿದರು.

ಇದೆಲ್ಲ ಸರಿಯೆ. ಆದರೆ, ಬರಹದಲ್ಲಿನ ದ್ರುತಗತಿ ಅಥವಾ ಶೀಘ್ರತೆ ಎಂಬುದು ಗುಮಾಸ್ತನ ಅರ್ಹತೆಯಾಗುತ್ತದೆಯೇ ಹೊರತು, ಲೇಖಕನ ಅರ್ಹತೆಯಲ್ಲ ಎಂಬ ಮಾತು ಸತ್ಯವೇ ಅಲ್ಲವೆ ?

ಒಬ್ಬ ಹೊಸ ಲೇಖಕಿಗೆ ಶರತ್‌ಚಂದ್ರರು ಇದೇ ಉಪದೇಶವನ್ನು ಕೊಟ್ಟಿದ್ದರು.[1]

## 9

ತಮ್ಮ ಕೃತಿಗಳಿಂದಾಗಿ ಶರತ್‌ಚಂದ್ರರು ವಿದ್ಯಾರ್ಥಿಗಳ ನಡುವೆ ವಿಶೇಷ ಜನಪ್ರಿಯತೆಯನ್ನು ಗಳಿಸಿಕೊಂಡಿದ್ದರು. ಆದರೆ ವಿಶ್ವವಿದ್ಯಾನಿಲಯ ಮತ್ತು ಕಾಲೇಜುಗಳೊಡನೆ ಅವರ ಸಂಬಂಧ ಆಗಿನ್ನೂ ಗಾಢವಾದುದಾಗಿರಲಿಲ್ಲ. ಈ ಸಲ ಖಂಡಿತವಾಗಿಯೂ ಏನನ್ನಾದರೂ ಹೊಸದನ್ನು ಮಾಡಿತೋರಿಸಬೇಕೆಂದು ಪ್ರೆಸಿಡೆನ್ಸಿ ಕಾಲೇಜಿನ ಬಂಗಾಳಿ ಸಾಹಿತ್ಯ ಸಂಘದ ಸಂಚಾಲಕರು ತೀರ್ಮಾನಿಸಿದರು.[2] ಎಲ್ಲರೂ ಶರತ್‌ಚಂದ್ರರ ಸಮಗ್ರ ಸಾಹಿತ್ಯ ಸಂಪುಟವನ್ನು ಓದುವವರೇ ಆಗಿದ್ದಾರೆ. ಆದ್ದರಿಂದ ಶರತ್‌ಚಂದ್ರರನ್ನೇ ಏಕೆ ಕರೆಸಬಾರದು ? ಎಂದು ಯೋಚಿಸಿದರು.

ಅಂತೆಯೇ, ಒಂದು ದಿವಸ ಇಬ್ಬರು ವಿದ್ಯಾರ್ಥಿಗಳು[3] ಶಿವಪುರದ ಅವರ ಮನೆಗೆ ಧಾವಿಸಿದರು. ಹೇಗೋ ಏನೋ ಆ ನಾಯಿಯ ಕಾಟವನ್ನು ತಪ್ಪಿಸಿಕೊಂಡು, ಮನೆಯ ಅಂಗಳಕ್ಕೆ ಬಂದು ನೋಡಿದರೆ, ಈ ಇಕ್ಕಟ್ಟಾದ ಅಂಗಳದಲ್ಲಿ,

---

1. ಆಶಾಲತಾ ಸಿಂಹ ಅವರಿಗೆ - ಆಷಾಢ 1335ರಲ್ಲಿ ಅಂದರೆ, ಜೂನ್-ಜುಲೈ 1928
2. 1923ರಲ್ಲಿ - ಈ ವಾರ್ಷಿಕ ಅಧಿವೇಶನ ನಡೆದದ್ದು 30 ಆಗಸ್ಟ್ 1923ರಲ್ಲಿ.
3. ಇವರಲ್ಲಿ ಜರಾಸಂಧ್ ಅವರೂ ಒಬ್ಬರಾಗಿದ್ದರು. ಮುಂದೆ ಅವರು ಪ್ರಸಿದ್ಧ ಲೇಖಕರಾದರು.

ಮೇಲಂಗಿಯನ್ನೂ ಹಾಕಿಕೊಳ್ಳದೆ. ಗೋಡೆಗೆ ಒರಗಿಕೊಂಡು, ಒಬ್ಬ ವ್ಯಕ್ತಿ ಹುಕ್ಕಾ ಸೇದುತ್ತ ಇದ್ದಾನೆ. ಒಂದು ಸೀರೆಯನ್ನೇ ಲುಂಗಿಯಂತೆ ಸುತ್ತಿಕೊಂಡಿದ್ದಾನೆ. ಜನಿವಾರ ಹಾರದಂತೆ ಕತ್ತಿನಲ್ಲಿ ನೇತಾಡುತ್ತಿದೆ. ಅರ್ಧಂಬರ್ಧ ನರೆತಿರುವ ಕೂದಲು ಭುಜದವರೆಗೂ ಇಳಿಬಿದ್ದಿದೆ. ಇಬ್ಬರೂ ಆತನಿಗೆ ವಂದಿಸಿದರು. ಉತ್ತರದ ರೂಪದಲ್ಲಿ ತೀಕ್ಷ್ಣವಾದ ಎರಡು ಕಣ್ಣುಗಳು ಮೇಲೆದ್ದುವು. ಒಣಧ್ವನಿಯಲ್ಲಿ ಕೇಳಿದರು: "ಎಲ್ಲಿಂದ ಬಂದಿದ್ದೀರಿ ?"

"ಪ್ರೆಸಿಡೆನ್ಸಿ ಕಾಲೇಜಿನಿಂದ."

"ಏನಾಗಬೇಕಿತ್ತು. ?"

ಬಡಪಾಯಿ ವಿದ್ಯಾರ್ಥಿಗಳು ಇಂಥ ಒಣ ವ್ಯವಹಾರವನ್ನು ನಿರೀಕ್ಷಿಸಿರಲಿಲ್ಲ. ಅಂಥದಕ್ಕೆ ಹೇಳಿಸಿದಂಥವರೂ ಅವರಾಗಿರಲಿಲ್ಲ. ಸಾಹಿತ್ಯಕೂಟದ ಅಧ್ಯಕ್ಷರಾಗಲು ಒಪ್ಪಬೇಕೆಂಬ ಕೋರಿಕೆಯನ್ನು ಸಲ್ಲಿಸುವ ಸಲುವಾಗಿ ಬಂದಿದ್ದೇವೆಂದು ತಮ್ಮ ಉದ್ದೇಶವನ್ನು ತಿಳಿಯಪಡಿಸಿದರು. ಶರತ್‌ಚಂದ್ರರು ಕೂಡಲೇ ಆ ಕೋರಿಕೆಯನ್ನು ತಿರಸ್ಕರಿಸಿಬಿಟ್ಟರು: "ನಾನು ಯಾವುದೇ ಕೂಟಗೀಟಗಳಿಗೂ ಹೋಗುವುದಿಲ್ಲ. ನೆನ್ನೆಯೂ ಒಂದು ಶಾಲೆಯ ಜನ ಬಂದಿದ್ದರು. ನಾನು ಒಪ್ಪಲಿಲ್ಲ"

ವಿದ್ಯಾರ್ಥಿಗಳಿಗೆ ಆಘಾತದಂತೆ ಆಯಿತು. "ನಾವು ಯಾವುದೇ ಶಾಲೆಯಿಂದ ಬಂದಿಲ್ಲ. ಪ್ರೆಸಿಡೆನ್ಸಿ ಕಾಲೇಜಿನಿಂದ ಬಂದಿದ್ದೇವೆ" ಎಂದರು.

ಶರತ್‌ಚಂದ್ರರು ಹೇಳಿದರು: "ಎರಡೂ ಒಂದೇ. ಅದು ಪುಟ್ಟ ಶಾಲೆ ಇರಬಹುದು. ನಿಮ್ಮದು ದೊಡ್ಡದಾಗಿರಬಹುದು. ಆದರೆ, ನಾನು ಅಲ್ಲಿಗೆ ಬಂದು ಏನು ಮಾಡಬೇಕಾಗಿದೆ ? ಬಂಗಾಳದಲ್ಲಿ ನನಗೆ ಅಂಥ ಪ್ರಸಿದ್ಧಿಯೇನೂ ದೊರೆತಿಲ್ಲ. ಮೇಲಾಗಿ, ನನಗೆ ಮಾತನಾಡಲೂ ಬರುವುದಿಲ್ಲ. ಒಂದು ಕೆಲಸ ಮಾಡಿ. ಜಲಧರ ಸೇನ್ ಅವರನ್ನು ಕರೆದುಕೊಂಡು ಹೋಗಿ. ಅವರು ಸಾಹಿತಿಯೂ ಹೌದು. ರಾಯ್ ಬಹದ್ದೂರ್ ಪ್ರಶಸ್ತಿಯೂ ಅವರಿಗೆ ಬಂದಿದೆ."

ತಮಗೆ ರಾಯ್ ಬಹದ್ದೂರ್ ಪ್ರಶಸ್ತಿಯಲ್ಲಾಗಲೀ ಸಾಮಾಜಿಕ ಸ್ಥಾನಮಾನಗಳಲ್ಲಾಗಲೀ ಆಸಕ್ತಿ ಇಲ್ಲವೆಂಬುದನ್ನು ಮನವರಿಕೆ ಮಾಡಿಕೊಡಲು ಆ ವಿದ್ಯಾರ್ಥಿಗಳು ಪ್ರಯತ್ನಿಸಿದರು. ನಿಮಗಾಗಿಯೇ ನಿಮ್ಮ ಬಳಿ ಬಂದಿದ್ದೇವೆ ಎಂದು ಅವರು ಹೇಳಿದರು.

ಈಗ ಶರತ್‌ಚಂದ್ರರು ಸ್ವಲ್ಪ ಗಂಭೀರವಾಗಿ ಕೇಳಿದರು: "ನನ್ನ ಪುಸ್ತಕಗಳನ್ನೇನಾದರೂ ಓದಿದ್ದೀರೂ ?"

ಕೂಡಲೇ ಒಬ್ಬ ವಿದ್ಯಾರ್ಥಿ ಹೇಳಿದ: "ನಿಮ್ಮ ಯಾವ ಪುಸ್ತಕವನ್ನು ಬೇಕಾದರೂ ತೆಗೆದುಕೊಳ್ಳಿ. ಎಲ್ಲಿ ಬೇಕಾದರೂ ಕೇಳಿ. ಎಲ್ಲವೂ ನೆನಪಿದೆ."

ಶರತ್‌ಚಂದ್ರರು ಹೇಳಿದರು: " 'ಓದಿದ ಹುಡುಗ' ಎಂದು ನಾನು ಭಾವಿಸಿದ್ದೆ. ಬಂಗಾಳಿ ಭಾಷೆಯನ್ನು ಅಭ್ಯಾಸ ಮಾಡಿಲ್ಲ; 'ಕಾಂಟಿನೆಂಟಲ್ ಲಿಟರೇಚರ್' ಓದುತ್ತಿರಬಹುದು ಎಂದುಕೊಂಡಿದ್ದೆ. ವಿದ್ಯಾವಂತರ ಸಮುದಾಯದಲ್ಲಿ ಇಂದು ಬೆಲೆ ಇರುವುದು ಅದಕ್ಕೇ ಅಲ್ಲವೆ!"

ಆ ಯುಗ 'ಕಾಂಟಿನೆಂಟಲ್ ಸಾಹಿತ್ಯ'ದ ಯುಗವೇ ಆಗಿತ್ತು. ಆದರೆ, ಆ

ವಿದ್ಯಾರ್ಥಿಗಳು ಹೀಗೆಂದರು: "ನಿಮಗೆ ಈ ವಿಚಾರ ಸರಿಯಾಗಿ ಗೊತ್ತಿಲ್ಲ. ತರುಣ ಸಮುದಾಯದಲ್ಲಿ ನಿಮಗೆ ತುಂಬ ಗೌರವದ ಸ್ಥಾನವಿದೆ.

ತಾರುಣ್ಯೋಚಿತ ಉತ್ಸಾಹದಲ್ಲಿ ಅವರು ಇನ್ನೂ ಏನೇನು ಹೇಳುತ್ತ ಹೋದರೋ ಏನೋ. ಶರತ್‌ಚಂದ್ರರು ಸದ್ದಿಲ್ಲದೆ ಅವರ ಮಾತುಗಳನ್ನು ಕೇಳುತ್ತ ಇದ್ದರು. ಅವರು ಸುಮ್ಮನಾದ ಮೇಲೂ ಕೆಲವು ಕ್ಷಣಗಳವರೆಗೆ ಅವರು ಮೌನವಾಗಿದ್ದರು. ಆಮೇಲೆ ಹೇಳಿದರು: "ನನಗಂತೂ ಇದು ಗೊತ್ತಿರಲಿಲ್ಲ. ನನ್ನ ಬಳಿಗೆ ನಿಮ್ಮಂಥ ವಿದ್ಯಾರ್ಥಿಗಳೆಲ್ಲಿ ಬರುತ್ತಾರೆ ? ದೊಡ್ಡ ದೊಡ್ಡವರೆಲ್ಲ ಬರುತ್ತಾರೆ. ಹೀಗೆ ಮಾಡಿ. ಹೀಗೆ ಮಾಡಬೇಡಿ. ಬಂಕಿಮಚಂದ್ರರು ಪಾಪಕಾರ್ಯದ ಕ್ಷಯವನ್ನೂ ಪುಣ್ಯಕಾರ್ಯದ ವಿಜಯಪತಾಕೆಯ ಹಾರಾಟವನ್ನು ಮೆರೆದಿರುವಂತೆಯೇ ನೀವು ಮಾಡಿ. ನೀವಂತೂ ಪಾಪಕಾರ್ಯವನ್ನೇ ಶೌರ್ಯವೆಂಬಂತೆ ಚಿತ್ರಿಸುತ್ತೀರಿ ಎಂದೆಲ್ಲ ಹೇಳುತ್ತಾರೆ."

ಇಂಥ ಮಾರ್ಗದರ್ಶನವನ್ನು ಕೇಳಿದಾಗ ಅವರಿಗೆ ಸಿಟ್ಟು ಬರುತ್ತಿತ್ತು. ತಮ್ಮ ಸ್ವತಂತ್ರ ಚಿಂತನಧಾರೆಗೆ ಅವರು ಯಾವುದೇ ಬಗೆಯ ಬಂಧನವನ್ನು ಬಯಸುತ್ತಿರಲಿಲ್ಲ. ಇತರರಿಗೆ ದಾರಿತೋರುವ ಇಚ್ಛೆಯೂ ಅವರಿಗೆ ಇರಲಿಲ್ಲ. ಆದ್ದರಿಂದಲೇ ಸಂಘ-ಸಂಸ್ಥೆಗಳಿಗೆ ಹೋಗಿ ಭಾಷಣ ಮಾಡುವುದು ಅವರಿಗೆ ಹಿಡಿಸುತ್ತಿರಲಿಲ್ಲ. ಆದರೆ, ಇಂದು ಮಾತುಕತೆಗಳು ನಡೆದ ರೀತಿಯೇ ಬೇರೆಯಾಗಿದ್ದುದರಿಂದ, ಕೆಲವು ಕ್ಷಣಗಳ ಬಳಿಕ, ಮೃದುವಾಗಿ ಹೇಳಿದರು: "ಸರಿ, ಬರುತ್ತೇನೆ. ಅಲ್ಲಿ ನಾನೇನು ಮಾತನಾಡಬೇಕು."

"ನಿಮಗೆ ಇಷ್ಟಬಂದದ್ದನ್ನು ಮಾತನಾಡಿ."

"ಭಾರಿ ಗುಂಪು ಇರುವುದಿಲ್ಲ ತಾನೆ ?"

"ಗುಂಪೆಲ್ಲಿ ಬಂತು ? ನಾವಷ್ಟೇ ಅಲ್ಲಿರುತ್ತೇವೆ."

"ಸ್ವಲ್ಪ ತಾಳಿ. ತಾರೀಖನ್ನು ಗುರುತು ಮಾಡಿಕೊಳ್ಳುತ್ತೇನೆ.

ಗೋಡೆಗೆ ತೂಗುಹಾಕಿದ್ದ ಕ್ಯಾಲೆಂಡರಿನಲ್ಲಿ ತಾರೀಖನ್ನು ಗುರುತು ಹಾಕಿಕೊಂಡ ಬಳಿಕ, ಅವರು ಸಹಜ ಸ್ನೇಹಭಾವದಿಂದ ಮಾತನಾಡತೊಡಗಿದರು. ಬಾಳಿನ ಕಳೆದ ಅವಧಿಯ ಬಗೆಗಿನ ಅದೆಷ್ಟು ಕಥೆಗಳು ಅವರು ಆ ವಿದ್ಯಾರ್ಥಿಗಳಿಗೆ ಹೇಳಿದರೋ ಏನೋ. ಒಬ್ಬ ವಿದ್ಯಾರ್ಥಿ ಕೇಳಿದ: "'ಶ್ರೀಕಾಂತ' ನಿಮ್ಮ ಜೀವನ ಚರಿತ್ರೆಯೇ ಎಂದು ಜನ ಹೇಳುತ್ತಾರೆ. ಇದು ನಿಜವೇ ?"

ಶರತ್‌ಚಂದ್ರರು ನಕ್ಕು ಹೇಳಿದರು: "ನಿನಗೆ ಏನು ಅನ್ನಿಸುತ್ತದೆ ?"

"ನಮಗೇನು ಗೊತ್ತು ? ನಾವು ನಿಮ್ಮನ್ನು ಕೇಳುತ್ತವೆ, ಅಷ್ಟೆ."

ಅವರು ಮತ್ತೆ ಗಂಭೀರವಾಗಿ ಬಿಟ್ಟರು. "ಕಾದಂಬರಿ ಬರೆಯಲು ಕುಳಿತಾಗ ಯಾರೂ ಚಾಚೂತಪ್ಪದಂತೆ ತಮ್ಮ ಕಥೆಯನ್ನೇ ಬರೆಯುವುದಿಲ್ಲ. ಅಂತೆಯೇ ತನ್ನನ್ನು ಹೊರತುಪಡಿಸಿ ಯಾವುದೇ ಸಾರ್ಥಕ ಸೃಷ್ಟಿಯೂ ಸಾಧ್ಯವಾಗುವುದಿಲ್ಲ."

ವಿದ್ಯಾರ್ಥಿ ಮತ್ತೆ ಕೇಳಿದ: "ನಿಮ್ಮ ಸಾಹಿತ್ಯದಲ್ಲಿ ಪತಿತೆಯರು ಬಹುಸಂಖ್ಯೆಯಲ್ಲಿದ್ದಾರೆ. ಇದಕ್ಕೆ ಏನಾದರೂ ವಿಶೇಷ ಕಾರಣವಿದೆಯೆ ?"

ಇದ್ದಕ್ಕಿದ್ದಂತೆ ಅವರು ಅನ್ಯಮನಸ್ಕರಾಗಿಬಿಟ್ಟರು. ಅವರ ತೀಕ್ಷ್ಣ ದೃಷ್ಟಿಯಲ್ಲಿ ವ್ಯಥೆ

ತುಂಬಿಕೊಂಡಿತು. ನಳಿಕೆಯನ್ನು ಬಾಯಿಂದ ಹೊರಕ್ಕೆ ತೆಗೆದು ಕೈಯಲ್ಲಿರಿಸಿ ಕೊಂಡರು. "ವಿಶೇಷ ಕಾರಣವೇನು ಎಂಬುದು ನನಗೆ ಗೊತ್ತಿಲ್ಲ. ನನಗೆ ಅನೇಕರ ಪರಿಚಯವಿದೆ. ನನ್ನ ಕಣ್ಣಾರೆ ಅಂಥವರನ್ನು ನೋಡಿದ್ದೇನೆ. ದೊಡ್ಡದೊಡ್ಡವರಲ್ಲಿ ಕಾಣಬರದಂಥ ವೈಶಿಷ್ಟ್ಯ ಅವರಲ್ಲಿದೆ. ಮಾನವರಲ್ಲಿ ನಾವು ಒಳ್ಳೆಯದೆಂದು ಭಾವಿಸುವ ತ್ಯಾಗ, ದಯೆ, ಧರ್ಮ, ಪ್ರೀತಿ, ಮಮತೆ ಇವೆಲ್ಲ ಅವರಲ್ಲಿ ಇಲ್ಲವೆಂದೇನೂ ಅಲ್ಲ. ಗೌರವದ ಬಗೆಗಿನ ಮೋಹಕ್ಕೆ ಒಳಗಾಗಿ ಈ ಸತ್ಯವನ್ನು ನಾನು ಅಂಗೀಕರಿಸದಿದ್ದರೆ, ಅದಕ್ಕಿಂತಲೂ ಹೆಚ್ಚಿನ ಅಧರ್ಮ ಬೇರೆ ಉಂಟೆ? ಯಾವನೇ ವ್ಯಕ್ತಿಯಾಗಲಿ ಅವನಲ್ಲಿ ದೋಷಗಳು ಮಾತ್ರವೇ ಇರುತ್ತವೆ, ಅವನಲ್ಲಿ ತಿದ್ದಿಕೊಳ್ಳಬಹುದಾದಂಥದೇನೂ ಇರುವುದೇ ಇಲ್ಲ ಎಂದೇನೂ ಇಲ್ಲ."

ಅವರು ಎಲ್ಲಿಯೋ ಮುಳುಗಿ ಹೋದಂತೆ ತೋರುತ್ತಿತ್ತು. ತಮ್ಮೊಂದಿಗೇ ಮಾತನಾಡಿಕೊಳ್ಳುತ್ತಿದ್ದಾರೇನೋ ಎಂಬಂತೆ ಅವರು ಮಾತನಾಡುತ್ತಿದ್ದರು. ಅವರ ಕೋಣೆಯ ಗೋಡೆಯಲ್ಲಿ ಜೊತೆಜೊತೆಯಾಗಿ ಬಂದೂಕ ಮತ್ತು ರುದ್ರಾಕ್ಷಿಯ ಸರಗಳು ಇದ್ದುದನ್ನು ಕಂಡು ಯಾರೋ ಹೇಳಿದ್ದರು: "ಈ ಬಗೆಯ ಸಂಪೂರ್ಣ ಅಸಾಂಗತ್ಯದಲ್ಲಿಯೇ ಶರತ್‌ಚಂದ್ರರ ವ್ಯಕ್ತಿತ್ವ ಮತ್ತು ಸಾಹಿತ್ಯ ಸಾಧನೆಯ ರಹಸ್ಯ ಅಡಗಿದೆ."

ಇಷ್ಟಾಗಿಯೂ ಸಹಜವೆಂಬಂತೆ ಆ ಸಭೆಗೆ ಹೋಗಲು ಅವರಿಗೆ ಸಾಧ್ಯವಾಯಿತೆ? ಹೊತ್ತಿಗೆ ಸರಿಯಾಗಿ 'ಇಲ್ಲ' ಎಂದುಬಿಟ್ಟರು. ಹೇಗೋ ಅನುನಯ-ವಿನಯಗಳನ್ನು ಮೆರೆದು, ಪ್ರಾರ್ಥನೆ ಕೋರಿಕೆಗಳನ್ನು ಸಲ್ಲಿಸಿ, ಕೋಪವನ್ನು ಪ್ರದರ್ಶಿಸಿ ಅವರನ್ನು ಕರೆದುಕೊಂಡು ಹೋಗಲಾಯಿತು. ಅಲ್ಲಿ ಭಾರೀ ಗುಂಪೇ ಸೇರಿತ್ತು. ಅವರನ್ನು ನೋಡಬೇಕೆಂದು ಜನ ಹುಚ್ಚೆದ್ದು ಕುಣಿಯುತ್ತಿದ್ದರು. ಆದರೆ ಅವರನ್ನು ನೋಡಿ ಇವರು ಬೆದರಿಬಿಟ್ಟರು. "ಇದೇನು ಮಾಡಿದ್ದೀರಿ? ಇಷ್ಟೊಂದು ಜನ!" ಎಂದರು.

ಆದರೆ, ಮಾತನಾಡಲು ಒಮ್ಮೆ ಎದ್ದುನಿಂತ ಬಳಿಕ ತಮ್ಮ ಕೃತಿರಚನೆಯ ಪ್ರಕ್ರಿಯೆಯನ್ನೂ ಸಾಹಿತ್ಯದ ಹಿನ್ನೆಲೆಯನ್ನೂ ವಿಸ್ತಾರವಾಗಿ ಚರ್ಚಿಸಿ, ತರುಣರೇ ತಮ್ಮ ಹಿಂದಿರುವ ಶಕ್ತಿ ಎಂಬುದನ್ನು ಒಪ್ಪಿಕೊಂಡರು.

ಅಂದು ತರುಣ ವಿದ್ಯಾರ್ಥಿಗಳಲ್ಲಿ ದೇಶಭಕ್ತಿಯ ಮತ್ತು ಕ್ರಾಂತಿಯ ಭಾವನೆಗಳು ತುಂಬಿ ತುಳುಕುತ್ತಿದ್ದುವು. ಶರತ್‌ಚಂದ್ರರಲ್ಲಿ ಅವರು ಪ್ರಸಿದ್ಧ ಲೇಖಕನೊಬ್ಬನನ್ನು ಮಾತ್ರವೇ ಕಾಣಲಿಲ್ಲ; ತಮಗೆ ಮಾರ್ಗದರ್ಶನ ಮಾಡಬಲ್ಲವರಾಗಿದ್ದಂಥ ಕ್ರಾಂತಿಕಾರಿಯೊಬ್ಬನನ್ನು ಅವರು ಅವರಲ್ಲಿ ಕಂಡುಕೊಂಡರು. ತರುಣರು ಮಾತ್ರವೇ ಅಲ್ಲ. ಆ ವರ್ಷ ಕಲ್ಕತ್ತಾ ವಿಶ್ವವಿದ್ಯಾನಿಲಯವೂ ಅವರಿಗೆ ಜಗದ್ಧಾರಿಣೀ ಚಿನ್ನದ ಪದಕವನ್ನು ನೀಡಿ ಗೌರವಿಸಿತು. ಇದಕ್ಕೆ ಮೊದಲು ರವೀಂದ್ರನಾಥ ಠಾಕೂರರಿಗೆ ಮಾತ್ರ ಈ ಗೌರವ ದೊರೆತಿತ್ತು. ಅವರು ಕೇವಲ ಎಫ್.ಎ. ತರಗತಿಯವರೆಗೆ ಓದಿದ್ದರು. ಆದರೆ, ಒಮ್ಮೆ ವಿಶ್ವವಿದ್ಯಾನಿಲಯ ಅವರಿಗೆ ಬಿ.ಎ. ಪದವಿ ಪರೀಕ್ಷೆಯ ಬಂಗಾಳಿ ಭಾಷೆಯ ಪ್ರಶ್ನೆಪತ್ರಿಕೆಯನ್ನು ಸಿದ್ಧಪಡಿಸಿಕೊಡುವ ಹೊಣೆಯನ್ನು ವಹಿಸಿತ್ತು.

ಈ ಹೊತ್ತಿಗೆ, ಈ ವರ್ಷದ ನೋಬೆಲ್ ಪ್ರಶಸ್ತಿ ಭಾರತೀಯರೊಬ್ಬರಿಗೆ

ದೊರೆಯಲಿದೆಯೆಂಬ ಸುದ್ದಿ ಯೂರೋಪಿನಿಂದ ಬಂದಿತ್ತು. ಡಾ. ಸರ್ ಮೊಹಮ್ಮದ್ ಇಕ್ಬಾಲ್ ಮತ್ತು ಶ್ರೀಮತಿ ಸರೋಜಿನಿ ನಾಯ್ದು ಅವರ ಹೆಸರುಗಳ ಜೊತೆಗೆ ಶರತ್‌ಚಂದ್ರ ಹೆಸರೂ ಜನರ ನಾಲಿಗೆಯ ಮೇಲೆ ನಲಿಯುತ್ತಿತ್ತು. ಈ ವಿಚಾರವನ್ನು ಚರ್ಚಿಸುತ್ತ, ಒಮ್ಮೆ ಇಳಾಚಂದ್ರ ಜೋಶಿಯವರು ಹೀಗೆಂದು ಕೇಳಿದ್ದರು: "ಇದನ್ನೆಲ್ಲ ಕೇಳಿದಾಗ ನಿಮಗೇನನ್ನಿಸುತ್ತದೆ ?"

ಶರತ್‌ಚಂದ್ರರು ಉತ್ತರಿಸಿದ್ದರು: "ಪ್ರಶಸ್ತಿ ದೊರೆತರೆ ಸಂತೋಷ. ದೊರೆಯದಿದ್ದರೂ ಅದರಿಂದ ನನಗೇನೂ ವಿಶೇಷ ದುಃಖವಾಗುವುದಿಲ್ಲ. ಜಗತ್ತಿನಲ್ಲಿರುವ ಎಲ್ಲ ಪ್ರತಿಭಾವಂತ ಲೇಖಕರಿಗೂ ನೋಬೆಲ್ ಪ್ರಶಸ್ತಿ ದೊರೆಯುತ್ತದೆ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆದರೂ, ಈ ಪ್ರಶಸ್ತಿ ಯಾವುದೇ ಲೇಖಕನಿಗೆ ಪ್ರಲೋಭನೆಯನ್ನುಂಟು ಮಾಡುವಂಥದು ಎಂಬ ಮಾತನ್ನು ಒಪ್ಪಲೇಬೇಕು."

"ಯಾವ ಅರ್ಥದಲ್ಲಿ ಅದು ಪ್ರಲೋಭನೆಯನ್ನುಂಟು ಮಾಡುವಂಥದು ?"

"ಈ ಪ್ರಶಸ್ತಿ ದೊರೆತ ವ್ಯಕ್ತಿಯ ಕೀರ್ತಿ ಇಡೀ ಜಗತ್ತಿನಲ್ಲಿ ಹರಡಿಕೊಳ್ಳುತ್ತದೆ. ಇಂಥ ಮಹಾಕೀರ್ತಿಯ ಬಗೆಗಿನ ಪ್ರಲೋಭನೆ ಇಲ್ಲದಿರುವಂಥ ಕವಿ ಅಥವಾ ಲೇಖಕ ಇರುವುದು ಸಾಧ್ಯ ಎಂದು ನಾನು ಒಪ್ಪಲಾರೆ. ನನಗೆ ಇದರ ಬಗೆಗಿನ ಯಾವುದೇ ಪ್ರಲೋಭನೆ ಇಲ್ಲವೆಂದು ನಿಮ್ಮೊಂದಿಗೆ ಹೇಳುವಂಥ ಮಹಾ ಬೂಟಾಟಿಕೆಗಾರನಾಗುವ ಇಚ್ಛೆ ನನಗಿಲ್ಲ."

ಪ್ರಸಿದ್ಧಿ ಹೆಚ್ಚುತ್ತಲೇ ಹೋಯಿತು. ಅದರ ಜೊತೆಗೇ, ಸಭೆ-ಸಮಾರಂಭಗಳಿಗೆ ಆಹ್ವಾನಿಸುವವರ ಒತ್ತಾಯವೂ ಹೆಚ್ಚುತ್ತ ನಡೆಯಿತು. ಮಾರನೆಯ ವರ್ಷ ಅವರು ಬಂಗಾಳೀ ಸಾಹಿತ್ಯ ಪರಿಷತ್ತಿನ ನದಿಯಾ ಶಾಖೆಯ ವಾರ್ಷಿಕ ಅಧಿವೇಶನದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದರು.[1] ಈ ಅಧಿವೇಶನ ಕೃಷ್ಣನಗರದಲ್ಲಿ ನಡೆಯಿತು. ಇಲ್ಲಿ ಅವರು ಲಲಿತಕುಮಾರ ಚಟರ್ಜಿಯವರ ಮನೆಯಲ್ಲಿ ಉಳಿದುಕೊಂಡಿದ್ದರು. ಚಟರ್ಜಿಯವರು ಪ್ರಸಿದ್ಧ ವಕೀಲರಾಗಿದ್ದುದು ಮಾತ್ರವಲ್ಲದೆ, ಸರ್ ಆಶುತೋಷ ಮುಖರ್ಜಿಯವರ ಬೀಗರೂ ಆಗಿದ್ದರು. ನಾಟಕಕಾರ ದ್ವಿಜೇಂದ್ರಲಾಲ್ ರಾಯ್ ಅವರೂ ಕೃಷ್ಣನಗರದ ನಿವಾಸಿಗಳೇ ಆಗಿದ್ದರು. ಆದ್ದರಿಂದ, ದಿಲೀಪ್ ಕುಮಾರ್ ರಾಯ್ ಅವರೂ ಲಲಿತ ಬಾಬೂಗಳ ಮಿತ್ರರಾಗಿದ್ದರು. ಅವರ ಒತ್ತಾಯದಿಂದಾಗಿಯೇ ಶರತ್‌ಚಂದ್ರರು ಈ ಅಧಿವೇಶನದ ಅಧ್ಯಕ್ಷತೆಯನ್ನು ಒಪ್ಪಿಕೊಂಡಿದ್ದರು. ಒಪ್ಪಿಗೆ ದೊರೆತ ಬಳಿಕವೂ, ಅವರು ಬಂದೇ ಬರುತ್ತಾರೆಂಬ ನಂಬಿಕೆ ಅವರಿಗಿರಲಿಲ್ಲ. ಇಷ್ಟಾಗಿಯೂ, ಶರತ್‌ಚಂದ್ರರನ್ನು ಸ್ವಾಗತಿಸುವುದಕ್ಕಾಗಿ ಅವರೆಲ್ಲ ಹೊತ್ತಿಗೆ ಸರಿಯಾಗಿ ರೈಲು ನಿಲ್ದಾಣಕ್ಕೆ ಬಂದಿದ್ದರು. ನಗರದ ಇನ್ನೂ ಹಲವು ಪ್ರತಿಷ್ಠಿತ ವ್ಯಕ್ತಿಗಳು ಅವರೊಡನೆ ಅಲ್ಲಿಗೆ ಬಂದಿದ್ದರು. ರೈಲು ಬಂತು, ಪ್ರಯಾಣಿಕರೆಲ್ಲ ಇಳಿದರು: ಆದರೆ, ಯಾವ ಬೋಗಿಯ ಬಾಗಿಲಲ್ಲೂ ಶರತ್‌ಚಂದ್ರರು ಕಾಣಿಸಲೇ ಇಲ್ಲ. ಒಳಗೆ ಹೋಗಿ ಹುಡುಕಿದಾಗ, ಎರಡನೆಯ ದರ್ಜೆಯ ಬೋಗಿಯೊಂದರಲ್ಲಿ ನಿಶ್ಚಿಂತರಾಗಿ ಹುಕ್ಕಾ ಸೇದುತ್ತ ಕುಳಿತಿದ್ದ

1. 10 ಆಶ್ವಿನ 1331 (26 ಸೆಪ್ಟೆಂಬರ್ 1914)

ಶರತ್‌ಚಂದ್ರರನ್ನು ಕಂಡರು. ಅವರ ಎದುರಿಗೆ ಅವರ ಸೇವಕ ನಿಂತಿದ್ದ. ಇದುವರೆಗೆ ಚಿಂತಾಮಗ್ನರಾಗಿದ್ದವರೆಲ್ಲ ಈಗ ಪ್ರಸನ್ನಚಿತ್ತರಾದರು. ತುಂಬ ಗೌರವದಿಂದ ಅವರನ್ನು ಕೆಳಗೆ ಇಳಿಸಿಕೊಂಡರು ಹಾಗೂ ಯಥೋಚಿತವಾಗಿ ಸ್ವಾಗತ-ಸತ್ಕಾರಗಳು ನಡೆದುವು.

ಲಲಿತ ಬಾಬೂಗಳ ಮನೆಗೂ ತುಂಬ ಜನಗಳು ಬಂದಿದ್ದರು. ಶರತ್‌ಚಂದ್ರರು ಇಡೀ ದಿನ ಹುಕ್ಕಾ ಎಳೆಯುತ್ತಿದ್ದರು. ಚಹ ಕುಡಿಯುತ್ತಿದ್ದರು. ಕಥೆಗಳನ್ನು ಹೇಳಿ ಹೇಳಿ ಎಲ್ಲರನ್ನೂ ನಗಿಸುತ್ತಿದ್ದರು. ಎಲ್ಲರನ್ನೂ ಅವರು ಮಾತುಕತೆಗಳಲ್ಲಿ ತೊಡಗಿಸಿದ್ದರು. ಮಾರನೆಯ ದಿವಸವೂ ಈ ಕಾರ್ಯಕ್ರಮಕ್ಕೆ ಯಾವುದೇ ಅಡೆತಡೆ ಉಂಟಾಗಲಿಲ್ಲ. ತಮ್ಮ ಅಧ್ಯಕ್ಷ ಭಾಷಣವನ್ನು ಅವರು ಸಿದ್ಧಪಡಿಸಿದ್ದಾರೆಯೇ ಇಲ್ಲವೇ ಎಂಬುದನ್ನು ತಿಳಿದುಕೊಳ್ಳಲು ಲಲಿತ ಬಾಬೂಗಳು ಇಚ್ಛಿಸಿದ್ದರು. ಕೊನೆಗೂ ಅವರು ಅದನ್ನು ಸಿದ್ಧಪಡಿಸಿಲ್ಲವೆಂಬುದು ತಿಳಿಯಿತು. ಅವರು ದಿಲೀಪಕುಮಾರ್ ರಾಯ್ ಅವರೊಂದಿಗೆ ಹೀಗೆಂದರು: "ಇವರು ತುಂಬ ನರ್ವಸ್ ಸ್ವಭಾವದ ವ್ಯಕ್ತಿಗಳೆಂಬುದು ನಿಮಗೆ ಗೊತ್ತಿಲ್ಲ. ಗುಂಪನ್ನು ಎದುರಿಸಲಾರರು. ಅಧ್ಯಕ್ಷ ಭಾಷಣವನ್ನು ಸಿದ್ಧಪಡಿಸುವಂತೆ ನೋಡಿಕೊಳ್ಳುವುದು ನಿಮ್ಮ ಜವಾಬ್ದಾರಿ."

ಕಛೇರಿಯಿಂದ ಅವರು ಮೂರು ಘಂಟೆಗೆ ಹಿಂದಿರುಗಿದರು. ಶರತ್‌ಚಂದ್ರರು ಇನ್ನೂ ಗುಂಪು ಹರಟೆಯಲ್ಲಿಯೇ ಮುಳುಗಿದ್ದುದನ್ನು ಕಂಡರು. ಇನ್ನು ಎರಡು ಘಂಟೆಗಳ ಬಳಿಕ ಅಧಿವೇಶನ ಆರಂಭವಾಗಲಿತ್ತು. ಮತ್ತೆ ನೆನಪು ಮಾಡಿಕೊಟ್ಟ ಮೇಲೆ, ಕಾಗದ-ಪೆನ್ನು ಹಿಡಿದುಕೊಂಡು ಒಂದು ಕೋಣೆಯ ಒಳಗೆ ಹೋಗಿ ಕುಳಿತರು. ಲಲಿತ ಬಾಬೂಗಳ ಚಿಂತೆಗೆ ಕೊನೆಯೇ ಇರಲಿಲ್ಲ. ಇಷ್ಟು ಅಲ್ಪ ಕಾಲದಲ್ಲಿ ಏನಾದರೂ ಬರೆಯಲು ಸಾಧ್ಯವಾದೀತೆ ಎಂದು ಅವರು ಯೋಚಿಸುತ್ತಿದ್ದರು. ಆದರೆ, ನಾಲ್ಕೂವರೆ ಘಂಟೆಗೆ ಶರತ್‌ಚಂದ್ರರು ಕೋಣೆಯಿಂದ ಹೊರಗೆ ಬಂದರು. ತಮ್ಮ ಭಾಷಣವನ್ನು ಅವರು ಸಿದ್ಧಪಡಿಸಿದ್ದರು. ಸಮಯಕ್ಕೆ ಸರಿಯಾಗಿ ಅವರು ಕೃಷ್ಣನಗರದ ಕಾಲೇಜಿನ ಸಭಾಂಗಣಕ್ಕೆ ಹೋಗಿ ಸೇರಿದರು. ಸ್ಥಳೀಯ ಗೌರವಾನ್ವಿತ ವ್ಯಕ್ತಿಗಳಿಂದ ಆ ಸಭಾಂಗಣ ತುಂಬಿಹೋಗಿತ್ತು. ವಿಶೇಷವಾಗಿ ತರುಣರು ತುಂಬ ಉತ್ಸಾಹದಲ್ಲಿದ್ದರು. ಶರತ್‌ಚಂದ್ರರು ಮಾತನಾಡಲಾರಂಭಿಸಿದಾಗ ಎಲ್ಲ ಕಡೆಯೂ ನಿಶ್ಶಬ್ದತೆ ಮೂಡಿತು. ಕೊನೆಯವರೆಗೂ ಆ ಶಾಂತ ವಾತಾವರಣ ಉಳಿದಿತ್ತು. ಭಾಷಣವನ್ನು ಕೇಳಿ ಎಲ್ಲರೂ ತುಂಬ ಸಂತುಷ್ಟರಾದರು. ಅಷ್ಟೊಂದು ಅಲ್ಪಕಾಲದಲ್ಲಿ ಇಷ್ಟೊಂದು ಸುಂದರವಾದ, ಸಂಕ್ಷಿಪ್ತವಾದ, ಸಾರಗರ್ಭಿತವಾದ ಭಾಷಣವನ್ನು ಅವರು ಸಿದ್ಧಪಡಿಸಿಬಿಟ್ಟಿದ್ದರು.[1]

ಇದೇ ಸಭೆಯಲ್ಲಿ ದಿಲೀಪ್ ಕುಮಾರ್ ರಾಯ್ ಅವರು 'ಶರತ್ ಸಾಹಿತ್ಯದಲ್ಲಿ ಆದರ್ಶವಾದ' ಎಂಬ ಪ್ರಬಂಧವನ್ನು ಮಂಡಿಸಿದರು ಹಾಗೂ "ಬಾಹಿರೇರ್ ನ ಓ ತೂಮಿ, ಆಮಾದೇರಿ ಆಮಾದೇರಿ ಏಕ್ ಜನ್" ಎಂಬ ನಿರುಪಮಾ ದೇವಿಯವರ ಗೀತೆಯನ್ನು ಹಾಡಿದರು.

---

[1] 'ಸಾಹಿತ್ಯ ಮತ್ತು ನೀತಿ' ಎಂಬ ಶೀರ್ಷಿಕೆಯೊಡನೆ ಇದು 'ಸ್ವದೇಶ ಮತ್ತು ಸಾಹಿತ್ಯ' ಎಂಬ ಗ್ರಂಥದಲ್ಲಿ ಸಂಕಲಿತವಾಗಿದೆ.

ಅಧಿವೇಶನದ ಅನಂತರ ಭೋಜನಕೂಟವನ್ನು ಏರ್ಪಡಿಸಲಾಗಿತ್ತು. ಮಖಮಲ್ಲಿನ ಆಸನದ ಮೇಲೆ ಅಧ್ಯಕ್ಷರನ್ನು ಕೂರಿಸಿ, ಎಲ್ಲರೂ ದಿಲೀಪ್ ಕುಮಾರ್ ರಾಯ್ ಅವರನ್ನು ಹೊಗಳತೊಡಗಿದರು. ಕೆಲವರು ಅವರ ಹಾಡನ್ನು ಪ್ರಶಂಸಿಸಿದರು, ಕೆಲವರು ಅವರ ಅಭಿನಂದನ ಭಾಷಣವನ್ನು ಹೊಗಳಿದರು, ಕೆಲವರು ಅವರ ಆಲಾಪನೆಯನ್ನು ಮೆಚ್ಚಿದರು. ಶರತ್‌ಚಂದ್ರರು ಮಧ್ಯೆ ಪ್ರವೇಶಿಸಿ, ಹೀಗೆಂದರು: "ತಾಳಿ ತಾಳಿ, ಮಂಟೂ ಅವರ ಹಾಡುಗಾರಿಕೆ ಅದ್ಭುತವಾಗಿತ್ತು. ಆಲಾಪನೆ ಅದ್ಭುತವಾಗಿತ್ತು, ಉಚ್ಛ್ವಾಸವೂ ಅದ್ಭುತವಾಗಿತ್ತು, ಎಲ್ಲವೂ ಅದ್ಭುತವಾಗಿತ್ತು. ಆದರೆ ಎಲ್ಲಕ್ಕಿಂತಲೂ ಅದ್ಭುತವಾಗಿದ್ದುದೇನೆಂಬುದು ಯಾರಿಗೂ ಗೊತ್ತಿಲ್ಲ. ಅದು ನನಗೆ ಮಾತ್ರ ಗೊತ್ತು."

ಎಲ್ಲರೂ ಚಕಿತರಾಗಿ ಅವರತ್ತ ನೋಡತೊಡಗಿದರು. ಅವರು ಅದೇ ಗಾಂಭೀರ್ಯದಿಂದ ಹೇಳಿದರು: "ಎಲ್ಲಕ್ಕಿಂತಲೂ ಅದ್ಭುತವಾದುದೆಂದರೆ ಇವರ 'ಈಲಿ', ನಾಗರಿಕ ಭಾಷೆಯಲ್ಲಿ ಇದನ್ನು ಪಿತ್ತಜನಕಾಂಗ ಅಥವಾ ಯಕೃತ್ತು ಎಂದು ಕರೆಯುತ್ತಾರೆ. ಬೃಂದಾವನ, ದೆಹಲಿ, ಆಗ್ರ - ಈ ಎಲ್ಲ ಕಡೆಗಳಲ್ಲೂ ನಾವು ಜೊತೆ ಜೊತೆಯಾಗಿ ಇದ್ದವು. ಏನು ತಿಂದರೂ ನನಗೆ ಅಜೀರ್ಣವಾಗಿ ಬಿಡುತ್ತಿತ್ತು. ಏನು ತಿಂದರೂ, ಅದೆಲ್ಲ ಇವರ ಶಕ್ತಿಯಾಗಿ ಬಿಡುತ್ತಿತ್ತು. ಬೆಲೂನು ಗಾತ್ರದ ಪರೋಠಾಗಳು, ಇಟ್ಟಿಗೆಯ ಗಾತ್ರದ ಹಾಲು ಕೆನೆ, ಬೆಟ್ಟದಷ್ಟು ಪಲಾವ್, ಕೋಫ್ತಾ[1], ಕೋರ್ಮಾ,[2] ಸೀಂಕ್-ಕಬಾಬ್[3] - ಇವೆಲ್ಲ ಎಲ್ಲಿ ಮಾಯವಾಗಿ ಬಿಡುತ್ತಿದ್ದುವೋ ಏನೋ! ಏನೂ ತಿಂದರೂ ಇವರಿಗೆ ಎಂದೂ ಅಜೀರ್ಣವಾಗಿಯೇ ಇಲ್ಲ. ಆದ್ದರಿಂದಲೇ ನಾನು ಹೇಳುತ್ತೇನೆ: ಇವರಲ್ಲಿ ಅತ್ಯಂತ ಅದ್ಭುತವಾದುದು ಹಾಡೂ ಅಲ್ಲ, ಆಲಾಪನೆಯೂ ಅಲ್ಲ, ಸಾಹಿತ್ಯವೂ ಅಲ್ಲ, ಇವರ ಈಲಿಯೇ ಮಹಾದ್ಭುತವಾದ ವಸ್ತು."

ಒಂದು ದಿವಸ ಈ ದಿಲೀಪ್ ಕುಮಾರ್ ರಾಯ್ ಅವರೇ ಉಸ್ತಾದ್ ಅಬ್ದುಲ್ ಕರೀಂ ಅವರ ಸಂಗೀತ ಕಛೇರಿಗೆ ಶರತ್‌ಚಂದ್ರರನ್ನು ಆಹ್ವಾನಿಸಿದ್ದರು. ಅವರು ಕರೆದುಕೊಂಡು ಹೋಗಲು ಬಂದಾಗ, ಶರತ್‌ಚಂದ್ರರು ತುಂಬ ಗಂಭೀರವಾಗಿ ಹೀಗೆಂದರು: "ಒಂದು ಶರತ್ತಿನ ಮೇಲೆ ಬರುತ್ತೇನೆ. ನೀವು ನನಗೆ ಈ ಆಶ್ವಾಸನೆ ಕೊಡಬೇಕು...."

"ಏನು ಆಶ್ವಾಸನೆ ಬೇಕು ?"

"ಅವರು ನಿಲ್ಲಿಸುತ್ತಾರೆ ಎಂಬ ಆಶ್ವಾಸನೆ"

ಇದನ್ನು ಕೇಳಿ ದಿಲೀಪ ಕುಮಾರ್ ರಾಯ್ ಅವರು ಕೇಕೆ ಹಾಕಿ ನಕ್ಕರು. ಹಿಂದೊಮ್ಮೆ ಶರತ್‌ಚಂದ್ರರೂ ತುಂಬ ಚೆನ್ನಾಗಿ ಹಾಡುತ್ತಿದ್ದರು. ಆದರೆ ಶಾಸ್ತ್ರೀಯ ಸಂಗೀತದ ಬಗ್ಗೆ, ಅದರಲ್ಲಿಯೂ ಉಸ್ತಾದರ ಸಂಗೀತ ಕಛೇರಿಗಳ ಬಗ್ಗೆ ಅವರಿಗೆ ಅಷ್ಟಾಗಿ ಒಲವಿರಲಿಲ್ಲ. ಒಂದು ದಿವಸ ಯಾರೋ ಒಬ್ಬ ಗೆಳೆಯನ ಒತ್ತಾಯದ

---

1-3 ಇವೆಲ್ಲ ಮಾಂಸಾಹಾರದ ಬಗೆಗಳು. 'ಕೋಫ್ತಾ' ಎಂದರೆ ಮಾಂಸದ ಸಾರು, 'ಕೋರ್ಮಾ' ಎಂದರೆ ಕರಿದ ಮಾಂಸ, 'ಸೀಂಕ್ ಕಬಾಬ್' ಎಂದರ ಸಲಾಕೆಗಳ ಮೇಲೆ ಸುರಿದ ತೆಳು ಮಾಂಸ - ಅನುವಾದಕನ ಅಡಿಟಿಪ್ಪಣಿ

ಮೇಲೆ ಸಂಗೀತವನ್ನು ಕೇಳಲು ಅವರು ಹೋಗಿದ್ದರು. ಪಕ್ಕಾ ಶಾಸ್ತ್ರೀಯ ರಾಗವನ್ನು ಹಾಡುತ್ತಿದ್ದರು. ಆಲಾಪದೊಡನೆ ಆ ಉಸ್ತಾದರು ಒಂದೇ ವಾಕ್ಯವನ್ನು ಮತ್ತೆ ಮತ್ತೆ ಪುನರಾವರ್ತಿಸುತ್ತಿದ್ದರು: "ಸೈಯಾಂ ತೂ ಕಹಾಂ ಗೈಯಾಂ, ಆ ರೇ ಮೋರೇ ಸೈಯಾಂ ತೂ ಕಹಾಂ ಗೈಯಾಂ ರೇ"[1]

ತುಂಬ ಹೊತ್ತಿನವರೆಗೆ ಆಲಾಪನೆಯನ್ನು ಕೇಳುತ್ತಿದ್ದರು. ಆದರೆ, ಕೊನೆಯವರೆಗೆ ತೆಪ್ಪಗಿರಲು ಅವರಿಗೆ ಸಾಧ್ಯವಾಗಲಿಲ್ಲ. ಹುಕ್ಕಾದ ನಳಿಕೆಯನ್ನು ಬಾಯಿಂದ ಹೊರಕ್ಕೆ ತೆಗೆದು ಅವರು ಜೋರಾಗಿ ಹೇಳಿದರು:"ಅಪ್ಪ, ನಿನ್ನ ಆ ಇನಿಯ ಕಾಶಿಯ ಗೆಳೆಯನ ಮನೆಗೆ ಹೋದ. ಆಮೇಲೆ ಏನಾಯಿತು ಎಂಬುದನ್ನು ಹೇಳು!"[2] ಎಂದರು.

ದಿಲೀಪ್ ಕುಮಾರ್ ಅವರೊಂದಿಗೆ ಆಡಿದ ಮಾತು ಈ ಘಟನೆಗೆ ಸಂಬಂಧಿಸಿತ್ತು. ಅವರು ಎಲ್ಲಿಗೇ ಹೋಗಲಿ. ಎಲ್ಲಿಯೇ ಇರಲಿ. ಆ ಕೂಟಗಳಲ್ಲಿ ನಗೆಯ ಇಂಥ ಚಿಲುಮೆಗಳು ಚಿಮ್ಮಿ ಬರುತ್ತಿದ್ದುವು.

ಸಂಗೀತಕ್ಕೆ ಸಂಬಂಧಿಸಿದ ಹಾಗೆ, ಅದು ನಿಲ್ಲುತ್ತದೆಯೋ ಇಲ್ಲವೋ ಎಂಬ ಮಾತನ್ನು ಅವರು ಆಡಿದ್ದರು. ಆದರೆ, ಅವರ ಹಾಸ್ಯ-ಮನೋವೃತ್ತಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಸ್ವತಃ ಅವರಿಗೇ ನಿಲ್ಲಿಸುವ ಈ ಅಭ್ಯಾಸ ಇರಲೇ ಇಲ್ಲ. ಒಂದು ದಿವಸ 'ಭಾರತ ವರ್ಷ' ಪತ್ರಿಕೆಯ ಕಛೇರಿಯಲ್ಲಿ ಕೆಲಸಗಾರರು ಮಾತ್ರವೇ ಇದ್ದರು. ಮೇಲಧಿಕಾರಿಗಳಾರೂ ಇರಲಿಲ್ಲ. ಶರತ್‌ಚಂದ್ರರು ಆ ಹೊತ್ತಿಗೇ ಅಲ್ಲಿಗೆ ಹೋಗಿದ್ದರು. ಅದು ಅಫೀಮು ಸೇವಿಸುವ ಹೊತ್ತೂ ಆಗಿತ್ತು. ಅದರ ಗುಳಿಗೆಯನ್ನು ಅವರು ಬಾಯಿಗೆ ಹಾಕಿಕೊಂಡ ಒಡನೆಯೇ, ಆ ಕೆಲಸಗಾರರೆಲ್ಲ ಅವರನ್ನೇ ನೋಡತೊಡಗಿದರು. ಆಗ ಅವರೆಂದರು: "ನಿಮಗೂ ಬೇಕೇನು ? ನನ್ನ ಹಾಗೇ ಲೇಖಕನಾಗಬೇಕು ಎಂಬ ಆಸೆ ಇದ್ದರೆ ನೀವೂ ಇದನ್ನು ತಿನ್ನಿ." ಬಗೆಬಗೆಯಾದ ಪ್ರಲೋಭನೆಗಳನ್ನು ಮುಂದೊಡ್ಡಿ ಎಲ್ಲರಿಗೂ ಸ್ವಲ್ಪ-ಸ್ವಲ್ಪ ತಿನ್ನಿಸಿಬಿಟ್ಟರು. "ಲೇಖಕರಾಗಬೇಕು ಎಂಬ ಭ್ರಮೆಗೊಳಗಾಗಿ ನಿಮ್ಮ ಎಲ್ಲ ಕೆಲಸಗಾರರೂ ಅಫೀಮು ತಿಂದು, ಅದರ ಮತ್ತಿನಲ್ಲಿ ತೂರಾಡುತ್ತಿದ್ದಾರೆ, ಈಗಲೇ ಅವರೆಲ್ಲರಿಗೂ ಮಿಠಾಯಿ ಕೊಡಿಸಲು ಏರ್ಪಾಟು ಮಾಡದಿದ್ದರೆ, ನಿಮ್ಮ ಕೈಗೆ ಕೋಳ ಬೀಳುವುದಂತೂ ಖಂಡಿತ" ಎಂದು ಹರಿದಾಸರಿಗೆ ಚೀಟಿ ಬರೆದು ಕಳಿಸಿದರು.

ಹರಿದಾಸರಿಗೆ ಎಲ್ಲವೂ ಅರ್ಥವಾಯಿತು. ಅವರು ಕೂಡಲೇ ಹತ್ತು ರೂಪಾಯಿ ಕಳಿಸಿದರು.

ಒಂದು ವಿಚಾರ ಮಾತ್ರ ಅವರ ಗೆಳೆಯರಿಗೆ ತುಂಬ ಪೇಚಾಟವನ್ನುಂಟು ಮಾಡುತ್ತಿತ್ತು. ಅಕಾರಣವಾಗಿ ಜನರನ್ನು ರೊಚ್ಚಿಗೇಳಿಸುವ ಅವರ ಪ್ರವೃತ್ತಿಯೇ ಆ ಸಂಗತಿಯಾಗಿತ್ತು. ಯಾರ ಬಗ್ಗೆಯಾದರೂ ಸುಳ್ಳು-ಪಳ್ಳು ಏನನ್ನಾದರೂ ಹೇಳಿಬಿಡುತ್ತಿದ್ದರು ಅಥವಾ ಪೇಚಿಗೆ ಸಿಕ್ಕಿಸಲು ಹಾಗೆ-ಹೀಗೆ ಎಂದು ಏನಾದರೂ

---

1 "ಕಹಾಂ ಗಯೇ ಸೈಯಾಂ" (ಎಲ್ಲಿ ಹೋದೆ ನನ್ನ ಇನಿಯ) ಎಂಬುದು ಇದರ ಶುದ್ಧ ರೂಪ. ಆಲಾಪನೆಯಲ್ಲಿ ಇದು ಹೀಗೆ ಎಂಥದೋ ವಿಕೃತ ರೂಪವನ್ನೇ ತಾಳಿಬಿಡುತ್ತದೆ.

2 ಆಲಾಪದ ಧಾಟಿಯಲ್ಲೇ ಆಡಿದ ಮಾತುಗಳು ಹೀಗಿವೆ: "ಅರೇ ತೇರಾ ಸೈಯಾಂ ಕಾಶೀ ಮಿತ್ತರ್ ಕೇ ಘರ್ ಗೈಯಾಂ. ಉಸ್‌ಕೇ ಬಾದ್ ಕ್ಯಾ ಹು ಆ ಬತಾ ಓ ನ!"

ಅಂದುಬಿಡುತ್ತಿದ್ದರು. ಕವಿಗುರು ರವೀಂದ್ರರನ್ನೂ ಅವರು ಬಿಟ್ಟಿರಲಿಲ್ಲ. ಒಂದು ದಿವಸ 'ರಸ-ಚಕ್ರ'ದ ಗೋಷ್ಠಿಯಲ್ಲಿ ಅವರು ತುಂಬ ಗಂಭೀರವಾಗಿ ಒಮ್ಮೆಗೇ ಹೀಗೆಂದುಬಿಟ್ಟರು: "ನಿಮಗೆ ಗೊತ್ತೇನು ? ಈಚೆಗೆ ರಾಮಾನಂದ ಚಟರ್ಜಿ ಮತ್ತು ಗುರುದೇವರ ನಡುವೆ ಮಾತುಕತೆ ನಿಂತುಹೋಗಿದೆ."

"ನಿಜವೆ ? ಏನು ಸಮಾಚಾರ ?"

"ರಾಮಾನಂದರು ಯೂರೋಪಿಗೆ ಹೋಗಿದ್ದರಲ್ಲವೆ ? ಅವರ ಗಡ್ಡವನ್ನು ನೋಡಿ, ಜನ ಅವರನ್ನು ರವೀಂದ್ರನಾಥರೆಂದು ಭಾವಿಸಿಕೊಂಡುಬಿಟ್ಟರು. ಕವಿ ಗುರುಗಳಿಗೆ ಈ ಸುದ್ದಿ ತಿಳಿದಾಗ ಅವರು ರಾಮಾನಂದರಿಗೆ 'ನಿಮ್ಮ ಗಡ್ಡವನ್ನು ತೆಗೆಸಿಬಿಡಿ' ಎಂದು ಹೇಳಿದರು. ಅವರು ಅದಕ್ಕೆ ಒಪ್ಪಲಿಲ್ಲ. ಅಷ್ಟು ದಿವಸಗಳ ಪರಿಶ್ರಮದಿಂದ ಬೆಳೆಸಿದ್ದ ಆ ಗಡ್ಡವನ್ನು ತೆಗೆಸಲು ಅವರು ತಾನೆ ಹೇಗೆ ಒಪ್ಪಿಯಾರು ? ಗಡ್ಡ ತೆಗೆಸಲು ಇಷ್ಟವಿಲ್ಲದಿದ್ದರೆ, ಅದಕ್ಕೆ ಗೋರಂಟಿ ಬಣ್ಣವನ್ನಾದರೂ ಹಾಕಿಸಿಕೊಳ್ಳಿ ಎಂದು ಕವಿ ಗುರುಗಳು ಸೂಚನೆ ಕೊಟ್ಟರು. ಇದನ್ನು ಕೇಳಿ ರಾಮಾನಂದ ಬಾಬೂಗಳಿಗೆ ತುಂಬ ಸಿಟ್ಟು ಬಂದಿತು. 'ನಾನೇನು ಮುಸಲ್ಮಾನನೇ ?' ಎಂದು ಅವರು ಕೇಳಿದರು.

"ಸರಿ, ಆಗಿನಿಂದ ಅವರ ನಡುವೆ ಮಾತುಕತೆಯೇ ಇಲ್ಲ."

'ರಸಚಕ್ರ'ದ ಬಹುಪಾಲು ಸದಸ್ಯರಿಗೆ ಶರತ್‌ಚಂದ್ರರ ಈ ಬೀರ್‌ಬಲೀಯ[1] ಸ್ವಭಾವ ಚೆನ್ನಾಗಿ ಗೊತ್ತಿತ್ತು. ಅವರೆಲ್ಲ ಚೆನ್ನಾಗಿ ನಕ್ಕರು. ಆದರೆ, ಅವರ ಈ ಸ್ವಭಾವದ ಪರಿಚಯ ಇಲ್ಲದಿದ್ದವರು ಅವರ ಬಗ್ಗೆ ತಪ್ಪು ಭಾವನೆಯನ್ನು ಬೆಳಸಿಕೊಳ್ಳುತ್ತಿದ್ದ ರೆಂಬುದೂ ನಿಜ. ಅವರ ವಿರೋಧಿಗಳಾಗಿದ್ದವರು ಇಂಥ ಪ್ರಸಂಗಗಳ ಅನುಚಿತ ಬಳಕೆಯನ್ನೂ ಮಾಡಿಕೊಳ್ಳುತ್ತಿದ್ದರು. ಆದರೆ, ಇದಾವುದರ ಚಿಂತೆಯೂ ಅವರಿಗಿರಲಿಲ್ಲ. ಗೆಳೆಯರು ಇದನ್ನೂ ಟೀಕಿಸುತ್ತಿದ್ದರೆ, ಅವರು ನಗುತ್ತ ಇರುತ್ತಿದ್ದರು. ಮನೋಲ್ಲಾಸಕ್ಕಾಗಿ ಅವರು ಇದನ್ನೆಲ್ಲ ಮಾಡುತ್ತಿದ್ದರು. ಆ ಜನರೇ ಬಂದು ನೋಡಿದ್ದರೆ, ಅವರ ಕಣ್ಣುಗಳಲ್ಲಿ ಈ ತುಂಟತನ ಮಿನುಗುತ್ತಿದ್ದುದನ್ನು ಕಾಣುತ್ತಿದ್ದರು. ಸತ್ಯ ಹೊರ ಬಂದಾಗ, ಸಂಬಂಧಪಟ್ಟ ವ್ಯಕ್ತಿಗಳೂ ಮನಸಾರೆ ನಗುತ್ತಿದ್ದರು. ಆದರೆ, ವ್ಯಕ್ತಿ ತನ್ನ ದೌರ್ಬಲ್ಯಗಳೊಂದಿಗೇ ಬೆಳೆಯುತ್ತ ಹೋಗುತ್ತಾನೆ, ಅವುಗಳಿಂದ ಬೇರೆಯಾಗಿ ನಿಂತು ಅಲ್ಲ ಎಂಬುದನ್ನು ಅರ್ಥಮಾಡಿ ಕೊಳ್ಳುವಷ್ಟರ ಮಟ್ಟಿಗೆ ಎಲ್ಲರೂ ಉದಾರ ಮನೋಭಾವದವರಾಗಿರುವುದಿಲ್ಲ.

ಇದೇ ವರ್ಷ[2] ಮುಂಶೀಗಂಜ್‌ನಲ್ಲಿ ಬಂಗಾಳಿ ಸಾಹಿತ್ಯ ಸಮ್ಮೇಳನದ ಅಧಿವೇಶನ ನಡೆಯಿತು. ಅದರ ಸಾಹಿತ್ಯ ವಿಭಾಗಕ್ಕೆ ಶರತ್‌ಚಂದ್ರರು ಅಧ್ಯಕ್ಷರಾಗಿದ್ದರು. ಆಗ[3] ಅವರು ಢಾಕಾ ನಗರಕ್ಕೂ ಹೋಗಿ, ತಮ್ಮ ನೆಚ್ಚಿನ ಗೆಳೆಯರೂ ಕಾದಂಬರಿಕಾರರೂ ಆಗಿದ್ದ ಚಾರುಚಂದ್ರ ಬಂದೋಪಾಧ್ಯಾಯರ ಮನೆಯಲ್ಲಿ ತಂಗಿದ್ದರು. ಅಲ್ಲಿಯ

---

1. ಅಕ್ಬರನ ಆಸ್ಥಾನದ ಹಾಸ್ಯಪ್ರವೃತ್ತಿಯ ಮೇಧಾವಿ ಸಚಿವ. ಅನುವಾದಕನ ಅಡಿಟಿಪ್ಪಣಿ.
2. ಏಪ್ರಿಲ್ 10-11-1925
3. ವಿಶ್ವಭಾರತಿ ಸಮ್ಮಿಲನೀ ಅವರನ್ನು ಅಭಿನಂದಿಸಿತು.

ಡೆಪ್ಯುಟಿ ಮ್ಯಾಜಿಸ್ಟ್ರೇಟರಾಗಿದ್ದ ಸುರೇಶ ಚಂದ್ರ ಘಟಕ್ ಅವರು ಸ್ವತಃ ಸಾಹಿತಿಗಳಾಗಿದ್ದರು. ಅವರು ಶರತ್‌ಚಂದ್ರರನ್ನು ತಮ್ಮ ಮನೆಗೆ ಕರೆದೊಯ್ಯ ಬಯಸಿದ್ದರು. ಢಾಕಾ ವಿಶ್ವವಿದ್ಯಾನಿಲಯದ ಇತಿಹಾಸ ಅಧ್ಯಾಪಕರಾಗಿದ್ದ ಡಾ. ರಮೇಶಚಂದ್ರ ಮಜೂಮದಾರ್ ಅವರು ಮುಂಶೀಗಂಜ್‌ನಲ್ಲಿಯೇ ಅವರಿಗೆ ಆಹ್ವಾನ ನೀಡಿ, ತಮ್ಮ ಮನೆಯಲ್ಲಿ ಬಂದು ಉಳಿದುಕೊಳ್ಳುವಂತೆ ಕೋರಿದ್ದರು. ಆದರೆ, ಶರತ್‌ಚಂದ್ರರು ಎಲ್ಲರಿಗೂ "ನಾನು ನನ್ನ ಮನೆ ಬಿಟ್ಟು ಬೇರೆಲ್ಲಿಯೂ ಹೋಗಲಾರೆ" ಎಂದೇ ಹೇಳಿದ್ದರು.

"ನಿಮ್ಮ ಮನೆ ಇಲ್ಲಿದೆಯೆ ?"

"ಹೌದು. ಚಾರುಚಂದ್ರರು ನನ್ನ ಬಾಲ್ಯದ ಗೆಳೆಯರು. ಅವರ ಮನೆಯೇ ನನ್ನ ಮನೆ. ಅವರ ಪತ್ನಿ ನನ್ನನ್ನು ನೋಡಿಕೊಳ್ಳುವಷ್ಟು ಚೆನ್ನಾಗಿ ನೀವು ಯಾರೂ ನನ್ನನ್ನು ನೋಡಿಕೊಳ್ಳಲಾರಿರಿ."

ಅವರು ಯಾರ ಬಳಿಯೂ ಉಳಿದುಕೊಳ್ಳಲಿಲ್ಲ. ಆದರೆ, ತಮ್ಮ ಸರದಿ ಬಂದಾಗಲಾದರೂ, ನಮ್ಮ ಮನೆಯನ್ನು ನಿಮ್ಮ ಪಾದಧೂಳಿಯಿಂದ ಪಾವನ ಮಾಡಬೇಕೆಂಬ ಆಹ್ವಾನಗಳನ್ನು ಅವರು ಅಂಗೀಕರಿಸಲೇಬೇಕಾಯಿತು. ಮಜೂಮದಾರರ ಮನೆಯಲ್ಲಿ ಗೋಷ್ಠಿ ಸೇರಿದಾಗ, ಅದೆಷ್ಟು ಕಥೆಗಳನ್ನು ಹೇಳಿದರೋ, ಅದೆಷ್ಟು ಬಟ್ಟಲು ಚಹಾ ಕುಡಿದರೋ, ಅದೆಷ್ಟು ಹೊಗೆಸೊಪ್ಪು ಜಗಿದರೋ - ಇದರ ಲೆಕ್ಕವನ್ನು ಬಲ್ಲವರು ಯಾರು, ಇಟ್ಟವರು ಯಾರು ? ಸುರೇಶಚಂದ್ರರ ಮನೆಯ ಆಹ್ವಾನವಿದ್ದ ರಾತ್ರಿಯೇ ಅಪೂರ್ಣಚಂದ್ರ ಕುಮಾರರ ಮನೆಗೂ ಹೋಗಿ ಬರಬೇಕಾಗಿತ್ತು. ಮಾತಿನ ಬಲ್ಲಿದ ಶರತ್‌ಚಂದ್ರರಿಗೆ ಇದೆಲ್ಲ ಹೇಗೆ ತಾನೆ ನೆನಪಿದ್ದೀತು ! ಬಹಳ ಹೊತ್ತಿನವರೆಗೆ ಇವರ ದಾರಿ ಕಾಯುತ್ತಿದ್ದು, ಕೊನೆಗೆ ರಾತ್ರಿ ಹನ್ನೊಂದು ಘಂಟೆಗೆ ಸ್ವತಃ ಕುಮಾರರೇ ಅವರನ್ನು ಕರೆದೊಯ್ಯಲು ಬಂದರು. ಶರತ್‌ಚಂದ್ರರೆಂದರು: "ನನ್ನೊಡನೆ ಮಾತನಾಡುವುದು ಜನರಿಗೆ ಆನಂದವನ್ನು ತಂದುಕೊಡುವುದಾದಲ್ಲಿ ನಾನೇಕೆ ಜಿಪುಣನಾಗಬೇಕು ?"

ಅವರ ಮನೆಯಿಂದ ರಾತ್ರಿ ಎರಡೂವರೆ ಘಂಟೆಗೆ ಹಿಂದಿರುಗಿದಾಗ ಚಾರುಚಂದ್ರರು ಹೇಳಿದರು: "ಶರತ್, ಸಮಯದ ಬಗ್ಗೆ ನೀನು ಸ್ವಲ್ಪ ಎಚ್ಚರದಿಂದಿರಬೇಕು."

ಕೂಡಲೇ ಅವರಿಗೆ ಈ ಉತ್ತರ ದೊರೆಯಿತು: "ನೋಡು ಚಾರು, ಮನುಷ್ಯ ಗಡಿಯಾರದ ಅಡಿಯಾಳಾಗಿರಬೇಕೆಂದು ನಾನೆಂದೂ ಬಯಸಲಾರೆ. ದಾಸ್ಯವನ್ನು ನೀನು ತಿರಸ್ಕಾರದ ದೃಷ್ಟಿಯಿಂದ ನೋಡುತ್ತೀಯೆ. ಇಷ್ಟಾಗಿಯೂ, ನಾನು ಗಡಿಯಾರದ ದಾಸನಾಗಿರಬೇಕೆಂದು ಹೇಳುತ್ತೀಯಲ್ಲ. ನಾನು ಹಾಗೆ ಮಾಡಲಾರೆ."

ಅಲೆಮಾರಿತನದಿಂದೇನೋ ಅವರು ಮುಕ್ತರಾಗಿದ್ದರು. ಆದರೆ, ಅದು ಅವರ ಬಾಳಿನ ಮೇಲೆ ಒತ್ತಿದ್ದ ಮುದ್ರೆಯಿಂದ ಅವರೆಂದೂ ಮುಕ್ತರಾಗಲಾರದೆ ಹೋದರು. ಸಭ್ಯ ಸಮಾಜವೆಂದು ಹೆಸರು ಹೊತ್ತಿದ್ದಂಥ ಸಮಾಜದ ಸುಸಂಸ್ಕೃತ ವ್ಯಕ್ತಿ ಅವರೆಂದೂ ಆಗಲಾರದೆ ಹೋದರು. ಬಂಗಾಳಿ ಸಾಹಿತ್ಯದ ಮಹಾ ಕಾದಂಬರಿಕಾರರೆಂದು ಖ್ಯಾತರೂ ಗೌರವಾರ್ಹರೂ ಆಗಿದ್ದ ಸಮಯದಲ್ಲಿಯೂ,

ತಮ್ಮನ್ನು ಅಭಿಜಾತ ವರ್ಗದ ವ್ಯಕ್ತಿಯೆಂದು ಪರಿಚಯಿಸಿಕೊಳ್ಳುವ ಪ್ರಯತ್ನವನ್ನು ಅವರೆಂದೂ ಮಾಡಲಿಲ್ಲ. ಅವರು ಹೀಗೆಂದೇ ಹೇಳಿಕೊಂಡರು: "ನಾನು ತುಂಬ ಓದಿದವನೂ ಅಲ್ಲ; ನನ್ನ ಜ್ಞಾನವೂ ಅಷ್ಟು ಹೆಚ್ಚಿನದೇನೂ ಅಲ್ಲ. ನನ್ನ ಕೃತಿಗಳನ್ನು ಜನರು ಓದುತ್ತಿದ್ದರೆ, ಅದಕ್ಕೆ ಇದೇ ಕಾರಣ: ನಾನು ಕಣ್ಣಾರೆ ಕಂಡಿದ್ದನ್ನು ಹಾಗೂ ಮನಸಾರೆ ಅನುಭವಿಸಿದ್ದನ್ನು ಮಾತ್ರವೇ ನನ್ನ ಕೃತಿಗಳಲ್ಲಿ ಚಿತ್ರಿಸಿದ್ದೇನೆ." ಅಭಿಜಾತ ವರ್ಗವನ್ನು ವಿರೋಧಿಸುವುದರಲ್ಲಿ ಅವರು ವ್ರಾತ್ಯರೇ ಆಗಿದ್ದರು. ಕೆಲವು ವರ್ಷಗಳ ಹಿಂದೆ[1] ಪ್ರಮಥ ಚೌಧರಿಯವರು ತಮ್ಮ ಪುಸ್ತಕವನ್ನು ಅವರಿಗೆ ಅರ್ಪಿಸಿದ್ದಾಗ, ಅವರು ಇವೇ ಮಾತುಗಳನ್ನು ಹೇಳಿದ್ದರು: "ನನ್ನಂಥ ಕೆಟ್ಟ ನಡತೆಯ ವ್ಯಕ್ತಿಗೆ ತಮ್ಮ ಪುಸ್ತಕವನ್ನು ಅರ್ಪಿಸಿದ್ದಕ್ಕಾಗಿ ಸಮಾಜ ಚೌಧರಿಯವರನ್ನೆಂದೂ ಕ್ಷಮಿಸುವುದಿಲ್ಲ. ಅವರಾದರೋ ಮಹಾವಿದ್ವಾಂಸರು, ಸಮಾಜದ ಮುಖ್ಯಸ್ಥರು; ನಾನಾದರೋ ಶರತ್ ಚಾಟುಜ್ಜೆ."

ಆದರೆ, ಈ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಅವರು ಮಾಡಿದ ಭಾಷಣ ಅಷ್ಟೇ ಗಂಭೀರವೂ ಮಹತ್ವಪೂರ್ಣವಾದುದೂ ಆಗಿದೆ. ಅದರಲ್ಲಿ ಅವರು ತಮ್ಮ ಸಾಹಿತ್ಯಕ ಧೋರಣೆಗಳನ್ನೂ, ತಮ್ಮ ಸಾಹಿತ್ಯದ ಆಶಯವೇನೆಂಬುದನ್ನೂ ಸ್ಪಷ್ಟಪಡಿಸಿದ್ದಾರೆ. ಸಾಹಿತ್ಯದಲ್ಲಿ ಯಾವುದು ಕಲೆ ಎನಿಸಿಕೊಳ್ಳುತ್ತದೆ, ದುರ್ನೀತಿ ಎನಿಸಿಕೊಳ್ಳುತ್ತದೆ ಎಂಬುದನ್ನು ವಿಶದವಾಗಿ ವ್ಯಾಖ್ಯಾನಮಾಡುತ್ತ ಅವರು ಹೀಗೆಂದಿದ್ದಾರೆ:[2] "ಸಾಹಿತ್ಯದ ಸುಶಿಕ್ಷೆ, ನೀತಿ ಮತ್ತು ಲಾಭಾಲಾಭದ ಮುಖಗಳನ್ನೇ ನಾನು ಇದುವರೆಗೂ ಪ್ರತಿಪಾದಿಸುತ್ತ ಬಂದಿದ್ದೇನೆ. ಆದರೆ, ಇದಕ್ಕಿಂತಲೂ ದೊಡ್ಡದಾದ ವಸ್ತುವಿನ ಬಗೆಗೆ ಅದರ ಆನಂದ, ಅದರ ಸೌಂದರ್ಯಗಳ ಬಗಗೆ-ಆಲೋಚಿಸಲು, ಅನೇಕ ಕಾರಣಗಳಿಂದಾಗಿ, ನನಗೆ ಕಾಲಾವಕಾಶ ದೊರೆಯದೆ ಹೋಗಿದೆ. ಆನಂದ ಮತ್ತು ಸೌಂದರ್ಯ ಕೇವಲ ಹೊರಗಿನ ವಸ್ತುಗಳಲ್ಲ ಎಂಬ ಒಂದು ಸಂಗತಿಯನ್ನು ಹೇಳಿಬಿಡಬಯಸುತ್ತೇನೆ. ಇವು ಕೇವಲ ಸೃಷ್ಟಿಯ ದೋಷಗಳು, ಅವನ್ನು ಗ್ರಹಿಸುವ ಅಸಾಮರ್ಥ್ಯವಲ್ಲ - ಎಂಬ ಮಾತು ಯಾವ ರೀತಿಯಲ್ಲೂ ನಿಜವಲ್ಲ, ಇಂದು ಇದು ಅಸುಂದರವೆಂದು, ಆನಂದಹೀನವೆಂದು ತೋರಬಹುದು. ಆದರೆ ಇದೇ ಈ ಬಗೆಗಿನ ಕೊನೆಯ ಮಾತಲ್ಲ. ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ಈ ಸತ್ಯವನ್ನು ನೆನಪಿಟ್ಟುಕೊಳ್ಳುವುದು ಅಗತ್ಯ.

"ಇನ್ನೊಂದು ಮಾತನ್ನು ಹೇಳಿಯೇ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ. ಇಂಗ್ಲಿಷ್‌ನಲ್ಲಿ 'ಐಡಿಯಲಿಸ್ಟಿಕ್ (ಆದರ್ಶವಾದಿ) ಮತ್ತು 'ರಿಯಲಿಸ್ಟಿಕ್' (ವಾಸ್ತವವಾದಿ) ಎಂಬ ಎರಡು ಶಬ್ದಗಳಿವೆ. ಆಧುನಿಕ ಬಂಗಾಳಿ ಸಾಹಿತ್ಯ ತುಂಬ ವಾಸ್ತವವಾದಿಯಾಗಿಬಿಟ್ಟಿದೆ ಎಂಬ ಆರೋಪವನ್ನು ಈಚೆಗೆ ಕೆಲವರು ಮಾಡಿದ್ದಾರೆ. ಒಂದನ್ನು ಬಿಟ್ಟು ಇನ್ನೊಂದಿರುವುದಿಲ್ಲ ಎಂದು ನಾನು ಹೇಳಬಯಸುತ್ತೇನೆ-ಕನಿಷ್ಠ ಪಕ್ಷ ಕಾದಂಬರಿಯಲ್ಲಿ ಹೀಗಾಗುವುದಿಲ್ಲ. ಯಾರು, ಎಲ್ಲಿ, ಎಷ್ಟು ಬಾಗಿ ನಡೆಯುತ್ತಾರೆ ಎಂಬುದು ಸಾಹಿತ್ಯಕ ಶಕ್ತಿ ಮತ್ತು ಅಭಿರುಚಿಯನ್ನು

1. 1919ರಲ್ಲಿ 'ಆಹುತಿ' ಎಂಬ ಕಥಾಸಂಗ್ರಹವನ್ನು ಇವರಿಗೆ ಅರ್ಪಿಸಿದ್ದರು.
2. ಸುದೇಶ ಮತ್ತು ಸಾಹಿತ್ಯ' ಎಂಬ ಗ್ರಂಥದಲ್ಲಿ ಸಂಕಲಿತವಾಗಿದೆ.

ಅವಲಂಬಿಸಿರುತ್ತದೆ. ಹಿಂದಿನಂತೆ, ರಾಜರು ಮಹಾರಾಜರ ಮತ್ತು ಜಮೀನುದಾರರ ದುಃಖ-ದೈನ್ಯ-ದ್ವಂದ್ವ ವಿಹೀನ ಜೀವನದ ಇತಿಹಾಸದ ಬಗ್ಗೆ ಆಧುನಿಕ ಸಾಹಿತ್ಯದ ಓದುಗ ಆಸಕ್ತನಾಗಿಲ್ಲ ಎಂಬ ದೂರೂ ಕೇಳಿಬರುತ್ತಿದೆ. ಅದು ಆತನ ಮನಸ್ಸಿಗೆ ಹಿಡಿಸುವುದಿಲ್ಲ; ಅವನು ಇನ್ನೂ ಕೆಳಕ್ಕೆ ಇಳಿದು ಬಿಟ್ಟಿದ್ದಾನೆ ಎಂದೆಲ್ಲ ಹೇಳಲಾಗಿದೆ. ಇದು ವಿಷಾದದ ಸಂಗತಿಯೇನೂ ಅಲ್ಲ. ಆದರೆ, ಅಭಿಶಪ್ತವಾಗಿರುವ ಹಾಗೂ ಎಲ್ಲ ದುಃಖಗಳ ಬೀಡಾಗಿರುವ ಈ ನಾಡಿನಲ್ಲಿ, ತನ್ನ ಅಭಿಮಾನವನ್ನು ಬದಿಗಿರಿಸಿ, ರಷ್ಯನ್ ಸಾಹಿತ್ಯದಂತೆ, ಅವನು ಸಮಾಜದ ಇನ್ನೂ ಕೆಳಗಿನ ಹಂತಕ್ಕೆ ಇಳಿದು, ಆ ಜನರ ದುಃಖ ಮತ್ತು ವೇದನೆಗಳ ನಡುವೆ ನಿಂತ ದಿವಸ ಈ ಸಾಹಿತ್ಯ ಸಾಧನೆ ಸ್ವದೇಶದಲ್ಲಿ ಮಾತ್ರವಲ್ಲದೆ, ವಿಶ್ವಸಾಹಿತ್ಯದಲ್ಲಿಯೂ ತನ್ನ ಸ್ಥಾನವನ್ನು ಪಡೆದುಕೊಳ್ಳುತ್ತದೆ."

ಆದರಿಸುವ ಹಾಗೂ ಅವರ ಉಪಸ್ಥಿತಿಗಾಗಿ ಕೋರುವ ಈ ಪರಂಪರೆ ಮೊದಲಾದುದು, ಮುಂದೆ ಅವಿಚ್ಛಿನ್ನವಾಗಿ ಮುಂದುವರಿಯಿತು. ಅವರಲ್ಲಿ ಅನೇಕ ದೊಡ್ಡ ಗುಣಗಳಿದ್ದುವು. ಆದರೂ ಅವರ ದೌರ್ಬಲ್ಯಗಳು - ಕಡಿಮೆಯಾಗಿಯೇನೂ ಇರಲಿಲ್ಲ - ಇವುಗಳು ಅವರ ಕಾರ್ಯವನ್ನೇ ಹಾಳುಗೆಡಹ ಬಹುದೆಂಬ ಭಯ ಯಾವಾಗಲೂ ಇದ್ದೇ ಇರುತ್ತಿತ್ತು. ಆದರೆ, ಈ ಭಯ ನಿರಾಧಾರವಾಗಿತ್ತು. ವಿಧಿ ಅವರಿಗೆ ಇದೇ ಹಾದಿಯನ್ನು ಗೊತ್ತುಪಡಿಸಿತ್ತು. ಆ ಹಾದಿಯಲ್ಲಿ ಅವರು ಸತತವಾಗಿ ತಪ್ಪನ್ನೆಸಗುತ್ತ ಹೋರಾಡುತ್ತ ಮುಂದುವರಿಯುತ್ತಿದ್ದರು. ಅವರು ಬಡತನದಿಂದ ಮೇಲೆದ್ದು ಬಂದಿದ್ದವರು. ಅವರಿಗೆ ದೊರೆತಿದ್ದ ವಿದ್ಯಾಭ್ಯಾಸವೂ ಕಡಿಮೆಯೆ. ಆದರೆ, ಬಾಳೆಂಬ ಪಾಠಶಾಲೆಯಲ್ಲಿ ಅವರು ಗಳಿಸಿದ್ದ ಅನುಭವದಿಂದಾಗಿ, ಮಾನವರನ್ನು ಅರ್ಥಮಾಡಿಕೊಳ್ಳುವ ಶಕ್ತಿ ಅವರಿಗೆ ಲಭ್ಯವಾಗಿತ್ತು. ಅವರ ವ್ಯವಹಾರವೇನೋ ಇಂದು ಅವ್ಯವಸ್ಥಿತವಾಗಿಯೇ ಇತ್ತು. ಈ ಅವ್ಯವಸ್ಥೆ ಅನೇಕ ವೇಳೆ ಅವರನ್ನು ತೊಂದರೆಗೆ ಸಿಲುಕಿಸುತ್ತಿತ್ತು. ಆದರೆ, ಇದು ಬೌದ್ಧಿಕ ಸಮತೋಲನವನ್ನು ಕಳೆದುಕೊಳ್ಳಲು ಅವಕಾಶಮಾಡಿಕೊಡುತ್ತಿರಲಿಲ್ಲ. ಮಾನವರನ್ನು ಅರ್ಥ ಮಾಡಿಕೊಂಡಿದ್ದುದಕ್ಕಿಂತಲೂ ಹೆಚ್ಚಾಗಿ, ಮಾನವರನ್ನು ಅವರು ಪ್ರೀತಿಸುತ್ತಿದ್ದರು.

## 10

ಯಾವುದಾದರೂ ಒಂದು ಪತ್ರಿಕೆಯ ಸಂಪಾದಕನಾಗಿ ಕಾರ್ಯನಿರ್ವಹಿಸಬೇಕೆಂಬ ಆಸೆ ಒಂದಲ್ಲ ಒಂದು ರೂಪದಲ್ಲಿ ಅವರ ಹೃದಯಾಂತರಾಳದಲ್ಲಿ ಸದಾ ನೆಲೆಸಿತ್ತು. ಬಾಲ್ಯದಲ್ಲಿಯೂ ಅವರು ಈ ಆಟವನ್ನು ಆಡಿದ್ದರು. ಆದರೆ, ಈ ಕ್ಷೇತ್ರದಲ್ಲಿ 'ಯಮುನಾ'ಗೆ ದೊರೆತದ್ದಕ್ಕಿಂತಲೂ ಹೆಚ್ಚಿನ ಯಶಸ್ಸು ಅವರಿಗೆ ಮತ್ತೆ ಯಾವಾಗಲೂ ದೊರೆಯಲಿಲ್ಲ. ತಮ್ಮ ಗೆಳೆಯ ನಿರ್ಮಲ ಚಂದ್ರ 'ಚಂದ್ರ' ಅವರೊಂದಿಗೆ ಅವರು 'ರೂಪ ಮತ್ತು ರಂಗ್'[1] ಪತ್ರಿಕೆಯ ಸಂಪಾದನ ಕಾರ್ಯವನ್ನು ಸ್ವಲ್ಪಕಾಲ ನಿರ್ವಹಿಸಿದರು. 'ಭಾರತ ಲಕ್ಷ್ಮೀ' ಪತ್ರಿಕೆಯ ಸಂಪಾದಕರಾಗಲೂ ಅವರು ತಮ್ಮ ಒಪ್ಪಿಗೆಯನ್ನು ಕೊಟ್ಟಿದ್ದರು. ತಮ್ಮ ಒಂದು ಪತ್ರದಲ್ಲಿ ಅವರು ಹೀಗೆ

1. 1924 (ಪ್ರಾರಂಭವಾದದ್ದು 4-10-24 ರಂದು)

ಬರೆದಿದ್ದರು: " 'ಭಾರತ ಲಕ್ಷ್ಮೀ' ಎಂಬ ಹೊಸ ಪತ್ರಿಕೆಯ ಸಂಪಾದಕನಾಗಲು ಒಪ್ಪಿಗೆ ನೀಡಿದ್ದೇನೆ. ಇವತ್ತು ಒಂದು ಕಾಗದ ಬರೆದಿದ್ದೇನೆ. ಆ ಷರತ್ತುಗಳನ್ನು ಒಪ್ಪಿಕೊಳ್ಳಲು ಅವರು ಸಿದ್ಧರಾದರೆ, ಸಂಪಾದನ ಕಾರ್ಯದ ಹೊಣೆಯನ್ನು ತೆಗೆದುಕೊಳ್ಳಬಲ್ಲೆ. ಜಗತ್ತಿನಲ್ಲಿ ಬಹುಪಾಲು ವ್ಯಕ್ತಿಗಳ ವಿಷಯದಲ್ಲಿ ಏನು ಆಗುತ್ತದೆಯೋ ಅದೇ ನನ್ನ ವಿಷಯದಲ್ಲಿಯೂ ಆಗುತ್ತದೆ - ಅಂದರೆ, ಲೋಕದಲ್ಲಿ ಬುದ್ಧಿವಂತರು ಮತ್ತು ಮೂರ್ಖರು - ಇಬ್ಬರೂ ಇದ್ದಾರೆ; ಒಂದು ಪಕ್ಷಕ್ಕೆ ಗೆಲುವು ದೊರೆಯುತ್ತಿರುತ್ತದೆ. ಹೆಚ್ಚಲ್ಲವೆಂದರೂ ಐದಾರು ಸಾವಿರ ರೂಪಾಯಿಗಳ ಸಾಲಕ್ಕೆ ಜಾಮೀನುದಾರನಾಗಿದ್ದೇನೆ. 'ಭಾರತ ಲಕ್ಷ್ಮೀ' ಪತ್ರಿಕೆಯನ್ನು ಸೇರಿ ಇದನ್ನು ತೀರಿಸಿಬಿಡಬೇಕೆಂದು ಯೋಜಿಸಿದ್ದೇನೆ. ಅವರು ನನಗೆ ನಾಲ್ಕಾಣೆ ಪಾಲನ್ನು ಕೊಡಲಿದ್ದಾರೆ. ಇನ್ನು ಮುಂದೆ ಲೌಕಿಕ ವ್ಯವಹಾರಗಳಲ್ಲಿ ಜಾಣರಾಗಿರುವವರು ನಡೆದುಕೊಳ್ಳುವಂತೆಯೇ ನಾನೂ ಮಾಡುತ್ತೇನೆ - ಅಂದರೆ, ಮೋಸ ಹೋಗುವುದಿಲ್ಲ. ದಸರೆಯ ಬಳಿಕ ಈ ಎಲ್ಲ ಸಂಗತಿಗಳನ್ನೂ ವಿವರವಾಗಿ ನಿರ್ಧರಿಸುತ್ತೇನೆ. ಆದರೆ, ಈ ಮಧ್ಯೆ ಪರಿಚಿತರಾದ, ಪರಿಚಿತರಲ್ಲದ ಅನೇಕ ಸಾಹಿತಿಗಳು ನನಗೆ ಪತ್ರ ಬರೆದು, ಅವರ ಲೇಖನಗಳನ್ನು ಸ್ವೀಕರಿಸಿ ಮುಂಗಡದ ಹಣವನ್ನು ಕಳಿಸಿಕೊಡುವಂತೆ ಕೋರಿದ್ದಾರೆ."

ಆದರೆ, ಈ ಶಕ್ತಿ ಬಹುಶಃ ಅವರಿಗೆಂದೂ ದೊರೆಯಲೇ ಇಲ್ಲ. ತಾವು ಗಳಿಸಿದ ಹಣದಿಂದ ನಾನಾ ವ್ಯಕ್ತಿಗಳಿಗೆ ನಾನಾ ರೂಪದಲ್ಲಿ ಅವರು ನೆರವಾಗುತ್ತಿದ್ದರೆಂಬುದು ನಿಜ. ಕಾಶಿಯಲ್ಲಿ ಗೌರವಸ್ಥ ಮನೆತನಕ್ಕೆ ಸೇರಿದ ಬಂಗಾಳಿ ವಿಧವೆಯೊಬ್ಬಳಿದ್ದಳು. ಆಕೆ ಬಾಲ್ಯದಲ್ಲಿಯೇ ವಿಧವೆಯಾಗಿ ಬಿಟ್ಟಿದ್ದಳು. ಓದುಬರೆಹವೂ ಬರುತ್ತಿತ್ತು. ಚೆನ್ನಾಗಿ ಅಡುಗೆ ಮಾಡಿ, ಬಡಿಸುವುದರಲ್ಲಿ ಆಕೆ ನಿಪುಣಳಾಗಿದ್ದಳು. ಆದರೆ, ವೃದ್ಧಾಪ್ಯದಲ್ಲಿ ಆಕೆಯ ಕಣ್ಣುಗಳು ಸಂಪೂರ್ಣವಾಗಿ ಹಾಳಾಗಿ ಬಿಟ್ಟುವು. ಒಂದು ದಿವಸ ಆಕೆ ಶರತ್‌ಚಂದ್ರರನ್ನು 'ಮಗು' ಎಂದು ಸಂಬೋಧಿಸಿದ್ದರು. ಅಂದಿನಿಂದಲೂ ತಮ್ಮ ಗೆಳೆಯ ಹರಿದಾಸ ಶಾಸ್ತ್ರಿಗಳ ಮೂಲಕ ಆಕೆಗೆ ಸತತವಾಗಿ ಸಹಾಯಮಾಡುತ್ತ ಬಂದಿದ್ದರು. ಆದರೆ ತಮ್ಮ ಹೆಸರು ಬಹಿರಂಗಗೊಳ್ಳಲು ಮಾತ್ರ ಅವಕಾಶ ಕೊಡಲಿಲ್ಲ. ಇದು ಹರಿದಾಸರೇ ಕೊಡುತ್ತಿರುವ ಹಣ ಎಂಬುದಾಗಿ ಆ ವೃದ್ಧೆ ಭಾವಿಸಿಕೊಂಡಿದ್ದಳು. ಗುಪ್ತರೂಪದಲ್ಲಿ ನೆರವಾಗುವುದು ಒಂದು ರೀತಿಯಲ್ಲಿ ಅವರ ಸ್ವಭಾವವೇ ಆಗಿ ಬಿಟ್ಟಿತ್ತು. ಸ್ವಲ್ಪ ದೂರದಲ್ಲಿ ತರಕಾರಿಯನ್ನು ಮಾರುವ ಇನ್ನೊಬ್ಬ ವಿಧವೆ ಇದ್ದಳು.[1] ಆಕೆಗೆ ಮಕ್ಕಳೂ ಇರಲಿಲ್ಲ. ನಿತ್ಯವೂ ಆಕೆಯಿಂದ ತರಕಾರಿಯನ್ನು ಕೊಂಡುಕೊಳ್ಳಬೇಕೆಂದು ಅವರು ದೊಡ್ಡ ಸೊಸೆಗೆ ಸೂಚನೆ ಕೊಟ್ಟಿದ್ದರು. ಗುಪ್ತರೂಪದಲ್ಲಿ ಆಕೆಗೆ ನೆರವಾಗುವುದೇ ಅವರ ಉದ್ದೇಶವಾಗಿತ್ತು. ಬಿಸಿಬಿಸಿ ತಿನ್ನುವುದು ಅವರಿಗೆ ತುಂಬ ಇಷ್ಟವೂ ಆಗುತ್ತಿತ್ತು.

ಅವರ ತಮ್ಮ ಪ್ರಕಾಶಚಂದ್ರ ಅವರ ಜೊತೆಯಲ್ಲೇ ವಾಸವಾಗಿದ್ದ. ತುಂಬ ಅಕ್ಕರೆಯಿಂದ ಅವನ ಮದುವೆಯನ್ನು ನಡೆಸಿದರು.[2] ಹೆಣ್ಣಿನ ತಂದೆ ಒಳ್ಳೆಯ

1. 1925ರಲ್ಲಿ
2. 1925ರಲ್ಲಿ

ಸ್ಥಿತಿಯಲ್ಲಿದ್ದರು. ಆದರೆ, ಶರತ್‌ಚಂದ್ರರು ವರೋಪಚಾರ-ವರದಕ್ಷಿಣೆ ಇವುಗಳ ಬಗ್ಗೆ ಸ್ವಲ್ಪವೂ ಯೋಚಿಸಲಿಲ್ಲ. ದೊಡ್ಡ ಸೊಸೆ ಹೃತ್ಪೂರ್ವಕವಾದ ಔದಾರ್ಯದಿಂದಲೇ ತನ್ನೆಲ್ಲ ಒಡವೆಗಳನ್ನು ವಾರಗಿತ್ತಿಗೆ ಹಾಕಿಬಿಟ್ಟಳು. ಅವರ ಈ ಸೋದರ ಎಂದೂ ಏನನ್ನೂ ಸಾಧಿಸಲಿಲ್ಲ. ಏನನ್ನಾದರೂ ಸಾಧಿಸುವಷ್ಟು ಶಿಕ್ಷಣವೂ ಅವನಿಗೆ ದೊರೆತಿರಲಿಲ್ಲ; ಅಂಥ ವಾತಾವರಣವೂ ಒದಗಿರಲಿಲ್ಲ. ದಾರಿದ್ರ್ಯದಲ್ಲಿಯೇ ಅವನು ಬೆಳೆದು ಬಂದಿದ್ದ. ಜಮೀನುದಾರರ ನಾಟಕ ಮಂಡಳಿಗಳಲ್ಲಿ ಸ್ತ್ರೀ ಪಾತ್ರಗಳನ್ನು ಅಭಿನಯಿಸುತ್ತಲೇ ಅವನು ದೊಡ್ಡವನಾಗಿದ್ದ. ಅಲ್ಲಿ ಅವನು ಕುಡಿಯುವುದನ್ನು ಮಾತ್ರವೇ ಕಲಿಯಬಹುದಾಗಿತ್ತು. ಜೀವನ ಪರ್ಯಂತ ಶರತ್‌ಚಂದ್ರರು ತಮ್ಮ ಈ ಸೋದರನ ಹಾಗೂ ಅವನ ಕುಟುಂಬದ ಪೋಷಣೆಯ ಹೊರೆಯನ್ನು ಹೊತ್ತಿದ್ದರು.

ಇಂಥ ಮಾನವೀಯ ಕರುಣೆಯಿಂದ ತುಂಬಿ ತುಳುಕುತ್ತಿದ್ದರೂ, ಅನೀತಿಯ ಪ್ರಚಾರಕರೆಂಬುದಾಗಿ ಅವರ ಬಗ್ಗೆ ನಡೆದ ಅಪಪ್ರಚಾರಕ್ಕೆ ಸ್ವಲ್ಪವೂ ಕೊರತೆ ಇರಲಿಲ್ಲ. ಅವರು ಅದೆಷ್ಟು ಮದ್ಯಪಾನ ಮಾಡುತ್ತಾರೆ ಎಂದರೆ ದೇವರೇ ಅವರನ್ನು ಕಾಪಾಡಬೇಕು ಎಂದೇ ಜನರು ಭಾವಿಸಿಕೊಂಡಿದ್ದರು. ಕಲ್ಪಿಸಿಕೊಳ್ಳಬಹುದಾದ, ಕಲ್ಪಿಸಿಕೊಳ್ಳಲಾಗದ ಇನ್ನೂ ಇಂಥ ಎಷ್ಟು ಐಬುಗಳು ಅವರಲ್ಲಿವೆಯೋ ಎಂದುಕೊಳ್ಳುತ್ತಿದ್ದುದೂ ಉಂಟು. ಅದೆಷ್ಟು ಸಮ್ಮೇಳನಗಳಿಗೆ ತಮ್ಮ ಅಧ್ಯಕ್ಷತೆಯಿಂದ, ಅವರು ಗೌರವವನ್ನು ತಂದುಕೊಟ್ಟರು! ಅದೆಷ್ಟು ಸಂಘ ಸಂಸ್ಥೆಗಳು ಅವರ ಸನ್ಮಾನ ಸಮಾರಂಭಗಳನ್ನು ಏರ್ಪಡಿಸಿ, ಅವರನ್ನು ಅಭಿನಂದಿಸಿದುವು!! ಆದರೆ, ಅವರ ಎದುರಿಗೇ ಅವರನ್ನು ನಿಂದಿಸುವಂಥವರ ಸಂಖ್ಯೆಯೇನೂ ಕಡಿಮೆಯಾಗಿರಲಿಲ್ಲ. ಕೆಲವೊಮ್ಮೆ ಪರೋಕ್ಷವಾಗಿ, ಕೆಲವೊಮ್ಮೆ ಪ್ರತ್ಯಕ್ಷವಾಗಿ ಭಾಷಣಕಾರರು ಅವರನ್ನೇ ದೃಷ್ಟಿಯಲ್ಲಿಟ್ಟುಕೊಂಡು ಸಾಕಷ್ಟು ಮಾತುಗಳನ್ನು ಹೇಳಿಬಿಡುತ್ತಿದ್ದರು. ಪುಸ್ತಕಭಂಡಾರದ ಸ್ಥಾಪನೆಯ ದಿವಸ ನಡೆಯಲಿದ್ದ ಸಮಾರಂಭಕ್ಕೆ ಅಧ್ಯಕ್ಷರಾಗಬೇಕೆಂದು ಚಿತ್ಪುರದ ನಾಗರೀಕರು ಅವರನ್ನು ಆಹ್ವಾನಿಸಿದ್ದರು. ಆದರೆ, ಅದೇ ಸಭೆಯಲ್ಲಿ ಮಾತನಾಡಿದ ಒಬ್ಬ ಸದ್ಗೃಹಸ್ಥ ಹೀಗೆಂದು ಹೇಳಿದ: "ನಾವು ತುಂಬ ಉತ್ಸಾಹದಿಂದ ಪುಸ್ತಕ ಭಂಡಾರವನ್ನು ಸ್ಥಾಪಿಸುವ ವಿಚಾರದತ್ತ ಗಮನ ಕೊಟ್ಟಿದ್ದೇವೆ. ಆದರೆ, ಹೀಗೆ ಮಾಡುವುದರಿಂದ ಏನು ಪ್ರಯೋಜನವಿದೆ? ಓದಲು ಅರ್ಹವಾಗಿರುವಂಥ ಪುಸ್ತಕಗಳು ಹೊರಬರುತ್ತಿವೆಯೆ? ಯಾರಾದರೂ ಅಂಥ ಪುಸ್ತಕಗಳನ್ನು ಬರೆಯುತ್ತಿದ್ದಾರೆಯೆ? ಎಂದು ಆಗಿಂದಾಗ್ಗೆ ನಾನು ಯೋಚನೆ ಮಾಡಿದ್ದೇನೆ. ಇಂದು ಸಾಹಿತ್ಯದಲ್ಲಿ ನೀತಿಯೂ ಇಲ್ಲ, ಅಭಿರುಚಿಯೂ ಇಲ್ಲ. ಎಲ್ಲವೂ ಕೊಳಕಿನಿಂದ ತುಂಬಿಹೋಗಿದೆ. ಈ ಕೊಳಕಿಗೆ ವಿಶೇಷವಾಗಿ ಕಾರಣಕರ್ತರಾಗಿರುವವರೆಂದರೆ ನಮ್ಮ ಇಂದಿನ ಸಮಾರಂಭದ ಅಧ್ಯಕ್ಷರು."

ಅಧ್ಯಕ್ಷ ಸ್ಥಾನದಲ್ಲಿ ಕುಳಿತುಕೊಂಡು ಶರತ್‌ಚಂದ್ರರು ಇದೆಲ್ಲವನ್ನೂ ಮೌನವಾಗಿ ಕೇಳುತ್ತಿದ್ದರು. ತಾವು ಭಾಷಣಮಾಡಬೇಕಾದ ಸಮಯ ಬಂದಾಗ ಅವರು ಇಷ್ಟು ಮಾತ್ರ ಹೇಳಿದರು: "ನೋಡಿ, ಒಳ್ಳೆಯ ಪುಸ್ತಕಗಳು ಹೊರಬರುತ್ತಿಲ್ಲವೆಂದಾದರೆ ನೀವು ಒಂದು ಕೆಲಸ ಮಾಡಿ. ಪುಸ್ತಕಭಂಡಾರವನ್ನು ಮುಚ್ಚಿಬಿಡಿ. ಒಂದು

ಸಂಕೀರ್ತನ ತಂಡವನ್ನು ಏರ್ಪಡಿಸಿಕೊಳ್ಳಿ. ಪುಸ್ತಕ ಭಂಡಾರವನ್ನು ಸ್ಥಾಪಿಸಿ ನಾಡಿನ ಜನರಲ್ಲಿ ಕೊಳಕನ್ನು ಹರಡುವುದಕ್ಕೆ ಬದಲಾಗಿ, ಸಂಕೀರ್ತನ ತಂಡದ ಮೂಲಕ ಒಂದೊಂದು ಮೊಹಲ್ಲಾದಲ್ಲಿಯೂ ಕೀರ್ತನೆಗಳನ್ನು ಹಾಡಿಸಿ. ಇದು ಒಳ್ಳೆಯ ಪುಣ್ಯದ ಕೆಲಸವಾಗುತ್ತದೆ."

ಯತೀಂದ್ರಮೋಹನ ಸಿಂಹ ಎಂಬ ಮ್ಯಾಜಿಸ್ಟ್ರೇಟರೊಬ್ಬರಿದ್ದರು. 'ಸಾಹಿತ್ಯ ಮತ್ತು ಸ್ವಾಸ್ಥ್ಯ ರಕ್ಷಣೆ' ಎಂಬ ಹೆಸರಿನಲ್ಲಿ ಅವರು ಪುಸ್ತಕವೊಂದನ್ನು ಬರೆದಿದ್ದರು. ಇದರಲ್ಲಿ ಶರತ್‌ಚಂದ್ರರನ್ನು ತೀವ್ರವಾಗಿ ಖಂಡಿಸಲಾಗಿತ್ತು. ಈ ಪುಸ್ತಕದ ಬಗ್ಗೆ ಅಷ್ಟೇ ತೀವ್ರ ವಿರೋಧವೂ ಉಂಟಾಯಿತು. ಅಂತೆಯೇ, ಒಂದು ದಿನ ಇದೆಲ್ಲವೂ ಶಾಂತವಾಗಿ ಬಿಟ್ಟಿತು. ಒಂದು ದಿವಸ ಶರತ್‌ಚಂದ್ರರನ್ನು ಅವರು ಭೇಟಿಯಾಗಿದ್ದರಂತೆ. ಅನೀತಿ ಮೂಲವಾದ ಸಾಹಿತ್ಯದ ಬಗ್ಗೆ ಮಾತುಕತೆ ನಡೆದಾಗ ಶರತ್‌ಚಂದ್ರರು ಹೀಗೆಂದರಂತೆ: "ನೀವು ಸಚ್ಚಾರಿತ್ರ್ಯವುಳ್ಳವರೆಂದು ನಾನು ಭಾವಿಸಿದ್ದೇನೆ. ನೀವೆಂದೂ ವೇಶ್ಯೆಯ ಮನೆಯಲ್ಲಿ ಕಾಲಿಟ್ಟಿರಲಿಕ್ಕಿಲ್ಲ, ಅಲ್ಲವೆ ?"

ಇದನ್ನು ಕೇಳಿ ಆ ಮ್ಯಾಜಿಸ್ಟ್ರೇಟರು ಹತಪ್ರಭರಾದರು. ಬೇರೇನು ತಾನೆ ಮಾಡಲು ಸಾಧ್ಯವಿತ್ತು? ಹೌದು ಅಥವಾ ಇಲ್ಲವೆಂದು ಉತ್ತರ ಕೊಡುವುದು ಅವರಿಗೆ ಸಾಧ್ಯವಿರಲಿಲ್ಲ. ಶರತ್‌ಚಂದ್ರರೇ ಮುಂದುವರಿದು ಹೀಗೆ ಹೇಳಿದರಂತೆ: "ನಿಮಗೆ ಅದರ ಅನುಭವವೇ ಇಲ್ಲದಾಗ, ನಿಮ್ಮ ಜೊತೆ ಏನು ಮಾತಾಡಿ ಏನು ಪ್ರಯೋಜನ ?"

ಜೀವನಪರ್ಯಂತ ಅವರಿಗೆ ಅನೀತಿಯ ಪ್ರಚಾರಕರೆಂಬ ಅಪಖ್ಯಾತಿ ಅಂಟಿಕೊಂಡದ್ದಂತೆಯೇ, ಅಲೆಮಾರಿ ಜೀವನದ ಬಗೆಗಿನ ಹುಮ್ಮಸ್ಸು ಎಂದೂ ಅವರನ್ನು ಸಂಪೂರ್ಣವಾಗಿ ಬಿಟ್ಟು ತೊಲಗಲಿಲ್ಲ. ಪ್ರತಿವರ್ಷವೂ ಜಗಜ್ಜನನಿಯ ಪೂಜಾ ಮಹೋತ್ಸವದ ಸಂದರ್ಭದಲ್ಲಿ ಅವರು ಭಾಗಲ್ಪುರದ ಮಾವನ ಮನೆಗೆ ಹೋಗುತ್ತಿದ್ದರು. ಬರ್ಮಾದಿಂದ ಹಿಂದಿರುಗಿದ ಬಳಿಕ ಮಾವನವರ ಕುಟುಂಬ ದೊಂದಿಗಿದ್ದ ತಮ್ಮ ಸಂಬಂಧವನ್ನು - ಅದರಲ್ಲಿಯೂ ಮಣಿ ಮಾಮಾ ಅವರೊಡನೆ ಇದ್ದ ಸಂಬಂಧವನ್ನು - ಉತ್ತಮಪಡಿಸಿಕೊಳ್ಳಲು ಅವರು ಪ್ರಯತ್ನಿಸಿದ್ದರು. ಒಮ್ಮೆ ಈ ಮಾವ ತಮ್ಮ ಮಗಳ ಮದುವೆಗೆ ಸಂಬಂಧಿಸಿದ ಹಾಗೆ ಕಲ್ಕತ್ತೆಗೆ ಬಂದಿದ್ದರು. ಆಗ ಸುರೇಂದ್ರನಾಥರು ಶರತ್‌ಚಂದ್ರರಿಗೆ ಹೀಗೆಂದು ಸಲಹೆ ನೀಡಿದರು: "ಈ ಸಂದರ್ಭದಲ್ಲಿ ನೀವು ಉಡುಗೊರೆಯೊಂದನ್ನು ಕಳಿಸಿಬಿಡಿ."

ಶರತ್‌ಚಂದ್ರರೆಂದರು: "ಮಣಿಮಾವ ಅದನ್ನು ಸ್ವೀಕರಿಸುವುದಿಲ್ಲ."

ಸುರೇಂದ್ರನಾಥರು ಹೇಳಿದರು: "ನೀವು ಕಳಿಸೋದು ಕಳಿಸಿ, ಬಾಕಿಯದನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆ."

ಶರತ್‌ಚಂದ್ರರು ಹಾಗೆಯೇ ಮಾಡಿದರು. ಆಗಬಹುದೆಂದು ನಿರೀಕ್ಷಿಸಿದ್ದಂತೆಯೇ ಅದನ್ನು ನೋಡಿದೊಡನೆಯೇ ಮಣಿ ಮಾವ, "ಇಲ್ಲ, ಅದನ್ನು ತೆಗೆದು ಕೊಳ್ಳುವುದಿಲ್ಲ, ಅದನ್ನು ಹಿಂದಿರುಗಿಸಿಬಿಡು" ಎಂದರು.

ಅತ್ತೆ ಹೇಳಿದರು: "ಉಡುಗೊರೆಯನ್ನು ಎಲ್ಲಿಯಾದರೂ ಹಿಂದಿರುಗಿ ಸುತ್ತಾರೆಯೆ ? ಇಟ್ಟುಕೊಳ್ಳಲೇ ಬೇಕು."

"ಇಲ್ಲ, ಇಲ್ಲ ಸಾಧ್ಯವಿಲ್ಲ...." ಮಣಿ ಮಾವ ಇನ್ನಷ್ಟು ಕೋಪಗೊಂಡು ಹೇಳಿದರು. ಆ ಹೊತ್ತಿಗೆ ಸುರೇಂದ್ರರು ಅಲ್ಲಿಗೆ ಬಂದು "ಅಣ್ಣಯ್ಯ, ಶರತ್ ಬಂದಿದ್ದಾನೆ" ಎಂದರು.

"ಎಲ್ಲಿದ್ದಾನೆ ?"

ಮುಂದೆ ಬಂದು ಶರತ್‌ಚಂದ್ರರು ಮಣಿ ಮಾವನಿಗೆ ಕಾಲು ಮುಟ್ಟಿ ನಮಸ್ಕರಿಸಿ ಹೀಗೆಂದರು: "ನನ್ನನ್ನು ಕ್ಷಮಿಸಿಬಿಡಿ."

ಕ್ಷಣಮಾತ್ರದಲ್ಲಿ ಮಾವನ ಕೋಪೋದ್ರೇಕ-ಅಹಮಿಕೆಗಳೆಲ್ಲ ಮಾಯವಾಗಿ ಬಿಟ್ಟುವು. ಗಂಟಲು ತುಂಬಿ ಬಂತು; ಕಣ್ಣುಗಳಲ್ಲಿ ನೀರಾಡಿದುವು. "ಮದುವೆಗೂ ಬರಬೇಕು, ಗೊತ್ತಾಯಿತೆ ?" ಎಂದು ಮಾತ್ರ ಹೇಳಲು ಅವರಿಗೆ ಸಾಧ್ಯವಾಯಿತು.

ಶರತ್‌ಚಂದ್ರರಿಗೆ ಮತ್ತೆ ಮಾವನ ಮನೆಯ ಬಾಗಿಲು ತೆರೆಯಿತು. ಮಣಿಮಾವ ಅವರು ತೀರಿಕೊಂಡ ಬಳಿಕವಂತೂ[1] ಅಲ್ಲಿಗೆ ಹೋಗಿ ಬಂದು ಮಾಡುವುದನ್ನು ನಿಯಮವೇ ಎಂಬಂತೆ ಮಾಡಿಕೊಂಡರು. ಆಗ ಅವರು ಸಾಧ್ಯವಿದ್ದಷ್ಟು ಮಟ್ಟಿಗೂ ತಮ್ಮ ಹಳೆಯ ಜೀವನವನ್ನು ಮರುಕೊಳಿಸಲು ಪ್ರಯತ್ನಿಸುತ್ತಿದ್ದರು. ಚಹಾ, ತಂಬಾಕು, ಹಾಸ್ಯ-ವಿನೋದ-ಇವೆಲ್ಲ ನಡೆಯುತ್ತಿದ್ದುವು. ಮಧ್ಯಾಹ್ನದ ಊಟ ನಾಲ್ಕು ಘಂಟೆಗಾದರೆ, ರಾತ್ರಿಯ ಊಟ ಒಂದು ಗಂಟೆಗೆ ಆಗುತ್ತಿತ್ತು. ಅಲ್ಲಿಗೆ ಬಂದೊಡನೆಯೇ ಮನೆಯ ಎಲ್ಲ ನಿಯಮಗಳನ್ನೂ ತಲೆಕೆಳಗು ಮಾಡಿಬಿಡುತ್ತಿದ್ದರು. ಇದು ಅವರ ಸ್ವಭಾವವೇ ಆಗಿತ್ತು. ಮಕ್ಕಳು ಅವರನ್ನು ತುಂಬ ಪ್ರೀತಿಸುತ್ತಿದ್ದರು. ಅವರು ಬಂದು ನೇರವಾಗಿ ಗಂಗಾತೀರಕ್ಕೆ ಹೋಗಿಬರುತ್ತಿದ್ದರು. ಆಟದ ಸಾಮಾನುಗಳ ರಾಶಿಯನ್ನೇ ಹೊತ್ತು ತಂದು, ಮಕ್ಕಳ ಮುಂದೆ ಹರಡಿಬಿಡುತ್ತಿದ್ದರು. ಆಮೇಲಿನ ಸರದಿ ಮಿಠಾಯಿವಾಲನದಾಗಿರುತ್ತಿತ್ತು. "ಅರೆ, ಇಷ್ಟೆಲ್ಲಿ ಸಾಕಾಗುತ್ತದೆ ? ಇನ್ನಷ್ಟು ಹಾಕು" ಎನ್ನುತ್ತಿದ್ದರು. "ಚಹಾ ತಗೆದುಕೊಂಡು ಬನ್ನಿ", "ತಂಬಾಕು ತೆಗೆದುಕೊಂಡು ಬನ್ನಿ" - ಹೀಗೆ ಅವರು ಕೂಗು ಹಾಕುತ್ತಲೇ ಇರುತ್ತಿದ್ದರು.

ಪೂಜಾ ಮಹೋತ್ಸವದ ಸಂದರ್ಭದಲ್ಲಿ ನಾಟಕಗಳೂ ನಡೆಯುತ್ತಿದ್ದುವು. ಆ ಸಲ ಅವರು 'ಚಂದ್ರಗುಪ್ತ' ನಾಟಕವನ್ನು ರಂಗದ ಮೇಲೆ ತರಬೇಕೆಂದು ತೀರ್ಮಾನಿಸಿದ್ದರು. ಕೂಡಲೇ ಗಿರೀಂದ್ರನಾಥನನ್ನೇ ಕರೆಸಿ ಹೇಳಿದರು: "ಈ ಸಲ ಚಂದ್ರಗುಪ್ತ ನಾಟಕದ ಒಂದು ದೃಶ್ಯವನ್ನು ಆಡಿಸಬೇಕೆಂದಿದ್ದೇನೆ. ನೀನು 'ಚಾಣಕ್ಯ'ನ ಪಾತ್ರವಹಿಸು. ಪ್ರಫುಲ್ಲ 'ಕಾತ್ಯಾಯನ' ಆಗುತ್ತಾನೆ. ಶಚಿ 'ಭಿಕ್ಷು' ಮತ್ತು ದೇವಿ 'ಪ್ರಾಂಪ್ಟರ್'."

ಹಾಗೆಯೇ ಆಯಿತು. ಭಿಕ್ಷುಕನ ಹಾಡನ್ನು ಕೇಳಲು ತಮ್ಮಿಂದ ಸಾಧ್ಯವಾಗದೆ ಹೋದಾಗ, ಶರತ್‌ಚಂದ್ರರು ಬಿಕ್ಕುತ್ತ ತಮ್ಮ ಕೋಣೆಗೆ ತೆರಳಿದರು. ಅಲ್ಲಿಯೇ ಕತ್ತಲಿನಲ್ಲಿ ಕುಳಿತು ಅಭಿನಯವನ್ನು ನೋಡಿದರು.

ಕೀರ್ತನೆಯೂ ಇದೇ ರೀತಿ ನಡೆಯುತ್ತಿತ್ತು. ಮಲಗಿಕೊಂಡೇ ಅವರು ಕೇಳುತ್ತಿದ್ದರು. ಮಧ್ಯದಲ್ಲಿಯೇ ಹೀಗೆನ್ನುತ್ತಿದ್ದರು: "ರಾಸ್‌ಬಿಹಾರಿ, 'ಓ ಕುಬ್ಜಾರ್

---

1. 1921ರಲ್ಲಿ

ಬಂಧುಟಿ' ಕೀರ್ತನೆಯನ್ನು ಹಾಡು."

ಇದು ಅವರಿಗೆ ತುಂಬ ಪ್ರಿಯವಾಗಿದ್ದ ಹಾಡು. ಆದರೆ ಎಂದೂ ಅದನ್ನು ಪೂರ್ತಿಯಾಗಿ ಕೇಳಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಮಧ್ಯದಲ್ಲಿಯೇ ಅಳುತ್ತ ಎದ್ದು ಹೋಗಿ ಬಿಡುತ್ತಿದ್ದರು.

"ಬೋಲಿ ಓ ಕುಬ್ವಾರ್ ಬಂಧು
ತೋಮಾಯ್ ರಾಧಾನಾಥ್ ಆರ್ ಬೋಲಬೋ ನಾ ಹೇ.
ಓ ಕುಬ್ವಾರ್ ಬಂಧು....."

ರಾಸಬಿಹಾರಿ ದಾಸ್ ಅವರು ತುಳಸಿ ಮಾಲೆಗಳನ್ನೂ ಕಟ್ಟುತ್ತಿದ್ದರು. ಒಮ್ಮೆ ಶರತ್‌ಚಂದ್ರರು ಅವರನ್ನು ಕೇಳಿದರು: "ನನಗೂ ಒಂದು ಕೊಡಿ."

ಸುರೇಂದ್ರನಾಥರು ಕೇಳಿದರು: "ನೀನು ಅದನ್ನು ಹಾಕಿಕೊಳ್ಳುತ್ತೀಯೇನು ?"

"ಹೌದು ತುಂಬ ಆಸೆಯಾಗಿದೆ."

ರಾಸ್‌ಬಿಹಾರಿಯವರು ಅಂದೇ ತುಂಬ ಆಸ್ಥೆಯಿಂದ ಮಾಲೆಯನ್ನು ಕಟ್ಟಿದರು. ಅದನ್ನು ಹಾಕಿಕೊಂಡು ಅವರು ತುಂಬ ಸಂತೋಷಪಟ್ಟರು. ಆದರೆ, ಅಂದು ಅವರಿಗೆ ಹಿಂದಿನ 'ಯಾಯಾವರ ಜೀವನ'ದ ನೆನಪು ಮರುಕಳಿಸಿದಂತಾಯಿತು. "ಈ ಸಲ ಭಾಗಲ್ಪುರದಿಂದ ಸ್ಟೀಮರ್ ಮಾರ್ಗದಲ್ಲಿ ಕಲ್ಕತ್ತೆಗೆ ಹೋಗೋಣ. ಒಂದಿಷ್ಟು ಸುತ್ತಾಡಿದಂತಾಗುತ್ತದೆ" ಎಂದರು.

ಸರಿ, ಸುರೇಂದ್ರನಾಥ ಮತ್ತು ಗಿರೀಂದ್ರನಾಥರನ್ನು ಕರೆದುಕೊಂಡು ಹೊರಟುಬಿಟ್ಟರು. ಜೊತೆಯಲ್ಲಿ ಆಳುಗಳು ಮತ್ತು ಒಂದು ಹೊರೆಯಷ್ಟು ಸಾಮಾನು-ಸರಂಜಾಮು. ಇದೆಲ್ಲ ಯಾವ ಪ್ರಮಾಣದಲ್ಲಿತ್ತೆಂದರೆ ಎರಡು-ಮೂರು ಕುದುರೆಗಾಡಿಗಳೂ ಸಾಕಾಗಲಿಲ್ಲ. ಸ್ಟೀಮರ್ ಘಾಟನ್ನು ಹಾಗೂ ಹೀಗೂ ತಲುಪಿದರು. ತುಂಬ ಹೊತ್ತಿನವರೆಗೆ ಯಾವ ಸ್ಟೀಮರೂ ಬರಲಿಲ್ಲ. ಮೊದಲು ಯಾವ ಕಡೆಯ ಸ್ಟೀಮರ್ ಬರುತ್ತದೆಯೋ ಅದರಲ್ಲಿಯೇ ಕುಳಿತು ಪ್ರಯಾಣ ಮಾಡಿಬಿಡೋಣ ಎಂದು ತೀರ್ಮಾನಿಸಿದರು: "ಪಶ್ಚಿಮದ ಕಡೆಯಿಂದ ಬಂದರೆ ಪೂರ್ವದ ಕಡೆಗೆ ಹೋಗೋಣ. ಪೂರ್ವದ ಕಡೆಯಿಂದ ಬಂದರೆ ಪಶ್ಚಿಮದ ಕಡೆಗೆ ಹೋಗೋಣ" ಎಂದರು.

ಮಾಮಾ ಕೇಳಿದ: "ಪಶ್ಚಿಮದ ಕಡೆಗೆ ಹೋಗೋಣ" ಎಂದು.

ಉತ್ತರ ಬಂತು: "ಎಲ್ಲಿಗಾದರೂ ಆಯಿತು. ರವೀಂದ್ರನಾಥರೂ ಗಾಜೀಪುರದವರೆಗೆ ಹೋಗಿ ಬಂದಿದ್ದರಲ್ಲವೆ ?"

ಅದೃಷ್ಟವಶಾತ್ ಕಲ್ಕತ್ತೆಯ ಕಡೆಗೆ ಹೋಗುವ ಸ್ಟೀಮರೇ ಮೊದಲು ಬಂತು. ಆದರೆ ಅದರ ಮಾರ್ಗ ತುಂಬ ವಿಚಿತ್ರವಾಗಿತ್ತು. ಮುಂದೆ ಪದ್ಮಾನದಿಯ ಮೂಲಕ ಹಾದುಹೋಗಿ ಅದು ಗುವಾಲಂದೋ ಎಂಬಲ್ಲಿಗೆ ಹೋಗಲಿತ್ತು. ಅಲ್ಲಿಂದ ಸುಂದರಬನದ ಮೂಲಕ ಡೈಮಂಡ್ ಹಾರ್ಬರ್‌ಗೆ ಹೋಗಿ, ಅಲ್ಲಿಂದ ಖಿದಿರ್ ಪುರಕ್ಕೆ ಬರುತ್ತಿತ್ತು.

ತಮ್ಮ ಎಲ್ಲ ಸಂಗಡಿಗರೊಂದಿಗೆ ಶರತ್‌ಚಂದ್ರರು ಮೊದಲ ದರ್ಜೆಯ ಕ್ಯಾಬಿನ್ನನ್ನು ಪ್ರವೇಶಿಸಿದರು. ಎಲ್ಲರಿಗೂ ಮೊದಲ ದರ್ಜೆಯ ಟಿಕೆಟ್ಟುಗಳನ್ನೇ ಅವರು

ಕೊಂಡಿದ್ದರು. ಹುಕ್ಕಾ ಸಿದ್ಧಪಡಿಸುವಂತೆ ಸೇವಕರಿಗೆ ಸೂಚನೆಕೊಟ್ಟರು. ಪಕ್ಕದಲ್ಲಿಯೇ ಕ್ಯಾಪ್ಟನ್ ಕೋಣೆ ಇತ್ತು. ಗುಡುಗುಡು ಎಂಬ ಹುಕ್ಕಾದ ಸದ್ದನ್ನು ಕೇಳಿ, ಅವನು ಕೂಡಲೇ ತನ್ನ ನೌಕರನನ್ನು ಅಲ್ಲಿಗೆ ಕಳಿಸಿದ. ಅವನು ಬಂದು ಶರತ್‌ಚಂದ್ರರಿಗೆ ಹೀಗೆಂದು ಹೇಳಿದ: "ಇಲ್ಲಿ ಹುಕ್ಕಾ ಕುಡಿಯಲು ಅವಕಾಶವಿಲ್ಲ. ಅದನ್ನು ಆರಿಸಿಬಿಡಿ."

ಶರತ್‌ಚಂದ್ರರು ಅವನತ್ತ ಗಮನಕೊಡಲೇ ಇಲ್ಲ. ಸ್ವತಃ ಕ್ಯಾಪ್ಟನ್ ಅಲ್ಲಿಗೆ ಬಂದು ಹೀಗೆಂದ: "ಹುಕ್ಕಾ ಸೇದುವುದನ್ನು ನೀವು ನಿಲ್ಲಿಸಬೇಕು."

"ಏಕೆ ?"

"ಏಕೆಂದರೆ ಇದು ಸಭ್ಯತೆಯಲ್ಲ. ಚೆನ್ನಾಗಿ ಕಾಣುವುದಿಲ್ಲ."

"ಆದರೆ, ನನಗೆ ಇದು ಚೆನ್ನಾಗಿ ಕಾಣುತ್ತದಲ್ಲ! ಇದರಿಂದ ಸಭ್ಯತೆಯ ಪರಿಚಯ ಚೆನ್ನಾಗಿಯೇ ಆಗುತ್ತದೆಯಲ್ಲ."

"ಇದರ ಕರ್ಣಕಠೋರವಾದ ಶಬ್ದವನ್ನು ಕೇಳಿ ಪ್ರಯಾಣಿಕರು ಕೋಪ ಮಾಡಿಕೊಳ್ಳುತ್ತಾರೆ."

"ಸ್ಟೀಮರಿನ ಸೀಟಿಯ ಸದ್ದು ಅವರಿಗೆ ಇಷ್ಟವಾಗುತ್ತದೇನು? ಅನಿವಾರ್ಯವೆಂದು ಭಾವಿಸಿ ಅದನ್ನು ಸಹಿಸಿಕೊಳ್ಳುವುದಿಲ್ಲವೆ ?"

"ಆದರೆ ಹುಕ್ಕಾ ಎಳೆಯುವುದು ಅನಿವಾರ್ಯವೇನು ?"

"ನೀವು ಧೂಮಪಾನ ಮಾಡುವುದಿಲ್ಲವೇನು ?"

"ಸಿಗಾರ್ ಅಥವಾ ಸಿಗರೇಟ್ ಬಗ್ಗೆ ನನ್ನದೇನೂ ಅಭ್ಯಂತರವಿಲ್ಲ."

"ನಿಮಗೆ ಅಭ್ಯಂತರ ಇಲ್ಲದಿರಬಹುದು. ಆದರೆ, ಬೇರೆಯವರಿಗೆ ಇರಬಹುದಲ್ಲ!"

"ಯಾವ ಯೂರೋಪಿಯನ್ನನಿಗೂ ಇದರ ಬಗ್ಗೆ ಅಭ್ಯಂತರ ಇರುವುದಿಲ್ಲ."

"ಆದರೆ, ಇದು ಯುರೋಪ್ ಅಲ್ಲವಲ್ಲ."

ಈ ವಾಗ್ಯುದ್ಧಕ್ಕೆ ಕೊನೆಯೇ ಇರಲಿಲ್ಲ. ಕೊನೆಗೆ ಕ್ಯಾಪ್ಟನ್ ಇಷ್ಟು ಹೇಳಿ ಹಿಂದಿರುಗಬೇಕಾಯಿತು: "ಐರೋಪ್ಯರು ಯಾರಾದರೂ ಇದಕ್ಕೆ ಆಕ್ಷೇಪ ಮಾಡಿದರೆ, ನೀವು ಇದನ್ನು ನಿಲ್ಲಿಸಲೇಬೇಕು. ಇದು ನಿಮ್ಮಲ್ಲಿ ನನ್ನ ಒತ್ತಾಯದ ಬೇಡಿಕೆ."

ಶರತ್‌ಚಂದ್ರರು ಉತ್ತರವನ್ನೇನೂ ಹೇಳಲಿಲ್ಲ. ಹಾಗೆಯೇ ಹುಕ್ಕಾ ಎಳೆಯುತ್ತಾ ಕುಳಿತಿದ್ದರು.

ಆ ಸ್ಟೀಮರ್ ಮುಂದೆ ಮುಂದೆ ಸಾಗುತ್ತ ಕಹಾಲ್‌ಗಾಂವ್ ಅನ್ನು ತಲುಪಿತು. ಹಿಂದೆ ಈ ಊರಿನಲ್ಲಿ ಕಲಹಗಳೇ ನಡೆಯುತ್ತಿದ್ದುವೋ ಏನೋ. ಆದರೆ, ಈಗ ಹೆಸರು ಮಾತ್ರ ಉಳಿದಿದೆ. ಇಲ್ಲಿ ಆ ಹಡಗು ಸ್ವಲ್ಪ ಹೊತ್ತು ನಿಲ್ಲುತ್ತಿತ್ತು. ಶರತ್‌ಚಂದ್ರರು ಇಳಿದು, ಒಂದು ಕಡೆ ನಡೆದು ಬಿಟ್ಟರು. ಹಡಗು ಹೊರಡುವ ಹೊತ್ತಾಯಿತು. ಆದರೆ, ಅವರು ಪತ್ತೆಯೇ ಇರಲಿಲ್ಲ. ಅವರನ್ನು ಹುಡುಕುವುದಕ್ಕಾಗಿ ಇಬ್ಬರು ಮಾಮಂದಿರೂ ಅತ್ತ ಇತ್ತ ಓಡಿದರು. ಘಟ್ಟದ ಬಳಿಯಲ್ಲಿಯೇ ಒಂದು ಅಂಗಡಿ ಇತ್ತು. ಆ ಅಂಗಡಿಯ ಎದುರಿಗಿದ್ದ ಮೈದಾನದಲ್ಲಿ ಶರತ್‌ಚಂದ್ರರು ಕುಳಿತಿದ್ದುದನ್ನು ಕಂಡರು. ಸುತ್ತಲೂ ಹತ್ತಾರು ನಾಯಿಗಳು ಮೊಸರು ಮತ್ತು

ಅವಲಕ್ಕಿ ತಿನ್ನುವುದರಲ್ಲಿ ಮಗ್ನವಾಗಿದ್ದುವು. ಹನ್ನೆರಡು-ಹದಿಮೂರು ವರ್ಷದ ಹುಡುಗನೊಬ್ಬ ಎರಡೂ ಕೈಗಳಲ್ಲಿ ಈ ವಸ್ತುಗಳನ್ನು ಹಿಡಿದುಕೊಂಡು ನಿಂತಿದ್ದ. ಸುರೇಂದ್ರನಾಥರು ಕೇಳಿದರು: "ಇದೇನಿದು ? ಹಡಗು ಹೊರಡುವ ಹೊತ್ತಾಯಿತು."

"ನನಗೆ ಗೊತ್ತಿದೆ. ಆದರೆ ಇನ್ನೂ ಸೀಟಿ ಕೂಗಿಸಿಲ್ಲವಲ್ಲ."

ಹೀಗೆಂದು ಹೇಳುತ್ತ ಅವರು ಮೇಲೆದ್ದರು. ಅಂಗಡಿಯವನ ಲೆಕ್ಕ ಚುಕ್ತಾ ಮಾಡಿದರು. ಅವನು ಉಳಿದ ಹಣವನ್ನು ಹಿಂದಿರುಗಿಸಲು ಬಂದಾಗ ಹಿಂದಿಯಲ್ಲಿ ಹೇಳಿದರು: "ದೇನೇ ನಹಿ ಹೋಂಗೆ, ಯಹ್ ತುಮ್ಹಾರಾ ನಫಾ ಹೈ." (ನೀನೇನೂ ಹಿಂದಿರುಗಿಸಬೇಕಾಗಿಲ್ಲ, ಅದು ನಿನ್ನ ಲಾಭ ಎಂದಿಟ್ಟುಕೊ."

ಬಡಪಾಯಿ ಅಂಗಡಿಕಾರ ಅವರ ಮುಖವನ್ನೇ ನೋಡುತ್ತ ನಿಂತು ಬಿಟ್ಟ. ಹಡಗಿಗೆ ಹಿಂದಿರುಗಿದ ಮೇಲೆ ಶರತ್‌ಚಂದ್ರರು ಹೇಳಿದರು: "ನಾನು ಕೆಳಗೆ ಇಳಿದು ಹೊರಟ ಕೂಡಲೇ ನಾಯಿಗಳ ಒಂದು ಗುಂಪು ನನ್ನನ್ನು ಮುತ್ತಿಕೊಂಡಿತು. ನೋಡಿದರೆ, ಅವು ಎಷ್ಟೋ ದಿನಗಳಿಂದ ಏನನ್ನೂ ತಿಂದಂತೆ ಕಾಣಲಿಲ್ಲ. ಅವುಗಳಿಗೆ ಏನಾದರೂ ಒಂದಿಷ್ಟು ತಿನ್ನಿಸಬೇಕು ಅನ್ನಿಸಿತು. ಅಲ್ಲಿ ಮೊಸರು-ಅವಲಕ್ಕಿ ಬಿಟ್ಟು ಇನ್ನೇನೂ ಇರಲಿಲ್ಲ. ಅವನ್ನೇ ತಿನ್ನಿಸುವ ಹೊತ್ತಿಗೆ ಇಷ್ಟು ಹೊತ್ತಾಗಿ ಬಿಟ್ಟಿತು."

ಮಾರನೆಯ ದಿವಸ ಸಂಜೆಯ ಹೊತ್ತಿಗೆ ಇನ್ನೊಂದು ಹಳ್ಳಿ ಬಂತು. ಇಲ್ಲಿ ಹಾಲು, ಮೀನು, ತರಕಾರಿಗಳು ಯಥೇಚ್ಛವಾಗಿ ದೊರೆಯುತ್ತಿದ್ದುವು. ಕೊಳ್ಳಲು ಜನರು ಮುನ್ನುಗ್ಗಿದರು. ಮಾರಾಟ ಮಾಡುವವರು ಅಲ್ಲಿಗೇ ಬಂದಿದ್ದರು. ಹಡಗು ಮತ್ತೆ ಹೊರಟಾಗ, ಒಬ್ಬ ವ್ಯಕ್ತಿ ಹಡಗಿನ ಜೊತೆಗೇ ಹಡಗು ಕಟ್ಟೆಯ ಮೇಲೆ ಓಡೋಡಿ ಬರುತ್ತಿದ್ದ. ಮತ್ತೆ ಮತ್ತೆ ಹಡಗಿನ ಕಡೆ ನೋಡುತ್ತ ಕೈಮುಗಿಯುತ್ತಿದ್ದ; ಮತ್ತೆ ಓಡುತ್ತಿದ್ದ. ಶರತ್‌ಚಂದ್ರರ ದೃಷ್ಟಿ ಆಕಸ್ಮಿಕವಾಗಿ ಅವನತ್ತ ಹರಿಯಿತು. "ಹಡಗನ್ನು ಸ್ವಲ್ಪ ನಿಲ್ಲಿಸಿ" ಎಂದು ಅವರು ಕ್ಯಾಪ್ಟನ್ನನ್ನು ಒತ್ತಾಯಪಡಿಸಿದರು.

ಕ್ಯಾಪ್ಟನ್ ಹೇಳಿದ: "ಸ್ವಾಮಿ, ಹೀಗೆ ದಯೆ ತೋರಿಸುತ್ತ ಹೋದರೆ, ಹತ್ತು ದಿವಸ ಆದರೂ ಗುಲಾವಂದೋ ತಲುಪಲು ಸಾಧ್ಯವಾಗುವುದಿಲ್ಲ."

ಆದರೂ, ಶರತ್‌ಚಂದ್ರರ ಒತ್ತಾಯದಂತೆ ಅವನು ಹಡಗನ್ನು ದಡದ ಅಂಚಿನಲ್ಲಿ ನಿಲ್ಲಿಸಿದ. ಆ ವ್ಯಕ್ತಿ ಬಿಕ್ಕುತ್ತ ಹಡಗನ್ನೇರಿ, ಅಲ್ಲಿಯೇ ಮೂರ್ಛೆ ಹೋಗಿ ಬಿದ್ದುಬಿಟ್ಟ. ಮಗಳು ಸಾಯುವ ಸ್ಥಿತಿಯಲ್ಲಿರುವ ಸುದ್ದಿಯನ್ನು ಕೇಳಿ, ಅವಳನ್ನು ನೋಡುವುದಕ್ಕಾಗಿ ಅವನು ಹೊರಟಿದ್ದ.

ಪ್ರಯಾಣ ದೀರ್ಘವಾಗಿತ್ತು. ಈ ಬಗೆಯ ಅನುಭವಗಳಿಗೆ ಕೊರತೆಯೇನೂ ಇರಲಿಲ್ಲ. ಮಾರನೆಯ ದಿವಸ ಬೆಳಕು ಹರಿಯುವ ಹೊತ್ತಿಗೆ ದೂರದಿಂದ ಬರುತ್ತಿದ್ದ ಕೋಲಾಹಲದ ಧ್ವನಿ ಹತ್ತಿರ ಹತ್ತಿರವಾಗತೊಡಗಿತ್ತು. ಸುಮಾರು ಹತ್ತು ಘಂಟೆಯ ಹೊತ್ತಿಗೆ ಹಡಗು ಒಂದು ಹಳ್ಳಿಯ ಅಂಚಿಗೆ ಬಂದು ನಿಂತಿತು. 'ಪ್ರೇಮತಲೀ' ಎಂಬುದು ಆ ಹಳ್ಳಿಯ ಹೆಸರಾಗಿತ್ತು. ಇಲ್ಲಿ ವೈಷ್ಣವರ ಒಂದು ದೊಡ್ಡ ಜಾತ್ರೆ ನಡೆಯುತ್ತಿತ್ತು. ನಾಲ್ಕೂ ಕಡೆಗಳಿಂದ ಬಹುಸಂಖ್ಯೆಯಲ್ಲಿ ವೈಷ್ಣವರೂ ವೈಷ್ಣವಿಯರೂ ಜಾತ್ರೆಗೆ ಬರುತ್ತಿದ್ದರು. ಆದರೆ, ಹಡಗು ಇಲ್ಲಿ ಅರ್ಧಘಂಟೆ ಮಾತ್ರ

ನಿಲ್ಲುತ್ತಿತ್ತು. ಶರತ್‌ಚಂದ್ರರು ಕೇಳಿದರು: "ಇಷ್ಟು ದೊಡ್ಡ ಜಾತ್ರೆ ಇಲ್ಲಿ ನಡೆಯುತ್ತಿದೆ. ಒಂದು ದಿವಸವಾದರೂ ಇಲ್ಲಿ ನಿಲ್ಲುವುದಿಲ್ಲವೇನು ?"

ಕ್ಯಾಪ್ಟನ್ ಕೈಮುಗಿದು ಹೇಳಿದ: "ದಯವಿಟ್ಟು ಕ್ಷಮಿಸಿ. ಅರ್ಧಘಂಟೆಗಿಂತ ಹೆಚ್ಚಾಗಿ ನಿಲ್ಲಲು ಸಾಧ್ಯವಾಗುವುದಿಲ್ಲ."

ಶರತ್‌ಚಂದ್ರರು ಮಾವನಿಗೆ ಹೇಳಿದರು: "ಅರ್ಧ ಘಂಟೆಯಲ್ಲಿ ಏನೂ ಮಾಡಲು ಆಗುವುದಿಲ್ಲ. 'ಪ್ರೇಮತಲಿ'ಯ ಜಾತ್ರೆಯನ್ನು ನೋಡದೆ, ನಾನು ಮುಂದೆ ಹೋಗುವುದಿಲ್ಲ. ಹಡಗು ಹೋದರೆ ಹೋಗಲಿ."

ಅವರು ತಮ್ಮ ಎಲ್ಲ ಸಾಮಾನುಗಳನ್ನೂ ತೆಗೆದುಕೊಂಡು ಎಲ್ಲರೊಡನೆ ಇಳಿದೇ ಬಿಟ್ಟರು. ಆದರೆ, ಈಗ ಹೋಗುವುದೆಲ್ಲಿಗೆ? ಜಾಗ ಹುಡುಕುವುದಕ್ಕೆಂದು ಶರತ್‌ಚಂದ್ರರು ಹೊರಟರು. ಹತ್ತಿರದಲ್ಲಿಯೇ ಜಮೀನುದಾರರ ಕಛೇರಿ ಇದೆ ಎಂದು ತಿಳಿಯಿತು. ಅಲ್ಲಿಯೇ ತಂಗ ಬೇಕೆಂದೂ ಗೊತ್ತಾಯಿತು. ಜೊತೆಯಲ್ಲಿ ಜಮೀನುದಾರನ ಸೇವಕರನ್ನೂ ಕರೆದುಕೊಂಡೇ ಬಂದರು. ನಿಧಾನವಾಗಿ ಎಲ್ಲರೂ ಅಲ್ಲಿಗೆ ಹೋಗಿ ಸೇರಿದರು. ವೈಷ್ಣವರ ನರನಾರಿಯರೆಲ್ಲ ಆಗಲೇ ಅಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿಕೊಂಡು ಬಿಟ್ಟಿದ್ದರು. ಇವರ ಸಾಮಾನುಗಳ ಹೊರೆಯನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಕೊನೆಗೆ, ಶರತ್‌ಚಂದ್ರರು ಅಲ್ಲಿಗೆ ಬಂದು ತಲುಪಿದಾಗ, ಹಾಹಾಕಾರವೇ ಉಂಟಾಗಿಬಿಟ್ಟಿತು. ಗಡ್ಡ-ಮೀಸೆಗಳನ್ನು ಬಿಟ್ಟಿದ್ದ ಶರತ್‌ಚಂದ್ರರನ್ನು ಅವರು ಮುಸಲ್ಮಾನರೆಂದು ಭಾವಿಸಿದ್ದರು. ಚೀತ್ಕಾರ ಮಾಡುತ್ತ ಅವರು ಕೂಗುಹಾಕ ತೊಡಗಿದರು: "ಓಡಿ, ಓಡಿ! ಶ್ಯಾಮ-ಸುಂದರ, ರಾಧಿಕಾರಮಣ, ಸರ್ವನಾಶವಾಗಿ ಹೋಯಿತಲ್ಲ! ಅಡುಗೆ ಸಿದ್ಧವಾಗುತ್ತಿತ್ತು. ಇಂದು ನಮ್ಮ ಬಾಳೇ ಭ್ರಷ್ಟವಾಗಿ ಬಿಟ್ಟಿತು! ರಾಧೆ, ರಾಧೆ, ಇದೇನು ಮಾಡಿಬಿಟ್ಟೆ ಮದನ ಮೋಹನ ?"

ಒಂದು ಕ್ಷಣದ ಮಟ್ಟಿಗೆ ಶರತ್‌ಚಂದ್ರರು ಹತಪ್ರಭರಾದವರಂತೆ ಅವರನ್ನೇ ನೋಡುತ್ತ ಇದ್ದರು. ಆಮೇಲೆ ಹೇಳಿದರು: "ಇಲ್ಲಿ ಕೇಳಿ. ನೀವೆಲ್ಲ ಕೇಳಿರಪ್ಪ ನಾನೊಬ್ಬ ಬ್ರಾಹ್ಮಣ. ಹೆದರಬೇಡಿ, ನಾನು ಜನಿವಾರ ಹಾಕಿಕೊಂಡಿದ್ದೇನೆ."

ಬುದ್ಧಿವಂತನಂತೆ ಕಾಣುತ್ತಿದ್ದ ವೈಷ್ಣವನೊಬ್ಬ ಹೇಳಿದ: "ಈಗ ಅವರುಗಳೂ ಜನಿವಾರ ಹಾಕಿಕೊಂಡಿರುತ್ತಾರಂತಲ್ಲ!"

ಈ ಮಾತನ್ನು ಕೇಳಿ ಶರತ್‌ಚಂದ್ರರು ಮತ್ತು ಅವರ ಮಾವ-ಇಬ್ಬರೂ ಜೋರಾಗಿ ನಕ್ಕರು. ಶರತ್‌ಚಂದ್ರರು ಅಂಗಳಕ್ಕೆ ಬಂದರು. ಎಲ್ಲ ವೈಷ್ಣವ-ವೈಷ್ಣವಿಯರೂ 'ಶ್ಯಾಮಸುಂದರ', 'ರಾಧಿಕಾರಮಣ' ಎಂದು ಕೂಗುತ್ತ ಅಲ್ಲಿಂದ ಓಡಿದರು. ಆಗ ಶರತ್‌ಚಂದ್ರರು ಆರಾಮವಾಗಿ ಜಮಖಾನೆಯ ಮೇಲೆ ಕುಳಿತುಕೊಂಡರು. "ಒಳ್ಳೆಯದೇ ಆಯಿತು ಪೀಡೆ ಕಳೆಯಿತು" ಎಂದರು.

ಸ್ವಲ್ಪ ಹೊತ್ತು ವಿಶ್ರಮಿಸಿದ ಬಳಿಕ, ಅವರು ಜಾತ್ರೆಯನ್ನು ನೋಡಲು ಹೊರಟರು. ಗಂಟೆಗಳು ಒಂದರ ಮೇಲೊಂದರಂತೆ ಉರುಳಿಹೋಗತೊಡಗಿದುವು. ಆದರೆ ಅವರು ಪತ್ತೆಯೇ ಇರಲಿಲ್ಲ. ಇಬ್ಬರು ಮಾವಂದಿರೂ ಮತ್ತೆ ಅವರನ್ನು ಹುಡುಕಲು ಹೊರಟರು. ಭಾರಿ ಮರವೊಂದರ ಬುಡದಲ್ಲಿ ಭಾರಿ ಗುಂಪಿನ ಮಧ್ಯೆ

ಕಪ್ಪು ಮೈಬಣ್ಣದ ಒಬ್ಬ ಸಾಧು ಗೌರವರ್ಣದ ಯುವತಿಯೊಬ್ಬಳೊಂದಿಗೆ ನೃತ್ಯ-ಸಂಗೀತದಲ್ಲಿ ಮೈಮರೆತಿದ್ದುದನ್ನೂ, ಶರತ್‌ಚಂದ್ರರು ತನ್ಮಯರಾಗಿ ಅವರನ್ನೇ ನೋಡುತ್ತಿದ್ದುದನ್ನೂ ಅವರು ಕಂಡರು. ಮಾವ ಕೇಳಿದ: "ಇಂದು ಸ್ನಾನ, ಊಟ-ತಿಂಡಿ ಏನೂ ಮಾಡುವುದಿಲ್ಲವೇನು ?"

ಉತ್ತರ ಬಂತು: "ಅದೆಲ್ಲ ದಿನವೂ ಇದ್ದದ್ದೆ. ನೋಡು ಎಂಥ ಭಕ್ತಿ ಇವರದು! ಓಹ್, ಈ ಭಕ್ತಿ, ಈ ತನ್ಮಯತೆ ನನಗೂ ಸಾಧ್ಯವಾಗಿದ್ದರೆ!"

ಮಾವ ಹೇಳಿದ: "ಹಾಗಾದರೆ, ಅವರ ತಂಡವನ್ನೇ ಸೇರಿಕೊಂಡು ಬಿಡು."

"ಈಗ ಹಾಗೆ ಮಾಡಲು ಸಾಧ್ಯವಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು."

ಹಿಂದಿನ ಜೀವನವನ್ನು ನೆನೆಸಿಕೊಂಡು, ಅವರು ನಿಟ್ಟುಸಿರೆಳೆದುಕೊಂಡರು. ತುಂಬ ಕಷ್ಟದಿಂದಲೇ ಆ ಮಾವಂದಿರು ಅವರನ್ನು ಅಲ್ಲಿಂದ ಎಬ್ಬಿಸಿಕೊಂಡು ಬಂದರು. ಊಟ ಮಾಡುವಾಗ ಶರತ್‌ಚಂದ್ರ ಹೇಳಿದರು: "ಇಂದು ಇಲ್ಲಿಯೇ ಇರಬೇಕಲ್ಲ! ವೈಷ್ಣವೀ ಸ್ವೀಕಾರದ ಕಾರ್ಯಕ್ರಮ ಇಲ್ಲಿ ತುಂಬ ಸ್ವಾರಸ್ಯಕರವಾಗಿರುತ್ತದೆಂದು ಕೇಳಿದ್ದೇನೆ. ಸ್ವಲ್ಪ ಹಣವನ್ನು ಜಮಾಮಾಡಿದರೆ, ಯಾರಿಗೆ ಬೇಕಾದರೂ ವೈಷ್ಣವಿ ಸಿಕ್ಕುತ್ತಾಳಂತೆ. ಒಂದು ದುಪಟಿಯ ಹಿಂದೆ, ಕಾಲಿನ ಬೆರಳುಗಳು ಮಾತ್ರ ಕಾಣಿಸುವಂತೆ ವೈಷ್ಣವಿಯರನ್ನು ನಿಲ್ಲಿಸುತ್ತಾರಂತೆ. ಯಾರು ಯಾವ ವೈಷ್ಣವಿಯ ಕಾಲ ಬೆರಳನ್ನು ಹಿಡಿದುಕೊಳ್ಳುತ್ತಾನೋ, ಆಕೆ ಮತ್ತು ಆತ ಒಂದು ವರ್ಷದವರೆಗೆ ಜೊತೆಯಾಗಿ ಇರಬಹುದಂತೆ."

ಕಥೆ ಎಷ್ಟು ಸ್ವಾರಸ್ಯವಾಗಿತ್ತೋ, ಅಷ್ಟೇ ನಂಬಲಾಗದ್ದೂ ಆಗಿತ್ತು. ಆದ್ದರಿಂದ, ಬಹಳಷ್ಟು ಹೇಳಿ-ಕೇಳಿದ ಬಳಿಕ, ಆ ಪದ್ಧತಿ ಇಂದು ರೂಢಿಯಲಿಲ್ಲವೆಂಬುದಾಗಿ ಕೊನೆಗೆ ತಿಳಿದುಬಂತು. ಜೊತೆಗೆ, ರಾತ್ರಿ ಅಲ್ಲಿ ಭಾರಿ ಭಾರಿ ಸೊಳ್ಳೆಗಳ ಕಾಟವನ್ನು ಅನುಭವಿಸಬೇಕಾಗುತ್ತದೆಂದೂ ತಿಳಿಯಿತು.

"ಅಯ್ಯೋ ನಮ್ಮಪ್ಪ, ಸೊಳ್ಳೆ-ಮಲೇರಿಯಾ! ಹಾಗಾದರೆ ಇಲ್ಲಿರಲು ಸಾಧ್ಯವಿಲ್ಲ. ಈಗೇನು ಮಾಡೋಣ. ಈಗ ಯಾವ ಸ್ಟೀಮರೂ ಇಲ್ಲಿಂದ ಹೊರಡುವುದಿಲ್ಲ. ದೋಣಿಯಲ್ಲೇ ಏಕೆ ಪ್ರಯಾಣಮಾಡಬಾರದು ? ಬಹಳ ಮಜವಾಗಿರುತ್ತದಲ್ಲ!"

ಮಾವ ಕೇಳಿದ: "ಆದರೆ, ಹೋಗುವುದೆಲ್ಲಿಗೆ ?"

ಎಲ್ಲಿಗೆ ಹೋಗಿ ಸೇರಿದರೂ ಸರಿಯೆ. ರಾಜಷಾಹಿಗಂತೂ ಹೋಗಿಯೇ ತೀರುತ್ತೇವೆ."

ಸರಿ, ಒಂದು ದೋಣಿಯನ್ನು ಗೊತ್ತುಪಡಿಸಿದರು. ಆದರೆ, ಅದೃಷ್ಟ ಚೆನ್ನಾಗಿತ್ತು. ಗುವಾಲಂದೋಗೆ ಹೋಗುವ ಸ್ಟೀಮರ್ ದಾರಿಯಲ್ಲೇ ಸಿಕ್ಕಿತು. ಎಲ್ಲರೂ ಅದನ್ನು ಹತ್ತಿರದರು. ದಿನವಿಡೀ ಸಾಕಷ್ಟು ಅಲೆದಾಡಿದ್ದುದರಿಂದ ರಾತ್ರಿ ಚೆನ್ನಾಗಿ ನಿದ್ದೆ ಬಂತು. ಮಾರನೆಯ ದಿವಸ ಆ ಹಡಗು ಒಂದು ಘಟ್ಟವನ್ನು ತಲುಪಿತು. ಅಲ್ಲಿಯ ಜಮೀನುದಾರನಿಗೂ ಶರತ್‌ಚಂದ್ರರಿಗೂ ಒಳ್ಳೆಯ ಪರಿಚಯ ಇತ್ತು. "ನಡೆಯಿರಿ. ಅಲ್ಲಿಗೇ ಹೋಗಿ ಚಹಾ ಕುಡಿದು ಬರೋಣ" ಎಂದರು.

ಸಾಕಷ್ಟು ಹುಡುಕಿದ ಮೇಲೆ ಎಲ್ಲಿಯೋ ಒಂದು ಕಡೆ ಅವನ ಮನೆಯೇನೋ ಸಿಕ್ಕಿತು. ಇವರ ದುರದೃಷ್ಟಕ್ಕೆ ಅವನು ಮಲಗಿ ನಿದ್ದೆ ಮಾಡುತ್ತಿದ್ದ. ಅವರನ್ನು

ಎಬ್ಬಿಸಲು ಅವರ ನೌಕರ ಏನು ಮಾಡಿದರೂ ಒಪ್ಪಲಿಲ್ಲ. ಅಷ್ಟು ಹೊತ್ತಿಗೆ ಸರಿಯಾಗಿ ಹಡಗಿನ ಸೀಟಿಯ ಧ್ವನಿ ಕೇಳಿಸಿತು. ಎಲ್ಲರೂ ಹಡಗಿನತ್ತ ಓಡಿದರು. ಇವರು ಹತ್ತುತ್ತಿದ್ದಂತೆಯೇ ಹಡಗು ಅಲ್ಲಿಂದ ಹೊರಟಿತು. ಆದರೆ, ಚಹಾ ಕುಡಿಯಲೇ ಬೇಕಿತ್ತು. ಸೇವಕನಿಗೆ ಕೂಗು ಹಾಕಿದರು: "ವೈಕುಂಠ, ಚಹಾ ತಯಾರು ಮಾಡಪ್ಪ."

ಆದರೆ, ವೈಕುಂಠ ಇದ್ದರೆ ತಾನೆ ಉತ್ತರ ಕೊಡುವುದು. ಅವನು ಪದ್ಮಾ ನದಿಯ ದಡದಲ್ಲಿ ಓಡುತ್ತಿದ್ದ. ತುಂಬ ಕಷ್ಟದಿಂದ, ಒಂದು ದೋಣಿಯಲ್ಲಿ ಅವನನ್ನು ಹಡಗಿಗೆ ಕರೆತರಲಾಯಿತು. "ಹೊಸ ಹಾಲನ್ನು ತೆಗೆದುಕೊಂಡು ಬರಲು ನಾನು ಹಳ್ಳಿಗೆ ಹೋಗಿದ್ದೆ" ಎಂದು ಅವನು ಹೇಳಿದ.

ಹೀಗಿರುವಾಗ ಶರತ್‌ಚಂದ್ರರು ಅವನ ಮೇಲೆ ಕೋಪಮಾಡಿಕೊಳ್ಳುವುದು ಸಾಧ್ಯವೆ? ಆದರೆ, ಹಡಗಿನ ಕ್ಯಾಪ್ಟನ್‌ಗೆ ವಿಪರೀತ ಕೋಪ ಬಂದಿತ್ತು. "ಇರಲಿ ಬಿಡಪ್ಪ. ಹೋಗು, ಚಹಾ ತಯಾರು ಮಾಡಪ್ಪ. ಅಲ್ಲ, ಅವನಿಗೆ ಸೀಟಿ ಸದ್ದು ಕೇಳಿಸಿಕೊಳ್ಳುವ ವ್ಯವಧಾನವೆಲ್ಲಿತ್ತು? ಬಡಪಾಯಿ, ಸ್ವಲ್ಪ ರಸಿಕ, ನೋಡಿ." ಎಂದು ಶರತ್‌ಚಂದ್ರರು ಹೇಳಿದರು.

ಹೀಗೆ, ಬಗೆಬಗೆಯಾದ ಅನುಭವಗಳನ್ನು ಪಡೆಯುತ್ತ, ಕೊನೆಗೆ ಒಂದು ದಿವಸ ಅವರು ಗುವಾಲಂದೋವನ್ನು ತಲುಪಿದರು. ಈಗ ಶರತ್‌ಚಂದ್ರರು ಹೀಗೆಂದು ಘೋಷಿಸಿಬಿಟ್ಟರು: "ಹಡಗಿನ ಪ್ರಯಾಣ ಇಲ್ಲಿಗೆ ಸಾಕು. ಇಲ್ಲಿಂದ ನೇರವಾಗಿ ರೈಲಿನಲ್ಲಿ ಕಲ್ಕತ್ತೆಗೆ ಹೊರಡುತ್ತೇನೆ."

ಆದರೆ, ಈಗ ಯಾವ ರೈಲೂ ಇಲ್ಲವೆಂದು ಯೋಚಿಸಿ, ಮಾವಂದಿರಿಬ್ಬರೂ ಪೇಟೆಯಲ್ಲಿ ಸುತ್ತಾಡಿಕೊಂಡು ಬರಲು ಹೋದರು. ಅರ್ಧಘಂಟೆಯ ಬಳಿಕ ಹಿಂದಿರುಗಿ ಬಂದು ನೋಡಿದರೆ ಶರತ್‌ಚಂದ್ರರೂ ಇಲ್ಲ. ಆಳು-ಗೀಳುಗಳೂ ಇಲ್ಲ. ಸಾಮಾನುಗಳ ಸುಳಿವೂ ಇರಲಿಲ್ಲ. ಅವರು ರೈಲು ನಿಲ್ದಾಣಕ್ಕೆ ಹೋದರು. ಅಲ್ಲಿಯೂ ಯಾರೂ ಇರಲಿಲ್ಲ. ಮತ್ತೆ ಘಟ್ಟದ ಬಳಿಗೆ ಬಂದರು. "ಬಾಬೂಜಿ ಎಲ್ಲಿಗೆ ಹೋದರು?" ಎಂದು ಒಬ್ಬ ಹಮಾಲನನ್ನು ಕೇಳಿದರು.

ಹಿಂದೆ ಒಂದು ಹಡಗು ನಿಂತಿತ್ತು. ಅದರತ್ತ ಕೈ ತೋರುತ್ತ ಅವನೆಂದ: "ಅಲ್ಲಿದ್ದಾರೆ, ನೋಡಿ."

ಇಬ್ಬರು ಮಾವಂದಿರೂ ಅತ್ತ ನೋಡಿದರೆ, ರೇಲಿಂಗ್ ಸರಳನ್ನು ನೆಮ್ಮಿಕೊಂಡು ನಗುತ್ತ ನಿಂತಿದ್ದ ಶರತ್‌ಚಂದ್ರರು ಕಾಣಿಸಿದರು. ಹತ್ತಿರ ಹೋದ ಮೇಲೆ ಅವರು ಹೀಗೆಂದರು: "ಮೊದಲ ಹಡಗು ಇನ್ನೂ ಒಂದು ದಿವಸ ತಡವಾಗಿ ಹೊರಡುತ್ತದೆ. ಇದು ಈಗಲೇ ಹೊರಡಲಿದೆ. ಡೈಮಂಡ್ ಹಾರ್ಬರ್ ಮೂಲಕ ಹೋಗುತ್ತದೆ. ಐದಾರು ದಿವಸ ಹಿಡಿಯಬಹುದು. ಒಳ್ಳೆಯದು, ಸುಂದರಬನವನ್ನು ನೋಡಬಹುದಲ್ಲ! ಅಲ್ಲಿಯ ಕಾಡಿನಲ್ಲಿ 'ರಾಯಲ್ ಬೆಂಗಾಲ್ ಟೈಗರ್'ಗಳು ಕಾಣಿಸಿದರೆ, ನದಿಯಲ್ಲಿ ದೊಡ್ಡದೊಡ್ಡ ಮೊಸಳೆಗಳು ಕಾಣಿಸುತ್ತವೆ. ಸುಂದರವಾದ ಮರಗಳ ಮೇಲೆ ಬಗೆಬಗೆಯಾದ ಹಕ್ಕಿಗಳು ಕಾಣಸುತ್ತವೆ. ಭಯಂಕರವಾದ ಸರ್ಪಗಳು ಕಾಣದೊರೆಯಬಹುದು."

ಶರತ್‌ಚಂದ್ರರ ಮನಸ್ಸಿನ ಅಂತರಾಳದಲ್ಲಿ ಕುಳಿತಿದ್ದ ತರುಣ ಯಾಯಾವರ ಶರತ್

ಇವೆಲ್ಲವನ್ನೂ ಅದೆಷ್ಟು ಸುಂದರವಾದ ಮಾತುಗಳಲ್ಲಿ ಸೆರೆ ಹಿಡಿದನೆಂದರೆ ಕೊನೆಗೆ ಆ ಮಾವಂದಿರು ರೈಲಿನಲ್ಲಿ ಪ್ರಯಾಣಮಾಡುವ ವಿಚಾರವನ್ನು ಕೈಬಿಟ್ಟು ಹಡಗಿನಲ್ಲಿಯೇ ಹೋಗಲು ಒಪ್ಪಿದರು. ಹಡಗು ತುಂಬ ವೇಗವಾಗಿ ಮುಂದೆ ಮುಂದೆ ಸಾಗುತ್ತಿತ್ತು. 'ರಾಯಲ್ ಬೆಂಗಾಲ್ ಟೈಗರ್' ಮತ್ತು ಮೊಸಳೆಗಳನ್ನು ಕಾಣುವ ಆಸೆಯಲ್ಲಿಯೇ ದಿನಗಳು ಉರುಳಿ ಹೋದುವು. ಯಾವುದೇ ಒಂದು ಕಾಡುಬೆಕ್ಕಿನ ಬಾಲವನ್ನು ನೋಡುವ ಭಾಗ್ಯವೂ ಅವರಿಗೆ ದೊರೆಯಲಿಲ್ಲ.

ಹೀಗೆ ಮುಂದೆ ಸಾಗುತ್ತ ಆ ಹಡಗು ಒಂದು ದಿವಸ ಡೈಮಂಡ್ ಹಾರ್ಬರ್‌ಗೆ ಬಂದು ಸೇರಿತ್ತು. ಅವರಿಗೆಲ್ಲ ಹೋದ ಪ್ರಾಣ ಮರಳಿ ಬಂದಂತಾಯಿತು. ಸುಂದರಬನದ ಆ ಅನುಪಮ ಸೌಂದರ್ಯ ಅವರಿಗೆ ತುಂಬ ದುಬಾರಿಯಾಗಿ ಪರಿಣಮಿಸಿತು. ಮಾವನ ಆರೋಗ್ಯ ಹದಗೆಟ್ಟಿದ್ದನ್ನು ಕಂಡು ಸ್ವತಃ ಶರತ್‌ಚಂದ್ರರೂ ವಿಚಲಿತರಾದರು. "ಇದನ್ನು ನಿಲ್ಲಿಸು ಎಂದು ದೇವರನ್ನು ಬೇಡುತ್ತೇನೆ. ಇಲ್ಲದಿದ್ದರೆ, ಹಡಗಿನಿಂದ ಹಾರಿ ಆತ್ಮಹತ್ಯೆ ಮಾಡಿಕೊಂಡು ಬಿಡುತ್ತೇನೆ" ಎಂದು ಅವರು ಹೇಳಿದರು.

ಡೈಮಂಡ್ ಹಾರ್ಬರಿನ ತರುವಾಯ ಖಿದಿರ್‌ಪುರಕ್ಕೆ ಬಂದು ತಲುಪುವುದು ತಡವಾಗಲಿಲ್ಲ. ಆದರೆ, ಇನ್ನೊಂದು ಕಷ್ಟ ಅವರಿಗಾಗಿ ಕಾದಿತ್ತು..... ಗಿರೀಂದ್ರ ಮಾವನ ಸೂಟ್‌ಕೇಸಿನಿಂದ ಯಾರೋ ಇದ್ದ ಹಣವನ್ನೆಲ್ಲ ಕದ್ದುಬಿಟ್ಟಿದ್ದ ಸಂಗತಿ ಗೊತ್ತಾಯಿತು. ಶರತ್‌ಚಂದ್ರರು ಹೇಳಿದರು: "ಹೋಗಲಿ ಬಿಡಿ. ಏನಾಗಬೇಕಿತ್ತೋ ಆಗಿಬಿಟ್ಟಿದೆ. ನಾವೆಲ್ಲ ಒಟ್ಟಿಗೆ ಸೇರಿ ಆನಂದಿಸಿದ್ದೇವೆ. ಈ ನಷ್ಟವನ್ನೂ ಒಟ್ಟಾಗಿ ಹಂಚಿಕೊಳ್ಳೋಣ."

ಖಿದಿರ್‌ಪುರವನ್ನು ತಲುಪಿದ ಬಳಿಕ ಪ್ರಯಾಣಿಕರೆಲ್ಲ ತಮ್ಮ ತಮ್ಮ ಸಾಮಾನುಗಳನ್ನು ಜೋಡಿಸಿಕೊಳ್ಳ ತೊಡಗಿದರು. ಆದರೆ, ಶರತ್‌ಚಂದ್ರರು ಎಲ್ಲಿಯೋ ನಾಪತ್ತೆಯಾಗಿ ಬಿಟ್ಟಿದ್ದಾರೆ ಎಂಬುದನ್ನು ಆ ಮಾವಂದಿರು ಗಮನಿಸಿದರು. "ಬಾಬೂಜಿಯವರು ಟ್ರಾಮ್‌ನಲ್ಲಿ ಆಗಲೇ ಹೊರಟು ಹೋದರು" ಎಂದು ವೈಕುಂಠ ಹೇಳಿದ.

ಎಲ್ಲ ಸಾಮಾನುಗಳನ್ನೂ ಹೊತ್ತುಕೊಂಡು ಈ ಮಾವಂದಿರು ಮನೆ ತಲುಪಿದಾಗ ಶರತ್‌ಚಂದ್ರರು ಆರಾಮ ಕುರ್ಚಿಯಲ್ಲಿ ಒರಗಿಕೊಂಡು ಹುಕ್ಕಾ ಸೇದುತ್ತಿದ್ದುದನ್ನೂ, ಅವರ ಪಕ್ಕದಲ್ಲಿಯೇ ಅವರ ಎಂದಿನ ಜೊತೆಗಾರ ಭೇಲೂ ತುಂಬ ಪ್ರೀತಿಯಿಂದ ಅವರನ್ನು ನಿಟ್ಟಿಸುತ್ತಿದ್ದುದನ್ನೂ ಕಂಡರು. ಮನೆಯಿಂದ ಹೊರಗೆ ಹೋಗಿಯೇ ಇಲ್ಲವೇನೋ ಎಂಬಂತೆ ತೋರುತ್ತಿತ್ತು. ಮಾವ ಕೇಳಿದ: "ಅದೇನು ಅಷ್ಟು ಬೇಗ ಬಂದು ಬಿಟ್ಟೆಯಲ್ಲ! ಹೇಳಿಯಾದರೂ ಬರಬಹುದಾಗಿತ್ತು."

ಶಾಂತಭಾವದಿಂದ ಶರತ್‌ಚಂದ್ರರು ಉತ್ತರಿಸಿದರು: "ಕೇಳಿದ್ದರೆ, ಬರಲು ನನ್ನನ್ನು ಬಿಟ್ಟುಬಿಡುತ್ತಿದ್ದೆಯೇನು? ಸರಿ; ಈಗ ವಿಶ್ರಾಂತಿ ತೆಗೆದುಕೊಳ್ಳಿ, ಸ್ನಾನಮಾಡಿ; ಬಟ್ಟೆಬರೆ ಒಗೆದುಕೊಳ್ಳಿ; ಊಟಮಾಡಿ."

## 11

ರಾಜಕೀಯ ಕ್ಷೇತ್ರದಲ್ಲಿ ಹಿಂದೆಂದಿಗಿಂತಲೂ ಹೆಚ್ಚಿನ ಶಾಂತಿಯ ವಾತಾವರಣವಿತ್ತು. ಸವಿನಯ ಕಾಯ್ದೆಭಂಗದ ಚಳವಳಿಯ ಕಾಲದಲ್ಲಿ ಇದ್ದಂಥ ಉತ್ಸಾಹ ಈಗ ಉಳಿದು ಬಂದಿರಲಿಲ್ಲ. ಆದರೆ, ಹಳ್ಳಿಯ ಸಂಘಟನೆಯನ್ನು ಸಾಧಿಸುವ ವಿಷಯದಲ್ಲಿ ಹಾಗೂ ಚಂದಾಸಂಗ್ರಹಿಸುವ ಕಾರ್ಯದಲ್ಲಿ ಈಗಲೂ ಅವರು ಆಸಕ್ತಿ ವಹಿಸುತ್ತಿದ್ದರು. ದೇಶಬಂಧು ಅವರ ಕೀರ್ತಿ ಮತ್ತು ಪ್ರಭಾವ ಒಂದೇ ಸಮನೆ ಹೆಚ್ಚುತ್ತ ನಡೆದಿತ್ತು. ಹಿಂದೂಗಳು ಮತ್ತು ಮುಸ್ಲಿಮರ ನಡುವೆ ಸ್ನೇಹ ಮತ್ತು ಸದ್ಭಾವನೆಗಳನ್ನು ಹೆಚ್ಚಿಸುವುದಕ್ಕಾಗಿ ರೂಪಿಸಿದ್ದ 'ಬಂಗಾಳದ ಒಡಂಬಡಿಕೆ'ಗೆ ಅವರೇ ಕಾರಣರಾಗಿದ್ದರು. ಅವರ ಬಗ್ಗೆ ಶರತ್‌ಚಂದ್ರರ ಮನಸ್ಸಿನಲ್ಲಿ ಅಗಾಧವಾದ ಶ್ರದ್ಧೆ ಮತ್ತು ಪ್ರೀತಿ ತುಂಬಿತ್ತು. ಆದರೆ, ಈ ಒಡಂಬಡಿಕೆಯ ವಿಷಯದಲ್ಲಿ ಅವರಿಗೆ ನೂರಕ್ಕೆ ನೂರರಷ್ಟು ಏಕಾಭಿಪ್ರಾಯವೇನೂ ಇರಲಿಲ್ಲ. ಅವಕಾಶ ದೊರೆತಾಗ ಒಮ್ಮೆ ದೇಶಬಂಧು ಅವರು ಶರತ್‌ಚಂದ್ರರನ್ನು ಕೇಳಿದ್ದರು: "ಹಿಂದೂ-ಮುಸ್ಲಿಮರ ಏಕತೆಯ ವಿಷಯದಲ್ಲಿ ನಿಮಗೆ ನಂಬಿಕೆ ಇದೆಯೆ ?"

ಶರತ್‌ಚಂದ್ರರು ಹೇಳಿದರು: "ಇಲ್ಲ."

ದೇಶಬಂಧು ಅವರೆಂದರು: "ಮುಸ್ಲಿಮರ ಬಗೆಗಿನ ನಿಮ್ಮ ಪ್ರೀತಿ ಅಷ್ಟೊಂದು ಪ್ರಸಿದ್ಧವಾಗಿದೆಯಲ್ಲ !"

ಶರತ್‌ಚಂದ್ರರೆಂದರು: "ಮನುಷ್ಯನ ಯಾವುದೇ ಒಳ್ಳೆಯ ಇಚ್ಛೆ ಗುಪ್ತವಾಗಿರಲಾರದು. ನನ್ನ ಈ ಖ್ಯಾತಿ ನಿಮ್ಮಂಥ ದೊಡ್ಡ ಮನುಷ್ಯರ ಕಿವಿಗೂ ಬಿದ್ದಿದೆಯಲ್ಲ! ಆದರೆ ನಿಮ್ಮ ಹೊಗಳಿಕೆ ನನಗೆ ಯಾವಾಗಲೂ ಲಜ್ಜೆಯನ್ನುಂಟುಮಾಡುತ್ತದೆ."

ದೇಶಬಂಧು ಅವರು ಕೇಳಿದರು: "ಇದರ ಹೊರತು ಬೇರೆ ಯಾವ ದಾರಿ ಇದೆ ಎಂಬುದನ್ನು ನೀವು ತಿಳಿಸಬಲ್ಲಿರಾ ? ಈ ಮಧ್ಯೆ ಅವರ ಸಂಖ್ಯೆ ಐವತ್ತು ಲಕ್ಷದಷ್ಟು ಹೆಚ್ಚಿದೆ. ಹತ್ತು ವರ್ಷದ ನಂತರ ಸ್ಥಿತಿ ಏನಾದೀತು ಎಂಬುದನ್ನಾದರೂ ತಿಳಿಸಿ."

ಶರತ್‌ಚಂದ್ರರು ಹೇಳಿದರು: "ಇದು ಮುಸ್ಲಿಮರ ಬಗೆಗಿನ ಪ್ರೀತಿಯ ಸರಿಯಾದ ನಿದರ್ಶನವೇನೂ ಅಲ್ಲ. ಅಂದರೆ, ಹತ್ತು ವರ್ಷಗಳ ಬಳಿಕ ಏನಾಗಬಹುದು ಎಂಬುದನ್ನು ಕಲ್ಪಿಸಿಕೊಂಡರೆ ನಿಮ್ಮ ಮುಖ ಬಿಳಿಚಿಕೊಳ್ಳುತ್ತದೆಯಲ್ಲವೆ! ಅದಕ್ಕೂ ನನ್ನ ನಿಲುವಿಗೂ ಅಂಥ ಹೆಚ್ಚಿನ ವ್ಯತ್ಯಾಸವೇನೂ ಇರುವಂತೆ ಕಾಣುವುದಿಲ್ಲ. ಹೀಗಾಗಿ ಅವರು ಏನು ಬೇಕಾದರೂ ಆಗಲಿ, ನನ್ನ ದೃಷ್ಟಿಯಲ್ಲಿ ಸಂಖ್ಯೆಯೇ ಅಂಥ ದೊಡ್ಡ ಸಂಗತಿಯೇನೂ ಅಲ್ಲ. ಹಾಗೂ ಆಗಿದ್ದರೆ ಮತ್ತು ಸಂಖ್ಯೆಗೇ ಮಹತ್ವವಿದ್ದಿದ್ದರೆ ನಾಲ್ಕು ಕೋಟಿಯಷ್ಟಿರುವ ಆಂಗ್ಲರು ನೂರೈವತ್ತು ಕೋಟಿಯಷ್ಟಿರುವ ಭಾರತೀಯರ ತಲೆಯ ಮೇಲೆ ಕಾಲಿರಿಸಿ, ಜಗತ್ತಿನಾದ್ಯಂತ ತಮ್ಮ ಪ್ರಭಾವ ವಲಯವನ್ನು ವಿಸ್ತರಿಸುತ್ತಿರಲಿಲ್ಲ. 'ನಮಃ ಶೂದ್ರ', 'ಮಾಲೋ', 'ನಟ', 'ರಾಜವಂಶಿ', 'ಪಾಥ' ಮೊದಲಾದವರನ್ನೆಲ್ಲ ನಿಮ್ಮ ತೆಕ್ಕೆಗೆ ತೆಗೆದುಕೊಳ್ಳಿ. ನಾಡಿನ ನಡುವೆ, ಹತ್ತು ಜನರ ನಡುವೆ ಇವರಿಗೆ ಗೌರವಪೂರ್ಣಕವಾದ ಸ್ಥಾನ

ದೊರೆಯುವಂತೆ ಮಾಡಿ, ಇವರನ್ನು ಮೊದಲು ಮನುಷ್ಯರನ್ನಾಗಿಸಿ. ಸ್ತ್ರೀಯರ ವಿಷಯದಲ್ಲಿ ಬಹಳ ಕಾಲದಿಂದಲೂ ನಡೆದುಕೊಂಡು ಬಂದಿರುವ ಅನ್ಯಾಯ ಮತ್ತು ಕ್ರೂರ ಸಾಮಾಜಿಕ ವರ್ತನೆಗಳಿಗೆ ತಡೆಯೊಡ್ಡುವ ವಿಧಾನಗಳನ್ನು ಯೋಚಿಸಿ. ಆಮೇಲೆ ನೀವು ಆ ಬಣದ ಸಂಖ್ಯೆಯ ವಿಷಯದಲ್ಲಿ ಚಿಂತೆಗೆ ಒಳಗಾಗುವ ಅಗತ್ಯವೇ ಉಂಟಾಗುವುದಿಲ್ಲ."

ಇದು ಹೇಗಾದರೂ ಇರಲಿ, ಈ ಒಡಂಬಡಿಕೆಯಿಂದ ದೇಶಬಂಧು ಅವರ ಕೀರ್ತಿ ತುಂಬ ಹೆಚ್ಚಿತು. ಗಾಂಧೀಜಿಯವರೊಡನೆಯೂ ಅವರು ಒಪ್ಪಂದಕ್ಕೆ ಬಂದರು. ಹಳ್ಳಿಗಳಲ್ಲಿ ರಚನಾತ್ಮಕ ಕಾರ್ಯಗಳನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಅವರು ತಮ್ಮ ಎಲ್ಲಾ ಸಮಯವನ್ನು ವಿನಿಯೋಗಿಸಬೇಕೆಂದು ಅವರೀಗ ನಿಶ್ಚಯಿಸಿದರು. ಶರತ್‌ಚಂದ್ರರೇನೋ ಅವರ ಜೊತೆಗಿದ್ದರು; ಆದರೆ ಆರೋಗ್ಯ ಸಹಕರಿಸುತ್ತಿರಲಿಲ್ಲ. ಕರಾಳ ಮಸೂದೆಗಳ ಬಗ್ಗೆ ಪರಿಷತ್ತಿನಲ್ಲಿ ಚರ್ಚೆ ನಡೆಯಲಿದ್ದ ಸಂದರ್ಭದಲ್ಲಿ, ಅವರನ್ನು ಸ್ಟ್ರೆಚರ್ ಮೇಲೆ ಪರಿಷತ್ ಭವನಕ್ಕೆ ಕರೆತರಲಾಯಿತು. ಇದಾದ ತರುವಾಯ ಪೂರ್ಣವಿಶ್ರಾಂತಿ ಪಡೆಯಬೇಕೆಂದು ವೈದ್ಯರುಗಳು ಅವರಿಗೆ ಸಲಹೆ ನೀಡಿದರು. ಹೀಗೆ ವಿಶ್ರಾಂತಿಗೆಂದು ಹೊರಡುವುದಕ್ಕೆ ಮೊದಲು ಶರತ್‌ಚಂದ್ರರು ಅವರನ್ನು ಕಾಣಲು ಬಂದರು. ಅವರನ್ನು ನೋಡಿ, ಹತ್ತಿರ ಬಂದು ಕುಳಿತುಕೊಳ್ಳುವಂತೆ ದೇಶಬಂಧುಗಳು ಸನ್ನೆ ಮಾಡಿದರು. "ಇದೇ ಕೊನೆಯ ಭೇಟಿ ಎಂದು ಕಾಣುತ್ತದೆ, ಶರತ್" ಎಂದರು.

ಶರತ್‌ಚಂದ್ರರು ಹೇಳಿದರು: "ಸ್ವರಾಜ್ಯವನ್ನು ನನ್ನ ಕಣ್ಣಿನಿಂದಲೇ ನೋಡಿ, ಆಮೇಲೆ ಕಣ್ಣು ಮುಚ್ಚುತ್ತೇನೆಂದು ನೀವೇ ಹೇಳಿದ್ದೀರಲ್ಲ."

ಒಂದು ಕ್ಷಣದ ಮಟ್ಟಿಗೆ ಸುಮ್ಮನಿದ್ದು, ದೇಶಬಂಧು ಅವರೆಂದರು: "ಅದಕ್ಕೆ ಅವಕಾಶವೇ ದೊರೆಯುವುದಿಲ್ಲವೇನೋ."

ಶರತ್‌ಚಂದ್ರರು ಹೇಳಿದರು: "ನೀವು ಜೈಲಿನಲ್ಲಿದ್ದಾಗ ಕೆಲವು ವ್ಯಕ್ತಿಗಳು ಜೈಲಿನ ಗೋಡೆಗಳಿಗೇ ನಮಸ್ಕಾರ ಮಾಡುತ್ತಿದ್ದರು. 'ನಮ್ಮ ದೇಶಬಂಧುಗಳು ಜೈಲಿನಲ್ಲಿದ್ದಾರೆ. ಅವರನ್ನು ಕಣ್ಣಾರೆ ಕಾಣಲು ಮಾರ್ಗವಿಲ್ಲ. ಆದ್ದರಿಂದ, ನಾವು ಜೈಲಿನ ಗೋಡೆಗಳಿಗೇ ನಮಸ್ಕಾರ ಮಾಡುತ್ತಿದ್ದೇವೆ' ಎಂದು ಅವರು ಹೇಳುತ್ತಿದ್ದರು. ಆ ವ್ಯಕ್ತಿಗಳು ನಿಮ್ಮನ್ನೀಗ ಹೇಗೆ ಬಿಟ್ಟಿದ್ದಾರು ?"

ದೇಶಬಂಧು ಅವರ ಕಣ್ಣು ತುಂಬಿ ಬಂತು. ಸುಧಾರಿಸಿಕೊಳ್ಳಲು ಅವರಿಗೆ ಕೆಲವು ನಿಮಿಷಗಳೇ ಬೇಕಾದುವು. ಆ ಬಳಿಕ ಅವರು ಈ ವಿಚಾರವನ್ನು ಚರ್ಚಿಸಲೇ ಇಲ್ಲ. ಬೇರೆ ಮಾತುಗಳನ್ನು ಆಡತೊಡಗಿದರು. ಸುಮಾರು ಇಪ್ಪತ್ತು ನಿಮಿಷಗಳಷ್ಟು ಅವಧಿ ಕಳೆದಿತ್ತು. ಮನೆಯ ಮೂಲೆಯಲ್ಲಿ ಇಟ್ಟಿದ್ದ ಶರತ್‌ಚಂದ್ರರ ದಪ್ಪ ಬೆತ್ತವನ್ನು ಎತ್ತಿಕೊಂಡು ಬಂದು, ಡಾ. ದಾಸಗುಪ್ತ ಅವರು ಅದನ್ನು ಶರತ್‌ಚಂದ್ರರ ಕೈಗೆ ಕೊಟ್ಟರು. ಇದನ್ನು ಕಂಡು ದೇಶಬಂಧು ಅವರಿಗೆ ನಗು ಬಂತು. "ಸೂಚನೆ ಗೊತ್ತಾಯಿತೇನಪ್ಪ, ಶರತ್ ? ಸ್ವಲ್ಪ ಮಾತುಕತೆ ಆಡಲೂ ಈ ಜನ ನಮಗೆ ಅವಕಾಶ ಕೊಡುವುದಿಲ್ಲವಲ್ಲ" ಎಂದು ಹೇಳಿದರು.

ದೇಶಬಂಧು ಅವರು ಪಟ್ನಾಗೆ ಹೋದರು. ಅಲ್ಲಿ ಅವರ ಆರೋಗ್ಯ ಸ್ವಲ್ಪ

ಸುಧಾರಿಸಿತು. ಆದರೆ, ಆ ಹೊತ್ತಿಗೆ ವಿಧಾನ ಸಭೆಯ ಅಧಿವೇಶನ ಆರಂಭವಾಗುವುದಿತ್ತು. ಅವರು ಮತ್ತೆ ಕಲ್ಕತ್ತೆಗೆ ಹಿಂದಿರುಗಿದರು. ಅವರು ರಾಜಕೀಯ ಕೊಲೆ ಮತ್ತು ಹಿಂಸಾಚಾರಗಳನ್ನು ವಿರೋಧಿಸುತ್ತಿದ್ದರು. ಒಂದು ಹೇಳಿಕೆಯನ್ನು ಹೊರಡಿಸಿ, ಅವರು ತಮ್ಮ ಈ ನಿಲುವನ್ನು ಸಮರ್ಥಿಸಿಕೊಂಡರು. ಈ ಹೇಳಿಕೆ ಬ್ರಿಟಿಷ್ ಸರ್ಕಾರದ ಮೇಲೆ ತುಂಬ ಪ್ರಭಾವ ಬೀರಿತು. ಮತ್ತೊಮ್ಮೆ ಅದು ಒಡಂಬಡಿಕೆಯ ಮಾತುಕತೆಗಳನ್ನು ಆರಂಭಿಸುವ ಇಚ್ಛೆಯನ್ನು ತೋರಿತು. ಬ್ರಿಟಿಷ್ ಸರ್ಕಾರದ ಹೃದಯ ಪರಿವರ್ತನೆ ಆಗುತ್ತಿದೆ ಎಂದು ದೇಶಬಂಧು ಅವರಿಗೆ ನಿಜವಾಗಿಯೂ ನಂಬಿಕೆ ಮೂಡತೊಡಗಿತ್ತು. ಆದರೆ, ಈ ವಿಚಾರ ಅವರ ಗೆಳೆಯರಿಗೆ ಹಾಗೂ ಅನುಯಾಯಿಗಳಿಗೆ ತುಂಬ ಕೋಪವನ್ನುಂಟು ಮಾಡಿತ್ತು. ಪ್ರಾದೇಶಿಕ ಸ್ವಾಯತ್ತಾಧಿಕಾರವನ್ನು ಒಪ್ಪಿಕೊಂಡು, ಗವರ್ನರ್ ಆಗಬೇಕೆಂಬ ಪ್ರಲೋಭನೆಗೆ ಒಳಗಾಗಿದ್ದಾರೆ ಎಂದು ಅವರ ಮೇಲೆ ಆರೋಪ ಹೊರಿಸುವ ಮಟ್ಟಕ್ಕೂ ಇದು ಹೋಗಿತ್ತು. ಆದರೆ, ಸಂಕಷ್ಟದ ಈ ಕ್ಷಣದಲ್ಲಿಯೂ ಶರತ್‌ಚಂದ್ರರು ಅವರಿಗೆ ಬೆಂಬಲವಾಗಿ ನಿಂತಿದ್ದರು. ದಾಸ್ ಬಾಬೂಗಳು ಒಂದು ದಿವಸ ಅವರೊಡನೆ ಹೀಗೆಂದಿದ್ದರು: "ಶರತ್‌ಬಾಬೂ, ಈ ಲೋಕದಲ್ಲಿ ಒಡಂಬಡಿಕೆ ಮಾಡಿಕೊಳ್ಳುವುದನ್ನು ಕಲಿಯದೆ ಇದ್ದರೆ ಏನನ್ನೂ ಕಲಿತಂತೆಯೇ ಅಲ್ಲವೆಂದು ನನಗೆ ತೋರುತ್ತದೆ. ಔದಾರ್ಯಹೀನ ತಂಡದ ಸರ್ಕಾರ ಜಗತ್ತಿನಲ್ಲಿಯೇ ಅತ್ಯಂತ ನಿಷ್ಕರುಣ ಸರ್ಕಾರವಾಗಿರುತ್ತದೆ. ಅವರು ಮಾಡದೆ ಇದ್ದಂಥ ಅನಾಚಾರ ಯಾವುದೂ ಲೋಕದಲ್ಲಿ ಇರುವುದಿಲ್ಲ. ಆದರೆ, ಒಡಂಬಡಿಕೆ ಮತ್ತು ಸಂಧಾನಗಳನ್ನು ಏರ್ಪಡಿಸಿಕೊಂಡಾಗ ನಮಗೆ ಇಂಥ ಮಿತ್ರ ಇನ್ನೊಬ್ಬನಿಲ್ಲ ಎಂದು ತೋರುತ್ತದೆ."

ಈ ನಂಬಿಕೆಯೇ ಅವರ ಮೇಲಿನ ಅಪವಾದಕ್ಕೂ ಕಾರಣವಾಯಿತು. ಅವರ ಆರೋಗ್ಯ ಇನ್ನಷ್ಟು ಹದಗೆಡತೊಡಗಿತು. ಅವರು ಪಟ್ನಾದ ಮೂಲಕ ದಾರ್ಜಿಲಿಂಗ್‌ಗೆ ಹೋಗಬೇಕೆಂದು ತೀರ್ಮಾನಿಸಿಕೊಂಡರು. ಆಗ[1] ಅವರನ್ನು ಕಾಣಲು ಶರತ್‌ಚಂದ್ರರು ರೈಲು ನಿಲ್ದಾಣಕ್ಕೆ ಬಂದಿದ್ದರು. ಈ ಬಗ್ಗೆ ಶಚಿನಂದನ್ ಹೀಗೆ ಬರೆದಿದ್ದಾರೆ: "ತಮ್ಮ ಈ ಮಿತ್ರನೊಂದಿಗೆ ತಮ್ಮ ಮನಸ್ಸಿನ ವ್ಯಥೆಯನ್ನು ತೋಡಿಕೊಳ್ಳುತ್ತ ದಾಸ್ ಬಾಬೂಗಳು ಹೇಳಿದರು: 'ಶರತ್‌ಬಾಬೂ, ನಾನು ಸುಧಾರಣವಿಂದಿಯಾಗಿ ಬಿಟ್ಟಿದ್ದೇನೆ. ನಾನು ಗವರ್ನರ್ ಆಗಲು ಆಸೆ ಪಟ್ಟಿದ್ದೇನೆ. ಬಂಗಾಳ ಕೊನೆಗೆ ನನ್ನ ವಿಷಯದಲ್ಲಿ ಈ ಭಾವನೆಯನ್ನು ಬೆಳೆಸಿಕೊಂಡು ಬಿಟ್ಟಿದೆಯಲ್ಲ.'

"ಶರತ್‌ಚಂದ್ರರು ಮೌನವಾಗಿ ತಮ್ಮ ಎರಡೂ ಕೈಗಳಿಂದ ದೇಶಬಂಧು ಅವರ ಕ್ಷೀಣವಾಗಿದ್ದ ಎರಡೂ ಕರಪಲ್ಲವಗಳನ್ನು ಒತ್ತಿಹಿಡಿದುಕೊಂಡಿದ್ದರು. ಆಮೇಲೆ, ನಿಧಾನವಾಗಿ ತಮ್ಮ ಹೃದಯಾಂತರಾಳದ ಸಮಸ್ತ ಪ್ರೀತ್ಯಾದರಗಳನ್ನೂ ಅವರ ಮೇಲೆ ಸುರಿಸುತ್ತ ಹೇಳಿದರು: 'ದಯವಿಟ್ಟು ಬೇಸರ ಮಾಡಿಕೊಳ್ಳಬೇಡಿ. ನೀವು ವ್ಯಥೆಪಟ್ಟು, ನಾಡು ಮುಂದೆ ಪ್ರಾಯಶ್ಚಿತ್ತ ಮಾಡಿಕೊಳ್ಳದಂತೆ, ಅದರ ಹಾದಿಯನ್ನೇ

1. ಮೇ 11, 1925

ಮುಚ್ಚಿಬಿಡಬೇಡಿ. ಇಡೀ ನಾಡಿಗಾಗಿ, ಇಡೀ ಸಮುದಾಯಕ್ಕಾಗಿ ಈ ದುಃಖವನ್ನು ಎದೆಯಲ್ಲಿ ಅಡಗಿಸಿಕೊಂಡಿರಿ. ಸೀತೆಯೂ ಅಗ್ನಿಪ್ರವೇಶ ಮಾಡಬೇಕಾಯಿತಲ್ಲವೆ! ಯೋಚಿಸಿನೋಡಿ. ಅಸಾಧಾರಣ ವ್ಯಕ್ತಿಗಳೆಂಬುವವರೇ ತುಚ್ಛವಾದುದನ್ನು ಪರಿತ್ಯಜಿಸಲಾರದೆ ಹೋದರೆ, ಸ್ವತಃ ತುಚ್ಛರಾಗಿರುವಂಥ ವ್ಯಕ್ತಿಗಳ ತುಚ್ಛತೆ ಹೇಗೆ ದೂರವಾದೀತು? ಈ ದುಃಖವನ್ನು ದಯವಿಟ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ನಮ್ಮೆಲ್ಲರಿಗಾಗಿ ಇದನ್ನು ಅಡಗಿಸಿಕೊಂಡಿರಿ.'

"ಆದರೆ, ದೇಶಬಂಧು ಅವರ ಮನಸ್ಸು ಒಡೆದು ಹೋಗಿತ್ತು. ತುಂಬಿ ಬಂದ ಗಂಟಲಿನಿಂದ ಅವರು ಹೇಳಿದರು: 'ತಾಯಿ, ನಾನಿನ್ನು ಸಹಿಸಲಾರೆ. ಈ ಸಲ ನನ್ನನ್ನು ಕರೆಸಿಕೊಂಡು ಬಿಡು.'

"ಶರತ್‌ಚಂದ್ರರು ಅಲ್ಲಿ ಕುಳಿತಿದ್ದಂತೆಯೇ, ಅವರ ಕೈಗಳ ಹತ್ತು ಬೆರಳುಗಳನ್ನು ತಮ್ಮ ಕೈಗಳ ಹತ್ತು ಬೆರಳುಗಳೊಂದಿಗೆ ಬೆಸೆದು, ಮೌನವಾಗಿಯೇ ತಮ್ಮೆಲ್ಲ ಶ್ರದ್ಧೆ, ವಿಶ್ವಾಸ ಮತ್ತು ಸಂವೇದನೆಗಳನ್ನು ಅವರ ಮೇಲೆ ಮಳೆಗರೆಯುತ್ತಿದ್ದರು. ಕೆಲವು ಕ್ಷಣಗಳ ಬಳಿಕ ಮತ್ತೆ ಹೇಳಿದರು: 'ನೀವು ಆರೋಗ್ಯವಂತರಾಗಿ ದಾರ್ಜಲಿಂಗ್‌ನಿಂದ ಹಿಂದಿರುಗಿ ಬನ್ನಿ. ಎಲ್ಲವೂ ಸರಿಯಾಗುತ್ತದೆ. ನೀವು ಎಲ್ಲವನ್ನೂ ತ್ಯಜಿಸಿರುವಂಥವರು; ಭ್ರಾಂತಿದೂರರಾಗಿರುವಂಥವರು; ಅಗ್ನಿಯಂತೆ ಪರಿಶುದ್ಧವಾಗಿರುವಂಥವರು. ನೀವೇ ನಾಡಿನ ನೇತಾರರು. ನಾಡು ನಿಮ್ಮದು; ಬೇರೆ ಯಾರೋ ನಾಡಾಡಿಯದಲ್ಲ'."

ಆದರೆ, ದೇಶಬಂಧು ಅವರ ಆರೋಗ್ಯ ಸುಧಾರಿಸಲೇ ಇಲ್ಲ. ಕೆಲವೇ ದಿನಗಳ ಬಳಿಕ ಅವರು ದಾರ್ಜಲಿಂಗ್‌ನಲ್ಲಿ ಕೊನೆಯುಸಿರನ್ನೆಳೆದರು.[1] ಇಡೀ ದೇಶ ಅವರಿಗಾಗಿ ಕಂಬನಿ ಸುರಿಸಿತು. ಬಂಗಾಳದಲ್ಲಂತೂ ಬಿರುಗಾಳಿಯೇ ಬೀಸಿತು. ಅವರ ಕಟ್ಟಾ ವಿರೋಧಿಗಳಾಗಿದ್ದ ಶ್ಯಾಮಸುಂದರ ಚಕ್ರವರ್ತಿ ಅವರು ತುಂಬ ಮಾರ್ಮಿಕ ಶಬ್ದಗಳಲ್ಲಿ ಹೀಗೆಂದು ಬರೆದರು: "ಓ ಬಂಗಾಳವೆ, ನಿನ್ನ ಬಳಿ ಕಣ್ಣೀರಿದ್ದರೆ, ಅದನ್ನಿಂದು ಹರಿಸಿಬಿಡು." ಶ್ಮಶಾನ ಘಟ್ಟದಲ್ಲಿ ನಡೆದ ಶೋಕಸಭೆಯಲ್ಲಿ ಮಾತನಾಡಿದ ಏಕೈಕ ವ್ಯಕ್ತಿಯಾಗಿದ್ದ ಮಹಾತ್ಮ ಗಾಂಧೀಜಿಯವರೂ ಒಂದು ಹಂತದಲ್ಲಿ ಬಿಕ್ಕಿಬಿಕ್ಕಿ ಅತ್ತಿದ್ದರು.

ಶರತ್‌ಚಂದ್ರರ ದುಃಖಕ್ಕೆ ಮೇರೆಯೇ ಇರಲಿಲ್ಲ. ಆರಾಮ ಕುರ್ಚಿಯಲ್ಲಿ ಕುಳಿತಿದ್ದಂತೆಯೇ ಶೋಕದ ಆವೇಗದಿಂದಾಗಿ ಅವರು ಏದುಸಿರು ಬಿಡುತ್ತಿದ್ದರು. ಬಿಕ್ಕಿಬಿಕ್ಕಿ ಅಳುತ್ತ ಅವರು ಹೀಗೆಂದರು: "ಎಲ್ಲವೂ ಮುಗಿದು ಹೋಯಿತು. ನಾವೇ ಅವರನ್ನು ಕೊಂದುಬಿಟ್ಟೆವು. ಯಾರು ತಾನೆ ಅಷ್ಟೊಂದು ಪೆಟ್ಟುಗಳನ್ನು ಸಹಿಸಬಲ್ಲರು?"

ಶ್ಮಶಾನದಲ್ಲಿ ಸೇರಿದ್ದ ಅಪಾರ ಜನಸಂದಣಿಯನ್ನು ಕಂಡು ಅವರೆಂದರು: "ಈ ಜನ ಅವರು ಬದುಕಿದ್ದಾಗ ಅವರಿಗೆ ಬೆಂಬಲವಾಗಿ ನಿಂತಿದ್ದರೆ, ಬಹುಶಃ ಅವರು ಅಕಾಲ ಮೃತ್ಯುವಿಗೆ ತುತ್ತಾಗುತ್ತಿರಲಿಲ್ಲ. ಮಹಾಸಂತ ಕವಿ ಗೋವಿಂದದಾಸರು ಹೇಳಿದ್ದು ಸರಿಯಾಗಿಯೇ ಇದೆ: "ಓ ಬಂಗಾಳದ ಸೋದರರೇ, ನಾನು ಸತ್ತಮೇಲೆ

---

1. ಜೂನ್ 16, 1925

ನನ್ನ ಚಿತಾಭಸ್ಮದ ಮೇಲೆ ನೀವು ಮಠವನ್ನು ಸ್ಥಾಪಿಸಿಬಿಡುತ್ತೀರಿ."

ಹಲವು ದಿನಗಳವರೆಗೆ ಅವರ ಸ್ಥಿತಿ ಹೀಗೆಯೇ ಇತ್ತು. ಉದ್ವೇಗದಿಂದ ಎದ್ದು ಕುಳಿತು ಬಿಡುತ್ತಿದ್ದರು ಹಾಗೂ ಆವೇಶದಲ್ಲಿ ಹೀಗೆಲ್ಲ ಹೇಳುತ್ತ ಇದ್ದರು: "ದಾದಾ, ನಮ್ಮ ಅಪರಾಧವನ್ನು ಕ್ಷಮಿಸಿಬಿಡಿ. ನಾವು ನಿಮ್ಮನ್ನು ನಂಬಿದ್ದೇವೆ. ನಿಮ್ಮನ್ನು ಪ್ರೀತಿಸುತ್ತೇವೆ; ನಾವು ಕೇವಲ ನಿಮ್ಮವರು. ....ಅವರು ಇದರ ಸೇಡು ತೀರಿಸಿಕೊಂಡರು. ನಾವು ಅವರನ್ನು ಅಳಿಸಿದೆವು. ಅವರು ನಮ್ಮನ್ನು ಅಳಿಸಿದರು. ಅಸಲು, ಬಡ್ಡಿ ಎಲ್ಲವನ್ನೂ, ವಸೂಲು ಮಾಡಿಕೊಂಡುಬಿಟ್ಟರು. ಒಳ್ಳೆಯದೇ ಆಯಿತು. ಅವರು ನಮ್ಮ ಯೋಗ್ಯತೆಗೆ ಮೀರಿದ ವ್ಯಕ್ತಿಯಾಗಿದ್ದರು."

ದೇಶಬಂಧು ಅವರ ಬಗ್ಗೆ ಅವರು ತುಂಬ ಹೃದಯಸ್ಪರ್ಶಿಯಾದ 'ಸಂಸ್ಮರಣ ಲೇಖನ'ವೊಂದನ್ನು ಬರೆದರು. ಬಹುದೂರದ ಮಾಂಡಲೇ ಜೈಲಿನಲ್ಲಿದ್ದ, ದೇಶಬಂಧು ದಾಸ್ ಅವರ ಪರಮ ಶಿಷ್ಯರಾಗಿದ್ದ ಸುಭಾಷ್‌ಚಂದ್ರ ಬೋಸ್ ಅವರು 'ಸಂಸ್ಮರಣ - ಈ ಲೇಖನ'ವನ್ನು ಮೂರುಸಲ ಓದಿ, ಅವರಿಗೆ ಸುದೀರ್ಘಪತ್ರವನ್ನು ಬರೆದು, ಹೀಗೆಂದು ತಿಳಿಸಿದ್ದರು: "ಮಾನವ ಚಾರಿತ್ರ್ಯವನ್ನು ಗುರುತಿಸುವ ನಿಮ್ಮ ದೃಷ್ಟಿ ಅದ್ಭುತವಾದದ್ದು. ದೇಶಬಂಧು ಅವರೊಡನಿದ್ದ ನಿಮ್ಮ ನಿಕಟ ಪರಿಚಯವನ್ನೂ, ಆತ್ಮೀಯತೆಯನ್ನೂ, ಸಣ್ಣಪುಟ್ಟ ಘಟನೆಗಳನ್ನೂ ವಿಶ್ಲೇಷಿಸಿರುವ ನಿಮ್ಮಲ್ಲಿ ರಸವತ್ತಾದ ನಿರೂಪಣೆಯ ಹಾಗೂ ಸತ್ಯವನ್ನು ಎತ್ತಿ ಹಿಡಿಯುವ ಸಾಮರ್ಥ್ಯ ಅಡಗಿದೆ. ಹೀಗೆ ಮಾಡುವುದರ ಮೂಲಕ ನೀವೆಂಥ ಸುಂದರವಾದ ಲೇಖನವನ್ನು ಬರೆದಿದ್ದೀರಿ."[1]

ದೇಶಬಂಧು ಮತ್ತು ಶರತ್‌ಚಂದ್ರ ಅವರ ನಡುವಣ ಸಂಬಂಧಗಳು ನಿಜಕ್ಕೂ ಅರ್ಥಪೂರ್ಣವಾಗಿದ್ದುವು. ದೇಶಬಂಧು ಅವರಿಗೆ ಶರತ್‌ಚಂದ್ರರ ವಿಷಯದಲ್ಲಿ ಎಷ್ಟು ಗೌರವಾದರಗಳಿದ್ದುವೆಂದರೆ, ಅನೇಕ ಸಲ ಅವರು ಸಲಹೆ-ಸಮಾಲೋಚನೆಗಳಿಗಾಗಿ ಶರತ್‌ಚಂದ್ರರ ಮನೆಗೇ ಬಂದು ಬಿಡುತ್ತಿದ್ದರು. ಒಂದು ಸಲ, ಒಂದು ಸಭೆಯ ಬಳಿಕ ಕಾರಿನಲ್ಲಿ ಕುಳಿತುಕೊಂಡು ಹೋಗುತ್ತಿದ್ದಾಗ ಅವರು ಶರತ್‌ಚಂದ್ರರನ್ನು ಕೇಳಿದ್ದರು: "ಮತ್ತೆ ವಕೀಲ ವೃತ್ತಿಯನ್ನು ಹಿಡಿದು ನಾಡಿಗಾಗಿ ಹಣವನ್ನು ಸಂಪಾದಿಸು ಎಂದು ಅನೇಕರು ನನಗೆ ಸಲಹೆ ಮಾಡಿದ್ದಾರೆ. ನೀವೇನು ಹೇಳುತ್ತೀರಿ ?"

ಶರತ್‌ಚಂದ್ರರು ಹೇಳಿದ್ದರು: "ಬೇಡ! ಹಣದಿಂದಾಗುವ ಕೆಲಸಕ್ಕೆ ಕೊನೆ ಇರುತ್ತದೆ. ಆದರೆ, ಈ ಆದರ್ಶಕ್ಕೆ ಕೊನೆ ಎಂಬುದೇ ಇರುವುದಿಲ್ಲ. ನಿಮ್ಮ ತ್ಯಾಗ ಎಂದೆಂದೂ ನಮ್ಮ ಸಮುದಾಯದ ಆಸ್ತಿಯಾಗಿ ಉಳಿಯಲಿ. ಇದು ನಮ್ಮ ಪಾಲಿಗೆ ರಾಶಿಗಟ್ಟಲೆ ಹಣಕ್ಕಿಂತಲೂ ಹೆಚ್ಚಿನದು."

ಅವರಿಬ್ಬರ ಚಿಂತನಶೀಲತೆಯಲ್ಲಿಯೂ ಅದ್ಭುತವೆನ್ನಿಸುವ ಸಮಾನತೆ ಇತ್ತು. ಆದ್ದರಿಂದಲೇ ಅವರಿಬ್ಬರೂ ಪರಸ್ಪರ ಪ್ರೀತಿಸುತ್ತಿದ್ದರು. "ಸಮಾನೇ ಸಮಾನೇ ಹೋಯ್ ಪ್ರಣಯೇರ್ ವಿನಿಮಯ್" (ಸಮಾನರಾದವರ ನಡುವೆ ಪ್ರೀತಿ ವಿನಿಮಯ ನಡೆಯುತ್ತದೆ), ಅಲ್ಲವೆ ?

---

1. ಆಗಸ್ಟ್ 12, 1925

## 12

ದೇಶಬಂಧು ಅವರ ಸಾವಿನಬಳಿಕ ಶರತ್‌ಚಂದ್ರರ ಮನಸ್ಸು ರಾಜಕೀಯದಲ್ಲಿ ಅಷ್ಟಾಗಿ ತೊಡಗಿಕೊಳ್ಳಲಿಲ್ಲ. ಕೆಲಸವನ್ನೇನೋ ಅವರು ಒಂದೇ ಸಮನೆ ಮಾಡುತ್ತಿದ್ದರು. ಆದರೆ, ಸಾಹಿತ್ಯಕ್ಷೇತ್ರಕ್ಕೆ ಹಿಂದಿರುಗಲು ಮತ್ತೆಮತ್ತೆ ಅವರ ಮನಸ್ಸು ತುಡಿಯುತ್ತಿತ್ತು. ಇಲ್ಲಿಯೂ ಬರೆಯುವ ವೇಗ ಹಿಂದಿನಂತೆಯೇನೂ ಇರಲಿಲ್ಲ. ಅವರೀಗ ತಮ್ಮ ಸಾಹಿತ್ಯ ಸೃಷ್ಟಿಯ ಮೂರನೆಯ ಯುಗವನ್ನು ಪ್ರವೇಶಿಸಿದ್ದರು. ಅತಿಯಾದ ಭಾವುಕತೆ ಹಿನ್ನೆಲೆಗೆ ಸರಿಯತೊಡಗಿತ್ತು. ಅವರು ಈಗ ವೈಜ್ಞಾನಿಕ ವಿವೇಚನೆಯನ್ನೂ, ಜೀವನದ ವಿಶಾಲ ಭಿತ್ತಿಯನ್ನೂ, ಕಂಡರಿಸುವ ಪ್ರಯತ್ನದಲ್ಲಿ ತೊಡಗುತ್ತಿದ್ದರು. ಈ ಅವಧಿಯಲ್ಲಿ ತುಂಬ ಕಡಿಮೆ ಸಂಖ್ಯೆಯ ಕೃತಿಗಳು ಹೊರಬಂದುವು: ನಾಲ್ಕಾರು ಕಥೆಗಳು ಮತ್ತು ಕೆಲವು ಲೇಖನಗಳು. ಲೇಖನಗಳಲ್ಲಿ ತುಂಬ ಮಹತ್ವದ್ದೆಂದರೆ 'ಇಂದಿನ ಹಿಂದೂ-ಮುಸ್ಲಿಮ್ ಸಮಸ್ಯೆ' ಹಾಗೂ ಮಹತ್ವದ ಕಥೆಯೆಂದರೆ 'ಹರಿಲಕ್ಷ್ಮೀ'.[1] 'ನವವಿಧಾನ'[2] ಮತ್ತು 'ಪಥೇರ್ ದಾಬಿ' ಇನ್ನೂ ಧಾರಾವಾಹಿಗಳ ರೂಪದಲ್ಲಿ ಪ್ರಕಟವಾಗುತ್ತಿದ್ದುವು.

'ಪಥೇರ್ ದಾಬಿ' ಕಾದಂಬರಿಯ ರಚನೆಯ ಇತಿಹಾಸ ತುಂಬ ರೋಮಾಂಚಕಾರಿಯಾಗಿದೆ. ಸುಮಾರು ಮೂರು ವರ್ಷಗಳಷ್ಟು ಹಿಂದೆ[3] ಸರ್ ಆಶುತೋಷ ಮುಕರ್ಜಿಯವರ ಮಗ ಅವರ ಬಳಿಗೆ ಬಂದಿದ್ದರು. ಅವರು 'ಬಂಗವಾಣಿ' ಪತ್ರಿಕೆಯನ್ನು ಹೊರತರುತ್ತಿದ್ದರು. ತಮ್ಮ ಪತ್ರಿಕೆಯಲ್ಲಿ ಶರತ್‌ಚಂದ್ರರ ಕೃತಿಗಳು ಪ್ರಕಟವಾಗಬೇಕೆಂದು ಅವರಿಗೆ ತುಂಬ ಆಸೆ ಇತ್ತು. ಇದಕ್ಕಾಗಿ ಶ್ಯಾಮಾಪ್ರಸಾದ ಮುಕರ್ಜಿ, ರಮಾಪ್ರಸಾದ ಮುಕರ್ಜಿ ಹಾಗೂ ವ್ಯವಸ್ಥಾಪಕರಾಗಿದ್ದ ಕೃಷ್ಣಚಂದ್ರ ರಾಯ್‌ಚೌಧರಿಯವರು ಆರು ತಿಂಗಳ ಕಾಲ ಶಿವಪುರದ ರಸ್ತೆಯನ್ನು ಸವೆಸಿದ್ದರು. ಆದರೆ, ಅವರ ಕೈಗೆ ಶರತ್‌ಚಂದ್ರರ ಯಾವೊಂದು ಕೃತಿಯೂ ಸಿಕ್ಕಿರಲಿಲ್ಲ. ಒಂದು ದಿವಸ ಆಕಸ್ಮಿಕವಾಗಿ ಹೊರಕೋಣೆಯಲ್ಲಿ ಕುಳಿತಿದ್ದ ರಮಾಬಾಬೂಗಳು ಮೇಜಿನ ಮೇಲಿದ್ದ ಕಾಗದಗಳನ್ನು ತಿರುವಿ ಹಾಕುತ್ತಿದ್ದರು. ಅದರಲ್ಲಿ 'ಪಥೇರ್ ದಾಬಿ'ಯ ಒಂದು ಭಾಗ ಅವರ ಕಣ್ಣಿಗೆ ಬಿತ್ತು. ಒಟ್ಟು ಏಳೆಂಟು ಪುಟಗಳಷ್ಟು ಬರವಣಿಗೆ ಅಲ್ಲಿತ್ತೇನೋ. ಆದರೆ, ಅವರ ಉತ್ಸಾಹಕ್ಕೆ ಪಾರವೇ ಇಲ್ಲದಂತಾಗಿಬಿಟ್ಟಿತು. "ಇಗೋ, ಇದೀಗ ಸಿಕ್ಕಿತು' ಎಂದರು.

ಅವರತ್ತ ನೋಡಿ ಶರತ್‌ಚಂದ್ರರೆಂದರು: "ಇದನ್ನು ನೀನು ಅಚ್ಚಿಸಲಾರೆ. ನೀನು ಆಶುತೋಷರ ಮಗನಲ್ಲವೆ?"

ರಮಾಬಾಬುಗಳು ಕೇಳಿದರು: "ಏಕೆ ಅಚ್ಚಿಸಲಾಗುವುದಿಲ್ಲ?"

ಶರತ್‌ಚಂದ್ರರೆಂದರು: "ಏಕೆ ಎಂದರೆ ಇದೊಂದು ಭಯಂಕರ ಕೃತಿ."

---

1. 1925 ಪುಸ್ತಕದರೂಪದಲ್ಲಿ, ಇದೇ ಹೆಸರಿನ ಕಥಾಸಂಕಲನವಾಗಿ 13.3.36ರಂದು ಇದು ಪ್ರಕಟವಾಯಿತು. ಇನ್ನುಳಿದ ಎರಡು ಕಥೆಗಳೆಂದರೆ 'ಮಹೇಶ' ಮತ್ತು 'ನಿರ್ಭಾಗ್ಯನ ಸ್ವರ್ಗ.'
2. ಪುಸ್ತಕದ ರೂಪದಲ್ಲಿ ಅಕ್ಟೋಬರ್ 1924ರಲ್ಲಿ ಪ್ರಕಟವಾಯಿತು.
3. ಜನವರಿ 1923

ರಮಾಬಾಬೂಗಳೆಂದರು: "ನಾನು ಇದನ್ನು ಅಚ್ಚಿಸುತ್ತೇನೆ. ನೀವು ಇದನ್ನು ಬರೆದು ಮುಗಿಸಿದ್ದೀರಾ ?"

ಶರತ್‌ಚಂದ್ರರು ಹೇಳಿದರು: "ಇದನ್ನು ಅಚ್ಚಿಸುವಂಥವರು ಯಾರೂ ಸಿಕ್ಕಲಾರರು ಎಂದು ನಾನು ಭಾವಿಸಿದ್ದೆ. ಆದ್ದರಿಂದ ಮುಂದಕ್ಕೆ ಬರೆಯಲೇ ಇಲ್ಲ. ನೀನು ಅಚ್ಚಿಸುವುದಾದರೆ, ಬರೆದು ಕೊಡುತ್ತೇನೆ."

ಅಂದು ಕೈಗೆ ಸಿಕ್ಕಿದ್ದ ಪುಟಗಳೇ ಮೊದಲ ಅಧ್ಯಾಯವೆಂಬಂತೆ ಪ್ರಕಟವಾದುವು.[1] ಅವರ ಈ ಕೃತಿ ಎಷ್ಟು ಕ್ರಾಂತಿಕಾರಿಯಾಗಿತ್ತೆಂದರೆ ಸರ್ಕಾರದ ಕಣ್ಣಿನಿಂದ ಅದು ತಪ್ಪಿಸಿಕೊಳ್ಳಲಾರದೆ ಹೋಯಿತು. 'ಬಂಗವಾಣಿ'ಯಲ್ಲಿ ಅದು ಪ್ರಕಟವಾಗುತ್ತಿದ್ದಂತೆಲ್ಲ ಸರ್ಕಾರ ಅದರ ಅನುವಾದವನ್ನೂ ಮಾಡಿಸಿಕೊಳ್ಳುತ್ತ ಹೋಗುತ್ತಿತ್ತು. ಆದರೆ, ಆಗ ಪಬ್ಲಿಕ್ ಪ್ರಾಸಿಕ್ಯೂಟರ್ ಹುದ್ದೆಯಲ್ಲಿದ್ದವರು ತಾರಕನಾಥ ಸಾಧು. ಅವರು ಸ್ವತಃ ಸಾಹಿತಿಯಾಗಿದ್ದವರು. ಶರತ್‌ಚಂದ್ರರ ಬಗ್ಗೆ ಅವರ ಹೃದಯದಲ್ಲಿ ತುಂಬ ಗೌರವ ಇತ್ತು. ಅವರು ರಮಾಪ್ರಸಾದ ಮುಕರ್ಜಿಯವರ ಮಿತ್ರರೂ ಆಗಿದ್ದರು. ಆದ್ದರಿಂದ, ಅವರು ಆಗಿಂದಾಗ್ಗೆ ಸೂಚನೆ ಕೊಡುತ್ತಲೇ ಇದ್ದರು.

ಈ ಕಾದಂಬರಿ ಅಚ್ಚಾದದ್ದೇನೋ ಇಪ್ಪತ್ತ ನಾಲ್ಕು ಕಂತುಗಳಲ್ಲಿ. ಆದರೆ, ಶರತ್‌ಚಂದ್ರರು ತುಂಬ ಅನಿಯತಕ್ರಮದವರೂ, ದಿಲ್‌ದಾರರೂ ಆಗಿದ್ದುದರಿಂದ, ಮತ್ತೆ ಮತ್ತೆ ಒತ್ತಾಯ ಮಾಡಿದರೂ, ಅದು ಅಚ್ಚಾಗಿ ಮುಗಿಯಲು ಮೂರು ವರ್ಷ ಮತ್ತು ಮೂರು ತಿಂಗಳಷ್ಟು ಸುದೀರ್ಘ ಅವಧಿಯೇ ಹಿಡಿಯಿತು. ಒಂದೊಂದು ಸಂಚಿಕೆಯ ಮಾಹಿತಿಗಾಗಿಯೂ ಕುಮಾರ ಬಾಬೂಗಳು ಮಾತ್ರವಲ್ಲದೆ ಸ್ವತಃ ಶ್ಯಾಮಾಪ್ರಸಾದ ಮುಕರ್ಜಿಯವರೂ, ರಮಾಪ್ರಸಾದ ಮುಕರ್ಜಿಯವರು ಹತ್ತಾರು ಬಾರಿ ಶರತ್‌ಚಂದ್ರರ ಮನೆಗೆ ಅಲೆಯಬೇಕಾಗಿ ಬರುತ್ತಿತ್ತು. ಉಮಾಪ್ರಸಾದರ ಪರಿಚಯ ಶರತ್‌ಚಂದ್ರರಿಗೆ ಆಮೇಲೆ ಆಯಿತು. ಆದರೆ, ತುಂಬ ಸ್ನೇಹ ಬೆಳೆದದ್ದು ಅವರೊಡನೆಯೇ. ಅವರು ಅಲ್ಲಿಗೆ ಹೋದಾಗಲೆಲ್ಲ ಕೊನೆ ಮೊದಲಿಲ್ಲದೆ ಮಾತುಕತೆ ನಡೆಯುತ್ತಿತ್ತು. ಇಷ್ಟಾಗಿಯೂ, ಅವರೂ ಅನೇಕವೇಳೆ ಬರಿಗೈಯಲ್ಲಿ ಹಿಂದಿರುಗಬೇಕಾಗುತ್ತಿತ್ತು.

'ಪಥೇರ್ ದಾಬೀ'ಯನ್ನು ಪುಸ್ತಕದ ರೂಪದಲ್ಲಿ ಪ್ರಕಟಿಸಲು ಸರ್ಕಾರ ಅವಕಾಶ ಕೊಡುವುದಿಲ್ಲವೆಂದು ಪ್ರಕಾಶಕರಿಗೆ ಗೊತ್ತಿತ್ತು. ಆದ್ದರಿಂದ, ಇದರ ಕೊನೆಯ ಕಂತಿನಲ್ಲೂ 'ಮುಂದುವರಿಯುತ್ತದೆ' ಎಂದು ಅಚ್ಚಿಸಿದ್ದರು. ಕಾದಂಬರಿ ಇನ್ನೂ ಪೂರ್ಣವಾಗಿಲ್ಲವೆಂದು ಪೊಲೀಸ್ ಅಧಿಕಾರಿಗಳು ಭಾವಿಸಿದರು. ಈ ಮಧ್ಯೆ ಪುಸ್ತಕ ಪ್ರಕಟವಾಗಿ ಬಿಟ್ಟಿತು.

'ಎಂ.ಸಿ. ಸರ್ಕಾರ್ ಅಂಡ್ ಸನ್ಸ್' ಸಂಸ್ಥೆಯ ಒಡೆಯರಾಗಿದ್ದ ಸುಧೀರಚಂದ್ರ ಸರ್ಕಾರ್ ಅವರು ಮೊದಲು ಇದನ್ನು ಪುಸ್ತಕದ ರೂಪದಲ್ಲಿ ಪ್ರಕಟಿಸಲು ಇಚ್ಛಿಸಿದ್ದರು. ಈ ಉದ್ದೇಶದಿಂದಲೇ ಅವರು ಶರತ್‌ಚಂದ್ರರಿಗೆ ಒಂದು ಸಾವಿರ ರೂಪಾಯಿಗಳನ್ನು ಮುಂಗಡವಾಗಿಯೂ ಕೊಟ್ಟಿದ್ದರು. ಆದರೆ, ಇಡೀ

---

1. ಫೆಬ್ರುವರಿ 1923. ಕೊನೆಯ ಕಂತು ಏಪ್ರಿಲ್ 1926ರಲ್ಲಿ ಪ್ರಕಟವಾಯಿತು.

ಕಾದಂಬರಿಯನ್ನು ಓದಿಯಾದ ಮೇಲೆ ಸುಧೀರಚಂದ್ರರು ಹೆದರಿಬಿಟ್ಟರು. ಅವರು ವಕೀಲರ ಸಲಹೆ ಕೇಳಿದರು. ಅದನ್ನು ಪರೀಕ್ಷಿಸಿದ ಬಳಿಕ ಆ ವಕೀಲರೆಂದರು: "ಇದನ್ನು ಈಗ ಇರುವಂತೆಯೇ ಅಚ್ಚಿಸಿದರೆ, ರಾಜದ್ರೋಹದ ಆಪಾದನೆಯ ಮೇಲೆ ಖಂಡಿತವಾಗಿಯೂ ಮೊಕದ್ದಮೆಯನ್ನು ಹೂಡಬಹುದಾಗಿದೆ."

ಸುಧೀರಚಂದ್ರರು ಶರತ್‌ಚಂದ್ರರ ಬಳಿಗೆ ಬಂದು, ಹೀಗೆಂದರು: "ಈ ಕಾದಂಬರಿಯನ್ನೇ ಈಗಿರುವಂತೆ ಅಕ್ಷರಶಃ ಪ್ರಕಟಿಸಿದರೆ ನಾವು ಕಷ್ಟಕ್ಕೆ ಸಿಕ್ಕಿಕೊಳ್ಳಬಹುದೆಂದು ನಮ್ಮ ವಕೀಲರು ಹೇಳುತ್ತಾರೆ. ಅವರು ಹಸ್ತಪ್ರತಿಯಲ್ಲಿ ಅನೇಕ ಕಡೆಗಳಲ್ಲಿ ಗುರುತು ಹಾಕಿದ್ದಾರೆ. ಅವನ್ನು ನೀವು ಬದಲಾಯಿಸಿದರೆ ಒಳ್ಳೆಯದು."

ಈ ಮಾತನ್ನು ಕೇಳಿದೊಡನೆಯೇ ಶರತ್‌ಚಂದ್ರರು ಗುಡುಗಿದರು: "ನಾನು ಒಂದು ಶಬ್ದವನ್ನೂ ಬದಲಾಯಿಸುವುದಿಲ್ಲ. 'ಕಾಮಾ' ಸಹಿತ ಬದಲಾಯಿಸುವುದಿಲ್ಲ. ಇಷ್ಟವಿದ್ದರೆ ಪ್ರಕಟಿಸಿ, ಇಲ್ಲದಿದ್ದರೆ ಬಿಡಿ."

"ಹಾಗಾದರೆ ಅದನ್ನು ಅಚ್ಚಿಸಲು ನಮಗೆ ಸಾಧ್ಯವಾಗಲಾರದು."

"ಸರಿ. ಅಚ್ಚಿಸಬೇಡಿ. ನಿಮ್ಮ ಹಣವನ್ನು ಹಿಂದಿರುಗಿಸುತ್ತೇನೆ."

ಅವರು ಹೋದ ಮೇಲೆ ರಮಾಬಾಬುಗಳು ಶರತ್‌ಚಂದ್ರರಿಗೆ ಹೇಳಿದರು: "ಬೇರೆ ಯಾರೂ ಇದನ್ನು ಅಚ್ಚಿಸಲು ಇಷ್ಟಪಡದಿದ್ದರೆ, ನಾನೇ ಇದನ್ನು ಅಚ್ಚಿಸುತ್ತೇನೆ."

ಶರತ್‌ಚಂದ್ರರೆಂದರು: "ಸರಿ, ನೀನೇ ಇದನ್ನು ಅಚ್ಚಿಸು."

ಪ್ರಕಾಶಕರ ಸಮಸ್ಯೆ ಬಗೆಹರಿಯಿತು ಎಂದರೆ, ಅಚ್ಚುಕೂಟದವರು ಇದನ್ನು ಅಚ್ಚಿಸಲು ಒಪ್ಪಲಿಲ್ಲ. ಕೊನೆಗೆ ಬಹಳ ಪ್ರಯತ್ನಪಟ್ಟು, ಕಾಟನ್ ಪ್ರೆಸ್‌ನಲ್ಲಿ ಇದನ್ನು ಅಚ್ಚಿಸಲು ಏರ್ಪಾಟು ಮಾಡಲಾಯಿತು. ಯಾರಿಗೂ ಸುಳಿವು ಸಿಕ್ಕದಂತೆ ಇಡೀ ಕೆಲಸವನ್ನು ಮಾಡಿ ಮುಗಿಸಬೇಕಾಗಿತ್ತು. ಇತ್ತ ಆಗಿನ ಅಡ್ವೊಕೇಟ್ ಜನರಲ್ ಆಗಿದ್ದ ಬಿ.ಎಲ್. ಮಿತ್ರ ಅವರು ರಾಜದ್ರೋಹದ ಆಪಾದನೆಯ ಮೇಲೆ ಮೊಕದ್ದಮೆಯನ್ನು ಹೂಡಬಹುದೆಂದು ಸರ್ಕಾರಕ್ಕೆ ಸಲಹೆ ಕೊಟ್ಟಿದ್ದರು. ಪ್ರಕಾಶಕರೆಂದು ಯಾರನ್ನು ಹೆಸರಿಸಬೇಕು ಎಂಬ ಸಮಸ್ಯೆ ಈಗ ಎದುರಾಯಿತು. ಅಚ್ಚುಕೂಟಕ್ಕೆ ಪ್ರತಿಯನ್ನು ಕಳಿಸುವವರೆಗೆ, ಕಿಶೋರ ಮೋಹನ ಭಟ್ಟಾಚಾರ್ಯರ ಹೆಸರನ್ನು ಹಾಕುವುದೆಂದು ಯೋಚಿಸಲಾಗಿತ್ತು. ಆಗ ಉಮಾಪ್ರಸಾದ ಮುಕರ್ಜಿಯವರೆಂದರು: "ರಾಜ ದ್ರೋಹದ ಮೊಕದ್ದಮೆಯನ್ನೇನಾದರೂ ಹೂಡಿದರೆ, ಆ ಬಡಪಾಯಿ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತಾನೆ. ಆದ್ದರಿಂದ, ನಾವೇ ಮೊಕದ್ದಮೆಯ ವೆಚ್ಚವನ್ನು ಹೊತ್ತು ಕೊಳ್ಳುತ್ತೇವೆ. ನಮ್ಮ ಹೆಸರಿನಲ್ಲಿಯೇ ಅದು ಹೊರಬರಲಿ."

ಮೊಕದ್ದಮೆ ಹೂಡಲು ಸರ್ಕಾರ ತುಂಬ ಆತುರಪಡುತ್ತಿತ್ತು. ಆದರೆ, ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿದ್ದ ತಾರಕನಾಥ ಸಾಧು ಅವರು ಹೇಳಿದರು: "ಮೊಕದ್ದಮೆ ಹೂಡುವ ಮೊದಲು ಇನ್ನೊಮ್ಮೆ ಯೋಚಿಸಿ. ಬಂಗಾಳದ ಜನಪ್ರಿಯ ಕತೆಗಾರರಾದ ಶರತ್‌ಚಂದ್ರರು ಇದರ ಲೇಖಕರಾದರೆ, ಸ್ವನಾಮ ಧನ್ಯರಾಗಿರುವ ಆಶುತೋಷ ಮುಕರ್ಜಿಯವರ ಕಿರಿಯ ಮಗ ಉಮಾಪ್ರಸಾದ ಮುಕರ್ಜಿ ಇದರ ಪ್ರಕಾಶಕರು ಎಂಬುದನ್ನು ನೆನಪಿಟ್ಟುಕೊಳ್ಳಿ."

ಸರ್ಕಾರ ಒಮ್ಮೆಗೇ ಯಾವುದೇ ತೀರ್ಮಾನಕ್ಕೆ ಬರಲಾರದೆ ಹೋಯಿತು. ಶರತ್‌ಚಂದ್ರರು ಇಷ್ಟೊಂದು ಜನಪ್ರಿಯ ಲೇಖಕರಾಗಿರುವುದರಿಂದಲೂ, ಆಶುತೋಷ ಮುಕರ್ಜಿಯವರ ಬಗ್ಗೆ ಜನತೆ ತುಂಬ ಗೌರವ-ಆದರಗಳನ್ನು ಇಟ್ಟುಕೊಂಡಿರುವುದರಿಂದಲೂ ನಾವೇನಾದರೂ ಅವರ ಮೇಲೆ ಮೊಕದ್ದಮೆ ಹೂಡಿದರೆ ಕ್ರಾಂತಿಯಾಗಿ ಬಿಡುವ ಸಾಧ್ಯತೆ ಇದೆ; ಆಗ ಈ ಪುಸ್ತಕ ಇನ್ನಷ್ಟು ಜನಪ್ರಿಯವಾಗಿ ಬಿಡುತ್ತದೆ ಎಂಬುದು ಸರ್ಕಾರಕ್ಕೆ ಗೊತ್ತಿತ್ತು.

ಈ ಆಲೋಚನೆ-ವಿಚಾರ ವಿನಿಮಯಗಳಲ್ಲಿಯೇ ಕೆಲವು ತಿಂಗಳುಗಳು ಉರುಳಿ ಹೋದುವು. ಅಷ್ಟರಲ್ಲಿಯೇ ಪುಸ್ತಕ ಪ್ರಕಟವಾಗಿ ಬಿಟ್ಟಿತೆಂಬುದು ಸರ್ಕಾರಕ್ಕೆ ತಿಳಿಯಿತು. ಮೂರು ಸಾವಿರ ಪ್ರತಿಗಳನ್ನು ಮೊದಲ ಆವೃತ್ತಿಯಾಗಿ ಹೊರತರಲಾಗಿತ್ತು. ಮೊದಲ ದಿವಸವೇ ಒಂದು ಸಾವಿರ ಪ್ರತಿಗಳು ಮಾರಾಟವಾಗಿ ಬಿಟ್ಟವು. ಉಳಿದ ಎರಡು ಸಾವಿರ ಪ್ರತಿಗಳ ಮಾರಾಟವಾಗಲು ಹೆಚ್ಚು ಹೊತ್ತು ಹಿಡಿಯಲಿಲ್ಲ. ಇಪ್ಪತ್ತು ದಿವಸಗಳ ಬಳಿಕ, ಮೊಕದ್ದಮೆಯನ್ನು ಹೂಡುವುದಕ್ಕೆ ಬದಲಾಗಿ ಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದೇ ಉತ್ತಮವೆಂದು ಸರ್ಕಾರ ತೀರ್ಮಾನಿಸುವ ಹೊತ್ತಿಗೆ, ಅದರ ಒಂದೇ ಒಂದು ಪ್ರತಿಯೂ ಉಳಿದಿರಲಿಲ್ಲ. ಪೊಲೀಸ್ ಅಧಿಕಾರಿಗಳು ತಲಾಶೀ-ವಾರೆಂಟ್ ತೆಗೆದುಕೊಂಡು 'ಬಂಗಬಾಣೀ' ಕಛೇರಿಗೆ ಬಂದಾಗ, ಅಲ್ಲಿ ಏನೂ ಸಿಕ್ಕಲಿಲ್ಲ. "ಅಚ್ಚುಕೂಟದಲ್ಲಿ ಒಂದೇ ಒಂದು ಪ್ರತಿಯೂ ಇಲ್ಲದಂತಾಗುವುದು ಸಾಧ್ಯವೆ ?" ಎಂದು ಆ ಅಧಿಕಾರಿ ಕೇಳಿದ.

ರಮಾಬಾಬೂಗಳೆಂದರು: "ಹುಡುಕಿ ನೋಡಿ"

ಅಧಿಕಾರಿ ಹೇಳಿದ: "ನಾವೇನೂ ಹುಡುಕುವುದಿಲ್ಲ. ನಿಮ್ಮ ಮಾತಿನಲ್ಲಿ ನಮಗೆ ನಂಬಿಕೆ ಇದೆ. ಆದರೆ, ಅದರ ಒಂದೇ ಒಂದು ಪ್ರತಿಯನ್ನಾದರೂ ನನಗೆ ಕೊಡಿ. ಹೊಸದಾಗಿ ಪ್ರಕಟವಾದ ಪ್ರತಿಯೊಂದು ಪುಸ್ತಕದ ಮೂರು ಪ್ರತಿಗಳನ್ನು ನೋಂದಣಿಗಾಗಿ ಕಳಿಸಬೇಕೆಂಬುದು ನಿಮಗೆ ಗೊತ್ತೇ ಇದೆಯಲ್ಲ."

"ಹೌದು, ನಮಗೆ ಗೊತ್ತು. ಮುವ್ವತ್ತು ದಿವಸಗಳ ಒಳಗಾಗಿ ಈ ಪ್ರತಿಗಳನ್ನು ಕಳಿಸಿಕೊಡಬೇಕು ಎಂದಿದೆ. ಆದರೆ, ನೀವು ಇಪ್ಪತ್ತು ದಿವಸಗಳ ಒಳಗೇ ಬಂದು ಬಿಟ್ಟಿದ್ದೀರಲ್ಲ !"

"ಸರಿಯೆ. ಆದರೂ ನಮಗೆ ಒಂದು ಪ್ರತಿ ಬೇಕೇ ಬೇಕು" ಎಂದ ಆ ಪೊಲೀಸ್ ಅಧಿಕಾರಿ.

ಅಲ್ಲಿ-ಇಲ್ಲಿ ನೋಡಿಕೊಂಡು ಬನ್ನಿ ಎಂದು ರಮಾ ಬಾಬೂಗಳು ಕೆಲವರನ್ನು ಕಳಿಸಿಕೊಟ್ಟರು. ತುಂಬ ಹುಡುಕಾಡಿದ ಮೇಲೆ ಅವರ ತಂಗಿಯ ಹತ್ತಿರ ಒಂದು ಪ್ರತಿ ಸಿಕ್ಕಿತು. ಅದನ್ನೇ ತೆಗೆದುಕೊಂಡು ಪೊಲೀಸ್ ಅಧಿಕಾರಿಗಳು ಅಲ್ಲಿಂದ ಹೊರಬಿದ್ದರು.

ಕೆಲವು ಪುಸ್ತಕ ವ್ಯಾಪಾರಿಗಳು ಅದರ ಕೆಲವು ಪ್ರತಿಗಳನ್ನು ಉಳಿಸಿಕೊಂಡಿದ್ದರು. ಆ ಮೇಲೆ ಅವರು ಒಂದೊಂದು ಪ್ರತಿಯನ್ನು ಐವತ್ತು ರೂಪಾಯಿಗಳ ವರೆಗೆ ವಿವಿಧ ಬೆಲೆಗಳಲ್ಲಿ ಮಾರಿದರು. ಬೇಡಿಕೆ ಎಷ್ಟು ತೀವ್ರವಾಗಿತ್ತೆಂದರೆ ಜನ ಅದರ ಒಂದು

ಪ್ರತಿಗೆ ಒಂದು ನೂರು ರೂಪಾಯಿಗಳನ್ನು ಕೊಡಲೂ ಸಿದ್ಧರಾಗಿದ್ದರು. ಆದರೆ, ಎರಡನೆಯ ಆವೃತ್ತಿ ಹೊರಬರುವ ಸಂಭವವೇ ಇರಲಿಲ್ಲ.

ಕ್ರಾಂತಿಕಾರಿಗಳಲ್ಲಿಯೂ ಈ ಪುಸ್ತಕ ತುಂಬ ಜನಪ್ರಿಯವಾಗಿಬಿಟ್ಟಿತ್ತು. ಅವರು ಇದನ್ನು ತಮ್ಮ ಬೈಬಲ್ಲೆಂದೇ ಭಾವಿಸಿದ್ದರು. ಈ ಸ್ಥಿತಿಯನ್ನು ಅರಿತಿದ್ದ ಒಬ್ಬ ವ್ಯಕ್ತಿ ಅದರಿಂದ ಲಾಭ ಪಡೆಯಲು ಕತ್ತೆಕಾಗದದ ಮೇಲೆ ಇದರ ಕಳ್ಳ ಆವೃತ್ತಿಯೊಂದನ್ನು ಅಚ್ಚಿಸಿಬಿಟ್ಟ. ಅದರಲ್ಲಿ ಹೇರಳವಾಗಿ ತಪ್ಪುಗಳು ಉಳಿದುಕೊಂಡಿದ್ದುವು. ಅದು ಪೇಟೆಗೇನೂ ಬರಲಿಲ್ಲ. ಕ್ರಾಂತಿಕಾರಿಗಳಿಗೆ ಮಾತ್ರವೇ ಅದನ್ನು ಹಂಚಲಾಗಿತ್ತು. ಶರತ್‌ಚಂದ್ರರು 'ಪಥೇರ್ ದಾಬೀ'ಯ ಎರಡನೆಯ ಭಾಗವನ್ನೂ ಬರೆಯ ಬೇಕೆಂದಿದ್ದರು. ಭಾರತಿ ಭಾರತಕ್ಕೆ ಬಂದು ಕೆಲಸಮಾಡಿದಳೆಂಬುದನ್ನು ಅವರು ಅದರಲ್ಲಿ ತೋರಿಸಬಯಸಿದ್ದರು. ಆದರೆ, ಹಾಗೆ ಮಾಡಲು ಸಾಧ್ಯವೇ ಆಗಲಿಲ್ಲ. 'ಬಂಗವಾಣೀ'ಯಲ್ಲಿ ಈ ಕಾದಂಬರಿ ಅಚ್ಚಾಗುತ್ತಿದ್ದಾಗ, ಅದರ ಎಲ್ಲ ಸಂಚಿಕೆಗಳನ್ನೂ ಸೇರಿಸಿ, ಒಂದು ಫೈಲನ್ನು ತಯಾರಿಸಲಾಗಿತ್ತು. ಶರತ್‌ಚಂದ್ರನಿಗೆ ಆ ಫೈಲನ್ನು ಕೊಡುತ್ತ, ಒಂದು ದಿವಸ ಉಮಾಬಾಬುಗಳು ಹೀಗೆಂದರು: "ನಿಮ್ಮ ಸ್ವಹಸ್ತದಿಂದ ಇದರ ಮೇಲೆ ಏನನ್ನಾದರೂ ಬರೆಯಿರಿ."

ದುಗುಡ ತುಂಬಿದ ಕಂಠದಲ್ಲಿ ಶರತ್‌ಚಂದ್ರರು ಹೀಗೆಂದರು: "ಇನ್ನೇನು ತಾನೆ ಬರೆಯಲಿ? ನಾನು ಬರೆಯುತ್ತೇನೆ; ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುತ್ತದೆ. ಪರಾಧೀನ ರಾಷ್ಟ್ರದಲ್ಲಿ ಮನಃಪೂರ್ವಕವಾಗಿ ಸಾಹಿತ್ಯಸಾಧನೆಯಲ್ಲಿ ತೊಡಗಿದರೆ, ಅದರಿಂದ ವ್ಯಥೆಯೇ ದೊರೆಯುತ್ತದೆ."

ಆದರೂ, ದಪ್ಪ ಫೌಂಟನ್ ಪೆನ್ನನ್ನು ಕೈಗೆತ್ತಿಕೊಂಡು ಅವರು ಯೋಚಿಸತೊಡಗಿದರು. ಎರಡು ಕ್ಷಣಗಳ ಬಳಿಕ ಹೇಳಿದರು: "ಇಲ್ಲ. ನಾನೇನೂ ಬರೆಯಲಾರೆ."

ಆ ಬಳಿಕ ನಿಧಾನವಾಗಿ ಅವರ ಲೇಖನಿ ಚಲಿಸತೊಡಗಿತು. ಅದರ ಮೊದಲ ಪುಟದ ಮಧ್ಯಭಾಗದಲ್ಲಿ ಅವರು ಉಮಾಪ್ರಸಾದರ ಹೆಸರನ್ನು ಬರೆದರು. ಅದಕ್ಕೆ ಹತ್ತಿರದಲ್ಲಿಯೇ ತಮ್ಮ ಹೆಸರನ್ನೂ ಬರೆದರು. ಅದರ ಕೆಳಗೆ ತಮ್ಮ ಜನ್ಮಕುಂಡಲಿಯನ್ನು ಬರೆದರು. ಹುಟ್ಟಿದ ತಾರೀಖನ್ನೂ, ಹುಟ್ಟಿದ ಸಮಯವನ್ನೂ, ನಮೂದಿಸಿದರು. ಆ ಬಳಿಕ 'ಮೃತ್ಯು' ಎಂಬ ಶಬ್ದವನ್ನು ಬರೆದು, ಅದರ ಮುಂದಿನ ಜಾಗವನ್ನು ಖಾಲಿಬಿಟ್ಟರು. ಆ ಪುಟದ ಮೇಲು ಭಾಗದಲ್ಲಿ ಸೊಟ್ಟ ಪಂಕ್ತಿಯಲ್ಲಿ ಏನನ್ನೋ ಬರೆದರು - ಏನನ್ನೂ ಬರೆಯಲಾಗಲಿಲ್ಲ. "ಶರತ್, 16 ಜ್ಯೇಷ್ಠ 1333. 'ಪಥೇರ್ ದಾಬೀ'ಯ ಎರಡನೆಯ ಭಾಗವನ್ನು ಬರೆದು ಮುಗಿಸಲು ನನಗೆ ಸಾಧ್ಯವಾಗದೆ ಹೋದರೆ, ನನ್ನ ನಾಡಿನಲ್ಲಿ ಬೇರೆ ಯಾರಾದರೂ ಆ ಕೆಲಸವನ್ನು ಮಾಡುತ್ತಾರೆ ಎಂದು ಆಶಿಸಿದ್ದೇನೆ. ಶರತ್" ಎಂದು ಗೀಚಿದರು.

ಫೈಲಿನ ಕೊನೆಯ ಪುಟದ ಮೇಲೆ ಹೀಗೆಂದು ಬರೆದರು:

"ಜೇ ಫೂಲ್ ನಾ ಫೂಟಿತೇ, ಝುರಿಲ್ ಧರಣೀತೇ
ಜೇನದೀ ಮರುಪಥೇ ಹಾರಾಲ್ ಧಾರಾ,
ಜಾನಿ ಹೇ ಜಾನಿ ತಾಓ ಹಯನಿ ಹಾರಾ."

ಅಸ್ಪಷ್ಟವಾದ ಧ್ವನಿಯಲ್ಲಿ ಈ ಹಾಡನ್ನು ಗುನುಗುತ್ತ, ಅವರು ಆ ಫೈಲನ್ನು ಉಮಾಬಾಬೂಗಳ ಕೈಗಿತ್ತರು. ಅವರು ಹೆಚ್ಚೇನನ್ನೂ ಬರೆಯಲಾರದೆ ಹೋದರಾದರೂ, ಬರೆದ ಆ ಕೆಲವೇ ಶಬ್ದಗಳು ಕಡಿಮೆ ಮಹತ್ವದವೇನೂ ಅಲ್ಲ. ಅವು ಅವರ ಆಗಿನ ಮನಃಸ್ಥಿತಿಯನ್ನೂ, ಅವರ ಚಿಂತನೆಯನ್ನೂ ಸ್ಪಷ್ಟ ಪಡಿಸುತ್ತವೆ. ದಾಸ್ಯದ ವ್ಯಥೆ ಅವರ ಒಳಗಿನ ಸಾಹಿತಿಯನ್ನು, ಅದೆಷ್ಟು ಕಾಡುತ್ತಿತ್ತು!

ಇದನ್ನು ರಚಿಸಿದ ಅವಧಿಯಲ್ಲಿ ಉಮಾಪ್ರಸಾದರೊಂದಿಗೆ ಅವರು ಅನೇಕ ಸಲ ಗಂಭೀರವಾದ ಮಾತುಕತೆಗಳನ್ನು ನಡೆಸುತ್ತಿದ್ದರು. ಪ್ರಕಾಶಕರನ್ನು ಜೈಲಿಗೆ ದೂಡುವ ಸಂಭವ ಹೆಚ್ಚಾಗಿಯೇ ಇತ್ತು. ಶರತ್‌ಚಂದ್ರರು ಒಂದು ದಿವಸ ಅವರನ್ನು ಕೇಳಿದರು: "ಜೈಲಿನ ಶಿಕ್ಷೆಯನ್ನು ವಿಧಿಸಿದರೆ ಏನು ಮಾಡುತ್ತೀಯೆ ?"

ಉಮಾ ಬಾಬೂಗಳು ಹೇಳಿದರು: "ಜೈಲಾದರೆ ಪ್ರಕಾಶಕನೊಬ್ಬನಿಗೆ ಮಾತ್ರವಲ್ಲ, ಲೇಖಕನಿಗೂ ಆಗುತ್ತದೆ. ಇಬ್ಬರೂ ಒಟ್ಟಿಗೇ ಜೈಲಿನಲ್ಲಿರೋಣ. ನಿಮ್ಮೊಡನೆ ಜೈಲಿನಲ್ಲಿರುವುದು ನನ್ನ ಪಾಲಿನ ಸೌಭಾಗ್ಯವೇ ಸರಿ."

ಶರತ್‌ಚಂದ್ರರು ಒಮ್ಮೆಗೇ ಗಂಭೀರರಾಗಿ ಹೇಳಿದರು: "ನಾನು ನನ್ನ ಜೊತೆಯಲ್ಲಿ ಹುಕ್ಕಾ ತೆಗೆದುಕೊಂಡು ಬರಲು ಸಾಧ್ಯವಾಗುವಂತೆ ವ್ಯವಸ್ಥೆ ಮಾಡು."

ಇಬ್ಬರೂ ಜೋರಾಗಿ ಕೇಕೆ ಹಾಕಿ ನಕ್ಕರು. ಆದರೆ ಇಬ್ಬರಲ್ಲಿ ಯಾರಿಗೂ ಜೈಲಾಗಲಿಲ್ಲ. ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಂಡರು, ಅಷ್ಟೆ. ಈ ಪುಸ್ತಕವನ್ನು ರಚಿಸಲು ಶರತ್‌ಚಂದ್ರರು ಉಪಯೋಗಿಸಿದ್ದ ಕಾಗದ ತುಂಬ ಸುಂದರವಾಗಿದ್ದು, ಗೆರೆಗಳನ್ನು ಒಳಗೊಂಡಿತ್ತು. ಅದರ ಮೇಲೆ ಶರತ್‌ಚಂದ್ರರ ಹಸ್ತಾಕ್ಷರವೂ ಇತ್ತು. ಮಟ್ಟ ತೆಂಗಿನಕಾಯಿಯ ಆಕೃತಿಯ ಮಧ್ಯದಲ್ಲಿ 'ಶರತ್' ಎಂದು ಬರೆದಿದ್ದರು. ಈ ಕಾದಂಬರಿಯನ್ನು ಬರೆಯಲು ಅವರು ಬಳಸಿದ 'ಪೆನ್' ಕೂಡ ಅಷ್ಟೇ ಬೆಲೆಬಾಳುವಂಥದಾಗಿತ್ತು. 'ಬಂಗವಾಣಿ'ಯ ಒಡೆಯರು ಶರತ್‌ಚಂದ್ರರಿಗಾಗಿ ಇವೆರಡನ್ನೂ ತರಿಸಿಕೊಟ್ಟಿದ್ದರು. ಅವರು ಯಾವಾಗಲೂ ಸುಂದರವಾದ ಕಾಗದದ ಮೇಲೆ, ಸಣ್ಣ ಸಣ್ಣ ಮುತ್ತಿನಂಥ ಅಕ್ಷರಗಳಲ್ಲಿ, ಸುಂದರವಾದ ಹಾಗೂ ಬೆಲೆಬಾಳುವಂಥ ಪೆನ್ನಿನಿಂದ ಬರೆಯುತ್ತಿದ್ದರು. ಒಬ್ಬ ವ್ಯಕ್ತಿ ಅವರನ್ನು ಕೇಳಿದ್ದ: "ಶರತ್‌ಬಾಬೂ, ನೀವು ಇಷ್ಟು ಬೆಲೆಬಾಳುವ ಪೆನ್ ಮತ್ತು ಕಾಗದವನ್ನೇಕೆ ಬಳಸುತ್ತೀರಿ ?"

ಶರತ್‌ಚಂದ್ರರು ಕೂಡಲೇ ಉತ್ತರಿಸಿದರು: "ತಾಯಿ ಸರಸ್ವತಿ ನನಗೆ ಪ್ರತಿಭೆಯ ಇಷ್ಟು ದೊಡ್ಡ ವರವನ್ನು ಅನುಗ್ರಹಿಸಿರುವಾಗ, ರದ್ದಿ ಕಾಗದದ ಮೇಲೆ ಬರೆದು ಅದನ್ನು ಹಾಳುಮಾಡಿಬಿಡಲೆ ?"

ಆ ಪುಸ್ತಕ ಪ್ರಕಟವಾದ ಹಿಂದಿನ ದಿವಸರಾತ್ರಿ ಶರತ್‌ಚಂದ್ರರು ಮುಕರ್ಜಿಗಳ ಮನೆಯಲ್ಲಿಯೇ ಇದ್ದರು. ಇಡೀ ರಾತ್ರಿ ಕಣ್ಣು ಮುಚ್ಚದೆ, ಉಮಾಪ್ರಸಾದರೊಂದಿಗೆ ನಾನಾ ಬಗೆಯ ಮಾತುಗಳನ್ನಾಡುತ್ತಲೇ ಇದ್ದರು. ಬೆಳಕು ಹರಿಯಿತು. ಅಚ್ಚು ಕೂಟದಿಂದ ಅಚ್ಚಾದ ಪುಸ್ತಕ ಬರುವುದಕ್ಕೂ ಮೊದಲು ಉಮಾ ಬಾಬುಗಳು ಅವರ ಕೈ ಬರೆಹದ ಇಡೀ ಹಸ್ತಪ್ರತಿಯನ್ನು ತೆಗೆದುಕೊಂಡು ಬಂದರು. ಅವರಿಗೆ ತುಂಬ ಆಶ್ಚರ್ಯವಾಯಿತು. "ಇದನ್ನು, ನೀನು ಇಷ್ಟೊಂದು ಜೋಪಾನ

ವಾಗಿಟ್ಟದ್ದೀಯೇನು! ನೀನೆಷ್ಟು ಕಾಳಜಿ ವಹಿಸಿದ್ದೀಯೆ! ಅದನ್ನಿಲ್ಲಿ ತಾ. ನಿನಗಾಗಿ ಅದರ ಮೇಲೆ ಒಂದೆರಡು ಮಾತುಗಳನ್ನು ಬರೆದುಕೊಡುತ್ತೇನೆ."

ಹಸ್ತಪ್ರತಿಯನ್ನು ತೆಗೆದುಕೊಂಡು ಅದರ ಮೊದಲ ಪುಟದ ಮೇಲೆ, ಸುಂದರವಾದ ಅಕ್ಷರಗಳಲ್ಲಿ ಹೀಗೆಂದು ಬರೆದರು:

"ಬೀಜೂ, ನನ್ನ ಕೈಬರೆಹದ ಈ ಹಸ್ತಪ್ರತಿಯನ್ನು ಬಿಟ್ಟು, ನನ್ನ ಬರೆಹದ ಬೇರಾವ ಪ್ರತಿಯೂ ಇಲ್ಲ. ಇದು ನಿನ್ನ ಬಳಿಯೇ ಇರಲಿ. ಹಾಗಾದಾಗ ನಾನು ನಿಶ್ಚಿಂತವಾಗಿರುತ್ತೇನೆ - ದಾದಾ.

ಭಾದ್ರ, 1333 (ಆಗಸ್ಟ್ 1926)"

ಈ ಹಸ್ತಪ್ರತಿಯ ಮೇಲು ತುದಿಯಲ್ಲಿ 'ಪಥೇರ್ ದಾಬೀ' ಎಂದು ಬರೆದಿದೆ. ಕೊನೆಯಲ್ಲಿ 'ಶ್ರೀ ಶರತ್‌ಚಂದ್ರ ಚಟ್ಟೋಪಾಧ್ಯಾಯ, ಸಾಮತಾಬೇಡ, 10 ಚೈತ್ರ 1333. (24 ಮಾರ್ಚ್, 1926) ಎಂದು ಬರೆದಿದೆ.

'ಪಥೇರ್ ದಾಬೀ'ಯನ್ನು ಮುಟ್ಟುಗೋಲು ಹಾಕಿಕೊಂಡಿದ್ದ ಸಮಯದಲ್ಲಿಯೇ ರೆವರೆಂಡ್ ಜೆ.ಟಿ. ಸ್ಯಾಂಡರ್‌ಲ್ಯಾಂಡ್ ಅವರ 'ಇಂಡಿಯಾ ಇನ್ ಬಾಂಡೇಜ್' ಎಂಬ ಪುಸ್ತಕವನ್ನೂ ಮುಟ್ಟುಗೋಲು ಹಾಕಿಕೊಳ್ಳಲಾಗಿತ್ತು. ಇದನ್ನು ಹೊರತಂದಿದ್ದವರು 'ಮಾಡರ್ನ್ ರಿವ್ಯೂ' ಪತ್ರಿಕೆಯ ಸಂಚಾಲಕರಾಗಿದ್ದ, ಸ್ವನಾಮಧನ್ಯರಾಗಿದ್ದ ರಾಮಾನಂದ ಚಟ್ಟೋಪಾಧ್ಯಾಯರು. ಅವರು ಪುಸ್ತಕದ ಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಂಡಿದ್ದಕ್ಕೆ ವಿರುದ್ಧವಾಗಿ ಮೊಕದ್ದಮೆ ಹೂಡಿದರು. ನಾನೂ ಹೀಗೇಕೆ ಮಾಡಬಾರದು ಎಂದು ಶರತ್‌ಚಂದ್ರರು ಯೋಚಿಸಿದರು. ಆದರೆ, ಅವರ ನೆಚ್ಚಿನ ಗೆಳೆಯರಾಗಿದ್ದ ನಿರ್ಮಲ ಚಂದ್ರ 'ಚಂದ್ರ' ಅವರೆಂದರು: "ಹೀಗೆ ಮಾಡಬೇಕೆಂದು ನಾನು ನಿಮಗೆ ಸಲಹೆ ಕೊಡುವುದಿಲ್ಲ."

ನ್ಯಾಯಾಲಯಗಳು ಸರ್ಕಾರದ ಪ್ರಭಾವಕ್ಕೆ ಒಳಗಾಗಿವೆ ಎಂಬುದು ನಿರ್ಮಲ ಚಂದ್ರರಿಗೆ ಚೆನ್ನಾಗಿ ಗೊತ್ತಿತ್ತು. ಸರ್ಕಾರ ಸೋಲಲು ಅದೆಂದೂ ಅವಕಾಶ ಕೊಡುತ್ತಿರಲಿಲ್ಲ. ಅವರ ಮಾತು ಸತ್ಯವೆಂಬುದು ಸಿದ್ಧವಾಯಿತು. ರಾಮಾನಂದರು ಮೊಕದ್ದಮೆಯಲ್ಲಿ ಸೋತರು. ಶರತ್‌ಚಂದ್ರರೂ ಸೋತುಹೋಗುತ್ತಿದ್ದರು. ಸೋಲು ಸಹಜವಾಗಿಯೇ ಇರುತ್ತಿತ್ತು. ಏಕೆಂದರೆ, ಈ ಪುಸ್ತಕ ಸರ್ಕಾರವನ್ನು ತುಂಬ ಪೇಚಿಗೆ ಸಿಕ್ಕಿಸಿತ್ತು. ಆ ವರ್ಷದ 'ಸರ್ಕಾರಿ ಪುಸ್ತಕ'ದಲ್ಲಿ 'ಪಥೇರ್ ದಾಬೀ'ಗೆ ಸಂಬಂಧಿಸಿದಂತೆ ಹೀಗೆ ಹೇಳಲಾಗಿದೆ: "ಈ ಪುಸ್ತಕದ ಬಹುಮಟ್ಟಿನ ಎಲ್ಲ ಪುಟಗಳಲ್ಲೂ ರಾಜದ್ರೋಹದ ಪ್ರಬಲ ಪ್ರಚಾರ ನಡೆದಿದೆ."

ಪೊಲೀಸ್ ಕಮೀಷನರ್ ಅವರು ಶರತ್‌ಚಂದ್ರರೊಂದಿಗೆ ಹೀಗೆಂದಿದ್ದರು: "ಶರತ್‌ಬಾಬೂ, 'ಪಥೇರ್ ದಾಬೀ' ಬರೆದು ನೀವು ನಮಗೆಷ್ಟು ಹಾನಿಯನ್ನುಂಟು ಮಾಡಿದ್ದೀರಿ ಎಂಬುದು ನಿಮಗೆ ಗೊತ್ತಿದೆಯೆ ? ಎಲ್ಲಿ ಕ್ರಾಂತಿಕಾರಿಗಳನ್ನು ಹಿಡಿದರೂ ಅಲ್ಲೆಲ್ಲ ನಮಗೆ ಕಾಣುವುದು ಎರಡು ಪುಸ್ತಕಗಳು: ಒಂದು 'ಗೀತೆ' ಹಾಗೂ ಇನ್ನೊಂದು 'ಪಥೇರ್ ದಾಬೀ'. ನಿಮ್ಮ 'ಪಥೇರ್ ದಾಬಿ' ಕ್ರಾಂತಿಕಾರಿಗಳನ್ನು ಹುಚ್ಚರನ್ನಾಗಿಸಿಬಿಟ್ಟಿದೆ."

'ಪಥೇರ್ ದಾಬೀ' ಕ್ರಾಂತಿಕಾರಿಗಳನ್ನು ಮಾತ್ರವಲ್ಲ, ಇಡೀ ಬಂಗಾಳವನ್ನೇ

ಹುಚ್ಚೆಬ್ಬಿಸಿತ್ತು. ಅದರ ಜನಪ್ರಿಯತೆ ಎಷ್ಟಿತ್ತೆಂಬುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಶರತ್‌ಚಂದ್ರರ ಉತ್ಸಾಹಕ್ಕೂ ಮೇರೆ ಇರಲಿಲ್ಲ. ಸರ್ಕಾರದ ವಿರುದ್ಧ ಮೊಕದ್ದಮೆ ಹೂಡಲಾಗದಿದ್ದರೇನಂತೆ! ಅದರ ವಿರುದ್ಧವಾಗಿ ಜನತೆಯ ಆಂದೋಳನವನ್ನಂತೂ ನಡೆಸಬಹುದಲ್ಲ! ಆದರೆ, ರವೀಂದ್ರರ ನೆರವಿಲ್ಲದೆ ಈ ಆಂದೋಳನವನ್ನು ನಡೆಸುವುದು ಸಾಧ್ಯವಿರಲಿಲ್ಲ. ಆದ್ದರಿಂದ, ಅವರು ಗುರುದೇವರಿಗೆ ಪತ್ರಬರೆದರು. ಕೂಡಲೇ ಅವರಿಂದ ಉತ್ತರ ಬಂತು: "ಪುಸ್ತಕದ ಒಂದು ಪ್ರತಿಯನ್ನು ಕಳಿಸಿಕೊಡು. ಅದನ್ನು ಓದಿದ ಮೇಲೆ, ಏನಾದರೂ ಹೇಳಬಲ್ಲೆ."

ಶರತ್‌ಚಂದ್ರರು ಕೂಡಲೇ ಪುಸ್ತಕವನ್ನು ಕಳಿಸಿಕೊಟ್ಟರು. ಅದನ್ನು ಓದಿ, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ರವೀಂದ್ರರು ಸುದೀರ್ಘ ಪತ್ರವನ್ನೇ ಬರೆದರು:

"ಕಲ್ಯಾಣಯೇಷು.

"ನಿನ್ನ 'ಪಥೇರ್ ದಾಬೀ'ಯನ್ನು ಓದಿದೆ. ಪುಸ್ತಕ ಪ್ರಚೋದಕವಾಗಿದೆ - ಅಂದರೆ, ಆಂಗ್ಲರ ಆಡಳಿತದ ವಿಷಯದಲ್ಲಿ ಓದುಗರ ಮನಸ್ಸು ಅಸಂತೋಷಗೊಳ್ಳುವಂತೆ ಮಾಡುತ್ತದೆ. ಲೇಖನ ಕರ್ತವ್ಯದ ದೃಷ್ಟಿಯಿಂದ ನೋಡಿದರೆ, ಇದನ್ನು ದೋಷವೆನ್ನಲಾಗುವುದಿಲ್ಲ. ಏಕೆಂದರೆ, ಆಂಗ್ಲರ ಆಡಳಿತ ಕೆಟ್ಟುದು ಎಂದು ಲೇಖಕ ನಂಬಿದ್ದಾನೆ. ಹೀಗಾಗಿ, ಅವನು ತೆಪ್ಪಗೆ ಕುಳಿತಿರಲಾರ. ಆದರೆ, ತೆಪ್ಪಗೆ ಕೂಡದೆ ಇದ್ದಾಗ, ಉಂಟಾಗಬಹುದಾದ ಸಂಕಷ್ಟವನ್ನೂ ಅವನು ಒಪ್ಪಿಕೊಳ್ಳಲೇಬೇಕು. ಆಂಗ್ಲರ ಆಡಳಿತ ನಮ್ಮನ್ನು ಕ್ಷಮಿಸುತ್ತದೆ ಎಂದು ಭಾವಿಸಿ, ಅವರನ್ನು ನಿಂದಿಸುವುದು ಪೌರುಷದ ಸಂಗತಿಯೇನೂ ಅಲ್ಲ. ನಾನು ಅನೇಕ ದೇಶಗಳನ್ನು ಸುತ್ತಿ ಬಂದಿದ್ದೇನೆ. ನಾನು ಗಳಿಸಿರುವ ತಿಳಿವಳಿಕೆಯಿಂದ ನಾನು ಕಂಡುಕೊಂಡಿರುವುದು ಇಷ್ಟು. ಆಂಗ್ಲರ ಆಡಳಿತವೊಂದನ್ನು ಬಿಟ್ಟರೆ, ಬೇರಾವ ಆಡಳಿತವೂ ಸ್ವದೇಶಿ ಅಥವಾ ವಿದೇಶಿ ಪ್ರಜೆಗಳ ಬಾಯಿಮಾತಿನ ಅಥವಾ ಕಾರ್ಯರೂಪದ ವಿರೋಧವನ್ನು ಇಷ್ಟೊಂದು ಧೈರ್ಯದಿಂದ ತಾಳಿಕೊಳ್ಳುವುದಿಲ್ಲ.

"ನಾವು ನಮ್ಮ ಶಕ್ತಿಯಿಂದಲ್ಲದೆ, ಇನ್ನೊಬ್ಬರ ಸಹಿಷ್ಣುತೆಯನ್ನು ಆಧಾರವಾಗಿಸಿಕೊಂಡು ವಿದೇಶಿ ಆಡಳಿತದ ಬಗ್ಗೆ ಮನಬಂದಂತೆ ವರ್ತಿಸುವ ಸಾಹಸವನ್ನು ಮೆರೆದರೆ, ಅದು ಪೌರುಷದ ವಿಡಂಬನೆ ಮಾತ್ರವಾಗುತ್ತದೆ. ಹಾಗೆ ಮಾಡಿದಾಗ, ಆಂಗ್ಲರ ಆಡಳಿತದ ಬಗ್ಗೆ ಗೌರವ ಮೂಡುತ್ತದೆಯೇ ಹೊರತು ನಮ್ಮ ಬಗ್ಗೆಯಲ್ಲ. ರಾಜಶಕ್ತಿಯಲ್ಲಿ ಪಶುಬಲವಿರುತ್ತದೆ. ಕರ್ತವ್ಯವನ್ನು ನೆಮ್ಮಿಕೊಂಡೇ ಅದನ್ನು ಎದುರಿಸಿ ನಿಲ್ಲಬೇಕಾದರೂ, ಆ ಇನ್ನೊಂದು ಪಕ್ಷದಲ್ಲಿ ನೈತಿಕ ಬಲ - ಅಂದರೆ, ಆಘಾತವನ್ನು ಸಹಿಸಿಕೊಳ್ಳುವ ಶಕ್ತಿ - ಇರುವುದು ಅಗತ್ಯವಾಗುತ್ತದೆ. ಆದರೆ, ನಾವು ಆಂಗ್ಲರ ಆಡಳಿತದಲ್ಲಿ ಆ ನೈತಿಕ ಬಲವಿದೆಯೇ ಇಲ್ಲವೇ ಎಂಬುದನ್ನು ಪ್ರಶ್ನಿಸುತ್ತಿದ್ದೇವೆಯೇ ಹೊರತು, ಅದೇ ಪ್ರಶ್ನೆಯನ್ನು ನಮಗೆ ಹಾಕಿಕೊಳ್ಳುತ್ತಿಲ್ಲ. ಇದರಿಂದ ಸಿದ್ಧವಾಗುವ ಸಂಗತಿ ಏನೆಂದರೆ ನಾವು ಬಾಯಲ್ಲಿ ಏನೇ ಹೇಳಿದರೂ, ನಮಗೆ ಅರಿವಿಲ್ಲದಂತೆಯೇ ನಾವು ಆಂಗ್ಲರನ್ನು ಪೂಜಿಸುತ್ತಿದ್ದೇವೆ ಹಾಗೂ ಈ ಪೂಜೆಯನ್ನು ನಾವು ಹೇಗೆ ಆಚರಿಸುತ್ತಿದ್ದೇವೆಂದರೆ ಆಂಗ್ಲರನ್ನು ಯದ್ವಾತದ್ವಾ

ಬೈದೂ ಅವರಿಂದ ನಮಗೆ ಶಿಕ್ಷೆಯಾಗುವುದಿಲ್ಲವೆಂದು ಭಾವಿಸುತ್ತೇವೆ. ಶಕ್ತಿಯ ಮೌನದಂಡದಿಂದ ಅಳೆದು ನೋಡಿದರೂ, ನಿನ್ನನ್ನು ಏನೂ ಅನ್ನದೆ, ನಿನ್ನ ಪುಸ್ತಕಗಳನ್ನಷ್ಟೇ ಮುಟ್ಟುಗೋಲು ಹಾಕಿಕೊಂಡಿರುವುದು ಬಹುಮಟ್ಟಿಗೆ ನಿನ್ನನ್ನು ಕ್ಷಮಿಸಿದಂತೆಯೇ ಆಗಿದೆ. ಬೇರಾವುದೇ ಪ್ರಾಚ್ಯ ಅಥವಾ ಪಾಶ್ಚಾತ್ಯ ವಿದೇಶಿ ಆಡಳಿತ ಹೀಗೆ ಮಾಡುತ್ತಿರಲಿಲ್ಲ. ಭಾರತೀಯರಾದ ನಮ್ಮ ಕೈಗಳಲ್ಲಿಯೇ ರಾಜಶಕ್ತಿ ಇದ್ದಿದ್ದರೆ ನಾವೇನು ಮಾಡುತ್ತಿದ್ದೆವೆಂಬುದನ್ನು ನಮ್ಮ ಜಮೀನುದಾರರ ಹಾಗೂ ಭಾರತೀಯ ರಾಜಮಹಾರಾಜರುಗಳ ನಡೆನುಡಿಗಳಿಂದಲೇ ಊಹಿಸಿಕೊಳ್ಳಬಹುದಾಗಿದೆ.

ಆದರೆ, ಈ ಕಾರಣಕ್ಕಾಗಿಯೇ ಲೇಖನಿಯನ್ನು ಮುಚ್ಚಿಡುವ ಅಗತ್ಯವೇನೂ ಇಲ್ಲ. ಹಾಗೆ ಮಾಡಬೇಕೆಂದು ನಾನಾದರೂ ಹೇಳುವುದಿಲ್ಲ. ಶಿಕ್ಷೆಯನ್ನು ಒಪ್ಪಿಕೊಂಡೇ ಲೇಖನಿಯ ಕೆಲಸವನ್ನು ಮುಂದುವರಿಸಬೇಕು ಎಂದು ನಾನು ಹೇಳುತ್ತ ಬಂದಿದ್ದೇನೆ. ಯಾವ ಯಾವ ನಾಡಿನಲ್ಲಿ ರಾಜಶಕ್ತಿಯನ್ನು ಎದುರಿಸಿ ನಿಲ್ಲಲಾಗಿದೆಯೋ ಅಲ್ಲೆಲ್ಲ ಹೀಗೇ ಆಗಿದೆ. ರಾಜಶಕ್ತಿಯನ್ನು ವಿರೋಧಿಸಿ ಆರಾಮವಾಗಿರುವುದು ಸಾಧ್ಯವಾಗುವುದಿಲ್ಲ. ಈ ಮಾತನ್ನು ಅಸಂದಿಗ್ಧವಾಗಿ ಅರ್ಥಮಾಡಿಕೊಂಡೇ ನಾವು ಹಾಗೆ ಮಾಡಬೇಕಾಗುತ್ತದೆ. ಏಕೆಂದರೆ, ನೀನೇನಾದರೂ ಪತ್ರಗಳ ಮೂಲಕ ರಾಜ್ಯದ ವಿರುದ್ಧ ಏನನ್ನಾದರೂ ಬರೆದಿದ್ದರೆ ಅದರ ಪ್ರಭಾವ ತುಂಬ ಕಡಿಮೆಯೂ ಅಲ್ಪಕಾಲಿಕವಾದುದೂ ಆಗಿರುತ್ತಿತ್ತು. ಆದರೆ, ನಿನ್ನಂಥ ಲೇಖಕ ಕಥೆಯ ರೂಪದಲ್ಲಿ ಇಂಥದನ್ನು ಬರೆದರೆ ಅದರ ಪ್ರಭಾವ ಎಂದೂ ಆಗುತ್ತಲೇ ಇರುತ್ತದೆ. ದೇಶ-ಕಾಲಗಳೆರಡರ ದೃಷ್ಟಿಯಿಂದಲೂ ಅದರ ಪ್ರಚಾರಕ್ಕೆ ಯಾವುದೇ ಮೇರೆಯೂ ಇರುವುದಿಲ್ಲ. ಎಳೆಯ ವಯಸ್ಸಿನ - ಬಾಲಿಕೆ ಬಾಲಕರಿಂದ ಹಿಡಿದು ವಯೋವೃದ್ಧರವರೆಗೆ ಎಲ್ಲರ ಮೇಲೂ ಅದರ ಪ್ರಭಾವ ಆಗಿಯೇ ತೀರುತ್ತದೆ. ಇಂಥ ಸ್ಥಿತಿಯಲ್ಲಿ ಆಂಗ್ಲರ ಆಡಳಿತ ನಿನ್ನ ಪುಸ್ತಕದ ಪ್ರಚಾರಕ್ಕೆ ಕಡಿವಾಣವನ್ನು ಹಾಕದಿದ್ದರೆ, ಸಾಹಿತ್ಯದಲ್ಲಿ ನಿನ್ನ ಶಕ್ತಿ ಎಷ್ಟೆಂಬುದರ ಬಗೆಗಾಗಲೀ ನಾಡಿನಲ್ಲಿ ನಿನಗಿರುವ ಗೌರವಾದರಗಳ ಬಗೆಗಾಗಲೀ ಅದಕ್ಕೆ ಅರಿವೇ ಇಲ್ಲವೆಂದು ಭಾವಿಸಬೇಕಾಗುತ್ತದೆ. ಶಕ್ತಿಯ ಮೇಲೆ ಆಘಾತವನ್ನೆಸಗಿದ ಮೇಲೆ ಪ್ರತ್ಯಾಘಾತವನ್ನು ಎದುರಿಸಲು ಸಿದ್ಧನಾಗಿಯೇ ಇರಬೇಕಾಗುತ್ತದೆ. ಈ ದೃಷ್ಟಿಯಿಂದಲೇ ಆಘಾತಕ್ಕೂ ಬೆಲೆಗಟ್ಟಲಾಗುತ್ತದೆ. ಆಘಾತದ ತೀವ್ರತೆಯ ಬಗ್ಗೆ ವಿಲಾಪಮಾಡುವುದು ಆ ಆಘಾತದ ಮೌಲ್ಯವನ್ನು ಒಮ್ಮೆಗೇ ಮಣ್ಣುಗೂಡಿಸಿಬಿಡುವುದೇ ಆಗುತ್ತದೆ. ಇತಿ.

"27 ಮಾಘ 1333 (ಫೆಬ್ರುವರಿ 10, 1927).

"ನಿನ್ನವ

"ರವೀಂದ್ರನಾಥ ಠಾಕೂರ್"

ಪತ್ರದ ಭಾಷೆ ತುಂಬ ಯುಕ್ತಿಪೂರ್ಣವಾಗಿದೆಯಾದರೂ, ಪರೋಕ್ಷವಾಗಿ ಅವರನ್ನು ಪ್ರಶಂಸಿಯೇ ಇದ್ದಾರಾದರೂ, ಈ ಪತ್ರ ಅವರಿಬ್ಬರ ಆಲೋಚನೆಯ ಧಾಟಿಗಳಲ್ಲಿ ಇರುವ ಅಂತರವನ್ನು ಸ್ಪಷ್ಟಪಡಿಸುತ್ತದೆ. ಇದನ್ನು ಓದಿದ ಮೇಲೆ, ಶರತ್‌ಚಂದ್ರರಿಗಾದ ವ್ಯಥೆಗೆ ಮಿತಿಯೇ ಇರಲಿಲ್ಲ. ಇದಕ್ಕೆ ಪ್ರತಿವಾದವನ್ನು ಹೂಡುವ ಅಧಿಕಾರವನ್ನು ಅವರು ಬಿಟ್ಟುಕೊಡಲು ಯಾವರೀತಿಯಲ್ಲೂ ಸಿದ್ಧವಿರಲಿಲ್ಲ.

ರವೀಂದ್ರರು 'ಪಥೇರ್ ದಾಬೀ'ಯನ್ನು ಓದಿಯೂ ಆಂಗ್ಲರನ್ನು ಪ್ರಶಂಸಿಸುತ್ತಿದ್ದಾರಲ್ಲ ಎಂದು ಮತ್ತೆ ಮತ್ತೆ ಅವರು ಯೋಚಿಸುತ್ತಿದ್ದರು. ನನ್ನ ಪುಸ್ತಕವನ್ನು ಓದಿ, ಅದರಲ್ಲಿ ಆಂಗ್ಲರಿಗೆ ವಿರುದ್ಧವಾಗಿ ಕ್ರಾಂತಿ ಸಿಡಿದೇಳುವ ಸಂಭವವಿದೆಯೆಂದು ಅಭಿಪ್ರಾಯ ಪಟ್ಟಿದ್ದಾರಲ್ಲ; ನಮ್ಮ ನಾಡಿನ ಕವಿಯ ದೃಷ್ಟಿಯಲ್ಲಿ ಅವರು ಅಷ್ಟು ದೊಡ್ಡವರಾಗಿದ್ದರೆ, ಸ್ವಾತಂತ್ರ್ಯದ ಈ ಆಂದೋಳನವನ್ನಾದರೂ ಏಕೆ ನಡೆಸಬೇಕು? ಹಾಗಾದರೆ, ಎಲ್ಲರೂ ಸೇರಿ ಆಂಗ್ಲರನ್ನು ಭುಜದ ಮೇಲೆ ಹೊತ್ತು ಕುಣಿದಾಡಬೇಕಾಗುತ್ತದೆ. ಓ ಕವಿ, ನೀನು ನಮಗೆಂಥ ಮಹಾ ಆಶಾದೀಪವಾಗಿದ್ದೀಯೆ, ಎಂಥ ಅಭಿಮಾನದ ಸಂಗತಿಯಾಗಿದ್ದೀಯೆ ಎಂಬುದು ನಿನಗೆ ಗೊತ್ತಿದ್ದರೆ, ಈ ಮಾತನ್ನು ನೀನು ಖಂಡಿತವಾಗಿಯೂ ಹೇಳುತ್ತಿರಲಿಲ್ಲ. ಕವಿಯ ದೃಷ್ಟಿಯಲ್ಲಿ ನನ್ನ 'ಪಥೇರ್ ದಾಬೀ' ಇಂಥ ಅವಹೇಳನಕ್ಕೆ ಪಾತ್ರವಾಗಬಹುದು ಎಂದು ನಾನು ಕನಸು-ಮನಸಿನಲ್ಲಿಯೂ ಯೋಚಿಸಿರಲಿಲ್ಲ. ಯಾವ ಆಸೆಯಿಂದ ನಾನು ಈ ಪುಸ್ತಕವನ್ನು ಬರೆದಿದ್ದೆ ಎಂಬುದನ್ನು ನಾನು ಯಾರಿಗೂ ವಿವರಿಸಲಾರೆ.

ಈ ಬಗೆಯ ಆವೇಶಕ್ಕೆ ಒಳಗಾಗಿ, ಈ ಪತ್ರಕ್ಕೆ ಉತ್ತರವಾಗಿ ಅವರು ಕವಿವರ್ಯರಿಗೆ ಬರೆದ ಪತ್ರದ ಒಂದೊಂದು ಶಬ್ದದಲ್ಲಿಯೂ ಆಕ್ರೋಶ ತುಂಬಿ ತುಳುಕುತ್ತಿದೆ. ಸಂಯಮ ಎಂಬುದು ಕೈಮೀರಿ ಹೋಗಿದೆಯೋ ಎಂದೆನಿಸುತ್ತದೆ. ಅವರು ಕೂಡಲೇ ಆ ಪತ್ರವನ್ನು ಕಳಿಸಲಿಲ್ಲ. ಹಾಗೆ ಮಾಡಿದ್ದು ಒಳ್ಳೆಯದೇ ಆಯಿತು. ತಾನು ಈ ಪತ್ರ ಬರೆದು ತಪ್ಪು ಮಾಡಿದೆ ಎಂಬ ಭಾವನೆ ಅವರನ್ನು ಮನಸ್ಸಿನಲ್ಲಿಯೇ ಕೊರೆಯುತ್ತಿದ್ದಂತೆ ತೋರುತ್ತದೆ. ಅವರು ಈ ರೀತಿ ಬರೆದಿದ್ದರು:

"ಶ್ರೀ ಚರಣಗಳಲ್ಲಿ:

"ನಿಮ್ಮ ಪತ್ರ ಕೈಸೇರಿದೆ. ಒಳ್ಳೆಯದು, ಹಾಗೆಯೇ ಆಗಲಿ. ಈ ಪುಸ್ತಕವನ್ನು ಬರೆದಿರುವವನು ನಾನು. ಆದ್ದರಿಂದ ಅದರ ದುಃಖವೂ ನನಗೇ ಸೇರಿದ್ದು. ಇದರಲ್ಲಿ ವಿಶೇಷ ಸಂಗತಿಯೇನೂ ಇಲ್ಲ. ಯಾವುದನ್ನು ನೀವು ಕರ್ತವ್ಯವೆಂದು ಉಚಿತವೆಂದು ಭಾವಿಸಿದ್ದೀರೋ ಅದಕ್ಕೆ ವಿರುದ್ಧವಾಗಿ ನಾನು ಹೇಳುವುದೇನೂ ಇಲ್ಲ, ಯಾವುದೇ ಆರೋಪವನ್ನೂ ಹೊರಿಸುವುದಿಲ್ಲ. ಆದರೆ, ನಿಮ್ಮ ಪತ್ರದಲ್ಲಿ ಇತರ ಕೆಲವು ವಿಚಾರಗಳು ಬಂದಿವೆ. ಅವುಗಳ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ಒಂದೆರಡು ಪ್ರಶ್ನೆಗಳಿವೆ ಹಾಗೂ ಹೇಳಬೇಕಾದ ಮಾತುಗಳೂ ಇವೆ. ಏಟಿಗೊಂದು ಏಟು ಹಾಕಿದ್ದಾನಲ್ಲ ಎಂದೇನಾದರೂ ನಿಮಗೆ ಅನ್ನಿಸಿದರೆ, ಅದಕ್ಕೆ ನಿಮ್ಮ 'ಸೌಜನ್ಯ'ವೇ ಕಾರಣವಾಗಿದೆ ಎಂದು ತಿಳಿದುಕೊಳ್ಳಿ. ನೀವು ಹೀಗೆಂದಿದ್ದೀರಿ: 'ಆಂಗ್ಲರ ಆಡಳಿತದ ವಿಷಯದಲ್ಲಿ ಓದುಗರ ಮನಸ್ಸು ಅಸಂತೋಷಗೊಳ್ಳುವಂತೆ ಮಾಡುತ್ತದೆ' ಹೀಗೆ ಆಗಲೇ ಬೇಕಿತ್ತು. ಯಾವುದಾದರೂ ಸುಳ್ಳಿನ ಪ್ರಚಾರದ ಮೂಲಕ ನಾನು ಹೀಗೆ ಮಾಡಿದರೆ, ಲೇಖಕನಾಗಿ ನನಗೆ ನಾಚಿಕೆಯಾಗಬೇಕಾಗಿತ್ತು; ಅಪರಾಧ ಭಾವನೆ ಕಾಡಬೇಕಾಗಿತ್ತು. ಆದರೆ, ನಾನು ತಿಳಿದೂ ತಿಳಿದೂ ಹಾಗೇನೂ ಮಾಡಿಲ್ಲ. ಹಾಗೇನಾದರೂ ಮಾಡಿದ್ದರೆ, ಅದು ರಾಜಕಾರಣಿಗಳ ಉದ್ಯೋಗವೇ ಆಗುತ್ತಿತ್ತು; ಇಂಥ 'ಕೃತಿ'ಯಾಗುತ್ತಿರಲಿಲ್ಲ. ನಾನಾ ಕಾರಣಗಳಿಂದಾಗಿ ಬಂಗಾಳಿ ಭಾಷೆಯಲ್ಲಿ ಯಾರೂ ಇಂಥ ಪುಸ್ತಕವನ್ನು ಬರೆಯಲಿಲ್ಲ. ನಾನು ಅಂಥದನ್ನು ಬರೆದಿರುವಾಗ

ಮತ್ತು ಅಚ್ಚಿಸಿರುವಾಗ, ಎಲ್ಲ ಪರಿಣಾಮಗಳನ್ನೂ ತಿಳಿದುಕೊಂಡೇ ಹಾಗೆ ಮಾಡಿದ್ದೇನೆ.

"ತೀರ ಸಾಮಾನ್ಯ ಅಥವಾ ಕ್ಷುಲ್ಲಕ ಕಾರಣಗಳ ಮೇಲೆ ಭಾರತದಲ್ಲಿ ಎಲ್ಲಕಡೆಗಳಲ್ಲಿಯೂ ಮೊಕದ್ದಮೆಯನ್ನು ಹೂಡದೆಯೇ ಅನ್ಯಾಯವಾಗಿ ಅಥವಾ ನ್ಯಾಯದ ನಾಟಕವನ್ನಾಡಿ ಸೆರೆಮನೆಗೆ ದೂಡುತ್ತಿರುವಾಗ ಹಾಗೂ ದೇಶದಿಂದ ಹೊರಹಾಕುತ್ತಿರುವಾಗ ನನಗೆ ಮಾತ್ರ ವಿನಾಯಿತಿ ಕೊಡುತ್ತಾರೆ - ಅಂದರೆ ರಾಜ್ಯದ ಅಧಿಕಾರಿಗಳು ನನ್ನನ್ನು ಕ್ಷಮಿಸಿಬಿಡುತ್ತಾರೆ - ಎಂಬ 'ದುರಾಶೆ'ಯೇನೂ ನನ್ನ ಮನಸ್ಸಿನಲ್ಲಿರಲಿಲ್ಲ; ಇಂದೂ ಇಲ್ಲ. ಆದರೆ, ಬಂಗಾಳದ ಲೇಖಕನಾಗಿ, ನನ್ನ ಪುಸ್ತಕದಲ್ಲಿ ನಾನು ಯಾವುದೇ ಸುಳ್ಳಿನ ಆಸರೆಯನ್ನು ಪಡೆಯದೆ ಇದ್ದರೆ ಹಾಗೂ ಆ ಕಾರಣಕ್ಕಾಗಿಯೇ ರಾಜರೋಷವನ್ನು ಅನುಭವಿಸಬೇಕಾಗುವುದಾದರೆ, ಹಾಗೆ ಮಾಡಿಯೇ ತೀರಬೇಕು. ಇದನ್ನು ನಡುವೆ ಬಾಯಿಹಾಕಿ ಮಾಡಬಹುದು ಅಥವಾ ಅತ್ತೂ ಕರೆದು ಮಾಡಬಹುದು. ಆದರೆ ಇದರಿಂದ ಎದುರಾಡಿದ ಉದ್ದೇಶ ಕೊನೆಗೊಂಡು ಬಿಡುತ್ತದೆಯೆ?

"ರಾಜ್ಯಾಪರಾಧಿಗಳಿಗೆ ಜೈಲಿನಲ್ಲಿ ಹಾಲು-ಬೆಣ್ಣೆಯನ್ನೇನೂ ಕೊಡುವುದಿಲ್ಲ. ಕಾಗದಗಳನ್ನು ಬರೆದು ಪತ್ರಿಕೆಗಳ ಮೂಲಕ ಗದ್ದಲವನ್ನೆಬ್ಬಿಸುವುದು ನನಗೆ ಅಷ್ಟಾಗಿ ಹಿಡಿಸುವುದಿಲ್ಲ. ಆದರೆ, ದಪ್ಪ ಅಕ್ಕಿಗೆ ಬದಲಾಗಿ ಜೈಲಿನ ಅಧಿಕಾರಿಗಳು ಹುಲ್ಲು ತಿನ್ನಬೇಕೆಂದು ಏರ್ಪಾಟುಮಾಡಿದ್ದೇ ಆದರೆ, ಲಾಠಿಯ ಪೆಟ್ಟನ್ನು ತಿನ್ನುತ್ತ ಹುಲ್ಲನ್ನು ಅಗಿಯಲೂ ಯತ್ನಿಸಬಹುದು. ಆದರೆ, ಹುಲ್ಲಿನಿಂದಾಗಿ ಗಂಟಲು ಮುಚ್ಚಿಹೋಗುವವರೆಗೂ, ಅದನ್ನು ಅನ್ಯಾಯವೆಂದು ಘೋಷಿಸಿ ಪ್ರತಿಭಟಿಸುವುದು ನನ್ನ ಕರ್ತವ್ಯವೆಂದು ನಾನು ಭಾವಿಸಿದ್ದೇನೆ.

"ಪುಸ್ತಕವನ್ನು ನಾನೊಬ್ಬನೇ ಬರೆದಿದ್ದೇನೆ; ಆದ್ದರಿಂದ ಅದು ನನ್ನೊಬ್ಬನದೇ ಜವಾಬ್ದಾರಿ. ಆದರೆ, ಏನನ್ನು ಹೇಳುವುದು ನ್ಯಾಯವೆಂದು ಭಾವಿಸಿದ್ದೇನೋ ಅದನ್ನು ಹೇಳಿದ್ದೇನೆಯೇ ಇಲ್ಲವೇ ಎಂಬುದೇ ನಿಜವಾದ ಪ್ರಶ್ನೆ. ಆಂಗ್ಲರ ಆಡಳಿತದ ಕ್ಷಮಾಶೀಲತೆಯನ್ನೇನೂ ನಾನು ನೆಚ್ಚಿಕೊಂಡಿಲ್ಲ. ನನ್ನ ಇಡೀ ಸಾಹಿತ್ಯ ಸೇವೆ ಇದೇ ಬಗೆಯದಾಗಿದೆ. ನ್ಯಾಯವೆಂದು ನನಗೆ ತೋರಿದ್ದನ್ನೇ ನಾನು ಬರೆಯುತ್ತೇನೆ.

"ಆಂಗ್ಲ ರಾಜ್ಯಶಕ್ತಿ ನನ್ನ ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಂಡಿದ್ದು ನ್ಯಾಯ ಎನ್ನುವುದಾದರೆ, ಪರಾಧೀನರಾಗಿರುವ ಭಾರತೀಯರು ಅದಕ್ಕೆ ಪ್ರತಿಭಟನೆಯನ್ನು ತೋರುವುದೂ ಅಷ್ಟೇ ನ್ಯಾಯಸಮ್ಮತವಾದುದಲ್ಲವೆ ಎಂಬುದು ನನ್ನ ಪ್ರಶ್ನೆ. ಶಿಕ್ಷೆಯ ಬಗೆಗಿನ ಭಯದಿಂದಾಗಿಯೇ ನಾನು ಪ್ರತಿಭಟನೆ ತೋರಬಯಸುತ್ತಿದ್ದೇನೆ ಹಾಗೂ ಆ ಪ್ರತಿಭಟನೆಯ ತೆರೆಯ ಮರೆಯಲ್ಲಿ ನನ್ನನ್ನು ಬಚಾಯಿಸಿಕೊಳ್ಳ ಬಯಸುತ್ತಿದ್ದೇನೆ ಎಂಬುದು ನನ್ನ ಬಗ್ಗೆ ನೀವು ಮಾಡಿರುವ ವಿವೇಚನಾರಹಿತ ಆರೋಪ. ಆದರೆ, ವಾಸ್ತವಿಕತೆ ಇದಲ್ಲ. ನಾಡಿನ ಜನರು ಪ್ರತಿಭಟನೆ ಸಲ್ಲಿಸದೇ ಹೋದರೂ, ನಾನು ಪ್ರತಿಭಟನೆ ತೋರಲೇ ಬೇಕಾಗುತ್ತದೆ. ಆದರೆ, ಗಲಾಟೆ-ಗದ್ದಲ ಎಬ್ಬಿಸುವುದರ ಮೂಲಕ ಹಾಗೆ ಮಾಡಲು ಹೋಗುವುದಿಲ್ಲ. ಇನ್ನೊಂದು ಪುಸ್ತಕ ಬರೆದು ಮಾಡುತ್ತೇನೆ.

"ಈ ಪುಸ್ತಕಕ್ಕೆ ಪ್ರಚಾರಕೊಡುವುದರಿಂದ ನಾಡಿಗೆ ಖಂಡಿತವಾಗಿಯೂ ಅಮಂಗಳ ಉಂಟಾಗುತ್ತದೆ ಎಂದು ನನಗೆ ಮಾತ್ರವೇ ನೀವು ಅಪ್ಪಣೆಕೊಡಿಸಿದ್ದರೆ, ನನಗೆ ಸಮಾಧಾನ ದೊರೆಯುತ್ತಿತ್ತು. ಮನುಷ್ಯರು ತಪ್ಪು ಮಾಡುತ್ತಾರೆ. ನನ್ನಿಂದಲೂ ತಪ್ಪಾಗಿದೆ ಎಂದು ಭಾವಿಸುತ್ತಿದ್ದೆ. ನಿಮ್ಮ ಬಗ್ಗೆ ಯಾವುದೇ ದ್ವೇಷಭಾವನೆಯಿಂದ ನಾನು ಈ ಪತ್ರವನ್ನು ಬರೆದಿಲ್ಲ. ಮನಸ್ಸಿನಲ್ಲಿ ಮೂಡಿದ್ದನ್ನು ಸ್ಪಷ್ಟವಾಗಿ ನಿಮ್ಮ ಮುಂದಿಟ್ಟಿದ್ದೇನೆ. ನಾನು ನಿಜವಾಗಿಯೂ ದಾರಿಯನ್ನು ಹುಡುಕುತ್ತ ಅಲೆದಾಡುತ್ತಿದ್ದೇನೆ. ಆದ್ದರಿಂದಲೇ ಎಲ್ಲವನ್ನೂ ಬಿಟ್ಟು, ನೆಲೆಯಿಲ್ಲದವನಂತಾಗಿ ಬಿಟ್ಟಿದ್ದೇನೆ. ಇದಕ್ಕೆ ಎಷ್ಟು ಹಣ, ಎಷ್ಟು ಶಕ್ತಿ, ಎಷ್ಟು ಸಮಯ ವ್ಯರ್ಥವಾಗಿದೆ ಎಂಬುದನ್ನೂ ಯಾರಿಗಾದರೂ ತಿಳಿಸುವುದರಿಂದ ಆಗುವ ಪ್ರಯೋಜನವಾದರೂ ಏನು ?.... ನಿಮ್ಮ ಅನೇಕ ಅಭಿಮಾನಿಗಳಲ್ಲಿ ನಾನೂ ಒಬ್ಬ. ಆದ್ದರಿಂದ, ಮಾತಿನಲ್ಲಾಗಲೀ ಕಾರ್ಯದಲ್ಲಾಗಲೀ ನಿಮಗೆ ಸ್ವಲ್ಪ ನೋವನ್ನುಂಟು ಮಾಡುವುದನ್ನೂ ನಾನು ಯೋಚಿಸಲಾರೆ. ಇತಿ.

"2 ಫಾಲ್ಗುಣ 1333

"ಸೇವಕ

"ಶರತ್‌ಚಂದ್ರ ಚಟ್ಟೋಪಾಧ್ಯಾಯ"

ಈ ಪತ್ರವನ್ನು ಬರೆಯುವುದಕ್ಕೆ ಮೊದಲು ಶರತ್‌ಚಂದ್ರರು ಉಮಾಪ್ರಸಾದ ಮುಖರ್ಜಿಯವರಿಗೂ ಒಂದು ಪತ್ರವನ್ನು ಬರೆದಿದ್ದರು. ಅದರಲ್ಲಿ ಅವರು ತಮಗಾದ ನೋವನ್ನು ಮರೆಮಾಚಿರಲಿಲ್ಲ. ಅದನ್ನು ಓದಿ ಉಮಾಬಾಬೂಗಳು ಸಾಮತಾಬೇಡಕ್ಕೆ ಓಡಿಬಂದಿದ್ದು. ಅವರು ಈ ಪತ್ರವನ್ನು, ಓದಿ, ಇದನ್ನು ಗುರುದೇವರಿಗೆ ಕಳಿಸಬಾರದೆಂಬ ತೀರ್ಮಾನಕ್ಕೆ ಬಂದಿದ್ದರು, ಅದನ್ನು ಅವರು ತಮ್ಮ ಬಳಿಯೇ ಇಟ್ಟುಕೊಂಡರು. ಎರಡು ದಿವಸಗಳ ಬಳಿಕ, ಶಾಂತರಾದ ಮೇಲೆ ಸ್ವತಃ ಶರತ್‌ಚಂದ್ರರೂ ಹೀಗೆಂದರು: "ಈ ವಾದ-ವಿವಾದ ಸರಿಯಲ್ಲ. ಅವರಿಗೆ ಪತ್ರವನ್ನು ಕಳಿಸುವ ಅಗತ್ಯವಿಲ್ಲ." ಈ ಪತ್ರಗಳ ಬಗ್ಗೆ ಯಾರೊಂದಿಗೂ ಚರ್ಚಿಸಬಾರದೆಂದೂ ಅವರು ಉಮಾಬಾಬೂಗಳಿಗೆ ಹೇಳಿದರು. ಆದರೆ, ಅವರೇ ಸುಮ್ಮನಿರಲಾರದೆ ಹೋದರು. ಅನೇಕ ಸಭೆಗಳಲ್ಲಿ ಹಾಗೂ ಅನೇಕ ಪತ್ರಗಳಲ್ಲಿ ಅವರೇ ಇದನ್ನು ಉಲ್ಲೇಖಿಸಿದ್ದಾರೆ.

ಶ್ರೀಮತಿ ರಾಧಾರಾಣೀ ದೇವಿಯವರಿಗೆ ಅವರು ಹೀಗೆ ಬರೆದಿದ್ದರು:

"ಒಂದು ವಿಚಾರವನ್ನು ನಿಮಗೆ ತಿಳಿಸುತ್ತೇನೆ. ಯಾರಿಗೂ ಇದನ್ನು ಹೇಳಬೇಡಿ. 'ಪಥೇರ್ ದಾಬೀ'ಯನ್ನು ಮುಟ್ಟುಗೋಲು ಹಾಕಿಕೊಂಡಾಗ, 'ನೀವು ಇದಕ್ಕೆ ಪ್ರತಿಭಟನೆ ವ್ಯಕ್ತಪಡಿಸಿದರೆ, ಸರಿಹೋಗುತ್ತದೆ' ಎಂದು ರವೀಂದ್ರರಿಗೆ ಹೇಳಿದೆ. 'ಸರ್ಕಾರ ಸಾಹಿತಿಗಳ ಜೊತೆಯಲ್ಲಿ ಹೇಗೆ ನಡೆದುಕೊಳ್ಳುತ್ತದೆ ಎಂಬುದು ಜಗತ್ತಿನ ಎಲ್ಲ ಜನರಿಗೂ ಗೊತ್ತಾಗುತ್ತದೆ. ನನ್ನ ಪುಸ್ತಕಕ್ಕೆ ನಿಮ್ಮ ಕ್ರಮ ಸಂಜೀವಿನಿಯಂತೂ ಖಂಡಿತ ಆಗಲಾರದು. ಆಂಗ್ಲರು ಅಂಥ ವ್ಯಕ್ತಿಗಳೇನೂ ಲ್ಲ. ಇಷ್ಟಾಗಿಯೂ ಜಗತ್ತಿನ ಎಲ್ಲ ಜನರಿಗೆ ಇದು ಗೊತ್ತಾಗುತ್ತದೆ.' ಎಂದು ಹೇಳಿ, ಅವರಿಗೆ ಪುಸ್ತಕವನ್ನು ಕೊಟ್ಟುಬಂದೆ. ಅದಕ್ಕೆ ಉತ್ತರವಾಗಿ ಅವರು ಏನು ಬರೆದರು ಗೊತ್ತೆ ? 'ಜಗತ್ತನ್ನೆಲ್ಲ

ಸುತ್ತಿ ಬಂದಿದ್ದೇನೆ. ಆಂಗ್ಲರ ಆಡಳಿತ ವ್ಯವಸ್ಥೆಯಷ್ಟು ಸಹಿಷ್ಣುವೂ ಕ್ಷಮಾಶೀಲವೂ ಆದಂಥ ಇನ್ನೊಂದು ಆಡಳಿತವ್ಯವಸ್ಥೆ ಬೇರೆಲ್ಲಿಯೂ ಇಲ್ಲ. ನಿನ್ನ ಪುಸ್ತಕವನ್ನು ಓದಿದ ಓದುಗರ ಮನಸ್ಸು ಆಂಗ್ಲರ ಆಡಳಿತದ ವಿಷಯದಲ್ಲಿ ಅಸಂತೋಷಕ್ಕೆ ಒಳಗಾಗುತ್ತದೆ. ನಿನ್ನ ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಂಡಿದ್ದನ್ನು ಬಿಟ್ಟು, ಅವರು ನಿನ್ನನ್ನು ಏನೂ ಅಂದಿಲ್ಲ. ಬಹುಶಃ ನಿನ್ನನ್ನು ಅವರು ಕ್ಷಮಿಸಿರಬೇಕು. ಈ ಕ್ಷಮೆಯನ್ನೇ ಆಸರೆಯಾಗಿ ಹೊಂದಿರುವ ನೀನು, ಸರ್ಕಾರವನ್ನು ನಿಂದಿಸುವುದು ಸಾಹಸದ ವಿಡಂಬನೆಯಷ್ಟೇ ಆಗುತ್ತದೆ' ಎಂದರು.

"ತಪ್ಪು ಮಾಡದೇ ಇದ್ದರೂ, ಯಾರಾದರೂ ಇನ್ನೊಬ್ಬರ ಬಗ್ಗೆ ಇಷ್ಟು ಕಟುವಾಗಲು ಸಾಧ್ಯವೇ ಎಂದು ಯೋಚಿಸಬಲ್ಲೆಯಾ? ಈ ಪತ್ರವನ್ನು ಅಚ್ಚಿಸಬೇಕೆಂದು ಅವರು ಕೊಟ್ಟಿದ್ದರು. ಆದರೆ, ನಾನು ಅದನ್ನು ಅಚ್ಚಿಗೆ ಕೊಡಲಿಲ್ಲ. ಕವಿಯ ಈ ಭಾರಿ 'ಸರ್ಟಿಫಿಕೇಟ'ನ್ನು 'ಸ್ಟೇಟ್ಸ್‌ಮೆನ್' ಮೊದಲಾದ ಎಲ್ಲ ದಿನಪತ್ರಿಕೆಗಳೂ ಅಚ್ಚಿಸುತ್ತವೆ ಹಾಗೂ ವಿಚಾರಣೆಯೇ ಇಲ್ಲದೆ ಜೈಲಿನಲ್ಲಿ ಕೊಳೆಯುತ್ತಿರುವ ನಮ್ಮ ನಾಡಿನ ತರುಣರಿಗಾಗಿ ನಡೆಯುತ್ತಿರುವ ಈ ಆಂದೋಳನ ನಿಷ್ಫಲವಾಗಿ ಬಿಡುತ್ತದೆ ಎಂಬ ಕಾರಣದಿಂದಾಗಿ ನಾನು ಹಾಗೆ ಮಾಡಲಿಲ್ಲ."

ಆಗ ಬಂಗಾಳದ ಗ್ರಂಥಾಲಯ ಸಂಘದ ಮೊದಲ ಅಧಿವೇಶನ ನಡೆಯಲಿತ್ತು. ಅವಿನಾಶಚಂದ್ರ ಘೋಷಾಲರು ಅದರ ವ್ಯವಸ್ಥಾಪಕರಲ್ಲಿ ಒಬ್ಬರಾಗಿದ್ದರು. ಅವರು ಶರತ್‌ಚಂದ್ರರ ಪರಮಭಕ್ತರಾಗಿದ್ದರು. ಈ ಕಾರಣದಿಂದಾಗಿಯೇ ಅವರು ಶರತ್‌ಚಂದ್ರರಿಗೆ ಆಹ್ವಾನಪತ್ರಿಕೆ ಕೊಡಲು ಬಂದಿದ್ದರು. ಆದರೆ, ಅವರ ಮನಸ್ಸು ಮತ್ತು ಬುದ್ಧಿಗಳ ಮೇಲೆ 'ಪಥೇರ್ ದಾಬೀ'ಯ ಪ್ರಭಾವ ಕವಿದುಕೊಂಡಿತ್ತು. ಮಾತುಕತೆಯಾಡುತ್ತ ಒಮ್ಮೆಗೇ ಅವರು ಅನ್ಯಮನಸ್ಕರಾದರು ಹಾಗೂ ಈ ಮಾತುಗಳನ್ನು ಹೇಳುತ್ತ ಹೋದರು: "ಸರಿ, ನಿನ್ನ ಈ ಕಾದಂಬರಿಯಂತೂ ಬಂಗಾಳದ ಎಲ್ಲ ಪುಸ್ತಕಾಲಯಗಳಿಗೆ ಕೆಲಸಕೊಟ್ಟಿದೆ. ನೀನೊಂದು ಕೆಲಸಮಾಡಬೇಕಲ್ಲ. ಅದು ನಿನ್ನ ಕೆಲಸವೇ ಹೌದು. 'ಪಥೇರ್ ದಾಬೀ'ಯನ್ನು ಮುಕ್ತಗೊಳಿಸುವ ಬಗ್ಗೆ ಸಭೆಯಲ್ಲಿ ಒಂದು ಗೊತ್ತುವಳಿಯನ್ನು ಸ್ವೀಕರಿಸುವ ಹಾಗೆ ಮಾಡಬಲ್ಲೆಯಾ? ಎದ್ದು ಕಾಣುವಂತೆ ಸಭೆಯಲ್ಲಿ ಪ್ರತಿಭಟನೆ ಉಂಟಾದರೆ, ಸಾಕಷ್ಟು ಕೆಲಸವಾದಂತೆ ಆಗುತ್ತದೆ. ಸರ್ಕಾರವೂ ಸ್ವಲ್ಪ ಮಟ್ಟಿಗೆ ಬಾಗುತ್ತದೆ. ಅದು ನನ್ನ ಇನ್ನೂ ಐದು ಪುಸ್ತಕಗಳನ್ನು ಮುಟ್ಟುಗೋಲು ಹಾಕಿಕೊಂಡಿದ್ದರೆ ನನಗೆ ಇಷ್ಟು ದುಃಖವಾಗುತ್ತಿರಲಿಲ್ಲ."

ಅವರ ಇಚ್ಛೆಯಂತೆ ಹಾಗೆಯೇ ಮಾಡಲಾಯಿತು. ಅಷ್ಟೇ ಅಲ್ಲ, ಬಂಗಾಳದ ಅನೇಕ ಪ್ರತಿಷ್ಠಿತ ವ್ಯಕ್ತಿಗಳು 'ಈ ನಿಷೇಧಾಜ್ಞೆಯ ಬಗ್ಗೆ ತುಂಬ ತೀಕ್ಷ್ಣವಾದ ಮಾತುಗಳಲ್ಲಿ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು. ಆದರೆ, ಇದರಿಂದ ಏನೂ ಪರಿಣಾಮವಾಗಲಿಲ್ಲ. ಇಷ್ಟಂತೂ ನಿಜ. ಒಂದು ದಿವಸ ಒಬ್ಬ ಅಧಿಕಾರಿ ಅವರನ್ನು ಕರೆದು ಹೀಗೆಂದು ಹೇಳಿದ: "ನೀವು ಸರ್ಕಾರದ ಪರವಾಗಿ 'ಪಥೇರ್ ದಾಬೀ'ಯಂಥ ಒಂದು ಪುಸ್ತಕವನ್ನು ಬರೆದುಬಿಡಿ. ಬೇಕಾದಷ್ಟು ಹಣ ದೊರೆಯುತ್ತದೆ."[1]

---

1. 'ಶರತ್ ಪರಿಚಯ': ಸುರೇಂದ್ರನಾಥ ಗಂಗೋಪಾಧ್ಯಾಯ

ಶರತ್‌ಚಂದ್ರರು ಆತನಿಗೆ ಹೀಗೆಂದು ಉತ್ತರಿಸಿದರು: "ಸಾಹೇಬರೆ, ಗಾಳಿಪಟವನ್ನು ಹಾರಿಸಿ, ಬುಗರಿಯನ್ನು ಆಡಿಸಿ ನಾನು ಬಾಲ್ಯವನ್ನು ಕಳೆದಿದ್ದೇನೆ; ಗಾಂಜಾ ಮುಂತಾದುವನ್ನು ಸೇವಿಸಿ ಯೌವನವನ್ನು ಕಳೆದಿದ್ದೇನೆ. ಆಮೇಲೆ ರಂಗೂನಿಗೆ ಹೋಗಿ ನೌಕರಿ ಮಾಡಿದ್ದೇನೆ. ಈಗ 'ನಾಲ್ಕೂ ಅಧ್ಯಾಯ'ಗಳನ್ನು ಬರೆಯುವ ವಯಸ್ಸಿನಲ್ಲೇನೂ ಇಲ್ಲ ಕ್ಷಮಿಸಿ."

ಈ ಘಟನೆ ಅದೆಷ್ಟು ರೂಪಗಳನ್ನು ಪಡೆದು, ಪ್ರಚಾರವನ್ನು ದಕ್ಕಿಸಿಕೊಂಡಿತೋ ಏನೋ. ಬಹುಶಃ ಅವರು ಹೀಗೆ ಹೇಳಿದ್ದಿರಬಹುದು: "ಸಾಹೇಬರೆ, ನನ್ನ ಬಾಳಿನ ಮೂರು ಅಧ್ಯಾಯಗಳು ಕಳೆದುಹೋಗಿವೆ. ಬಾಲ್ಯದಲ್ಲಿ ದೇವದಾಸನಾಗಿದ್ದೆ; ಯೌವನದಲ್ಲಿ ಜೀವಾನಂದನಾಗಿದ್ದೆ; ವೃದ್ಧಾಪ್ಯದಲ್ಲಿ ಆಶು ಬಾಬೂ ಆಗಿದ್ದೇನೆ. ಈಗ ನಾಲ್ಕನೆಯ ಅಧ್ಯಾಯವನ್ನು ಜೋಡಿಸಬೇಕೆಂಬ ಇಚ್ಛೆಯೇನೂ ಇಲ್ಲ."

ಈ ಘಟನೆ ಸಂಪೂರ್ಣವಾಗಿ ನಿಜವಲ್ಲದೆಯೂ ಇರಬಹುದು. ಅವರ ಬಾಳಿನಲ್ಲಿ ಕಿಂವದಂತಿಗಳು ಹೇಗೆ ಹೆಣೆದುಕೊಂಡು ಬಿಟ್ಟದ್ದುವೋ ಹಾಗೆಯೇ ಇದೂ ಒಂದು ಕಿಂವದಂತಿಯೇ ಆಗಿದ್ದಿರಬಹುದು. ಏಕೆಂದರೆ, ಕವಿಗುರು ರವೀಂದ್ರರ ವಿಷಯದಲ್ಲಿ ಅವರು ಎಷ್ಟೇ ಅಸಂತುಷ್ಟರಾಗಿದ್ದಿರಬಹುದಾದರೂ, ಅವರ ಕೃತಿಗಳನ್ನು ಲೇವಡಿ ಎಬ್ಬಿಸುವ - ಅದರಲ್ಲಿಯೂ ಒಬ್ಬ ವಿದೇಶಿ ಅಧಿಕಾರಿಯ ಎದುರಿನಲ್ಲಿ - ಮಟ್ಟಿಗೆ, ಅವರನ್ನು ನಿಂದಿಸುವ ವರೆಗೆ ಹೋಗುವುದು ಸಾಧ್ಯವಿರಲಿಲ್ಲ. 'ಚಾರ್ ಅಧ್ಯಾಯ್ (ನಾಲ್ಕು ಅಧ್ಯಾಯಗಳು) ಎಂಬುದು ರವೀಂದ್ರರ ಸುಪ್ರಸಿದ್ಧ ಕಾದಂಬರಿಯ ಹೆಸರು ಎಂಬುದನ್ನು ನೆನೆದಾಗ, ಈ ಸಂಗತಿ ಚೆನ್ನಾಗಿ ಅರ್ಥವಾಗುತ್ತದೆ.

'ಪಥೇರ್ ದಾಬೀ'ಯೊಂದಿಗೆ ಇನ್ನೂ ಅನೇಕ ಕಥೆಗಳು ಸೇರಿಕೊಂಡುಬಿಟ್ಟವೆ. ಅದರಿಂದಾಗಿ ಸೆರೆಮನೆಗೆ ಹೋಗಬೇಕಾದ ಸಾಧ್ಯತೆ ಬಹುದಿನಗಳ ವರೆಗೆ ಇದ್ದೇ ಇತ್ತು. ಒಂದು ಸಲವಂತೂ ಪರಿಸ್ಥಿತಿ ತುಂಬ ಗಂಭೀರವಾಗಿ ಬಿಟ್ಟಿತ್ತು. ಯಾವ ಕ್ಷಣದಲ್ಲಿ ಬೇಕಾದರೂ ಅವರನ್ನು ಬಂಧಿಸಬಹುದಾಗಿತ್ತು. ಜೈಲಿನಲ್ಲಿ ಅಫೀಮ್ ಸೇವಿಸುವ ಸೌಲಭ್ಯ ದೊರೆಯುವುದಿಲ್ಲವೆಂಬುದು ಅವರಿಗೆ ಗೊತ್ತಿತ್ತು. ಆದ್ದರಿಂದ, ಇನ್ನು ಮುಂದೆ ಅಫೀಮ್ ಸೇವಿಸುವುದಿಲ್ಲವೆಂದು ಅವರು ತೀರ್ಮಾನಿಸಿದರು.

ಆದರೆ, ಬಹುಬೇಗ ಅವರಿಗೆ ಜ್ವರ ಬರಲಾರಂಭಿಸಿತು. ಕ್ರಮೇಣ ಮೂರು ವಾರಗಳೇ ಕಳೆದುಹೋದುವು. ಜ್ವರ ಇಳಿಯುತ್ತಲೇ ಇರಲಿಲ್ಲ. ಡಾಕ್ಟರಿಗೆ ಬಹಳ ಚಿಂತೆಯಾಗತೊಡಗಿತ್ತು. ಇದಕ್ಕೆ ಕಾರಣಗಳೇನೆಂಬುದನ್ನು ಅರಸುತ್ತ ಹೋದಂತೆ, ಶರತ್‌ಚಂದ್ರರು ಅಫೀಮು ಸೇವನೆ ಮಾಡುವುದನ್ನು ಬಿಟ್ಟು ಬಿಟ್ಟದ್ದಾರೆಂಬುದು ಅವರಿಗೆ ತಿಳಿಯಿತು. ದಿನಕ್ಕೆ ಹಲವು ಸಲ ಕಡಲೆಕಾಳಿನಷ್ಟು ಪ್ರಮಾಣದ (?) ಅಫೀಮನ್ನು ಸೇವಿಸುತ್ತಿದ್ದ ವ್ಯಕ್ತಿ ಒಮ್ಮೆಗೇ ಅದನ್ನು ಬಿಟ್ಟುಬಿಟ್ಟರೆಂದರೆ, ಅದನ್ನು ಆಶ್ಚರ್ಯದ ಸಂಗತಿಯೆಂದೇ ಹೇಳಬೇಕಾಗುತ್ತದೆ. ಡಾಕ್ಟರ್ ಕೇಳಿದರು: "ನೀವು ಅಫೀಮ್ ಸೇವಿಸುವುದನ್ನು ಯಾವಾಗಿನಿಂದ ಬಿಟ್ಟಿರಿ ?"

ದೊಡ್ಡ ಸೊಸೆ ಉತ್ತರಿಸಿದರು: "ಸುಮಾರು ಒಂದು ತಿಂಗಳಾಗಿದೆ."

ಡಾಕ್ಟರು ಹೇಳಿದರು: "ನಮ್ಮ ವೈದ್ಯಶಾಸ್ತ್ರದಲ್ಲಿ ಇದನ್ನು 'ಓಪಿಯಮ್ ಫೀವರ್ (ಅಫೀಮು ಜ್ವರ) ಎಂದು ಕರೆಯುತ್ತಾರೆ. ಔಷಧಿಯೊಂದಿಗೆ ಅಫೀಮಿನ

ಪ್ರಮಾಣವನ್ನು ಕ್ರಮವಾಗಿ ಹೆಚ್ಚಿಸುತ್ತ ಬಂದಾಗ ಮಾತ್ರವೇ ಜ್ವರ ಬಿಡುತ್ತದೆ. ಅಫೀಮ್ ಸೇವನೆಯನ್ನು ಬಿಡುವುದಕ್ಕೂ ಒಂದು ಕ್ರಮವಿದೆ. ನೀವು ನಿಜವಾಗಿಯೂ ಅದನ್ನು ಬಿಡಬೇಕೆಂದಿದ್ದರೆ, ಆ ಕ್ರಮವನ್ನು ಅನುಸರಿಸಬೇಕಾಗುತ್ತದೆ."

ಆದರೆ, ಅದನ್ನು ಅನುಸರಿಸುವುದು ಶರತ್‌ಚಂದ್ರರಿಗೆ ಸಾಧ್ಯವಿರಲಿಲ್ಲ. ಜ್ವರವೇನೋ ಬಿಟ್ಟಿತು. ಆದರೆ ಅಫೀಮ್ ಅವರನ್ನು ಬಿಡಲಿಲ್ಲ. ಬರ್ಮಾದಲ್ಲಿಯೂ ಒಂದು ಬಾರಿ ಹೀಗೆ ಮಾಡಿ ನೋಡಿದ್ದರು. ದೇಶಬಂಧು ಅವರ ಒಡನಾಟ ಹಾಗೂ ಖ್ಯಾತಿ ಹೆಚ್ಚುತ್ತಬಂದಂತೆ, ತಮ್ಮ ಹಿಂದಿನ ಜೀವನದ ಬಗ್ಗೆ ಅವರಿಗೆ ವಿಷಾದ ಉಂಟಾದಂತೆ ತೋರುತ್ತದೆ. ಏಕೆಂದರೆ, ಒಂದು ದಿವಸ ತುಂಬ ವಿಷಾದ ತುಂಬಿದ ಮನಸ್ಸಿನಿಂದ ತಮ್ಮ ಮಾವನೊಂದಿಗೆ ಹೀಗೆ ಹೇಳಿದ್ದರು: "ನೋಡು, ಈ ಚಟಕ್ಕೆ ತುತ್ತಾಗಿ ನಾನೆಂಥ ತಪ್ಪು ಮಾಡಿಬಿಟ್ಟೆ. ಅಫೀಮು ಸೇವನೆ ಮಾಡದೆ ಇದ್ದಾಗ, ಭೂಮಿಯ ಮೇಲಿರುವುದೆಲ್ಲವೂ ತುಂಬ ಸ್ವಚ್ಛವಾಗಿಯೂ ಸುಂದರವಾಗಿಯೂ ಕಾಣುತ್ತಿತ್ತು. ನಾನು ಈ ಚಟಕ್ಕೆ ಒಳಗಾಗದಿದ್ದರೆ ಇನ್ನೂ ದೊಡ್ಡ ಲೇಖಕನಾಗಬಹುದಾಗಿತ್ತು."

ಇದಕ್ಕೆ ತದ್ವಿರುದ್ಧವಾದಂಥ ಮಾತುಗಳನ್ನು ಅನೇಕಸಲ ಆಡಿದ್ದರು. ಒಮ್ಮೆ ಯಾರೋ ಒಬ್ಬರು ಅವರನ್ನು ಕೇಳಿದ್ದರು: "ಅಣ್ಣಯ್ಯ, ಅವತ್ತು ನೀವು ಇದೇ ಮಾತನ್ನು ಹೀಗೆ ಹೇಳಿದ್ದಿರಿ. ಇದು ಅದಕ್ಕೆ ತದ್ವಿರುದ್ಧವಾಗಿ ಹೇಳುತ್ತಿದ್ದೀರಲ್ಲ ?"

ಸ್ವಲ್ಪ ಕಠೋರವಾದ ಧ್ವನಿಯಲ್ಲಿ ಅವರು ಹೇಳಿದರು: "ಮಾತು ನನ್ನದು ತಾನೆ. ಅದನ್ನು ಹೇಗೆ ಹೇಳಬೇಕೆಂಬುದು, ನನಗೆ ಬಿಟ್ಟಿರುವ ಅಧಿಕಾರ."

ಇಂಥ ಸಂದರ್ಭಗಳಲ್ಲಿ ಅವರ ವಿನೋದ ಪ್ರವೃತ್ತಿ ಸ್ವಲ್ಪ ಹೆಚ್ಚು ಗಂಭೀರವಾಗಿ ಬಿಡುತ್ತಿತ್ತು. ಆದರೆ, ಸಾಹಿತಿ ಯಾವಾಗಲೂ ವಿನೋದದ ಮನಃಸ್ಥಿತಿಯಲ್ಲಿಯೇ ಇರುವುದಿಲ್ಲವಲ್ಲ! ಓದುಗರಲ್ಲಿ ಜನಪ್ರಿಯತೆಯನ್ನು ಗಳಿಸಿಕೊಂಡುಬಿಟ್ಟು, ಬಳಿಕ, ಆತ ಗಂಭೀರವಾದ ಪ್ರಶ್ನೆಗಳನ್ನು ಎದುರಿಸಬೇಕಾಗಿ ಬರುತ್ತದೆ. 'ಪಥೇರ್ ದಾಬೀ'ಯ ರಚನಾ-ಪ್ರಕ್ರಿಯೆ ಮತ್ತು ಪ್ರೇರಣೆಗಳಿಗೆ ಸಂಬಂಧಿಸಿದಂತೆ, ಜನರು ಅದೆಷ್ಟು ಪ್ರಶ್ನೆಗಳನ್ನು ಕೇಳುತ್ತಿದ್ದರೋ ಏನೋ. "ಅಣ್ಣಯ್ಯ, ಈ ಕಾದಂಬರಿಗೆ ನಿಮಗೆ ಎಲ್ಲಿಂದ ಪ್ರೇರಣೆ ದೊರೆಯಿತು ? ಈ ಕಾದಂಬರಿಯ ನಾಯಕ ಯಾರು ? ಯಾವ ಕ್ರಾಂತಿಕಾರಿಯನ್ನು ದೃಷ್ಟಿಯಲ್ಲಿರಿಸಿಕೊಂಡು ನೀವು ಸವ್ಯಸಾಚಿಯ ಪಾತ್ರವನ್ನು ಸೃಷ್ಟಿಸಿದ್ದೀರಿ ? ಭಾರತಿ ಯಾರು ?" ಇವೇ ಮೊದಲಾದ ಪ್ರಶ್ನೆಗಳು ಅವರಿಗೆ ಎದುರಾಗುತ್ತಿದ್ದುವು.

ಈ ಎಲ್ಲ ಪ್ರಶ್ನೆಗಳೂ ಅರ್ಥಹೀನವೇ. ಲೇಖಕನಿಗೆ ವೈಯಕ್ತಿಕ ಅನುಭವವಿದೆ ಎಂದರೆ ಯಾವಾಗಲೂ ಯಾರಾದರೂ ಒಬ್ಬ ಜೀವಂತ ವ್ಯಕ್ತಿಯನ್ನು ದೃಷ್ಟಿಯಲ್ಲಿರಿಸಿಕೊಂಡೇ ತನ್ನ ಪಾತ್ರಗಳನ್ನು ಸೃಷ್ಟಿಸುತ್ತಾನೆ ಎಂದೇ ಅರ್ಥ ವಾಗುವುದಿಲ್ಲ. ಆ ದಿನಗಳಲ್ಲಿ ರಾಜಕೀಯ ಬಂದಿಗಳೊಂದಿಗೆ ಹಾಗೂ ಕ್ರಾಂತಿಕಾರಿಗಳೊಂದಿಗೆ ಅವರಿಗೆ ನಿಕಟ ಸಂಪರ್ಕ ಏರ್ಪಟ್ಟಿತ್ತು. ಬಹಳ ಹಿಂದೆಯೇ ಪೀನಾಂಗ್‌ನಲ್ಲಿ ಅವರು ಯಾರೋ ಒಬ್ಬ ಕ್ರಾಂತಿಕಾರಿಯನ್ನು ಸಂಧಿಸಿದ್ದರು. ಆತನ ಸಾಹಿತ್ಯಿಕ ಗುಣಗಳನ್ನು ನೋಡಿಯೇ ಇವರು ಸವ್ಯಸಾಚಿಯ ಪಾತ್ರವನ್ನು

ಕಡೆದಿರಬೇಕು. ಆ ಪಾತ್ರದಲ್ಲಿ ಯಾರೋ ಒಬ್ಬನನ್ನು ಅರಸುವುದು ವ್ಯರ್ಥ.

ಆದರೆ, 'ಪಥೇರ್ ದಾಬೀ'ಯಲ್ಲಿ ಕಾಣಬರುವ ರಂಗೂನಿನ ವಿಭಿನ್ನ ಸ್ಥಳಗಳ ಹಾಗೂ ಅದರ ನಿವಾಸಗಳ ಚಿತ್ರಣ ನಿಜಕ್ಕೂ ಯಥಾರ್ಥವಾದುದು. ಚಂದನ ನಗರದಲ್ಲಿ ನಡೆದ ಸಮಾಲೋಚನಾ ಸಭೆಯಲ್ಲಿ ಅವರು ಈ ಮಾತನ್ನು ಒಪ್ಪಿಕೊಂಡಿದ್ದರು: "ಸಮಸ್ತ ದ್ವೀಪಗಳಲ್ಲಿ ಸುಮಾತ್ರಾ, ಜಾವಾ ಮತ್ತು ಬೋರ್ನಿಯೋ ಮೊದಲಾದ ದ್ವೀಪಗಳಲ್ಲಿ ನಾನು ಅಲೆದಾಡುತ್ತಿದ್ದೆ. ಅಲ್ಲಿಯ ಬಹುತೇಕ ವ್ಯಕ್ತಿಗಳು ಒಳ್ಳೆಯವರಲ್ಲ. ಅವರೆಲ್ಲ ಕಳ್ಳರು." ಅವರು ಬರ್ಮಾದಲ್ಲಿ ಇದ್ದಾಗಲೂ ಕೊಕೇನ್‌ನ ಕಳ್ಳಸಾಗಣೆಯಲ್ಲಿ ತೊಡಗಿದ್ದ ಒಂದು ತಂಡದ ವಿಚಾರವನ್ನು ಕೇಳಿದ್ದರು. ಅದಕ್ಕೆ ಒಬ್ಬ ಹೆಂಗಸು ಸಂಚಾಲಕಿಯಾಗಿದ್ದಳು. ಅವಳೇ ಈ ಕಾದಂಬರಿಯ ಸುಮಿತ್ರಾಳ ಪಾತ್ರಸೃಷ್ಟಿಗೆ ಕಾರಣಳಾದಳು. ಹೀಗೆಯೇ ಈ ಬಗೆಯ ವೈಯಕ್ತಿಕ ಅನುಭವಗಳ ಫಲವಾಗಿ ರೂಪುಗೊಂಡಿದೆ—ಈ 'ಪಥೇರ್ ದಾಬೀ' ಕಾದಂಬರಿ. ಮನೆಯಲ್ಲಿಯೇ ಕುಳಿತು ಅಥವಾ ಆರಾಮಕುರ್ಚಿಗೆ ಒರಗಿಕೊಂಡು ಕುಳಿತು ನಿಜವಾದ ಸಾಹಿತಿ ಎಂದೂ ತನ್ನ ಸಾಹಿತ್ಯವನ್ನು ಸೃಷ್ಟಿಸುವುದಿಲ್ಲ. ಏನಾದರೂ ಅನುಕರಣೆ ಮಾಡಬಹುದು, ಅಷ್ಟೆ. ಯಾರೋ ಒಬ್ಬರು ಬಂಕಿಮಚಂದ್ರರ 'ಆನಂದಮಠ'ದೊಂದಿಗೆ 'ಪಥೇರ್ ದಾಬೀ'ಯನ್ನು ಹೋಲಿಸಿ ನೋಡುತ್ತ ಈ ಅರ್ಥದ ಮಾತುಗಳನ್ನಾಡಿದ್ದಾರೆ: ಬಂಕಿಮಚಂದ್ರರ 'ಆನಂದ ಮಠ'ದಲ್ಲಿ ಆದರ್ಶವೆನ್ನಬಹುದಾದ ವಿದ್ರೋಹವೂ ಇಲ್ಲ, ವಿಪ್ಲವವೂ ಇಲ್ಲ, ಅರಾಜಕತೆಯೂ ಇಲ್ಲ. ಅದು ಸ್ವದೇಶಾಭಿಮಾನದ ಶಾಸ್ತ್ರ; ಆದರೆ ಅದರಲ್ಲಿ ಪರಜಾತಿಯ ಬಗ್ಗೆ ವಿದ್ವೇಷವಿದೆ. 'ಪಥೇರ್ ದಾಬೀ'ಯಲ್ಲಿ ಮುಂದಿನ ದಾರಿಯ ಬಗ್ಗೆ ತೋರುಬೆರಳೇನೂ ಕಾಣುವುದಿಲ್ಲ. ಅದು ದಾರಿಯಲ್ಲಿಯೇ ಕೊನೆಗೊಂಡು ಬಿಡುತ್ತದೆ. ಶರತ್‌ಚಂದ್ರರು "ಇರುವುದನ್ನು ಚಿತ್ರಿಸಿರುವ" ಕಲಾವಿದರು. ಕಲ್ಪನೆಯನ್ನು ಆಧಾರವಾಗಿಟ್ಟುಕೊಂಡು ಅವರು ಆದರ್ಶವನ್ನು ಸೃಷ್ಟಿಸುವುದಿಲ್ಲ. ಅವರು ವಾಸ್ತವತೆಗೆ ದನಿಗೊಡುತ್ತಾರೆ.

ಆದರೆ, 'ಆನಂದಮಠ'ದಲ್ಲಿ ಕಾಣಬರುವ ಪರಜಾತಿಯ ಬಗೆಗಿನ ವಿದ್ವೇಷ ಪ್ರಜ್ಞಾಪೂರ್ವಕ ಕೃತಕ ರಚನೆಯಲ್ಲ ಎಂಬುದೂ ನಿಜವಲ್ಲವೆ? ಅಲ್ಲಿಯ ವಿದ್ವೇಷ ಪ್ರಭುತ್ವದ ಬಗೆಗಿನದು. ಆ ಪ್ರಭು ಅಲ್ಲಿ ಪರಜಾತಿಯವನಾಗಿರುವುದು ಒಂದು ಆಕಸ್ಮಿಕವಷ್ಟೆ. ಆದರೆ, ಇದಕ್ಕೆ ಬದಲಾಗಿ, 'ಪಥೇರ್ ದಾಬೀ'ಯಲ್ಲಿ ಮುಂದಿರಿಸಲಾಗಿರುವ ಕ್ರಾಂತಿಕಾರಿಯ ಚಿತ್ರ ಅನೇಕರಿಗೆ ಹತ್ತಿರ ಬರುವಂಥದಾದ ಜೀವಂತ ಚಿತ್ರವೇ ಆದರೂ, ಅದು ಅಪೂರ್ಣವೇ ಆಗಿ ಉಳಿದಿದೆ. ಕಲೆಯ ದೃಷ್ಟಿಯಿಂದಲೂ 'ಪಥೇರ್ ದಾಬೀ'ಯ ಸ್ಥಾನ ಅವರ ಇತರ ಅನೇಕ ಕಾದಂಬರಿಗಳಿಗಿಂತಲೂ ಕೆಳಗಿನದಾಗುತ್ತದೆ. ಮನೋಭಾವಗಳ ತಿಕ್ಕಾಟವೇ ಶರತ್‌ಸಾಹಿತ್ಯದ ವೈಶಿಷ್ಟ್ಯ. ಅದು ಇದರಲ್ಲಿ ಎಲ್ಲಿದೆ? 'ಚರಿತ್ರಹೀನ' ಕಾದಂಬರಿಯಲ್ಲಿನ 'ಸಾವಿತ್ರಿ'ಯಲ್ಲಿ ಕಂಡು ಬರುವಂಥ ಸಂಯಮವಾದರೂ ಇದರಲ್ಲಿ ಎಲ್ಲಿದೆ? ಆ ವೈದ್ಯನ ಪಾತ್ರ ಅಥವಾ ಇತರ ಗೌಣ ಪಾತ್ರಗಳು ಮಾತ್ರವೇ ಈ ದೃಷ್ಟಿಯಿಂದ ಮೇಲೆದ್ದು ಬಂದಿವೆ.

ವಾಸ್ತವವಾಗಿ 'ಪಥೇರ್ ದಾಬೀ'ಗೆ ಮಹತ್ವ ಇರುವುದು ಅಷ್ಟಾಗಿ ಕಲೆ ಮತ್ತು ಪಾತ್ರ ಸೃಷ್ಟಿಯ ಸಂಯಮದ ದೃಷ್ಟಿಯಿಂದಲ್ಲ, ಯಾರೂ ಸ್ಪರ್ಶಿಸದೆಯೇ ಇದ್ದಂಥ ರಾಜಕೀಯ ಜೀವನದ ಒಂದು ಮುಖವನ್ನು ಮುಂದಿರಿಸುವ ಪ್ರಯತ್ನಮಾಡಿದ್ದಾರೆಂಬ ದೃಷ್ಟಿಯಿಂದ. ಇಷ್ಟಾಗಿಯೂ, ತನ್ನೆಲ್ಲ ದೌರ್ಬಲ್ಯಗಳ ನಡುವೆಯೂ, 'ಪಥೇರ್ ದಾಬೀ'ಯ ಸವ್ಯಸಾಚಿಯ ನಿರ್ಮಲ ಚಾರಿತ್ರ್ಯ ಭಾರತೀಯ ಜನಮನವನ್ನು ಎಂದೆಂದೂ ಆಕರ್ಷಿಸುತ್ತಿರುತ್ತದೆ, ಅದರ ಮೇಲೆ ಪ್ರಭಾವ ಬೀರುತ್ತಿರುತ್ತದೆ.

## 13

'ಪಥೇರ್ ದಾಬೀ'ಯನ್ನು ರಚಿಸುತ್ತಿದ್ದ ಅವಧಿಯಲ್ಲಿಯೇ ಅವರ ಮನೆಯ ನಿರ್ಮಾಣ ಕಾರ್ಯವೂ ಪೂರ್ಣಗೊಂಡಿತ್ತು. ಅಲ್ಲಿಯೇ ಅವರು ವಾಸಮಾಡಲೂ ಆರಂಭಿಸಿದ್ದರು.[1] ಅಲ್ಲಿಗೆ ಹೋಗುವುದಕ್ಕೆ ಮೊದಲು, ಸುಮಾರು ಒಂದು ವರ್ಷದವರೆಗೆ ಅವರು ಶಿವಪುರದ ಟ್ರ್ಯಾಮ್ ಡಿಪೋದ ಬಳಿಯ ಕಾಳೀಕುಮಾರ ಮುಕರ್ಜಿ ಬೀದಿಯಲ್ಲಿಯೂ ವಾಸವಾಗಿದ್ದರು.

ಈ ಮನೆಯನ್ನು ಅವರು ತಮ್ಮ ಸೋದರಿಯ ಊರಾಗಿದ್ದ ಗೋಮತೀಪುರದ ಬಳಿಯ ಸಾಮತಾಬೇಡ ಎಂಬಲ್ಲಿ ರೂಪನಾರಾಯಣ ನದಿಯ ದಡದಲ್ಲಿ ಕಟ್ಟಿಸಿದ್ದರು. ಜಾಗ ತುಂಬ ಚೆನ್ನಾಗಿತ್ತು. ಹತ್ತಿರದಲ್ಲಿಯೇ ಎರಡು ಕೊಳಗಳು ಮತ್ತು ಒಂದು ಹೂದೋಟವನ್ನೂ ಅವರು ಮಾಡಿಸಿದ್ದರು. ತಮ್ಮ ಅನುಕೂಲಕ್ಕನುಗುಣವಾಗಿ ಎಲ್ಲ ವಿಚಾರಗಳತ್ತಲೂ ಅವರು ಗಮನಕೊಟ್ಟಿದ್ದರು. ಅಷ್ಟಲ್ಲದೆ ಆ ಕಾಲದಲ್ಲಿ ಸುಮಾರು ಹದಿನೇಳು ಸಾವಿರ ರೂಪಾಯಿಗಳನ್ನು ಖರ್ಚುಮಾಡಿದ್ದರು!

ಸಾಮತಾ ಎಂಬುದು ಆ ಹಳ್ಳಿಗಿದ್ದ ಮೂಲ ಹೆಸರು. ಆದರೆ, ಅವರ ಮನೆ ನದಿಯ ದಡಕ್ಕೆ ಅಂಟಿದಂತೆ ಇದ್ದುದರಿಂದ, ಅದನ್ನು ಸಾಮತಾಬೇಡ[2] ಎಂದು ಕರೆದಿದ್ದರು ಹಾಗೂ ಅವರು ಹಾಗೆಯೇ ಬರೆಯುತ್ತಿದ್ದರು. ರೈಲಿನ ಮೂಲಕ ದೇಉಲ್ಟೀ ನಿಲ್ದಾಣವನ್ನು ತಲುಪಿ, ಅಲ್ಲಿಂದ ಮೇನೆಗಳಲ್ಲಿ ಹಳ್ಳಿಯನ್ನು ತಲುಪಬಹುದಾಗಿತ್ತು. ಮಳೆಗಾಲದಲ್ಲಿ ನೀರು ತುಂಬಿಕೊಂಡು ಬಿಡುತ್ತಿದ್ದುದರಿಂದ ಆಗುತ್ತಿದ್ದ ತೊಂದರೆಗೆ ಕೊನೆ ಮೊದಲೆಂಬುದೇ ಇರಲಿಲ್ಲ. ಆದರೆ, ಅಲ್ಲಿಯ ನಿಸರ್ಗ ಸೌಂದರ್ಯದ ಎದುರಿನಲ್ಲಿ ಈ ಕಷ್ಟಗಳ ಅರಿವಾಗುತ್ತಲೇ ಇರಲಿಲ್ಲ: ನಾಲ್ಕೂ ಕಡೆ ಹರಡಿಕೊಂಡಿರುತ್ತಿದ್ದ ಬತ್ತದ ಗದ್ದೆಗಳು; ಪ್ರಹರಿಗಳಂತೆ ನಿಂತಿರುತ್ತಿದ್ದ ಬಾಳೆಯ ಗಿಡಗಳು ಮತ್ತು ಖರ್ಜೂರದ ಗಿಡಗಳು ಹಾಗೂ ತುಂಬಿ ಹರಿಯುವ ನದಿ ಪ್ರವಾಹದ ತೀವ್ರತೆಯಿಂದ ಮೂಡುತ್ತಿದ್ದ ಹಾಗೂ ನದಿಯ ಉಚ್ಛ್ವಾಸದಂತಿದ್ದ ಅಲೆಗಳ ತಿಕ್ಕಾಟದ ಫಲದಂತಿರುತ್ತಿದ್ದ ನೊರೆ ಪರಂಪರೆ ಬುಗುರಿಯಂತೆ ತಿರುಗುತ್ತ

1. ಫೆಬ್ರುವರಿ 1926.
2. 'ಬೇಡ' ಎಂದರೆ ನದೀತೀರದ ಹಳ್ಳಿ ಎಂದು ಅರ್ಥ. - ಅನುವಾದಕನ ಅಡಿಟಿಪ್ಪಣಿ.

ಮುಂದೆ ಹೋಗುತ್ತಿತ್ತು. ದಾರಿಯಲ್ಲಿ ಕಾಲುವೆಗಳೂ ಸಾಕಷ್ಟು ಸಂಖ್ಯೆಯಲ್ಲಿದ್ದುವು. ಬಿದಿರಿನ ಸೇತುವೆಯ ಮೂಲಕ ಅವುಗಳನ್ನು ದಾಟಬೇಕಾಗುತ್ತಿತ್ತು.

ದಾರಿಯಲ್ಲಿ ಇಷ್ಟೆಲ್ಲ ಅಡಚಣೆಗಳಿದ್ದರೂ, ರೂಪನಾರಾಯಣ ನದಿ ಮೊದಲಿನಿಂದಲೂ ಈ ಕಥಾಶಿಲ್ಪಿಯ ಮನಸ್ಸಿಗೆ ಕರೆಕೊಡುತ್ತಲೇ ಇದ್ದಿತು. ತಮ್ಮ ಕಿಶೋರತನದಲ್ಲಿ ತಮ್ಮ ಸೋದರಿಯ ಮನೆಗೆ ಅವರು ಖಂಡಿತವಾಗಿಯೂ ಬಂದಿದ್ದಿರಬೇಕು. ಕನಿಷ್ಠಪಕ್ಷ ಬರ್ಮಾಕ್ಕೆ ಹೋಗುವ ಮುನ್ನವಾದರೂ ಅಲ್ಲಿಗೆ ಬಂದಿರಲೇಬೇಕು. ಆಗ ಅವರು ಮಾವ ಗಿರೀಂದ್ರನಾಥರಿಗೆ ಹೀಗೆ ಬರೆದಿದ್ದರು: "ಆದರೂ ಒಮ್ಮೆ ತಪ್ಪದೆ ಬಾ. ಅಕ್ಕನಿಗೆ ಸಂತೋಷವಾಗುತ್ತದೆ. ಮನೆ ರೂಪನಾರಾಯಣ ಮಂದಿರದ ಎದುರಿಗೇ ಇದೆ. ಬೇಟೆಗೆ ಹೋಗಲೂ ಅವಕಾಶವಿದೆಯೆಂದು ಕೇಳಿದ್ದೇನೆ.... ನೀನು ನಿಜವಾಗಿಯೂ ಬರಬೇಕೆಂದಿದ್ದರೆ, ಖಂಡಿತವಾಗಿಯೂ ಬಾ. ನಾವು ರೈಲು ನಿಲ್ದಾಣದಲ್ಲಿ ಕಾಯುತ್ತೇವೆ. ನಿಲ್ದಾಣವೂ ಭವ್ಯವಾಗಿದೆ. ರೂಪನಾರಾಯಣ ನದಿಯ ಮೇಲೆ ಕಟ್ಟಿರುವ ಸೇತುವೆ ಇನ್ನೂ ಭವ್ಯವಾಗಿದೆ. ಜೊತೆಗೆ ನಾವು ನೌಕಾವಿಹಾರವನ್ನೂ ಮಾಡಬಹುದು. ಏನಂತಿಯೆ ?"[1]

ಮೈ-ಮನಗಳ ಆರೋಗ್ಯವನ್ನು ಸರಿಪಡಿಸಿಕೊಳ್ಳುವ ಪ್ರಯತ್ನದ ಅಂಗವಾಗಿ ಅವರು ತಮ್ಮ ಉಳಿದ ಜೀವನದ ಕೆಲವು ವರ್ಷಗಳನ್ನು ಈ ಹಳ್ಳಿಯಲ್ಲಿಯೇ ಕಳೆಯುವ ಆಲೋಚನೆಯನ್ನಿರಿಸಿಕೊಂಡಿದ್ದರು. ಕಳೆದ ಕೆಲವು ದಿನಗಳಲ್ಲಿ ಅವರು ಅನೇಕ ಬಗೆಯ ಆಘಾತಗಳನ್ನು ಸಹಿಸಿಕೊಳ್ಳಬೇಕಾಗಿ ಬಂದಿತ್ತು. ಪ್ರಿಯವ್ಯಕ್ತಿಗಳನೇಕರ ಸಾವು ಅವರ ಮನಸ್ಸಿಗೆ ತುಂಬ ನೋವನ್ನು ಉಂಟುಮಾಡಿತ್ತು. ದೇಶಬಂಧು ಚಿತ್ತರಂಜನ ದಾಸ್ ಅವರ ಸಾವು ಅವರನ್ನು ಬಹುಮಟ್ಟಿಗೆ ಛಿನ್ನ-ವಿಚ್ಛಿನ್ನವಾಗಿಸಿಬಿಟ್ಟಿತ್ತು. ಆದರೆ, ಇದಕ್ಕೂ ಮೊದಲೇ, ಅವರ ಸದಾಕಾಲದ ಜೊತೆಗಾರನಾಗಿದ್ದ ಭೇಲೂ ನಾಯಿಯೂ ಕಣ್ಣು ಮುಚ್ಚಿತ್ತು. ಅವರ ಜೊತೆಯಲ್ಲಿರುವ ಭಾಗ್ಯ ದೊರೆತಿದ್ದಂಥವರಿಗೆ ಮಾತ್ರ ಭೇಲೂ ಇಲ್ಲದ ಅವರ ಜೀವನ ಅದೆಷ್ಟು ಅಪೂರ್ಣವಾಗಿತ್ತು ಎಂಬುದು ಅರ್ಥವಾಗಬಹುದಾಗಿತ್ತು. ಅದಕ್ಕಾಗಿ ಅವರು ಅನೇಕ ವಿಚಾರಗಳನ್ನು ಸಹಿಸಿಕೊಳ್ಳಬೇಕಾಗುತ್ತಿತ್ತು. ಆದರೂ, ಹೃದಯಾಂತರಾಳದಿಂದ ಅವರು ಅದನ್ನು ಪ್ರೀತಿಸುತ್ತಿದ್ದರು. ಭೇಲೂವಿನಂಥ ಶಾಂತ, ಶಿಷ್ಟ ನಾಯಿ ಬೇರೊಂದಿಲ್ಲವೆಂಬುದು ಅವರ ಹೃತ್ಪೂರ್ವಕ ನಂಬಿಕೆಯಾಗಿತ್ತು. ಇಳಾಚಂದ್ರಜೋಶಿ ಅವರೊಂದಿಗೆ ಹೀಗೆಂದರು ಹೇಳಿದ್ದರು: "ನಾಯಿ ಪ್ರೀತಿಯ ಸಂದರ್ಭದಲ್ಲಿಯೂ ಕೋಪದ ಭಾವನೆಯನ್ನು ತೋರುತ್ತ ಬೊಗಳುತ್ತದೆ. ನಾಯಿಯನ್ನು ಪ್ರೀತಿಸಿರುವಂಥವರು ಹಾಗೂ ಅದರ ಪ್ರೀತಿಯನ್ನು ಪಡೆದಿರುವಂಥವರು ಮಾತ್ರವೆ ಈ ಸತ್ಯವನ್ನು ಅರಿಯಬಲ್ಲರು... ನಾಯಿ ಮನುಷ್ಯನನ್ನು ಮನುಷ್ಯನಿಗಿಂತಲೂ ಚೆನ್ನಾಗಿ ಗುರುತಿಸಬಲ್ಲದು. ನನ್ನ ಈ ಮಾತನ್ನು ಬರೆದಿಟ್ಟುಕೊ."

ಆದ್ದರಿಂದ, ಭೇಲೂ ಯಾರನ್ನಾದರೂ ಕಚ್ಚಿದರೆ ಪ್ರೀತಿಯಿಂದಲೇ ಕಚ್ಚುತ್ತದೆ

---

1. ಡಿಸೆಂಬರ್ 24, 1902.

ಎಂದು ಅವರು ಭಾವಿಸುತ್ತಿದ್ದರು. ಈ ಪ್ರೀತಿಯ ಪರಿಣಾಮವಾಗಿ ಅವರು ಕೋರ್ಟಿನ ಕಟ್ಟೆಯನ್ನು ಹತ್ತಬೇಕಾಯಿತು, ಕಚ್ಚಿಸಿಕೊಂಡವರಿಗೆ ಹಣವನ್ನು ತೆರಬೇಕಾಯಿತು ಹಾಗೂ ಮತ್ತೆ ಮತ್ತೆ ಅದರ ಜೊಲ್ಲನ್ನು ಪರೀಕ್ಷಿಸಲು ಏರ್ಪಾಟು ಮಾಡಬೇಕಾಯಿತು. ಆದರೆ, ಅದನ್ನೆಂದೂ ಅವರು ದೂರವಿರಿಸಲಾರದೆ ಹೋದರು. ತುಂಬ ಪ್ರೀತಿಯಿಂದ ಅವರು ಅದನ್ನು ತಮ್ಮ ಬಳಿ ಕೂಡಿಸಿಕೊಳ್ಳುತ್ತಿದ್ದರು. ಒಂದು ದಿವಸ ಗೌರವಸ್ಥ ಕುಟುಂಬದ ಮಹಿಳೆಯೊಬ್ಬಳು ಅವರಿಗೆ ತಟ್ಟೆಯಲ್ಲಿ ಭೋಜನವನ್ನಿರಿಸಿ ಕಳಿಸಿದ್ದಳು. ಜೊತೆಯಲ್ಲಿ ಒಂದು ಕಾಗದವೂ ಇತ್ತು. "ಸ್ವೀಕರಿಸಿದರೆ ಕೃತಾರ್ಥಳೆಂದು ಭಾವಿಸುತ್ತೇನೆ" ಇಳಾ ಎಂದು ಬರೆಯಲಾಗಿತ್ತು.

ಆ ತಟ್ಟೆಯನ್ನು ನೋಡಿದ ಕೂಡಲೇ ಭೇಲೂ ಅದರ ಸುತ್ತಲೂ ಸುತ್ತತೊಡಗಿತು. ತುಂಬ ಪ್ರೀತಿಯ ಶರತ್‌ಚಂದ್ರರು ಅದಕ್ಕೆ ಒಂದು 'ಸಂದೇಶ'ವನ್ನು ತಿನ್ನಿಸಿದರು. ತಿಂದ ಮೇಲೆ ಅದು ಮತ್ತಷ್ಟನ್ನು ಬೇಡಿತ್ತು. ಅದು ಬೇಡುತ್ತಲೇ ಇತ್ತು; ಶರತ್‌ಚಂದ್ರರು ತಟ್ಟೆ ಖಾಲಿಯಾಗುವವರೆಗೂ ಅದನ್ನು ತಿನ್ನಿಸುತ್ತಲೇ ಇದ್ದರು. ಕವಿ ನರೇಂದ್ರದೇವ್ ಅವರು ನೋಡುತ್ತಲೇ ಕುಳಿತಿದ್ದರು. "ನೀವು ಇದೇನು ಮಾಡಿಬಿಟ್ಟಿರಿ? ಆ ಮಹಿಳೆ ಶ್ರದ್ಧೆಯಿಂದ ನಿಮಗೆಂದು ಕಳಿಸಿದ್ದ 'ಸಂದೇಶ' ವೆಲ್ಲವನ್ನೂ ನಿಮ್ಮ ನಾಯಿಗೇ ತಿನ್ನಿಸಿಬಿಟ್ಟಿರಲ್ಲ! ಆಕೆಗೆ ಗೊತ್ತಾದರೆ, ಅದೆಷ್ಟು ಬೇಜಾರು ಮಾಡಿಕೊಳ್ಳಬಹುದು! ಯೋಚಿಸಿ ನೋಡಿ" ಎಂದರು.

ಶರತ್‌ಚಂದ್ರರೆಂದರು: "ಇದೇ ನಿಮ್ಮ ತಪ್ಪು. ಯಾವುದೇ ಸಂಗತಿಯನ್ನು, ಅದರ ಆಳಕ್ಕೆ ಇಳಿದು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದೇ ಇಲ್ಲವಲ್ಲ. ಇಳಾ ನನಗೆ 'ಸಂದೇಶ'ವನ್ನು ಕಳಿಸಿದ್ದಾದರೂ ಏಕೆ? ನಾನು ಅದನ್ನು ತಿಂದು ಸಂತೋಷಪಡಲಿ ಎಂದಲ್ಲವೆ! ಈಗ ಯೋಚಿಸಿ ನೋಡಿ: ನಾನು ಸ್ವತಃ ತಿನ್ನದೆ ಭೇಲೂವಿಗೆ ತಿನ್ನಿಸಿದೆ. ಅವನ್ನು ತಿಂದು ಅದೆಷ್ಟು ಸಂತೋಷಪಟ್ಟಿತೋ, ಅಷ್ಟು ಸಂತೋಷಪಡಲು ನನಗೆ ಸಾಧ್ಯವಾಗುತ್ತಿತ್ತೆ? ನನ್ನ ದೃಷ್ಟಿಯಲ್ಲಿ, ಇಳೆಯ ದಾನ ವ್ಯರ್ಥವಾಗದೆ ಪೂರ್ಣವಾಗಿ ಸಾರ್ಥಕವಾಗಿದೆ."

ಭೇಲೂವಿನ ಬಗ್ಗೆ ಇಂಥ ಅನೇಕ ಪ್ರಸಂಗಗಳು ಹುಟ್ಟಿಕೊಂಡುಬಿಟ್ಟಿದ್ದುವು. ಈ ವಿಶೇಷ ಪ್ರಸಂಗದಲ್ಲಿನ ಸತ್ಯತೆಯ ಅಂಶ ಸ್ವಲ್ಪ ಕಡಿಮೆಯೇ ಆಗಿರಬಹುದು ಹಾಗೂ ಬಾಯಿಂದ ಬಾಯಿಗೆ ಸಾಗುತ್ತ ಬಂದಂತೆ ಕಲ್ಪನೆ ಆ ಘಟನೆಗೆ ಈ ರೂಪವನ್ನು ಕೊಟ್ಟಿರಬಹುದು. ಆದರೆ ಉಳಿದ ಘಟನೆಗಳನ್ನು ಪ್ರಶ್ನಿಸುವುದೂ ಮೂರ್ಖತೆಯೇ ಆಗುತ್ತದೆ.

ಆದರೆ, ಅದನ್ನು ಕಾಣಲು ಬಂದ ಯಾರೇ ಆದರೂ 'ಶರತ್‌ಬಾಬೂ!' ಎಂದು ಕೂಗುಹಾಕಿದರೆ, ಮೊಟ್ಟಮೊದಲು ಅವರನ್ನು ಸ್ವಾಗತಿಸಲು ಈ ಭೇಲುವೇ ಬೊಗಳುತ್ತ ಓಡಿಬರುತ್ತಿತ್ತೆಂಬುದಂತೂ ನಿಜ. ಬಂದವರು ಅದರ ರೂಪ ಮತ್ತು ಧ್ವನಿಗಳನ್ನು ಕಂಡು ಕೇಳಿಯೇ ಹೆದರಿಬಿಡುತ್ತಿದ್ದರು. ಈಗ ಶರತ್‌ಚಂದ್ರರು 'ಏ ಬೇಲೂ!' ಎಂದು ಪ್ರೀತಿಯಿಂದ ಕೂಗು ಹಾಕುತ್ತಿದ್ದರು. ಭೇಲೂ ಒಳ್ಳೆಯ ವ್ಯಕ್ತಿಯಂತೆ ಅವರ ಬಳಿ ಹೋಗಿ ಕುಳಿತುಕೊಳ್ಳುತ್ತಿತ್ತು. ಒಮ್ಮೆ ಹೊಸದಾಗಿ ಬಂದಿದ್ದ ವ್ಯಕ್ತಿಯೊಬ್ಬರು ಹೆದರಿಕೊಂಡು ಕೇಳಿದರು: "ಈ ನಾಯಿ ಕಚ್ಚುತ್ತದೇನು?"

ಪ್ರತ್ಯುತ್ತರ ರೂಪವಾಗಿ ಶರತ್‌ಚಂದ್ರರು ಅವರನ್ನು ಕೇಳಿದರು: "ಇದು ನಿಮ್ಮನ್ನು ಕಚ್ಚಿತೇನು ?"

ಆಕ್ಷೇಪಣೆಯ ಸುಳಿವು ಸಹ ಅವರನ್ನು ಉದ್ವಿಗ್ನರನ್ನಾಗಿಸಿ ಬಿಡುತ್ತಿತ್ತು. ಆದರೆ, ಈ ಭೇಲುವಿನಿಂದಾಗಿಯೇ ಆಗಾಗ ಭಾರಿ ಅದ್ಭುತ ಪ್ರಸಂಗಗಳು ಹುಟ್ಟಿಕೊಂಡು ಬಿಡುತ್ತಿದ್ದವು. ಒಂದು ದಿವಸ ಮನೆಯ ಮಾಲೀಕರು ಬಾಡಿಗೆಯನ್ನು ವಸೂಲು ಮಾಡಿಕೊಂಡು ಹೋಗಲು ಬಂದರು. ಅವರಿಗೆ ಹಣವನ್ನು ಕೊಟ್ಟು, ಶರತ್‌ಚಂದ್ರರು ಕೂಡಲೇ ಊಟಮಾಡಲು ತೆರಳಿದರು. ಹಿಂದಿರುಗಿ ಬಂದು ನೋಡಿದರೆ, ಮನೆಯ ಮಾಲೀಕರು ಮೂಲೆಯಲ್ಲಿ ನಡುಗುತ್ತ ನಿಂತಿದ್ದುದು ಕಾಣಿಸಿತು. ಬಾಡಿಗೆಯ ಹಣ ಅವರ ಕೈಯಲ್ಲಿ ಹಾಗೆಯೇ ಇತ್ತು. ಎದುರಿಗೆ ಕುಳಿತಿದ್ದ ಭೇಲೂ ರೆಪ್ಪೆಯನ್ನು ಮಿಟುಕಿಸದೆ ಅವರನ್ನೇ ನೋಡುತ್ತ ಕುಳಿತಿತ್ತು.

ಶರತ್‌ಚಂದ್ರರಿಗೆ ತುಂಬ ದುಃಖವಾಯಿತು. ಭೇಲುವನ್ನು ತಮ್ಮ ಬಳಿಗೆ ಕರೆದು, ಮನೆ ಮಾಲೀಕರ ಕ್ಷಮೆ ಯಾಚಿಸುತ್ತ ಅವರು ಹೀಗೆಂದರು: "ಛೇ, ಛೇ! ನೀವು ಹೀಗೆ ಇಲ್ಲಿ ನಿಲ್ಲಬೇಕಾಯಿತೆ ? ಊಟವಿಲ್ಲ, ಸ್ನಾನವಿಲ್ಲ! ನಿಮ್ಮ ವಿಷಯದಲ್ಲಿ ತುಂಬ ಅನ್ಯಾಯದಿಂದ ನಡೆದುಕೊಂಡಂತೆ ಆಯಿತು. ಆದರೆ, ಹೀಗಾಗಿದೆಯೆಂದು ನನಗೆ ಗೊತ್ತೇ ಇರಲಿಲ್ಲ."

ಇಷ್ಟೆಲ್ಲ ಆಗಿದ್ದರೂ, ಅವರು ಭೇಲುವಿಗೆ ಒಂದು ಮಾತನ್ನೂ ಹೇಳಲಿಲ್ಲ. ನೆರೆಹೊರೆಯವರೇನಾದರೂ ಅದನ್ನು ಗದರಿಸಿಬಿಟ್ಟರೆ, ಅಂಥವರಿಗೆ ಉಳಿಗಾಲವೇ ಇರುತ್ತಿರಲಿಲ್ಲ. ಹುಕ್ಕಾ ಎಳೆಯುತ್ತಿದ್ದರೆ, ಅದನ್ನೂ ಹಿಡಿದುಕೊಂಡೇ ಓಡಿಬರುತ್ತಿದ್ದರು, ಧಾರಾ ಪ್ರವಾಹದಂತೆ 'ಭಾಷಣ ಮಾಡಲು' ಆರಂಭಿಸಿಬಿಡುತ್ತಿದ್ದರು. ಆ ಭಾಷಣದ 'ಪ್ರಾಕೃತ' ಭಾಷೆಯನ್ನು ಕೇಳಿದ ನೆರೆಯವನಿಗೆ ತಲೆತಗ್ಗಿಸಿಕೊಂಡು ನಿಲ್ಲುವುದನ್ನು ಬಿಟ್ಟು, ಬೇರಾವುದೇ ದಾರಿಯೂ ಗೋಚರಿಸುತ್ತಿರಲಿಲ್ಲ.

ಭೇಲೂವಿಗೆ ಅವರು ಚಹವನ್ನೂ ಕುಡಿಸುತ್ತಿದ್ದರು. ಬಟ್ಟಲಿನಲ್ಲಿ ಅದರ ಕೂದಲುಗಳು ಉದುರುತ್ತಿದ್ದುವು. ಇಷ್ಟಾಗಿಯೂ, ಅವರು ಸ್ವತಃ ಇದಕ್ಕೆ ಆಕ್ಷೇಪವನ್ನೆತ್ತುತ್ತಿರಲಿಲ್ಲ; ಬೇರೆ ಯಾರಾದರೂ ಆಕ್ಷೇಪಿಸಿದರೆ, ಸಹಿಸಿಕೊಳ್ಳುತ್ತಲೂ ಇರಲಿಲ್ಲ. ಈ ಅಸಂಗತ-ಅಸೀಮ ಪ್ರೀತಿಯಿಂದಾಗಿ, ಅವರ ಕೆಲವು ಸ್ನೇಹಿತರು ಭೇಲೂವನ್ನು ಅವರ ಮಗ ಅಥವಾ ಯುವರಾಜನೆಂದು ಕರೆಯುತ್ತಿದ್ದರು. ಲೀಲಾರಾನೀ ಅವರಿಗೆ ಸ್ವತಃ ಅವರೇ ಹೀಗೆ ಬರೆದಿದ್ದರು: "ಈಗ ಈ ಭೇಲೂವೇ ನನ್ನ ಮಗ. ಎಲ್ಲರೂ ಇದನ್ನು ಗುರುತಿಸುತ್ತಾರೆ. ಈ ನಾಯಿ ಶರತ್‌ಬಾಬೂ ಅವರಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯ ಎಂಬುದೂ ಎಲ್ಲರಿಗೂ ಗೊತ್ತು."

ಅವರ ಪ್ರೀತಿಗೆ ಅಧಿಕಾರಿಯಾಗಿದ್ದ ಈ ನಾಯಿ ಒಂದು ದಿನ ಇದ್ದಕ್ಕಿದ್ದಂತೆ ಅಸ್ವಸ್ಥವಾಗಿಬಿಟ್ಟಿತು. ಅವರು ಕೂಡಲೇ ಅದನ್ನು ಬೇಲಿಯಾಘಾಟ್ ಆಸ್ಪತ್ರೆಗೆ ಸೇರಿಸಿ ಬಂದರು. ಅಂದು ಅವರು ಢಾಕಾಗೆ ಹೋಗಬೇಕಾಗಿತ್ತು. ಅಲ್ಲಿಂದ ಹಿಂದಿರುಗಿ ಬಂದ ಮೇಲೆ ಅವರು ಅದನ್ನು ಮತ್ತೆ ಮನೆಗೆ ಒಯ್ದರು. ಆರೋಗ್ಯವೇನೋ ಸ್ವಲ್ಪ ಸುಧಾರಿಸಿತ್ತು. ಆದರೆ ಮನೆಗೆ ಬಂದ ಮೇಲೆ ಮತ್ತೆ ಅದರ ಅನಾರೋಗ್ಯ ಹೆಚ್ಚಿತು. ಇದು ತೀವ್ರ ಗ್ಯಾಸ್ಟ್ರೈಟಿಸ್ (ಕರುಳಿನ ಉರಿಯೂತ) ಪ್ರಕರಣ ಎಂಬುದಾಗಿ

ಪಶುವೈದ್ಯರು ತಿಳಿಸಿದರು.

ಈಗ ಯಾವ ಔಷಧಿಯೂ ಕೆಲಸಮಾಡಲಾರದೆ ಹೋಯಿತು. ಕೊನೆಯ ದಿವಸ ಅದಕ್ಕೆ ನಿಜವಾಗಿಯೂ ತುಂಬ ಕಷ್ಟವೇ ಆಯಿತು. ಹಿಂದಿನ ದಿವಸ ಚಮಚದ ಮೂಲಕ ಅದಕ್ಕೆ ಔಷಧಿ ಕುಡಿಸಲು ಅವರು ಬಹಳಷ್ಟು ಪ್ರಯತ್ನ ಮಾಡಿದರು. ಆದರೆ, ಔಷಧಿ ಹೊಟ್ಟೆಗೆ ಹೋಗಲೇ ಇಲ್ಲ. ಕೋಪದಿಂದ ಅದು ಅವರ ಕೈಯನ್ನು ಕಚ್ಚಿತು. ಆಮೇಲೆ ಇಡೀ ರಾತ್ರಿ ಅವರ ಕತ್ತಿನ ಬಳಿ ಮುಖವನ್ನಿಟ್ಟುಕೊಂಡು ಅಳುತ್ತ ಇತ್ತು. ಬೆಳಿಗ್ಗೆ ಅದರ ಅಳು ನಿಂತು ಹೋಯಿತು. ಅವರ ಒಂಟಿ ಬಾಳಿನ ಇಪ್ಪತ್ತನಾಲ್ಕೂ ಘಂಟೆಯ ಜೊತೆಗಾರ, ಪ್ರವಾಸದ ಬಂಧು ಈ ಲೋಕದಲ್ಲಿ ಅವರನ್ನು ಮಾತ್ರವೇ ಗುರುತಿಸುತ್ತಿತ್ತು. ಅದು ಅವರನ್ನು ಕಚ್ಚಿಬಿಟ್ಟಾಗ, ಎಲ್ಲರೂ ಹೆದರಿಬಿಟ್ಟಿದ್ದರು. ಆದರೆ, ಸ್ವತಃ ಶರತ್‌ಚಂದ್ರರ ಮನಸ್ಸಿನಲ್ಲಿ ರವೀಂದ್ರರ ಈ ಪಂಕ್ತಿ ಮೊಳಗುತ್ತಿತ್ತು: "ನಿನ್ನೊಲವಿನಲಿ ಇಹುದು ಆಘಾತ, ಅವಹೇಳನೆಯು ತಾನೆಂದು ಇಲ್ಲ."

ಭೇಲೂ ಅವರ ಮೈಮೇಲೆ ಆಘಾತವನ್ನುಂಟುಮಾಡಿತ್ತು. ಆದರೆ, ಅದರ ಮನಸ್ಸಿನಲ್ಲಿ ಅವಹೇಳನೆಯ ಭಾವನೆಯೇನೂ ಇರಲಿಲ್ಲ. ಸಂಪೂರ್ಣ ವಿಶ್ವಾಸದಿಂದ ಇದೇ ಮಾತನ್ನು ಅವರು ಎಲ್ಲರೊಡನೆಯೂ ಹೇಳಿದರು. ಆದರೆ, ಹಿಂದೆಂದೂ ಅವರಿಗೆ ಇಷ್ಟೊಂದು ದುಃಖವಾಗಿರಲಿಲ್ಲ. ಅವರು ಮಕ್ಕಳಂತೆ ಅತ್ತರು. ನೆರೆಮನೆಯ ತೋಟದಲ್ಲಿ ತಮ್ಮ ಕೈಯಾರೆ ಅದಕ್ಕೆ ಸಮಾಧಿಯನ್ನು ಸಿದ್ಧಪಡಿಸಿದರು. ಒಂದು ಹಾಳೆಯಲ್ಲಿ ಅದರ ಸಾವಿನ ಸುದ್ದಿಯನ್ನು ಹೀಗೆ ನಮೂದಿಸಿದ್ದರು: "ಭೇಲೂ, ದೇಹತ್ಯಾಗ ಮಾಡಿದ್ದು: 10 ವೈಶಾಖ ಬೃಹಸ್ಪತಿವಾರ 1332, ಬೆಳಿಗ್ಗೆ 6.00 ಘಂಟೆ; 23ಏಪ್ರಿಲ್ 1925.ಸಮಾಧಿಯ ಸಮಯ: ಒಂಬತ್ತೂವರೆ ಘಂಟೆ; ಬಾಜೇ ಶಿವಪುರ, ಹಾವಡಾ. 'ರಾತ್ರಿರ್-ದಿನೇರ್ ಸಂಗೀ ಆಮ್ಹಾರ್ ಪರಮ ಸ್ನೇಹೇರ್ ಬಂಧು' (ಹಗಲು-ರಾತ್ರಿಯ ಜೊತೆಗಾರ, ನನ್ನ ಪರಮ ಪ್ರೀತಿಯ ಬಂಧು)."

ಅವರು ಸ್ನಾನ-ಊಟ-ತಿಂಡಿ ಎಲ್ಲವನ್ನೂ ಮರೆತುಬಿಟ್ಟರು. ಸಮಾಧಿಯ ಹತ್ತಿರ ಕುಳಿತು ಕಣ್ಣೀರು ಸುರಿಸುತ್ತಿದ್ದರು. ದೊಡ್ಡ ಸೊಸೆ ಅವರಿಗೆ ಸಮಾಧಾನ ಹೇಳಿ ಸುಸ್ತಾದರು. ಅವರು ಶಾಂತರಾಗಲೇ ಇಲ್ಲ. ಸುದ್ದಿ ತಿಳಿದು 'ಭಾರತವರ್ಷ' ಪತ್ರಿಕೆಯ ಸಂಪಾದಕ ಜಲಧರಸೇನ್ ಅಲ್ಲಿಗೆ ಓಡಿಬಂದರು. ಅವರನ್ನು ತಬ್ಬಿಕೊಂಡು ಅಳುತ್ತ ಶರತ್‌ಚಂದ್ರರು ಹೇಳಿದರು: "ಅಣ್ಣಯ್ಯ, ನನ್ನ ಭೇಲೂ ನನಗೆ ಮೋಸಮಾಡಿ ಹೋಗಿಬಿಟ್ಟ."

ಆ ದಿನಗಳಲ್ಲಿ ಯಾರೇ ಅವರ ಬಳಿಗೆ ಹೋದರೂ, ತಮಗೆ ತುಂಬ ಪ್ರಿಯರಾಗಿದ್ದಂಥ ವ್ಯಕ್ತಿ ತೀರಿಕೊಂಡರೋ ಎಂಬಂತೆ, ಅವರ ಎದುರಿನಲ್ಲಿ ಶೋಕಾರ್ತರಾಗಿ ಬಿಡುತ್ತಿದ್ದರು. ತಮ್ಮ ಪ್ರಿಯ ಮಿತ್ರರಾಗಿದ್ದ ಚಾರುಚಂದ್ರ ಬಂದೋಪಾಧ್ಯಾಯರಿಗೆ ಅವರು ಹೀಗೆ ಬರೆದಿದ್ದರು: "ನನ್ನ ಇಪ್ಪತ್ತನಾಲ್ಕು ಘಂಟೆಗಳ ಜೊತೆಗಾರ ಇನ್ನಿಲ್ಲ. ಲೋಕದಲ್ಲಿ ಇದು ಇಷ್ಟು ದೊಡ್ಡ ದುಃಖದ ಸಂಗತಿಯಾಗಿದೆ ಎಂಬುದನ್ನು ನಾನು ಸರಿಯಾಗಿ ಅರ್ಥಮಾಡಿಕೊಂಡಿರಲಿಲ್ಲ. ಬಹುಶಃ ಈ ಕಾರಣಕ್ಕಾಗಿಯೇ ಇದು ನನಗೆ ಅಗತ್ಯವಾಗಿತ್ತೋ ಏನೋ. ಚಾರು,

ಇನ್ನೊಂದು ಸಂಗತಿಯನ್ನೂ ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಈ ಲೋಕದಲ್ಲಿ 'ಆಬ್ಜೆಕ್ಟಿವಿಸಮ್' (ವಸ್ತುನಿಷ್ಠತೆ) .ಎಂಬುದೇನೂ ಇಲ್ಲ; ಎಲ್ಲವೂ 'ಸಬ್ಜೆಕ್ಟಿವಿಸಮ್' (ವ್ಯಕ್ತಿನಿಷ್ಠತೆ) ಇಲ್ಲವಾದಲ್ಲಿ, ಅದು ಒಂದು ನಾಯಿಯಲ್ಲದೆ ಇನ್ನೇನು ತಾನೇ ಆಗಿತ್ತು? ರಾಜ ಭರತನ ಕಥೆ ಯಾವ ರೀತಿಯಲ್ಲಿಯೂ ಸುಳ್ಳಲ್ಲ."[1] ಮಾವ ಸುರೇಂದ್ರರಿಗೆ ಅವರು ಹೀಗೆ ಹೇಳಿದರು: "ಬಾಳಿನಲ್ಲಿ ಅದೆಷ್ಟು ಕಷ್ಟ-ನಷ್ಟಗಳನ್ನು ಅನುಭವಿಸಿದ್ದೇನೆ. ಅನೇಕ ಸಲ ಭೇಲು ಅವುಗಳನ್ನು ತುಚ್ಛವಾಗಿಸಿಬಿಟ್ಟಿತ್ತು...... ದುಃಖದ ದಿನಗಳಲ್ಲಿ ಅದರ ನೆರವಿನಿಂದ ನನ್ನ ಕಾಲ ಸುಖಮಯವಾಗಿ ಕಳೆದಿದೆ."

ಈ ಎರಡು ಜೀವಿಗಳ ನಡುವೆ ಅದೆಂಥ ಏಕಾತ್ಮಭಾವ ಏರ್ಪಟ್ಟಿತ್ತು. ಒಂದಾದರೋ ಪಶುವಾಗಿತ್ತು; ಇನ್ನೊಂದು ಅಗತ್ಯವುಳ್ಳ ಮಾನವ ಜೀವಿಯಾಗಿತ್ತು.

ಅವರು ತಮ್ಮ ನಾಯಿಯನ್ನು ಮಾತ್ರವೇ ಇಷ್ಟೊಂದು ಪ್ರೀತಿಸುತ್ತಿದ್ದರು ಎಂಬ ತಪ್ಪು ಕಲ್ಪನೆಯೂ ಈ ಕಥೆಯಿಂದ ಮೂಡಬಹುದಾಗಿದೆ. ಆದರೆ, ಇದೇನೂ ನಿಜವಲ್ಲ. ಎಲ್ಲ ಜೀವಿಗಳ ವಿಷಯದಲ್ಲಿಯೂ ಅವರಿಗೆ ಪ್ರೀತಿ ಇತ್ತು. ನಾಯಿಗಳ ಬಗ್ಗೆ ಸ್ವಲ್ಪ ಹೆಚ್ಚು ಪ್ರೀತಿ ಇತ್ತು. ತಮ್ಮ ಕಾರಿನ ಚಾಲಕನಿಗೆ ಅವರು ಹೀಗೆಂದು ಆದೇಶ ನೀಡಿದ್ದರು: "ನೋಡಪ್ಪ, ಮನುಷ್ಯರ ಮೇಲೆ ಕಾರುಬಿಟ್ಟರೂ ಬಹುಶಃ ನಾನು ಸುಮ್ಮನಿರಬಹುದು. ಆದರೆ, ನೀನು ಯಾವುದಾದರೂ ನಾಯಿಯ ಮೇಲೆ ಬಿಟ್ಟರೆ ಮಾತ್ರ, ನಿನ್ನ ಕೆಲಸ ಹೋಯಿತೆಂದೇ ತಿಳಿದುಕೋ."

ಹೊಸ ಮನೆಗೆ ಬಂದ ಮೇಲೂ ಈ ಆಘಾತಗಳು ಅವರ ಬೆನ್ನು ಬಿಡಲಿಲ್ಲ. ಇನ್ನೂ ಈ ಮನೆಗೆ ಬಂದು ಒಂಬತ್ತು ತಿಂಗಳೂ ಕಳೆದಿರಲಿಲ್ಲ. ಅಷ್ಟರಲ್ಲಿಯೇ ಅವರು ಇನ್ನೊಂದು ಆಘಾತವನ್ನು ಸಹಿಸಿಕೊಳ್ಳಬೇಕಾಗಿ ಬಂತು. ಅವರ ತಮ್ಮ ಪ್ರಭಾಸ ಚಂದ್ರ ಸುಮಾರು ಹದಿನೈದು ವರ್ಷಗಳ ಹಿಂದೆಯೇ ಸನ್ಯಾಸಿಯಾಗಿ ಬಿಟ್ಟಿದ್ದರು. ಎರಡು ವರ್ಷಗಳವರೆಗೆ ಅವರು ಮಾಯಾವತೀ ಅದ್ವೈತ ಆಶ್ರಮದಲ್ಲಿದ್ದರು. ಆಮೇಲೆ ಕೆಲವು ವರ್ಷಗಳವರೆಗೆ ಅವರು ಬೃಂದಾವನದ ರಾಮಕೃಷ್ಣ ಮಿಶನ್ ಸೇವಾ ಆಶ್ರಮದ ಮೇಲ್ವಿಚಾರಣೆಯ ಹೊಣೆಯನ್ನು ಹೊತ್ತಿದ್ದರು. ಕೆಲವು ದಿವಸಗಳ ಹಿಂದಷ್ಟೇ ಅವರು ಆಶ್ರಮದ ಕಾರ್ಯದ ಮೇಲೆ ಬರ್ಮಾಕ್ಕೆ ಹೋಗಿದ್ದರು. ಶರತ್‌ಚಂದ್ರರ ಆರೋಗ್ಯದಂತೆಯೇ ಅವರ ಆರೋಗ್ಯವೂ ಅಷ್ಟೇನೂ ಚೆನ್ನಾಗಿರಲಿಲ್ಲ. ಬರ್ಮಾದಿಂದ ಹಿಂದಿರುಗಿದ ಮೇಲೆ ಅವರು ಕಲ್ಕತ್ತಾದಲ್ಲಿ ತಂಗಿದ್ದರು. ಯಾವಾಗಲೂ ಮಾಡುತ್ತಿದ್ದಂತೆ ಅವರು ತಮ್ಮ ಪೂರ್ವಾಶ್ರಮದ ಅಣ್ಣ ಶರತ್‌ಚಂದ್ರರ ಮನೆಯಲ್ಲಿಯೇ ಇಳಿದುಕೊಂಡಿದ್ದರು. ಇಲ್ಲಿಯೇ ಅವರಿಗೆ ಇದ್ದಕ್ಕಿದ್ದಂತೆ ಜ್ವರ ಕಾಣಿಸಿಕೊಂಡಿತು. ಈಗ್ಗೆ ಕೆಲವು ತಿಂಗಳುಗಳ ಹಿಂದೆಯಷ್ಟೇ ಆರೋಗ್ಯ ಸುಧಾರಿಸಿದ ಮೇಲೆ ಅವರು ಇಲ್ಲಿಂದ ಬರ್ಮಾಕ್ಕೆ ಹೋಗಿದ್ದರು. ಆದರೆ, ಒಂದೇ ಸಮನೆ ಅಸ್ವಸ್ಥರಾಗಿದ್ದುದರಿಂದ ಅವರ ಶರೀರ ಶಿಥಿಲಗೊಂಡಿತ್ತು. ಇನ್ನು ಈ ಶರೀರವನ್ನು ತ್ಯಜಿಸಿಬಿಡಬೇಕು ಎಂದು ಅವರು ಅನೇಕ ಸಲ ಹೇಳಿದ್ದರು. ಬಹುಶಃ ಆ ಕ್ಷಣ ಈಗ ಒದಗಿಬಂದಿತ್ತೇನೋ, ಮಾರನೆಯ

1. ಏಪ್ರಿಲ್ 27, 1925

ದಿನವೇ ಅವರು ಅಶಾಂತರಾಗಿಬಿಟ್ಟರು. ಮನೆಯನ್ನೂ-ಹಾಸಿಗೆಯನ್ನು ಬಿಟ್ಟು ಅವರು ಹೊರಗೆ ನಡೆದರು. ಅವರು ಶರತ್‌ಚಂದ್ರರ ಬಳಿಗೆ ಬಂದು, ಅವರ ಎದೆಯ ಮೇಲೆ ತಮ್ಮ ತಲೆಯನ್ನಿರಿಸಿ, ಶರೀರ-ತ್ಯಾಗ ಮಾಡಿಬಿಟ್ಟರು.[1] ಶರತ್‌ಚಂದ್ರರು, ಅನಿಲಾದೇವಿ, ಹಿರಣ್ಮಯೀ ದೇವಿ ಮತ್ತು ಪ್ರಕಾಶಚಂದ್ರರು ಪೂರ್ವಾಶ್ರಮದ ಈ ನಾಲ್ವರು ಬಂಧುಗಳು ಮಾತ್ರವೇ ಸಾವಿನ ಸಮಯದಲ್ಲಿ ಅವರ ಬಳಿಯಲ್ಲಿದ್ದರು.

ಮನೆಯ ಯಾವೊಂದು ಪಶು-ಪಕ್ಷಿಯ ಸಾವನ್ನೂ ಸಹಿಸಿಕೊಳ್ಳುವುದು ಕಷ್ಟವಾಗಿದ್ದಂಥ ಶರತ್‌ಚಂದ್ರರು ಈ ಭ್ರಾತೃ ವಿಯೋಗದಿಂದ ತುಂಬ ವ್ಯಥಿತರಾದರು. ಆಗ ಅವರು ಬರೆದ ಒಂದು ಪತ್ರದಿಂದ ಅವರ ಈ ವ್ಯಥೆಯ ಇಣುಕು ನೋಟ ದೊರೆಯುತ್ತದೆ; "ನಾನು ಇಷ್ಟು ದುರ್ಬಲ ಎಂಬುದು ನನಗೆ ಗೊತ್ತಿರಲಿಲ್ಲ. ಈ ವ್ಯಥೆಯನ್ನು ನಾನು ಹೇಗೆ ಸಹಿಸಲಿ ?"

ತಮ್ಮ ಮನೆಯ ಹತ್ತಿರದಲ್ಲಿಯೇ ನದಿಯ ದಡದಲ್ಲಿ ಅವರು ತಮ್ಮನ ಸಮಾಧಿಯನ್ನು ಕಟ್ಟಿಸಿದರು. ಸಾಮತಾಬೇಡದಲ್ಲಿ ಇದ್ದಷ್ಟು ದಿನವೂ ಪ್ರತಿದಿನ ಸಂಜೆ ಆ ಸಮಾಧಿಯಲ್ಲಿ ದೀಪವನ್ನು ಬೆಳಗಿಸುತ್ತಿದ್ದರು. ಅಷ್ಟೇ ಅಲ್ಲ, ಬರೆಯುತ್ತ ಇದ್ದಂತೆಯೇ ಅನೇಕ ವೇಳೆ ಎದ್ದುಬಿಟ್ಟು, ಸಮಾಧಿಯ ಬಳಿಗೆ ಹೋಗಿ ನಿಂತುಕೊಳ್ಳುತ್ತಿದ್ದರು. ಅವರ ಶ್ರಾದ್ಧದ ದಿನದಂದು ಪ್ರತಿವರ್ಷವೂ ಅವರು ಕೀರ್ತನೆಯನ್ನೂ ಶ್ರಾದ್ಧ ಭೋಜನವನ್ನೂ, ಏರ್ಪಡಿಸುತ್ತಿದ್ದರು.

ಸನ್ಯಾಸಿಗಳಾದ ಮೇಲೆ ಪ್ರಭಾಸ ಚಂದ್ರರಿಗೆ ಸ್ವಾಮಿ ವೇದಾನಂದರೆಂಬ ಹೆಸರಿತ್ತು. ಅವರು ಮೃತರಾದ ಸುದ್ದಿಯನ್ನು ಕೇಳಿ ಬೇಲೂರು ಮಠದ ಸ್ವಾಮಿಗಳೊಬ್ಬರು ಶರತ್‌ಚಂದ್ರರ ಬಳಿಗೆ ಬಂದು ಹೀಗೆಂದರು: "ಸ್ವಾಮಿ ವೇದಾನಂದರ ಪಾರ್ಥಿವ ಶರೀರವನ್ನು ನೀವು ನಮಗೇಕೆ ಒಪ್ಪಿಸಲಿಲ್ಲ ? ನೀವೇ ಏಕೆ ಅಂತಿಮ ಸಂಸ್ಕಾರಗಳನ್ನು ನಡೆಸಿದಿರಿ ? ಬೇಲೂರು ಮಠದಲ್ಲಿ ಅವರ ಸಮಾಧಿಯನ್ನು ನಿರ್ಮಿಸಬೇಕಾಗಿತ್ತು. ಇಲ್ಲೇಕೆ ಕಟ್ಟಿಸಿದಿರಿ ?"

ಸನ್ಯಾಸಿಯಾದ ಮೇಲೆ ಪೂರ್ವಾಶ್ರಮದ ಬಂಧುಗಳ ಸಂಬಂಧವೇನೂ ಉಳಿದಿರುವುದಿಲ್ಲ ಎಂದು ಆ ಸ್ವಾಮಿಗಳು ಸರಿಯಾಗಿಯೇ ಹೇಳಿದ್ದರು. ಆದರೆ, ಆ ಸ್ವಾಮಿಗಳ ಮಾತನ್ನು ಕೇಳಿ ಶರತ್‌ಚಂದ್ರರು ಅಪ್ರಸನ್ನರಾಗಿಬಿಟ್ಟರು. "ಅವರು ನನ್ನ ತಮ್ಮನಾಗಿದ್ದರು ಎಂಬ ಸಂಗತಿಯನ್ನೇಕೆ ನೀವು ಮರೆತುಬಿಡುತ್ತೀರಿ ? ಅವರ ಮೇಲೆ ನಿಮಗಿಂತಲೂ ಹೆಚ್ಚಿನ ಅಧಿಕಾರ ನನಗಿತ್ತು. ನಿಮಗೂ ಅವರಿಗೂ ಏನು ಸಂಬಂಧ ?" ಎಂದು ಕೇಳಿದರು.

ಆಚಾರ-ವಿಚಾರಗಳಿಗೆ ಶರತ್‌ಚಂದ್ರರು ಎಂದೂ ದಾಸರಾಗಿರಲಿಲ್ಲ. ಆದಿ ಶಂಕರಾಚಾರ್ಯರ ಉದಾಹರಣೆ ಅವರ ಮುಂದೆ ಇತ್ತು. ತಮ್ಮ ತಾಯಿಯ ದಹನ ಸಂಸ್ಕಾರವನ್ನು ಅವರೇ ನೆರವೇರಿಸಿದ್ದರು. ಅವರಂತೆಯೇ ಶರತ್‌ಚಂದ್ರರೂ ಈ ಜಡ-ನಿಯಮಗಳ ಮೇಲೆ ಆಘಾತವನ್ನೆಸಗಿದರು. ಸಾಕಷ್ಟು ವಾದ-ವಿವಾದ ನಡೆಯಿತು. ಆದರೆ, ಬೇಲೂರು ಮಠದ ಸ್ವಾಮಿಗಳಿಗೆ ಯಾವುದೇ ಆಶ್ವಾಸನೆಯೂ ದೊರೆಯಲಿಲ್ಲ. ಆಗ ಶರತ್‌ಚಂದ್ರರು ಒಮ್ಮೆಗ್ರೇ ಹೀಗೆಂದರು: "ಹೋಗಲಿ ಬಿಡಿ.

---

1. ಬುಧವಾರ, ಅಕ್ಟೋಬರ್ 27, 1926.

ಇಲ್ಲಿ ಇನ್ನೊಬ್ಬ ಸ್ವಾಮೀಜಿ ಇದ್ದಾರೆ. ಅವರನ್ನು ಕರೆದುಕೊಂಡು ಹೋಗಿಬಿಡಿ."

ಆ ಸ್ವಾಮಿಗಳಿಗೆ ತುಂಬ ಆಶ್ಚರ್ಯವಾಯಿತು. ಅವರು ಏನನ್ನಾದರೂ ಹೇಳುವುದಕ್ಕೆ ಮೊದಲೇ ಶರತ್‌ಚಂದ್ರರು ಜೋರಾಗಿ ಕೂಗು ಹಾಕಿದರು: "ಸ್ವಾಮೀಜೀ! ಸ್ವಾಮೀಜೀ!" ಕೂಡಲೇ ಗಟ್ಟಿ-ಮುಟ್ಟಾಗಿದ್ದ, ಹೊಸತನದಿಂದ ನಳನಳಿಸುತ್ತಿದ್ದ ಕುರಿಯೊಂದು ಅಲ್ಲಿಗೆ ಓಡಿಬಂದಿತು. ಅದರತ್ತ ನೋಡುತ್ತ ಶರತ್‌ಚಂದ್ರರೆಂದರು: "ಬೇಲೂರು ಮಠದ ಈ ಸ್ವಾಮಿಗಳು ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾರೆ. ಗೃಹಸ್ಥರ ಮನೆಯಲ್ಲಿ ಯಾವ ಸ್ವಾಮಿಯೂ ವಾಸವಾಗಿರಕೂಡದು ಎಂದರು ಇವರು ಹೇಳುತ್ತಿದ್ದಾರೆ. ನಿನಗೆ ಇಷ್ಟವಿದ್ದರೆ ಇವರೊಡನೆ ಹೋಗಬಹುದು."

ಆಮೇಲೆ ಸ್ವಾಮೀಜಿಯವರ ಕಡೆಗೆ ತಿರುಗಿ ಹೇಳಿದರು: "ಇದಕ್ಕೆ ಕಾವಿ ಬಟ್ಟೆಯನ್ನು ಹೊದಿಸಿಬಿಟ್ಟರೆ, ಇದೂ ನಿಮ್ಮ ತಂಡದಲ್ಲಿ ಒಂದಾಗಿ ಬಿಡುತ್ತದೆ."

ಸಹಜವಾಗಿ ನಿರೀಕ್ಷಿಸಬಹುದಾಗಿದ್ದಂತೆಯೇ, ಈ ವ್ಯಂಗ್ಯ ಆ ಸ್ವಾಮೀಜಿಯವರನ್ನು ಅತಿಯಾಗಿ ಕೆರಳಿಸಿತು. ಅವರು ಕೆಂಡಾಮಂಡಲವಾಗಿ ಅಲ್ಲಿಂದ ಎದ್ದು ಹೊರಟು ಹೋದರು.

ಈ ಕಥೆಯೂ ಒಂದು ವದಂತಿ ಮಾತ್ರವಾಗಿರಬಹುದು. ಇದು ನಿಜವೇ ಆಗಿದ್ದರೂ, ಇದರಲ್ಲಿ ಅಸಹಜವಾದುದೇನೂ ಇಲ್ಲ. ಅನೇಕ ವರ್ಷಗಳ ಬಳಿಕ,[1] ಸ್ವಾಮಿ ವಿವೇಕಾನಂದರ ಜನ್ಮೋತ್ಸವದ ಸಂದರ್ಭದಲ್ಲಿ ಬೇಲೂರು ಮಠದಲ್ಲಿ ಸುಭಾಷ್‌ಚಂದ್ರ ಬೋಸರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ಈ ಮಠದ ಕಾರ್ಯವಿಧಾನದ ಬಗ್ಗೆ ಟೀಕೆ ಮಾಡುತ್ತ ಅವರು ಹೀಗೆಂದಿದ್ದರು: "ನೀವು ರಾಮಕೃಷ್ಣ ಪರಮಹಂಸರ ಮತ್ತು ವಿವೇಕಾನಂದರ ಆದರ್ಶಗಳನ್ನು ಅನುಸರಿಸುತ್ತಿಲ್ಲ" ಎಂದು ಹೇಳಿದರು.

ಈ ಘಟನೆಯಲ್ಲಿ ಸ್ವಲ್ಪವಾದರೂ ಸತ್ಯಾಂಶವಿದೆ ಎಂದು ಈ ಮಾತಿನ ಆಧಾರದ ಮೇಲೆ ಊಹಿಸಬಹುದಾಗಿದೆ. ಇಷ್ಟಾಗಿಯೂ, ಅವರು ಅಧಾರ್ಮಿಕರೂ, ನಾಸ್ತಿಕರೂ ಆಗಿದ್ದರೆಂದು ಹೇಳುವುದು ಸುಳ್ಳಾಗುತ್ತದೆ. ಯೌವನದ ಆವೇಶದಲ್ಲಿ ಅವರು ಅನೇಕ ಸಲ ದೇವರು ಮತ್ತು ಧರ್ಮವನ್ನು ಖಂಡಿಸಿರಬಹುದು. ಆದರೆ, ಆ ಎಲ್ಲ ಖಂಡನೆಗಳು ಅವರ ಆಂತರ್ಯದ ನಂಬಿಕೆ-ವಿಶ್ವಾಸಗಳ ಪರಿಣಾಮವೇನೂ ಆಗಿರಲಿಲ್ಲ. ಅವರು ಮೂಢನಂಬಿಕೆಗಳು ಮತ್ತು ಸಂಕುಚಿತ ದೃಷ್ಟಿಗಳಿಗೆ ಮಾತ್ರವೇ ಪೆಟ್ಟುಕೊಡಬಯಸುತ್ತಿದ್ದರು. ದೈವಿಕ ಚಮತ್ಕಾರಗಳ ಹಾಗೂ ಬೂಟಾಟಿಕೆಯ ಕರ್ಮಾನುಷ್ಠಾನಗಳ ಬಗ್ಗೆ ಅವರಿಗೆ ಸ್ವಲ್ಪವೂ ನಂಬಿಕೆ ಇರಲಿಲ್ಲ. ಆದರೆ, ಸರ್ವವ್ಯಾಪಿಯೂ ಸರ್ವಶಕ್ತನೂ ಆದ ಭಗವಂತನ ವಿಷಯದಲ್ಲಿ ಅವರಿಗೆ ನಿಜವಾದ ಶ್ರದ್ಧೆ ಇತ್ತು. ವಯಸ್ಸಾದಂತೆಲ್ಲ ವಾಸ್ತವಿಕ ಧರ್ಮದ ವಿಷಯದಲ್ಲಿ ಅವರ ಶ್ರದ್ಧೆ ಒಂದೇ ಸಮನೆ ಹೆಚ್ಚುತ್ತ ನಡೆದಿತ್ತು. ಅವರ ಇಡೀ ಸಾಹಿತ್ಯವೇ ಇದಕ್ಕೆ ಸಾಕ್ಷಿಯಾಗಿದೆ. ದೇಶಬಂಧು ದಾಸ್ ಅವರು ಉಡುಗೊರೆಯಾಗಿ ಕೊಟ್ಟಿದ್ದ ರಾಧಾಕೃಷ್ಣರ ಪ್ರತಿಮೆಗೆ ನಿತ್ಯವೂ ಪೂಜೆಯ ಏರ್ಪಾಟು ಮಾಡಿದ್ದರು.

1. 1932ರಲ್ಲಿ.

ಪಂಡಿತರೊಬ್ಬರು ವಿಶೇಷವೆಂಬಂತೆ ಈ ಕೆಲಸವನ್ನು ನೋಡಿಕೊಳ್ಳುತ್ತಿದ್ದರು. ಆ ಪಂಡಿತರಿಗೆ ಬರಲು ಸಾಧ್ಯವಾಗದೆ ಇದ್ದ ದಿವಸ ಅವರೇ ಸ್ವತಃ ಪೂಜೆ ಮಾಡುತ್ತಿದ್ದರು. "ದೇಶಬಂಧು ಅವರು ಅದರ ಪೂಜೆಯ ಹೊಣೆಯನ್ನು ನನಗೆ ವಹಿಸಿ ಹೋಗಿದ್ದಾರೆ. ಸಾಧ್ಯವಿದ್ದಷ್ಟು ಮಟ್ಟಿಗೂ ಅದನ್ನು ಪೂರೈಸಲೇ ಬೇಕು" ಎಂದು ಅವರು ಹೇಳುತ್ತಿದ್ದರು.

ಅವರು ಜನಿವಾರವನ್ನು ಹಾಕಿಕೊಂಡಿರುತ್ತಿದ್ದರು. ಕತ್ತಿನಲ್ಲಿ ತುಳಸೀಮಾಲೆ ಇರುತ್ತಿತ್ತು. ಒಮ್ಮೆ ಅವರೇ ಹೀಗೆಂದಿದ್ದರು: "ನನ್ನ ಕೊರಳಿನಲ್ಲಿ ತುಳಸೀ ಮಾಲೆಯನ್ನು ಕಂಡು ನಿಮಗೆ ಆಶ್ಚರ್ಯವಾಗಬಹುದು. ದುರ್ನೀತಿಪರಾಯಣವಾದ ಸಾಹಿತ್ಯವನ್ನು ಸೃಷ್ಟಿಸುವಂಥವನು ತುಳಸೀಮಾಲೆಯನ್ನು ಹಾಕಿಕೊಂಡಿರಬಹುದು ಎಂದು ಯಾರೂ ಯೋಚಿಸಲಾರರು."

ಅವರು ಸ್ವತಃ ಜನಿವಾರವನ್ನು ಹಾಕಿಕೊಳ್ಳುತ್ತಿದುದು ಮಾತ್ರವಲ್ಲ, ತಮ್ಮ ಸ್ನೇಹಿತರ ಕೊರಳಿನಲ್ಲಿಯೂ ಅದನ್ನು ಕಾಣಬಯಸುತ್ತಿದ್ದರು. ಕಲ್ಕತೆಯಲ್ಲಿ ಅವರ ನೆರಮನೆಯವರಾಗಿದ್ದ ಅಧ್ಯಾಪಕ ನಿರ್ಮಲಚಂದ್ರ ಭಟ್ಟಾಚಾರ್ಯ ಅವರು ಜನಿವಾರವನ್ನು ತ್ಯಜಿಸಿಬಿಟ್ಟಿದ್ದರು. ಒಂದು ದಿವಸ ಅವರು ಮೈಮೇಲೆ ಏನನ್ನೂ ಹೊದ್ದುಕೊಳ್ಳದೆ ನಿಂತಿದ್ದಾಗ, ಅವರ ಬರಿದಾಗಿಟ್ಟ ಎದೆಯನ್ನು ಕಂಡು ಶರತ್‌ಚಂದ್ರರು ಅವರನ್ನು ಕೇಳಿದರು: "ನಿಮ್ಮ ಜನಿವಾರ ಎಲ್ಲಿ ಹೋಯಿತು ?"

ನಿರ್ಮಲಚಂದ್ರರೆಂದರು: "ನಾನು ಜನಿವಾರವನ್ನು ತ್ಯಜಿಸಿಬಿಟ್ಟಿದ್ದೇನೆ."

ಈ ಮಾತನ್ನು ಕೇಳಿದಾಗ ಶರತ್‌ಚಂದ್ರರಿಗೆ ತುಂಬ ದುಃಖವಾಯಿತು. "ಜನಿವಾರವನ್ನು ಧರಿಸದಿದ್ದರೆ, ಪಿತೃಗಳಿಗೆ ಅಪಮಾನ ಮಾಡಿದಂತಾಗುತ್ತದೆ."

ಅವರು ವೈಷ್ಣವ ಧರ್ಮಗ್ರಂಥಗಳ ಪಾರಾಯಣವನ್ನೂ ಮಾಡುತ್ತಿದ್ದರು. ಅವರ ಬಾಳಿನಲ್ಲಿನ ಅನೇಕ ವಿರೋಧಾಭಾಸಗಳಂತೆ, ಅವರ ಧಾರ್ಮಿಕ ನಂಬಿಕೆಗಳ ವಿಚಾರದಲ್ಲಿಯೂ ಅನೇಕ ಕಿಂವದಂತಿಗಳು ಹರಡಿಕೊಂಡು ಬಿಟ್ಟಿವೆ. ಇವು ಸಾಮಾನ್ಯ ವೆಂದು ತೋರುವಂಥ ವಿರೋಧಾಭಾಸಗಳನ್ನೂ ಮತ್ತಷ್ಟು ಜಟಿಲವಾಗಿಸುತ್ತವೆ; ಅಷ್ಟೇ ಅವುಗಳಿಂದ ದೊರೆಯುವ ನೆರವು. ಮನುಷ್ಯನ ಇಂದಿನ ನಂಬಿಕೆ-ವಿಶ್ವಾಸಗಳು ನಾಳೆ ಬದಲಾಗಬಹುದು; ಇದು ಅಸಂಭವವೂ ಅಲ್ಲ, ತಿರಸ್ಕಾರಯೋಗ್ಯವೂ ಅಲ್ಲ. ದೇಶಬಂಧು ಅವರ ಸಂಪರ್ಕ ಉಂಟಾದ ಮೇಲೆ ಅವರ ಧಾರ್ಮಿಕ ದೃಷ್ಟಿಕೋನ ಬದಲಾಯಿತೆಂಬುದು ಸಂಭಾವ್ಯವಾಗಿದ್ದುದು ಮಾತ್ರವಲ್ಲ, ನಿಶ್ಚಿತರೂಪವನ್ನು ಪಡೆದುಕೊಂಡಂತೆಯೂ ತೋರುತ್ತದೆ.

ಹೋರಾಟ ಮತ್ತು ಪ್ರಸಿದ್ಧಿಗಳ ಆ ದಿನಗಳಲ್ಲಿ ಅವರ ಸ್ವಭಾವದಲ್ಲಿ ಅನೇಕ ಬದಲಾವಣೆಗಳು ಉಂಟಾದುವು. ಆದರೆ, ಮಾನವೀಯ ಕರುಣೆ ಎಂಬುದೇನೂ ಅಡಿಯಿಂದ ಮುಡಿಯವರೆಗೆ ಮಾನವರೇ ಆಗಿದ್ದ ಶರತ್‌ಚಂದ್ರರನ್ನು ಬಿಟ್ಟು ಹೋಗಲಿಲ್ಲ. ಸರ್ವೋತ್ತಮ ಸೌಂದರ್ಯದಂತೆ ಸರ್ವೋತ್ತಮ ಮಾನವೀಯ ಕರುಣೆಯೂ ಭಗವದ್ವಿಭೂತಿಯಲ್ಲವೆ ?

## 14

ಹಳ್ಳಿಗೆ ಬಂದ ಮೇಲೆ ಅವರ ಬಾಳು ಸಂಪೂರ್ಣವಾಗಿ ಬದಲಾಗಿಬಿಟ್ಟಿತು. ಬದಲಾದ ಈ ಜೀವನದ ಬಗ್ಗೆ ಅವರು ತಮ್ಮ ಅನೇಕ ಪತ್ರಗಳಲ್ಲಿ ಚರ್ಚಿಸಿದ್ದಾರೆ. "ರೂಪ ನಾರಾಯಣ ನದಿಯ ದಡದ ಮೇಲೆ ಮನೆ ಕಟ್ಟಿಸಿದ್ದೇನೆ. ಆರಾಮಕುರ್ಚಿಯಲ್ಲಿ ಕುಳಿತಿರುತ್ತೇನೆ" ಎಂದು ಅವರು ಅನೇಕ ಕಡೆಗಳಲ್ಲಿ ಉಲ್ಲೇಖಿಸಿದ್ದಾರೆ.

ಒಂದು ಪತ್ರದಲ್ಲಿ ಅವರು ಹೀಗೆ ಬರೆದಿದ್ದಾರೆ: "ಆಮೇಲೆ ನಾನು ಕಲ್ಕತ್ತೆಗೆ ಹೋಗಲಿಲ್ಲ. ಇಲ್ಲಿಯ ಚಿಕ್ಕ ಸಂಧಿಯಲ್ಲಿ ದಿನಗಳು ಹೇಗೋ ಕಳೆದುಹೋಗುತ್ತಿವೆ. ಆದರೆ, ಒಂದು ಸಲ ನಗರಕ್ಕೆ ಮುಖ ಹಾಕಿಬಂದರೆ, ಸುಧಾರಿಸಿಕೊಳ್ಳಲು ಐದಾರು ದಿವಸಗಳೇ ಬೇಕಾಗುತ್ತವೆ. ಇದರ ಜೊತೆಗೆ, ಮಳೆ, ಮೋಡ ಮತ್ತು ಕೆಸರುಗಳಲ್ಲಿ ನಡೆದಾಡುವುದೂ ಕಷ್ಟವೇ. ಅಷ್ಟು ಶಕ್ತಿಯೂ ಇಲ್ಲ. ಉತ್ಸಾಹವೂ ಇಲ್ಲ. ಕೆಲವು ದಿವಸಗಳ ಹಿಂದೆ, ಕಗ್ಗತ್ತಲಿನ ರಾತ್ರಿಯಲ್ಲಿ ಒಂದೇ ಮೆಟ್ಟಿಲಿದೆ ಎಂದು ಭಾವಿಸಿ ಇಳಿದಾಗ, ಆಗಬೇಕಾಗಿದ್ದುದೇ ಆಯಿತು. ಹೊರಗೇನೋ ಅದರ ಲಕ್ಷಣಗಳು ಕಾಣುತ್ತಿಲ್ಲ. ಆದರೆ ಬೆನ್ನಿಗೆ, ಸೊಂಟಕ್ಕೆ ಉಂಟಾದ ಪೆಟ್ಟಿನ ನೋವು ಇಂದೂ ಸಂಪೂರ್ಣವಾಗಿ ಮಾಯವಾಗಿಲ್ಲ. ನಾನು ಬರೆಯಬೇಕೆಂದು ಎಲ್ಲರೂ ಒತ್ತಾಯಿಸುತ್ತಿದ್ದಾರೆ. ಆದರೆ, ಏನು ಬರೆಯಬೇಕೆಂಬುದೇ ನನಗೆ ತೋಚುತ್ತಿಲ್ಲ. ಎಲ್ಲವೂ ಅರ್ಥಹೀನವೆಂಬಂತೆ, ಅನಾವಶ್ಯಕವೆಂಬಂತೆ ತೋರುತ್ತಿದೆ. ಇತರ ಲೇಖಕರಂತೆ ನಾನೂ ನನ್ನ ಮನಸ್ಸನ್ನು ಮತ್ತೊಮ್ಮೆ ಹಿಂದಿನ ಅವಧಿಯ ಸಾಹಿತ್ಯ ಸೇವೆಯ ಪರಿಧಿಗೆ ಎಳೆದುಕೊಂಡು ಹೋಗಬಲ್ಲವನಾಗಿದ್ದರೆ, ಬಹುಶಃ ಇನ್ನೆಷ್ಟೋ 'ಬಿಂದೋ ಕಾ ಲಲ್ಲಾ' ಮತ್ತು 'ಚರಿತ್ರಹೀನ'ದಂಥ ಕಾದಂಬರಿಗಳನ್ನು ಹೊಸೆದುಬಿಡಬಹುದಾಗಿತ್ತು. ಈ ಬಾಳಿನಲ್ಲಿ ಮತ್ತೆ ಹಾಗಾಗಬಹುದೆಂದು ನನಗೆ ಅನ್ನಿಸುತ್ತಿಲ್ಲ. ಬರೆಯುವುದರಿಂದ ಏನಾದೀತು ಎಂದು ಒಂದೇ ಸಮನೆ ಯೋಚಿಸುತ್ತಿದ್ದೇನೆ. ಜನರಿಗೆ ಆನಂದದೊರೆಯುತ್ತದೆ ಎನ್ನುತ್ತಾರಲ್ಲವೆ? - ವಾಸ್ತವವಾಗಿ ಅಂಥದೇನೂ ದೊರೆಯದೆ ಇದ್ದರೂ ಮೊದಲು ಅದನ್ನು ಪಡೆಯುವ ಹಕ್ಕನ್ನು ಗಳಿಸಿಕೊಳ್ಳಲಿ. ಆ ಬಳಿಕ 'ಬಿಂದೋ ಕಾ ಲಲ್ಲಾ' ಮತ್ತು 'ರಾಮ ಕೀ ಸುಮತಿ'ಯಂಥ ಕಾದಂಬರಿಗಳನ್ನು ಬರೆಯುವಂಥ ಬಹುಜನರು ಹುಟ್ಟಿಕೊಳ್ಳುತ್ತಾರೆ. ನನಗಂತೂ ಹಸ್ತ ಸಾಮುದ್ರಿಕೆಯನ್ನು ಕಲಿತುಕೊಳ್ಳಬೇಕೆಂದು ತುಂಬ ಆಸೆಯಾಗುತ್ತಿದೆ."

'ಬಿಂದೋ ಕಾ ಲಲ್ಲಾ' ಅಥವಾ 'ಚರಿತ್ರಹೀನ'ದಂಥ ಕಾದಂಬರಿಯನ್ನು ರಚಿಸುವ ಮನಃಸ್ಥಿತಿಯಲ್ಲಿ ಅವರು ಇರದೆ ಇದ್ದರೂ, ಹಳ್ಳಿಗರ ಬಾಳನ್ನು ಅರಿತುಕೊಳ್ಳುವ ಸುವರ್ಣಾವಕಾಶವಂತೂ ಅವರಿಗೆ ಈಗ ದೊರೆತಿತ್ತು. ಎಲ್ಲವನ್ನೂ ಕಳೆದುಕೊಂಡಿದ್ದ ತಮ್ಮ ನೆರೆಹೊರೆಯವರಿಗೆ ನೆರವಾಗಲು ಬರ್ಮಾದಲ್ಲಿ ಸದಾ ಸಿದ್ಧವಾಗಿರುತ್ತಿದ್ದಂತೆ, ಇಲ್ಲಿಯೂ ಅಂಥ ಅವಕಾಶವನ್ನು ಬಿಟ್ಟುಕೊಡುತ್ತಿರಲಿಲ್ಲ. ಸಾಕಷ್ಟು ವಯಸ್ಸೂ ಆಗಿತ್ತು. ಸಾಕಷ್ಟು ಹೆಸರೂ ಬಂದಿತ್ತು. ಶ್ರೀಮಂತನೆನ್ನುವವನಿಗೆ ದೊರೆಯಬಹುದಾದಂಥ ಎಲ್ಲ ಸೌಲಭ್ಯಗಳೂ ಅವರಿಗೆ ಒದಗಿದ್ದುವು. ಇಷ್ಟಾಗಿಯೂ, ಮಾನಸಿಕವಾಗಿ

ಅವರು ರಂಗೂನ್‌ಪ್ರವಾಸ ಕಾಲದ ಶರತ್‌ಚಂದ್ರರೇ ಆಗಿದ್ದರು. ಅಕ್ಕಪಕ್ಕದಲ್ಲಿ ಯಾರಿಗೆ ಏನೇ ತೊಂದರೆಯಾದರೂ, 'ಬಾಮನ್ ಕೀ ಬೇಟ'ಯ ಡಾ. ಪ್ರಿಯನಾಥನಂತೆ ನೆರವಾಗಲು ಮುಂದೋಡುತ್ತಿದ್ದರು.

ಒಮ್ಮೆ ಮನೋಜ ಬಸು ಅವರು ಶರತ್‌ಚಂದ್ರರನ್ನು ಕಾಣಲು ಬಂದಿದ್ದರು. ಅಂಗಳದ ತುಂಬ ಹಳ್ಳಿಯ ಹೆಂಗಸರೂ ಗಂಡಸರೂ ತುಂಬಿಕೊಂಡಿದ್ದುದನ್ನೂ, ಅವರ ಮಧ್ಯೆ ಶರತ್‌ಚಂದ್ರರು ಆರಾಮ ಕುರ್ಚಿಯಲ್ಲಿ ಕುಳಿತಿದ್ದುದನ್ನೂ ಅವರು ಕಂಡರು. ಒಬ್ಬೊಬ್ಬ ವ್ಯಕ್ತಿಯೊಂದಿಗೂ ಕೌಟುಂಬಿಕ ಸುಖದುಃಖಗಳ ಮಾತನ್ನಾಡುತ್ತಿದ್ದರು. ಒಮ್ಮೆಗೇ ಅವರು ಹೆಂಗಸೊಬ್ಬಳನ್ನು ಕೇಳಿದರು: "ನಿನ್ನ ಮಗಳು ಛವಿ ಹೇಗಿದ್ದಾಳೆ ?"

"ಚೆನ್ನಾಗಿದ್ದಾಳೆ, ಅಣ್ಣಯ್ಯ! ನಿಮ್ಮ ಔಷಧಿಯಂತೂ ಧನ್ವಂತರಿಯದೇ ಸರಿ."

ಆಗ ಶರತ್‌ಚಂದ್ರರೆಂದರು: "ಆದರೆ, ನೀನು ತುಂಬ ಬೇಜವಾಬ್ದಾರಿಯಿಂದ ಆ ಮಗುವನ್ನು ನದಿಯಲ್ಲಿ ಬಿಸಾಡಿ ಬಿಟ್ಟಿದ್ದೆಯಲ್ಲ! ತೇಲಿಕೊಂಡು ಬಂದು ಅದು ಈ ದಿಬ್ಬದಲ್ಲಿ ಸಿಕ್ಕಿಕೊಂಡಿತ್ತು. ಕಾಗೆಗಳೂ ಹದ್ದುಗಳೂ ಅದರ ಮಾಂಸವನ್ನು ಕಿತ್ತು ತಿನ್ನಲು ಸುಳಿದಾಡುತ್ತಿದ್ದುವು. ಇದನ್ನೆಲ್ಲ ನೋಡಲು ನನ್ನಿಂದ ಸಾಧ್ಯವಾಗಲಿಲ್ಲ. ನದಿಗೆ ಇಳಿದು ಅದನ್ನು ನೀರಿನ ಹರಿವಿನ ನಡುವೆ ಹಾಕಿ ಬಂದೆ."

ಆ ವೃದ್ಧೆ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡಳು.

ಈ ಜನರು ಕುಲೀನರೇನೂ ಅಲ್ಲ. ಛವಿಗೆ ಎಂಟನೆಯ ವಯಸ್ಸಿನಲ್ಲೇ ಮದುವೆಯಾಗಿತ್ತು. ಗಂಡನಿಗೆ ಅಜ್ಜನ ವಯಸ್ಸಾಗಿತ್ತು. ಬೇಗ ಸತ್ತೂ ಹೋದ. ಆ ಬಡಪಾಯಿ ತಾಯಿ ಮತ್ತು ಆಕೆಯ ಆರೋಗ್ಯವಂತೆಯಾದ ಮಗಳು ಇನ್ನೂ ಬದುಕಿದ್ದರಲ್ಲ! ಯಾರಾದರೂ ಯುವಕನನ್ನು ಹಾಳು ಮಾಡಿಬಿಡುತ್ತಾಳೆ ಎಂಬ ಭಯದಿಂದ ಅವಳನ್ನು ಹಳ್ಳಿಯಿಂದ ಹೊರಕ್ಕೆ ಅಟ್ಟಿಬಿಟ್ಟಿದ್ದರು. ಶರತ್‌ಚಂದ್ರರ ಕೃಪೆಯಿಂದ ಆ ಹೆಂಗಸು ಬದುಕಿದ್ದಳು. ಛವಿಗೆ ಒಬ್ಬ ಮಗನೂ ಇದ್ದ. ಅವನೂ ನೆನ್ನೆ ಸತ್ತು ಹೋಗಿದ್ದ. ಅವನನ್ನೇ ಆ ವೃದ್ಧೆ ಅಜಾಗರೂಕತೆಯಿಂದ ನದಿಗೆ ಎಸೆದುಬಿಟ್ಟಿದ್ದಳು.....

ಇಂಥ ಕಥೆಗಳಿಗೆ ಕೊನೆ ಎಂಬುದೇ ಇರಲಿಲ್ಲ. ಒಮ್ಮೆ ಒಬ್ಬ ವ್ಯಕ್ತಿಗೆ ಕಾಲರಾ ರೋಗದ ಸೋಂಕು ತಗುಲಿತ್ತು. ಯಾರೂ ಅವನ ಬಳಿ ಹೋಗಲು ಸಿದ್ಧರಾಗಿರಲಿಲ್ಲ. ಹುಲ್ಲಿನ ಛಾವಣಿಯ ಕೆಳಗೆ ಅವನು ಒಂಟಿಯಾಗಿ ನರಳುತ್ತ ಬಿದ್ದಿದ್ದ. ರಂಗೂನಿನಲ್ಲಿ ಅವರು ಅದೆಷ್ಟು ಮಂದಿ ಪ್ಲೇಗ್ ವ್ಯಾಧಿ ಪೀಡಿತರಿಗೆ ಔಷಧಿ ಕೊಟ್ಟಿದ್ದರೋ ಏನೋ. ಅನೇಕರು ಅವರ ತೊಡೆಯ ಮೇಲೆ ಕೊನೆಯುಸಿರೆಳೆದಿದ್ದರು. 'ಗೃಹದಾಹ'ದಲ್ಲಿ ಬರುವ ಸುರೇಶನ ಹಾಗೆ, ಸಾವಿನ ಭಯ ಅವರ ಮನಸ್ಸನ್ನು ಮುಟ್ಟಲಿಲ್ಲವಾದರೆ ಹೋಗಿತ್ತು. ಅವರು ಕೂಡಲೇ ಆ ವ್ಯಕ್ತಿಯ ಬಳಿಗೆ ಧಾವಿಸಿದರು. ಅವನಿಗೆ ಔಷಧಿ ಕೊಟ್ಟರು. ಡಾ. ಪ್ರಿಯನಾಥನ ಹೋಮಿಯೋಪತಿ ಔಷಧಿಗಳ ಪೆಟ್ಟಿಗೆ ಈಗಲೂ ಅವರ ಬಳಿ ಇತ್ತು. ಅವನಂತೆಯೇ ಇವರೂ ರೋಗಿಗಳನ್ನು ಹುಡುಕುತ್ತ ಅಲೆದಾಡುತ್ತಿದ್ದರು.

ಅಷ್ಟೇ ಅಲ್ಲ, ಅವರಿಗೆ ಪಥ್ಯದ ವ್ಯವಸ್ಥೆ ಮಾಡುವ ಹೊಣೆಯನ್ನೂ ಅವರೇ

ಹೊತ್ತುಕೊಳ್ಳುತ್ತಿದ್ದರು. ಬಗೆಬಗೆಯ ಮೀನುಗಳು, ದಾಳಿಂಬೆ, ಸೇಬು, ಸಬ್ಬಕ್ಕಿ, ಕಲ್ಲುಸಕ್ಕರೆ ಮೊದಲಾದುವನ್ನೆಲ್ಲ ಅವರೇ ಖರೀದಿ ಮಾಡಿ ಕಳಿಸಿಕೊಡುತ್ತಿದ್ದರು. ತಮ್ಮ ಔಷಧಿಯಿಂದ ಗುಣ ಕಾಣದೆ ಹೋದರೆ, ಪಾಣಿತ್ರಾಸದ ಸ್ಥಳೀಯ ವೈದ್ಯಾಧಿಕಾರಿ ಡಾ. ರಮೇಶಚಂದ್ರ ಮುಖೋಪಾಧ್ಯಾಯ ಅವರನ್ನು ಕರೆಸುತ್ತಿದ್ದರು. ಅವರಿಗೂ ಯಶಸ್ಸು ದೊರೆಯದೆ ಹೋದರೆ, ಹಾವಡಾ ಜಿಲ್ಲೆಯ ನೂಂಟೇರ್ ಪಟಾದಿಂದ ಡಾ. ಗೋಪೀಕೃಷ್ಣ ಚಕ್ರವರ್ತಿ ಅವರನ್ನು ಬರಮಾಡುತ್ತಿದ್ದರು.

ಅವರ ಶುಲ್ಕವನ್ನೂ ಅವರೇ ಕೊಡುತ್ತಿದ್ದರು. ಆದರೆ ತಮ್ಮ ಕೈಯಿಂದ ಕೊಡದೆ, ರೋಗಿಗಳ ಮೂಲಕವೇ ಕೊಡಿಸುತ್ತಿದ್ದರು.

ಅವರ ಶಾರೀರಿಕ ಆರೋಗ್ಯದ ಕಡೆಗೆ ಮಾತ್ರವೇ ಅವರು ಗಮನ ಕೊಡುತ್ತಿರಲಿಲ್ಲ. ಹುಡುಗಿಯರ ವಿದ್ಯಾಭ್ಯಾಸಕ್ಕಾಗಿ ಅವರು ಒಂದು ಶಾಲೆಯನ್ನೂ ತೆರೆದಿದ್ದರು. ದಾರಿಯನ್ನೂ ಸ್ನಾನಘಟ್ಟವನ್ನೂ ದುರಸ್ತಿ ಮಾಡಿಸುತ್ತಿದ್ದರು, ಹೊಸದನ್ನೂ ಮಾಡಿಸುತ್ತಿದ್ದರು. ಮಕ್ಕಳ ಬಗೆಗಿನ ಅವರ ಪ್ರೀತಿಯ ಆಳವನ್ನು ಕಂಡವರೇ ಇರಲಿಲ್ಲ. ಅವರಿಗಾಗಿ ಅದೇನೆಲ್ಲ ಕೊಂಡುಕೊಂಡು ಬಂದು ಕೊಡುತ್ತಿದ್ದರೋ ಏನೋ. ಮೊದಲಿಗೆ ಒಂದು ಹಳ್ಳಿಯವರಿಗೆ ಅವರನ್ನು ಕಂಡರೆ ಆಗುತ್ತಿರಲಿಲ್ಲ. ಆದರೆ, ಆ ಹಳ್ಳಿಗರ ಸುಖದುಃಖಗಳಲ್ಲಿ ಅವರು ಒಂದಾಗುತ್ತ ಹೋದಂತೆ, ಅವರು ಎಲ್ಲರಿಗೂ ಪ್ರಿಯವಾಗಿ ಬಿಟ್ಟರು. ಹಳ್ಳಿಯ ವ್ಯವಹಾರ ಹಾಗೂ ಮೊಕದ್ದಮೆಗಳಲ್ಲಿ ದುಷ್ಟ ಜಮೀನುದಾರರಿಗೆ ವಿರುದ್ಧವಾಗಿ ಹಳ್ಳಿಗರ ಪರವಾಗಿ ಹೋರಾಡಲು ಅವರು ಇಲ್ಲಿಯೂ ಹಿಂದೆ ಬೀಳಲಿಲ್ಲ. ಎಲ್ಲ ಕೆಲಸಗಳನ್ನೂ ಬದಿಗಿರಿಸಿ, ಅನ್ಯಾಯವನ್ನು ಎದುರಿಸಿ ನಿಲ್ಲಲು ಅವರು ಸದಾ ಕಟಿಬದ್ಧರಾಗಿರುತ್ತಿದ್ದರು. ಹೀಗಾಗಿ, ಅವರು ಹಳ್ಳಿಗರ ಪಾಲಿಗೆ 'ನಮ್ಮ ಜನ' ಎಂಬಂತಾಗಿ ಬಿಟ್ಟಿದ್ದರು.

ಮನೆ ರೂಪನಾರಾಯಣ ನದಿಯ ದಡದ ಮೇಲೆಯೇ ಇತ್ತು. ಪ್ರವಾಹದ ಭೀತಿ ಆಗಾಗ ಇದ್ದೇ ಇರುತ್ತಿತ್ತು. ಮಳೆಗಾಲ ಎಂಬುದು ಬಂಗಾಳದ ಪಾಲಿಗೆ ಹೇಗಿರುತ್ತದೆ ಎಂಬುದನ್ನು ಒಂದೆರಡು ವರ್ಷ ಅಲ್ಲಿದ್ದೇ ಅರ್ಥಮಾಡಿಕೊಳ್ಳಬೇಕು. ಆ ಸಲ ಪ್ರವಾಹ ಎಷ್ಟು ತೀವ್ರವಾಗಿತ್ತೆಂದರೆ ಒಡ್ಡೂ ಕೊಚ್ಚಿಹೋಗಿ ಬಿಟ್ಟಿತ್ತು. ಎಲ್ಲ ಕಡೆಗಳಲ್ಲೂ ನೀರೇ ನೀರು ಕಾಣುತ್ತಿತ್ತು. ಮಣ್ಣನ್ನು ಅಗೆದಗೆದು ಅಲ್ಲಲ್ಲಿ ಬಿರುಕುಗಳನ್ನು ಮುಚ್ಚುವುದರಲ್ಲಿಯೇ ಹತ್ತು-ಹದಿನೈದು ದಿವಸಗಳು ಉರುಳಿ ಹೋದುವು. ಒಡ್ಡನ್ನು ಒಡೆದುಕೊಂಡು ನೀರು ಗದ್ದೆಗಳಿಗೆ ನುಗ್ಗುತ್ತಿದೆಯೆಂದು ಒಂದು ರಾತ್ರಿ ಸೂಚನೆ ಬಂತು. ಫಸಲನ್ನು ಉಳಿಸಿಕೊಳ್ಳಬೇಕಾಗಿತ್ತು. ಹೇಗಾದರೂ ಮಾಡಿ ಒಡ್ಡನ್ನು ನಿರ್ಮಿಸಲೇಬೇಕಾಗಿತ್ತು. ಆದರೆ, ಹಳ್ಳಿಯವರೆಲ್ಲ ಒಮ್ಮೆಗೇ ಇದಕ್ಕೆ ಒಪ್ಪಿಗೆ ನೀಡಲಿಲ್ಲ. ಆಗ ಶರತ್‌ಚಂದ್ರರು ಸಾಮ-ದಾನ-ಭೇದ-ದಂಡೋಪಾಯಗಳನ್ನೆಲ್ಲ ಬಳಸಿ ಅವರನ್ನು ಸಿದ್ಧಪಡಿಸಿದರು. ಅವರೆಲ್ಲ ಬೊಂಬುಗಳನ್ನು ಕತ್ತರಿಸುವ ಹಾಗೂ ಮಣ್ಣನ್ನು ಅಗೆಯುವ ಕೆಲಸಗಳಲ್ಲಿ ಮಗ್ನರಾದರು. ಹತ್ತಿರದಲ್ಲಿ ಸಾಕಷ್ಟು ಮಣ್ಣು ಇರಲಿಲ್ಲ. ಹೀಗಾಗಿ, ಶ್ಮಶಾನದ ದಿಬ್ಬವನ್ನು ಅಗೆಯ ತೊಡಗಿದರು. ಅಗೆಯುತ್ತ ಹೋದಂತೆ ಹಳ್ಳದಲ್ಲಿ ಮಗುವಿನ ಹೆಣ ಸಿಕ್ಕಿತು. ಕ್ಷಣಮಾತ್ರದಲ್ಲಿ ಬಾಲ್ಯ

ಅವರ ಕಣ್ಣೆದುರು ಸುಳಿದು ಹೋಯಿತು. ರಾಜುವಿನೊಡಗೂಡಿ ವಾರಸುದಾರರಿಲ್ಲದ ಅದೆಷ್ಟು ಹೆಣಗಳಿಗೆ ಅವರು ಅಂತ್ಯಸಂಸ್ಕಾರಗಳನ್ನು ಮಾಡಿ ಮುಗಿಸಿದ್ದರೋ ಏನೋ. ತುಂಬ ಪ್ರೀತಿಯಿಂದ ಆ ಮೃತ ಶಿಶುವನ್ನು ಒಂದೆಡೆ ಜೋಪಾನವಾಗಿರಿಸಿದರು. ಒಡ್ಡು ನಿರ್ಮಿಸುವ ಕೆಲಸ ಮುಗಿದ ಬಳಿಕ, ಆಳವಾದ ಹಳ್ಳವನ್ನು ತೋಡಿ, ಅದನ್ನು ಒಪ್ಪಮಾಡಿದರು.

ಅವರು ನಗರದಿಂದ ದೂರವಿದ್ದರೂ, ಗೆಳೆಯರು ಬಂದು ಹೋಗಿ ಮಾಡುವುದೇನೂ ಕಡಿಮೆಯಾಗಿರಲಿಲ್ಲ. ಅಷ್ಟೇ ಅಲ್ಲ, ಬೆಳಿಗ್ಗೆಯೇ ಅಲ್ಲಿಗೆ ಬಂದು, ದಿನವಿಡೀ ಹರಟೆಕೊಚ್ಚಿ, ಸಂಜೆಯಾದ ಮೇಲಷ್ಟೇ ಹಿಂದಿರುಗುತ್ತಿದ್ದರು. ಇಂಥ ಆಗಂತುಕರಲ್ಲಿ ಗೆಳೆಯರು, ಬಂಧುಗಳು ಮತ್ತು ಅಭಿಮಾನಿಗಳು ಸೇರಿರುತ್ತಿದ್ದರು. ಶಿವಪುರದಲ್ಲಿ ಆಗುತ್ತಿದ್ದಂತೆಯೇ ಕೆಲವರು ಅವರ ಕಥೆ-ಕಾದಂಬರಿ-ಲೇಖನಗಳನ್ನು ಕೇಳಲು ಬರುತ್ತಿದ್ದರು; ಸಭೆ-ಸಮಾರಂಭಗಳ ಅಧ್ಯಕ್ಷತೆ ವಹಿಸಬೇಕೆಂದು ಕೋರಲು ಬರುತ್ತಿದ್ದರು; ಸಂಪಾದಕರಾಗಲು ಒಪ್ಪಿಕೊಳ್ಳಬೇಕೆಂಬ ಕೋರಿಕೆಯನ್ನು ಸಲ್ಲಿಸಲೂ ಬರುತ್ತಿದ್ದರು. ಈ ಕೋರಿಕೆಗಳೆಲ್ಲ ಅವರಿಗೆ ಹಿಡಿಸದಿದ್ದರೂ, ಅವರು ಬರುವುದು ತುಂಬ ಇಷ್ಟವಾಗುತ್ತಿತ್ತು. ತಮ್ಮ ತೋಟವನ್ನು ಬಂದು ನೋಡಬೇಕೆಂದು, ಕೊಳದಲ್ಲಿನ ಮೀನುಗಳನ್ನು ನೋಡಬೇಕೆಂದು ಅವರೇ ನಗರಕ್ಕೆ ಹೋಗಿ ಆಹ್ವಾನ ಕೊಟ್ಟು ಬರುತ್ತಿದ್ದರು. ಆದರೋಪಚಾರಗಳನ್ನೂ ಚೆನ್ನಾಗಿಯೇ ಮಾಡುತ್ತಿದ್ದರು. ಅವರ ಮನೆಯ ಹಸುವಿನ ಸಿಹಿಯಾದ ಹಾಲು ಅನೇಕರಿಗೆ ತುಂಬ ಇಷ್ಟವಾಗುತ್ತಿತ್ತು. ಬಂದವರಿಗೆಲ್ಲ ಆಹಾರ ದೊಡ್ಡ ದೊಡ್ಡ ಬತ್ತಾಸುಗಳನ್ನು ತಪ್ಪದೆ ಕೊಡುತ್ತಿದ್ದರು. ಸ್ನೇಹಿತರೊಬ್ಬರು ಕೇಳಿದ್ದರು: "ಈ ಬತ್ತಾಸುಗಳನ್ನೇಕೆ ಕೊಡುತ್ತೀರಿ ?"

"ಅಪ್ಪ, ಇದು ಹಳ್ಳಿಯ ಶಿಷ್ಟಾಚಾರ" ಎಂದು ಅವರು ಉತ್ತರಿಸುತ್ತಿದ್ದರು. ಹತ್ತಿರದಲ್ಲಿ ಪೇಟೆ ಇರಲಿಲ್ಲ. ಕೊಡಲು ಮಿಠಾಯಿ ಸಹಾ ಸಿಕ್ಕುವುದಾದರೂ ಹೇಗೆ ? ಆದ್ದರಿಂದ, ಬತ್ತಾಸುಗಳನ್ನು ಸಿದ್ಧವಾಗಿಟ್ಟುಕೊಂಡಿರುತ್ತಿದ್ದರು. "ಅವನ್ನು ಜನ ತುಂಬ ಇಷ್ಟಪಟ್ಟು ತಿನ್ನುತ್ತಾರೆ. ಆದರಿಂದಲೇ ಜನ ಇಲ್ಲಿಗೆ ಬರುತ್ತಾರೆ" ಎಂದು ಹೇಳುತ್ತಿದ್ದರು. ಜೊತೆಗೆ ಕಥೆಗಳನ್ನು ಒಂದಾದ ಮೇಲೆ ಒಂದಂತೆ ಹೇಳಿ, ಬೆಳಕು ಹರಿಸಿಬಿಡುತ್ತಿದ್ದರು. ಒಳಗಿನಿಂದ ತಗಾದೆ ಬರುತ್ತಿತ್ತು: "ಏನೂ ಅಂದ್ರೆ, ಬೆಳಗಾಗಿ ಬಿಟ್ಟಿತಲ್ಲ. ಇನ್ನು ನೀವು ಮಲಗುವುದು ಯಾವಾಗ ?"

"ಆಗಲಿ, ಆಗಲಿ, ಇವರೇನು ಪ್ರತಿ ದಿವಸ ಬರುತ್ತಾರೆಯೆ ?" ಎಂದು ಉತ್ತರಿಸುತ್ತಿದ್ದರು.

ಒಂದಾದ ಮೇಲೆ ಒಂದರಂತೆ ಘಂಟೆಗಳು ರೆಕ್ಕೆ ಕಟ್ಟಿಕೊಂಡು ಹಾರಿ ಹೋಗುತ್ತಿದ್ದುವು. ಕೆಲಸಕ್ಕೆ ಅಡಚಣೆಯಾಗುತ್ತದೆಯೆ, ಆಗಲಿ. ಆದರೂ ಕೂಡಲೇ ಬೇಕಾಗುತ್ತಿತ್ತು. ತಮ್ಮ ಬಗ್ಗೆ, ತಮ್ಮ ಸುತ್ತುಮುತ್ತಿನವರ ಬಗ್ಗೆ ಅವರು ಅದೆಷ್ಟು ಕಥೆಗಳನ್ನು ಹೇಳುತ್ತಿದ್ದರೋ. "ನಿಮ್ಮ ಕಥೆಗಳನ್ನು ನಾವು ಕಿವಿಗೊಟ್ಟು ಕೇಳುತ್ತೇವೆ. ಆದರೆ, ನಂಬಿಕೆಯೇ ಉಂಟಾಗುವುದಿಲ್ಲ. ಎಲ್ಲವೂ ಸುಳ್ಳು, ಕಟ್ಟು ಕಥೆಗಳನ್ನು ಕಟ್ಟಿ ಕಟ್ಟಿ ಹೇಳುತ್ತೀರಿ." ಎಂದು ಯಾರೋ ಹೇಳುತ್ತಿದ್ದರು.

"ತಮ್ಮಾ ಸುಳ್ಳುಪಳ್ಳು ಹೇಳಿಯೇ ಬಾಳನ್ನು ಸವೆಸಿದ್ದೀನಿ. ನೀವು

ಶಾಲೆ-ಕಾಲೇಜುಗಳಲ್ಲಿ ಕಳೆದಿರುವಷ್ಟು ಸಮಯವನ್ನು ನಾನು ಸುಳ್ಳುಪಳ್ಳು ಹೇಳಿಕೊಂಡು, ಹೊಗೆಸೊಪ್ಪು ಅಗಿದುಕೊಂಡು ಕಳೆದುಬಿಟ್ಟಿದ್ದೇನೆ. ಅದಾದ ಮೇಲೆ ಉಳಿದ ಬಾಳೆಲ್ಲವನ್ನು ಸುಳ್ಳಿನ ಕಂತೆಗಳಂತಿರುವ ಕಥೆ-ಕಾದಂಬರಿಗಳನ್ನು ಬರೆದೇ ಇಷ್ಟೊಂದು ಪ್ರೀತಿಯನ್ನು ಸಂಪಾದಿಸಿಬಿಟ್ಟಿದ್ದೇನೆ" ಎಂದು ಉತ್ತರ ಹೇಳುತ್ತಿದ್ದರು.

ಮತ್ತೆ ಅವರು ಹೀಗೆನ್ನುತ್ತಿದ್ದರು: "ನಾವು ಬಹುಶಃ ಸುಳ್ಳನ್ನೇನೂ ಬರೆದಿಲ್ಲ. ಅದೆಷ್ಟು ಜನರನ್ನು ಕಂಡಿದ್ದೇನೆ; ಭೇಟಿಯಾಗಿದ್ದೇನೆ. ಬರೆಯುವಾಗ ಅವರೆಲ್ಲ ನನ್ನ ಮನಸ್ಸಿನಲ್ಲಿ ಮೂಡಿನಿಲ್ಲುತ್ತಾರೆ. ಆಗ ನಾನು ನನ್ನನ್ನು ನಿಯಂತ್ರಿಸಿಕೊಳ್ಳಲಾರೆ."

ಹೇಳುತ್ತ ಇದ್ದಂತೆಯೇ ಅವರು ಎದ್ದುನಿಂತು ಅಶಾಂತರಾಗಿ ಅಂಗಳದಲ್ಲಿ ಶತಪದ ಹಾಕತೊಡಗುತ್ತಿದ್ದರು. ಆವೇಶಕ್ಕೊಳಗಾದರೆ, ಹಣೆಯ ಮೇಲೆ ಬಂದಿರುತ್ತಿದ್ದ ಕೂದಲುಗಳನ್ನು ಬೆರಳಿಗೆ ಸುತ್ತಿಕೊಳ್ಳುತ್ತಿದ್ದರು. ಒಂದಾದ ಮೇಲೆ ಒಂದರಂತೆ ಸಿಗರೇಟುಗಳು ಸೇದುತ್ತ, ಮಾತನಾಡುತ್ತ ಹೋಗುತ್ತಿದ್ದರು.

ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕಿ ಜನರು ಅವರನ್ನು ಗೋಳು ಹೊಯ್ದುಕೊಳ್ಳುತ್ತಿದ್ದರು. ಆದರೆ, ಅವರು ಮುಗುಳ್ನಗುತ್ತಲೇ ಇರುತ್ತಿದ್ದರು. "ನೀವು ಕಿರಣ್ಮಯಿಯನ್ನು ಏಕೆ ಹುಚ್ಚಳಾಗಿಸಲಿಲ್ಲ ?" ಎಂದು ಒಬ್ಬ ಕೇಳಿದರೆ, ಇನ್ನೊಬ್ಬ "ನೀವು ಮತ್ತೆ ಅನ್ನದಾ ಅಕ್ಕನನ್ನೇಕೆ ಹುಡುಕಿಸಲಿಲ್ಲ ? ಇಂದ್ರನಾಥನನ್ನು ಅದೆಲ್ಲಿಗೆ ಓಡಿಸಿಬಿಟ್ಟಿರಿ ? ನಿಮ್ಮ 'ಶೇಷ ಪ್ರಶ್ನೆ'ಗೆ ಇರುವ ಉತ್ತರ ಯಾವುದು ?" ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಪಡೆಯಲಿಚ್ಛಿಸುತ್ತಿದ್ದರು.

ಒಮ್ಮೆ ಇಂಥ ಆಗಂತುಕನೊಬ್ಬನ ವಿಷಯದಲ್ಲಿ ನಡೆಯಬಾರದಂಥ ಘಟನೆ ನಡೆದೇ ಹೋಯಿತು. ಸುಮಾರು ಹತ್ತು ಘಂಟೆಯ ಹೊತ್ತಾಗಿರಬಹುದು. ಹೊರಗಿನ ಅಂಗಳದಲ್ಲಿ ಕುಳಿತುಕೊಂಡು ಯಾವುದೋ ಪುಸ್ತಕವನ್ನು ಓದುತ್ತಿದ್ದರು. ಆಗ ಯಾರೋ ಬರುತ್ತಿರುವ ಹೆಜ್ಜೆಯ ಸದ್ದು ಕೇಳಿಸಿತು. ಪುಸ್ತಕವನ್ನು ಬದಿಗೆ ಸರಿಸಿ, ಬರುತ್ತಿದ್ದ ವ್ಯಕ್ತಿಯನ್ನು ನೋಡಿದರು. ಮತ್ತೆ ಓದಿನಲ್ಲಿಯೇ ಮಗ್ನರಾದರು.

ಆ ಆಗಂತುಕ ಬೇರಾರೂ ಆಗಿರದೆ, ಚಿರಪರಿಚಿತರಾಗಿದ್ದ ಮಾವ ಉಪೇಂದ್ರನಾಥರೇ ಆಗಿದ್ದರು. ಆ ದಿನಗಳಲ್ಲಿ 'ವಿಚಿತ್ರಾ'[1] ಪತ್ರಿಕೆಯನ್ನು ಹೊರ ತರುವ ಯೋಜನೆಯೊಂದನ್ನು ಅವರ ಮುಂದೆ ಇಡಲಾಗಿತ್ತು. ಉಪೇಂದ್ರನಾಥರ ಬೀಗರಾಗಿದ್ದ ಯೋಗೀಂದ್ರನಾಥ ಮುಕರ್ಜಿಯವರೇ ಆ ಕನಸುಗಾರರಾಗಿದ್ದರು. ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ಮೊದಲೇ ಅವರು ಪರಲೋಕ ವಾಸಿಗಳಾಗಿ ಬಿಟ್ಟರು. ಆಗ ಅವರ ಮಗ ಇದನ್ನು ಕಾರ್ಯರೂಪಕ್ಕೆ ತರುವ ಸಂಕಲ್ಪ ಮಾಡಿದ. ಉಪೇಂದ್ರನಾಥರನ್ನು ಸಂಪಾದಕರ ಸ್ಥಾನದಲ್ಲಿ ಕೂರಿಸಲಾಯಿತು. ಸಹಜವಾಗಿಯೇ ಅವರು ಮೊದಲೇ ತಮ್ಮ ಕೃತಿಗಳನ್ನು ಕಳಿಸಿಕೊಡುವಂತೆ ರವೀಂದ್ರನಾಥರನ್ನೂ, ಶರತ್‌ಚಂದ್ರರನ್ನೂ ಆಹ್ವಾನಿಸಿದರು. ಮೇಲಿಂದ ಮೇಲೆ ಕಾಗದಗಳನ್ನು ಬರೆದರೂ ಶರತ್‌ಚಂದ್ರರಿಂದ ಉತ್ತರವೇ ಬರಲಿಲ್ಲ. ಅವರಿಗೆ ತುಂಬ ಆಶ್ಚರ್ಯವಾಯಿತು. ಸ್ವತಃ ಅವರನ್ನು ಕಂಡು ಹೋಗಲು ಅವರು ಪಾಣಿತ್ರಾಸಕ್ಕೆ[2]

---

1. 1334ರ ಪ್ರಥಮ ಆಷಾಢದಂದು (ಜೂನ್ 13, 1937) ಇದರ ಪ್ರಕಟಣೆ ಆರಂಭವಾಯಿತು.
2. ಸೆಪ್ಟೆಂಬರ್ 1926.

ಬಂದರು. ಆಶ್ಚರ್ಯ! ಮಹಾದಾಶ್ಚರ್ಯ! ಶರತ್‌ಚಂದ್ರರು ಅವರನ್ನು ನೋಡಿಯೂ ನೋಡದಂತೆ ಇದ್ದುಬಿಟ್ಟರು. ಅವರಿಗೆ ಈ ವರ್ತನೆ ಹಿಡಿಸಲಿಲ್ಲ. ಆದರೂ, ಕುರ್ಚಿಯ ಮೇಲೆ ಕುಳಿತುಕೊಂಡು "ಹೇಗಿದ್ದೀಯೆ, ಶರತ್?" ಎಂದರು.

ಹಾಗೆಯೇ, ಪುಸ್ತಕವನ್ನು ಮುಖಕ್ಕೆ ಮುಚ್ಚಿಕೊಂಡೇ ಶರತ್‌ಚಂದ್ರರೆಂದರು: "ಹಾಗೆಯೇ ಇದ್ದೇನೆ."

ಉಪೇಂದ್ರನಾಥರು ಹೇಳಿದರು: "ಅದನ್ನು ನನ್ನ ಕಣ್ಣಿನಿಂದಲೇ ನೋಡುತ್ತಿದ್ದೇನೆ. ನಾನು ಕೇಳಿದ್ದು, ನೀನು ಹೇಗಿದ್ದೀಯಾ? ನನ್ನ ಕಾಗದಕ್ಕೆ ಉತ್ತರವನ್ನೇಕೆ ಕೊಡಲಿಲ್ಲ? ಎಂದು."

ಹಿಂದಿನಂತೆಯೇ ಶರತ್‌ಚಂದ್ರರು ಹೇಳಿದರು: "ಏನು ಅಂತ ಉತ್ತರ ಕೊಡಬೇಕಾಗಿತ್ತು?"

ಉಪೇಂದ್ರನಾಥರಿಗೆ ಮತ್ತಷ್ಟು ಆಶ್ಚರ್ಯವಾಯಿತು. ಆದರೂ ಮುಗುಳ್ನಗುತ್ತ ಅವರೆಂದರು: "ನಿನ್ನ ಕಾಗದ ತಲುಪಿ ಸಂತೋಷವಾಯಿತು. ಕಾದಂಬರಿಯನ್ನು ಬರೆಯಲು ಆರಂಭಿಸಿದ್ದೇನೆ. ಒಂದು ಸಂಚಿಕೆಗೆ ಬೇಕಾಗುವಷ್ಟು ಬರೆದಾದ ಕೂಡಲೇ ಕಳಿಸಿಕೊಡುತ್ತೇನೆ ಎಂದು ಉತ್ತರ ಕೊಡಬೇಕಾಗಿತ್ತು."

ಶರತ್‌ಚಂದ್ರರು ನಿಧಾನವಾಗಿ ಪುಸ್ತಕವನ್ನು ಮುಚ್ಚಿ ಮೇಜಿನ ಮೇಲೆ ಇಟ್ಟರು. ನೆಟ್ಟಗೆ ಕುಳಿತುಕೊಂಡರು. ತೀಕ್ಷ್ಣ ದೃಷ್ಟಿಯಿಂದ ಮಾವನತ್ತ ನೋಡುತ್ತ ಹೇಳಿದರು: "ಆ ಇಜ್ಜಲು ಮಾರಾಟಗಾರನ ಮಗನ ಕಾಗದದ ಮೂಲಕ, ಕಾದಂಬರಿ ಬರೆದುಕೊಡುವಂತೆ ನನಗೆ ಅಪ್ಪಣೆ ಮಾಡುತ್ತಿದ್ದೀಯಾ?"

ಈ ಅಕಾರಣ ಕೋಪಕ್ಕೆ ವಿರುದ್ಧವಾಗಿ ಉಪೇಂದ್ರನಾಥರ ಅಹಮಿಕೆ ಹೆಡೆಯೆತ್ತಿ ನಿಂತಿತು. ಅದೇ ರೀತಿ ತೀವ್ರದೃಷ್ಟಿಯಿಂದ ನೋಡುತ್ತ ಅವರು ಹೇಳಿದರು: "ಯಾರು ಇಜ್ಜಲು ಮಾರಾಟಗಾರ? ಯೋಗೀಂದ್ರ ಮುಕರ್ಜಿಯೆ! ಅವರ ಮಗ ನನ್ನ ಅಳಿಯ ಎಂಬುದಾದರೂ ನಿನಗೆ ಗೊತ್ತಿದೆಯೆ?"

ಶರತ್‌ಚಂದ್ರರೆಂದರು: "ಗೊತ್ತಿರಲಿ, ಬಿಡಲಿ, ನಾನು ಆತನ ಪತ್ರಿಕೆಗೆ ಬರೆಯುವುದಿಲ್ಲ."

"ಆ ಇಜ್ಜಲು ಮಾರಾಟಗಾರ ಈಗ ಈ ಲೋಕದಲ್ಲಿಲ್ಲ ಎಂಬುದು ಗೊತ್ತೇನು?"

ಶರತ್‌ಚಂದ್ರರು ಯಾವುದೇ ಉತ್ತರವನ್ನೂ ಕೊಡಲಿಲ್ಲ. ಉಪೇಂದ್ರನಾಥರ ಮನಸ್ಸಿನಲ್ಲಿ ಆತ್ಮಾಭಿಮಾನ ಮತ್ತು ಕ್ರೋಧಗಳೆರಡೂ ಭುಗಿಲೆದ್ದುವು. ಮನಸ್ಸಿನಲ್ಲಿಯೇ ಅವರು ಹೀಗೆಂದುಕೊಂಡರು: "ನಾನೂ ನೋಡುತ್ತೇನೆ. ನೀನಿಲ್ಲದೆ ಪತ್ರಿಕೆಯನ್ನು ಹೊರಡಿಸಲು ಆಗುತ್ತದೆಯೇ ಇಲ್ಲವೇ ಎಂಬುದನ್ನು ನೋಡಿಯೇ ಬಿಡುತ್ತೇನೆ. ಪ್ರೀತಿ-ವಿಶ್ವಾಸಗಳು ಇರುವ ಕಡೆಯಲ್ಲಿ ಏನನ್ನಾದರೂ ನಿರೀಕ್ಷಿಸುವುದು ಅಸಂಗತವೇನಲ್ಲ. ನೀನು ನನ್ನ ನೆಂಟನಾಗಿರದಿದ್ದರೆ, ಗೆಳೆಯನಾಗಿರದಿದ್ದರೆ, ಇಬ್ಬರ ನಡುವೆ ಪ್ರೀತಿಯ ಸಹಜವೂ ಸುದೃಢವೂ ಆದ ಬಂಧನವಿಲ್ಲದಿದ್ದರು ವಾದ ವಿವಾದ ಮಾಡಬಹುದಾಗಿತ್ತು. ಜಗಳವಾಡಬಹುದಾಗಿತ್ತು. ಜನಗಳನ್ನು ಪರಿಹರಿಸಲೂ ಬಹುದಾಗಿತ್ತು....."

ಮನಸ್ಸಿನಲ್ಲಿ ಇನ್ನೂ ಏನೇನು ಆಲೋಚನೆಗಳು ಮೂಡಿಬಂದುವೋ ಏನೋ.

ಆದರೆ, ಅವರು ಏನನ್ನೂ ಹೇಳಲಿಲ್ಲ. ಎದ್ದು ನಿಂತರು. ಶರತ್‌ಚಂದ್ರರೇ ಕೇಳಿದರು: "ಎಲ್ಲಿಗೆ ಹೊರಟೆ ?"

ಉಪೇಂದ್ರನಾಥರೆಂದರು: "ನನ್ನ ಮನೆಗೆ ಹೋಗುತ್ತೇನೆ."

ಶರತ್‌ಚಂದ್ರರು ಹೇಳಿದರು: "ಊಟಮಾಡಿಕೊಂಡು ಹೋಗು."

ಉಪೇಂದ್ರನಾಥರು ವ್ಯಂಗ್ಯವಾಗಿ ಮುಗುಳ್ನಕ್ಕು ಹೇಳಿದರು: "ಈ ಪುಸ್ತಕ ಬರೆಯುವವನ ಮನೆಯಲ್ಲಿ ಊಟ-ತಿಂಡಿ ಮಾಡಿಕೊಂಡು ಹೋಗು ಎಂದು ಹೇಳುತ್ತೀಯೇನು ?"

ಈ ಮಾತುಗಳು ಶರತ್‌ಚಂದ್ರರಿಗೆ ನಿಜವಾಗಿಯೂ ಕೆಟ್ಟದೆನಿಸಿದುವು. ಇಷ್ಟಾದರೂ ಅವರು ಹೇಳಿದರು: "ತುಂಬ ದೂರದಿಂದ ಬಂದಿದ್ದೀಯೆ. ತುಂಬ ದೂರ ಹೋಗಬೇಕಾಗಿದೆ. ಸ್ವಲ್ಪ ಕಾಫಿ-ತಿಂಡಿಯನ್ನಾದರೂ ತೆಗೆದುಕೊಂಡು ಹೋಗು."

ಆದರೆ, ದೊರೆತಿದ್ದ ಸ್ವಾಗತದ ಹಿನ್ನಲೆಯಲ್ಲಿ ಉಪೇಂದ್ರನಾಥರು ಅಲ್ಲಿಯೇ ನಿಲ್ಲುವುದು ಸಾಧ್ಯವಿರಲಿಲ್ಲ. ಅವರು ನಿಲ್ಲಲ್ಲೂ ಇಲ್ಲ. ಶರತ್‌ಚಂದ್ರರು ಮತ್ತೆ ಹೇಳಿದರು: "ಕೋಪ ಬಂದಿತೇ, ಉಪೇಂದ್ರ!"

ಉಪೇಂದ್ರನಾಥರೆಂದರು: "ಕೋಪವೇನೋ ಬಂದಿದೆ. ಆದರೆ ಅದಕ್ಕೆ ಕಾರಣ ಇಲ್ಲದೆ ಇಲ್ಲ."

"ಅನ್ಯಾಯ ಮಾಡುತ್ತಿದ್ದೀಯೆ."

ಉಪೇಂದ್ರನಾಥರು ಹೇಳಿದರು: "ನಾನು ಅನ್ಯಾಯ ಮಾಡುತ್ತಿಲ್ಲ. ನನ್ನ ವಿಷಯದಲ್ಲಿ ಅನ್ಯಾಯವಾಗಿದೆ. ಮುಂದೆ ಬಹುಶಃ ಇದರ ಬಗ್ಗೆ ಆಲೋಚನೆ ನಡೆಯಬಹುದು."

ಶರತ್‌ಚಂದ್ರರು ಹೇಳಿದರು: "ಹಾಗೇನಾದರೂ ಆದರೆ, ಭವಿಷ್ಯದತ್ತಲೇ ಕಣ್ಣಾಗಿ ಕೂಡ ಬೇಕಾಗುತ್ತದೆ."

ಉಪೇಂದ್ರನಾಥರು ಹೊರಟುಬಿಟ್ಟರು. ಈ ವಿಶಿಷ್ಟ ಸಂದರ್ಭದಲ್ಲಿ 'ತಪ್ಪು ಯಾರದು ?' ಎಂಬ ಪ್ರಶ್ನೆ ಸದ್ಯಕ್ಕೆ ಅಪ್ರಸ್ತುತವಾದುದು. ದೃಢವಾಗಬೇಕೆಂದು ಬಯಸಿದಾಗ ಅವರು ದೃಢವೂ ಆಗಬಲ್ಲವರಾಗಿದ್ದರೆಂಬುದು ಇದರಿಂದ ಸ್ಪಷ್ಟ ವಾಗುತ್ತದೆ. ಈ ಪ್ರವೃತ್ತಿಯಿಂದಾಗಿಯೇ ಅವರು ಅನೇಕಸಲ ಹಳ್ಳಿಯವರ ವ್ಯವಹಾರಗಳಲ್ಲಿಯೂ ಸಿಲುಕಿಕೊಂಡು ಬಿಡುತ್ತಿದ್ದರು. ಹಿಂದಿನ ಜಮೀನುದಾರ ನೊಬ್ಬ ಗೋವಿಂದ ಪುರದಲ್ಲಿ ತನ್ನ ಸ್ವಲ್ಪ ಜಮೀನನ್ನು ಶಿವನ ಹೆಸರಿಗೆ ಅರ್ಪಿಸಿ ಬಿಟ್ಟಿದ್ದ. ಕೆಳಮಟ್ಟದಲ್ಲಿದ್ದುದರಿಂದ ಸಾಮಾನ್ಯವಾಗಿ ಅದರಲ್ಲಿ ನೀರು ತುಂಬಿಕೊಳ್ಳುತ್ತಿತ್ತು. ಹೊಸ ಜಮೀನುದಾರ ಇದರ ಲಾಭ ಪಡೆದುಕೊಳ್ಳಬೇಕೆಂದು ಯೋಚಿಸಿದ. ನೀರಿನಿಂದ ತುಂಬಿದ್ದ ಆ ಜಮೀನಿನಲ್ಲಿ ಮೀನು ಹಿಡಿಯುವ ಗುತ್ತಿಗೆಯನ್ನು ಅವನು ಯಾರಿಗೋ ಕೊಟ್ಟುಬಿಟ್ಟ. ಇದುವರೆಗೆ ಹಳ್ಳಿಯವರು ಅಲ್ಲಿ ಅನಿರ್ಬಂಧಿತವಾಗಿ ಮೀನು ಹಿಡಿದುಕೊಳ್ಳುತ್ತಿದ್ದರು. ಈ ಗುತ್ತಿಗೆಯಿಂದಾಗಿ ಅವರ ಹಕ್ಕನ್ನು ಕಸಿದುಕೊಂಡಂತಾಯಿತು.

ಇದು ಜಗಳಕ್ಕೆ ನಾಂದಿಯಾಯಿತು. ಆದರೆ, ಬಹುಬೇಗ ಇದು

ಕೈ-ಕೈಮಿಲಾಯಿಸುವ ಹಾಗೂ ಬಡಿದಾಡುವ ಹಂತಕ್ಕೆ ಬಂದುಬಿಟ್ಟಿತು. ಗುತ್ತಿಗೆದಾರರು ಜಮೀನುದಾರನ ಬಳಿಗೆ ದೂರುತಗೆದುಕೊಂಡು ಬಂದರು. ಅವನಿಗೆ ಕೋಪ ಬಂತು. ಅವನು ಕೂಡಲೇ ಪೋಲೀಸು ಠಾಣೆಗೆ ಹೋಗಿ ಇಪ್ಪತ್ತೈದು ಮಂದಿಯ ಮೇಲೆ ದೂರು ಕೊಟ್ಟ. ಇವರಲ್ಲಿ ಶರತ್‌ಚಂದ್ರರ ಅಕ್ಕನ ಭಾವಮೈದುನನೂ ಒಬ್ಬನಾಗಿದ್ದ. ಅವರು ಒಂದು ಶಾಲೆಯ ಮುಖ್ಯೋಪಾಧ್ಯಾಯ ರಾಗಿದ್ದರು. ಅವರೂ ಸೇರಿದಂತೆ, ದೂರು ಹೊರಿಸಲಾಗಿದ್ದ ಅನೇಕ ಮಂದಿ ಘಟನೆ ನಡೆದ ಸ್ಥಳದಲ್ಲಿ ಇರಲೇ ಇಲ್ಲ.

ಶರತ್‌ಚಂದ್ರರಿಗೆ ಈ ಸುದ್ದಿ ತಲುಪಿದಾಗ ಅವರು ಯಾರೊಂದಿಗೂ ಏನೂ ಹೇಳಲಿಲ್ಲ. ಸದ್ದಿಲ್ಲದೆ ಅವರು ಜಮೀನುದಾರನ ಬಳಿಗೆ ಹೋದರು. ಅವನಿಗೆ ಬುದ್ಧಿ ಹೇಳಲು ಪ್ರಯತ್ನಿಸಿದರು. ಆದರೆ ಅವನು ಮದಾಂಧನಾಗಿದ್ದ. ಅವನು ಕೋಪದಿಂದ ಅರಚಿದ: "ನನಗೆ ಯಾರ ಉಪದೇಶವೂ ಬೇಕಿಲ್ಲ. ನನಗೆ ಸರಿಯೆಂದು ತೋರಿದ್ದನ್ನು ಮಾಡಿಯೇ ತೀರುತ್ತೇನೆ. ಗೋವಿಂದಪುರದ ಜನಗಳಿಗೆ ಪಾಠ ಕಲಿಸುತ್ತೇನೆ. ನೀವೇ ಅವರಿಗೆ ಸಲಹೆಗಾರರಂತೆ! ಆಗಲಿ, ನಾನೇನೂ ಹೆದರುವುದಿಲ್ಲ."

ಇದರ ಪರಿಣಾಮ ಏನಾಗಬಹುದಿತ್ತೋ ಅದೇ ಆಯಿತು. ಎರಡೂ ಕಡೆಗಳಿಂದ ಅಂದರೆ ಪೌರ ಮತ್ತು ಅಪರಾಧಿಕ (ಸಿವಿಲ್ ಮತ್ತು ಕ್ರಿಮಿನಲ್) - ಮೊಕದ್ದಮೆಗಳು ನಡೆಯ ತೊಡಗಿದುವು. ಅಲ್ಲಿ ಶಿವಪೂಜೆಗೆ ಸಂಬಂಧಿಸಿದ ಒಂದು ಮಹಾ ಉತ್ಸವವನ್ನೂ ಆಚರಿಸಲಾಗುತ್ತಿತ್ತು. ಗುತ್ತಿಗೆ ಪಡೆದಿರುವ ವ್ಯಕ್ತಿಗಳಿಗೆ ಈ ಸಲ, ಯಾವುದೇ ಷರತ್ತಿನ ಮೇಲೂ, ಉತ್ಸವದಲ್ಲಿ ಭಾಗಿಯಾಗಲು ಅವಕಾಶಕೊಡಕೂಡದೆಂದು ಹಳ್ಳಿಯವರು ನಿಶ್ಚಯಿಸಿದರು. ಈ ವಿಷಯದ ಬಗ್ಗೆ ಮತ್ತೆ ಜಗಳ ನಡೆಯಿತು. ಜಮೀನುದಾರನ ಹತ್ತಿರ ಹಣ ಮಾತ್ರವೇ ಇದ್ದುದಾಗಿರಲಿಲ್ಲ. ಅವನು 'ಯೂನಿಯನ್ ಬೋರ್ಡ್'ನ ಅಧ್ಯಕ್ಷನೂ ಆಗಿದ್ದ. ಪೋಲೀಸು ಅಧಿಕಾರಿಗಳ ಪರಿಚಯ ಅವರಿಗೆ ಚೆನ್ನಾಗಿಯೇ ಇತ್ತು. ಆದ್ದರಿಂದ, ಶಾಂತಿಗೆ ಭಂಗವೊದಗುವ ಸಂಭವವನ್ನು ಸೂಚಿಸಿ 144ನೇ ಸೆಕ್ಷನ್ ಅನ್ನು ಜಾರಿಗೊಳಿಸುವುದರಲ್ಲಿ ಯಶಸ್ವಿಯಾದ. ಹಳ್ಳಿಯಲ್ಲಿ ಎಲ್ಲೆಲ್ಲೂ ಪೋಲೀಸರ ಕಾಣಿಸತೊಡಗಿದರು.

ಧರ್ಮದ ವಿಷಯದಲ್ಲಿ ಪೋಲೀಸರು ಕೈಹಾಕಿದ್ದು ಹಳ್ಳಿಯವರನ್ನು ಕೆರಳಿಸಿತು. ಎರಡು ತಂಡಗಳು ಆವೇಶಕ್ಕೆ ಒಳಗಾದುವು. ಆಗ ಕೆಲವು ಸಭ್ಯರು ಮತ್ತೆ ಶರತ್‌ಚಂದ್ರರ ಬಳಿಗೆ ಬಂದರು. ಅವರಿಗೆ ತುಂಬ ಕೋಪ ಬಂದಿತು; ದೃಢ ನಿಶ್ಚಯವನ್ನೂ ಮಾಡಿದರು. ಜಿಲ್ಲಾ ಮ್ಯಾಜಿಸ್ಟ್ರೇಟರ ಬಳಿಗೆ ಹೋಗಬೇಕೆಂದು ಅವರು ತೀರ್ಮಾನಿಸಿದರು. ಹಳ್ಳಿಯವರಿಗೆಲ್ಲ ಶಾಂತವಾಗಿರುವಂತೆ ಸೂಚಿಸಿ, ಅವರು ಕೂಡಲೇ ಅಲ್ಲಿಂದ ಹೊರಟರು. ಅವರು ಮ್ಯಾಜಿಸ್ಟ್ರೇಟರಿಗೆ ಎಲ್ಲವನ್ನೂ ವಿವರಿಸಿದರು. ಬಂಗಾಳದ ಸೋಲರಿಯ ಕತೆಗಾರ ಈ ವಿಷಯದಲ್ಲಿ ಆಸಕ್ತಿವಹಿಸಿರು ವುದನ್ನು ಕಂಡು ಮ್ಯಾಜಿಸ್ಟ್ರೇಟರು ಕೂಡಲೇ ಕಾರ್ಯೋನ್ಮುಖರಾದರು. ಅವರು ಕೂಡಲೇ ಪೋಲೀಸ್ ಕ್ಯಾಪ್ಟನ್ನರನ್ನು ಕರೆಸಿ, ಅವರಿಗೆ ಎಲ್ಲವನ್ನೂ ವಿವರಿಸಿ, "ಠಾಣೆಯ ಪೋಲೀಸ್ ಅಧಿಕಾರಿಗೆ, ಅಲ್ಲಿಂದ ಪೋಲೀಸರನ್ನು ವಾಪಸು

ಕರೆಸಿಕೊಳ್ಳುವಂತೆ ಸೂಚನೆ ನೀಡಿ ಶರತ್‌ಚಂದ್ರರಿಗೆ ಪತ್ರ ಬರೆಸಿಕೊಡಿ. ಶರತ್‌ಚಂದ್ರರೇ ಸ್ವತಃ ಉತ್ಸವದ ಮೇಲ್ವಿಚಾರಕರಾಗಿರುತ್ತಾರೆ."

ಅತ್ತ ಠಾಣೆಯ ಅಧಿಕಾರಿ ತನ್ನ ಮೇಲಧಿಕಾರಿಗಳಿಗೆ ವರದಿಸಲ್ಲಿಸಿ ಹೆಚ್ಚಿನ ಪೋಲೀಸ್ ಪಡೆಯನ್ನು ಕರೆಸಿಕೊಳ್ಳುವ ಏರ್ಪಾಟು ಮಾಡಿಕೊಂಡಿದ್ದ. ಯೋಗಾಯೋಗದಿಂದ, ಶರತ್‌ಚಂದ್ರರು ಮತ್ತು ಹೊಸ ಪೋಲೀಸ್ ಅಧಿಕಾರಿ ಭುವನೇಶ್ವರ ಬಾಬೂ ಅವರು ಒಂದೇ ರೈಲಿನಲ್ಲಿ, ಒಂದೇ ಬೋಗಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ಭುವನೇಶ್ವರ ಬಾಬೂ ಶರತ್‌ಚಂದ್ರರ ಅಭಿಮಾನಿಗಳಲ್ಲಿ ಒಬ್ಬರಾಗಿದ್ದರು. ಆದರೆ, ಈ ಮೊದಲು ಅವರನ್ನು ನೋಡಿರಲಿಲ್ಲ. ಗೆಳೆಯನೊಬ್ಬನ ಮೂಲಕ ಅವರಿಗೆ ಅದೇ ಬೋಗಿಯಲ್ಲಿದ್ದ ಶರತ್‌ಚಂದ್ರರ ಮೊದಲ ಸಾಕ್ಷಾತ್ ಪರಿಚಯ ಆಯಿತು. ಜಗಳದ ವಿಷಯ ಪ್ರಸ್ತಾಪಕ್ಕೆ ಬಂದದ್ದು ಸಹಜವೇ ಆಗಿತ್ತು. ಭುವನೇಶ್ವರ ಬಾಬೂ ಅವರಿಗೆ ಶರತ್‌ಚಂದ್ರರು ಎಲ್ಲವನ್ನೂ ವಿವರಿಸಿದರು.

ಹಳ್ಳಿಗೆ ಬಂದು ಸೇರಿದ ಮೇಲೆ, ಇಬ್ಬರೂ ಜೊತೆ ಜೊತೆಯಾಗಿಯೇ ಜಗಳದ ಜಾಗವನ್ನು ತಲುಪಿದರು. ಶರತ್‌ಚಂದ್ರರು ಸ್ವಲ್ಪ ಮುಂದಿದ್ದರು. ಜನಗಳು ಮೊದಲು ಅವರನ್ನು ನೋಡಿದರು ಹಾಗೂ ಠಾಣೆಯ ಅಧಿಕಾರಿಗೆ ಸೂಚನೆ ನೀಡಿದರು: "ಶರತ್‌ಬಾಬೂ ಬರುತ್ತಿದ್ದಾರೆ."

ಠಾಣೆಯ ಅಧಿಕಾರಿಗೆ ಕೋಪಬಂತು. ಅವನೆಂದ: "ಕಂಡಿದ್ದೀನಿ ಬಿಡಿ, ನಿಮ್ಮ ಶರತ್‌ಬಾಬೂ ಅವರನ್ನು, ನಾಲ್ಕಾರು ಪುಸ್ತಕ ಬರೆದು ಬಿಟ್ಟದ್ದಾರೆ ಅಂದಾಕ್ಷಣ ಇಲ್ಲಿ ನೇತಾಗಿರಿಯೇನೂ ನಡೆಯುವುದಿಲ್ಲ. ಅಪಮಾನಿತರಾಗಿ ಅವರು ಹಿಂದಿರುಗ ಬೇಕಾಗುತ್ತದೆ. ಅಷ್ಟೆ."

ಅಷ್ಟು ಹೊತ್ತಿಗೆ ಭುವನೇಶ್ವರ ಬಾಬೂಗಳೂ ಮುಂದೆ ಬಂದರು. ಈಗ ಠಾಣೆಯ ಅಧಿಕಾರಿಯ ವಾಕ್-ಚಾತುರ್ಯವೆಲ್ಲ ಮಾಯವಾಗಿ ಬಿಟ್ಟಿತು. ಅವನು ಥರಥರ ನಡುಗತೊಡಗಿದ. ಅವನು ಆಡಿದ ಮಾತುಗಳನ್ನೆಲ್ಲ ಭುವನೇಶ್ವರ ಬಾಬೂಗಳು ಕೇಳಿಬಿಟ್ಟಿದ್ದರಲ್ಲ! ಅವರು ಕೋಪದಿಂದ ಆ ಠಾಣೆಯ ಅಧಿಕಾರಿಗೆ ಹೇಳಿದರು: "ಬಂಗಾಳಾದ ಇಂದಿನ ಸರ್ವಶ್ರೇಷ್ಠ ಕಾದಂಬರಿಕಾರರೊಡನೆಯೂ ಸ್ವಲ್ಪ ಸಭ್ಯತೆಯಿಂದ ವರ್ತಿಸಲು ಬರುವುದಿಲ್ಲವೆ? ಜಮೀನುದಾರನ ಲಂಚತಿಂದು ನೀನೇ ಈ ಎಲ್ಲ ಗದ್ದಲವನ್ನೂ ಸೃಷ್ಟಿಸಿದ್ದೀಯೆ. ಇಲ್ಲಿಂದ ಈಗಲೇ ಹೊರಡು. ಪಾಣಿತ್ರಾಸದ ಹೈಸ್ಕೂಲಿನಲ್ಲಿ ನನಗಾಗಿ ಕಾಯುತ್ತ ಇರು."

ಹೆದರುತ್ತ-ನಡುಗುತ್ತ ಠಾಣೆಯ ಆ ಅಧಿಕಾರಿ ಅಲ್ಲಿಂದ ಹೊರಟ. ಸಂತೋಷ ಉತ್ಸಾಹಗಳಿಂದ ಆ ಉತ್ಸವ ನಡೆಯಿತು. ಶರತ್‌ಚಂದ್ರರ ಒತ್ತಾಯದ ಮೇಲೆ, ಹಳ್ಳಿಯವರು ಆ ಉತ್ಸವದಲ್ಲಿ ಪಾಲ್ಗೊಳ್ಳಲು ಗುತ್ತಿಗೆದಾರರಿಗೂ ಅವಕಾಶ ಮಾಡಿಕೊಟ್ಟರು. ಶಿವನಿಗೆ ಅರ್ಪಿತವಾಗಿದ್ದ ಭೂಮಿ ಮತ್ತೆ ಶಿವನಿಗೇ ಮೀಸಲಾಯಿತು. ಆದರೆ, ಇದಕ್ಕೂ ಮೊದಲೇ ಈ ಪ್ರಕರಣ ಹೈಕೋರ್ಟಿಗೆ ಹೋಗಿತ್ತು. ಮತ್ತೆ ಮತ್ತೆ ಸೋಲುಂಡ ಬಳಿಕ, ಕೊನೆಗೆ ಜಮೀನುದಾರನಿಗೆ ಬುದ್ಧಿಬಂತು. ಅವನು ಶರತ್‌ಚಂದ್ರರ ಮನೆಗೆ ಬಂದು; ಜಗಳಕ್ಕೆ ಮಂಗಳವನ್ನು ಹಾಡಿದ.

ಉತ್ಸವದ ಈ ಘಟನೆ ನಡೆದ ಬಳಿಕ, ಒಬ್ಬ ಸಭ್ಯ ವ್ಯಕ್ತಿ ಸಪತ್ನೀಕನಾಗಿ ಶರತ್‌ಚಂದ್ರರನ್ನು ಕಾಣಲು ಬಂದ. ಬಂದೊಡನೆಯೇ ಅವರಿಬ್ಬರೂ ಶರತ್‌ಚಂದ್ರರ ಪಾದಗಳಿಗೆ ನಮಸ್ಕರಿಸಿದರು. ತುಂಬ ಒತ್ತಾಯಮಾಡಿದ ಮೇಲೆ ಅವನು ಹೇಳಿದ: "ಅಂದು ನಿಮ್ಮೊಡನೆ ಅಗೌರವಯುತವಾಗಿ ನಡೆದುಕೊಂಡ ಠಾಣೆಯ ಅಧಿಕಾರಿ ನಾನೇ. ನೀವು ದಯವಿಟ್ಟು ನನ್ನನ್ನು ಕ್ಷಮಿಸಬೇಕು."

ಶರತ್‌ಚಂದ್ರರು ಹೇಳಿದರು: "ಅಪ್ಪ, ಆ ಸಂಗತಿ ಅಂದೇ ಮುಗಿದು ಹೋಯಿತಲ್ಲ. ಅದರ ಬಗ್ಗೆ ನನಗೆ ಯಾವ ದೂರೂ ಇಲ್ಲ."

ಠಾಣೆಯ ಆ ಅಧಿಕಾರಿ ಹೇಳಿದ: "ಆದರೆ, ನನ್ನ ಕೆಲಸಕ್ಕೇ ಕುತ್ತು ಬಂದಿದೆ. ಕೆಲಸ ಹೋಯಿತು ಅಂದರೆ ಮಕ್ಕಳು ಹಸಿವಿನಿಂದ ಸಾಯಬೇಕಾಗುತ್ತದೆ. ಜಮೀನುದಾರನಿಂದ ಲಂಚ ತೆಗೆದುಕೊಂಡನೆಂಬ ಆರೋಪದ ಮೇಲೆ ಭುವನೇಶ್ವರ ಬಾಬೂಗಳು ನನ್ನನ್ನು ಅಮಾನತ್ತಿನಲ್ಲಿ ಇಟ್ಟಿದ್ದಾರೆ. ದಯವಿಟ್ಟು ನನ್ನ ಮೇಲೆ ಕೃಪೆ ತೋರಬೇಕು."

ಶರತ್‌ಚಂದ್ರರು ಕೇಳಿದರು: "ನಾನೇನು ಮಾಡಬಹುದು, ಹೇಳಿ."

"ನೀವು ನನ್ನನ್ನು ಕ್ಷಮಿಸಿರುವುದಾಗಿ ಭುವನೇಶ್ವರ ಬಾಬೂಗಳಿಗೆ ಒಂದು ಕಾಗದ ಬರೆಯಿರಿ.... ಅವರೂ ನನ್ನನ್ನು ಕ್ಷಮಿಸಬೇಕೆಂದು ದಯವಿಟ್ಟು ತಿಳಿಸಿ."

ಇನ್ನೊಂದು ಮಾತನ್ನೂ ಆಡದೆ, ಶರತ್‌ಚಂದ್ರರು ಆ ಅಭಿಪ್ರಾಯದ ಕಾಗದವನ್ನು ಬರೆದುಕೊಟ್ಟರು. ಊಟಮಾಡಿದ ಬಳಿಕವೇ ಅವರಿಗೆ ಅಲ್ಲಿಂದ ಹೊರಡಲುಬಿಟ್ಟರು.

ಆದರೆ, ಇಂಥ ಸಮಸ್ಯೆಗಳು ಯಾವಾಗಲೂ ಇರುತ್ತಿರಲಿಲ್ಲ; ಗೆಳೆಯರೂ ಬಂಧುಗಳೂ ಸದಾಕಾಲ ಬರುತ್ತಿರಲಿಲ್ಲ. ಹಳ್ಳಿಯಲ್ಲಿ ಯಾವುದೇ ಬಗೆಯ ಉಲ್ಲಾಸ-ಉತ್ಸವದ ಸಂದರ್ಭಗಳು ಇಲ್ಲದೆ ಇದ್ದಾಗ ಹಳ್ಳಿ ನಿರ್ಜೀವವೂ ನಿಸ್ಪಂದವೂ ಆಗಿ ತೋರುತ್ತಿತ್ತು. ಆಗ, ಬಳಲಿದ ಅವರ ಮೈ-ಮನಗಳು ಸಂಜೆಯ ಹೊತ್ತಿಗೆ ರೇಡಿಯೋ ಸಂಗೀತವನ್ನು ಕೇಳಲು ಕಾತರಗೊಳ್ಳುತ್ತಿದ್ದುವು. ಶ್ರಾವಣದ ಕಾರ್ಮೋಡಗಳು ಎಲ್ಲ ಕಡೆಯೂ ಕವಿದುಕೊಂಡಿವೆ. ಕೆಸರು ತುಂಬಿರುವ, ನಿರ್ಜನವಾದ ಹಳ್ಳಿಗಾಡಿನ ಹಾದಿ ದುರ್ಗಮವಾಗಿ ಪರಿಣಮಿಸಿದೆ. ನಿಬಿಡ ಅಂಧಕಾರ ಹೊರೆಯಾಗಿ ಎದೆಯ ಮೇಲೆ ಕುಳಿತಿದೆ. ಆಗ 'ಆಕಾಶವಾಣಿ'ಯ ತರಂಗಗಳ ಮೇಲೆ ತೇಲುತ್ತ ಬಂದ ಸಂಗೀತದ ಧಾರೆಯನ್ನು ಆಲಿಸಿದಾಗ, ದೂರದಲ್ಲಿ ಎಲ್ಲಿಯೋ ಸಂಗೀತ ಸಭೆಯಲ್ಲಿ ಪಾಲ್ಗೊಂಡಿರುವಂಥ ಅನುಭವವಾಗುತ್ತಿದೆ. ಮತ್ತೆ ಇನ್ನೊಂದು ದಿವಸ ಮಳೆಸುರಿದ ಬಳಿಕ, ಆಕಾಶದಲ್ಲಿನ ಮೋಡಗಳ ನಡುವಣ ತೆರಪಿನಲ್ಲಿ ಚಂದ್ರನ ಕಾಂತಿ ಇಣುಕುತ್ತಿದೆ. ಮಳೆಯ ನೀರಿನಿಂದ ಸಂಪೂರ್ಣವಾಗಿ ತುಂಬಿ ಹರಿಯುವ ನದಿಯ ಮೇಲೆ ಬೆಳುದಿಂಗಳಿನ ಕ್ಷೀಣ ಕಾಂತಿ ಹರಡಿಕೊಳ್ಳುತ್ತಿದೆ. ಆಗ ಆ ಏಕಾಂತವಾಗಿರುವ ನದಿಯ ದಡದ ಮೇಲೆ ಆರಾಮಕುರ್ಚಿಯಲ್ಲಿ ಕಣ್ಣುಮುಚ್ಚಿಕೊಂಡು ಒರಗಿಕುಳಿತಿರುವ ಶರತ್‌ಚಂದ್ರರಿಗೆ, ತಮ್ಮ ಸಿಗರೇಟಿನ ಧೂಮದೊಂದಿಗೆ ಬೆರೆತು ಬರುತ್ತಿರುವ ರೇಡಿಯೋದಲ್ಲಿನ ವೇಣುನಾದ ಯಾವುದೋ ಮಾಯಾಜಾಲವನ್ನು ನಿರ್ಮಿಸುತ್ತಿದೆಯೋ ಎಂದೆನಿಸುತ್ತಿದೆ.

15

ಹಳ್ಳಿಯಲ್ಲಿದ್ದರೂ ನಗರದ ಸಂಪರ್ಕ ತೊರೆದು ಹೋಗಿರಲಿಲ್ಲ. ಆಗಿಂದಾಗ್ಗೆ ಹೋಗಿ ಬಂದು ಮಾಡಬೇಕಾಗುತ್ತಿತ್ತು. ಆರೋಗ್ಯ ಅಷ್ಟೊಂದು ಚೆನ್ನಾಗಿ ಇಲ್ಲದೆ ಇದ್ದುದರಿಂದ, ಅನೇಕ ದಿವಸಗಳವರೆಗೆ ಅಲ್ಲಿಯೇ ಇರಬೇಕಾಗುತ್ತಿತ್ತು. ಆದ್ದರಿಂದ, ಹಿರಿಯ ಸೊಸೆ ಪೇಟೆಯಲ್ಲಿ ಮನೆಯೊಂದನ್ನು ನೋಡಬೇಕೆಂದು ಮತ್ತೆ ಮತ್ತೆ ಒತ್ತಾಯ ಪಡಿಸುತ್ತಿದ್ದರು. ಹೀಗಾಗಿ, ಈ ಅವಧಿಯಲ್ಲಿ ಹಾಗೂ ಇದರ ಬಳಿಕವೂ ಮೌಲಿಕ ಸಾಹಿತ್ಯ ಸೃಷ್ಟಿಯ ದೃಷ್ಟಿಯಿಂದ ವಿಶಿಷ್ಟವೆನ್ನಬಹುದಾದಂಥ ಬರವಣಿಗೆಯ ಕಾರ್ಯವೇನೂ ನಡೆಯಲಿಲ್ಲ. ಹಿಂದಿನ ಆ ಉತ್ಸಾಹ ಮತ್ತೆ ಹಿಂದಿರುಗಿ ಬರಲೇ ಇಲ್ಲ. 'ಭಾರತ ವರ್ಷ'ದ ಸಂಪದಕರಾಗಿದ್ದ ಜಲಧರ ಸೇನ್ ಅವರಿಗೂ ಇಲ್ಲಿಗೆ ಅಷ್ಟು ಸುಲಭವಾಗಿ ಬರಲು ಸಾಧ್ಯವಾಗುತ್ತಿರಲಿಲ್ಲ. ಶಿವಪುರದಲ್ಲಿದ್ದಾಗಲಂತೂ ಅವರಿಗೆ ಅದು ನೀರು ಕುಡಿಯುವಷ್ಟು ಸುಲಭವಾಗಿತ್ತು. ಕಾಗದಗಳೂ ಇಲ್ಲಿ ಅವರನ್ನು ಅಷ್ಟಾಗಿ ಗೋಳು ಹೊಯ್ದುಕೊಳ್ಳುತ್ತಿರಲಿಲ್ಲ. ಹೀಗಾಗಿ, ಈ ಅವಧಿಯಲ್ಲಿ ಅವರು ಸಣ್ಣಪುಟ್ಟ ಕಥೆಗಳನ್ನು ಮಾತ್ರವಲ್ಲದೆ, ಮೂರು ಕಾದಂಬರಿಗಳನ್ನೂ ಬರೆದು ಮುಗಿಸಿದರು. 'ಶ್ರೀಕಾಂತ' ಕಾದಂಬರಿಯ ಮೂರನೆಯ[1] ಮತ್ತು ನಾಲ್ಕನೆಯ[2] ಭಾಗಗಳು ಮತ್ತು 'ಶೇಷ ಪ್ರಶ್ನೆ'[3]-ಇವೇ ಆ ಮೂರು ಕಾದಂಬರಿಗಳು.

ಉಳಿದ ಕೃತಿಗಳಂತೆಯೇ 'ಶೇಷ ಪ್ರಶ್ನೆ'ಯನ್ನೂ ನಿಯಮಿತ ರೂಪದಲ್ಲಿ ಬರೆಯಲು ಸಾಧ್ಯವಾಗಲಿಲ್ಲ. ಸುಮಾರು ನಾಲ್ಕು ವರ್ಷಗಳ ವರೆಗೆ ಅದು ಅನಿಯಮಿತ ರೂಪದಲ್ಲಿ ಅಚ್ಚಾಗುತ್ತಿತ್ತು. ತುಂಬ ತೀಕ್ಷ್ಣವಾದ ತಗಾದೆಯ ಪತ್ರ ಬಂದಾಗ, ಒಂದು ಸಲ ಅವರು ಹೀಗೆಂದು ಉತ್ತರಿಸಿದ್ದರು:

"ನನ್ನ ಬರವಣಿಗೆಯ ಬಗೆಗಿನ ಈ ದೌರ್ಬಲ್ಯವನ್ನು ನೀವು ಹದಿನೈದು ವರ್ಷಗಳಿಂದಲೂ ನೋಡುತ್ತಲೇ ಬಂದಿದ್ದೀರಿ..... ಅದೇ ರೀತಿ, ಕೊನೆಗೆ ಒಂದು ದಿವಸ ಈ ಪುಸ್ತಕವೂ ಕೊನೆಗೊಳ್ಳುತ್ತದೆ."[4]

ಈ ಅವಧಿಯಲ್ಲಿ ಅವರು 'ವಿಪ್ರದಾಸ' ಮತ್ತು 'ಶೇಷೇರ್ ಪರಿಚಯ್' ಎಂಬ ಎರಡು ಹೊಸಕಾದಂಬರಿಗಳ ರಚನೆಯನ್ನೂ ಆರಂಭಿಸಿದರು. ಇವುಗಳಲ್ಲಿ 'ಶೇಷೇರ್ ಪರಿಚಯ' ಒಂದು ಮಹತ್ವಪೂರ್ಣ ಕೃತಿಯಾಗಿತ್ತು. ಆದರೆ, ದೌರ್ಭಾಗ್ಯದಿಂದ 'ಜಾಗರಣ'ದಂತೆ ಇದು ಕೂಡ ಪೂರ್ಣವಾಗಲೇ ಇಲ್ಲ. ಈ ಅವಧಿಯಲ್ಲಿನ ಅವರ ಎರಡು ಲೇಖನಗಳು ತುಂಬ ಪ್ರಸಿದ್ಧವಾದುವು: 'ಸಾಹಿತ್ಯದ ರೀತಿ-ನೀತಿ'[5] ಹಾಗೂ 'ತರುಣರ ಕ್ರಾಂತಿ'[6] ಎಂಬುವೇ ಆ ಎರಡು ಲೇಖನಗಳು. ಈ ಅವಧಿಯಲ್ಲಿಯೇ

---

1. 18 ಏಪ್ರಿಲ್ 1927.
2. ಮಾರ್ಚ್ 1933.
3. ಮೇ 2, 1931.
4. ಸೆಪ್ಟೆಂಬರ್ 30, 1928.
5. ಏಪ್ರಿಲ್ 18, 1929.
6. ಆಗಸ್ಟ್ 13, 1927.

ಅವರು 'ಷೋಡಶೀ'[1] ಮತ್ತು 'ರಮಾ'[2] ಎಂಬ ಎರಡು ನಾಟಕಗಳನ್ನೂ ಬರೆದರು. 'ದೇನಾ-ಪಾವನಾ' ಮತ್ತು 'ಪಲ್ಲೀ ಸಮಾಜ' ಎಂಬ ಅವರವೇ ಆದ ಕಾದಂಬರಿಗಳು ಈ ಎರಡು ನಾಟಕಗಳಿಗೆ ಆಧಾರವಾಗಿದ್ದುವು.

ಈ ಅವಧಿಯಲ್ಲಿಯೇ ಅವರ ಪ್ರಸಿದ್ಧಕಥೆ 'ಬಿಂದೋ ಕಾ ಲಲ್ಲಾ'ದ ಇಂಗ್ಲಿಷ್ ಅನುವಾದ 'ಮಾಡರ್ನ್ ರಿವ್ಯೂ'ದಲ್ಲಿ ಪ್ರಕಟವಾಯಿತು. ಡಾ. ಕಾನಾಈ ಗಾಂಗುಲೀ ಅವರು 'ಶ್ರೀಕಾಂತ' ಕಾದಂಬರಿಯ (ಮೊದಲ ಭಾಗ) ಇಟ್ಯಾಲಿಯನ್ ಅನುವಾದವನ್ನು ಪ್ರಕಟಿಸಿದರು. 'ಬಿಂದೋ ಕಾ ಲಲ್ಲಾ' ಕಥೆಯನ್ನು ಅನುವಾದಿಸಿದ್ದವರು ರಾಮಾನಂದ ಚಟ್ಟೋಪಾಧ್ಯಾಯ ಅವರ ಮಗ ಅಶೋಕ ಚಟ್ಟೋಪಾಧ್ಯಾಯ ಅವರು. ಇವರು ಶರತ್‌ಚಂದ್ರರ ಬಳಿ ಆಗಾಗ ಬರುತ್ತಿದ್ದರು. ಒಂದು ದಿವಸ ಒಳ್ಳೆಯ ಅನುವಾದಗಳ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ಶರತ್‌ಚಂದ್ರರು ಅಶೋಕರನ್ನು ಕೇಳಿದರು: "ಮಹತ್ವದ ಯಾವುದೇ ಬದಲಾವಣೆಯನ್ನು ಮಾಡದೆ ನನ್ನ ಯಾವುದಾದರೂ ಒಂದು ಕೃತಿಯನ್ನು ಅನುವಾದ ಮಾಡಬಲ್ಲಿರಾ ?"

ಅಶೋಕ್ ಕೂಡಲೇ ಒಪ್ಪಿಕೊಂಡರು ಹಾಗೂ ಅದರ ಪರಿಣಾಮವೆಂಬಂತೆ 'ಬಿಂದೋ ಕಾ ಲಲ್ಲಾ'ದ ಅನುವಾದ 'ಮಾಡರ್ನ್ ರಿವ್ಯೂ'ದಲ್ಲಿ ಪ್ರಕಟವಾಯಿತು.

ಈ ಅವಧಿಯ ಕೃತಿಗಳಲ್ಲಿ 'ಶೇಷ-ಪ್ರಶ್ನೆ' ಅನೇಕ ದೃಷ್ಟಿಗಳಿಂದ ತುಂಬ ಮಹತ್ವಪೂರ್ಣವಾದ ಕೃತಿ. ದಿಲೀಪ್ ಕುಮಾರ್ ಅವರಿಗೆ ಬರೆದ ಒಂದು ಪತ್ರದಲ್ಲಿ ಅವರು ಈ ಕಾದಂಬರಿಯ ಹಿನ್ನೆಲೆಯ ಬಗ್ಗೆ ಬೆಳಕು ಬೀರಿದ್ದಾರೆ:

"ಮಂಟೂ,

" 'ಶೇಷ ಪ್ರಶ್ನೆ'ಯನ್ನು ಓದಿ ನೀನು ಸಂತೋಷಪಟ್ಟೆ ಎಂಬುದನ್ನು ತಿಳಿದು ನನಗೆ ತುಂಬ ಆನಂದವಾಯಿತು. ಏಕೆಂದರೆ ಸಂತೋಷಪಡುವುದು ನಿಮ್ಮ ಸ್ವಭಾವವೇ ಅಲ್ಲವಲ್ಲ! 'ಪ್ರವರ್ತಕ ಸಂಘ' ಈ ವರ್ಷ ಅಕ್ಷಯ ತೃತೀಯೆಯಂದು ಮತ್ತೆ ನನ್ನನ್ನು ಕರೆಯಲಿಲ್ಲ. ಈ ಕೃತಿಯ ಕೊನೆಯಲ್ಲಿ ಆಶ್ರಮವನ್ನು ಹಾಡಿಹೊಗಳಬೇಕೆಂದು ಅವರು ಒತ್ತಾಯ ಪಡಿಸಿದ್ದರು. ಆದರೆ, ಹಾಗೆ ಮಾಡಲು ನನ್ನಿಂದ ಸಾಧ್ಯವಾಗಲಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ಆಧುನಿಕ ಸಾಹಿತ್ಯ ಹೇಗಿರಬೇಕೆಂಬುದರ ಸ್ವಲ್ಪ ಮಟ್ಟಿನ ಇಣುಕು ನೋಟವನ್ನು 'ಶೇಷಪ್ರಶ್ನೆ'ಯಲ್ಲಿ ಕೊಡುವ ಪ್ರಯತ್ನ ಮಾಡಿದ್ದೇನೆ. 'ಚೆನ್ನಾಗಿ ಗರ್ಜಿಸುತ್ತೇನೆ; ಗರ್ಜಿಸಿ ಕೊಳಕು ಮಾತುಗಳನ್ನು ಬರೆಯುತ್ತೇನೆ' ಎಂಬ ಮನೋಭಾವ ಅತ್ಯಾಧುನಿಕ ಸಾಹಿತ್ಯದ ಕೇಂದ್ರ ನೆಲೆಯೇನೂ ಅಲ್ಲ. ಇದರ ಒಂದಿಷ್ಟು ನಮೂನೆಯನ್ನು ಮಾತ್ರವೇ ಅದರಲ್ಲಿ ಕೊಟ್ಟಿದ್ದೇನೆ. ಆದರೆ, ನಾನೀಗ ಮುದುಕನಾಗಿಬಿಟ್ಟಿದ್ದೇನೆ. ಶಕ್ತಿ-ಸಾಮರ್ಥ್ಯಗಳೆಲ್ಲ ಪಶ್ಚಿಮದ ಎರಕವನ್ನು ಪಡೆದುಬಿಟ್ಟಿವೆ. ಈಗ ಈ ಹೊಣೆಯೆಲ್ಲ ನಿಮ್ಮ ಮೇಲೆ ಬಿದ್ದಿದೆ....... ಸರಿ, ಅರವಿಂದರು ಈ ಬಂಗಾಳಿಯನ್ನು ಓದಬಲ್ಲರೇ ಎಂಬುದನ್ನು ತಿಳಿಸು. 'ಶೇಷ ಪ್ರಶ್ನೆ'ಯನ್ನು ಕೊಟ್ಟರೆ ಕೋಪ ಮಾಡಿಕೊಳ್ಳುತ್ತಾರೆಯೆ? ಇವುಗಳನ್ನೆಲ್ಲ ಓದಲು ಅವರಿಗೆ

1. ಆಗಸ್ಟ್ 4, 1928.

2. ಬಂಗವಾಣೀ, ಆಶ್ವಿನ್, 1334 (ಸೆಪ್ಟೆಂಬರ್-ಅಕ್ಟೋಬರ್ 1927)

ಕಾಲಾವಕಾಶವಿಲ್ಲವೆಂದು ನನಗೆ ಗೊತ್ತು. ಓದಿ ಎಂದು ಹೇಳಿದರೆ, ಅಪಮಾನವೆಂದು ಭಾವಿಸುತ್ತಾರೆಯೆ ? 'ಪ್ರವರ್ತಕ ಸಂಘ'ಕ್ಕೆ ಕೋಪ ಬಂದಿರುವುದನ್ನು ನೋಡಿದರೆ, ಭಯವಾಗುತ್ತದೆ. ಇಲ್ಲವಾದರೆ, ಅವರಂಥ ಆಳವಾದ ವಿದ್ವಾಂಸರ ಅಭಿಪ್ರಾಯವನ್ನು ತಿಳಿದುಕೊಂಡಿದ್ದರೆ, ನನ್ನ ಕೃತಿಯ ಧಾರೆ ಬಹುಶಃ ಇನ್ನೊಂದು ದಾರಿಯನ್ನು ಕಂಡುಕೊಳ್ಳುತ್ತಿತ್ತು. ಕಾದಂಬರಿಯ ಮಾಧ್ಯಮದ ಮೂಲಕ ಅನೇಕ ವಿಚಾರಗಳನ್ನು ಕೇಳುವಂತೆ ಒತ್ತಾಯಿಸಲಾಗುತ್ತದೆ. ಈ ಮಾತನ್ನು ಅರವಿಂದರು ಒಪ್ಪುವುದಿಲ್ಲವೆ ? ಲಘು ಸಾಹಿತ್ಯವೆಂದು ಕರೆಯಲಾಗುವ ಸಾಹಿತ್ಯದ ಬಗ್ಗೆ ಅವರು ತುಂಬ ಉದಾಸೀನರಾಗಿದ್ದಾರೆಯೆ ?......."

ಇದು ಪ್ರಕಟವಾದ ಕೂಡಲೇ ನಾಲ್ಕೂ ಕಡೆಗಳಿಂದ ಅವರ ಮೇಲೆ ಕಟುವಾದ ಟೀಕೆ-ಟಿಪ್ಪಣಿಗಳು ಕೇಳಿ ಬಂದುವು. ಒಬ್ಬನೆಂದ: "ಶರತ್‌ಚಂದ್ರ ಒಬ್ಬ ಮೂರ್ಖ"; ಇನ್ನೊಬ್ಬನೆಂದ: 'ಶೇಷ ಪ್ರಶ್ನೆ' ನಿಜವಾಗಿಯೂ ಒಂದು ಪ್ರಶ್ನೆಯೆ ?"; ಮತ್ತೊಬ್ಬನೆಂದ: "ಇದು 'ಶೇಷೇರ್ ಕವಿತಾ'ದ ಅನುಕರಣೆ"; "ಇದು 'ಶೇಷೇರ್ ಕವಿತಾ'ದ ಬಗೆಗಿನ ವ್ಯಂಗ್ಯ" ಎಂದು ಮಗದೊಬ್ಬನೆಂದ. ಒಬ್ಬ ವಿಮರ್ಶಕನಂತೂ ಹೀಗೆ ಬರೆದ: "ಇದು 'ಗೋರಾ'ದ ಸಂತತಿ. ಆದ್ದರಿಂದಲೇ, ಕಮಲಳ ಪಾತ್ರಚಿತ್ರಣ ಗೋರಾನ ಅನುಕರಣೆಯಲ್ಲದೆ ಬೇರೇನೂ ಅಲ್ಲ."

ಇಂಥ ಕೃತಿಗಳು ಪ್ರಕಟವಾಗುತ್ತಿದ್ದರೆ, ಹಿಂದೂ ಸಮಾಜ ಜೀವಂತವಾಗಿ ಉಳಿಯುವುದಿಲ್ಲ ಎಂದು ಭಾವಿಸಿದಂಥವರ ಸಂಖ್ಯೆಯೂ ಕಡಿಮೆಯಾಗಿರಲಿಲ್ಲ. ಪತ್ರಿಕೆಗಳಲ್ಲಿ ಅವರ ವಿರುದ್ಧವಾಗಿ ಲೇಖನಗಳು ಪ್ರಕಟವಾದುದು ಮಾತ್ರವಲ್ಲ, ವ್ಯಂಗ್ಯ ಚಿತ್ರಗಳೂ ಅಚ್ಚಾದುವು. ಟೀಕೆ-ಟಿಪ್ಪಣಿಗಳ ಪ್ರವಾಹವೇ ಹರಿಯಿತು. ಆದರೆ, ಬಂಗಾಳೀ ಮಹಿಳೆ 'ಶೇಷ ಪ್ರಶ್ನೆ'ಯನ್ನು ಒಳಮನದಿಂದ ಸ್ವೀಕರಿಸಿಬಿಟ್ಟಳು.

ಸುಮಂದ ಭವನದ ಶ್ರೀಮತಿ ಸೇನ್ ಅವರು 'ಶೇಷ-ಪ್ರಶ್ನೆ'ಯ ಬಗೆಗಿನ ವಿಮರ್ಶೆಯನ್ನು ಕುರಿತು ಶರತ್‌ಚಂದ್ರರಿಗೆ ಸುದೀರ್ಘವಾದ ಪತ್ರವನ್ನು ಬರೆದರು. ಆಕೆ ಶರತ್‌ಚಂದ್ರರನ್ನು ಮೆಚ್ಚಿಕೊಂಡಿದ್ದಂಥವರು ಹಾಗೂ ಅವರ ಬಗೆಗಿನ ಕಟುವಾದ ಟೀಕೆ-ಟಿಪ್ಪಣಿಗಳಿಂದ ತುಂಬ ಬೇಸರಪಟ್ಟುಕೊಂಡಿದ್ದಂಥವರು. ಅವರ ಪತ್ರಕ್ಕೆ ವಿವರವಾಗಿ ಉತ್ತರವನ್ನು ಕೊಡುತ್ತ ಶರತ್‌ಚಂದ್ರರು ಹೀಗೆ ಬರೆದರು: " 'ಶೇಷ ಪ್ರಶ್ನೆ'ಯ ಬಗ್ಗೆ ಚಳವಳಿ ಅಲೆಯೇಳುತ್ತಿದೆ ಎಂಬುದು ನನ್ನ ಕಿವಿಗೂ ಬಿದ್ದಿದೆ. ಕನಿಷ್ಠ ಪಕ್ಷ ಅವುಗಳಲ್ಲಿ ತುಂಬ ತೀಕ್ಷ್ಣವೂ, ಕಟುವೂ ಆದುದು ಎಲ್ಲಿಯಾದರೂ ನನ್ನ ಕಣ್ಣಿಗೆ, ಕಿವಿಗೆ ಬೀಳದೆ ಹೋದಾವು ಎಂಬ ಬಗ್ಗೆ ನನ್ನ ಹಿತೈಷಿಗಳು ಹದ್ದಿನ ಕಣ್ಣನ್ನಿಟ್ಟಿದ್ದಾರೆ. ಇಂಥ ಲೇಖನಗಳನ್ನು ತುಂಬ ಪರಿಶ್ರಮದಿಂದ ಸಂಗ್ರಹಿಸಿ, ಅವುಗಳ ಕೆಲವು ಭಾಗಗಳಿಗೆ ಕೆಂಪು, ನೀಲಿ, ಹಸಿರು ಹಾಗೂ ನೇರಳೆ ಬಣ್ಣದ ಪೆನ್ಸಿಲ್ಲುಗಳಿಂದ ಗುರುತು ಹಾಕಿ; ತಾವೇ ಅಂಚೆಯ ವೆಚ್ಚವನ್ನು ಭರಿಸಿ, ತುಂಬ ಎಚ್ಚರಿಕೆಯಿಂದ ನನಗೆ ಕಳಿಸಿಕೊಟ್ಟಿದ್ದಾರೆ. ಜೊತೆಗೆ, ಆಮೇಲೆ ಪ್ರತ್ಯೇಕವಾಗಿ ಕಾಗದ ಬರೆದು ಅವು ನನಗೆ ತಲುಪಿದೆಯೋ ಇಲ್ಲವೇ ಎಂಬುದನ್ನು ಖಚಿತಪಡಿಸಿಕೊಳ್ಳಲೂ ಪ್ರಯತ್ನಿಸಿದ್ದಾರೆ. ಅವರ ಕೋಪ, ಒತ್ತಾಯ ಮತ್ತು ಸಂವೇದನೆಗಳು ಹೃದಯವನ್ನು ತಟ್ಟುವಂಥವಾಗಿವೆ.

"ನೀನು ಪತ್ರಿಕೆಯನ್ನು ಕಳಿಸದಿದ್ದರೂ, ನಿನಗೆ ಕಡಿಮೆ ಕೋಪವೇನೂ ಬಂದಿಲ್ಲ. ವಿಮರ್ಶಕನ ಚಾರಿತ್ರ್ಯ, ಅಭಿರುಚಿ ಮತ್ತು ಕೌಟುಂಬಿಕ ಸಂಬಂಧಗಳತ್ತಲೂ ನೀನು ಕಣ್ಣು ಹಾಯಿಸಿದ್ದೀಯೆ. ಕಟುವಾದ ಮಾತನ್ನು ಹೇಳಿಬಿಡುವುದೇ ಜಗತ್ತಿನಲ್ಲಿ ತುಂಬ ಕಷ್ಟದ ಕೆಲಸವೇನೂ ಅಲ್ಲ ಎಂಬುದನ್ನೇಕೆ ನೀನು ಯೋಚಿಸಲಿಲ್ಲ. ವ್ಯಕ್ತಿಯೊಬ್ಬನನ್ನು ಅಪಮಾನಗೊಳಿಸುವುದರಿಂದ ಸ್ವತಃ ತನ್ನ ಗೌರವಕ್ಕೇ ತುಂಬ ಹೆಚ್ಚಿನ ಪೆಟ್ಟು ತಗಲುತ್ತದೆ. ಬಾಳಿನಲ್ಲಿ ಇದನ್ನು ಮರೆತುಬಿಡುವಂಥವರು ಒಂದು ದೊಡ್ಡ ವಿಚಾರವನ್ನೇ ಮರೆತಂತಾಗುತ್ತದೆ. ಇದನ್ನು ಬದಿಗಿರಿಸಿದರೂ, 'ಪಥೇರ್ ದಾಬಿ' ಮತ್ತು 'ಶೇಷ ಪ್ರಶ್ನೆ' ಅವರಿಗೆ ನಿಜವಾಗಿಯೂ ಕೆಟ್ಟದಾಗಿ ತೋರಿರಬಹುದಲ್ಲವೆ! ಲೋಕದಲ್ಲಿ ಎಲ್ಲ ಪುಸ್ತಕಗಳೂ ಎಲ್ಲರಿಗಾಗಿಯಲ್ಲ. ಅವು ಎಲ್ಲರಿಗೂ ಒಳ್ಳೆಯವೆಂದು ತೋರಿ, ಎಲ್ಲರೂ ಅವನ್ನು ಪ್ರಶಂಸಿಸಲೇ ಬೇಕೆಂಬ ಕಟ್ಟುಪಾಡೂ ಇಲ್ಲ. ಆದರೆ, ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ರೀತಿ ಸರಿಯಾಗಿಲ್ಲವೆಂಬುದನ್ನು ನಾನು ಒಪ್ಪುತ್ತೇನೆ. ಭಾಷೆ ಅಕಾರಣವಾಗಿ ಒರಟಾಗಿಬಿಟ್ಟಿದೆ, ನೋವುಂಟುಮಾಡುವಂಥದಾಗಿದೆ. ಆದರೆ, ಉತ್ತಮವಾದ ಭಾಷೆಯಾದರೋ ರಚನಾಶೈಲಿಯ ಮಹತ್ತರ ಸಾಧನೆಯಾಗಿರುತ್ತದೆ. ಮನಸ್ಸಿನಲ್ಲಿ ಕ್ಷೋಭೆ ಮತ್ತು ಆವೇಗಗಳಿಗೆ ಸಾಕಷ್ಟು ಕಾರಣಗಳಿದ್ದರೂ, ಒಳ್ಳೆಯ ವ್ಯಕ್ತಿ ಸಂಯಮರಹಿತವಾದ ಭಾಷೆಯನ್ನು ಬಳಸಬಾರದು. ತುಂಬ ನೋವನ್ನು ನುಂಗಿಕೊಂಡು ಈ ಮಾತನ್ನು ಮನಸ್ಸಿನಲ್ಲಿ ಇರಿಸಿಕೊಳ್ಳಬೇಕಾಗುತ್ತದೆ. ನಿನ್ನ ಕಾಗದದಲ್ಲಿ ಅವರಿಗಿಂತಲೂ ಹೆಚ್ಚಾಗಿ ನೀನೇ ಈ ತಪ್ಪು ಮಾಡಿದ್ದೀಯೆ. ಇದಕ್ಕಿಂತಲೂ ಹೆಚ್ಚಾಗಿ ವ್ಯಕ್ತಿ ತನ್ನನ್ನು ತಾನು ಅವಮಾನಿಸಿಕೊಳ್ಳುವುದು ಸಾಧ್ಯವಿಲ್ಲ.

"ನಿನ್ನ ಭಾವನೆಗಳು ಅಥವಾ ರೀತಿಯನ್ನು ನೋಡಿದರೆ, ಕಾಲೇಜನ್ನು ಬಿಟ್ಟು ಕೆಲವೇ ದಿನಗಳಾಗಿವೆ ಎಂದು ತೋರುತ್ತದೆ. ನಿನ್ನ ಗೆಳತಿಯರ ಮನಸ್ಸಿನಲ್ಲಿಯೂ ಇದೇ ಭಾವನೆ ಇದೆಯೆಂದು ಬರೆದಿದ್ದೀಯೆ. ಹಾಗೇನಾದರೂ ಇದ್ದರೆ, ಅದು ವಿಷಾದ ಪಡಬೇಕಾದ ಸಂಗತಿಯೇ. ನನ್ನ ಈ ಕಾಗದ ನಿನ್ನ ಕೈಗೆ ತಲುಪಿದರೆ, ಅವರಿಗೂ ತೋರಿಸು. ಶೀಲ ಸ್ತ್ರೀಯರಿಗೆ ಬಹುದೊಡ್ಡ ಆಭರಣ. ಯಾರಿಗಾಗಿಯೂ, ಯಾವುದೇ ಕಾರಣಕ್ಕಾಗಿಯೂ ಆ ಐಶ್ವರ್ಯವನ್ನು ಕಳೆದುಕೊಳ್ಳಬಾರದು.

"ಈ ಪ್ರಶ್ನೆಗಳಿಗೆ ನಾನೇಕೆ ಉತ್ತರಕೊಡುತ್ತಿಲ್ಲ ಎಂಬುದನ್ನು ನೀನು ತಿಳಿದುಕೊಳ್ಳಬಯಸಿದ್ದೀಯಲ್ಲವೆ? ನನ್ನ ಮನಸ್ಸಿಗೆ ಇಷ್ಟವಾಗುತ್ತಿಲ್ಲ ಎಂಬುದೇ ಇದಕ್ಕೆ ನಾನು ಕೊಡುವ ಉತ್ತರ. ಏಕೆಂದರೆ, ಇದು ನನ್ನ ಕೆಲಸವೂ ಅಲ್ಲ. ಆತ್ಮರಕ್ಷಣೆಯ ನೆಪದಲ್ಲಿ ಮನುಷ್ಯರನ್ನು ಅವಮಾನಿಸುವುದು ನನ್ನಿಂದ ಆಗದಕೆಲಸ. ನೋಡು, ನಾನು ಪತಿತೆಯರನ್ನು ಸಮರ್ಥಿಸುತ್ತೇನೆ ಎಂದು ಜನ ಹೇಳುತ್ತಾರಲ್ಲವೆ? ನಾನು ಅವರನ್ನು ಸಮರ್ಥಿಸುತ್ತಿಲ್ಲ. ಆದರೆ, ಅವರನ್ನು ಅಪಮಾನಿಸಲು ನನ್ನ ಮನಸ್ಸು ಒಪ್ಪುತ್ತಿಲ್ಲ. ಅವರೂ ಮನುಷ್ಯರು; ಅವರಿಗೂ ಫಿರ್ಯಾದು ಮಾಡುವ ಹಕ್ಕಿದೆ, ಮಹಾಕಾಲನ ಆಸ್ಥಾನದಲ್ಲಿ ಒಂದು ದಿವಸ ಖಂಡಿತವಾಗಿಯೂ ಇದರ ವಿಚಾರಣೆಯಾಗುತ್ತದೆ ಎಂದಷ್ಟೇ ನಾನು ಹೇಳುವುದು. ಸಂಸ್ಕಾರಗಳಿಂದ ಕುರುಡರಾಗಿರುವಂಥ ಜನ ಈ ಮಾತನ್ನು ಯಾವ ರೀತಿಯಲ್ಲೂ ಒಪ್ಪಲು ಸಿದ್ಧರಿಲ್ಲ.

ಆದರೆ, ಇವೆಲ್ಲ ಸಂಪೂರ್ಣವಾಗಿ ನನ್ನ ವೈಯಕ್ತಿಕ ವಿಷಯಗಳು. ಇನ್ನೇನೂ ನಾನು ಹೇಳಬಯಸುವುದಿಲ್ಲ.

"ನಿಮ್ಮ 'ಶೇಷ ಪ್ರಶ್ನೆ'ಯಲ್ಲಿ ಒಂದು ವಿಶಿಷ್ಟ ಮತವಾದವನ್ನು ಪ್ರಚಾರಮಾಡುವ ಪ್ರಯತ್ನ ಮಾಡಿದ್ದೀರಿ ಎಂದು ಅನೇಕರು ಹೇಳುತ್ತಾರೆ. ಇದು ನಿಜವೆ ?' ಎಂದು ಸಂಕೋಚದಿಂದ ನೀನು ಪ್ರಶ್ನಿಸಿದ್ದೀಯೆ.

"ನಿಜವೇ ಸುಳ್ಳೇ ಎಂದೇನೂ ನಾನು ಹೇಳುವುದಿಲ್ಲ. ಆದರೆ, 'ಪ್ರಚಾರ ಮಾಡಿದ್ದಾರೆ, ತಪ್ಪು ಮಾಡಿದ್ದಾರೆ' ಎಂದು ಹೇಳಿಕೊಂಡು ಗಲಾಟೆ ಎಬ್ಬಿಸಿದ ಮಾತ್ರಕ್ಕೆ ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಬಿಡುವಂಥ ಅಥವಾ 'ಇಲ್ಲ, ಇಲ್ಲ' ಎಂದು ಎತ್ತರಿಸಿದ ಧ್ವನಿಯಲ್ಲಿ ಪ್ರತಿಭಟನೆಗೆ ತೊಡಗುವಂಥ ವ್ಯಕ್ತಿ ನಾನಲ್ಲ. ಹೀಗಾಗಿ, ಇದಕ್ಕೆ ಪ್ರತಿಯಾಗಿ, 'ಹೀಗೆ ಮಾಡಿದ್ದರಿಂದ ಮಹಾಪರಾಧ ಮಾಡಿದಂತಾಯಿತೆ ?' ಎಂದು ನಾನೇ ಕೇಳಿಬಿಟ್ಟರೆ, ವಾದಿಪ್ರತಿವಾದಿಗಳಲ್ಲಿ ಯಾರೂ ಅದಕ್ಕೆ ಸುನಿಶ್ಚಿತವಾದ ಉತ್ತರವನ್ನು ಕೊಡಲಾರರು..... ಜಗತ್ತಿನ ಚಿರಸ್ಮರಣೀಯ ಕಾವ್ಯ ಅಥವಾ ಸಾಹಿತ್ಯದಲ್ಲಿ ಒಂದಲ್ಲ ಒಂದು ರೂಪದಲ್ಲಿ ಈ ವಸ್ತು ಇದ್ದೇ ಇವೆ ಎಂದು ಅವರು ಹೇಳಲಾರರು. ಈ ವಸ್ತು 'ರಾಮಾಯಣ'ದಲ್ಲಿದೆ, 'ಮಹಾಭಾರತದ'ದಲ್ಲಿದೆ, ಕಾಳಿದಾಸನ ಕಾವ್ಯಗ್ರಂಥಗಳಲ್ಲಿದೆ, ಬಂಕಿಮರ 'ಆನಂದಮಠ'ದಲ್ಲಿದೆ, 'ದೇವಿ ಚೌಧರಾನಿ'ಯಲ್ಲಿದೆ; ಇಬ್ಸನ್, ಮೆಟರ್‌ಲಿಂಕ್ ಮತ್ತು ಟಾಲ್‌ಸ್ಟಾಯ್ ಅವರಲ್ಲಿದೆ..... ಆದರೆ, ಇದರಿಂದ ಏನಾದೀತು ? 'ಕಲೆಗಾಗಿ ಕಲೆ' ಎಂಬ ಘೋಷಣೆ ಪಶ್ಚಿಮದಿಂದ ಇಲ್ಲಿಗೆ ಬಂದಿದೆ. ಇದೆಲ್ಲ ಅವರ ಉಗುರಿನ ತುದಿಯಲ್ಲಿದೆ. ಕಥೆಯ ಕಥನೀಯತ್ವವೇ ಅದರ ಭೂಮಿ ಎನ್ನುತ್ತಾರೆ. ಏಕೆಂದರೆ, ಅದರಿಂದ ಚಿತ್ತರಂಜನೆಯೇನೂ ಆಗಿಲ್ಲವಲ್ಲ ? ತಾಯಿ, ಯಾರ ಚಿತ್ತರಂಜನೆಯ ಪ್ರಶ್ನೆ ಇದರಲ್ಲಿದೆ ? ನನ್ನದೆ ? ಹಳ್ಳಿಯ ಮುಖಂಡರು ಯಾರು ? ನಾನು ಮತ್ತು ನನ್ನ ಮಾವ !

"ಚಿತ್ತ ರಂಜನೆ ಎಂಬ ಶಬ್ದವನ್ನು ಎತ್ತಿಕೊಂಡು ನೀನು ಸಾಕಷ್ಟು ಮಾತುಗಳನ್ನು ಬರೆದಿದ್ದೀಯೆ, ಇದರಲ್ಲಿ ಎರಡು ಶಬ್ದಗಳಿವೆ ಎಂಬುದನ್ನು ನೀನು ಒಮ್ಮೆಯೂ ಯೋಚಿಸಿ ನೋಡಿಲ್ಲ. 'ರಂಜನೆ' ಎಂಬುದು ಮಾತ್ರವಲ್ಲ; 'ಚಿತ್ತ' ಎಂಬ ಒಂದು ವಸ್ತುವೂ ಇದೆ. ಅದು ಬದಲಾಗುತ್ತಲೂ ಇರುತ್ತದೆ. ಚಿತ್ಪುರದ ಚಾವಡಿಯಲ್ಲಿ 'ಗುಲ್-ಬಕಾವಲಿ'ಯ ಜಾಗವಿದೆ. ಅದರ ಬಗ್ಗೆ ಅವಳು ಚಿತ್ತರಂಜನನ ಹಕ್ಕನ್ನು ಸ್ಥಾಪಿಸುತ್ತಾಳೆ. ಆದರೆ, ಈ ಹಕ್ಕಿನ ಬಲದ ಮೇಲೆ ಬರ್ನಾಡ್ ಷಾ ಅವರನ್ನು ನಿಂದಿಸುವ ಹಕ್ಕೇನೂ ದೊರೆಯುವುದಿಲ್ಲ.....

"ಕೊನೆಯಲ್ಲಿ ನಿನಗೆ ಒಂದು ಮಾತನ್ನು ಹೇಳುತ್ತೇನೆ. ಸಮಾಜ-ಸಂಸ್ಕಾರಗಳ ಬಗ್ಗೆ ನನಗೆ ಯಾವ ದುರಭಿಪ್ರಾಯವೂ ಇಲ್ಲ. ಆದ್ದರಿಂದಲೇ, ಈ ಪುಸ್ತಕದಲ್ಲಿ ಮಾನವನ ದುಃಖ ಮತ್ತು ವೇದನೆಗಳ ವಿವರಣೆ ಇದೆ. ಬಹುಶಃ ಸಮಸ್ಯೆಯನ್ನೂ ಮುಂದಿರಿಸಲಾಗಿದೆ. ಆದರೆ, ಅದಕ್ಕೆ ಪರಿಹಾರವನ್ನೇನೂ ಸೂಚಿಸಿಲ್ಲ. ಈ ಕೆಲಸ ಬೇರೆಯವರು ಮಾಡಬೇಕಾದ್ದು. ನಾನು ಕಥೆಗಾರ ಮಾತ್ರ. ಅದನ್ನು ಬಿಟ್ಟು ಬೇರೇನೂ ಅಲ್ಲ."

ರಾಧಾರಾನೀ ದೇವಿಯವರಿಗೆ ಹೀಗೆಂದು ಬರೆದಿದ್ದರು: " 'ಶೇಷ ಪ್ರಶ್ನೆ' ನಿನಗೆ ಇಷ್ಟವಾಯಿತು ಎಂಬುದನ್ನು ಕೇಳಿ ನನಗೆ ತುಂಬ ಸಂತೋಷವಾಯಿತು. ಈ ಪುಸ್ತಕ ಇಷ್ಟವಾಗುವಂಥ ವ್ಯಕ್ತಿಗಳು ಬಹುಶಃ ಬಂಗಾಳದಲ್ಲಿಯೇ ಇಲ್ಲವೇನೋ ಎಂದು ಯೋಚಿಸುತ್ತಿದ್ದೆ. ಅನ್ನಿಸಿಕೊಳ್ಳುವುದಷ್ಟೇ ನನ್ನ ಹಣೆಯಲ್ಲಿ ಬರೆದಿದೆ ಎಂದು ಕೊಂಡಿದ್ದೆ. ಆದರೆ, ಅಷ್ಟೊಂದು ಹೆದರಬೇಕಾದ ಅಗತ್ಯವೇನೂ ಇಲ್ಲವೆಂದು ನನಗೀಗ ತೋರುತ್ತದೆ. ಮರುಭೂಮಿಯಲ್ಲೂ ಅಲ್ಲಲ್ಲಿ ತಂಪಿನ ತಾಣಗಳಿರುತ್ತವೆ. ಅನೇಕ ಕಾಗದಗಳನ್ನು ಓದಿದೆ. ಒಬ್ಬ ಹೆಂಗಸು ಹೀಗೆಂದು ಬರೆದಿದ್ದಾಳೆ: ನನ್ನ ಬಳಿ ಸಾಕಷ್ಟು ಹಣವಿದ್ದಿದ್ದರೆ, ಈ ಪುಸ್ತಕವನ್ನು ಪುಕ್ಕಟೆಯಾಗಿ 'ಬೈಬಲ್'ನಂತೆ ಎಲ್ಲರಿಗೂ ಹಂಚಿಬಿಡುತ್ತಿದ್ದೆ. ಒಂದು ಕಡೆಯ ಸಂಗತಿ ಹೀಗಿದೆ. ಇನ್ನೊಂದು ಕಡೆ ಈಗ ಎಲ್ಲವೂ ಅಡಗಿಕೊಂಡಿದೆ. ಆರಂಭಗೊಂಡ ಮೇಲೆ ಅದೇನು ಎಂಬುದು ಗೊತ್ತಾಗುತ್ತದೆ. ಅತ್ಯಾಧುನಿಕ ಸಾಹಿತ್ಯ ಹೇಗಿರಬೇಕು ಎಂಬುದರ ಸೂಚನೆ ಇದರಲ್ಲಿ ಸ್ವಲ್ಪ ಮಟ್ಟಿಗೆ ಕಾಣಿಸುತ್ತದೆ. ಮುದುಕನಾಗಿಬಿಟ್ಟಿದ್ದೇನೆ. ಶಕ್ತಿ-ಸಾಮರ್ಥ್ಯಗಳೆಲ್ಲ ಪಶ್ಚಿಮ ದಿಗಂತದಲ್ಲಿ ಮುಳುಗಿ ಹೋಗಲಿರುವ ಸೂಚನೆ ಹಗಲು-ರಾತ್ರಿ ನನ್ನೊಳಗೇ ನನಗೆ ಅನುಭವಕ್ಕೆ ಬರುತ್ತಿದೆ. ಈಗ ಶಕ್ತಿವಂತರಾಗಿರುವ ಹೊಸ ಸಾಹಿತಿಗಳಿಗೆ ಇಷ್ಟು ಮಾತ್ರ ಹೇಳಿದ್ದೇನೆ. 'ಇನ್ನು ಮುಂದೆ ಇದೆಲ್ಲ ನೀವು ಮಾಡಬೇಕಾದ ಕೆಲಸ; ಚೆನ್ನಾಗಿ ತೊಳಗಿ-ಬೆಳಗಿ.' ಶೋಭಸಂಪತ್ತನ್ನು ಹೆಚ್ಚಿಸುವ ಹೊಣೆ ಇನ್ನು ಅವರದೇ. ಭಾಷೆಯ ಮೇಲಿನ ನನ್ನ ಪ್ರಭುತ್ವ ಎಂದೂ ಕಡಿಮೆಯೇ. ಶಬ್ದ ಸಂಪತ್ತು ಎಷ್ಟು ಸಾಮಾನ್ಯವಾಗಿದೆ ಎಂಬುದು ಇತರರಿಗೆ ಗೊತ್ತಿಲ್ಲದೆ ಇದ್ದರೂ, ನಿಮಗೆ ತಿಳಿಯದ್ದೇನೂ ಅಲ್ಲ. ಜೊತೆಗೆ, ಹೇಳಬೇಕಾದ ಇನ್ನೂ ಅನೇಕ ಮಾತುಗಳು ಉಳಿದುಹೋಗಿವೆ. ಕಾಲ ಮಿಂಚಿ ಹೋಗದಿರಲಿ ಎಂದು 'ಶೇಷ ಪ್ರಶ್ನೆ'ಯಲ್ಲಿ ಒಂದಿಷ್ಟು ಹೇಳುವ ಪ್ರಯತ್ನ ಮಾಡಿದ್ದೇನೆ."

ಭೂಪೇಂದ್ರಕಿಶೋರ ರಕ್ಷಿತಾ ರಾಯ್ ಅವರಿಗೆ ಹೀಗೆ ಬರೆದಿದ್ದರು: " 'ಶೇಷಪ್ರಶ್ನೆ' ಕಾದಂಬರಿ ನಿಮಗೆ ತುಂಬ ಇಷ್ಟವಾಗಿದೆ ಎಂಬುದನ್ನು ತಿಳಿದು ನನಗೆ ಸಂತೋಷವಾಗಿದೆ. ಇದರಲ್ಲಿ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿದ್ದೇನೆ. ಆದರೆ, ಪರಿಹಾರವನ್ನು ಅರಸುವ ಹೊಣೆ ನಿಮ್ಮ ಮೇಲೆಯೇ ಇದೆ. ಭವಿಷ್ಯದಲ್ಲಿ ಈ ಭಾರಿ ಹೊಣೆಯನ್ನು ಹೊರಬೇಕಾಗಿ ಬರುವ ಸಂಭಾವ್ಯತೆಯೇ ಬಹುಶಃ ನಿಮಗೆ ಆನಂದವನ್ನುಂಟುಮಾಡಿದೆ. ಆದರೆ, ಈ ಪುಸ್ತಕ ಅನೇಕರಿಗೆ ನಿರಾಶೆಯನ್ನು ಉಂಟು ಮಾಡುತ್ತದೆ ಎಂಬುದು ನನ್ನ ನಂಬಿಕೆ. ಅವರಿಗೆ ಯಾವ ಬಗೆಯ ಆನಂದವೂ ದೊರೆಯುವುದಿಲ್ಲ. ಮೊದಲನೆಯದಾಗಿ, ಇದರಲ್ಲಿ ಇರುವ ಕಥೆಯ ಅಂಶ ತುಂಬ ಕಡಿಮೆ. ಬಹಳ ವೇಗವಾಗಿ ಸಮಯವನ್ನು ಕಳೆಯುವ ಅಥವಾ ನಿದ್ದೆಯ ಉಣಿಸಿ ನಂತೆ ನಿಶ್ಚಿಂತರಾಗಿ, ಆರಾಮವಾಗಿ ಅರ್ಧನಿಮೀಲಿತ ನಯನಗಳಿಂದ ಆನಂದಾ ನುಭವ ಪಡೆಯುವ ಸಂಭವ ಇಲ್ಲಿಲ್ಲ. ಇದು ಇಷ್ಟವಾಗುವ ವಿಚಾರವೇನೂ ನನ್ನ ಮನಸ್ಸಿನಲ್ಲಿರಲಿಲ್ಲ. ಆದರೂ, ಕೆಲವರಾದರೂ ಇದನ್ನು ಅರ್ಥಮಾಡಿ ಕೊಳ್ಳುತ್ತಾರೆ ಹಾಗೂ ನನ್ನ ಉದ್ದೇಶ ಸಫಲವಾಗುತ್ತದೆ ಎಂದು ಭಾವಿಸಿ ಬರೆದಿದ್ದೆ. ಎಲ್ಲ ಬಗೆಯ ರಸಗಳೂ ಎಲ್ಲರಿಗಾಗಿ ಇರುವುದಿಲ್ಲ. ಅಧಿಕಾರೀ ಭೇದವನ್ನು ನಾನು ಒಪ್ಪುತ್ತೇನೆ.

"ಇನ್ನೊಂದು ವಿಚಾರ ನೆನಪಿತ್ತು. ಇದು ಅತ್ಯಾಧುನಿಕ ಸಾಹಿತ್ಯ ಎಂಬುದೇ ಆ ವಿಚಾರ. ಈ ದಿಕ್ಕಿನಲ್ಲಿ ಒಂದು ಸಂಕೇತವನ್ನು ಬಿಟ್ಟು ಹೋಗುವೆನೆಂದು ಭಾವಿಸಿದ್ದೆ. ಮುದುಕನಾಗಿ ಬಿಟ್ಟಿದ್ದೇನೆ. ಬರೆಯುವ ಶಕ್ತಿ ಬಹುಶಃ ಅಸ್ತಮಿಸುತ್ತಿದೆ. ಕೊಳಕನ್ನೆಬ್ಬಿಸದೆಯೂ ಒಳ್ಳೆಯ ಸಾಹಿತ್ಯವನ್ನು ಬರೆಯಬಹುದು ಎಂಬುದರ ಇಣುಕು ನೋಟ ಮುಂಬರಲಿರುವ ಆ ನಾಳೆಯ ಲೇಖಕರಾದ ನಿಮಗೆ ದೊರೆಯಬಹುದು ಎಂದು ಭಾವಿಸಿದ್ದೇನೆ. ಕೇವಲ ಕೋಮಲ-ಪೇಲವ ರಸಾನುಭೂತಿಯನ್ನು ಮಾತ್ರವಲ್ಲ, ಬುದ್ಧಿಗೆ ಬಲವನ್ನೊದಗಿಸುವಂಥ ಭೋಜನವನ್ನು ಒದಗಿಸುವುದೂ ಅತ್ಯಾಧುನಿಕ ಸಾಹಿತ್ಯದ ಒಂದು ಮುಖ್ಯಕಾರ್ಯ. ಇನ್ನು ಮುಂದೆ, ನೀವು ಬರವಣಿಗೆಗೆ ತೊಡಗಿದಾಗ ತುಂಬ ಓದಬೇಕಾಗುತ್ತದೆ, ತುಂಬ ಯೋಚಿಸಬೇಕಾಗುತ್ತದೆ. ಮನರಂಜನೆಯ ಹಗುರವಾದ ಹೊರೆಯನ್ನು ಕೊಡುವಷ್ಟರಿಂದಲೇ ನಿಮಗೆ ಮುಕ್ತಿ ದೊರೆಯುವುದಿಲ್ಲ."

ಇವರೆಲ್ಲ ಶರತ್‌ಚಂದ್ರರ ಅಭಿಮಾನಿಗಳೂ, ಪ್ರಶಂಸಕರೂ ಆಗಿದ್ದರು. ಅವರಿಗೆ ಈ ಕೃತಿ ಇಷ್ಟವಾಯಿತು ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ, ಸುಪ್ರಸಿದ್ಧ ಕ್ರಾಂತಿಕಾರಿಗಳಾಗಿದ್ದ ಮಾನವೇಂದ್ರನಾಥ ರಾಯ್ ಅವರೂ ಇದನ್ನು ಜೈಲಿನಲ್ಲಿ ಓದಿ, ಇದರಿಂದ ಪ್ರಭಾವಿತರಾದರು ಎಂಬುದೀಗ ಆಶ್ಚರ್ಯದ ಸಂಗತಿ. ಅವರು ಹೀಗೆಂದು ಬರೆದಿದ್ದರು:

" 'ಶೇಷ ಪ್ರಶ್ನೆ'ಯನ್ನು ಈ ಯುಗದಲ್ಲಿ ಸಿಂಕ್ಲೇರ್ ಲೀವಿಸ್ ಅವರ ಪುಸ್ತಕಗಳೊಂದಿಗೆ ಹೋಲಿಸಲಾಗುವುದಿಲ್ಲ. ಆದರೆ, ಅನಾತೋಲೆ ಫ್ರಾನ್ಸ್, ಜೋಲಾ ಮತ್ತು ಇಬ್ಸನ್ ಅವರೊಂದಿಗೆ ಇದನ್ನು ಚೆನ್ನಾಗಿ ಹೋಲಿಸಬಹುದು. ಇದುವರೆಗೆ ಇದಿನ್ನೂ ಯಾವುದೇ ಭಾಷೆಗೆ ಅನುವಾದಗೊಂಡಿಲ್ಲ. ಒಬ್ಬ ಹುಡುಗಿ ಈ ಪುಸ್ತಕದ ಕೇಂದ್ರಬಿಂದು. ಅವಳು ನಿಜವಾಗಿಯೂ ದಾಯೊನೀಸಸಳಂತೆಯೇ ಇದ್ದಾಳೆ. ಯುಗಯುಗಗಳಿಂದ ಸಮಾದೃತವಾಗಿ ಬಂದಿರುವ ವಿಗ್ರಹಗಳನ್ನು, ಸಂಪ್ರದಾಯಗಳನ್ನು ಮತ್ತು ಪರಂಪರೆಗಳನ್ನು ಅವಳು ಕಾಲಿನಿಂದ ಹೊಸಕಿ ಹಾಕುತ್ತಾಳೆ ಹಾಗೂ ಧಾರ್ಮಿಕ ರೂಪದಲ್ಲಿ ರವೀಂದ್ರನಾಥರನ್ನು ಹಾಗೂ ಗಾಂಧೀಜಿಯವರನ್ನು ಅನುಸರಿಸುವ ನವಯುವಕ ಭಾರತನಿಗೆ ಪಾಠ ಕಲಿಸುತ್ತಾಳೆ. ಇದು ಹೇಗಾದರೂ ಇರಲಿ, ಶರತ್‌ಚಂದ್ರರ ಈ 'ದಾಯೊನೀಸೀಯ' ಸ್ವರೂಪದ ಹುಡುಗಿಯನ್ನು ಪಾಶ್ಚಾತ್ಯ ಲೋಕಕ್ಕೆ ಪರಿಚಯಿಸಿಕೊಡುವ ವ್ಯಕ್ತಿ ಇನ್ನೊಬ್ಬ ಭಾರತೀಯನಿಗೆ ನೊಬೆಲ್ ಪ್ರಶಸ್ತಿ ದೊರೆಯುವ ಹಾದಿಯನ್ನು ಸುಗಮಗೊಳಿಸುತ್ತಾನೆ. ನೊಬೆಲ್ ಪ್ರಶಸ್ತಿಗೆ ರವೀಂದ್ರರಿಗಿಂತಲೂ ಶರತ್‌ಚಂದ್ರರು ಕಡಿಮೆ ಅರ್ಹರೇನೂ ಅಲ್ಲವೆಂಬ ನನ್ನ ಮಾತನ್ನು ನಂಬು. ವೈಯಕ್ತಿಕವಾಗಿ 'ಶೇಷ ಪ್ರಶ್ನೆ' 'ಗೀತಾಂಜಲಿ'ಗಿಂತಲೂ ಶ್ರೇಷ್ಠವಾದುದೆಂದು ನಾನು ನಂಬಿದ್ದೇನೆ. ಉಚ್ಚಸಾಹಿತ್ಯವನ್ನು ಒರೆಹಚ್ಚಿ ನೋಡುವ ನನ್ನ ಅರ್ಹತೆ ಪ್ರಶ್ನಾರ್ಹವಾಗಿರಬಹುದು. ಆದರೆ, ಇದು ಅಭಿರುಚಿಯ ವಿಚಾರ. 'ಶೇಷ ಪ್ರಶ್ನೆ' ಭಾರತೀಯ ಪುನರುಜ್ಜೀವನದ ಮೈಲಿಗಲ್ಲಿನಂತಿದೆ. ಇದು ಬಂಗಾಳಿ ರೊಮ್ಯಾಂಟಿಕ್‌ವಾದ ಹಾಗೂ ರಹಸ್ಯವಾದದ ಭಾವವಿಚಲತೆಯಿಂದ ಗ್ರಸ್ತವೂ ಸ್ಥಿರವೂ ಆಗಿಬಿಟ್ಟಿರುವ ವಾತಾವರಣವನ್ನು

ದೂರಮಾಡಿತು. ಶರತ್‌ಚಂದ್ರರ ಇತರ ಕೃತಿಗಳಲ್ಲಿನ ಪಾತ್ರಗಳು ಎಷ್ಟರ ಮಟ್ಟಿಗೆ ಸಿಡಿಮಿಡಿಗುಟ್ಟುತ್ತಿದ್ದುವೆಂದರೆ ಅವು ಪ್ರತಿಭಟನೆಯನ್ನೂ ತೋರುತ್ತಿದ್ದುವು; ಆದರೆ, ಕೊನೆಯಲ್ಲಿ ಅವು ಸಂತೋಷದಿಂದಲೇ ತಲೆಬಾಗಿಬಿಡುತ್ತಿದ್ದುವು. ಶರತ್‌ಚಂದ್ರರಿಗೆ ಇದ್ದುದು ಎರಡೇ ದಾರಿಗಳು-ಅವರು ನಿಷ್ಠುರ ಪ್ರತಿಕ್ರಿಯೆಯತ್ತ ನಡೆದ ತಮ್ಮ ಮೊದಲಿನ ಪಾತ್ರಗಳ ಕತ್ತು ಹಿಸುಕಿ ಬಿಡಬೇಕಾಗಿತ್ತು; ಆದರೆ, ಅವರು ಹಾಗೆ ಮಾಡಲಿಲ್ಲ; ಎರಡನೆಯ ಹಾದಿಯನ್ನು ಆಯ್ದುಕೊಂಡರು. ಅವರು ಮುಂದೆ ಮುಂದೆ ಹೆಜ್ಜೆ ಇಡತೊಡಗಿದರು ಹಾಗೂ ಕೊನೆಗೆ 'ದಾಯೊನೀಸೀಯ' ಕನ್ಯೆಯನ್ನು ಸೃಷ್ಟಿಸಿಬಿಟ್ಟರು. ಅವಳ ಕೈಯಲ್ಲಿ ಇರುವುದು ಪ್ರತಿಭಟನೆಯ ಬಾವುಟವಲ್ಲ, ಕ್ರಾಂತಿಯ ವೈಜಯಂತಿ. ಇಷ್ಟಾಗಿಯೂ, ಈ ಕೃತಿ ಆದರ್ಶವಾದದ ಪ್ರತೀಕವಾಗಿ ಬಿಟ್ಟಿದೆ. ದೇಶದ ಇಂದಿನ ಸ್ಥಿತಿಯಲ್ಲಿ ಹೀಗೆ ಆಗುವುದು ಅನಿವಾರ್ಯವೂ ಹೌದು. ಆದರೆ ಈ ಆದರ್ಶವಾದಕ್ಕೆ 'ಕಲೆಗಾಗಿ ಕಲೆ' ಎಂಬ ದೃಷ್ಟಿಕೋನವೇ ಕಾರಣ ಹಾಗೂ ಈ ದೃಷ್ಟಿಕೋನ ಆದರ್ಶವಾದದ ನಿಕೃಷ್ಟತಮ ರೂಪವೇ ಆಗಿದೆ."

ಶರತ್‌ಚಂದ್ರರ ಸ್ತ್ರೀಪಾತ್ರಗಳ ಕ್ರಮಾಗತ ವಿಕಾಸದ ಚರಮ ಪರಿಣತಿಯೇ ಕಮಲಳ ಪಾತ್ರದಲ್ಲಿ ಮೈದೋರಿದೆ ಎಂದು ರಾಯ್ ಅವರು ಸರಿಯಾಗಿಯೇ ಹೇಳಿದ್ದಾರೆ. ಆಕೆ ಎಲ್ಲ ಬಂಧನಗಳಿಂದಲೂ ಮುಕ್ತಳಾಗಿರುವ ನಾರಿಯ ಪ್ರತೀಕವಾಗಿದ್ದಾಳೆ. ಆ ನಾರಿ ಇನ್ನೂ ಮಾನಸಿಕ ಸೃಷ್ಟಿಯೇ ಆಗಿದ್ದರೂ, ರಕ್ತ-ಮಾಂಸಗಳಿಂದ ಕೂಡಿರದೇ ಇದ್ದರೂ, ಆ ಪಾತ್ರದ ಮೂಲಕ ಶರತ್‌ಚಂದ್ರರು ನವಯುಗದ ಇಣುಕು ನೋಟವನ್ನು ಕೊಟ್ಟಿದ್ದಾರೆ. ಈ ಪ್ರಭಾವವನ್ನು ಮೂಡಿಸುವ ಸಲುವಾಗಿಯೇ ಅವರು 'ಶೇಷ ಪ್ರಶ್ನೆ'ಯನ್ನು ಬರೆದರು. ಚಂದನ ನಗರದ ಸಾಹಿತ್ಯಗೋಷ್ಠಿಯಲ್ಲಿ ಅವರು ಈ ಮಾತನ್ನು ಸ್ಪಷ್ಟವಾಗಿಯೇ ಹೇಳಿದ್ದಾರೆ: "ನನ್ನ ಅಭಿಪ್ರಾಯ ಇದು: ಪ್ರಾಚೀನತೆಯ ಬಗ್ಗೆ ಅಭಿಮಾನಪಟ್ಟುಕೊಳ್ಳುವುದರಿಂದ ಮಾತ್ರವೇ ಏನನ್ನೂ ಸಾಧಿಸಿದಂತಾಗುವುದಿಲ್ಲ. ಹೊಸತನ್ನು ಸೃಷ್ಟಿಸಿ. ಜಾತಿಯ ಬಗೆಗೂ ಇದೇ ಮಾತು ಅನ್ವಯಿಸುತ್ತದೆ. ಜಾತಿ ಇಲ್ಲದಿದ್ದರೆ, ಅದರಿಂದ ಏನು ನಷ್ಟ ಆಗುತ್ತಿತ್ತು? ವಂಶ ಪರಿಚಯವನ್ನು ಹೇಳಿಕೊಳ್ಳಲು ಏನೂ ಇಲ್ಲದಂಥ ಹುಡುಗರು ನಮಗೆ ಕಾಣಸಿಕ್ಕುತ್ತಾರೆ. ಅವರು ತಮ್ಮ ಕಾಲಮೇಲೆ ತಾವು ನಿಂತಿರುತ್ತಾರೆ; ಯಶಸ್ವಿಯಾಗಿರುತ್ತಾರೆ. ನನ್ನ ಅಭಿಪ್ರಾಯವೂ ಅದೇ. 'ಶೇಷ ಪ್ರಶ್ನೆ' ಎಂಬ ನನ್ನ ಪುಸ್ತಕವೊಂದು ಅರ್ಧಾಂತಿಕವಾಗಿ ಉಳಿದುಬಿಟ್ಟಿದೆ. ಅದರಲ್ಲಿ ನಾನು ಇದೇ ಪ್ರಶ್ನೆಯನ್ನು ಚರ್ಚಿಸಿದ್ದೇನೆ. ಇಂದಿನ ವಿದ್ಯಮಾನಗಳ ಅನೇಕ ಮುಖಗಳತ್ತ ಅದರಲ್ಲಿ ನಾನು ದೃಷ್ಟಿ ಹರಿಸಿದ್ದೇನೆ. ಪುಸ್ತಕ ಇನ್ನೂ ಪೂರ್ಣವಾಗಿಲ್ಲ. ನಾಲ್ಕಾರು ದಿನಗಳಲ್ಲಿ ಅದು ಪೂರ್ಣಗೊಳ್ಳಬಹುದು."

ಇನ್ನೊಂದು ಕಡೆ ಅವರು ಹೀಗೆ ಬರೆದಿದ್ದಾರೆ: "ಕೊನೆ ಮುಟ್ಟುವ ಹೊತ್ತಿಗೆ 'ಶೇಷ ಪ್ರಶ್ನೆ'ಯಲ್ಲಿ ನಾನು ಅನೇಕರಿಗೆ ಬಹುಶಃ ವ್ಯಥೆಯನ್ನುಂಟುಮಾಡುತ್ತೇನೆ. ಆದರೂ, ಸರಿಯೆಂದು ಭಾವಿಸಿರುವುದನ್ನು ಹೇಳಲೇಬೇಕು. ಆಮೇಲೆ ಏನಾಗುತ್ತದೋ ನೋಡೋಣ."

ವಯೋವೃದ್ಧರು ಮತ್ತು ಹಳೆಯ ವಿಚಾರಧಾರೆಯವರು ಮಾತ್ರವೇ 'ಶೇಷ

ಪ್ರಶ್ನೆ'ಯನ್ನು ವಿರೋಧಿಸಲಿಲ್ಲ. ಹೊಸ ಲೇಖಕರು ಕೂಡ ಇದನ್ನು ಕಟುವಾಗಿ ಟೀಕಿಸಿದರು. ಅನ್ನದಾಶಂಕರ್ ರಾಯ್ ಮತ್ತು ಪ್ರಬೋಧ ಕುಮಾರ ಸಾನ್ಯಾಲ್ ಅವರಿಬ್ಬರೂ ಶರತ್‌ಚಂದ್ರರ ಅಭಿಮಾನಿಗಳಾಗಿದ್ದರು. ಆದರೆ 'ಶೇಷ ಪ್ರಶ್ನೆ' ಅವರಿಗೆ ನಿರಾಶೆಯನ್ನುಂಟುಮಾಡಿತು. ಪ್ರಬೋಧ ಕುಮಾರರು 'ಸುದೇಶ' ಪತ್ರಿಕೆಯಲ್ಲಿ ಹೀಗೆ ಬರೆದರು: "ಶರತ್‌ಚಂದ್ರರಿಗೆ ಆಧುನಿಕ ಆಲೋಚನೆಗಳ ಮತ್ತು ಬುದ್ಧಿಮತ್ತೆಯ ಸುತರಾಂ ಪರಿಚಯವೇ ಇಲ್ಲ. ಪ್ರಗತಿ ಮತ್ತು ವಿಮೋಚನೆಗಳ ಬಗೆಗಿನ ಅವರ ಸಮರ್ಥನೆ ಪೊಳ್ಳಾಗಿದೆ."

ಅದು ಕೇವಲ ತರ್ಕಜಾಲವೆಂದು ಇನ್ನೂ ಕೆಲವರು ಹೇಳಿದರು. ಕಥೆ ನೆಪಮಾತ್ರಕ್ಕಿದೆ; ಪಾತ್ರಗಳು ಹೇರಳವಾಗಿವೆ; ಆದರೆ, ಅವರೆಲ್ಲ ರಕ್ತಮಾಂಸ ರಹಿತವಾಗಿವೆ, ಇದರಲ್ಲಿ ಸಾಹಿತ್ಯವಾಗಲೀ, ರಸಸೌಂದರ್ಯವಾಗಲೀ, ಭಾವಸೌಷ್ಠವ ವಾಗಲೀ ಇಲ್ಲ; ಇದರಲ್ಲಿ ಇರುವುದೆಲ್ಲ ವಿಕೃತ ಲೈಂಗಿಕ ಭಾವನೆಗಳ ನಿರೂಪಣೆ; ಲೇಖಕನೇ ಎಲ್ಲವನ್ನೂ ಹೇಳಿಬಿಡಬಯಸುತ್ತಾನೆ; 'ಚರಿತ್ರ ಹೀನ' ಮೊದಲಾದ ಕೃತಿಗಳಲ್ಲಿ ಕೇಳಿಬರುವಂಥ, ಪಾತ್ರಗಳ ಪ್ರಾಣದ ಕರೆ ಇಲ್ಲೇಕೆ ಕೇಳಿಸುವುದಿಲ್ಲ ?- ಎಂದೆಲ್ಲ ಹೇಳಿದರು.

ಈ ಕಟುವಾದ ಟೀಕೆಗಳಿಂದಾಗಿ ಹೊಸಲೇಖಕರೊಂದಿಗಿನ ಅವರ ಸಂಬಂಧಗಳು ಸ್ವಲ್ಪ ದೂರ ಸರಿದುಬಿಟ್ಟುವು. ಆದರೆ, ಈ ಆರೋಪಗಳೆಲ್ಲ ಆಧಾರರಹಿತ ವಾಗಿದ್ದುವೆಂಬುದರಲ್ಲಿ ಅನುಮಾನವೇನೂ ಇಲ್ಲ. 'ಶೇಷ ಪ್ರಶ್ನೆ'ಯ ಬಹುದೊಡ್ಡ ದೌರ್ಬಲ್ಯವೆಂದರೆ ಅದು ವಿಚಾರ ಪರಿಪ್ಲುತವಾಗಿರುವ ಶ್ರಮಪೂರ್ಣ ಬರೆವಣಿಗೆಯಾಗಿರುವುದು; ಅದು ಸಹಜವಾಗಿಲ್ಲ. ಆದರೆ, ತಾರ್ಕಿಕ ತಪ್ಪಾಗಿರುವುದು ಸಾಧ್ಯವೆ ? ತನ್ನ ದನಿಯನ್ನು ಮತ್ತಷ್ಟು ಎತ್ತರಿಸಿ ಅವನು ಹೀಗೆಂದು ಹೇಳಬಲ್ಲ: "ಮಹಾಶಯರೆ, ಅವರ ಇಡೀ ಸಾಹಿತ್ಯವನ್ನು ದೃಷ್ಟಿಯಲ್ಲಿರಿಸಿಕೊಂಡು, ತುಲನಾತ್ಮಕ ದೃಷ್ಟಿಯಿಂದ ಮಾತ್ರವೇ ಈ ಎಲ್ಲ ಮಾತುಗಳನ್ನೂ ಹೇಳಲಾಗುತ್ತಿದೆ. ಅವರು 'ಶೇಷ ಪ್ರಶ್ನೆ'ಯೊಂದನ್ನು ಮಾತ್ರವೇ ರಚಿಸಿದ್ದರೆ, ಆಗಲೂ ಅವರನ್ನು ಹೀಗೆಯೇ ಟೀಕಿಸಲಾಗುತ್ತಿತ್ತೆ ? ಅವರು ಕ್ರಾಂತಿಕಾರಿ ಲೇಖಕನೆಂದು ರಾತ್ರೋರಾತ್ರಿ ಪ್ರಸಿದ್ಧರಾಗಿ ಬಿಡುತ್ತಿರಲಿಲ್ಲವೆ ?"

ತರ್ಕಕ್ಕೆ ಕೊನೆ ಎಂಬುದೇ ಇಲ್ಲ. ಎಲ್ಲವನ್ನೂ ಹೇಳಿ ಮುಗಿಸಿದ ಮೇಲೂ, ಅವರ ಬೆಳವಣಿಗೆ ಮತ್ತು ಸಾಮರ್ಥ್ಯವನ್ನು ಆಧಾರವಾಗಿಟ್ಟುಕೊಂಡೇ 'ಶೇಷ ಪ್ರಶ್ನೆ'ಯನ್ನು ಓದಬೇಕೆಂದು ಹೇಳಬೇಕಾಗುತ್ತದೆ. ತಮ್ಮ ಗೆಳೆಯ ಕುಮುದಿನೀ ಕಾಂತ ಕರ್ ಅವರೊಂದಿಗೆ ಅವರು ಹೀಗೆಂದಿದ್ದರು: "ಹತ್ತು ವರ್ಷಗಳ ತರುವಾಯ ಬಂಗಾಳದ ಮನೆಮನೆಯಲ್ಲೂ ಕಮಲಳಂಥ ನಾರಿಯರು ಹುಟ್ಟಿ ಬರುತ್ತಾರೆ."

'ಶೇಷ ಪ್ರಶ್ನೆ' ಕ್ರಾಂತಿಕಾರಕ ಕೃತಿ ಹೌದೇ ಅಲ್ಲವೇ ಎಂಬುದು ವಿವಾದದ ವಸ್ತುವಾಗಬಹುದು. ಆದರೆ, ಆಶ್ಚರ್ಯದ ಸಂಗತಿಯೆಂದರೆ, ಒಂದೆಡೆ ಇಂಥ ವಿವಾದಾಸ್ಪದ ಕೃತಿಗಳನ್ನು ರಚಿಸುತ್ತಿದ್ದ ಶರತ್‌ಚಂದ್ರರೇ ಇನ್ನೊಂದೆಡೆ ಯಥಾ ಸ್ಥಿತಿವಾದಿ ವಿಚಾರಧಾರೆಯನ್ನು ಸಮರ್ಥಿಸುವಂಥ ಕೃತಿಗಳನ್ನೂ ಸರಿಸುಮಾರು ಇದೇ ಅವಧಿಯಲ್ಲಿ ರಚಿಸಿದ್ದು. 'ಶೇಷ ಪ್ರಶ್ನೆ' ಹೊಸಬರುವುದಕ್ಕೆ ಮುನ್ನವೇ ಅವರು

ಇನ್ನೊಂದು ಕಾದಂಬರಿಯ ರಚನೆಯನ್ನು ಕೈಗೆತ್ತಿಕೊಂಡಿದ್ದರು. ಅದು 'ವಿಪ್ರದಾಸ' ಎಂಬ ಹೆಸರಿನಲ್ಲಿ ಹೊರಬಂದಿತು. ಹಿಂದಿನ ಆಚಾರ ವಿಚಾರಗಳ ಬಗ್ಗೆ 'ಶೇಷ ಪ್ರಶ್ನೆ'ಯಲ್ಲಿ ಎಷ್ಟರ ಮಟ್ಟಿನ ವಿರೋಧವಿದೆಯೋ, 'ವಿಪ್ರದಾಸ'ದಲ್ಲಿ ಅಷ್ಟರ ಮಟ್ಟಿನ ಆಚಾರ ಮತ್ತು ಸಂಸ್ಕಾರ ನಿಷ್ಠೆ ಕಾಣದೊರೆಯುತ್ತದೆ. ಒಂದೇ ಅವಧಿಯಲ್ಲಿ ಒಬ್ಬನೇ ಲೇಖಕ ಇಂಥ ಪರಸ್ಪರ ವಿರುದ್ಧ ವಿಚಾರಧಾರೆಗಳನ್ನು ಸಮರ್ಥಿಸುವ ಕೃತಿಗಳನ್ನು ರಚಿಸಿರುವುದು ಅನೇಕರಿಗೆ ಅರ್ಥವಾಗದ ಸಂಗತಿ. 'ಶೇಷ ಪ್ರಶ್ನೆ'ಯಲ್ಲಿನ ಧ್ವಂಸಕಾರಕ ನೀತಿಯನ್ನೇ ತಮ್ಮ ಬಾಳಿನ ಪರಮ ಅನುಭೂತಿಯೆಂದು ಭಾವಿಸುವ ತಪ್ಪನ್ನು ಜನರು ಮಾಡದಿರಲಿ ಎಂದೇ, ಅದರ ಜೊತೆ ಜೊತೆಯಾಗಿಯೇ 'ವಿಪ್ರದಾಸ'ದಂಥ ಸಮಾಜ ನಿಷ್ಠ ಕೃತಿಯನ್ನೂ ಅವರು ರಚಿಸಿದರೆಂದು ತೋರುತ್ತದೆ. ಶರತ್‌ಚಂದ್ರರು ತಮ್ಮ ಸಾಹಿತ್ಯದಲ್ಲಿ ಸಮಾಜದ ಲೋಪದೋಷಗಳನ್ನು ವಿಜ್ಞಾನಿಯ ದೃಷ್ಟಿಯಿಂದ ನೋಡುತ್ತಿದ್ದರೇ ಹೊರತು, ಸಮಾಜ ಸುಧಾರಕನ ದೃಷ್ಟಿಯಿಂದಲ್ಲ ಎನ್ನುವುದು ಎದ್ದು ಕಾಣುವ ಸಂಗತಿ. ಈ ಕಾರಣದಿಂದಾಗಿಯೇ, ಯಾವುದೋ ಒಂದು ನಿರ್ದಿಷ್ಟ ನಿಲುವಿನ ಬಗ್ಗೆ ಅವರು ಪಕ್ಷಪಾತ ತೋರುತ್ತಾರೆ ಎಂಬ ಅನುಭವ ನಮಗಾಗುವುದಿಲ್ಲ. ಹೀಗೆ ಆಗಬೇಕೆಂದು ಅವರು ಇಚ್ಛಿಸುತ್ತಲೂ ಇರಲಿಲ್ಲ. ಅವರು ಅನ್ಯಾಯವನ್ನು ಮಾತ್ರವೇ ವಿರೋಧಿಸುತ್ತಿದ್ದರು. ಅನೇಕ ವರ್ಷಗಳ ಹಿಂದೆ, 'ಚರಿತ್ರಹೀನ' ಕಾದಂಬರಿಯನ್ನು ರಚಿಸಿದ್ದಾಗ, ಅದರ ಬಗ್ಗೆ ತಮ್ಮ ಒಬ್ಬ ಗೆಳೆಯನಿಗೆ ಹೀಗೆಂದು ಬರೆದಿದ್ದರು:[1] "ಜನ ತಮಗೆ ಇಷ್ಟಬಂದಂತೆ ನನ್ನ ಬಗ್ಗೆ ಯೋಚಿಸಲಿ ಆದರೆ, "ಚರಿತ್ರಹೀನ' ಕಾದಂಬರಿಯ ಮೂಲಕ ಅವರ ಪತ್ರಿಕೆಯ ಬೆಳವಣಿಗೆ ಸಾಧ್ಯವಾಗುತ್ತದೆಂದು 'ಯಮುನಾ'ದ ಸಂಪಾದಕರು ನಂಬಿದ್ದಾರೆ. ನೈತಿಕವೋ, ಅನೈತಿಕವೋ-ಜನ ತುಂಬ ಆಸಕ್ತಿಯಿಂದ ಓದುತ್ತಾರೆ. ಆಗ ಅವರಿಗೆ ಒಳ್ಳೆಯದೆಂದು ತೋರುವಂಥದನ್ನೇ ಮಾಡೋಣ. ಇಷ್ಟಾಗಿಯೂ, ಇನ್ನೊಂದು ಉಪಾಯ ಮಾಡಬೇಕು. 'ರಾಮ್ ಕೀ ಸುಮತಿ'ಯಂಥ ಸರಳ-ಸ್ಪಷ್ಟ ಕಥೆಯನ್ನೂ ಜೊತೆ ಜೊತೆಗೇ ಬರೆದು 'ಚರಿತ್ರಹೀನ'ದ ಪ್ರಭಾವವನ್ನು ಸ್ವಲ್ಪ ಮಟ್ಟಿಗೆ ಲಘುವಾಗಿಸಬೇಕು."

ಹೀಗಾಗಿ, 'ಶೇಷ ಪ್ರಶ್ನೆ'ಯ ಪ್ರಭಾವವನ್ನು ಲಘುವಾಗಿಸುವ ಸಲುವಾಗಿಯೇ ಅವರು 'ವಿಪ್ರದಾಸ'[2] ಕಾದಂಬರಿಯನ್ನು ರಚಿಸಿದರೆಂಬ ಸಂಗತಿ ನಮಗೆ ಅರ್ಥವಾಗುತ್ತದೆ. ತಮ್ಮ ಹತ್ತಿರದ ಸಂಬಂಧಿಯಾದ ಮಾವನೊಬ್ಬನ ಹೆಸರಿನ ಆಧಾರದ ಮೇಲೆ ಈ ಕಾದಂಬರಿಗೆ ಈ ಹೆಸರನ್ನು ಕೊಟ್ಟಿದ್ದರು. ವಿಪ್ರದಾಸ ತನ್ನ ಬಾಳಿನಲ್ಲಿ ಹೇಗಿದ್ದನೋ ಹಾಗೆಯೇ ಆತನನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಆತ ಸ್ವಧರ್ಮಪರಾಯಣನಾಗಿದ್ದ, ಆಚಾರನಿಷ್ಠನಾಗಿದ್ದ, ಗುರು ಹಿರಿಯರುಗಳಲ್ಲಿ ಹಾಗೂ ದೇವತೆಗಳಲ್ಲಿ ಭಕ್ತಿ-ಗೌರವಗಳನ್ನಿರಿಸಿಕೊಂಡಿದ್ದ; ತ್ರಿಕಾಲ ಸಂಧ್ಯಾವಂದನೆ, ಆಹ್ನಿಕ ಮತ್ತು ಪೂಜಾಪಾಠಗಳನ್ನು ಮಾಡದೆ ನೀರನ್ನು ಸಹಿತ ಕುಡಿಯುತ್ತಿರಲಿಲ್ಲ; ದೇವರಿಗೆ ನೈವೇದ್ಯಯೋಗ್ಯವಾಗುವಂಥ ವಸ್ತುವನ್ನೇ ಆತ ತಿನ್ನಲು ಯೋಗ್ಯ

1. ಪ್ರಮಥನಾಥ ಭಟ್ಟರಿಗೆ ಬರೆದ ಪತ್ರ: ಅಂಚೆ ಮೊಹರು: ಮೇ 24, 1913.
2. ಗ್ರಂಥರೂಪದಲ್ಲಿ ಪ್ರಕಟವಾದದ್ದು: ಫೆಬ್ರುವರಿ 1, 1935.

ವಾದುದೆಂದು ಭಾವಿಸುತ್ತಿದ್ದ; ಹೀಗೆ ತಿನ್ನಲು ಯೋಗ್ಯವಲ್ಲದಂಥ ಯಾವ ವಸ್ತುವನ್ನೂ ಆತ ತಿನ್ನುತ್ತಿರಲಿಲ್ಲ. ಧರ್ಮ ಎಂದರೆ ಆತನ ದೃಷ್ಟಿಯಲ್ಲಿ ಸನಾತನ ಹಿಂದೂಧರ್ಮ ಮಾತ್ರವೇ ಆಗಿರುತ್ತಿತ್ತು; ಯಾತ್ರೆ ಎಂದರೆ ತೀರ್ಥಯಾತ್ರೆ ಮಾತ್ರವೇ ಆಗಿರುತ್ತಿತ್ತು. ಸಂಸ್ಕೃತ ಭಾಷೆ ಮತ್ತು ಸಾಹಿತ್ಯಗಳ ಬಗ್ಗೆ ಆತನಿಗೆ ವಿಶೇಷವಾದ ಒಲವಿತ್ತು. ಕಾಲೇಜಿನಲ್ಲಿ ಕಾಲಿರಿಸುವುದಕ್ಕೂ ಮೊದಲೇ ಅವರು ಜಟಿಲ ಸಂಸ್ಕೃತ ವ್ಯಾಕರಣವನ್ನು ಚೆನ್ನಾಗಿ ಕರಗತಮಾಡಿಕೊಂಡಿದ್ದರು. ಈ ಧರ್ಮನಿಷ್ಠ ಮಾವನಿಗೆ ತಮ್ಮ ಕೃತಿಗಳನ್ನು ಕೊಡಲು ಅವರು ಹಿಂದೆಗೆಯುತ್ತಿದ್ದರು. ಜಗದ್ಧಾತ್ರಿಯ ಪೂಜಾ ಮಹೋತ್ಸವದ ಸಂದರ್ಭದಲ್ಲಿ ಅವರು ಪ್ರತಿವರ್ಷವೂ ಭಾಗಲ್ಪುರಕ್ಕೆ ಹೋಗುತ್ತಿದ್ದರು. ಒಂದು ಸಲ ಅಲ್ಲಿಗೆ ಹೋದಾಗ ಆಕಸ್ಮಿಕವಾಗಿ ಮಾವ ವಿಪ್ರದಾಸರ ಭೇಟಿಯೂ ಆಯಿತು. ಅವರನ್ನು ಕಂಡಾಗ, ನಮಸ್ಕರಿಸುವುದಕ್ಕಾಗಿ ಅವರು ಮುಂದೆ ಬಂದರು. ಆದರೆ, ಅವರು ಮುಂದೆ ಬರುತ್ತಿದ್ದಂತೆಯೇ ಅವರ ಮಾವ ಹಿಂದೆ ಸರಿದರು. "ಸಾಕು, ಸಾಕು. ಇರಲಿ ಬಿಡು, ಬೇಕಾದಷ್ಟು ಆಗಿಬಿಟ್ಟಿದೆ. ಈಗ ಇನ್ನಷ್ಟು ನಮಸ್ಕಾರ ಮಾಡುವ ಅಗತ್ಯವಿಲ್ಲ" ಎಂದರು.

ಆ ಸಮಯದಲ್ಲಿ ಅಲ್ಲಿದ್ದ ವ್ಯಕ್ತಿಗಳಿಗೆಲ್ಲ ಆಶ್ಚರ್ಯವಾಯಿತು. ಆದರೆ, ಮಾವನವರು ಹೊರಟುಹೋದ ಮೇಲೆ, ಶರತ್‌ಚಂದ್ರರು ಅವರಿಗೆ ಹೇಳಿದರು: "ಕೆಲವು ದಿನಗಳ ಹಿಂದೆ ಈ ಮಾವನವರು ನನ್ನ ಪುಸ್ತಕಗಳನ್ನು ಕೇಳಿದ್ದರು. ಆದರೆ, ಈ ನೀತಿಕೋವಿದರಾದ ಮಾವನವರಿಗೆ ನನ್ನ 'ಚರಿತ್ರಹೀನ'ದಂಥ ಕೃತಿಯನ್ನು ಹೇಗೆ ಕೊಡಲಿ? ಆದ್ದರಿಂದಲೇ ಅವರಿಗೆ ಇಷ್ಟೊಂದು ಕೋಪ ಬಂದಿದೆ. ನಮಸ್ಕರಿಸಲೂ ಅವಕಾಶ ಕೊಡಲಿಲ್ಲ."

'ವಿಪ್ರದಾಸ' ಕಾದಂಬರಿಯ ಬಗ್ಗೆಯೂ ಹಲವು ಕಿಂವದಂತಿಗಳು ಹುಟ್ಟಿಕೊಂಡಿದ್ದುವು. ಅಧಿಕಾರಿಗಳ ಒತ್ತಾಯದ ಮೇರೆಗೆ ಅವರು ಇದನ್ನು ರಚಿಸಿದರು ಎಂಬುದೂ ಅಂಥ ಕಿಂವದಂತಿಗಳಲ್ಲಿ ಒಂದಾಗಿತ್ತು. ಆದರೆ, ಕೀಳು ಕೆಲಸಕ್ಕೆ ಅವರೆಂದೂ ಕೈಹಾಕುತ್ತಿರಲಿಲ್ಲ. ಕಲೆಗಾರ ಇನ್ನೊಬ್ಬರ ಅಪ್ಪಣೆಯ ಮೇರೆಗೆ ಬರೆಯುವುದಕ್ಕಿಂದಲೂ ಕೀಳು ಕೆಲಸ ಬೇರೊಂದುಂಟೆ? ಈ ವಿಚಾರ ಹಾಗಿರಲಿ. ಕಲೆಯ ದೃಷ್ಟಿಯಿಂದಲೂ ಈ ಪುಸ್ತಕದ ಬಗೆಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. 'ಸ್ವದೇಶಿ'ಯ ಟಂಕಾರದೊಂದಿಗೆ ಆರಂಭವಾಗುವ ಈ ಕೃತಿ ಬಹುಬೇಗ ಸನಾತನ ವಿಧಿ-ನಿಷೇಧಗಳ ಹಾಗೂ ಅಪರಿಪಕ್ವ ರೊಮಾನ್ಸುಗಳ ಮರುಭೂಮಿಯಲ್ಲಿ ತನ್ನ ಜಾಡನ್ನೇ ಕಳೆದುಕೊಂಡುಬಿಡುತ್ತದೆ. ಈ ಕಾದಂಬರಿಯನ್ನು ಬರೆಯುವಾಗ ಅವರ ಕಣ್ಣೆದುರಿಗೆ ಮಾವ ವಿಪ್ರದಾಸರು ಮಾತ್ರವಲ್ಲದೆ, ಇತರ ಸಂಬಂಧಿಕರಾದ ಮಾವ ಮಣೀಂದ್ರನಾಥರ ಮತ್ತು ಅಜ್ಜ ಕೇದಾರನಾಥರ ಚಿತ್ರಗಳೂ ಇದ್ದಂತೆ ಕಾಣುತ್ತದೆ. ಅವರ ಅಜ್ಜ ಕೇದಾರನಾಥರೂ ಮಹಾ ಆದರ್ಶವಾದಿಗಳು, ಹಿಂದೂ ಧರ್ಮದ ವಿಷಯದಲ್ಲಿ ಸಂಪೂರ್ಣ ಅನುರಾಗ-ಆಸ್ಥೆಗಳನ್ನುಳ್ಳವರೂ ಆಗಿದ್ದರು.

'ವಿಚಿತ್ರಾ' ಪತ್ರಿಕೆಯಲ್ಲಿ ಪ್ರಕಟವಾಗುವುದಕ್ಕೆ ಮೊದಲು ಅದರ ಸ್ವಲ್ಪ ಭಾಗ 'ವೇಣು' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. 'ವೇಣು' ಎಂಬುದು ತರುಣರ

ಪತ್ರಿಕೆಯಾಗಿತ್ತು. ಅದರ ಸಂಪಾದಕರಾಗಿದ್ದ ಭೂಪೇಂದ್ರ ಕಿಶೋರ ರಕ್ಷಿತ ರಾಯ್ ಅವರು ಶರತ್‌ಚಂದ್ರರ ಪ್ರಿಯ ಸ್ನೇಹಿತರಾಗಿದ್ದರು. ಆ ಪತ್ರಿಕೆಗೆ ವಿಪ್ಲವೀ ತಂಡದ ಬೆಂಬಲ ದೊರೆತಿತ್ತು. ಮತ್ತೆ ಮತ್ತೆ ಸರ್ಕಾರದ ಕೆಂಗಣ್ಣು ಅದರ ಮೇಲೆ ಬೀಳುತ್ತಿತ್ತು. ಹೀಗಾಗಿ, ಅದು ಬಹಳ ಕಾಲ ನಡೆಯಲಾರದೆ ಹೋಯಿತು. 'ವಿಪ್ರದಾಸ'ದ ಪ್ರಕಟಣೆಯೂ ನಿಂತು ಹೋಯಿತು. 'ವೇಣು' ಪತ್ರಿಕೆಯಲ್ಲಿ 'ವಿಪ್ರದಾಸ' ಕಾದಂಬರಿಯನ್ನು ಇನ್ನು ಮುಂದೆ ಪ್ರಕಟಿಸಬಾರದೆಂದು ಪೋಲೀಸ್ ಅಧಿಕಾರಿಗಳೂ ಎಚ್ಚರಿಕೆ ಕೊಟ್ಟಿದ್ದರು.[1]

ಈ ಪತ್ರಿಕೆಯಿಂದ ಶರತ್‌ಚಂದ್ರರಿಗೆ ಸಂಭಾವನೆಯೇನೂ ದೊರೆಯುತ್ತಿರಲಿಲ್ಲ. ಈ ಬಗ್ಗೆ ಅವರನ್ನು ಪ್ರಶ್ನಿಸಿದಾಗ, ಹೀಗೆಂದು ಅವರು ಉತ್ತರ ಕೊಟ್ಟಿದ್ದರು: "'ವೇಣು' ಪತ್ರಿಕೆಯ ಜನ ತಮ್ಮ ನಾಡನ್ನು ಪ್ರೀತಿಸುತ್ತಾರೆ. ಅದೇ ನನಗೆ ಸಂಭಾವನೆ. ಅವರೇ ಬಡವರು. ಅವರು ನನಗೇನು ಕೊಟ್ಟಾರು ? ನಾನೇ ಅವರಿಗೆ ಕೊಡಬೇಕು - ಬರೆಹವನ್ನು ಮಾತ್ರವಲ್ಲ, ಹಣಕಾಸನ್ನು ಕೂಡ."

'ವೇಣು'ವಿನಲ್ಲಿಯೇ 'ವಿಪ್ರದಾಸ' ಪ್ರಕಟವಾಗುತ್ತಿದ್ದರೆ, ಬಹುಶಃ ಸಂಸ್ಕಾರನಿಷ್ಠೆಯ ಬಗೆಗಿನ ಜಯಘೋಷದಲ್ಲಿಯೇ ಅದು ಕೊನೆಗೊಳ್ಳುತ್ತಿತ್ತೆಂದು ಭಾವಿಸುವುದು ಅಸಂಗತವಾಗುತ್ತಿರಲಿಲ್ಲ. ಸ್ವತಃ ಅವರ ಮೇಲೂ ಆ ಅವಧಿಯಲ್ಲಿ ಸರ್ಕಾರ ಕೆಂಗಣ್ಣನ್ನಿಟ್ಟಿತ್ತು. ಅವರ ರಿವಾಲ್ವರ್ ಮತ್ತು ರೈಫಲ್ಲುಗಳನ್ನೂ ಮುಟ್ಟುಗೋಲು ಹಾಕಿಕೊಳ್ಳಲಾಗಿತ್ತು. ಆದರೆ, ಅವರು ಇದಾವುದರ ಬಗೆಗೂ ಸರ್ಕಾರವನ್ನು ನಿಂದಿಸಿರಲಿಲ್ಲ. ಹೋರಾಟದ ಬಗೆಗೂ 'ವೇಣು'ವಿನಲ್ಲಿ ಕಥೆಗಳು ಅಚ್ಚಾಗುತ್ತಿದ್ದುವು. ಅವುಗಳನ್ನೊಳಗೊಂಡ ಒಂದು ಕಥಾಸಂಕಲನವೂ ಹೊರಬಂದಿತ್ತು. ಅದಕ್ಕೆ ಸ್ವತಃ ಶರತ್‌ಚಂದ್ರರೇ ಮುನ್ನುಡಿಯನ್ನು ಬರೆದಿದ್ದರು.[2] ನಿರೀಕ್ಷಿಸಬಹುದಾಗಿದ್ದಂತೆಯೇ, ಅದನ್ನು ಕೂಡಲೇ ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಆದರೆ, ಹಾಗೆ ಮುಟ್ಟುಗೋಲು ಹಾಕಿಕೊಳ್ಳುವ ಹೊತ್ತಿಗೆ ಇಡೀ ಆವೃತ್ತಿಯೇ ಮಾರಾಟವಾಗಿ ಬಿಟ್ಟಿತ್ತು.

ಈ ಎರಡು ಕಾದಂಬರಿಗಳನ್ನು ಬರೆಯುತ್ತಿದ್ದ ಅವಧಿಯಲ್ಲಿಯೇ ಅವರು 'ಸತೀ'ಮತ್ತು 'ಅನುರಾಧಾ' ಎಂಬ ಎರಡು ಕಥೆಗಳನ್ನೂ ಬರೆದರು. ಪೂರ್ಣಗೊಂಡ ರಚನೆಗಳ ದೃಷ್ಟಿಯಿಂದ ನೋಡಿದರೆ 'ಅನುರಾಧಾ' ಕಥೆಯನ್ನು ಅವರ ಕೊನೆಯ ಕಥೆಯೆಂದು ಹೇಳಬಹುದು. ಇದು ಪ್ರಕಟವಾದಾಗ,[3] ಅತ್ಯಾಧುನಿಕ ಸಾಹಿತಿಗಳ ಆತ್ಮಾರ್ಪಣೆಯ ಪ್ರೀತಿಯ ಹೊನಲು ಉಕ್ಕಿಹರಿಯುತ್ತಿತ್ತು. ಈ ಕಥೆ ಒಂದು ರೀತಿಯಲ್ಲಿ ಆ ಪ್ರವೃತ್ತಿಯ ಬಗೆಗಿನ ಪ್ರಚ್ಛನ್ನ ಪ್ರತಿಭಟನೆಯೇ ಆಗಿದೆ. ಆದರೆ,

1. 1932.

2. ಡಿಸಂಬರ್ 1926.

3. 1934 ಇದೇ ವರ್ಷ 'ಅನುರಾಧಾ, ಸತೀ ಮತ್ತು ಪರೇಶ್' ಎಂಬ ಕಥಾ ಸಂಕಲನದಲ್ಲಿ ಇದು ಸೇರಿಕೊಂಡಿತ್ತು (ಮಾರ್ಚ್ 18, 1934). 'ಪರೇಶ್' ಎಂಬುದು 'ಶರತೇರ್ ಫೂಲ್'ನ ಪೂಜಾ ವಾರ್ಷಿಕ ವಿಶೇಷಾಂಕದಲ್ಲಿ ಅಚ್ಚಾಗಿತ್ತು (ವಂಗಾಬ್ದ 1332ರಲ್ಲಿ).

ಶರತ್‌ಚಂದ್ರರು ಈ ಮಾತನ್ನು ಒಪ್ಪಲಿಲ್ಲ. ಇದರ ರಚನಾ-ಪ್ರಕ್ರಿಯೆಯನ್ನು ಚರ್ಚಿಸುತ್ತ ಅವರು ಹೀಗೆಂದು ಬರೆದಿದ್ದಾರೆ: "ನಾನು ಏನನ್ನಾದರೂ ಪ್ರತಿಭಟಿಸುವ ಸಲುವಾಗಿ 'ಅನುರಾಧಾ' ಕಥೆಯನ್ನು ಬರೆಯಲಿಲ್ಲ. ಇದರಲ್ಲಿ ನಾಯಿಕೆ ಅನುರಾಧಾಳು ತನ್ನ ಯಾವ ಮಾತೃಸದೃಶ ಸೇವಾಪರಾಯಣತೆ ಹಾಗೂ ನಡೆನುಡಿಗಳ ಮಾಧುರ್ಯದಿಂದ ನಾಯಕ ವಿಜಯ ತನ್ನಲ್ಲಿ ಮೋಹಗೊಳ್ಳುವಂತೆ ಮಾಡುತ್ತಾಳೋ ಮತ್ತು ಅದರಿಂದಾಗಿ ನಾಯಕನ ಮನಸ್ಸು ಯಾವ ಅನುರಾಗದ ಓಕುಳಿಯಿಂದ ಬಣ್ಣವಡೆಯುತ್ತದೆಯೋ ಅದು ವ್ಯರ್ಥ (ಮಿಥ್ಯೆ) ಆಗುವುದಿಲ್ಲ. ಅದೇ ನಿಜವಾದ ಪ್ರೀತಿ. ಹೆಣ್ಣಿನ ನಡೆವಳಿಕೆಯ ಈ ವಿಭಿನ್ನ ರೀತಿಯ ರಸಧಾರೆಯನ್ನು ಸವಿಯಲಾರದ ಕಥಾಶಿಲ್ಪಿ-ಅಂದರೆ, ನಾರಿಯ ವಿಭಿನ್ನ ರೂಪಗಳನ್ನು ಅರ್ಥಮಾಡಿಕೊಳ್ಳಲಾರದವನು - ಅವಳ ಶರೀರವನ್ನೇ ಸರ್ವಸ್ವವೆಂದು ಭಾವಿಸುತ್ತಾನೆ. ಅಂಥವನ ಸಾಹಿತ್ಯ ಸೃಷ್ಟಿ ಎಂದೂ ಸಾರ್ಥಕವಾಗಲಾರದು. ಪ್ರೀತಿಯಲ್ಲಿ ಶರೀರಕ್ಕೆ ಯಾವುದೇ ಸ್ಥಾನ ಇಲ್ಲವೆಂದಲ್ಲ; ಆದರೆ, ಅದರ ಸ್ಥಾನ ಮರದ ಬೇರಿನಂತೆ, ಮಣ್ಣಿನ ಕೆಳಗೆ ಇರುತ್ತದೆ."

'ಸತೀ' ಕಥೆಯನ್ನು 'ಅನುರಾಧಾ'ಕ್ಕಿಂತಲೂ ಕೆಲವು ವರ್ಷಗಳ ಮೊದಲೇ[1] ಬರೆದಿದ್ದರು. ಅದರ ಧಾಟಿ ವ್ಯಂಗ್ಯಾತ್ಮಕವಾಗಿದೆ. " 'ಏಕನಿಷ್ಠೆಯ ಪ್ರೀತಿ' ಮತ್ತು 'ಸತೀತ್ವ'-ಒಂದೇ ಅಲ್ಲ." ಈ ಮಾತಿಗೆ ಸಾಹಿತ್ಯದಲ್ಲಿ ಸ್ಥಾನ ದೊರೆಯದಿದ್ದರೆ, ಸತ್ಯವೆಲ್ಲಿ ಉಳಿದೀತು? ಶರತ್‌ಚಂದ್ರರ ಈ ಧೋರಣೆ 'ಸತೀ' ಕಥೆಯಲ್ಲಿ ಸಾಕಾರ ರೂಪವನ್ನು ಪಡೆದಿದೆ. ಈ ಕಥೆಯನ್ನು ಬರೆದಿದ್ದರ ಬಗೆಗೂ ಒಂದು ಇತಿಹಾಸವಿದೆ. ಶಿವಪುರದ ಮನೆಯಲ್ಲಿ ಅವರ ಬಳಿ ಒಂದು ದೊಡ್ಡ ಇಳಿಮೇಜಿತ್ತು. ಅದರಲ್ಲಿ ಅವರ ಅನೇಕ ಅಸಂಪೂರ್ಣ ರಚನೆಗಳಿದ್ದುವು. "ಅವುಗಳನ್ನು ತೆಗೆದುಕೊಂಡು ಬಂದು ನನ್ನ ಹತ್ತಿರ ಇಡಿ" ಎಂದು ಶರತ್‌ಚಂದ್ರರು ಉಮಾಪ್ರಸಾದ ಮುಕರ್ಜಿ ಅವರಿಗೆ ಹೇಳಿದರು.

ಉಮಾಪ್ರಸಾದರು ಹಾಗೆಯೇ ಮಾಡಿದರು. ಅವುಗಳಲ್ಲಿ ಕೆಲವು ಅಪೂರ್ಣ ಕಥೆಗಳೂ ಇದ್ದುವು. ಅವರಿಗೆ ಒಂದು ಕಥೆ ಬೇಕಾಗಿತ್ತು. ಮತ್ತೆ ಮತ್ತೆ ವಾಯದೆ ಕೊಟ್ಟಿದ್ದರೂ, ಶರತ್‌ಚಂದ್ರರಿಗೆ ಏನನ್ನೂ ಬರೆಯಲು ಆಗಿರಲಿಲ್ಲ. ಉಮಾಪ್ರಸಾದರು ಅವುಗಳಲ್ಲಿ ಸುದೀರ್ಘವಾಗಿದ್ದ ಒಂದು ಕಥೆಯನ್ನು ಎತ್ತಿಕೊಂಡು, "ಈ ಕಥೆಯನ್ನು ಪೂರ್ಣಗೊಳಿಸಿ" ಎಂದು ಶರತ್‌ಚಂದ್ರರಿಗೆ ಹೇಳಿದರು.

ಆ ಅಪೂರ್ಣಕಥೆಯನ್ನು ಓದುತ್ತ ಹೋದಂತೆ ಶರತ್‌ಚಂದ್ರರು ಸಮಾಧಿಸ್ಥರಾಗಿ ಬಿಟ್ಟರೇನೋ ಎಂಬಂತೆ ಶೂನ್ಯದಲ್ಲಿ ಮುಳುಗಿಹೋದರು. ಕೆಲವು ಕ್ಷಣಗಳ ಬಳಿಕ ನಿಟ್ಟುಸಿರೆಳೆದು ಅವರೆಂದರು: "ಇದನ್ನು ನನ್ನ ಹತ್ತಿರವೇ ಬಿಟ್ಟಿರಿ. ನೋಡೋಣ, ಏನು ಮಾಡಲು ಸಾಧ್ಯ ಆಗುತ್ತೋ"

ಆದರೆ ಆ ಕಥೆ ಸಿದ್ಧವಾದಾಗ, ಆ ಅಪೂರ್ಣ ಕಥೆಗೂ ಇದಕ್ಕೂ ಏನೇನೂ ಸಂಬಂಧವಿರಲಿಲ್ಲ.

---

1. ಜೂನ್, 1927.

'ಶ್ರೀಕಾಂತ' (ನಾಲ್ಕನೆಯ ಭಾಗ),[1] 'ವಿಪ್ರದಾಸ' ಪ್ರಕಟವಾಗುವುದಕ್ಕೆ ಮೊದಲೇ ಪೂರ್ಣಗೊಂಡಿತ್ತು. ದಿಲೀಪ್ ಕುಮಾರ್ ರಾಯ್ ಅವರು ಇದನ್ನು ಹಾಡಿ ಹೊಗಳಿ ಒಂದು ವಿಸ್ತಾರವಾದ ಪ್ರಬಂಧವನ್ನೇ ಬರೆದಿದ್ದರು. ಅದನ್ನು ಓದಿ ಶರತ್‌ಚಂದ್ರರೆಂದರು: "......'ಶ್ರೀಕಾಂತ' (ನಾಲ್ಕನೆಯ ಭಾಗ) ನಿಮಗೆ ತುಂಬ ಮೆಚ್ಚಿಕೆಯಾಯಿತೆಂಬುದನ್ನು ತಿಳಿದು ನನಗೆಷ್ಟು ಸಂತೋಷವಾಯಿತೆಂಬುದನ್ನು ಹೇಳಲಾರೆ. ಇದಕ್ಕೆ ಕಾರಣವೇನೆಂದರೆ, ಈ ಪುಸ್ತಕದಲ್ಲಿ ನಾನು ನಿಜವಾಗಿಯೂ ಮನಸ್ಸಿಟ್ಟು ಸಹೃದಯ ಓದುಗರಿಗೆ ಇದು ಪ್ರಿಯವಾಗಬೇಕೆಂದೇ ಬರೆದೆ. ನಿಮ್ಮಂಥ ಒಬ್ಬ ಓದುಗ 'ಶ್ರೀಕಾಂತ'ಕ್ಕೆ ದೊರೆತಿರುವುದು ಸೌಭಾಗ್ಯದ ಸಂಗತಿ. ಇದೇ ನನಗೆ ಪರಮ ಸಂತೋಷವನ್ನು ತಂದುಕೊಟ್ಟಿದೆ. ಇನ್ನು ನನಗೆ ಎರಡನೆಯ ಓದುಗ ಬೇಕಾಗಿಲ್ಲ. ಅಂಥವನೊಬ್ಬ ಸಿಗದಿದ್ದರೆ ಕನಿಷ್ಠ ಪಕ್ಷ ದುಃಖವಂತೂ ಇಲ್ಲ."

ತಮ್ಮ ಕೃತಿಗಳಲ್ಲೆಲ್ಲ ಇದೇ ಅತ್ಯುತ್ತಮವಾದುದೆಂದು ಅವರು ಸ್ವತಃ ನಂಬಿದ್ದರು. ಇದರಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿರಬಹುದು. ಆದರೆ, ಇದಂತೂ ಅವರ ಹೃತ್ಪೂರ್ವಕವಾದ ನಂಬಿಕೆಯಾಗಿತ್ತು. ಯಾರಾದರೂ ಇದರ ಬಗ್ಗೆ ಸಂದೇಹವನ್ನು ವ್ಯಕ್ತಪಡಿಸಿದರೆ, ಅವರು ಹೀಗೆಂದು ಹೇಳುತ್ತಿದ್ದರು: "ನೀವು ದೊಡ್ಡವರಾದ ಮೇಲೆ ಈ ಮಾತು ನಿಮಗೆ ಅರ್ಥವಾಗುತ್ತದೆ." ದಿಲೀಪ ಕುಮಾರ್ ರಾಯ್ ಅವರಿಗೆ ಅವರು ಹೀಗೆಂದು ಬರೆದಿದ್ದರು:[2] "ಬೇರೇನೂ ಚೆನ್ನಾಗಿ ಬಂದಿಲ್ಲದೆ ಇರಬಹುದು. ಆದರೆ, ಕನಿಷ್ಠ ಪಕ್ಷ ಅಸಂಗತವಾಗಿ ಉಚ್ಛೃಂಖಲತೆಯ ಸ್ವರೂಪವನ್ನಂತೂ ಮೆರೆದಿಲ್ಲವಲ್ಲ...."

'ಶ್ರೀಕಾಂತ'ದ (ನಾಲ್ಕನೆಯ ಭಾಗ) ರಚನೆಯ ಕಥೆ ತುಂಬ ವಿಚಿತ್ರವಾಗಿದೆ. ಇದರ ಹಿಂದೆ ಯಾರದ್ದಾದರೂ ಒತ್ತಾಯವಿರದೆ ಹೋಗಿದ್ದರೆ, ಬಹುಶಃ ಅವರು ಇದನ್ನು ಬರೆಯುತ್ತಲೇ ಇರಲಿಲ್ಲ. ಇದು 'ವಿಚಿತ್ರಾ'ದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು. ಈ ಪತ್ರಿಕೆಯ ಸಂಪಾದಕರಾಗಿದ್ದವರು ಇವರ ಮಾಮ ಉಪೇಂದ್ರನಾಥ ಅವರು. ಕೆಲವು ವರ್ಷಗಳ ಹಿಂದೆ, ಶರತ್‌ಚಂದ್ರರನ್ನು ಒಂದು ಕಾದಂಬರಿ ಬರೆದುಕೊಡುವಂತೆ ಕೇಳಲು ಅವರು ಬಂದಿದ್ದರು. ಅಂದು ಅವರು ನಿರಾಶರಾಗಿ ಹಿಂದಿರುಗಬೇಕಾಗಿ ಬಂದಿತ್ತು. ಈ ಮನೋಮಾಲಿನ್ಯದ ಹಿಂದೆ ಒಂದು ದೊಡ್ಡ ಇತಿಹಾಸವೇ ಇದೆ. ಅವರು ಹಾವಡಾ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದುದು ಸರಿಯಷ್ಟೆ. ಅಲ್ಲಿಯ ಪುರಸಭೆಯ ಚುನಾವಣೆಯಲ್ಲಿ ಅವರ ಪಕ್ಷವೂ ಸ್ಪರ್ಧಿಸುತ್ತಿತ್ತು. ಇಂಥ ಒಂದು ಸಂದರ್ಭದಲ್ಲಿ ಅವರು ಯಾವ ಪಕ್ಷಕ್ಕೆ ನೆರವಾಗುತ್ತಿದ್ದರೋ ಅದಕ್ಕೆ ವಿರುದ್ಧವಾಗಿ ನಿತ್ಯಧನ ಮುಕರ್ಜಿ ಎಂಬ ಸದ್ಗೃಹಸ್ಥರು ಹುರಿಯಾಳಾಗಿದ್ದರು. ಯೋಗೀಂದ್ರನಾಥ ಮುಕರ್ಜಿಯವರು ಈ ನಿತ್ಯಧನ ಮುಕರ್ಜಿಯವರ ಹತ್ತಿರದ ಗೆಳೆಯರಾಗಿದ್ದರು. ಯೋಗೀಂದ್ರನಾಥರು ಉಪೇಂದ್ರನಾಥರ ಬೀಗರೂ ಆಗಿದ್ದರು.

ಹೀಗೆ ಅನಾಯಾಸವಾಗಿ ಈ ಬಂಧುಗಳು ಎರಡು ಪಕ್ಷಗಳಲ್ಲಿ ಹಂಚಿಹೋದರು. ಇಂಥ ಸಂದರ್ಭಗಳು ಒಡಕುಂಟು ಮಾಡುವಂಥವರಿಗೆ ತಮ್ಮ ಬೇಳೆ

1. ಮಾರ್ಚ್ 13, 1933.
2. ಮೇ 16, 1933.

ಬೇಯಿಸಿಕೊಳ್ಳುವುದಕ್ಕೆ ಹೇಳಿ ಮಾಡಿಸಿದದಂಥ ಅವಕಾಶಗಳನ್ನು ಒದಗಿಸುತ್ತವೆ. ಇಂಥ ವ್ಯಕ್ತಿಗಳಲ್ಲಿ ಒಬ್ಬ ಯೋಗೀಂದ್ರನಾಥರಿಗೆ ಋಣಿಯಾಗಿದ್ದ. ಅವನು ಶರತ್‌ಚಂದ್ರರ ಬಳಿಗೆ ಬಂದು, ಅವರ ಕಿವಿಯಲ್ಲಿ ಚಾಡಿ ಊದತೊಡಗಿದ. ತಾನು ಪ್ರತಿದಿನ ಸಂಜೆ ಯೋಗೀಂದ್ರನಾಥರ ಮನೆಯಲ್ಲಿಯೇ ಊಟ ಮಾಡುತ್ತೇನೆಂದೂ, ಆಗೆಲ್ಲ ಅವರ ಸೊಸೆ ಶರತ್‌ಚಂದ್ರರನ್ನು ತುಂಬ ತುಚ್ಛೀಕರಿಸಿ ಮಾತನಾಡುತ್ತಿರುತ್ತಾಳೆಂದೂ ಅವನು ಹೇಳುತ್ತಿದ್ದ.

ಈ ಸೊಸೆ ಉಪೇಂದ್ರನಾಥರ ಮಗಳಾಗಿದ್ದು, ವಾವೆಯಲ್ಲಿ ಶರತ್‌ಚಂದ್ರರಿಗೆ ಸೋದರ ಮಾವನ ಮಗಳೂ ಆಗಿದ್ದಳು. ಮತ್ತೆ ಮತ್ತೆ ಇಂಥ ಮಾತುಗಳನ್ನು ಕೇಳಿ ಶರತ್‌ಚಂದ್ರರ ಮನಸ್ಸು ಯೋಗೀಂದ್ರನಾಥರ ಕುಟುಂಬಕ್ಕೆ ವಿಮುಖವಾಗತೊಡಗಿತ್ತು. ಹೀಗಾಗ ಬಾರದಿತ್ತು. ಆದರೆ, ಶರತ್‌ಚಂದ್ರರ ವಿಷಯದಲ್ಲಿ ಮಾವಂದಿರ ವರ್ತನೆ ಎಂದೂ ಹೃತ್ಪೂರ್ವಕವಾದುದಾಗಿರಲಿಲ್ಲ ಎಂಬುದೂ ನಿಜವೇ. ಸುರೇಂದ್ರನಾಥರು ಮಾತ್ರವೇ ಅವರ ಗೆಳೆಯರಾಗಿದ್ದರು. ಒಂದೇ ಪ್ರದೇಶದಲ್ಲಿದ್ದುದರಿಂದ ಉಪೇಂದ್ರನಾಥರೊಂದಿಗೆ ಆಗೀಗ ಭೇಟಿ ಆಗುತ್ತಲೇ ಇತ್ತು. ಆದರೆ ಅಂಥ ಪ್ರೀತಿಯೇನೂ ಕಾಣುತ್ತ ಇರುತ್ತಿರಲಿಲ್ಲ. ಆದ್ದರಿಂದ, ಉಪೇಂದ್ರನಾಥರ ಮಗಳು ತಮ್ಮನ್ನು ಬಯ್ಯುತ್ತಿರುವುದು ನಿಜವೆಂದು ಭಾವಿಸಲು ಶರತ್‌ಚಂದ್ರರಿಗೆ ಅಂಥ ಕಷ್ಟವೇನೂ ಆಗಲಿಲ್ಲ.

ಐದು ವರ್ಷಗಳ ಬಳಿಕ[1] ಒಮ್ಮೆಗೇ ಈ ರಹಸ್ಯ ಬಯಲಾಯಿತು. ಶರತ್‌ಚಂದ್ರರಿಗೆ ಚಾಡಿ ಹೇಳುತ್ತಿದ್ದ ವ್ಯಕ್ತಿ ಎಂದೂ ಯೋಗೀಂದ್ರನಾಥರ ಮನೆಗೆ ಊಟಕ್ಕೆ ಹೋಗಿರಲೇ ಇಲ್ಲವೆಂದೂ, ಶರತ್‌ಚಂದ್ರರಿಗೆ ಅವನು ಏನೆಲ್ಲ ಹೇಳಿದ್ದನೋ ಅದೆಲ್ಲ ಸುಳ್ಳು ಎಂದೂ ಗೊತ್ತಾಯಿತು. ನಿಜವಾದ ಸಂಗತಿ ತಿಳಿದು ಬಂದಾಗ ಅವರಿಗೆ ತುಂಬ ದುಃಖವಾಯಿತು ಹಾಗೂ ಉಪೇಂದ್ರನಾಥರನ್ನು ಭೇಟಿಯಾಗಲು ಅವರು ಹಾತೊರೆಯತೊಡಗಿದರು. ಒಂದು ದಿವಸ ಅವರೇ ಉಪೇಂದ್ರನಾಥರಿಗೆ ಫೋನ್ ಮಾಡಿದರು. ಸಂಜೆ ಏಳೂವರೆ ಘಂಟೆಯಾಗಿತ್ತು. ಕಛೇರಿ ಮುಚ್ಚಿತ್ತು. ಉಪೇಂದ್ರನಾಥರು ಮತ್ತು ಅವರ ಪ್ರಚಾರಕ ಸುಶೀಲ್ ಕುಮಾರ್ ಅವರು ಮಾತ್ರವೇ ಕಛೇರಿಯಲ್ಲಿ ಕುಳಿತಿದ್ದರು. ದೂರವಾಣಿಯ ಘಂಟೆ ಹೊಡೆದುಕೊಳ್ಳಲಾರಂಭಿಸಿತು. ರಿಸೀವರನ್ನು ಎತ್ತಿಕೊಂಡು ಉಪೇಂದ್ರನಾಥರು ಹೇಳಿದರು: "ಹಲೋ!"

ಆಕಡೆಯಿಂದ ಧ್ವನಿ ಕೇಳಿಸಿತು: "ಉಪೀನ್ ಇದ್ದಾರೆಯೆ ?"

ಅದು ಚಿರಪರಿಚಿತ ಧ್ವನಿಯಾಗಿತ್ತು. ಆದರೆ ಐದಾರು ವರ್ಷಗಳ ಬಳಿಕ ಅದು ಮತ್ತೆ ಅವರ ಕಿವಿಗೆ ಬಿದ್ದಿತ್ತು. ಉಪೇಂದ್ರನಾಥರು ಕೂಡಲೇ ಹೇಳಿದರು: "ಹೌದು, ನಾನೇ ಮಾತನಾಡುತ್ತಿದ್ದೇನೆ. ಹೇಗಿದ್ದಿ ಶರತ್ ?"

"ಸದಾ ಹೇಗೆ ಇರುತ್ತೇನೋ ಹಾಗೆಯೇ ಇದ್ದೇನೆ. ನಿಮ್ಮ ಪತ್ರಿಕೆಯ ಸ್ಥಿತಿ ಕೆಟ್ಟಿದೆಯೇನು ?"

"ಯಾವ ದೃಷ್ಟಿಯಿಂದ ಕೇಳುತ್ತಿದ್ದೀಯೆ ?"

"ಆರ್ಥಿಕ ದೃಷ್ಟಿಯಿಂದ."

1. ಡಿಸೆಂಬರ್ 1931.

"ಅದು ಸ್ವಲ್ಪ ಕ್ಲಿಷ್ಟ ಸಂಗತಿ. ಕೆಟ್ಟಿದೆಯೋ ಇಲ್ಲವೇ ಎಂದು ಒಮ್ಮೆಗೇ ಹೇಳಲು ಬರುವಂತಿಲ್ಲ. ಆದರೆ, ಅಷ್ಟೊಂದು ಚೆನ್ನಾಗಿಲ್ಲವೆಂಬುದೇನೋ ನಿಜ."

"ನನ್ನ ಬರೆಹ ಸಿಕ್ಕಿದರೆ ಏನಾದರೂ ಅನುಕೂಲವಾಗುತ್ತದೆಯೆ ?"

"ಆಗಲೇ ಬೇಕು."

"ಬೇಕೇನು !"

ಸ್ವತಃ ಶರತ್‌ಚಂದ್ರರ ಬಾಯಿಂದಲೇ ಈ ಮಾತನ್ನು ಕೇಳಿದ ಉಪೇಂದ್ರನಾಥರ ಮನಸ್ಸು ಉಲ್ಲಾಸ ಮತ್ತು ಅಭಿಮಾನಗಳಿಂದ ತುಂಬಿ ತೊನೆಯಿತು. ಶರತ್‌ಚಂದ್ರರ ಹೆಸರನ್ನು ಕೇಳಿ ಸುಶೀಲ್ ಅವರೂ ಉತ್ಸುಕರಾಗಿದ್ದರು. ಶರತ್‌ಚಂದ್ರರು ತಮ್ಮ ಬರಹವನ್ನು ಕೊಡಬಯಸಿದ್ದಾರೆ, ಬೇಕೇನು ಎಂದು ಕೇಳುತ್ತಿದ್ದಾರೆ ಎಂದು ಉಪೇಂದ್ರನಾಥರು ತಿಳಿಸಿದಾಗ, ಸುಶೀಲ್ ಅವರ ಮುಖ ಸಂತೋಷದಿಂದ ಅರಳಿತು. ಅವರೆಂದರು: "ಇದರಲ್ಲಿ ಕೇಳುವುದೇನು ಬಂತು. ಖಂಡಿತವಾಗಿಯೂ ಸ್ವೀಕರಿಸುತ್ತೇವೆ."

ಶರತ್‌ಚಂದ್ರರ ಬರೆಹ ಪ್ರಕಟವಾಗ ತೊಡಗಿದರೆ 'ವಿಚಿತ್ರಾ'ದ ಜನಪ್ರಿಯತೆ ಹೆಚ್ಚುತ್ತದೆಂಬುದು ಇಬ್ಬರಿಗೂ ಗೊತ್ತಿತ್ತು. ಓದುಗರು ಮತ್ತು ಗ್ರಾಹಕರಿಬ್ಬರಿಗೂ ಶರತ್‌ಚಂದ್ರರು ಪ್ರಿಯರಾಗಿದ್ದರು. ಆದ್ದರಿಂದ, ವೈಯಕ್ತಿಕ ಮಾನಾಪಮಾನಗಳ ಪ್ರಶ್ನೆ ಇಲ್ಲಿ ಏಳುತ್ತಲೇ ಇರಲಿಲ್ಲ. ಉಪೇಂದ್ರನಾಥರು ಶರತ್‌ಚಂದ್ರರಿಗೆ ಹೇಳಿದರು: "ಬೇಕೇ, ಬೇಡವೇ ಎಂದೇಕೆ ಕೇಳುತ್ತಿದ್ದೀಯೆ, ಶರತ್? ಬೇಕೆಂದೇ ನಾನು ನಿನ್ನ ಬಳಿಗೆ ಬಂದಿದ್ದ. ನೀನೇ ನನ್ನನ್ನು ಬರಿಗೈಯಲ್ಲಿ ಹಿಂದಿರುಗಿಸಿದ್ದೆಯಲ್ಲ."

ಈ ದೂರು ಮತ್ತು ಅಭಿಮಾನದ ಮಾತಿಗೆ ಉತ್ತರವನ್ನೇನೂ ಕೊಡದೆ, ಶರತ್‌ಚಂದ್ರರು ಹೇಳಿದರು: "ಕಛೇರಿಯಲ್ಲಿ ಇನ್ನೂ ಎಷ್ಟು ಹೊತ್ತು ಇರುತ್ತೀರಿ ?"

"ನೀನು ಬರುತ್ತೀಯೇನು ?"

"ಹೌದು, ಇಪ್ಪತ್ತು, ಇಪ್ಪತ್ತೈದು ನಿಮಿಷಗಳಲ್ಲಿ ಅಲ್ಲಿಗೇ ಬರುತ್ತೇನೆ."

ಆದರೆ, ಎಂಟು ನಿಮಿಷಗಳೂ ಕಳೆದಿರಲಿಲ್ಲ. ಅಷ್ಟರಲ್ಲಿಯೇ ಶರತ್‌ಚಂದ್ರರು ನಗುತ್ತ ಉಪೇಂದ್ರನಾಥರ ಕೋಣೆಯೊಳಗೆ ಬಂದರು. ಅವರ ನಡುವೆ ಎಂದೂ ಮನಸ್ತಾಪವೇ ಉಂಟಾಗಿರಲಿಲ್ಲವೇನೋ ಎಂಬಂತೆ ಅವರ ನಡುವೆ ಮಾತುಕತೆ ನಡೆಯಿತು. ಹಳೆಯ ಯಾವ ಘಟನೆಯ ಪ್ರಸ್ತಾಪವೂ ಬರಲಿಲ್ಲ. ಆದ್ದರಿಂದ ದೂರುವ, ವಿವರಣೆ ಕೊಡುವ ಹಾಗೂ ಕ್ಷಮೆ ಕೇಳುವ ಪ್ರಸಂಗವೇ ಬರಲಿಲ್ಲ. ನಾಲ್ಕಾರು ನಿಮಿಷಗಳವರೆಗೆ ಅಲ್ಲಿ-ಇಲ್ಲಿಯ ಮಾತುಗಳಾದ ಮೇಲೆ ಸದ್ಯದ ಸಂಗತಿ ಪ್ರಸ್ತಾಪಕ್ಕೆ ಬಂದಿತು. ಶರತ್‌ಚಂದ್ರರು ಕೇಳಿದರು: "ನಾನೇನು ಕೊಡಬೇಕು ?"

ಉಪೇಂದ್ರನಾಥರೆಂದರು: "ಯಾವುದಾದರೂ ಒಂದು ಕಾದಂಬರಿ."

ಶರತ್‌ಚಂದ್ರರೆಂದರು: "ಕಾದಂಬರಿಯನ್ನೇನೋ ಕೊಡುತ್ತೇನೆ. ಆದರೆ, ಯಾವ ವಿಷಯಕ್ಕೆ ಸಂಬಂಧಿಸಿದ ಕಾದಂಬರಿ ಬೇಕು ?"

ಈ ಹೊತ್ತಿಗೆ ಉಪೇಂದ್ರನಾಥರು ಮನಸ್ಸಿನಲ್ಲಿಯೇ ತೀರ್ಮಾನಿಸಿಕೊಂಡಿದ್ದರು. ಕೂಡಲೇ ಅವರೆಂದರು: " 'ಶ್ರೀಕಾಂತ' ಕಾದಂಬರಿಯ ನಾಲ್ಕನೆಯ ಭಾಗ."

ಆಶ್ಚರ್ಯದ ಧ್ವನಿಯಲ್ಲಿ ಶರತ್‌ಚಂದ್ರರು ಕೇಳಿದರು: "ಏನು ಬೇಕು ಅಂದಿರಿ ?

'ಶ್ರೀಕಾಂತ' ನಾಲ್ಕನೆಯ ಭಾಗವೆ? ಮೂರು ಭಾಗಗಳಾದ ಮೇಲೆ ನಾಲ್ಕನೆಯ ಭಾಗವನ್ನು ಓದುವ ತಾಳ್ಮೆ ಓದುಗರಿಗೆ ಇರುತ್ತದೆಯೆ?"

ಉಪೇಂದ್ರನಾಥರೆಂದರು: "ಖಂಡಿತವಾಗಿಯೂ ಇರುತ್ತದೆ. 'ಶ್ರೀಕಾಂತ'ದ ಮೂರನೆಯ ಭಾಗದ ಕೊನೆಯಲ್ಲಿ ರಾಜಲಕ್ಷ್ಮಿಯನ್ನು ಕಾಶೀಧಾಮದಲ್ಲಿನ ಸದ್ಗುರುಗಳ ಕೈಗೆ ಒಪ್ಪಿಸಿ, ಆಕೆಯ ಕಥೆಗೆ ಶಾಶ್ವತವಾಗಿ ಪರದೆಯನ್ನು ಎಳೆದು ಬಿಟ್ಟಿದ್ದೀಯೆ. ಇದಾದ ಬಳಿಕ, ಈಗ ರಾಜಲಕ್ಷ್ಮಿ ಮತ್ತು ಶ್ರೀಕಾಂತರನ್ನು ರಾಂಗಾಮಾಟಿಯಿಂದ ಹಿಂದಕ್ಕೆ ಕರೆತಂದು ಕಥೆಯನ್ನು ಮತ್ತೆ ಆರಂಭಿಸಿದರೆ, ಓದುಗರ ತಾಳ್ಮೆ ನಾಶವಾಗಿ ಬಿಡುತ್ತದೆಂದು ಹೇಳುವುದು ಕಷ್ಟ. ಅಭಯಾಳ ಒತ್ತಾಯದ ಆಹ್ವಾನದ ಮೇಲೆ ಶ್ರೀಕಾಂತ ರಂಗೂನಿಗೆ ಹೋಗಲು ಸಿದ್ಧನಾದನಲ್ಲವೆ? ಆ ಅಭಯಾಳನ್ನು ನೀನು ಹಾಗೆಯೇ ಬಿಟ್ಟು ಬಿಟ್ಟೆಯೇನು? ಆಕೆ ಅರಳಿ-ಚಿಗುರಿ ನಕ್ಕು ನಲಿಸುವ ಸೂಚನೆಯನ್ನು ಕೊಡಲಿಲ್ಲವೇನು? ಆದರೆ, ಆ ಸ್ಥಿತಿಯಲ್ಲಿಯೇ ನೀನು ಅಭಯಾಳನ್ನು ಪರಿಚಯಿಸಿ, ಬಿಟ್ಟು ಬಿಟ್ಟಿದ್ದೀಯಲ್ಲವೆ? ಆಕೆ ಅರಳಿ, ಚಿಗುರಿ, ನಳನಳಿಸಿದ ಕಥೆಯನ್ನು ವಿಸ್ತರಿಸಿ ಬರೆದರೆ, ಅದು ಖಂಡಿತವಾಗಿಯೂ ಅಪೂರ್ವರಚನೆಯಾಗುತ್ತದೆ. 'ವಿಚಿತ್ರಾ'ದ ಓದುಗರು ಮಾತ್ರವಲ್ಲದೆ, ಇಡೀ ಗೌಡದೇಶದ ಜನಸಮುದಾಯ ಅದರಿಂದ ಆನಂದಪಡುತ್ತದೆ."

ಸುಶೀಲ್ ಅವರೂ ಈ ಸೂಚನೆಯನ್ನು ಸಮರ್ಥಿಸಿದರು. ಶರತ್‌ಚಂದ್ರರೂ ಒಪ್ಪಿಕೊಂಡರು. 'ವಿಚಿತ್ರಾ'ದ ಮುಂದಿನ ಸಂಚಿಕೆಯಲ್ಲಿ ಈ ಸಂಬಂಧವಾದ ಜಾಹೀರಾತು ಪ್ರಕಟವಾಯಿತು. 'ವಿಚಿತ್ರಾ'ದ ಮಾಘಮಾಸದ ಸಂಚಿಕೆಯಿಂದ ಧಾರಾವಾಹಿಯ ರೂಪದಲ್ಲಿ 'ಶ್ರೀಕಾಂತ' ಕಾದಂಬರಿಯ ನಾಲ್ಕನೆಯ ಭಾಗ ಪ್ರಕಟವಾಗಲಿದೆಯೆಂದೂ, ಅಭಯಾಳ ಸೌರಭದಿಂದ ಸುಗಂಧಿತರಾಗಿರುವ 'ಶ್ರೀಕಾಂತ'ದ ಓದುಗರ ಮನಸ್ಸು ಇದರಿಂದ ನಲಿದು ಮೈಮರೆಯಲಿದೆಯೆಂದು ಅದರಲ್ಲಿ ಹೇಳಲಾಗಿತ್ತು.

ಜಾಹೀರಾತಿನ ಸೂಚನೆಗೆ ಅನುಗುಣವಾಗಿಯೇ 'ಶ್ರೀಕಾಂತ'ದ ನಾಲ್ಕನೆಯ ಭಾಗದ ಪ್ರಕಟಣೆ ಆರಂಭವಾಯಿತು. ಆದರೆ, ಮೊದಲಿನಿಂದಲೂ ಅದರಲ್ಲಿ ಎಲ್ಲಿಯೂ ಅಭಯಾಳ ಉಲ್ಲೇಖವೇ ಇರಲಿಲ್ಲ. ಕಥೆ ಆರಂಭವಾದದ್ದು ಕವಿ ಗೌಹರ್ ಮತ್ತು ವೈಷ್ಣವಿ ಕಮಲಲತಾ ಅವರೊಂದಿಗೆ. ಶರತ್‌ಚಂದ್ರರು ಮನಸ್ಸು ಬದಲಾಯಿಸಿಬಿಟ್ಟರು. ಅಭಯಾಳ ಕಥೆ ಎಂದೆಂದಿಗೂ ಅಪೂರ್ಣವಾಗಿಯೇ ಉಳಿದು ಹೋಯಿತು. ಈ ಎರಡು ಪಾತ್ರಗಳು ಸಂಪೂರ್ಣವಾಗಿ ಕಾಲ್ಪನಿಕವಾಗಿಲ್ಲದೆ ಇದ್ದುದೂ ಇದಕ್ಕೆ ಕಾರಣವಾಗಿರಬಹುದು. ಆ ಇಬ್ಬರ ನೇರವಾದ ಪರಿಚಯವೂ ಅವರಿಗಿತ್ತು. ಅಭಿಜ್ಞತೆಯ ಈ ಮೋಹವೇ ಅಭಯಾಳವರೆಗೆ ಬಂದು ತಲುಪುವ ಮಾರ್ಗವನ್ನು ಮುಚ್ಚಿ ಬಿಟ್ಟಿತು. ಆದರೆ, ಸ್ವತಃ ಅಭಯಾಳ ಪಾತ್ರವೂ ಕಾಲ್ಪನಿಕವಾದುದಲ್ಲ. ಮಿಸ್ತ್ರಿಯ ಒಬ್ಬ ಹೆಂಡತಿಯ ಪರಿಚಯ ಅವರಿಗೆ ಬರ್ಮಾದಲ್ಲಿ ಆಗಿತ್ತು. ಗಂಡ ಅವಳನ್ನು ತುಂಬ ಕೆಟ್ಟ ರೀತಿಯಲ್ಲಿ ಗೋಳು ಹೊಯ್ದುಕೊಂಡರೂ, ಅವನು ಬದುಕಿರುವ ವರೆಗೆ ಅವಳು ತನ್ನ ಪ್ರೇಮಿಯ ಬಳಿ ಸುಳಿಯಲಿಲ್ಲ. ಅವನು

ತೀರಿಕೊಂಡ ಬಳಿಕವೇ ಅವರಿಬ್ಬರೂ ಒಂದಾದರು. ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ, ಈ ಘಟನೆಯ ಆಧಾರದ ಮೇಲೆಯೇ ಅಭಯಾಳ ಪಾತ್ರಸೃಷ್ಟಿಯಾಗಿದೆ. ಆದರೆ, ಈ ಅಲ್ಪ ಬದಲಾವಣೆಯೂ ಮಹತ್ವದ ದೃಷ್ಟಿಯಿಂದ ತುಂಬ ದೊಡ್ಡದೇ ಆಗಿದೆ. ಅವಳು ಅತ್ಯಾಚಾರಿ ಗಂಡನನ್ನು, ಅವನು ಬದುಕಿದ್ದಾಗಲೇ ತ್ಯಜಿಸುವ ದಿಟ್ಟತನವನ್ನು ಮೆರೆದಳು. ಮಿಸ್ತ್ರಿಯ ಅತ್ಯಾಚಾರಗಳನ್ನು ಕಣ್ಣಾರೆ ಕಂಡಿದ್ದ ಶರತ್‌ಚಂದ್ರರಿಗೆ, ಇಂಥ ಗಂಡನನ್ನು ಹೆಂಡತಿ ತ್ಯಜಿಸಿದರೆ ಅದರಿಂದ ಏನೂ ಪಾಪ ಮಾಡಿದಂತಾಗುವುದಿಲ್ಲವೆಂದು ಅನ್ನಿಸಿರಬೇಕು. ಹೀಗಾಗಿ, ಈ ಬದಲಾವಣೆ ಮಾಡಿದ್ದಾರೆ.

ಅವರ ಕೃತಿಗಳಲ್ಲಿನ ಪಾತ್ರಗಳಲ್ಲಿ ನಾವು ಅವರ ಜೀವನದಲ್ಲಿ ಬಂದು ಹೋದ ನೈಜವ್ಯಕ್ತಿಗಳನ್ನು ಅರಸುತ್ತೇವೆ. ಹಾಗೆ ಅರಸಿದಾಗ ಸಾಕಷ್ಟು ಸಾಮ್ಯಗಳೂ ಕಾಣದೊರೆಯಬಹುದು. ಆದರೆ ಸಾಹಿತ್ಯದ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಂತೆಯೇ ಮಿಸ್ತ್ರಿಯ ಹೆಂಡತಿ ಅಭಯಾ ಆಗಿ ಬಿಟ್ಟಂತೆಯೇ ಉಳಿದವರ ವಿಷಯದಲ್ಲಿಯೂ ಬದಲಾವಣೆಗಳು ಆಗಿಯೇ ಇರುತ್ತವೆ. ಆದ್ದರಿಂದ 'ಶ್ರೀಕಾಂತ' ಶರತ್‌ಚಂದ್ರನಾಗಿಯೂ ಶರತ್‌ಚಂದ್ರನಲ್ಲ. ಕೃತಿಕಾರನ ಐಂದ್ರಜಾಲಿಕ ಲೇಖನಿಯ ಸ್ಪರ್ಶವನ್ನು ಪಡೆದು ಅವನು ಅದೆಷ್ಟು ಬದಲಾಗಿ ಬಿಟ್ಟಿದ್ದಾನೆಂದರೆ ಯಾವುದು ಏನೋ ಆಗಿಬಿಟ್ಟಿದೆ. ಅಭಯಾಳನ್ನು, ಕೇಂದ್ರವಾಗಿಸಿಕೊಂಡು, ಐದನೆಯ ಭಾಗವನ್ನು ಬರೆಯುವ ಆಲೋಚನೆಯೂ ಅವರ ಮನಸ್ಸಿನಲ್ಲಿ ಇತ್ತು. ದಿಲೀಪ್‌ಕುಮಾರ್ ಅವರಿಗೆ ಅವರು ಹೀಗೆ ಬರೆದಿದ್ದರು:[1] " 'ಶ್ರೀಕಾಂತ' ಕಾದಂಬರಿಯ ಐದನೆಯ ಭಾಗವನ್ನು ಬರೆದು, ಅದನ್ನು ಮುಗಿಸಿಬಿಡುತ್ತೇನೆ. ಇದು ಅಭಯಾ ಮೊದಲಾದವರಿಗೆ ಸಂಬಂಧಿಸಿರುತ್ತದೆ. ನಾಲ್ಕನೆಯ ಭಾಗ ಚೆನ್ನಾಗಿ ಬಂದಿಲ್ಲವೆಂದು ನೀವುಗಳೇನಾದರೂ ಹೇಳಿದರೆ, ರಥ ಇಲ್ಲಿಯೇ ನಿಂತು ಬಿಡುತ್ತದೆ......"

ಆದರೆ, ದಿಲೀಪ್ ಕುಮಾರ್ ಅವರು ನಾಲ್ಕನೆಯ ಭಾಗವನ್ನು ಹೊಗಳಿ ಬರೆದರೂ, ಶರತ್‌ಚಂದ್ರರ ಚಿರ ಆಲಸ್ಯದಿಂದಾಗಿ ರಥ ಮುಂದೆ ಸಾಗಲೇ ಇಲ್ಲ.

ಈ ದಿನಗಳಲ್ಲಿಯೇ[2] ಅವರ ಪ್ರಬಂಧಗಳ ಸಂಗ್ರಹ 'ಸ್ವದೇಶ ಮತ್ತು ಸಾಹಿತ್ಯ' ಎಂಬ ಹೆಸರಿನಲ್ಲಿ ಪ್ರಕಟವಾಯಿತು. ಹಿಂದಿನ ಅನೇಕ ವರ್ಷಗಳಲ್ಲಿ ಅವರು ಬರೆದಿದ್ದ ಲೇಖಗಳ ಹಾಗೂ ಮಾಡಿದ್ದ ಭಾಷಣಗಳ ಸಂಕಲನ ಇದಾಗಿತ್ತು. ಇದರಲ್ಲಿ ಎರಡು ಭಾಗಗಳಿದ್ದುವು: 'ಸ್ವದೇಶ' ಭಾಗದಲ್ಲಿ ರಾಜಕೀಯ ಲೇಖನಗಳಿದ್ದುವು; 'ಸಾಹಿತ್ಯ' ಭಾಗದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದಂಥ ಲೇಖನಗಳಿದ್ದುವು. ಆರ್ಯ ಪಬ್ಲಿಷಿಂಗ್ ಕಂಪೆನಿಯ ಸ್ವತ್ವಾಧಿಕಾರಿಯಾಗಿದ್ದ ಶ್ರೀ ಅಶ್ವಿನೀಕುಮಾರ್ ಬರ್ಮನ್ ಅವರಿಗೆ ಇದರ ಸಮಸ್ತ ಹಕ್ಕುಗಳನ್ನೂ ಬಿಟ್ಟು ಕೊಟ್ಟಿದ್ದುದರಿಂದ, ಈ ಸಂಕಲನ ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಅಶ್ವಿನೀಕುಮಾರರು ಸ್ವಾತಂತ್ರ್ಯಸಂಗ್ರಾಮದ ಸೇನಾನಿಗಳಾಗಿದ್ದಂಥವರು. ಜೈಲಿಗೂ ಹೋಗಿ ಬಂದಿದ್ದಂಥವರು. ಆಗ ಅವರ ಸಂಸ್ಥೆ ಆರ್ಥಿಕ ಸಂಕಟಕ್ಕೆ ಸಿಕ್ಕಿಕೊಂಡಿತ್ತು. ಬಂಡವಾಳ ಇಲ್ಲದೆ ಇದ್ದುದರಿಂದ, ಲೇಖಕರಿಗೆ

---

1. ಮೇ 19, 1933.
2. ಆಗಸ್ಟ್ 1932.

ಸಂಭಾವನೆಯನ್ನು ಕೊಟ್ಟು ಪ್ರಕಟಣೆಗಾಗಿ ಪುಸ್ತಕಗಳನ್ನು ಸ್ವೀಕರಿಸುವುದು ಅವರಿಗೆ ಸಾಧ್ಯವಿರಲಿಲ್ಲ. ಅವರಿಗೆ ನೆರವಾಗಬೇಕೆಂಬ ಉದ್ದೇಶದಿಂದಲೇ ಅವರು ಹೀಗ ಮಾಡಿದರು. 'ಸುದೇಶ ಮತ್ತು ಸಾಹಿತ್ಯ'ವನ್ನು ಮಾತ್ರವಲ್ಲದೆ 'ತರುಣರ ಪ್ರತಿಭಟನೆ' ಎಂಬ ಇನ್ನೊಂದು ಪುಸ್ತಕವನ್ನು ಪ್ರಕಟಿಸುವ ಹಕ್ಕನ್ನೂ ಅವರು ಇದೇ ಸಂಸ್ಥೆಗೆ ಬಿಟ್ಟುಕೊಟ್ಟರು. ಈ ಸಂಗ್ರಹದಲ್ಲಿ 'ಸತ್ಯ ಮತ್ತು ಮಿಥ್ಯೆ' ಎಂಬ ಪ್ರಬಂಧವೂ ಸಂಕಲಿತವಾಗಿದೆ.[1]

ಅವರ ಬಳಿ ಯಾವುದೇ ಸುಸ್ಪಷ್ಟ ದರ್ಶನವಿಲ್ಲದಿದ್ದರೂ, ಅವರಲ್ಲಿ ಚಿಂತನಶೀಲತೆಯ ಕೊರತೆ ಇರಲಿಲ್ಲವೆಂಬುದು ಈ ಪ್ರಬಂಧಗಳಿಂದ ಸಹಜ ರೂಪದಲ್ಲಿ ಸಿದ್ಧವಾಗುತ್ತದೆ. ಪ್ರಬಂಧದ ರೂಪದಲ್ಲಿ ತಮ್ಮ ಆಲೋಚನೆಗಳನ್ನು ಮಂಡಿಸುವುದು ಅವರಿಗೆ ಗೊತ್ತಿತ್ತು. ಈ ಬಗೆಯ ಇನ್ನೂ ಅನೇಕ ಕೃತಿಗಳಿದ್ದು, ಅವು ಅವರ ಮರಣಾನಂತರದಲ್ಲಿ ಸಂಕಲಿತವಾಗಿ ಹೊರಬಂದಿವೆ. ಅವುಗಳಲ್ಲಿ 'ಕ್ಷುದ್ರೇರ್ ಗೌರವ'[2]ದಂಥ ರಮ್ಯ ರಚನೆಯೂ, 'ಆಮಾರ್ ಆಶಯ್'[3] ರೂಪ-ಕಥೆಯೂ ಸೇರಿವೆ. ಈ ಮಾಧುರ್ಯಪೂರ್ಣವಾದ ರಚನೆಗಳು ಅವರ ಕವಿ-ಮನೋಧರ್ಮವನ್ನು ಪರಿಚಯಿಸಿಕೊಡುತ್ತವೆ.

## 16

ಶರತ್‌ಚಂದ್ರರು ಕಿಶೋರಾವಸ್ಥೆಯಲ್ಲಿ ಅನೇಕ ನಾಟಕಗಳಲ್ಲಿ ಅಭಿನಯಿಸಿ ಪ್ರಶಂಸೆ ಗಳಿಸಿದ್ದರು. ಆಗ ಜನರಿಗೆ ನಾಟಕ ನೋಡುವ ಹುಚ್ಚು ಹೆಚ್ಚಾಗಿಯೇ ಇತ್ತು. ಆದರೆ, ಕುಲೀನ ಮನೆತನಕ್ಕೆ ಸೇರಿದ ಹುಡುಗರು ರಂಗಮಂಟಪದ ಮೇಲೆ ಬರುವುದು ಅವರಲ್ಲಿ ಯಾರಿಗೂ ಒಪ್ಪಿಗೆಯಾಗುತ್ತಿರಲಿಲ್ಲ. ಶರತ್‌ಚಂದ್ರರು ಹುಟ್ಟಿನಿಂದಲೇ ಕ್ರಾಂತಿಕಾರಿಗಳಾಗಿದ್ದಂಥವರು. ಆದ್ದರಿಂದಲೇ ಅವರು ಒಂದೇ ಸಮನೆ ಅಭಿನಯದಲ್ಲಿ ಆಸಕ್ತಿ ವಹಿಸುತ್ತಿದ್ದರು. ಕಲ್ಕತ್ತೆಗೆ ಹಾಗೂ ಆ ಬಳಿಕ ಬರ್ಮಾಕ್ಕೆ ಹೋದ ಮೇಲೂ ಅವರ ಈ ಆಸಕ್ತಿ ಒಂದಲ್ಲ ಒಂದು ರೂಪದಲ್ಲಿ ಜೀವಂತವಾಗಿತ್ತು.

ರಂಗೂನಿನಲ್ಲಿ ಅವರು ಬಿಲ್ವಮಂಗಲ ಥಿಯೇಟರನ್ನು ಸ್ಥಾಪಿಸಲು ಪ್ರಯತ್ನ ನಡೆಸಿದ್ದರು. ಆದರೆ, ಹಾಡುಗಾರ್ತಿ ವಿಧುಬಾಲಾ ಅವರು ಇದ್ದಕ್ಕಿದ್ದಂತೆಯೇ ತೀರಿಕೊಂಡಿದ್ದರಿಂದ, ಈ ಥಿಯೇಟರಿನ ಸ್ಥಾಪನೆ ಭ್ರೂಣಾವಸ್ಥೆಯಲ್ಲಿಯೇ ಕೊನೆಯುಸಿರೆಳೆದಿತ್ತು.[4] ಅಭಿನಯದ ಬಗ್ಗೆ ಇಷ್ಟೊಂದು ಆಸಕ್ತಿ ಇದ್ದುದರಿಂದ, ಅವರಂಥ ಲೇಖಕರ ಮನಸ್ಸಿನಲ್ಲಿ ಸ್ವತಃ ನಾಟಕವನ್ನು ರಚಿಸುವ ಆಸೆ ಮೂಡುವುದು ಸಹಜವೇ ಆಗಿತ್ತು. ಅಪ್ರಸಿದ್ಧಿಯ ಅಂಧಕಾರದಿಂದ ಹೊರಬಂದ ಕಾಲದಲ್ಲಿ ತಮ್ಮ ಪರಮಮಿತ್ರರಾಗಿದ್ದ ಪ್ರಮಥನಾಥರಿಗೆ ಬರೆದ ಒಂದು ಪತ್ರದಲ್ಲಿ ಅವರು

---

1. ಆಗಸ್ಟ್ 23, 1932.
2. 'ಯಮುನಾ', ಮಾಘ 1320 (ಜನವರಿ 1914)
3. 'ಭಾರತ ವರ್ಷ', ಜ್ಯೇಷ್ಠ 1324 (ಮೇ-ಜೂನ್ 1917)
4. ಜುಲೈ 1907 'ಶರತ್ ಪ್ರತಿಭಾ': ಸತೀಶಚಂದ್ರ ದಾಸ್.

ಹೀಗೆಂದಿದ್ದರು: "ನಾನು ಒಂದು ನಾಟಕವನ್ನು ಬರೆಯಬೇಕೆಂದು ತೀರ್ಮಾನಿಸಿದ್ದೇನೆ. ಅದೇನಾದರೂ ಚೆನ್ನಾಗಿ ಬಂದರೆ, ಯಾವುದಾದರೂ ಥಿಯೇಟರಿನಲ್ಲಿ ಅದರ ಅಭಿನಯಕ್ಕೆ ಏರ್ಪಾಟು ಮಾಡಲು ಸಾಧ್ಯವೆ ?"[1]

ಆದರೆ, ಇದು ಪ್ರಸ್ತಾವ ಮಾತ್ರವಾಗಿಯೇ ಉಳಿದುಬಿಟ್ಟಂತೆ ತೋರುತ್ತದೆ. ಅವರು ನಾಟಕವನ್ನು ಬರೆಯಲಾರದೆ ಹೋದರು. ಆಮೇಲೆ ಕ್ರಮೇಣ ಅವರ ಮನಸ್ಸು ಅದರಿಂದ ದೂರ ಸರಿಯತೊಡಗಿತು. ಸುಮಾರು ಹದಿನೈದು ವರ್ಷಗಳ ತರುವಾಯ ಅವರ ಅಭಿಮಾನಿಗಳು ಅವರ ಕಾದಂಬರಿಗಳನ್ನು ಆಧಾರವಾಗಿರಿಸಿಕೊಂಡು ನಾಟಕಗಳನ್ನು ರಚಿಸುವ ಮಾತನ್ನೆತ್ತಿದಾಗ, ಅಂಥ ಪ್ರಯತ್ನಕ್ಕೆ ಕೈಹಾಕಿದಾಗ, ಮತ್ತೊಮ್ಮೆ ಅವರ ಗಮನ ಈ ವಿಚಾರದತ್ತ ಹರಿಯಿತು. ಈ ವಿಷಯದ ಬಗ್ಗೆ ಅವರು ಅಕ್ಷಯಚಂದ್ರ ಸರ್ಕಾರ್ ಅವರಿಗೆ ಹೀಗೆ ಬರೆದಿದ್ದರು: "ನನ್ನ ಕಾದಂಬರಿಗಳನ್ನು ನಾಟಕ ರೂಪಕ್ಕೆ ತಿರುಗಿಸುವ ವಿಷಯದಲ್ಲಿ ಸಾಮಾನ್ಯವಾಗಿ ಇಷ್ಟು ಹೇಳಬಹುದು. ಅಂಥ ನಾಟಕವನ್ನು ಅಚ್ಚಿಸಲಾಗುವುದಿಲ್ಲ ಹಾಗೂ ಯಾವುದೇ ವ್ಯಾಪಾರಿ ಥಿಯೇಟರ್ ಅದರಿಂದ ಹಣವನ್ನು ಗಳಿಸಲಾರದು. ಹೀಗೇನೂ ಆಗುವುದಿಲ್ಲವೆಂದಾದರೆ, ಅಂಥ ನಾಟಕವನ್ನು ಸಂತೋಷದಿಂದ ಅಭಿನಯಿಸಲು ಹಾಗೂ ಅದಕ್ಕಾಗಿ ಟಿಕೆಟ್ಟುಗಳನ್ನು ಮಾರಲು ನನ್ನ ಅಭ್ಯಂತರವೇನೂ ಇರುವುದಿಲ್ಲ."[2]

ಯಾರೋ ಒಬ್ಬರು ಮಹನೀಯರು ಅವರ 'ದತ್ತಾ' ಕಾದಂಬರಿಯನ್ನು ಆಧಾರವಾಗಿಟ್ಟುಕೊಂಡು ಒಂದು ನಾಟಕವನ್ನೂ ಸಿದ್ಧಪಡಿಸಿದ್ದರು. ಸ್ವತಃ ಶರತ್‌ಚಂದ್ರರೇ ಅದಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ, ಅದಕ್ಕೆ 'ವಿಜಯಾ' ಎಂಬ ಹೆಸರನ್ನೂ ಕೊಟ್ಟಿದ್ದರು. ನಾಟಕವನ್ನಾಗಿಸಬೇಕಾದರೆ ಕಾದಂಬರಿಯ ಕಥೆಗೆ ಹೊಸರೂಪವನ್ನು ಕೊಡಬೇಕಾಗುತ್ತದೆ ಹಾಗೂ ತಮ್ಮನ್ನು ಬಿಟ್ಟು ಬೇರೆ ಯಾರೂ ಆ ಕೆಲಸವನ್ನು ಮಾಡಲಾರರು ಎಂಬುದು ಅವರ ಭಾವನೆಯಾಗಿತ್ತು.

ಆದರೆ, ಈ ನಾಟಕವನ್ನು ಬರೆಯುವುದು ಸುಲಭದ ಕೆಲಸವಾಗಿರಲಿಲ್ಲ. ಅವರ ಪ್ರಕಾಶಕರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯ ಅವರು ಈ ವಿಷಯದಲ್ಲಿ ಅವರಿಂದ ನಿರಾಶರಾದಾಗ, ಬೇರೆ ಯಾರಿಂದಲಾದರೂ ಈ ಕೆಲಸವನ್ನು ಮಾಡಿಸಿಕೊಳ್ಳ ಬಯಸಿದರು. ಶರತ್‌ಚಂದ್ರರು ಆಗ ಅವರಿಗೆ ಹೀಗೆಂದು ಉತ್ತರಿಸಿದರು: "ನೀವು ಬೇರೆ ಯಾರಿಂದಲಾದರೂ ಅದನ್ನು ಬರೆಸಿಕೊಳ್ಳಲು ಇಚ್ಛಿಸಿದ್ದೀರಿ. ಆದರೆ, ಆತ ನನಗಿಂತಲೂ ಬೇಗ ಆ ಕೆಲಸವನ್ನು ಮಾಡಬಲ್ಲನೆ? ಅವನಿಗೆ ಅನೇಕ ಅನಾನುಕೂಲಗಳುಂಟಾಗುತ್ತವೆ. ಆ ಹೊತ್ತಿನಲ್ಲಿ ಸ್ವತಃ ಲೇಖಕನೇ ಅಲ್ಲಿರದಿದ್ದರೆ, ಅವುಗಳು ಇಲ್ಲವಾಗುವುದು ಕಷ್ಟವೆಂದು ನಾನು ಭಾವಿಸಿದ್ದೇನೆ. ಅಭಿನಯದ ದೃಷ್ಟಿಯಿಂದಲೂ ಅದು ತುಂಬ ಚೆನ್ನಾಗಿರಬಹುದೆಂಬ ಆಸೆಯನ್ನೂ ಇರಿಸಿಕೊಳ್ಳಲಾಗುವುದಿಲ್ಲ. ನಾನೇ ಸ್ವತಃ ಅದನ್ನು ಬರೆದರೆ, ಈ ತೊಂದರೆ

1. ಏಪ್ರಿಲ್ 8, 1913.
2. ಜನವರಿ 21, 1928.

ಇರುವುದಿಲ್ಲ ಹಾಗೂ 'ವಿಜಯಾ' ಎಂಬ ಹೆಸರಿನಿಂದ ನಾನೂ ಒಂದು ನಾಟಕವನ್ನು ಹೊರತರಬಹುದು. ಬೇರೊಬ್ಬರು ಬರೆದಿದ್ದಾರೆ, ಹಾಗೆ ನಾನು ಮಾಡಲಾರೆ.....

"ಮೊದಲನೆಯ ಅಂಕವನ್ನು ಪ್ರಬೋಧ ಗುಹ ಅವರು ನೋಡಲು ತೆಗೆದುಕೊಂಡು ಹೋಗಿದ್ದಾರೆ. ಅದನ್ನಿನ್ನೂ ಅವರು ಹಿಂದಿರುಗಿಸಿಯೇ ಇಲ್ಲ. ಅದರ ಪ್ರತಿ ಇತ್ತು. ಅದನ್ನು ಅಭಿನಯಕ್ಕೆ ಹೊಂದುವಂತೆ ತಿದ್ದಿ ಬರೆಯಲು ಆರಂಭಿಸಿದ್ದೆ. ಅಷ್ಟರಲ್ಲಿಯೇ ವಿಘ್ನವೊಂದು ಎದುರಾಯಿತು. ಆದರೆ, ('ವಿಜಯಾ' ನಾಟಕ ಕೈಸೇರಬಹುದೆಂಬ ಆಸೆಯಲ್ಲಿ) ತಡವಾಗಿ ಬಿಡುವುದರಿಂದ ತುಂಬ ನಷ್ಟವಾಗುತ್ತದೆ. ವ್ಯರ್ಥವಾಗಿ ನಟರಿಗೆ ಸಂಬಳ ಕೊಡಬೇಕಾಗುತ್ತದೆ. ಈ ಸ್ಥಿತಿಯಲ್ಲಿ ನಾನೇನು ಮಾಡಬೇಕು ಎಂಬುದು ನನಗೆ ಹೊಳೆಯುತ್ತಲೇ ಇಲ್ಲ. ಒಂದು ರೀತಿಯಲ್ಲಿ ಇಡೀ ಪುಸ್ತಕ ಸಿದ್ಧವಾಗಿದೆ. ಅಲ್ಲಲ್ಲಿ ಕೆಲವೊಂದು ತಿದ್ದುಪಾಟುಗಳನ್ನು ಮಾಡಬೇಕಾಗಿದೆ; ಕೊಂಚ ಬರೆದು ಪ್ರತಿಮಾಡಿಸಬೇಕಾಗಿದೆ. ಈ ಮಧ್ಯೆ ಆರೋಗ್ಯ ಸುಧಾರಿಸಿದರೆ, ಖಂಡಿತವಾಗಿ ಆ ಕೆಲಸ ಮಾಡಿಬಿಡುತ್ತೇನೆ. ಕೆಲವು ದಿನಗಳ ಮೊದಲೇ ನೀವು ಈ ತೀರ್ಮಾನ ಮಾಡಿದ್ದರೆ, ಈ ಸಮಸ್ಯೆ ಉಂಟಾಗುತ್ತಲೇ ಇರಲಿಲ್ಲ.....

"ಪುನಶ್ಚ: ನೀವು ನೋಡಲಿ ಎಂದು ಮೊದಲ ಭಾಗವನ್ನು ತುಲೂ ಕೈಯಲ್ಲಿ ಕಳಿಸುತ್ತಿದ್ದೇನೆ. ಇದನ್ನು ನೋಡಿದ ಮೇಲೆ, ಉಳಿದ ಭಾಗವನ್ನು ಬರೆಸಿಕೊಳ್ಳಬಹುದೆಂದು ನಿಮಗೆ ಅನ್ನಿಸಿದರೆ, ದಯವಿಟ್ಟು ನನಗೆ ತಿಳಿಸಿ."[1]

ಶರತ್‌ಚಂದ್ರರು ನಾಟಕವನ್ನು ಬರೆಯಲಾರದೆ ಹೋದರು, ತಮ್ಮ ಅಸಾಮರ್ಥ್ಯವನ್ನು ಒಪ್ಪಿಕೊಳ್ಳುವಾಗಲೂ, ತಾವು ಅದನ್ನು ರಚಿಸಬಲ್ಲೆವೆಂಬ ನಂಬಿಕೆ ಅವರಲ್ಲಿ ಇತ್ತು. ಪಶುಪತಿ ಚಟ್ಟೋಪಾಧ್ಯಾಯರಿಗೆ ಬರೆದ ಪತ್ರದಲ್ಲಿ ಅವರು ತಮ್ಮ ಈ ಆತ್ಮವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ.

"ನಾಟಕವನ್ನು ಬಹುಶಃ ನಾನು ಬರೆಯಬಲ್ಲೆ. ಏಕೆಂದರೆ, ನಾಟಕದಲ್ಲಿ ತುಂಬ ಉಪಯುಕ್ತವಾಗುವ ಸಂಭಾಷಣೆಯನ್ನು ಬರೆಯುವ ಅಭ್ಯಾಸ ನನಗಿದೆ. ಮಾತನ್ನು ಹೇಗೆ ಹೇಳಬೇಕು, ಎಷ್ಟು ಸರಳವಾಗಿಸಿ ಹೇಳುವುದರಿಂದ ಅದು ಮನಸ್ಸಿನ ಮೇಲೆ ಆಳವಾದ ಪ್ರಭಾವವನ್ನು ಬೀರುತ್ತದೆ - ಈ ಕೌಶಲ ನನಗೆ ಗೊತ್ತಿಲ್ಲವೆಂದೇನೂ ಅಲ್ಲ. ಇದರ ಜೊತೆಗೆ, ಪಾತ್ರಸೃಷ್ಟಿ ಅಥವಾ ಘಟನೆಗಳ ಸೃಷ್ಟಿಯ ವಿಚಾರವನ್ನು ಹೇಳುವುದಾದರೆ, ಅದನ್ನೂ ನಾನು ಮಾಡಬಲ್ಲೆನೆಂಬ ವಿಶ್ವಾಸ ನನಗಿದೆ. ಪಾತ್ರ-ಸೃಷ್ಟಿಗಾಗಿಯೇ ನಾಟಕದಲ್ಲಿ ಘಟನೆ ಅಥವಾ ಸನ್ನಿವೇಶವನ್ನು, ಅಣಿಗೊಳಿಸಬೇಕಾಗುತ್ತದೆ. ಪಾತ್ರ ಸೃಷ್ಟಿ ಎರಡು ಬಗೆಯಲ್ಲಿ ಸಾಧ್ಯ. ಒಂದು 'ಪ್ರಕಾಶ' - ಅಂದರೆ, ಘಟನಾ ಪರಂಪರೆಗಳ ನೆರವಿನಿಂದ ಪಾತ್ರಗಳನ್ನು ಪ್ರೇಕ್ಷಕರ ಎದುರಿಗೆ ಸಾದರಪಡಿಸುವುದು; ಇನ್ನೊಂದು 'ಪಾತ್ರದ ಬೆಳವಣಿಗೆ'-ಅಂದರೆ, ಘಟನಾ-ಸರಣಿಯ ಒಳಗಿನಿಂದಲೇ ಅದರ ಬಾಳಿನಲ್ಲಿ ಬದಲಾವಣೆಯುಂಟಾಗುತ್ತದೆಂಬುದನ್ನು ತೋರಿಸುವುದು. ಇದು ಒಳಿತಿನತ್ತಲೂ ಹರಿಯಬಹುದು, ಕೆಡುಕಿನತ್ತಲೂ ಸಾಗಬಹುದು. ಇಪ್ಪತ್ತು ವರ್ಷಗಳ ಹಿಂದೆ ಒಬ್ಬ ವ್ಯಕ್ತಿ ವಿಲ್ಸನ್ ಹೋಟೆಲಿನಲ್ಲಿ ಊಟಮಾಡುತ್ತಿದ್ದ, ಸುಳ್ಳು ಹೇಳುತ್ತಿದ್ದ ಮತ್ತು ಇತರ

1. ಜೂನ್ 29, 1933. ಮುಂದ ಡಿಸೆಂಬರ್ 1934ರಲ್ಲಿ ಪ್ರಕಟವಾಯಿತು.

ಕೆಟ್ಟಕೆಲಸಗಳನ್ನೂ ಮಾಡುತ್ತಿದ್ದ ಎಂದಿಟ್ಟುಕೊಳ್ಳೋಣ. ಇಂದು ಅವನು ಧರ್ಮನಿಷ್ಠ ವೈಷ್ಣವನಾಗಿಬಿಟ್ಟಿದ್ದಾನೆ. ಬಂಕಿಮ ಚಂದ್ರರ ಮಾತುಗಳಲ್ಲಿ ಹೇಳಬೇಕೆಂದರೆ, ಎಲೆಯ ಮೇಲೆ ಮೀನಿನ ರಸ ಬಿದ್ದರೂ ಅದನ್ನು ಅವನು ಕೈಯಿಂದ ಒರೆಸಿ ಹಾಕಿಬಿಡುತ್ತಾನೆ. ಇದು ಅವನ ಹೊರಗಿನ ಬೂಟಾಟಿಕೆಯಾಗಿರದೆ, ನಿಜವಾದ ಆಂತರಿಕ ಬದಲಾವಣೆಯೇ ಆಗಿರಬಹುದು. ಕೆಲವು ಘಟನೆಗಳಿಂದಾಗಿ ಅಥವಾ ಹತ್ತಾರು ಮಂದಿ ಸಜ್ಜನರ ಸಂಪರ್ಕ ಒದಗಿ, ಅವರಿಂದ ಪ್ರಭಾವಿತನಾಗಿ ಅವನು ನಿಜವಾಗಿಯೂ ಬದಲಾಗಿ ಬಿಟ್ಟಿರಬಹುದು. ಹೀಗಾಗಿ, ಇಪ್ಪತ್ತು ವರ್ಷಗಳ ಹಿಂದೆ ಅವನೇನಾಗಿದ್ದ ಎಂಬುದೂ ನಿಜ; ಈಗ ಅವನೇನಾಗಿದ್ದಾನೆ ಎಂಬುದೂ ನಿಜ. ಇದನ್ನೇ ಯಥಾರ್ಥ ಅಥವಾ ವಾಸ್ತವ ಎಂಬಂತೆ ನಾಟಕದ ರಚನೆಯ ಒಳಗಿನಿಂದಲೇ ಪ್ರೇಕ್ಷಕರು ಅಥವಾ ಓದುಗರ ಮುಂದೆ ಇಡಬೇಕಾಗುತ್ತದೆ. ಎಲ್ಲಿ ಹುಡುಕಿದರೂ, ಈ ಬದಲಾವಣೆಗೆ ಕಾರಣವೇನೆಂಬುದು ಗೊತ್ತಾಗುವುದೇ ಇಲ್ಲ ಎಂದು ಅವರಿಗೆ ಅನ್ನಿಸಬಾರದು. ಈ ಕೆಲಸ ಕಷ್ಟದ್ದೇ ಸರಿ.

"ಇನ್ನೂ ಒಂದು ಮಾತು. ಕಾದಂಬರಿಯಲ್ಲಿರುವಂತೆ ನಾಟಕದಲ್ಲಿ ಬಾಗು ಬಳುಕುಗಳು ಇರುವುದಿಲ್ಲ. ಒಂದು ನಿಶ್ಚಿತ ಸಮಯದ ಬಳಿಕ, ಅದನ್ನು ಮುಂದೆ ಬೆಳೆಯಲು ಬಿಡಲಾಗುವುದಿಲ್ಲ. ಒಂದಾದ ಮೇಲೆ ಇನ್ನೊಂದು ಘಟನೆಯನ್ನು ಅಣಿಗೊಳಿಸಿ, ನಾಟಕವನ್ನು ದೃಶ್ಯಗಳಲ್ಲಿ ಹಾಗೂ ಅಂಕಗಳಲ್ಲಿ ವಿಭಜಿಸುವುದು ಬಹುಶಃ ದುಸ್ಸಾಧ್ಯವೇನೂ ಅಲ್ಲ - ಅದೂ ಹಾಗೆ ಪ್ರಯತ್ನಮಾಡಿದರೆ." ಇಷ್ಟಾಗಿಯೂ, ತಾವು ನಾಟಕಗಳನ್ನೇಕೆ ಬರೆಯುವುದಿಲ್ಲ ಎಂಬುದನ್ನು ಚರ್ಚಿಸುತ್ತ, ಇದೇ ಪತ್ರದಲ್ಲಿ ಮುಂದೆ ಅವರು ಹೀಗೆ ಹೇಳಿದ್ದಾರೆ: "ಆದರೆ, ಹಾಗೆ ಮಾಡಿದರೂ, ಅದರಿಂದ ಏನಾದೀತು ಎಂದು ಯೋಚಿಸುತ್ತಿದ್ದೇನೆ. ನಾನು ಬರೆಯುವ ನಾಟಕವನ್ನು ರಂಗದ ಮೇಲೆ ತರುವವರು ಯಾರು ? ಸುಶಿಕ್ಷಿತರೂ ವಿವೇಚನಾಶೀಲರೂ ಆದ ನಟ-ನಟಿಯರೆಲ್ಲಿದ್ದಾರೆ. ನಾಟಕದ ನಾಯಕಿಯಾಗಬಲ್ಲಂಥ ಒಬ್ಬಳೇ ಒಬ್ಬಳು ಸಮರ್ಥ ನಟಿಯೂ ಇದುವರೆಗೆ ನನ್ನ ಕಣ್ಣಿಗೆ ಬಿದ್ದಿಲ್ಲ. ಈ ಬಗೆಯ ನಾನಾ ಕಾರಣಗಳಿಂದ ಸಾಹಿತ್ಯದ ಈ ದಿಕ್ಕಿನಲ್ಲಿ ಹೆಜ್ಜೆ ಹಾಕುವ ಇಚ್ಛೆಯೇ ಉಂಟಾಗುವುದಿಲ್ಲ. ಒಂದಲ್ಲ ಒಂದು ದಿನ ನಮ್ಮ ಇಂದಿನ ರಂಗಭೂಮಿಯ ಈ ಕೊರತೆ ದೂರವಾದೀತು ಎಂದು ನಂಬಿದ್ದೇನೆ. ಆದರೆ, ಬಹುಶಃ ಇದನ್ನು ನಾವು ನಮ್ಮ ಕಣ್ಣಿಂದ ನೋಡಲಾರೆವೇನೋ. ನಿಜವಾದ ಪ್ರೇರಣೆ ದೊರೆತರೆ, ಖಂಡಿತವಾಗಿಯೂ ನಾಟಕವನ್ನು ರಚಿಸಿಬಿಟ್ಟೇನು. ಆದರೆ, ಅಂಥ ಹೆಚ್ಚಿನ ಆಶೆಯನ್ನೇನೂ ನಾನು ಇರಿಸಿಕೊಂಡಿಲ್ಲ."[1]

ಮುಂದುವರಿದು ಅವರು ಇದನ್ನೂ ಹೇಳಿದ್ದಾರೆ: "ಥಿಯೇಟರ್ ಇರುವುದು ಆನಂದಕ್ಕಾಗಿ ಮಾತ್ರವಲ್ಲ. ಅದು ಜನ-ಶಿಕ್ಷಣದ ಕಾರ್ಯವನ್ನೂ ಮಾಡುತ್ತದೆ. ಆದರೆ, ನಮ್ಮ ನಾಡಿನ ನಾಟಕಕಾರರೇನಾದರೂ ಈ ಸತ್ಯವನ್ನು ಪ್ರತಿಪಾದಿಸುವಂಥ ನಾಟಕವನ್ನೇನಾದರೂ ಬರೆದರೆ, ಕೂಡಲೇ ಅದನ್ನು ಕಾಯ್ದೆಯ ಮರೆಯಲ್ಲಿ ಶಾಂತಿ ಪಾಲನೆಯ ಹೆಸರಿನಲ್ಲಿ ರಾಜ್ಯಸರ್ಕಾರ ಮುಟ್ಟುಗೋಲು ಹಾಕಿಕೊಂಡು ಬಿಡುತ್ತದೆ.

1. ಸೆಪ್ಟೆಂಬರ್ 1934 (25 ಆಶ್ವಿನ 1341)

ಹೀಗಾಗಿ ಸತ್ಯದಿಂದ ವಂಚಿತವಾಗಿರುವ ನಮ್ಮ ರಂಗಭೂಮಿ ಇಂದು ನಾಡಿನೆದುರಿಗೆ ತುಂಬ ನಾಚಿಕೆಗೆಟ್ಟಂಥದೂ, ವ್ಯರ್ಥವೂ, ಅರ್ಥರಹಿತವೂ ಆಗಿ ನಿಂತಿದೆ."

ಬಹುಶಃ ಈ ಕಾರಣದಿಂದಾಗಿಯೇ ಅವರು ನಾಟಕವನ್ನು ಬರೆಯುವತ್ತ ವಿಶೇಷವಾಗಿ ಗಮನ ಹರಿಸಲಿಲ್ಲ. 'ದತ್ತಾ', 'ಪಲ್ಲೀ ಸಮಾಜ' ಮತ್ತು 'ದೇನಾ ಪಾವನಾ' ಈ ಮೂರು ಕಾದಂಬರಿಗಳ ನಾಟಕ ರೂಪವನ್ನು ಮಾತ್ರ ಅವರು ಸಿದ್ಧಪಡಿಸಿದರು. 'ಷೋಡಶೀ' ಎಂಬುದು 'ದೇನಾ-ಪಾವನಾ'ದ ರೂಪಾಂತರ. ಇದರ ಮೊದಲ ನಾಟಕರೂಪದ ಕರಡನ್ನು ಕವಿ ಶಿವರಾಮ ಚಕ್ರವರ್ತಿ ಅವರು ಸಿದ್ಧಪಡಿಸಿದ್ದರು. ಅದಕ್ಕೆ ಸ್ವತಃ ಶರತ್‌ಚಂದ್ರರೇ ಅಂತಿಮರೂಪವನ್ನು ಕೊಟ್ಟರು. 'ಭಾರತೀ' ಪತ್ರಿಕೆಯಲ್ಲಿ ಅದು ಇವರ ಹೆಸರಿನಲ್ಲಿಯೇ ಅಚ್ಚಾಯಿತು. ಸಂಭಾವನೆಯ ರೂಪದಲ್ಲಿ ಮುನ್ನೂರು ರೂಪಾಯಿಗಳು ಅವರಿಗೆ ದೊರೆತುವು. ಇದರಲ್ಲಿ ಒಂದುನೂರು ರೂಪಾಯಿಗಳನ್ನು ಅವರು ಶಿವರಾಮ ಚಕ್ರವರ್ತಿ ಅವರಿಗೆ ಕೊಟ್ಟರು.

ನಾಟ್ಯಮಂದಿರದ ರಂಗಭೂಮಿಯ ಮೇಲೆ 'ಷೋಡಶಿ'ಯನ್ನು ನಿರ್ದೇಶಿಸಿದವರು ಅಂದಿನ ಸುಪ್ರಸಿದ್ಧ ನಿರ್ದೇಶಕರಾಗಿದ್ದ ಶಿಶಿರ್ ಭಾದುಡೀ ಅವರು.[1] ಪ್ರಮುಖ ಪಾತ್ರಗಳಲ್ಲಿ ಕಾಣಿಸಿಕೊಂಡವರಲ್ಲಿ ಶಿಶಿರ್ ಅವರೂ ಒಬ್ಬರಾಗಿದ್ದರು. ಅವರು ಜೀವಾನಂದನ ಪಾತ್ರವನ್ನು ಅಭಿನಯಿಸಿದ್ದರು. ಷೋಡಶಿಯಾಗಿ ನಟಿ ಚಾರುಬಾಲಾ, ರಾಯ್‌ಸಾಹಬ್ ಆಗಿ ಯೋಗೇಶ ಬಾಬೂ ಹಾಗೂ ಸಾಗರ್ ಸರದಾರನಾಗಿ ಮನೋರಂಜನ ಭಟ್ಟಾಚಾರ್ಯ ಅವರು ಕಾಣಿಸಿಕೊಂಡಿದ್ದರು. ಶಿಶಿರ್ ಮತ್ತು ಚಾರು ಅವರ ಅಭಿನಯ ಶರತ್‌ಚಂದ್ರರಿಗೆ ತುಂಬ ಹಿಡಿಸಿತು. ಗೆಳೆಯರೊಂದಿಗೆ ಮತ್ತೆ ಮತ್ತೆ ಅವರು ಈ ಇಬ್ಬರ ಅಭಿನಯವನ್ನು ಹೊಗಳಿದ್ದಾರೆ. ಆದರೆ, ತಮ್ಮ ಇಚ್ಛೆಗೆ ವಿರುದ್ಧವಾಗಿ, ಶಿಶಿರ್‌ಬಾಬೂ ಅವರ ಸೂಚನೆಯಂತೆ ಆ ನಾಟಕವನ್ನು ದುಃಖಾಂತವಾಗಿಸಿದ ಬಗ್ಗೆ ಅವರಿಗೆ ವಿಷಾದವಿತ್ತು. ಕಾದಂಬರಿಯಲ್ಲಿ ಅದು ಸುಖಾಂತದಲ್ಲಿದೆ. ನಾಟಕದಲ್ಲಿ ಜೀವಾನಂದನನ್ನು ಸಾಯಿಸಿದ್ದರ ಸಾರ್ಥಕತೆಯನ್ನು ಒಪ್ಪಲು ಅವರಿಗೆ ಸಾಧ್ಯವೇ ಆಗಲಿಲ್ಲ. ಅವನು ಜೀವಂತವಾಗಿರುವುದರಲ್ಲಿ 'ಷೋಡಶಿ'ಯ ಸಂದೇಶ ಸಾರ್ಥಕತೆಯನ್ನು ಕಾಣುವಂತೆ, ಅವನ ಸಾವಿನಲ್ಲಿ ಕಾಣುವುದಿಲ್ಲ. ಈ ಬಗ್ಗೆ ಶಿಶಿರ್‌ಬಾಬೂ ಅವರಿಗೆ ಒಂದು ಪತ್ರ ಬರೆಯಲೂ ಅವರು ಆರಂಭಿಸಿದ್ದರು. ಆದರೆ, ಅದನ್ನು ಅವರು ಪೂರ್ಣಗೊಳಿಸಲೇ ಇಲ್ಲ. ಏಕೆಂದರೆ, ಥಿಯೇಟರಿನ ಎಲ್ಲ ವ್ಯಕ್ತಿಗಳ ಮನೋಧರ್ಮವೂ ಹಾಗೆಯೇ ಇರುತ್ತದೆ, ಅವರಿಗೆ ಅಗ್ಗದ ನಾಟಕೀಯ ಪರಿಣಾಮದಲ್ಲಿಯೇ ಆಸಕ್ತಿ ಇರುತ್ತದೆ ಎಂಬುದು ಶರತ್‌ಚಂದ್ರರಿಗೆ ಗೊತ್ತಾಗಿಬಿಟ್ಟಿತ್ತು.

ಈ ನಾಟಕ ಇನ್ನೊಂದು ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಅನೇಕ ಸಲ ಕವಿಗುರು ರವೀಂದ್ರನಾಥರೊಂದಿಗೆ ಅವರಿಗೆ ಮನಸ್ತಾಪ ಉಂಟಾಗಿತ್ತು. ಇದಕ್ಕೆ ಕಾರಣವಾಗಿದ್ದ ಅನೇಕ ಸಂಗತಿಗಳಲ್ಲಿ ಈ ನಾಟಕವೂ ಒಂದಾಗಿತ್ತು. ನಾಟಕದಲ್ಲಿ ಗೀತೆಗಳು ಇರುವುದು ಅಗತ್ಯ. 'ಷೋಡಶಿ'ಗಾಗಿ ಗೀತೆಗಳನ್ನು

1. ಆಗಸ್ಟ್ 6, 1927.

ಬರೆದುಕೊಡಬೇಕೆಂದು ಅವರು ರವೀಂದ್ರರನ್ನು ಕೇಳಿಕೊಂಡಿದ್ದರು. ಆದರೆ, ಬಿಡುವಿಲ್ಲದೆ ಇದ್ದುದರಿಂದ ಈ ಕೋರಿಕೆಯನ್ನು ಈಡೇರಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಅವರು ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸಿದ್ದರು. ಶರತ್‌ಚಂದ್ರರು ಈ ಕಾರಣವನ್ನು ಒಪ್ಪಲಾರದೆ ಹೋದರು. ರವೀಂದ್ರರು ಬೇಕೆಂದೇ ತಮ್ಮನ್ನು ಉಪೇಕ್ಷಿಸುತ್ತಿದ್ದಾರೆಂಬ ಭಾವನೆ ಬಹಳ ಹಿಂದಿನಿಂದಲೇ ಮನಸ್ಸಿನ ಮೂಲೆಯೊಂದರಲ್ಲಿ ಕುಳಿತುಬಿಟ್ಟಿತ್ತು. ಇಷ್ಟಾಗಿಯೂ, ಮಾನಾಭಿಮಾನಗಳ ಬಗ್ಗೆ ಚಿಂತಿಸದೆ, 'ಷೋಡಶಿ'[1] ಗ್ರಂಥರೂಪದಲ್ಲಿ ಪ್ರಕಟವಾದಾಗ, ಅದರ ಒಂದು ಪ್ರತಿಯನ್ನು ಗುರುದೇವರಿಗೆ ಕಳಿಸಿಕೊಟ್ಟು, ಅಭಿಪ್ರಾಯವನ್ನು ತಿಳಿಸಬೇಕೆಂದು ಕೋರಿದ್ದರು.

ನಾಟಕವನ್ನು ಓದಿ ಕವಿಗುರುಗಳು ಹೀಗೆಂದರು ಬರೆದರು: "ನಿನ್ನ 'ಷೋಡಶೀ' ತಲುಪಿದೆ. ಬಂಗಾಳೀ ಸಾಹಿತ್ಯದಲ್ಲಿ 'ನಾಟಕ' ಎಂಬ ಹೆಸರಿಗೆ ಅರ್ಹವಾಗುವಂಥ ನಾಟಕಗಳಿಲ್ಲ. ನನ್ನಲ್ಲಿ ನಾಟಕ ಬರೆಯುವ ಶಕ್ತಿ ಇದ್ದಿದ್ದರೆ, ನಾನು ಖಂಡಿತ ವಾಗಿಯೂ ಪ್ರಯತ್ನಿಸುತ್ತಿದ್ದೆ. ಏಕೆಂದರೆ, ನಾಟಕ ಸಾಹಿತ್ಯದ ಒಂದು ಶ್ರೇಷ್ಠ ಅಂಗ, ನಿನ್ನಲ್ಲಿ ನಾಟಕವನ್ನು ಬರೆಯುವ ಶಕ್ತಿಯಿದೆ ಎಂದು ನಾನು ನಂಬಿದ್ದೇನೆ. ಒಳಗಿನ ಪ್ರಕೃತಿ ಹಾಗೂ ಹೊರಗಿನ ಆಕೃತಿ - ಇವೆರಡೂ ನಿಜವಾಗಿಯೂ ಒಂದಾಗಿ ಬಿಟ್ಟಾಗ ಪಾತ್ರಚಿತ್ರಣ ಸುಂದರವಾಗಿ ಪರಿಣಮಿಸುತ್ತದೆ. ನಿನ್ನ ಲೇಖನಿ ಸರಿಯಾಗಿ ಕಾರ್ಯನಿರ್ವಹಿಸಿದರೆ ಹಾಗೂ ರೂಪ ಮತ್ತು ಭಾವಗಳಲ್ಲಿ ಹೊಂದಾಣಿಕೆಯನ್ನು ತರುವುದು ಸಾಧ್ಯವಾದರೆ ನೀನು ಬಹಳಷ್ಟು ಸಾಧಿಸಬಲ್ಲೆ ಎಂಬುದು ನನ್ನ ನಂಬಿಕೆ. ಏಕೆಂದರೆ, ನಿನ್ನಲ್ಲಿ ಕಾಣುವ ಶಕ್ತಿ ಇದೆ, ಚಿಂತನಶೀಲವಾದ ಮನಸ್ಸಿದೆ. ಇದರ ಜೊತೆಗೆ ಜನರ ನಡೆ-ನುಡಿಗಳ ಬಗೆಗಿನ ನಿನ್ನ ಅಭಿಜ್ಞತೆಯ ಕ್ಷೇತ್ರವೂ ತುಂಬ ವಿಶಾಲವಾಗಿದೆ. ಆದರೆ, ಇಂದಿನ ಬೇಡಿಕೆಗಳು ಮತ್ತು ಜನಸಮೂಹದ ಅಭಿರುಚಿಯನ್ನು ಮರೆಯಲಾರದೆ ಹೋದರೆ, ನಿನ್ನ ಈ ಶಕ್ತಿಗೆ ಅಡೆತಡೆ ಗಳುಂಟಾಗುತ್ತವೆ. ನಿಜವಾಗಿಯೂ ಯಾವುದು ಶ್ರೇಷ್ಠ ಸಾಹಿತ್ಯವಾಗಿರುತ್ತದೆಯೋ ಅದರ ಪರಿಪ್ರೇಕ್ಷ್ಯ ದೂರವ್ಯಾಪಿಯಾಗಿರುತ್ತದೆ. ಅದರೊಂದಿಗೆ ಸರಿದೊರೆಯಾಗಿ ಸಾಗುವ ಸಾಹಿತ್ಯವೇ ನಾಲ್ಕುಕಾಲ ನಿಲ್ಲುವಂಥ ಸಾಹಿತ್ಯವಾಗುತ್ತದೆ. ಆದರೆ, ಅಕ್ಕಪಕ್ಕದ ಜನರು ಎಬ್ಬಿಸುವ ಗೌಜು-ಗದ್ದಲಗಳು ಗೋಡೆಯಾಗಿ ಪರಿಣಮಿಸಿ ಅದನ್ನು ಸಂಕೀರ್ಣ ಪರಿವೇಶದಲ್ಲಿ ಬಂಧಿಸಿಬಿಟ್ಟಾಗ, ಅದು ಕುಂಠಿತವಾಗಿತ್ತದೆ, ಅಸತ್ಯವಾಗುತ್ತದೆ.

" 'ಷೋಡಶಿ'ಯಲ್ಲಿ ನೀನು ಇಂದಿನ ಕಾಲವನ್ನು ಪ್ರಸನ್ನಗೊಳಿಸಲು ಇಚ್ಛಿಸಿದ್ದೀಯೆ. ಅದಕ್ಕೆ ತಕ್ಕ ಬೆಲೆಯನ್ನೂ ಪಡೆದಿದ್ದೀಯೆ. ಆದರೆ, ಹಾಗೆ ಮಾಡುವುದರ ಮೂಲಕ ನಿನ್ನ ಶಕ್ತಿಯ ಗೌರವವನ್ನು ತುಂಬ ಕುಂಠಿತ ಗೊಳಿಸಿದ್ದೀಯೆ. ನೀನು ಸೃಷ್ಟಿಸಿರುವ 'ಷೋಡಶಿ' ಈ ಕಾಲದ ಅಭಿಲಾಷೆಯ ಸಂಕೇತ. ಮಾನಸಿಕವಾಗಿ ಕಲ್ಪಿಸಿಕೊಂಡಿರುವ ವಸ್ತು. ಅದು ಒಳಗಿನ ಹಾಗೂ ಹೊರಗಿನ ಸತ್ಯವಲ್ಲ. ಈ ಬಗೆಯ ಭೈರವಿ ಇರುವುದು ಸಾಧ್ಯವಿಲ್ಲ ಎಂದು ನಾನು

1. ಆಗಸ್ಟ್ 13, 1927.

ಹೇಳುವುದಿಲ್ಲ. ಆದರೆ, ಹಾಗೇನಾದರೂ ಇರುವುದಾದರೆ, ಯಾವ ಭಾಷೆ ಮತ್ತು ಯಾವ ಚೌಕಟ್ಟಿನ ನಡುವೆ ಅಂಥ ಭೈರವಿಯ ಸೃಷ್ಟಿಯಾಗುತ್ತದೆಯೋ, ಆಕೆ ಇಂದಿನ ಪತ್ರಿಕೆಗಳನ್ನು ಓದುವ ಮುಖಗಳಲ್ಲಿ ಕಾಣದೊರೆಯುವುದಿಲ್ಲ. ಯಾವ ಕಥೆಯಲ್ಲಿ ನಮ್ಮ ಹಳ್ಳಿಯ ನಿಜವಾದ ಭೈರವಿ ಆತ್ಮಪ್ರಕಾಶ ಮಾಡಿಕೊಳ್ಳುತ್ತಾಳೋ ಅಂಥ ಕಥೆ ಇದಲ್ಲ. ಈ ಭೈರವಿಯನ್ನು ಐಕಾಂತಿಕ ಸತ್ಯವಾಗಿಸುವುದು ಸೃಜನಾತ್ಮಕ ಸಾಹಿತಿಯಾಗಿ ನಿನ್ನ ಕರ್ತವ್ಯವಾಗಿತ್ತು. ಜನರಂಜನೆಗಾಗಿ ಆಧುನಿಕ ಕಾಲದ ಪ್ರಚಲಿತ ಭಾವುಕತೆಯಿಂದ ಕೂಡಿದ ಕಥೆಯನ್ನು ನೀನು ಬರೆಯಬಾರದಾಗಿತ್ತು. ನನ್ನ ಈ ಮಾತಿನಿಂದ ನಿನಗೆ ಕೋಪಬರುತ್ತದೆಂಬುದನ್ನು ನಾನು ಬಲ್ಲೆ. ಆದರೆ, ನಿನ್ನ ಪ್ರತಿಭೆಯ ಬಗ್ಗೆ ನನಗೆ ನಂಬಿಕೆ ಇದೆ. ಆದ್ದರಿಂದಲೇ ಸರಳವಾದ ಮನಸ್ಸಿನಿಂದ ನನ್ನ ಅಭಿಪ್ರಾಯವನ್ನು ಕೊಡುತ್ತಿದ್ದೇನೆ. ಇಲ್ಲವಾದರೆ, ಇಂಥ ಅಗತ್ಯವೇ ಇರುತ್ತಿರಲಿಲ್ಲ. ನೀನು ಸಾಹಿತ್ಯಕ್ಷೇತ್ರದ ಮಹಾಸಾಧಕನಾಗಿದ್ದೀಯೆ. ಸಾಮಾನ್ಯ ಪ್ರಲೋಭನೆಯಿಂದ ಇಂದ್ರನೇನಾದರೂ ನಿನ್ನ ತಪೋಭಂಗ ಮಾಡಿಬಿಟ್ಟರೆ, ಅದು ಸಾಹಿತ್ಯಕ್ಕಾದ ನಷ್ಟವೇ ಆಗುತ್ತದೆ. ನೀನು ನಿನ್ನ ಪ್ರಯತ್ನಕ್ಕೆ ಇಂದಿನ ಜನಗಳಿಂದ ಪ್ರಶಂಸಾ ರೂಪವಾದ ಬೆಲೆಯನ್ನು ಪಡೆದು ಸಂತೋಷಪಡುವುದಾದರೆ, ಚಿರಕಾಲದ ಅವಧಿಗೆ ಯಾವ ಕಾಣಿಕೆಯನ್ನು ಕೊಟ್ಟು ಹೋಗಲಿದ್ದೀಯೆ ?"[1]

ಶರತ್‌ಚಂದ್ರರು ರವೀಂದ್ರರ ಈ ನಿಲುವನ್ನು ಒಪ್ಪಲಾರದೆ ಹೋದರು. ತಮ್ಮ ಮನೋಭಾವಗಳನ್ನು ವ್ಯಕ್ತಪಡಿಸುತ್ತ ಅವರೊಂದು ಸುದೀರ್ಘವಾದ ಪತ್ರವನ್ನು ಬರೆದರು. ಈ ಪತ್ರದಲ್ಲಿ ಆವೇಶ ಮತ್ತು ಆವೇಗಗಳಿಲ್ಲದಿದ್ದರೂ, ರವೀಂದ್ರರ ಮಾತು ಅವರ ಮನಸ್ಸಿಗೆ ಹಿಡಿಸಲಿಲ್ಲವೆಂಬುದಂತೂ ಇದರಿಂದ ಸ್ಪಷ್ಟವಾಗುತ್ತದೆ. ಅವರು ಅದರಲ್ಲಿ ಹೀಗೆಂದು ಬರೆದಿದ್ದರು: "ನನ್ನ ಒಂದು ಕಾದಂಬರಿಯನ್ನು ಆಧಾರವಾಗಿರಿಸಿಕೊಂಡು ಈ ನಾಟಕವನ್ನು ಬರೆಯಲಾಗಿದೆ. ಆದ್ದರಿಂದ ಕಾದಂಬರಿಯಲ್ಲಿ ಎಷ್ಟನ್ನು ಹೇಳಲು ಸಾಧ್ಯವಾಯಿತೋ, ಪಾತ್ರಚಿತ್ರಣಕ್ಕಾಗಿ ಎಷ್ಟು ಘಟನೆಗಳನ್ನು ಸಮಾವೇಶಗೊಳಿಸಲು ಸಾಧ್ಯವಾಯಿತೋ, ನಾಟಕದಲ್ಲಿ ಅಷ್ಟನ್ನು ಮಾಡಲು ಸಾಧ್ಯವಾಗಲಿಲ್ಲ. ಕಾಲದ ದೃಷ್ಟಿಯಿಂದ ನಾಟಕದ ಪರಿಸರ (ವಿಸ್ತಾರ) ಚಿಕ್ಕದು. ವ್ಯಾಪ್ತಿಯ ದೃಷ್ಟಿಯಿಂದಲೂ ಇದರ ಸ್ಥಾನ ಸಂಕೀರ್ಣವಾದುದು. ನಾಟಕವನ್ನು ಬರೆಯುವಾಗ ಈ ವಿಚಾರ ಮತ್ತೆ ಮತ್ತೆ ನನ್ನ ಅನುಭವಕ್ಕೆ ಬರುತ್ತಿತ್ತು. ಇದೇನೋ ಸರಿಯಾಗಲಿಲ್ಲ. ಮೇಲಾಗಿ, ಕಾದಂಬರಿ ಇದಕ್ಕೆ ಆಧಾರವಾಗಿರುವಾಗ, ಇದು ಸರಿಯಾಗಿ ಯಾವ ರೂಪವನ್ನು ಪಡೆದುಕೊಳ್ಳಬಹುದಾಗಿತ್ತು ಎಂಬುದನ್ನು ಕುರಿತು ಯೋಚಿಸಲಿಲ್ಲ. ಕಾದಂಬರಿಯನ್ನು ಆಧಾರವಾಗಿಟ್ಟುಕೊಂಡು ನಾಟಕವನ್ನು ಸಿದ್ಧಪಡಿಸಿದರೆ, ಅದು ಹೀಗೆಯೇ ಆಗುತ್ತದೆ. ಒಂದು ಕಡೆ ಕೆಲಸ ಸುಲಭವಾಗುತ್ತದೆ; ಇನ್ನೊಂದು ಕಡೆ ತಪ್ಪು ಬಹಳವಾಗುತ್ತದೆ. ಆದದ್ದು ಹೀಗೆಯೇ.

"ಇನ್ನೊಂದು ಕಾರಣವೂ ಇದೆ. ಈ ಬಾಳಿನಲ್ಲಿ ನಾನಾ ಸ್ಥಿತಿಗಳಲ್ಲಿ ಹಾದು ಹೋಗುವಾಗ ಅನೇಕ ಸಂಗತಿಗಳು ಕಣ್ಣಿಗೆ ಬೀಳುತ್ತವೆ. ನೀವು ಇದನ್ನೇ ಈ ನಾಡಿನ ಜನರ ನಡೆನುಡಿಗಳ ಬಗೆಗಿನ ನನ್ನ ಅಭಿಜ್ಞತೆ ಎಂದು ಕರೆದಿದ್ದೀರಿ. ಬಹಳಷ್ಟನ್ನು

---

1. ಫೆಬ್ರುವರಿ 17, 1927.

ಕಾಣುವುದು ಮತ್ತು ಅರಿತುಕೊಳ್ಳುವುದು ಸಾಹಿತ್ಯಕ್ಕೆ ಒಳ್ಳೆಯದೇ ಅಲ್ಲವೇ ಎಂಬ ಬಗ್ಗೆ ನನಗೆ ಸಂದೇಹವಿದೆ. ಅಭಿಜ್ಞತೆ ಶಕ್ತಿಯನ್ನು ಕೊಡುವುದು ಮಾತ್ರವಲ್ಲ, ಅದನ್ನು ಅಪಹರಿಸಿಯೂ ಬಿಡುತ್ತದೆ. ಜೊತೆಗೆ ಲೌಕಿಕ ಸತ್ಯ, ಸಾಹಿತ್ಯದ ಸತ್ಯ ಆಗದೆಯೂ ಹೋಗಬಹುದು. ಈ ಪುಸ್ತಕ ಅದಕ್ಕೆ ಉದಾಹರಣೆಯೆಂದು ತೋರುತ್ತದೆ. ಇದನ್ನು ನಾನು ಒಂದು ವಾಸ್ತವಿಕ ಘಟನೆಯ ಆಧಾರದ ಮೇಲೆ ಬರೆದಿದ್ದೇನೆ. ಅದನ್ನು ನಾನು ತುಂಬ ಹತ್ತಿರದಿಂದ ಬಲ್ಲೆ. ಈ ಅರಿವೇ ನನಗೆ ಅಡಚಣೆಯಾಗಿ ಬಿಟ್ಟಿದೆ. ಬರೆಯುವ ಸಂದರ್ಭದಲ್ಲಿ ಹೆಜ್ಜೆ ಹೆಜ್ಜೆಗೂ ಅದು ಅಡ್ಡ ಸವಾಲುಗಳನ್ನು ಹಾಕುತ್ತ ಅದು ನನ್ನ ಕಲ್ಪನೆಯ ಆನಂದಕ್ಕೆ ಮತ್ತು ಹರಿವಿಗೆ ಅಡಚಣೆಯನ್ನೊಡ್ಡಿದ್ದು ಮಾತ್ರವಲ್ಲದೆ, ಅವುಗಳನ್ನು ವಿಕೃತಗೊಳಿಸಿಯೂ ಇದೆ. ಸತ್ಯದ ಜೊತೆಗೆ ಕಲ್ಪನೆಯನ್ನು ಬೆರೆಸಿದಾಗ, ಹೀಗೆಯೇ ಆಗುತ್ತದೆಂದು ತೋರುತ್ತದೆ. ಲೋಕದಲ್ಲಿ ಆಕಸ್ಮಿಕವಾಗಿ ಅಥವಾ ನಿಜವಾಗಿ ಏನೇನು ನಡೆಯುತ್ತದೆಯೋ ಅದನ್ನೆಲ್ಲ ಅದೇ ರೂಪದಲ್ಲಿ ಬರೆದರೆ ಅದು ಇತಿಹಾಸವಾಗುತ್ತದೆ, ಸಾಹಿತ್ಯವಾಗುವುದಿಲ್ಲ. ಆದರೆ, ಸತ್ಯದೊಂದಿಗೆ ಕಲ್ಪನೆಯನ್ನು ಬೆರೆಸಿ ನನ್ನ 'ಷೋಡಶಿ'ಯನ್ನು ಸೃಷ್ಟಿಸಿದ್ದೇನೆ. ಈ ಕ್ರಮದಿಂದಾಗಿ, ಸಾಮಾನ್ಯ ಜನತೆಯಿಂದ ತುಂಬ ಗೌರವಾದರಗಳನ್ನು ಪಡೆದಿದ್ದೇನೆ. ಆದರೆ, ನಿಮ್ಮಿಂದ ಕವಡೆಯ ಕಿಮ್ಮತ್ತನ್ನೂ ಪಡೆಯಲಾರದೆ ಹೋದೆ.

"......ನೀವು ಖಚಿತವಾಗಿ ಏನು ಹೇಳಿದ್ದೀರಿ ಎಂಬುದನ್ನು ನಾನು ಅರ್ಥಮಾಡಿಕೊಳ್ಳಲಾರದೆ ಹೋದೆ. ನೀವು ಪರಿಪ್ರೇಕ್ಷ್ಯದ ವಿಚಾರವನ್ನೇ, ಉಲ್ಲೇಖಿಸಿದ್ದೀರಿ. ಚಿತ್ರವನ್ನು ಹಿಡಿಯುವಾಗ ಇಷ್ಟು ದೂರವನ್ನಿರಿಸಿಕೊಂಡರೆ, ದೊಡ್ಡದು ಚಿಕ್ಕದಾಗಿಯೂ, ಗುಂಡಗಿರುವುದು ಚಪ್ಪಟೆಯಾಗಿಯೂ, ಕುಳ್ಳಗಿರುವುದು ಎತ್ತರವಾಗಿಯೂ, ನೇರವಾಗಿರುವುದು ಅಂಕುಡೊಂಕಾಗಿಯೂ ಕಾಣಿಸುತ್ತದೆ. ಇಂತಿಷ್ಟು ದೂರದಲ್ಲಿ, ಯಾವ ಎಡೆಯಲ್ಲಿ ವಸ್ತುವಿನ ಆಕಾರ-ಪ್ರಕಾರಗಳು ಎಂಥ ಹಾಗೂ ಯಾವ ಪ್ರಮಾಣದ ಬದಲಾವಣೆಗಳಿಗೆ ಒಳಗಾಗುತ್ತವೆ ಎಂಬುದರ ಬಗ್ಗೆ ಖಚಿತವಾದ ನಿಯಮಗಳಿವೆ. ಕ್ಯಾಮರಾದಂಥ ಯಂತ್ರಕ್ಕೂ ಈ ನಿಯಮದಿಂದ ವಿನಾಯಿತಿ ದೊರೆಯುವುದಿಲ್ಲ. ಆದರೆ, ಸಾಹಿತ್ಯಕ್ಕೆ ಇಂಥ ಖಚಿತವಾದ ಯಾವದೇ ನಿಯಮವೂ ಇಲ್ಲ. ಇದೆಲ್ಲ ಲೇಖಕನ ಅಭಿರುಚಿ ಮತ್ತು ವೈಚಾರಿಕ ಬುದ್ಧಿಯನ್ನು ಅವಲಂಬಿಸಿಕೊಂಡಿರುತ್ತದೆ. ತನ್ನನ್ನು ತಾನು ಎಷ್ಟು ದೂರದಲ್ಲಿ ಇರಿಸಿಕೊಳ್ಳಬೇಕೆಂಬ ಬಗ್ಗೆ ನಿರ್ದೇಶನ ಮಾಡುವಂಥ ಯಾವ ವಿಧಾನವೂ ಇಲ್ಲ. ಹೀಗಾಗಿ, ಕಥೆಯ ದೃಷ್ಟಿಯಿಂದ ಮೂರ್ತಿಯ ಪರಿಪ್ರೇಕ್ಷ್ಯ ಮತ್ತು ಸಾಹಿತ್ಯದ ಪರಿಪ್ರೇಕ್ಷ್ಯ ಒಂದೇ ಆಗಬಹುದಾದರೂ, ಕಾರ್ಯತಃ ಅವೆರಡೂ ಒಂದೇ ಅಲ್ಲ. ಜೊತೆಗೆ, ಸಧ್ಯದ ಅವಧಿ ಸಾಹಿತ್ಯದಲ್ಲಿ ಎಷ್ಟು ದೊಡ್ಡ ಸತ್ಯವಾಗಿರುತ್ತದೆಯೋ, ಭವಿಷ್ಯವೂ ಅದೇ ರೀತಿ ಅಷ್ಟೇ ದೊಡ್ಡ ಸತ್ಯವಾಗಿರುವುದಿಲ್ಲ. ಗಂಡುಹೆಣ್ಣುಗಳ ಏಕನಿಷ್ಠ ಪ್ರೇಮವನ್ನು ವಸ್ತುವಾಗಿಸಿಕೊಂಡು ಇಷ್ಟೊಂದು ಕಾಲದಿಂದ ಇಷ್ಟೊಂದು ಕಾವ್ಯಗಳು ರಚಿತವಾಗಿವೆ, ಮನುಷ್ಯ ಇಷ್ಟೊಂದು ತೃಪ್ತಿಯನ್ನು ಪಡೆದಿದ್ದಾನೆ, ಇಷ್ಟೊಂದು ಕಣ್ಣೀರು ಹರಿಸಿದ್ದಾನೆ. ಇದೆಲ್ಲ ಒಂದು ದಿವಸ ಲೇವಡಿಯ ವಸ್ತುವಾಗಿ ಬಿಡಬಹುದು. ಅಂತಿಮವಾಗಿ ಇದು

ಅಸಂಭವವೇನೂ ಅಲ್ಲ. ಆದರೆ, ಹೀಗೆಲ್ಲ ಆದರೂ ಇಂದು ಅದನ್ನು ಕಲ್ಪನೆಯಲ್ಲಿಯೂ ಸ್ವೀಕರಿಸುವುದು ಸಾಧ್ಯವಾಗುವುದಿಲ್ಲ.......

"ರಾಮಾಯಣದಲ್ಲಿ ರಾಮ-ರಾವಣರ ಯುದ್ಧದ ವರ್ಣನೆ ಹೆಚ್ಚು ಸ್ಥಳವನ್ನು ಆಕ್ರಮಿಸಿದೆ. ರಾಕ್ಷಸರು ಮತ್ತು ವಾನರರು ಹೇಗೆ ಪರಸ್ಪರ ಯುದ್ಧ ಮಾಡಿದರು, ಯಾರು ಯಾವ ಅಸ್ತ್ರವನ್ನು ಪ್ರಯೋಗಿಸಿದರು ಎಂಬ ಬಗ್ಗೆ ಅದೆಷ್ಟು ಹೆಸರುಗಳು ಹಾಗೂ ಅದೆಷ್ಟು ಬಗೆಯ ವರ್ಣನೆಗಳು ಬರುತ್ತವೆ. ಯಾರ ಕೈ, ಯಾರ ಕಾಲು, ಯಾರ ಕತ್ತು ಕತ್ತರಿಸಿ ಹೋಯಿತು ಎಂಬುದನ್ನು ಕೂಡ ಅಲ್ಲಿ ಉಪೇಕ್ಷಿಸಿಲ್ಲ. ಯುದ್ಧರಂಗದ ಈ ವರ್ಣನೆ ಚಿಕ್ಕದೂ ಆಗಿಲ್ಲ, ತುಚ್ಛವೂ ಆಗಿಲ್ಲ. ಆ ಕಾಲದ ಜನಸಮುದಾಯ ಕವಿಯನ್ನು ಇಂಥ ವರ್ಣನೆಗಳನ್ನು ಕೊಡುವಂತೆ ಬಹುಶಃ ಕೋರಿರಲೂಬಹುದು; ಅಂಥವನ್ನು ಪಡೆದು ಅಕೃತ್ರಿಮ ಆನಂದವನ್ನೂ ಪಡೆದಿರಬಹುದು. ಆದರೆ, ಇಷ್ಟು ದಿನಗಳ ಬಳಿಕ ಇಂದು ಯುದ್ಧರಂಗದಲ್ಲಿನ ಯೋಧರ ಯುದ್ಧಕೌಶಲದ ಬಗೆಗಿನ ವಿವರಗಳು ತುಚ್ಛವೆನಿಸಿಕೊಂಡುಬಿಟ್ಟಿವೆ. ಸಾಹಿತ್ಯದ ಸುದೂರ ವ್ಯಾಪಕ ಪರಿಪ್ರೇಕ್ಷ್ಯ ಎಂದಾಗ ನೀವು ಅದೇ ಬಗೆಯ ಯಾವುದೋ ಸಂಗತಿಯನ್ನು ಸೂಚಿಸಿರುವಂತೆ ಕಾಣುತ್ತದೆ.

"ನಾನು ಇದಕ್ಕೆ ಮೊದಲು ನಾಟಕವನ್ನು ಬರೆದಿರಲಿಲ್ಲ. ಈಗ ಒಂದೆರಡು ನಾಟಕಗಳನ್ನಾದರೂ ಬರೆಯಬೇಕೆಂಬ ಆಸೆ ಮೂಡಿದೆ. ಆದರೆ, ಅಡಚಣೆಗಳೂ ಬೇಕಾದಷ್ಟಿವೆ. ಓದುಗರ ಸಮುದಾಯ ನನ್ನ ಕಾದಂಬರಿಗಳನ್ನು ವಿಮರ್ಶಿಸಿದೆ. ಆದರೆ, ನಾಟಕಗಳನ್ನು ವಿಮರ್ಶಿಸುವವರು ಯಾರು ಎಂಬುದನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ. ಥಿಯೇಟರಿನವರೆ ಅಥವಾ ಮೂರ್ಖ ಪ್ರೇಕ್ಷಕರೆ? ಇದರ ಬಗೆಗಿನ ಹೈಕೋರ್ಟ್ ಎಲ್ಲಿದೆ ಎಂಬುದು ಯಾರಿಗೂ ಗೊತ್ತಿಲ್ಲ. ರಾಮಾಯಣ, ಮಹಾಭಾರತ ಅಥವಾ ಅವುಗಳಂತೆಯೇ ಮಹತ್ವದ್ದಾಗಿರುವ ಟಾಡ್ ಸಾಹೇಬರ ರಾಜಾಸ್ಥಾನದ ಕಥಾನಕಗಳನ್ನು ಆಧಾರವಾಗಿಟ್ಟುಕೊಂಡು ನಾಟಕಗಳನ್ನು ಬರೆದರೆ ಪರೀಕ್ಷೆಯಲ್ಲಿ ಉತ್ತೀರ್ಣನಾಗಬಹುದು. ಆದರೆ ನಿಮ್ಮಿಂದ ಏಟನ್ನು ತಿನ್ನಲೇ ಬೇಕಾಗುತ್ತದೆ.

"ನನ್ನ ಶಕ್ತಿ-ಸಾಮರ್ಥ್ಯಗಳ ಬಗ್ಗೆ ಉಲ್ಲೇಖಿಸುತ್ತ ಹೀಗೆಂದು ಬರೆದಿದ್ದೀರಿ: 'ಇಂದಿನ ಬೇಡಿಕೆಗಳು ಮತ್ತು ಜನಸಮೂಹದ ಅಭಿರುಚಿಯನ್ನು ಮರೆಯಲಾರದೆ ಹೋದರೆ, ನಿನ್ನ ಈ ಶಕ್ತಿಗೆ ಅಡೆತಡೆಗಳುಂಟಾಗುತ್ತವೆ.' ನೀವು ಅನೇಕ ಕಾರ್ಯಗಳಲ್ಲಿ ತೊಡಗಿದ್ದೀರಿ. ಆದರೆ, ನಿಮ್ಮ ಬಳಿಗೆ ಬಂದು, ಈ ವಿಚಾರವನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂದು ನನಗೆ ತುಂಬ ಆಸೆ ಇದೆ. ಏಕೆಂದರೆ, ವರ್ತಮಾನಕಾಲವೂ ಒಂದು ಮಹದ್-ವಸ್ತುವೇ. ಅದರ ಬೇಡಿಕೆಗಳನ್ನು ಒಪ್ಪದಿದ್ದರೆ, ನಾವು ದಂಡವನ್ನು ತೆರಬೇಕಾಗುತ್ತದೆ...."[1]

ಇದಕ್ಕೆ ಉತ್ತರವಾಗಿ ರವೀಂದ್ರನಾಥ ಠಾಕೂರರು ಹೀಗೆಂದು ಬರೆದರು: "...... ನಿನ್ನಲ್ಲಿ ಪ್ರತಿಭೆ ಇದೆ. ಆದ್ದರಿಂದಲೇ, ನಿನ್ನನ್ನು ಒತ್ತಾಯಿಸುತ್ತಿದ್ದೇನೆ, ಈ ಒತ್ತಾಯ ಸಾಹಿತ್ಯದ ಪತಿಯಿಂದ ನಾನು ಮಾಡುತ್ತಿರುವ ಒತ್ತಾಯ. ಅನೇಕ ವಿಷಯಗಳಲ್ಲಿ

1. ಮಾರ್ಚ್, 1927.

(ಒಂದೊಂದು ಯುಗದಲ್ಲಿಯೂ) ಅಂದಂದಿನ ಭೋಗ ಆಯಾ ಕಾಲದಲ್ಲಿಯೇ ಕೊನೆಗೊಂಡುಬಿಡುತ್ತದೆ. ಆದರೆ, ಸಾಹಿತ್ಯದಲ್ಲಿ ಪ್ರತಿಯೊಂದು ಸಮುದಾಯವೂ ಚಿರಕಾಲದ ಸಂಪತ್ತಿಯನ್ನು ಬಯಸುತ್ತದೆ. ಇಂಥ ಸಂಪತ್ತಿಯನ್ನು ಸೃಜಿಸಬಲ್ಲ ಶಕ್ತಿ ಯಾರಲ್ಲಿದೆಯೋ ಅವರು ಇಂದಿನ ಯಾವುದೇ ಪ್ರಲೋಭನೆಗೆ ಒಳಗಾಗದಿರಲಿ ಹಾಗೂ ಅವರಿಗೆ ತಪೋಭಂಗವಾಗದಿರಲಿ ಎಂದು ನಾನು ಹೃತ್ಪೂರ್ವಕವಾಗಿ ಬಯಸುತ್ತೇನೆ. ಲೋಕದಲ್ಲಿ ಸಧ್ಯದ ಅವಧಿಯ ಬೇಡಿಕೆಯನ್ನು ಪೂರೈಸಲು ಬಂದಿರುವಂಥವರ ಸಂಖ್ಯೆ ಅಸೀಮಿತವಾಗಿರುತ್ತದೆ. ಅವರ ಸಮಾರಂಭಗಳು ಕ್ಷಣಿಕ ಉತ್ಸವಕ್ಕಾಗಿ ಸಿದ್ಧಪಡಿಸಲಾದ ಬೊಂಬಿನ ಸೀಳುಗಳಿಂದ ಕೂಡಿದ ಚಪ್ಪರದ ಸಮಾರಂಭಗಳಾಗಿರುತ್ತವೆ. ನೀನು ಅಲ್ಲೇನಾದರೂ ಕಾಲಿರಿಸಿದರೆ, ಜಾತಿಭ್ರಷ್ಟನೇ ಆಗಿಬಿಡುತ್ತೀಯೆ. ವರ್ತಮಾನಕಾಲವೂ ಒಂದು ಮಹದ್-ವಸ್ತುವೇ ಎಂದು ನೀನು ಬರೆದಿದ್ದೀಯೆ. ಅನುಪಸ್ಥಿತಕಾಲದಲ್ಲಿಯೂ ಎಲ್ಲಿ ಅದಕ್ಕೆ ಪ್ರವೇಶಾಧಿಕಾರ ವಿರುತ್ತದೆಯೋ ಅಲ್ಲಿ ಅದು ನಿಜವಾಗಿಯೂ ಮಹದ್-ವಸ್ತುವಾಗುತ್ತದೆ. ಕ್ಷಣ ಜೀವಿಗಳಿಗೆ ಸೇರುವಂಥ ಒಂದು ದೊಡ್ಡ ಅಂಶ ವರ್ತಮಾನಕಾಲದಲ್ಲಿರುತ್ತದೆ. ಆಧುನಿಕ 'ಡೆಮಾಕ್ರಸಿ'ಯ ಯುಗದಲ್ಲಿ ಸಾಹಿತ್ಯದ ದರ್ಬಾರಿನಲ್ಲಿ ಅವರು ಗಂಟಲು ಹರಿದುಕೊಂಡು ತಮ್ಮ ಬೇಡಿಕೆಯನ್ನು ಮಂಡಿಸುತ್ತಾರೆ. ಈ ಯುಗದಲ್ಲಿ ಈ ಬೇಡಿಕೆಯಿಂದ ತಪ್ಪಿಸಿಕೊಂಡು ಹೊರಬರುವುದೇ ಒಂದು ಕಠಿಣ ಸಮಸ್ಯೆಯಾಗಿ ಬಿಟ್ಟಿದೆ. ಹಿಂದಿನ ಯುಗಗಳಲ್ಲಿ ಈ ಸಮಸ್ಯೆ ಇಷ್ಟು ಕಠಿಣವಾಗಿರಲಿಲ್ಲ. ಇಂದಿನ ಯುಗದ ರಾಜನೀತಿ, ಸಮಾಜನೀತಿ ಮತ್ತು ಅರ್ಥನೀತಿಯ ಪ್ರಚಲಿತ ಘೋಷಣೆಗಳು ಒಂದೇ ಸಮನೆ ಒಂದೊಂದು ಬಾಯಿಂದಲೂ ಧ್ವನಿಸುತ್ತಿವೆ, ಪ್ರತಿಧ್ವನಿಸುತ್ತಿವೆ. ನಿಮ್ಮ ಘೋಷಣೆ ನನ್ನ ಘೋಷಣೆಯಲ್ಲ ಎಂದು ನಿನ್ನಂಥ ಸಾಹಿತಿಗಳು ಇಂಥ ಜನರಿಗೆ ಹೇಳಬೇಕು. ಅಲ್‌ಹೈತ್ ದಾಶೂರಾಯ್ ಅವರ ಕಾಲದಲ್ಲಿ, ಆ ಕಾಲದ ಜನಗಳು ದಾಶೂರಾಯ್ ಅವರಿಗೆ ಸಾಕಷ್ಟು ಪುರಸ್ಕಾರ ನೀಡಿದ್ದರು. ಆದರೆ, ಆ ಕಾಲ ಯಾವ ಚೆಕ್ಕಿಗೆ ಸಹಿ ಹಾಕಿತ್ತೋ, ಆ ಚೆಕ್ಕನ್ನು ಆಧುನಿಕ ಕಾಲದ ಬ್ಯಾಂಕಿನಲ್ಲಿ ನಗದೀಕರಿಸಲಾಗುವುದಿಲ್ಲ. ಇತ್ತ ಮೈಮನಸಿಂಹನ ಗಾಥಾಕಾವ್ಯ ಮತ್ತು ಜನಪದ ಸಾಹಿತ್ಯದ ಅವಧಿ ಇಂದೂ ಕೊನೆಗೊಂಡಿಲ್ಲ. ಅದು ಓದುಬರೆಹ ಬಾರದ ಜನಗಳ ಸಹಜವಾದ ಭಾಷೆಯಲ್ಲಿ ರಚಿತವಾಗಿದೆ. ಇಷ್ಟಾಗಿಯೂ ಅದರ ಭಾಷೆ ಚಿರಕಾಲದ ಭಾಷೆಯಾಗಿದೆ.... ನಾನು ಓದಿರುವ ನಿನ್ನ ಕಥೆಗಳಲ್ಲಿ ನೀನು ಅನಾಯಾಸವಾಗಿ ಚಿರಕಾಲದ ಸತ್ಯವನ್ನು ಮೂರ್ತಗೊಳಿಸಿದ್ದೀಯೆ. ಗುಂಪಿನ ಧ್ವನಿ ನಿನ್ನ ಧ್ವನಿಯಲ್ಲಿ ಬೆರೆತುಹೋಗಿ ಸತ್ಯದ ಚಿತ್ರಣದ ಮೇಲೆ ತನ್ನ ಮುದ್ರೆಯನ್ನು ಒತ್ತಿಲ್ಲ. ಆಗ ನೀನು ಗುಂಪಿನಿಂದ ದೂರವಾಗಿದ್ದೆ. ಆದರೆ, ಈಗ ನೀನು ಬರೆಯುತ್ತಿರುವುದನ್ನು ನೋಡಿದರೆ, ನಿನ್ನ ಲೇಖನಿ ಮೇಲೆ ನಿನಗೆ ತಿಳಿದಂತೆಯೋ ತಿಳಿಯದಂತೆಯೋ ಗುಂಪಿನ ಭಾರ ಬಿದ್ದುಬಿಟ್ಟಿದೆಯೆಂಬ ಸತ್ಯ ಎಲ್ಲಿಯಾದರೂ ಗೋಚರಿಸಿಬಿಟ್ಟೀತೇನೋ ಎಂಬ ಹೆದರಿಕೆ ನನಗೆ ಉಂಟಾಗುತ್ತಿರುತ್ತದೆ. ಅದು ಎಂಥ ದೊಡ್ಡ ಹಾನಿಯೆಂದರೆ, ಅದನ್ನು ನಾನು ಕಣ್ಣಾರೆ ನೋಡಲಾರೆ.

"ನಿನ್ನ ನಾಟಕದ ಪರಿಪ್ರೇಕ್ಷ್ಯದ ಬಗೆಗೆ ನಾನು ಆಡಿರುವ ಮಾತುಗಳು ನಾಟಕದ

ಕಥಾನಕಕ್ಕೆ ಸಂಬಂಧಿಸಿದಂಥವು. ನೀನು ಹೇಳಬಯಸಿದ್ದುದನ್ನು ಅದರ ಪರಿಸ್ಥಿತಿಗಳೊಂದಿಗೆ ಸಂಗತವಾಗಿಸಿ ಹೇಳಿದ್ದರೆ, ಆದರಿಂದ ಅದು ಭಾಷೆಯಲ್ಲಿ ಮತ್ತು ಘಟನೆಗಳಲ್ಲಿ ಬೇರೊಂದು ರೂಪದಲ್ಲಿಯೇ ಮುಂದೆ ಬರುತ್ತಿತ್ತು. ಮೂಲ ಸಂಗತಿ ಹಾಗೆಯೇ ಉಳಿದುಕೊಳ್ಳುತ್ತಿತ್ತು; ಆದರೆ, ರೂಪ ಮಾತ್ರ ಬೇರೆಯಾಗಿರುತ್ತಿತ್ತು. ಕಲೆಯಲ್ಲಿ ವಿಷಯದೊಂದಿಗೆ ರೂಪದ ಸಾಮಂಜಸ್ಯ ಸ್ಥಾಪಿತವಾದರೆ, ಆಗ ಮಾತ್ರವೇ ಅದು ಸತ್ಯವಾಗುತ್ತದೆ. ನಾನು ನಿನ್ನ ಈ ನಾಟಕದ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯ ನಿನಗೆ ಅಸಂಗತವೆಂದು ತೋರಿದರೆ, ಅದನ್ನು ನಿನ್ನ ಮನಸ್ಸಿನಿಂದ ಸಂಪೂರ್ಣವಾಗಿ ತೆಗೆದು ಹಾಕಿಬಿಡು. ನಿನ್ನ ಸೃಷ್ಟಿಯ ಆದರ್ಶ ಸ್ವತಃ ನಿನ್ನ ಮನಸ್ಸಿನಲ್ಲಿಯೇ ಇರುತ್ತದೆ. ನೀನು ಅದನ್ನು ಕಾಪಾಡಿಕೊಂಡಿದ್ದರೆ, ಬೇರೇನೂ ಹೇಳಬೇಕಾಗಿಲ್ಲ; ಆದರೆ ಗುಂಪಿನ ಆಟಾಟೋಪ ಮತ್ತು ಮರುಳು ಮಾಡುವಿಕೆಯ ಪ್ರವೃತ್ತಿಗಳಿಗೆ ನಿನ್ನ ಲೇಖನಿ ಬಲಿಯಾಗಿ ವಿಕೃತಗೊಂಡಿದ್ದಲ್ಲಿ ಅದು ವಿಷಾದದ ಸಂಗತಿಯಾಗುತ್ತದೆ.

"ಈಗ ಕಲ್ಕತ್ತೆಯಲ್ಲಿಯೇ ಇದ್ದೇನೆ. ಎಂದಾದರೂ ಒಮ್ಮೆ ಭೇಟಿಯಾದರೆ ಎದುರು ಬದುರು ಕುಳಿತು ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಬಹುದು."[1]

ಶರತ್‌ಚಂದ್ರರು ನಾಟಕಕಾರರೇನೂ ಆಗಿರಲಿಲ್ಲ. ಆದರೆ, ಅವರ ಕಾದಂಬರಿಗಳ ನಾಟಕ-ರೂಪಾಂತರಗಳು ದುರ್ದಿನಗಳಲ್ಲಿ ಬಂಗಾಳಿ ರಂಗಭೂಮಿಯನ್ನು ಖಂಡಿತವಾಗಿಯೂ ರಕ್ಷಿಸಿದುವು. ದೂರದರ್ಶಿಗಳಾಗಿದ್ದ ರವೀಂದ್ರನಾಥರು ಅವರ ಶಕ್ತಿಯನ್ನು ಪುರಸ್ಕರಿಸಿ ಪ್ರೋತ್ಸಾಹಿಸಿದ್ದು ವ್ಯರ್ಥಪ್ರಯತ್ನವೇನೂ ಆಗಿರಲಿಲ್ಲ. ಕೃತಿಗಳ ಜನಪ್ರಿಯತೆ, ಕಥೆಯಲ್ಲಿ ನಾಟಕೀಯ ತಥ್ಯಗಳಿಗೆ ನೀಡಿದ್ದ ಪ್ರಾಧಾನ್ಯ, ವಾಸ್ತವವಾದಿ ಅಂತರ್ದೃಷ್ಟಿ, ಪ್ರಸಾದ ಗುಣ, ಪ್ರಾಂಜಲವೂ ಸರಳವೂ ಹೃದಯಸ್ಪರ್ಶಿಯೂ ಆದ ಭಾಷೆ-ಎಷ್ಟೆಲ್ಲ ಗುಣಗಳು ಆ ಶಕ್ತಿಗೆ ಆಧಾರವಾಗಿದ್ದುವು! ಇದರ ಜೊತೆಗೆ ಒಂದು ಅವಗುಣವೂ ಇತ್ತು. ಹೃದಯ ಪಕ್ಷಕ್ಕೆ - ಅಂದರೆ ಭಾವುಕತೆಗೆ - ದೊರೆತಿದ್ದ ಅಸಾಧಾರಣ ಮಹತ್ವ ಅಥವಾ ಪ್ರಾಧಾನ್ಯವೇ ಆ ಅವಗುಣವಾಗಿತ್ತು. ಹೀಗಾಗಿ, ಚರಮ ಪರಿಣತಿ ನ್ಯಾಯಸಂಗತವಾಗಿ ಉಳಿಯುತ್ತಿರಲಿಲ್ಲ. ಅವರ ನಾಟಕಗಳಲ್ಲಿ 'ಷೋಡಶೀ' ಉತ್ಕೃಷ್ಟವಾದ ಕೃತಿಯಾಗಿತ್ತು. ಅದರ ರಚನಾಕೌಶಲ ನಿರ್ದೋಷವಾಗಿದೆ; ಕಥೆಯಲ್ಲಿ ಮಾಧುರ್ಯವಿದೆ. ಆದರೆ, ಇತರ ನಾಟಕಗಳು ಅಷ್ಟು ಯಶಸ್ವಿಯಾಗಲಿಲ್ಲ.

ಬಹಳ ಹಿಂದೆಯೇ ಭೂಪೇಂದ್ರನಾಥ ಬಂದೋಪಾಧ್ಯಾಯ ಅವರು 'ಬಿರಾಜ್‌ಬಹೂ'ವಿನ ನಾಟಕ ರೂಪಾಂತರವನ್ನು ಸಿದ್ಧಪಡಿಸಿದ್ದರು. ಸ್ಟಾರ್ ಥಿಯೇಟರಿನ ವೇದಿಕೆಯ ಮೇಲೆ ಅದನ್ನು ಅಭಿನಯಿಸಲಾಗಿತ್ತು.[2] ಆದರೆ, ಈ ರೂಪಾಂತರದ ಸಿದ್ಧತೆಯಲ್ಲಿ ಶರತ್‌ಚಂದ್ರರ ಪಾತ್ರವೇನೂ ಇರಲಿಲ್ಲ. ಇದೇ ರೀತಿ, ದೇವನಾರಾಯಣ ಗುಪ್ತರ 'ರಾಮೇರ್ ಸುಮತಿ'ಯ ನಾಟಕರೂಪಾಂತರವನ್ನು ಅಣಿಗೊಳಿಸಿದ್ದು, ಅದೂ ತುಂಬ ಯಶಸ್ವಿಯಾಗಿತ್ತು. ಶರತ್‌ಚಂದ್ರರ

1. ಮಾರ್ಚ್ 11, 1928.
2. ಆಗಸ್ಟ್ 3, 1918.

ಪ್ರಕಾಶಕರಾಗಿದ್ದ ಹರಿದಾಸ ಚಟ್ಟೋಪಾಧ್ಯಾಯ ಅವರೇ 'ಪಲ್ಲೀಸಮಾಜ'ದ ರೂಪಾಂತರಕಾರರಾಗಿದ್ದರು. 'ಆರ್ಟ್ ಥಿಯೇಟರಿನ' ಮೂಲಕ ಇದನ್ನು ಸ್ಟಾರ್ ರಂಗಭೂಮಿಯಲ್ಲಿ ಸಾದರ ಪಡಿಸಲಾಗಿತ್ತು.[1] ಮುಂದೆ, ಇದರ ಪರಿಷ್ಕೃತ ರೂಪ 'ರಮಾ' ಎಂಬ ಹೆಸರಿನಲ್ಲಿ ಹೊರಬಂದಿತು.[2] ಇದರ ವಿಷಯದಲ್ಲಿ ಶರತ್‌ಚಂದ್ರರು ತುಂಬ ಶ್ರಮವಹಿಸಿದ್ದರು. ಶಿಶಿರ್ ಭಾದುರಿಯವರು ಈ ಪರಿಷ್ಕೃತ ನಾಟಕ ರೂಪಾಂತರವನ್ನು ನಾಟ್ಯಮಂದಿರದಲ್ಲಿ ತುಂಬ ಯಶಸ್ವಿಯಾಗಿ ಪ್ರದರ್ಶಿಸಿದ್ದರು.

'ಅಂಧಾರೆ ಆಲೋ' ಎಂಬುದು ಅವರ ತುಂಬ ಸಾಧಾರಣ ಕಥೆ. ಅದನ್ನು ಆಧಾರವಾಗಿರಿಸಿಕೊಂಡು ಕೆಲವು ವರ್ಷಗಳ ಹಿಂದೆ[3] ಒಂದು ಮೂಕಿ ಚಲನಚಿತ್ರವನ್ನು ತಯಾರಿಸಲಾಗಿತ್ತು. ಆಗಿನ್ನೂ ಸವಾಕ್ (ಟಾಕಿ) ಚಲನಚಿತ್ರಗಳು ಕಾಣಿಸಿಕೊಂಡಿರಲಿಲ್ಲ. ಅದನ್ನು ತಯಾರಿಸುವಾಗ, ಶರತ್‌ಚಂದ್ರರು ಅದರಲ್ಲಿ ಆಸಕ್ತಿ ವಹಿಸಿದ್ದರು. ಈ ಚಲನಚಿತ್ರ ಸಾಕಷ್ಟು ಚರ್ಚೆಯ ವಸ್ತುವಾಗಿತ್ತು. ಅನೇಕರು ಗದ್ಗದ ಭಾವದಿಂದ ಅದನ್ನು ಹೊಗಳಿದ್ದರು. ಹಿಂದೀ ಲೇಖಕರಾದ ಇಳಾಚಂದ್ರ ಜೋಶಿಯವರೂ ಈ ಚಿತ್ರವನ್ನು ನೋಡಿದ್ದರು. ಶರತ್‌ಚಂದ್ರರನ್ನು ಕಾಣಲು ಹೋಗಿದ್ದಾಗ, ಅವರು ಜೋಶಿಯವರನ್ನು ಹೀಗೆಂದು ಕೇಳಿದ್ದರು: "ಚಿತ್ರದ ಬಗ್ಗೆ ನಿಮಗೆ ಏನನ್ನಿಸಿತು ? ನಿಜವಾಗಿ ಹೇಳಿ."

ಸಂಕೋಚಪಡುತ್ತ ಜೋಶಿಯವರು ನಿಧಾನವಾಗಿ ಉತ್ತರಿಸಿದರು: "ಯಾವುದೇ ಒಂದು ಒಳ್ಳೆಯ ಸಾಹಿತ್ಯದ ಕಥೆಯ 'ಸ್ಕ್ರಿಪ್ಟ್' ಅನ್ನು ಅಷ್ಟೇ ಚೆನ್ನಾಗಿ ಚಲನಚಿತ್ರಕ್ಕೆ ಅಳವಡಿಸುವುದು ತುಂಬ ಕಷ್ಟದ ಕೆಲಸ. ಇದುವರೆಗೆ ಯಾವುದೇ ವಿದೇಶೀ ಚಲನಚಿತ್ರವೂ ಯಶಸ್ವಿಯಾಗಿಲ್ಲ. ಆದ್ದರಿಂದ, ಉತ್ಕೃಷ್ಟ ಸಾಹಿತ್ಯಿಕ ಕಲೆಯ ಮಾನದಂಡದ ಅಥವಾ ಆಧಾರದ ಮೇಲೆ ಇದರ ಬಗ್ಗೆ ಚರ್ಚಿಸುವುದು ಉಚಿತವಲ್ಲ. ಹಾಗೇನಾದರೂ ಮಾಡಿದರೆ, 'ಅಂಧಾರೆ ಆಲೋ' ವಿಷಯದಲ್ಲಿ ತುಂಬ ನಿರಾಶೆಯಾಗುತ್ತದೆ. ಆದರೆ, ನನ್ನ ಆಕ್ಷೇಪ ಇರುವುದೇ ಇನ್ನೊಂದು ಸಂಗತಿಯ ಬಗ್ಗೆ."

ಕುತೂಹಲದಿಂದ ಶರತ್‌ಚಂದ್ರರು ಕೇಳಿದರು: "ಯಾವ ಸಂಗತಿಯ ಬಗ್ಗೆ ?"

"ಆ ಚಿತ್ರ ನಿರ್ಮಾಪಕ ನಿಮ್ಮ ಈ ಕಥೆಯನ್ನೇ ಚಲನಚಿತ್ರಕ್ಕೆ ಉಪಯುಕ್ತವಾದುದೆಂದೇಕೆ ಭಾವಿಸಿದ ? ಚಲನಚಿತ್ರ ನಿರ್ಮಾಣಕ್ಕೆ ತುಂಬ ಉಪಯುಕ್ತವಾದಂಥ ಅಥವಾ ಹೇಳಿಮಾಡಿಸಿದಂಥ ಸಾಹಿತ್ಯಿಕ ದೃಷ್ಟಿಯಿಂದಲೂ ಇದಕ್ಕಿಂತಲೂ ಎಷ್ಟೋ ಒಳ್ಳೆಯವೆನ್ನಬಹುದಾದ ಅನೇಕ ಕಥೆಗಳು ಇದ್ದುವಲ್ಲ!"

" 'ಅಂಧಾರೇ ಆಲೋ' ಸಾಹಿತ್ಯದ ದೃಷ್ಟಿಯಿಂದ ಉತ್ತಮವಾದುದೆಂದು ನಿಮಗೆ ಅನ್ನಿಸುವುದಿಲ್ಲವೆ ?"

"ಅನ್ನಿಸುತ್ತದೆ. ಆದರೂ, ಅದರಲ್ಲಿ ನಿಮ್ಮ ಕಲೆಯ ಚೊಕ್ಕ ರೂಪ ಎದ್ದು

---

1. ಆಗಸ್ಟ್ 1928.
2. ಆಗಸ್ಟ್ 4, 1928.
3. 1923ರಲ್ಲಿ

ಕಾಣುವುದಿಲ್ಲ ಆ ಕಥೆಯಲ್ಲಿ ಅವಾಸ್ತವಿಕತೆ, ಕೃತ್ರಿಮತೆ ಮತ್ತು ಅಪರಿಪಕ್ವತೆಯ ಚಿಹ್ನೆಗಳು ಸ್ಪಷ್ಟವಾಗಿ ಎದ್ದುಕಾಣುತ್ತವೆ. ಮೊದಲ ಪ್ರಯತ್ನಗಳ ಅವಧಿಯಲ್ಲಿ ನೀವು ಬರೆದ ಕಥೆ ಇದಾಗಿರಬೇಕೆಂದು ತೋರುತ್ತದೆ."

"ಇಲ್ಲ. ನಿಮ್ಮ ಈ ಭಾವನೆ ಸಂಪೂರ್ಣವಾಗಿ ತಪ್ಪು. ನನ್ನ ಆಲೋಚನೆಗಳು ಪರಿಪಕ್ವವಾಗಿದ್ದ ಕಾಲದಲ್ಲಿಯೇ ನಾನು ಈ ಕಥೆಯನ್ನು ಬರೆದೆ. ಆಗ ನನ್ನ ಬರೆವಣಿಗೆಯ ಶಕ್ತಿಯೂ ಪೂರ್ಣರೂಪದಲ್ಲಿ ವಿಕಾಸಗೊಂಡಿತ್ತು."

ಸಹಜವಾದ ಆಶ್ಚರ್ಯದಿಂದಲೇ ಜೋಶಿಯವರು ಕೇಳಿದರು: "ಹೌದೇನು! ನಾನಂತೂ 'ದೇವದಾಸ್'ಗಿಂತಲೂ ಮೊದಲೇ ಇದನ್ನು ಬರೆದಿರಬೇಕೆಂದು ಭಾವಿಸಿದ್ದೆ."

"ಆದರೆ, ಇದರಲ್ಲಿ ಅಪರಿಪಕ್ವತೆ ಮತ್ತು ಕೃತ್ರಿಮತೆ ಎಲ್ಲಿ ಎದ್ದು ಕಾಣುತ್ತದೆಂದು ನೀವು ಹೇಳಲೇ ಇಲ್ಲವಲ್ಲ!"

ಜೋಶಿಯವರು ಕಥೆಯ ಬಗ್ಗೆ ವಿಸ್ತಾರವಾಗಿ ಚರ್ಚಿಸುತ್ತ, ಅದು ಅಮನೋವೈಜ್ಞಾನಿಕವೂ, ಅವಾಸ್ತವಿಕವಾಗಿಯೂ ಇದೆ ಎಂಬುದನ್ನು ಸಿದ್ಧಪಡಿಸಲು ಪ್ರಯತ್ನಿಸಿದರು. ಕೆಲವು ಕ್ಷಣಗಳ ವರೆಗೆ ಶರತ್‌ಚಂದ್ರರು ಗಂಭೀರ ಭಾವನೆಯಿಂದ ಯೋಚಿಸುತ್ತಿದ್ದರು. ಆಮೇಲೆ ಅವರು ಹೀಗೆಂದರು: "ಕಾದಂಬರಿಯ ಸತ್ಯ ಜೀವನ ಸತ್ಯವೇ ಆಗಿರಬೇಕೆಂದು ನೀವೇಕೆ ನಿರೀಕ್ಷಿಸುತ್ತೀರಿ? ಕಾದಂಬರಿ ಜೀವನದ ಛಾಯಾಚಿತ್ರವಾಗಿರಬೇಕೆಂದು ನೀವು ಬಯಸುತ್ತೀರೇನು? ಸಂಭಾವ್ಯ ಸತ್ಯಕ್ಕೂ ಕಾದಂಬರಿಯಲ್ಲಿ ಅಥವಾ ಕಥೆಯಲ್ಲಿ ಅವಕಾಶವಿರಬೇಕು. ಜೊತೆಗೆ, ಯಾವುದಾದರೂ ಒಂದು ವಿಶಿಷ್ಟ ಆದರ್ಶವನ್ನು ಮುಂದಿರಿಸುವುದಕ್ಕಾಗಿ ವಾಸ್ತವತೆಯನ್ನು ಸ್ವಲ್ಪ ಮಟ್ಟಿಗೆ ಉಲ್ಲಂಘಿಸಿ - ತಿರುಚಿ ಮಾಡಬೇಕಾಗಿ ಬಂದರೆ, ಅದರಲ್ಲಿ ಯಾವುದೇ ಅನೌಚಿತ್ಯವಿದೆಯೆಂದು ನಾನು ಭಾವಿಸುವುದಿಲ್ಲ."

ಜೋಶಿಯವರೆಂದರು: "ಆದರ್ಶವನ್ನು ನಾನೇನೂ ವಿರೋಧಿಸುವುದಿಲ್ಲ. ಯಾವುದೇ ಕಥೆ ಅಥವಾ ಕಾದಂಬರಿ ಜೀವನದ ಛಾಯಾಪ್ರತಿಯಾಗಿರಬೇಕೆಂದೂ ನಾನು ಭಾವಿಸುವುದಿಲ್ಲ. ಆದರೆ, ಯಥಾರ್ಥದ ಅಥವಾ ವಾಸ್ತವಿಕತೆಯ ನೆಲೆಯ ಮೇಲೆ ನಿಲ್ಲಲಾರದಂಥ ಆದರ್ಶಕ್ಕೆ ಇಂದಿನ ಜೀವನದಲ್ಲಿ ಯಾವುದೇ ಮೌಲ್ಯ ಇದೆಯೆಂದು ನಾನು ಒಪ್ಪಲು ಸಿದ್ಧನಿಲ್ಲ. ಈ ಕಾರಣಕ್ಕಾಗಿಯೇ ರಷ್ಯದ ಆದರ್ಶವಾದಿ ಕಲೆಗಾರರು ಯಥಾರ್ಥವನ್ನು ತುಂಬ ಸೂಕ್ಷ್ಮರೂಪದಲ್ಲಿ ತಮ್ಮದಾಗಿಸಿಕೊಂಡಿದ್ದಾರೆ. ಆದರ್ಶವಾದಿಯಾಗಿದ್ದರೂ ಟಾಲ್‌ಸ್ಟಾಯ್ ಅವರು ಪ್ರತ್ಯಕ್ಷ ಜೀವನದ ಸತ್ಯವನ್ನು, ವಾಸ್ತವವಾದೀ ದೃಷ್ಟಿಕೋನವನ್ನು ಅಂಗೀಕರಿಸಿದ್ದಾರೆ. ಜೋಲಾ ಅವರ ವರ್ಗಕ್ಕೆ ಸೇರುವ ಸ್ವಭಾವವಾದೀ ಕಲೆಗಾರರಿಗೆ ನಾನು ವಿಶೇಷ ಮಹತ್ವ ಕೊಡುವುದಿಲ್ಲ. ಅವರು ಜೀವನದ ಒಳ್ಳೆಯ ಮತ್ತು ಕೆಟ್ಟ ಮುಖಗಳೆಲ್ಲವನ್ನೂ ಇರುವಂತೆ ಚಿತ್ರಿಸುವುದೇ ತಮ್ಮ ಕರ್ತವ್ಯದ 'ಇತಿಶ್ರೀ'ಯೆಂದು ಭಾವಿಸಿದ್ದಾರೆ. ಅಂಥ ಚಿತ್ರವನ್ನು ಯಾವುದೇ ಆದರ್ಶದ ಸ್ಥಾಪನೆಗೆ 'ಸಾಧನ'ವೆಂದು ಭಾವಿಸದೆ, ಅದನ್ನೇ 'ಸಾಧ್ಯ'ವೆಂದು ಭಾವಿಸಿದ್ದಾರೆ. ಆದರೆ, ಆದರ್ಶದ ಸ್ಥಾಪನೆಗೆ ಜೀವನದ ಸತ್ಯತೆ ಸುತರಾಂ ಅಗತ್ಯವಾಗುತ್ತದೆ ಎಂಬುದು ನನ್ನ ದೃಢವಾದ ನಂಬಿಕೆ."

ಶರತ್‌ಚಂದ್ರರು ಈ ವಾದವನ್ನು ಒಪ್ಪಲಿಲ್ಲ. ಆದರೆ, ತುಂಬ ಶಾಂತವಾಗಿ ಅವರು ಹೀಗೆಂದರು: "ನಿಮ್ಮ ದೃಢವಾದ ನಂಬಿಕೆಯನ್ನು ಖಂಡಿಸುವ ಪ್ರವೃತ್ತಿ ಈಗ ನನ್ನಲ್ಲಿ ಮೂಡುತ್ತಿಲ್ಲ. ಇದಕ್ಕೆ ಉಪಯುಕ್ತವಾಗುವಂಥ ಯಾವ ತರ್ಕವೂ ನನಗೆ ಹೊಳೆಯುತ್ತಿಲ್ಲ. ಆದರೆ, ವಾಸ್ತವವಾದೀ ಲೇಖಕರ ತಂತ್ರವನ್ನು ನಾನೆಂದೂ ಅಂಗೀಕರಿಸುವುದಿಲ್ಲವೆಂಬುದನ್ನಂತೂ ಸ್ಪಷ್ಟಪಡಿಸಬಯಸುತ್ತೇನೆ. ಅದು ನನ್ನ ಸ್ವಭಾವಕ್ಕೆ ಹೊಂದುವಂಥದೂ ಅಲ್ಲ. ಜೊತೆಗೆ, ನನಗೆ ಇಷ್ಟವಾಗಿರುವಂಥ ಜೀವನದ ಚಿತ್ರಣಕ್ಕೆ ಹಾಗೂ ಆದರ್ಶ ಸ್ಥಾಪನೆಗೆ ಅದು ಉಪಯುಕ್ತವೂ ಆಗಿಲ್ಲ."

ಜೋಶಿಯವರು ಈ ಅಪ್ರಿಯ ಪ್ರಸಂಗವನ್ನು ಮುಂದುವರಿಸಲಿಲ್ಲ. ಹಾಗೆ ಮಾಡುವುದು ಉಚಿತವೂ ಆಗಿರಲಿಲ್ಲ. ಜೋಶಿಯವರ ಆಕ್ಷೇಪ ಸರಿಯಾಗಿಯೇ ಇತ್ತು. ಕಥೆಯಲ್ಲಿ ಒಬ್ಬ ವೇಶ್ಯೆಯ ಹೃದಯ ಪರಿವರ್ತನೆಯಾಗುತ್ತದೆಂದು ತೋರಿಸಲಾಗಿದೆ. ಆದರೆ, ಅದು ತುಂಬ ಆಕಸ್ಮಿಕವೂ ಅವಾಸ್ತವಿಕವೂ ಆಗಿದೆ. ಸಣ್ಣ ಕಥೆಯಲ್ಲಿ ಪರಸ್ಪರ ವಿರುದ್ಧಭಾವಗಳು ಮೂಡಿನಿಲ್ಲುವ ರೀತಿ ತುಂಬ ನಾಟಕೀಯವಾಗಿ ಬಿಟ್ಟಿದೆ ಎಂಬ ಅನುಭವ ಉಂಟಾಗುತ್ತದೆ. ಅದನ್ನು ವಿಶ್ವಸನೀಯವಾಗಿಸಲು ಬೃಹತ್ ಆಯಾಮದ ಅಗತ್ಯವಿತ್ತು. ವ್ಯಾಪಕವಾದ ವಿಶ್ಲೇಷಣೆಯ ಕೊರತೆಯಿಂದಾಗಿ, ಅದು ಸಹಜವೆನ್ನಿಸದೆ ಹೋಗಿದೆ. ಅದರ ಕಥಾವಸ್ತು ಕಾದಂಬರಿಗೆ ಹೆಚ್ಚು ಉಪಯುಕ್ತವಾಗಿದೆಯೆಂದು ಹೇಳಬಹುದು. ಶರತ್‌ಚಂದ್ರರು ಸಣ್ಣಕಥೆಗಳನ್ನು ಬರೆದಿರುವುದೇ ಕಮ್ಮಿ. ಅವರ ಪ್ರತಿಭೆ ವಾಸ್ತವವಾಗಿ ವಿಜೃಂಭಿಸಿರುವುದು ಕಾದಂಬರಿಯ ಕ್ಷೇತ್ರದಲ್ಲಿಯೇ.

ಮೂಕಿ-ಚಲನಚಿತ್ರಗಳ ಆ ಯುಗದಲ್ಲಿ 'ಅಂಧಾರೇ ಆಲೋ' ಮಾತ್ರವಲ್ಲದೆ, 'ಚಂದ್ರನಾಥ', 'ದೇವದಾಸ', 'ಶ್ರೀಕಾಂತ', 'ಚರಿತ್ರಹೀನ' ಹಾಗೂ 'ಸ್ವಾಮಿ' ಇವುಗಳನ್ನು ಆಧಾರವಾಗಿರಿಸಿ ಚಿತ್ರಗಳನ್ನು ತಯಾರಿಸುವ ಹಕ್ಕುಗಳನ್ನು ಹದಿನೈದು ವರ್ಷಗಳ ವರೆಗೆ ಮಾಡರ್ನ್ ಥಿಯೇಟರ್ ಅವರಿಗೆ ಮಾರಾಟಮಾಡಿದ್ದರು.[1]

## 17

ನಾರಿಯ ಬಗೆಗಿನ ಶರತ್‌ಚಂದ್ರರ ದೃಷ್ಟಿಕೋನವೇ ಅವರ ಸಾಹಿತ್ಯದ ಬೆನ್ನೆಲುಬು. ಮತ್ತೆ ಮತ್ತೆ ಅವರು ತಮ್ಮ ಈ ದೃಷ್ಟಿಕೋನವನ್ನು ಸ್ಪಷ್ಟಪಡಿಸಿದ್ದಾರೆ. ಖ್ಯಾತಿ ಹೆಚ್ಚುತ್ತ ಹೋದಂತೆ, ಅವರು ಅನೇಕ ಸಭೆ-ಸಮಾರಂಭಗಳಲ್ಲಿ ಪಾಲ್ಗೊಳ್ಳಬೇಕಾಗಿ ಬರುತ್ತಿತ್ತು. ಅಲ್ಲೆಲ್ಲ ಬಹುಶಃ ಇದೇ ಪ್ರಶ್ನೆ ಅವರ ಮುಂದೆ ಬರುತ್ತಿತ್ತು. ರಾಜನಾರಾಯಣ ಬಸು ಸ್ಮಾರಕ ಪಾಠಶಾಲೆಯ ಎರಡನೆಯ ವಾರ್ಷಿಕ ಅಧಿವೇಶನದ ಅಧ್ಯಕ್ಷತೆ ವಹಿಸುವುದಕ್ಕಾಗಿ ಅವರು ಮೇದಿನೀಪುರಕ್ಕೆ ಹೋಗಿದ್ದರು.[2] ಅಲ್ಲಿ ಅವರ ಗೌರವಾರ್ಥ ನಡೆದ ಗೋಷ್ಠಿಯಲ್ಲಿ ಯಾರೋ ಒಬ್ಬರು ಅವರನ್ನು ಹೀಗೆಂದು ಕೇಳಿದರು: "ಶರತ್‌ಬಾಬೂ, ಸತೀತ್ವವೇ ನಾರೀತ್ವ. ನೀವು ಇವೆರಡರನ್ನೂ ಏಕೆ ಬೇರ್ಪಡಿಸಿದ್ದೀರಿ ?"

---

1. ಡಿಸೆಂಬರ್ 4, 1925ರ ಪತ್ರ - ನಿರ್ಮಲಚಂದ್ರರ ಹೆಸರಿಗೆ.
2. ಫೆಬ್ರುವರಿ 24, 1924.

ಶರತ್‌ಚಂದ್ರರೆಂದರು: "ಈ ಪ್ರಶ್ನೆಗೆ ಉತ್ತರವಾಗಿ ನೀವು ಒಂದು ಕಥೆಯನ್ನು, ಕೇಳಬೇಕಾಗುತ್ತದೆ. ನನ್ನ ಬಾಲ್ಯಕಾಲದಲ್ಲಿ ನಡೆದ ಘಟನೆ ಇದು. ನಮ್ಮ ಹಳ್ಳಿಯಲ್ಲಿ ಒಬ್ಬ ಬಾಲವಿಧವೆ ಇದ್ದಳು. ಹಳ್ಳಿಯ ಆ ಹೆಣ್ಣುಮಗಳು ನಮಗೆ ಸೋದರಿಯಂತಿದ್ದಳು. ದೌರ್ಭಾಗ್ಯದಿಂದ, ಮದುವೆಯಾದ ಕೆಲವೇ ದಿವಸಗಳ ಬಳಿಕ ಅವಳ ಗಂಡ ತೀರಿಕೊಂಡ. ವಿಧವೆಯ ವೇಷವನ್ನು ತೊಟ್ಟು ಅವಳು ತವರಿಗೆ ಹಿಂದಿರುಗಿದಳು. ಅವಳಿಗೆ ಅಣ್ಣತಮ್ಮಂದಿರಾಗಲೀ ಅಕ್ಕತಂಗಿಯರಾಗಲೀ ಇರಲಿಲ್ಲ. ತಾಯಿ-ತಂದೆ ಎಷ್ಟು ವರ್ಷ ಬದುಕಿದ್ದಾರು ? ಅವಳಿಗೆ ಮುವ್ವತ್ತು-ಮುವ್ವತ್ತೆರಡು ವರ್ಷವಾಗುವ ಹೊತ್ತಿಗೆ ಅವರಿಬ್ಬರೂ ಕಣ್ಣು ಮುಚ್ಚಿದರು. ಆಗಿನಿಂದಲೂ ಅವಳು ಅದೇ ಮನೆಯಲ್ಲಿ ವಾಸವಾಗಿದ್ದಳು. ಅವಳ ಆ ಮಣ್ಣಿನ ಮನೆಯ ಸುತ್ತಲೂ ಎತ್ತರವಾದ ಗೋಡೆಗಳಿದ್ದುವು. ಬಂದು ಹೋಗಿ ಮಾಡಲು ಅಂಗಳದಲ್ಲಿ ಒಂದು ಕಡೆ ಮಾತ್ರ ಒಂದು ಬಾಗಿಲಿತ್ತು. ಸಂಜೆಯಾಗುತ್ತಲೇ ಒಳಗಿನಿಂದ ಆ ಬಾಗಿಲನ್ನು ಮುಚ್ಚಿಬಿಡಲಾಗುತ್ತಿತ್ತು.

"ಈ ಸೋದರಿಗೆ ಪ್ರೀತಿ-ವಿಶ್ವಾಸಗಳನ್ನು ತೋರದೆ ಇದ್ದಂಥ ಒಂದೇ ಒಂದು ಕುಟುಂಬವೂ ಆ ಹಳ್ಳಿಯಲ್ಲಿ ಇರಲಿಲ್ಲ. ಇದಕ್ಕೆ ಒಂದು ಕಾರಣವೂ ಇತ್ತು. ಜನರಿಗೆ ಕಾಯಿಲೆ-ಕಸಾಲೆ ಅಥವಾ ಶೋಕದ ಸಂದರ್ಭಗಳು ಒದಗಿದಾಗ, ಆಗ ಊಟ-ತಿಂಡಿಗಳನ್ನೂ ಮರೆತು ಮನಃಪೂರ್ವಕವಾಗಿ ಅವರಿಗೆ ಸೇವೆ ಸಲ್ಲಿಸುತ್ತಿದ್ದಳು. ಅವಳಿಗಿಂತಲೂ ಹೆಚ್ಚು ಶ್ರಮವಹಿಸಿ ದುಡಿಯುವಂಥವರು ಯಾರೂ ಕಣ್ಣಿಗೆ ಬೀಳುತ್ತಿರಲಿಲ್ಲ. ಅವಳ ಉಪಕಾರದ, ಸಹಾಯದ ಕೃತಜ್ಞತೆಯ ಹೊರೆಯಿಂದ ಬಾಗಿರದಿದ್ದಂಥ ಯಾವೊಂದು ಮನೆಯೂ ಆ ಹಳ್ಳಿಯಲ್ಲಿ ಇರಲಿಲ್ಲ.

"ಆಗ ನಾನಿನ್ನೂ ಹುಡುಗನಾಗಿದ್ದೆ. ಬಗೆಬಗೆಯ ತುಂಟಾಟಗಳಲ್ಲಿ ದಿನಗಳು ಉರುಳಿ ಹೋಗುತ್ತಿದ್ದುವು. ಆ ಸೋದರಿಯನ್ನು ಬೆದರಿಸಬೇಕೆಂಬ ಕೆಟ್ಟ ಆಲೋಚನೆ ಒಂದು ದಿವಸ ಮೂಡಿತು. ಮನೆಯಲ್ಲಿ ಅವಳು ಹೇಗೂ ಒಂಟಿಯಾಗಿರುತ್ತಾಳೆ! ಬೆದರಿಸಲು ಇದಕ್ಕಿಂತಲೂ ಒಳ್ಳೆಯ ಅವಕಾಶ ಬೇಕೆ ?

"ಸಂಜೆಗತ್ತಲಿನಲ್ಲಿ ಆ ಸೋದರಿಯ ಮನೆಯ ಪಾಳಿಗೋಡೆಗೆ ಅಂಟಿದಂತಿರುವ ನೇರಳೆಯ ಮರವನ್ನು ಹತ್ತಿ, ಭೂತದಂತೆ ಸದ್ದು ಮಾಡಿ, ಜೀವಮಾನವಿಡೀ ಮರೆಯದಂತ ಆಕೆಯನ್ನು ಬೆದರಿಸಬೇಕೆಂದು ತೀರ್ಮಾನಿಸಲಾಯಿತು.

"ಹೊತ್ತಿಗೆ ಸರಿಯಾಗಿ ಸದ್ದು ಮಾಡದೆ ಮರವನ್ನೇರಿ ಕುಳಿತೆ. ಅಲ್ಲಿಗೆ ಆ ಸೋದರಿಯ ಮನೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಸರಿಯಾದ ಅವಕಾಶ ದೊರೆತ ಒಡನೆಯೇ, ಮೂಗಿನಲ್ಲಿ ಮಾತನಾಡುವಂತೆ ಸದ್ದು ಮಾಡಿದೆ. ಒಡನೆಯೇ ಒಬ್ಬ ವ್ಯಕ್ತಿ ಅವಳ ಮಂಚದಿಂದ ಇಳಿದು, ಅದರ ಅಡಿಯಲ್ಲಿ ಅಡಗಿಕೊಂಡ.

"ಇದಾದ ಮೇಲೆ ಆ ಸೋದರಿಯ ವಿಷಯದಲ್ಲಿ ನನ್ನ ಭಾವನೆ ಏನಾಗಿರಬೇಕು ? ಆ ಸೋದರಿಯಲ್ಲಿ ಸತೀತ್ವವೆಂಬುದೇನೂ ಇಲ್ಲ ಎಂದು ನೀವು ಹೇಳಬಹುದು. ಈ ಮಾತನ್ನು ನಾನೂ ಒಪ್ಪುತ್ತೇನೆ. ಆದರೆ, ಇದರೊಂದಿಗೆ ಆಕೆಯ ನಾರೀತ್ವವೂ ನಾಶವಾಗಿ ಬಿಟ್ಟಿದೆ ಎಂಬುದು ಇದರ ಅರ್ಥವಲ್ಲ. ಜನರ ರೋಗ-ರುಜಿನಗಳಲ್ಲಿ, ಶೋಕ-ದುಃಖಗಳಲ್ಲಿ ಹಗಲೂ-ರಾತ್ರಿ ಸೇವೆ ಮಾಡಿ, ದೀನ-ದುಃಖಿಗಳಿಗೆ ತನ್ನ

ಕೈಯಿಂದಾದಷ್ಟು ದಾನಮಾಡಿ ಇಡೀ ಬಾಳಿನಲ್ಲಿ ಆಕೆ ಮೆರೆದ ಮಹಾನತೆಗೆ ಸ್ವತಂತ್ರ ರೂಪದಲ್ಲಿ ಬೆಲೆಗಟ್ಟಲು ಸಾಧ್ಯವೇ ಇಲ್ಲವೆ? ನಾರಿಯ ಸರ್ವಸ್ವ ಆಕೆಯ ದೇಹ ಮಾತ್ರವೆ? ಆಕೆಯ ಆಂತರ್ಯಕ್ಕೆ ಯಾವುದೇ ಬೆಲೆಯೂ ಇಲ್ಲವೆ? ಯೌವನದ ದುಸ್ಸಹವಾದ ವೇದನೆಯಿಂದಾಗಿ ಆಕೆ ತನ್ನ ದೇಹದ ಪಾವಿತ್ರ್ಯವನ್ನು ರಕ್ಷಿಸಿಕೊಳ್ಳಲಾರದೆ ಹೋದಳು ಎಂದ ಮಾತ್ರಕ್ಕೆ ಆಕೆಯ ಸುಗುಣಗಳೆಲ್ಲವೂ ಸುಳ್ಳಾಗಿ ಹೋಗುತ್ತವೇನು? ಮನುಷ್ಯನ ನಿಜವಾದ ರೂಪ ಯಾವ ಸಂಗತಿಯಲ್ಲಿ ನಮಗೆ ಕಾಣದೊರೆಯುತ್ತದೆ? ಆಕೆಯ ದೇಹ ಆವರಣದಲ್ಲಿಯೇ ಅಥವಾ ಆಂತರ್ಯದ ಆಚರಣೆಯಲ್ಲಿಯೇ? ನೀವೇ ಹೇಳಿ! ಆದ್ದರಿಂದಲೇ, ಸತೀತ್ವ ಮತ್ತು ನಾರೀತ್ವಗಳನ್ನು ಬೇರ್ಪಡಿಸಿ ತೋರಲು ನಾನು ಭಾಧ್ಯನಾಗಿದ್ದೇನೆ."

ಕೆಲವು ವರ್ಷಗಳ ಬಳಿಕ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಬಂಕಿಮ-ಶರತ್ ಸಮಿತಿ ಅವರ ಐವತ್ತಮೂರನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ[1] ನಡೆಸಿದ ಅಭಿನಂದನ ಸಮಾರಂಭದ ಸಂದರ್ಭದಲ್ಲಿಯೂ ಅವರು ಇದೇ ಮಾತನ್ನು ಹೇಳಿದ್ದರು: "ಸಂಪೂರ್ಣ ಮನುಷ್ಯತ್ವ ಎಂಬುದು ಸತೀತ್ವಕ್ಕಿಂತಲೂ ಹೆಚ್ಚಿನದು. ಈ ಮಾತನ್ನು ನಾನು ಹಿಂದೊಮ್ಮೆ ಹೇಳಿದ್ದೆ. ಇದನ್ನೇ ಅಗೌರವಯುತವಾದದು, ಕೊಳಕಾದುದು ಎಂದು ಹೇಳಿ ನನ್ನನ್ನು ಬಯ್ಯುವುದರಲ್ಲಿ ಏನನ್ನೂ ಬಾಕಿ ಉಳಿಸಿರಲಿಲ್ಲ. ಮನುಷ್ಯ ವಿಕ್ಷಿಪ್ತನಾಗಿಬಿಟ್ಟಿದ್ದಾನೆ. ಭಾರಿ ಸತಿಶಿರೋಮಣಿ ಎಂದುಕೊಂಡಿರುವ ಹೆಣ್ಣು ಕಳ್ಳತನ-ಜೂಜು-ಮೋಸ-ವಂಚನೆಗಳಲ್ಲಿ ತೊಡಗಿರುವುದನ್ನು ಹಾಗೂ ಸುಳ್ಳು ಸಾಕ್ಷಿ ಹೇಳಿರುವುದನ್ನು ನಾನು ಕಂಡಿದ್ದೇನೆ. ಜೊತೆಗೆ, ತದ್ವಿರುದ್ಧವಾದ ನಡೆವಳಿಕೆಯನ್ನು ಕಾಣುವ ಅದೃಷ್ಟವೂ ನನಗೆ ಲಭಿಸಿದೆ."

"ಸತೀತ್ವದ ಬಗೆಗಿನ ನಿಲವು ಎಂದಿನಿಂದಲೂ ಒಂದೇ ಆಗಿ ಉಳಿದಿಲ್ಲ. ಹಿಂದೆಯೂ ಇರಲಿಲ್ಲ; ಬಹುಶಃ ಮುಂದೆಯೂ ಇರುವುದಿಲ್ಲ. ಏಕನಿಷ್ಠ ಪ್ರೇಮ ಹಾಗೂ ಸತೀತ್ವ ಒಂದೇ ಅಲ್ಲ. ಈ ಮಾತಿಗೆ ಸಾಹಿತ್ಯದಲ್ಲಿಯೇ ಎಡೆ ದೊರೆಯದಿದ್ದರೆ, ಸತ್ಯ ಎಲ್ಲಿ ಬದುಕೀತು?"

ಇನ್ನೂ ಕೆಲವು ವರ್ಷಗಳ ಹಿಂದೆ, ಇಳಾಚಂದ್ರ ಜೋಶಿಯವರು ಭಾರತೀಯ ನಾರಿಯ ಸತೀತ್ವದ ಆದರ್ಶದ ಬಗ್ಗೆ ಅವರ ಅಭಿಪ್ರಾಯವನ್ನು ತಿಳಿಯಬಯಸಿದಾಗ, ಅವರು ಹೀಗೆ ಹೇಳಿದ್ದರು[2]: "ನಾನು ಮಾನವಧರ್ಮಕ್ಕೆ ಸತೀಧರ್ಮಕ್ಕಿಂತಲೂ ತುಂಬ ಹಿರಿದಾದ ಸ್ಥಾನವನ್ನು ಕೊಡುತ್ತೇನೆ. ಸತೀತ್ವ ಮತ್ತು ನಾರೀತ್ವಗಳೆರಡೂ ಸಮಾನ ಆದರ್ಶಗಳಲ್ಲ. ನಾರಿಯ ಹೃದಯದ ಮಂಗಳಮಯ ಕಾರುಣ್ಯ, ಹುಟ್ಟಿನಿಂದಲೇ ಬಂದಿರುವ ಮಾತೃಭಾವನೆ - ಇವು ಆಕೆಯ ಸತೀತ್ವಕ್ಕಿಂತಲೂ ಹೆಚ್ಚು ಮಹತ್ವಪೂರ್ಣವಾದಂಥವು. ಬೇರೊಬ್ಬ ಗಂಡಸಿನೊಂದಿಗೆ ಯಾವುದೇ ಬಗೆಯ ದೈಹಿಕ ಅಥವಾ ಮಾನಸಿಕ ಸಂಬಂಧವೂ ಇಲ್ಲದಿರುವಂಥ ಅನೇಕ ಹೆಂಗಸರನ್ನು ನಾನು ಕಂಡಿದ್ದೇನೆ. ಅಂತೆಯೇ, ಅವರ ಸ್ವಭಾವದಲ್ಲಿ ಭಾರಿ ಕೀಳುತನ ಘೋರ ಸಂಕೀರ್ಣತೆ, ವಿದ್ವೇಷ ಭಾವನೆ ಹಾಗೂ ಕಳ್ಳತನದ ಪ್ರವೃತ್ತಿಯನ್ನೂ ಕಂಡಿದ್ದೇನೆ.

1. ಸಪ್ಟೆಂಬರ್ 16, 1928.
2. ಮಾರ್ಚ್ 1922.

ಇದಕ್ಕೆ ತದ್ವಿರುದ್ಧವಾಗಿ, ಮಾತೃಹೃದಯದ ನಿಸ್ವಾರ್ಥಪೂರ್ಣ ಮಮತೆ ಮತ್ತು ಆಳವರಿಯದ ಕರುಣೆಯ ಸಾಗರ ಉಕ್ಕೇರುತ್ತಿರುವ ಅನುಭವವನ್ನು ತಂದುಕೊಟ್ಟಿರುವಂಥ ಪತಿತೆಯ ಪರಿಚಯವೂ ನನಗಿದೆ."

ಜೋಶಿಯವರು ಕೇಳಿದರು: "ಈ ಮಾತು ನಿಜವಾಗಿದ್ದರೆ, 'ಶ್ರೀಕಾಂತ' ಕಾದಂಬರಿಯಲ್ಲಿ ಅನ್ನದಾ ದೀದಿಯ ವ್ಯಕ್ತಿತ್ವದ ಪ್ರಭೆಯ ಮುಂದೆ ಇತರ ನಾರಿಯರ ವ್ಯಕ್ತಿತ್ವ ಮ್ಲಾನವಾಗಿ ಬಿಡುವಂತೆ ನೀವೇಕೆ ಆಕೆಯ ಸತೀತ್ವದ ಹಿರಿಮೆಯನ್ನು ಪ್ರಬಲವಾಗಿ ಶಬ್ದಗಳಲ್ಲಿ ವರ್ಣಿಸಿದ್ದೀರಿ ?"

ಈ ಪ್ರಶ್ನೆಯನ್ನು ಕೇಳಿ ಶರತ್‌ಚಂದ್ರರು ಮುಗುಳ್ನಗೆ ಬೀರುತ್ತ ಹೇಳಿದರು: "ನಿಮ್ಮ ಈ ಮಾತನ್ನು ನಾನು ಒಪ್ಪುತ್ತೇನೆ. ಅನ್ನದಾ ದೀದಿಯ ವಿಷಯದಲ್ಲಿ ವಾಸ್ತವವಾಗಿ ನನಗೂ ಹೃದಯಾಂತರಾಳದಲ್ಲಿ ಗೌರವವಿದೆ. ಎಷ್ಟಾದರೂ, ನನ್ನ ಜನ್ಮಗತ ಸಂಸ್ಕಾರಗಳು ಭಾರತೀಯವೇ ಅಲ್ಲವೆ! ಇಷ್ಟಾಗಿಯೂ, ಆಕೆಯ ಪ್ರೇಮಪ್ಲಾವಿತ ಆತ್ಮದ ಮುಕ್ತ ಪ್ರವಾಹ ಎಷ್ಟರ ಮಟ್ಟಿನ ಶ್ರದ್ಧೆ ಗೌರವಗಳನ್ನು ಮೂಡಿಸಿದೆಯೋ ಆಕೆಯ ಏಕನಿಷ್ಠ ಪತಿವ್ರತಾ ಧರ್ಮ ನನ್ನಲ್ಲಿ ಅಷ್ಟರ ಮಟ್ಟಿನ ಶ್ರದ್ಧೆ-ಗೌರವಗಳನ್ನು ಮೂಡಿಸಿಲ್ಲ ಎಂಬುದನ್ನು ತಿಳಿಸಬಯಸುತ್ತೇನೆ."

ಪುರುಷರು ರೂಪಿಸಿರುವ ಸುಳ್ಳು ಶಾಸ್ತ್ರಗಳೆಲ್ಲ ಸ್ತ್ರೀಯರನ್ನು ಬಂಧಿಸಿ ಇಡುವ ಬೇಡಿಗಳು ಎಂಬುದನ್ನು ಶರತ್‌ಚಂದ್ರರು ತಮ್ಮ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಅವೆಲ್ಲ ಸಾಧ್ಯವಾಗಬಹುದಾದ ಎಲ್ಲ ಬಗೆಗಳಲ್ಲಿಯೂ ಅವರನ್ನು ತಡೆಹಿಡಿದು, ಅವರಿಂದ ಸೇವೆಯನ್ನು ಪಡೆದುಕೊಳ್ಳಲು ಅವರು ನಿರ್ಮಿಸಿರುವ ಒರಿಯ ಬಲೆಗಳು; ಸತೀತ್ವದ ಹಿರಿಮೆಯನ್ನು ಸ್ತ್ರೀಯರಿಗೆ ಮಾತ್ರ ಹೇಳಲಾಗುತ್ತದೆ - ಪುರುಷರಿಗೆ ಇಂಥದೇನನ್ನೂ ಹೇಳಿಲ್ಲ; ಇದೆಲ್ಲ ಮೋಸ; ಯೋನಿ-ಪರೀಕ್ಷೆಯಿಂದ ಮಾತ್ರವೇ ನಾರಿಯ ನಿಜವಾದ ಸ್ವರೂಪವನ್ನು ಗುರುತಿಸಲು ಸಾಧ್ಯವಿಲ್ಲ ಎಂದು ಅವರು ಸ್ಪಷ್ಟವಾಗಿ ಸಾರಿದ್ದಾರೆ.

ನಾರೀ-ಜೀವನದ ಸಾರ್ಥಕತೆ ಏತರಲ್ಲಿದೆ? ಯಾವುದನ್ನು ಜನ ಆತ್ಮವೆಂದು ಕರೆಯುತ್ತಾರೋ ಅದು ಸ್ತ್ರೀಯರ ಶರೀರದಲ್ಲಿ ಇರುವುದಿಲ್ಲವೆ ? ಪುರುಷರ ಸೇವೆಯ ದಾಸಿಯರಾಗಿರಲು ಮಾತ್ರವೇ ಅವರು ಈ ಲೋಕಕ್ಕೆ ಬಂದಿದ್ದಾರೆಯೆ ? ಎಂದು ಅವರು ಮತ್ತೆ ಮತ್ತೆ ಪ್ರಶ್ನಿಸಿದ್ದಾರೆ.[1]

'ಶೇಷ ಪ್ರಶ್ನೆ'ಯ ಕಮಲ ಹೀಗೆನ್ನುತ್ತಾಳೆ: "ಎಲ್ಲ ಸಂಯಮಗಳಂತೆ ಕಾಮ ಸಂಯಮವೂ ಒಂದು ಸತ್ಯವೇ. ಆದರೆ, ಅದು ಗೌಣವಾದ ಸತ್ಯ. ಅದನ್ನು ಮುಖ್ಯವಾದುದೆಂದು ಭಾವಿಸುವುದೂ ಒಂದು ಬಗೆಯ ಅಸಂಯಮವೇ. ಅದಕ್ಕೆ ಶಿಕ್ಷೆಯೂ ಇದೆ. ಆತ್ಮಸಂಗ್ರಹದ ಉಗ್ರ ಅಹಂಕಾರದಿಂದ ಆಧ್ಯಾತ್ಮಿಕತೆ ಕ್ಷೀಣಿಸುತ್ತದೆ."

ಪತಿತಳೆಂದು ಹೇಳಲಾಗುವ ಹೆಣ್ಣಿಗೆ ಅವರು ಅದೆಂಥ ಹಿರಿಮೆಯನ್ನು ತಂದುಕೊಟ್ಟಿದ್ದಾರೆಂದರೆ ತುಂಬ ಕಲುಷಿತ ಮನಸ್ಸಿನ ವ್ಯಕ್ತಿಯೂ, ಆಕೆಯ ಸಂಪರ್ಕ

---

1. 'ಸ್ವಾಮೀ' ಕಥೆಯಲ್ಲಿ.

ದೊರೆತಾಗ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವಿತನಾಗಿಯೇ ತೀರುತ್ತಾನೆ. ಅಷ್ಟೇ ಅಲ್ಲ, ತನ್ನನ್ನೇ ತಿದ್ದಿಕೊಳ್ಳುವ ಪ್ರವೃತ್ತಿಯೂ ಅವನಲ್ಲಿ ಎಚ್ಚರಗೊಳ್ಳುತ್ತದೆ. ಅವರ ಚಿತ್ರಣ ಕೌಶಲ ರೂಪ ಮತ್ತು ಆಕಾರಗಳನ್ನು ಮಾತ್ರವೇ ಕಡೆದು ತೋರಿಸುವುದಿಲ್ಲ; ಅಂತರಂಗವನ್ನೂ ಅನುರಂಜಿಸುತ್ತದೆ.

ನಾರಿಗೆ "ಮನುಷ್ಯಳಾಗಲು ಅವಕಾಶ ಕೊಡದೆ ಹೋಗಿರುವುದಕ್ಕೆ ಈ ನಾಡು ಸ್ವರಾಜ್ಯ ಸಾಧನೆಗೆ ಮೊದಲೇ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತದೆ; ಎಂದಿನಿಂದ ಯಾವ ದೇಶ ಅವಳ ಸತೀತ್ವವನ್ನೇ ಹಿಂದಾಗಿಸಿ ನೋಡುತ್ತ ಬಂದು, ಅವಳ ಮನುಷ್ಯತ್ವದ ಕಡೆಗೆ ದೃಷ್ಟಿಯನ್ನೇ ಹರಿಸಿಲ್ಲವೋ ಆ ದೇಶ ಅವಳ ಋಣವನ್ನು ಮೊದಲು ತೀರಿಸಬೇಕು" ಎಂದು ಅವರು ಅಸಹಕಾರ ಆಂದೋಳನದ ಮೊದಲ ಚರಣದಲ್ಲಿಯೇ ಘೋಷಿಸಿದ್ದರು.

"ಸ್ತ್ರೀ ಸಮುದಾಯವನ್ನು ನಾನೆಂದೂ ಕೀಳಾಗಿ ನೋಡಲಾರದೆ ಹೋದೆ. ನಾರಿಯ ಬಗೆಗಿನ ಕಳಂಕವನ್ನು ನಂಬದೆ ಈ ಲೋಕದಲ್ಲಿ ಮೋಸ ಹೋಗುವುದು, ಅದನ್ನು ನಂಬಿ ಪಾಪಕಾರ್ಯದಲ್ಲಿ ಭಾಗಿಯಾಗಿವುದಕ್ಕಿಂತ ಒಳ್ಳೆಯದು. ಬಹಳ ಕಾಲದಿಂದಲೂ ನಾರಿಯ ಅಸ್ತಿತ್ವವೇ ಲೋಪವಾಗಿಬಿಟ್ಟಿತ್ತು. ತನಗೂ ಒಂದು ಅಸ್ತಿತ್ವವಿದೆ ಎಂಬುದನ್ನು ಆಕೆಯೂ ಮರೆತು ಬಿಟ್ಟಿದ್ದಳು. ಬಾಯಿಮುಚ್ಚಿಕೊಂಡು ಎಲ್ಲ ಬಗೆಯ ಅತ್ಯಾಚಾರಗಳನ್ನೂ ಸಹಿಸುತ್ತ ಬಂದಿದ್ದಳು. ಎದೆ ಸೀಳಿ ಹೋಗುತ್ತಿದ್ದರೂ ಅವಳ ಬಾಯಿ ಮಾತ್ರ ತೆರೆಯುತ್ತಿರಲಿಲ್ಲ. ಅದನ್ನು ಖಂಡಿಸಬೇಕಾದ್ದು ಅಗತ್ಯವೆಂಬ ಅನುಭೂತಿಯೂ ಅವಳಲ್ಲಿ ಉಳಿದಿರಲಿಲ್ಲ." ಎಂದು ಅವರು ಮುಂದುವರಿದು ಹೇಳಿದ್ದರು.

ಶರತ್‌ಚಂದ್ರರು ಈ ವಾಸ್ತವಿಕತೆಯನ್ನು ಒಪ್ಪಿದರು ಹಾಗೂ ಗುರುತಿಸಿದರು. ಸ್ತ್ರೀ ಸಮುದಾಯದ ವಿಷಯದಲ್ಲಿ ಪುರುಷ ಎಂದೂ ನ್ಯಾಯಪರತೆಯನ್ನು ಮೆರೆದಿಲ್ಲ ಎಂಬುದೇ ಆ ಕಟುಸತ್ಯವಾಗಿತ್ತು. 'ನಾರಿಯ ಬೆಲೆ' ಎಂಬ ಪ್ರಬಂಧದಲ್ಲಿ ನಾರಿಯರ ಪಕ್ಷವಹಿಸಿ ವಾದಿಸುತ್ತ ಅವರು ಕಂಠೋಕ್ತವಾಗಿ ಹೀಗೆಂದಿದ್ದಾರೆ: "ಮನುಕುಲದ ಜನನಿಯಾದ ಇವಳ ಪಾಪದ ಮೇಲೆಯೇ ಯಾವ ಧರ್ಮ ತನ್ನ ಅಡಿಗಲ್ಲನ್ನು ಇರಿಸಿದೆಯೋ, ಜಗತ್ತಿನ ಎಲ್ಲ ಅಧಃಪತನದ ಮೂಲದಲ್ಲಿ ಯಾವ ಧರ್ಮ ನಾರಿಯನ್ನು ತಂದು ಹಾಕಿದೆಯೋ, ಇದೇ ನಿಜವಾದ ಧರ್ಮ ಎಂಬ ನಂಬಿಕೆ ಜನರ ಮನಸ್ಸಿನಲ್ಲಿ ಯಾವ ಧರ್ಮದ ಬಗೆಗೆ ಬೇರು ಬಿಟ್ಟಿದೆಯೋ ಆ ಧರ್ಮದ ಜನರು ಸ್ತ್ರೀಸಮುದಾಯವನ್ನು ಗೌರವದ ದೃಷ್ಟಿಯಿಂದ ಕಾಣುವುದು ಎಂದಿಗೂ ಸಾಧ್ಯವಾಗುವುದಿಲ್ಲ. ಅವರ ಸ್ವಾರ್ಥ ಎಷ್ಟರ ಮಟ್ಟಿಗೆ ಅಂಟಿಕೊಂಡಿದೆಯೋ ಅಷ್ಟರ ಮಟ್ಟಿಗೆ ಮಾತ್ರವೇ ಅವರು ಗೌರವ ತೋರುವಂಥವರಾಗಿರುತ್ತಾರೆ. ಇದಕ್ಕಿಂತ ಹೆಚ್ಚಿನ ಗೌರವವನ್ನಾಗಲೀ, ನ್ಯಾಯೋಚಿತ ಅಧಿಕಾರವನ್ನಾಗಲೀ ಪುರುಷರು ಇಂದಿಗೆ ಒಂದು ಸಾವಿರ ವರ್ಷಗಳ ಹಿಂದೆಯೂ ಕೊಟ್ಟಿರಲಿಲ್ಲ; ಇಂದಿಗೆ ಒಂದು ಸಾವಿರ ವರ್ಷಗಳ ಅನಂತರವೂ ಕೊಡುವುದಿಲ್ಲ."

ಈ ಅನ್ಯಾಯಕ್ಕೆ ವಿರುದ್ಧವಾಗಿ ಹೋರಾಡುವುದಾಗಿ ಅವರು ಘೋಷಿಸಿದರು. ಲೀಲಾರಾನೀ ಗಂಗೋಪಾಧ್ಯಾಯ ಅವರಿಗೆ ಅವರು ಹೀಗೆಂದು ಬರೆದಿದ್ದರು:

"ಗಂಡು ಪರಮಪೂಜ್ಯವ್ಯಕ್ತಿ; ಎಲ್ಲರಿಗಿಂತಲೂ ಹಿರಿಯನಾದವನು. ಆದರೆ, ಈ ಗುಣಗಳ ಕೊರತೆಯಿಂದಾಗಿಯೇ ಹೆಣ್ಣು ದಾಸಿಯಾಗಿಲ್ಲ. ಈ ಸಂಸ್ಕೃತಿ ಅದೆಷ್ಟು ಕನಿಷ್ಠಳಾಗಿ, ಕ್ಷುದ್ರಳಾಗಿ, ತುಚ್ಛಳಾಗಿ ಅವಳನ್ನು ಪರಿಗಣಿಸಿದೆಯೋ, ಅದಕ್ಕೆ ಎಲ್ಲಿಯೂ ಯಾವುದೇ ಹೋಲಿಕೆಯೂ ದೊರೆಯುವುದಿಲ್ಲ."[1]

ತಮ್ಮ ಗೆಳೆಯನೊಬ್ಬನ ಪತ್ನಿಯೊಂದಿಗೆ ಅವರು ಹೀಗೆಂದಿದ್ದರು: "ಅಕ್ಕ, ಪುರುಷ ಸಮುದಾಯ ನಿಮ್ಮ ವಿಷಯದಲ್ಲಿ ಅನ್ಯಾಯವನ್ನೆಸಗಿದೆ. ಅದಕ್ಕೆ ವಿರುದ್ಧವಾಗಿ ನಾನು ನಿರಂತರವಾಗಿ ಹೋರಾಡುತ್ತಿರುತ್ತೇನೆ."

ಅವರು ವಾಸ್ತವವಾಗಿ ಜೀವನವಿಡೀ ಇದಕ್ಕಾಗಿ ಹೋರಾಡುತ್ತಲೂ ಇದ್ದರು. ಈ ಕಾರಣದಿಂದಾಗಿಯೇ ಅವರು ನಿಜವಾದ ಅರ್ಥದಲ್ಲಿ ನಾರೀ-ಸಮುದಾಯದ ಪ್ರವಾದಿಯೇ ಆಗಿ ಬಿಟ್ಟರು. ಈ ಕಾರಣಕ್ಕಾಗಿಯೇ ಬಂಗಾಳದ ನಾರಿಯರು ಅವರನ್ನು ಅಭೂತಪೂರ್ವ ರೀತಿಯಲ್ಲಿ ಅಭಿನಂದಿಸಿದರು. ಅವರ ಐವತ್ತೇಳನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ[2] ಅವರಿಗೆ ಅಭಿನಂದನ ಪತ್ರವನ್ನು ಸಮರ್ಪಿಸುತ್ತ ಅವರು ಗದ್ಗದರಾಗಿ ಹೀಗೆಂದು ಹೇಳಿದರು: "ಪರಾಧೀನ ರಾಷ್ಟ್ರದ ಅಧಃಪತನಕೊಳಗಾದ ಸಮಾಜದ ಅಸಹಾಯಕ ಅಂತಃಪುರಾಚಾರಿಣಿಯರ ಹೃದಯದ ಮೂಕವೇದನೆಗೆ ನೀವು ಭಾಷೆಯಲ್ಲಿ ಮೂರ್ತರೂಪವನ್ನು ಕೊಟ್ಟಿದ್ದೀರಿ. ಅವರ ದುಃಸ್ಥಿತಿಪೂರ್ಣ ಬಾಳಿನ ಸುಖದುಃಖಗಳ ಎಲ್ಲ ಅನುಭೂತಿಗಳನ್ನೂ ತೀವ್ರ ಸಹಾನುಭೂತಿಯಿಂದ ಎರಕಹೊಯ್ದು ನೀವು ಅದನ್ನು ಸಾಹಿತ್ಯದಲ್ಲಿ ಸತ್ಯವೆಂದು ತೋರಿಸಿಕೊಟ್ಟಿದ್ದೀರಿ. ನಿಮ್ಮ ಪೂರ್ವಾಗ್ರಹ ಮುಕ್ತ ದೃಷ್ಟಿಕೋನ, ಸೂಕ್ಷ್ಮ ಪರ್ಯವೇಕ್ಷಣ ಸಾಮರ್ಥ್ಯ, ಗಂಭೀರವಾದ ಉಪಲಬ್ಧಿ, ಶಕ್ತಿ ಹಾಗೂ ವಿಚಿತ್ರ ಅಥವಾ ವೈವಿಧ್ಯಮಯವಾದ ಮಾನವ ಚಾರಿತ್ರ್ಯದ ತಲಸ್ಪರ್ಶೀ ಅಭಿಜ್ಞತೆಗಳು ನಿಖಿಲ ನಾರೀಚಿತ್ರದ ನಿಗೂಢ ಪ್ರಕೃತಿಯ ಗುಪ್ತತಮ ವಿಳಾಸವನ್ನು ಪಡೆದುಕೊಂಡು ಬಿಟ್ಟಿವೆ. ನಾರೀ-ಚಾರಿತ್ರ್ಯದ ಪರಮ ರಹಸ್ಯವನ್ನರಿತ ಮನೀಷಿಯೇ, ನಾವೆಲ್ಲ ನಿಮಗೆ ವಂದನೆಗಳನ್ನು ಸಲ್ಲಿಸುತ್ತೇವೆ.

"ಎಲ್ಲ ಬಗೆಯ ಆತ್ಮಾಪಮಾನದ ಹಾಗೂ ಎಲ್ಲ ರೀತಿಯ ಹೀನಸ್ಥಿತಿಗಳಲ್ಲಿಯೂ ನಾರಿಯ ನೈಸರ್ಗಿಕ ವೈಶಿಷ್ಟ್ಯಗಳು ಎಲ್ಲ ದೇಶಗಳ ಎಲ್ಲ ಸಮಾಜಗಳಲ್ಲಿ ಉಳಿದುಕೊಂಡು ಬಂದಿವೆ. ನೀವು ಆಕೆಯ ಅಕೃತ್ರಿಮ ರೂಪವನ್ನು ತೆರೆದು ತೋರಿಸಿದ್ದೀರಿ. ಅವಳ ನೈಜ ಪ್ರಕೃತಿಯ ಅಧ್ಯಯನ ಮಾಡಿದ್ದೀರಿ. ಸನ್ನಾರಿಯರಲ್ಲಿ ಅಂತರ್ಯಾಮಿಯಾಗಿರುವ ಶಕ್ತಿಯೇ, ನಾವು ನಿಮಗೆ ವಂದನೆಗಳನ್ನು ಸಲ್ಲಿಸುತ್ತೇವೆ.

"ನಾವು ನಿಮ್ಮನ್ನು ಗೌರವಿಸುತ್ತೇವೆಂದು ತಿಳಿಸುವುದಕ್ಕಾಗಿಯೇ ಇಂದಿನ ವಿಶೇಷ ದಿನದಂದು ನಾವೆಲ್ಲ ಇಲ್ಲಿಗೆ ಆಗಮಿಸಿದ್ದೇವೆ. ನಾವು ನಿಮ್ಮನ್ನು ಶ್ರದ್ಧೆ-ಗೌರವಗಳಿಂದ ಕಾಣುತ್ತೇವೆ. ನಾವು ನಿಮ್ಮನ್ನು ಪ್ರೀತಿಸುತ್ತೇವೆ. ನೀವು ನಮ್ಮವರು ಎಂದು ನಾವೆಲ್ಲ ಭಾವಿಸಿದ್ದೇವೆ. ನಾರಿಯ ಪರಮಶ್ರದ್ಧೇಯ ಮಿತ್ರರೆ! ನೀವು ನಮಗೆ ಪರಮಸ್ನೇಹಿತರು. ನೀವು ನಮಗೆ ತುಂಬ ಆತ್ಮೀಯರು. ನಾವೆಲ್ಲ ನಿಮಗೆ

---

1. ಜುಲೈ 26, 1919.
2. 1932ರಲ್ಲಿ.

ವಂದನೆಗಳನ್ನು ಸಲ್ಲಿಸುತ್ತೇವೆ."

ಯಾವುದೇ ನಾಡಿನ ಯಾವೊಬ್ಬ ಸಾಹಿತಿಗೂ ಇಂಥ ಪ್ರಶಂಸೆ ಎಂದೂ ದೊರೆತಿರಲಾರದು. ಶರತ್‌ಚಂದ್ರರ ನಾರಿ ಬಂಗಾಳದವಳೇ ಆಗಿದ್ದರೂ, ಕಥಾ ಶಿಲ್ಪದ ದೃಷ್ಟಿಯಿಂದ ಯಾವುದೇ ಮೇರೆಯನ್ನೂ ಅಂಗೀಕರಿಸುವುದಿಲ್ಲ. ವಾತಾವರಣವನ್ನು ಚಿತ್ರಿಸುವಾಗ ಶರತ್‌ಚಂದ್ರರು ಬಂಗಾಳಿಗಳೇ ಆಗಿರುತ್ತಾರಾದರೂ, ಜೀವನ-ರಸದ ಪರಿವೇಶದಲ್ಲಿ ಅವರು ಸಾರ್ವತ್ರಿಕ ಲಕ್ಷಣದ ಕಥಾಶಿಲ್ಪಿಯೇ ಆಗಿರುತ್ತಾರೆ. ಶರತ್‌ಚಂದ್ರರ 'ಜನನಿ' ಬಂಗಾಳದ ಜನನಿಯೇ; ಆದರೆ, ಪ್ರೇಮಿಕೆಯ ಪರಿವೇಶ ಇಡೀ ಜಗತ್ತನ್ನೇ ವ್ಯಾಪಿಸಿಕೊಳ್ಳುತ್ತದೆ. ಅವಳು ಅನುಭವಿಸಿರುವ ವ್ಯಥೆ, ಅವಳು ಸಹಿಸಿರುವ ಅಪಮಾನ - ಇವನ್ನು, ಪ್ರತಿಯೊಬ್ಬ ನಾರಿಯೂ ಒಂದಲ್ಲ ಒಂದು ರೂಪದಲ್ಲಿ ಸದಾ ಸಹಿಸುತ್ತಲೇ ಬಂದಿದ್ದಾಳೆ.

ಬಂಕಿಮಚಂದ್ರರ ಸಾಹಿತ್ಯದಲ್ಲಿ ವಿಧವಾ-ವಿವಾಹದ ಪರಿಹಾರ ಮಾರಕವಾಗಿದೆ. ರವೀಂದ್ರನಾಥರು ನಾರಿಯ ಬಗ್ಗೆ ಪ್ರೀತಿಯನ್ನು ತೋರಿದರು. ಆದರೆ ಸಹಾನುಭೂತಿಯನ್ನು ತೋರಿದವರು ಶರತ್‌ಚಂದ್ರರು ಮಾತ್ರವೇ. ಇಷ್ಟಾಗಿಯೂ, ಅವರು ಒತ್ತಾಯ-ಆಗ್ರಹಗಳನ್ನೇನೂ ಮೆರೆದಿಲ್ಲ. ಅವರ ಸಾಹಿತ್ಯದಲ್ಲಿಯೂ ವಿಧವಾ-ವಿವಾಹ ಇಲ್ಲ. 'ಪಂಡಿತ್‌ಜೀ' ಕಥೆಯಲ್ಲಿ ಬರುವ ಕುಸುಮ ಇಂಥ ಜನರನ್ನು ನಾಯಿ-ಬೆಕ್ಕುಗಳೆಂದೇ ಭಾವಿಸುತ್ತಾಳೆ. 'ಪಥ-ನಿರ್ದೇಶ' ಕಥೆಯಲ್ಲಿನ ಹೇಮ ಮತ್ತೆ ಮತ್ತೆ ವಿಧವಾ-ವಿವಾಹವನ್ನು ಖಂಡಿಸುತ್ತಾಳೆ. ಆದರೆ, ಅದರ ಪರವಾಗಿ ಒಡ್ಡಿರುವವಾದವೇನೂ ಕಮ್ಮಿಯಾಗಿಲ್ಲ. ಗುಣೇಂದ್ರ ಹೀಗೆನ್ನುತ್ತಾನೆ: "ಹಿಂದೂಗಳನ್ನು ಬಿಟ್ಟು, ಜಗತ್ತಿನ ಎಲ್ಲ ಸಮುದಾಯಗಳಲ್ಲಿ ವಿಧವಾ-ವಿವಾಹ ನಡೆಯುತ್ತದೆ." ಅಷ್ಟೇ ಅಲ್ಲ, ಅವರ ಬಾಲ್ಯ ಕಾಲದ ರಚನೆಯಾದ 'ಶುಭದಾ' ಎಂಬ ಕಥೆಯಲ್ಲಿ "ವಿಧವೆಯನ್ನು ಮದುವೆಯಾಗಬಾರದೇನು ?" ಎಂದು ಸುರೇಂದ್ರನಾಥ ಕೇಳಿದಾಗ, "ವಿಧವೆಯನ್ನು ಮದುವೆಯಾಗಬೇಕು; ಆದರೆ, ವೇಶ್ಯೆಯನ್ನಲ್ಲ" ಎಂದು ಮಾಲತಿ ಉತ್ತರ ಹೇಳುತ್ತಾಳೆ. ಅನುಪಮಾಳ ತಂದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೀಗೆನ್ನುತ್ತಾರೆ: "ನಾನು ಸಾಕಷ್ಟು ಆಲೋಚನೆ ಮಾಡಿದ್ದೇನೆ. ಎರಡು ಸಲ ಮದುವೆಯಾದ ಮಾತ್ರಕ್ಕೇ ಧರ್ಮವೇನೂ ಹೋಗಿಬಿಡುವುದಿಲ್ಲ. ಮದುವೆಗೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ, ನಿನ್ನ ಮಗಳನ್ನು ಹೀಗೆ ಕೊಲ್ಲುವುದರಲ್ಲಿಯೇ ಧರ್ಮಕ್ಕೆ ಹಾನಿಯೊದಗುವ ಸಂಭವವಿದೆ."

ಆದರೆ, ಅನುಪಮಾ ಮರು ಮದುವೆಗೆ ಸಿದ್ಧಳಾಗಲಿಲ್ಲ; ಅಂದರೆ, ಶರತ್‌ಚಂದ್ರರು ಇದಕ್ಕೆ ಸಿದ್ಧವಾಗಿರಲಿಲ್ಲ ಎಂದೇ ಅರ್ಥ. ಏಕೆಂದರೆ, ಸಮಾಜ, ಇದಕ್ಕೆ ಇನ್ನೂ ಸಿದ್ಧವಾಗಿರಲಿಲ್ಲ. ನಾರಿಯನ್ನು ದಾಸ್ಯಕ್ಕೊಳಪಡಿಸುವುದು ಮಾನವೀಯ ಹಕ್ಕುಗಳ ಕೊಲೆ ಎಂದು ಶರತ್‌ಚಂದ್ರರು ಭಾವಿಸುತ್ತಿದ್ದರು. ಆದರೆ, ಕ್ರಾಂತಿಯ ಧ್ವನಿ ಹೃದಯದ ಅಂತರಾಳದಿಂದಲೇ ಹೊಮ್ಮಿ ಬರಬೇಕು. ಸಮಾಜ ಜೀವಂತ ವಾಗಿರಬೇಕಾದರೆ, ಹೃದಯದ ಗುಣವನ್ನು ಅದು ಆಶ್ರಯಿಸಲೇಬೇಕಾಗುತ್ತದೆ. ಆದ್ದರಿಂದಲೇ ಸಾಮಾಜಿಕ ಅತ್ಯಾಚಾರಗಳಿಗೆ ವಿರುದ್ಧವಾಗಿ ಕ್ರಾಂತಿಯನ್ನೆಸಗುವ

ವಿಚಾರ ಅವರ ಸಾಹಿತ್ಯದಲ್ಲಿ ಅಷ್ಟಾಗಿ ಎದ್ದು ಕಾಣುವುದಿಲ್ಲ.[1] 'ಶೇಷಪ್ರಶ್ನೆ'ಯ ಕಮಲ ಹಾಗೂ 'ಶ್ರೀಕಾಂತ'ದ (ಎರಡನೆಯ ಭಾಗ) ಅಭಯಾ ಇದಕ್ಕೆ ಅಪವಾದಗಳು. ಆದರೆ, ಓದುಗರ ಮನಸ್ಸಿನಲ್ಲಿ ಕ್ರಾಂತಿಯ ಅನಿವಾರ್ಯತೆಯನ್ನು ನಿಚ್ಚಳಗೊಳಿಸುವಂಥ ಸನ್ನಿವೇಶಗಳನ್ನು ಚಿತ್ರಿಸುವುದರಲ್ಲಿ ಶರತ್‌ಚಂದ್ರರು ಯಶಸ್ವಿಯಾಗಿದ್ದಾರೆ ಎಂಬುದನ್ನು ಒಪ್ಪಲೇಬೇಕಾಗುತ್ತದೆ. ಈ ಕ್ರಾಂತಿ ದೃಢವಾದ ಮತ್ತು ಸತ್ಯವಾದ ಸಿದ್ಧಾಂತಗಳನ್ನು ಆಧರಿಸಿರುತ್ತದೆ. ವಿಧವೆಯಾಗುವುದೇ ನಾರೀ ಜೀವನದ ಪರಮಹಾನಿಯೆಂದೂ, ಸಧವೆಯಾಗುವುದೇ ಸಾರ್ಥಕತೆಯೆಂದೂ ಅವರು ಮತ್ತೆ ಮತ್ತೆ ಹೇಳಿದ್ದಾರೆ. ಇವುಗಳಲ್ಲಿ ಯಾವುದೂ ಸಂಪೂರ್ಣ ಸತ್ಯವಲ್ಲ.

ಶರತ್‌ಚಂದ್ರರು ಶಾಸ್ತ್ರವನ್ನು ಒಪ್ಪುತ್ತಾರೆ. ಆದರೆ, ಅದನ್ನು ಹೃದಯಕ್ಕಿಂತಲೂ ಮೇಲಿನದೆಂದು ಅವರೇನೂ ಭಾವಿಸುವುದಿಲ್ಲ. ಜಗತ್ತಿನಲ್ಲಿ ನಡೆಯುವ ಅನೇಕ ಘಟನೆಗಳಲ್ಲಿ ಮದುವೆಯೂ ಒಂದೆಂದು ಕಮಲ ಭಾವಿಸುತ್ತಾಳೆ. ಆದರೆ, ಎಂದಿನಿಂದ ಅದನ್ನೇ ನಾರಿಯ ಸರ್ವಸ್ವವೆಂದು ಭಾವಿಸತೊಡಗಿದರೋ ಅಂದಿನಿಂದಲೇ ನಾರಿಯರ ಬಾಳಿನ ಮಹಾದುರಂತವೂ ಮೊದಲಿಟ್ಟಿತು ಎಂದೂ ಅವಳೂ ನಂಬಿದ್ದಾಳೆ. ಹೃದಯದಲ್ಲಿ ಪ್ರೀತಿ ಇಲ್ಲದಿದ್ದರೆ, ಮಂತ್ರಪೂತ ವಿವಾಹ ವಿಡಂಬನೆ ಮಾತ್ರವಾಗಿ ಪರಿಣಮಿಸುತ್ತದೆ. 'ನಾರಿಯ ಮೌಲ್ಯ' ಎಂಬ ಪ್ರಬಂಧದಲ್ಲಿ ಅವರು ಭವಿಷ್ಯವಾಣಿಯನ್ನೇ ನುಡಿದಂತೆ ಕಾಣುತ್ತದೆ: "ಪ್ರೀತಿಯ ಮೂಲಕ ಪರಸ್ಪರ ಒಂದುಗೂಡುವುದು ತುಂಬ ಮಹತ್ವದ್ದೆಂದೂ, ಕಾನೂನಿನ ಮೂಲಕ ಪರಸ್ಪರ ಒಂದುಗೂಡುವುದು ಗೌಣವಾದುದೆಂದೂ ಭಾವಿಸುವಂಥ ಕಾಲ ಮುಂದೆ ಬರಲಿದೆ."

ಶರತ್ ಸಾಹಿತ್ಯದಲ್ಲಿ ಪ್ರಿಯಾ, ಜಾಯಾ, ಜನನೀ, ಪತಿತಾ, ವಿಪ್ಲವೀ ಇವರೆಲ್ಲರೂ ಇದ್ದಾರೆ. ಹೊರನೋಟಕ್ಕೆ ಒಂದೇ ಎಂಬಂತೆ ತೋರಿದರೂ, ಅವರೆಲ್ಲ ಒಂದೇ ಅಲ್ಲ. ರಾಜಲಕ್ಷ್ಮಿಯ ದುರಂತ ಅದೆಷ್ಟು ಗೂಢವೂ, ರಹಸ್ಯಮಯವೂ ಆಗಿದೆ ಎಂದರೆ ಅದನ್ನು ಅರ್ಥಮಾಡಿಕೊಳ್ಳುವುದು ಅಸಂಭವವೆಂದೇ ತೋರುತ್ತದೆ. ಅವಳ ಅಂತರ್-ವಿರೋಧ, ಅವಳ ದ್ವಂದ್ವ - ಇವೇ ಅವಳ ಸಫಲತೆಯ ರಹಸ್ಯ. ಅವಳ ವಿಷಯದಲ್ಲಿಯೂ ಕಥಾಶಿಲ್ಪಿಯ ಚೇತನ ಮೂರ್ತಿವೆತ್ತಿದೆ. ಪ್ರೀತಿಯನ್ನು ಪಡೆದವರು, ಸುಖಿಗಳಾದವರು ಯಾರ ಹೃದಯವನ್ನೂ ವಿಚಲಿತಗೊಳಿಸಲಾರರು. ರಾಜಲಕ್ಷ್ಮಿ, ಪಾರ್ವತಿ ಮತ್ತು ಸಾವಿತ್ರಿಯಂಥವರು ಮಾತ್ರವೇ ಹೀಗೆ ಮಾಡಬಲ್ಲರು. ಸ್ವಾಮಿಯನ್ನು ಪ್ರೀತಿಸಿ, ಅದರಿಂದ ವೇದನೆಯನ್ನು ಅನುಭವಿಸಿದಂಥ ಅನ್ನದಾ ಮತ್ತು ಮೃಣಾಲ ಅವರು ಮಾತ್ರವೇ ನೆನಪಿನಲ್ಲಿ ಉಳಿಯಬಲ್ಲವರಾದರು. ಇತ್ತ ಅಚಲಾ ಬಡವನಾದ ಮಹಿಮನನ್ನು ಏಕನಿಷ್ಠೆಯಿಂದ ಪ್ರೀತಿಸುತ್ತಾಳೆ; ಆದರೆ, ಅವಳ ವ್ಯಕ್ತಿ ಸ್ವಾತಂತ್ರ್ಯ ದಾರಿದ್ರ್ಯದ ಸಾಮಾಜಿಕ ವಾತಾವರಣವನ್ನು ಸಹಿಸಿಕೊಳ್ಳಲಾರದೆ ಹೋಗುತ್ತದೆ; ತಾನು ಬಯಸದೆಯೇ, ತನಗೆ ಅರಿವಿಲ್ಲದಂತೆಯೇ ತನ್ನನ್ನು ಅವಳು ಸುರೇಶನಿಗೆ ಸಮರ್ಪಿಸಿಕೊಂಡು ಬಿಡುತ್ತಾಳೆ. ಇಷ್ಟಾಗಿಯೂ, ಈ ಎಲ್ಲ ದುರಂತದ ಬಳಿಕವೂ ಈ ಮಾತನ್ನಾಡುವ ಧೈರ್ಯ ಅವಳಲ್ಲಿ ಇರುತ್ತದೆ: "ಕಾಗದ ಬರೆದರೆ, ಉತ್ತರ ಕೊಡುತ್ತೀಯೆ ತಾನೆ ?"

1. 18ನೆಯ ಪರಿಚ್ಛೇದದ ಎರಡನೆಯ ಭಾಗವನ್ನು ನೋಡಿ.

ನೆನಪಿನಲ್ಲಿ ಉಳಿಯಬಲ್ಲವಳಾದ ಇನ್ನೊಬ್ಬಳೆಂದರೆ ಅಭಯಾ. ಶರತ್ ಸಾಹಿತ್ಯದಲ್ಲಿ ನಾವು ಕಾಣುವುದು ಒಬ್ಬಳೇ ಒಬ್ಬಳು ಅಭಯಾಳನ್ನು. ಆದರೆ, ಸತೀತ್ವ ಮತ್ತು ನಾರೀತ್ವ ಒಂದೇ ಅಲ್ಲ ಎಂಬ ಅವರ ನಂಬಿಕೆಯ ಜೀವಂತ ಪ್ರತೀಕವಾಗಿದ್ದಾಳೆ ಅವಳು. ಎಲ್ಲಿಯವರೆಗೆ ಪತಿ-ಪತ್ನಿಯರ ಪ್ರಸನ್ನತೆಗೆ ಕಾರಣವಾಗಿರುತ್ತದೆಯೋ, ಅಲ್ಲಿಯವರೆಗೆ ಮಾತ್ರ ಗಂಡು-ಹೆಣ್ಣುಗಳ ಮಿಲನ ಸತ್ಯಸಂಗತಿಯಾಗಿರುತ್ತದೆಂಬ ಮಾತಿನ ಪ್ರತೀಕವೂ ಆಗಿದ್ದಾಳೆ ಅವಳು. ಯಾವ ಕ್ಷಣದಲ್ಲಿ ಲಾಭಕ್ಕಿಂತಲೂ ನಷ್ಟದ ತಟ್ಟೆಯ ತೂಕವೇ ಹೆಚ್ಚಾಗಿ ಬಿಡುತ್ತದೆಯೋ, ಬೆತ್ತದ ಬಲದ ಮೇಲೆ ಮಾತ್ರವೇ ಪತ್ನಿಯ ಎಲ್ಲ ಹಕ್ಕುಗಳನ್ನೂ ಪತಿಕಸಿದುಕೊಂಡು ಬಿಡುತ್ತಾನೋ ಆ ಕ್ಷಣವೇ ಅದು ತಾನೇ ಇಲ್ಲವಾಗಿ ಬಿಡುತ್ತದೆ. ತನ್ನ ಪ್ರೇಮಿ ರೋಹಿಣೀ ಬಾಬೂವಿಗಾಗಿ ಅವಳು ತನ್ನ ಅತ್ಯಾಚಾರಿ ಪತಿಯನ್ನು ತ್ಯಜಿಸುತ್ತಾಳೆ. ಅಷ್ಟೇ ಅಲ್ಲ, "ಇಂಥ ವ್ಯಕ್ತಿಯ ಇಡೀ ಬಾಳನ್ನು ಪಂಗುವಾಗಿಸಿ ನಾನು ಸತೀಶಿರೋಮಣಿಯ ಪ್ರಶಸ್ತಿಯನ್ನು ಕೊಂಡುಕೊಳ್ಳಬಯಸುವುದಿಲ್ಲ, ಶ್ರೀಕಾಂತ ಬಾಬೂ! ನಮ್ಮ ನಿಷ್ಕಳಂಕ ಪ್ರೇಮದ ಫಲವಾದ ಮಗು ಮಾನವತೆಯ ದೃಷ್ಟಿಯಿಂದ ಜಗತ್ತಿನಲ್ಲಿ ಯಾರಿಗೂ ಕೀಳಾಗಿರುವುದಿಲ್ಲವೆಂದು ನಾನು ನಿಶ್ಚಯವಾಗಿ ಹೇಳಬಲ್ಲೆ. ಸತ್ಯದ ನಡುವೆ ಹುಟ್ಟಿದ್ದೀಯೆ ಎಂಬ ಭರವಸೆಯನ್ನು ಆ ಮಗುವಿಗೆ ಖಂಡಿತವಾಗಿಯೂ ಕೊಡಬಲ್ಲೆ. ಈ ಜಗತ್ತಿನಲ್ಲಿ ಸತ್ಯಕ್ಕಿಂತಲೂ ಹಿರಿದಾದ ಆಸರೆ ಬೇರಾವುದೂ ಇಲ್ಲ. ಸತ್ಯದ ಹಾದಿಯನ್ನು ಬಿಟ್ಟು ಸರಿಯುವುದು ನನಗೆ ಕಷ್ಟವಾಗುತ್ತದೆ." ಎಂದು ಹೇಳುವ ಕೆಚ್ಚನ್ನೂ ಅವಳು ತೋರುತ್ತಾಳೆ.

".....ಆತನೂ (ಗಂಡ) ನನ್ನೊಡನೆ ಅವೇ ಮಂತ್ರಗಳನ್ನು ಉಚ್ಚರಿಸಿದ್ದ. ಆದರೆ, ಅದು ನಿರರ್ಥಕವಾದ ಬಡಬಡಿಕೆ ಮಾತ್ರವಾಗಿ ಬಿಟ್ಟಿತು. ಆತನ ಸ್ವೇಚ್ಛಾಚಾರಗಳ ಮೇಲೆ ಅದು ಯಾವುದೇ ಕಟ್ಟುಪಾಡನ್ನೂ ವಿಧಿಸಲಾರದೆ ಹೋಯಿತು..... ನಾನು ಹೆಣ್ಣಾಗಿರುವುದರಿಂದಲೇ, ಆ ಎಲ್ಲ ಬಂಧನಗಳೂ, ಆ ಎಲ್ಲ ಹೊಣೆಗಾರಿಕೆಗಳೂ ನನಗೆ ಮಾತ್ರವೇ ಅನ್ವಯಿಸುತ್ತವೇನು ?"

ಇದು ಬಂಗಾಳದ ಹೆಣ್ಣಿನ ಧ್ವನಿ ಮಾತ್ರವಲ್ಲ. ಎಲ್ಲ ಕಾಲದ ನಾರಿಯರ ಮನೋಭಾವ ಇದು. ಶರತ್‌ಚಂದ್ರರ ಅತ್ಯಂತ ದುರ್ಬಲ ನಾರಿಯೆಂದರೆ ವಿಪ್ಲವೀ ಅಥವಾ ಕ್ರಾಂತಿಕಾರಿ ಹೆಣ್ಣು. ಆಕೆ ಚಿಂತನೆಗಳ ಪ್ರತಿಮೂರ್ತಿಯಾಗಿರುತ್ತಾಳೆ. ರಕ್ತಮಾಂಸಗಳಿಂದ ಕೂಡಿದ, ಸುಖ-ದುಃಖಗಳಿಗೆ ಸ್ಪಂದಿಸುವ ಸಹಜ ಸ್ತ್ರೀ ಅವಳಲ್ಲ. ಅವರ ಅತ್ಯಂತ ಪ್ರಬಲ ನಾರಿಯೆಂದರೆ ಪತಿತಾ. ಈ ವರ್ಗದ ಬಗ್ಗೆ ಅವರು ಸಹಾನುಭೂತಿ ತೋರಿದ್ದು ಮಾತ್ರವಲ್ಲ; ಅವರ ಅಂತರಾಳದಲ್ಲಿ ಅಡಗಿದ್ದ ನಾರಿಗೆ ಗೌರವವನ್ನೂ ತೋರಿದರು. ಪ್ರೇಮಿಗಾಗಿಯೇ ಪ್ರೇಮಿಯನ್ನು ತ್ಯಜಿಸುವ ಧೈರ್ಯವನ್ನೂ ಕೊಟ್ಟರು. ಚಂದ್ರಮುಖಿ ಹೀಗೆಂದು ಹೇಳಬಲ್ಲವಳಾದಳು: "ನಿಮ್ಮೊಡನೆ ಹೋಲಿಸಿದರೆ ನಮ್ಮಲ್ಲಿ ರೂಪದ ಬಗೆಗಿನ ಮೋಹ ತುಂಬ ಕಮ್ಮಿಯಾಗಿಯೇ ಇರುತ್ತದೆ. ಆದ್ದರಿಂದಲೇ ನಿಮ್ಮಂತೆ ನಾವು ಉನ್ಮತ್ತರಾಗುವುದಿಲ್ಲ."

ಶರತ್‌ಚಂದ್ರರ ಈ ತೀವ್ರ ಸಹಾನುಭೂತಿ ಕೇವಲ ಮೌಖಿಕವಾದುದಾಗಿರಲಿಲ್ಲ. ತಮ್ಮ ನಡವಳಿಕೆಯಲ್ಲಿಯೂ ಅವರು ನಾರಿಯರ ವಿಷಯದಲ್ಲಿ ಅಷ್ಟೇ

ಸಂವೇದನಾಶೀಲರಾಗಿದ್ದರು. ಇಲಾಚಂದ್ರ ಜೋಶಿ ಹೀಗೆ ಬರೆದಿದ್ದಾರೆ. "ತಮ್ಮ ಸಂಪರ್ಕಕ್ಕೆ ಬಂದ ಅತ್ಯಂತ ಸಾಮಾನ್ಯ ಸ್ತ್ರೀಯರ ಬಗ್ಗೆಯೂ ಶರತ್‌ಚಂದ್ರರ ಮನಸ್ಸಿನಲ್ಲಿ ಕರುಣೆ, ಸಂವೇದನೆ ಮತ್ತು ಸಹೃದಯತೆಯ ಭಾವನೆಗಳು ಉಕ್ಕಿ ಹರಿಯುತ್ತಿದ್ದುವು. ಎಂದೂ ಯಾವುದೇ ಹೆಣ್ಣಿನ ಆರ್ಥಿಕ ಅಥವಾ ಸಹೃದಯತಾಜನ್ಯ ವಿವಶತೆಯ ದುರ್ಲಾಭವನ್ನು ಪಡೆದುಕೊಳ್ಳುವ ಪ್ರವೃತ್ತಿ ಅವರ ಮನಸ್ಸಿನಲ್ಲಿ ಕಾಣಿಸಿಕೊಳ್ಳಲಿಲ್ಲ. ಶರತ್‌ಚಂದ್ರರೇ ಸ್ವತಃ ಈ ಮಾತನ್ನು ನನ್ನೊಡನೆ ಹೇಳಿದ್ದರು. ಅವರ ನಿಕಟ ಹಾಗೂ ಘನಿಷ್ಠ ಸಂಪರ್ಕ ಉಂಟಾದ್ದರಿಂದ, ಅವರ ಸ್ವಭಾವ ಮತ್ತು ನಡೆವಳಿಕೆಗಳ ಅಧ್ಯಯನದಿಂದ ಸ್ವತಃ ನನಗೆ ಉಂಟಾದ ಅನುಭವದಿಂದ ಅವರ ಈ ಮಾತು ಪ್ರತ್ಯಕ್ಷವಾಗಿ ಹಾಗೂ ಪರಿಪೂರ್ಣ ರೂಪದಲ್ಲಿ ಸತ್ಯವೆಂದು ಸಿದ್ಧವಾಗುತ್ತಿತ್ತು."

ಅವರು ಅನೇಕ ಅಸಹಾಯಕ ಸ್ತ್ರೀಯರಿಗೆ ಆರ್ಥಿಕವಾಗಿ ನೆರವು ನೀಡಿದ್ದರು. ಅಷ್ಟೇ ಅಲ್ಲ, ಅನೇಕರಿಗೆ ತಮ್ಮ ಮನೆಯಲ್ಲಿಯೇ ಆಶ್ರಯವನ್ನೂ ಕೊಟ್ಟಿದ್ದರು. ಪ್ರತುಲ ಮುಕರ್ಜಿ ಎಂಬ ಶಿವಪುರದ ಒಬ್ಬ ಯುವಕ ಬಹಳ ದಿನಗಳಿಂದ ಅವರಿಗೆ ಪರಿಚಿತನಾಗಿದ್ದ. ತಮ್ಮ ಕುಟುಂಬದ ಜನರು ಹಾಗೂ ಗೆಳೆಯರು ವಿರೋಧಿಸಿದ್ದರೂ, ಆತ ದುರ್ಗಾದೇವಿ ಎಂಬ ವಿಧವೆಯನ್ನು ಮದುವೆಯಾಗಿದ್ದ. ವಿರೋಧದ ಆ ವಾತಾವರಣದಲ್ಲಿ ದುರ್ಗಾದೇವಿಗೆ ಶರತ್‌ಚಂದ್ರರು ಸ್ವಲ್ಪ ಕಾಲದವರೆಗೆ ತಮ್ಮ ಮನೆಯಲ್ಲಿಯೇ ಆಶ್ರಯವನ್ನೊದಗಿಸಿದ್ದರು. ಆಕೆಗೆ ಓದು-ಬರೆಹವನ್ನು ಕಲಿಸುವ ಪ್ರಯತ್ನವನ್ನೂ ಮಾಡಿದರು.

ಸ್ವತಃ ಅವರ ಮದುವೆಯೇ ಇದಕ್ಕೆ ಬಹುದೊಡ್ಡ ಪ್ರಮಾಣವಾಗಿರಲಿಲ್ಲವೆ ? ತಾವು ಪ್ರಸಿದ್ಧಿಯ ಉತ್ತುಂಗ ಶಿಖರವನ್ನೇರಿದ್ದಾಗಲೂ, ರಂಗೂನಿನಿಂದ ಬಂದು ಯಾವ ನಾರಿಯರ ವಸತಿಗಳಲ್ಲಿ ತಂಗುತ್ತಿದ್ದರೋ, ಯಾರನ್ನು ದುಶ್ಚಾರಿತ್ರ್ಯದವರೆಂದು ಹೇಳಲಾಗಿತ್ತೋ ಆ ನಾರಿಯರನ್ನು ಮರೆತರೆ ? ಅವರೊಡನೆ ಶರತ್‌ಚಂದ್ರರು ಮಾತುಕತೆಯಾಡುತ್ತಿದ್ದುದನ್ನು ಕಂಡು, ಅವರ ಅನೇಕ ಗೆಳೆಯರು ನಾಚಿಕೆಪಟ್ಟುಕೊಂಡಿದ್ದರು.[1]

ಅಂದು ಕವಿಗುರು ರವೀಂದ್ರರನ್ನು ಭೇಟಿಯಾಗಿ ಅವರು ಜೋಡಾಸಾಂಕೋದಿಂದ ಹಿಂದಿರುಗುತ್ತಿದ್ದರು. ತುಂಬ ಹೊತ್ತಾಗಿ ಬಿಟ್ಟಿತ್ತು. ಶರತ್‌ಚಂದ್ರರನ್ನು ರಸ್ತೆಯವರೆಗೆ ಬಿಟ್ಟು ಬರಬೇಕೆಂದು ರವೀಂದ್ರರು ಯಾರೋ ಒಬ್ಬರಿಗೆ ತಿಳಿಸಿದರು.

ರಸ್ತೆಯ ವರೆಗೆ ಬಂದ ಮೇಲೆ, ತುಂಬ ಹೊತ್ತಿನವರೆಗೆ ಕಾದು ಕುಳಿತಿದ್ದೇನೆ ಎಂಬ ಅನುಭವ ಶರತ್‌ಚಂದ್ರರಿಗೆ ಆಯಿತು. ಆದ್ದರಿಂದ, ಸ್ವಲ್ಪ ದೂರ ಕಾಲುನಡಿಗೆಯಲ್ಲಿ ನಡೆದರೆ ಒಳ್ಳೆಯದು ಎಂದು ಅವರಿಗೆ ಅನ್ನಿಸಿತು.

ಹೀಗಾಗಿ, ಮಾತುಕತೆ ಆಡುತ್ತ ಅವರು ಯಾವುದೋ ಒಂದು ಮೊಹಲ್ಲಾದ ಮೂಲಕ ಹಾದು ಹೋಗುತ್ತಿದ್ದರು. ಇದ್ದಕ್ಕಿದ್ದಂತೆ. "ಅಣ್ಣಯ್ಯ, ಓ ಅಣ್ಣಯ್ಯ" ಎಂದು ಯಾರೋ ಒಬ್ಬ ಹೆಂಗಸು ಕೂಗು ಹಾಕಿದಳು.

---

1. ಇದೇ ಬಗೆಯ ಘಟನೆಯೊಂದನ್ನು ಸೌರೀಂದ್ರ ಮೋಹನ ಮುಕರ್ಜಿಯವರು ಈ ಲೇಖಕನಿಗೆ ತಿಳಿಸಿದ್ದರು.

ಆಕೆಯನ್ನು ನೋಡಿದ ಕೂಡಲೇ, ಆಕೆ ಪಾಂಚೂ-ತಾಯಿ ಎಂದು ಶರತ್‌ಚಂದ್ರರು ಗುರುತಿಸಿದರು. ಹತ್ತಿರ ಬಂದು, ನಮಸ್ಕರಿಸಿ, ಪಾಂಚೂ ತಾಯಿ ಹೇಳಿದಳು: "ಅಣ್ಣಯ್ಯನವರ ದರ್ಶನ ಆದದ್ದು, ಇವತ್ತು ನನಗೆ ದೊಡ್ಡ ಸೌಭಾಗ್ಯವೇ ದೊರೆತಂತೆ ಆಯಿತು. ನೀವೇನೋ ತುಂಬ ದೊಡ್ಡವರು, ಸರಿ. ಆದರೆ, ನಮ್ಮನ್ನೆಲ್ಲ ಸಂಪೂರ್ಣವಾಗಿ ಮರೆತುಬಿಟ್ಟಿದ್ದೀರಲ್ಲ! ನೀವು ಈ ಕಡೆಗೆ ಬಂದು ಎಷ್ಟು ದಿವಸ ಆಯಿತು, ಹೇಳಿ. ಇವತ್ತು ನಿಮ್ಮನ್ನು ಹೋಗಲು ಬಿಡುವುದಿಲ್ಲ. ನನ್ನ ಮನೆಯಲ್ಲಿ ನಿಮ್ಮ ಪಾದಧೂಳಿ ಬೀಳಲೇ ಬೇಕು."

ಜೊತೆಯಲ್ಲಿ ಬರುತ್ತಿದ್ದ ವ್ಯಕ್ತಿ ಹತಪ್ರಭನಾಗಿ ಇದನ್ನೆಲ್ಲ ನೋಡುತ್ತಲೇ ಇದ್ದ. ಶರತ್‌ಚಂದ್ರರು ಆತನಿಗೆ ಹೇಳಿದರು: "ನೀವಿನ್ನು ಹೋಗಬಹುದು. ಸಿಕ್ಕಿ ಹಾಕಿಕೊಂಡು ಬಿಟ್ಟಿರುವಾಗ, ಬಿಡುಗಡೆಯಂತೂ ಸುಲಭವಾಗಿ ಸಿಕ್ಕುವುದಿಲ್ಲ."

ಆ ವ್ಯಕ್ತಿ ಹಿಂದಿರುಗಿದ. ಶರತ್‌ಚಂದ್ರರು ಪಾಂಚೂತಾಯಿಯ ಮನೆಯ ಕಡೆಗೆ ಹೆಜ್ಜೆ ಹಾಕಿದರು. ನೋಡುನೋಡುತ್ತಿದ್ದಂತೆಯೇ ಅನೇಕ ಹುಡುಗ-ಹುಡುಗಿಯರು "ಅಣ್ಣಯ್ಯ ಬಂದಿದ್ದಾರೆ, ಅಣ್ಣಯ್ಯ ಬಂದಿದ್ದಾರೆ" ಎಂದು ಹೇಳುತ್ತ, ಅವರನ್ನು ಸುತ್ತುವರಿದು ನಿಂತರು. ಅವರಿಂದ ಹೇಗೋ ಬಿಡಿಸಿಕೊಂಡು ಮುಂದೆ ಬಂದು ನೋಡಿದರೆ, ಏಳು ವರ್ಷದ ಆ ಪಾಂಚೂ ಮಹಾಶಯ 'ಅಕ್ಷರ ಮಾಲಿಕೆ'ಯನ್ನು ತೆರೆದಿಟ್ಟುಕೊಂಡು, ಅದನ್ನು ಮುಖಕ್ಕೆ ಅಡ್ಡಲಾಗಿ ಹಿಡಿದುಕೊಂಡಿದ್ದುದನ್ನು ಕಂಡರು. "ನಿನ್ನ ಮಗ ಹೀಗೇಕೆ ಕುಳಿತಿದ್ದಾನೆ? ಓದಬೇಕಾಗಿದೆ ಅಂತ ಏನು?"

ಆಕೆ ಹೇಳಿದಳು: "ನೋಡಿ, ಅಣ್ಣಯ್ಯ! 'ಸ್ಕೂಲಿನಲ್ಲಿ ನಿನ್ನೆ ಹೇಳಿಕೊಟ್ಟಿದ್ದನ್ನು ಚೆನ್ನಾಗಿ ಓದಿಕೊ, ಮೇಷ್ಟ್ರು ಕೇಳಿದಾಗ ಪಾಠ ಒಪ್ಪಿಸುವುದು ಸುಲಭ ಆಗುತ್ತೆ' ಅಂತ ಹೇಳಿ ಹೇಳಿ ನನಗೂ ಸಾಕಾಗಿದೆ. ಈ ದರಿದ್ರ ಮುಂಡೇದು ನನ್ನ ಮಾತು ಕೇಳಬೇಕಲ್ಲ! ಮನೇಲಿ ಮೇಷ್ಟ್ರನ್ನಿಟ್ಟು ಪಾಠ ಹೇಳಿಸೋ ಅಷ್ಟು ಶ್ರೀಮಂತಿಕೆ ನನಗೆಲ್ಲಿ ಬರಬೇಕು!"

ಶರತ್‌ಚಂದ್ರರೆಂದರು: "ಸರಿ, ನೀನು ತಂಬಾಕು ತುಂಬಿಕೊಂಡು ಬಾ. ನಾನು ಇವನಿಗೆ ಪಾಠ ಹೇಳಿಕೊಡುತ್ತೇನೆ."

ಹುಕ್ಕಾ ತಂದಿರಿಸುತ್ತಾ, ಆಕೆ ಮತ್ತೆ ಹೇಳಿದಳು: "ನೀವೇ ಹೇಳಿ, ಅಣ್ಣಯ್ಯ! ಇವನಿಗೆ ಎಷ್ಟೂ ಅಂತ ಹೇಳಲಿ? 'ಹೆಚ್ಚಿಗೆ ಓದದೆ ಇದ್ದರೂ ಪರವಾಗಿಲ್ಲ. ಒಂದನೇ ಕ್ಲಾಸಿನ ಎರಡನೇ ಕ್ಲಾಸಿನ ಪುಸ್ತಕವನ್ನಾದರೂ ಓದಿಕೊ. ನಮ್ಮ ಅಣ್ಣಯ್ಯ ಇದ್ದಾರಲ್ಲ, ಪುಸ್ತಕಗಳನ್ನು ಬರೆದಿದ್ದಾರಂತೆ. ಇನ್ನೇನು ಮಾಡಲಿಕ್ಕೆ ಆಗದಿದ್ದರೂ, ಒಂದು-ಎರಡನೇ ಕ್ಲಾಸಿನ ಪುಸ್ತಕಗಳನ್ನಾದರೂ ಓದಿಬಿಡು. ನಮ್ಮ ಅಣ್ಣಯ್ಯನವರ ಹಾಗೆ ನೀನೂ ನಾಲ್ಕು ಪುಸ್ತಕ ಬರೆದು ಹೊಟ್ಟೆ ಬಟ್ಟೆಗೆ ಬೇಕಾದಷ್ಟು ಸಂಪಾದಿಸಬಹುದು' ಅಂತ ಹೇಳುತ್ತಲೇ ಇದ್ದೇನೆ. ಅಣ್ಣಯ್ಯ, ದಯವಿಟ್ಟು ನೀವೇ ಅವನಿಗೆ ಬುದ್ಧಿ ಹೇಳಿ. ನಿಮ್ಮ ಮಾತು ಕೇಳಿಯಾದರೂ ಸ್ವಲ್ಪ ಬುದ್ಧಿ ಬರಲಿ. ಅಷ್ಟರ ಒಳಗೆ ನಾನು ನಿಮ್ಮ ಊಟಕ್ಕೆ ಏರ್ಪಾಟು ಮಾಡುತ್ತೇನೆ. ಇಲ್ಲ, ಇಲ್ಲ ಅಣ್ಣಯ್ಯ! ಅದೆಲ್ಲ ಆಗುವುದಿಲ್ಲ. ಎಷ್ಟು ದಿವಸದ ಮೇಲೆ ಬಂದಿದ್ದೀರಿ. ಒಂದು ತುತ್ತು ಊಟ ಮಾಡದೆ ಹೋಗಲು ನಾನಂತೂ ಬಿಡುವುದಿಲ್ಲ."

ಅಂದು ಆಕೆಯ ಮನೆಯಲ್ಲಿ ಊಟಮಾಡಿ, ಆ ಮೊಹಲ್ಲಾದ ಒಂದೊಂದು ಮನೆಯನ್ನೂ ತಮ್ಮ ಪಾದಧೂಳಿಯಿಂದ ಪವಿತ್ರೀಕರಿಸುವ ಹೊತ್ತಿಗೆ ಸಂಜೆಯಾಗಿ ಹೋಯಿತು.

ಹೀಗಾಗಿ, ಅವರ ಬಗ್ಗೆ 'ಅನೀತಿಯ ಪ್ರಚಾರಕ'ರೆಂಬ ಕುಖ್ಯಾತಿ ಸ್ವಲ್ಪವೂ ಕಡಿಮೆಯಾಗಲೇ ಇಲ್ಲ. ಹಾಗೇನಾದರೂ ಆಗಿದ್ದರೆ, ಉಚ್ಚ ಶಿಕ್ಷಣವನ್ನು ಪಡೆದಿದ್ದ, ಗೌರವಾನ್ವಿತ ಕುಟುಂಬದ ಮಹಿಳೆಯಾಗಿದ್ದ ವೀಣಾದೇವಿ ಸರಸ್ವತಿ ತಮ್ಮ ಮನೆಯಲ್ಲೇ ಏಕೆ ಅಪಮಾನಕ್ಕೆ ಒಳಗಾಗಬೇಕಾಗಿ ಬರುತ್ತಿತ್ತು? ಆಕೆ ಸ್ವತಃ ಲೇಖಕಿಯೂ ಆಗಿದ್ದರು. ಶರತ್‌ಚಂದ್ರರ ಬಗ್ಗೆ ಆಕೆಗೆ ಅಪಾರ ಗೌರವವಿತ್ತು. ಆಗಾಗ ಅವರನ್ನು ಕಾಣಲೂ ಆಕೆ ಬರುತ್ತಿದ್ದುದುಂಟು. ಒಂದು ದಿವಸ, ಊಟಕ್ಕೆ ತಮ್ಮ ಮನೆಗೆ ಬರಬೇಕೆಂದು ಆಕೆ ಶರತ್‌ಚಂದ್ರರನ್ನು ಆಹ್ವಾನಿಸಿದರು.

ಅವರು ಆಕೆಯ ಮನೆಗೆ ಊಟಕ್ಕೆ ಹೋಗಬೇಕಾಗಿದ್ದ ದಿವಸ, ಅಷ್ಟಾಗಿ ಶಿಕ್ಷಣವನ್ನೇನೂ ಪಡೆಯದೆ ಇದ್ದ, ವೀಣಾದೇವಿಯವರ ಒಬ್ಬ ನಾದಿನಿ ತನ್ನ ತಾಯಿಯೊಂದಿಗೆ ಹೀಗೆಂದಳು: "ಅತ್ತಿಗೆ ಇವತ್ತು ಯಾರನ್ನು ಊಟಕ್ಕೆ ಕರೆದಿದ್ದಾಳೆ ಅಂತ ಗೊತ್ತೇನಮ್ಮ ನಿನಗೆ? ಅದೇ ಆ ಶರತ್ ಚಾಟುಜ್ಜೇನ! ಅದೇ ಆ ಕುಡುಕ, ನಡತೆಗೆಟ್ಟವನು, ಯಾವಗಲೂ ಸೂಳೆಯರ ಮನೆಯಲ್ಲಿ ಬಿದ್ದಿರುತ್ತಾನಂತೆ!"

ಆ ತಾಯಿ ನಿರಕ್ಷರಕುಕ್ಷಿಯಾಗಿದ್ದ ಭಟ್ಟಾಚಾರ್ಯ ಕುಟುಂಬದ ಹೆಣ್ಣು, ಅಂದ ಮೇಲೆ ಕೇಳಬೇಕೆ? ಈ ಮಾತನ್ನು ಕೇಳಿದೊಡನೆಯೇ ಆಕೆ ಕೆಂಡವಾದಳು. ಕೂಡಲೇ ಸೊಸೆಯ ಬಳಿಗೆ ಹೋಗಿ ಕೇಳಿದಳು: "ಇದೇನು ಮಾಡುತ್ತಾ ಇದ್ದೀಯಾ? ಮೊದಲೇ ನನಗೆ ಗೊತ್ತಾಗಿದ್ದರೆ, ಮೀನು-ತರಕಾರಿ ತೆಗೆದುಕೊಂಡು ಬರುವುದಕ್ಕೆ ಮಕ್ಕಳನ್ನು ಕಳಿಸುತ್ತಲೇ ಇರಲಿಲ್ಲ. ಅವನು ಏನಾದರೂ ಆಗಿರಲಿ, ಈ ಮನೆಯೊಳಕ್ಕೆ ಕಾಲಿಡಕೂಡದು."

ಈ ಮಾತನ್ನು ಕೇಳಿ ವೀಣಾದೇವಿ ತುಂಬ ಚಿಂತೆಗೊಳಗಾದರು. ಅನುನಯ-ವಿನಯದ ಧ್ವನಿಯಲ್ಲಿ ಆಕೆ ಕೇಳಿದಳು: "ಅಮ್ಮ ಇವತ್ತು ಒಂದು ದಿವಸ ಅವಕಾಶ ಕೊಟ್ಟು ಬಿಡಿ. ಇನ್ನೆಂದೂ ಅವರನ್ನು ಕರೆಯುವುದಿಲ್ಲ. ಬನ್ನಿ ಅಂತ ಹೇಳಿ, ಕರೆಯದೆ ಇದ್ದರೆ, ಅವರಿಗೆ ಅವಮಾನ ಮಾಡಿದ ಹಾಗೆ ಆಗುತ್ತದೆ."

ಆದರೆ ತಾಯಿ ಏನು ಮಾಡಿದರೂ ಒಪ್ಪಲಿಲ್ಲ. ತನ್ನ ಕೊನೆಯ ತೀರ್ಮಾನವನ್ನು ಘೋಷಿಸುತ್ತ ಆಕೆ ಹೇಳಿದಳು: "ನೀನು ಈಗಲೇ ಅವನ ಹತ್ತಿರ ಹೋಗು. 'ಇದ್ದಕ್ಕಿದ್ದ ಹಾಗೆ ನಮ್ಮ ಅತ್ತೆಯ ಆರೋಗ್ಯ ತುಂಬ ಕೆಟ್ಟು ಬಿಟ್ಟಿದೆ. ಆದ್ದರಿಂದ, ಇವತ್ತು ನಮ್ಮ ಮನೆಯಲ್ಲಿ ಊಟದ ಏರ್ಪಾಟು ಮಾಡಲು ಸಾಧ್ಯವಿಲ್ಲ' ಅಂತ ಹೇಳಿಬಿಡು."

ಭಾರವಾದ ಮನಸ್ಸನ್ನು ಹೊತ್ತು ವೀಣಾದೇವಿ ಶರತ್‌ಚಂದ್ರರ ಬಳಿಗೆ ಹೋದರು. ಆದರೆ, ಸುಳ್ಳು ಹೇಳಲು ಆಕೆಗೆ ಸಾಧ್ಯವಾಗಲಿಲ್ಲ. ಕಣ್ಣೀರು ಸುರಿಸುತ್ತ ಆಕೆ ಇಡೀ ಕಥೆಯನ್ನು ತಿಳಿಸಿದರು: "ನನ್ನ ಗಂಡ ಅಥವಾ ಭಾವ ಮನೆಯಲ್ಲಿ ಇದ್ದಿದ್ದರೆ, 'ಅಮ್ಮ'ನಿಗೆ ತಿಳಿಯಹೇಳಬಹುದಾಗಿತ್ತು. ನನ್ನ ಮಾತನ್ನು ಒಪ್ಪಲು ಅವರು ಸುತರಾಂ ಸಿದ್ಧರಾಗಿಲ್ಲ" ಎಂದು ಹೇಳಿದರು.

ಶರತ್‌ಚಂದ್ರರು ಒಮ್ಮೆಲೇ ಗಂಭೀರರಾಗಿಬಿಟ್ಟರು. ಆಮೇಲೆ ಅವರು ಹೀಗೆಂದರು: "ಈ ಸಂಗತಿಯ ಬಗ್ಗೆ ನಿಮ್ಮ ಮನಸ್ಸಿನಲ್ಲಿ ನೀವು ಯಾವುದೇ ರೀತಿಯ ಕೊರಗನ್ನು ಇಟ್ಟುಕೊಳ್ಳಬಾರದು. ನನ್ನ ವಿಷಯದಲ್ಲಿ ಜನ ಹೀಗೆಯೇ ತಪ್ಪು ಮಾಡುತ್ತಿದ್ದಾರೆ. ಅದೇನೇನು ಹೇಳುತ್ತ ಇರುತ್ತಾರೋ, ದೇವರಿಗೇ ಗೊತ್ತು. ನನ್ನ ಪತ್ನಿಯನ್ನು ನಾನು ಧರ್ಮಶಾಸ್ತ್ರದ ವಿಧಿಗಳಿಗೆ ಅನುಗುಣವಾಗಿಯೇ ಮದುವೆಯಾಗಿದ್ದೇನೆ. ಆದರೂ, ಆಕೆಯನ್ನು ನನ್ನ ರಖಾವುದಾರಳು ಎಂದೇ ಈ ಜನ ಅಂದುಕೊಂಡಿದ್ದಾರೆ."

ಈ ಬಗೆಯ ತಪ್ಪು ಮಾಡದೆ ಇದ್ದಂಥ ಮಹಿಳೆಯರೂ ಇದ್ದರು. ಕಾನ್ಪುರದ ಲೀಲಾರಾನೀ ಗಂಗೋಪಾಧ್ಯಾಯ ಅಂಥ ಮಹಿಳೆಯರಲ್ಲಿ ಒಬ್ಬರಾಗಿದ್ದರು. ಆಕೆಯೊಂದಿಗೆ ಅವರು ಸತತ ಪತ್ರ-ವ್ಯವಹಾರವನ್ನಿರಿಸಿಕೊಂಡಿದ್ದರು. ಆಕೆಯ ಮನೆಗೆ ಆಹ್ವಾನಿತರಾಗಿ ಹೋಗಿ, ಅಲ್ಲಿದ್ದೂ ಬಂದಿದ್ದರು. ಆಕೆಯ ಪತಿ ತುಂಬ ವಿಶಾಲ ದೃಷ್ಟಿಯವರಾಗಿದ್ದರು. ಆಕೆಯನ್ನು ನಿರುಪಮಾ ದೇವಿಯಂಥ ಇನ್ನೊಬ್ಬ ಲೇಖಕಿಯಾಗಿಸಬೇಕೆಂದು ಶರತ್‌ಚಂದ್ರರು ತುಂಬ ಆಸೆಯನ್ನಿರಿಸಿಕೊಂಡಿದ್ದರು. ಒಮ್ಮೆ ನವದ್ವೀಪದ ಅವರ ಮನೆಗೆ ಬಂದಿದ್ದಾಗ, ಇಡೀ ರಾತ್ರಿ ಅವರಿಬ್ಬರೂ ಮಾತನಾಡುತ್ತ ಕುಳಿತಿದ್ದರು. ಆ ಮಾತುಕತೆಗಳಿಗೆ ಕೊನೆ ಎಂಬುದೇ ಇರಲಿಲ್ಲ. ಆದರೆ, ರಾತ್ರಿ ಕೊನೆಗೊಂಡಿತ್ತು. ಅವರ ಗೆಳೆಯ ಕಣ್ಣುಬಿಟ್ಟು ನೋಡಿದ ಅವರಿನ್ನೂ ಮಾತನಾಡುತ್ತಲೇ ಇದ್ದರು. ಲೀಲಾರಾನೀ ಅವರಿಗೆ ಹೀಗೆಂದು ಬರೆದಿದ್ದರು: "ಅಣ್ಣಯ್ಯ, ಒಂದು ಸಲ ನಮ್ಮನ್ನು ಭೇಟಿಯಾಗಲು ಇಲ್ಲಿಗೇ ಬನ್ನಿ."

ಈ ಅಣ್ಣಯ್ಯ ಓಡಿ ಬಂದಿದ್ದರು. ಅವರ ಸ್ವಾಗತ-ಸತ್ಕಾರಗಳಿಗೆ ಲೀಲಾರಾನೀ ಅದೆಂಥ ಭವ್ಯ ವ್ಯವಸ್ಥೆ ಮಾಡಿದ್ದರು! ಬೀಳ್ಕೊಡುವ ಗಳಿಗೆಯೂ ಅದೆಷ್ಟು ಆರ್ದ್ರಮಯವಾಗಿ ಬಿಟ್ಟಿತ್ತು! ಮತ್ತೆ ಮತ್ತೆ ಬರುವುದಾಗಿ ಮಾತು ಕೊಟ್ಟಿದ್ದು ಎಷ್ಟು ಸಲ! ಅವರಿಬ್ಬರಲ್ಲಿ ಅದೆಂಥ ನಿಷ್ಕಪಟ ಸ್ನೇಹವಿತ್ತು!

ಸಮಾಜದ ಎಲ್ಲ ವರ್ಗಗಳ ನಾರಿಯರೊಂದಿಗೆ ಅವರು ಸದಾ ಸಹಜ ಹಾಗೂ ಆತ್ಮೀಯ ಸಂಬಂಧವನ್ನು ಇರಿಸಿಕೊಂಡಿದ್ದರು. ಅವರ ಕಥೆಗಳನ್ನು ಕೇಳಲು ಆ ನಾರಿಯರು ತುದಿಗಾಲಲ್ಲಿ ನಿಂತಿರುತ್ತಿದ್ದರು. ಕಥೆ ಹೇಳುವ ಅವರ ರೀತಿಗೆ ಅವರೆಲ್ಲ ಮಾರುಹೋಗಿದ್ದರು. ಅವರ ಆಲೋಚನೆಗಳನ್ನು ಒಪ್ಪಿ, ಅವಕ್ಕಾಗಿ ತಮ್ಮ ಪ್ರಾಣಾರ್ಪಣೆ ಮಾಡಲು ಅವರು ಸಿದ್ಧರಾಗಿದ್ದರು. ಇಂಥ ನಿಃಸ್ವಾರ್ಥ ಪ್ರವೃತ್ತಿಯ ಇಂಥ ವಿಶಾಲ ಮನೋಭಾವದ ಹಾಗೂ ಇಂಥ ಮುಕ್ತ ಮನಸ್ಸಿನ ವ್ಯಕ್ತಿಯನ್ನು ಅವರೆಲ್ಲೂ ಕಂಡಿರಲಿಲ್ಲ. ಅವರ ಇಂಥ ಆಳವಾದ ಪ್ರೀತಿ-ವಿಶ್ವಾಸಗಳಿಂದಾಗಿಯೇ ಅವರು ಅವರನ್ನು ಅಷ್ಟು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು ಹಾಗೂ ಅವರ ವಿಷಯದಲ್ಲಿ ನಡೆಯುತ್ತಿದ್ದ ಅನ್ಯಾಯಗಳಿಗೆ ವಿರುದ್ಧವಾಗಿ ಹೋರಾಟ ನಡೆಸಿದ್ದರು ಹಾಗೂ ಅವರಿಗೆ ಮಾನವೀಯ ಗೌರವಾದರಗಳನ್ನು ಕೊಡಿಸಿಕೊಟ್ಟಿದ್ದರು. ಈ ಗೌರವಾದರಗಳನ್ನು ತಂದುಕೊಡುವ ಸಲುವಾಗಿಯೇ ಅವರು ಮೂಕ ನಾರಿಗೆ ದನಿಗೊಟ್ಟರು ಹಾಗೂ ಪತಿತೆಯ ಅಂತರ್ಯದಲ್ಲಿ ಅಡಗಿದ್ದ ಮಾನವತೆಯನ್ನು ಅರಸಿದರು. ಇಷ್ಟೆಲ್ಲ ಮಾಡಿದರೂ, ತಮ್ಮ ಮನಸ್ಸಿನ ಆದರ್ಶ ನಾರಿಯನ್ನು (ರಾಜಲಕ್ಷ್ಮಿಯನ್ನು) ತಮ್ಮ ಬಾಳಿನಲ್ಲಿ ಪಡೆಯಲು ಅವರಿಗೆ ಸಾಧ್ಯವಾಯಿತೆ!

ಹಾಗೆ ಪಡೆಯಲ್ಲು ಸಾಧ್ಯವಾಗದೆ ಹೋದುದೇ, ಅವರ ಸಾಹಿತ್ಯದ ಶಕ್ತಿಯಾಯಿತು.

**18**

ನಾರಿಯರು ಮತ್ತು ವಿದ್ಯಾರ್ಥಿಗಳು ಮಾತ್ರವೇ ಅಲ್ಲ, ಇತರ ಬುದ್ಧಿಜೀವಿಗಳೂ ಆಗಾಗ ಅವರನ್ನು ತಮ್ಮ ನಡುವೆ ಹೊಂದಲು ಆತುರರಾಗಿರುತ್ತಿದ್ದರು.

ತುಂಬ ಉತ್ಸಾಹದಿಂದ ಅವರು ಶರತ್‌ಚಂದ್ರರನ್ನು ಸ್ವಾಗತಿಸುತ್ತಿದ್ದರು, ಸನ್ಮಾನಿಸುತ್ತಿದ್ದರು; ನಾನಾ ಸಮ್ಮೇಳನಗಳ ಅಧ್ಯಕ್ಷತೆ ವಹಿಸಬೇಕೆಂದು ಒತ್ತಾಯಪೂರ್ವಕವಾಗಿ ಅವರನ್ನು ಆಹ್ವಾನಿಸುತ್ತಿದ್ದರು; ಅವರ ಹುಟ್ಟುಹಬ್ಬವನ್ನು ಆಚರಿಸುತ್ತಿದ್ದರು.

ಈ ಸಂದರ್ಭಗಳಲ್ಲಿ ನಡೆಯುತ್ತಿದ್ದ ಗೋಷ್ಠಿಗಳಲ್ಲಿ ಸಾಹಿತಿ ಮಿತ್ರರು ಮತ್ತು ಅಭಿಮಾನಿಗಳು ಆತ್ಮೀಯ ವಾತಾವರಣದಲ್ಲಿ ಮುಕ್ತ ಮನಸ್ಸಿನಿಂದ ಮಾತುಕತೆಗಳಲ್ಲಿ ಪಾಲ್ಗೊಳ್ಳಬಹುದಾಗಿತ್ತು. ಅವರೂ ಅಲ್ಲಿ ತೆರೆದ ಮನಸ್ಸಿನಿಂದ ತಮ್ಮ ಧೋರಣೆಗಳನ್ನು ಕುರಿತು ಚರ್ಚಿಸುತ್ತಿದ್ದರು. ಏನನ್ನೂ ಮರೆಮಾಚುವ ಪ್ರಯತ್ನವನ್ನಾಗಲೀ, ತಮ್ಮನ್ನು ರಹಸ್ಯಮಯವಾಗಿಸುವ ಯೋಜನೆಯನ್ನಾಗಲೀ ಅವರು ಮಾಡುತ್ತಿರಲಿಲ್ಲ. ಮೇದಿನೀಪುರದಲ್ಲಿ[1] ಇಂಥದೇ ಒಂದು ಗೋಷ್ಠಿ ನಡೆದಿತ್ತು. ಅದರಲ್ಲಿ ಸತೀತ್ವ ಮತ್ತು ನಾರೀತ್ವವನ್ನು ಕುರಿತ ತಮ್ಮ ಧೋರಣೆಗಳನ್ನು ವಿಶ್ಲೇಷಿಸಿದ್ದು ಮಾತ್ರವಲ್ಲದೆ, ಅನೇಕ ಮಹತ್ವಪೂರ್ಣ ಪ್ರಶ್ನೆಗಳಿಗೂ ಉತ್ತರಕೊಟ್ಟಿದ್ದರು. "ನೀವು ಸತೀತ್ವದ ಬಗೆಗಿನ ಪ್ರಾಚೀನ ನಿಲುವಿನ ವಿರುದ್ಧವಾಗಿ ಒಂದು ಪ್ರತಿಭಟನೆಯನ್ನೇ ಎಬ್ಬಿಸಿದ್ದೀರಿ. ಏತಕ್ಕಾಗಿ ? ಇದನ್ನು ದಯವಿಟ್ಟು ವಿವರಿಸಿ ಹೇಳಿ." ಎಂದು ಗೆಳೆಯರೊಬ್ಬರು ಕೇಳಿದರು.

ಶರತ್‌ಚಂದ್ರರು ಹೀಗೆಂದು ಉತ್ತರಿಸಿದರು: "ನಾನು ಪ್ರತಿಭಟನೆಯನ್ನೇನೂ ಎಬ್ಬಿಸಿಲ್ಲ. ಇದು ಈ ಯುಗದ ಪ್ರಭಾವ. ಯಾವುದೇ ವಿಚಾರ ಅಥವಾ ವಸ್ತು ತುಂಬ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ ಎಂಬ ಕಾರಣದಿಂದಾಗಿಯೇ, ಸರಿ ಎನಿಸಿಕೊಂಡು ಬಿಡುವುದಿಲ್ಲ. ಯಾವುದೇ ಸಂಗತಿ ಎಲ್ಲ ಕಾಲಕ್ಕೂ ಸರಿಯಾಗಿರುವುದಿಲ್ಲ. ಸತೀತ್ವ ಎಂಬುದು ಪರಿಪೂರ್ಣ ಮಾನವತೆಯ ಒಂದು ಅಂಶ. ಅದು ಮನುಷ್ಯತೆಯ ಕರ್ತವ್ಯ ಮತ್ತು ಹಕ್ಕುಗಳ ಸಂಬಂಧ ಎಷ್ಟು ಅವಿಚ್ಛಿನ್ನವಾದುದೆಂದರೆ ಒಂದು ಇಲ್ಲವಾದರೆ, ಇನ್ನೊಂದು ನಿರರ್ಥಕವಾಗಿ ಬಿಡುತ್ತದೆ. ನಾನು ಶಾಸ್ತ್ರಗಳನ್ನು ಬಲ್ಲೆನೆಂದು ಸವಾಲು ಹಾಕುವುದಿಲ್ಲ. ನನಗೆ ಯಾವುದೇ ಧರ್ಮವೂ ಇಲ್ಲ. ಆದರೆ, ನಾನು ನೋಡುತ್ತ ಬಂದಿರುವ ಮಟ್ಟಿಗೆ, ಶಾಸ್ತ್ರಗಳಲ್ಲಿ ಪುರುಷರಿಗೆ ಯಾವುದೇ ಕರ್ತವ್ಯವನ್ನು ವಿಧಿಸಿರುವುದರ ಬಗ್ಗೆ ಉಲ್ಲೇಖವಿರುವಂತೆ ತೋರುವುದಿಲ್ಲ. ಅವರ ಹಕ್ಕುಗಳು ಮಾತ್ರವೇ ಮೇಲಿಂದ ಮೇಲೆ ಉಲ್ಲೇಖಗೊಂಡಿವೆ. ಪುರುಷರಿಗೆ ಯಾವುದೂ ವರ್ಜ್ಯವಾಗಿಲ್ಲ. ಆದರೆ, ಯಾರಾದರೊಬ್ಬ ಯುವತಿ ಸ್ವಲ್ಪ ಜಾರಿದಳೆಂದರೆ, ಆಕೆಗೆ ಮತ್ತೆ ಮುಕ್ತಿ ಎಂಬುದೇ

1. ಫೆಬ್ರುವರಿ 24, 1926.

ಇಲ್ಲ. ಹೀಗೇಕೆ? ಸಮಾಜಕ್ಕೆ ಮತ್ತೆ ಹಿಂದಿರುಗಿ ಗೌರವದ ಸ್ಥಾನವನ್ನು ಪಡೆದುಕೊಳ್ಳುವ ಅವಕಾಶ ಅವಳಿಗೇಕೆ ಇಲ್ಲವಾಗಿ ಬಿಡುತ್ತದೆ? ಆಕೆಗೆ ಜೀವ ಎಂಬುದೇ ಇಲ್ಲವೇನು? ಆಕೆಯಲ್ಲಿ ಎಂಥ ಮಹಾ ಜೀವ ಇರುತ್ತದೆಂದರೆ, ಯಾವಳೇ ಗೃಹಸ್ಥ ಸತಿಯಲ್ಲಿಯೂ ಅದು ದುರ್ಲಭವಾಗಿರುತ್ತದೆ ಎಂಬುದು ನನಗೆ ಚೆನ್ನಾಗಿ ಗೊತ್ತು."

"ಪುರುಷ ಮನಸ್ಸಿಗೆ ಬಂದಂತೆ ನಡೆದು ತನ್ನನ್ನು ಪತಿತನಾಗಿಸಿಕೊಳ್ಳುತ್ತಾನೆ. ಆದರೆ, ಇದನ್ನೇ ಕಾರಣವಾಗಿಸಿಕೊಂಡು ನಾರಿಯನ್ನೂ ಪತಿತಳಾಗಲೂ ಬಿಡುತ್ತೀರೇನು?"

"ಬಿಡುತ್ತಿರೇನು ಎಂದರೆ ಏನು ಅರ್ಥ? ನೀವು ಯಾವುದೇ ಒರೆಗಲ್ಲಿನಲ್ಲಿಯೂ ಚೊಕ್ಕ ಚಿನ್ನವಾಗಿ ಹೊರಬರುವುದಿಲ್ಲ; ಹೀಗಿರುವಾಗ, ಹೆಣ್ಣನ್ನೇಕೆ ಬಲವಂತವಾಗಿ ಆ ಒರೆಗಲ್ಲಿನಲ್ಲಿ ಹಾಕಿ ಉಜ್ಜುವ ಕೆಲಸ ಮಾಡುತ್ತೀರಿ? ಎಂಬುದಷ್ಟೇ ನನ್ನ ನಿಲುವು."

"ಅನ್ಯಾಯ ಅಥವಾ ಪಾಪಕ್ಕೆ ವಿರುದ್ಧವಾಗಿ ತಿರಸ್ಕಾರದ ಭಾವನೆಯನ್ನು ಮೂಡಿಸುವುದು ಉಚಿತವಲ್ಲವೇನು?"

"ಹಾಗೆ ಮಾಡುವುದು ಬಹುಶಃ ಅನುಚಿತವೇನೂ ಅಲ್ಲ. ಆದರೆ, ಮನುಷ್ಯನೊಬ್ಬ ಇನ್ನೊಬ್ಬ ಮನುಷ್ಯನನ್ನು ತಿರಸ್ಕರಿಸುವ ವಿಚಾರವನ್ನು ಒಪ್ಪುವುದು ನನಗೆ ಕಷ್ಟಕರವಾಗಿದೆ. ತಾರಕ ಗಂಗೂಲಿಯವರ 'ಸರಲಾ' ಎಂಬ ಕಾದಂಬರಿಯಲ್ಲಿನ ಪ್ರಮದೆಯ ಪಾತ್ರವನ್ನೇ ನೋಡಿ. ಅವಳಿಗಿಂತಲೂ ಹೆಚ್ಚು 'ಸ್ಕ್ಯಾಂಡ್ರಲ್' ಎನ್ನಬಹುದಾದ ವ್ಯಕ್ತಿ ನೋಡಲೂ ದೊರೆಯುವುದಿಲ್ಲ. ಇಷ್ಟಾಗಿಯೂ, ನಿಮ್ಮ ಸನಾತನ ಮಾನದಂಡದ ಮೇರೆಗೆ ಅವಳು ಮಹಾಸತಿಯೇ. ಶಾರೀರಿಕ ಶುದ್ಧತೆ ಎಂಬುದು ಅಂಥ ಮಹಾಗುಣವೆ? ಗಂಡ ಜೈಲಿಗೆ ಹೋಗುವುದನ್ನು ತಪ್ಪಿಸಲು ಯಾವ ಹೆಂಡತಿ ತನ್ನ ಒಡವೆಗಳನ್ನು ತೆಗೆದು ಕೊಡಲಾರಳೋ, ಹಣವನ್ನು ಬಿಚ್ಚಲಾರಳೋ ಅವಳು ಒಬ್ಬ ಸತಿಯೆ? ಅವಳ ಸತೀತ್ವಕ್ಕೆ ಇರುವ ಬೆಲೆ ಏನೆಂಬುದು ನನಗಂತೂ ಅರ್ಥವಾಗುವುದಿಲ್ಲ."

"ಭಯವನ್ನು ಮೂಡಿಸುವಂಥ ರೀತಿಯಲ್ಲಿ ಪಾಪವನ್ನು ಚಿತ್ರಿಸುವುದು ಕರ್ತವ್ಯವಲ್ಲವೆ? ಪಾಪದ ಬಗೆಗಿನ ಭಯದ ಪ್ರಯೋಜನವನ್ನು ನೀವು ಒಪ್ಪುವುದಿಲ್ಲವೇನು?"

"ಭಯವನ್ನು ಮೂಡಿಸುವುದರಿಂದ ದೊರೆಯುವ ಪ್ರಯೋಜನವೇನು? ಅದು ಎಂದಿನಿಂದಲೂ ಇದ್ದದ್ದೇ. ನೇಣುಗಂಬದ ಶಿಕ್ಷೆಯನ್ನೇ ವಿಧಿಸಲಾಗುತ್ತದೆ; ಆದರೂ ಜನ ಕೊಲೆ ಮಾಡುತ್ತಲೇ ಬಂದಿದ್ದಾರೆ."

ಇನ್ನೊಬ್ಬ ವ್ಯಕ್ತಿ ಕೇಳಿದ: "ನೀವು ವೇಶ್ಯೆಯಲ್ಲಿ ಸದ್ಗುಣವನ್ನು ತೋರಿಸಿದರೆ, ಜನಗಳ ದೃಷ್ಟಿಯಲ್ಲಿ ವೇಶ್ಯಾವೃತ್ತಿಯ ದೋಷವನ್ನು ಕಡಿಮೆಯಾಗಿಸಿದಂತೆ ಆಗುವುದಿಲ್ಲವೆ?"

ಶರತ್‌ಚಂದ್ರರು ಉತ್ತರಿಸಿದರು: "ಆಗಬಹುದು. ಆದರೆ, ಅದರಿಂದ ಆಗುವ ನಷ್ಟವೇನು? ನಾನು ಪ್ರಾಚೀನ ಕಾಲದ ರಾಜಕುಮಾರ ಮತ್ತು ರಾಕ್ಷಸರ ಕಥೆಯನ್ನು

ಬರೆಯುವುದಿಲ್ಲ. ರಾಜಕುಮಾರನನ್ನು ಒಳ್ಳೆಯ ಗುಣಗಳ ಸಾಕಾರ ಮೂರ್ತಿಯೆಂದೂ, ರಾಕ್ಷಸನನ್ನು ದುರ್ಗುಣಗಳ ಭಂಡಾರವೆಂದೂ ಚಿತ್ರಿಸುವ ಕಥೆಗಳ ಕಾಲ ಇದಲ್ಲ. ಸತ್ಯಸಂಗತಿಯನ್ನು ನಾನೇಕೆ ಹೇಳಬಾರದು? ಇದುವರೆಗೆ ಏನು ನಡೆದುಕೊಂಡು ಬಂದಿದೆಯೋ ಅದೇ ಒಳ್ಳೆಯದೆಂದು ನೀವು ಭಾವಿಸಿಕೊಂಡಿದ್ದೀರಿ. ನಾನು ಈ ಮಾನದಂಡವನ್ನು ಬಿಟ್ಟು ಎಲ್ಲಿಯಾದರೂ ಅತ್ತಿತ್ತಸರಿದ ಒಡನೆಯೇ ನೀವು ನನ್ನ ಲೇಖನಿಯನ್ನು ಕಿತ್ತುಕೊಳ್ಳಲು ಸಿದ್ಧವಾಗಿಬಿಡುತ್ತೀರಿ. ಹಿಂದೆ ಇದ್ದುದಕ್ಕೆ ಹೊಂದಿಕೊಳ್ಳದೆ ಇರುವಂಥದೆಲ್ಲವೂ ತಪ್ಪೇನು?"

ಗೆಳೆಯರೊಬ್ಬರು ಪ್ರಶ್ನಿಸಿದರು: "ಬಂಕಿಮಚಂದ್ರರು ಶೈವಲಿನಿಗೆ ಶಿಕ್ಷೆಯನ್ನು ವಿಧಿಸಿದರು. ಅದೇ ರೀತಿ ಶಿಕ್ಷೆ ವಿಧಿಸಿಕೊಂಡು ಹೋಗುವುದು ಸರಿಯಲ್ಲವೇನು?"

"ನಾನು ಯಾರಿಗೂ ಶಿಕ್ಷೆ ವಿಧಿಸಲಾರೆ."

"ಆದರೆ, ನೀವು 'ಬಿರಾಜ್‌ಬಹೂ'ಗೆ ಶಿಕ್ಷೆ ವಿಧಿಸಿದ್ದೀರಲ್ಲಾ!"

"ಬಿರಾಜಳ ಸಂಗತಿಯೇ ಬೇರೆ. ಅದು ಆಕೆ ತನಗೆ ತಾನೇ ವಿಧಿಸಿಕೊಂಡ ಶಿಕ್ಷೆ. ಅದು ಅವಳ ಒಳಲೋಕದ ದಂಡನೆ. ಅವಳು ತನ್ನ ಗಂಡನನ್ನು ಮನಸಾರೆ ಪ್ರೀತಿಸುತ್ತಿದ್ದಳು. ಅವಳು ಚಂದ್ರಶೇಖರನನ್ನು ಎಂದೂ ಪ್ರೀತಿಸಿರಲಿಲ್ಲ. ಅವಳು ವಿಧಿಸಿಕೊಂಡ ದಂಡನೆ ವಿಚಿತ್ರವಾದುದು ಹಾಗೂ ತಾನೇ ಬಲವಂತವಾಗಿ ಹೊತ್ತುಕೊಂಡದ್ದು. ಮನಸ್ಸಿನ ಮೇಲೆ ಅದರ ಒತ್ತಾಯವೇನೂ ಇಲ್ಲ. ಅನೇಕ ಬಗೆಯ ಮನೋವೈಜ್ಞಾನಿಕ ಶಕ್ತಿಗಳ ನೆರವನ್ನು ಪಡೆದು ಬಂಕಿಮಚಂದ್ರರು ತಮ್ಮ ಕಾಲದ ಸಮಾಜದೊಂದಿಗೆ ಸೆಣಸಬೇಕಾಯಿತು. ನನ್ನ ನಿಲುವು ಇದು. ನನ್ನ ಕೃತಿಗಳ ಮೂಲಕ ನಾನು ಮನುಷ್ಯನ ಆತ್ಮಕ್ಕೆ ಅಪಮಾನವನ್ನೆಸಗಲು ಇಚ್ಛಿಸುವುದಿಲ್ಲ. ಗಂಡಾಗಲೀ ಹೆಣ್ಣಾಗಲೀ, ಬಿದ್ದರೆ ಮೇಲೇಳುವ ಮಾರ್ಗ ಎಲ್ಲರಿಗೂ ತೆರೆದಿರಬೇಕು. ಹಿಂದೂಗಳ ಸಮಾಜ ತುಂಬ ನಿಷ್ಠುರವಾಗಿದೆ. ಮುಸ್ಲಿಮರ ಸಮಾಜ ತೌಲನಿಕವಾಗಿ ಒಳ್ಳೆಯದು. ಕ್ರೈಸ್ತರ ಸಮಾಜ ಅದಕ್ಕಿಂತಲೂ ಒಳ್ಳೆಯದು. ನನ್ನ 'ಪಲ್ಲೀ ಸಮಾಜ'ದ ರಮಾ ಮತ್ತು ರಮೇಶರನ್ನು ತೆಗೆದುಕೊಳ್ಳಿ. ಇಬ್ಬರೂ ಮಹಾಚೇತನಗಳೇ. ಮಂಗಳವನ್ನು ಸಾಧಿಸುವ ಅಪಾರ ಶಕ್ತಿ ಇಬ್ಬರಲ್ಲಿಯೂ ಇದೆ. ಆದರೆ ಇಬ್ಬರ ಬಾಳೂ ಹಾಳಾಗಿಬಿಟ್ಟಿತಲ್ಲ! ಅವರಿಬ್ಬರ ಮಿಲನ ಧಾರ್ಮಿಕ ಏಕತೆಯಾಗಲಾರದೆ ಹೋಯಿತು. ಹೀಗೇಕೆ ಆಯಿತು ಎಂದು ಯೋಚಿಸುವುದೇ ತಪ್ಪೇ? ಅಂಥ ಮಹಾಚೇತನಗಳು ನಾಶವಾಗಿಬಿಟ್ಟುವು. ಬೇರೆ ಯಾವುದಾದರೂ ಸಮಾಜದಲ್ಲಿ ಹೀಗಾಗುತ್ತಿತ್ತೆ? ನಾನು ಚಿಂತನೆಯ ಮಾರ್ಗವನ್ನು ಸೂಚಿಸಿ ತೆಪ್ಪಗಾಗಿ ಬಿಡುತ್ತೇನೆ. ಸಮಸ್ಯೆಗೆ ಪರಿಹಾರವನ್ನು ನೀವು ಕಂಡುಕೊಳ್ಳಿ. ಹೊರಗೆ ಇರುವ ನಾವು ಅದರೊಡನೆ ನಮ್ಮನ್ನು ತೊಡಗಿಸಿಕೊಂಡು, ಆಮೇಲೆ ಸುಮ್ಮನಾಗಿಬಿಡುತ್ತೇವೆ. ಒಳಗಿನ ಶಕ್ತಿಗಳೂ ಇರುತ್ತವಲ್ಲವೇ! ಪ್ರೀತಿ ಎಂಥ ದೊಡ್ಡ ವಸ್ತು! ಅದರ ಶಕ್ತಿ ಅದೆಷ್ಟು ಅಪಾರವಾಗಿದೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಇದರಿಂದಾಗಿ ಎಲ್ಲ ದೋಷಗಳೂ, ಎಲ್ಲ ಅರೆಕೊರೆಗಳೂ ಮುಚ್ಚಿ ಹೋಗುತ್ತವೆ."

ಸಮಾಜ ಒಡ್ಡುತ್ತಿರುವ ತೊಂದರೆಗಳು ಅಮಾನುಷಿಕವಾದುವು. ಅವನ್ನು ಇಲ್ಲವಾಗಿಸಬೇಕು. ಆದರೆ, ಎಲ್ಲಿಯವರೆಗೆ ಸಮಾಜ ಹೃದಯಾಂತರಾಳದಿಂದ

ಹಾಗೂ ಸಹಜ ರೂಪದಲ್ಲಿ ಅಡೆತಡೆಗಳನ್ನು ನಿವಾರಿಸುವುದಿಲ್ಲವೋ ಅಲ್ಲಿಯ ವರೆಗೂ ಈ ಅಡೆತಡೆಗಳ ಮುಚ್ಚಿದ ಬಾಗಿಲಿಗೆ ತಲೆಗಟ್ಟಿಸಿಕೊಳ್ಳುತ್ತಲೇ ಇರಬೇಕಾಗುತ್ತದೆ ಎಂದು ಶರತ್‌ಚಂದ್ರರು ಈ ಮಾತುಗಳ ಮೂಲಕ ಹೇಳಬಯಸಿರುವಂತೆ ತೋರುತ್ತದೆ.

ಯಾರೋ ಒಬ್ಬರು ಕೇಳಿದರು: "ಆತ್ಮತ್ಯಾಗದ ನಮ್ಮ ಪ್ರಾಚ್ಯ ಆದರ್ಶಕ್ಕೆ ನಿಮ್ಮ ಕೃತಿಗಳಲ್ಲಿ ಯಾವ ಸ್ಥಾನ ದೊರೆತಿದೆ?"

ಶರತ್‌ಚಂದ್ರರು ಉತ್ತರಿಸಿದರು: "ಆತ್ಮತ್ಯಾಗ ಅಗತ್ಯವೆಂಬುದು ನಿಮ್ಮಲ್ಲಿ ಅನೇಕರಿಗೆ ಗೊತ್ತಿಲ್ಲ. ಆ ಅವಕಾಶ ನಿಮಗೆ ದೊರೆತೇ ಇಲ್ಲ. ಇತರ ಸಮಾಜಗಳಲ್ಲಿ ಹೆಣ್ಣು ಗಂಡುಗಳು ಪರಸ್ಪರರ ಹೃದಯಗಳನ್ನು ಗೆಲ್ಲಲು ಎಂಥ ಆತ್ಮತ್ಯಾಗಗಳನ್ನು ಮಾಡುತ್ತಾರೆ ಎಂಬುದನ್ನು ನಾನು ಸಾಕಷ್ಟು ಸುತ್ತಾಡಿ ಕಂಡುಕೊಂಡಿದ್ದೇನೆ. ಪ್ರೇಮಕ್ಕಿಂತ ಹೆಚ್ಚಾಗಿ ಆತ್ಮತ್ಯಾಗದ ಪ್ರೇರಣೆಯನ್ನು ನೀಡುವ, ತಿಳಿವನ್ನು ಮೂಡಿಸುವ ಶಕ್ತಿ ಬೇರೆ ಯಾವುದಿದೆ? ತನ್ನ ಪ್ರೇಮಿಯೊಂದಿಗೆ ಒಂದೆರಡು ಮಾತುಗಳನ್ನಾಡುವ ಅಜ್ಞಾತ ಆನಂದಕ್ಕಾಗಿ ಹಲವು ರಾತ್ರಿಗಳವರೆಗೆ ಹಾವುಗಳು ತುಂಬಿದ್ದ ಕಗ್ಗತ್ತಲಿನ ಕಾಡಿನಲ್ಲಿ ತನ್ನ ಇನಿಯನಿಗಾಗಿ ಕಾಯುತ್ತಿದ್ದ ಬರ್ಮೀ ಹುಡುಗಿಯೊಬ್ಬಳನ್ನು ನಾನು ಕಂಡಿದ್ದೇನೆ. ಶಾರೀರಿಕ ಸಂಪರ್ಕಕ್ಕೆ ಮೊದಲಿನ ಮಾತನ್ನು ನಾನು ಹೇಳುತ್ತಿದ್ದೇನೆ. ಪ್ರೇಮಿಕೆಯ ಹೃದಯವನ್ನು ಗೆಲ್ಲಲು ಅದೆಷ್ಟು ಬಗೆಯ ಪ್ರಯತ್ನಗಳನ್ನು, ಅದೆಷ್ಟು ಆಂತರಿಕ ಸಾಧನೆಯನ್ನು ನಡೆಸಬೇಕಾಗುತ್ತದೆ ಹಾಗೂ ಅದರಲ್ಲಿ ಎಷ್ಟು ಮಾಧುರ್ಯವಿರುತ್ತದೆ ಎಂಬುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಅದನ್ನು ನಾನು ಮರೆಯಲಾರೆ. ಇದನ್ನು ಪಡೆಯುವುದಕ್ಕಾಗಿ ಎಷ್ಟು ತ್ಯಾಗ, ಪ್ರಯತ್ನ ಮತ್ತು ಸಾಧನೆ ಮಾಡಬೇಕಾಗುತ್ತದೆಯೋ ಅದರಿಂದ ಮನುಷ್ಯ ಉದಾತ್ತನಾಗುತ್ತಾನೆ: ಬಹುಮಟ್ಟಿಗೆ ಹಿರಿಯ ಚೇತನವೂ ಆಗುತ್ತಾನೆ. ನಮ್ಮಲ್ಲಿ ವಿವಾಹಿತರಾದ ಜೋಡಿಗಳಲ್ಲಿ ಇದು ಸ್ವಲ್ಪ ಮಟ್ಟಿಗೂ ಸಂಭಾವ್ಯವಾಗುವುದಿಲ್ಲ. ಒಬ್ಬರನ್ನೊಬ್ಬರು ಗೆಲ್ಲುವುದರಲ್ಲಿ ಯಾವ ಆನಂದವಿರುತ್ತದೆಯೋ, ಬಾಳಿನ ಮೇಲೆ ಅದು ಎಂಥ ಮಹತ್ತರ ಪ್ರಭಾವವನ್ನು ಬೀರುತ್ತದೆಯೋ, ಅದರಿಂದ ಅವರು ವಂಚಿತರಾಗಿಬಿಡುತ್ತಾರೆ. ಗೆಲುವಿಗಾಗಿ ಅದೆಷ್ಟು ಉದ್ವಿಗ್ನರಾಗಿರುತ್ತಾರೆ, ಆಕುಲ ರಾಗಿರುತ್ತಾರೆ ಎಂಬುದನ್ನು ನಾನು ನೋಡಿದ್ದೇನೆ. ಈ ಪ್ರಕ್ರಿಯೆಯಿಂದ ಅವರು ಶಕ್ತಿಯನ್ನು ಒಗ್ಗೂಡಿಸಿಕೊಳ್ಳುತ್ತಾರೆ. ತಮ್ಮ ಅರ್ಹತೆಯನ್ನು ಹೆಚ್ಚಿಸಿಕೊಳ್ಳುತ್ತಾರೆ ಹಾಗೂ ಅಗತ್ಯವಾದಲ್ಲಿ ದ್ವಂದ್ವ ಯುದ್ಧಕ್ಕೂ ಸಿದ್ಧರಾಗುತ್ತಾರೆ. ಪ್ರೇಮದ ಎಲ್ಲೆ ಯಾವುದೆಂಬುದು ಅವರಿಗೆ ಗೊತ್ತಿರುತ್ತದೆ. ಅದನ್ನು ಗೌರವಿಸುವುದೂ ಅವರಿಗೆ ತಿಳಿದಿರುತ್ತದೆ. ಇಲ್ಲಿ ಏನಾಗುತ್ತದಪ್ಪ ಅಂದರೆ, ಸಮಾಜ ಅವರನ್ನು ಹಿಡಿದು-ಕಟ್ಟಿ ಹಾಕಿ, ಕೆಲವು ಮಂತ್ರಗಳನ್ನು ಹೇಳಿಸಿ ಒಂದುಗೂಡಿಸಿಬಿಡುತ್ತದೆ. ಅವರು ಒಂದುಗೂಡಿ ಇರಬೇಕಾಗುತ್ತದೆ; ಒಟ್ಟಿಗೇ ಮಲಗಬೇಕಾಗುತ್ತದೆ; ಸ್ವತಃ ಏನೂ ಮಾಡಬೇಕಾಗುವುದಿಲ್ಲ. ಒಳ್ಳೆಯ ಗೃಹಸ್ಥ ಜೀವನ ನೆಲೆಗೊಂಡುಬಿಡುತ್ತದೆ. ಮಕ್ಕಳೂ ಆಗುತ್ತವೆ. ಆಗಾಗ್ಗೆ ಜಗಳಗಳೂ ನಡೆಯುತ್ತವೆ. ಆದರೆ, ಅವರಿಗೆ ಪ್ರೇಮದ ಜೀವಂತ ಆನಂದ ಲಭ್ಯವಾಗುವುದಿಲ್ಲ."

"ಪಶುಗಳಲ್ಲಿ ಉದ್ವಿಗ್ನತೆಯನ್ನೂ, ಆಕುಲತೆಯನ್ನೂ ಕಾಣುತ್ತೇವೆ. ಹಾಗಾದರೆ, ಅಷ್ಟರಿಂದಲೇ ಅವು ಶ್ರೇಷ್ಠವಾಗಿ ಬಿಡುತ್ತವೇನು ?"

"ಅದನ್ನು ಪಾಶವೀಯವಾದುದು ಎಂದು ಬೇಕಾದರೆ ಹೇಳಬಹುದು. ಆದರೆ, ಈ ಕಾರಣಕ್ಕಾಗಿಯೇ ಅದು ಹೇಯವಾಗಿ ಬಿಡುವುದಿಲ್ಲ. ಅದರಲ್ಲಿ ದೊರೆಯುವ ಆನಂದ ದುರ್ಲಭವಾದುದು. ಅದು ಕ್ಷಣಿಕವೂ ಆಗಬಹುದು; ಆದರೆ ತುಂಬ ಪ್ರಭಾವಶಾಲಿಯಾಗಿರುತ್ತದೆ. ಗೆಲುವಿನ ಆನಂದವೇನೂ ಕಡಿಮೆಯಾಗಿರುವುದಿಲ್ಲ. ತನ್ನಿಂದ ತಾನೆ ಮೇಲೇರಿ ಬಂದ ವ್ಯಕ್ತಿ ಹೇಗೆ 'ದೊಡ್ಡವ'ನೆನ್ನಿಸಿಕೊಳ್ಳುತ್ತಾನೋ ಹಾಗೆಯೇ ತನ್ನ ಪ್ರೇಮಿಕೆಯನ್ನು ಗೆದ್ದ ವ್ಯಕ್ತಿಯೂ 'ದೊಡ್ಡವ'ನಾಗುತ್ತಾನೆ. ಆದರೆ, ನಾನು ಸದಾಚಾರವನ್ನೂ ಗೌರವಿಸುತ್ತೇನೆ. ಸೌಂದರ್ಯದ ಚರ್ಚೆಯೇ ಸರ್ವಸ್ವವಲ್ಲ."

"ಇಂಥ ಆಲೋಚನೆಗಳು ಹಿಂದೂ ಧರ್ಮಕ್ಕೆ ವಿರುದ್ಧವಾದುವಲ್ಲವೆ ?"

"ಯಾವುದೇ ವಿಶಿಷ್ಟ ಧರ್ಮದ ವಿಷಯದಲ್ಲಿ ನಾನು ಏನೂ ಹೇಳುವುದಿಲ್ಲ; ಹೇಳಬಯಸುವುದೂ ಇಲ್ಲ. ನನಗೆ ಯಾವ ಧರ್ಮದಲ್ಲಿಯೂ ಶ್ರದ್ಧೆ ಇಲ್ಲ. ಆದರೆ, ಇಷ್ಟು ಮಾತ್ರ ಹೇಳುತ್ತೇನೆ: ಯಾವುದನ್ನು ನೀವು ಹಿಂದೂ ಧರ್ಮವೆಂದು ಭಾವಿಸುತ್ತೀರೋ, ಅದರ ಮೇಲೆಯೇ ನಮ್ಮನ್ನು ಪಂಗುವಾಗಿಸಿದ ಹಾಗೂ ಜಡವಾಗಿಸಿದ ಹೊಣೆಗಾರಿಕೆ ಬೀಳುತ್ತದೆ. ಇಸ್ಲಾಂ ಧರ್ಮದಲ್ಲಿ ಮನುಷ್ಯತ್ವದ ಬಗ್ಗೆ ಇದಕ್ಕಿಂತಲೂ ಹೆಚ್ಚಿನ ಗೌರವವಿದೆ. ನನ್ನ ಕೃತಿಗಳಲ್ಲಿ ನನ್ನ ಪಾತ್ರಗಳೇ ಮಾತನಾಡುತ್ತವೆ. ಅವುಗಳಲ್ಲಿ ಯಾವ ಪಾತ್ರದ ಬಾಯಿಯಲ್ಲೂ ನನ್ನ ಮಾತುಗಳು ಬರುವುದಿಲ್ಲ. ನಾನು ಅವುಗಳ ಮಾತನ್ನು ಒಪ್ಪುವುದಿಲ್ಲ; ಒಪ್ಪಲೂ ಆರೆ. ನನ್ನ ವಿಷಯದಲ್ಲಿ ಜೀವನವೇ ಸರ್ವಸ್ವ. ಈ ಜನ್ಮದ ಬಳಿಕ ಇನ್ನೊಂದು ಜನ್ಮ ಇದೆಯೇ ಇಲ್ಲವೇ ಎಂಬುದು ನನಗೆ ಗೊತ್ತಿಲ್ಲ. ಇರಲಿ ಬಿಡಿ. ಈ ಎಲ್ಲ ಮಾತುಗಳು ನಿಮಗೆ ಹಿಡಿಸದೆ ಹೋಗಬಹುದು. ಹೃದಯವನ್ನು ಗೆಲ್ಲುವ ಈ ಮಾತನ್ನು ನಾನೇನು ಹೇಳಿದ್ದೇನೋ ಅದು ಬಹುಶಃ ಹಿಂದೆಯೂ ಇತ್ತು. ನಮ್ಮ ಸಾಮರ್ಥ್ಯವನ್ನು ಮೆರೆದು ಹೆಣ್ಣಿನ ಹೃದಯವನ್ನು ಗೆಲ್ಲಬೇಕಾಗುತ್ತಿತ್ತು. ಎಲ್ಲ ಸಮುದಾಯಗಳಲ್ಲಿ ಹಾಗೂ ಸಮಾಜಗಳಲ್ಲಿ ಹೀಗೆ ಆಗುತ್ತಿತ್ತು. ಯಾವುದೇ ರೀತಿಯಲ್ಲಿ ಉಸಿರುಕಟ್ಟಿಕೊಂಡು, ಎಚ್ಚರಿಕೆಯಿಂದ 'ಲಕ್ಷ್ಮಣರೇಖೆ'ಯೊಳಗೇ ಉಳಿದುಕೊಂಡು ಬಾಳನ್ನು ಸವೆಸುವುದು ಅವರಿಗೆ ಇಷ್ಟವಾಗುತ್ತಿರಲಿಲ್ಲ. ಈ ಕಾರಣದಿಂದಾಗಿ, ಅವರಲ್ಲಿ ಬಹುತೇಕ ವ್ಯಕ್ತಿಗಳು ಬಾಳಿನಲ್ಲಿ ವಾಸ್ತವಿಕ ಆನಂದವನ್ನು ಅರಸುವಂಥವರಾಗಿರುತ್ತಿದ್ದರು."

ಶರತ್‌ಚಂದ್ರರೂ ಆನಂದದ ಉಪಾಸಕರೇ ಆಗಿದ್ದರು. ಆದರೆ, ಅವರ ಆನಂದ ಸಂಯಮವಲ್ಲದೆ ಬೇರೇನೂ ಆಗಿರಲಿಲ್ಲ. ಇದೇ ಅವರ ಸಾಹಿತ್ಯಿಕ ಅಭಿವ್ಯಕ್ತಿಯ ಪ್ರಾಣ. ಮೂರನೆಯ ವರ್ಷ[1] ಚಂದನ ನಗರದ ಗೋಷ್ಠಿಯಲ್ಲಿ ಅವರು ಸಂಯಮದ ವಿಚಾರವನ್ನು ಚರ್ಚಿಸಿದ್ದಷ್ಟೇ ಅಲ್ಲ, ತಮ್ಮ ಸಾಹಿತ್ಯ ಸೃಷ್ಟಿಯ ಹಿನ್ನೆಲೆ ಮತ್ತು ಪರಿಸರಗಳ ಮೇಲೂ ಅವರು ಬೆಳಕು ಚೆಲ್ಲಿದರು.

ಸ್ಥಳೀಯ ಪ್ರವರ್ತಕ ಸಂಘದ ಆಹ್ವಾನದ ಮೇಲೆ ಅವರು ಅಲ್ಲಿಗೆ ಹೋಗಿದ್ದರು.

---

1. ನವೆಂಬರ್ 1930. ಈ ಪುಸ್ತಕದಲ್ಲಿ ಅನೇಕ ಕಡೆಗಳಲ್ಲಿ ಈ ವಿಷಯದ ಚರ್ಚೆ ಬರುತ್ತದೆ.

ವಿಪ್ಲವ ಯುಗದ ನೇತಾರರಾಗಿದ್ದ ಚಾರುಚಂದ್ರ ರಾಯ್, ಮೋತಿಲಾಲ್ ರಾಯ್ ಹಾಗೂ ಬಸಂತ ಬಂದೋಪಾಧ್ಯಾಯ ಮೊದಲಾದವರು ಬಹಳ ಸಕ್ರಿಯವಾಗಿದ್ದರು. ಬಿಡುಗಡೆಯಾಗಿದ್ದ ರಾಜಕೀಯ ಬಂದಿಗಳಾಗಿದ್ದ ಬಲಾಯಿ ಚಂದ್ರ ಅವರು ಸ್ವತಃ ಅವರನ್ನು ಪ್ರಾಣತ್ರಾಸದಿಂದ ತಮ್ಮ ಜೊತೆಯಲ್ಲಿ ಚಂದನ ನಗರಕ್ಕೆ ಕರೆತಂದಿದ್ದರು. ಈ ಗೋಷ್ಠಿ ಬಹುಮಟ್ಟಿಗೆ ಆಂತರಂಗಿಕವಾಗಿಯೇ ಇತ್ತು. ಕುಟುಂಬದವರೇ ಎಂಬಂತೆ, ಎಲ್ಲರೂ ಶರತ್‌ಚಂದ್ರರನ್ನು ಸುತ್ತುವರಿದು ಕುಳಿತುಕೊಂಡಿರುತ್ತಿದ್ದರು. ಪ್ರಶ್ನೆಗಳ ಮೂಲಕ ಪರಸ್ಪರರನ್ನು ಅರ್ಥಮಾಡಿಕೊಳ್ಳಲು ಯತ್ನಿಸುತ್ತಿದ್ದರು. ಅದು ಆರಂಭಗೊಂಡಿದ್ದು ಶರತ್‌ಚಂದ್ರರ ವಂಶ-ಪರಿಚಯದೊಂದಿಗೆ. ಅವರೆಂದರು: "ನಿಮಗೆ ಇದನ್ನು ಕೇಳಿ ದುಃಖವಾಗಬಹುದು. ವಂಶದ ಯಾವ ಹಿಂದಿನ ಗೌರವವೂ ನನಗೆ ಸಂದಿಲ್ಲ. ನಮ್ಮ ಇತಿಹಾಸದ ಇಟ್ಟಿಗೆಗಳನ್ನು, ಕಲ್ಲುಗಳನ್ನು ಕೆದಕಿ ಬೆದಕಿ ನೋಡಿರುವಂಥವರು. 'ನೋಡಿ, ನಮ್ಮ ಇವನು ನಮಗೆ ಇದಾಗ ಬೇಕು, ಅದಾಗಬೇಕು' ಎಂದು ಹೇಳುತ್ತಾರೆ. ಅವರ ಮಾತುಗಳನ್ನು ಕೇಳಿದಾಗ, ನನಗೆ ಸಂತೋಷವಾಗುವುದಿಲ್ಲ. ನಮ್ಮಲ್ಲಿ ಏನೂ ಇರಲೇ ಇಲ್ಲವೆಂದು ನಾನು ಹೇಳಬಯಸುತ್ತೇನೆ. ಇದಕ್ಕಾಗಿ ವಿಷಾದಿಸಬೇಕಾದ ಅಗತ್ಯವೂ ಇಲ್ಲ. ಪ್ರಾಚೀನ ವಸ್ತುಗಳ ಬಗ್ಗೆ ಅಭಿಮಾನಪಟ್ಟುಕೊಳ್ಳುವಷ್ಟರಿಂದಲೇ ಏನೂ ಸಾಧಿತವಾಗುವುದಿಲ್ಲ. ಹೊಸತನ್ನು ಸೃಷ್ಟಿಸಿ.

"ಮೋತಿ ಬಾಬೂಗಳ[1] ಪುಸ್ತಕಗಳನ್ನು ನಾನು ಹೆಚ್ಚಾಗಿ ಓದುತ್ತೇನೆ. ಅವರು ಈ ನಾಡನ್ನು ಮತ್ತೆ ಹಳೆಯ ಬುನಾದಿಯ ಮೇಲೆ ನಿಲ್ಲಿಸಬಯಸುತ್ತಾರೆ. ಹೊಸ ವರ್ಗವನ್ನು ಸೃಷ್ಟಿಸಬಯಸುತ್ತಾರೆ. ಆದರೆ, ಧರ್ಮ ಮತ್ತು ಭಗವದ್ಭಕ್ತಿಗಳೇ ಇದಕ್ಕೆ ಆಧಾರವಾಗಿರುತ್ತವೆ. ಶಾಸ್ತ್ರಗಳಲ್ಲಿ ಅನೇಕ ಸಾಧನೆಯ ಮಾತುಗಳು ಬರುತ್ತವೆ. ದೌರ್ಭಾಗ್ಯದಿಂದ ನನ್ನ ಮನಸ್ಸು ವಿರುದ್ಧ ದಿಕ್ಕಿನಲ್ಲಿ ಹರಿದಿದೆ. ನಾನು ಸಾಧನೆಯ ಯಾವ ಮೌಲ್ಯವನ್ನೂ ಅರಸಲಾರೆ. ಶಾಸ್ತ್ರಗಳ ಸಾಧನೆ ಅಷ್ಟೊಂದು ಮಹತ್ತರ ವಾದುದಾಗಿದ್ದರೆ, ನಾವೇಕೆ ಇಷ್ಟು ಸಣ್ಣವರಾಗುತ್ತಿದ್ದೆವು ? ನಾನಾ ಜನಗಳು ನಾನಾ ರೀತಿಯ ಮಾತುಗಳನ್ನಾಡುತ್ತಾರೆ. ಆತ್ಮಸಮ್ಮಾನದ ಅನುಭೂತಿ ಹೆಚ್ಚಾಗಿದ್ದಂಥ ಸಮುದಾಯಗಳಿಗೆ ಸೇರಿದ ಜನರು, ತಾವು ಸ್ವತಂತ್ರರೆಂದು ಹೇಳಿಕೊಂಡು ತಮ್ಮನ್ನು ಪರಿಚಯಿಸಿಕೊಳ್ಳುತ್ತಾರೆ. ನಾವು ಇಷ್ಟು ದೊಡ್ಡವರಾಗಿಯೂ ಪಠಾಣರ, ಮುಗಲರ ಮತ್ತು ಆ ತರುವಾಯ ಬ್ರಿಟಿಷರ ಕಾಲ ಕೆಳಗೆ ಸಿಕ್ಕಿ ನಲುಗಿದೆವು. ನಮ್ಮ ಆಧ್ಯಾತ್ಮಿಕ ಜೀವನವೂ ತುಂಬ ಉನ್ನತವಾದುದೇ. ಆದರೆ, ನಾವು ನಿಜಕ್ಕೂ ಅಷ್ಟು ದೊಡ್ಡವರಾಗಿದ್ದರೆ, ದಿನೇ ದಿನೇ ಏಕೆ ಚಿಕ್ಕವರಾಗುತ್ತ ನಡೆದಿದ್ದೇವೆ. ನಮ್ಮ ನಾಡು ಯಾರ ತ್ಯಾಗದ ಹಾದಿಯ ಮೂಲಕ ಹಾದು ಹೋಗುತ್ತಿದೆಯೋ ಅದರಲ್ಲಿಯೇ ಏನೋ ತಪ್ಪು ಅಡಗಿರುವಂತೆ ನನಗೆ ತೋರುತ್ತಿದೆ. ಅದನ್ನು ಹುಡುಕಲೂ ನಮಗೆ ಸಾಧ್ಯವಾಗುತ್ತಿಲ್ಲ. ದಿನೇ ದಿನೇ ಅವನತಿಯತ್ತ ಮುನ್ನಡೆಯುತ್ತ ಇದ್ದೇವೆ. ನಾಲ್ಕು ಜನರಿಗೆ ಕೇಳುವಂತೆ ಈ ಪ್ರಶ್ನೆ ಹಾಕುತ್ತಿದ್ದೇನೆ: 'ಈ ಸಾವಿರ ವರ್ಷಗಳಿಂದ ನಾವೇಕೆ ದುಃಸ್ಥಿತಿಯತ್ತಲೇ ಸಾಗುತ್ತಿದ್ದೇವೆ ? ಹೇಳಿ.' ಇದು ಏಕೆ ಸಾಧ್ಯವಾಯಿತು ?

---

1. ಪ್ರವರ್ತಕ ಸಂಘಕ್ಕೆ ಸೇರಿದ ವಿಶಿಷ್ಟ ವ್ಯಕ್ತಿ.

ಯಾರಾದರೂ ಒಬ್ಬರು, ಇದಕ್ಕೆ ಕಾರಣವೇನೆಂಬುದನ್ನು ಪತ್ತೆ ಹಚ್ಚಿದರೆ, ನಾಡಿಗೆ ಮಹಾಉಪಕಾರ ಮಾಡಿದಂತಾಗುತ್ತದೆ.

"ನಿಜವಾದ ಸಂಗತಿ ಏನೆಂದರೆ ನಾನು ಸಂಸ್ಕಾರಗಳ ಪಕ್ಷಪಾತಿಯಲ್ಲ. ಪುರಾಣವೆಂಬ ವಸ್ತುವಿನ ವೇಷವನ್ನು ಮಾತ್ರವೇ ಬದಲಾಯಿಸುವುದು ನನಗೆ ಇಷ್ಟವಿಲ್ಲ. ಸಂಸ್ಕಾರ ಎಂದರೆ ಏನೆಂಬುದನ್ನು ನಾನು 'ಪಥೇರ್ ದಾಬೀ'ಯಲ್ಲಿ ತಿಳಿಸಿದ್ದೇನೆ. ಅದು ಅಂಥ ಒಳ್ಳೆಯದೇನೂ ಅಲ್ಲ. ಕೆಟ್ಟಿರುವ ವಸ್ತು, ಬಹು ದಿನಗಳಿಂದ ನಡೆದು ಬಂದಿರುವುದರಿಂದ ಸಡಿಲಗೊಂಡು ಅಲ್ಲಾಡತೊಡಗಿದೆ. ಅದನ್ನು ಸರಿಪಡಿಸಿ ಮತ್ತೆ ನಿಲ್ಲಿಸಬೇಕಾಗಿದೆ. ಇದು ಸರ್ಕಾರದ ಆಡಳಿತವನ್ನು ಉತ್ತಮಪಡಿಸುವಂಥ ಕೆಲಸವೇ ಆಗಿದೆ. ಇನ್ನೊಂದು ಪಕ್ಷ ಕ್ರಾಂತಿಯನ್ನು ಬಯಸುತ್ತದೆ. ಮುದುಕರನ್ನೊಳಗೊಂಡಿರುವ ನಮ್ಮ ಪಕ್ಷಕ್ಕೆ ಇದು ಇಷ್ಟವಿಲ್ಲ. ಅವರು ಸುಧಾರಣೆಯನ್ನು ತರಬಯಸುತ್ತಾರೆ. ರಿಪೇರಿ ಮಾಡಿದರೆ ವಸ್ತುಗಳು ಸರಿಹೋಗುವುದಿಲ್ಲವೆಂದು ನನಗೆ ತೋರುತ್ತದೆ. ನಿಶ್ಚಲವಾಗಿ ಪರಿಣಮಿಸಿರುವಂಥದನ್ನು, ಕೆಟ್ಟು ಹೋಗಿರುವುದನ್ನು ಸರಿಪಡಿಸಿ ನಿಲ್ಲಿಸುವುದು ಸರಿಯಲ್ಲ. ತಮ್ಮ ಧರ್ಮವನ್ನು ಸಂಸ್ಕರಿಸಿ - ಅಂದರೆ, ಅದನ್ನೇ ತಿದ್ದಿ - ಮತ್ತೆ ಎತ್ತಿ ನಿಲ್ಲಿಸಬಲ್ಲೆನೆಂದು ಮೋತಿಬಾಬುಗಳು ಯೋಚಿಸಿರುವಂತೆ ತೋರುತ್ತದೆ. ಇದನ್ನು ತಿದ್ದಿ ಪ್ರಯೋಜನವಿಲ್ಲ; ಈ ಧರ್ಮವನ್ನೇ ಬಿಟ್ಟುಬಿಡಿ ಎಂದು ನಾನು ಹೇಳಬಯಸುತ್ತೇನೆ. ಇದನ್ನು ಜೀರ್ಣೋದ್ಧಾರ ಮಾಡಿ ಪುನರುಜ್ಜೀವಿಸುವಂತೆ ಮಾಡುವ ಅಗತ್ಯವಾದರೂ ಏನಿದೆ ?"

ಪ್ರವರ್ತಕ ಸಂಘ ಈ ನಿಲುವನ್ನು ಒಪ್ಪುವ ಸಂಭವ ಇರಲಿಲ್ಲ. ಆದರೆ, ಆಗ ಅವರು ಹೆಚ್ಚಿನ ವಾದವಿವಾದಗಳಿಗೆ ಸಿಕ್ಕಿಕೊಳ್ಳಲೂ ಇಷ್ಟಪಡುತ್ತಿರಲಿಲ್ಲ; ಅದಕ್ಕೆ ಸಿದ್ಧರೂ ಆಗಿರಲಿಲ್ಲ. ಏಕೆಂದರೆ, ಅವರ ಸಾಹಿತ್ಯಿಕ ಜೀವನದ ವಿಕಾಸದ ಬಗ್ಗೆ ತಿಳಿದುಕೊಳ್ಳುವ ಕಾತರವೇ ಅವರಲ್ಲಿ ಹೆಚ್ಚಾಗಿತ್ತು.

ಮೊದಲನೆಯದಾಗಿ, ಶರತ್‌ಚಂದ್ರರು ತಮ್ಮನ್ನು ಸಾಹಿತಿಯೆಂದೇ ಒಪ್ಪಲು ಸಿದ್ಧರಾಗಿರಲಿಲ್ಲ. "ಹೊಟ್ಟೆಯ ಪಾಡಿಗಾಗಿ ನಾನು ಸಾಹಿತಿಯಾಗಿದ್ದೇನೆ" ಎಂದು ಅವರು ಹೇಳಿದರು.

ಇಷ್ಟಾಗಿಯೂ ಅವರು ಮತ್ತೆ ಗಂಭೀರವಾಗಿ ಹೇಳಿದರು: "ಸಾಹಿತ್ಯಕ್ಕೆ ಮೂಲವಾಗಿರುವುದು 'ಸಹಿತ' ಶಬ್ದ, ಅಂದರೆ, ಎಲ್ಲರ ವಿಷಯದಲ್ಲಿಯೂ ಸಹಾನುಭೂತಿಯನ್ನು ಇಟ್ಟುಕೊಂಡಿರುವುದು ಅಗತ್ಯ. ಮನೆಯಲ್ಲಿಯೇ ಕುಳಿತು, ಆರಾಮಕುರ್ಚಿಗೆ ಒರಗಿಕೊಂಡು ಸಾಹಿತ್ಯವನ್ನು ಸೃಷ್ಟಿಸಲಾಗುವುದಿಲ್ಲ. ಅನುಕರಣ ಮಾಡಬಹುದು, ಅಷ್ಟೆ. ಸಾಹಿತಿಯಾದವನು ಮಾನವನನ್ನು ಕಣ್ಣುಬಿಟ್ಟು ನೋಡದಿದ್ದರೆ, ಸಾಹಿತ್ಯ ಸೃಷ್ಟಿಗೊಳ್ಳುವುದಿಲ್ಲ. ಈ ಜನ ಮಾಡುವುದು ಏನಪ್ಪ ಅಂದರೆ ಪುಸ್ತಕದ ಯಾವುದೋ ಒಂದು ಪಾತ್ರಕ್ಕೆ ಸಂಬಂಧಿಸಿದಂತೆ ಕೆಲವು ಬದಲಾವಣೆಗಳನ್ನು ಮಾಡಿ, ಹೊಸದೊಂದು ಪಾತ್ರವನ್ನು ಸೃಷ್ಟಿಸಿ ಬಿಡುತ್ತಾರೆ. ಮಾನವ ಏನಾಗಿದ್ದಾನೆ ಎಂಬುದನ್ನು ಮಾನವನನ್ನು ನೋಡದೆಯೇ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅತ್ಯಂತ ಕುತ್ಸಿತವಾದ ಹೊಲಸಿನ

ನಡುವೆಯೂ ನಾನು ಅದೆಂಥ ಮಾನವತೆಯನ್ನು ಕಂಡಿದ್ದೇನೆಂಬುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ನನ್ನ ನೆನಪಿನ ಶಕ್ತಿಯೂ ತುಂಬ ಚೆನ್ನಾಗಿದೆ. ಅರಿತುಕೊಳ್ಳಬೇಕೆಂಬ ಇಚ್ಛೆ ಒಂದೇ ಸಮನೆ ಉಳಿದುಕೊಂಡು ಬಂದಿದೆ. ಮಾನವನ ಆಂತರ್ಯದ ಸಾಮ್ರಾಜ್ಯವನ್ನು ಅರಿತುಕೊಳ್ಳುವುದೇ ನನ್ನ ಗುರಿಯಾಗಿದೆ. ಮನುಷ್ಯ ಎಲ್ಲಿಯಾದರೂ ಸ್ವಲ್ಪ ಜಾರಿಬಿಟ್ಟನೆಂದರೆ ಅವನನ್ನು ಸಂಪೂರ್ಣವಾಗಿ ಹೊರಹಾಕಿ ಬಿಡುವುದು ಎಲ್ಲಿಯ ನ್ಯಾಯ ?

“ನಾನು ಸತತವಾಗಿ ಮನುಷ್ಯನ ಅಂತರಂಗವನ್ನೇ ಅನ್ವೇಷಿಸುತ್ತ ಬಂದಿದ್ದೇನೆ. ಇವನು ಹಾಗೆಂದ, ಅವನು ಹಾಗೆಂದ, ಇನ್ನೊಬ್ಬನ ಭುಜದ ಆಸರೆಯಲ್ಲಿ ಬಂದೂಕವನ್ನು ಚಲಾಯಿಸುವುದು, ಇನ್ನೊಬ್ಬನ ಅನುಭವವನ್ನು ತನ್ನದಾಗಿಸಿ ಕೊಳ್ಳುವುದು - ಇದನ್ನು ನಾನೆಂದೂ ಮಾಡಿಲ್ಲ. ಅತ್ಯಂತ ನಿರ್ಭಾಗ್ಯನಾದವನು ಮಾತ್ರವೇ ಹಾಗೆ ಮಾಡುತ್ತಾನೆ. ವಾಸ್ತವಿಕ ಜೀವನವನ್ನು ನೋಡಬಯಸಿದರೆ, ಇದು ಶುಚಿ ಅದು ಅಶುಚಿ ಎಂಬ ಸಂದಿಗ್ಧದಲ್ಲಿ ಸಿಲುಕಿಕೊಳ್ಳಲು ಸಾಧ್ಯವಾಗುವುದಿಲ್ಲ. ಸ್ವಂತ ಅನುಭವಕ್ಕಾಗಿ ಗಾರ್ಕಿ, ಟಾಲ್‌ಸ್ಟಾಯ್, ಶೇಕ್ಸ್‌ಪಿಯರ್ ಮೊದಲಾದವರು ಶುಚಿತ್ವದ ಬಗೆಗಿನ ಗೊಂದಲಕ್ಕೆ ಸಿಕ್ಕಿಕೊಳ್ಳಲಿಲ್ಲ. ಮೂರ್ತವಾದ ರಚನೆಯನ್ನು ಕೊಡಬೇಕೆಂದು ಇಚ್ಛಿಸಿದರೆ, ಕಲ್ಪನೆಯನ್ನು ನೆಚ್ಚಿ ಪ್ರಯೋಜನವಿಲ್ಲ; ಸ್ವಂತ ಅನುಭವವೇ ಬೇಕು. ಇತರರ ಕೃತಿಗಳನ್ನು ನಾನು ಹೆಚ್ಚಾಗಿ ಓದಿಲ್ಲ. ನನ್ನ ಮನೆಯಲ್ಲಿರುವ ಪುಸ್ತಕಗಳಲ್ಲಿ ಬಹುಪಾಲಿನವು ವಿಜ್ಞಾನ ಪುಸ್ತಕಗಳು. ಆದ್ದರಿಂದ ನನ್ನ ಕೃತಿಗಳಲ್ಲಿ ಯುಕ್ತಿಗಳ ಬಳಕೆ ಅಥವಾ ಸಮನ್ವಯಾತ್ಮಕ ಪರಿಣಾಮ ಹೆಚ್ಚಾಗಿರುತ್ತದೆ. ರೂಪ ಅಥವಾ ಸ್ವಭಾವದ ವರ್ಣನೆ ಬಹುಶಃ ಇಲ್ಲವೇ ಇಲ್ಲ. ಅದನ್ನೆಲ್ಲ ನಾನು ನಾಲ್ಕಾರು ವಾಕ್ಯಗಳಲ್ಲಿ ಪೂರೈಸಿಬಿಡುತ್ತೇನೆ. ಅದರ ಬಗ್ಗೆ ನಾನು ಹೆಚ್ಚು ಗಮನ ಕೊಡುವುದಿಲ್ಲ. ನಿಜವಾದ ಸಂಗತಿ ಎಂದರೆ ಅದರ ಅಸ್ತಿತ್ವ ಮತ್ತು ಮನಸ್ಸು. ಅದನ್ನು ಮನುಷ್ಯನ ಅಂತರಂಗ ಎನ್ನಿ, ಏನು ಬೇಕಾದರೂ ಅನ್ನಿ. ಅದನ್ನು ಪಡೆದುಕೊಳ್ಳಬೇಕಾದರೆ ಆಳವಾದ ಅನುಭವ ಬೇಕು. ನಾನು ಹೇಗೆ ಅನುಭವವನ್ನು ಬೆಳೆಸಿಕೊಂಡೆ ಎಂಬುದರ ವಿವರಣೆ ಕೊಡುವ ಅಗತ್ಯವಿಲ್ಲ; ಎಲ್ಲವೂ ತಿಳಿಸಲು ಯೋಗ್ಯವಾಗಿರುವಂಥದೂ ಅಲ್ಲ. ಮಾನವ ತನ್ನ ಸ್ವಭಾವದಿಂದಾಗಿ ಅಥವಾ ದೌರ್ಬಲ್ಯದಿಂದಾಗಿ ಇದನ್ನೆಲ್ಲ ಸಹಿಸಿಕೊಳ್ಳಲಾರ. ರವೀಂದ್ರರ ಗೀತವೊಂದರಲ್ಲಿ ವರ್ಣಿಸಿರುವಂತೆ, ವಿಷ ನನ್ನ ಪಾಲಿಗೆ ಬಂದಿದೆ. ಅದರಲ್ಲಿ ಮೂಡಿಬಂದ ಅಮೃತವನ್ನು ನನ್ನ ಕೃತಿಗಳ ಮೂಲಕ ಎಲ್ಲರಿಗೂ ಕೊಟ್ಟಿದ್ದೇನೆ. ‘ನಿಮ್ಮ ಕೃತಿಗಳನ್ನು ಓದಿದಾಗ ನಿಮ್ಮ ಪಾತ್ರಗಳು ಕಲ್ಪಿತವಾದುವಲ್ಲ ಎಂದು ಅನ್ನಿಸುತ್ತದೆ’ ಎಂದು ಅನೇಕರು ಹೇಳಿದ್ದಾರೆ. ಅವರ ಹೇಳಿಕೆ ನಿಜವೂ ಹೌದು. ನನ್ನ ಶೇಕಡಾ ತೊಂಬತ್ತರಷ್ಟು ಪಾತ್ರಗಳಿಗೆ ವಾಸ್ತವತೆಯ ಆಧಾರವಿದೆ. ಆದರೆ, ವಾಸ್ತವತೆಯಷ್ಟೇ ಸಾಹಿತ್ಯವೆಲ್ಲ ಎಂಬ ಮಾತನ್ನೂ ನೆನಪಿನಲ್ಲಿಟ್ಟುಕೊಳ್ಳಬೇಕು. ಅನೇಕ ವಾಸ್ತವ ಘಟನೆಗಳಿಗೆ ಸಾಹಿತ್ಯವೆಂಬ ಹೆಸರನ್ನು ಕೊಡಲು ಸಾಧ್ಯವಾಗುವುದಿಲ್ಲ. ಆದರೆ, ನೈಜತೆ ಅಥವಾ ವಾಸ್ತವತೆಯ ನೆಲೆಗಟ್ಟಿಲ್ಲದೆ ಇದ್ದಲ್ಲಿ, ಪಾತ್ರಗಳು ಜೀವಂತವಾಗುವುದಿಲ್ಲ. ಅಡಿಪಾಯ ಬಲವಾಗಿದ್ದರೆ ಭಯವೇನೂ ಇರುವುದಿಲ್ಲ.

ನಾನು ಯಾವ ಪಾತ್ರಗಳನ್ನು ಕಂಡಿದ್ದೇನೋ, ಪಾರಿಪಾರ್ಶ್ವಿಕ ಘಾತ-ಪ್ರತಿ ಘಾತಗಳಿಂದಾಗಿ ಅವು ಯಾವ ಪರಿಣಾಮವನ್ನು ಪಡೆದಿವೆಯೋ ಅದನ್ನೇ ಚಿತ್ರಿಸಿದ್ದೇನೆ. ಆದ್ದರಿಂದಲೇ, ನಾನು ಹೆದರುವ ಅಗತ್ಯವಿಲ್ಲ. ಜನ ಅವು ಅಸಹಜವಾಗಿವೆ ಎಂದಷ್ಟೇ ಹೇಳಿದರೆ, ಅದನ್ನು ನಾನು ಒಪ್ಪುವುದಿಲ್ಲ."

"ನಿಮ್ಮ ಗಂಭೀರತರವಾದ ಸಾಹಿತ್ಯಕ ಸೃಷ್ಟಿ ಏನಿದೆ, ಅದನ್ನು ನೀವು ಸಾಧಿಸಿದ್ದಾದರೂ ಹೇಗೆ? ನೀವು ಭಾವನೆಗಳಿಗೆ ಹೇಗೆ ಮೂರ್ತರೂಪವನ್ನು ಕೊಡುತ್ತೀರಿ? ಹೇಳುವ ರೀತಿ, ರಚನಾ ಕೌಶಲ, ಆದ್ಯೋಪಾಂತ್ಯವಾಗಿ ಕಾಣ ದೊರೆಯುವ ರಸ, ಆಕಾಂಕ್ಷೆ, ಲಾಲಿತ್ಯ - ಇವನ್ನೆಲ್ಲ ನೀವು ಎಲ್ಲಿಂದ ಪಡೆದಿರುತ್ತೀರಿ, ಹೇಗೆ ಸಾಧಿಸುತ್ತೀರಿ? ನಿಮ್ಮ ಆಡುಮಾತಿಗೂ, ನಿಮ್ಮ ಈ ಪುಸ್ತಕದ ಭಾಷೆಗೂ ತಾಳಮೇಳಗಳಿಲ್ಲ. ಇದು 'ಪಥೇರ್ ದಾಬೀ'ಯ ಭಾಷೆಯೂ ಅಲ್ಲ; ಬೇರಾವ ಕೃತಿಯ ಭಾಷೆಯೂ ಅಲ್ಲ."

"ಇದನ್ನು ನಾನು ಹೇಳಲಾರೆ. ಭಾಷೆ ತನ್ನಿಂದ ತಾನೆ ಬಂದು ಬಿಡುತ್ತದೆ. ನನ್ನ ಬರೆಯುವ ರೀತಿ ಸಾಮಾನ್ಯ ರೀತಿಗಿಂತಲೂ ಭಿನ್ನವಾಗಿದೆ. ನನ್ನ ನೆನಪಿನ ಶಕ್ತಿ ತುಂಬ ತೀಕ್ಷ್ಣವಾಗಿದೆ ಎಂದು ನಾನು ಮೊದಲೇ ಹೇಳಿದ್ದೇನೆ. ಬಾಲ್ಯದಿಂದಲೂ ನಾನು ಕಂಡು ಕೇಳಿರುವುದೆಲ್ಲ ಸದಾ ನನ್ನ ಮನಸ್ಸಿನಲ್ಲಿ ಹಸಿರಾಗಿರುತ್ತದೆ ಎಂದೇನೂ ಅಲ್ಲ. ಆದರೆ, ಅಗತ್ಯಬಿದ್ದಾಗ, ಅದೆಲ್ಲ ನೆನಪಿಗೆ ಬರುತ್ತದೆ. ಮೊಟ್ಟಮೊದಲು ನಾನು ಪಾತ್ರಗಳ ರೂಪರೇಷೆಗಳನ್ನು ಸ್ಪಷ್ಟಪಡಿಸಿಕೊಂಡು ಬಿಡುತ್ತೇನೆ - ಒಂದು, ಎರಡು, ಮೂರು ಎಂದು ಅವುಗಳ ಹಂತಗಳನ್ನು ನಿರೂಪಿಸಿಕೊಳ್ಳುತ್ತೇನೆ. ಕಥೆಯನ್ನು ಆರಂಭಿಸುವುದು ಅಥವಾ ಪಾತ್ರಗಳನ್ನು ತಂದು ನಿಲ್ಲಿಸುವುದು ನನ್ನ ಮಟ್ಟಿಗೆ ತುಂಬ ಸಹಜವಾದ ಪ್ರಕ್ರಿಯೆ. 'ನಮಗೆ 'ಪ್ಲಾಟ್' ಸಿಕ್ಕುವುದಿಲ್ಲ; ಆದ್ದರಿಂದ ಬರೆಯುತ್ತಿಲ್ಲ' ಎಂದು ಅನೇಕರು ಹೇಳುತ್ತಾರೆ. ಇಂಥ ಮಾತನ್ನು ಕೇಳಿದಾಗ ನಾನು ಮೂಕನಾಗಿ ಬಿಡುತ್ತೇನೆ: ಇಷ್ಟು ದೊಡ್ಡ ಜಗತ್ತೇ ನಮ್ಮ ಮುಂದಿದೆ; ಇಷ್ಟೊಂದು ವೈಚಿತ್ರ್ಯ ತುಂಬಿದೆ. ಆದರೆ, ಈ ಜನರಿಗೆ 'ಪ್ಲಾಟ'ನ್ನು ಅರಸಲು ಸಾಧ್ಯವಾಗುತ್ತಿಲ್ಲ! ಅವರು ಮಾನವತೆಯನ್ನು ಅರಸದೆ ಇರುವುದು ಹಾಗೂ ತಮ್ಮ ಕಥೆಯ ಬಗ್ಗೆ ಮಾತ್ರವೇ ವ್ಯಾಕುಲರಾಗಿರುವುದು ಇದಕ್ಕೆ ಕಾರಣ. ಯಾವುದರಿಂದ ಜನರಿಗೆ ಮನರಂಜನೆ ದೊರೆಯುತ್ತದೆಯೋ ಅಂಥವನ್ನು ಕೊಡಬೇಕು ಎಂದು ನಾನು ಯತ್ನಿಸುವುದಿಲ್ಲ. ಯಾವುದೇ ಪಾತ್ರದ ವ್ಯಕ್ತಿತ್ವ ನಷ್ಟವಾಗಲು ಅಥವಾ ಘಟನೆಯ ಕ್ರಮವ್ಯತ್ಯಾಸ ಗೊಳ್ಳಲು ನಾನು ಅವಕಾಶಕೊಡುವುದಿಲ್ಲ. ವಿಜ್ಞಾನದ ಪುಸ್ತಕಗಳನ್ನು ಓದುತ್ತ ಇರುವುದರಿಂದ ನನ್ನ ಭಾಷೆಯೂ ಹಾಗೆಯೇ ಆಗಿಬಿಡುತ್ತಿದೆ. ನನಗೆ ಭಾಷೆ ಅಷ್ಟು ಚೆನ್ನಾಗಿ ಗೊತ್ತಿಲ್ಲ. ಶಬ್ದ ಸಂಪತ್ತು ತುಂಬ ಕಡಿಮೆಯಾಗಿದೆ. ಇಷ್ಟಾದರೂ, ಜನರಿಗೆ ಅದೇಕೆ ಪ್ರಿಯವಾಗುತ್ತಿದೆ ಎಂಬುದು ನನಗೆ ಗೊತ್ತಿಲ್ಲ. ನಾನೇನು ಹೇಳಬಯಸಿದ್ದೇನೆ ಅಥವಾ ತಿಳಿಯಬಯಸಿದ್ದೇನೆ ಎಂಬುದರ ಕಡೆಗೆ ಗಮನ ಹರಿಸುತ್ತೇನೆ; ಅದನ್ನೇ ಮನಸ್ಸಿನಲ್ಲಿಟ್ಟುಕೊಂಡಿರುತ್ತೇನೆ; ಅದಕ್ಕಾಗಿ ತುಂಬ ಶ್ರಮವಹಿಸುತ್ತೇನೆ. ಕಾರಕಗಳನ್ನು ಎಚ್ಚರಿಕೆಯಿಂದ ಬಳಸಬೇಕಾಗುತ್ತದೆ; ರಚನೆಗಳನ್ನು ತಿದ್ದಿ-ಹೊಡೆದು ಪರಿಷ್ಕರಿಸಬೇಕಾಗುತ್ತದೆ. ನಿರ್ಝರಿಣಿಯು ಹಾಗೆ ಸ್ವತಃ ನುಗ್ಗಿ ಹರಿಯುವುದಿಲ್ಲ.

ನಾನು ಬರೆದಿದ್ದೇ ಉತ್ಕೃಷ್ಟವಾದುದು ಎಂದು ಹೇಳಿಕೊಳ್ಳುವಂಥ ಜನ ಭಾರಿ ತಪ್ಪು ಮಾಡುತ್ತಾರೆ. ಜನರ ಆಡುಮಾತಿನಂತೆ ಬರೆಯುವಾಗ ಅನೇಕ ಅಸಂಬದ್ಧ ಸಂಗತಿಗಳು ತೂರಿಕೊಂಡುಬಿಟ್ಟಿರುತ್ತವೆ. ಅದರ ಕಡೆಗೆ ಗಮನ ಹರಿಸಲೇ ಬೇಕು. ಹಾಗೋ ಹೀಗೋ ಇರಲಿ ಎಂಬಂಥ ಯಾವ ಕೆಲಸವನ್ನೂ ನಾನು ಮಾಡುವುದಿಲ್ಲ. ಹೀಗಾಗಿ, ಮುನ್ನುಡಿ ಬರೆದು, ವಿವರಣೆ ಕೊಡಬೇಕಾಗಿ ಬರುವುದಿಲ್ಲ. ಆದ್ದರಿಂದಲೇ ನನ್ನ ಯಾವ ಪುಸ್ತಕಕ್ಕೂ ಮುನ್ನುಡಿಯೇ ಇರುವುದಿಲ್ಲ.

"ಇನ್ನೊಂದು ವಿಚಾರದ ಕಡೆಗೂ ಒಂದೇ ಸಮನೆ ಗಮನ ಕೊಟ್ಟುಕೊಂಡು ಬಂದಿದ್ದೇನೆ. ಸಾಹಿತ್ಯ ರಚನೆಗೂ ತನ್ನದೇ ಆದ ಕೆಲವೊಂದು ನೀತಿ-ನಿಯಮ ಗಳಿರುತ್ತವೆ. ರಸಕ್ಕೆ ಆಧಾರವಾಗಿರುವ ವಸ್ತು ಅಶ್ಲೀಲತೆಯ ಮೇರೆಯನ್ನು ಪ್ರವೇಶಿಸದಂತೆ ನೋಡಿಕೊಳ್ಳಬೇಕು. ಶೀಲ ಮತ್ತು ಅಶ್ಲೀಲಗಳ ನಡುವಣ ಗೆರೆ ಎಷ್ಟು ಸೂಕ್ಷ್ಮವಾದುದೆಂದರೆ ಸ್ವಲ್ಪ ಆಚೆ-ಈಚೆ ಆದರೂ ಎಲ್ಲವೂ ಅಶ್ಲೀಲವಾಗಿ ಹಾಳಾಗಿ ಬಿಡುತ್ತದೆ. ಸ್ವಲ್ಪ ಕಾಲು ಜಾರಿದರೂ, ಅಪಾಯವಾಗುವುದನ್ನು ತಪ್ಪಿಸಲು ಕಷ್ಟವಾಗುತ್ತದೆ. ನಾನು ರಸಿಕರನ್ನು ದೃಷ್ಟಿಯಲ್ಲಿರಿಸಿಕೊಂಡೇ ಈ ಮಾತನ್ನು ಹೇಳುತ್ತಿದ್ದೇನೆ. ಅಶ್ಲೀಲ ಸಾಹಿತ್ಯ ಯಾವತ್ತೂ ವರ್ಜ್ಯ. ಮನರಂಜನೆಯನ್ನು ಒದಗಿಸುವುದಕ್ಕಾಗಿ ನಾನು ಸುಳ್ಳು ಹೇಳುವುದಿಲ್ಲ. ಸಾಧ್ಯವಿದ್ದಷ್ಟು ಮಟ್ಟಿಗೂ ನಾನು ಹೀಗೆಂದೂ ಮಾಡುವುದಿಲ್ಲ.

"ನನ್ನ ಬಗ್ಗೆ ತುಂಬ ಕಟುವಾದ ಟೀಕೆ ಬಂದಿದೆ. ಬೈಗಳ ಸುರಿಮಳೆಯನ್ನೇ ಕರೆದಿದ್ದಾರೆ. ಸಾಹಿತಿ, ಕವಿ, ಕಲಾವಿದರ ಜೀವನ ಜನಸಾಮಾನ್ಯರ ಜೀವನಕ್ಕಿಂತ ಭಿನ್ನವಾಗಿರುತ್ತದೆ ಎಂಬುದು ಜನರಿಗೆ ಗೊತ್ತಿಲ್ಲ. ಇವರನ್ನೆಲ್ಲ ಪ್ರೀತಿ-ವಿಶ್ವಾಸಗಳ ನೆರಳಿನಲ್ಲಿಯೇ ಇರಿಸಿಕೊಳ್ಳಬೇಕೆಂಬುದು ಇಲ್ಲಿಯ ಜನರಿಗೆ ಗೊತ್ತಿಲ್ಲ. ಅವರಿಗೆ ವೈವಿಧ್ಯಮಯವಾದ ಅನುಭವ ಲಭ್ಯವಾಗಬೇಕೆಂದೂ ಅವರು ಬಯಸುತ್ತಾರೆ; ಅಂತೆಯೇ, ತಮ್ಮಂತೆ ಶಾಂತ, ಶಿಷ್ಟ ಗೌರವಯುಕ್ತ ಜೀವನವನ್ನೇ ನಡೆಸಬೇಕೆಂದೂ ಇಚ್ಛಿಸುತ್ತಾರೆ. ಹೀಗಾಗುವುದು ಸಾಧ್ಯವಿಲ್ಲ. ನಮ್ಮ ನಾಡಿನ ವಿಮರ್ಶೆಯಲ್ಲಿ ಹನ್ನೆರಡು ಆಣೆಯಷ್ಟು ವಿಮರ್ಶೆಯೆಲ್ಲ ವೈಯಕ್ತಿಕ ಆರೋಪವೇ ಆಗಿಬಿಟ್ಟಿರುತ್ತದೆ ಎಂಬುದೂ ನಿಜಕ್ಕೂ ವಿಷಾದದ ಸಂಗತಿ. ವಿಮರ್ಶೆಯೆಲ್ಲ ವ್ಯಕ್ತಿಗೆ ಸಂಬಂಧಿಸಿ ದ್ದಾಗಿರುತ್ತದೆಯೇ ಹೊರತು, ಪುಸ್ತಕಕ್ಕೆ ಸಂಬಂಧಿಸಿಯೇ ಇರುವುದಿಲ್ಲ. ಇದರಿಂದಾಗಿ, ಬಹುಪಾಲು ಜನರು ಭಯಭೀತರಾಗಿರುತ್ತಾರೆ."

ಪ್ರಶ್ನೆಗಳಿಗೆ ಕೊನೆ ಎಂಬುದೇ ಇರಲಿಲ್ಲ. ಆದರೆ, ಶರತ್‌ಚಂದ್ರರು ಕೊಂಚವೂ ಆಯಾಸಗೊಳ್ಳಲಿಲ್ಲ. ಸಂತೋಷಚಿತ್ತರಾಗಿಯೇ ಅವರು ಕೊನೆಯಲ್ಲಿ ಹೀಗೆಂದರು: "ಈ ಚರ್ಚೆಯಿಂದ ನನಗೆ ಸಂತೋಷವಾಗಿದೆ. ಮನೋರಂಜನೆಗಾಗಿ ಮಾತ್ರವಲ್ಲ, ವಿಚಾರ ಪ್ರಚೋದನೆಗಾಗಿಯೂ ಇಂಥ ಗೋಷ್ಠಿಗಳು ಅಗತ್ಯವಾಗುತ್ತವೆ. ದೇಶವನ್ನು ಹೇಗೆ ಮುನ್ನಡೆಸಿ ಉದ್ಧರಿಸಬಹುದು ಎಂಬ ಬಗ್ಗೆ ಒಬ್ಬೊಬ್ಬರ ಅಭಿಪ್ರಾಯವೂ ಒಂದೊಂದು ರೀತಿಯಾಗಿರಬಹುದು. ಆಗಾಗ್ಗೆ ಹೀಗೆ ಲೇಖಕರನ್ನು ಓದುಗರನ್ನು ಒಂದುಗೂಡಿಸಿ, ವಿಭಿನ್ನ ಪ್ರಯತ್ನಗಳ-ದೃಷ್ಟಿಕೋನಗಳ ನಡುವೆ ಸಾಮಂಜಸ್ಯವನ್ನು ಸ್ಥಾಪಿಸುವುದೂ ಅಗತ್ಯ. ಹಾಗೆ ಮಾಡುವುದರಿಂದ ತುಂಬ ಲಾಭವಾಗುತ್ತದೆ. ಇಂದು

ಅನೇಕರು ಬರೆಯುತ್ತಿದ್ದಾರೆ. ಆದರೆ, ಅವರಲ್ಲಿ ಬಹುಮಂದಿಯನ್ನು ಲೇಖಕರೆಂದು ಕರೆಯಲಾಗುವುದಿಲ್ಲ. ಅವರ ಬರವಣಿಗೆಗಳಲ್ಲಿ ಸಂಯಮ ಎಂಬುದೇ ಇರುವುದಿಲ್ಲ. ಅವರು ಲೈಂಗಿಕತೆಯ ಬಗ್ಗೆ ಏನೆಲ್ಲ ಬೂಟಾಟಿಕೆ ನಡೆಸುತ್ತಾರೆಂದರೆ ಅವರ ಕೃತಿಗಳು ಸಾಹಿತ್ಯವೆಂಬ ಹೆಸರಿಗೆ ಅರ್ಹವಾಗುತ್ತವೆಯೋ ಇಲ್ಲವೇ ಎಂಬುದೇ ಸಂದೇಹಾಸ್ಪದ ವಾಗುತ್ತದೆ. ಈ ಎಲ್ಲ ಕೃತಿಗಳಲ್ಲಿನ ಬಹುತೇಕ ಅಂಶಗಳು ಬೇರೆಡೆಗಳಿಂದ ಹಾರಿಸಿದಂಥವೇ ಆಗಿರುತ್ತವೆ; ಸ್ವಂತ ಅನುಭವವನ್ನು ಆಧರಿಸಿರುವಂಥ ವಾಗಿರುವುದಿಲ್ಲ. ಹೀಗಾಗಿ, ಇನ್ನೊಬ್ಬರಿಂದ ಎರವಲಾಗಿ ಪಡೆದ ವಸ್ತುವನ್ನು ನಿರ್ವಹಿಸಲು ಹೋಗಿ ಅಗೌರವಯುತವಾದಂಥ ಪ್ರಕರಣಗಳನ್ನು ಸೃಷ್ಟಿಸಿಬಿಡುತ್ತಾರೆ. ಯಾರಾದರೂ ಏನಾದರೂ ಹೇಳಿದರೆ, ಹಟಮಾಡುತ್ತಾ ಅವರು ಹೀಗೆನ್ನುತ್ತಾರೆ: 'ನಮ್ಮ ಮನಸ್ಸಿಗೆ ಬಂದಂತೆ ಮಾಡುತ್ತೇವೆ, ಹೇಳುತ್ತೇವೆ, ಬರೆಯುತ್ತೇವೆ.' ಈ ಬಗೆಯ ಗೋಷ್ಠಿಗಳನ್ನು, ಸಭೆ ಸಮಿತಿಗಳನ್ನು, ವ್ಯವಸ್ಥೆಗೊಳಿಸಿ, ಲೇಖಕರೊಂದಿಗೆ ಸಂವಾದವನ್ನು ಏರ್ಪಡಿಸಿದರೆ, ಅದರಿಂದ ಒಳ್ಳೆಯ ಪರಿಣಾಮ ಉಂಟಾಗುತ್ತದೆ."

ಈ ಗೋಷ್ಠಿಯಲ್ಲಿ ಒಂದು ಮಾತನ್ನು ಅವರು ತುಂಬ ಒತ್ತುಕೊಟ್ಟು ಹೇಳಿದರು: "ನಾನು ಮನುಷ್ಯನನ್ನು ತುಂಬ ಮೇಲೆಂದು ಭಾವಿಸಿದ್ದೇನೆ. ಅವನನ್ನು ಎಂದೂ ಕೀಳೆಂದು ಪರಿಗಣಿಸಿಲ್ಲ."

ಲಿಂಕನ್ ಅವರೂ ಒಮ್ಮೆ ಹೀಗೆಯೇ ಘೋಷಿಸಿದ್ದರು: "ನಾನು ಯಾವ ವ್ಯಕ್ತಿಯನ್ನೂ ಕೀಳಾಗಿ ಕಾಣಬಯಸುವುದಿಲ್ಲ.

"ಸುನೋ ರೇ ಮಾನುಷ ಭಾಈ
ಸಾಬಾರ್ ಊಪರೇ ಮಾನುಷ ಸತ್ಯ,
ತಾಹಾರ್ ಊಪರೇ ನಾಈ."[1] -ಚಂಡೀದಾಸ್

ಈ ಗೋಷ್ಠಿಗಳಲ್ಲದೇ, ಅವರ ಹುಟ್ಟು ಹಬ್ಬದ ದಿನದಂದು ನಡೆಯುತ್ತಿದ್ದ ವಿಚಾರ ಸಂಕಿರಣಗಳು ಇನ್ನೊಂದು ದೃಷ್ಟಿಯಿಂದಲೂ ಮಹತ್ವಪೂರ್ಣವಾಗಿವೆ. ಅನಾಯಾಸ ವಾಗಿಯೇ ಇವುಗಳೊಂದಿಗೆ ರವೀಂದ್ರರ ಹೆಸರೂ ಸೇರಿಕೊಂಡು ಬಿಟ್ಟಿದೆ. ಬಹುಶಃ ಅವರ ಐವತ್ತೆರಡನೆಯ ಹುಟ್ಟುಹಬ್ಬದಿಂದ ಈ ಪದ್ಧತಿ ರೂಢಿಗೆ ಬಂದಿರುವಂತೆ ತೋರುತ್ತದೆ. ಆ ವರ್ಷ ಹಾವಡಾ... ಶಿವಪುರ ಸಾಹಿತ್ಯ ಪರಿಷತ್ತಿನಲ್ಲಿ ಅವರನ್ನು ಸನ್ಮಾನಿಸಲಾಯಿತು.

ಮಾರನೆಯ ವರ್ಷ ಅವರ ಐವತ್ತ ಮೂರನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಯೂನಿವರ್ಸಿಟಿ ಇನ್ಸ್‌ಟಿಟ್ಯೂಟ್‌ನಲ್ಲಿ ಪ್ರಸಿದ್ಧ ಲೇಖಕರಾಗಿದ್ದ ಪ್ರಮಥ ಚೌಧರಿ ಯವರ ಅಧ್ಯಕ್ಷತೆಯಲ್ಲಿ ಅವರನ್ನು ಸಾರ್ವಜನಿಕವಾಗಿ ಅಭಿನಂದಿಸಲಾಯಿತು.[2]

---

1. ಇದರ ಅಭಿಪ್ರಾಯ ಇಷ್ಟು: "ಲಾಲಿಸು ಹೇ, ಮಾನವ ಸೋದರ!
ಎಲ್ಲಕು ಮಿಗಿಲು ಮಾನುಷ ಸತ್ಯ.
ಅವುದು ಇಲ್ಲವು ಅದಕ್ಕಿಂತಲು ಮಿಗಿಲು."
-ಅನುವಾದಕನ ಅಡಿಟಿಪ್ಪಣಿ.

2. ಸೆಪ್ಟೆಂಬರ್ 19, 1928ರಂದು.

ರವೀಂದ್ರರೇ ಈ ಸಮಾರಂಭದ ಅಧ್ಯಕ್ಷತೆ ವಹಿಸಬೇಕೆಂಬುದು ಈ ಸಮಾರಂಭದ ವ್ಯವಸ್ಥಾಪಕರ ಮಹಾದಾಸೆಯಾಗಿತ್ತು. ಆದರೆ, ಈ ಆಹ್ವಾನವನ್ನು ಒಪ್ಪಿಕೊಳ್ಳಲು ಅವರಿಗೆ ಸಾಧ್ಯವಾಗಲಿಲ್ಲ. ಅವರು ಇದಕ್ಕೆ ಮಹಾರಾಜ ಜಗದೀಂದ್ರನಾಥರ ಹೆಸರನ್ನು ಸೂಚಿಸಿದ್ದರು ಹಾಗೂ ಈ ಆಹ್ವಾನವನ್ನು ಒಪ್ಪಿಕೊಳ್ಳುವಂತೆ ಅವರನ್ನು ಒತ್ತಾಯಪಡಿಸಿ ಕಾಗದವನ್ನೂ ಬರೆದಿದ್ದರು. ಆದರೆ, ಕೊನೆಗೆ ಅವರೂ ಅಸ್ವಸ್ಥರಾಗಿ ಬಿಟ್ಟುದರಿಂದ, ಸಮಾರಂಭದಲ್ಲಿ ಪಾಲ್ಗೊಳ್ಳಲು ಅವರಿಗೆ ಸಾಧ್ಯವಾಗದೆ ಹೋಯಿತು. ಹೀಗಾಗಿ, ಪ್ರಮಥ ಚೌಧರಿಯವರು ಅಧ್ಯಕ್ಷರಾಗಬೇಕಾಗಿ ಬಂತು.

ರವೀಂದ್ರರಿಗೆ ಖುದ್ದಾಗಿ ಬರಲು ಸಾಧ್ಯವಾಗದೆ ಹೋದರೂ, ಶರತ್‌ಚಂದ್ರರನ್ನು ಆಶೀರ್ವದಿಸಿ, ಒಂದು ಪತ್ರವನ್ನು ಬರೆದುಕಳಿಸಿಕೊಟ್ಟಿದ್ದರು: "ಶ್ರೀಯುತ ಶರತ್‌ಚಂದ್ರ ಚಟ್ಟೋಪಾಧ್ಯಾಯರನ್ನು ಸನ್ಮಾನಿಸುವುದಕ್ಕಾಗಿ ಸೇರಿರುವ ಸಭೆಯಲ್ಲಿ ಬಂಗಾಳದ ಎಲ್ಲ ಓದುಗರ ಜೊತೆಯಲ್ಲಿ ಸೇರಿ ನಾನೂ ನನ್ನ ಅಭಿನಂದನೆಗಳನ್ನು ತಿಳಿಸಬಯಸುತ್ತೇನೆ. ಇಂದೂ ನಾನು ಸಶರೀರಿಯಾಗಿ ಈ ಭೂಮಿಯ ಮೇಲೆ ಇದ್ದೇನೆ. ಆದ್ದರಿಂದ, ಸಮಯವನ್ನು ಲಂಘಿಸಿ ಹಾರಿಬರದೆ ಹೋಗಿರುವುದರ ಬಗೆಗಿನ ಅಪರಾಧ ಪ್ರಜ್ಞೆ ಪ್ರತಿಕ್ಷಣವೂ ತೀಕ್ಷ್ಣವಾಗುತ್ತಿದೆ. ಇದನ್ನು ನೆನಪು ಮಾಡಿಕೊಡಲೆಂದೇ ಏನೋ, ಅನೇಕ ನಿದರ್ಶನಗಳು ಸದಾ ಎದುರಾಗುತ್ತಿರುತ್ತವೆ. ಇಂದು ಸಭೆಯಲ್ಲಿ ಖುದ್ದಾಗಿ ಭಾಗವಹಿಸಿ ಎಲ್ಲರ ಆನಂದದಲ್ಲಿ ನಾನೂ ಒಂದಾಗಲಾರದೆ ಹೋಗಿದ್ದೇನೆಂಬುದೂ ಅವುಗಳಲ್ಲಿ ಒಂದು ವಾಸ್ತವವಾಗಿ ನಾನಿಂದು ಅತೀತದಿಂದ ಆಗಮಿಸಿ, ಈ ಪ್ರದೋಷ ಕಾಲದ ಅಂಧಕಾರದಲ್ಲಿ ದುರ್ಬಲ ಹಸ್ತವನ್ನು ಚಾಚಿ, ಬಂಗಾಳಿ ಸಾಹಿತ್ಯದ ಉದಯ ಗಿರಿಯ ಮೇಲೆ ತಮ್ಮ ಪ್ರಭಾವಜ್ಯೋತಿಯನ್ನು ಪಸರಿಸಿರುವ ಅವರನ್ನು ಆಶೀರ್ವದಿಸುತ್ತಿದ್ದೇನೆ."

ಅಭಿನಂದನೆಗೆ ಉತ್ತರ ನೀಡುತ್ತ ಹೇಳಿದ ಅನೇಕ ಮಾತುಗಳ ಜೊತೆಗೆ ಶರತ್‌ಚಂದ್ರರು ಈ ಮಾತನ್ನೂ ಹೇಳಿದರು: "ವಿಭಿನ್ನ ಪರಿಸ್ಥಿತಿಗಳ ತಾಕಲಾಟದ ನಡುವೆ ಒಂದು ದಿನ ವಿಭಿನ್ನ ವ್ಯಕ್ತಿಗಳ ಸಂಪರ್ಕ ಉಂಟಾಗಿತ್ತು. ಅದರಿಂದ ನಷ್ಟವೇನೂ ಆಗಲಿಲ್ಲ, ಎಂದಲ್ಲ. ಆದರೆ, ಈ ಅವಧಿಯಲ್ಲಿ ಯಾರ್‍ಯಾರ ಸಂಪರ್ಕ ನನಗೆ ದೊರೆಯಿತೋ ಅವರು ನನ್ನೆಲ್ಲ ಕೊರತೆಗಳನ್ನೂ ತುಂಬಿ ಕೊಟ್ಟಿದ್ದಾರೆ. ಲೋಪ-ದೋಷಗಳು, ಅಪರಾಧ-ಅಧರ್ಮಗಳೇ ಮನುಷ್ಯನ ಸರ್ವಸ್ವವಲ್ಲ ಎಂಬ ಅನುಭೂತಿಯನ್ನು ಅವರು ನನ್ನ ಮನಸ್ಸಿನ ಮೇಲೆ ಬಿಟ್ಟು ಹೋಗಿದ್ದಾರೆ. ಅವುಗಳ ನಡುವೆ ಯಾವುದು ವಾಸ್ತವವಾಗಿ 'ಮನುಷ್ಯತ್ವ'ವೆಂದೆನಿಸಿಕೊಳ್ಳುತ್ತದೆಯೋ - ಅದನ್ನು ಆತ್ಮವೆಂದು ಬೇಕಾದರೂ ಕರೆಯಬಹುದು - ಅದು ಈ ಎಲ್ಲ ಕುಂದುಕೊರತೆಗಳಿಂದ, ಎಲ್ಲ ಅಪರಾಧಗಳಿಂದ ಮುಕ್ತವಾಗಿದೆ. ನಾನು ಇದಕ್ಕೆ ನನ್ನ ಸಾಹಿತ್ಯದಲ್ಲಿ ಅವಮಾನವನ್ನೆಸಗುವುದಿಲ್ಲ. ಆದರೆ, ಅನೇಕರು ಇದನ್ನೇ ನನ್ನ ಅಪರಾಧವೆಂದು ಭಾವಿಸಿಬಿಟ್ಟಿದ್ದಾರೆ. ನನ್ನ ಮೇಲೆ ಅವರು ಹೊರಿಸಿರುವ ಮಹಾಪರಾಧ ಇದೇ: 'ನನ್ನ ಕುಂಚದಲ್ಲಿ ಪಾಪಿಯ ಚಿತ್ರ ತುಂಬ ಮನೋಹರವಾಗಿ ಮೂಡಿಬಂದಿದೆ.'

"ಇದು ಒಳ್ಳೆಯದೋ ಕೆಟ್ಟದ್ದೋ ಎಂಬುದು ನನಗೆ ಗೊತ್ತಿಲ್ಲ. ಇದರಿಂದ

ಮಾನವನಿಗೆ ಒಳಿತು ಆಗುವುದಕ್ಕಿಂತ ಹೆಚ್ಚಾಗಿ ಕೆಡುಕೇ ಆಗುತ್ತದೆಯೋ ಇಲ್ಲವೋ ಎಂಬ ಬಗ್ಗೆಯೂ ನಾನು ಆಲೋಚನೆ ಮಾಡಿಲ್ಲ. ಅಂದಂದು ಯಾವುದನ್ನು ನಾನು ಸತ್ಯವೆಂದು ಭಾವಿಸಿದ್ದೆನೋ ಅದನ್ನೇ ನಿಷ್ಕಪಟ ರೂಪದಲ್ಲಿ ಅಭಿವ್ಯಕ್ತಪಡಿಸಿದ್ದೇನೆ. ಆ ಸತ್ಯ ಚಿರಂತನವಾದುದೇ, ಶಾಶ್ವತವಾದುದೇ ಅಲ್ಲವೇ ಎಂಬುದನ್ನು ಕುರಿತು ಆಲೋಚನೆ ಮಾಡುವುದು ನನ್ನ ಕೆಲಸವಲ್ಲ. ಅದು ಮಿಥ್ಯೆಯೇ ಆಗಿಬಿಟ್ಟರೂ, ನಾನು ಯಾರೊಂದಿಗೂ ಜಗಳವಾಡಲು ಹೋಗುವುದಿಲ್ಲ."

ಪ್ರೆಸಿಡೆನ್ಸಿ ಕಾಲೇಜಿನ 'ಬಂಕಿಮ-ಶರತ್ ಸಮಿತಿ' ಮೊದಲಾದ ಇನ್ನೂ ಅನೇಕ ಸಂಘ ಸಂಸ್ಥೆಗಳು ಅವರನ್ನು ಅಭಿನಂದಿಸಿದುವು. ಅವರ ಹುಟ್ಟೂರಾದ ದೇವಾನಂದ ಪುರದಲ್ಲಿ 'ಶರತ್‌ಚಂದ್ರ ಗ್ರಾಮೀಣ ಪಾಠಶಾಲೆ'[1]ಯನ್ನು ಸ್ಥಾಪಿಸಲಾಯಿತು. ಇದಕ್ಕೆ ಅವರು ಸ್ವತಃ ಒಂದು ಬೀರು, ತಮ್ಮ ಎಲ್ಲ ಕಾದಂಬರಿಗಳು ಮತ್ತು ಇತರ ಪುಸ್ತಕಗಳನ್ನು ಕಾಣಿಕೆಯಾಗಿ ಕೊಟ್ಟರು. ಅವರು ತಮ್ಮ ಹುಟ್ಟೂರನ್ನು ಎಂದೂ ಮರೆಯಲಿಲ್ಲ. ಆಗಿಂದಾಗ್ಗೆ ಅವರು ಅಲ್ಲಿಗೆ ಹೋಗಿ ಹಳೆಯ ಘಟ್ಟಗಳನ್ನು ನೋಡಿಕೊಂಡು ಬರುತ್ತಿದ್ದರು; ಬಹುದೂರದವರೆಗೆ ನದಿಯ ತೀರದಲ್ಲಿ ಏಕಾಂಗಿಯಾಗಿ ಅಲೆದಾಡುತ್ತ, ಬಾಲ್ಯದ ನೆನಪುಗಳಲ್ಲಿ ಮುಳುಗಿಹೋಗುತ್ತಿದ್ದರು. ಅವರು ತಮ್ಮ ಮನೆತನಕ್ಕೆ ಸೇರಿದ ಭವನವನ್ನೂ ಕೊಂಡುಕೊಳ್ಳಬಯಸಿದ್ದರು. ಆದರೆ, ಯಾವುದೋ ಕಾರಣದಿಂದ ಅದು ಸಾಧ್ಯವಾಗದೆ ಹೋಯಿತು.

ಇದಾದ ಬಳಿಕ 'ಬಂಕಿಮ್-ಶರತ್ ಸಮಿತಿ' ಪ್ರತಿವರ್ಷವೂ ಅವರ ಹುಟ್ಟುಹಬ್ಬವನ್ನು ಆಚರಿಸತೊಡಗಿತು. ತರುಣರಿಗೆ ಅವರ ಬಗ್ಗೆ ವಿಶೇಷ ಪ್ರೀತ್ಯಾದರಗಳಿದ್ದುವಲ್ಲವೆ! ಅವರ ಐವತ್ತಾರನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಈ ಸಮಿತಿ ಹಲವು ಅಧಿವೇಶನಗಳಲ್ಲಿ ಶರತ್-ಸಾಹಿತ್ಯದ ಬಗ್ಗೆ ವಿಮರ್ಶಾ ಗೋಷ್ಠಿಗಳನ್ನು ಏರ್ಪಡಿಸಿತು ಹಾಗೂ ಒಂದು ಪುಸ್ತಕವನ್ನೂ ಹೊರತಂದಿತು.[2] ವಿಶೇಷವಾಗಿ ಈ ಪುಸ್ತಕಕ್ಕಾಗಿಯೇ ರವೀಂದ್ರರ ಬಂಗಾಳಿ ಕಾದಂಬರಿಗಳ ಬಗ್ಗೆ ಒಂದು ಲೇಖನವನ್ನು ಬರೆದಿದ್ದರು. ಆ ವಿಕಾಸ ಶರತ್‌ಚಂದ್ರರ ಕೃತಿಗಳಲ್ಲಿ ಹೇಗೆ ಪರಿಣತಿಯನ್ನು ಕಂಡುಕೊಂಡಿತು ಎಂಬುದನ್ನು ಸೂಕ್ತವಾಗಿ ವಿಮರ್ಶಿಸುತ್ತ ಕವಿಗುರುಗಳು ಹೀಗೆಂದು ಬರೆದಿದ್ದರು; " 'ವಿಷವೃಕ್ಷ' ಮತ್ತು 'ಕೃಷ್ಣಕಾಂತನ ಉಯಿಲು' ಕಾದಂಬರಿಗಳ ಪ್ರಕಟಣೆಯ ತರುವಾಯ ತುಂಬ ಕಾಲ ಕಳೆದುಹೋಗಿದೆ. ಆಮೇಲೆ ನೋಡಿದರೆ, ಕಥಾಸಾಹಿತ್ಯದಲ್ಲಿ ಇನ್ನೊಂದು ಯುಗ ಆರಂಭವಾಗಿರುವುದನ್ನು - ಅಂದರೆ, ಇನ್ನೊಂದು ತೆರೆ ಮೇಲಿದ್ದಿರುವುದನ್ನು - ಕಂಡೆ. ಅಂದು ಆಹ್ವಾನವಿಲ್ಲದೆ ಇದ್ದ ಜನಗಳ ಗುಂಪು ಸಾಹಿತ್ಯದ ಅಂಗಳದಲ್ಲಿ ಹೇಗೆ ಬಂದು ನೆರೆದಿತ್ತೋ ಹಾಗೆಯೇ ಅದು ಇಂದೂ ನೆರೆದಿದೆ. ಅದೇ ಉತ್ಸಾಹ, ಅದೇ ಆನಂದ, ಅದೇ ಜನತೆ. ಈ ಬಾರಿ ಅವರನ್ನು ಆಹ್ವಾನಿಸಿರುವವರು ಸ್ವತಃ ಶರತ್‌ಚಂದ್ರರು! ಅವರು ತಮ್ಮ ಕಥೆಗಳಲ್ಲಿ ಸಾಂದ್ರವಾಗಿ ಚಿತ್ರಿಸಿರುವ ರಸ ಆತ್ಮೀಯ ಪರಿಚಯದ ರಸ! ಅವರ ಸಾಹಿತ್ಯ ಹಿಂದಿಗಿಂತಲೂ ಹೆಚ್ಚು ಓದುಗರ ಬಳಿಗೆ

1. 'ಶರತ್‌ಚಂದ್ರ ಪಲ್ಲಿ ಪಾಠಾಗಾರ' ಎಂಬ ಹೆಸರಿನಲ್ಲಿ.
2. 1931ರಲ್ಲಿ.

ಬಂದಿದೆ. ಅವರು ವ್ಯಾಪಕವಾಗಿ, ಸ್ಪಷ್ಟವಾಗಿ ತಮ್ಮನ್ನು ತಾವು ಕಂಡುಕೊಂಡಿದ್ದಾರೆ; ಅದೇ ರೀತಿ ಸ್ಪಷ್ಟವಾಗಿ ತೋರಿಸಿಯೂ ಕೊಟ್ಟಿದ್ದಾರೆ. ಅವರು ರಂಗಭೂಮಿಯ ಪರದೆಯನ್ನು ಸರಿಸಿ, ಬಂಗಾಳಿ ಕುಟುಂಬದ ಉಜ್ವಲ ದೃಶ್ಯವನ್ನೇನು ಸಾದರ ಪಡಿಸಿದರೋ, ಅದರತ್ತ ಆಧುನಿಕ ಲೇಖಕರು ಸಹಜವಾಗಿಯೇ ಮುನ್ನುಗ್ಗಿದರು. ಒಂದು ದಿವಸ ಅವರು ಈ ಮಾತನ್ನು ಮರೆತುಬಿಡಬಹುದು; ಆದರೆ ಓದುಗರು ಇದನ್ನು ಮರೆಯಲಾರರು ಎಂದು ನಂಬಿದ್ದೇನೆ. ಹಾಗೇನಾದರೂ ಮರೆತುಬಿಟ್ಟರೆ, ಅದು ಅವರ ಕೃತಘ್ನತೆಯೇ ಆಗಿಬಿಡುತ್ತದೆ. ಹಾಗೇನಾದರೂ ಆದರೆ, ಅದೇನೂ ವಿಷಾದದ ಸಂಗತಿಯಾಗಲಾರದು. ಕೆಲಸ ಮುಗಿದಿದೆಯಲ್ಲ, ಅಷ್ಟೇ ಸಾಕು. ಕೃತಾರ್ಥತೆ ಎಂಬುದು ಆಮೇಲೆ ಲಭ್ಯವಾಗುವ ವಸ್ತು.... ಲೇಖಕ ತೀರಿಕೊಂಡ ತರುವಾಯ ಕಾಲವೇ ಆತನ ಕೃತಿಗಳನ್ನು ರಕ್ಷಿಸುತ್ತದೆ."

ಮಾರನೆಯ ವರ್ಷ ಐವತ್ತೇಳನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ[1], ಈ ಸಮಾರಂಭವನ್ನು ಅದ್ಧೂರಿಯಾಗಿ ಆಚರಿಸಬೇಕೆಂದು ಅವರ ಮಿತ್ರರೂ, ಅಭಿಮಾನಿಗಳೂ ಆಲೋಚಿಸಿದರು. ಬಂಗಾಳದ ಮಹಿಳೆಯರು ಮತ್ತು ವಿದ್ಯಾರ್ಥಿನಿಯರು ಈ ಸಂದರ್ಭದಲ್ಲಿ ಪ್ರತ್ಯೇಕ ಸಮಾರಂಭಗಳನ್ನು ಏರ್ಪಡಿಸಿ, ಅವರನ್ನು ಹಾರ್ದಿಕವಾಗಿ ಅಭಿನಂದಿಸಿದರು.

ಆದರೆ, ಪುರಭವನದಲ್ಲಿ ನಡೆಯಬೇಕಾಗಿದ್ದ ಪ್ರಮುಖ ಸಮಾರಂಭ ಹೊತ್ತಿಗೆ ಸರಿಯಾಗಿ ನಡೆದ ಒಂದು ಕುತಂತ್ರದಿಂದಾಗಿ ನಡೆಯದೆ ಹೋಯಿತು. ಬೇಹಾಲಾದ ಜಮೀನುದಾರರಾಗಿದ್ದ ಮಣೀಂದ್ರನಾಥ ರಾಯ್ ಅವರು ಶರತ್‌ಚಂದ್ರರ ಮಹಾಅಭಿಮಾನಿಗಳಾಗಿದ್ದರು. ಅವರೇ ಈ ಸಮಾರಂಭವನ್ನು ಏರ್ಪಡಿಸಿದ್ದರು. ಈ ಬಾರಿಯೂ ಮತ್ತೆ ಗುರುದೇವ ರವೀಂದ್ರನಾಥ ಠಾಕೂರರನ್ನೇ ಸಭಾಧ್ಯಕ್ಷರನ್ನಾಗಿ ಆರಿಸಲಾಯಿತು. ಆದರೆ, ಈ ಸಲವೂ ಅವರಿಗೆ ಬರಲು ಸಾಧ್ಯವಾಗಲಿಲ್ಲ. ಆಗ ಬಂಗಾಳ ಕಾಂಗ್ರೆಸ್ಸಿನಲ್ಲಿ ಎರಡು ತಂಡಗಳಿದ್ದುವು. ಶರತ್‌ಚಂದ್ರರು ಸುಭಾಷಚಂದ್ರ ಬೋಸ್ ಅವರ ಬೆಂಬಲಿಗರಾಗಿದ್ದರು. ಹೀಗಾಗಿ, ಅಗ್ರಗಾಮೀ ತಂಡದತ್ತಲೇ ಅವರು ಒಲಿದಿದ್ದರು. ಅಭಿನಂದನ ಸಮಿತಿಯಲ್ಲೂ ಈ ತಂಡವೇ ಬಹುಮತವುಳ್ಳ ತಂಡವಾಗಿತ್ತು. ಈ ಸಂಗತಿಯಿಂದ ಇವರ ವಿರೋಧಿಗಳಾದ ಮುನ್ನಡೆ ತಂಡದ ಸದಸ್ಯರು ಕೋಪಾವಿಷ್ಟರಾದರು. ಅವರು ಈ ಸಮಾರಂಭವನ್ನು ಹಾಳುಗೆಡವಲು ಒಳಗಿಂದೊಳಗೇ ಭಾರಿ ಪಿತೂರಿಯನ್ನು ನಡೆಸಿದರು. ಹೀಗೆ ಮಾಡಲು ಅವರಿಗೆ ಒಂದು ಅವಕಾಶವೂ ದೊರೆಯಿತು. ಈ ಸಲ ಶರತ್‌ಚಂದ್ರರ ಹುಟ್ಟುಹಬ್ಬ ಯಾವ ದಿವಸ ನಡೆಯಬೇಕಿತ್ತೋ ಅದೇ ದಿವಸ ಹಿಂದಿನ ವರ್ಷ ಹಿಜಲೀ ಜೈಲಿನಲ್ಲಿ ನಡೆದ ಗೋಲೀಬಾರಿನಲ್ಲಿ ಇಬ್ಬರು ಕೈದಿಗಳು ಸಾವನ್ನಪ್ಪಿದ್ದರು. ಇದನ್ನೇ ನೆಪಮಾಡಿಕೊಂಡು ಮುನ್ನಡೆಯ ತಂಡದ ಸದಸ್ಯರು ಸಾಹಿತ್ಯಕ್ಷೇತ್ರದ ಈ ಮಹಾನಾಯಕನ ಸನ್ಮಾನ ಸಮಾರಂಭವನ್ನು ಹಾಳುಗೆಡವಿದರು.

ಅವರ ಗೆಳೆಯರೂ ಆತ್ಮೀಯರೂ ಆಗಿದ್ದ ಹಾಗೂ ಅನಂತರದಲ್ಲಿ ಮತ್ತೆ ಹಾಗೇ ಆಗಿ ಪರಿಣಮಿಸಿದ ಯತೀಂದ್ರ ಮೋಹನ ಬಾಗ್ಚೀ, ಕಾಲಿದಾಸ ರಾಯ್ ಮತ್ತು

1. 1932ರಲ್ಲಿ.

ಸಾವಿತ್ರೀ ಪ್ರಸನ್ನ ಚಟ್ಟೋಪಾಧ್ಯಾಯ ಅವರು ಹೇಳಿಕೆಯೊಂದನ್ನು ಹೊರಡಿಸಿ, ಈ ಸಮಾರಂಭ ನಡೆಯಕೂಡದೆಂದು ತಿಳಿಸಿದರು. ಅತ್ತ, ಅಮಲ್ ಹೋಮ್ ಅವರು ಈ ಸಮಾರಂಭದ ಬಗ್ಗೆ ವಿಶೇಷ ಆಸಕ್ತಿ ವಹಿಸಿದ್ದರು. ಅವರು ಇದಕ್ಕಿದ್ದಂತೆ ಅಸ್ವಸ್ಥರಾಗಿಬಿಟ್ಟರು. ಹೊತ್ತಿಗೆ ಸರಿಯಾಗಿ ಸಭೆಯನ್ನು ಏರ್ಪಡಿಸಲಾಗಿತ್ತು. ಮುನ್ನಡೆ ತಂಡದವರು ಅಲ್ಲಿ ಭಾರಿ ಗಲಭೆಯನ್ನೆಬ್ಬಿಸಿ ಬಿಟ್ಟರು. ಬಾಗಿಲವರೆಗೂ ಬಂದು ಶರತ್‌ಚಂದ್ರರು ಹಿಂದಿರುಗಿ ಹೋದರು. 'ಶನಿವಾರೇರ್ ಚಿಠಿ' ('ಶನಿವಾರದ ಪತ್ರ')ಯ ಸಜನೀಕಾಂತ ದಾಸರು ಈ ಗಲಭೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಪರಸ್ಪರ ವೈಮನಸ್ಯದಿಂದಾಗಿ ಹಾಗೂ ಗುಂಪುಗಾರಿಕೆಯಿಂದಾಗಿ ಈ ಎಲ್ಲ ಉತ್ಪಾತ ನಡೆಯಿತು. ಇಲ್ಲವಾಗಿದ್ದಲ್ಲಿ, ಎಲ್ಲಿ ಬೇಕಾದರೂ ಸಾಮಾನ್ಯ ರೂಪದಲ್ಲಿ ಹುಟ್ಟುಹಬ್ಬದ ಸಮಾರಂಭವನ್ನು ಏರ್ಪಡಿಸಬಹುದಾಗಿತ್ತು. ಅಥವಾ, ಅನಂತರದಲ್ಲಿ ಮಾಡಿದಂತೆ, ಆರಂಭದಲ್ಲಿಯೇ ಆ ಸಮಾರಂಭವನ್ನು ಮುಂದೂಡಬಹುದಾಗಿತ್ತು. ರಾಜಕೀಯ ಬಿಗುವಿನ ವಾತಾವರಣದ ನಡುವೆ ವೈಯಕ್ತಿಕ ಸಮಾರಂಭವೊಂದಕ್ಕೆ ಇಷ್ಟೊಂದು ಮಹತ್ವವನ್ನು ಕೊಡದಿರುವುದು ಬಹುಶಃ ಉದಾರ ನಿಲುವೂ ಆಗಿರುತ್ತಿತ್ತು. ಕೊನೆಗೆ, ಶರತ್‌ಚಂದ್ರ ಅಭಿನಂದನ ಸಮಿತಿ ಎರಡು ದಿವಸಗಳ ಬಳಿಕ ಈ ಸಮಾರಂಭವನ್ನು ನಡೆಸಿತು[1].ಅವರ ಗೌರವಾರ್ಥವಾಗಿ 'ಶರತ್ ವಂದನಾ' ಎಂಬ ಹೆಸರಿನಲ್ಲಿ ಒಂದು ಪುಸ್ತಕವನ್ನೂ ಪ್ರಕಟಿಸಲಾಯಿತು ಹಾಗೂ ಅವರಿಗೆ ಅನೇಕ ಬಹುಮೂಲ್ಯ ಕಾಣಿಕೆಗಳನ್ನು ಅರ್ಪಿಸಲಾಯಿತು.

ಈ ಅಪ್ರಿಯ ಘಟನೆಗೆ ಇದೊಂದೇ ಕಾರಣವಾಗಿರಲಿಲ್ಲ. 'ಸಾಂಪ್ರದಾಯಿಕ ನಿರ್ಣಯ'ದಿಂದಾಗಿ ಆ ದಿನಗಳಲ್ಲಿ ನಾಡಿನಲ್ಲಿ ತುಂಬ ಆವೇಶತಾಂಡವವಾಡುತ್ತಿತ್ತು. ಅಸ್ಪೃಶ್ಯರ ಪ್ರಶ್ನೆಗೆ ಸಂಬಂಧಿಸಿದಂತೆ ಆಮರಣಾಂತ ಉಪವಾಸವನ್ನು ಕೈಗೊಳ್ಳುವ ತೀರ್ಮಾನವನ್ನು ಗಾಂಧೀಜಿಯವರು ಕೈಗೊಂಡಿದ್ದರು. ಈ ತೀರ್ಮಾನದಿಂದ ದೇಶವಾಸಿಗಳು ಉದ್ವಿಗ್ನರಾಗುವುದು ಸಹಜವೇ ಆಗಿತ್ತು. ಯತೀಂದ್ರ ಮೋಹನ ಬಾಗ್ಚೀ ಮೊದಲಾದವರ ವಿರೋಧಕ್ಕೆ ಇದೇ ನಿಜವಾಗಿಯೂ ಮುಖ್ಯ ಕಾರಣವಾಗಿತ್ತು. ಹಾಗೆ ನೋಡಿದರೆ, 'ಶರತ್-ವಂದನಾ' ಕೃತಿಯಲ್ಲಿ ಇವರೆಲ್ಲರ ಲೇಖನಗಳೂ ಇವೆ ಎಂಬುದು ಗಮನಾರ್ಹ. ಈ ಕಾರಣದಿಂದಾಗಿಯೇ, ಗುರುದೇವ ರವೀಂದ್ರರಿಗೂ ಆ ಸಮಾರಂಭದಲ್ಲಿ ಪಾಲ್ಗೊಳ್ಳಲು ಸಾಧ್ಯವಾಗದೆ ಹೋಯಿತು. ಅವರು ಬರದೆ ಇದ್ದುದಕ್ಕೆ ಇನ್ನೊಂದು ಕಾರಣವೂ ಇದ್ದಿರಬಹುದು. ಕೆಲವೇ ದಿನಗಳ ಹಿಂದೆ ಜರ್ಮನಿಯಲ್ಲಿ ಅವರ ಮಗಳ ಮಗ ತೀರಿಕೊಂಡಿದ್ದ. ಅವರು ತಮ್ಮ ಪತ್ರದಲ್ಲಿ ಉಲ್ಲೇಖಿಸಿರುವ ವಿಶೇಷ ಉದ್ವೇಗದ ಕೌಟುಂಬಿಕ ಘಟನೆ ಬಹುಶಃ ಇದೇ ಆಗಿದ್ದಿರಬಹುದು.[2]

ವೈಯಕ್ತಿಕವಾಗಿ ಕಾಗದವೊಂದನ್ನು ಕಳಿಸಿದ್ದೇ ಅಲ್ಲದೆ, ಒಂದು ಬಹಿರಂಗ ಪತ್ರವನ್ನೂ ಬರೆದು ಅವರು ಈ ರೀತಿ ಶರತ್‌ಚಂದ್ರರನ್ನು ಆಶೀರ್ವದಿಸಿದ್ದರು: "ವಿಶೇಷ ಉದ್ವೇಗದ ಒಂದು ಕೌಟುಂಬಿಕ ಘಟನೆಯಿಂದಾಗಿ, ನಿಮ್ಮ ಹುಟ್ಟು ಹಬ್ಬದ

---

1. ಆಶ್ವಿನ್ (ಸೆಪ್ಟೆಂಬರ್ 18, 1932).
2. ಆಗಸ್ಟ್ 9, 1932.

ಸಮಾರಂಭದ ಅಂಗವಾಗಿ ನಡೆಯಲಿರುವ ಸಭೆಯಲ್ಲಿ ಪಾಲ್ಗೊಳ್ಳುವುದು ನನಗೆ ಸಾಧ್ಯವಾಗಲಿಲ್ಲ. ನನ್ನ ಹಾರ್ದಿಕ ಶುಭಾಶಯಗಳನ್ನು ಪತ್ರರೂಪದಲ್ಲಿ ನಿಮ್ಮ ಬಳಿಗೆ ಕಳಿಸುತ್ತಿದ್ದೇನೆ. ನಿಮಗಿನ್ನೂ ಅಂಥ ವಯಸ್ಸೇನೂ ಆಗಿಲ್ಲ. ನಿಮ್ಮ ಸೃಷ್ಟಿಯ ಕ್ಷೇತ್ರ ನಿಮ್ಮ ಕಣ್ಣೆದುರಿಗೆ ಬಹುದೂರದ ವರೆಗೆ ಹರಡಿಕೊಂಡಿದೆ. ನಿಮ್ಮ ವಿಜಯ ಯಾತ್ರೆ ಇನ್ನೂ ಕೊನೆಗೊಂಡಿಲ್ಲ. ಈ ಮುಗಿಯದ ಯಾತ್ರೆಯ ಹಾದಿಯ ಮಧ್ಯದಲ್ಲಿಯೇ ಆಕಸ್ಮಿಕವಾಗಿ ನಿಮ್ಮನ್ನು ತಡೆದು ನಿಲ್ಲಿಸಿ ಗೌರವವನ್ನು ಸಲ್ಲಿಸುವುದು ಅಕಾಲಿಕವಾದುದೆಂದು ನನಗೆ ತೋರುತ್ತಿದೆ. ನೀವು ಸ್ತಬ್ಧರಾಗಿ ನಿಲ್ಲುವಂಥ ಸಂದರ್ಭ ಇನ್ನೂ ಒದಗಿಬಂದಿಲ್ಲ. ಹಚ್ಚ ಹಸಿರಾಗಿರುವ ನಿಮ್ಮ ಸುದೂರ ಭವಿಷ್ಯ ನಿಮ್ಮನ್ನು ಕರೆಯುತ್ತಿದೆ.

"ಎಪ್ಪತ್ತು ವರ್ಷಗಳನ್ನು ಪೂರೈಸಿ ಕಾರ್ಯಸಾಧನೆಯ ಕೊನೆಯ ಚರಣವನ್ನು ತಲುಪಿದ್ದೇನೆ. ಕರ್ತವ್ಯಪಥದ ಪ್ರದಕ್ಷಿಣೆಯನ್ನು ಪೂರೈಸಿದ ಬಳಿವೂ ನಾನು ಹೆಜ್ಜೆ ಹಾಕಬೇಕಾಗಿ ಬಂದಿದೆಯಾದರೆ, ಪುನರಾವರ್ತನೆಯನ್ನಷ್ಟೇ ಮಾಡಿಯೇನು. ಆದ್ದರಿಂದಲೇ, ಕೆಲವು ದಿನಗಳ ಹಿಂದೆ ಈ ನಾಡು ಸಮಾರಂಭವೊಂದನ್ನು ನಡೆಸಿ ನನ್ನ ಬಾಳಿನಲ್ಲಿ ನನಗೆ ದೊರೆಯಬೇಕಾಗಿದ್ದ ಬಾಕಿಯನ್ನು ಸಲ್ಲಿಸಿಬಿಟ್ಟಿತು. ಜನಸಾಮಾನ್ಯರ ಮುಂದೆ, ನನ್ನನ್ನು ಪರಿಚಯಿಸಿಕೊಡಬೇಕಾದ ಕೆಲಸವೇನೂ ಇಲ್ಲವೆಂದು ಹೇಳುವ ಮೂಲಕ ಆ ಬಾಕಿ ಸಲ್ಲಿಸುವ ಕೆಲಸವನ್ನು ಅವರು ಪೂರೈಸಿಬಿಟ್ಟರು. ಬಾನನ್ನು ಆವರಿಸಿಕೊಂಡ ಶ್ರಾವಣದ ಮೋಡಗಳು ತಮ್ಮ ವೃಷ್ಟಿದಾನವನ್ನು ಪೂರೈಸಿದ ಬಳಿಕವೇ ಭೂಮಿಯಲ್ಲಿ ಶರದೃತುವಿನ ಪುಷ್ಪಾಂಜಲಿ ಅರಳಿ ನಿಲ್ಲುತ್ತದೆ. ಇದಾದ ಬಳಿಕವೂ ಮೋಡಗಳು ವಿಶ್ರಾಂತವಾಗದಿದ್ದರೆ, ಅದು ಮಳೆಯ ಪುನರಾವೃತ್ತಿ ಮಾತ್ರವಾಗುತ್ತದೆ. ಇದಂತೂ ಅತಿ ಎನ್ನಿಸಿಕೊಳ್ಳುತ್ತದೆ.

"ನಿಮಗಿನ್ನೂ ಅಂಥ ಕಾಲ ಬಂದಿಲ್ಲ. ನೀವಿನ್ನೂ ನಿಮ್ಮ ಹೊಸ ಹೊಸ ಕೃತಿಗಳಿಂದ ನಿತ್ಯವೂ ಈ ದೇಶಕ್ಕೆ ಆನಂದವನ್ನು ತಂದುಕೊಡಬೇಕಾಗಿದೆ. ಅದೇ ಉಲ್ಲಾಸದೊಂದಿಗೆ ಈ ದೇಶ ಸದಾ ನಿಮಗೆ ಜಯಘೋಷವನ್ನು ಹಾಕುತ್ತ ಇರುತ್ತದೆ. ಈ ಹಾದಿಯಲ್ಲಿ ಹೆಜ್ಜೆ-ಹೆಜ್ಜೆಗೂ ನಿಮಗೆ ಪ್ರೀತಿ ದೊರೆಯುತ್ತದೆ, ಗೌರವ ದೊರೆಯುತ್ತದೆ. ಹಾದಿಯ ಇಕ್ಕೆಲಗಳಲ್ಲಿ ಅರಳಿ ನಿಲ್ಲುವ ಈ ಹೊಸ ಹೂಗಳೆಲ್ಲ ನಿಮ್ಮವೇ, ಕೊನೆಗೆ ಎಲ್ಲರ ಕೈಗಳೂ ಸೇರಿ ನಿಮ್ಮ ಮುಕುಟಕ್ಕೆ ಕೊನೆಯ ವರಮಾಲೆಯನ್ನು ಕಟ್ಟುತ್ತವೆ. ಆದಿನ ಇನ್ನೂ ಬಹು ದೂರದಲ್ಲಿದೆ. ಇಂದು ನಾಡಿನ ಜನತೆ ನಿಮ್ಮ ಹಾದಿಯ ಜೊತೆಗಾರನಾಗಿದೆ. ನಿತ್ಯವೂ ಅದು ನಿಮ್ಮಿಂದ ಪಾಥೇಯವನ್ನು ಬಯಸುತ್ತದೆ. ಆದರ ಆ ಇಚ್ಛೆಯನ್ನು ನೀವು ಪೂರೈಸಿ. ಹಾದಿಯ ಕೊನೆಯನ್ನು ತಲುಪಿರುವ ನಾನು ನಿಮಗೆ ಇದು ಲಭ್ಯವಾಗಲೆಂದು ಹಾರೈಸುತ್ತೇನೆ. ಜನಸಾಮಾನ್ಯರು ಸನ್ಮಾನದ ಯಜ್ಞವನ್ನು ಆಚರಿಸಿ, ನಡುವೆಯೇ ಸಮಾಪನದ ಶಾಂತಿವಾಚನ ಮಾಡಿಬಿಡುವುದು ನಿಮಗೆ ಸಂಗತವಾದುದಲ್ಲ. ಇದನ್ನು ನೀವು ಖಂಡಿತವಾಗಿ ತಿಳಿದುಕೊಳ್ಳಿ.

"ನಿಮ್ಮ ಹುಟ್ಟುಹಬ್ಬದ ಸಂದರ್ಭದಲ್ಲಿ 'ಕಾಲಯಾತ್ರಾ' ಎಂಬ ನನ್ನ ನಾಟಿಕೆಯನ್ನು ನಿಮಗೆ ಅರ್ಪಿಸುತ್ತಿದ್ದೇನೆ. ಈ ಅರ್ಪಣೆ ನಿಮಗೆ ತಕ್ಕದ್ದಲ್ಲವೆಂದೇನೂ

ಆಗುವುದಿಲ್ಲವೆಂದು ನಂಬಿದ್ದೇನೆ. ಇದರ ವಸ್ತು ಇದು: ರಥಯಾತ್ರೆಯ ಉತ್ಸವದ ಸಂದರ್ಭದಲ್ಲಿ, ಮಹಾ ಕಾಲನ ರಥ ಚಲಿಸದೆ ನಿಂತುಬಿಟ್ಟಿದೆ ಎಂಬುದನ್ನು ಎಲ್ಲ ಗಂಡಸರೂ ಹೆಂಗಸರೂ ಒಮ್ಮೆಲೇ ಗಮನಿಸುತ್ತಾರೆ. ಕಾಲದ ಈ ಗತಿರಾಹಿತ್ಯವೇ ಮಾನವ ಸಮಾಜದ ಮಹಾ ದುರ್ಗತಿಯಾಗುತ್ತದೆ. ಮಾನವರ ನಡುವೆ ಯಾವ ಸ್ನೇಹಸಂಬಂಧಗಳು ದೇಶದೇಶಗಳ ನಡುವೆ ಯುಗ ಯುಗಗಳಿಂದಲೂ ಬೆಳೆಯುತ್ತ ಬಂದಿವೆಯೋ, ಆ ಸಂಬಂಧಗಳೇ ಈ ರಥವನ್ನು ಮುಂದಕ್ಕೆ ಎಳೆಯುವ ಹಗ್ಗಗಳಾಗುತ್ತವೆ. ಆ ಸ್ನೇಹ ಸಂಬಂಧಗಳಲ್ಲಿ ಅನೇಕ ಗಂಟುಗಳು ಉಂಟಾಗಿಬಿಟ್ಟರೆ ಮಾನವ ಸಂಬಂಧಗಳು ಅಸತ್ಯವೂ ಅಸಮಾನವೂ ಆಗಿಬಿಡುತ್ತವೆ. ಹಾಗಾದಾಗ ರಥ ಮುಂದಕ್ಕೆ ಚಲಿಸುವುದಿಲ್ಲ. ಈ ಸಂಬಂಧಗಳ ಅಸತ್ಯ ಇಲ್ಲಿಯವರೆಗೆ ಯಾರಿಗೆ ವಿಶೇಷವಾಗಿ ನೋವನ್ನುಂಟುಮಾಡಿದೆಯೋ, ಅಪಮಾನವನ್ನುಂಟು ಮಾಡಿದೆಯೋ, ಮಾನವತೆಯ ಶ್ರೇಷ್ಠ ಅಧಿಕಾರದಿಂದ ವಂಚಿತರನ್ನಾಗಿ ಮಾಡಿದೆಯೋ ಅವರಿಗೆ ಮಹಾಕಾಲ ಇಂದು ತನ್ನ ರಥವನ್ನು ಮುಂದಕ್ಕೆಳೆಯುವ ರೂಪದಲ್ಲಿ ಆಹ್ವಾನ ನೀಡುತ್ತಿದ್ದಾನೆ. ಅವರಿಗೆ ಆಗಿರುವ ಅಗೌರವ ಇಲ್ಲವಾದಂದು ಮಾತ್ರವೇ, ಸಂಬಂಧಗಳ ಅಸಮಾನತೆ ದೂರವಾದಂದು ಮಾತ್ರವೇ ರಥ ಮುಂದಕ್ಕೆ ಚಲಿಸುತ್ತದೆ.

"ಕಾಲರಥಕ್ಕೆ ಎದುರಾಗಿರುವ ಅಡ್ಡಿಯನ್ನು ದೂರಮಾಡಲು ಅಗತ್ಯವಾಗಿರುವಂಥ ಮಹಾಮಂತ್ರ ನಿಮ್ಮ ಲೇಖನಿಯಿಂದ ಮೂಡಿಬರಲಿ ಎಂಬ ಆಶೀರ್ವಾದದೊಡನೆ, ನೀವು ನೂರು ಕಾಲ ಬಾಳಿ ಎಂದು ಹಾರೈಸುತ್ತೇನೆ. ಇತಿ."

ಈ ಹಾರೈಕೆಯಲ್ಲಿ ರವೀಂದ್ರರು "ನಿಮ್ಮ ವಿಜಯ-ಯಾತ್ರೆ ಇನ್ನೂ ಕೊನೆಗೊಂಡಿಲ್ಲ. ಈ ಮುಗಿಯದ ಯಾತ್ರೆಯ ಹಾದಿಯ ಮಧ್ಯದಲ್ಲಿಯೇ ಆಕಸ್ಮಿಕವಾಗಿ ನಿಮ್ಮನ್ನು ತಡೆದು ನಿಲ್ಲಿಸಿ, ಗೌರವವನ್ನು ಸಲ್ಲಿಸುವುದು ಅಕಾಲಿಕವಾದುದೆಂದು ನನಗೆ ತೋರುತ್ತಿದೆ" ಎಂದಿದ್ದಾರೆ. ಈ ಮಾತಿಗೆ ಅನೇಕರು ತಪ್ಪು ಅರ್ಥವನ್ನು ಕಲ್ಪಿಸಿದ್ದಾರೆ. ಸ್ವತಃ ಶರತ್‌ಚಂದ್ರರೂ ಮನಸ್ಸಿನಲ್ಲಿಯೇ ಈ ಮಾತಿನ ಬಗ್ಗೆ ಅಸಂತೋಷಗೊಂಡಿದ್ದರು. ರವೀಂದ್ರರು ತಮ್ಮನ್ನು ಸರಿಯಾಗಿ ಆದರಿಸುವುದಿಲ್ಲ ಎಂದು ಅವರು ತಮ್ಮ ಒಬ್ಬ ಗೆಳೆಯರೊಂದಿಗೆ ಹೇಳಿಕೊಂಡಿದ್ದೂ ಉಂಟು. ರವೀಂದ್ರರು ಅವರಿಗೆ ಅರ್ಪಿಸಿರುವ 'ಕಾಲಯಾತ್ರಾ' ಎಂಬ ಆ ಕಿರುನಾಟಕ ಅದೆಷ್ಟು ನಗಣ್ಯವಾಗಿದೆಯೆಂದರೆ ಅದರ ಹೆಸರನ್ನೇ ಯಾರೂ ಕೇಳಿಲ್ಲ. "ಅವರು ನನಗೆ ಯಾವುದೇ ಪುಸ್ತಕವನ್ನು ಅರ್ಪಿಸದೆ ಇದ್ದಿದ್ದರೆ, ನನಗೆ ಇನ್ನೂ ಹೆಚ್ಚು ಸಂತೋಷವಾಗುತ್ತಿತ್ತು. ಇದು ಹೇಗಾದರೂ ಇರಲಿ, ಆ ಕೊಡುಗೆಯನ್ನು ನಾನು ಗುರುವಿನ ಆಶೀರ್ವಾದವೆಂದು ಭಾವಿಸಿ ಅಂಗೀಕರಿಸಿದ್ದೇನೆ. ಆದರೆ, ಇದರಿಂದ ನನ್ನ ಕ್ಷೋಭೆಯೇನೂ ಕಮ್ಮಿಯಾಗುವುದಿಲ್ಲ" ಎಂದು ಅವರು ಹೇಳಿಕೊಂಡಿದ್ದರು.

ಆದರೆ, ರವೀಂದ್ರರಿಗೆ ಅವರು ಬರೆದ ಪತ್ರದಲ್ಲಿ ಇದರ ಸುಳಿವು ಕೂಡ ಸಿಕ್ಕುವುದಿಲ್ಲ. ಅದರಲ್ಲಿ ಅವರು ಹೀಗೆ ಬರೆದಿದ್ದರು: "ಕಾಲಚಕ್ರ ಉರುಳುತ್ತ ಬಂದಂತೆ ತಮ್ಮಿಂದ ನನಗೆ ದೊರೆತ ಈ ಆಶೀರ್ವಾದ ನನ್ನ ಪಾಲಿಗೆ ಶ್ರೇಷ್ಠ ಪುರಸ್ಕಾರವೇ ಆಗಿದೆ. ತಮ್ಮ ಅತ್ಯಂತ ಕಿರಿಯ ಕೊಡುಗೆಯೂ ಜಗತ್ತಿನ ಯಾವುದೇ

ಸಾಹಿತಿಯ ಪಾಲಿಗೆ ಅಮೂಲ್ಯವಾದ ಐಶ್ವರ್ಯವಿದ್ದಂತೆ. ಈ ಕೊಡುಗೆಯನ್ನು ನಾನು ಶಿರಸಾ ಅಂಗೀಕರಿಸುತ್ತೇನೆ. ಅಂದು ತಮಗೆ ಕಲ್ಕತ್ತೆಗೆ ಬರಲು ಸಾಧ್ಯವಾಗದೆ ಹೋದದ್ದು, ನನ್ನ ಅದೃಷ್ಟವೇ ಸರಿ. ಬಂದಿದ್ದರೆ, ಅಂದು ನಡೆದ ಅನಾಚಾರವನ್ನು ಕಂಡು ನೀವು ತುಂಬ ವ್ಯಥಿತರಾಗುತ್ತಿದ್ದಿರಿ. ನನ್ನ ಸಮವಯಸ್ಕರಾದ ಸಾಹಿತಿಗಳೇ ಈ ಎಲ್ಲ ಉಪದ್ರವಗಳಿಗೂ ಸೂತ್ರಧಾರರಾಗಿದ್ದರೆಂಬುದು ತುಂಬ ದುಃಖದ ಸಂಗತಿ. ಆ ಜನರಿಗೆ ಹೀಗೆ ಮಾಡುವುದೇ ಇಷ್ಟದ ಕೆಲಸವಾಗಿ ಬಿಟ್ಟಿದೆ ಎಂಬುದು ನನಗೆ ಸ್ವಲ್ಪ ಮಟ್ಟಿನ ಸಮಾಧಾನವನ್ನು ತಂದುಕೊಟ್ಟಿದೆ. ನಾನು ಅವರಿಗೆ ಬೇಕಾಗಿದ್ದ ಒಂದು ನೆಪಮಾತ್ರವಾಗಿದ್ದೆ. ಏಕೆಂದರೆ ಕಳೆದ ವರ್ಷ (ನಿಮ್ಮ) ಹುಟ್ಟುಹಬ್ಬದ ಸಂದರ್ಭ ದಲ್ಲಿಯೂ (ಅವರು) ಕಡಿಮೆ ನೋವನ್ನುಂಟುಮಾಡುವ ಪ್ರಯತ್ನವನ್ನೇನೂ ಮಾಡಿರಲಿಲ್ಲ. ತಮಗೆ ಗೌರವವನ್ನು ಸಲ್ಲಿಸುವುದಕ್ಕಾಗಿ ಒಂದು ದಿನ ತಮ್ಮಲ್ಲಿಗೆ ಬರಬೇಕೆಂದುಕೊಂಡಿದ್ದೇನೆ. ಆದರೆ, ಯಾರಾದರೂ ಏನಾದರೂ ಅಂದುಕೊಂಡರೆ ಹೇಗೆ ಎಂಬಂಥ ಸಂಕೋಚದಿಂದಾಗಿ ಬರಲಾರದೆ ಹೋಗಿದ್ದೇನೆ.”

ಈ ಪತ್ರಕ್ಕೆ ಗುರುದೇವ ರವೀಂದ್ರರು ತುಂಬ ಸುಂದರವಾದ ಉತ್ತರವನ್ನು ಕೊಟ್ಟರು: “ನಿನ್ನ” ವಿಷಯದಲ್ಲಿ ತೋರಿದ ಅನುಚಿತ ವರ್ತನೆಯ ವಿವರಗಳನ್ನು ಕೇಳಿ ನನಗೇ ನಾಚಿಕೆಯಾಗುತ್ತಿದೆ. ಆದರೆ, ನಾಡಿನ ಜನತೆಯ ಹೃದಯದ ಮೇಲೆ ನೀನು ಅಧಿಕಾರವನ್ನು ಸ್ಥಾಪಿಸಿಕೊಂಡಿದ್ದೀಯೆ ಎಂಬುದರಲ್ಲಿ ಸಂದೇಹವೇನೂ ಇಲ್ಲ. ಈ ಪ್ರೀತಿಗಿಂತ ಹೆಚ್ಚು ಬೆಲೆಬಾಳುವಂಥ ಗೌರವ ಬೇರೊಂದಿಲ್ಲ. ಆದರೆ, ಇಂಥ ಪ್ರೀತಿಯನ್ನು ಪಡೆದಿರುವಾಗ, ಪೆಟ್ಟನ್ನೂ ಸಹಿಸಿಕೊಳ್ಳಬೇಕಾಗುತ್ತದೆ. ಬರೀ ಕೀರ್ತಿಯೇ ದೊರೆತು, ಅದರಿಂದ ಯಾರ ಮನಸ್ಸಿನಲ್ಲಿಯಾದರೂ ದ್ವೇಷ ಅಥವಾ ಹೊಟ್ಟೆಕಿಚ್ಚು ಉಂಟಾಗದಿದ್ದರೆ, ಆ ಕೀರ್ತಿಗೆ ಬೆಲೆಯೇ ಇರುತ್ತಿರಲಿಲ್ಲ. ನಿನ್ನ ಕೀರ್ತಿ ಹೆಚ್ಚುತ್ತ ಹೋದಷ್ಟೂ ಅವರ ಸಂಕಟವೂ ಹೆಚ್ಚುತ್ತಲೇ ಹೋಗುತ್ತದೆ. 'ಇಂಥ ಅನುಭವಕ್ಕೆ ಮನಸ್ಸನ್ನು ದೃಢವಾಗಿ ಇಟ್ಟುಕೊ....”

ತಮ್ಮ ಆಶೀರ್ವಚನದಲ್ಲಿ ರವೀಂದ್ರರು ವ್ಯಕ್ತಪಡಿಸಿದ್ದ ಭಾವನೆಯಲ್ಲಿ ಯಾವುದೇ ದುರಭಿಪ್ರಾಯವೂ ಇರಲಿಲ್ಲ. ಸರಿಯಾದ ಸಂಗತಿಯನ್ನು ಸರಿಯಾದ ರೀತಿಯಲ್ಲೇ ಮುಂದಿರಿಸಿದ್ದಾರೆ. ಈ ಬಗೆಯ ಗೌರವ-ಸನ್ಮಾನಗಳು ವ್ಯಕ್ತಿಯನ್ನು ಕ್ರಿಯಾಹೀನ ನನ್ನಾಗಿ ಮಾಡಿಬಿಡುವಲ್ಲಿ ಹೆಚ್ಚು ಸಮರ್ಥವಾಗಿರುತ್ತವೆ ಎಂಬುದು ಚರಮ ಸತ್ಯ. ರವೀಂದ್ರರು ಶರತ್‌ಚಂದ್ರರ ಕೃತಿಗಳನ್ನು ಮೆಚ್ಚಿಕೊಂಡಿದ್ದರು. ಅನೇಕ ಸಲ ಅನೇಕ ಲೇಖನಗಳಲ್ಲಿ ಅವರು ಇದಕ್ಕೆ ಸಾಕ್ಷಿಯನ್ನು ಒದಗಿಸಿದ್ದಾರೆ. ಐದು ವರ್ಷಗಳಷ್ಟು ಹಿಂದೆಯೇ 'ಸಾಹಿತ್ಯದಲ್ಲಿ ನವೀನತೆ' ಎಂಬ ಪ್ರಬಂಧದಲ್ಲಿ ಅವರು ಹೀಗೆ ಬರೆದಿದ್ದರು: “ಶರತ್‌ಚಂದ್ರರ ಕಥೆಗಳು ಬಂಗಾಳಿಗಳ ಕಥೆಗಳೇ ಆಗಿವೆ. ಆದರೆ, ಅವರು ಕಥೆ ಹೇಳುವ ರೀತಿ ಶುದ್ಧಾಂಗವಾಗಿ ಬಂಗಾಳಿಗಳದ್ದಲ್ಲ. ಹೀಗಾಗಿ, ಅವರ ಕಥಾ ಸಾಹಿತ್ಯದ ಜಗನ್ನಾಥ ಕ್ಷೇತ್ರದಲ್ಲಿ ಜಾತಿ-ಪಂಥಗಳ ಮಾತು ಏಳುವುದೇ ಇಲ್ಲ. ಕಥೆ ಹೇಳುವ ಅವರ ಸಾರ್ವಜನಿಕ ಆದರ್ಶವೇ ಎಲ್ಲವನ್ನೂ ವ್ಯಾಪಕ ಕ್ಷೇತ್ರಕ್ಕೆ ಎಳೆದುಕೊಂಡು ಬಿಡುತ್ತದೆ. ಆ ಆದರ್ಶ ಕಿರಿದಾಗುತ್ತ ಬಂದಂತೆ ಆ ಕರೆಯೂ ಕ್ಷೀಣಿಸುತ್ತ ಹೋಗುತ್ತದೆ. ಆಗ ಆ ಭೋಜನ ಕೌಟುಂಬಿಕವಾಗಿ ಬಿಡಬಹುದು,

ಜಾತಿ - ಸೀಮಿತವಾಗಿಬಿಡಬಹುದು; ಆದರೆ, ಅದು ಎಲ್ಲ ದೇಶಗಳ ಯಾತ್ರಿಕರೂ ಬಂದು ಒಂದುಗೂಡುವ ಆ ಸಾಹಿತ್ಯ ತೀರ್ಥಕ್ಷೇತ್ರದ ಸಂತರ್ಪಣೆಯಾಗಲಾರದು."

ಎರಡು ವರ್ಷಗಳ ಬಳಿಕ 'ಸಾಹಿತ್ಯ ವಿಚಾರ' ಎಂಬ ಪ್ರಬಂಧದಲ್ಲಿ ಅವರು ಮತ್ತೆ ಹೀಗೆ ಬರೆದರು: "ಶರತ್‌ಚಂದ್ರರ ಕತೆಗಳು 'ಬೇತಾಳ ಪಂಚವಿಂಶತೀ', 'ಹಾತಿಮತಾಈ', 'ಗುಲಬಕಾವಲೀ' ಅಥವಾ 'ಕಾದಂಬರೀ', 'ವಾಸವದತ್ತಾ'ದಂತೆ ಇಲ್ಲ; ಐರೋಪ್ಯ ಕಥಾ ಸಾಹಿತ್ಯದ ರೀತಿಯಲ್ಲಿವೆ. ಇದರಿಂದ ಅಭಾರತೀಯತ್ವ ವಾಗಲೀ, ರಜೋಗುಣವಾಗಲೀ ಸಿದ್ಧವಾಗುವುದಿಲ್ಲ; ಇದರಿಂದ ಪ್ರತಿಭೆಯ ಒಲವು ಯಾವ ಕಡೆಗಿದೆ ಎಂಬುದು ಸಿದ್ಧವಾಗುತ್ತದೆ. ಗಾಳಿಯಲ್ಲಿ ಹಾರಾಡುತ್ತಿರುವ ಸತ್ಯದ ಪ್ರಭಾವವನ್ನು - ಅದು ದೂರದಿಂದ ಬಂದಿರಲಿ ಅಥವಾ ಹತ್ತಿರದಿಂದಲೇ ಬಂದಿರಲಿ - ಮೊಟ್ಟ ಮೊದಲು ಅನುಭವಿಸುವುದು ಪ್ರತಿಭಾವಂತರ ಚಿತ್ತವೇ. ಪ್ರತಿಭಾಹೀನ ರಾಗಿರುವವರು ಅದರಿಂದ ರಕ್ಷಣೆಯನ್ನು ಬಯಸುತ್ತಾರೆ. ಪ್ರತಿಭಾಹೀನರ ಗುಂಪು ದೊಡ್ಡದಾಗಿರುವುದರಿಂದಲೂ, ಅದರ ಜಡತೆ ದೂರವಾಗಲು ತುಂಬ ವಿಳಂಬ ವಾಗುವುದರಿಂದಲೂ ದೀರ್ಘಕಾಲಿಕ ದುಃಖವನ್ನು ಅನುಭವಿಸುವುದು ಪ್ರತಿಭಾವಂತರ ಹಣೆಯ ಬರೆಹವೇ ಆಗಿರುತ್ತದೆ. ಆದ್ದರಿಂದಲೇ, ಸಾಹಿತ್ಯದ ಬಗ್ಗೆ ಚರ್ಚಿಸುವಾಗ ವಿದೇಶೀ ಪ್ರಭಾವದ ಹಾಗೂ ವಿದೇಶೀ ಪ್ರಕೃತಿಯ ಬಗ್ಗೆ ಲೇವಡಿ ಮಾಡುತ್ತ ವರ್ಣಸಂಕರತೆಯ ಅಥವಾ ವ್ರಾತ್ಯತೆಯ ವಿವಾದವನ್ನು ಎಬ್ಬಿಸಬಾರದು - ಎಂಬುದು ನನ್ನ ಅಭಿಪ್ರಾಯ."

ಶರತ್‌ಚಂದ್ರರ ಕಥಾರಚನೆಯ ಶಕ್ತಿಯನ್ನು ಮುಕ್ತಮನಸ್ಸಿನಿಂದ ಒಪ್ಪಿಕೊಳ್ಳುತ್ತ, ಒಮ್ಮೆ ರವೀಂದ್ರರು ಅವರೊಡನೆ ಹೀಗೆಂದಿದ್ದರು: "ಈ ಸಲ ಲಖ್ನೋ ಸಾಹಿತ್ಯ ಸಮ್ಮೇಳನಕ್ಕೆ ಹೋಗುವುದಿದ್ದರೆ, ಭಾಷಣದ ಬದಲಿಗೆ ಒಂದು ಕಥೆಯನ್ನು ಬರೆದುಕೊಂಡು ಹೋಗು."

ಶರತ್‌ಚಂದ್ರರನ್ನು ಸ್ತ್ರೀಸಮುದಾಯ ಪ್ರವಾದಿಯೆಂದು ಭಾವಿಸಲಾಗಿದೆ. ರವೀಂದ್ರರೂ ತಮ್ಮ ಒಂದು ಸುಪ್ರಸಿದ್ಧ ದೀರ್ಘಕವಿತೆಯಲ್ಲಿ - 'ಸಾಧಾರಣ ಮೇಯೇ' ಎಂಬುದರಲ್ಲಿ - ಸಾಮಾನ್ಯ ಸ್ತ್ರೀ ತನ್ನ ಮನೋವೇದನೆಗೆ ಅಭಿವ್ಯಕ್ತಿಯನ್ನು ನೀಡಿರುವ ಲೇಖಕ ಎಂಬುದಾಗಿ ಶರತ್‌ಚಂದ್ರರನ್ನು ಬಲ್ಲಳು ಹೇಳಿದ್ದಾರೆ. ಶರತ್‌ಚಂದ್ರರು ತನ್ನ ಕಥೆಯನ್ನೇನಾದರೂ ಬರೆದರೆ ತನ್ನ ಉದ್ಧಾರವಾಗಿಯೇ ತೀರುತ್ತದೆ ಎಂದು ಆಕೆ ನಂಬಿದ್ದಾಳೆ. ಆದ್ದರಿಂದಲೇ, ಆ ಸಾಮಾನ್ಯ ಹುಡುಗಿ ಶರತ್‌ಚಂದ್ರರನ್ನು ಹೀಗೆಂದು ಪ್ರಾರ್ಥಿಸುತ್ತಾಳೆ: "ನಾನು ನಿನ್ನ ಕಾಲಿಗೆ ಬೀಳುತ್ತೇನೆ. ಒಂದು ಕಥೆಯನ್ನು ಬರಿ, ಶರತ್‌ಬಾಬೂ! ತೀರಸಾಮಾನ್ಯಳಾದ ಹುಡುಗಿಯ ಕಥೆಯನ್ನು ಬರಿ."

-"ಪಾಯೇ ಪಡಿ ತೋಮಾರ್, ಏಕ್ ಗಲ್ಪೋ ಲೇಖೋ ತೂಮಿ ಶರತ್‌ಬಾಬೂ. ನಿತಾಂತ ಸಾಧಾರಣ ಮೇಯೇರ್ ಗಲ್ಪೋ."

ಅವರ ಮಾವ ಉಪೇಂದ್ರನಾಥರು ಇದೇ ಹೆಸರಿನ ಕವಿತೆಯೊಂದನ್ನು ಬರೆದರು. ಅದರಲ್ಲೆಯೂ ಅವರು ಶರತ್‌ಚಂದ್ರರಿಗೆ ಹೀಗೆಂದು ಹೇಳುತ್ತಾರೆ: "ನೀನು ಸಾಮಾನ್ಯ ಹುಡುಗಿಯ ಕಥೆಯನ್ನು ಬರೆಯದೆ ಇದ್ದರೆ, ನಾನು ಬರೆದು ಬಿಡುತ್ತೇನೆ.

ಆದರೆ, ಅದು ನಿನ್ನ ಕಥೆಯಷ್ಟು ಅಸಾಮಾನ್ಯವಾಗುವುದಿಲ್ಲ ಹಾಗೂ ಅದನ್ನು ಓದಿ ಬಂಗಾಳದ ನಾರಿಯರು ಶರತ್‌ಚಂದ್ರರಿಗೇ ಹಿಡಿ ಶಾಪವನ್ನು ಹಾಕುತ್ತಾರೆ."

ರವೀಂದ್ರರು ಶರತ್‌ಚಂದ್ರರ ಪ್ರತಿಭೆಯನ್ನು ಗೌರವಿಸಿದ್ದರೆಂಬುದೂ, ಶರತ್‌ಚಂದ್ರರಿಗೆ ಸಂಬಂಧಿಸಿದಂತೆ ಹೇಳುವುದಾದರೆ ಅವರು ಜೀವನವಿಡೀ ರವೀಂದ್ರರನ್ನು ತಮ್ಮ ಗುರುದೇವರೆಂದು ಪರಿಗಣಿಸಿದ್ದರೆಂಬುದೂ ಇದರಿಂದ ಸ್ಪಷ್ಟವಾಗುತ್ತದೆ.[1] ಇಷ್ಟಾಗಿಯೂ, ಇವರಿಬ್ಬರ ನಡುವೆ ಅಪರಿಚಯತ್ವದ ಅಂತರ ಬೆಳೆಯುತ್ತ ಹೋದಂಥ ಹಾಗೂ ಸ್ವಲ್ಪ ಕಾಲದ ಮಟ್ಟಿಗಾದರೂ ಮನಸ್ತಾಪ ಮೂಡಿದಂಥ ಪ್ರಸಂಗಗಳು ಅವರ ಬಾಳಿನಲ್ಲಿ ಕಾಣಿಸಿಕೊಂಡಿದ್ದುವು. ಕೆಲವು ವರ್ಷಗಳ ಮೊದಲು[2] ರವೀಂದ್ರರು ತಮ್ಮ ಹಾಗೂ ಶರತ್‌ಚಂದ್ರರ ನೆಚ್ಚಿನ ಅಭಿಮಾನಿಗಳಾಗಿದ್ದ ಸಂಗೀತ ವಿದ್ವಾಂಸ ದಿಲೀಪ್‌ಕುಮಾರ್ ರಾಯ್ ಅವರಿಗೆ ಒಂದು ಪತ್ರ ಬರೆದಿದ್ದರು. ತಮ್ಮ ಮತ್ತು ಶರತ್‌ಚಂದ್ರರ ನಡುವೆ ಏರ್ಪಟ್ಟಿದ್ದಂಥ ಅಂತರದ ಬಗ್ಗೆ ಅವರು ಅದರಲ್ಲಿ ಚರ್ಚಿಸಿದ್ದರು.

"ನಾನು ತಮ್ಮ ವಿಷಯದಲ್ಲಿ ಉದಾಸೀನನಾಗಿದ್ದೇನೆಂದು ಶರತ್‌ಚಂದ್ರರು ಭಾವಿಸಿದ್ದಾರೆಂದು ಯಾರೋ ಒಬ್ಬ ಪತ್ರಲೇಖಕ ತಿಳಿಸಿದ್ದಾನೆ. ನನ್ನನ್ನು ಚೆನ್ನಾಗಿ ಬಲ್ಲವರು ಇಂಥ ದೊಡ್ಡ ತಪ್ಪನ್ನು ಮಾಡಲಾರರು. ರಾಷ್ಟ್ರನೀತಿಯ ಅಥವಾ ಯಾವುದೇ ವಿಷಯದ ಬಗ್ಗೆ ಭಿನ್ನಾಭಿಪ್ರಾಯ ಉಂಟಾಗಿದ್ದರೆ, ಅದನ್ನು ನಾನು ಸೈನಿಕ ದಂಡನೆಯ ವಿಧಾನದ ವ್ಯಾಪ್ತಿಗೆ ಒಳಪಡುವಂಥದೆಂದೇನೂ ಭಾವಿಸಿಲ್ಲ. ನಾನು ಎಂದಾದರೂ ಸ್ವರಾಜ್ಯ ಸರ್ಕಾರದ ಅಧಿನಾಯಕನಾದರೆ, ನನ್ನೊಂದಿಗೆ ನಿನ್ನ ಸಂಗೀತದ ಶ್ರುತಿ ಹೊಂದದೆ ಹೋದರೂ ನಿನ್ನ ಐಶ್ವರ್ಯ ಮತ್ತು ಪ್ರಾಣ ಸುರಕ್ಷಿತವಾಗಿರುತ್ತವೆಂದು ಆಗಲೂ ನೀನು ಸಂಪೂರ್ಣವಾಗಿ ನಿಶ್ಚಿಂತನಾಗಿರ ಬಹುದು. ಶರತ್‌ಚಂದ್ರರು ನನ್ನ ವಿಷಯದಲ್ಲಿ ಅಪರಾಧವನ್ನೇನೂ ಎಸಗಿಲ್ಲ. ಶರತ್‌ಚಂದ್ರರ ವಿಷಯದಲ್ಲಿ (ಅವರ ಸಾಹಿತ್ಯಕ್ಕೆ ಸಂಬಂಧಿಸಿದಂತೆ) ನಾನೆಂದೂ ಅಗೌರವವನ್ನು ತೋರಿಲ್ಲ ಎಂಬುದು ಬಹುಶಃ ನಿನಗೆ ಗೊತ್ತಿದೆ. ಮೊದಲಿನಿಂದಲೂ ನಾನು ಅವರನ್ನು ಮೆಚ್ಚಿಕೊಳ್ಳುತ್ತಲೇ ಬಂದಿದ್ದೇನೆ. ಕಥೆ ಬರೆಯುವುದರಲ್ಲಿ ಶರತ್‌ಚಂದ್ರರಿಗಿಂತಲೂ ನಾನೇ ಮಿಗಿಲು ಎಂದು ಅನೇಕರು ಭಾವಿಸಿದ್ದಾರೆ. ಇದು ನನಗೆ ಚಿಂತೆಯ ವಿಷಯವೇನೂ ಆಗಿಲ್ಲ. ಏಕೆಂದರೆ, ಕಾವ್ಯ ರಚನೆಯಲ್ಲಿ ನಾನು ಶರತ್‌ಚಂದ್ರಗಿಂತಲೂ ಮಿಗಿಲಾಗಿದ್ದೇನೆ. ನನ್ನ ಮಹಾ ನಿಂದಕರೂ ಈ ಮಾತನ್ನು ಒಪ್ಪದೆ ಇರಲಾರರು..... ನಾನು ಬಹಳ ಕಾಲದಿಂದಲೂ ಹೋಮಿಯೋಪಥಿಯ ಬಗ್ಗೆ ಚರ್ಚಿಸುತ್ತ ಬಂದಿದ್ದೇನೆ ಎಂಬುದು ಬಹುಶಃ ನಿನಗೆ ಗೊತ್ತೇ ಇದೆ. ಇಷ್ಟಾಗಿಯೂ, ಜನಸಾಮಾನ್ಯರು ನಿಮ್ಮ ದಿವಂಗತ ಅಜ್ಜನವರನ್ನು ನನಗಿಂತಲೂ ದೊಡ್ಡ ಡಾಕ್ಟರೆಂದು ಭಾವಿಸಿದ್ದಾರೆ. ಆದರೆ, ಅವರು ನನ್ನಂತೆ ಸಣ್ಣ ಕಥೆಯನ್ನು ಬರೆಯಲಾರರು ಎಂಬುದೇ ನನಗಿರುವ ಏಕೈಕ ಸಮಾಧಾನ. ನನಗಿಂತಲೂ ನಿನ್ನ ಧ್ವನಿ ಚೆನ್ನಾಗಿದೆಯೆಂದು ಎಲ್ಲರೂ ಹೇಳುತ್ತಾರೆ. ಈ ವಿಷಯದ ಬಗ್ಗೆ ವ್ಯರ್ಥವಾಗಿ

---

1. ವಿಸ್ತಾರವಾದ ವಿವೇಚನೆಗೆ ನೋಡಿ: ಅಧ್ಯಾಯ 21.
2. ಏಪ್ರಿಲ್ 19, 1926.

ಕಣ್ಣೀರು ಹರಿಸುವುದಕ್ಕಿಂತಲೂ ನನ್ನ ಕೈಬರೆಹ ನಿನ್ನದಕ್ಕಿಂತಲೂ ತುಂಬ ಚೆನ್ನಾಗಿದೆ ಎಂದು ಸಮಾಧಾನ ಪಟ್ಟುಕೊಳ್ಳುತ್ತೇನೆ.... ಎಲ್ಲ ವಿಷಯಗಳಲ್ಲಿ ನನ್ನ ಸಾಮರ್ಥ್ಯ ಎಲ್ಲರಂತೆ ಇಲ್ಲ; ಹೀಗೆಂದು ನಾನು ಸಮರ್ಥರಿಗೆ ಕೊಂಬು ಹಾಕುತ್ತ ಅಲೆದಾಡತೊಡಗಿದರೆ ತಲೆ ಒಡೆಯುತ್ತದೆ ಹಾಗೂ ಒಡೆದು ನಾಲ್ಕು ಪಾಲಾಗಿ ಬಿಡುತ್ತದೆ. ನಮ್ಮ ನಾಡಿನಲ್ಲಿ ಯಾರೂ ಯಾವ ವಿಷಯದಲ್ಲಿಯೂ ನನಗಿಂತಲೂ ಮಿಗಿಲಾಗಿರಬಾರದೇನು? ಅವನಿಗೆ ದೊರೆಯುವ ಗೌರವದಲ್ಲಿ ನಾನೂ ಒಂದುಗೂಡಿರುತ್ತೇನೆ. ಈ ಶ್ರೇಷ್ಠತೆಯನ್ನು ಒಪ್ಪಿಕೊಳ್ಳದೆ ಹೋದರೆ, ನಮ್ಮನ್ನು ನಾವೇ ವಂಚಿಸಿಕೊಂಡಂತಾಗುತ್ತದೆ. ನಮ್ಮ ನಾಡಿನಲ್ಲಿ ಬಹುತೇಕ ವ್ಯಕ್ತಿಗಳು ಅನೇಕ ವಿಷಯಗಳಲ್ಲಿ ನನಗಿಂತಲೂ ಮಿಗಿಲಾಗಿದ್ದಾರೆ. ಜಗತ್ತಿನ ಎದುರಿಗೆ ಈ ಮಾತನ್ನು ನಾನು ಅಭಿಮಾನದಿಂದ ಹೇಳಬಲ್ಲೆ. ಒಂದು ಕಾಲದಲ್ಲಿ ಶರತ್‌ಚಂದ್ರರಿಗೆ ಚರಖಾದ ವಿಷಯದಲ್ಲಿದ್ದ ವ್ಯಾಮೋಹದ ಬಗ್ಗೆ ನಾನು ನಿನ್ನ ಎದುರಿಗೇ ಮತ್ತೆ ಮತ್ತೆ ನಗೆಯಾಡಿದ್ದೇನೆ. ನನ್ನ ಮನಸ್ಸಿನಲ್ಲಿ ಲೇಶಮಾತ್ರವಾದರೂ ಆ ಮುಳ್ಳಿನ ನೋವಿದ್ದಿದ್ದರೆ, ನಾನು ನಗೆಯಾಡುತ್ತಿರಲಿಲ್ಲ; ಗಂಭೀರವಾಗಿ ಕುಳಿತುಬಿಡುತ್ತಿದ್ದೆ. ಏಕೆಂದರೆ, ವ್ಯಕ್ತಿಗತವಾದ ಕಾರಣಗಳಿಂದಾಗಿ ಯಾರು ನನ್ನ ವಿಷಯದಲ್ಲಿ ಮುಖ ತಿರುಗಿಸಿಕೊಂಡಿದ್ದಾರೋ ಅಂಥವರ ವಿಷಯದಲ್ಲಿ ನಿಂದನೆಯ ಮಾತುಗಳನ್ನಾಡಲು ನನಗೆ ನಾಚಿಕೆಯಾಗುತ್ತದೆ. ಯಾರನ್ನು ಕುರಿತು ಮೆಚ್ಚಿಕೆಯ ಮಾತುಗಳನ್ನು ಆಡಲಾರೆನೋ, ಅವರ ವಿಷಯದಲ್ಲಿ ನಿಂದನೆಯ ಮಾತನ್ನಾಡಲು ನನಗೆ ಇಷ್ಟವಿಲ್ಲ. ನನ್ನ ಕೈಯಲ್ಲಿ 'ಸಾಧನ' ಪತ್ರಿಕೆ ಇದ್ದಾಗ, ನಾನು ಸಾಹಿತ್ಯವನ್ನು ಕೆಟ್ಟುದೆಂದಾಗಲೀ ಒಳ್ಳೆಯದೆಂದಾಗಲೀ ಹೇಳಿರಲಿಲ್ಲ. ಬಂಕಿಮರ ಬಗ್ಗೆ ಒಂದೆರಡು ಬಾರಿ ಟೀಕಿಸಿದ್ದೆ. ಏಕೆಂದರೆ, ಅವರನ್ನು ಹೊಗಳುವುದು ನನ್ನ ಮಟ್ಟಿಗೆ ಸ್ವಾಭಾವಿಕವೇ ಆಗಿತ್ತು.....ಅವರ ಮನೆ ಎಲ್ಲಿದೆ ಎಂಬುದು ನನಗೆ ಗೊತ್ತಿಲ್ಲ. ನಿಮಗೆ ಖಂಡಿತವಾಗಿಯೂ ಗೊತ್ತಿದೆ. ಆದ್ದರಿಂದ, ಅವರನ್ನು ಭೇಟಿಯಾಗಿ ಅಥವಾ ಕಾಗದವನ್ನು ಬರೆದು ನಾನು ಅಂತಃಕರಣಪೂರ್ವಕವಾಗಿ ಅವರಿಗೆ ಒಳಿತಾಗಲೆಂದು ಇಚ್ಛಿಸುತ್ತೇನೆಂದು ತಿಳಿಸು. ಅವರು ಚರಖಾ ಬಿಟ್ಟು, ಲೇಖನಿಯನ್ನು ಹಿಡಿದಿರುವುದು ನನಗೆ ತುಂಬ ಸಂತೋಷವನ್ನುಂಟುಮಾಡಿದೆ. ಏಕೆಂದರೆ, ಅವರ ಲೇಖನಿಯಿಂದ ದೇಶದ ಉನ್ನತಿ ಸಾಧಿತವಾಗುವಷ್ಟು ಚರಖಾದಿಂದ ಖಂಡಿತವಾಗಿಯೂ ಆಗುವುದಿಲ್ಲ. ಆದರೆ, ಅವರು ವ್ಯರ್ಥವಾಗಿ ಚಕ್ರಧರರಾದರೂ, ಅವರಿಗೆ ವಿರುದ್ಧ ವಾಗಿ ನಾನೆಂದೂ ಚಕ್ರಾಂತಕ ಕಾರ್ಯವನ್ನು - ಅಂದರೆ, ಸಂಚು ಹೂಡುವ ಕೆಲಸವನ್ನು ಮಾಡುವುದಿಲ್ಲ."

ಈ ಕಾಗದದಲ್ಲಿ ರವೀಂದ್ರರ ವಿನೋದಪ್ರಿಯತೆಯೇ ಎದ್ದು ಕಾಣುತ್ತಿದೆ. ಆದರೆ, ಅವರ ಭಾಷೆಯ ಹಿಂದೆ ಅವರ ಮನಸ್ಸಿನಲ್ಲಿ ಏಳುತ್ತಿದ್ದ ಒಳತೋಟಿಯ ಇಣುಕು ನೋಟವೂ ಕಾಣದೊರೆಯುತ್ತದೆ. ಅವರಿಬ್ಬರ ಬಗ್ಗೆ ಅವರ ಚೇಲಾಗಳು ಮತ್ತು ಬಂಟರು ಮಾಡುತ್ತಿದ್ದ ಒಳಸಂಚುಗಳು ಎಂಥವು ಎಂಬುದೂ ಈ ಪತ್ರದಿಂದ ಸ್ಪಷ್ಟವಾಗುತ್ತದೆ. ಶರತ್‌ಚಂದ್ರರ ಬಗ್ಗೆ ರವೀಂದ್ರರ ಮನಸ್ಸಿನಲ್ಲಿ ದುರ್ಭಾವನೆ ಯೇನೂ ಇರಲಿಲ್ಲವೆಂದು ಭಾವಿಸುವುದು ಕಷ್ಟವಲ್ಲ. ಗಿರಿಜಾ ಕುಮಾರ ಬಸು

ಅವರಿಗೆ ಬರೆದ ಒಂದು ಪತ್ರದಲ್ಲಿ ಅವರು ಮತ್ತೊಮ್ಮೆ ಈ ಅಂಶವನ್ನು ಸ್ಪಷ್ಟಪಡಿಸಿದ್ದಾರೆ:

" 'ನಿಮ್ಮ ಮೇಲೆ ಕೋಪಮಾಡಿಕೊಳ್ಳುವುದು ಕಷ್ಟ'ವೆಂದು ಶರತ್‌ಚಂದ್ರರಿಗೆ ತಿಳಿಸಿ. ಏಕೆಂದರೆ, ಇದು ನನ್ನ ಸ್ವಭಾವಕ್ಕೇ ವಿರುದ್ಧವಾದುದು. ಯಾರಲ್ಲಿ ಏನು ಒಳಿತಿದ್ದರೂ, ಅದನ್ನು ಒಳ್ಳೆಯದೆಂದು ಹೇಳಬೇಕೆಂದು ನನ್ನ ಹೃದಯ ತುಡಿಯುತ್ತಿರುತ್ತದೆ. ಆದ್ದರಿಂದ, ಪ್ರತಿಕೂಲ ಅಂಶಗಳು ಇದ್ದರೂ, ನಾನು ಪ್ರತಿಕೂಲವಾಗಿ ವರ್ತಿಸಲಾರೆ. ಶರತ್‌ಚಂದ್ರರು ನನ್ನ ವಿಷಯದಲ್ಲಿ ತಪ್ಪಾಗಿ ನಡೆದುಕೊಂಡಿದ್ದಾರೆಯೇ ಎಂಬುದು ನನಗೆ ಗೊತ್ತಿಲ್ಲ. ಯಾವುದಾದರೂ ವಿಷಯದ ಬಗ್ಗೆ ನನ್ನ ಮತ್ತು ಅವರ ಅಭಿಪ್ರಾಯಗಳು ಒಂದಾಗದೆ ಇದ್ದರೆ, ಅದನ್ನೇ ಹಿಡಿದು ಜಗಳವಾಡುವುದು ನನ್ನಿಂದ ಸಾಧ್ಯವಿಲ್ಲ. ನನ್ನ ವಿಷಯದಲ್ಲಿಯೂ ನಾನು ಅಭಿಪ್ರಾಯ ಸ್ವಾತಂತ್ರ್ಯದ ಬಗ್ಗೆ ವಾದಿಸುತ್ತೇನೆ. ಈ ವಿಷಯದಲ್ಲಿ ಬೇರೆಯವರ ಹಕ್ಕನ್ನೂ ನಾನು ರಕ್ಷಿಸುತ್ತೇನೆ. ಸಾಹಿತ್ಯಕ್ಷೇತ್ರದಲ್ಲಿ ಶರತ್‌ಚಂದ್ರರಿಗೆ ಚಿರಂತನ ಗೌರವ ದೊರೆಯಲಿ, ಅವರ ಕೀರ್ತಿ ಎಲ್ಲೆ ಕಡೆ ಪರಡಿಕೊಳ್ಳಲಿ, ಅವರಿಗೆ ದೊರೆಯುವ ಗೌರವದಿಂದ ದೇಶದ ಗೌರವ ಹೆಚ್ಚುವಂತಾಗಲಿ ಎಂಬುದೇ ನನ್ನ ಅಂತರಾಳದ ಇಚ್ಛೆ...."

ರವೀಂದ್ರರು ವ್ಯಕ್ತಪಡಿಸಿದ ಈ ಆಸೆ ಸತತವಾಗಿ ಫಲನೀಡುತ್ತ ಹೋಯಿತು. ಅವರಿಗೆ ದೊರೆತ ಗೌರವದಿಂದ ದೇಶದ ಗೌರವ ನಿಜವಾಗಿಯೂ ಹೆಚ್ಚತೊಡಗಿತು. ನಾಡಿನ ಹೊರಗೂ ಅವರ ಕೀರ್ತಿ ಹಬ್ಬಿತ್ತು. 'ಶ್ರೀಕಾಂತ' (ಮೊದಲ ಭಾಗ) ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾಗಿತ್ತು. ಡಾ. ಕನಾಈ ಗಾಂಗೂಲಿ ಅವರು ಅದನ್ನು ಇಟ್ಯಾಲಿಯನ್ ಭಾಷೆಗೆ ಅನುವಾದಿಸಿದ್ದರು. ಈ ಅನುವಾದವನ್ನು ಓದಿದ ಫ್ರೆಂಚ್ ಚಿಂತಕ ರೊಮೇ ರೋಲಾ ಅವರು 'ಪ್ರವಾಸೀ' ಪತ್ರಿಕೆಯ ಸಂಪಾದಕರಾಗಿದ್ದ ರಮಾನಂದ ಚಟ್ಟೋಪಾಧ್ಯಾಯ ಅವರನ್ನು ಹೀಗೆಂದು ಕೇಳಿದ್ದರು: "ಶರತ್‌ಚಂದ್ರರು ಮೊದಲ ಶ್ರೇಣಿಯ ಕಾದಂಬರಿಕಾರರು. ಅವರು ಇನ್ನೂ ಯಾವ ಪುಸ್ತಕಗಳನ್ನು ಬರೆದಿದ್ದಾರೆ ?"[1]

'ಕಲ್ಲೋಲ' ಪತ್ರಿಕೆಯ ಸಂಪಾದಕರಾಗಿದ್ದ ದಿನೇಶಚಂದ್ರ ದಾಸ್ ಅವರಿಗೂ ಅವರು ಒಂದು ಪತ್ರ ಬರೆದಿದ್ದು, ಅದರಲ್ಲಿ ಹೀಗೆಂದು ಹೇಳಿದ್ದರು: "ಐರೋಪ್ಯರಾದ ನಾವು ಕೆಲವರು ಭರತ ಖಂಡದ ಇಂದಿನ ಸಾಹಿತಿಗಳ ಪರಿಚಯ ಮಾಡಿಕೊಳ್ಳ ಬೇಕೆಂದಿದ್ದೇವೆ. ಶರತ್‌ಚಂದ್ರರ ಕೃತಿಗಳ ಪರಿಚಯ ನಮಗೆ ಸಂತೋಷವನ್ನುಂಟು ಮಾಡಬಲ್ಲದು. ಕೆ.ಸಿ. ಸೇನ್ ಮತ್ತು ಟಾಮ್ಸನ್ ಅವರು ಅನುವಾದಿಸಿರುವ 'ಶ್ರೀಕಾಂತ' ಕಾದಂಬರಿಯ ಮೊದಲ ಭಾಗವನ್ನು ಓದಿ, ಅವರ ಅಭಿನವ ವ್ಯಕ್ತಿತ್ವ ಮತ್ತು ರಚನಾ ಕೌಶಲದ ವಿಷಯದಲ್ಲಿ ಮುಗ್ಧನಾಗಿ ಬಿಟ್ಟಿದ್ದೇನೆ."

ಒಂದು ದಿವಸ 'ಲೀಗ್ ಆಫ್ ನೇಷನ್ಸ್' ಕಛೇರಿಯಲ್ಲಿ ಬಂಗಾಳಿ ಮಿತ್ರರೊಂದಿಗೆ ಮಾತುಕತೆಯಾಡುತ್ತ, ಬಂಗಾಳ ಸರ್ಕಾರದ ಅಂದಿನ ಹಣಕಾಸು ಸಚಿವರಾಗಿದ್ದ ನಳಿನೀರಂಜನ ಸರ್ಕಾರ್ ಅವರು ತುಂಬ ದುಃಖದಿಂದ ಹೀಗೆಂದಿದ್ದರು:

1. ಸೆಪ್ಟಂಬರ್ 1926.

"ರವೀಂದ್ರನಾಥ ಠಾಕೂರರನ್ನು ಬಿಟ್ಟರೆ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬೇರಾವ ಬಂಗಾಳಿಯ ಹೆಸರೂ ಕೇಳಿಬರುವುದಿಲ್ಲವಲ್ಲ!"

ಪಕ್ಕದಲ್ಲಿಯೇ ವಿದೇಶೀ ಮಹಿಳೆಯೊಬ್ಬಳು ಕುಳಿತಿದ್ದಳು. ಆಕೆ ಹೇಳಿದಳು: "ಶರತ್‌ಚಂದ್ರ ಚಟ್ಟೋಪಾಧ್ಯಾಯ ಎಂಬ ಹೆಸರಿನ ಇನ್ನೊಬ್ಬ ಬಂಗಾಳಿ ಲೇಖಕನ ವಿಷಯದಲ್ಲಿಯೂ ಪಾಶ್ಚಾತ್ಯ ರಾಷ್ಟ್ರಗಳ ನಿವಾಸಿಗಳ ಮನಸ್ಸಿನಲ್ಲಿ ತುಂಬ ಶ್ರದ್ಧೆ-ಗೌರವಗಳಿವೆ. ಅವರ ಒಂದೆರಡು ಕೃತಿಗಳ ನಾಟಕ-ರೂಪಾಂತರಗಳು ಲ್ಯಾಟಿನ್ ಮೊದಲಾದ ಭಾಷೆಗಳಲ್ಲಿ ಕಾಣಿಸಿಕೊಂಡಿವೆ. ಅಷ್ಟೇ ಅಲ್ಲ, ವಿದೇಶೀ ರಂಗಭೂಮಿಯಲ್ಲಿ ಅವುಗಳ ಪ್ರದರ್ಶನಗಳೂ ನಡೆದಿವೆ."

ಸ್ವತಃ ಶರತ್‌ಚಂದ್ರರಿಗೆ ಪಾಶ್ಚಾತ್ಯ ವಿದ್ವಾಂಸರನೇಕರ ಪತ್ರಗಳು ಬರುತ್ತಿದ್ದುವು. ಇಟ್ಯಾಲಿಯನ್ ವಿದ್ವಾಂಸನೊಬ್ಬ 'ಶ್ರೀಕಾಂತ' ಕಾದಂಬರಿಯನ್ನು ವ್ಯಾಪಕವಾಗಿ ಮೆಚ್ಚಿಕೊಂಡು, ಹೀಗೆ ಬರೆದಿದ್ದ: "ಈ ಕೃತಿ ಇಂದಿನ ವಿಶ್ವಸಾಹಿತ್ಯದ ಅಗ್ರಮಾನ್ಯ ಕೃತಿಗಳಲ್ಲಿ ಒಂದೆಂದು ಪರಿಗಣಿತವಾಗಲು ಅರ್ಹವಾಗಿದೆ. ಅದನ್ನು ಮೂಲ ಬಂಗಾಳಿಯಲ್ಲಿ ಓದಿದ್ದೇನೆ ಹಾಗೂ ಅದನ್ನೀಗ ನಾನು ಇಟ್ಯಾಲಿಯನ್ ಭಾಷೆಗೆ ಅನುವಾದಿಸಲಿದ್ದೇನೆ."[1]

ಯಾವುದೇ ನಾಡಿಗಾದರೂ ಇದು ಹೆಮ್ಮೆಯ ಸಂಗತಿಯಲ್ಲವೆ?

## 19

ಚಂದನ ನಗರದ ಗೋಷ್ಠಿಯಲ್ಲಿ ಅವರು ಹೀಗೆಂದಿದ್ದರು: "ರಾಜಕೀಯದಲ್ಲಿ ಭಾಗವಹಿಸಿದ್ದೆ. ಆದರೆ, ಈಗ ಅದನ್ನು ಬಿಟ್ಟುಬಿಟ್ಟಿದ್ದೇನೆ. ಆ ಗುಂಪು-ಗೊಂದಲದಲ್ಲಿ ಏನೂ ಆಗಲಿಲ್ಲ. ಬಹಷ್ಟು ಸಮಯ ನಷ್ಟವಾಯಿತು. ಇಷ್ಟು ಸಮಯವನ್ನು ಹಾಳುಮಾಡದೆ ಇದ್ದಿದ್ದರೂ ಆಗುತ್ತಿತ್ತು. ಸರಿ. ಆದದ್ದಾಯಿತು. ಸ್ವಲ್ಪ ಅನುಭವವಾದರೂ ದೊರೆಯಿತಲ್ಲ. ಇನ್ನು ಮುಂದೆ ನನ್ನ ಸಾಹಿತ್ಯ ಸಾಧನೆಯಲ್ಲಿಯೇ ತೊಡಗಿರುತ್ತೇನೆ."[2]

ಈ ಅವಧಿಯಲ್ಲಿ ನಾಡಿನಾದ್ಯಂತ ಉಪ್ಪಿನ ಸತ್ಯಾಗ್ರಹ ಪ್ರಬಲವಾಗಿ ನಡೆಯುತ್ತಿತ್ತು. ಇದೇ ಗೋಷ್ಠಿಯಲ್ಲಿ ಪಾಲ್ಗೊಂಡಿದ್ದ ವ್ಯಕ್ತಿಯೊಬ್ಬ ಕೇಳಿದ: "ಇಂದಿನ ರಾಜಕೀಯ ಆಂದೋಳನದ ಬಗ್ಗೆ ಏನಾದರೂ ಹೇಳಿ. ಅದು ಹೇಗೆ ನಡೆಯುತ್ತಿದೆ? ಅದರ ಬಗ್ಗೆ ನಿಮಗೆ ಏನು ಅನ್ನಿಸುತ್ತಿದೆ?"

ಅವರು ಹೀಗೆಂದು ಉತ್ತರಿಸಿದರು: "ಚೆನ್ನಾಗಿಯೇ ನಡೆಯುತ್ತಿದೆ. ಆದರೆ, ಇದರ ಬಗ್ಗೆ ನಾನೇನೂ ಹೇಳಲಾರೆ?"

ಅವರ ಮನಸ್ಸು ರಾಜಕೀಯದ ಬಗ್ಗೆ ಬೇಸತ್ತಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅವರು ರಾಜಕೀಯವನ್ನು ಪ್ರವೇಶಿಸಿದ್ದರಿಂದ ಸಾಹಿತ್ಯಕ್ಕೆ ನಷ್ಟವಾಯಿತು ಎಂಬುದೂ ನಿಜ. ಆದರೆ, ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಲು ರಾಜಕಾರಣಿಗಳಿಗೆ ಎಷ್ಟು ಹಕ್ಕಿದೆಯೋ ಸಾಹಿತಿಗಳಿಗೂ ಅಷ್ಟೇ ಹಕ್ಕಿದೆ; ಅಷ್ಟೇ ಅಲ್ಲ,

1. 'ಶರತ್‌ಚಂದ್ರ: ವ್ಯಕ್ತಿ ಔರ್ ಕಲಾಕಾರ್': ಇಳಾಚಂದ್ರ ಜೋಶಿ, ಪು. 51.
2. ನವೆಂಬರ್ 1930.

ಅವರಿಗಿಂತಲೂ ಹೆಚ್ಚಿನ ಹಕ್ಕು ಸಾಹಿತಿಗಳಿಗೆ ಇದೆ ಎಂಬುದು ಅವರ ಭಾವನೆಯಾಗಿತ್ತು. ಆದ್ದರಿಂದಲೇ, ಅಹಿಂಸಾತತ್ವ ಮತ್ತು ಚರಖಾದ ಸಿದ್ಧಾಂತಗಳಲ್ಲಿ ತಮಗೆ ನಂಬಿಕೆ ಇಲ್ಲದಿದ್ದರೂ, ಶಿಸ್ತಿಗೆ ತಲೆಬಾಗಿ, ತಮ್ಮಿಂದ ಸಾಧ್ಯವಿದ್ದಷ್ಟು ಮಟ್ಟಿಗೆ ಆ ಎರಡು ತತ್ವಗಳನ್ನೂ ಅವರು ಗೌರವಿಸಿದರು. ಅವರಲ್ಲಿ ಇಷ್ಟರ ಮಟ್ಟಿನ ಉದಾಸೀನತೆ ಇದ್ದರೂ, ಅವರಿಗೆ ಅದರಿಂದ ಬೇಗ ಬಿಡುಗಡೆಯೇನೂ ದೊರೆಯಲಿಲ್ಲ. ಅವರ ಕೆಲಸ-ಕಾರ್ಯಗಳಿಂದ ಹಾಗೂ 'ಪಥೇರ್ ದಾಬೀ'ಯಲ್ಲಿ ವ್ಯಕ್ತಪಡಿಸಿರುವ ಆಲೋಚನೆಗಳಿಂದ ಅವರ ರಾಜಕೀಯ ನಿಲುವು ಏನಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅದು ಪ್ರಕಟವಾದ ಅವಧಿಯಲ್ಲಿ ಒಂದು ದಿವಸ ಹಲವು ಕಾಂಗ್ರೆಸ್ಸಿಗರು ಅವರನ್ನು ಕಾಣಲು ಬಂದರು. ಸಲಹೆ-ಸಮಾಲೋಚನೆಗಳಿಗಾಗಿ ಅವರು ಆಗಾಗ್ಗೆ ಬರುತ್ತಿದ್ದರು. ಅಂದು ಅವರು ಹೀಗೆಂದು ಪ್ರಶ್ನಿಸಿದರು: "ಅಹಿಂಸಾತ್ಮಕ ಸತ್ಯಾಗ್ರಹ ಮತ್ತು ಹಿಂಸಾತ್ಮಕ ಕ್ರಾಂತಿ - ಇವುಗಳಲ್ಲಿ ಯಾವುದನ್ನು ನೀವು ಸಮರ್ಥಿಸುತ್ತೀರಿ? ನೀವು ಹಾವಡಾ ಕಾಂಗ್ರೆಸ್‌ನ ಅಧ್ಯಕ್ಷರೂ ಹೌದು. ಅಹಿಂಸಾತ್ಮಕ ಸತ್ಯಾಗ್ರಹವನ್ನು ಬೆಂಬಲಿಸಬೇಕೆಂದು ಕಾಂಗ್ರೆಸ್ ಹೈಕಮಾಂಡ್ ನಿಮಗೆ ಸ್ಥಾಯೀ ಆದೇಶವನ್ನು ಕೊಟ್ಟಿದೆ. ಆದರೆ, ನಿಮ್ಮ 'ಪಥೇರ್ ದಾಬೀ' ಕಾದಂಬರಿಯಲ್ಲಿ ಹಿಂಸಾತ್ಮಕ ಕ್ರಾಂತಿಯ ಸಮರ್ಥನೆಯ ಸೂಚನೆಗಳಿವೆಯಲ್ಲ?"

ಅವರು ಹೀಗೆಂದು ಉತ್ತರಿಸಿದರು: "ನಾನು ಅದನ್ನು (ಹಿಂಸೆಯನ್ನು) ಬೆಂಬಲಿಸುವುದಿಲ್ಲ ಎಂಬುದು ನಿಜ. ಅದೇಕೋ ಏನೋ, ಕ್ರಾಂತಿಕಾರಿಗಳ ಬಗ್ಗೆ ನನ್ನ ಹೃದಯಾಂತರಾಳದಲ್ಲಿ ಒಂದು ದೌರ್ಬಲ್ಯ ಉಳಿದುಕೊಂಡು ಬಿಟ್ಟಿದೆ. ಆದ್ದರಿಂದ ಅಪಾಯವನ್ನು ಎದುರಿಸಿಯೂ ಅವರೊಡನೆ ಸಂಪರ್ಕವಿರಿಸಿಕೊಳ್ಳಲು ಹಾಗೂ ಆಗಿಂದಾಗ್ಗೆ ನನ್ನಿಂದ ಸಾಧ್ಯವಿದ್ದಷ್ಟು ಆರ್ಥಿಕ ನೆರವು ನೀಡಲು ನಾನು ಸ್ವಲ್ಪವೂ ಹಿಂದೆ ಮುಂದೆ ನೋಡುವುದಿಲ್ಲ. ಅವರಲ್ಲಿ ಅನೇಕರು ನಡುರಾತ್ರಿಯ ಅಂಧಕಾರದಲ್ಲಿ ನನ್ನ ಬಳಿಗೆ ಬರುತ್ತಿರುತ್ತಾರೆ ಎಂಬುದು ಬಹುಶಃ ನಿಮ್ಮಲ್ಲಿ ಯಾರಿಗೂ ಗೊತ್ತಿಲ್ಲ. ಈಚೆಗಷ್ಟೇ ಹಾಡು ಹಗಲಿನಲ್ಲಿಯೇ ಎಲ್ಲರ ಕಣ್ಣಿಗೆ ಮಣ್ಣೆರಚಿ ಕ್ರಾಂತಿಕಾರಿಯೊಬ್ಬ ನನ್ನ ಮನೆಯಲ್ಲಿ ಹಲವು ಘಂಟೆಗಳನ್ನು ಕಳೆದ.

"ಅಂದು ಅವರ ಕಡೆಯ ಒಬ್ಬ ವ್ಯಕ್ತಿ ನನ್ನ ಬಳಿಗೆ ಬಂದು, ಮಧ್ಯಾಹ್ನದ ಹೊತ್ತಿಗೆ ಆಲೂಗಡ್ಡೆಯ ಬುಟ್ಟಿಯನ್ನು ಹೊತ್ತುಕೊಂಡು 'ಆಲೂಗಡ್ಡೆ ಬೇಕೆ', 'ಆಲೂಗಡ್ಡೆ ಬೇಕೆ' ಎಂದು ಕೂಗುತ್ತ ಒಬ್ಬಾತ ನಿಮ್ಮ ಮನೆಯ ಬಳಿ ಸುಳಿಯುತ್ತಾನೆ; ಅವನ ಧ್ವನಿಯನ್ನು ಕೇಳಿ ಆಲೂಗಡ್ಡೆಯನ್ನು ಕೊಳ್ಳುವ ನೆಪದಲ್ಲಿ ಅವನನ್ನು ಮನೆಯೊಳಗೆ ಕರೆದುಕೊಳ್ಳಬೇಕು ಎಂದು ಹೇಳಿಹೋದ.

"ಧ್ವನಿಯನ್ನೇನೋ ಕೇಳಿದೆ. ಆದರೆ ಒಮ್ಮೆಗೇ ಅವನನ್ನು ಒಳಕ್ಕೆ ಕರೆಯುವುದು ಹೇಗೆ? ಇಲ್ಲಿಗೆ ಬಂದ ಮೇಲೆ ನಾನೇ ಸ್ವತಃ ಏನನ್ನೂ ಕೊಂಡಿರಲಿಲ್ಲ. ಇಂದು ಆಲೂಗಡ್ಡೆಯವನನ್ನು ಒಮ್ಮೆಗೇ ಒಳಕ್ಕೆ ಕರೆದರೆ, ಜನರಿಗೆ ಅನುಮಾನ ಬರುತ್ತದೆ ಹಾಗೂ ಅವನ ರಹಸ್ಯ ಬಯಲಾಗಿ ಬಿಡುತ್ತದೆ. ಸಾಕಷ್ಟು ಅಳೆದು-ಸುರಿದು ಮಾಡಿ ಮನೆಯೊಡತಿಯ ಶರಣು ಹೊಕ್ಕೆ. ಆಕೆಯನ್ನು ಕರೆದು ಹೇಳಿದೆ: 'ಹಿರಿಯ ಸೊಸೆಯೇ, ಯಾರೋ ಆಲೂಗಡ್ಡೆಯವನು ಕೂಗುತ್ತಿದ್ದಾನೆ. ಆಲೂಗಡ್ಡೆ

ತೆಗೆದುಕೊಳ್ಳುತ್ತೀಯೇನು ?'

"ಮನೆಯೊಡತಿ ಹೇಳಿದಳು: 'ಮನೆಯಲ್ಲಿಯೇ ಒಂದು ರಾಶಿ ಬಿದ್ದಿದೆ. ಇವತ್ತು ತಾನೇ ಪೇಟೆಯಿಂದ ತರಿಸಿದ್ದೇನೆ.'

"ನಾನು ತುಂಬ ಕಾತರನಾಗಿ ಹೇಳಿದೆ: 'ಹಾಗಾದರೆ ಆ ಬಡಪಾಯಿ ಈ ಸುಡುವ ಬಿಸಿಲಿನಲ್ಲಿ 'ಆಲೂಗಡ್ಡೆ ಬೇಕೆ', 'ಆಲೂಗಡ್ಡೆ ಬೇಕೆ' ಎಂದು ಕೂಗುತ್ತ ಬರಿಗೈಯಲ್ಲಿ ಹಿಂದಿರುಗಬೇಕೆ ? ಬಹುಶಃ ಅವನಿಗೆ ಇನ್ನೂ ಬೋಣಿಯೇ ಆಗಿಲ್ಲ. ಸ್ವಲ್ಪವಾದರೂ ಕೊಂಡುಕೊ. ಆಲೂಗಡ್ಡೆ ಅಂಥ ಹಾಳಾಗುವ ತರಕಾರಿಯೇನೂ ಅಲ್ಲವಲ್ಲ! ಮನೆಯಲ್ಲಿ ಬಿದ್ದಿದ್ದರೂ ಅದೇನು ಹಾಳಾಗಿ ಹೋಗುವುದಿಲ್ಲವಲ್ಲ! ಅಯ್ಯೋ ಪಾಪ ಈ ಮಧ್ಯಾಹ್ನದ ಸುಡುವ ಬಿಸಿಲಿನಲ್ಲಿ ಆ ಬಡಪಾಯಿ ಅರಚಿಕೊಂಡು ಅಲೆಯುತ್ತಿದ್ದಾನೆ. ಅವನ ಬಗ್ಗೆ ನನಗೆ ನಿಜವಾಗಿಯೂ ಕನಿಕರ ಉಂಟಾಗುತ್ತಿದೆ ?'

" 'ನಿಮ್ಮ ಈ ಗೀಳು ತುಂಬ ವಿಚಿತ್ರವಾಗಿದೆ' ಎಂದು ಹೇಳುತ್ತ, ಆಲೂಗಡ್ಡೆಯವನನ್ನು ಕರೆಯುವಂತೆ ಮನೆಯೊಡತಿ ನನಿ ಸೇವಕನಿಗೆ ಸೂಚನೆ ಕೊಟ್ಟಳು. ಅವನು ಬಂದ ಮೇಲೆ ಸ್ವಲ್ಪ ಆಲೂಗಡ್ಡೆಯನ್ನೂ ಖರೀದಿಮಾಡಿದಳು. ನಾನು ಬಾಗಿಲಬಳಿಯೇ ನಿಂತಿದ್ದೆ. ಏನು ಮಾಡಲಿ ಎಂದು ಯೋಚಿಸುತ್ತಿದ್ದೆ. ಕೊನೆಗೆ ಹೀಗೆಂದೆ: 'ಮಧ್ಯಾಹ್ನವೂ ಆಗಿ ಹೋಯಿತಲ್ಲ, ಏನಾದರೂ ಊಟ-ತಿಂಡಿ ಮಾಡಿದ್ದೀಯೇನಪ್ಪ ?'

"ಅವನೆಂದ: 'ಊಟತಿಂಡಿ ಹೇಗೆ ಮಾಡಲು ಸಾಧ್ಯ, ಬಾಬೂಜಿ ? ಆಲೂಗಡ್ಡೆ ಮಾರಿ ಎಷ್ಟು ಹೊತ್ತಿಗೆ ಮನೆಗೆ ಹಿಂದಿರುಗಲು ಸಾಧ್ಯವಾದೀತು ಎಂಬುದು ಯಾರಿಗೆ ಗೊತ್ತು ? ಅದಕ್ಕೆ ಏನಾದರೂ ಹೊತ್ತುಗೊತ್ತು ಇದೆಯೆ ? ಸಂಜೆಯ ಹೊತ್ತಿಗೆ ಒಂದು ತುತ್ತು ಅನ್ನಕಾಣಬಹುದು.'

"ಇತ್ತ ಮನೆಯೊಡತಿ ಕಿವಿಯಲ್ಲಿ ಪಿಸುಗುಟ್ಟುತ್ತಿದ್ದಳು: 'ನೀವು ಸುಮ್ಮ ಸುಮ್ಮನೆ ಇಲ್ಲದ ತೊಂದರೆಯನ್ನು ತಲೆಯ ಮೇಲೆ ಹಾಕಿಕೊಳ್ಳುತ್ತೀರಿ. ಅವನು ಬಂದಿರುವುದು ಆಲೂಗಡ್ಡೆ ಮಾರುವುದಕ್ಕೆ. ಅವನಿಗೆ ಊಟಕ್ಕೆ ಹಾಕುವ ಅಗತ್ಯ ಏನಿದೆ ? ಕರೆದು ಊಟ ಹಾಕುವುದಕ್ಕೆ ಅವನೇನು ಅತಿಥಿಯೇ ಅಥವಾ ಭಿಖಾರಿಯೆ ? ಜೊತೆಗೆ ಅಡಿಗೆ ಮನೆಯನ್ನೆಲ್ಲ ಸಾರಿಸಿ ಗುಡಿಸಿ ಆಗಿದೆ. ಮೀನುಗೀನು ಸಹ ಉಳಿದಿಲ್ಲ!'

"ನಾನು ಮೆಲುದನಿಯಲ್ಲಿ ಹೇಳಿದೆ: 'ಈ ಸುಡುವ ಬಿಸಿಲಿನಲ್ಲಿ ಅವನು ಬರಿ ಹೊಟ್ಟೆಯಲ್ಲಿ ಹಿಂದಿರುಗಿದರೆ ಗೃಹಸ್ಥನಿಗೆ ಒಳ್ಳೆಯದಾಗುವುದಿಲ್ಲ. ಮೀನಿನ ವಿಚಾರ ಹೇಳುತ್ತಿದ್ದೀಯೆ ತಾನೆ ? ನನಿಗೆ ಹೇಳಿದರೆ ಈಗಲೇ ಬಲೆ ಬೀಸಿ, ಕೊಳದಿಂದ ಮೀನು ಹಿಡಿದುಕೊಂಡು ಬಂದು ಕೊಡುತ್ತಾನೆ.'

"ಒಳ್ಳೆಯದಾಗುವುದಿಲ್ಲವೆಂಬ ಮಾತನ್ನು ಕೇಳಿದ ಮೇಲೆ, ಮನೆಯೊಡತಿ ಒಪ್ಪಿದಳು. ಇಷ್ಟೊಂದು ರಹಸ್ಯಮಯವಾಗಿ ವ್ಯವಹರಿಸುವುದಕ್ಕೆ ಕಾರಣವೂ ಇತ್ತು. ಮನೆಯವರಿಗೆ ಅವನ ಅಸಾಮಾನ್ಯ ವ್ಯಕ್ತಿತ್ವದ ಪರಿಚಯವಾಗಿಬಿಟ್ಟಿದ್ದರೆ, ಆ ಸಂಗತಿ ಕ್ರಮೇಣ ಎಲ್ಲರಿಗೂ ತಿಳಿದು ಹೋಗುತ್ತಿತ್ತು. ಜೊತೆಗೆ, ನಮ್ಮ ಮನೆಯ ಎದುರಿಗೇ ಪಹರೆಯವನ ಮನೆ ಇತ್ತು. ಗೊತ್ತಾದ ಕೂಡಲೇ ಅವನು ಪೋಲೀಸು ಠಾಣೆಗೆ

ವರದಿಮಾಡುತ್ತಿದ್ದ. ಹೀಗಾಗಿ, ನಾನು ಇಷ್ಟೊಂದು ಎಚ್ಚರವಹಿಸುವುದು ಅಗತ್ಯವಾಗಿತ್ತು.... ನಾಡಿಗಾಗಿ ದುಡಿಯುವವರ ಬಗ್ಗೆ ನಾನು ತುಂಬ ಗೌರವವನ್ನಿರಿಸಿ ಕೊಂಡಿದ್ದೇನೆ. ಅವರು ಅಹಿಂಸಾತ್ಮಕ ಸತ್ಯಾಗ್ರಹಿಗಳಾಗಲೀ, ಹಿಂಸಾತ್ಮಕ ಕ್ರಾಂತಿಕಾರಿಗಳಾಗಲೀ - ಇಬ್ಬರೂ ಸಮಾನರೂಪದಲ್ಲಿ ನನ್ನ ಗೌರವಾದರಗಳಿಗೆ ಪಾತ್ರರಾಗುತ್ತಾರೆ. ಹೊತ್ತಲ್ಲದ ಹೊತ್ತಿನಲ್ಲಿ ಮನೆಯೊಡತಿಗೆ ಅಡುಗೆ ಮಾಡುವಂತೆ ಹೇಳುವುದರಲ್ಲಿಯೂ ನನಗೆ ಖಂಡಿತವಾಗಿ ಸಂಕೋಚವಾಗುತ್ತಿತ್ತು. ಆದರೆ, ಬೇರೆ ದಾರಿ ಇರಲಿಲ್ಲ. ನನಿ ಬಲೆಯನ್ನೆತ್ತಿಕೊಂಡು ಕೊಳದ ಕಡೆ ನಡೆದ. ನನ್ನ ಹೆಂಡತಿ ಅತಿಥಿ ಸತ್ಕಾರಕ್ಕಾಗಿ ವ್ಯವಸ್ಥೆ ಮಾಡಲು ಅಡುಗೆಮನೆಯನ್ನು ಹೊಕ್ಕಳು. ಈ ಏಕಾಂತವನ್ನು ಸದುಪಯೋಗಪಡಿಸಿಕೊಂಡು ನಾನು ಆ ಆಲೂಗೆಡ್ಡೆಯವನ ಕಥೆಯನ್ನು ಕೇಳಿದೆ. ಅವನಿಗೆ ಸ್ವಲ್ಪ ಹಣ ಬೇಕಿತ್ತು. ಅದನ್ನು ಕೊಟ್ಟೆ. ಈ ವಿಚಾರ ಯಾರಿಗೂ ಗೊತ್ತಾಗಲಿಲ್ಲ. ಏಕೆಂದರೆ, ಮಧ್ಯೆಮಧ್ಯೆ ಉತ್ತರಿಸಿದ ಧ್ವನಿಯಲ್ಲಿ ಸಂದರ್ಭಾನುಗುಣವಾಗಿ ಆ ಆಲೂಗೆಡ್ಡೆಯವನೊಂದಿಗೆ ಮಾತನಾಡುತ್ತ ಇದ್ದೆ. ಕೊನೆಗೆ ಅಡುಗೆ ಸಿದ್ಧವಾಯಿತು. ಅವನು ಊಟಮಾಡಿ, 'ಆಲೂಗೆಡ್ಡೆ ಬೇಕೆ', 'ಆಲೂಗೆಡ್ಡೆ ಬೇಕೆ' ಎಂದು ಕೂಗುತ್ತ ಅಲ್ಲಿಂದ ಹೊರಟುಹೋದ."

ಲಾಲ್‌ಬಿಹಾರಿ ಎಂಬುವನು ಹಾವಡಾ ದರೋಡೆಯ ಆರೋಪಿಗಳಲ್ಲಿ ಒಬ್ಬನಾಗಿದ್ದ. ಅವನು ಜೈಲಿನಿಂದ ಪರಾರಿಯಾಗಿ, ನೇರವಾಗಿ ಅವರ ಬಳಿಗೆ ಬಂದ. ಆಗ ಬ್ರಿಟಿಷ್ ಸರ್ಕಾರದ ಬಗೆಗಿನ ಭಯ ಎಷ್ಟು ತೀವ್ರವಾಗಿತ್ತೆಂದರೆ ಯಾವನೇ ಒಬ್ಬ ಸಾಮಾನ್ಯ ವ್ಯಕ್ತಿ ಹೀಗೆ ಜೈಲಿನಿಂದ ಪರಾರಿಯಾಗಿ ಬಂದಂಥವನಿಗೆ ಆಶ್ರಯ ಕೊಡುವ ಧೈರ್ಯಮಾಡುತ್ತಿರಲಿಲ್ಲ. ಆದರೆ, ಶರತ್‌ಚಂದ್ರರು ಎಂದೂ ಸಾಮಾನ್ಯ ವ್ಯಕ್ತಿಯಾಗಿ ಬದುಕಲೇ ಇಲ್ಲವಲ್ಲ! ಅವರು ಲಾಲ್‌ಬಿಹಾರಿಗೆ ಆಶ್ರಯ ನೀಡಿದ್ದು ಮಾತ್ರವಲ್ಲ, ಅವನನ್ನು ತಮ್ಮ ಸೇವಕನನ್ನಾಗಿ ಇರಿಸಿಕೊಂಡು ಅವನಿಗೆ ನಿಯಮಿತ ರೂಪದಲ್ಲಿ ವೇತನವನ್ನೂ ಕೊಡುತ್ತ ಬಂದಿದ್ದರು. ಲಾಲ್‌ಬಿಹಾರಿ, ಸ್ವದೇಶ ರಂಜನ್‌ದಾಸ್, ಶಚೀಂದ್ರನಾಥ ಸಾನ್ಯಾಲ್, ಬಿಪಿನಬಿಹಾರಿ ಗಾಂಗುಲಿ, ಆಲೂಗೆಡ್ಡೆ ಯವನು - ಎಷ್ಟು ಹೆಸರುಗಳನ್ನು ಹೇಳಲು ಸಾಧ್ಯ? ವಯಸ್ಸಿನಲ್ಲಿ ಚಿಕ್ಕವರಾಗಿದ್ದರೂ ಬಿಪಿನ ಬಿಹಾರ ಗಾಂಗುಲಿಯವರು ಮನೆಯಲ್ಲಿ ಶರತ್‌ಚಂದ್ರರಿಗೆ ಮಾವನವರಾಗಿ ದ್ದರು. ಅವರ ವಿಷಯದಲ್ಲಿ ಶರತ್‌ಚಂದ್ರರಿಗೆ ತುಂಬ ಪ್ರೀತಿಯಿತ್ತು. ನೊಂದ ಮನಸ್ಸಿನಿಂದ ಅವರೊಮ್ಮೆ ಹೀಗೆ ಹೇಳಿದ್ದರು: "ಈ ಕ್ರಾಂತಿಕಾರಿಗಳು ಎಂಥ ಅದ್ಭುತ ಚೇತನಗಳು! ಅದಕ್ಕೆ ನಮ್ಮ ಬಿಪಿನರೇ ಒಂದು ನಿದರ್ಶನ. ಅದೆಷ್ಟು ಕಷ್ಟದಿಂದ ಅವರು ನಾಡಿಗಾಗಿ ತಮ್ಮ ಇಡೀ ಬಾಳನ್ನೇ ಅರ್ಪಿಸಿಬಿಟ್ಟಿದ್ದಾಗೆ. ಅವರ ಬಾಳಿನ ಅರ್ಧಭಾಗವೆಲ್ಲ ಜೈಲಿನಲ್ಲಿಯೇ ಕಳೆದುಹೋಯಿತು. 'ಬಿಪಿನ್, ಮಧ್ಯೆ ಮಧ್ಯೆ ನಾಲ್ಕಾರು ದಿವಸಗಳ ಮಟ್ಟಿಗಾದರೂ ನಮ್ಮ ಮನೆಯಲ್ಲಿ ಬಂದಿರಿ. ಚೆನ್ನಾಗಿ ಊಟ ಮಾಡಿ. ಒಳ್ಳೆಯ ಹಾಸಿಗೆಯ ಮೇಲೆ ಮಲಗಿಕೊಳ್ಳಿ. ಸ್ವಲ್ಪವಾದರೂ ನಮ್ಮ ಪ್ರೀತಿ ಆದರಗಳನ್ನು ಸ್ವೀಕರಿಸಿ.' ಎಂದು ಅದೆಷ್ಟು ಸಲ ಹೇಳಿದ್ದೇನೋ. ಆದರೆ, ಅವರಿಗೆ ಬಿಡುವೆಂಬುದೇ ಇಲ್ಲ. ಬಿಡುವು ದೊರೆಯುವುದಾದರೂ ಎಲ್ಲಿಂದ? ನಾಡಿನ ಬಗೆಗಿನ ಚಿಂತೆಯನ್ನು ಬಿಟ್ಟರೆ, ಅವರಿಗೆ ಬೇರೆ ಯಾವ ಚಿಂತೆಯೂ ಇಲ್ಲವಲ್ಲ!"

ಅವರೊಡನೆ ಇರಲು ಅಲ್ಲದಿದ್ದರೂ, ಒಂದಲ್ಲ ಒಂದು ಬಗೆಯ ನೆರವಿಗಾಗಿ ಬಿಪಿನ್ ಅವರು ಶರತ್‌ಚಂದ್ರರ ಬಳಿಗೆ ಬರುತ್ತಲೇ ಇದ್ದರು. ಒಮ್ಮೆ ಅವರು ಹೆಂಗಸಿನ ವೇಷವನ್ನು ಹಾಕಿಕೊಂಡು ಬಂದಿದ್ದರು. ಶರತ್‌ಚಂದ್ರರು ನಗುತ್ತ ಹೀಗೆನ್ನುತ್ತಿದ್ದರು: "ಬಿಪಿನ್, ನನ್ನ ಬಳಿ ಬರುವಾಗಲೆಲ್ಲ ಪಿಸ್ತೂಲನ್ನು ಹಿಡಿದುಕೊಂಡೇ ಬರುತ್ತಾರೆ. ಅವರು ಬೆದರಿಕೆಯನ್ನು ತೋರಿ, ಹಣ ವಸೂಲು ಮಾಡಲು ಯತ್ನಿಸುತ್ತಾರೋ ಎಂದೆನ್ನಿಸುತ್ತದೆ. ಒಮ್ಮೆ ಅವರು ಬಂದರು. ಆಗ ಅವರಿಗೆ ತುರ್ತಾಗಿ ಏಳುನೂರು ರೂಪಾಯಿ ಬೇಕಾಗಿತ್ತು. ಕೆಲವು ಘಂಟೆಗಳ ವರೆಗೆ ಇಲ್ಲಿದ್ದು ಹೊರಟುಹೋದರು. ಪೋಲೀಸರು ಅವರನ್ನು ಅರಸುತ್ತಿದ್ದರು. ಅವರ ಕೈಗೆ ಸಿಕ್ಕಿಬಿದ್ದಿದ್ದರೆ ನಾನೇನು ತಾನೆ ಮಾಡಬಹುದಾಗಿತ್ತು? ಆದರೆ, ಸಿಕ್ಕಿಬಿದ್ದರೂ, ನನ್ನಿಂದ ಹಣ ದೊರೆಯಿತೆಂದು ಅವರೆಂದೂ ಹೇಳುವುದಿಲ್ಲವೆಂಬುದು ನನಗೆ ಗೊತ್ತಿತ್ತು. ಅವರಂಥ ಕ್ರಾಂತಿಕಾರಿಗಳು ತೀರ ವಿರಳ."

ಕ್ರಾಂತಿಕಾರಿಗಳು ಶರತ್-ಸಾಹಿತ್ಯದ ಪ್ರಶಂಸಕರಾಗಿದ್ದರು. ಅದರಲ್ಲಿಯೂ 'ಪಥೇರ್ ದಾಬೀ'ಯನ್ನು ಅವರು ವಿಶೇಷವಾಗಿ ಮೆಚ್ಚಿಕೊಂಡಿದ್ದರು. ಶರತ್‌ಚಂದ್ರರು ಈ ಕ್ರಾಂತಿಕಾರಿಗಳ ಕೆಚ್ಚನ್ನು ಮೆಚ್ಚಿಕೊಂಡಿದ್ದರು. ಅವರು ಸಿದ್ಧಾಂತವಾದಿಗಳಾಗಿರಲಿಲ್ಲ. ಸಿದ್ಧಾಂತವನ್ನೇನಾದರೂ ಅವರು ಇರಿಸಿಕೊಂಡಿದ್ದರೆ, ಅದು ಆ ಒಂದು ಸಿದ್ಧಾಂತ ಮಾತ್ರವಾಗಿತ್ತು - ಅನ್ಯಾಯಕ್ಕೆ ಪ್ರತೀಕಾರವನ್ನೆಸಗುವುದು. ದಾಸ್ಯಕ್ಕಿಂತಲೂ ಹೆಚ್ಚಿನ ಅನ್ಯಾಯ ಯಾವುದಿರಬಹುದು? ಆದ್ದರಿಂದ, ನಾಡಿನ ಬಿಡುಗಡೆಯೇ ಅವರ ಪಾಲಿಗೆ ಅಂತಿಮ ಸತ್ಯವಾಗಿತ್ತು; ಅಲ್ಲಿಯವರೆಗೆ ತಲುಪಿಸುವ ಮಾರ್ಗ ಮಾತ್ರವಾಗಿರಲಿಲ್ಲ.

ಅಸಹಕಾರ ಚಳವಳಿಯ ಆರಂಭದ ಅವಧಿಯಲ್ಲೂ ಇದೇ ಅವರ ನಿಲುವಾಗಿತ್ತು. ಆಗಲೂ ಅನೇಕ ಕಾಂಗ್ರೆಸ್ ಕಾರ್ಯಕರ್ತರು ವಿಚಾರ ವಿನಿಮಯಕ್ಕಾಗಿ ಅವರ ಬಳಿಗೆ ಬರುತ್ತಿದ್ದರು. ಒಮ್ಮೆ ಒಬ್ಬ ವ್ಯಕ್ತಿ ಅಹಿಂಸಾತ್ಮಕ ಪ್ರತಿಭಟನೆಯ ಒಂದು ಘಟನೆಯನ್ನು ತುಂಬ ಹೆಮ್ಮೆಯಿಂದ ಉಲ್ಲೇಖಿಸ ತೊಡಗಿದ್ದರು: "ಶಾಲೆಯ ಮಕ್ಕಳು ರಾಷ್ಟ್ರಧ್ವಜದೊಂದಿಗೆ ಮೆರವಣಿಗೆಯನ್ನು ನಡೆಸಿದರು. ಆ ಮೆರವಣಿಗೆಯನ್ನು ಚದುರಿಸುವ ಸಲುವಾಗಿ ಪೋಲೀಸರು 'ಲಾಠೀ ಚಾರ್ಜ್' ಮಾಡಿದರು. ಮನೆಮಂದಿಯನ್ನೆಲ್ಲ ತುಂಬ ಕೆಟ್ಟರೀತಿಯಲ್ಲಿ ಗೋಳುಹುಯ್ದುಕೊಂಡರು. ಘೋರ, ಅಮಾನುಷಿಕ, ಬರ್ಬರ ರೀತಿಯಲ್ಲಿ ಮಹಿಳೆಯರನ್ನು ಅಪಮಾನಿಸಿದರು....." ಎಂದು ಅವರು ಹೇಳುತ್ತ ಇದ್ದರು.

ಒಮ್ಮೆಲೇ ಶರತ್‌ಚಂದ್ರರ ಮುಖದಲ್ಲಿ ಭಯಂಕರ ಕೋಪ ಕಾಣಿಸಿಕೊಂಡಿತು. ಕೋಪದಿಂದ ಅವರೆಂದರು: "ಹೀಗೆಲ್ಲ ಹೇಳುವುದಕ್ಕೆ ನಿಮಗೆ ನಾಚಿಕೆಯಾಗುವುದಿಲ್ಲವೆ?"

ಅವರ ಈ ಉಗ್ರರೂಪವನ್ನು ಕಂಡು ಅವರು ಅವಾಕ್ಕಾಗಿ ಬಿಟ್ಟರು. ಹಾಗೂ ಹೀಗೂ ಧೈರ್ಯವನ್ನು ಒಗ್ಗೂಡಿಸಿಕೊಂಡು ಕೇಳಿದರು: "ಯಾವ ವಿಚಾರದಲ್ಲಿ ನಾಚಿಕೆಪಟ್ಟುಕೊಳ್ಳಬೇಕಾಗಿತ್ತು?"

ಶರತ್‌ಚಂದ್ರರು ಉತ್ತರಕೊಟ್ಟರು: "ಮಹಿಳೆಯರ ಮೇಲೆ ಅಮಾನುಷ

ರೀತಿಯಲ್ಲಿ ಅತ್ಯಾಚಾರ ನಡೆಯುತ್ತಿದ್ದುದನ್ನು ಕಂಡೂ ನೀವೆಲ್ಲ ನಪುಂಸಕರೆಂಬಂತೆ ಮೂಕಪ್ರೇಕ್ಷಕರಾಗಿ ನಿಂತಿದ್ದಿರಲ್ಲ. ಆ ವಿಚಾರದಲ್ಲಿ ನಾಚಿಕೆಪಟ್ಟುಕೊಳ್ಳಬೇಕಾಗಿತ್ತು. ಅಷ್ಟೇ ಸಾಲದು ಎಂಬಂತೆ, ಅಹಿಂಸೆ ಮತ್ತು ಸಂಯಮದ ಸಿದ್ಧಾಂತಗಳನ್ನು ಸಂಪೂರ್ಣವಾಗಿ ಪಾಲಿಸಿದ್ದೇವೆ ಎಂದು ಹೆಮ್ಮೆಪಡುತ್ತಿದ್ದೀರಲ್ಲ! ನೀವೆಲ್ಲ ಎಲ್ಲಿಯಾದರೂ ಹಾಳು ಬಾವಿಗೆ ಹಾರಿಕೊಳ್ಳಬೇಕಾಗಿತ್ತು."

ತುಳಿತಕ್ಕೆ ಒಳಗಾಗಿದ್ದ ನಾರಿಯನ್ನು ಮಾನವೀಯತೆಯ ನೆಲೆಯಲ್ಲಿ ಪ್ರತಿಷ್ಠಾಪಿಸಿದ ಶರತ್‌ಚಂದ್ರರು ಈ ಬರ್ಬರ ಕೃತ್ಯದ ವಿವರಣೆಯನ್ನು ಕೇಳಿ ಶಾಂತರಾಗಿರುವುದು ಹೇಗೆ ಸಾಧ್ಯವಿತ್ತು? ಆ ವ್ಯಕ್ತಿಯಂತೂ ಬೆಪ್ಪು ಬಡಿದವರಂತಾಗಿ ಬಿಟ್ಟಿದ್ದರು. ತಮ್ಮನ್ನು ಪ್ರಶಂಸಿಸುವುದಕ್ಕೆ ಬದಲಾಗಿ, ಶರತ್‌ಚಂದ್ರರು ಹೀಗೇಕೆ ಗದರಿಸುತ್ತಿದ್ದಾರೆ ಎಂಬುದು ಅರ್ಥವಾಗದೆ ಹೋಗಿತ್ತು. ತುಂಬಿಬಂದ ಗಂಟಲಿನಿಂದ ಅವರು ಕೇಳಿದರು: "ನೀವು ಇದೇನು ಮಾತನಾಡುತ್ತಿದ್ದೀರಿ? ಹಾವಡಾ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿಯೂ, ನಾವು ಹಿಂಸಾತ್ಮಕ ಮಾರ್ಗಗಳಿಂದ ಪೋಲೀಸರನ್ನು ಎದುರಿಸಬೇಕಾಗಿತ್ತೆಂದು ಹೇಳಬಯಸುತ್ತಿದ್ದೀರೇನು?"

ಅದೇ ಆವೇಶದೊಂದಿಗೆ ಶರತ್‌ಚಂದ್ರರು ಉತ್ತರ ಕೊಟ್ಟರು: "ಹೌದು. ನಾನು ಅದನ್ನೇ ಹೇಳಬಯಸಿದ್ದೇನೆ. ನಾನೇನಾದರೂ ಅಲ್ಲಿ ಇದ್ದಿದ್ದರೆ ಖಂಡಿತವಾಗಿಯೂ ಹಾಗೆಯೇ ಮಾಡುತ್ತಿದ್ದೆ."

"ಆದರೆ, ಆದರೆ ಇಂಥ ಮಾರ್ಗವನ್ನು ಅನುಸರಿಸುವುದರಿಂದ ಕಾಂಗ್ರೆಸ್ಸಿನ ಅಹಿಂಸಾತ್ಮಕ ಅಸಹಕಾರ, ಸಾತ್ವಿಕ ಪ್ರತಿಭಟನೆ ಅಥವಾ ಸತ್ಯಾಗ್ರಹ ಅಥವಾ ಸವಿನಯ ಆಜ್ಞೋಲ್ಲಂಘನೆಯ ಸಿದ್ಧಾಂತಗಳ ಹತ್ಯೆಯಾದಂತೆ ಆಗುವುದಿಲ್ಲವೆ?"

"ಖಂಡಿತವಾಗಿಯೂ ಆಗುತ್ತಿತ್ತು. ಆದರೆ, ಮಹಿಳೆಯ ಗೌರವದ ಹತ್ಯೆಗೆ ಹೋಲಿಸಿದರೆ, ಈ ಹತ್ಯೆ ನಗಣ್ಯವಾದುದು."

ಅಲ್ಲಿದ್ದವರೆಲ್ಲ ಆಗಲೂ ಆಶ್ಚರ್ಯಚಕಿತರಾಗಿದ್ದರು. ಕೆಲವು ಕ್ಷಣಗಳವರೆಗೆ ಮೌನ ಕವಿದುಕೊಂಡಿತ್ತು. ಸ್ವಲ್ಪ ಹೊತ್ತಿನ ಬಳಿಕ ಶರತ್‌ಚಂದ್ರರು ಹೇಳಿದರು: "ನಿಮ್ಮೆಲ್ಲರ ಎದುರಿಗೆ ನಾನು ಒಂದು ಮಾತನ್ನು ಸ್ಪಷ್ಟವಾಗಿ ಹೇಳಬಯಸುತ್ತೇನೆ. ಅಸಹಕಾರ ಚಳವಳಿಯ ಈ ಸಾತ್ವಿಕ ಪ್ರತಿಭಟನೆ ಅಥವಾ ಸವಿನಯ ಆಜ್ಞೋಲ್ಲಂಘನೆಯ ನೀತಿಗೂ ನನ್ನ ಸ್ವಭಾವಕ್ಕೂ ಹೊಂದಾಣಿಕೆಯೇ ಆಗುವುದಿಲ್ಲ. ಬ್ರಿಟಿಷರ ಆಡಳಿತಕ್ಕೆ ಸಂಘಟಿತ ವಿರೋಧವನ್ನು ತೋರುವುದಕ್ಕೆ ಈಗ ಅಹಿಂಸಾತ್ಮಕ ಚಳವಳಿಯನ್ನು ಮಾತ್ರವೇ ನೀತಿಯ ರೂಪದಲ್ಲಿ ಅಂಗೀಕರಿಸಬಹುದಾಗಿದೆ ಎಂಬುದನ್ನು ನಾನು ಒಪ್ಪುತ್ತೇನೆ; ಏಕೆಂದರೆ, ಸದ್ಯದ ಸನ್ನಿವೇಶದಲ್ಲಿ ಸಶಸ್ತ್ರಕ್ರಾಂತಿಗೆ ನಾವೆಲ್ಲ ಸಾಮೂಹಿಕ ರೂಪದಲ್ಲಿ ಸಂಘಟಿತರಾಗಲಾರೆವು. ಆದರೆ, ನಮ್ಮ ಹೆಣ್ಣುಮಕ್ಕಳ ಮಾನ-ಮರ್ಯಾದೆಗಳನ್ನು ಕಾಪಾಡಲಾರದಷ್ಟು ಮಟ್ಟಿಗೆ ಈ ಅಹಿಂಸೆಯ ನೀತಿ ನಮ್ಮನ್ನು ಜಡವಾಗಿಸಿ ಬಿಡಬೇಕು ಎಂಬುದು ಇದರ ಅರ್ಥವೆಂದು ನಾನೆಂದಿಗೂ ಒಪ್ಪಲಾರೆ. ಪ್ರತಿಯೊಂದು ನಿಯಮಕ್ಕೂ ಅಪವಾದಗಳು ಇದ್ದೇ ಇರುತ್ತವೆ. ನಮ್ಮ ಇಂದಿನ ಅಹಿಂಸಾತ್ಮಕ ಚಳವಳಿಗೂ ಅಪವಾದಗಳಿಲ್ಲದೆ ಇರುವುದು ಸಾಧ್ಯವಿಲ್ಲ. ಅಸಹಾಯಕ ವ್ಯಕ್ತಿಗಳಂತೆ ಯಾವುದೇ ಪ್ರತಿಭಟನೆಯನ್ನೂ ತೋರದೆ ಮೌನವಾಗಿ ಪೆಟ್ಟನ್ನು

ಸಹಿಸಿಕೊಂಡಿರುವುದು ವೈಯಕ್ತಿಕವಾಗಿ ನನಗೆ ಅಭ್ಯಾಸವೇ ಇಲ್ಲ. ನನ್ನ ಅಲೆಮಾರಿ ಜೀವನದಲ್ಲಿ ಅನೇಕ ಬ್ರಿಟಿಷರ ಮೇಲೆ, ಅವರ ಹದ್ದುಮೀರಿದ ವರ್ತನೆಗಾಗಿ, ಕೈಮಾಡಬೇಕಾಗಿ ಬಂದ ಸೌಭಾಗ್ಯವೋ ದೌರ್ಭಾಗ್ಯವೋ ನನ್ನ ಪಾಲಿಗೆ ಬಂದಿದೆ. ನಾನು ಬರ್ಮಾ ದೇಶವನ್ನು ಬಿಟ್ಟು ಬಂದಾಗ, ನಾನು ಕೆಲಸಮಾಡುತ್ತಿದ್ದ ಕಛೇರಿಯಲ್ಲಿನ ಆಂಗ್ಲ ಅಧಿಕಾರಿಯೊಂದಿಗೆ ಭಾರಿ ಜಗಳವನ್ನೇ ಮಾಡಬೇಕಾಗಿ ಬಂದಿತ್ತು. ಏಕೆಂದರೆ ಅವನು ಭಾರತೀಯ ಸಮುದಾಯಕ್ಕೇ ಅಪಮಾನ ವನ್ನೆಸಗುವಂಥ ಬೈಗಳನ್ನು ಬಯ್ದಿದ್ದ. ನನ್ನ ಈ ಮಾತಿನಿಂದ, ನಾನು ಸ್ವಭಾವತಃ ಹಿಂಸಾವಾದಿಯೆಂದು ಭಾವಿಸಬೇಡಿ. ನನ್ನಂಥ ದುರ್ಬಲರೂ ಅಹಿಂಸಾತ್ಮಕ ಸ್ವಭಾವದವರೂ ಆದ ವ್ಯಕ್ತಿಗಳು ಹೆಚ್ಚಾಗಿ ಸಿಕ್ಕಲಾರರು. ಆದರೆ, ನನ್ನ ಸ್ವಭಾವದ ಆ ಅಹಿಂಸೆ ಹೇಡಿಗಳ ಅಹಿಂಸೆಯಲ್ಲ."

ಈ ಘಟನೆಯ ಬಗ್ಗೆ ಚರ್ಚಿಸುತ್ತ, ಇಳಾಚಂದ್ರ ಜೋಶಿ ಅವರು ಹೀಗೆ ಬರೆದಿದ್ದಾರೆ: "ಅವರ ಈ ಭಾಷಣದ ಬಳಿಕ ಸ್ವಲ್ಪಹೊತ್ತಿನವರೆಗೆ ಯಾರೂ ಬಾಯಿಬಿಡುವ ಧೈರ್ಯಮಾಡಲಿಲ್ಲ. ಕೊನೆಗೆ ಆ ವ್ಯಕ್ತಿಯೇ ಮೌನವನ್ನು ಮುರಿದು, ಕೇಳಿದ: 'ಹಾಗಾದರೆ, ನೀವು ಗಾಂಧೀಜಿಯುವರ ನೀತಿಯನ್ನು ಹೇಡಿಗಳ ನೀತಿ ಎಂದು ಭಾವಿಸುತ್ತೀರೇನು ?'

"ಸ್ಪಷ್ಟವಾಗಿಯೇ ಈ ಪ್ರಶ್ನೆಯಲ್ಲಿ ವ್ಯಂಗ್ಯ ಅಡಗಿತ್ತು. ತಮ್ಮ ಒಂದೊಂದು ಮಾತಿನ ಮೇಲೂ ವಿಶೇಷವಾದ ಒತ್ತುಕೊಡುತ್ತ ಶರತ್‌ಚಂದ್ರರು ಹೀಗೆಂದು ಹೇಳಿದರು: 'ವೈಯಕ್ತಿಕವಾಗಿ ನಾನು ಗಾಂಧೀಜಿಯವರನ್ನು ಮಹಾವೀರರೆಂದೇ ಭಾವಿಸುತ್ತೇನೆ. ಅವರೊಡನೆ ಹೋಲಿಸಬಹುದಾದಂಥ ವ್ಯಕ್ತಿಯನ್ನು ಸುಲಭವಾಗಿ ಅರಸಲೂ ಸಾಧ್ಯವಿಲ್ಲ. ಅವರ ಬಗ್ಗೆ ನನ್ನ ಹೃದಯದಲ್ಲಿ ನಿಮ್ಮೆಲ್ಲರಿಗಿಂತಲೂ ಹೆಚ್ಚಿನ ಗೌರವಾದರಗಳಿವೆ. ಅವರ ಬಗ್ಗೆ ನನ್ನ ಹೃದಯದಲ್ಲಿ ಅಂಥ ಆಳವಾದ ಗೌರವ ಇಲ್ಲದಿದ್ದರೆ, ಯಾರೇ ಎಷ್ಟೇ ಒತ್ತಡ ಅಥವಾ ಒತ್ತಾಯವನ್ನು ತಂದಿದ್ದರೂ ನಾನೆಂದೂ ಹಾವಡಾ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷಸ್ಥಾನವನ್ನು ಒಪ್ಪಿ ಕೊಳ್ಳುತ್ತಿರಲಿಲ್ಲ. ಆದರೆ, ಅವರ ಸಿದ್ಧಾಂತಗಳನ್ನು ಅಕ್ಷರಶಃ ಪರಿಪಾಲಿಸುತ್ತೇನೆಂದು ನಾನೇನೂ ಆಣೆಪ್ರಮಾಣ ಮಾಡಿಲ್ಲ. ನಾನೊಬ್ಬ ಮನುಷ್ಯ; ಮಣ್ಣಿನ ನಿರ್ಜೀವ ಬೊಂಬೆಯಲ್ಲ. ಆದ್ದರಿಂದಲೇ, ಯಾವುದೇ ಸಾಮಾನ್ಯ ಅಥವಾ ಮಹತ್ವಪೂರ್ಣ ವಿಷಯದ ಬಗ್ಗೆ ಸ್ವತಂತ್ರವಾಗಿ ಆಲೋಚನೆಮಾಡಬಲ್ಲ ಶಕ್ತಿ ನನ್ನಲ್ಲಿದೆ."[1]

ಈ ಬಗೆಯ ಸ್ವತಂತ್ರ ಆಲೋಚನೆಯಿಂದಾಗಿಯೇ ಕಾಂಗ್ರೆಸ್ಸಿನಲ್ಲಿದ್ದುಕೊಂಡು ಅವರು ಕ್ರಾಂತಿಕಾರಿಗಳ ವಿಷಯದಲ್ಲಿ ಪ್ರೀತಿಯನ್ನಿರಿಸಿಕೊಂಡಿದ್ದರು. ಗಾಂಧೀಜಿಯ ವರ ನಿಷ್ಠಾವಂತ ಅನುಯಾಯಿಗಳು ಅವರನ್ನು ಭ್ರಾಂತರೆಂದು ಭಾವಿಸಿ, ಅವರ ಕಾರ್ಯ ಸ್ವಾತಂತ್ರ್ಯ ಸಾಧನೆಗೆ ಅಹಿತಕಾರಿಯಾಗುತ್ತದೆಂದು ಪರಿಗಣಿಸಿದ್ದರು. ಇದು ಶರತ್‌ಚಂದ್ರರಿಗೆ ತುಂಬ ನೋವನ್ನುಂಟುಮಾಡಿತ್ತು. ಈ ಬಗ್ಗೆ ಅವರು ಹೀಗೆಂದು ಹೇಳಿದ್ದರು: "ನಾನು ಅಹಿಂಸೆಯನ್ನು ಅಂಗೀಕರಿಸಿದ್ದೇನೆ; ಹಾಗೆ ಮಾಡಲಾಗದಿರು

1. 'ಶರತ್‌ಚಂದ್ರ: ವ್ಯಕ್ತಿ ಔರ್ ಕಲಾಕಾರ್': ಇಳಾಚಂದ್ರ ಜೋಶಿ.

ವವರೇ ಭ್ರಾಂತರು- ಹೀಗೆಂದು ಹೇಳಲು ಹೇಗೆ ಸಾಧ್ಯ? ಗಾಂಧೀಜಿಯವರ ವಿಷಯವೇ ಬೇರೆ. ಅಹಿಂಸೆ ಅವರ ಹೃದಯಾಂತರಾಳದ ಜ್ವಲಂತ ವಿಶ್ವಾಸವಾಗಿದೆ, ಅವರ ಆದರ್ಶವೇ ಆಗಿದೆ. ಇದಕ್ಕಿಂತಲೂ ದೃಢವಾದ ಬೇರೊಂದು ನೀತಿ ಅವರ ಜೀವನದಲ್ಲಿಲ್ಲ. ನಾಡಿನ ಸ್ವಾತಂತ್ರ್ಯಕ್ಕಿಂತಲೂ ಅಹಿಂಸೆಯೇ ಅವರಿಗೆ ದೊಡ್ಡದಾಗಿದೆ. ನಾನು ಅವರ ಬಗ್ಗೆ ಇಷ್ಟೊಂದು ಗೌರವವನ್ನಿರಿಸಿಕೊಂಡಿರುವುದಕ್ಕೆ ಅವರ ಈ ಶಕ್ತಿ ಮತ್ತು ಅಂತಸ್ಸತ್ವಗಳೇ ಕಾರಣ. ಇದೇ ರೀತಿ, ನಾಡಿನ ಬಿಡುಗಡೆಯೇ ಯಾರ ಬಾಳಿನ ಮಹಾ ಸತ್ಯವಾಗಿದೆಯೋ, ಅದೇ ಬಗೆಯ ಅಂತಸ್ಸತ್ವದಿಂದಾಗಿ ಯಾರು ಹಿಂಸೆಯ ಮಾರ್ಗವನ್ನು ಅಂಗೀಕರಿಸಿದ್ದಾರೋ, ನೇಣುಗಂಬವನ್ನೇರಿ ಯಾರು ಬಿಡುಗಡೆಯ ಹಾದಿಯನ್ನು ಪ್ರಶಸ್ತಗೊಳಿಸಿದ್ದಾರೋ ಅಂಥವರ ಬಗ್ಗೆಯೂ ನಾನು ಗೌರವವನ್ನಿಟ್ಟುಕೊಂಡಿದ್ದೇನೆ. ಅವರಿಗೆ ನನ್ನ ನಮಸ್ಕಾರಗಳನ್ನು ಅರ್ಪಿಸುತ್ತೇನೆ."

ಅವರ ಈ ನಂಬಿಕೆಗೆ 'ಪಥೇರ್ ದಾಬೀ'ಯಲ್ಲಿ ವ್ಯಕ್ತರೂಪ ದೊರೆಯಿತು. ತಿಲ-ತಿಲವಾಗಿ ಬ್ರಹ್ಮ ತಿಲೋತ್ತಮೆಯನ್ನು ಸೃಷ್ಟಿಸಿದಂತೆಯೇ, ತಮ್ಮ ಸಂಪರ್ಕಕ್ಕೆ ಬಂದ ಕ್ರಾಂತಿಕಾರಿಗಳ ಗುಣಗಳ ಪುಂಜದಂತಿರುವ ಸವ್ಯಸಾಚಿಯನ್ನು ಅವರು ಸೃಷ್ಟಿಸಿದರು. ಇದರಲ್ಲಿನ ಹಿಂಸೆ-ಅಹಿಂಸೆಗಳ ಬಗೆಗೆ, ಅವುಗಳ ಪರವಾಗಿ ಮತ್ತು ವಿರುದ್ಧವಾಗಿ ಸಾಕಷ್ಟು ಮಾತುಗಳನ್ನು ಹೇಳಲಾಗಿದೆ. ಅದು ಅವರ ಹೃದಯಾಂತ ರಾಳದ ದ್ವಂದ್ವದ ಚಿತ್ರವೇ ಆಗಿದೆ. ಅವರು ಸ್ಪಷ್ಟವಾದ ವಿವರಣೆ ಯನ್ನೇನೂ ಕೊಟ್ಟಿಲ್ಲ; ಕೊಡಬೇಕಾದ ಅಗತ್ಯವಿದೆಯೆಂದು ಅವರೆಂದೂ ಒಪ್ಪಲೂ ಇಲ್ಲ.....

ಆದರೆ, ರಾಜಕೀಯದ ಕ್ಷೇತ್ರದಲ್ಲಿ ಅವರು ಇದಕ್ಕಿಂತಲೂ ದೊಡ್ಡದಾದ ಇನ್ನೊಂದು ಕಾರ್ಯವನ್ನು ಮಾಡಿದರು. ರಾಜಕೀಯ ಬಂದಿಗಳನ್ನು ಸಾರ್ವಜನಿಕವಾಗಿ ಅಭಿನಂದಿಸಿದ್ದೇ ಆ ಮಹಾಕಾರ್ಯ.[1] ನಾಲ್ಕಾರು ವರ್ಷಗಳಿಂದ ಅನೇಕ ರಾಜಕೀಯ ಬಂದಿಗಳು ಜೈಲುಖಾನೆಯ ಕಬ್ಬಿಣದ ಸಲಾಕೆಗಳ ಹಿಂದೆ ಬಂಧಿತರಾಗಿ ಕೊಳೆಯುತ್ತಿದ್ದರು. ಅವರನ್ನು ಸೆರೆಮನೆಯಿಂದ ಬಿಡಿಸಲು ರಾಷ್ಟ್ರೀಯ ಮಹಾಸಭೆ ಅನೇಕ ಪ್ರಯತ್ನಗಳನ್ನು ನಡೆಸಿತ್ತು. ಅವುಗಳ ಪರಿಣಾಮವಾಗಿ, ಎಲ್ಲರಿಗಿಂತಲೂ ಮೊದಲು ಸುಭಾಷ್‌ಚಂದ್ರ ಬೋಸ್ ಅವರ ಬಿಡುಗಡೆಯಾಗಿತ್ತು. ಅವರು ನಾಲ್ಕು ವರ್ಷಗಳಿಂದ ಮಾಂಡಲೆ ಜೈಲಿನಲ್ಲಿದ್ದರು. ಅವರ ಆರೋಗ್ಯ ಕೆಟ್ಟಿತ್ತು. ಲಾರ್ಡ್ ಲಿಟ್ಟನ್ ಅವರನ್ನು ಬಿಡುಗಡೆ ಮಾಡಲು ಸಿದ್ಧರಾಗಿರಲಿಲ್ಲ. ಆದರೆ, ಅವರಿಗೆ ಬದಲಾಗಿ ಬಂದ ಸ್ಟ್ಯಾನ್ಲೆ ಜಾಕ್ಸನ್ ಅವರು ರಾಜಕೀಯ ಬಂದಿಗಳ ವಿಷಯದಲ್ಲಿ ಮೃದುವಾದ ಕ್ರಮವನ್ನು ಅನುಸರಿಸಿದರು. ಕ್ರಮೇಣ ಎಲ್ಲ ರಾಜಕೀಯ ಬಂದಿಗಳ ಬಿಡುಗಡೆ ಆಯಿತು. ಒಟ್ಟು ಸುಮಾರು ಇನ್ನೂರಕ್ಕೂ ಹೆಚ್ಚು ಮಂದಿ ರಾಜಕೀಯ ಬಂದಿಗಳು ಕಾರಾಗೃಹದಿಂದ ಹೊರಬಂದು, ಮತ್ತೆ ಕಾರ್ಯಕ್ಷೇತ್ರವನ್ನು ಸೇರಿಕೊಂಡರು.

ಇವರೆಲ್ಲ ಸೆರೆಮನೆಯನ್ನು ಸೇರಿದ್ದ ಕಾಲದಿಂದ, ಅದರಲ್ಲಿಯೂ ದೇಶಬಂಧು ದಾಸ್ ಅವರ ಸಾವಿನ ತರುವಾಯ, ಶರತ್‌ಚಂದ್ರರು ತುಂಬ ಒಂಟಿಯಾಗಿ ಬಿಟ್ಟಿದ್ದರು. ಉದಾಸ ಚಿತ್ತರೂ, ದುಃಖಿಗಳೂ ಆಗಿ ಯಂತ್ರದಂತೆ ಕಾಂಗ್ರೆಸ್ಸಿನ

1. 1928ರಲ್ಲಿ.

ಆದೇಶಗಳನ್ನು ಪಾಲಿಸುತ್ತಿದ್ದರು. ಅವರ ಮನಸ್ಸು ಬೇರೆಲ್ಲೋ ಇತ್ತು. ಸುಭಾಷಚಂದ್ರ ಬೋಸ್ ಅವರ ಬಿಡುಗಡೆಯ ಬಳಿಕ ಅವರ ಮನಸ್ಸು ಮತ್ತೆ ತನ್ನ ನೆಲೆಗೆ ಹಿಂದಿರುಗಿತ್ತು, ಅವರು ಉತ್ಸಾಹದಿಂದ ಬೀಗಿದರು. ರಾಜಕೀಯ ಬಂದಿಗಳಿಗೆ ಬಿಡುಗಡೆಯೇನೋ ದೊರೆತಿತ್ತು. ಆದರೆ, ಅವರಲ್ಲಿ ಅನೇಕರ ಸ್ಥಿತಿಗತಿಗಳು ಚೆನ್ನಾಗಿರಲಿಲ್ಲ. ಮನೆ-ಮಾರು ಇದ್ದವರು ಉಳಿದವರಿಗಿಂತ ಹೆಚ್ಚು ಸುಖಿಗಳಾಗಿದ್ದರು. ಆದರೆ, ಅನೇಕರಿಗೆ ತಮ್ಮದೆನ್ನುವ ಮನೆ-ಮಾರುಗಳೇನೂ ಇರಲಿಲ್ಲ. ಅವರ ಪಾಲಿಗೆ ನಾಡಿನ ಮತ್ತು ಸಮಾಜದ ಬಾಗಿಲುಗಳು ಮುಚ್ಚಿಹೋಗಿದ್ದುವು. ಯಾರೂ ಬಿಚ್ಚು ಮನಸ್ಸಿನಿಂದ ಅವರನ್ನು ಸ್ವಾಗತಿಸಲಿಲ್ಲ. ಬಂಧುಗಳು, ಮಿತ್ರರು, ಮೆಸ್, ಬೋರ್ಡಿಂಗ್, ಹೋಟೆಲ್ - ಹೀಗೆ ಅವರು ಎಲ್ಲಿದ್ದರೆ ಅಲ್ಲಿಗೆ, ಯಾರು ಆಶ್ರಯನೀಡಿದ್ದರೆ ಅವರ ಬಳಿಗೆ ಸಿ.ಐ.ಡಿ. ವಿಭಾಗದವರು ಬಂದು ಬಿಡುತ್ತಿದ್ದರು. ಅದೃಷ್ಟವಶಾತ್ ಯಾರಾದರೂ ಒಬ್ಬ ರಾಜಕೀಯ ಬಂದಿಗೆ ಎಲ್ಲಿಯಾದರೂ ಕೆಲಸ ಸಿಕ್ಕಿದರೆ ಅಲ್ಲಿಗೂ ಸಿ.ಐ.ಡಿ.ಗಳು ಬಂದು ಹೋಗುವುದು ಶುರುವಾಗಿಬಿಡುತ್ತಿತ್ತು. ಸರ್ಕಾರ ಅವರನ್ನು ಬಿಡುಗಡೆ ಮಾಡಿತ್ತು. ನಿಜ. ಆದರೆ, ಅವರು ಸುಖಶಾಂತಿಗಳಿಂದ ಬದುಕಲು ಸಾಧ್ಯವಾಗದಂತೆ ಎಲ್ಲ ಎಚ್ಚರವನ್ನೂ ವಹಿಸಿತ್ತು. ಕಾಂಗ್ರೆಸ್ ಪಕ್ಷಕ್ಕೂ ಅವರ ಬಗ್ಗೆ ಭಯವಿತ್ತು. ಗಾಂಧೀಜಿಯವರ ನಿಷ್ಠಾವಂತ ಅನುಯಾಯಿಗಳಲ್ಲಿ ಭಿನ್ನಾಭಿಪ್ರಾಯ ಇದ್ದೇ ಇತ್ತು. ಸ್ವರಾಜ್ಯ ಪಕ್ಷದವರೂ ಅವರನ್ನು ತಮ್ಮವರಾಗಿ ಭಾವಿಸುತ್ತಿರಲಿಲ್ಲ. ಅವಳು ಬಾಳು ನಿಜವಾಗಿಯೂ ದುರ್ಭರವಾಗಿತ್ತು.

ಶರತ್‌ಚಂದ್ರರು ಈ ದುರಂತವನ್ನು ಕಂಡರು. ಅವರ ಮನಸ್ಸು ತಳಮಳಗುಟ್ಟಿತು. ಕಲೆಗಾರನ ಹೃದಯಾಂತರಾಳದ ವಾಣಿ ಅವರನ್ನು ಎಚ್ಚರಿಸಿದಂತೆ ತೋರುತ್ತದೆ. ರಾಜಕೀಯ ಬಂದಿಗಳಿಗೆ ಅಂಟಿದ ಈ ಕಳಂಕವನ್ನು ತೊಡೆದು ಹಾಕಬೇಕೆಂದು ಅವರು ಪ್ರತಿಜ್ಞೆ ಮಾಡಿದರು. ಅವರು ತಮ್ಮ ಎಲ್ಲ ಜೊತೆಗಾರರನ್ನು, ಗೆಳೆಯರನ್ನು ಹಾಗೂ ಅನುಯಾಯಿಗಳನ್ನು ಒಂದೆಡೆ ಕರೆಸಿ, ಹೀಗೆಂದು ಹೇಳಿದರು: "ಬಿಡುಗಡೆಯಾಗಿರುವ ಎಲ್ಲ ರಾಜಕೀಯ ಬಂದಿಗಳಿಗೆ ಹಾವಡಾದಲ್ಲಿ ಅಭಿನಂದನೆಯನ್ನು ಸಲ್ಲಿಸಲಾಗುತ್ತದೆ. ಎಲ್ಲರೂ ಆಶ್ಚರ್ಯದಿಂದ ಕಣ್ಣರಳಿಸಿ ನೋಡುವಂಥ ವೈಭವಪೂರ್ಣ ಸಮಾರಂಭ ಅದಾಗಿರಬೇಕು. ನಾಡಿಗಾಗಿ ಯಾರು ತಮ್ಮ ಜೀವವನ್ನೇ ತೆಯ್ದಿದ್ದಾರೋ ಅವರ ವಿಷಯದಲ್ಲೇ ಇಂದು ನಾಡು ನಿರ್ಲಿಪ್ತವಾಗಿ ಬಿಟ್ಟಿದೆ. ಕಾಂಗ್ರೆಸ್ ಪಕ್ಷಕ್ಕಾಗಿ ದುಡಿಯುತ್ತ ಯಾರು ಬಂಧಿತರಾಗಿದ್ದರೋ ಅವರನ್ನೇಕೆ ಇಂದು ಕಾಂಗ್ರೆಸ್ ಪಕ್ಷ ಆತುಕೊಳ್ಳುತ್ತಿಲ್ಲ ? ಅವರನ್ನೇಕೆ ಅಭಿನಂದಿಸುತ್ತಿಲ್ಲ ? ಅವರು ಹಿಂಸಾಚಾರದಲ್ಲಿ ನಂಬಿಕೆಯನ್ನುಳ್ಳವರು ಎಂದು ಸರ್ಕಾರ ಪದೇ ಪದೇ ಹೇಳುತ್ತಿದೆ. ಇಂದು ಸರ್ಕಾರವೇ ನಮ್ಮ 'ಕಾನ್ಷನ್ಸ್-ಕೀಪರ್' ಆಗಿ ಬಿಟ್ಟಿದೆಯೇನು ? ನಮ್ಮ ನೀತಿ-ಬುದ್ಧಿಗಳೆಲ್ಲ ಸರ್ಕಾರದ ನೀತಿಬುದ್ಧಿಗಳಂತಾಗಿ ಬಿಟ್ಟಿವೆಯೇನು ? ಖಂಡಿತ ವಾಗಿಯೂ ಇಲ್ಲ. ನಾವು ಮುಕ್ತಹೃದಯದಿಂದ ಅವರನ್ನು ಸ್ವಾಗತಿಸಬೇಕು; ಅವರಿಗೆ ಅಭಿನಂದನೆಗಳನ್ನು ಸಲ್ಲಿಸಬೇಕು; ಪ್ರದೇಶ ಕಾಂಗ್ರೆಸ್ ಸಮಿತಿಯೇ ಈ ಕೆಲಸವನ್ನು ಮಾಡಬೇಕಾಗಿತ್ತು. ಆದರೆ, ಹಾಗೆ ಆಗದೆ ಇದ್ದರಿಂದ, ನಾವೇ ಮೊದಲು ಈ ಕೆಲಸವನ್ನು ಮಾಡೋಣ. ನೀವು ಇದಕ್ಕೆ ಏರ್ಪಾಟುಮಾಡಿ."

ಆ ಏರ್ಪಾಟು ಆಯಿತು. ಹಾವಡಾ ಕಾಂಗ್ರೆಸ್ ಸಮಿತಿಯ ವತಿಯಿಂದ, ಶರತ್‌ಚಂದ್ರ ಚಟ್ಟೋಪಾಧ್ಯಾಯರ ಅಧ್ಯಕ್ಷತೆಯಲ್ಲಿ ಬಿಡುಗಡೆ ಹೊಂದಿರುವ ಎಲ್ಲ ರಾಜಕೀಯ ಬಂದಿಗಳನ್ನೂ ಅಭಿನಂದಿಸಲಾಗುತ್ತದೆಂಬ ಸುದ್ದಿ ಎಲ್ಲ ಕಡೆಗಳಲ್ಲೂ ಹಬ್ಬಿತು. ಅವರಿಗೆ ಸ್ವತಃ ಸಭಾಕಂಪನವಿತ್ತು. ಆದರೆ, ಸವಾಲನ್ನು ಸ್ವೀಕರಿಸಿ ಅವರ ಚೇತನ ಗರಿಗಟ್ಟಿದಂತೆ ತೋರುತ್ತಿತ್ತು. ಹಾವಡಾ ಪುರಸಭೆಯ ಸಭಾಂಗಣದಲ್ಲಿ ಸ್ವತಃ ಅವರೇ ರಾಜಕೀಯ ಬಂದಿಗಳನ್ನು ಅಭಿನಂದಿಸಿ ಮಾತನಾಡಿದರು ಹಾಗೂ ಬಿನ್ನವತ್ತಳೆಯನ್ನು ಓದಿದರು. ಎಳ್ಳುಕಾಳನ್ನು ಹಾಕಲೂ ಎಡೆಯಿಲ್ಲದಂತೆ ಆ ಸಭಾಂಗಣ ಕಿಕ್ಕಿರಿದು ತುಂಬಿತ್ತು[1]. ಹಾರ, ಚಂದನ ಮೊದಲಾದುವುಗಳೊಡನೆ ರಾಜಕೀಯ ಬಂದಿಗಳನ್ನು ಹರ್ಷೋಲ್ಲಾಸಗಳಿಂದ ಸ್ವಾಗತಿಸಲಾಯಿತು. ಅಲ್ಲಿಯ ತನಕ ಉಪೇಕ್ಷಿತರಾಗಿದ್ದವರು ಹಾಗೂ ಜನರ ಭಯದ ವಸ್ತುವಾಗಿದ್ದವರು ಈಗ ಪೂಜ್ಯರೂ ಪ್ರಿಯರೂ ಆಗಿಬಿಟ್ಟರು.

ಅದೊಂದು ಸಾಮಾನ್ಯ ಸಭೆಯೇ ಆಗಿದ್ದರೂ, ಅದರ ಪ್ರಭಾವ ಅಸಾಮಾನ್ಯವಾದುದಾಗಿತ್ತು. ಸರ್ಕಾರವನ್ನು ಕಂಡರೆ ಹೆದರಿಕೊಳ್ಳುತ್ತಿದ್ದಂಥವರಿಗೆ ಹಾಗೂ ಗಾಂಧೀಜಿಯವರ ನಿಷ್ಠಾವಂತ ಅನುಯಾಯಿಗಳಾಗಿದ್ದುದರಿಂದ ಹಿಂಸಾಚಾರವನ್ನು ಖಂಡಿಸುವ ಯಾವುದೇ ಅವಕಾಶವನ್ನು ಕಳೆದುಕೊಳ್ಳಬಯಸದೆ ಇದ್ದಂಥವರಿಗೆ ಇದೊಂದು ಸವಾಲಾಗಿತ್ತು. ಬಹುಮಟ್ಟಿಗೆ ತಂತಮ್ಮ ವಿಚಾರಗಳಲ್ಲಿಯೇ ಯಾವಾಗಲೂ ಮುಳುಗಿರುತ್ತಿದ್ದಂಥ ಶ್ರೀಮಂತರನ್ನೊಳಗೊಂಡಿದ್ದ ಸ್ವರಾಜ್ಯಪಕ್ಷದವರಿಗೂ ಇದೊಂದು ಸವಾಲಾಗಿತ್ತು. ಗದ್ಗದ ಧ್ವನಿಯಲ್ಲಿ ಅಂದು ಶರತ್‌ಚಂದ್ರರು ಹೀಗೆಂದು ಘೋಷಿಸಿದರು: "ನಾಡಿಗಾಗಿ ಯಾರು ತಮ್ಮ ಬಾಳನ್ನು, ತಮ್ಮ ಯೌವನವನ್ನು, ತಮ್ಮ ಸರ್ವಸ್ವವನ್ನು ಬಲಿಗೊಟ್ಟಿರುತ್ತಾರೋ ಅವರೇ ನಾಡಿನ ಬಿಡುಗಡೆಯ ಹರಿಕಾರರಾಗುತ್ತಾರೆ. ಸರ್ಕಾರ ಇವರನ್ನು ಕಂಡರೆ ಹೆದರಿಕೊಳ್ಳುತ್ತದೆ. ಇದಕ್ಕೆ ಕಾರಣವೇನೆಂಬುದು ಸುಲಭವಾಗಿ ಅರ್ಥವಾಗುತ್ತದೆ. ಇವರ ತಪಸ್ಸಿನಲ್ಲಿಯೇ ಅವರ ವಿನಾಶದ ಮಂತ್ರ ರೂಪುಗೊಳ್ಳುತ್ತಿರುವುದೇ ಇದಕ್ಕೆ ಕಾರಣ. ಸರ್ಕಾರ ಸಾವಿರ ಪ್ರಯತ್ನಗಳನ್ನು ನಡೆಸಿದರೂ, ಇವರನ್ನು ನಾಶಮಾಡಲಾರದು. ಇವರ ಮನಸ್ಸಿನ ಅಪರಾಜಿತ ಶಕ್ತಿಯನ್ನು, ಇವರ ಹೃದಯಾಂತರಾಳದಲ್ಲಿ ರೂಪುಗೊಂಡಿರುವ ಬಿಡುಗಡೆಯ ಕನಸನ್ನು ಅದು ನಾಶಮಾಡಲಾರದು. ಇವರೆಲ್ಲ ಚಿರತರುಣರು, ಚಿರಕ್ಷುಬ್ಧರು ಹಾಗೂ ಚಿರಂಜೀವಿಗಳು. ನಿಮಗೆ ಇದಕ್ಕಿಂತಲೂ ದೊಡ್ಡ ಜೀವಂತ ಆದರ್ಶ ಇನ್ನೆಲ್ಲಿಯೂ ಕಾಣದೊರೆಯುವುದಿಲ್ಲ; ಇವರಿಗಿಂತಲೂ ಹೆಚ್ಚಾಗಿ ನಮ್ಮವರಾಗುವಂಥವರು ಯಾರೂ ಇಲ್ಲ ಎಂದು ನಾನು ನಮ್ಮ ತರುಣರಿಗೆ ಹೇಳಬಯಸುತ್ತೇನೆ."

ಬಂಗಾಳದ ರಾಜಕೀಯ ಪರಿಸ್ಥಿತಿಯ ಚಕ್ರ ಅಂದಿನಿಂದ ಮತ್ತೆ ತಿರುಗತೊಡಗಿತು. ಮುಚ್ಚಲಾಗಿದ್ದ ಭಾಗೀರಥಿಯ ಅಣೆಕಟ್ಟಿನ ತೂಬನ್ನು ತೆರೆದಂತಾಯಿತು. ಬಂಗಾಳದ ಯುವಕರ ಹೃದಯ ಚಿನ್ನದ ಕಟ್ಟಿನ ಮಂತ್ರದಂಡದ ಸ್ಪರ್ಶದಿಂದ ಎಚ್ಚತ್ತಂತೆ ಆಯಿತು. ಏವರು ಹಿರಿಯರು ಅವರ ಮನಸ್ಸಿನಿಂದ ದೂರವಾದರು; ಚರಖಾ ಮತ್ತು

1. ಸಪ್ಟಂಬರ್ 1928.

ತಕಲಿಯ ಭಕ್ತರಾಗಿದ್ದ ಮುಖಂಡರು ದೂರವಾದರು; ಎಲ್ಲ ಕಡೆಗಳಲ್ಲೂ ರಾಜಕೀಯ ಬಂದಿಗಳನ್ನು ಗೌರವಿಸುವ ಕಾರ್ಯ ಮೊದಲಿಟ್ಟಿತು. ಯಾರಾದರೊಬ್ಬ ರಾಜಕೀಯ ಬಂದಿಯನ್ನು ಅಧ್ಯಕ್ಷರನ್ನಾಗಿ ಮಾಡಲು ಜಿಲ್ಲಾ ಸಮ್ಮೇಳನಗಳ ಹಾಗೂ ಯುವಕ ಸಮ್ಮೇಳನಗಳ ಕಾರ್ಯಕರ್ತರು ಪರಸ್ಪರ ಸ್ಪರ್ಧಿಸತೊಡಗಿದರು. ಬಿಡುಗಡೆ ಹೊಂದಿದ್ದ ರಾಜಕೀಯ ಬಂದಿಗಳು ಈ ಎಲ್ಲ ಸಮ್ಮೇಳನಗಳಲ್ಲಿ ಸ್ವಾತಂತ್ರ್ಯದ ಅಗ್ನಿಮಯೀವಾಣಿಯ, ದೇಶದ ಬಿಡುಗಡೆಗಾಗಿ ಬಾಳನ್ನು ಬಲಿಗೊಡುವ ಹಾಗೂ ಸರ್ವಸ್ವವನ್ನೂ ಅರ್ಪಿಸುವ ಆದರ್ಶವಾದವನ್ನು ಪ್ರಚಾರ ಮಾಡತೊಡಗಿದರು. ಕ್ರಾಂತಿಕಾರಿ ಬಂಗಾಳ ಮತ್ತೊಮ್ಮೆ ಚಿರಂತನ ಪ್ರಾಣಶಕ್ತಿಯನ್ನು ಪಡೆದು ಎಚ್ಚರಗೊಂಡಿತು. ಅನೇಕ ನವಯುವಕರು ಪ್ರಾಣವನ್ನೇ ಪಣವಾಗಿಟ್ಟು ಆಂಗ್ಲ ಅಧಿಕಾರಿಗಳ ಮೇಲೆ ಗುಂಡು ಹಾರಿಸತೊಡಗಿದರು. ಚಿತ್ತಗಾಂಗ್‌ನಲ್ಲಿ ಅವರು ಆಂಗ್ಲರ ಆಯುಧಾಗಾರವನ್ನು ಆಕ್ರಮಿಸಿಕೊಂಡರು. ಸ್ವಾತಂತ್ರ್ಯದ ಈ ನಾಂದೀಗೀತದಲ್ಲಿ ನಾರಿಯರು ಹೇಗೆ ಹಿಂದುಳಿದಾರು ? ಕಲ್ಕತ್ತಾ ವಿಶ್ವವಿದ್ಯಾಲಯದ ಘಟಕೋತ್ಸವ ಸಮಾರಂಭದಲ್ಲಿ ಬೀನಾ ದಾಸ್ ಎಂಬಾಕೆ ಸ್ವತಃ ವೈಸ್‌ರಾಯ್ ಅವರ ಮೇಲೆ ಗುಂಡು ಹಾರಿಸಿದಳು. ಎಲ್ಲ ಕಡೆಯೂ ಅಗ್ನಿಲೀಲೆ ಆರಂಭಗೊಂಡಿತು. ಭಯದಿಂದ ಆಂಗ್ಲರ ಪ್ರಾಣ ಕಂಪಿಸತೊಡಗಿತು. ಶರತ್‌ಚಂದ್ರರು ಹಿಂಸಾಚಾರದ ಪಕ್ಷಪಾತಿಗಳೇನೂ ಆಗಿರಲಿಲ್ಲ. ಆದರೆ, ನಾಡಿನ ಬಿಡುಗಡೆಯ ಹೋರಾಟ ಹಿಂಸೆ-ಅಹಿಂಸೆಯ ಪ್ರಶ್ನೆಯ ಆಧಾರದ ಮೇಲೆ ಇತ್ಯರ್ಥವಾಗುವುದಿಲ್ಲ ಎಂಬುದು ಅವರ ನಿಲುವಾಗಿತ್ತು.

ಈ ದಿನಗಳಲ್ಲಿ ಕಾಂಗ್ರೆಸ್ಸಿನ ಸ್ಥಿತಿ ತುಂಬ ಚೆನ್ನಾಗಿಯೇನೂ ಇರಲಿಲ್ಲ. 1928 ಕೊನೆಯಲ್ಲಿ ಪಂಡಿತ್ ಮೋತೀಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನ ಕಲ್ಕತ್ತೆಯಲ್ಲಿ ನಡೆಯಿತು. ಈ ಅಧಿವೇಶನದಲ್ಲಿ ಕಾಂಗ್ರೆಸ್ ಪಕ್ಷ ಸರ್ವಪಕ್ಷ ಸಮಿತಿಯ 'ನೆಹರೂ ಕಮಿಟಿ'ಯ ವರದಿಯಲ್ಲಿ ಶಿಫಾರಸು ಮಾಡಲಾಗಿದ್ದ ಆಡಳಿತ ವಿಧಾನದ ಬಗೆಗಿನ ವ್ಯವಸ್ಥೆಯನ್ನು ಅಂಗೀಕರಿಸುತ್ತ ಹೀಗೆಂದು ಹೇಳಿತು: "ಬ್ರಿಟಿಷ್ ಪಾರ್ಲಿಮೆಂಟ್ 31 ಡಿಸೆಂಬರ್ 1929ರ ಒಳಗಾಗಿ ಅಥವಾ ಅದಕ್ಕೂ ಮುಂಚೆ ಈ ವಿಧಾನವನ್ನು ಯಾವುದೇ ಬದಲಾವಣೆ ಇಲ್ಲದೆ ಅಂಗೀಕರಿಸಿದರೆ, ರಾಜಕೀಯ ಸ್ಥಿತಿಯಲ್ಲಿ ಯಾವುದೇ ವಿಶೇಷ ಬದಲಾವಣೆ ಮಾಡುವುದಿಲ್ಲವೆಂಬ ಶರತ್ತಿಗೆ ಒಳಪಟ್ಟು, ಕಾಂಗ್ರೆಸ್ ಪಕ್ಷವೂ ಈ ವಿಧಾನವನ್ನು ಅಂಗೀಕರಿಸುತ್ತದೆ. ಆದರೆ, ಹೀಗಾಗದಿದ್ದರೆ ಮತ್ತು ಬ್ರಿಟಿಷ್ ಪಾರ್ಲಿಮೆಂಟ್ ಈ ವಿಧಾನವನ್ನು ಒಪ್ಪದೆ ಹೋದರೆ, ಕರನಿರಾಕರಣೆ ಹಾಗೂ ಮುಂದೆ ನಿಶ್ಚಯಿಸಲಿರುವ ಇತರ ಮಾರ್ಗಗಳ ಮೂಲಕ ಅಹಿಂಸಾತ್ಮಕ ಅಸಹಕಾರ ಚಳವಳಿಯನ್ನು ಸಂಘಟಿಸುವಂತೆ ಕಾಂಗ್ರೆಸ್ ಪಕ್ಷ ದೇಶಕ್ಕೆ ಸಲಹೆ ನೀಡುತ್ತಿದೆ. ಈ ಬಗೆಯ ಕಾರ್ಯ ಪ್ರಸ್ತಾವಕ್ಕೆ ವಿರುದ್ಧವಾಗಿಲ್ಲದಿದ್ದರೆ, ಕಾಂಗ್ರೆಸ್ ಪಕ್ಷದ ಹೆಸರಿನಲ್ಲಿ ಪೂರ್ಣ ಸ್ವಾತಂತ್ರ್ಯದ ಪ್ರಚಾರವನ್ನು ಕೈಗೊಳ್ಳುವುದಕ್ಕೆ ಈ ಪ್ರಸ್ತಾವ ಯಾವುದೇ ಅಡ್ಡಿಯನ್ನುಂಟುಮಾಡುವುದಿಲ್ಲ."

ಪಂಡಿತ್ ಜವಾಹರಲಾಲ್ ನೆಹರೂ ಮತ್ತು ಸುಭಾಷ್‌ಚಂದ್ರ ಬೋಸ್ ಅವರು

ಪೂರ್ಣ ಸ್ವಾತಂತ್ರ್ಯದ ಪಕ್ಷಪಾತಿಗಳಾಗಿದ್ದರು. ಅವರು ಈ ಪ್ರಸ್ತಾವಕ್ಕೆ ತಿದ್ದುಪಡಿಗಳನ್ನು ಮಂಡಿಸಿದರು. ಆದರೆ, ಅವು ಅಂಗೀಕೃತವಾಗಲಿಲ್ಲ. ಆಗ ವಿರೋಧಿಗಳು 'ಸ್ವಾತಂತ್ರ್ಯ ಸಂಘ'ವೆಂಬ ಹೆಸರಿನಲ್ಲಿ ಹೊಸ ಪಕ್ಷವನ್ನು ರಚಿಸಿದರು. ಬಂಗಾಳ ಈ ಪಕ್ಷವನ್ನು ಸೇರಲಿಲ್ಲ. ಸುಭಾಷ ಚಂದ್ರಬೋಸ್ ಅವರ ನೇತೃತ್ವದಲ್ಲಿ ಅದು ಪ್ರತ್ಯೇಕ ಪಕ್ಷವನ್ನು ರಚಿಸಿಕೊಂಡಿತು. ಈ ದಿನಗಳಲ್ಲಿ ಬಂಗಾಳದ ಕಾಂಗ್ರೆಸ್ಸಿನಲ್ಲಿಯೂ ಎರಡು ತಂಡಗಳಿದ್ದುವು. ಕಲ್ಕತ್ತಾ ಅಧಿವೇಶನದ ಸ್ವಾಗತಾಧ್ಯಕ್ಷರಾಗಿದ್ದ ಯಾಮಿನೀಮೋಹನ ಸೇನ್‌ಗುಪ್ತ ಅವರು ಒಂದು ತಂಡದ ಮುಖಂಡರಾಗಿದ್ದರು. ಅವರ ಸಮರ್ಥಕರಲ್ಲಿ ಅನುಶೀಲನ ಸಮಿತಿ, ಗೌರಾಂಗ ಪ್ರೆಸ್ ಮತ್ತು ಸೋಷಿಯಲಿಸ್ಟ್ ತಂಡದವರು ಪ್ರಮುಖರಾಗಿದ್ದರು. ಐವರು ಹಿರಿಯರ ತಂಡ ಇವರಿಗೆ ವಿರುದ್ಧವಾಗಿತ್ತು. ವಿಧಾನ ಚಂದ್ರರಾಯ್, ನಲಿನೀರಂಜನ ಸರ್ಕಾರ್, ನಿರ್ಮಲಚಂದ್ರ 'ಚಂದ್ರ', ತುಲಸೀಚಂದ್ ಗೋಸ್ವಾಮಿ ಮತ್ತು ಶರತ್‌ಚಂದ್ರ ಬೋಸ್ ಅವರೇ ಆ ಐವರು ಹಿರಿಯರಾಗಿದ್ದರು. ಸುಭಾಷಚಂದ್ರ ಬೋಸ್ ಅವರು ಕಲ್ಕತ್ತಾ ಅಧಿವೇಶನದ ಜಿ.ಓ.ಸಿ. (ಜನರಲ್ ಆಫೀಸರ್ ಕಮ್ಯಾಂಡಿಂಗ್) ಆಗಿದ್ದರು. ಮುಂದೆ ಅವರೂ ಈ ತಂಡವನ್ನು ಸೇರಿಕೊಂಡರು ಹಾಗೂ ಅವರ ನಾಯಕರಾದರು. ಸರಸ್ವತೀ ಪ್ರೆಸ್ ಮತ್ತು ಚಿತ್ತಗಾಂವ್ ತಂಡದ ನಾಯಕರೂ ಇವರೊಡನೆ ಸೇರಿಕೊಂಡಿದ್ದರು. ಇದರ ಜೊತೆಗೆ ಕಮ್ಯೂನಿಸ್ಟ್ ಪಕ್ಷದ ಪೆಸೆಂಟ್ಸ್ ಅಂಡ್ ವರ್ಕರ್ಸ್ ಸೊಸೈಟಿಯೂ ಸಾಕಷ್ಟು ಎಚ್ಚರದಿಂದಿತ್ತು. ಅವರೆಲ್ಲ ಪರಸ್ಪರ ಉಗ್ರ ವಿರೋಧಿಗಳಾಗಿದ್ದರು. ಉತ್ತರ ಕಲ್ಕತ್ತಾದಲ್ಲಿ ನಡೆದ ಜಿಲ್ಲಾ ರಾಷ್ಟ್ರೀಯ ಸಮ್ಮೇಳನದ ಸಭಾಧ್ಯಕ್ಷರ ಸ್ಥಾನದಿಂದ ಮಾತನಾಡುತ್ತ ಉಪೇಂದ್ರನಾಥ ಬಂದೋಪಾಧ್ಯಾಯ ಅವರು ಆ ಕಾಲದ ಅತ್ಯಂತ ಸಮರ್ಪಕ ವಿಶ್ಲೇಷಣೆಯನ್ನೇ ಮುಂದಿರಿಸಿದ್ದರು. ಆಗ ಅವರು ಹೀಗೆಂದಿದ್ದರು: "ಇಂದು ಬಂಗಾಳದಲ್ಲಿ ಯಾರ ಪ್ರಾಣವೂ ಅವರವರ ಕೈಯಲ್ಲಿರುವಂಥ ಅದೃಷ್ಟದ ಸ್ಥಿತಿ ಇಲ್ಲವಾಗಿದೆ. ಎಲ್ಲರೂ ಎಲ್ಲರನ್ನೂ 'ಕ್ಯಾಪ್ಚರ್' ಮಾಡಲು ಹೊರಟಿದ್ದಾರೆ. ಹಿರಿಯರು (ವಯಸ್ಸಿನಿಂದ ಹಿರಿಯರಾದ ಕಾರ್ಯಕರ್ತರು) ಹುಡುಗರನ್ನು (ವಯಸ್ಸಿನಿಂದ ಕಿರಿಯರಾದ ಕಾರ್ಯಕರ್ತರನ್ನು) 'ಕ್ಯಾಪ್ಚರ್' ಮಾಡಲು ಹೊರಟಿದ್ದರೆ, ಹುಡುಗರು ಹಿರಿಯರನ್ನು 'ಕ್ಯಾಪ್ಚರ್' ಮಾಡಲು ಹೊರಟಿದ್ದಾರೆ. ನಾಯಕರು ಅನುಯಾಯಿಗಳನ್ನು 'ಕ್ಯಾಪ್ಚರ್' ಮಾಡಲು ಹೊರಟಿದ್ದರೆ, ಅನುಯಾಯಿಗಳು ನಾಯಕರನ್ನು 'ಕ್ಯಾಪ್ಚರ್' ಮಾಡಲು ಹೊರಟಿದ್ದಾರೆ. 'ಕ್ಯಾಪ್ಚರ್ ಮಾಡಿ'- 'ಕ್ಯಾಪ್ಚರ್ ಮಾಡಿ', 'ಆಕ್ರಮಿಸಿಕೊಳ್ಳಿ', 'ಆಕ್ರಮಿಸಿಕೊಳ್ಳಿ' ಎಂಬ ಗದ್ದಲವೇ ಎಲ್ಲ ಕಡೆಗಳಲ್ಲೂ ಕೇಳಿಬರುತ್ತಿದೆ."

ಇಂಥ ವಿಷಪೂರ್ಣ ವಾತಾವರಣದಲ್ಲಿ ಶರತ್‌ಚಂದ್ರರ ಸ್ಥಿತಿ ತುಂಬ ವಿಚಿತ್ರವಾಗಿತ್ತು. ಅವರು ಪ್ರತ್ಯಕ್ಷವಾಗಿ ಯಾವುದೇ ತಂಡದ ನಾಯಕರಾಗಿರಲಿಲ್ಲ; ಅಥವಾ ಯಾವುದೇ ಒಂದು ವಿಶಿಷ್ಟ ತಂಡದೊಡನೆ ಅವರು ಸಂಬಂಧವನ್ನು ಹೊಂದಿರಲಿಲ್ಲ. ಎರಡೂ ತಂಡಗಳಲ್ಲಿ ಅವರಿಗೆ ಬೇಕಾಗದವರಿದ್ದರು. ಅವರ ಬಳಿ ಬಂದವರೆಲ್ಲ ಒಂದೇ ರೀತಿಯಲ್ಲಿ ಅವರಿಂದ ಪ್ರೀತ್ಯಾದರಗಳನ್ನು ಪಡೆಯುತ್ತಿದ್ದರು. ಆದರೆ, ದೇಶಬಂಧು ಅವರಿಂದಾಗಿ ಅವರು ಕಾಂಗ್ರೆಸ್ ಪಕ್ಷದ ಸಕ್ರಿಯ

ಕಾರ್ಯಕರ್ತರಾಗಿದ್ದರು. ಸುಭಾಷ್‌ಚಂದ್ರ ಬೋಸರು ದೇಶಬಂಧು ಅವರ ಪ್ರಿಯ ಶಿಷ್ಯರಾಗಿದ್ದರು. ಶರತ್‌ಚಂದ್ರರೂ ಅವರನ್ನು ಅಂತರ್ಯದಲ್ಲಿ ಪ್ರೀತಿಸುತ್ತಿದ್ದರು. "ಎಲ್ಲವನ್ನೂ ಬಿಡಬಲ್ಲೆ; ಆದರೆ, ಸುಭಾಷ್‌ಚಂದ್ರರನ್ನು ಮಾತ್ರ ಬಿಡಲಾರೆ" ಎಂದು ಅವರು ಹೇಳುತ್ತಿದ್ದರು.

ಶಚಿನಂದನ್ ಅವರು ಹೀಗೆ ಬರೆದಿದ್ದಾರೆ: "ಆ ಸಲ ಹಾವಡಾ ಜಿಲ್ಲೆಯ ಕಾರ್ಯಕರ್ತರ ಸಮ್ಮೇಳನವನ್ನು ಶಿವಪುರದಲ್ಲಿ ನಡೆಸಬೇಕೆಂದು ನಿಶ್ಚಯಿಸಲಾಗಿತ್ತು. ಅವರ ಪ್ರಿಯಶಿಷ್ಯರೂ, ಒಡನಾಡಿಗಳೂ ಆಗಿದ್ದ ಪ್ರಬೋಧ ಬಸು, ವಿಜಯ ಭಟ್ಟಾಚಾರ್ಯ, ಕಾನಾಯಿ ಗಂಗೂಲಿ, ಅಗಮದತ್ತ, ಗುರುದಾಸ ದತ್ತ, ಜೀವನ್ ಮೈತ್ರೀ, ಗುರುಪಾದ ಮುಖೋಪಾಧ್ಯಾಯ, ವಿಪಿನ ಗಾಂಗುಲಿ, ಭೂಪೇಂದ್ರ ದತ್ತ, ಅಧ್ಯಾಪಕ ಜ್ಯೋತಿಷ ಘೋಷ್ ಮೊದಲಾದವರು ಈ ಸಮ್ಮೇಳನದ ಪದಾಧಿಕಾರಿಗಳಾಗಿದ್ದರು. ಗುಂಪುಗುಳಿತನದಿಂದಾಗಿ ಸುಭಾಷ್‌ಚಂದ್ರ ಬೋಸ್ ಅವರನ್ನು ಈ ಸಮ್ಮೇಳನಕ್ಕೆ ಆಹ್ವಾನಿಸಿರಲಿಲ್ಲ. ಅವರು ಶರತ್‌ಚಂದ್ರರನ್ನು ಕರೆಯಲು ಬಂದಾಗ, ಅವರೆಂದರು: 'ನಾನು ಬರುವುದಿಲ್ಲ.'

"'ಯಾಕೆ ಬರುವುದಿಲ್ಲ? ಇದು ಹಾವಡಾ ಜಿಲ್ಲೆಯ ಕಾರ್ಯಕರ್ತರ ಸಮ್ಮೇಳನ!'

"'ಅಲ್ಲಿಗೆ ಸುಭಾಷಚಂದ್ರರನ್ನು ಆಹ್ವಾನಿಸಿಲ್ಲ. ಶಿವನೇ ಇಲ್ಲದ ಯಜ್ಞಕ್ಕೆ ನಾನು ಬರಲಾರೆ.'

"ಒಬ್ಬಾತ ಕೋಪಗೊಂಡು ಹೇಳಿದ: 'ನಿಮ್ಮ ಸುಭಾಷಚಂದ್ರ ಶಿವನಲ್ಲ, ಭೂತ!'

"ಶರತ್‌ಚಂದ್ರರು ಹೇಳಿದರು: 'ಭೂತ ಅಲ್ಲಪ್ಪ, ಭೂತ ಅಲ್ಲಪ್ಪ. ಭೂತನಾಥ ಎಂದು ಹೇಳು.'

"ಅನೇಕರು ಒಟ್ಟಿಗೆ ಹೇಳಿದರು: 'ಅವರೇ ನಿಮಗೆ ಸರ್ವಸ್ವ; ನಾವು ನಿಮಗೆ ಏನೇನೂ ಅಲ್ಲ, ಅಲ್ಲವೆ?'

"ತುಂಬಿ ಬಂದ ಕಂಠದಿಂದ ಅವರೆಂದರು: 'ನೀವು ನನಗೆ ಏನೇನೋ ಆಗಬೇಕು. ಏನೇನು ಆಗಬೇಕೆಂಬುದರ ಆಳವನ್ನೇ ಕಂಡು ಹಿಡಿಯಲು ಸಾಧ್ಯವಿಲ್ಲ. ಆದರೂ ನಾನು ಬರಲಾರೆ.' "

ಅವರು ಹೋಗಲಿಲ್ಲ. ಅವರನ್ನು ಕರೆಯಲು ಹೋಗಿದ್ದವರು ಸಹ ಅವರಿಗೆ ಬೇಕಾದವರೇ ಆಗಿದ್ದರು. ಯಾರನ್ನು ಕರೆದಿರಲಿಲ್ಲವೋ ಅವರೂ ಅವರಿಗೆ ಬೇಕಾದವರೇ ಆಗಿದ್ದರು. ಇಬ್ಬರು ಮಕ್ಕಳ ಜಗಳದಲ್ಲಿ ತಾಯಿ ದುಃಖಿತಳಾಗುವಂತೆ, ಅಂದು ಶರತ್‌ಚಂದ್ರರೂ ಅಂತೆಯೇ ದುಃಖಿತರಾಗಿದ್ದರು. ಸುಭಾಷ್‌ಚಂದ್ರರು ಅವರೊಡನೆ ಹೀಗೆಂದಿದ್ದರು: "ನೀವು ಕೆಲವು ದಿವಸಗಳ ಮಟ್ಟಿಗಾದರೂ ಕಲ್ಕತ್ತೆಯಲ್ಲಿ ತಂಗಿದ್ದು, ಕಾಂಗ್ರೆಸ್‌ನಲ್ಲಿ ಹುಟ್ಟಿಕೊಂಡಿರುವ ಗುಂಪುಗಾರಿಕೆಯನ್ನು ತೊಡೆದು ಹಾಕಿ ಬಿಡಿ." ಆದರೆ, ಈ ಕೆಲಸ ಅವರಿಂದ ಆಗುವಂಥದಾಗಿರಲಿಲ್ಲ. ಸಾಹಿತಿಯಾದವನು ರಾಜಕೀಯದ ಪೆಟ್ಟುಗಳನ್ನು ಸಹಿಸಿಕೊಳ್ಳಲಾರ. ಕೆಲವು ವರ್ಷಗಳ ಬಳಿಕ,[1] ತಮ್ಮ ಅಪೂರ್ಣ ಕಾದಂಬರಿಯಾದ 'ಆಗಾಮೀ ಕಲ್‌'ನಲ್ಲಿ,

1. 'ವಿಚಿತ್ರಾ', ಚೈತ್ರ 1342 (ಮಾರ್ಚ್-ಏಪ್ರಿಲ್ 1935).

ಅದರ ಒಂದು ಪ್ರಮುಖ ಪಾತ್ರವಾದ ಏಕ್‌ಕೌಡೀಯನ್ನು ಪರಿಚಯಿಸಿಕೊಡುವಾಗ, ಅವರು ಈ ಗುಂಪುಗುಳಿತನವನ್ನೇ ವರ್ಣಿಸುತ್ತಿರುವಂತೆ ತೋರುತ್ತದೆ: " 'ವಂದೇ ಮಾತರಮ್' ಗೀತೆಯ ವಿರಾಟ್ ಹಾಗೂ ಕಠೋರ ಧ್ವನಿ ಅವನನ್ನು ಒಮ್ಮೆಗೆ ಕೋಣೆಯಿಂದ ಹೊರಕ್ಕೆ ಎಳೆದು ತಂದಿತು. ಇದಾದ ಮೇಲೆ ಜೈಲಿಗೆ ಹೋದ; ಗುಂಪುಗಾರಿಕೆಯ ಸುಳಿಗೆ ಸಿಕ್ಕು ಕಣ್ಣು-ಮೂಗು-ಬಾಯಲ್ಲೆಲ್ಲ ಕೆಸರು ಮುಕ್ಕಿದ; ದಿನಪತ್ರಿಕೆಗಳು, ವಾರಪತ್ರಿಕೆಗಳು ಹಾಗೂ ಹೆಂಡತಿ ಕೊಡಮಾಡಿದ ವಿವಿಧ ವಿಲಕ್ಷಣ ವಿಶೇಷಣಗಳ ಮಾಲೆಯನ್ನು ಶಿರೋಭೂಷಣವಾಗಿ ಧರಿಸಿದ. ಯಾರಿಗಾಗಿ ಇಷ್ಟೆಲ್ಲ ತ್ಯಾಗ-ತಪಸ್ಸುಗಳನ್ನು ಮಾಡಿದ್ದನೋ ಅವರೇ ಕೊನೆಯಲ್ಲಿ ಅವನನ್ನು ಕಳ್ಳನೆಂದು ಕರೆದು ತಮ್ಮ ಕೃತಜ್ಞತೆಯನ್ನು ಪ್ರದರ್ಶಿಸಿದಾಗ ಆ ಬಡಪಾಯಿಗೆ ಅಸಹ್ಯವಾಗಿ ತೋರಿತು. ರಾಜಕೀಯಕ್ಕೆ ತಿಲಾಂಜಲಿಯನ್ನಿತ್ತು ಏಕ್‌ಕೌಡಿ ಮತ್ತೆ ತನ್ನ ಗ್ರಂಥಾಲಯಕ್ಕೆ ಹಿಂದಿರುಗಿದ......"

ಶರತ್‌ಚಂದ್ರರು ತಮ್ಮ ಸಾಹಿತ್ಯದಿಂದಾಗಿಯೇ ಜನಪ್ರಿಯರಾಗಿದ್ದರು ಎಂದೇನೂ ಅಲ್ಲ. ತಮ್ಮ ರಾಜಕೀಯ ಧೋರಣೆಗಳಿಂದಾಗಿಯೂ ಅವರು ಕಮ್ಮಿ ಕೀರ್ತಿಯನ್ನೇನೂ ಗಳಿಸಿರಲಿಲ್ಲ. ಒಂದು ಮೊಕದ್ದಮೆಯಲ್ಲಿ 'ಕ್ರಾಂತಿ' ('ವಿಪ್ಲವ') ಎಂಬ ಶಬ್ದಕ್ಕೆ ಇರುವ ನಿಜವಾದ ಅರ್ಥವೇನು ಎಂಬ ಪ್ರಶ್ನೆ ಎದ್ದಿತು. ಆಗ ಒಬ್ಬಾತ ಇದರ ಅರ್ಥವನ್ನು ತಿಳಿಸುವುದಕ್ಕಾಗಿ ಶರತ್‌ಚಂದ್ರರನ್ನು ಸಾಕ್ಷಿಯ ರೂಪದಲ್ಲಿ ಕರೆಸಬಹುದು ಎಂಬ ಸಲಹೆಯನ್ನು ಕೊಟ್ಟ. ಆದರೆ ಸರ್ಕಾರಿ ವಕೀಲರಾಗಿದ್ದ ತಾರಕನಾಥ ಸಾಧು ಅವರು ಹಾಗೆ ಮಾಡದಂತೆ ತಡೆದರು. ಅವರಿಗೆ ಶರತ್‌ಚಂದ್ರರ ಬಗ್ಗೆ ತುಂಬ ಗೌರವವಿತ್ತು. ಅವರನ್ನು ಪಾಟೀಸವಾಲಿಗೆ ಒಳಪಡಿಸುವುದು ಅವರಿಗೆ ಸಂತೋಷದ ಸಂಗತಿಯಾಗುತ್ತಿರಲಿಲ್ಲ. ಹಾಗೆ ನೋಡಿದರೆ, ಶರತ್‌ಚಂದ್ರರು ಯಾರಿಗೂ ಹೆದರುವಂಥವರಾಗಿರಲಿಲ್ಲ. ಅಧಿಕಾರಿಗಳ ಎದುರಿನಲ್ಲಿಯೂ ಅವರು ತುಂಬ ನಿರ್ಭಯರಾಗಿಯೂ, ಅವಿಚಲರಾಗಿಯೂ ಇರುತ್ತಿದ್ದರು. ಒಮ್ಮೆ ಅವರಿಗೆ ಪರಿಚಿತರಾಗಿದ್ದ ಮ್ಯಾಜಿಸ್ಟ್ರೇಟರರೊಬ್ಬರ ಕಾಗದವನ್ನು ಹಿಡಿದುಕೊಂಡು ಒಬ್ಬ ಎಸ್.ಡಿ.ಓ. (ಸಬ್‌ಡಿವಿಜನಲ್ ಆಫೀಸರ್) ಅವರನ್ನು ಕಾಣಲು ಅವರ ಮನೆಗೆ ಬಂದ. ನಿವಾರಣ ಘೋಷಾಲನೆಂಬ ದಫೇದಾರ ಶರತ್‌ಚಂದ್ರರ ಮಹಾ ಅಭಿಮಾನಿಯಾಗಿದ್ದು, ಅವರ ನೆರೆಹೊರೆಯಲ್ಲಿಯೇ ವಾಸವಾಗಿದ್ದ. ಆತನನ್ನು ಕಂಡಕೂಡಲೇ ಎಸ್.ಡಿ.ಓ. ಸಾಹೇಬರು ಅಧಿಕಾರವಾಣಿಯಲ್ಲಿ ಹೇಳಿದರು: "ಏ ನಿವಾರಣ್, ಕಾಲು ತೊಳೆಯುಲು ನೀರು ತಾ."

ಈ ಮಾತನ್ನು ಕೇಳಿದೊಡನೆಯೇ ಶರತ್‌ಚಂದ್ರರಿಗೆ ಕೋಪಬಂತು. ಅವರು ಎಸ್.ಡಿ.ಓ.ನನ್ನು ಹೀಗೆಂದು ಕೇಳಿದರು: "ಹೀಗೆ ಮಾತನಾಡಲು ನಿಮಗೇನು ಹಕ್ಕಿದೆ? ಇದು ನನ್ನ ಮನೆ; ನಿಮ್ಮ ಕಛೇರಿ ಅಲ್ಲ. ಇಲ್ಲಿ ನಿವಾರಣ ಘೋಷಾಲರು ನನ್ನ ನೆರೆಮನೆಯ ಸಜ್ಜನರು; ನಿಮ್ಮ ಕಛೇರಿಯ ದಫೇದಾರರಲ್ಲ. ನೀವು ಹೀಗೆ ಹೇಳುವುದು ಅವರಿಗೆ ಅಪಮಾನ ಮಾಡಿದಂತೆ. ಅವರನ್ನು ಅಪಮಾನಿಸುವಂಥ ವ್ಯಕ್ತಿಗೆ ನನ್ನ ಮನೆಯಲ್ಲಿ ಇರಲು ಎಡೆಯಿಲ್ಲ. ನೀವು ಈ ಕ್ಷಣ ಇಲ್ಲಿಂದ ಹೊರಡಿ. ಹೋಗಿ ಸ್ವಾಮಿ, ನನ್ನ ವಿರುದ್ಧ ಏನು ಕ್ರಮ ತೆಗೆದುಕೊಳ್ಳಬಹುದೋ ತೆಗೆದುಕೊಳ್ಳಿ, ಹೋಗಿ."

ಅವರು ಮೇಲೆ ಹೋಗಲೆಂದು ತಿರುಗಿದರು. ಎಸ್.ಡಿ.ಓ. ಹತಪ್ರಭನಂತಾಗಿಬಿಟ್ಟ. ತನ್ನೊಡನೆ ಯಾರಾದರೂ ಹೀಗೆ ನಡೆದುಕೊಳ್ಳಬಹುದೆಂದು ಅವನು ಕನಸಿನಲ್ಲಿಯೂ ಊಹಿಸಿರಲಿಲ್ಲ. ಆದರೆ, ಅಂದು ಆತ ಅಲ್ಲಿಂದ ಹಾಗೆಯೇ ಹಿಂದಿರುಗಬೇಕಾಯಿತು.

ಪರಸ್ಪರ ಭಿನ್ನಾಭಿಪ್ರಾಯ ಮತ್ತು ಗುಂಪುಗುಳಿತನಗಳಿಂದಾಗಿ ಕಾಂಗ್ರೆಸ್ ಪಕ್ಷದವರು ತರ್ಕ-ವಿತರ್ಕಗಳಲ್ಲಿ ಸಿಲುಕಿಕೊಂಡಿದ್ದಾಗ, ಯುವಕರ ಸಮುದಾಯ ಹಿಂಸೆಯ ಹಾದಿಯನ್ನು ಹಿಡಿದು, ಪ್ರಾಣವನ್ನೇ ಪಣವಾಗಿ ಒಡ್ಡಲು ಮುಂದಾಗುತ್ತಿತ್ತು. ಈ ಪ್ರಾಣಾರ್ಪಣ ಶಕ್ತಿಯೇ ಅವರನ್ನು ಸೆಳೆಯುತ್ತಿತ್ತು. ಹೀಗಾಗಿ, ಅವರ ಸುತ್ತಲೂ ಯುವಕರ ಒಂದು ತಂಡ ಬಂದು ಸೇರಿತು. ಆ ಸಲ ಬಂಗಾಳದ ಪ್ರಾದೇಶಿಕ ಯುವಕ ಸಮ್ಮೇಳನದ ಅಧಿವೇಶನ ದಿನಾಜ್‌ಪುರದಲ್ಲಿ ನಡೆಯಿತು. ಅದಕ್ಕೆ ಶರತ್‌ಚಂದ್ರರನ್ನು ಅಧ್ಯಕ್ಷರನ್ನಾಗಿ ಆರಿಸಲಾಯಿತು. ತಮ್ಮ ಈ ಅಧ್ಯಕ್ಷ ಭಾಷಣದಲ್ಲಿ ಅವರು ಮಹಾತ್ಮ ಗಾಂಧೀಜಿಯವರ ವಿಚಾರಧಾರೆಯನ್ನು ವಿರೋಧಿಸಿದರು. "ಖಿಲಾಫತ್ (ಉತ್ತರಾಧಿಕಾರ) ಚಳವಳಿಯನ್ನು ಸ್ವರಾಜ್ಯ ಚಳವಳಿಯೊಂದಿಗೆ ಬೆರೆಸಬಾರದು. ಖಾದಿಯನ್ನು ತೊಡುವುದರಿಂದ ಮಾತ್ರವೇ ಸ್ವರಾಜ್ಯವನ್ನು ಸಾಧಿಸಲಾಗುವುದಿಲ್ಲ" ಎಂದು ಅವರು ಈ ಸಂದರ್ಭದಲ್ಲಿ ಹೇಳಿದ್ದರು.

ಮೊದಲಿನಿಂದಲೂ ಇದೇ ಅವರ ನಿಲುವಾಗಿತ್ತು. ಆದರೆ, ಅದು ಈಗ ನಿಚ್ಚಳವಾಗಿ ಮೊಳಗಿತು. ಯುವಕರಿಗೆ ತಮ್ಮ ನೇತಾರ ದೊರೆತಂತೆ ಆಗಿತ್ತು. ವಿದ್ಯಾವಂತ ಬಂಗಾಳೀ ಯುವಕರ ತಂಡೋಪತಂಡಗಳು ಪ್ರತಿದಿನವೂ ಅವರನ್ನು ಕಾಣಲು ಬರತೊಡಗಿದುವು. ಸಾಮ್ಯವಾದ'ದ ಧ್ವನಿ ಆ ದಿನಗಳಲ್ಲಿ ನಿಧಾನವಾಗಿ ಮೇಲೇಳುತ್ತಿತ್ತು. ಆ ಯುವಕರು ಬಂಡವಾಳಶಾಹಿ ಮತ್ತು ಜಮೀನುದಾರಿ ಪದ್ಧತಿಗಳ ಬಗ್ಗೆ ಇವರೊಡನೆ ವಿಚಾರ-ವಿನಿಮಯ ಮಾಡಿಕೊಳ್ಳುತ್ತಿದ್ದರು. ಜಮೀನುದಾರಿ ಪದ್ಧತಿ ಇವತ್ತಲ್ಲ ನಾಳೆ ಕೊನೆಯುಸಿರೆಳೆಯುತ್ತದೆ ಎಂಬುದು ಅವರ ನಂಬಿಕೆಯೇ ಆಗಿತ್ತು. ಈ ನಂಬಿಕೆಯೇ ಯುವಕರಿಗೆ ತ್ರಾಣವನ್ನು ನೀಡುತ್ತಿತ್ತು. ಹೀಗೆ ಆರಾಮಕುರ್ಚಿಯ ಮೇಲೆ ಒರಗಿಕೊಂಡು ಕುಳಿತೇ ಅವರು ನವಬಂಗಾಳವನ್ನು ಪ್ರಬುದ್ಧಗೊಳಿಸುತ್ತಿದ್ದರು. ಈ ಚರ್ಚೆಗಳ ಫಲವಾಗಿಯೇ ಸಮಾಜವಾದಿ ಪಕ್ಷದ ಸಂಘಟನೆಗೆ ಅಡಿಗಲ್ಲು ಹಾಕಿದಂತಾಯಿತು ಹಾಗೂ ಬಹುಬೇಗ ಕಾಂಗ್ರೆಸ್ ಪಕ್ಷದಲ್ಲಿಯೇ ಈ ಧ್ವನಿ ಮೊಳಗಿತು.

ಈ ಅವಧಿಯಲ್ಲಿಯೇ[1] ಹಾವಡಾ ಪುರಸಭಾ ಸಮಿತಿಯ ವಿರುದ್ಧವಾಗಿ ಪೌರಕಾರ್ಮಿಕರು ಹರತಾಳವನ್ನು ಆರಂಭಿಸಿದರು. ಶರತ್‌ಚಂದ್ರರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು ಹಾಗೂ ಪುರಸಭಾ ಸಮಿತಿಯಲ್ಲಿ ಕಾಂಗ್ರೆಸ್ ಪಕ್ಷವೇ ಬಹುಮತದಲ್ಲಿತ್ತು. ಅವರು ಶರತ್‌ಚಂದ್ರರಿಗೆ ಹೀಗೆಂದು ಹೇಳಿದರು: "ಹರತಾಳವನ್ನು ನಡೆಸುತ್ತಿರುವ ವ್ಯಕ್ತಿ ನಿಮ್ಮ ಶಿಷ್ಯ. ಹರತಾಳವನ್ನು ನಿಲ್ಲಿಸುವಂತೆ ನೀವು ಆತನಿಗೆ ಹೇಳಿ."

1. 1928ರಲ್ಲಿ.

ಶರತ್‌ಚಂದ್ರರು ಹೇಳಿದರು: "ಇಲ್ಲ, ನಾನು ಆತನಿಗೆ ಏನೂ ಹೇಳುವುದಿಲ್ಲ. ತಪ್ಪು ಅವರದಲ್ಲ. ನೀವು ಬೇಗ ಒಂದು ಒಪ್ಪಂದಕ್ಕೆ ಬನ್ನಿ. ಇಲ್ಲವಾದರೆ, ನಾನು ಸಮಿತಿಯ ನಿಲುವನ್ನು ಖಂಡಿಸಿ ಹೇಳಿಕೆ ಕೊಡುತ್ತೇನೆ."

ಹರತಾಳ ಹಲವು ದಿನಗಳವರೆಗೆ ನಡೆಯಿತು. ಕೊನೆಗೆ ಎರಡೂ ತಂಡಗಳು ದೀನಬಂಧು ಸಿ.ಎಫ್. ಆಂಡ್ರೂಸ್ ಅವರನ್ನು ಮಧ್ಯಸ್ಥಗಾರರನ್ನಾಗಿ ಅಂಗೀಕರಿಸಿದರು. ಬಹುಮಟ್ಟಿಗೆ ಪೌರಕಾರ್ಮಿಕರ ಎಲ್ಲ ಬೇಡಿಕೆಗಳನ್ನು ಒಪ್ಪಿಕೊಳ್ಳಲಾಯಿತು. ಶರತ್‌ಚಂದ್ರರು ಕಾರ್ಮಿಕರ ಸಂಘಟನೆಯ ಪಕ್ಷಪಾತಿಗಳಾಗಿದ್ದರು. ಆದರೆ, ಅದರ ಹೊಣೆಯನ್ನು ಕಾರ್ಮಿಕರೇ ಹೊರಬೇಕೆಂದೂ ಅವರು ಹೇಳುತ್ತಿದ್ದರು. ಅದನ್ನು ಹೊರಲು ಅವರನ್ನು ಅರ್ಹರಾಗಿಸುವುದಕ್ಕೆ ಎಷ್ಟು ಬೇಕೋ ಅಷ್ಟು ಸೇವೆಯನ್ನು ನಾವು ಸಲ್ಲಿಸಿದರೆ ಅದು ಅತ್ಯುತ್ತಮ ಸೇವೆಯಾಗುತ್ತದೆ ಎಂಬುದು ಅವರ ನಿಲುವಾಗಿತ್ತು.

ಯುವಕರು ಮತ್ತು ವಿದ್ಯಾರ್ಥಿಗಳ ಬಗ್ಗೆ ಅವರಿಗೆ ಅದೆಷ್ಟು ಪ್ರೀತಿ ಇದ್ದಿತೆಂದರೆ ಅವರು ತಮ್ಮ ಸಾಹಿತ್ಯ ಸೃಷ್ಟಿಯ ಚಿಂತೆಯನ್ನೂ ಮರೆತು ಬಿಡುತ್ತಿದ್ದರು. ಮೂರು ವರ್ಷಗಳಿಗೆ ಹಿಂದೆ[1], ಸಿಲ್ಹಾರ್‌ನಲ್ಲಿ ಸುರಮಾ ತಪ್ಪಲು ಪ್ರದೇಶದ ವಿದ್ಯಾರ್ಥಿ ಕಾಂಗ್ರೆಸ್ಸಿನ ಅಧ್ಯಕ್ಷಪೀಠದಿಂದ ಅವರು ಹೀಗೆಂದಿದ್ದರು: "ವಿದ್ಯಾರ್ಥಿಗಳು ಅತ್ಯಂತ ಕಠಿಣವಾದ ಕರ್ತವ್ಯವನ್ನು ನಿರ್ವಹಿಸಲೂ ಸಮರ್ಥರಾಗಿದ್ದಾರೆ." ಅದೇ ವರ್ಷ[2] ರಂಗಪುರದಲ್ಲಿ ನಡೆಯಲಿದ್ದ ಬಂಗಾಳದ ಯುವಕ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಆರಿಸಲಾಯಿತು. ಅದೇ ಕಾಲದಲ್ಲಿ ಬಂಗಾಳೀ ಸಾಹಿತ್ಯ ಸಮ್ಮೇಳನ ಮಾಜೂ ಎಂಬಲ್ಲಿ ನಡೆಯಲಿತ್ತು. ಅದಕ್ಕೂ ಅವರನ್ನೇ ಅಧ್ಯಕ್ಷರನ್ನಾಗಿ ಆರಿಸಲಾಗಿತ್ತು. ಮೊದಲು ಯುವಕ ಸಮ್ಮೇಳನ ನಡೆಯಲಿತ್ತು. ಯುವಕ ಸಮ್ಮೇಳನ ಮುಗಿದ ಮಾರನೆಯ ದಿವಸವೇ ಸಾಹಿತ್ಯ ಸಮ್ಮೇಳನಕ್ಕೆ ಹೋಗಬಹುದು ಎಂದು ಅವರು ಭಾವಿಸಿಕೊಂಡಿದ್ದರು. ಆದರೆ, ಆ ಯುವಕರು ಅವರನ್ನು ಹೋಗಲು ಬಿಡಲೇ ಇಲ್ಲ. ಈ ಅಧಿವೇಶನದಲ್ಲಿ ಅವರು ಮಹಾತ್ಮಗಾಂಧೀಜಿಯವರ ನೀತಿಗಳನ್ನು ಕಟುವಾಗಿ ವಿರೋಧಿಸಿದ್ದರು. 'ವೇಣು'[3] ಪತ್ರಿಕೆಯಲ್ಲಿ ಕಿಶೋರರನ್ನು ಸಂಬೋಧಿಸಿ ಅವರು ಹೀಗೆಂದು ಬರೆದರು: "ಬಂಗಾಳಾದಲ್ಲಿ 'ಯುವ ಸಮಿತಿ' ಎಂಬ ಹೆಸರಿನಲ್ಲಿ ಒಂದು ಸಮಿತಿಯನ್ನು ಸ್ಥಾಪಿಸಲಾಗಿದೆ ಎಂಬುದು ನಿಮಗೆ ಗೊತ್ತಿದೆ. ಈ ಸಮಿತಿಯ ವಾರ್ಷಿಕ ಸಮ್ಮೇಳನ ನಿನ್ನೆಯಷ್ಟೇ ಮುಗಿದಿದೆ. ನಾನಂತೂ ಮುದುಕ. ಆದರೂ, ಆ ಹುಡುಗ-ಹುಡುಗಿಯರೆಲ್ಲ ಆ ಸಮ್ಮೇಳನದ ಅಧ್ಯಕ್ಷತೆಗೆ ನನ್ನನ್ನೇ ಎಳೆದುಕೊಂಡು ಹೋದರು. 'ನಾಡಿನ ಒಳಿತು-ಕೆಡಕುಗಳೆಲ್ಲ ನಿಮ್ಮನ್ನೇ ಅವಲಂಬಿಸಿವೆ; ಈ ಸತ್ಯವನ್ನು ಸಂಪೂರ್ಣ ಹೃದಯದಿಂದ ಪರಿಭಾವಿಸಿ, ಅರ್ಥಮಾಡಿಕೊಳ್ಳಿ' ಎಂದು ಅವರಿಗೆ ಹೇಳುವುದಕ್ಕಾಗಿಯೇ ನಾನು ಅವರ

---

1. ಜೂನ್, 1926.
2. 1929ರ ಮಾರ್ಚ್ ತಿಂಗಳ ಕೊನೆಯಲ್ಲಿ.
3. ಸಂಪಾದಕರು: ಭೂಪೇಂದ್ರ ಕಿಶೋರ ರಕ್ಷಿತ ರಾಯ್.

ಆಹ್ವಾನವನ್ನು ಅಂಗೀಕರಿಸಿ, ಆನಂದದಿಂದ ಅಲ್ಲಿಗೆ ಧಾವಿಸಿದೆ. ಈ ಪರಮ ಸತ್ಯವನ್ನು ಅರ್ಥಮಾಡಿಕೊಳ್ಳುವ ಹಾದಿಯಲ್ಲಿ ಅದೆಷ್ಟು ಅಡೆತಡೆಗಳಿವೆ, ಈ ಸತ್ಯ ಅವರ ಕಣ್ಣಿಗೆ ಬೀಳಬಾರದೆಂದು ಅದೆಷ್ಟು ಆವರಣಗಳನ್ನು ಸೃಷ್ಟಿಸಲಾಗಿದೆ. ಇನ್ನೂ ಚಿಕ್ಕ ವಯಸ್ಸಿನವರಾಗಿರುವ ನಿಮಗಂತೂ ಅನಂತವಾದ ಅಡೆತಡೆಗಳು ಎದುರಾಗುತ್ತವೆ. ಈ ಅಡೆ-ತಡೆಗಳನ್ನೊಡ್ಡುವ ಜನ 'ಎಲ್ಲ ಸತ್ಯಗಳನ್ನೂ ತಿಳಿದುಕೊಳ್ಳುವ ಹಕ್ಕು ಎಲ್ಲರಿಗೂ ಇರುವುದಿಲ್ಲ' ಎಂದು ಹೇಳುತ್ತಾರೆ.....

"ನೀವುಗಳೂ ಇದೇ ರೀತಿ ನಿಮ್ಮ ತಾಯ್ನಾಡಿಗೆ ಸಂಬಂಧಿಸಿದ ಅನೇಕ ತಥ್ಯಗಳಿಂದ, ಅನೇಕ ಜ್ಞಾನಗಳಿಂದ ವಂಚಿತರಾಗುತ್ತಿದ್ದೀರಿ. ನಿಜವಾದ ಸಂಗತಿಯನ್ನು ಅರಿತು ನಿಮ್ಮ ಮನಸ್ಸು ಎಲ್ಲೆಲ್ಲೋ ಅಲೆಯದಿರಲಿ, ನಿಮ್ಮ ಶಾಲಾ-ಕಾಲೇಜುಗಳಲ್ಲಿನ ಓದಿಗೆ ಹಾಗೂ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾದ ಪರಮಧ್ಯೇಯಕ್ಕೆ ಭಂಗ ಬರದಿರಲಿ ಎಂದೇ ಸುಳ್ಳಿನಿಂದ ನಿಮ್ಮ ದೃಷ್ಟಿಯನ್ನು ಮುಚ್ಚಿಬಿಟ್ಟಿದ್ದಾರೆ.

"ಯುವ ಸಮಿತಿಯ ಸಮ್ಮೇಳನದಲ್ಲಿ ಇದೇ ಮಾತನ್ನು ನಾನು ಎಲ್ಲಕ್ಕಿಂತ ಹೆಚ್ಚಾಗಿ ಒತ್ತಿ ಹೇಳಬಯಸಿದ್ದೆ. ಪರಾಧೀನವಾಗಿರುವ ಈ ರಾಷ್ಟ್ರವನ್ನು ವಿದೇಶೀಯರ ಆಡಳಿತದಿಂದ ಮುಕ್ತಗೊಳಿಸುವ ಉದ್ದೇಶದಿಂದಲೇ ನಿಮ್ಮ ಸಂಘವನ್ನು ಕಟ್ಟಲಾಗಿದೆ; ಶಾಲಾಕಾಲೇಜುಗಳ ವಿದ್ಯಾರ್ಥಿಗಳಿಗೆ ತಮ್ಮ ಓದಿನ ಅವಧಿಯಲ್ಲೂ ದೇಶದ ಕಾರ್ಯದಲ್ಲಿ ಸಹಕರಿಸುವ, ದೇಶದ ಸ್ವಾತಂತ್ರ್ಯ-ಪಾರತಂತ್ರ್ಯಗಳ ಬಗೆಗೆ ಆಲೋಚಿಸುವ ಅಧಿಕಾರವಿದೆ ಹಾಗೂ ಈ ಅಧಿಕಾರ ಅಥವಾ ಹಕ್ಕಿನ ವಿಚಾರವನ್ನು ಮುಕ್ತ ಕಂಠದಿಂದ ಘೋಷಿಸುವ ಹಕ್ಕೂ ಇದೆ ಎಂಬುದನ್ನು ನಾನು ಅಲ್ಲಿ ಒತ್ತಿ ಹೇಳಬಯಸಿದ್ದೆ.

"ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಅಗತ್ಯ. ಆದರೆ, ಇದು ಅದಕ್ಕಿಂತಲೂ ಹೆಚ್ಚಿನ ಅಗತ್ಯ. ಬಾಲ್ಯದಲ್ಲಿ ಈ ಬಗೆಯ ಸತ್ಯಚಿಂತನೆಯಿಂದ ಬೇರಾಗಿ ಇರಿಸುವುದರಿಂದ ಯಾವ ಭಂಗಿತ ಸಮುದಾಯದ ಸೃಷ್ಟಿಯಾಗುತ್ತದೆಯೋ ಅದು ವಯಸ್ಸಾದ ಮೇಲೂ ಒಂದಾಗ ಬಯಸುವುದಿಲ್ಲ. ಈ ಅವಧಿಯಲ್ಲಿ ಕಲಿತುಕೊಳ್ಳುವುದೇ ದೊಡ್ಡ ಶಿಕ್ಷಣ. ಈಗ ಕಲಿತದ್ದು ನೇರವಾಗಿ ರಕ್ತದೊಂದಿಗೆ ಒಂದಾಗಿಬಿಡುತ್ತದೆ...."

ಅಧ್ಯಕ್ಷ ಸ್ಥಾನದಿಂದ ಮಾತನಾಡುತ್ತ ಅವರು ಮತ್ತಷ್ಟು ಸ್ಪಷ್ಟವಾದ ಮಾತುಗಳಲ್ಲಿ ಹೀಗೆಂದು ಹೇಳಿದರು[1]: "ಕಾಂಗ್ರೆಸ್ ಪಕ್ಷ ತುಂಬ ಹಳೆಯದು. ನನ್ನಂತೆಯೇ ಅದೂ ಮುದಿಯಾಗಿಬಿಟ್ಟಿದೆ. ಆದರೆ ಯುವ ಸಂಘ ಇನ್ನೂ ಹೊಸದು. ಅದರ ಧಮನಿಗಳಲ್ಲಿ ಹರಿಯುತ್ತಿರುವ ರಕ್ತದಲ್ಲಿ ಇನ್ನೂ ಬಿಸಿಯಿದೆ; ಇಲ್ಲಿಯವರೆಗೂ ಅದು ನಿರ್ಮಲ ವಾಗಿದೆ. ಕಾಂಗ್ರೆಸ್ ಪಕ್ಷ ಬುದ್ಧಿವಂತರಾಗಿರುವ, ಕಾನೂನುಬಲ್ಲ ರಾಜಕೀಯ ವಿಶಾರದರ ನೆಲೆಯಾಗಿಬಿಟ್ಟಿದೆ; ಆದರೆ ಯುವ ಸಂಘ ರೂಪುಗೊಂಡಿರುವುದು ಮಾತೃಹೃದಯದ ಶುದ್ಧಾಂಗವಾದ ಭಾವನೆಗಳು ಮತ್ತು ಒತ್ತಾಯಗಳಿಂದ. ಕೂಟ

---

1. 'ತರುಣರ ಕ್ರಾಂತಿ' ಎಂಬ ಹೆಸರಿನಲ್ಲಿ ಈ ಭಾಷಣ 18 ಏಪ್ರಿಲ್ 1929ರಲ್ಲಿ ಸರಸ್ವತಿ ಲೈಬ್ರರಿಯ ವತಿಯಿಂದ ಪ್ರಕಟವಾಯಿತು.

ವಿಷಯ-ಬುದ್ಧಿ ಒಂದಕ್ಕೆ ಸಂಚಾಲಕ ಶಕ್ತಿಯಾಗಿದ್ದರೆ, ಬಾಳಿನ ಸಹಜಧರ್ಮ ಇನ್ನೊಂದಕ್ಕೆ ಪ್ರೇರಕ ಶಕ್ತಿಯಾಗಿದೆ. ಆದ್ದರಿಂದಲೇ ವಿವಿಧ ಆಸಕ್ತಿಗಳು ಮತ್ತು ಆವೇಶಗಳ ಒತ್ತಾಯಕ್ಕೆ ಒಳಪಟ್ಟು ಮದ್ರಾಸಿನ ಕಾಂಗ್ರೆಸ್ ಅಧಿವೇಶನ ಸಂಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಯನ್ನು ಅಂಗೀಕರಿಸಿದರೂ, ಅದು ನಿಲ್ಲಲಾರದೆ ಹೋಯಿತು. ಹಾಗೂ ಹೀಗೂ ಒಂದು ವರ್ಷ ಮುಗಿಯುವುದರ ಒಳಗಾಗಿ ಕಲ್ಕತ್ತಾದ ಕಾಂಗ್ರೆಸ್ ಅಧಿವೇಶನದಲ್ಲಿ ಆ ಗೊತ್ತುವಳಿಯನ್ನು ರದ್ದುಪಡಿಸಲಾಯಿತು. ಸ್ವಾತಂತ್ರ್ಯಕ್ಕೆ ಬದಲಾಗಿ ಅದು ವಸಾಹತು-ಸ್ವರಾಜ್ಯದ ಬೇಡಿಕೆಯನ್ನು ಮುಂದಿರಿಸಿತು. ಆದರೆ, ನಾಡಿನ ತರುಣರು ಇದನ್ನು ಒಪ್ಪಲಿಲ್ಲ. ಈ ಎರಡು ಸಂಘಟನೆಗಳಲ್ಲಿ ಇರುವ ವ್ಯತ್ಯಾಸ ಇದು. ಹಳೆಯ ವಿಧಿ-ನಿಷೇಧಗಳ ಹಿಡಿತದಲ್ಲಿ ಅದರ ಉಸಿರು ಕಟ್ಟಿಹೋಗಿದೆ. ಯುವ ಸಮಿತಿಯ ಹುಟ್ಟಿನ ಇತಿಹಾಸ ಇದು, ಕಾರಣ ಇದು."

ತಾವು ಗಾಂಧೀಜಿಯವರನ್ನು ವಿರೋಧಿಸುತ್ತಿದ್ದುದು ಏಕೆ ಎಂಬುದನ್ನು ಸ್ಪಷ್ಟಪಡಿಸುತ್ತ ಅವರು ಹೀಗೆಂದರು: "ಇದ್ದಕ್ಕಿದ್ದಂತೆ ಒಂದು ದಿನ ಮಹಾತ್ಮ ಗಾಂಧೀಜಿಯವರ ಅಹಿಂಸಾತ್ಮಕ ಚಳವಳಿ ಮತ್ತು ಅಸಹಕಾರ ಚಳವಳಿಗಳು ಕಾಣಿಸಿಕೊಂಡುವು ಹಾಗೂ ಅವುಗಳ ತಲೆಗೆ ಕಟ್ಟಿದಂತೆ ಖಾದಿಯೂ ಬಂದಿತು - ಚರಖಾದ ನೂಲಿನಲ್ಲಿ ನೇಯ್ದ ಬಟ್ಟೆಯಾಗಿ, ಸ್ವರಾಜ್ಯ ಸ್ಥಾಪನೆಗೆ ಡಿಸೆಂಬರ್ 31ನೆಯ ತಾರೀಖನ್ನು ಗೊತ್ತುಪಡಿಸಲಾಗಿತ್ತು. ಜೈಲಿಗೆ ಹೋಗುವ ದಿನವೂ ಬಂತು; ಅತ್ಯಾಚಾರದ ಅಲೆಯೂ ನುಗ್ಗಿ ಬಂದಿತು. ಮಂತ್ರ ಬಂದಿದ್ದು ಬಂಗಾಳದ ಹೊರಗಿನಿಂದ - ಅಂದರೆ, ಚರಖಾದ ತತ್ವವೂ ಬಂತು. ಅಂದು ಬಂಗಾಳದಲ್ಲಿ ತಯಾರಾದಷ್ಟು ಖಾದಿಯನ್ನು, ಬಂಗಾಳದಲ್ಲಿ ಜೈಲಿಗೆ ಹೋದಷ್ಟು ಜನರನ್ನು, ಬಂಗಾಳದ ತರುಣರು ಮಾಡಿದಷ್ಟು ಸರ್ವಸ್ವ ಬಲಿದಾನವನ್ನು ಭರತ ಖಂಡದಲ್ಲಿ ಬೇರೆಲ್ಲೂ ಕಾಣಲಿಲ್ಲ. ಏಕಾಗಿ ಎಂದು ಗೊತ್ತೇನು? ಅದಕ್ಕೆ ಕಾರಣ ಇದು: ಬಂಗಾಳದ ಯುವಕರು ದೇಶವನ್ನು ಅದೆಷ್ಟು ಪ್ರೀತಿಸುತ್ತಾರೋ ಅದರ ಒಂದು ಅಂಶವನ್ನೂ ಭಾರತದಲ್ಲಿ ಬೇರೆಲ್ಲಿಯೂ - ಬಹುಶಃ ಪಂಜಾಬ್ ಒಂದನ್ನು ಬಿಟ್ಟು - ಹುಡುಕಿ ನೋಡಿದರೂ ನೀವು ಕಾಣಲಾರಿರಿ. ಆದ್ದರಿಂದಲೇ 'ವಂದೇ ಮಾತರಮ್' ಮಂತ್ರದ ಸೃಷ್ಟಿಯಾದದ್ದೂ ಬಂಗಾಳದಲ್ಲಿಯೇ, ಪುಣ್ಯಶ್ಲೋಕರಾಗಿರುವ ದಿವಂಗತ ದೇಶಬಂಧು ದಾಸ್ ಅವರು ಜನ್ಮವೆತ್ತಿದ್ದೂ ಬಂಗಾಳದಲ್ಲಿಯೇ. ಇತ್ತ ಡಿಸೆಂಬರ್ 31ನೆಯ ತಾರೀಖು ಉರುಳಿ ಹೋದರೂ ಸ್ವರಾಜ್ಯ ಸ್ಥಾಪನೆಯಾಗಲಿಲ್ಲ. ಎಲ್ಲಿಯೋ, ಯಾರೂ ಕಂಡುಕೇಳಿರದ ಚೌರೀಚೌರಾದಲ್ಲಿ ಒಂದಿಷ್ಟು ರಕ್ತಪಾತವಾಯಿತು. ಗಾಂಧೀಜಿಯವರು ಹೆದರಿ ಇಡೀ ಚಳವಳಿಯನ್ನೇ ನಿಲ್ಲಿಸಿ ಬಿಟ್ಟರು. ನಾಡಿನ ಆಸೆ ಆಕಾಂಕ್ಷೆಗಳನ್ನೆಲ್ಲ, ಅಕಾಲದ ಕುಸುಮದಂತೆ, ಒಂದೇ ಒಂದು ಕ್ಷಣದಲ್ಲಿ ಶೂನ್ಯದಲ್ಲಿ ವಿಲೀನಗೊಳಿಸಿಬಿಟ್ಟರು. ಆದರೆ, ಅಂದೂ ಭಯದ ಹೆಸರನ್ನೇ ಅರಿಯದಿದ್ದಂಥ ಒಬ್ಬ ವ್ಯಕ್ತಿ ಬದುಕಿದ್ದರು. ದೇಶಬಂಧು ದಾಸ್ ಅವರೇ ಆ ವ್ಯಕ್ತಿ. ಆಗ ಅವರು ಸೆರೆಮನೆಯಲ್ಲಿದ್ದರು. ಬಂಗಾಳದ ಒಳಗೆ ಮತ್ತು ಹೊರಗೆ ಎಲ್ಲರೂ ಸೇರಿಕೊಂಡು ಅವರ ಎಲ್ಲ ಪ್ರಯತ್ನವನ್ನೂ, ಅವರ ಎಲ್ಲ ಸಿದ್ಧತೆಯನ್ನೂ ವ್ಯರ್ಥವಾಗಿಸಿಬಿಟ್ಟರು. ಇಷ್ಟು ದಿವಸಗಳ ಒಳಗಾಗಿಯೇ ಭಾರತದ ಭಾಗ್ಯಚಕ್ರ ಒಂದು ಸುತ್ತು ಸುತ್ತಿಯೇ

ಬಿಡುತ್ತಿತ್ತೋ ಏನೋ! ಯಾರಿಗೆ ಗೊತ್ತು? ಈ ವಿಚಾರ ಹಾಗಿರಲಿ ಬಿಡಿ.

"ಕೆಲವು ದಿವಸಗಳವರೆಗೆ ತೆಪ್ಪಗಿದ್ದ ಮೇಲೆ, ಮತ್ತೆ ಕೋಲಾಹಲ ಪ್ರಾರಂಭವಾಯಿತು. ಜನ ಎಚ್ಚೆತ್ತರು. ಆ ಸಲ ಅದಕ್ಕೆ ಕಾರಣವಾಗಿದ್ದುದು ಜಲಿಯನಾವಾಲಾಬಾಗಿನ ಹತ್ಯಾಕಾಂಡ. ಈ ಸಲ ಸೈಮನ್ ಆಯೋಗ ಇದಕ್ಕೆ ಕಾರಣವಾಯಿತು. ಮತ್ತೆ ಅದೇ ಚರಖಾ; ಮತ್ತೆ ಅದೇ ಖಾದಿ; ಮತ್ತೆ ಅದೇ ಬಹಿಷ್ಕಾರದ ನಿರರ್ಥಕ ಗರ್ಜನೆ. ಮತ್ತೆ ಅದೇ ಹೆಂಡದಂಗಡಿಗಳ ಮುಂದೆ ಧರಣಿ ಹೂಡುವ ಪ್ರಸ್ತಾವ; ಅದೇ 31ನೆಯ ಡಿಸೆಂಬರಿನ ಗಡುವು; ಇವೆಲ್ಲಕ್ಕಿಂತ ಮಿಗಿಲಾಗಿ, ಮತ್ತೆ ಬಂಗಾಳದ ಹೊರಗಿನ ಮುಖಂಡರ ತಂಡ ಬಂಗಾಳದ ಕತ್ತಿನ ಮೇಲೆ ಸವಾರಿ ಮಾಡತೊಡಗಿದೆ. ಈ ಸಲವೂ ಆ ಡಿಸೆಂಬರ್ 31ರ ಗಡುವು ಹಿಂದಿನಂತೆಯೇ ಉರುಳಿಹೋಗುತ್ತದೆ ಎಂಬುದು ನನಗೆ ಗೊತ್ತಿದೆ. ಇಲ್ಲಿಯೂ ಒಂದು ಕ್ಷೀಣ ಆಸೆಯ ಬೆಳಕು ಕಾಣಿಸುತ್ತಿದೆ - ಬಂಗಾಳದ ಈ ಯುವಶಕ್ತಿಯ ಜಾಗೃತಿಯೇ ಆ ಆಶಾಕಿರಣ. ಇದೇ ಬಂಗಾಳದಲ್ಲಿಯೇ ವಂಗ-ಭಂಗದ ಸುನಿಶ್ಚಿತ ತಥ್ಯ ಒಂದು ದಿವಸ ಅನಿಶ್ಚಿತ ತಥ್ಯವಾಗಿ ಬದಲಾಗಿ ಬಿಟ್ಟಿತು. ಅಂದು ಆ ಹೊರೆಯನ್ನು ಹೊರಲು-ಹಂಚಿಕೊಳ್ಳಲು ಬಂಗಾಳದ ಹೊರಗಿನಿಂದ ಯಾರೂ ಬರಲಿಲ್ಲ. ಚಳವಳಿಯನ್ನು ಹೇಗೆ ನಡೆಸಬೇಕು ಎಂಬ ಬಗ್ಗೆ ಸಲಹೆಕೊಡಲು ಹೊರಗಿನಿಂದ ಯಾವನೇ ಕರ್ತಾರನನ್ನಾಗಲೀ, ನೇತಾರನನ್ನಾಗಲೀ ಕರೆಸುವ ಅಗತ್ಯ ಉಂಟಾಗಿರಲಿಲ್ಲ. ಅಂದು ಬಂಗಾಳದ ಎಲ್ಲ ಹೊಣೆಗಾರಿಕೆಯೂ ಬಂಗಾಳದ ನಾಯಕರ ಕೈಯಲ್ಲೇ ಇತ್ತು."

ಹೇಳಿಕೆ ತುಂಬ ಕಟುವಾಗಿದೆ, ಭ್ರಾಮಕವೂ ಆಗಿದೆ. ಇದು ಅವರಂಥ ಕಥಾಶಿಲ್ಪಿಯ ಭಾಷೆಯೇ ಅಲ್ಲ. ಯಾರೋ ಒಬ್ಬ ಪ್ರಾಂತೀಯ ನಾಯಕನ ಮೇರೆ ಮೀರಿದ ಭಾವುಕ ಆಕ್ರೋಶ ಇಲ್ಲಿ ಹರಿಯುತ್ತಿರುವಂತೆ ತೋರುತ್ತದೆ. ಆಶ್ಚರ್ಯದ ಸಂಗತಿ ಎಂದರೆ ಇದೇ ಶರತ್‌ಚಂದ್ರರು ಸರಿಯಾಗಿ ಏಳು ವರ್ಷಗಳಿಗೆ ಹಿಂದೆ 'ಮಹಾತ್ಮ' ಎಂಬ ಲೇಖನವನ್ನು ಬರೆದಿದ್ದುದು! ಆ ದಿನಗಳಲ್ಲಿ, ಅವರ ಮೆಚ್ಚಿನ ಸುಭಾಷಚಂದ್ರ ಬೋಸ್ ಅವರ ಧ್ವನಿಯೂ ಇದೇ ಆಗಿತ್ತು. ಇಡೀ ಬಂಗಾಳದಲ್ಲಿ ಇದೇ ಧ್ವನಿ ಪ್ರಬಲವಾಗಿ ಮೊಳಗುತ್ತಿತ್ತು. ಆದ್ದರಿಂದಲೇ, ಆ ದಿನಗಳಲ್ಲಿ ಅವರೂ ಅತ್ಯಂತ ಉಗ್ರರಾಗಿ ಬಿಟ್ಟಿದ್ದರು.

ಆದರೆ, ಇದು ಅವರ ಸ್ಥಾಯೀಭಾವವಾಗಿರಲಿಲ್ಲ. ಅವರು ಇಡೀ ಭಾರತ ಖಂಡವನ್ನೇ ಪ್ರೀತಿಸುತ್ತಿದ್ದರು. ಇಲ್ಲವಾಗಿದ್ದಲ್ಲಿ, 'ಶೇಷಪ್ರಶ್ನೆ'ಯಲ್ಲಿ ರಾಜೇಂದ್ರನ ಸಾವಿನ ಸುದ್ದಿಯನ್ನು ಕೇಳಿದ ಆಶುಬಾಬೂ ಅವರ ಧ್ವನಿಯಲ್ಲಿ ಅವರೇ ಹೀಗೆಂದು ಹೇಳುವುದು ಸಾಧ್ಯವಿತ್ತೆ: "ಇದರ ಅರ್ಥ ಇಷ್ಟೆ. ದೇಶವನ್ನು ಬಿಟ್ಟು ಬೇರಾವ ವ್ಯಕ್ತಿಯನ್ನೂ ಅವನು ತನ್ನ ಆತ್ಮೀಯನೆಂದು ಭಾವಿಸಲಿಲ್ಲ - ದೇಶ ಮಾತ್ರವೇ, ಸಮಸ್ತ ಭರತಖಂಡ ಮಾತ್ರವೇ ಅವನಿಗೆ ಆತ್ಮೀಯವಾಗಿತ್ತು. ಓ ದೇವರೆ, ಅವನಿಗೆ ನಿನ್ನ ಪಾದಗಳಲ್ಲಿ ಎಡೆಗೊಡು. ನೀನು ಬೇರೇನು ಬೇಕಾದರೂ ಮಾಡು; ಆದರೆ, ರಾಜೇಂದ್ರನ ವರ್ಗವನ್ನು ಮಾತ್ರ ಈ ಲೋಕದಲ್ಲಿ ಇಲ್ಲದಂತೆ ಮಾಡಬೇಡ."

ಅವರು ಕ್ರಾಂತಿಯನ್ನೂ ಸಮರ್ಥಿಸಲಿಲ್ಲ. ಅವರು ಹೀಗೆಂದಿದ್ದರು: "ಭಾರತದ

ಬಾನಿನಲ್ಲಿ ಈಗ ಒಂದು ಮಾತು ತೇಲುತ್ತ ಬರುತ್ತಿದೆ. 'ಕ್ರಾಂತಿ' ಎಂಬುದೇ ಆ ಮಾತು. ಅದರಿಂದಾಗಿಯೇ ಅಧಿಕಾರಾರೂಢ ಶಕ್ತಿ ಇಂದು ಬೆದರತೊಡಗಿದೆ. ಆದರೆ, ನೀವೆಲ್ಲ ಈ ಒಂದು ಮಾತನ್ನು ಮರೆಯದಿರಿ. ಯಾವುದೇ ನಾಡಿನಲ್ಲಿ ಕ್ರಾಂತಿಗಾಗಿ ಕ್ರಾಂತಿಯನ್ನು ತರುವುದಿಲ್ಲ ಎಂಬುದೇ ಆ ಮಾತು. ಅರ್ಥಹೀನ, ನಿಷ್ಕಾರಣ ಕ್ರಾಂತಿಯ ಪ್ರಯತ್ನದಲ್ಲಿ ರಕ್ತಪಾತವಷ್ಟೇ ಆಗುತ್ತದೆ; ಅದರಿಂದ ಬೇರಾವ ಫಲವೂ ದೊರೆಯುವುದಿಲ್ಲ. ಕ್ರಾಂತಿಯ ಸೃಷ್ಟಿ ಆಗುವುದು ಮಾನವನ ಮನಸ್ಸಿನಲ್ಲಿಯೇ ಹೊರತು, ರಕ್ತಪಾತದಲ್ಲಲ್ಲ. ಆದ್ದರಿಂದಲೆ, ತಾಳ್ಮೆಯಿಂದ ಅದರ ಆಗಮನಕ್ಕಾಗಿ ಕಾದಿರಬೇಕಾಗುತ್ತದೆ. ಕ್ಷಮಾಹೀನ ಸಮಾಜ, ಪ್ರೀತಿರಹಿತ ಧರ್ಮ, ಜಾತಿ ನಿಷ್ಠ ತಿರಸ್ಕಾರ, ಆರ್ಥಿಕ ನೀತಿಯ ವಿಷಮತೆ, ಸ್ತ್ರೀ ಸಮುದಾಯದ ಬಗ್ಗೆ ಹೃದಯಹೀನ ನಿಷ್ಕರುಣೆ - ಇವುಗಳ ಆಮೂಲಚಲ ಪ್ರತೀಕಾರದ ಪಥದಲ್ಲಿ ರಾಜಕೀಯ ಕ್ರಾಂತಿಯೂ ಸಂಭವಿಸುತ್ತದೆ. ಇಲ್ಲವಾದರೆ, ಅಸಹಿಷ್ಣುಶೀಲ ಅಭಿಲಾಷೆ ಮತ್ತು ಕಲ್ಪನೆಯ ಅತ್ಯಾಧಿಕತೆ ನಿಮಗೆ ವ್ಯರ್ಥತೆಯನ್ನು ಬಿಟ್ಟು ಬೇರಾವ ಫಲವನ್ನು ತಂದುಕೊಡಲಾರದು. ಸ್ವಾತಂತ್ರ್ಯದ ಸಂಗ್ರಾಮಕ್ಕೆ ಕ್ರಾಂತಿಯೇ ಅನಿವಾರ್ಯವಾದ ಮಾರ್ಗವಲ್ಲ. ಲೋಕದಲ್ಲಿ ಇನ್ನಿತರ ಎಲ್ಲ ಕಾರ್ಯಗಳಿಗೂ ಯೋಜನೆಯಿಂದ ಫಲ ದೊರೆಯುತ್ತದೆ. ಯಾವುದೇ ಸಿದ್ಧತೆಯ ಅಗತ್ಯವೂ ಇಲ್ಲದ ಕಾರ್ಯವೆಂದರೆ ಕ್ರಾಂತಿ; ಅದನ್ನು ಆರಂಭಿಸಿದ ಒಡನೆಯೇ ಕೆಲಸ ಆಗಿಬಿಡುತ್ತದೆ ಎಂದು ಭಾವಿಸುವಂಥ ವ್ಯಕ್ತಿಗಳಿಗೆ ಬೇರೆ ಏನೇ ಗೊತ್ತಿರಲಿ, ಕ್ರಾಂತಿಯ ವಿಚಾರ ಒಂದು ಚೂರು ಗೊತ್ತಿರುವುದಿಲ್ಲ. ಕ್ರಾಂತಿ ಪಂಥಕ್ಕೆ ಸೇರಿರುವಂಥವರಿಗೆ ನನ್ನ ಈ ಮಾತುಗಳು ಬಹುಶಃ ಸಂತೋಷವನ್ನು ತಂದುಕೊಡುವುದಿಲ್ಲ."

ಒಮ್ಮೆ ಬಾರೀಸಾಲಕ್ಕೆ ಹೋಗುವ ದಾರಿಯಲ್ಲಿ, ಸ್ಟೀಮರಿನಲ್ಲಿ ರಾತ್ರಿ ಯಾವುದೋ ಹೊತ್ತಿನಲ್ಲಿ ಶರತ್‌ಚಂದ್ರರು ದೇಶಬಂಧು ಅವರನ್ನು ಹೀಗೆಂದು ಪ್ರಶ್ನಿಸಿದ್ದರು: "ಸರಿ, ಈ ಕ್ರಾಂತಿಕಾರಿಗಳ ವಿಷಯದಲ್ಲಿ ನಿಮ್ಮ ನಿಜವಾದ ಅಭಿಪ್ರಾಯವೇನು ?"

ಎದುರಿನ ಬಾನು ತಿಳಿಯಾಗ ತೊಡಗಿತ್ತು. ಅವರು ರೇಲಿಂಗನ್ನು ಹಿಡಿದುಕೊಂಡು ಸ್ವಲ್ಪ ಹೊತ್ತು ಮೇಲೆ ನೋಡುತ್ತಿದ್ದರು. ಆಮೇಲೆ ಅವರು ನಿಧಾನವಾಗಿ ಹೀಗೆಂದರು: "ಇವರಲ್ಲಿ ಅನೇಕರನ್ನು ನಾನು ಪ್ರೀತಿಸುತ್ತೇನೆ. ಆದರೆ, ಅವರ ಕೆಲಸ ದೇಶಕ್ಕೆ ಸಂಪೂರ್ಣವಾಗಿ ಮಾರಕವಾಗಿದೆ. ಈ ತುಡುಗುತನದಿಂದಾಗಿ ದೇಶ ಕನಿಷ್ಠ ಪಕ್ಷ ಇಪ್ಪತ್ತೈದು ವರ್ಷಗಳಷ್ಟು ಹಿಂದೆ ಬೀಳುತ್ತದೆ. ಅಷ್ಟೇ ಅಲ್ಲ. ಅದರಲ್ಲಿನ ದೊಡ್ಡ ದೋಷವೇನೆಂದರೆ ಸ್ವರಾಜ್ಯ ದೊರೆತ ಬಳಿಕವೂ ಆ ಪ್ರವೃತ್ತಿ ಇಲ್ಲಿಂದ ಹೊರಹೋಗುವುದಿಲ್ಲ. ಆಗ ಇದರ ಸ್ಪರ್ಧೆ ಇನ್ನಷ್ಟು ಹೆಚ್ಚಾಗುತ್ತದೆ. ತುಂಬ ಸಾಮಾನ್ಯವಾದ ಭಿನ್ನಾಭಿಪ್ರಾಯವೂ ಗೃಹಯುದ್ಧಕ್ಕೆ ನಾಂದಿಯಾಗಿ ಬಿಡುತ್ತದೆ. ಕೊಲೆ-ಹತ್ಯೆ ಹೊಡೆದಾಟ-ಬಡಿದಾಟಗಳು ನನ್ನ ಮನಸ್ಸಿಗೆ ಜುಗುಪ್ಸೆಯನ್ನು ಉಂಟುಮಾಡುತ್ತವೆ, ಶರತ್‌ಬಾಬೂ."

ಇದರ ಬಗ್ಗೆ ಶರತ್‌ಚಂದ್ರರು ಹೀಗೆ ಬರೆದರು: "ರಾತ್ರಿ ಇನ್ನೂ ಕೊಂಚ ಉಳಿದಿದ್ದ ಆ ನಸುಕಿನ ಆಕಾಶದ ಕೆಳಗೆ, ನದಿಯ ಎದೆಯ ಮೇಲೆ ನಿಂತು ಮಾತನಾಡಿದ ಅವರ ಬಾಯಿಂದ ಸತ್ಯವಲ್ಲದೆ ಬೇರೇನೂ ಹೊರಬರಲಾರದೆಂದು ನನಗೆ

ನಿಶ್ಚಿತವಾಗಿ ತಿಳಿದಿತ್ತು."

ಯಾವುದೇ ರೂಪದ ರಾಜಕೀಯ ಹತ್ಯೆ ಮತ್ತು ಹಿಂಸಾಚಾರದ ಸಿದ್ಧಾಂತಗಳಿಗೆ ದೇಶಬಂಧು ಅವರು ವಿರುದ್ಧವಾಗಿದ್ದರು. ಶರತ್‌ಚಂದ್ರರ ನಿಲುವೂ ಇದೇ ಆಗಿತ್ತು. ಆದರೆ, ಹಿಂಸೆಯ ಮಾರ್ಗದ ಮೂಲಕ ದೇಶಕ್ಕೆ ಬಿಡುಗಡೆಯನ್ನು ತಂದುಕೊಡಬಯಸುವವರನ್ನು ತಿರಸ್ಕಾರದ ದೃಷ್ಟಿಯಿಂದ ನೋಡುವುದನ್ನು ಕಲ್ಪಿಸಿಕೊಳ್ಳುವುದು ಅವರಿಗೆ ಸಾಧ್ಯವಿರಲಿಲ್ಲ. ತಮ್ಮ ಈ ಭಾಷಣದಲ್ಲಿ ಅವರು ಯುವಕರ ಗಮನವನ್ನು ಗುಂಪುಗಾರಿಕೆಯತ್ತ ವಿಶೇಷವಾಗಿ ಸೆಳೆದು ಹೀಗೆಂದು ಹೇಳಿದರು: "ವಿಶ್ವದ ಎಲ್ಲ ಶಕ್ತಿಶಾಲಿ ಸಮುದಾಯಗಳ ಇತಿಹಾಸವನ್ನು ಅನ್ವೇಷಿಸಿ ನೋಡಿದರೆ ನಮಗೆ ಈ ಸಂಗತಿ ಗೊತ್ತಾಗುತ್ತದೆ: ಅವರ ನಡುವೆ ಆತ್ಮ ಕಲಹ ಇರಲಿಲ್ಲವೆಂದೇನೂ ಅಲ್ಲ; ಆದರೆ, ಹೊರಗಿನ ಶತ್ರುವನ್ನು ಎದುರಿಸಬೇಕಾಗಿ ಬಂದಾಗ, ಅವರು ತಮ್ಮ ಆ ಒಳಜಗಳವನ್ನು, ವಾದ-ವಿವಾದವನ್ನು ಸ್ಥಗಿತಗೊಳಿಸ ಬೇಕೆಂಬುದನ್ನು ಅರಿತಿದ್ದರು. ಆದರೆ, ನಮ್ಮಲ್ಲಿ ಜಯಚಂದ್ ಮತ್ತು ಪೃಥ್ವೀರಾಜರಿಂದ ಹಿಡಿದು ಸಿರಾಜುದ್ದೌಲ ಮತ್ತು ಮೀರ್‌ಜಾಫರ್ ಅವರ ವರೆಗೆ ಇದು ಮೂಳೆ-ಮಜ್ಜೆಗಳಲ್ಲಿ ಬೇರುಬಿಟ್ಟಿರುವಂಥ ಅಭಿಶಾಪವಾಗಿ ಉಳಿದುಕೊಂಡು ಬಿಟ್ಟಿದೆ. ಇದರಿಂದ ನಮಗೆ ಮುಕ್ತಿಯೇ ದೊರೆತಿಲ್ಲ. ಈ ದೇಶದಲ್ಲಿ ವ್ರಾತ್ಯರು ಮತ್ತು ಬೌದ್ಧರು ಸಂತೋಷದಿಂದ ತಮ್ಮ ಧರ್ಮದೇವತೆಯ ಹಿರಿಮೆಯನ್ನು ಹಾಡಿ ಹೊಗಳಲು 'ಧರ್ಮ-ಮಂಗಲ' ಎಂಬ ಧಾರ್ಮಿಕ ಗ್ರಂಥವನ್ನು ರಚಿಸಿದ್ದಾರೆ. ಅದರಲ್ಲಿ ಹೀಗೆಂದು ಹೇಳಲಾಗಿದೆ:

"ಧರ್ಮ ಹೋಇಲಾ ಯವನರೂಪಿ
ಮಾಥಾಯ್ ದಿಲಾ ಕಾಲೋ ಟೂಪೀ
ಧರ್ಮೇರ್ ಶತ್ರು ಕರಿತೇ ವಿನಾಶ್."

(ಧರ್ಮದ ಶತ್ರುಗಳ ವಿನಾಶಕ್ಕಾಗಿ ಧರ್ಮಯವನ ರೂಪವನ್ನು ಧರಿಸಿದೆ. ಹಣೆಯ ಮೇಲೆ ಕರಿಯ ಟೋಪಿಯನ್ನು ಹಾಕಿಕೊಂಡಿದೆ.)

"ಅಂದರೆ, ವಿದೇಶಿ ಆಕ್ರಮಣಕಾರರಾದ ಮುಸ್ಲಿಮರು ಹಿಂದೂ ಧರ್ಮಾವಲಂಬಿಗಳಾಗಿದ್ದ ನೆರೆಯ ಬಂಗಾಳಿಗಳನ್ನು ಹಿಂಸಿಸತೊಡಗಿದಾಗ, ಇದನ್ನು ಕಂಡು ಅವರು - ಅಂದರೆ, ವ್ರಾತ್ಯರು ಮತ್ತು ಬೌದ್ಧರು - ಆನಂದಪಟ್ಟರು. ಇನ್ನೊಂದಂತೂ ನೆನ್ನೆಮೊನ್ನೆಯ ಸಂಗತಿ. ಚಿತ್ತರಂಜನ ದಾಸರಂತಹ ಮಹಾವ್ಯಕ್ತಿಯ ಇಡೀ ಜೀವನ ತಮ್ಮ ಜನರೊಂದಿಗೆ ಸೆಣಸಾಡುವುದರಲ್ಲಿಯೇ ಕಳೆದು ಹೋಯಿತು. ಇಂದಾದರೂ ಅದು ಕೊನೆಗೊಂಡಿದೆಯೆ? ಈ ಯುವ ಸಂಘ ಇದೆಯಲ್ಲ, ಅದನ್ನು ಬೆದಕಿ ನೋಡಿದರೆ, ಅದರಲ್ಲಿಯೂ ಹತ್ತಾರು ಪಕ್ಷಗಳು ಕಣ್ಣಿಗೆ ಬೀಳುತ್ತವೆ. ಯಾವುದಕ್ಕೂ ಯಾವುದರೊಂದಿಗೂ ಸಾಮರಸ್ಯವಿಲ್ಲ. ಇದರಲ್ಲಿ ಅದೆಷ್ಟು ಬಗೆಯ ಭಿನ್ನಾಭಿಪ್ರಾಯಗಳಿವೆ? ಅದೆಷ್ಟು ಬಗೆಯ ಪ್ರತಿಷ್ಠೆ-ಅಭಿಮಾನಗಳ ಬಗೆಗಿನ ವಿದ್ವೇಷಗಳಿವೆ? ಈ ರೀತಿ ಹೊರಗಿನಿಂದ ತಂದು ಒಟ್ಟಿದ ಜನಸಂದಣಿಯನ್ನು ಸೇರಿಸುವ ಕೆಲಸವನ್ನೇ 'ಆರ್ಗನೈಸೇಶನ್' (ಸಂಘಟನೆ) ಎಂದು ಕರೆಯುತ್ತೇವೇನು! ಆರ್ಗನಿಕ್ (ಸಂಘಟಿತ ಅಥವಾ ಯೌಗಿಕ) ದೇವವಸ್ತುವಿನಂತೆ. ಇದರ ಕಾಲಿನ

ಉಗುರಿನ ಸಂದಿಗೆ ಸೂಜಿಯನ್ನು ಚುಚ್ಚಿದರೆ ತಲೆಯ ಕೂದಲಿನವರೆಗೆ ಅಂಗಾಂಗಗಳೆಲ್ಲವೂ ಕಂಪಿಸತೊಡಗುತ್ತವೇನು? ಆದರೆ, ಎಂದು ಹೀಗೆ ಆಗುತ್ತದೆಯೋ ಅಂದಿನಿಂದ - ಅಂದರೆ, ಕಾಲಿನ ಪೆಟ್ಟಿನ ನೋವು ತಲೆಯವರೆಗೂ ತಲುಪುವ ದಿನದಿಂದ - ಕನಿಷ್ಠ ಪಕ್ಷ ಬಂಗಾಳದಲ್ಲಿಯಾದರೂ ಅಪಾಯ ಹೀನತೆಯ ದೂರು ಕೇಳಿಬರುವುದಿಲ್ಲ."

ಅವರು ವಿದೇಶೀ ವಸ್ತುಗಳ ಬಹಿಷ್ಕಾರದ ಸಮರ್ಥಕರಾಗಿದ್ದರು. ಆದರೆ, ಖದ್ದರಿನ ಬಗೆಗಿನ ತಮ್ಮ ಜುಗುಪ್ಸೆಯನ್ನು ಮಾತ್ರ ಅವರೆಂದೂ ಬಚ್ಚಿಡಲಾರದೆ ಹೋದರು. ಅವರು ಹೀಗೆಂದು ಹೇಳಿದ್ದರು: "ಭಾರತದ ಇಪ್ಪತ್ತು ಲಕ್ಷ ರೂಪಾಯಿಯ ಖಾದಿಯಿಂದ ಎಂಬತ್ತು ಕೋಟಿ ರೂಪಾಯಿಗಳ ಕೊರತೆಯನ್ನು ತುಂಬಿಕೊಡ ಲಾಗುವುದಿಲ್ಲ. ಮರದ ಚರಖಾದಿಂದ ಕಬ್ಬಿಣದ ಯಂತ್ರವನ್ನು ಸೋಲಿಸಲು ಸಾಧ್ಯವಾಗುವುದಿಲ್ಲ. ಹೀಗೇನಾದರೂ ಆದರೂ, ಅದರಿಂದ ಮನುಷ್ಯನ ಒಳಿತಿನ ಹಾದಿಯೇನೂ ಸುಗಮವಾಗುವುದಿಲ್ಲ.

"ಬಂಗಾಳದ ಹಳ್ಳಿಯಲ್ಲಿ ನನ್ನ ಮನೆಯಿದೆ. ನನ್ನ ಮಹಾಶತ್ರುವೂ ಬಂಗಾಳದ ಪರಿಚಯ ನನಗಿಲ್ಲವೆಂಬ ಆರೋಪವನ್ನು ನನ್ನ ಮೇಲೆ ಹೊರಿಸಲಾರ. ನಾನು ಮನೆಮನೆಗೆ ಹೋಗಿ ನೋಡಿದ್ದೇನೆ. ಈ ಬಹಿಷ್ಕಾರ ಅಲ್ಲಿ ನಡೆಯುವುದಿಲ್ಲ. ನಾಲ್ಕಾರು ಮಂದಿ ಸ್ವದೇಶಭಕ್ತರು - ಅದರಲ್ಲಿಯೂ ಪುರುಷರು ಇದನ್ನು ಅಕ್ಷರಶಃ ಪಾಲಿಸಿಯಾರು. ಆದರೆ, ಹೆಂಗಸರಂತೂ ಇದನ್ನು ಅನುಷ್ಠಾನಕ್ಕೆ ತರಲಾರರು. ಇತರ ರಾಜ್ಯಗಳ ವಿಚಾರ ನನಗೆ ಗೊತ್ತಿಲ್ಲ. ಆದರೆ, ಈ ರಾಜ್ಯದ ಹೆಂಗಸರಿಗೆ ದಿನದ ಕೊನೆಯ ಹೊತ್ತಿಗೆ ಅನೇಕ ಬಟ್ಟೆಗಳು ಬೇಕಾಗುತ್ತವೆ. ಈ ಪ್ರದೇಶದ ಸಾಮಾಜಿಕ ರೀತಿ-ನೀತಿಗಳು ಹಾಗೂ ಮೂಳೆ-ಮಜ್ಜೆಗಳನ್ನು ಸೇರಿ ಹೋಗಿರುವ ಸಂಸ್ಕಾರಗಳೇ ಹಾಗಿವೆ. ಸಭೆಯಲ್ಲಿ ನಿಂತುಕೊಂಡು ಖಾದಿಯ ಮಹಿಮೆಯನ್ನು ಗಂಟಲು ಕಿತ್ತು ಹೋಗುವಂತೆ ಅರಚಿ ಹೇಳಿದರೂ ಅದು ಯಾವ ರೂಪದಲ್ಲಿಯೂ ಹಳ್ಳಿಯ ಅಂತಃಪುರದ ಏಕಾಂತವನ್ನು ತಲುಪಲಾರದು. ನೆಮ್ಮದಿಯಾಗಿರುವ ಗೃಹಸ್ಥನ ವಿಚಾರವನ್ನು ಮಾತ್ರವೇ ನಾನು ಹೇಳುತ್ತಿಲ್ಲ. ಬಡವರಾಗಿರುವ ಒಕ್ಕಲಿಗ ಕೂಲಿಕಾರರ ಮಾತನ್ನೇ ಹೇಳುತ್ತಿದ್ದೇನೆ. ನನ್ನ ಈ ಮಾತು ನಿಜ. ಇದನ್ನು ಒಪ್ಪಿಕೊಳ್ಳುವುದೇ ಒಳ್ಳೆಯದು. ಬಂಗಾಳದ ಯಾವುದೋ ಒಂದು ಸಬ್-ಡಿವಿಜನ್‌ನಲ್ಲಿ ಒಂದೆರಡು ಮಣಗಳಷ್ಟು ಚರಖಾನೂಲನ್ನು ನೂತಿದ್ದಾರೆಂಬ ನಿದರ್ಶನವನ್ನು ಕೊಟ್ಟು ಇದಕ್ಕೆ ಉತ್ತರವನ್ನು ಕೊಡಲಾಗುವುದಿಲ್ಲ. ಇದು ಖಾದಿಯ ಬಗೆಗಿನ ವಿವರಣೆಯಾಯಿತು. ಚರಖಾದ ಕಥೆಯೂ ಇದೇ. ಅತ್ತ ನಮ್ಮ ರೈತಾಪಿ ಹಾಗೂ ಕೂಲಿಕಾರ ಬಡಕುಟುಂಬಗಳಲ್ಲಿ ಮಹಿಳೆಯರು ಬೆಳಗಿನಿಂದ ಸಂಜೆಯವರೆಗೂ ಒಂದೇ ಸಮನೆ ದುಡಿಯಬೇಕಾಗುತ್ತದೆ. ಅದರಲ್ಲಿ ನಡುನಡುವೆ ಒಂದರ್ಧ ಘಂಟೆಯಷ್ಟು ಬಿಡುವು ಅವರಿಗೆ ದೊರೆತರೂ, ಮಹಾತ್ಮ ಗಾಂಧೀಜಿಯವರ ಅಪ್ಪಣೆಯನ್ನು ಅವರಿಗೆ ತಿಳಿಸಿ ಚರಖಾದ ಚಕ್ರವನ್ನು ಅವರ ಕೈಗೇ ನಿಲುಕಿಸಿದರೂ, ಅವರು ನಿದ್ದೆ ಹೋಗಿ ಬಿಡುತ್ತಾರೆ. ನಾನು ಅವರನ್ನು ದೂರಲಾರೆ. ನಿಜವಾದ ಪ್ರಯೋಜನ ಇಲ್ಲದೆ ಇರುವುದರಿಂದಲೇ ಹೀಗಾಗುತ್ತದೆಂದು ತೋರುತ್ತದೆ."

ಈ ಅವಧಿಯಲ್ಲಿ 'ಪರಶುರಾಮ' ಎಂಬ ಗುಪ್ತ ನಾಮದಲ್ಲಿ ಅವರು 'ವೇಣು'[1] ಪತ್ರಿಕೆಯಲ್ಲಿ ಇನ್ನೊಂದು ಲೇಖನವನ್ನು ಪ್ರಕಟಿಸಿದ್ದರು. ಅದರಲ್ಲಿ ಅವರು ಎಲ್ಲ ಆಕ್ಷೇಪಗಳಿಗೂ ಉತ್ತರಕೊಟ್ಟು, ಚರಖಾತತ್ವವನ್ನು ತೀವ್ರವಾಗಿ ವಿರೋಧಿಸಿದ್ದರು ಕೆಲವು ವರ್ಷಗಳ ಹಿಂದೆ, ಇದೇ ಪ್ರಶ್ನೆಯ ಬಗ್ಗೆ ಅವರು ಯಾವ ರವೀಂದ್ರರನ್ನು ವಿರೋಧಿಸಿದ್ದರೋ ಈಗ ಅದೇ ರವೀಂದ್ರರನ್ನು ಈ ಲೇಖನದಲ್ಲಿ ತಮಗೆ ಸಮರ್ಥನೆಯಾಗಿ ಉದ್ಧರಿಸಿದ್ದರು. ಚರಖಾದ ಅರ್ಥಶಾಸ್ತ್ರದ ವಿಷಯದಲ್ಲಿ ಅವರಿಗೆ ಸ್ವಲ್ಪವೂ ಒಮ್ಮತವಿರಲಿಲ್ಲ. ಈ ಕಾರಣದಿಂದಾಗಿಯೇ ಜನರು ಅವರನ್ನು ಗಾಂಧೀಜಿಯವರ ವಿರೋಧಿ ಎಂದು ಭಾವಿಸಿದ್ದರು. ಅವರು ಖಂಡಿತವಾಗಿಯೂ ವಿರೋಧಿಗಳಾಗಿದ್ದರು ಹಾಗೂ ಸಾಕಷ್ಟು ಉಗ್ರವಿರೋಧಿಗಳೂ ಆಗಿದ್ದರು. ಆದರೂ, ಈ ವಿರೋಧ ಮತ್ತು ಉಗ್ರತೆಯ ಕ್ಷೇತ್ರ ತುಂಬ ಸೀಮಿತವಾಗಿತ್ತು. ಈ ಆಲೋಚನೆಗಳನ್ನಿರಿಸಿಕೊಂಡಿದ್ದರೂ, ಗಾಂಧೀಜಿಯವರ ಬಗೆಗಿನ ಅವರ ಪ್ರೀತಿಯಲ್ಲಿ ಎಂದೂ ಯಾವ ಕೊರತೆಯೂ ಉಂಟಾಗಲಿಲ್ಲ. ವೈಯಕ್ತಿಕವಾಗಿ ಮುಸಲ್ಮಾನರೊಡನೆ ಅವರು ಇರಿಸಿಕೊಂಡಿದ್ದ ಸ್ನೇಹಪೂರ್ಣ ಸಂಬಂಧಗಳ ವಿಷಯದಲ್ಲಿಯೂ ಯಾವುದೇ ವ್ಯತ್ಯಾಸ ಉಂಟಾಗಲಿಲ್ಲ. ಕೆಲವೇ ತಿಂಗಳುಗಳ ಹಿಂದಷ್ಟೇ[2] ಅವರು ಮಾಲೀಕಾದಾದ ಅಭಯಾಶ್ರಮದಲ್ಲಿ ವಿಕ್ರಮಪುರದ ಯುವಕರ ಮತ್ತು ವಿದ್ಯಾರ್ಥಿಗಳ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ, ಕಾರ್ಯಕ್ರಮದ ಬಗ್ಗೆ ಸ್ವಲ್ಪವೂ ತಲೆಕೆಡಿಸಿಕೊಳ್ಳದೆ, ಸತ್ಯ ಮತ್ತು ನಿಷ್ಠೆಗಳ ವ್ರತವನ್ನು ಸ್ವೀಕರಿಸುವಂತೆ ಕರೆಕೊಟ್ಟಿದ್ದರು; ನಿರ್ಭಯತೆಯನ್ನು ಸಾಧಿಸುವ ಪ್ರಯತ್ನ ಮಾಡಬೇಕೆಂದೂ ಕರೆನೀಡಿದರು: "ಸಾಹಸವನ್ನು ಒಲಿಯುವುದು ಹಾಗೂ ನಿರ್ಭಯತೆಯನ್ನು ಸಾಧಿಸುವುದು ಒಂದೇ ಕಾರ್ಯವಲ್ಲ. ಒಂದು ದೇಹಕ್ಕೆ ಸಂಬಂಧಿಸಿದ್ದು; ಇನ್ನೊಂದು ಮನಸ್ಸಿಗೆ ಸಂಬಂಧಿಸಿದ್ದು. ದೇಹಶಕ್ತಿ ಮತ್ತು ಕೌಶಲಗಳು ಹೆಚ್ಚಿದರೆ ತನಗಿಂತಲೂ ದುರ್ಬಲನೂ ಕೌಶಲ ಹೀನನೂ ಆಗಿರುವಂಥವನನ್ನು ಸೋಲಿಸಬಹುದು. ಆದರೆ, ನಿರ್ಭಯತೆಯನ್ನು ಸಾಧಿಸುವುದರಿಂದ ತನಗಿಂತಲೂ ಶಕ್ತಿಶಾಲಿಯಾಗಿರುವಂಥವನನ್ನು ನೆಲಕಚ್ಚುವಂತೆ ಮಾಡಬಹುದು. ಲೋಕದಲ್ಲಿ ಯಾರೂ ಅಂಥವನನ್ನು ಗೋಳುಗುಟ್ಟಿಸಲಾರರು. ಅವನು ಅಜೇಯನಾಗಿರುತ್ತಾನೆ."

ಬಹುಶಃ ಅವರ ಈ ಬಗೆಯ ಆಲೋಚನೆಗಳು ಅಂದಂದಿನ ಪರಿಸ್ಥಿತಿಗಳಲ್ಲಿ ಅವರು ಅಂದಂದು ತೋರಿದ ಪ್ರತಿಕ್ರಿಯೆಗಳು ಮಾತ್ರವಾಗಿರುತ್ತಿದ್ದುವು. ಉದಾಹರಣೆಗೆ, ಬಾರ್ದೋಲಿಯ ಬಗೆಗಿನ ಪ್ರಶಂಸೆಯನ್ನು ಕೇಳಿದೊಡನೆಯೇ ಅವರ ಪ್ರಾಂತೀಯ ಅಭಿಮಾನ ಎಚ್ಚರಗೊಂಡಿತ್ತು. ಆ ಆವೇಶದಲ್ಲಿ ಅವರು ಕೆಲವು ಮಾತುಗಳನ್ನು ಹೇಳಿಬಿಟ್ಟಿದ್ದರು. ವಾಸ್ತವವಾಗಿ ಅವರಂಥ ಕಥಾಶಿಲ್ಪಿ ಅಂಥ ಮಾತುಗಳನ್ನು ಹೇಳಬಾರದಿತ್ತು. ರಾಜನೀತಿಯಂತೂ ಕಾಡಿಗೆಯ ಕೋಣೆಯಿದ್ದಂತೆ. ಅದನ್ನು ಪ್ರವೇಶಿಸಿದ ಮೇಲೆ, ಅದರ ಕಲೆ ಮೆತ್ತಿಕೊಳ್ಳದಂತೆ ಯಾರೂ ತಪ್ಪಿಸಿಕೊಳ್ಳಲಾರರು. ಮೇಲಾಗಿ, ಬಂಗಾಳದ ಅಂದಿನ ಸ್ಥಿತಿ ಅಷ್ಟೇನೂ

1. ಫೆಬ್ರುವರಿ 15, 1929.
2. ಆಶ್ವಿನ್ 1336 (ಸೆಪ್ಟೆಂಬರ್ 1926).

ಚೆನ್ನಾಗಿರಲಿಲ್ಲ. ಹತ್ತಾರು ಗುಂಪುಗಳಿದ್ದುವು. ಯಾವುದೇ ಕಾರಣದಿಂದಲಾದರೂ ಆಗಲಿ, ಯಾರಾದರೂ ಯಾವುದಾದರೂ ಒಂದು ಗುಂಪಿನೊಂದಿಗೆ ಒಂದುಗೂಡಿದ್ದರೆ, ಅವನಿಗೆ ಆ ಗುಂಪಿನ ಹಣೆಪಟ್ಟಿ ಅಂಟಿಕೊಳ್ಳದೆ ಇರುತ್ತಿರಲಿಲ್ಲ. ಅವರು ಹುಗಲೀ ಜಿಲ್ಲೆಯ ನಿವಾಸಿಗಳಾಗಿದ್ದರು. ಆದರೆ, ಆ ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು ಅವರನ್ನೆಂದೂ ಆಹ್ವಾನಿಸಲೇ ಇಲ್ಲ. ಏಕೆಂದರೆ, ಆ ಜಿಲ್ಲೆ ಖಾದೀವಾದಿಗಳ ಗುಂಪಿನ ಹಿಡಿತದಲ್ಲಿತ್ತು. ಗೆಳೆಯನೊಬ್ಬ ಅವರನ್ನು ಕೇಳಿದ್ದ: "ನಿಮ್ಮ ಜಿಲ್ಲೆಯ ಜನರೇ ನಿಮ್ಮನ್ನು ಕರೆಯುವುದಿಲ್ಲ. ಇದು ನಿಮಗೆ ಅಪಮಾನಕರವೆಂದು ತೋರುವುದಿಲ್ಲವೆ?"

ಅವರು ಹೀಗೆಂದು ಉತ್ತರಿಸಿದ್ದರು: "ಅವರು ಕರೆಯದೇ ಇದ್ದುದೇ ಒಳ್ಳೆಯದಾಯಿತು. ನನ್ನ ಆರೋಗ್ಯ ಅಷ್ಟೊಂದು ಚೆನ್ನಾಗಿರುವುದಿಲ್ಲ. ಕರೆದರೂ ಬಹುಶಃ ನನಗೆ ಹೋಗಲು ಆಗದೆ ಇರಬಹುದು. ಆಗ ಅವರು ಕೋಪ ಮಾಡಿಕೊಳ್ಳಲು ಅವಕಾಶ ದೊರೆತಂತೆ ಆಗುತ್ತಿತ್ತು. ನಾನು ಅಲ್ಲಿಗೆ ಹೋದೆನೆಂದೇ ಇಟ್ಟುಕೊಳ್ಳಿ. ಆಗ ಅವರು ಭಾಷಣ ಮಾಡುವಂತೆ ಹೇಳುತ್ತಿದ್ದರು. ಇಷ್ಟೊಂದು ಕಥೆ ಪುಸ್ತಕಗಳನ್ನು ಬರೆಯುವ ವ್ಯಕ್ತಿ ಭಾಷಣ ಮಾಡಲಾರ ಎಂದು ಯಾರಾದರೂ ನಂಬಲು ಸಾಧ್ಯವೆ? ಆದ್ದರಿಂದಲೇ, ನನ್ನನ್ನು ಕರೆಯದೆಯೇ ಅವರು ನನಗೆ ಉಪಕಾರ ಮಾಡಿದ್ದಾರೆ ಎಂದು ನಾನು ಹೇಳುವುದು."

ಈಗಲೂ ಅವರು ಕಾಂಗ್ರೆಸ್ಸಿನ ಅಧಿವೇಶನಗಳಲ್ಲಿ ಪಾಲ್ಗೊಳ್ಳುವುದಕ್ಕೆ ಹೋಗುತ್ತಿದ್ದರು. ರಾವೀ ನದಿಯ ದಡದಲ್ಲಿ ಪಂಡಿತ್ ಜವಾಹರಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ಯಾವ ಒಂದು ಮಹತ್ವಪೂರ್ಣ ಅಧಿವೇಶನ ನಡೆದಿತ್ತೋ, ಯಾವುದರಲ್ಲಿ ಪೂರ್ಣಸ್ವರಾಜ್ಯದ ಬೇಡಿಕೆಯನ್ನು ಮುಂದಿರಿಸಲಾಗಿತ್ತೋ ಆ ಅಧಿವೇಶನದಲ್ಲಿಯೂ ಅವರು ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಪ್ರವಾಸೀ ಬಂಗಾಳಿಗಳು ತಮ್ಮ ಈ ಸೋಲರಿಯದ ಕಥಾಶಿಲ್ಪಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸಿದ್ದರು. ಈ ಅಭಿನಂದನೆಗೆ ಉತ್ತರವಾಗಿ ಇವರು ಹೀಗೆಂದು ಘೋಷಿಸಿದ್ದರು: "ನಾವು ಹೆಮ್ಮೆಪಟ್ಟುಕೊಳ್ಳಬಹುದಾಗಿರುವಂಥ ಏಕೈಕ ವಸ್ತುವೆಂದರೆ ನಮ್ಮ ಈ ಭಾಷೆ!" ಆದರೆ, ಅವರ ಆರೋಗ್ಯ ದಿನೇ ದಿನೇ ಹದಗೆಡುತ್ತಲೇ ಹೋಗುತ್ತಿತ್ತು. ಕೇದಾರನಾಥ ಬಂದೋಪಾಧ್ಯಾಯ ಅವರಿಗೆ ಅವರು ಹೀಗೆಂದು ಬರೆದಿದ್ದರು: "ಚೆನ್ನಾಗಿದ್ದೇನೆ. ಹಗಲೂ-ರಾತ್ರಿ 'ಈಜಿ-ಛೇರ್'ಗೆ ಒರಗಿಕೊಂಡು ಅಂಗಳದಲ್ಲಿಯೇ ಬಿದ್ದಿರುತ್ತೇನೆ. ಬಲಗಾಲು ಕುಂಟಾಗಿದೆ; ಬಲಗಿವಿ ಮುಚ್ಚಿಹೋಗಿದೆ. ಮೂಲವ್ಯಾಧಿಯ ಪರಿಣಾಮವಾಗಿ ನಿತ್ಯವೂ ವ್ಯರ್ಥವಾಗಿ ರಕ್ತ ಹೋಗುತ್ತಿರುತ್ತದೆ. ಮಂಪರಿನ ಸ್ಥಿತಿಯಲ್ಲಿ ಆಗಾಗ್ಗೆ ಕೆಲವು ಕ್ಷಣಗಳವರೆಗೆ ಆರಾಮವಾಗಿ ನಿದ್ದೆಮಾಡಿರುತ್ತೇನೆ. ಕನಸು ಕಂಡು ಎಚ್ಚರಗೊಳ್ಳುತ್ತೇನೆ. ಎದುರಿಗೆ ದೊಡ್ಡ ನದಿ ಕಾಣಿಸುತ್ತದೆ. ದಡದಲ್ಲಿರುವ ದೋಣಿಗಳೆಷ್ಟು ಎಂದು ಎಣಿಸುತ್ತೇನೆ. ನನಗೆ ಅರಿವಿಲ್ಲದಂತೆಯೇ ಯಾವಾಗಲೋ ಕಣ್ಣು ಮುಚ್ಚಿ ಹೋಗಿರುತ್ತದೆ. ಎಲ್ಲ ವಿಚಾರಗಳನ್ನೂ ಮರೆತು ಬಿಟ್ಟಿರುತ್ತೇನೆ. ಬಲಗಡೆಯಿಂದ ಸೂರ್ಯದೇವ ಆಗಮಿಸಿ ಸುಡುವ ಬಿಸಿಲಿನಿಂದ ಮೈಯನ್ನು ಬೆಚ್ಚಗಾಗಿಸುತ್ತಾನೆ. ಕಣ್ಣು ತೆರೆದಾಗ ಹುಕ್ಕಾದ

ಕೊಳವೆಯನ್ನು ಎಳೆದುಕೊಂಡು, ನೋಡಿ. 'ಅರೆ, ಯಾರಾದರೂ ಹುಕ್ಕಾ ತುಂಬಿ' ಎಂದು ಹೇಳುತ್ತೇನೆ. ಯಾರಾದರೂ ತುಂಬುತ್ತಾರೆ. ಎಳೆದು ಕೊಂಡಾಗ ನೋಡಿದರೆ ಅದರಲ್ಲಿ ಹೊಗೆಯೇ ಇಲ್ಲ. ಗದರಿಸಿದರೆ ಅವರೆನ್ನುತ್ತಾರೆ: 'ನೀವು ನಿದ್ದೆ ಮಾಡಿಬಿಟ್ಟಿದ್ದಿರಿ, ಹೊತ್ತಿಸಿದ್ದ ಚಿಲುಮೆ ಉರಿದು ಬೂದಿಯಾಗಿದೆ'. ಪರೀಕ್ಷಿಸಿ ನೋಡುವ ಶಕ್ತಿ ಇಲ್ಲ. ಆದರೂ ಏರುದನಿಯಲ್ಲಿ ಗದರಿಸುತ್ತ ಹೇಳುತ್ತೇನೆ: 'ಹೌದು, ಹೌದು, ನಿದ್ದೆ ಹೋಗಿಬಿಟ್ಟಿದ್ದೇನೆ. ಇನ್ನೇನಾದರೂ ಕೆಲಸ ಇದೆಯೆ ನನಗೆ ? ಸುಳ್ಳು ಬೇರೆ ಹೇಳುತ್ತೀಯಾ ? ದೆಹಲಿಯಿಂದ ತಂದ ಆ ದೊಡ್ಡ ಚಿಲುಮೆಯನ್ನು ತುಂಬಿ, ಹೊತ್ತಿಸು. ಅದಾದರೆ ಬೇಗ ಉರಿದು ಹೋಗುವುದಿಲ್ಲ.' ಅವನು ಹೋದ ಮೇಲೆ 'ದೇವರೆ, ನಿಜವಾಗಿಯೂ ನನ್ನ ಕೋರಿಕೆಯನ್ನು ನೀನೇಕೆ ಒಪ್ಪುತ್ತಿಲ್ಲ ? ಯಾರೂ ನಿನ್ನನ್ನು ಏನೂ ಅನ್ನುವುದಿಲ್ಲ. ನನ್ನ ತಲೆಯಾಣೆ, ಓ ದೇವರೆ, ನನ್ನನ್ನು ಕರೆಸಿಕೊಂಡು ಬಿಡು' ಎಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತೇನೆ.

"ಎಂದೋ ಒಂದು ದಿವಸ ನನ್ನ ಕೋರಿಕೆಯನ್ನು ಒಪ್ಪುತ್ತಾನೆ ಎಂಬುದು ನನಗೆ ಗೊತ್ತು. ಆದರೆ ನನ್ನಂತೆಯೇ ಕಾಲ ಮಿಂಚಿಹೋದ ಮೇಲೆ ಹಾಗೆ ಮಾಡುತ್ತಾನೆ. ಆಗ ಸಂತೋಷದಿಂದ ಸ್ವೀಕರಿಸಲಾರೆ. ಕರೆ ಬಂದಿದೆ. ಬುತ್ತಿಸಿದ್ಧವಾಗಿದೆ. ನಿದ್ದೆ ಮಾಡುತ್ತ ಮಾಡುತ್ತ ಹಾಗೂ ಎಚ್ಚರವಾಗಿರುವಾಗ ಓದಲು ಆರಂಭಿಸುತ್ತೇನೆ. ಬಹುದಿನಗಳ ಅಭ್ಯಾಸವಲ್ಲವೆ! ಸಾಕಷ್ಟು ಅಫೀಮು ರಕ್ತದಲ್ಲಿ ಬೆರೆತುಕೊಂಡು ಬಿಟ್ಟಿದೆ. ಅನೇಕರಿಗೆ ಸೋತಿದ್ದೇನೆ. ಆದರೇನು, ಅಬಕಾರಿ ಇಲಾಖೆಯವರನ್ನು ಸೋಲಿಸಿದ್ದೇನಪ್ಪ! ಆದ್ದರಿಂದ, ನಿದ್ದೆಯಲ್ಲಿಯೂ ಈ ಬುತ್ತಿಯ ರಸ ಕೆಳಕ್ಕೆ ಹೋಗಿಯೇ ಬೀಳುತ್ತದೆ ಎಂಬ ನಂಬಿಕೆ ಇದೆ."

ಆರೋಗ್ಯ ಎಷ್ಟೇ ಕೆಟ್ಟಿದ್ದರೂ, ತಮ್ಮ 'ಪ್ರಿಯ ಸುಭಾಷ್' ಅವರನ್ನು ಬಿಟ್ಟಿರುವುದು ಅವರಿಗೆ ಈಗಲೂ ಸಾಧ್ಯವಿರಲಿಲ್ಲ. ಆದ್ದರಿಂದ ಮಾರನೆಯ ವರ್ಷ ಹಾವಡಾ ಜಿಲ್ಲಾ ಕಾಂಗ್ರೆಸ್ ಸಮಿತಿಯ ಚುನಾವಣೆಯ ಸಂದರ್ಭದಲ್ಲಿ ಸಾಕಷ್ಟು ಗಲಭೆ-ಗೊಂದಲ ಹಾರಾಟ-ಕೂಗಾಟ, ಲಾಠಿ-ಏಟು ಎಲ್ಲ ನಡೆಯಿತು. ಬಡಿಗೆಗಳ ಹೊಡೆದಾಟದ ಬಗೆಗಿನ ಭಯದಿಂದಾಗಿ, ಮುಳ್ಳು ಬೇಲಿಯ ಪಂಥಿಗೆ ವಿದ್ಯುತ್ತನ್ನು ಹಾಯಿಸಿ ಸಿದ್ಧವಾಗಿಟ್ಟುಕೊಳ್ಳಲಾಗಿತ್ತು. ಬಹುಶಃ ಈ ಕಾರಣದಿಂದಾಗಿಯೇ ದಂಗೆಯೇನೂ ಆಗಲಿಲ್ಲ. ಚುನಾವಣೆ ನಿರ್ವಿಘ್ನವಾಗಿ ಕೊನೆಗೊಂಡಿತು. ಶರತ್‌ಚಂದ್ರರ ಗುಂಪು, ಅಂದರೆ ಸುಭಾಷ್‌ಚಂದ್ರರ ಗುಂಪು ಮತ್ತೆ ಅಧಿಕಾರಾರೂಢವಾಯಿತು. ಹತ್ತು ವರ್ಷಗಳಿಂದಲೂ ಅವರ ಆಧಿಪತ್ಯವೇ ನಡೆದುಕೊಂಡು ಬಂದಿತ್ತು. ಆದ್ದರಿಂದ ಆ ನಿಹಿತ ಸ್ವಾರ್ಥವನ್ನು ಅವರೆಂತುಬಿಟ್ಟುಕೊಟ್ಟಾರು! 'ತಪ್ಪು ಬೇಕಾದಷ್ಟು ಆಗಿರಬಹುದು; ಆದರೆ, ಕೇಳಲು ನೀವು ಯಾರು ?' ಎಂಬುದು ಅವರ ತರ್ಕವಾಗಿತ್ತು. ನಾಡಿಗೆ ಸ್ವಾತಂತ್ರ್ಯ ಬರುವುದಿದ್ದರೆ, ಅದು ನಮ್ಮ ಮೂಲಕ ಬರುತ್ತದೆಯೇ ಹೊರತು ನಿಮ್ಮಿಂದಲ್ಲ; ನೀವು ಇದಕ್ಕೆ ಕೈ ಹಾಕಬೇಡಿ ಎಂಬುದು ಅವರ ವಾದವಾಗಿತ್ತು.

ಆದರೆ, ಇನ್ನೊಂದು ಗುಂಪು ಸುಲಭವಾಗಿ ಒಪ್ಪಿಕೊಳ್ಳುವಂಥದಾಗಿರಲಿಲ್ಲ. ಆದ್ದರಿಂದ ಆವೇಶ-ಆಕ್ರೋಶಗಳೆಲ್ಲ ಅಲ್ಲಿ ಮೆರೆದಿದ್ದುವು. ಒಂದು ಪತ್ರದಲ್ಲಿ

ಶರತ್‌ಚಂದ್ರರು ಈ ಗುಂಪುಗುಳಿತನವನ್ನು ತಮ್ಮದ್ದೇ ಆದ ವಿನೋದಪೂರ್ಣ ಶೈಲಿಯಲ್ಲಿ ಸುಂದರವಾಗಿ ವಿಡಂಬಿಸಿದ್ದಾರೆ:[1] "ದೇಶೋದ್ಧಾರದ ಕಾರ್ಯವನ್ನು ಮಾಡುವುದಕ್ಕಾಗಿ ಸುಭಾಷ್‌ಚಂದ್ರರ ಗುಂಪು ನನ್ನನ್ನು ಬಲವಂತವಾಗಿ ಕುಮಿಲ್ಲಾಗೆ ಹೊರಡಿಸಿತು. ದಾರಿಯಲ್ಲಿ ಒಂದು ಗುಂಪು 'ನಾಚಿಕೆಗೇಡು, ನಾಚಿಕೆಗೇಡು' ಎಂದು ಕೂಗು ಹಾಕಿತು. ಕಿಟಕಿಯ ಮೂಲಕ ಇಜ್ಜಲಿನ ಪುಡಿಯನ್ನು ತಲೆ ಮತ್ತು ಮೈಮೇಲೆಲ್ಲ ಸುರಿದು ನಮ್ಮ ಮೇಲೆ ಅವರಿಗೆ ಅದೆಷ್ಟು ಪ್ರೀತಿ ಇತ್ತು ಎಂಬುದನ್ನು ನೆನಪುಮಾಡಿಕೊಟ್ಟರು. ಇನ್ನೊಂದು ಗುಂಪು ಹನ್ನೆರಡು ಕುದುರೆಗಳ ಗಾಡಿಯಲ್ಲಿ ಮೆರವಣಿಗೆಯನ್ನು ನಡೆಸಿ, ಇಜ್ಜಲಿನ ಪುಡಿಯ ಸುರಿಮಳೆಯಿಂದೇನೂ ಆಗುವುದಿಲ್ಲ; ಅದೆಲ್ಲ ನಿಮ್ಮ ಭ್ರಮೆ ಎಂದು ತೋರಿಸಿಕೊಟ್ಟರು. ಏನಾದರೂ ಆಗಲಿ, ರೂಪನಾರಾಯಣ ನದಿಯ ತೀರಕ್ಕೆ ಹಿಂದಿರುಗಿ ಬಂದಿದ್ದೇನೆ. ಶ್ರೀ ಅರವಿಂದರ ಮುಕ್ತ ಮಾನವನಲ್ಲಿ ವೈಯಕ್ತಿಕ ಆಶೋತ್ತರಗಳೇನೂ ಇರುವುದಿಲ್ಲ. ಇನ್ನು ಈ ಶಕ್ತಿಯನ್ನು ಸಾಧಿಸುವುದು ನನಗೆ ತಡವಾಗುವುದಿಲ್ಲ. ಹನ್ನೆರಡು ಕುದುರೆಗಳ ಸಾರೋಟಿಗೆ ಜಯವಾಗಲಿ, ಜಯವಾಗಲಿ, ಇದ್ದಲಿನ ಪುಡಿಯ ಸುರಿಮಳೆಗೆ ಜಯವಾಗಲಿ."

ತ್ರಿಪುರಾ ಜಿಲ್ಲೆಯ ರಾಜಕೀಯ ಕಾರ್ಯಕರ್ತರ ಸಮ್ಮೇಳನ ಹಾಗೂ ಜಿಲ್ಲಾ ವಿದ್ಯಾರ್ಥಿ ಸಮ್ಮೇಳನಗಳಲ್ಲಿ ಭಾಗವಹಿಸುವುದಕ್ಕಾಗಿ ಅವರು ಕುಮಿಲ್ಲಾಗೆ ಬಂದಿದ್ದರು. ಜೊತೆಯಲ್ಲಿ ಸುಭಾಷ್‌ಚಂದ್ರ ಬೋಸ್ ಅವರೂ ಇದ್ದರು. ದಾರಿಯುದ್ದಕ್ಕೂ ಅವರಿಗೆ ಅದೆಂಥ ವೈಭವಪೂರ್ಣ ಸ್ವಾಗತ ದೊರೆಯಿತು ಎಂದರೆ ಅದನ್ನು ಕಂಡು ಅವರು ಮೈಮರೆಯುವಂತಾಯಿತು. ಸುಭಾಷ್‌ಚಂದ್ರರು ಸಮ್ಮೇಳನದ ಅಧ್ಯಕ್ಷರಾಗಿದ್ದರೆ, ಶರತ್‌ಚಂದ್ರರು ಉದ್ಘಾಟಕರಾಗಿದ್ದರು. ಅವರು ಒಂದೇ ಒಂದು ಮಾತನ್ನು ಒತ್ತಿ ಹೇಳಿದರು: "ನಿಮಗೆ ಕೊಡಲು ನನ್ನ ಬಳಿ ಇರುವುದು ಒಂದೇ ಒಂದು ಸಂದೇಶ. ಅದು ಸ್ವಾತಂತ್ರ್ಯದ ಸಂದೇಶ. ಬಂಗಾಳದ ನವಯುವಕರ ಮತ್ತು ವಿದ್ಯಾರ್ಥಿಗಳ ಉದ್ದೇಶ ಈಡೇರಲಿ ಎಂಬುದೇ ನನ್ನ ಹಾರೈಕೆ. ಸೇವೆಯನ್ನು ಸಲ್ಲಿಸಿ ಹಾಗೂ ಸಂಕಷ್ಟವನ್ನು ಸಹಿಸಿ, ಭಾರತದ ಗುರಿಯ ಸಾಧನೆಗೆ ನೆರವಾಗಿ. ಆ ಚಳವಳಿ ಸಫಲವಾಗುವುದನ್ನು ಕಾಣಲು ನಾನು ಇರುವುದಿಲ್ಲವಲ್ಲ ಎಂಬುದೊಂದೇ ನನಗಿರುವ ದುಃಖ."

ಇಂಥ ಹಾಸ್ಯ-ಮನೋಧರ್ಮ ಅವರಲ್ಲಿದ್ದರೂ, ಈ ರಾಜಕೀಯ ವಿತಂಡವಾದ ಬಹಳ ಕಾಲ ಅವರನ್ನು ಬಂಧಿಸಿ ಇಟ್ಟುಕೊಳ್ಳಲಾರದೆ ಹೋಯಿತು. ಕೊನೆಗೆ ಅವರು ತಮ್ಮ ಸಾಹಿತ್ಯಲೋಕಕ್ಕೆ ಹಿಂದಿರುಗಿದರು. ಅವರ ಆ ಗತಿಶೀಲ ತಟಸ್ಥ ಪ್ರವೃತ್ತಿ ಮತ್ತೆ ಮರಳಿ ಬಂದಂತೆ ತೋರಿತು. ಅವರು ಹಿಂದಿನಂತೆ ತಮ್ಮ ಮನುಷ್ಯತ್ವವನ್ನು ಪ್ರೀತಿಸತೊಡಗಿದರು.

ಆದ್ದರಿಂದಲೇ, ಮೂರುವರ್ಷಗಳ ಬಳಿಕ ಮಹಾತ್ಮ ಗಾಂಧಿಜೀಯವರು ಕಾಂಗ್ರೆಸ್ ಪಕ್ಷದ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಟ್ಟಾಗ[2], ಶರತ್‌ಚಂದ್ರರು

1. ನವೆಂಬರ್ 1931ರಲ್ಲಿ.

2. ಅಕ್ಟೋಬರ್ 1934ರಲ್ಲಿ.

ಕಥಾಶಿಲ್ಪಿಯ ಅಂತರ್ದೃಷ್ಟಿಯಿಂದ ಹೀಗೆ ಬರೆದರು: "ಚರಖಾದಿಂದ ನಾಡಿನ ಉದ್ಧಾರ ಆಯಿತೋ ಬಿಟ್ಟಿತೋ? ಅದ್ರೋಹ, ಅಸಹಕಾರಗಳು ನಾಡಿಗೆ ರಾಜಕೀಯ ಸ್ವಾತಂತ್ರ್ಯವನ್ನು ತಂದುಕೊಟ್ಟವೋ ಇಲ್ಲವೋ? ಕಾಯ್ದೆ ಭಂಗ ಚಳವಳಿಯ ಕೊನೆಯ ಪರಿಣಾಮ ಏನಾಗುತ್ತದೆಯೋ ಏನೋ? ಈ ಎಲ್ಲ ಪ್ರಶ್ನೆಗಳೂ ಇಂದು ಇಲ್ಲವಾಗಿವೆ. ಆದರೆ, ತಾವು ತೋರಿದ ಹಾದಿಯಲ್ಲಿ ನಡೆದುದರಿಂದ ಭಾರತಕ್ಕೆ ಕ್ಷತಿಯೇನೂ ಉಂಟಾಗಿಲ್ಲವೆಂಬ ಗಾಂಧೀಜಿಯವರ ವಾದವನ್ನು ನಾನು ನಿಜವೆಂದು ಒಪ್ಪುತ್ತೇನೆ.... ಮುಂದೆ ಅವರ ಅಭಿಮತ ಮತ್ತು ಪಥಗಳೆರಡೂ ಬದಲಾಗಿ ಬಿಡಬಹುದು, ಅವರು ಹಾಕಿಕೊಟ್ಟ ಆದರ್ಶಗಳ ಚಿಹ್ನೆಗಳೂ ಇರದೆ ಹೋಗಬಹುದು. ಆದರೆ, ಏನೆಲ್ಲ ಪರಿವರ್ತನೆಗಳೇ ಆದರೂ, ಅವರು ನಮಗೆ ಕೊಟ್ಟು ಹೋಗಿರುವ ಕೊಡುಗೆ ಅಮರವಾಗಿರುತ್ತದೆ. ದಾಸ್ಯದ ಸಂಕೋಲೆಯಿಂದ ಮುಕ್ತವಾದ ಭಾರತ ಅವರ ಬಗೆಗಿನ ಈ ಋಣವನ್ನು ಎಂದೆಂದೂ ಮರೆಯಲಾರದು. ಇಂದು ಅವರು ಕಾಂಗ್ರೆಸ್ ಪಕ್ಷದಿಂದ ಹೊರಬಂದಿದ್ದಾರೆ. ಅದನ್ನು ಅವರೇನೂ ತ್ಯಜಿಸಿಲ್ಲ. ಹಾಗೆ ಮಾಡುವಂಥ ಮಾರ್ಗವೂ ಇಲ್ಲ. ಯಾವ ಮಗುವನ್ನು ಅವರು ಬೆಳಸಿ ಮನುಷ್ಯನನ್ನಾಗಿ ಮಾಡಿದರೋ, ಅದು ಇಂದು ದೊಡ್ಡದಾಗಿಬಿಟ್ಟಿದೆ. ಆದ್ದರಿಂದ ಅದನ್ನು ತಮ್ಮ ಕಟ್ಟುನಿಟ್ಟಿನ ಆದೇಶದ ಪಾಶದಿಂದ ಬಿಡುಗಡೆ ಮಾಡಿದ್ದಾರೆ; ಸ್ವಂತ ಇಚ್ಛೆಯಿಂದಲೇ ಅದನ್ನು ಮುಕ್ತಗೊಳಿಸಿದ್ದಾರೆ. ಇದಕ್ಕಾಗಿ ನಾವು ದುಃಖಿಸಬೇಕಾದ ಅಗತ್ಯವಿಲ್ಲ. ಈ ಬಿಡುಗಡೆಯಿಂದ ಇಬ್ಬರಿಗೂ ಒಳ್ಳೆಯದಾಗುತ್ತದೆ ಎಂದು ನಾನು ನಂಬಿದ್ದೇನೆ."

## 20

ಸಾಮಾನ್ಯವಾಗಿ ಸಾಹಿತಿಗಳಲ್ಲಿ ಒಂದಲ್ಲ ಒಂದು ವೈಶಿಷ್ಟ್ಯ ಇದ್ದೇ ಇರುತ್ತದೆ. ಇದು ಅವರನ್ನು ಜನಸಾಮಾನ್ಯರಿಂದ ಬೇರೆಯಾಗಿಸುತ್ತದೆ. ಅದನ್ನು ಒಂದು ಗೀಳು ಎಂದು ಬೇಕಾದರೂ ಕರೆಯಬಹುದು. ಪಶು-ಪಕ್ಷಿಗಳ ಬಗೆಗಿನ ಶರತ್‌ಚಂದ್ರರ ಪ್ರೀತಿ ಈ ಗೀಳಿನ ಹಂತವನ್ನು ತಲುಪಿಬಿಟ್ಟಿತ್ತು. ಕೆಲವು ವರ್ಷಗಳ ಹಿಂದೆ, ಕಾಶಿಯಲ್ಲಿ ಒಬ್ಬ ವಿದ್ಯಾರ್ಥಿ ಅವರನ್ನು ಹೀಗೆಂದು ಕೇಳಿದ್ದ: "ನಿಮ್ಮ ಕಾದಂಬರಿಗಳಲ್ಲಿ ವರ್ಣಿಸಲಾಗಿರುವ ಮಾನವತೆಯಿಂದ ನಾನು ತುಂಬ ಪ್ರಭಾವಿತನಾಗಿದ್ದೇನೆ. ಆದರೆ, ನಾಯಿಗಳ ಮೇಲೆ ನೀವು ಇಷ್ಟೊಂದು ಹಣವನ್ನು ವೆಚ್ಚಮಾಡುವುದು ನನಗೆ ಅರ್ಥವಾಗುತ್ತಿಲ್ಲ."

ಶರತ್‌ಚಂದ್ರರು ನಗುತ್ತ ಹೇಳಿದರು: "ನೀವು ಹೇಳುವುದು ನಿಜ. ಆದರೆ, ಮನುಷ್ಯರಿಗಾಗಿ ನಾನು ಇದಕ್ಕಿಂತಲೂ ಹೆಚ್ಚು ಹಣವನ್ನು ಖರ್ಚುಮಾಡಿದ್ದೇನೆ ಎಂಬುದು ಬಹುಶಃ ನಿನಗೆ ಗೊತ್ತಿಲ್ಲ."

ಅವರು ತಪ್ಪಾಗಿಯೇನೂ ಹೇಳಿರಲಿಲ್ಲ. ಬಾಲ್ಯದಲ್ಲಿ ರಾಜುವಿನ ಪಾಠಶಾಲೆಯಲ್ಲಿ ಕಲಿತಿದ್ದ ಮಾನವೀಯ ಕರುಣೆಯ ಪಾಠಕ್ಕೆ ತಮ್ಮ ಇಡೀ ಜೀವನದಲ್ಲಿ ಮೂರ್ತರೂಪವನ್ನು ಕೊಡುತ್ತ ಬಂದಿದ್ದರು. ಎಲ್ಲವನ್ನೂ ಕಳೆದುಕೊಂಡು ನಿರ್ಗತಿಕರಾಗಿದ್ದವರೇ ರಂಗೂನಿನಲ್ಲಿಯೂ ಅವರಿಗೆ ಸರ್ವಸ್ವವಾಗಿದ್ದರು. ಬಂಗಾಳಕ್ಕೆ

ಹಿಂದಿರುಗಿ ಬಂದ ಮೇಲೆ ಅವರು ಹಳ್ಳಿಯವರಿಗಾಗಿ ಶಾಲೆಯನ್ನು ತೆರೆದರು; ರಸ್ತೆಯನ್ನು ಮಾಡಿಸಿದರು; ಸ್ನಾನ ಘಟ್ಟವನ್ನು ನಿರ್ಮಿಸಿದರು. ಅವರ ಪರವಾಗಿ ಕೋರ್ಟುಗಳಲ್ಲಿಯೂ ಹೋರಾಡಿದರು. ನಾನಾ ಬಗೆಯ ನಾನಾ ಜನರಿಗೆ ಹಣಕಾಸಿನ ನೆರವು ನೀಡಿದರು. ಒಮ್ಮೆ ಪುಷ್ಯಮಾಸದಲ್ಲಿ ರಿಮ್-ಝಿಮ್ ರಿಮ್-ಝಿಮ್ ಎಂದು ಮಳೆಸುರಿಯುತ್ತಿದ್ದಾಗ, ಕವಿ ನರೇಂದ್ರದೇವ್ ಅವರೊಡನೆ ಏನನ್ನೋ ವ್ಯಾಪಾರಮಾಡಲು ಹೊರಟಿದ್ದರು. ಇದ್ದಕ್ಕಿದ್ದಂತೆ ಅವರ ದೃಷ್ಟಿ ಒಬ್ಬ ಭಿಕ್ಷುಕಿಯತ್ತ ಹೊರಳಿತು. ಮಳೆಯಿಂದ ಅವಳ ಬಟ್ಟೆಗಳೆಲ್ಲ ತೊಯ್ದು ಹೋಗಿದ್ದುವು. ಚಳಿಯಿಂದಾಗಿ ಅವಳು ಥರಥರ ನಡುಗುತ್ತಿದ್ದಳು. ಅವರು ತಮ್ಮ ಹಣದ ಸಂಚಿಯನ್ನು ಹೊರತೆಗೆದು, ಅದರಲ್ಲಿದ್ದುದೆಲ್ಲವನ್ನೂ ಆಕೆಯ ಅಂಗೈಗೆ ಸುರಿದುಬಿಟ್ಟರು. ನೋಟುಗಳು, ರೂಪಾಯಿಗಳು, ಚಿಲ್ಲರೆ ಎಲ್ಲ ಸೇರಿ ಸಾಕಷ್ಟು ಮೊತ್ತವೇ ಇತ್ತು. "ಅಣ್ಣಯ್ಯಾ ಇದೇನು ಮಾಡುತ್ತಿದ್ದೀರಿ ?" ಎಂದು ನರೇಂದ್ರ ದೇವ್ ಅವರು ಆಕ್ಷೇಪಿಸಿದರು.

ಅವರ ಬಗ್ಗೆ ಸ್ವಲ್ಪವೂ ಗಮನ ಕೊಡದೆ, ಶರತ್‌ಚಂದ್ರರು ಆ ಭಿಕ್ಷುಕಿಗೆ ಹೇಳಿದರು: "ಅಮ್ಮ ಇಷ್ಟೊಂದು ಚಳಿಯಲ್ಲಿ ಹೀಗೆ ಹೊರಗೆ ಬರಬೇಡ. ಎಷ್ಟು ದಿವಸ ಆಗುತ್ತದೆಯೋ ಅಷ್ಟು ದಿವಸ ನಡೆಸು. ಇನ್ನೊಮ್ಮೆ ಬಂದಾಗ ಇನ್ನಷ್ಟು ಕೊಡುತ್ತೇನೆ."

ಅವರು ಆಕೆಗೆ ತಮ್ಮ ವಿಳಾಸವನ್ನೂ ಬರೆದುಕೊಟ್ಟರು.

ಇನ್ನೊಂದು ದಿವಸ ಕವಿ ನರೇಂದ್ರ ದೇವ್ ಅವರ ಮನೆಯಲ್ಲಿ ಹರಟೆ ಹೊಡೆಯುತ್ತ ಕುಳಿತಿದ್ದರು. ರಾತ್ರಿ ತುಂಬ ಹೊತ್ತಾಗಿ ಬಿಟ್ಟಿತ್ತು. ಕವಿ ದಂಪತಿಗಳು ಅವರನ್ನು ಬಿಟ್ಟು ಬರಲೆಂದು ಸಾಕಷ್ಟು ದೂರದವರೆಗೆ ಬಂದರು. ಮಹಾನಿರ್ವಾಣ ಮಠದ ಬಳಿಗೆ ಬರುವ ಹೊತ್ತಿಗೆ, ಇದ್ದಕ್ಕಿದ್ದಂತೆ ಮಗುವಿನ ಚೀತ್ಕಾರ ಕೇಳಿಸಿತು. ಅವರು ಬೆಚ್ಚಿ ನಿಂತರು. ಅಲ್ಲಿ ಸರಿಯಾದ ಬೇಲಿಯಾಗಲೀ ಕಾಲು ಹಾದಿಯಾಗಲೀ ಇರಲಿಲ್ಲ. ಜಾಲಿಯ ಗಿಡದ ಬೇಲಿ ಮಾತ್ರ ಇತ್ತು. ಅಲ್ಲಿಂದಲೇ ಶರತ್‌ಚಂದ್ರರು ಬಟ್ಟೆಯಲ್ಲಿ ಸುತ್ತಿ ಒಗೆದಿದ್ದ ನವಜಾತ ಶಿಶುವನ್ನು ಹುಡುಕಿ ತೆಗೆದರು. ಅಲ್ಲಿಯೇ ಕುಳಿತು, ಆ ಬಟ್ಟೆಯ ಗಂಟನ್ನು ಬಿಚ್ಚಿ ನೋಡಿದರು. ಮಗುವಿನ ಕೋಮಲ ಶರೀರಕ್ಕೆ ಸಾವಿರಾರು ಇರುವೆಗಳು ಮುತ್ತಿಕೊಂಡಿದ್ದುವು. ಕರುಣೆಯ ಧ್ವನಿಯಲ್ಲಿ "ಅಯ್ಯೋ ದೇವರೆ, ಅಯ್ಯೋ ನನ್ನ ಮಗುವೆ, ನಿನಗಾಗಿ ನನ್ನ ಪ್ರಾಣವನ್ನು ಬೇಕಾದರೂ ಕೊಡುತ್ತೇನೆ" ಎಂದೆಲ್ಲ ಹೇಳುತ್ತ, ಆ ಮಗುವಿನ ಮೈಯನ್ನು ಒರೆಸತೊಡಗಿದರು. ಆಮೇಲೆ ರಾಧಾರಾನೀ ದೇವಿಯವರತ್ತ ತಿರುಗಿ ಹೇಳಿದರು: "ರಾಧಾ ಬಿಸಿ ಹಾಲು ಮತ್ತು ಹತ್ತಿ ಉರುಳೆ ತೆಗೆದುಕೊಂಡು ಬರುತ್ತೀಯಾ ?"

ಆ ಕೂಡಲೇ ಅವೆಲ್ಲ ಬಂದುವು. ಆ ಮಗುವಿಗೆ ಹಾಲು ಕುಡಿಸುತ್ತ ಅವರು ಹೇಳಿದರು: "ನೀವು ಪೋಲೀಸ್ ಠಾಣೆಗೆ ಹೋಗಿ ಸುದ್ದಿಕೊಡಿ."

ರಾಧಾರಾನೀ ದೇವಿ ಹೇಳಿದರು: "ಬೇಡ, ಬೇಡ. ಅದೇನೂ ಬೇಡ. ನಾನೇ ಇದನ್ನು ಸಾಕಿಕೊಳ್ಳುತ್ತೇನೆ."

ಶರತ್‌ಚಂದ್ರರು ಹೇಳಿದರು: "ಹಾಗಲ್ಲ, ಇದು ಯಾರೋ ಬಿಸಾಡಿ ಹೋಗಿರುವ

ಮಗು. ಇದರ ಹಿಂದೆ ಯಾವುದೋ ಕರುಣಾಜನಕ ಕಥೆ ಇದೆ. ನಾವು ಯಾವುದೇ ಪೇಚಿಗೆ ಸಿಕ್ಕಿಕೊಳ್ಳುವ ಸಂಭವ ಇದೆ."

ರಾತ್ರಿಯ ಹೊತ್ತಾಗಿತ್ತು. ಒಂದು ಅಂಗಡಿಗೆ ಹೋಗಿ, ಅಲ್ಲಿಂದ ಆಸ್ಪತ್ರೆಗೆ ಫೋನು ಮಾಡಿದರು. "ಈ ರೀತಿ ಸಿಕ್ಕಿದ ಬೇಡದ ನವಜಾತ ಶಿಶುಗಳನ್ನು ನೇರವಾಗಿ ಆಸ್ಪತ್ರೆಗೆ ಸೇರಿಸಿಕೊಳ್ಳಲು ಅವಕಾಶವಿಲ್ಲ" ಎಂದು ಅಲ್ಲಿಂದ ಉತ್ತರ ಬಂದಿತು.

ಆಮೇಲೆ ಪೋಲೀಸರಿಗೆ ಫೋನು ಮಾಡಿದರು. ಅವರೂ ಆಗಲೇ ಬರಲು ಸಿದ್ಧರಿರಲಿಲ್ಲ. ಆದರೆ, ಶರತ್‌ಚಂದ್ರರ ಹೆಸರನ್ನು ಕೇಳಿದೊಡನೆಯೇ, ಅಲ್ಲಿಗೆ ಬರಲು ಅವರು ಸಿದ್ಧರಾದರು. ಕೆಲವೇ ಕ್ಷಣಗಳಲ್ಲಿ ಇಬ್ಬರು ಪೇದೆಗಳು ಅಲ್ಲಿಗೆ ಬಂದು, ಆ ಮಗುವನ್ನು ಎತ್ತಿಕೊಂಡುಹೋದರು. ಅಲ್ಲಿಯವರೆಗೂ ಶರತ್‌ಚಂದ್ರರು ಅಲ್ಲಿಯೇ ಇದ್ದರು. ಅಷ್ಟೆ ಅಲ್ಲ, ಮಾರನೆಯ ದಿವಸ ಅಂಗಡಿಯವನ ಟೆಲಿಫೋನ್ ಬಿಲ್ಲಿನ ಹಣವನ್ನು ಸಂದಾಯ ಮಾಡಲು, ಆ ಸುಡುತ್ತಿದ್ದ ಬಿಸಿಲಿನಲ್ಲಿಯೇ ಅವರು ನಡೆದು ಬಂದಿದ್ದರು.

ಮುಂದೆ, ಈ ಘಟನೆಗೆ ಸಂಬಂಧಿಸಿದಂತೆ ಬಂದ ಅಪವಾದಗಳಲ್ಲಿ ಇದೂ ಒಂದಾಗಿತ್ತು. ಅಲ್ಲಿ ನೆರೆದಿದ್ದ ಸಣ್ಣ ಗುಂಪಿನಲ್ಲಿದ್ದ ಒಬ್ಬ ವ್ಯಕ್ತಿ ಅವರನ್ನು ಗುರುತಿಸದೆಯೇ ಹೀಗೆಂದು ಹೇಳಿದ್ದ: "ಶರತ್‌ಬಾಬೂ, ನೀವಿಂದು ಧನ್ಯರಾದಿರಿ! ಚಿರಕಾಲ ಬಾಳಿ! ಇನ್ನು ಮುಂದೆ ಬಂಗಾಳದ ಮನೆಮನೆಯ ಮುಂದೆಯೂ ಇಂಥ ಮಕ್ಕಳೇ ಸಿಕ್ಕುತ್ತವೆ."

ಈ ಅಪವಾದದಲ್ಲಿ ಎಷ್ಟರ ಮಟ್ಟಿನ ಸತ್ಯ ಇದೆ ಎಂಬುದು ನಮಗೆ ಗೊತ್ತಿಲ್ಲ. ಆದರೆ, ಈ ಘಟನೆ ಅವರು ಗಳಿಸಿದ್ದ ಪ್ರಸಿದ್ಧಿಗೆ ಒಂದು ಪ್ರಬಲ ಪ್ರಮಾಣವನ್ನು ಒದಗಿಸುತ್ತದೆ. ಅಂದು ಆ ವಿದ್ಯಾರ್ಥಿಯ ಪ್ರಶ್ನೆಗೆ ಉತ್ತರ ಕೊಡುತ್ತ ಅವರು ಮುಂದುವರಿದು ಹೀಗೆಂದು ಹೇಳಿದ್ದರು: "ಮನುಷ್ಯ ಮತ್ತು ನಾಯಿ - ಇವುಗಳಲ್ಲಿ ನಾನು ಅಂಥ ಭೇದವನ್ನೇನೂ ಎಣಿಸುವುದಿಲ್ಲ. ಎರಡೂ ಪ್ರಾಣಿಗಳೇ. ಇವುಗಳಲ್ಲಿ ನಾಯಿಯನ್ನು ಕಂಡರೆ ನನಗೆ ಹೆಚ್ಚು ಇಷ್ಟ. ಏಕೆಂದರೆ, ಅವುಗಳಿಗೆ ಕೋಪ ಬಂದಾಗ ಮಾತ್ರವೇ ಅದು ಬೊಗಳುತ್ತವೆ, ಕಚ್ಚುತ್ತವೆ. ಆದರೆ, ಮನುಷ್ಯನ ಸಂಗತಿಯೇ ಬೇರೆ ಒಬ್ಬ ವ್ಯಕ್ತಿಯ ವಿಷಯದಲ್ಲಿ ಮನಸ್ಸಿನಲ್ಲಿ ತಿರಸ್ಕಾರದ ಭಾವನೆ ಇದ್ದರೂ, ಎದುರಿಗೆ ಕಂಡಾಗ ಚೆನ್ನಾಗಿಯೇ ನಗುತ್ತಿರುತ್ತಾನೆ."

ಭೇಲೂವಿನ ಕಥೆಯೇನೂ ಅಪವಾದ ಸ್ವರೂಪವಾಗಿಲ್ಲ. ಬಾಲ್ಯದಿಂದಲೂ ಅವರಿಗೆ ನಾಯಿಯನ್ನು ಕಂಡರೆ ತುಂಬ ಇಷ್ಟವಿತ್ತು. ಬರ್ಮಾದಿಂದ ಹಿಂದಿರುಗಿದ ಬಳಿಕ, ಭಾಗಲ್ಪುರದ ಬಂಧುಗಳೊಬ್ಬರಿಗೆ ಅವರು ಒಂದು ನಾಯಿಯನ್ನು ಕೊಟ್ಟಿದ್ದರು. ಅವರು ಅಲ್ಲಿಗೆ ಹೋದಾಗ, ಅದಕ್ಕೆ ತುಂಬ ಸಂತೋಷವಾಗುತ್ತಿತ್ತು. ಅದನ್ನು ನೋಡಿದ ಕೂಡಲೇ ಅವರೂ ಹೀಗೆಲ್ಲ ಹೇಳುತ್ತಿದ್ದರು: "ಹೇಗಿದ್ದೀಯಾ, ಪಪ್ಪಿ? ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ? ಬಾ, ಬಾ, ಹುಷಾರಿಲ್ಲವೇನು? ಓಹ್, ಮೈಯಲ್ಲಿ ಎಷ್ಟು ಧೂಳು ತುಂಬಿಕೊಂಡುಬಿಟ್ಟಿದೆ! ಅಯ್ಯಯ್ಯೋ, ಇದೇನು! ಘಾಯವೆ? ಕಚ್ಚಾಡಿದೆಯೇನು? ಅರೆ, ಸ್ವಲ್ಪವೂ ನೋಡಿಕೊಂಡಿಲ್ಲವಲ್ಲ! ಎಷ್ಟೊಂದು ದೊಡ್ಡ ಘಾಯ! ಅದಕ್ಕೆ ಎಷ್ಟು ಕಷ್ಟವಾಗುತ್ತಿರಬೇಕು! ನಾಯಿ ಕಡ

ನೀವು ಸ್ವಲ್ಪವೂ ಗಮನವನ್ನೇ ಕೊಡುವುದಿಲ್ಲವೇನು ?"

ಎರಡು ಕಣ್ಣುಗಳಲ್ಲಿಯೂ ಕಣ್ಣೀರು ತುಂಬಿ ಬರುತ್ತಿತ್ತು. ಆ ಬಳಿಕ ಶುಶ್ರೂಷೆ ನಡೆಯುತ್ತಿತ್ತು - ಬಿಸಿ ನೀರು, ಎಣ್ಣೆ, ಸಾಬೂನು, ಔಷಧಿ, ಬ್ಯಾಂಡೇಜು. ಇದೆಲ್ಲ ಮಾಡಿ, ಕಟ್ಟಿಹಾಕಿ ಮಲಗಿಸುತ್ತಿದ್ದರು.

ಮಕ್ಕಳಿಗೆ ಸಿಹಿತಿಂಡಿ ತಿನ್ನಿಸುವಾಗಲೂ ಅವರು ಅದನ್ನು ಮರೆಯುತ್ತಿರಲಿಲ್ಲ. "ಅಯ್ಯೋ ಮರೆತೇ ಬಿಟ್ಟಿದ್ದೆನಲ್ಲ! ಪಪ್ಪಿಗೂ ಕೊಟ್ಟು ಬಾರಪ್ಪ!" ಎಂದು ಹೇಳುತ್ತಿದ್ದರು. ನಿತ್ಯವೂ ತಾವು ಸ್ನಾನ ಮಾಡಿದ ಬಳಿಕ, ತಮ್ಮ ಕೈಯಾರೆ ಅದಕ್ಕೆ ಅನ್ನವನ್ನು ತಿನ್ನಿಸುತ್ತಿದ್ದರು. ಈ ಪಪ್ಪಿಯನ್ನು ಯಾವುದೋ ಕಾರಣಕ್ಕಾಗಿ ಶರತ್ ಮಜೂಮ್‌ದಾರ ಅವರ ಮಗ ಗುಂಡಿಕ್ಕಿ ಕೊಂದಿದ್ದ. ಬಹುಶಃ ಅದು ಅವರ ಮನೆಗೆ ನುಗ್ಗಿತ್ತು. ಆಗ ಆ ಬಂಧು ಅವನ ಬಂದೂಕನ್ನು ಕಸಿದುಕೊಂಡು ಅವನಿಗೆ ನಾಲ್ಕು ಬಾರಿಸಿದ್ದ. ಜಗಳ ಎಲ್ಲಿಯವರೆಗೆ ಬಂದಿತ್ತೆಂದರೆ, ಕೋರ್ಟಿನ ಕಟ್ಟೆಯನ್ನು ಹತ್ತುವಂಥ ಪರಿಸ್ಥಿತಿಯೂ ಉಂಟಾಗಿತ್ತು. ಆ ದಿನಗಳಲ್ಲಿಯೇ ಆಕಸ್ಮಿಕವಾಗಿ ಶರತ್‌ಚಂದ್ರರು ಭಾಗಲ್ಪುರಕ್ಕೆ ಬಂದಿದ್ದರು. ಈ ಕಥೆಯನ್ನು ಕೇಳಿ ಅವರು ಕೋಪದಿಂದ ಹೀಗೆಂದರು: "ನಾನೇ ಇಲ್ಲಿ ಇದ್ದಿದ್ದರೆ, ಅದೇ ರಿವಾಲ್ವರ್‌ನಿಂದ ಅವನನ್ನೂ ಕೊಂದುಬಿಡುತ್ತಿದ್ದೆ. ನೀವೇನೂ ಹೆದರಿಕೊಳ್ಳಬೇಡಿ. ಅವನು ಮೊಕದ್ದಮೆ ಹೂಡಿದರೆ ಹೂಡಲಿ. ನಾನು ದುಡ್ಡು ಕೊಡುತ್ತೇನೆ. ಅವನು ನಮ್ಮ ಮಗುವನ್ನೇ ಕೊಂದಿದ್ದಾನೆ."

ಅವರು ಶರತ್ ಮಜೂಮದಾರರ ಗೆಳೆಯರೂ ಆಗಿದ್ದರು. ಬಂದಾಗಲೆಲ್ಲ ಅವರನ್ನು ಭೇಟಿಯಾಗುತ್ತಿದ್ದರು. ಆದರೆ, ಈ ಘಟನೆಯ ಬಳಿಕ ಅವರು ಅತ್ತ ಸುಳಿಯಲೇ ಇಲ್ಲ. ಹೇಳಿಕಳಿಸಿದರೂ ಹೋಗಲಿಲ್ಲ. "ಅವರನ್ನೇ ಇಲ್ಲಿಗೆ ಕಳಿಸು. ಅವರ ಮಗ ನಮ್ಮ ಪಪ್ಪಿಯನ್ನು ಕೊಂದಿದ್ದಾನೆ."

ಕಾಶಿ ಪ್ರವಾಸದ ಸಂದರ್ಭದಲ್ಲಿ ಅವರು ಶೈಲೇಶ ವಿಶಿಗೆ ಹೀಗೆಂದು ಹೇಳಿದ್ದರು: "ಕಾಶಿಗೆ ಬಂದಾಗ ಬ್ರಾಹ್ಮಣರಿಗೆ ಸಂತರ್ಪಣೆಯನ್ನು ಏರ್ಪಡಿಸಬೇಕಾಗುತ್ತದೆ. ಆದರೆ, ನಾನೇನು ತೀರ್ಮಾನ ಮಾಡಿದ್ದೇನೆ, ಗೊತ್ತೆ? ನಾನು ನಾಯಿಗಳಿಗೆ ಸಂತರ್ಪಣೆಯನ್ನು ಏರ್ಪಡಿಸುತ್ತೇನೆ. ಕಾಶಿಯ ನಾಯಿಗಳು ತುಂಬ ಕಷ್ಟದಲ್ಲಿವೆ. ಇಲ್ಲಿ ಮೈಲಿಗೆಗೆ ತುಂಬ ಮಹತ್ವಕೊಡುತ್ತಾರೆ. ನಾಯಿಯನ್ನೇನಾದರೂ ಮುಟ್ಟಿದರೆ, ಮತ್ತೆ ಸ್ನಾನಮಾಡಬೇಕಾಗುತ್ತದೆ. ಬಡಪಾಯಿ ನಾಯಿಗಳು ಹೊಟ್ಟೆಗಿಲ್ಲದೆಯೇ ಸತ್ತು ಹೋಗುತ್ತವೆ. ಅವುಗಳಿಗೇ ಊಟ ಹಾಕಿಸಬೇಕು."

ವಿಶಿಮಹಾಶಯ ಪ್ರತಿಯೊಂದು ತಿರುವಿನಲ್ಲಿಯೂ ನಾಯಿಗಳನ್ನು ಹುಡುಕಿಕೊಂಡು ಅಲೆದಾಡಬೇಕಾಗಿ ಬಂತು. ಅವುಗಳನ್ನು ಒಂದುಗೂಡಿಸಿ, ಅವುಗಳಿಗೆ ಭೂರಿ-ಭೋಜನ ಮಾಡಿಸಲಾಯಿತು. ನಾಯಿಗಳು ತೃಪ್ತಿಯಿಂದ ತಿಂದು ತೇಗುವವರೆಗೂ, ಬೇರಾವ ಮನುಷ್ಯನಿಗೂ ಬಡಿಸಬಾರದೆಂದು ಅವರು ಅಪ್ಪಣೆ ಮಾಡಿದ್ದರು.

ಆರೋಗ್ಯವನ್ನು ಉತ್ತಮಪಡಿಸಿಕೊಳ್ಳುವ ಸಲುವಾಗಿ ಅವರು ದೇವಧರ್‌ಗೆ ಬಂದಿದ್ದರು. ಅಲ್ಲಿಯೂ ಅವರು ಗಾಳಿಸಂಚಾರಕ್ಕೆ ಹೊರಟಾಗ, ಎಲ್ಲಿಂದಲಾದರೂ

ಯಾವುದಾದರೂ ಒಂದು ನಾಯಿ ಬಂದು ಅವರ ಜೊತೆಗೂಡಿಕೊಳ್ಳುತ್ತಿತ್ತು. ಆದರೆ ಮನೆಯೊಡೆಯನ ಹಾಗೂ ಸೇವಕನ ಬಗೆಗಿನ ಭಯದಿಂದಾಗಿ ಅದು ಒಳಗೆ ಬರಲಾರದೆ ಹೋಗುತ್ತಿತ್ತು. ತಾನೇ ಎಲ್ಲವನ್ನು ತಿನ್ನಬೇಕೆಂಬ ಲೋಭದಿಂದ ತೋಟಗಿತ್ತಿ ಅದನ್ನು ಓಡಿಸಿಬಿಡುತ್ತಿದ್ದಳು. ಒಂದು ದಿವಸ ಶರತ್‌ಚಂದ್ರರು ಅದರ ಕಣ್ಣುಗಳಲ್ಲಿ ನೀರಾಡುತ್ತಿದ್ದುದನ್ನು ಅದು ಹೇಗೋ ನೋಡಿಬಿಟ್ಟರು. ಸರಿ, ನೌಕರರೆಲ್ಲರ ವಿಚಾರಣೆ ಆರಂಭವಾಗಿಬಿಟ್ಟಿತು. ಗಲಭೆಯನ್ನು ಕೇಳಿ ಅವರ ಗೆಳೆಯರು ಅಲ್ಲಿಗೆ ಬಂದರು. ಈ ಕಥೆಯನ್ನು ಕೇಳಿದಾಗ, ಅವರು ಮುಗುಳ್ನಕ್ಕು ಹೇಳಿದರು: "ನಿಮ್ಮ ಸಂಗತಿಯೇ ವಿಚಿತ್ರ. ಮನುಷ್ಯರಿಗೇ ಇಲ್ಲಿ ತಿನ್ನಲು ಸಿಕ್ಕುವುದಿಲ್ಲ! ನೀವು ಬೀದಿನಾಯಿಗಳನ್ನು ಎಳೆದುಕೊಂಡು ಅವಕ್ಕೆ ತಿನ್ನಿಸುತ್ತೀರಲ್ಲ! ವಾಹ್ ಶರತ್‌ಬಾಬೂ!"

ಆದರೆ, ಶರತ್‌ಚಂದ್ರರು ಈ ವಾದವನ್ನು ಒಪ್ಪಲಿಲ್ಲ. ಅವರು ಆ ನಾಯಿಗೆ ಹೊಟ್ಟೆ ತುಂಬ ತಿನ್ನಿಸಿದರು. ಅದರ ಬಗೆಗಿನ ಪ್ರೀತಿಯಿಂದಾಗಿಯೇ ಅವರು ಎರಡು ದಿನ ಹೆಚ್ಚಾಗಿ ಅಲ್ಲಿ ತಂಗಿದ್ದರು. ಮೂರನೆಯ ದಿವಸ ಅವರು ಅಲ್ಲಿಂದ ಹೊರಟಾಗ ಆ ನಾಯಿ ಅವರನ್ನು ಬಿಡಲು ಸ್ಟೇಷನ್‌ವರೆಗೂ ಬಂದಿತ್ತು. ಅದರ ನೆನಪನ್ನು ಅಮರವಾಗಿಸುತ್ತ ಅವರು ಹೀಗೆಂದು ಬರೆದಿದ್ದಾರೆ: "ನನ್ನನ್ನು ರೈಲಿಗೆ ಹತ್ತಿಸುವುದಕ್ಕಾಗಿ ನನ್ನೊಡನೆ ಬಂದಿದ್ದವರಿಗೆಲ್ಲ ನಾನು ಬಕ್ಷೀಸುಕೊಟ್ಟೆ. ಏನೂ ಸಿಕ್ಕದೆ ಇದ್ದದ್ದು ನನ್ನ ಅತಿಥಿಗೆ ಮಾತ್ರವೆ. ಬಿಸಿಯ ಆ ಹವಾಮಾನದಲ್ಲಿ ಬೀಸಿ ಬಂದ ಗಾಳಿಯಿಂದ ಎದ್ದ ಧೂಳು ಪರದೆಯಂತೆ ಕಣ್ಣು ಮುಂದೆ ಕವಿದುಕೊಂಡಿತು. ಹೊರಡುವ ಮೊದಲು ಆ ಪರದೆಯ ಒಳಗಿನಿಂದ ಅಸ್ಪಷ್ಟವಾಗಿ ಕಾಣಿಸಿತು. ಸ್ಟೇಷನ್ನಿನ ಹೆಬ್ಬಾಗಿಲಿನ ಹೊರಗೆ ನನ್ನ ಅತಿಥಿ ನಿಂತುಕೊಂಡು, ಎವೆಯಿಕ್ಕದೆ ನನ್ನತ್ತಲೇ ನೋಡುತ್ತಿತ್ತು. ಸಿಳ್ಳೆ ಹಾಕುತ್ತ ರೈಲು ಮುಂದೆ ಓಡಿತು. ನನ್ನ ಮನಸ್ಸಿನಲ್ಲಿ ಎಲ್ಲಿ ಹುಡುಕಿದರೂ ಮನೆಗೆ ಹಿಂದಿರುಗಬೇಕೆಂಬ ಆಸೆಯಾಗಲೀ ಉತ್ಸಾಹವಾಗಲೀ ಕಾಣುತ್ತಿರಲಿಲ್ಲ. ನನ್ನ ಅತಿಥಿ ಹಿಂದಿರುಗಿ ಮನೆಯ ಕಬ್ಬಿಣದ ಹೆಬ್ಬಾಗಿಲು ಮುಚ್ಚಿರುವುದನ್ನು ನೋಡುತ್ತದೆ; ಒಳಗೆ ಹೋಗುವುದಕ್ಕೆ ಮಾರ್ಗವೇ ಇಲ್ಲವೆಂಬುದೂ ಅದಕ್ಕೆ ಗೊತ್ತಾಗುತ್ತದೆ; ಬಹುಶಃ ದಾರಿಯಲ್ಲೇ ನಿಂತುಕೊಂಡು ಒಂದೆರಡು ದಿನ ನನ್ನ ಹಾದಿಯನ್ನು ಎದುರುನೋಡುತ್ತಿರುತ್ತದೆ; ನಿಃಶಬ್ದವಾಗಿರುವ ನಡುಹಗಲಿನ ಅವಧಿಯಲ್ಲಿ ಯಾವಾಗಲೋ ಒಮ್ಮೆ ಹೆಬ್ಬಾಗಿಲು ತೆರೆದಿರುವುದನ್ನು ಕಂಡು ಸದ್ದಿಲ್ಲದೆ ಮೇಲೆ ಹತ್ತಿ ಬಂದು ನಾನು ತಂಗಿದ್ದ ಕೋಣೆಯನ್ನು ಹುಡುಕಿ ನೋಡುತ್ತದೆ; ನಾನು ಅಲ್ಲಿ ಇಲ್ಲದೆ ಇರುವುದನ್ನು ಕಂಡು ಆ ಬೀದಿಯ ನಾಯಿ ಮತ್ತೆ ಬೀದಿಗೇ ಶರಣು ಹೋಗುತ್ತದೆ - ಇಂಥವೇ ಆಲೋಚನೆಗಳು ನನ್ನ ಮನಸ್ಸಿನಲ್ಲಿ ಮೂಡುತ್ತಿದ್ದುವು."

ಅವರ ಸಾಹಿತ್ಯವನ್ನು ಓದಿ ತುಂಬ ಸಂತೋಷಗೊಂಡ ಕೆಲವು ಮಹಿಳೆಯರು ಒಮ್ಮೆ ಅವರನ್ನು ಊಟಕ್ಕೆ ಕರೆದಿದ್ದರು. ಅವರು ಅಲ್ಲಿ ಹೋಗಿ ನೋಡಿದರೆ, ಅಮೃತಶಿಲೆಯ ಮೇಜಿನ ಬಳಿ ಸುಂದರವಾದ ಆಸನವನ್ನಿರಿಸಿದ್ದಾರೆ. ಯಾರೋ ಒಬ್ಬ ರಾಕ್ಷಸನಿಗೆ ಔತಣವನ್ನು ಏರ್ಪಡಿಸಿರಬೇಕೆಂಬ ಭಾವನೆ ಬರುವಷ್ಟು ಪ್ರಮಾಣದಲ್ಲಿ

ಭೋಜ್ಯವಸ್ತುಗಳ ರಾಶಿ ರಾಶಿಯೇ ಅಲ್ಲಿದೆ. ಏನು ಮಾಡಲಿ ಎಂದು ಯೋಚಿಸಿದರು. ಇದ್ದಕ್ಕಿದ್ದಂತೆ ಅವರ ದೃಷ್ಟಿ ಆ ಗಲ್ಲಿಯ ನಾಯಿಗಳತ್ತ ಹರಿಯಿತು. ಅವು ಎಲುಬಿನ ಗೂಡಿನಂತೆ ಕಾಣುತ್ತಿದ್ದುವು. ಹಲವು ದಿನಗಳಿಂದ ಹೊಟ್ಟೆ ತುಂಬ ತಿನ್ನಲು ಏನೂ ಸಿಕ್ಕಿಲ್ಲವೇನೋ ಎಂಬಂತೆ ಅವು ಹಸಿವಿನಿಂದ ಹರಿಹಾಯುತ್ತಿದ್ದುವು. ಅವರು ಮನೆಯೊಡೆಯನಿಗೆ ಹೇಳಿದರು: "ಸ್ವಾಮಿ, ಒಂದು ದೊಡ್ಡ ಕುಂಡ ಇದ್ದರೆ ತರಿಸಿಕೊಡಿ."

ಮನೆಯೊಡೆಯನಿಗೆ ಆಶ್ಚರ್ಯವಾಯಿತು. ಆದರೆ, ಅತಿಥಿಯೇ ಅದನ್ನು ಬೇಡುತ್ತಿರುವಾಗ ಏನು ಮಾಡುವುದು? ಆತ ಕುಂಡವನ್ನು ತರಿಸಿಕೊಟ್ಟ. ಶರತ್‌ಚಂದ್ರರು ಅದರಲ್ಲಿ ಅನ್ನ, ತೊವ್ವೆ, ಮಾಂಸ, ತರಕಾರಿ-ಪಲ್ಯ, ಸಿಹಿತಿಂಡಿಗಳು, ಖೀರು ಎಲ್ಲವನ್ನೂ ತುಂಬಿಕೊಂಡು, ಗಲ್ಲಿಯ ಬಳಿಗೆ ಹೋಗಿ, ಅದನ್ನು ನಾಯಿಗಳ ಮುಂದೆ ಇರಿಸಿದರು. ಅಂದು ಅವುಗಳಿಗೆ ಮತ್ತೆ ಪ್ರಾಣ ಬಂದಂತಾಯಿತು. ಆದರೆ, ಮನೆಯೊಡೆಯ ಮೂಕನಂತಾಗಿಬಿಟ್ಟಿದ್ದ. ಸ್ವಲ್ಪ ಹೊತ್ತಿನ ಬಳಿಕ ಆತನಿಗೆ ಇಷ್ಟು ಮಾತ್ರ ಹೇಳಲು ಸಾಧ್ಯವಾಯಿತು: "ಮಕ್ಕಳುಮರಿಯಾದರೂ ಇವನ್ನು ತಿನ್ನಬಹುದಾಗಿತ್ತು."

ಶರತ್‌ಚಂದ್ರರೆಂದರು: "ಅವರು ನಿತ್ಯವೂ ತಿನ್ನುತ್ತಾರಲ್ಲ! ಆದರೆ, ನಾಯಿಗಳಿಗೆ ಇವತ್ತೆ ಸಿಕ್ಕಿದ್ದು! ಬಡಪಾಯಿಗಳು, ಇವತ್ತು ಬದುಕಿಕೊಂಡುವು."

ಒಮ್ಮೆ ಎಲ್ಲಿಂದಲೋ ಬಂದ ಒಂದು ಹೆಣ್ಣುನಾಯಿ ಅವರ ಕೈತೋಟದಲ್ಲಿ ಮರಿಹಾಕಿಬಿಟ್ಟಿತು. ನಿತ್ಯವೂ ಹೊತ್ತಿಗೆ ಸರಿಯಾಗಿ ಬಂದು ಅವುಗಳಿಗೆ ಅದು ಹಾಲುಕುಡಿಸಿ ಹೋಗುತ್ತಿತ್ತು. ಆದರೆ, ಒಂದು ದಿವಸ ಅದು ಹೊತ್ತಿಗೆ ಸರಿಯಾಗಿ ಬರಲಿಲ್ಲ. ಸರಿ, ಅವರು ಈ ಉದ್ಯೋಗಕ್ಕೆ ತಮ್ಮನ್ನು ತೊಡಗಿಸಿಕೊಂಡರು. ನಾಯಿಮರಿಗಳಿಗೆ ಹಾಲು ಕುಡಿಸಿದರು. ಆಮೇಲೆ ಅವುಗಳ ತಾಯಿಯನ್ನು ಹುಡುಕಿಕೊಂಡು ಹೊರಟರು. ಮೂರು ದಿವಸಗಳ ವರೆಗೆ ಅವರ ಈ ಅನ್ವೇಷಣೆ ಮುಂದುವರಿಯಿತು. ಅವರು ಒಂದು ಘೋಷಣೆಯನ್ನೂ ಹೊರಡಿಸಿದರು: "ಹುಡುಕಿಕೊಂಡು ಬಂದವರಿಗೆ ಹತ್ತು ರೂಪಾಯಿ ಬಹುಮಾನವನ್ನು ಕೊಡಲಾಗುತ್ತದೆ."

ಏದುಸಿರು ಬಿಡುತ್ತ ಇಬ್ಬರು ಅವರ ಮುಂದೆ ಬಂದು ನಿಂತು ಹೇಳಿದರು: "ಸಿಕ್ಕಿದೆ. ಒಣಗಿ ಹೋಗಿರುವ ಪಾಳು ಬಾವಿಯೊಂದರಲ್ಲಿ ಬಿದ್ದಿದೆ. ಆದರೆ, ಅದಿನ್ನೂ ಬದುಕಿದೆ."

ಶರತ್‌ಚಂದ್ರರು ಹೇಳಿದರು: "ಹಾಗಾದರೆ, ಈಗಲೇ ಹೋಗಿ ಅದನ್ನು ಎಳೆದುಕೊಂಡು ಬನ್ನಿ. ಇನ್ನೂ ಐದು ರೂಪಾಯಿ ಕೊಡುತ್ತೇನೆ."

ಸ್ವಲ್ಪ ಹೊತ್ತಿನ ಬಳಿಕ ಆ ಹೆಣ್ಣುನಾಯಿ ಅಲ್ಲಿಗೆ ಬಂದಿತು. ತಾಯಿಯನ್ನು ನೋಡಿ ಆ ನಾಯಿಮರಿಗಳಿಗೆ ಅದೆಷ್ಟು ಆನಂದವಾಯಿತು! ಕುಂಯ್, ಕುಂಯ್ ಎಂದು ಬಿದ್ದು ಹೊರಳಾಡತೊಡಗಿದುವು. ಶರತ್‌ಚಂದ್ರರ ಮನಸ್ಸೂ ಆನಂದದಿಂದ ಅರಳಿನಿಂತಿತು.

ಸಾಮತಾ ಬೇಡದಲ್ಲಿ ಅವರು ಕೆಂಪುಬಣ್ಣದ ಇನ್ನೊಂದು ಕಂತ್ರಿನಾಯಿಯನ್ನು

ಸಾಕಿಕೊಂಡಿದ್ದರು. ಅದಕ್ಕೆ 'ಬಾಘಾ' ಎಂದು ಹೆಸರಿಟ್ಟಿದ್ದರು. ಅದು ಭೇಲುವಿನ ಸ್ಥಾನವನ್ನು ತುಂಬಲಾರದೆ ಹೋಯಿತಾದರೂ, ಆದರ-ಸತ್ಕಾರಗಳ ವಿಷಯದಲ್ಲಿ ಅದಕ್ಕೆ ಕೊರತೆಯೇನೂ ಆಗಲಿಲ್ಲ. ಒಂದು ದಿವಸ ಹುಚ್ಚು ನರಿಯೊಂದು ಅದನ್ನು ಕಚ್ಚಿಬಿಟ್ಟಿತು. ಚಿಕಿತ್ಸೆ ಮಾಡಿಸಿದರೂ ಅದು ಉಳಿಯಲಿಲ್ಲ. ನೋವಿನಿಂದ ತುಂಬಿದ ಹೃದಯದಿಂದ ಅವರು ತಮ್ಮ ದಿನಚರಿಯಲ್ಲಿ ಹೀಗೆ ಬರೆದರು: "ಇಂದು ಬಾಘಾ ಸತ್ತು ಹೋಯಿತು - ಮೋಹಿನೀ ಘೋಷಾಲ್ ಅವರ ಮನೆಯ ಮುಂದೆ ಅದು ಯಾವಾಗ ಹುಚ್ಚು ನರಿ ಅದನ್ನು ಕಚ್ಚಿಬಿಟ್ಟಿತೋ ಏನೋ."

ಈ ಬಗೆಯ ಕಥೆಗಳು ಬಾಯಿಂದ ಬಾಯಿಗೆ ಸಂಚರಿಸುತ್ತ ಇರುತ್ತವೆ. ಹೀಗಾಗಿ, ಇವುಗಳಲ್ಲಿ ಅತಿಶಯೋಕ್ತಿಗಳೇನಾದರೂ ಸೇರಿಕೊಂಡುಬಿಟ್ಟದ್ದರೆ, ಅದು ಸಹಜ ಹಾಗೂ ಅನಿವಾರ್ಯ, ಅವುಗಳ ಸ್ವರೂಪ ಅಲ್ಲಲ್ಲಿ ಬದಲಾಗಿರಬಹುದು. ಆದರೆ, ಈ ಕಾರಣದಿಂದಾಗಿಯೇ, ಅವು ಸುಳ್ಳೇನೂ ಆಗುವುದಿಲ್ಲ. ನಾಯಿಯೇ ಅಲ್ಲ, ಇತರ ಪ್ರಾಣಿಗಳೂ ಅವರಿಗೆ ಪ್ರಿಯವಾಗಿದ್ದುವು. ಒಮ್ಮೆ ಅವರು ಭಾಗಲ್ಪುರದ ಅಡ್ವೊಕೇಟ್ ಚಂಡೀಶರಣ ಘೋಷ್ ಅವರೊಂದಿಗೆ ಬಿಹಾರ್ ಶರೀಫ್ ನೋಡಲು ಹೋಗಿದ್ದರು. ಅವರು ಒಂದು ಕುದುರೆಗಾಡಿಯಲ್ಲಿ ಪ್ರಯಾಣ ಮಾಡಬೇಕಾಗಿತ್ತು. ಆದರೆ, ಕುದುರೆ ಮುಂದಕ್ಕೆ ಹೆಜ್ಜೆ ಹಾಕಲೂ ಸಿದ್ಧವಿರಲಿಲ್ಲ. ಕುದುರೆಗಾಡಿಯವನು ಅದಕ್ಕೆ ನಾಲ್ಕಾರು ಸಲ ಚಾವಟಿಯಿಂದ ಬಾರಿಸಿದ. ಶರತ್‌ಚಂದ್ರರು ಥರಥರ ನಡುಗಿಬಿಟ್ಟರು. "ಅಯ್ಯಾ, ಅದನ್ನು ಹೊಡೀಬೇಡ. ಅದು ಹೊರಡದೇ ಇದ್ದರೆ ಚಿಂತೆಯಿಲ್ಲ. ನಾವು ಹೋಗುವುದೇ ಇಲ್ಲ."

ಗಾಡಿಯವನು ಹೇಳಿದ: "ಸ್ವಾಮಿ, ಇವು ಹೊರಡೋದೆ ನಾಲ್ಕು ಏಟು ಬಿದ್ದ ಮೇಲೆ."

ಮತ್ತೆ ಮೂರುನಾಲ್ಕು ಸಲ ಚಾವಟಿಯಿಂದ ಬಾರಿಸಿದ. ಶರತ್‌ಚಂದ್ರರು ಕೂಡಲೇ ಗಾಡಿಯಿಂದ ಇಳಿದುಬಿಟ್ಟರು. "ನಾವು ಹೋಗುವುದೇ ಇಲ್ಲ, ಬಿಡು" ಎಂದರು.

ಘೋಷ್ ಅವರು ಸಾಕಷ್ಟು ಸಮಾಧಾನ ಹೇಳಿದರು. ಗಾಡಿಯವನು ಕುದುರೆಯನ್ನು ಹೊಡೆಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದರೆ ಮಾತ್ರ ತಾವು ಗಾಡಿಯಲ್ಲಿ ಕುಳಿತುಕೊಳ್ಳುವುದಾಗಿ ಹೇಳಿದರು. ಅವನು ಹಾಗೆಯೇ ಮಾಡಿದ. ಆಗಷ್ಟೆ ಅವರು ಗಾಡಿಯಲ್ಲಿ ಹೋಗಿ ಕುಳಿತುಕೊಂಡರು. "ಇವು ಬಡಪಾಯಿ ಪ್ರಾಣಿಗಳು. ನಮ್ಮ ಹಾಗೆ ಕೂಗಾಡಿ-ಅರಚಾಡಿ ಇವು ಅತ್ಯಾಚಾರ-ಅನಾಚಾರಗಳನ್ನು ವಿರೋಧಿಸಲಾರವು. ಆದ್ದರಿಂದಲೇ, ಇವುಗಳ ವಿಚಾರದಲ್ಲಿ ನನಗೆ ಸಹಾನುಭೂತಿ ಇದೆ" ಎಂದರು.

ಈ ಸಹಾನುಭೂತಿ ಎಷ್ಟರ ಮಟ್ಟಿಗೆ ಅವರ ವ್ಯಕ್ತಿತ್ವದ ಸಹಜ ಅಂಗವೇ ಆಗಿಬಿಟ್ಟದ್ದಿತೆಂದರೆ ಎಲ್ಲಿಯಾದರೂ ಯಾವುದಾದರೂ ಪ್ರಾಣಿಗೆ ಕಷ್ಟ ವಾಗುತ್ತಿದ್ದುದನ್ನು ಕಂಡರೆ, ಅವರ ಆತ್ಮ ಚೀತ್ಕರಿಸುತ್ತಿತ್ತು. ನೆರೆಮನೆಯ ಹಸುವೊಂದು ಇಡೀ ರಾತ್ರಿ ಪ್ರಸವವೇದನೆಯಿಂದ ಒದ್ದಾಡುತ್ತಿತ್ತು. ಆ ರಾತ್ರಿಯಿಡೀ ಅವರಿಗೆ ನಿದ್ದೆ ಮಾಡಲು ಆಗಲೇ ಇಲ್ಲ. ಅವರಿಂದ ಏನೂ ಮಾಡಲು

ಸಾಧ್ಯವಿರಲಿಲ್ಲ. ಆದ್ದರಿಂದ, ಲೋಕದಲ್ಲಿ ಇಂಥ ವೇದನೆಯನ್ನೇಕೆ ಸೃಷ್ಟಿಸಿದೆ ಎಂದು ಅವರು ದೇವರನ್ನು ಬಯ್ಯುತ್ತ ಇದ್ದರು.

ಹಸುವೇ ಏಕೆ? ವಿಷ ಸರ್ಪಗಳ ವಿಷಯದಲ್ಲಿಯೂ ಅವರ ಮಮತೆ ಇಷ್ಟೇ ತೀವ್ರವಾಗಿರುತ್ತಿತ್ತು; ಅಸೀಮವಾಗಿರುತ್ತಿತ್ತು. ಸಾಮತಾಬೇಡದ ಮನೆಯ ಮುಂದಿನ ಕೈದೋಟದ ಹುಲ್ಲುಹಾಸಲಿನ ಮೇಲೆ, ಚಳಿಗಾಲದಲ್ಲಿ ಮಧ್ಯಾಹ್ನದ ಹೊತ್ತಿಗೆ, ದೊಡ್ಡ ದೊಡ್ಡ ಹಾವುಗಳು ಬಂದು ಬಿಸಿಲಿಗೆ ಮೈಚಾಚಿರುತ್ತಿದ್ದುವು. ಆ ಹೊತ್ತಿನಲ್ಲಿ ಶರತ್‌ಚಂದ್ರರು ಅಲ್ಲಿ ಬಂದು ಕಾವಲು ಕೂಡುತ್ತಿದ್ದರು; "ನೀವು ಆಕಡೆ ಹೋಗಬೇಡಿ. ಅಲ್ಲಿ ಅವು ಬಿಸಿಲಿಗೆ ಮೈಚಾಚಿವೆ. ನೀವು ಅಲ್ಲಿ ಹೋದರೆ, ಅವು ಓಡಿ ಹೋಗಿ ಬಿಡುತ್ತವೆ" ಎಂದು ಅವರು ಮಕ್ಕಳನ್ನೂ ತಡೆಯುತ್ತಿದ್ದರು.

ಹಕ್ಕಿಗಳ ವಿಷಯದಲ್ಲಿಯೂ ಅವರ ಮಮತೆ ಕಡಿಮೆಯಾಗಿರಲಿಲ್ಲ. 'ದೇವಘರ್‌ನ ನೆನಪುಗಳು' ಎಂಬ ತಮ್ಮ ಒಂದು ಪ್ರಬಂಧದಲ್ಲಿ ಅವರು ನಾಯಿಯ ಕಥೆಯೊಂದಿಗೆ ಪಕ್ಷಿಗಳ ಮನೋಹರ ವರ್ಣನೆಯನ್ನೂ ಕೊಟ್ಟಿದ್ದಾರೆ. "ನಾನು ನೋಡುತ್ತಿದ್ದೆ. ಆ ಹಕ್ಕಿಗಳಲ್ಲಿ ಕೋಗಿಲೆ ಉಳಿದೆಲ್ಲವುಗಳಿಗಿಂತಲೂ ಮುಂಚಿತವಾಗಿ ಬೆಳಗಿನ ಜಾವದಲ್ಲಿ ಎಚ್ಚರಗೊಳ್ಳುತ್ತಿತ್ತು. ಕತ್ತಲು ಇನ್ನೂ ಕಣ್ಮರೆಯಾಗುವುದಕ್ಕ ಮೊದಲೇ ನಸುಕಿನಲ್ಲಿ ಹಕ್ಕಿಗಳ ಕಲರವ ಆರಂಭಗೊಳ್ಳುತ್ತಿತ್ತು. ಅದಾದ ಬಳಿಕ ಒಂದಾದ ಮೇಲೆ ಒಂದರಂತೆ ಬುಲ್-ಬುಲ್, ಶ್ಯಾಮಾ, ಸಾಲಿಖ್, ಟುನ್‌ಟುನ್ ಎಂಬ ಹೆಸರಿನ ಹಕ್ಕಿಗಳು ಬರುತ್ತವೆ. ಪಕ್ಕದ ಮನೆಯ ಮಾವಿನ ಮರದ ಮೇಲೆ, ನನ್ನ ಮನೆಯ ಬಕುಲ ಕುಂಜದಲ್ಲಿ, ದಾರಿಯ ಅಂಚಿನಲ್ಲಿರುವ ಅರಳಿಯ ಮರದ ತುದಿಯಲ್ಲಿ ಈ ಹಕ್ಕಿಗಳೆಲ್ಲ ಕಲೆಯುತ್ತವೆ. ಎಲ್ಲವನ್ನೂ ನಾನು ನನ್ನ ಕಣ್ಣುಗಳಿಂದ ನೋಡಲಾಗುತ್ತಿರಲಿಲ್ಲ. ಆದರೆ, ನಿತ್ಯವೂ ಅವುಗಳ ಕಲರವವನ್ನು ಕೇಳಿ ಅದೆಷ್ಟು ಅಭ್ಯಾಸವಾಗಿಬಿಟ್ಟಿದ್ದಿತೆಂದರೆ ಅವುಗಳಲ್ಲಿ ಒಂದೊಂದು ಹಕ್ಕಿಯೂ ನನ್ನ ಗುರುತಿನ ಹಕ್ಕಿಯೇ ಎಂದನ್ನಿಸುತ್ತಿತ್ತು.

"ಹಳದಿಯ ಬಣ್ಣದ ಬನಬಹೂ (ಕಾಡಿನ ಸೊಸೆ) ಎಂಬ ಹೆಸರಿನ ಹಕ್ಕಿಯ ಒಂದು ಜೋಡಿ ಸ್ವಲ್ಪ ತಡವಾಗಿ ಬರುತ್ತಿತ್ತು. ಗೋಡೆಯ ಅಂಚಿಗೆ ಬೆಳೆದು ನಿಂತಿದ್ದ ನೀಲಗಿರಿ (ಎಂಬ ಹೆಸರಿನ ವಿದೇಶೀ) ಗಿಡದ ತುಂಬ ಎತ್ತರದ ಕೊಂಬೆಯ ಮೇಲೆ ಬಂದು ಕುಳಿತು ಈ ಜೋಡಿ ಹಾಜರಿ ಹಾಕುತ್ತಿತ್ತು. ಇದ್ದಕ್ಕಿದ್ದಂತೆ, ಏಕೋ ಏನೋ ಆ ಜೋಡಿ ಎರಡು ದಿವಸಗಳವರೆಗೆ ಬರಲೇ ಇಲ್ಲ. ಇದನ್ನು ಕಂಡು ನಾನು ವ್ಯಸ್ತನಾಗಿಬಿಟ್ಟೆ. ಅವುಗಳನ್ನು ಯಾರಾದರೂ ಹಿಡಿದುಕೊಂಡು ಬಿಟ್ಟಿದ್ದಾರೇನೋ ಎಂದೂ ಮನಸ್ಸಿನಲ್ಲಿ ಯೋಚಿಸತೊಡಗಿದ್ದೆ. ಇಂಥ ಹಕ್ಕಿಗಳ ಬೇಟೆಗಾರರ ಕೊರತೆಯೇನೂ ಇರಲಿಲ್ಲ. ಹಕ್ಕಿಗಳನ್ನು ಹಿಡಿದು ವಿದೇಶಗಳಿಗೆ ಕಳಿಸುವುದೇ ಇಂಥ ಬೇಟೆಗಾರರ ಬದುಕಿನ ದಾರಿಯಾಗಿಬಿಟ್ಟಿದೆ. ಆದರೆ, ಮೂರನೆಯ ದಿವಸ ಆ ಜೋಡಿ ಮತ್ತೆ ಬಂದಿತು. ಅದನ್ನು ನೋಡಿದ ಮೇಲೆ, ನಿಜವಾಗಿಯೂ ಭಾರಿ ಚಿಂತೆಯೊಂದು ದೂರವಾದಂಥ ಅನುಭವ ಉಂಟಾಯಿತು.

ಆ ದಿನವಂತೂ ಇವರ ಪರದುಃಖ ಕಾತರತೆ ತನ್ನ ಪರಾಕಾಷ್ಠೆಯನ್ನು, ತುತ್ತತುದಿಯನ್ನು ತಲುಪಿತು. ಅಂದು ಸಂಜೆ ತಮ್ಮ ಒಬ್ಬ ಬಂಧುಗಳೊಡನೆ ಅವರು

ಪೇಟೆಯ ಕಡೆ ಹೋಗುತ್ತಿದ್ದರು. ಒಮ್ಮೆಗೇ ಬಿಳಿಯ ಗಿಣಿಗಳ ಚೀತ್ಕಾರದ ಕೂಗು ಕಿವಿಗೆ ಬಿದ್ದಿತು. ಆ ಕರುಣಾಪೂರ್ಣ ಚೀತ್ಕಾರದ ಕೂಗು ಒಂದು ವಿಶಾಲ ಭವನದ ಒಳಗಿನಿಂದ ಕೇಳಿಬರುತ್ತಿತ್ತು. ಒಮ್ಮೆಗೇ ವ್ಯಗ್ರರಾಗಿ ಶರತ್‌ಚಂದ್ರರು ಒಳಗೆ ಧಾವಿಸಿದರು. ಕೋಪಗೊಂಡಿದ್ದ ಸೇವಕನೂ ಅವರನ್ನು ತಡೆಯಲಾರದೆ ಹೋದ. ಬಿಳಿಯ ಗಿಣಿಯ ಕೊರಳು ಹೇಗೋ ಏನೋ ಹಗ್ಗಕ್ಕೆ ಸಿಕ್ಕಿಕೊಂಡು ಉರುಳಾಗಿ ಬಿಟ್ಟಿತ್ತು. ಆ ಉರುಳಿನಿಂದ ಬಿಡಿಸಿಕೊಳ್ಳಲು ಸಾಧ್ಯವಾಗದೆ ಅದು ಆರ್ತನಾದ ಮಾಡುತ್ತಿತ್ತು. ಅವರು ಕೂಡಲೇ ಆ ಉರುಳನ್ನು ಬಿಡಿಸತೊಡಗಿದರು. ಹೇಗೋ ಏನೋ ಇವನಂತೂ ಕಳ್ಳನೇ ಆಗಿರಬೇಕೆಂದು ಬಿಳಿಯ ಗಿಳಿಗಳನ್ನು ಕದ್ದುಕೊಂಡು ಹೋಗಬಯಸಿದ್ದಾನೆಂದೂ ಆ ಸೇವಕ ಭಾವಿಸಿಕೊಂಡುಬಿಟ್ಟ. ಅವರನ್ನು ಹೊಡೆಯಲು ಅವನು ಅವರತ್ತ ಧಾರಿಸಿಬಂದ. ಅಷ್ಟು ಹೊತ್ತಿಗೆ, ಗಲಾಟೆಯ ಸದ್ದನ್ನು ಕೇಳಿ ಆ ಮನೆಯ ಒಡೆಯನೂ ಹೊರಗೆ ಬಂದ. ಶರತ್‌ಚಂದ್ರರನ್ನು ನೋಡಿ, "ನೀವು ಯಾರು ? ನಿಮಗೆ ಯಾರು ಬೇಕು ?" ಎಂದು ಕೇಳಿದ.

ಉತ್ತರವಾಗಿ ಶರತ್‌ಚಂದ್ರರು, "ಈ ಹಕ್ಕಿ ನಿಮ್ಮದೇನು ? ಹಕ್ಕಿಗಳನ್ನು ಸಾಕುವುದು ನಿಮಗೆ ತುಂಬ ಇಷ್ಟವಾದ ಕೆಲಸವೆ ?" ಎಂದು ಕೇಳಿದರು.

ಆ ಗೃಹಸ್ಥ ಅವಾಕ್ಕಾಗಿ ಬಿಟ್ಟ. "ನೀವೇನು ಹೇಳ ಹೊರಟದ್ದೀರಿ ?" ಎಂದು ಕೇಳಿದ.

ಶರತ್‌ಚಂದ್ರರು ಹೀಗೆಂದು ಹೇಳಿದರು: "ಜೀವಜಂತುಗಳನ್ನು ಸಾಕಬೇಕೆಂದರೆ ಹೃದಯದಲ್ಲಿ ತುಂಬ ಮಮತೆ ಇರಬೇಕು. ಆ ಹಕ್ಕಿ ಅದೆಷ್ಟು ಹೊತ್ತಿನಿಂದ ಅರಚಿಕೊಳ್ಳುತ್ತಿದೆ ! ಒಬ್ಬರಾದರೂ ಅದರ ಕಡೆ ಗಮನ ಹರಿಸಿದ್ದೀರಾ ?"

ಈತ ಯಾರೋ ಒಬ್ಬ ಹುಚ್ಚನಿರಬೇಕೆಂದು ಆ ಗೃಹಸ್ಥ ಭಾವಿಸಿದ. ಅಷ್ಟು ಹೊತ್ತಿಗೆ ಶರತ್‌ಚಂದ್ರರ ಬಂಧುವೂ ಒಳಗೆ ಬಂದಿದ್ದರು. ಅವರು ಆ ಗೃಹಸ್ಥನಿಗೆ ಹೇಳಿದರು: "ಇವರೇ ಶರತ್‌ಚಂದ್ರ ಚಟ್ಟೋಪಾಧ್ಯಾಯ ಅವರು !"

ಇದನ್ನು ಕೇಳಿ ಆ ಗೃಹಸ್ಥನಿಗೆ ತುಂಬ ವಿಷಾದವಾಯಿತು. ತನ್ನನ್ನು ಕ್ಷಮಿಸುವಂತೆ ಆತ ಶರತ್‌ಚಂದ್ರರನ್ನು ಕೋರಿದ. ಶರತ್‌ಚಂದ್ರರು ಎಲ್ಲವನ್ನು ಮರೆತು ಶಾಂತರಾದರು.

ರಂಗೂನಿನಲ್ಲಿ ಅವರ ಬಳಿ ನೂರಿ ಎಂಬ ಹಕ್ಕಿ ಇತ್ತು. ಅಂಥ ಹಕ್ಕಿ ಆಮೇಲೆ ಅವರಿಗೆ ಸಿಕ್ಕಲೇ ಇಲ್ಲ. ಆದರೆ, ಅದೇ ಜಾತಿಗೆ ಸೇರಿದ ಇನ್ನೊಂದು ಹಕ್ಕಿ ಸಿಕ್ಕಿತು. ಅದಕ್ಕೂ ಅವರು 'ಬಾಟೂ ಬಾಬಾ' ಎಂದೇ ಹೆಸರಿಟ್ಟಿದ್ದರು. ಮಗನಿಗಿಂತಲೂ ಹೆಚ್ಚಾಗಿ ಅದನ್ನು ಪ್ರೀತಿಸುತ್ತಿದ್ದರು. ಒಮ್ಮೆ ಶೈಲೇಶ್ ವಿಶಿ ಅವರನ್ನು ಕಾಣಲು ಬಂದಿದ್ದರು. ಪೇರಲ ಹಣ್ಣಿನ ಗಿಡದಲ್ಲಿ ಚೆನ್ನಾಗಿ ಹಣ್ಣುಬಿಟ್ಟಿದ್ದುದನ್ನು ಅವರು ಕಂಡರು. ಅವುಗಳನ್ನು ಕಿತ್ತು ತಿನ್ನ ತೊಡಗಿದರು. ಆ ಹೊತ್ತಿಗೆ ಸರಿಯಾಗಿ ಶರತ್‌ಚಂದ್ರರು ಅಲ್ಲಿಗೆ ಬಂದರು. ಅವರಿಗೆ ಏನಾಯಿತೋ ಏನೋ. ಗಟ್ಟಿಯಾಗಿ ಅರಚುತ್ತ, ಸೇವಕನನ್ನು ಕರೆದು ಹೀಗೆಂದು ಅಪ್ಪಣೆಮಾಡಿದರು: "ಸೀಬೆ ಹಣ್ಣುಗಳನ್ನೆಲ್ಲ ಕಿತ್ತು, ಮೊಹಲ್ಲಾದಲ್ಲಿ ಎಲ್ಲರಿಗೂ ಹಂಚಿಬಿಡು."

ವಿಶಿಯವರು ಹತಪ್ರಭರಾಗಿ, ಅಪರಾಧಿ ಎಂಬಂತೆ ಅವರತ್ತ

ನೋಡತೊಡಗಿದರು. ಅವರೇ ಮಾತನಾಡಿದರು: "ನೀವು ಹೇಳದೆ ಕೇಳದೆ ಸೀಬೆಹಣ್ಣನ್ನು ಏಕೆ ಕಿತ್ತಿರಿ ? ಇರಲಿ, ಅವನ್ನೆಲ್ಲ ನೀವೇ ತೆಗೆದುಕೊಂಡು ಹೋಗಿ."

ಹೀಗೆಂದು ಹೇಳುತ್ತ, ಅವರು ವಿಶಿ ಅವರನ್ನು ಮನೆಯೊಳಕ್ಕೆ ಕರೆದುಕೊಂಡು ಹೋದರು. ಅಲ್ಲಿ ಗೂಡಿನಲ್ಲಿ ಚಿಕ್ಕ ಚಿಕ್ಕ ನಾಲ್ಕೈದು ಬಟ್ಟಲುಗಳನ್ನು ಇಡಲಾಗಿತ್ತು. ಒಂದರಲ್ಲಿ ದಾಳಿಂಬೆಯ ಕಾಳುಗಳಿದ್ದರೆ, ಇನ್ನೊಂದರಲ್ಲಿ ಪಿಸ್ತಾ, ಮತ್ತೊಂದರಲ್ಲಿ ಬಾದಾಮಿ, ಮಗದೊಂದರಲ್ಲಿ ದ್ರಾಕ್ಷಿ ಇತ್ತು. ಅವರೆಂದರು: "ಇದೆಲ್ಲ ಬಾಟೂ ಬಾಬಾನ ಉಣಿಸುಗಳು. ಪ್ರತಿ ಘಂಟೆಯೂ ಒಂದಾದ ಮೇಲೆ ಒಂದರಂತೆ ಅದು ಇವುಗಳನ್ನು ತಿನ್ನುತ್ತದೆ. ಅದು ತಿನ್ನುವುದಕ್ಕೆ ಮೊದಲು ಮನೆಯಲ್ಲಿ ಹಣ್ಣುಗಳನ್ನು ಯಾರೂ ತಿನ್ನುವಂತಿಲ್ಲ. ಆದರೆ, ನೀವು ತಿಂದುಬಿಟ್ಟಿರಿ."

ಒಂದು ದಿವಸ ಆ ಹಕ್ಕಿ ಹಾರಿಹೋಯಿತು. ಆಗ ಅವರು ಚದುರಂಗದ ಆಟವನ್ನು ಆಡುತ್ತಿದ್ದರು. ಇದನ್ನು ಕಂಡು ಅವರು ಅನ್ಯಮನಸ್ಕರಾಗಿ ಬಿಟ್ಟರು. ನಡುನಡುವೆ ಹೊರಗೆ ಇಣುಕಿ ಬರುತ್ತಿದ್ದರು. ಯಾರಾದರೂ ಎದ್ದರೆ, "ಬೇಡ, ಬೇಡ. ಏನೂ ಚಿಂತೆ ಮಾಡಬೇಡಿ. ಅದೇ ಬಂದುಬಿಡುತ್ತದೆ. ಅನೇಕಸಲ ಹೀಗೆ ಹೋಗುತ್ತಿರುತ್ತದೆ" ಎಂದು ಹೇಳುತ್ತಿದ್ದರು.

ಆದರೆ, ಸ್ವತಃ ಅವರಿಗೇ ಕುಳಿತಿರಲು ಸಾಧ್ಯವಾಗಲಿಲ್ಲ. ಮತ್ತೆ ಮತ್ತೆ ಹೊರಗೆ ಹೋಗಿ ನೋಡಿ ಬರತೊಡಗಿದರು. ಸಂಜೆಯಾಯಿತು. ಗೆಳೆಯರು ಹಿಂದಿರುಗಿದರು. ಅವರಿನ್ನೂ ನಾಲ್ಕು ಹೆಜ್ಜೆಯೂ ಇಟ್ಟಿರಲಿಲ್ಲ. ಅಷ್ಟರಲ್ಲಿಯೇ ಶರತ್‌ಚಂದ್ರರ ಉಲ್ಲಾಸದ ಧ್ವನಿ ಅವರ ಕಿವಿಗೆ ಬಿತ್ತು: "ಹಕ್ಕಿ ಬಂತು. ಇಲ್ಲೇ ಮರದ ಮೇಲೆ ಕೂತಿತ್ತು."

ಅದು ಕಣ್ಣು ಮುಚ್ಚಿದಾಗ, ಅವರು ತಮ್ಮ ದಿನಚರಿಯಲ್ಲಿ ಬರೆದಿರುವ ಮಾತುಗಳಿಂದ ಅದರ ಬಗೆಗಿನ ಅವರ ಪ್ರೀತಿ ಎಂಥದೆಂಬುದು ಗೊತ್ತಾಗುತ್ತದೆ: "ಇಂದು ರಾತ್ರಿ 10.45ಕ್ಕೆ ಬಾಟೂ ಕಣ್ಣು ಮುಚ್ಚಿತು - ಮಂಗಳವಾರ, 24ಫಾಲ್ಗುಣ 1338 (ಸನ್ 1931), ಸಾಮತಾ ಬೇಡ, ಹಾವಡಾ. ಅದೊಂದೇ ಬಂಧನದಿಂದ ಮುಕ್ತಿಯನ್ನು ಪಡೆಯಲಿಲ್ಲ; ನನಗೂ ಒಂದು ಮಹಾಮುಕ್ತಿಯನ್ನು ಕರುಣಿಸಿ ಹೋಯಿತು. ಪ್ರಭಾಸದ ಬಳಿ ಅದನ್ನು ಸಮಾಧಿ ಮಾಡಿದೆ. ಇನ್ನೊಂದು ಮಾತ್ರ ಈಗ ಬಾಕಿ ಉಳಿದಿದೆ."

ಬಾಕಿ ಉಳಿದಿರುವ ಇನ್ನೊಂದು ಏನೆಂಬುದನ್ನು ಅವರು ಬರೆದಿಟ್ಟಿಲ್ಲ. ಅವರ ಬಳಿ ಅಂತಹುದೇ ಇನ್ನೊಂದು ಹಕ್ಕಿ ಇದ್ದಿರಬಹುದು ಅಥವಾ ಇದು ತಮ್ಮ ಬಗ್ಗೆಯೇ ಅವರು ತೋರಿದ ಸಂಕೇತವೂ ಆಗಿರಬಹುದು. ಅವರ ಬಳಿಯಲ್ಲಿದ್ದ ಹಕ್ಕಿಗಳ ಸಂಖ್ಯೆಯೇನೂ ಕಡಿಮೆಯಾಗಿರಲಿಲ್ಲ. ನವಿಲಿತ್ತು; ಮೈನಾ ಇತ್ತು. ಬಡೇಮಿಯಾ ಮತ್ತು ಛೋಟೇ ಮಿಯಾ ಎಂಬ ಹೆಸರಿನ ಎರಡು ಹೋತಗಳಿದ್ದುವು. ಸ್ವಾಮೀಜಿಯ ಕಥೆ ಕಡಿಮೆ ಸ್ವಾರಸ್ಯಕರವಾಗಿಯೇನೂ ಇಲ್ಲ. ಇದೂ ಅವರ ಬಳಿ ಇದ್ದ ಒಂದು ಹೋತಕ್ಕೆ ಇಟ್ಟಿದ್ದ ಹೆಸರು. ಕಟುಕನ ಕತ್ತಿಯಿಂದ ತಪ್ಪಿಸಿ ಅವರು ಅದನ್ನು ಕೊಂಡು ತಂದಿದ್ದರು. ಅದರ ಬಗ್ಗೆಯೂ ಅವರ ಪ್ರೀತಿ ಅಷ್ಟೇ ಅಸೀಮಿತವಾಗಿತ್ತು. ಅದರ ಸಾವಿನ ಉಲ್ಲೇಖವೂ ಅವರ ದಿನಚರಿಯಲ್ಲಿ ಸಿಕ್ಕುತ್ತದೆ:

"13 ಮಾಘ 1339 (ಸನ್ 1932). ಸಮಯ 11-3. ಬೃಹಸ್ಪತಿವಾರ - ಸ್ವಾಮೀಜಿಯ ಸಾವು. ಇನ್ನೊಂದು ಭಾವನೆ ಕೊನೆಗೊಂಡಿದೆ - ಸಾಮತಾಬೇಡ, ಹಾವಡಾ."

ಅಕ್ಷಯ ಕುಮಾರ ಮಿತ್ರರು ತಮ್ಮ ದಿನಚರಿಯಲ್ಲಿ ಹೀಗೆ ಬರೆದಿದ್ದಾರೆ: "ಹಾವಡಾ ಸೇತುವೆಯ ಮೇಲೆ ಒಂದು ಕೋಣ ಗಾಡಿಯನ್ನೆಳೆಯುತ್ತಿತ್ತು. ಗಾಡಿ ತುಂಬ ಭಾರಿಯಾಗಿತ್ತು. ಕೋಣ ಜಾರಿ ಬಿತ್ತು. ಅದರ ಮೂಗಿನಿಂದ ರಕ್ತ ಹರಿಯತೊಡಗಿತು ಆಗಲೂ ಗಾಡಿಯವನು ನಿರ್ದಯವಾಗಿ ಅದಕ್ಕೆ ಹೊಡೆಯುತ್ತಲೇ ಇದ್ದ. ಶರತ್‌ಚಂದ್ರರು ಆಕಡೆಯಿಂದ ಹೋಗುತ್ತಿದ್ದರು. ಈ ದೃಶ್ಯವನ್ನು ನೋಡಿ ಅವರು ಸ್ತಬ್ಧರಾಗಿ, ಮೂಕರಾಗಿ ನಿಂತುಬಿಟ್ಟರು. ದುಃಖದಿಂದ ಅವರ ಮುಖ ವಿವರ್ಣವಾಗಿ ಬಿಟ್ಟಿತು."

ಪೂಜೆಗಾಗಿ ಪಶುಬಲಿ ಕೊಡುವ ಸಂಪ್ರದಾಯವನ್ನೂ ಅವರು ಸದಾ ವಿರೋಧಿಸುತ್ತಿದ್ದರು. ಒಮ್ಮೆ ಅವರು ಅಸ್ವಸ್ಥರಾಗಿದ್ದಾಗ, ಹಿರಣ್ಮಯೀ ದೇವಿ ಅವರು ಕಾಳಿಯ ಮಂದಿರದಲ್ಲಿ ಎರಡು ಹೋತಗಳನ್ನು ಬಲಿಗೊಡುವುದಾಗಿ ಹರಕೆ ಹೊತ್ತುಕೊಂಡಿದ್ದರು. ಅವರಿಗೆ ಈ ಸುದ್ದಿ ತಿಳಿದಾಗ, ಅವರು ಎರಡು ಹೋತಗಳ ಬೆಲೆಯಷ್ಟು ಹಣವನ್ನು ಕಳಿಸಿಕೊಟ್ಟುಬಿಟ್ಟರು. ಬಲಿಕೊಡುವ ವಿಚಾರವನ್ನು ಸಹಿಸಿಕೊಳ್ಳುವುದು ಅವರಿಗೆ ಸಾಧ್ಯವಿರಲಿಲ್ಲ! ಲಾಲೂ ಕಥೆಯಲ್ಲಿ ಅವರು ತಮ್ಮ ಈ ದುಃಖವನ್ನು ತೋಡಿಕೊಂಡಿದ್ದಾರೆ. ಈ ಬಗೆಯ ಘಟನೆಗಳಿಗೆ ಕೊನೆ ಮೊದಲು ಎಂಬುದೇ ಇರಲಿಲ್ಲ. ಪ್ರತಿಯೊಂದು ಘಟನೆಯೂ ಅದೇ ಕಥೆಯನ್ನು ಹೇಳುತ್ತದೆ - ಅವರ ನರನಾಡಿಗಳಲ್ಲಿ ಒಂದಾಗಿ ಬಿಟ್ಟಿದ್ದ ಕರುಣೆಯ ಕಥೆ ಅದು. ಇದು ಎಷ್ಟು ಅಸೀಮವಾಗಿದೆಯೋ ಅಷ್ಟೇ ತಲಸ್ಪರ್ಶಿಯೂ ಆಗಿದೆ. ಇದರಲ್ಲಿ ಬೂಟಾಟಿಕೆ ಯಾಗಲೀ ಪ್ರದರ್ಶನಪರತೆಯಾಗಲೀ ಇರಲಿಲ್ಲ. ಈ ಅಸೀಮ ಕರುಣೆಯ ಒಳಗಿನಿಂದಲೇ ಈ ಕಥಾಶಿಲ್ಪಿಯ ಚಿತ್ರ ಮೂಡಿ ನಿಲ್ಲುತ್ತದೆ. ಅದು ಯಾವನೋ ಒಬ್ಬ ಕುಸಂಸ್ಕೃತನ, ಕುಮಾರ್ಗಿಯ ಚಿತ್ರವೇನು? ಬಾಳಿನಲ್ಲಿ ಅವರಿಗೆ ಘೋರ ಉಪೇಕ್ಷೆಯೇ ಲಭ್ಯವಾಗಿತ್ತೆಂಬ ಕಾರಣದಿಂದಾಗಿಯೇ ಈ ಸ್ನೇಹ ಹೀಗೆ ಕೋಡಿವರಿದಿತ್ತೆ? ಅಥವಾ ಅವರಿಗೆ ತಮ್ಮ ಸ್ವಂತ ಮಕ್ಕಳು ಇಲ್ಲದೆ ಹೋಗಿದ್ದುದೇ ಇದಕ್ಕೆ ಕಾರಣವಾಗಿತ್ತೆ?

ಹೀಗಿದ್ದಿರ ಬಹುದಾದ ಸಂಭವ ಹೆಚ್ಚಾಗಿದೆ. ಆದರೆ, ಕರುಣೆಯ ಈ ಧಾರೆ ಅವರ ಸ್ವಭಾವಸಹಜವಾಗಿದ್ದ ಮಾನವತೆಯ ಒಂದು ಮುಖ ಮಾತ್ರವಾಗಿತ್ತು ಎಂಬುದೂ ಸ್ಪಷ್ಟವಾಗಿದೆ.

ಎಸ್.ಪಿ.ಸಿ.ಎ.[1] ಪ್ರಾಣಿಗಳ ಬಗೆಗಿನ ಕ್ರೂರವರ್ತನೆಯನ್ನು ತಡೆಗಟ್ಟುವ ಸುಪ್ರಸಿದ್ಧ ಸಂಸ್ಥೆ. ಅನೇಕ ವರ್ಷಗಳವರೆಗೆ ಅವರು ಇದಕ್ಕೆ ಅಧ್ಯಕ್ಷರಾಗಿದ್ದರು. ಅವರ ಕಛೇರಿಯಲ್ಲಿ ಈ ಸಂಸ್ಥೆಯ ಅಧಿಕಾರಿಗಳ ವಿರುದ್ಧವಾಗಿ ಕಲ್ಕತ್ತಾದ ಗಾಡಿಯವರು ಸತ್ಯಾಗ್ರಹಮಾಡಿದ್ದರು. ಒಮ್ಮೆ ಅದು ತುಂಬ ಹಿಂಸಾತ್ಮಕ ರೂಪವನ್ನು ತಳೆದಾಗ, ಗೋಲಿಬಾರು ಮಾಡಬೇಕಾಗಿ ಬಂದಿತ್ತು. ನಾಲ್ವರು ಆ ಗೋಲಿಬಾರಿನಲ್ಲಿ ಸತ್ತಿದ್ದರು.

---

1. 'ಸೊಸೈಟಿ ಫಾರ್ ದಿ ಪ್ರಿವೆನ್‌ಷನ್ ಆಫ್ ಕ್ರೂಯೆಲ್ಟಿ ಟು ಅನಿಮಲ್ಸ್' ಎಂಬುದು ಇದರ ವಿಸ್ತೃತ ರೂಪ. - ಅನುವಾದಕ ಅಡಿಟಿಪ್ಪಣಿ.

ಹಾವಡಾದಲ್ಲಿಯೂ ದಂಗೆ ಸ್ವಲ್ಪದ್ದರಲ್ಲಿ ತಪ್ಪಿತ್ತು. ಅಧ್ಯಕ್ಷರಾಗಿದ್ದುದರಿಂದ ಶರತ್‌ಚಂದ್ರರು ಸಾಕಷ್ಟು ಕೆಲಸ ಮಾಡಲೂ ಬೇಕಾಯಿತು; ಸಾಕಷ್ಟು ಸಂಕಷ್ಟಗಳನ್ನು ಸಹಿಸಲೂ ಬೇಕಾಯಿತು. ಆದರೆ, ಮೂಕ ಪಶುಗಳ ಬಗೆಗಿನ ಕ್ರೂರವರ್ತನೆಯನ್ನು ಒಪ್ಪಲು ಅವರೆಂದೂ ಸಿದ್ಧರಾಗಿರಲಿಲ್ಲ.

## 21

ಕವಿಗುರು ರವೀಂದ್ರನಾಥ ಠಾಕೂರರಿಗೆ ಎಪ್ಪತ್ತು ವರ್ಷ ತುಂಬಿದಾಗ, ನಾಡಿನಾದ್ಯಂತ ಅವರ ಹುಟ್ಟು ಹಬ್ಬವನ್ನು ಆಚರಿಸಲಾಯಿತು.[1] ಅಂದು ಕಲ್ಕತ್ತಾದ ಯೂನಿವರ್ಸಿಟಿ ಇನ್ಸ್‌ಟಿಟ್ಯೂಟ್‌ನಲ್ಲಿ ನಡೆದ ಉದ್ಬೋಧನ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದವರು ಮಹಾಮಹೋಪಾಧ್ಯಾಯ ಹರಿಪ್ರಸಾದ ಶಾಸ್ತ್ರೀ ಅವರು. ಎಲ್ಲ ದೇಶವಾಸಿಗಳ ವತಿಯಿಂದ ಕಲ್ಕತ್ತಾದಲ್ಲಿ ಈ ಶುಭ ಸಂದರ್ಭದ ಅಂಗವಾಗಿ ಅವರನ್ನು, ಯಥೋಚಿತವಾಗಿ ಸತ್ಕರಿಸಬೇಕೆಂದೂ, ಆನಂದೋತ್ಸವವನ್ನು ಆಚರಿಸಬೇಕೆಂದೂ ಆ ಸಭೆಯಲ್ಲಿ ಚಂದ್ರಶೇಖರ ವೆಂಕಟರಾಮನ್ ಅವರು ಸೂಚನೆಯೊಂದನ್ನು ಮಂಡಿಸಿದರು.

ಈ ಸೂಚನೆಯನ್ನು ಸಮರ್ಥಿಸುತ್ತ ಶರತ್‌ಚಂದ್ರರು ಹೀಗೆಂದು ಹೇಳಿದರು: "ವಿಶ್ವ ಭಾರತಿ ಎಂಬುದು ಒಂದು ಕಲ್ಪನೆ ಮಾತ್ರ ಎಂದು ನಮ್ಮ ನಾಡಿನ ಅನೇಕ ಜನ ಭಾವಿಸಿದ್ದಾರೆ ಎಂಬುದು ನನಗೆ ಗೊತ್ತು. ಆಗಲಿ, ಅದು ಕಲ್ಪನೆಯೇ ಆಗಿರಲಿ. ಅದು ಯಾರ ಕಲ್ಪನೆ ? ಎಂಥ ಮಹಾಕಲ್ಪನೇ ? ಇದನ್ನು ಹೇಗೆ ಮರೆಯಲು ಸಾಧ್ಯ ! ಆದ್ದರಿಂದಲೇ ನಾನು ಹೇಳುತ್ತೇನೆ - ಅನುಷ್ಠಾನ ಮಾಡಿ, ಆನಂದೋತ್ಸವವನ್ನು ಆಚರಿಸಿ, ಏನೆಲ್ಲ ಬೇಕಾದರೂ ಮಾಡಿ. ಆದರೆ, ಈಗ ನಾವು ಮೊದಲು ಮಾಡಬೇಕಾಗಿರುವುದೆಂದರೆ ಸ್ವಲ್ಪ ಹಣವನ್ನು ಸಂಗ್ರಹಿಸಿ ಅವರ ಕೈಯಲ್ಲಿ ಇರಿಸುವುದು. ಅವರು ವೃದ್ಧಾಪ್ಯದಲ್ಲಿ ವಿಶ್ವಭಾರತಿಯ ಸ್ಥಾಪನೆಗಾಗಿ ದೇಶ-ವಿದೇಶಗಳಲ್ಲಿ ಭಿಕ್ಷೆಯ ಜೋಳಿಗೆಯನ್ನು ಹಿಡಿದುಕೊಂಡು ಅಲೆದಾಡುತ್ತಿದ್ದಾರೆ. ಇದು ನಮಗೆ ನಾಚಿಕೆಗೇಡಿನ ಸಂಗತಿ."

ಈ ಸಭೆಯಲ್ಲಿ ಜಯಂತ್ಯುತ್ಸವ ಸಮಿತಿಯನ್ನು ರಚಿಸಲಾಯಿತು. ಇದಕ್ಕೆ ಆಚಾರ್ಯ ಜಗದೀಶಚಂದ್ರ ಬೋಸ್ ಅವರನ್ನು ಅಧ್ಯಕ್ಷರನ್ನಾಗಿ ಆಯಲಾಯಿತು. ಸಹಾಧ್ಯಕ್ಷರನ್ನಾಗಿ ಅನೇಕ ಗಣ್ಯವ್ಯಕ್ತಿಗಳನ್ನು ಹೆಸರಿಸಲಾಗಿತ್ತು. ಅವರಲ್ಲಿ ಶರತ್‌ಚಂದ್ರರೂ ಒಬ್ಬರಾಗಿದ್ದರು. ಆ ಬಳಿಕ ಈ ಸಂಬಂಧವಾಗಿ ನಡೆದ ಸಭೆ-ಸಮಿತಿಗಳಲ್ಲಿ ಅವರು ಉತ್ಸಾಹದಿಂದ ಪಾಲ್ಗೊಂಡರು. ದೌರ್ಭಾಗ್ಯದಿಂದಾಗಿ, ಆ ಸಮಯದಲ್ಲಿ ಉತ್ತರ ಬಂಗಾಳದಲ್ಲಿ ಪ್ರವಾಹದ ಹಾವಳಿ ಉಂಟಾಯಿತು. ಈ ಸಂದರ್ಭದಲ್ಲಿ ರವೀಂದ್ರರು ಶರತ್‌ಚಂದ್ರರಿಗೆ ಹೀಗೆಂದು ಬರೆದರು: "ನನ್ನ ಸತ್ಕಾರಕ್ಕಾಗಿ ಒಂದಿಷ್ಟು ಹಣವನ್ನು ಸಂಗ್ರಹಿಸಬೇಕೆಂದು ನೀವು ತೀರ್ಮಾನಿಸಿದ್ದೀರೆಂದು ಕೇಳಿದ್ದೇನೆ. ದೇಶಕ್ಕೆ ಎರಗಿರುವ ಈ ದೌರ್ಭಾಗ್ಯವನ್ನು ನೋಡಿದರೆ, ಬೇರಾವುದೇ ಉದ್ದೇಶಕ್ಕಾಗಿ

---

1. ಮೇ 16, 1931ರಂದು.

ಹಣವನ್ನು ಸಂಗ್ರಹಿಸಲು ಹೊರಡುವುದು ಉಚಿತವೆಂದು ತೋರುವುದಿಲ್ಲ. ನನಗೇನಾದರೂ ಕೊಡಬೇಕೆಂದಿದ್ದರೆ, ಅದನ್ನು ಈ ಪ್ರಕೋಪಕ್ಕೆ ತುತ್ತಾಗಿರುವವರ ದುಃಖವನ್ನು ದೂರಮಾಡುವ ಸಲುವಾಗಿಯೇ ಬಳಸಬೇಕು."[1]

ಹೀಗಾಗಿ, ವಿಶ್ವಭಾರತಿಗಾಗಿ ಹಣವನ್ನು ಸಂಗ್ರಹಿಸಬೇಕೆಂಬ ಶರತ್‌ಚಂದ್ರರ ಆ ಸೂಚನೆ ಕಾರ್ಯರೂಪಕ್ಕೆ ಬರಲಾರದೆ ಹೋಯಿತು. ಇದರ ಬಗ್ಗೆ ಅವರಿಗೆ ವಿಷಾದ ಸದಾ ಇದ್ದೇ ಇತ್ತು. ಸಮಾರಂಭದಲ್ಲಿ ಪಾಲ್ಗೊಳ್ಳುವುದಕ್ಕಾಗಿ ಪ್ರವೇಶ ಶುಲ್ಕವನ್ನು ವಿಧಿಸಲಾಗಿತ್ತು. ಅದರಿಂದ ಲಭ್ಯವಾಗಿದ್ದ ಹಣವನ್ನೂ ರವೀಂದ್ರರು ಪ್ರವಾಹ ಪೀಡಿತರಿಗಾಗಿ ಕೊಟ್ಟು ಬಿಟ್ಟರು.

ಈ ಅಭಿನಂದನ ಸಮಾರಂಭ[2] ಅವರ ನಿಜವಾದ ಹುಟ್ಟುಹಬ್ಬ ನಡೆದ ಏಳು ತಿಂಗಳ ಬಳಿಕ ನಡೆಯಿತು. ಸ್ವತಃ ಶರತ್‌ಚಂದ್ರರೇ ಬಿನ್ನವತ್ತಳೆಯನ್ನು ಸಿದ್ಧಪಡಿಸಿದ್ದರು. ಈ ವಿಷಯದ ಬಗ್ಗೆ ಸಮಿತಿಯಲ್ಲಿ ಸಾಕಷ್ಟು ಭಿನ್ನಾಭಿಪ್ರಾಯ ವ್ಯಕ್ತವಾಗಿತ್ತು. ಆದರೆ ಅಮಲ್ ಹೋಮ್ ಅವರು ಶ್ಯಾಮಾಪ್ರಸಾದ ಮುಕರ್ಜಿಯವರೊಂದಿಗೆ ಸಮಾಲೋಚನೆ ನಡೆಸಿ, ಈ ಕೆಲಸವನ್ನು ಸದ್ದಿಲ್ಲದೆ ಶರತ್‌ಚಂದ್ರರಿಗೆ ವಹಿಸಿಬಿಟ್ಟಿದ್ದರು. ಯಾರಿಗೂ ಈ ವಿಚಾರ ತಿಳಿಯಬಾರದೆಂಬುದು ಅವರ ಅಪೇಕ್ಷೆಯಾಗಿತ್ತು. ಆದರೆ, ಹೇಗೋ ಈ ಸುದ್ದಿ ಬಹಿರಂಗವಾಗಿ ಬಿಟ್ಟಿತು. ಬಿನ್ನವತ್ತಳೆಯನ್ನು ಯಾರು ಓದಬೇಕೆಂಬ ಬಗ್ಗೆಯೂ ಸಾಕಷ್ಟು ಭಿನ್ನಾಭಿಪ್ರಾಯ ತಲೆದೋರಿತು. ಆಚಾರ್ಯ ಜಗದೀಶಚಂದ್ರ ಬೋಸ್ ಅವರು ಅದನ್ನು ಓದಬೇಕಾಗಿತ್ತು. ಇದ್ದಕ್ಕಿದ್ದಂತೆ ಅವರು ಅಸ್ವಸ್ಥರಾದುದರಿಂದ, ಕೊನೆಗೆ ಕಾಮಿನೀ ರಾಯ್ ಅವರು ಇದನ್ನು ಓದಿದರು. ಆಗ ಶರತ್‌ಚಂದ್ರರು ಸಂಕೋಚದಿಂದ ತಲೆಬಾಗಿಸಿಕೊಂಡು ಕುಳಿತಿದ್ದರು. ಆ ಬಿನ್ನವತ್ತಳೆಯ ಮೊದಲ ಪಂಕ್ತಿಯನ್ನು ಯಾರು ಎಷ್ಟೇ ಪ್ರಯತ್ನಪಟ್ಟರೂ ಮರೆಯಲಾಗುತ್ತಿರಲಿಲ್ಲ; "ಕವಿಗುರುವೆ, ನಿಮ್ಮತ್ತ ನೋಡಿದರೆ ನಮ್ಮ ವಿಸ್ಮಯಕ್ಕೆ ಮೇರೆಯೇ ಇರುವುದಿಲ್ಲ."

ನಾಲ್ಕು ವರ್ಷಗಳಿಗೆ ಹಿಂದೆ[3] ಅಮಲ್ ಹೋಮ್ ಅವರ ಮದುವೆಯ ಸಂದರ್ಭದಲ್ಲಿ ರವೀಂದ್ರರನ್ನು ಕಂಡಾಗಲೂ ಅವರು ಇದೇ ರೀತಿ ವಿಸ್ಮಿತರಾಗಿದ್ದರು: " ಅನೇಕ ದಿವಸಗಳ ಬಳಿಕ ಅಂದು ಮದುವೆಯ ಮನೆಯಲ್ಲಿ ರವೀಂದ್ರರನ್ನು ಕಂಡೆ. ಎಂಥ ವಿಸ್ಮಯಕಾರಿ ಸೌಂದರ್ಯ! ಕಣ್ಣನ್ನು ಕೀಳಲೇ ಸಾಧ್ಯವಾಗುತ್ತಿರಲಿಲ್ಲ. ವಯಸ್ಸು ಹೆಚ್ಚಿದಂತೆಲ್ಲಾ ರೂಪ ಒಡೆದು ನಿಲ್ಲುತ್ತದೆ. ರೂಪವಲ್ಲ ಸೌಂದರ್ಯ! ಲೋಕದಲ್ಲಿ ಇದಕ್ಕಿಂತಲೂ ಹೆಚ್ಚಿನ ವಿಸ್ಮಯವನ್ನು ನಾನು ಕಂಡಿಲ್ಲ."

ಈ ಸಮಾರಂಭದ ತರುವಾಯ, ರವೀಂದ್ರ ಸಾಹಿತ್ಯದ ವಿಮರ್ಶೆಗಾಗಿ ಪುರಭವನದಲ್ಲಿ ಇನ್ನೊಂದು ಸಮ್ಮೇಳನ ನಡೆಯಿತು. ಅದಕ್ಕೆ ಅಧ್ಯಕ್ಷರನ್ನಾಗಿ ಆರಿಸಿದ್ದು ಶರತ್‌ಚಂದ್ರರನ್ನು. ತಮ್ಮ ಅಧ್ಯಕ್ಷ ಭಾಷಣದಲ್ಲಿ ಅವರು ತಾವು ಸಾಹಿತ್ಯ

1. 29 ಆಗಸ್ಟ್ 1931.
2. ಡಿಸಂಬರ್ 1931.
3. 27 ಡಿಸೆಂಬರ್ 1927.

ಕ್ಷೇತ್ರವನ್ನು ಪ್ರವೇಶಿಸಿದ್ದನ್ನು ಉಲ್ಲೇಖಿಸುತ್ತ, ಕವಿಗುರುಗಳಿಗೆ ತಾವು ಋಣಿಯಾಗಿರುವುದನ್ನು ಸ್ಪಷ್ಟವಾಗಿ ಒಪ್ಪಿಕೊಂಡರು ಹಾಗೂ ಅವರ ಬಗೆಗಿನ ತಮ್ಮ ಆಳವಾದ ಶ್ರದ್ಧೆಯನ್ನು ವ್ಯಕ್ತಪಡಿಸಿದರು. ಆಗ ಅವರು ಹೀಗೆಂದಿದ್ದರು: "ಕವಿಯ ಬಾಳಿನಲ್ಲಿ ಎಪ್ಪತ್ತು ವರ್ಷಗಳು ಕಳೆದಿವೆ. ಭಗವಂತನ ಆಶೀರ್ವಾದ ನಮ್ಮನ್ನು ಮಾತ್ರವಲ್ಲದೆ, ಸಮಗ್ರ ಮಾನವ ಸಮುದಾಯವನ್ನೇ ಧನ್ಯವಾಗಿಸಿದೆ. ಮುಂಬರುವ ಕಾಲಕ್ಕಾಗಿ ಸೌಭಾಗ್ಯದ ಈ ಸ್ಮೃತಿಯನ್ನು ಸುಮಧುರವಾಗಿಯೂ ಉಜ್ವಲವಾಗಿಯೂ ಇಡಬಯಸುತ್ತೇವೆ. ಜೊತೆಗೆ, ಕವಿಯ ಕಾವ್ಯದ ಪರಿಚಯ ಮಾತ್ರವಲ್ಲ, ನಮಗೆ ಅವರನ್ನು ಕಣ್ಣಾರೆ ನೋಡುವ, ಅವರ ಮಾತುಗಳನ್ನು ಕಿವಿಯಾರೆ ಕೇಳುವ, ಅವರ ಪೀಠವನ್ನು ಸುತ್ತುವರಿದು ಕುಳಿತುಕೊಳ್ಳುವ ಸೌಭಾಗ್ಯವೂ ನಮಗೆ ದೊರೆತಿತ್ತು ಎಂಬ ವಿಚಾರವನ್ನು ಮುಂಬರುವ ತಲೆಮಾರುಗಳಿಗೆ ತಿಳಿಸುತ್ತೇವೆ.

".....ನಾವಿಲ್ಲಿ ವಯೋವೃದ್ಧ ಕವಿಗೆ ಗೌರವಾದರಗಳನ್ನು ಸಮರ್ಪಿಸುವ ಸಲುವಾಗಿ ಸೇರಿದ್ದೇವೆ. ಹೇ ಕವಿಯೆ, ನೀನು ನಮಗೆ ಬಹಳಷ್ಟು ಕೊಟ್ಟಿದ್ದೀಯೆ; ಈ ದೀರ್ಘ ಅವಧಿಯಲ್ಲಿ ನಿನ್ನಿಂದ ನಾವು ಬಹಳಷ್ಟು ಪಡೆದಿದ್ದೇವೆ ಎಂದು ಹೃತ್ಪೂರ್ವಕವಾಗಿ ಹೇಳಲು ನಾವಿಲ್ಲಿ ಸೇರಿದ್ದೇವೆ. ಸುಂದರ, ಸಬಲ, ಸರ್ವಸಿದ್ಧಿದಾಯಿನೀ ಭಾಷೆಯನ್ನು ನಮಗೆ ಕೊಟ್ಟಿದ್ದೀಯೆ; ವಿವಿಧ ಛಂದೋಬಂಧಗಳಲ್ಲಿ ರಚಿಸಿದ ಕಾವ್ಯಗಳನ್ನು ಕೊಟ್ಟಿದ್ದೀಯೆ; ಅನುರೂಪವಾದ ಸಾಹಿತ್ಯವನ್ನು ಕೊಟ್ಟಿದ್ದೀಯೆ; ಜಗತ್ತಿಗೆ ಬಂಗಾಳಿ ಭಾಷೆ ಮತ್ತು ಭಾವಸಂಪತ್ತಿನ ಶ್ರೇಷ್ಠ ಪರಿಚಯವನ್ನು ಲೋಕಕ್ಕೆ ನೀಡಿದ್ದೀಯೆ; ಎಲ್ಲಕ್ಕಿಂತಲೂ ಹೆಚ್ಚಿನ ಕೊಡುಗೆಯೆಂದರೆ ನೀನು ನಮ್ಮ ಮನಸ್ಸನ್ನು ವಿಶಾಲವಾಗಿಸಿದ್ದೀಯೆ. ನಿನ್ನ ಸೃಷ್ಟಿಯ ಸೂಕ್ಷ್ಮ ವಿವೇಚನೆ ನಮ್ಮ ಶಕ್ತಿಗೆ ಮೀರಿದ್ದು. ಇದು ನನ್ನ ಧರ್ಮಕ್ಕೆ ವಿರುದ್ಧವಾದುದು. ಪ್ರತಿಭಾವಂತರಾಗಿರುವವರು ಸಕಾಲದಲ್ಲಿ ಇದರ ಬಗ್ಗೆ ವಿವೇಚನೆ ಮಾಡಲಿದ್ದಾರೆ. ನಿನ್ನಿಂದ ನಾನು ಸ್ವತಃ ಏನು ಪಡೆದಿದ್ದೇನೆ ಎಂಬುದನ್ನು ಸಂಕ್ಷೇಪವಾಗಿ ಹೇಳಲು ನಾನು ಈ ಆಹ್ವಾನವನ್ನು ಒಪ್ಪಿಕೊಂಡಿದ್ದೇನೆ....."

ಮತ್ತೆ ತಮ್ಮ ಬಾಲ್ಯಕಾಲದ ಬಗ್ಗೆ ಚರ್ಚಿಸುತ್ತ, ರವೀಂದ್ರ ಸಾಹಿತ್ಯದ ಪರಿಚಯ ತಮಗೆ ಹೇಗೆ ಆಯಿತು ಹಾಗೂ ಅದರಿಂದ ತಾವು ಎಷ್ಟರ ಮಟ್ಟಿಗೆ ಪ್ರಭಾವಿತರಾದರು ಎಂಬುದನ್ನು ಅವರು ತಿಳಿಸಿದರು. ಅವರು ಹೀಗೆಂದರು: "ಇದರ ಬಳಿಕ 'ಬಂಗದರ್ಶನ'ದ ಹೊಸ ಆವೃತ್ತಿಯ ಯುಗ ಮೊದಲಾಯಿತು. ಅದರಲ್ಲಿ ಆಗ ರವೀಂದ್ರರ 'ಚೋಖೇರ್ ಬಾಲೀ' (ಕಣ್ಣಿನ ಕಿರಿಕಿರಿ) ಧಾರಾವಾಹಿಯಾಗಿ ಪ್ರಕಟವಾಗುತ್ತಿತ್ತು. ಅದರಲ್ಲಿ ಭಾಷೆ ಮತ್ತು ಭಾವ ಪ್ರಕಾಶನದ ಶೈಲಿಯ ಹೊಸ ಪ್ರಕಾಶ ಕಾಣಿಸಿತು. ಆ ದಿನಗಳ ಆ ಆಳವಾದ ಹಾಗೂ ತೀಕ್ಷ್ಣವಾದ ಆನಂದಾನುಭೂತಿಯನ್ನು ನಾನೆಂದೂ ಮರೆಯಲಾರೆ. ಇನ್ನೊಬ್ಬರ ಕಲ್ಪನೆಯ ಚಿತ್ರದಲ್ಲಿ ಓದುಗ ತನ್ನ ಮನಸ್ಸನ್ನು ಈ ರೀತಿ ಕಣ್ಣಾರೆ ಕಾಣಬಯಸುತ್ತಾನೆ ಎಂಬುದನ್ನು ಹಿಂದೆಂದೂ ಕನಸಿನಲ್ಲಿಯೂ ಆಲೋಚಿಸಿರಲಿಲ್ಲ. ಆ ದಿನಗಳಲ್ಲಿ ಕೇವಲ ಸಾಹಿತ್ಯದ ಪರಿಚಯವನ್ನು ಮಾತ್ರವಲ್ಲ, ಒಂದು ರೀತಿಯಲ್ಲಿ ನಮ್ಮ ಪರಿಚಯವನ್ನೇ ಪಡೆದೆವು. ತುಂಬ ಓದುವುದರಿಂದ ತುಂಬ ಪಡೆಯುತ್ತೇವೆ

ಎಂಬುದು ಸತ್ಯವಲ್ಲ. ಅವು ಕೆಲವೇ ಪುಟಗಳಿದ್ದುವು. ಅವುಗಳಲ್ಲಿಯೇ ಅಂದು ನಮ್ಮ ಕೈಗೆ ಅಷ್ಟು ದೊಡ್ಡ ಸಂಪತ್ತನ್ನು ತಲುಪಿಸಿದ ಅವರಿಗೆ ಕೃತಜ್ಞತೆಯನ್ನು ತಿಳಿಸುವ ಭಾಷೆಯಾದರೂ ನಮಗೆ ಎಲ್ಲಿ ದೊರೆತೀತು ?

"ಇದಾದ ಬಳಿಕವೇ ಸಾಹಿತ್ಯದೊಂದಿಗೆ ನನ್ನ ಸಂಬಂಧ ತಪ್ಪಿ ಹೋಯಿತು. ನಾನು ಜೀವನದಲ್ಲಿ ಎಂದಾದರೂ ಒಂದು ಪಂಕ್ತಿ ಬರೆದಿದ್ದೇನೆ ಎಂಬುದನ್ನೂ ನಾನು ಮರೆತೇ ಬಿಟ್ಟೆ. ಸಾಕಷ್ಟು ಸಮಯ ಪ್ರವಾಸದಲ್ಲಿಯೇ ಕಳೆದು ಹೋಯಿತು. ಈ ಮಧ್ಯೆ ಈ ಕವಿಯನ್ನು ಕೇಂದ್ರವಾಗಿರಿಸಿಕೊಂಡು ಹೇಗೆ ಹೊಸ ಬಂಗಾಳೀ ಸಾಹಿತ್ಯ ತೀವ್ರಗತಿಯಲ್ಲಿ ಸಮೃದ್ಧಿಯನ್ನು ಸಾಧಿಸಿತು ಎಂಬುದರ ಅರಿವು ನನಗಿಲ್ಲ. ಕವಿಯೊಂದಿಗೆ ನಿಕಟಸಂಬಂಧ ಏರ್ಪಡುವಂಥ ಸೌಭಾಗ್ಯ ನನಗೆಂದೂ ದೊರೆಯಲೇ ಇಲ್ಲ. ಅವರ ಬಳಿಯಲ್ಲಿ ಕುಳಿತು ಸಾಹಿತ್ಯದ ಶಿಕ್ಷಣವನ್ನು ಪಡೆಯುವ ಸದವಕಾಶವೂ ನನಗೆ ದೊರೆಯಲಿಲ್ಲ. ನಾನು ಸಂಪೂರ್ಣವಾಗಿ ಪ್ರತ್ಯೇಕವಾಗಿದ್ದು ಬಿಟ್ಟೆ. ಇದು ಹೊರಗಿನ ಸತ್ಯ: ಆದರೆ, ಒಳಗಿನ ಸಂಗತಿ ಇದಕ್ಕೆ ತದ್ವಿರುದ್ಧವಾಗಿದೆ. ಆ ವಿದೇಶದಲ್ಲಿ ಕವಿಯ ಕೆಲವು ಪುಸ್ತಕಗಳು-ಕಾವ್ಯ ಮತ್ತು ಕಥಾ ಸಾಹಿತ್ಯ - ನನ್ನೊಡನಿದ್ದುವು; ಮನಸ್ಸಿನಲ್ಲಿ ತುಂಬ ಶ್ರದ್ಧೆ-ವಿಶ್ವಾಸಗಳಿದ್ದುವು. ಆಗ ಮತ್ತೆ ಮತ್ತೆ ಈ ಕೆಲವು ಪುಸ್ತಕಗಳನ್ನೇ ತಿರುವಿ ಹಾಕುತ್ತಿದ್ದೆ. ಛಂದಸ್ಸು ಯಾವುದು, ಎಷ್ಟು ಅಕ್ಷರಗಳಿವೆ, ಯಾವುದನ್ನು ಕಲೆ ಎನ್ನುತ್ತಾರೆ, ಅದರ ಲಕ್ಷಣಗಳೇನು, ಸರಿದೂಗಿಸುವುದರಲ್ಲಿ ಎಲ್ಲಿಯಾದರೂ, ಯಾವುದಾದರೂ ತಪ್ಪು ಆಗಿದೆಯೇ ಇಲ್ಲವೇ - ಈ ಎಲ್ಲ ದೊಡ್ಡ ಸಂಗತಿಗಳನ್ನು ಕುರಿತು ಆಲೋಚಿಸಲೇ ಇಲ್ಲ. ಇದೆಲ್ಲ ನನಗೆ ಬೇಕಾಗಿಯೇ ಇರಲಿಲ್ಲ. ಇದಕ್ಕಿಂತಲೂ ಹೆಚ್ಚು ಪರಿಪೂರ್ಣವಾದ ಇನ್ನೊಂದು ಸೃಷ್ಟಿ ಸಾಧ್ಯವೇ ಆಗಲಾರದು ಎಂಬ ದೃಢವಾದ ವಿಶ್ವಾಸವೊಂದೇ ನನ್ನ ಪಾಲಿಗೆ ಅರ್ಥಪೂರ್ಣವಾಗಿ ಇದ್ದದ್ದು. ಕಾವ್ಯದಲ್ಲಾಗಲೀ, ಕಥಾ ಸಾಹಿತ್ಯದಲ್ಲಾಗಲೀ - ಇದಿಷ್ಟೇ ನನ್ನ ಬಂಡವಾಳವಾಗಿತ್ತು.

"ಒಮ್ಮೆ ಅನಿರೀಕ್ಷಿತ ರೂಪದಲ್ಲಿ ಆಕಸ್ಮಿಕವಾಗಿ ಸಾಹಿತ್ಯ ಸೇವೆಯ ಕರೆ ಬಂದಾಗ, ಯೌವನದ ದೃಢತ್ವವನ್ನು ಕೊನೆಗೊಳಿಸಿ, ಪ್ರೌಢತ್ವದ ಉಸುಕು ನೆಲದಲ್ಲಿ ಕಾಲಿರಿಸಿದ್ದೆ. ದೇಹ ಬಳಲಿತ್ತು; ಪ್ರಯತ್ನ ಮಿತಿಗಳಿಗೆ ಒಳಪಟ್ಟಿತ್ತು; ಕಲಿಯುವ ಕಾಲ ಆಗಿಹೋಗಿತ್ತು. ನಾನಿರುತ್ತಿದ್ದುದು ಪ್ರವಾಸಗಳಲ್ಲಿ - ಎಲ್ಲರಿಂದ ಬೇರೆಯಾಗಿ, ಎಲ್ಲರಿಗೂ ಅಪರಿಚಿತನಾಗಿ. ಆದರೆ, ಆ ಕರೆಗೆ ನಾನು ಓಗೊಟ್ಟೆ. ಹೆದರಿಕೆಯ ಭಾವನೆ ಮನಸ್ಸಿಗೆ ಬರಲೇ ಇಲ್ಲ. ಬೇರೆಲ್ಲಿ ಇಲ್ಲದೆ ಇದ್ದರೂ, ಸಾಹಿತ್ಯದ ಕ್ಷೇತ್ರದಲ್ಲಿ ಗುರುವಂದನೆಯ ತತ್ತ್ವವನ್ನು ನಾನು ಒಪ್ಪುತ್ತೇನೆ.

"ರವೀಂದ್ರ ಸಾಹಿತ್ಯಕ್ಕೆ ನಾನು ವ್ಯಾಖ್ಯಾನ ಮಾಡಲಾರೆ. ಆದರೆ, ಅದರ ಬಗೆಗೆ ನಾನು ಇರಿಸಿಕೊಂಡಿರುವ ಸಂಪೂರ್ಣ ಶ್ರದ್ಧೆ ಅದರ ಮರ್ಮವನ್ನು ನನಗೆ ತಿಳಿಸಿಕೊಟ್ಟಿದೆ. ಪಂಡಿತರ ಸೈದ್ಧಾಂತಿಕ ಆಲೋಚನೆಗಳ ಮತ್ತು ತನ್ನ ಅರಿವಿನ ನಡುವೆ ಏನಾದರೂ ತಪ್ಪು-ಒಪ್ಪುಗಳಿದ್ದರೆ, ಇರಲಿ; ಆದರೆ, ನನ್ನ ಪಾಲಿಗೆ ಅದೇ ಸತ್ಯ......

"......ವ್ಯಕ್ತಿಯಾಗಿ ರವೀಂದ್ರರ ಸಂಪರ್ಕಕ್ಕೆ ನಾನು ಅಷ್ಟಾಗಿ ಬಂದಿಲ್ಲ. ಒಂದು ದಿನ ಕವಿಗುರುವಿನ ಬಳಿಗೆ ಹೋಗಿದ್ದೆ - ಬಂಗಾಳಿ ಸಾಹಿತ್ಯದಲ್ಲಿ ವಿಮರ್ಶೆಯ ಹೊಸ ಹೊನಲನ್ನು ಹರಿಸುವ ಪ್ರಸ್ತಾವವನ್ನು ಅಂದು ನನ್ನೊಡನೆ ಕೊಂಡೊಯ್ದಿದ್ದೆ. ಅನೇಕ

ಕಾರಣಗಳಿಂದ ಕವಿವರ್ಯರು ಆ ಸೂಚನೆಯನ್ನು ಅಂಗೀಕರಿಸಲಾರದೆ ಹೋದರು. ಯಾರನ್ನು ತಾವು ಪ್ರಶಂಸಿಸಲು ಅಸಮರ್ಥರೋ ಅವರನ್ನು ನಿಂದಿಸಲೂ ಅಸಮರ್ಥರೆಂದು ಅವರು ಭಾವಿಸಿದ್ದುದು ಇದಕ್ಕೆ ಒಂದು ಕಾರಣವೆಂದು ಅವರು ತಿಳಿಸಿದರು. ನೀವು ಈ ಕೆಲಸವನ್ನು ಮಾಡುವುದಾದರೆ, ಅಸಾಮರ್ಥ್ಯ ಮತ್ತು ಅಪರಾಧ ಎರಡೂ ಒಂದೇ ಎಂದು ಭಾವಿಸಬೇಡಿ ಎಂದೂ ಅವರು ಹೇಳಿದ್ದರು. ಸಾಹಿತ್ಯದ ವಿಷಯದಲ್ಲಿ ನೀವೆಲ್ಲರೂ ಈ ಸತ್ಯವನ್ನು ನೆನಪಿಟ್ಟುಕೊಂಡಿದ್ದರೆ ಎಷ್ಟು ಚೆನ್ನ ಎಂದು ನಾನು ಯೋಚಿಸುತ್ತೇನೆ.''

ಅದು ರವೀಂದ್ರನಾಥರ ಪ್ರಭಾವ ಕವಿದುಕೊಂಡಿದ್ದಂಥ ಯುಗ. ಆ ಅಶ್ವತ್ಥವೃಕ್ಷದ ನೆರಳಿನಲ್ಲಿ ಶರತ್‌ಚಂದ್ರರು ತಮಗೆ ಮಾತ್ರ ಜಾಗವನ್ನು ಕಂಡುಕೊಳ್ಳಲಿಲ್ಲ; ಇಡೀ ಪ್ರಾಂತ್ಯದ ಹಾಗೂ ರಾಷ್ಟ್ರದ ಜನಮಾನಸದ ಗಮನವನ್ನು ಆದರತ್ತ ಸೆಳೆದರು. ಇದಕ್ಕೂ ಅವರು ಕವಿಗುರುವಿನಿಂದಲೇ ಪ್ರೇರಣೆಯನ್ನು ಪಡೆದರು. ಈ ಸತ್ಯವನ್ನು ಅವರೆಂದೂ ನಿರಾಕರಿಸಲಿಲ್ಲ. ತಮಗಾಗಿ ಹೊಸ ಹಾದಿಯನ್ನು ಕಂಡುಕೊಳ್ಳಬಲ್ಲಂಥವರೂ, ಹೊಸ ಭೂಮಿಯನ್ನು ಸಿದ್ಧಪಡಿಸಿಕೊಳ್ಳಬಲ್ಲಂಥವರೂ ಆಗಿದ್ದ ಅವರಂಥ ಪ್ರತಿಭಾಶಾಲಿ ಲೇಖಕ ತನ್ನ ಸಾಮರ್ಥ್ಯದ ಸುಳ್ಳು ಪ್ರದರ್ಶನಕ್ಕೆ ತೊಡಗದೆ, ತನ್ನ ಹಿಂದಿನ ಹಾಗೂ ಸಮಕಾಲೀನ ಸಾಹಿತಿಯಿಂದ ಪ್ರೇರಣೆಯನ್ನು ಪಡೆದು, ಆ ವಿಚಾರವನ್ನು ಅಂಗೀಕರಿಸುವುದು ನಿಜಕ್ಕೂ ತುಂಬ ದೊಡ್ಡ ಗುಣವೆ. ಅದರಲ್ಲಿಯೂ ಒಂದೇ ಯುಗದ ಅನೇಕ ಪ್ರತಿಭಾಶಾಲಿ ಲೇಖಕರು, ಕವಿಗಳು ಮತ್ತು ಕಲಾವಿದರು ಪರಸ್ಪರ ಹೊಟ್ಟೆಕಿಚ್ಚು ಪಡುತ್ತ, ವಿರೋಧಿಸಲೇಬೇಕೆಂಬ ಕಾರಣಕ್ಕಾಗಿ ಒಬ್ಬರು ಮತ್ತೊಬ್ಬರನ್ನು ವಿರೋಧಿಸುತ್ತ ಇರುವ ಅನೇಕ ನಿದರ್ಶನಗಳು ನಮ್ಮ ಬಾಳಿನಲ್ಲೇ ನಮಗೆ ಕಾಣದೊರೆಯುತ್ತಿರುವಾಗ ಇದು ನಿಜಕ್ಕೂ ಮಹತ್ವದ ಗುಣವಾಗುತ್ತದೆ. ಇದಕ್ಕೆ ವಿರುದ್ಧವಾಗಿ, ವಿವಿಧ ವಿಷಯಗಳಲ್ಲಿ ತಮ್ಮ ಪ್ರತಿಭೆಯ ಹಿರಿಮೆಯನ್ನು ಮೆರೆಯುತ್ತಿದ್ದ ಶರತ್‌ಚಂದ್ರರು ಈ ವಿಷಯದಲ್ಲಿ ಎಂದೂ ದಣಿಯಲೇ ಇಲ್ಲ. ಅವರು ರವೀಂದ್ರರ ಕವಿತೆಗಳನ್ನು ಬಹುಶಃ ನಿತ್ಯವೂ ಪಾರಾಯಣ ಮಾಡುತ್ತಿದ್ದರು. ಅವರ ಬಹುಪಾಲು ಪುಸ್ತಕಗಳಿಗೆ ಚರ್ಮದ ಉತ್ಕೃಷ್ಟ ಬೈಂಡಿಂಗ್ ಮಾಡಿಸಿ ಜೋಡಿಸಿ ಇಟ್ಟುಕೊಂಡಿದ್ದರು; ಚಿನ್ನದ ಬಣ್ಣದ ಅಕ್ಷರಗಳಲ್ಲಿ ಲೇಖಕರ ಮತ್ತು ಕೃತಿಯ ಹೆಸರುಗಳನ್ನು ಅಚ್ಚಿಸಿದ್ದರು. ರವೀಂದ್ರರ ಒಂದಲ್ಲ ಒಂದು ಪುಸ್ತಕ ಅವರ ಮೇಜಿನ ಮೇಲೆ ಇದ್ದೇ ಇರುತ್ತಿತ್ತು.

ಒಮ್ಮೆ ಬೇಥೂನ್ ಕಾಲೇಜಿನ ಪ್ರಾಧ್ಯಾಪಕರೊಬ್ಬರು ಅವರನ್ನು ಕಾಣಲು ಬಂದರು. ಅದೂ ಇದೂ ಮಾತನಾಡುತ್ತ ಅವರೆಂದರು: "ನೀವು ಎಷ್ಟು ಸುಂದರ ವಾಗಿ ಬರೆಯುತ್ತೀರೋ ಅಷ್ಟೇ ಸ್ಪಷ್ಟವಾಗಿಯೂ ಬರೆಯುತ್ತೀರಿ. ನಿಮ್ಮ ಕೃತಿಗಳನ್ನು ನಾವು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತೇವೆ. ಆದರೆ ರವೀಂದ್ರರು ಸ್ವಲ್ಪ ಅಸ್ಪಷ್ಟವೂ ಗೋಜಲೂ ಆದ ಶೈಲಿಯಲ್ಲಿ ಬರೆಯುವುದರಿಂದ ನಮಗೆ ಏನೊಂದೂ ಸರಿಯಾಗಿ ಅರ್ಥವಾಗುವುದಿಲ್ಲ. ಅವರು ಬಹು ದೊಡ್ಡ ಕವಿಯಾಗಿರಬಹುದು. ಆದರೆ, ರಹಸ್ಯವಾದಿ ಕವಿಯ ಯಾವುದೇ ಕೃತಿಯನ್ನು ನಾನು ಅರ್ಥಮಾಡಿಕೊಳ್ಳಲಾರೆ. ಅವರ 'ಜೀವನ-ದೇವತಾ' ಕವಿತೆಯ ರಹಸ್ಯ ಇಂದೂ ಅಭೇದ್ಯವಾಗಿಬಿಟ್ಟಿದೆ.''

ಶರತ್‌ಚಂದ್ರರು ಕೂಡಲೇ ಉತ್ತರಿಸಿದರು: "ಪ್ರಾಧ್ಯಾಪಕ ಮಹಾಶಯರೆ, ನಾನು ನಿಮ್ಮಂಥವರಿಗಾಗಿ ಬರೆಯುತ್ತೇನೆ. ನೀವೇ ನನ್ನ ಓದುಗರು. ಆದರೆ, ರವೀಂದ್ರರು ಬರೆಯುವುದು ನಮ್ಮಂಥವರಿಗಾಗಿ. ನಾವು ಅವರ ಓದುಗರು. ನಮಗೆ ಎಲ್ಲಿಯೂ ಅಸ್ಪಷ್ಟತೆ ಕಾಣುವುದಿಲ್ಲವಲ್ಲ."

ರವೀಂದ್ರ ಸಾಹಿತ್ಯದ ನಿಂದನೆಯನ್ನು ಸಹಿಸುವುದು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಅದರಲ್ಲಿಯೂ ಕಾವ್ಯ ಮತ್ತು ಕಲೆಯ ಗಂಭೀರ ಮತ್ತು ನಿಗೂಢ ತತ್ವಗಳ ಪರಿಚಯವೇ ಇಲ್ಲದಿದ್ದಂಥ ವ್ಯಕ್ತಿಗಳು ಇಂಥ ನಿಂದನೆಯಲ್ಲಿ ತೊಡಗಿದಾಗ ಅವರು ಸಿಡಿದೇಳುತ್ತಿದ್ದರು. ತಾವು ವಿದ್ಯಾಸಾಗರರಿಗೆ ಮತ್ತು ಬಂಕಿಮಚಂದ್ರರಿಗೆ ಋಣಿಯೆಂದು ಅವರು ಮತ್ತೆ ಮತ್ತೆ ಹೇಳಿದ್ದಾರೆ. ಆದರೆ, ಬಂಕಿಮಚಂದ್ರರು ರೋಹಿಣಿಯನ್ನು ಗುಂಡಿಟ್ಟು ಸಾಯಿಸಿದಂತೆ ಮಾಡಬೇಕಾದ ಅಗತ್ಯ ಇಂದು ಇಲ್ಲ. ಈ ಯುಗ ಬದಲಾಗಿದೆ. ಮೌಲ್ಯಗಳು ಬದಲಾಗಿವೆ. ಈ ಮೋಹಾಂಧತೆಯನ್ನು ತೊಡೆದುಹಾಕಿದ್ದಕ್ಕಾಗಿ ನಾವು ಯಾರಿಗೆ ಋಣಿಯಾಗಿದ್ದೇವೋ ಅವರಿಗೆ ನಾನು ಋಣಿಯಾಗಿದ್ದೇನೆ. ಕವಿಗುರು ರವೀಂದ್ರನಾಥರೇ ಆ ವ್ಯಕ್ತಿ. ಬಂಕಿಮಚಂದ್ರರು ತಮ್ಮ ಯುಗದ ಸಂಸ್ಕಾರಗಳಿಂದ ತಮ್ಮನ್ನು ಮುಕ್ತರಾಗಿಸಿಕೊಳ್ಳಲಾರದೆ ಹೋದರು. 'ಪಾಪದ ಸೋಲು ಮತ್ತು ಪುಣ್ಯದ ಗೆಲುವು' - ಈ ಸಿದ್ಧಾಂತದ ಬಂಧನದಿಂದ ಅವರು ತಮ್ಮನ್ನು ಬಿಡಿಸಿಕೊಳ್ಳಲಾರದೆ ಹೋದರು. ಅವರಲ್ಲಿ 'ಕಣ್ಣಿನ ಕಿರಿಕಿರಿ'ಯಂಥ ಕಾದಂಬರಿಯನ್ನು ಬರೆಯುವ ಧೈರ್ಯವಿರಲಿಲ್ಲ. ಅವರಲ್ಲಿ ವೈಚಾರಿಕ ಅರಿವಿತ್ತು. ಆದರೆ ಸಂಸ್ಕಾರದ ಅರಿವು ಇರಲಿಲ್ಲ. ಅವರು ತಮ್ಮ ಸಾಹಿತ್ಯದಲ್ಲಿ ಸಮಾಜದ ಸಂಕೀರ್ಣತೆಯಿಂದ ಮೇಲೆದ್ದು ನಿಲ್ಲಲಾರದೆ ಹೋದರು.

ರವೀಂದ್ರರ ಬಗ್ಗೆ ಮಾತು ಬಂದಾಗ, ಒಮ್ಮೆ ಅವರು ಸತ್ಯೇಂದ್ರನಾಥ ಬಸು ಅವರೊಂದಿಗೆ ತುಂಬ ದುಃಖದಿಂದ ತಮಗಾದ ಅಪಮಾನ, ಅಗೌರವ ಮತ್ತು ಅಂಟಿಕೊಂಡ ಕಳಂಕಗಳ ವಿಚಾರವನ್ನು ಹೇಳಿದ್ದರು: "ಒಮ್ಮೆ ಕವಿಗುರುಗಳು ಹೀಗೆಂದಿದ್ದರು: 'ಪೆಟ್ಟುಬಿದ್ದಾಗ ಆ ಪೆಟ್ಟಿನ ನೋವಾಗುವುದಿಲ್ಲವೆ? ಆದರೆ, ಅದನ್ನು ಸಹಿಸಿಕೊಳ್ಳುವುದನ್ನು ಬಿಟ್ಟರೆ ಬೇರಾವ ದಾರಿ ಇದೆ?' ನೋಡಿದಿರಾ ಎಂಥ ಸಂಸ್ಕೃತಿ! ಎಂಥ ಶಿಕ್ಷಣ! ಎಂಥ ದೀಕ್ಷೆ! ಎಂಥ ಅಸಾಧಾರಣ ಸಹಿಷ್ಣುತೆ! ಒಂದು ದಿನವೂ ಬಾಯಿಬಿಟ್ಟು ಒಂದಾದರೂ ಪ್ರತಿಭಟನೆಯ ಮಾತನ್ನಾಡಲಿಲ್ಲ. ಋಷಿ ಸದೃಶರಾದ ಆ ಮಹಾಪುರುಷರು, ಸೌಮ್ಯ ಹಾಗೂ ಶಾಂತ ಮುಖಭಾವದ ಆ ಕವಿಗಳು ಎಲ್ಲವನ್ನೂ ಮೌನವಾಗಿ ಅನುಭವಿಸಿದರು; ತಾಳ್ಮೆಯನ್ನು ತೋರಿದರು. ಅವರು ತೋರಿದಂಥ ಕೆಚ್ಚು ನಮ್ಮಲ್ಲಿದೆಯೆ? ನಾನು ನನ್ನ ಅದೆಷ್ಟು ಮಾತುಗಳನ್ನು ನಿಮ್ಮೊಡನೆ ಹೇಳಿದ್ದೇನೋ ಏನೋ. ರವೀಂದ್ರರು ಇಬ್ಸನ್ ಮತ್ತು ಮೆಟರ್‌ಲಿಂಕ್ ಅವರನ್ನು ಅನುಸರಿಸಿದ್ದಾರೆ ಎಂದು ವಿಮರ್ಶಕರು ಹೇಳುತ್ತಾರೆ. ಇಬ್ಸನ್ ಮತ್ತು ಮೆಟರ್‌ಲಿಂಕ್ ಅವರು 'ಗೀತಾಂಜಲಿ', 'ನೈವೇದ್ಯ' ಮತ್ತು 'ಬಲಾಕಾ'ದಂಥ ಸಾಹಿತ್ಯ ಸಂಪತ್ತನ್ನು ಸೃಷ್ಟಿಸಬಲ್ಲರೆ? ಅವರು ಅವರನ್ನು ಅನುಕರಣೆ ಮಾಡಲು ಹೋಗುತ್ತಾರೆಯೋ? ಎಲ್ಲಿಯಾದರೂ ಒಂದೆರಡು ಭಾವಗಳು ಮತ್ತು ಆಲೋಚನೆಗಳು ಸಿಕ್ಕಿಬಿಟ್ಟರೆ, ಅನುಕರಣೆ ಎಂದು ತಲೆಪಟ್ಟಿ ಕಟ್ಟಿಬಿಡುತ್ತಾರೆ. ಒಂದು

ದಿವಸ ಅವರು ನನ್ನೊಡನೆ ಹೀಗೆಂದಿದ್ದರು: 'ನನ್ನ ಕಾವ್ಯದ ಓದುಗರ ಸಂಖ್ಯೆ 200ರಷ್ಟೂ ಇಲ್ಲ.' ನಾನೆಂದಿದ್ದೆ: 'ನೀವೇನು ಹೇಳುತ್ತಿದ್ದೀರಿ ? ನಿಮ್ಮ ಪ್ರಭಾವ ಇಲ್ಲದೆ ಇರುವಂಥ ಒಂದೇ ಒಂದು ಕವಿತೆಯಾದರೂ ಇಂದು ಕಾಣದೊರೆಯುತ್ತದೆಯೆ ? ನಾನು ಅದನ್ನು ಅನುಕರಣವೆಂದು ಕರೆಯುವುದಿಲ್ಲ. ನೀವು ಹರಿಸಿದ ಕಾವ್ಯಧಾರೆಯನ್ನು ಅನುಸರಿಸಿಯೇ ಮುಂದಿನ ಎಲ್ಲ ಕವಿತೆಯೂ ಮುನ್ನಡೆದಿದೆ.'

"ಕಾವ್ಯ ಮಾತ್ರವಲ್ಲ ! ಕಾದಂಬರಿಯ ವಿಷಯದಲ್ಲಿ, ಭಾಷೆಯಲ್ಲಿ ಅವರು ಇದೇ ಕೆಲಸವನ್ನು ಮಾಡಿಲ್ಲವೇನು ? ಇಂದು ಯಾರಾದರೂ ಬಂಕಿಮರ ಭಾಷೆಯನ್ನು ಬರೆಯುತ್ತಾರೆಯೆ ? ಅಥವಾ ಆ ಬಗೆಯ ಕಾದಂಬರಿಯನ್ನು ಬರೆಯುತ್ತಾರೆಯೇ ? ಅವರು ನನ್ನ ಗುರುಗಳು ಸ್ವಾಮಿ."

ರವೀಂದ್ರರ ಈ ಅಭಿನಂದನೆಯ ಬಳಿಕ ಅವರ ಮನಸ್ಸಿಗೆ ತುಂಬ ಸಂತೋಷವಾಗಿತ್ತು. ತಮ್ಮ ಒಂದು ಪತ್ರದಲ್ಲಿ ಅವರು ಅಮಲ್‌ಹೋಮ್ ಅವರಿಗೆ ಹೀಗೆಂದು ಬರೆದಿದ್ದರು: "ಅಮಲ್, ಟೌನ್ ಹಾಲಿನಲ್ಲಿ ನೀವು, ಪಟ್ಟು ಹಿಡಿದು ನನ್ನನ್ನು ಸಭಾಧ್ಯಕ್ಷನ ಸ್ಥಾನದಲ್ಲಿ ಕೂಡಿಸಿದಿರಿ, ನನ್ನ ಕೊರಳಿಗೆ ಹಾರ ಹಾಕಿದಿರಿ, ನಾನು ಬರೆದಿದ್ದ ಬಿನ್ನವತ್ತಳೆಯನ್ನು ಕವಿವರ್ಯರ ಕೈಗೆ ಒಪ್ಪಿಸಿದಿರಿ - ಇದೆಲ್ಲದರಿಂದ ನನಗೆ ತುಂಬ ಸಂತೋಷವಾಗಿದೆ. ಆ ಬೃಹತ್ ಕಾರ್ಯವನ್ನು ನೀವು ನಡೆಸಿಕೊಟ್ಟ ರೀತಿಯಿಂದ, ನಿಷ್ಠೆ, ಶ್ರಮ ಮತ್ತು ಶ್ರದ್ಧೆಗಳಿಂದ ಆ ಆಚರಣೆಯನ್ನು ಸಾರ್ಥಕಗೊಳಿಸಿದ ರೀತಿಯಿಂದ ನನಗೆ ತುಂಬ ಹೃತ್ಪೂರ್ವಕವಾದ ಆನಂದ ದೊರೆತಿದೆ. ಕವಿಯ ವಿಷಯದಲ್ಲಿ ನಾನು ಅಲ್ಲಿ ಇಲ್ಲಿ ಆಗಾಗ್ಗೆ ಕೋಪದಿಂದ ಕೆಟ್ಟ ಮಾತುಗಳನ್ನು ಆಡಿದ್ದೇನೆ. ಈ ಮಾತು ಸತ್ಯವಾಗಿರುವಂತೆಯೇ, ನನಗಿಂತಲೂ ಮಹಾಭಕ್ತ ಅವರಿಗೆ ಬೇರಾರೂ ಇಲ್ಲವೆಂಬುದೂ ಸತ್ಯವೇ. ನನಗಿಂತ ಹೆಚ್ಚಾಗಿ ಅವರನ್ನು ಗುರುವೆಂದು ಭಾವಿಸುವಂಥವನೂ ಇನ್ನೊಬ್ಬನಿಲ್ಲ. ನನಗಿಂತ ಹೆಚ್ಚಾಗಿ ಅವರ ಕೃತಿಗಳನ್ನು ಅಧ್ಯಯನ ಮಾಡುವಂಥವನೂ ಮತ್ತೊಬ್ಬನಿಲ್ಲ. ಅವರ ಕವಿತೆಗಳ ಮಾತನ್ನು ನಾನು ಹೇಳುತ್ತಿಲ್ಲ; ಆದರೆ, ನನಗಿಂತ ಹೆಚ್ಚಾಗಿ ಅವರ ಕಾದಂಬರಿ ಬೇರಾರೂ ಓದಿಲ್ಲ. ಅವರ 'ಕಣ್ಣಿನ ಕಿರಿಕಿರಿ', ಅವರ 'ಗೋರಾ', ಅವರ 'ಕಥಾಗುಚ್ಛ' ಇವನ್ನೆಲ್ಲ ಅದೆಷ್ಟೋ ಸಲ ಓದಿಹಾಕಿದ್ದೇನೆ. ಇಂದು ಇಷ್ಟೊಂದು ಜನ ನನ್ನ ಕೃತಿಗಳನ್ನು ಓದಿ, ಅವು ಚೆನ್ನಾಗಿವೆ ಎಂದು ಹೇಳುತ್ತಿದ್ದರೆ ಅದಕ್ಕೆಲ್ಲ ಇವೇ ಕಾರಣ. ಇದು ಪರಮಸತ್ಯವೆಂಬುದು ನನಗೆ ಗೊತ್ತು. ಬೇರೆಯವರು ಈ ಮಾತನ್ನು ಹೇಳುತ್ತಾರೆಯೋ ಇಲ್ಲವೇ, ಒಪ್ಪುತ್ತಾರೆಯೋ ಇಲ್ಲವೇ ಎಂಬುದರಿಂದ ಆಗಬೇಕಾದ್ದು - ಹೋಗಬೇಕಾದ್ದು ಏನೇನೂ ಇಲ್ಲ. ಆದ್ದರಿಂದಲೇ ನಾನು ಹೃತ್ಪೂರ್ವಕವಾಗಿ ಆ ಸಮಾರಂಭದಲ್ಲಿ ಭಾಗವಹಿಸಿದೆ. ಹಾಗೆ ಮಾಡದೆ ಇರಲು ನನ್ನಿಂದ ಸಾಧ್ಯವೂ ಇರಲಿಲ್ಲ. ನೀವು ತುಂಬ ದೊಡ್ಡ ಕೆಲಸವನ್ನು ಮಾಡಿದ್ದೀರಿ. ಹೃತ್ಪೂರ್ವಕವಾಗಿ ನಿಮಗೆ ಆಶೀರ್ವಾದ ಮಾಡುತ್ತಿದ್ದೇನೆ. ಈ ಸಮಾರಂಭವನ್ನು ನಡೆಸಿದ್ದರ ಪರಿಣಾಮವಾಗಿ ನಿಮ್ಮ ಕಲ್ಕತ್ತಾದ ಮನೆಯನ್ನೂ ಕಾರನ್ನೂ ಮಾರಬೇಕಾಗಿ ಬಂದಿತೆಂದು ಕೇಳಿದ್ದೇನೆ. ಸಿಮ್ಮ-ನಮ್ಮ ಮಿತ್ರರು ತುಂಬ ಉತ್ಸಾಹದಿಂದ ಈ ಸಂಗತಿಯನ್ನು ಪ್ರಚಾರ ಮಾಡುತ್ತಿದ್ದಾರೆ. ತಮ್ಮ ಹುಟ್ಟುಹಬ್ಬದ ಆಚರಣೆಗಾಗಿ ಸ್ವತಃ

ರವೀಂದ್ರರೇ ನಿಮ್ಮನ್ನು ಮುಂದೆ ನಿಲ್ಲಿಸಿದ್ದರೆಂದೂ, ನೀವು ಅವರು ಮುಂದಿಟ್ಟುಕೊಂಡಿದ್ದ ಶಿಖಂಡಿ ಮಾತ್ರವಾಗಿದ್ದರೆಂದೂ, ಅವರೇ ಎಲ್ಲವನ್ನೂ ಮಾಡಿಸಿದ್ದಾರೆಂದೂ ಅವರಿವರು ಹೇಳುತ್ತಿರುವುದನ್ನು ನಾನೂ ಕೇಳಿದ್ದೇನೆ. ಅಮಲ್, ಇದು ಬಂಗಾಳ; ಚಿನ್ನದ ನಾಡಿನ ಬಂಗಾಳ. ಇಷ್ಟಾಗಿಯೂ ನಾನು ಈ ಮಾತನ್ನು ಹೇಳಲೇಬೇಕು. ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಮನಸ್ಸಿನಲ್ಲಿ ಯಾವುದೇ ಕ್ಷೋಭೆಯನ್ನಿರಿಸಿಕೊಳ್ಳಬೇಡಿ. ಯಾರು ಏನು ಬೇಕಾದರೂ ಹೇಳಿಕೊಳ್ಳಲಿ. ನಿಮಗೆ ಮನೆಯೂ ಇಲ್ಲದಂತಾಗಿದೆ, ಕಾರೂ ಇಲ್ಲದಂತಾಗಿ, ನೀವು ಓಡಾಡುವುದಕ್ಕೆ ಬಳಸುತ್ತಿರುವುದು ಕಾರ್ಪೋರೇಷನ್ನಿನ ವಾಹನ ಎಂಬುದು ನನಗೆ ಗೊತ್ತಿದೆ. ನಾನು ಇಷ್ಟು ಮಾತ್ರ ಹೇಳಬಯಸುತ್ತೇನೆ. ನಿಮಗೆ ಒಳ್ಳೆಯದಾಗುತ್ತದೆ. ನೀವು ನಾಡಿನ ಗೌರವವನ್ನು ಕಾಪಾಡಿದ್ದೀರಿ. ಹೃತ್ಪೂರ್ವಕವಾಗಿ ಮತ್ತೊಮ್ಮೆ ನಿಮಗೆ ಆಶೀರ್ವದಿಸುತ್ತೇನೆ."

ರವೀಂದ್ರರ ಬಗ್ಗೆ ಶರತ್‌ಚಂದ್ರರು ಇರಿಸಿಕೊಂಡಿದ್ದ ಭಕ್ತಿ-ಗೌರವಗಳ ಬಗೆಗಿನ ಸಾಕ್ಷ್ಯಗಳಿಗೆ ಕೊರತೆಯೇನೂ ಇಲ್ಲ. ರವೀಂದ್ರ ಸಾಹಿತ್ಯವನ್ನು ಶರತ್‌ಚಂದ್ರರು ತುಂಬ ಶ್ರದ್ಧೆಯಿಂದ ಅಧ್ಯಯನ ಮಾಡಿದ್ದರೆಂಬುದು ಅವರ ಸಮಕಾಲೀನರಾಗಿದ್ದ ಎಲ್ಲ ವ್ಯಕ್ತಿಗಳಿಗೂ ಗೊತ್ತಿದೆ. ಒಮ್ಮೆ ಯಾರೋ ಒಬ್ಬ ಲೇಖಕ ಅವರನ್ನು ಕೇಳಿದ: "ನೀವು 'ಗೋರಾ' ಕಾದಂಬರಿಯನ್ನು ಓದಿದ್ದೀರಾ?"

ಅವರು ಕೂಡಲೇ ತಮ್ಮ ಸ್ವಭಾವ ಸುಲಭವಾದ ಉತ್ಸಾಹದಿಂದ ಹೇಳಿದರು: " 'ಗೋರಾ' ಕಾದಂಬರಿಯನ್ನೇ! ಹೌದು ಅರುವತ್ತನಾಲ್ಕು ಸಲ ಓದಿದ್ದೇನೆ. ಹೌದು, ನಿಜವಾಗಿಯೂ ಅರುವತ್ತನಾಲ್ಕು ಸಲ ಓದಿದ್ದೇನೆ."

ಢಾಕಾಗೆ ಹೋದಾಗಲೆಲ್ಲ ತಮ್ಮ ಪ್ರೀತಿಯ ಗೆಳೆಯರಾಗಿದ್ದ ಚಾರುಚಂದ್ರ ಬಂದೋಪಾಧ್ಯಾಯ ಅವರ ಮನೆಯಲ್ಲಿಯೇ ಉಳಿದುಕೊಳ್ಳುತ್ತಿದ್ದರು. ಒಮ್ಮೆ ಅವರು ಇದ್ದಕ್ಕಿದ್ದಂತೆ ಅಸ್ವಸ್ಥರಾಗಿ ಬಿಟ್ಟರು. ಚಾರುಚಂದ್ರರು ಹೋಗಿ ನೋಡಿದರೆ, ಜ್ವರದ ಆವೇಶದಲ್ಲಿಯೂ ಶರತ್‌ಚಂದ್ರರು ಒಂದಾದ ಮೇಲೆ ಒಂದರಂತೆ 'ಬಲಾಕಾ'ದ ಕವಿತೆಗಳನ್ನು ಹೇಳಿಕೊಂಡು ಹೋಗುತ್ತಿದ್ದಾರೆ. ಪ್ರತಿಯೊಂದು ಕವಿತೆಯೂ ಅವರಿಗೆ ಸಂಪೂರ್ಣವಾಗಿ ಬಾಯಿಪಾಠವಾಗಿಬಿಟ್ಟಿತ್ತು.

ಆಶ್ಚರ್ಯವನ್ನುಂಟು ಮಾಡುವಷ್ಟರ ಮಟ್ಟಿಗೆ, ರವೀಂದ್ರರ ಸುದೀರ್ಘಕವಿತೆಗಳೂ ಅವರಿಗೆ ನಿಜವಾಗಿಯೂ ಕಂಠಪಾಠವಾಗಿಬಿಟ್ಟಿದ್ದುವು. ಪುಸ್ತಕದ ನೆರವಿಲ್ಲದೆಯೇ, ಒಂದೇ ಒಂದು ತಪ್ಪು ಮಾಡದಂತೆ ರವೀಂದ್ರರ ಕವಿತೆಯನ್ನು ಶರತ್‌ಚಂದ್ರರು ಪುನರಾವೃತ್ತಿಮಾಡುತ್ತಿದ್ದುದನ್ನು ಅನೇಕರು ಕಂಡಿದ್ದರು. ಇಳಾಚಂದ್ರ ಜೋಶಿಯವ ರೊಂದಿಗೆ ಅವರು ಹೀಗೆಂದಿದ್ದರು: "ನಾನು ಪ್ರತಿ ಮೂರು ನಾಲ್ಕು ದಿವಸಗಳಿಗೊಮ್ಮೆ ಅವರ ಯಾವುದಾದರೂ ಒಂದು ಕವಿತಾ ಸಂಕಲನವನ್ನು ಹಿಡಿದುಕೊಂಡು ಕುಳಿತಿರುತ್ತೇನೆ. ಇಂದು ಹುಡುಕಿನೋಡಿದರೂ, ಲೋಕದಲ್ಲಿ ಇಷ್ಟು ದೊಡ್ಡ ಕವಿ ಸಿಕ್ಕುವುದಿಲ್ಲ."

ಹೊತ್ತುಗೊತ್ತು ಇಲ್ಲದೆ, ಕಾರಣವಿದ್ದು-ಕಾರಣವಿಲ್ಲದೆ ರವೀಂದ್ರರ ಕಾವ್ಯವನ್ನು ಕಂಠಪಾಠ ಮಾಡುವುದರಲ್ಲಿ ಅವರಿಗೆ ಆನಂದ ಉಂಟಾಗುತ್ತಿದ್ದಂತೆಯೇ, ಅವರ

ನಾಟಕಗಳ ಪ್ರದರ್ಶನವನ್ನು ನೋಡಲೂ ಅವರು ಉತ್ಸುಕರಾಗಿರುತ್ತಿದ್ದರು. 'ಕಲ್ಲೋಲ' ಪತ್ರಿಕೆಯ ಕಾರ್ಯಕರ್ತರಿಗೆ ತಮ್ಮ ಚಿತ್ರವನ್ನು ಕಾಣಿಕೆಯಾಗಿ ನೀಡುತ್ತ, ಅವರು ಹೀಗೆಂದಿದ್ದರು: "ಆದರೆ, ಇದನ್ನು ಮಾತ್ರ ತಿಳಿದುಕೊಳ್ಳಿ. ನಾವೆಲ್ಲ ರವೀಂದ್ರರ ಪ್ರತಿಧ್ವನಿಗಳು. ಗಂಗೆಯಲ್ಲಿ ಅಲೆಗಳಿರುತ್ತವೆ. ಅಲೆಗಳಿಂದ ಎಂದೂ ಗಂಗೆಯಾಗುವುದಿಲ್ಲ."

ಒಮ್ಮೆ ಕವಿತಾಪಾಠದ ಸ್ಪರ್ಧೆ ನಡೆಯುತ್ತಿತ್ತು. 'ಏ ಬಾರ್ ಫಿರಾಓ ಮೋರೇ' ಎಂಬ ರವೀಂದ್ರರ ಕವಿತೆಯನ್ನು ಕಂಠಪಾಠಕ್ಕಾಗಿ ಆರಿಸಲಾಗಿತ್ತು. ಆದರೆ, ಅದರಲ್ಲಿ ದೇಶದ ದುಃಸ್ಥಿತಿಯ ವರ್ಣನೆ ಬಂದಿದ್ದ ಭಾಗವನ್ನು ತೆಗೆದುಹಾಕಲಾಗಿತ್ತು. ಆ ಭಾಗವನ್ನು ಓದಿದರೆ ರಾಜದ್ರೋಹವನ್ನೆಸಗಿದಂತಾಗುವುದೆಂದೂ, ಗಲಭೆ-ಗೊಂದಲ ಗಳಿಗೆ ಎಡೆಯಾಗುತ್ತದೆಂದೂ ಆ ಸ್ಪರ್ಧೆಯ ಕಾರ್ಯಕರ್ತರು ನಂಬಿದ್ದರು.

ಇದರ ಬಗ್ಗೆ ಶರತ್‌ಚಂದ್ರರು ಹೀಗೆ ಬರೆದರು: "ನಾಡಿನ ಸರ್ವಶ್ರೇಷ್ಠ ಕವಿಯೂ, ಪಾಪವನ್ನರಿಯದವರೂ, ನಿರ್ಮಲಚರಿತ್ರರೂ ಆದ ಅವರ ಹೃದಯಾಂತರಾಳದಿಂದ ಹೊರಬಂದಿರುವ, ತಾಯ್ನಾಡಿನ ಒಳಿತಿನ ಧ್ಯೇಯವನ್ನು ಹೊಂದಿರುವ ಕವಿತೆಯನ್ನು ಬಹಿರಂಗವಾಗಿ ಸಭೆಯಲ್ಲಿ ಓದುವುದು ಇಂದು ರಾಜದ್ರೋಹವಾಗಿದೆ, ಅಪರಾಧ ವಾಗಿದೆ. ಈ ಸಭ್ಯರಾಷ್ಟ್ರದ ಮಕ್ಕಳು ಇಂದು ಇದನ್ನೇ ಕಲಿಯಬೇಕಾದ ಒತ್ತಾಯಕ್ಕೆ ಒಳಗಾಗಿದ್ದಾರೆ."

ಒಂದು ಕಡೆ ಇಂಥ ಅನನ್ಯ ಭಕ್ತಿಯಿದ್ದರೆ, ಇನ್ನೊಂದು ಕಡೆ ಆಗಿಂದಾಗ್ಗೆ ಅವರು ಕವಿಗುರುವಿನೊಂದಿಗೆ ಕಟುವಾದ ಸಂಘರ್ಷಕ್ಕೂ ಇಳಿದಿರುತ್ತಿದ್ದರೆಂಬೂದೂ ಅಷ್ಟೆ ಸತ್ಯಸಂಗತಿಯಾಗಿದೆ. ಭಾವುಕ ಹೃದಯರಾದ ಶರತ್‌ಚಂದ್ರರು ಯಾವಾಗಲಾದರೂ ಕವಿಗುರುಗಳ ಯಾವುದಾದರೂ ಒಂದು ಮಾತಿನಿಂದ ಅಸಂತುಷ್ಟರಾದರೆ, ಅದರ ಬಗ್ಗೆ ಅವರು ತೀವ್ರವಾದ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿದ್ದರು. ಹಾಗೂ ಅವರು ಕೂಡಲೇ ತಮ್ಮ ಪ್ರತಿಕ್ರಿಯೆನ್ನು ವ್ಯಕ್ತಪಡಿಸಿಬಿಡುತ್ತಿದ್ದರು. ಹೀಗೆ ಮಾಡಬೇಕೆಂದು ಅವರು ಮನಃಪೂರ್ವಕವಾಗಿಯೇನೂ ಇಚ್ಛಿಸುತ್ತಿರಲಿಲ್ಲ. ಆದರೆ, ಅವರೊಳಗಿನ ಕೃತಿಕಾರ ಕುದಿದೆದ್ದೊಡನೆಯೇ ಅವರು ವಿವಶರಾಗಿಬಿಡುತ್ತಿದ್ದರು. ನಾಲ್ಕು ವರ್ಷಗಳ ಹಿಂದೆ[1] 'ವಿಚಿತ್ರಾ'ದಲ್ಲಿ ರವೀಂದ್ರರ ಒಂದು ಲೇಖನ ಪ್ರಕಟವಾಗಿತ್ತು. 'ಸಾಹಿತ್ಯಧರ್ಮ' ಎಂಬುದು ಅದರ ತಲೆಬರೆಹವಾಗಿತ್ತು. ಈ ಲೇಖನ ಬಂಗಾಳದ ಸಾಹಿತ್ಯಲೋಕದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿತು. ಡಾ. ನರೇಶಚಂದ್ರ ಸೇನ್‌ಗುಪ್ತ ಅವರು ಮೇಲೆ ಹೇಳಿದ ಧರ್ಮದ ಮೇರೆಗಳನ್ನು ಅಥವಾ ಗಡಿಗಳನ್ನು ಗೊತ್ತುಪಡಿಸಿ, ತುಂಬ ಶ್ರದ್ಧೆಯಿಂದ ಆಯ್ದು ಕವಿಯ ಉದಾಹರಣೆಗಳಿಗೆ - ರೂಪಕಗಳು ಮತ್ತು ಯುಕ್ತಿಗಳಿಗೆ - ರಸಪೂರ್ಣ ಸೃಷ್ಟಿಗಳೆಂಬ ಬಿರುದನ್ನು ಕೊಟ್ಟರು. ಈ ಲೇಖನದ ಬಗ್ಗೆ ಸಜನೀಕಾಂತದಾಸರು ಶರತ್‌ಚಂದ್ರರೊಂದಿಗೆ ಸಾಕಷ್ಟು ಮಾತುಕತೆ ನಡೆಸಿದರು. ಅವರು ಈ ಮಾತುಗಳನ್ನು ಒಂದು ಲೇಖನದಲ್ಲಿ ಉಲ್ಲೇಖಿಸಿದರು. ಆದರೆ, ಆ ಉಲ್ಲೇಖವನ್ನು ಕೊಟ್ಟ ರೀತಿ, ಸ್ವಲ್ಪ ಮಟ್ಟಿನ ತಪ್ಪು

1. 1927ರಲ್ಲಿ.

ಕಲ್ಪನೆಯನ್ನುಂಟು ಮಾಡುವಂತಿತ್ತು. ಅಂದರೆ, ಆ ಮಾತುಗಳು ಶರತ್‌ಚಂದ್ರರ ನಿಜವಾದ ಮನಸ್ಸಿನ ಮಾತಿಗಿಂತ ಬೇರೆಯಾಗಿದ್ದುವು. ಈ ತಪ್ಪು ಕಲ್ಪನೆಯಿಂದಾಗಿ, ಕೆಲವರು ಅವರ ಬಗ್ಗೆ ಟೀಕೆ-ಟಿಪ್ಪಣಿಗಳನ್ನೂ ಮಾಡಿದರು. ಆದ್ದರಿಂದ, ಶರತ್‌ಚಂದ್ರರು 'ಸಾಹಿತ್ಯದ ರೀತಿ ಮತ್ತು ನೀತಿ'[1] ಎಂಬ ಹೆಸರಿನಲ್ಲಿ ಇನ್ನೊಂದು ಲೇಖನವನ್ನು ಬರೆದರು. ಅದರಲ್ಲಿ ಅವರು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾದ ಮಾತುಗಳಲ್ಲಿ ತಿಳಿಸಿದ್ದರು. ತುಂಬ ವಿನಯದಿಂದ ಕವಿವರ್ಯರು ಎತ್ತಿದ್ದ ಆಕ್ಷೇಪಗಳನ್ನು ನಿರಾಕರಿಸುತ್ತ, ಅವರು ಹೀಗೆಂದು ಬರೆದಿದ್ದರು: "ಅವರ 'ಸಾಹಿತ್ಯ ಧರ್ಮ' ಪ್ರಬಂಧದ ಕೊನೆಯ ಭಾಗದಲ್ಲಿ ಭಾಷೆ ಎಷ್ಟು ತೀಕ್ಷ್ಣವಾಗಿದೆಯೋ ಶ್ಲೇಷೆಯೂ ಅಷ್ಟೇ ನಿಷ್ಠುರವಾಗಿದೆ. ತಿರಸ್ಕರಿಸುವ ಹಕ್ಕು ಅವರಿಗೆ ಮಾತ್ರವೇ ಇದೆ ಎಂಬ ಅವರ ಮಾತನ್ನು ಯಾರೂ ನಿರಾಕರಿಸಲಾರರು. ಆದರೆ, ಆಧುನಿಕ ಬಂಗಾಳಿ ಸಾಹಿತಿ ನಿಜವಾಗಿಯೂ ಹಾದಿಬೀದಿಯ ಮಣ್ಣು-ಕೆಸರನ್ನೆತ್ತಿಕೊಂಡು ಪರಸ್ಪರ ಒಬ್ಬರು ಇನ್ನೊಬ್ಬರ ಮುಖದ ಮೇಲೆ ಎಸೆಯುವುದನ್ನೇ ಸಾಹಿತ್ಯ ಸಾಧನೆಯೆಂದು ಭಾವಿಸಿದ್ದಾನೆಯೆ? ಬಹುಶಃ ಎಂದೂ ಇಲ್ಲ; ಆದರೆ ತಪ್ಪಂತೂ ಆಗಿಬಿಟ್ಟಿದೆ. ಹೀಗೆಂದ ಮಾತ್ರಕ್ಕೆ, ಅದರಿಂದಲೇ ಇಡೀ ಆಧುನಿಕ ಸಾಹಿತ್ಯದ ಬಗ್ಗೆ ಇಷ್ಟು ಭಾರಿ ದೋಷಾರೋಪಣೆ ಮಾಡುವುದು ವಿವೇಚನೆಯೆ?

"ಕವಿ ಹೀಗೆಂದು ಹೇಳಿದ್ದಾರೆ: 'ಆ ನಾಡಿನ ಸಾಹಿತ್ಯ ಕನಿಷ್ಠಪಕ್ಷ ವಿಜ್ಞಾನದ ಹೆಸರು ಹೇಳಿಕೊಂಡು ಈ ದೌರಾತ್ಮ್ಯ ಅಥವಾ ಧಾಂಧಲೆಯ ಬಗ್ಗೆ ವಿವರಣೆಯನ್ನು ಕೊಡಬಹುದು. ಆದರೆ ಯಾವ ನಾಡಿನಲ್ಲಿ ಒಳಗೆ ಮತ್ತು ಹೊರಗೆ, ಆಲೋಚನೆಯಲ್ಲಿ ಮತ್ತು ವ್ಯವಹಾರದಲ್ಲಿ, ಯಾವುದೇ ಕಡೆಯಲ್ಲಿ ವಿಜ್ಞಾನಕ್ಕೆ ಪ್ರವೇಶಾಧಿಕಾರವೇ ದೊರೆತಿಲ್ಲವೋ ಆ ನಾಡಿನಲ್ಲಿ (ಇಂಥ ವಿವರಣೆಯನ್ನು ಕೊಡುವುದಾದರೂ ಸಾಧ್ಯವೆ?).....'

"ಈ ಮಾತೇ ನಿಜವಾಗಿದ್ದಲ್ಲಿ, ಇದು ಭಾರತಕ್ಕೆ ವಿಷಾದದ ಸಂಗತಿ, ದೌರ್ಭಾಗ್ಯದ ವಿಚಾರ, ವಿಜ್ಞಾನಕ್ಕೆ ಬಹುಶಃ ಪ್ರವೇಶಾಧಿಕಾರ ದೊರೆತಿಲ್ಲದಿರಬಹುದು; ಅದು ಭಾರತದಲ್ಲಿ ಬಹುಶಃ ಇರಲೇ ಇಲ್ಲವೆಂದೂ ಇಟ್ಟುಕೊಳ್ಳೋಣ. ಆದರೆ, ಯಾವುದೋ ಒಂದು ವಸ್ತು ಇರಲಿಲ್ಲವೆಂಬ ಕಾರಣದಿಂದಾಗಿಯೇ ಶಾಶ್ವತವಾಗಿ ವರ್ಜಿತವಾಗಿ ಬಿಡುತ್ತದೇನು? ಇದೇ ಕವಿಯ ಆದೇಶವೇನು?

"ಮುಂದಿನ ಪಂಕ್ತಿಯಲ್ಲಿ ಕವಿ ಹೀಗೆಂದಿದ್ದಾರೆ: 'ಆ ನಾಡಿನ (ಅಂದರೆ ಬಂಗಾಳದ) ಸಾಹಿತ್ಯದಲ್ಲಿ ಎರವಲಾಗಿ ಬಂದಿರುವ ಈ ಅನುಕರಣೆ ಯಾವುದರ ಮರೆಯಲ್ಲಿ ತನ್ನ ನಿರ್ಲಜ್ಜತೆಯನ್ನು ಅಡಗಿಸಿಟ್ಟೀತು?'

"ಇನ್ನಾವುದೋ ಒಂದರ ಹೆಸರನ್ನು ಹೇಳಿಕೊಳ್ಳುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಅಡಗಿಸಿಡುವುದೂ ಅನ್ಯಾಯವೆ. ಆದರೆ, ಭಕ್ತರ ಬಾಯಿಂದ ಎರವಲಾಗಿ ಪಡೆದಿರುವ ಅಭಿಪ್ರಾಯವನ್ನೇ ಸಂಶಯಾತೀತವಾದ ಸತ್ಯವೆಂದು ಭಾವಿಸಿ, ಅದನ್ನೇ ನಂಬಿಕೊಳ್ಳುವುದರಿಂದ ನ್ಯಾಯದ ಮುಖಕ್ಕೆ ಮಸಿ ಬಳಿದಂತಾಗುವುದಿಲ್ಲವೇನು?

---

1. 'ಬಂಗವಾಣೀ', ಸೆಪ್ಟೆಂಬರ್ 1927.

"ರವೀಂದ್ರನಾಥರ 'ಸಾಹಿತ್ಯ ಧರ್ಮ'ಕ್ಕೆ ನರೇಶಚಂದ್ರರು ಉತ್ತರ ಕೊಟ್ಟಿದ್ದಾರೆ. ಇನ್ನೂ ಅನೇಕರಂತೆ, ಬಹುಶಃ ತಾವು ಕವಿಯ ಆಕ್ಷೇಪಕ್ಕೆ ಗುರಿಯಾಗಿರುವವರಲ್ಲಿ ಒಬ್ಬರು ಎಂಬುದು ಅವರ ನಿಲುವಾಗಿದೆ. ಈ ನಿಲುವಿಗೆ ಕಾರಣವೇನು ಎಂಬುದು ನನಗೆ ಗೊತ್ತಿಲ್ಲ. ಅವರ ಎಲ್ಲ ಪುಸ್ತಕಗಳನ್ನೂ ನಾನು ಓದಿಲ್ಲ. ಮಾಸಪತ್ರಿಕೆಗಳ ಪುಟಗಳಲ್ಲಿ ಪ್ರಕಟವಾಗುತ್ತಿರುವುದನ್ನಷ್ಟೇ ನೋಡಿದ್ದೇನೆ. ಅನೇಕ ಕಡೆಗಳಲ್ಲಿ ಅವರ ಮತ್ತು ನನ್ನ ಅಭಿಪ್ರಾಯ ಒಂದಾಗುವಂತೆ ಕಾಣುವುದಿಲ್ಲ. ಗಂಡು ಹೆಣ್ಣುಗಳ ಪ್ರೇಮದ ವಿಷಯದಲ್ಲಿ ಅವರು ಪ್ರಚಲಿತವಾಗಿರುವ ಸುನಿರ್ದಿಷ್ಟವಾಗಿರುವ ಮಿತಿಗಳನ್ನು ಮೀರಿಹೋಗಿರುವಂತೆ ತೋರುತ್ತದೆ. ಆದರೆ, ಅಲ್ಲಿಯೂ ನಾನು ನನ್ನ ಅಭಿಪ್ರಾಯವನ್ನೇ ಭ್ರಾಂತಿ ದೂರವಾಗಿರುವುದೆಂದು ಭಾವಿಸಿಲ್ಲ. ನರೇಶಚಂದ್ರರ ವಿಷಯದಲ್ಲಿ ಅನೇಕರು ಅಪ್ರಸನ್ನರಾಗಿದ್ದಾರೆ ಎಂಬುದು ನನಗೆ ಗೊತ್ತು. ಆದರೆ, ಅಮಲಿನ ಆತ್ಮವಿಸ್ಮೃತಿಯಲ್ಲಿ ಮಾಧುರ್ಯರಹಿತವಾದ ಶುಷ್ಕತೆಯನ್ನೇ ಶಕ್ತಿಯ ಲಕ್ಷಣವೆಂದು ಭಾವಿಸಿ ಧಾಂಡಿಗನ ಪುಂಡುತನವನ್ನು ಮೆರೆಯಲೆಂದೇ ಅವರು ಪುಸ್ತಕಗಳನ್ನು ಬರೆಯುತ್ತಾರೆಂಬ ಅಪವಾದವನ್ನೂ ನಾನು ಹರಡಲಾರೆ. ಪಾಂಡಿತ್ಯ ದಲ್ಲಿ, ಜ್ಞಾನದಲ್ಲಿ, ಭಾಷೆಯ ಮೇಲಿನ ಪ್ರಭುತ್ವದಲ್ಲಿ, ಚಿಂತನೆಯ ವ್ಯಾಪ್ತಿಯಲ್ಲಿ, ಸ್ವತಂತ್ರ ಅಭಿಪ್ರಾಯವನ್ನು ಅಕುಂಠಿತ ರೂಪದಲ್ಲಿ ವ್ಯಕ್ತಪಡಿಸುವುದರಲ್ಲಿ ಅವರಿಗೆ ಸರಿದೊರೆಯಾಗಿರುವಂಥ ಲೇಖಕರು ಬಂಗಾಳಿ ಸಾಹಿತ್ಯದಲ್ಲಿ ಬಹಳವಾಗಿ ಇಲ್ಲ. ಬಂಗಾಳಿ ಸಾಹಿತ್ಯದ ಪ್ರಶ್ನಾತೀತ (ಸರ್ವಸಮ್ಮತ) ವಿಮರ್ಶಕರೆಂಬ ದೃಷ್ಟಿಯಿಂದ ಕವಿವರ್ಯರು ಮಾಡಬೇಕಾಗಿರುವ ಕರ್ತವ್ಯವೇನೆಂದರೆ ಅವರು ನರೇಶಚಂದ್ರರ ಎಲ್ಲ ಪುಸ್ತಕಗಳನ್ನೂ ಓದಿ, ಅವರ ಕಾದಂಬರಿಗಳಲ್ಲಿ ಎಲ್ಲಿ ಶ್ಲೀಲತೆಯ ಅಭಾವವಿದೆ, ಎಲ್ಲಿ ಅವರು ಕಾವ್ಯ-ಲಕ್ಷ್ಮಿಯ ವಸ್ತ್ರಾಪಹರಣದಲ್ಲಿ ನಿರತರಾಗಿದ್ದಾರೆ ಎಂಬುದನ್ನು ಸ್ಪಷ್ಟವಾಗಿ ತೋರಿಸಿಕೊಡಬೇಕು. ಆದರೆ, ಕವಿವರ್ಯರು ನರೇಶಚಂದ್ರರನ್ನು ದೃಷ್ಟಿಯಲ್ಲಿರಿಸಿಕೊಳ್ಳದೆ, ಬೇರೆ ಯಾರನ್ನೋ ದೃಷ್ಟಿಯಲ್ಲಿಟ್ಟುಕೊಂಡು ಈ ಮಾತುಗಳನ್ನಾಡಿರುವ ಸಂಭವವೂ ಇದೆ. ಹಾಗಿದ್ದರೂ ಅವರು ಆ 'ಬೇರೆ ಯಾರ'ದೋ ಕೃತಿಗಳನ್ನೆಲ್ಲ ಓದಿನೋಡಬೇಕೆಂದು ನಾನು ಭಾವಿಸುತ್ತೇನೆ.

"ನಮ್ಮ ಕಾಲ ಇನ್ನೇನು ಕಳೆದು ಹೋಗಲಿದೆ. ಈಗ ಸಾಹಿತ್ಯವ್ರತಿಗಳ ಒಂದು ಹೊಸ ತಂಡ ಸಾಹಿತ್ಯ ಸೇವೆಯ ಹೊಣೆಯನ್ನು ಸ್ವೀಕರಿಸಲಿದೆ. ಸಂಪೂರ್ಣ ಅಂತಃಕರಣದಿಂದ ನಾನು ಅವರಿಗೆ ಆಶೀರ್ವಾದ ಮಾಡುತ್ತೇನೆ..... ಆದರೆ, ಕೆಲವು ದಿನಗಳಿಂದ ನಾನು ನೋಡುತ್ತಿದ್ದೇನೆ. ಈ ನವಲೇಖಕರಿಗೆ ವಿರುದ್ಧವಾಗಿ ಒಂದು ಪ್ರಚಂಡ ಆಕ್ರಮಣವೇ ಪ್ರಾರಂಭವಾಗಿಬಿಟ್ಟಿದೆ. ಕ್ಷಮೆಯಿಲ್ಲ, ಧೈರ್ಯವಿಲ್ಲ, ಮಿತ್ರಭಾವದಿಂದ ತಪ್ಪು-ತಿದ್ದುವ ಆಸಕ್ತಿಯಿಲ್ಲ; ಇರುವುದು ಕೇವಲ ಕಟೂಕ್ತಿ; ತೀವ್ರ ವಾಕ್ಯ-ಬಾಣಗಳ ಸುರಿಮಳೆಯಿಂದ ಗಾಯಗೊಳಿಸುವ ಸಂಕಲ್ಪ; ನಾಡಿನ ಎದುರಿಗೆ, ಹತ್ತು ಜನರ ಎದುರಿಗೆ ಇವರನ್ನು ಹೇಯವೆಂದು ಸಿದ್ಧಗೊಳಿಸುವ ನಿರ್ದಯ ಪ್ರವೃತ್ತಿ. ಭಿನ್ನಾಭಿಪ್ರಾಯವಿದೆಯೆಂಬ ಕಾರಣದಿಂದಾಗಿಯೇ ವಾಣಿಯ ಮಂದಿರದಲ್ಲಿ ಆಕೆಯ ಸೇವಕರ ಈ ಆತ್ಮಘಾತಕ ಕಲಹ ಗೌರವಪ್ರಾಯವೂ ಅಲ್ಲ, ಕಲ್ಯಾಣಕಾರಕವೂ ಅಲ್ಲ.

“ವಿಶ್ವಕವಿಯ ಈ ‘ಸಾಹಿತ್ಯಧರ್ಮ’ದ ಅಂತಿಮ ಅಂಶವನ್ನು ನಾನು ವಿನಯಪೂರ್ವಕವಾಗಿ ವಿರೋಧಿಸುತ್ತೇನೆ. ಭಾಗ್ಯದ ದೋಷದಿಂದಾಗಿ ಅವರು ನನ್ನ ವಿಷಯದಲ್ಲಿ ಸುಮುಖವಾಗಿಲ್ಲ. ಅವರು ಬಹುಶಃ ನನ್ನ ಮಾತನ್ನು ನಂಬದೆಯೂ ಇರಬಹುದು. ಆದರೆ, ನಾನು ಸತ್ಯವಾಗಿ ಅವರಲ್ಲಿ ನಿವೇದನೆ ಮಾಡಿಕೊಳ್ಳುತ್ತಿದ್ದೇನೆ. - ಮನಸ್ಸಿನಲ್ಲಿಯೇ ಅವರನ್ನು ಗುರುಪೀಠದಲ್ಲಿ ಪ್ರತಿಷ್ಠಾಪಿಸಿಕೊಳ್ಳದೆ ಇರುವಂಥ ಒಬ್ಬನೇ ಒಬ್ಬ ವ್ಯಕ್ತಿಯೂ ಬಂಗಾಳದ ಸಾಹಿತ್ಯ ಸೇವಕರ ನಡುವೆ ಇಲ್ಲ. ಆಧುನಿಕ ಸಾಹಿತ್ಯದಿಂದ ಅಮಂಗಳ ಉಂಟಾಗುತ್ತದೆಂಬ ಭಯದಿಂದ ತಮ್ಮ ಕಿವಿಗಳ ಬಳಿ ‘ಗುರುದೇವ’ ಎಂದು ಹೇಳಿಕೊಂಡು ನಿತ್ಯವೂ ವಿಲಪಿಸುವ ಜನರಿದ್ದಾರಲ್ಲ, ಅವರಲ್ಲಿ ಎಲ್ಲರಿಗಿಂತಲೂ ಹೆಚ್ಚಾಗಿ ಇವರು (ಆಧುನಿಕ ಲೇಖಕರು) ನಿಮ್ಮನ್ನು ಹೆಚ್ಚಿನ ಶ್ರದ್ಧೆ-ಗೌರವಗಳಿಂದ ಕಾಣುತ್ತಾರೆ.”

ಈ ಲೇಖನದ ಆರಂಭ ಹಲವು ಕಾರಣಗಳಿಂದ ಮಹತ್ವಪೂರ್ಣವಾಗಿದೆ. ರವೀಂದ್ರರು ಮತ್ತು ಡಾ. ನರೇಶಚಂದ್ರ ಅವರ ನಡುವಣ ಭಿನ್ನಾಭಿಪ್ರಾಯದ ಬಗ್ಗೆ ಉಲ್ಲೇಖಿಸುತ್ತ ಅವರು ಹೀಗೆ ಬರೆದರು: “ನರೇಶಚಂದ್ರರಿಗೆ ವಿರುದ್ಧವಾಗಿರುವ ಗುಂಪಿನ ಸಜನೀಕಾಂತ ದಾಸ್ ಅವರು ‘ಶನಿವಾರೇರ್ ಚಿಠಿ’ (ಎಂಬ ಮಾಸಪತ್ರಿಕೆ) ಯಲ್ಲಿ ನನ್ನ ಅಭಿಪ್ರಾಯ-ಅನಭಿಪ್ರಾಯಗಳನ್ನು ಅದೆಷ್ಟು ಪ್ರಾಂಜಲವಾಗಿ ಹಾಗೂ ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾರೆಂದರೆ ನನ್ನ ಉಗುಳನ್ನು ನಾನೇ ನುಂಗಿಕೊಂಡು, ತಲೆಕೆರೆದುಕೊಂಡು ‘ಹೌದು’ ಮತ್ತು ‘ಇಲ್ಲ’ ಎಂಬುದೆರಡನ್ನೂ ಏಕಕಾಲದಲ್ಲಿ ಉಚ್ಚರಿಸಿ ಹಿಮ್ಮೆಟ್ಟಿ ಓಡಿ ಹೋಗಲೂ ನನಗೆ ದಾರಿಯನ್ನು ಇಲ್ಲವಾಗಿಸಿಬಿಟ್ಟಿದ್ದಾರೆ. ಒಮ್ಮೆಗೇ ನನ್ನನ್ನು ಹುಲಿಯ ಬಾಯಿಗೆ ನೂಕಿಬಿಟ್ಟಿದ್ದಾರೆ.”

“ಇತ್ತ ನನಗೆ ಎದುರಾಗಿರುವ ಇನ್ನೊಂದು ತೊಂದರೆ ಎಂದರೆ ನಿಧಾನವಾಗಿ ನನ್ನ ನಾಲ್ಕಾರು ಭಕ್ತರೂ ಬಂದು ನೆರೆದಿದ್ದಾರೆ. ನೀವು ಯಾರಿಗೇನು ಕಡಿಮೆ? ನಿಮ್ಮ ಅಭಿಪ್ರಾಯವನ್ನು ಪ್ರಚಾರಮಾಡಬಾರದೇಕೆ? ಎಂದು ನನ್ನನ್ನು ಉತ್ತೇಜಿಸುತ್ತಿದ್ದಾರೆ.

“ನಾನು ಅವರಿಗೆ ಹೇಳುತ್ತೇನೆ. ಅದನ್ನೇನೋ ನಾನು ಮಾಡಿಬಿಟ್ಟೆ ಎಂದು ಇಟ್ಟುಕೊಳ್ಳಿ, ಮುಂದಕ್ಕೆ ಏನು ಮಾಡಬೇಕು? ನಾನು ಯಾವ ಗುಂಪಿಗೆ ಸೇರಿದ್ದೇನೆ ಎಂಬುದು ನಿಮಗೇ ಸರಿಯಾಗಿ ಗೊತ್ತಿಲ್ಲ. ಇದಲ್ಲದೆ ಅತ್ತಕಡೆ ನರೇಶಚಂದ್ರರಿದ್ದಾರೆ. ಅವರು ಭಾರಿ ವಿದ್ವಾಂಸರು ಮಾತ್ರವಲ್ಲ, ಮಹಾ ವಕೀಲರೂ ಹೌದು. ಅವರ ಯಾವ ಪಾಟೀಸವಾಲಿನ ಬಲದಿಂದ ಕವಿಯ ಯುಕ್ತಿ ಮತ್ತು ತರ್ಕಗಳು ರಸಪೂರ್ಣ ರಚನೆಗಳಾಗಿ ಬಿಡುತ್ತವೋ ಆ ಪಾಟೀಸವಾಲಿನ ಪೇಚಿನಲ್ಲಿ ಸಿಕ್ಕಿಕೊಂಡರೆ ನಾನು ಒಂದು ಕ್ಷಣವೂ ನಿಲ್ಲಲಾರೆ. ಕವಿಗಳಾದರೋ ಅತಿವ್ಯಾಪ್ತಿ ಮತ್ತು ಅವ್ಯಾಪ್ತಿಗಳ ನಡುವಣ ವಿಶಾಲವಾದ ಕೋಣೆಯನ್ನು ಸೇರಿಬಿಟ್ಟಿದ್ದಾರೆ. ನಾನಾದರೋ ವ್ಯಾಪ್ತಿ ಮತ್ತು ಅವ್ಯಾಪ್ತಿಗಳಲ್ಲಿ ಯಾವುದರ ಹತ್ತಿರವೂ ಬಂದು ಸೇರಲಾರದೆ ತ್ರಿಶಂಕುವಿನಂತೆ ಮಧ್ಯದಲ್ಲಿಯೇ ನೇತಾಡುತ್ತಿರುತ್ತೇನೆ. ಆಗ ಏನು ಮಾಡಲಿ?

“ಭಕ್ತರ ಗುಂಪು ಹೇಳುತ್ತದೆ: ‘ನೀವು ಹೆದರುಪುಕ್ಕರು.’

“ನಾನೆನ್ನುತ್ತೇನೆ: ‘ಇಲ್ಲ.’

"ಭಕ್ತ ಸಮುದಾಯ ಹೇಳುತ್ತದೆ: 'ಹಾಗಾದರೆ, ಅದನ್ನು ಪ್ರಮಾಣ ಪೂರ್ವಕವಾಗಿ ತೋರಿಸಿಕೊಡಿ.'

"ನಾನೆನ್ನುತ್ತೇನೆ: 'ಪ್ರಮಾಣಪೂರ್ವಕವಾಗಿ ತೋರಿಸಿಕೊಡುವುದು ಸ್ವಾಭಾವಿಕವಾದ ವ್ಯವಹಾರವೆ? ರಸಸೃಷ್ಟಿ, ರಸೋದ್ಬೋಧನೆ ಮೊದಲಾದ ಶಬ್ದಗಳಲ್ಲಿ ಇಂಗಿತವಾಗಿರುವ ರಸ-ವಸ್ತುವಿಗೆ ಸಮಾನವಾದ ಅಸ್ಪಷ್ಟವಸ್ತು ಪ್ರಪಂಚದಲ್ಲಿ ಬೇರೆ ಯಾವುದಾದರೂ ಇದೆಯೆ? ಇದನ್ನು ರಸಪೂರ್ಣ ಕೃತಿಯೊಂದರ ಮೂಲಕವಷ್ಟೇ ಸಾಧಿಸಿತೋರಬಹುದು. ಆದರೆ, ಸದ್ಯಕ್ಕೆ ಆ ಕಾಲ ನನ್ನ ಕೈವಶವಾಗಿಲ್ಲ.

"ಇದು ನನ್ನ ಕಡೆಯ ಮಾತಾಯಿತು. ಆಕಡೆಯ ಮಾತು ನನಗೆ ಸರಿಯಾಗಿ ಗೊತ್ತಿಲ್ಲ. ಆದರೆ ಹೀಗಿರಬಹುದೆಂದು ಊಹಿಸಬಲ್ಲೆ.

"ಪ್ರಿಯಪಾತ್ರರು ಹೋಗಿ ಕವಿಯನ್ನು ಹಿಡಿದುಕೊಂಡರು. 'ಸ್ವಾಮಿ, ನಮಗಂತೂ ದಡಹಾಯುವುದು - ಅಂದರೆ ಗೆಲ್ಲಲು - ಸಾಧ್ಯವಿಲ್ಲ. ಇನ್ನು ನೀವೇ ಅಸ್ತ್ರವನ್ನು ಕೈಗೆತ್ತಿಕೊಳ್ಳಬೇಕು. ಬಿಲ್ಲು-ಬಾಣ ಬೇಡ. ಗದೆಯನ್ನು ತಿರುಗಿಸಿ ಎಸೆದುಬಿಡಿ - ಆ ಆಧುನಿಕ ಸಾಹಿತಿಗಳ ವಸತಿಯ ಕಡೆಗೆ. ಗುರಿ ಯಾವುದು ಎಂದೆ? ಅದರ ಅಗತ್ಯವೇನೂ ಇಲ್ಲ. ಅಲ್ಲೀಗ ಅನೇಕರು ಒಟ್ಟಾಗಿ ವಾಸಿಸುತ್ತಿದ್ದಾರೆ.'

"ಕವಿಯ ಆ ಗದೆಯೇ ಕತ್ತಲಿನಲ್ಲಿ ಆಕಾಶದಿಂದ ಎರಗಿದೆ. ಇದರಿಂದ ನಾವು ಇಚ್ಛಿಸಿದ ಪ್ರಯೋಜನ ದೊರೆಯದೆ ಹೋಗಬಹುದು. ಧೂಳು-ಗದ್ದಲ ಸಾಕಷ್ಟು ಎದ್ದಿದೆ. ನರೇಶಚಂದ್ರರು ಬೆಚ್ಚಿ ಎದ್ದು ಕುಳಿತಿದ್ದಾರೆ. ವಿನೀತ-ಕ್ರುದ್ಧಕಂಠದಿಂದ ಮತ್ತೆ ಮತ್ತೆ ಈ ಪ್ರಶ್ನೆಕೇಳುತ್ತಿದ್ದಾರೆ: ಹೇಳಿ, ಯಾರನ್ನು ಇದಕ್ಕೆ ಗುರಿಯಾಗಿಸಿದ್ದೀರಿ? ಏಕೆ ಹೀಗೆ ಮಾಡಿದ್ದೀರಿ? ಹೇಳಿ! ಹೌದು ಅಥವಾ ಇಲ್ಲ ಎಂದು ಹೇಳಿ.

"ಆದರೆ ಈ ಪ್ರಶ್ನೆಯೇ ಅವೈಧಸ್ವರೂಪದ್ದು, ವಿಧಿ ವಿರುದ್ಧವಾಗಿರುವಂಥದು. ಏಕೆಂದರೆ, ಕವಿ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಹದಿಮೂರು ತಿಂಗಳು ವಿದೇಶದಲ್ಲಿರುತ್ತಾರೆ. ನಿಮ್ಮಲ್ಲಿ ಖಡ್ಗಹಸ್ತೆಯೂ, ಶುಚಿಧರ್ಮಿಯೂ ಆದ ಅನುರೂಪಾ[1] ಯಾರು, ನಿಮ್ಮಲ್ಲಿ ಮುರುಳೀಧರನೂ ಅಶುಚಿಧರ್ಮಿಯೂ ಆದ ಶೈಲಜನಾರು, ಪ್ರೇಮೇಂದ್ರನಾರು, ನಜರುಲ್ ಇಸ್ಲಾಮ್- 'ಕಲ್ಲೋಲ್' ಯಾರು, 'ಕಪ್ಪು-ಲೇಖನಿ'ಯ ಗುಂಪು[2] ಯಾವುದು ಎಂಬುದು ಅವರಿಗೆ ಗೊತ್ತಾಗುವುದಾದರೆ ಹೇಗೆ? ಯಾವ ಯಾವ ಮಹಾ ಜನನಿ ಅತ್ಯಾಧುನಿಕ ಸಾಹಿತಿಗಳನ್ನು ಮೆಟ್ಟಿ ಹಾಕುವುದಕ್ಕಾಗಿ ಭವಿಷ್ಯಕಾಲದ ಮಾತೆಯರಿಗೆ ಹಚ್ಚಡದಲ್ಲಿಯೇ ಮಕ್ಕಳನ್ನು ಸಾಯಿಸಿಬಿಡುವ ಸದುಪದೇಶವನ್ನು ಕೊಟ್ಟು ನೈತಿಕ ಉಚ್ಛ್ವಾಸದ ಉತ್ತುಂಗ ಶಿಖರವನ್ನು ತೋರಿದ್ದಾಳೆ ಎಂಬುದಾಗಲೀ, ಯಾವಾಗ ಶೈಲಜಾನಂದರು ಕೂಲಿಗಳ

---

1. ಪ್ರಸಿದ್ಧಕಾದಂಬರಿಕಾರ್ತಿ ಅನುರೂಪಾ ದೇವಿ.

2. ಶೈಲಜಾನಂದ್, ಪ್ರೇಮೇಂದ್ರ ಮಿತ್ರ ಅವರು ಹೊಸ ಅಭಿರುಚಿಯ ಕಾದಂಬರಿಗಳನ್ನು ಮತ್ತು ಕಥೆಗಳನ್ನು ಬರೆಯುವವರು. ನಜರುಲ್ ಇಸ್ಲಾಮ್ ಅವರು ಓಜಸ್ವಿ ಭಾಷೆ ಮತ್ತು ಭಾವನೆಗಳ ಪ್ರಸಿದ್ಧ ಕವಿ. ಇವರನ್ನು ಪ್ರಥಮ ಶ್ರೇಣಿಯ ಕವಿ ಎಂಬುದಾಗಿ ಪರಿಗಣಿಸಲಾಗಿದೆ. 'ಕಲ್ಲೋಲ್' ಮತ್ತು 'ಕಪ್ಪು-ಲೇಖನಿ' (ಕಾಲೀ ಕಲಮ್) ಆಧುನಿಕ ದೃಷ್ಟಿಕೋನದ ಮಾಸಪತ್ರಿಕೆಗಳು.

- ಕಾರ್ಮಿಕರ ನೈತಿಕ ಹೀನತೆಯ ಕಥೆಗಳನ್ನು ಬರೆದು ತಮ್ಮ ಕುಲೀನತೆಯನ್ನು (ಆಭಿಜಾತ್ಯತೆಯನ್ನು) ಕಳೆದುಕೊಂಡಿದ್ದಾರೆ ಎಂಬುದಾಗಲೀ ಅವರಿಗೆ ತಿಳಿಯುವುದಾದರೂ ಹೇಗೆ? ಈ ಎಲ್ಲ ಸಂಗತಿಗಳನ್ನೂ ಓದಲು ಬೇಕಾದಷ್ಟು ಕಾಲ, ಧೈರ್ಯ ಮತ್ತು ಮನೋಧರ್ಮ ಯಾವುದೂ ಕವಿಯಲ್ಲಿಲ್ಲವಲ್ಲ; ಅವರಿಗೆ ಬೇಕಾದಷ್ಟು ಕೆಲಸಗಳಿವೆಯಲ್ಲ! ದೈವವಶಾತ್ ಎಂದೋ ಅವರ ಕಣ್ಣಿಗೆ ಬಿದ್ದ ಒಂದೆರಡು ತುಂಡು ಲೇಖನಗಳಿಂದಲೇ ಅವರಲ್ಲಿ ಆಧುನಿಕ ಬಂಗಾಳಿ ಸಾಹಿತ್ಯದ ಮಾನ-ಮರ್ಯಾದೆ ಮತ್ತು ಕುಲೀನತೆಗಳೆಲ್ಲ ಮಾಯವಾಗಿಬಿಡುತ್ತಿವೆ ಎಂಬ ಭಾವನೆ ಮೂಡಿಬಿಟ್ಟಿದೆ. ಚಿತ್‌ಪುರ ರಸ್ತೆಯ ಖಚ್-ಖಚ್-ಖಚಕ್ ಶಬ್ದದೊಂದಿಗೆ ಒಂದೇ ಬಗೆಯ ಶಬ್ದಗಳು ಮತ್ತೆ ಮತ್ತೆ ಸುತ್ತು ಹೊಡೆಯುತ್ತಿರುವ ಗರ್ಜನೆ ಶುರುವಾಗಿದೆ. ಆಧುನಿಕ ಸಾಹಿತಿಗಳ ಬಗೆಗಿನ ಕವಿಯ ಇಷ್ಟರಮಟ್ಟಿನ ಮಹಾ ಅವಿಚಾರಕತೆಯಿಂದ ನರೇಶಚಂದ್ರರಿಗೆ ಮಾತ್ರವಲ್ಲ, ನನ್ನ ವಿಸ್ಮಯ-ವಿಷಾದಗಳಿಗೂ ಮೇರೆ ಇಲ್ಲದಂತೆ ಆಗಿಬಿಟ್ಟಿದೆ."

ಶರತ್‌ಚಂದ್ರರ ಈ ಲೇಖನ ಸಾಕಷ್ಟು ಕೋಲಾಹಲವನ್ನುಂಟು ಮಾಡಿತು. 'ಶನಿವಾರೇರ್ ಚಿಠಿ'ಯ ಸಂಪಾದಕರಾಗಿದ್ದ ಸಜನೀಕಾಂತ ದಾಸರು ಅವರನ್ನು ಕಟುವಾಗಿ ಟೀಕಿಸಿದರು. ಶರತ್‌ಚಂದ್ರರನ್ನು ಟೀಕಿಸಲು ದೊರೆಯುವಂಥ ಯಾವ ಅವಕಾಶವನ್ನೂ ಅವರು ಬಿಟ್ಟುಕೊಡುತ್ತಿರಲಿಲ್ಲ. ಈ ಸಲವಂತೂ ಇನ್ನೂ ಅನೇಕರು ತಮ್ಮ ಅಸಂತೋಷವನ್ನು ವ್ಯಕ್ತಪಡಿಸಿದರು. ಶರತ್‌ಚಂದ್ರರು ರವೀಂದ್ರರ ವಿಷಯ ದಲ್ಲಿ ಅನುಚಿತವಾದ ಕಟೂಕ್ತಿಗಳನ್ನು ಬಳಸಿದ್ದಾರೆ ಎಂಬುದು ಅವರ ಆಕ್ಷೇಪ ವಾಗಿತ್ತು. ಬಹುಶಃ ಬರವಣಿಗೆಯ ದೋಷದಿಂದಾಗಿ ತಾವು ಹೇಳಬೇಕೆಂದಿದ್ದುದನ್ನು ಹೇಳಲಾಗದೆ ಹೋಗಿರುವುದಾಗಿಯೂ, ಬೇರೊಂದು ಅರ್ಥವೇ ಬಂದುಬಿಟ್ಟಿದೆ ಎಂಬುದಾಗಿಯೂ ಆಮೇಲೆ ಶರತ್‌ಚಂದ್ರರೇ ಒಪ್ಪಿಕೊಂಡರು. ಇದು ಅಸಮರ್ಥತೆ ಯಿಂದಾಗಿ ಸಂಭವಿಸಿದ ತಪ್ಪಾಗಿತ್ತೆ ಹೊರತು, ಹೃತ್ಪೂರ್ವಕವಾಗಿ ಎಸಗಿದ ತಪ್ಪಾಗಿರಲಿಲ್ಲ.

ಹೊಸ ಲೇಖಕರ ವಿಷಯದಲ್ಲಿ ಶರತ್‌ಚಂದ್ರರು ಉದಾರಿಗಳಾಗಿದ್ದುದು ಮಾತ್ರವಲ್ಲ, ಅವರ ಬಗ್ಗೆ ಹೃತ್ಪೂರ್ವಕವಾದ ಸ್ನೇಹವನ್ನೂ ತೋರುತ್ತಿದ್ದರು. ಕೆಲವು ವರ್ಷಗಳಿಗೆ ಹಿಂದೆ,[1] ರವೀಂದ್ರರು ಶಿವಪುರ ಇನ್‌ಸ್ಟಿಟ್ಯೂಟಿನ ಸಾಹಿತ್ಯಸಭೆಗೆ ಅಧ್ಯಕ್ಷರಾಗಿ ಆಗಮಿಸಿದ್ದರು. ಆ ಸಭೆಯಲ್ಲಿಯೂ ಹೊಸ ಲೇಖಕರನ್ನು ಸಮರ್ಥಿಸುತ್ತ ಅವರು ಹೀಗೆಂದಿದ್ದರು: "ಲೋಕದಲ್ಲಿ ಎಂದಿನಿಂದಲೂ ಒಳ್ಳೆಯದು ಮತ್ತು ಕೆಟ್ಟದ್ದು ಇದ್ದೇ ಇವೆ. ಬಹುಶಃ ಎಂದೆಂದೂ ಇವು ಇದ್ದೇ ಇರುತ್ತವೆ. ಹೊಸ ಲೇಖಕರೂ ಒಳ್ಳೆಯದನ್ನು ಒಳ್ಳೆಯದೆಂದೂ, ಕೆಟ್ಟದ್ದನ್ನು ಕೆಟ್ಟದ್ದೆಂದೂ ಹೇಳಿಯೇ ತೀರುತ್ತಾರೆ. ಕೆಟ್ಟದ್ದರ ಪರವಾಗಿ ವಕಾಲತ್ತು ವಹಿಸಲು ಸಾಹಿತಿ ಎಂದೂ ಯಾವ ಸಾಹಿತ್ಯ ಸಭೆಯಲ್ಲೂ ಎದ್ದು ನಿಲ್ಲುವುದಿಲ್ಲ; ಆದರೆ, ಮನಸ್ಸನ್ನು ರಂಜಿಸಿ ನೀತಿಯ ಉಪದೇಶ ಮಾಡುವುದನ್ನು ಅವನು ತನ್ನ ಕರ್ತವ್ಯವೆಂದು ಭಾವಿಸುವುದಿಲ್ಲ;

1. ಜುಲೈ 1, 1923.

ಕೆಟ್ಟನೀತಿಯನ್ನು ಅವನು ಪ್ರಚಾರಮಾಡುವುದಿಲ್ಲ. ಸ್ವಲ್ಪಮಟ್ಟಿಗೆ ಆಳವಾಗಿ ಇಳಿದು ನೋಡಿದರೆ, ಅವರ ಎಲ್ಲ ದುರ್ನೀತಿಯ ಮೂಲದಲ್ಲಿಯೂ ಮನುಷ್ಯನನ್ನು ಮನುಷ್ಯನೆಂದು ಸಿದ್ಧಪಡಿಸಿತೋರುವ ಇಚ್ಛೆಯ ಒಂದು ಏಕತೆಯ ಸೂತ್ರ ಬಹುಶಃ ದೃಗ್ಗೋಚರವಾಗುತ್ತದೆ."

ವೈಯಕ್ತಿಕವಾಗಿಯೂ ಅವರನ್ನು ತುಂಬ ಪ್ರೀತಿಸುತ್ತಿದ್ದರು. ಕವಿ ನಜರುಲ್ ಇಸ್ಲಾಮ್ ಅವರು ಸೆರೆಮನೆಯಲ್ಲಿದ್ದರು. ಯಾವುದೋ ಒಂದು ವಿಚಾರದ ಬಗ್ಗೆ ಅವರು ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದ್ದರು. ಆಗ ಉಪವಾಸವನ್ನು ನಿಲ್ಲಿಸಬೇಕೆಂದು ಒತ್ತಾಯಪಡಿಸುವುದಕ್ಕಾಗಿ ಶರತ್‌ಚಂದ್ರರು ಸೆರೆಮನೆಗೆ ಹೋಗಿಬಂದಿದ್ದರು. ಒಂದು ಪತ್ರದಲ್ಲಿ ಅವರು ಹೀಗೆಂದು ಬರೆದಿದ್ದಾರೆ: "ಹುಬಲಿಯ ಜೈಲಿನಲ್ಲಿ ನಮ್ಮ ಕವಿ ನಜರುಲ್ ಇಸ್ಲಾಮ್ ಅವರು ಉಪವಾಸ ಸತ್ಯಾಗ್ರಹವನ್ನು ಆಚರಿಸಿ ಮರಣಾಸನ್ನರಾಗಿದ್ದಾರೆ. ಒಂದು ಘಂಟೆಯ ರೈಲಿಗೆ ಹೊರಡಲಿದ್ದೇನೆ. ಅವರನ್ನು ಭೇಟಿಮಾಡಲು ಅವಕಾಶ ಕೊಡುತ್ತಾರೆಯೇ ಇಲ್ಲವೇ, ನನ್ನ ಒತ್ತಾಯದ ಮೇರೆಗೆ ಮತ್ತೆ ಆಹಾರವನ್ನು ಸ್ವೀಕರಿಸಲು ಅವರು ಒಪ್ಪುತ್ತಾರೆಯೇ ಇಲ್ಲವೇ ಎಂಬುದನ್ನು ನೋಡಬೇಕು. ಒಪ್ಪದೆ ಹೋದರೆ, ಅವರು ಬದುಕಿ-ಉಳಿಯುವ ಆಸೆಯೇ ಇಲ್ಲ. ಅವರು ನಿಜವಾಗಿಯೂ ಕವಿಗಳು. ರವೀಂದ್ರರನ್ನು ಬಿಟ್ಟರೆ, ಆ ಮಟ್ಟದ ಇನ್ನೊಬ್ಬ ಕವಿ ಈಗ ಇಲ್ಲ."[1]

ಆಧುನಿಕ ಲೇಖಕರು ತಪ್ಪು ಮಾಡುತ್ತಾರೆ ಎಂಬುದನ್ನು ಶರತ್‌ಚಂದ್ರರೂ ಒಪ್ಪುತ್ತಿದ್ದರು. ಆದರೆ, ಅವರನ್ನು ಸಮಾಜದ ವಿಷಯದಲ್ಲಿ ಶ್ರದ್ಧೆಯೇ ಇಲ್ಲದವರು ಎಂಬಂತೆ ನೋಡಿದಾಗ, ಅವರಿಗೆ ತುಂಬ ದುಃಖವಾಗುತ್ತಿತ್ತು. ಆಧುನಿಕ ಲೇಖಕರು ಬಡವರು; ಈ ಕಾರಣದಿಂದಾಗಿಯೇ ಕೊಳಕು ವಿಚಾರಗಳನ್ನು ವರ್ಣಿಸಿ ಹಣವನ್ನು ಸಂಪಾದಿಸಬಯಸುತ್ತಾರೆ ಎಂಬ ವಾದವೂ ಅವರಿಗೆ ತುಂಬ ನೋವನ್ನುಂಟು ಮಾಡುತ್ತಿತ್ತು. ಅವರ ಕೃತಿಗಳನ್ನು ಅವರು ತಿದ್ದಿಕೊಡುತ್ತಿದ್ದರು. ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿದ್ದರು; ಅವರೊಡನೆ ವಾದಿಸುತ್ತಿದ್ದರು. ಜಗಳವಾಡುತ್ತಿದ್ದರು; ಆದರೆ ಆಧುನಿಕ ಲೇಖಕರು ಸಣ್ಣವರು ಎಂಬ ಭಾವನೆ ಉಂಟಾಗುವಂಥ ಮಾತುಗಳನ್ನಾಡುತ್ತಿರಲಿಲ್ಲ ಅಥವಾ ವರ್ತನೆಯನ್ನು ತೋರುತ್ತಿರಲಿಲ್ಲ.

ಇದರ ಅರ್ಥ ಅವರು ಆಧುನಿಕ ಲೇಖಕರನ್ನು ಸಂಪೂರ್ಣವಾಗಿ ಸ್ವೀಕರಿಸಿದ್ದರು ಎಂದೇನೂ ಅಲ್ಲ. ರವೀಂದ್ರರೊಡನೆ ಘರ್ಷಣೆಯುಂಟಾದ ಬಳಿಕ ಒಂದು ವರ್ಷ ಪೂರ್ತಿ ಅವರು ಆಧುನಿಕ ಲೇಖಕರ ಕೃತಿಗಳನ್ನು ಓದಿದರು ಹಾಗೂ ಅವರಲ್ಲಿ ನಿಜವಾಗಿಯೂ ರಸಾನುಭೂತಿಯ ಕೊರತೆಯಿದೆ ಎಂಬ ತೀರ್ಮಾನಕ್ಕೆ ಬಂದರು. ಅತ್ಯಾಧುನಿಕ ಸಾಹಿತ್ಯದ ಹೆಸರಿನಲ್ಲಿ ಉಚ್ಛೃಂಖಲತೆಯ ಪ್ರಚಾರ ಮಾಡುವಂಥವರು ಬೇರೆ ಏನನ್ನು ಬೇಕಾದರೂ ಮಾಡಲಿ ಸಾಹಿತ್ಯವನ್ನು ಸೃಷ್ಟಿಸುವುದಿಲ್ಲ. ಅಂದು ರವೀಂದ್ರರು ಆಡಿದ್ದಂಥ ಮಾತುಗಳು ಶುದ್ಧಾಂಗವಾಗಿ ತಪ್ಪೇನೂ ಆಗಿರಲಿಲ್ಲ. ಮೂರು ವರ್ಷಗಳ ಬಳಿಕ 'ಶೇಷ ಪ್ರಶ್ನೆ'ಯ ವಿಷಯದಲ್ಲಿ ಆಧುನಿಕ ಲೇಖಕರು ಅವರನ್ನು ಕಟುವಾಗಿ ಟೀಕಿಸಿದಾಗ, ಅವರ ಮತ್ತು ಇವರ ನಡುವಣ ಸಂಬಂಧಗಳಲ್ಲಿ

---

1. ಮೇ 17, 1923.

ತಾತ್ಕಾಲಿಕವಾದ ಬಿಗುವು ಕಾಣಿಸಿಕೊಂಡಿತ್ತು. ಇದರಲ್ಲಿ ಅಸಹಜವಾದುದೇನೂ ಇರಲಿಲ್ಲ. ಸಂಧಿಕಾಲದಲ್ಲಿ ಹೀಗೆ ಆಗಿಯೇ ತೀರುತ್ತದೆ. ಹೊಸ ಲೇಖಕರ ಬಗ್ಗೆ ಪ್ರೀತಿ ಇದ್ದರೂ, ಅವರು ತಮ್ಮವೇ ಆದ ಕೆಲವು ಸಾಹಿತ್ಯಕ ಧೋರಣೆಗಳನ್ನಿರಿಸಿ ಕೊಂಡಿದ್ದರು. ಲೇಖಕನ ಅಸಂಯಮ ಸಾಹಿತ್ಯದ ಮರ್ಯಾದೆಯನ್ನು ಹಾಳುಮಾಡಿಬಿಡುತ್ತದೆಂದು ಅವರು ನಂಬಿದ್ದರು. ಕೇದಾರನಾಥ್ ಅವರ ಪುಸ್ತಕ ವನ್ನು ಮನಸಾರೆ ಹೊಗಳಿದ ಬಳಿಕ ಅವರು ಹೀಗೆಂದು ಬರೆದರು: "ದೇವರು ನಿಮಗೆ ಬರೆಯುವ ಅಸೀಮಶಕ್ತಿಯನ್ನು ಕರುಣಿಸಲಿ. ಆದರೆ ಐಶ್ವರ್ಯವಂತನಿಗೆ ಮಾತ್ರವೇ ಮಿತವ್ಯಯಿಯಾಗುವುದು ಪ್ರಯೋಜನಕಾರಿಯಾಗುತ್ತದೆ ಎಂಬುದನ್ನು ಮರೆಯಬಾರದು. ದರಿದ್ರನಿಗೆ ಇದರ ಅಗತ್ಯವೇ ಉಂಟಾಗುವುದಿಲ್ಲ. ಬರೆದುಕೊಂಡು ಹೋಗುವುದಷ್ಟೇ ಅಲ್ಲ, ಎಲ್ಲಿ ಮತ್ತು ಎಷ್ಟಕ್ಕೆ ನಿಲ್ಲಿಸಬೇಕೆಂಬ ವಿಚಾರವೂ ಮನಸ್ಸಿನಲ್ಲಿರಬೇಕು."

ಈ ಕಾರಣಕ್ಕಾಗಿಯೇ ಶರತ್‌ಚಂದ್ರರು ರವೀಂದ್ರರ ವಿಷಯದಲ್ಲಿ ಕೋಪಮಾಡಿಕೊಂಡಿರಲಿಲ್ಲ - ಅಂದರೆ, ಆಧುನಿಕ ಲೇಖಕರ ವಿಷಯದಲ್ಲಿ ಅವರಿಗೆ ಸಹಾನುಭೂತಿಯಿಲ್ಲವೆಂಬ ಕಾರಣಕ್ಕಾಗಿಯಲ್ಲದೆ, 'ಪಥೇರ್ ದಾಬೀ' ಒಗೆಗಿನ ಘಟನೆಯಿಂದಾಗಿ ಅವರ ಮನಸ್ಸಿನಲ್ಲಿ ಮೂಡಿದ್ದ ಕೋಪ-ತಾಪಗಳು ಇನ್ನೂ ಶಾಂತವಾಗಿರದೆ ಇದ್ದುದೂ ಇದಕ್ಕೆ ಕಾರಣವಾಗಿತ್ತು. ಜೊತೆಗೆ, 'ಷೋಡಶೀ' ನಾಟಕಕ್ಕೆ ರವೀಂದ್ರರು ಹಾಡುಗಳನ್ನು ಬರೆದುಕೊಟ್ಟರಲಿಲ್ಲ. 'ಸಾಹಿತ್ಯ ರೀತಿ-ನೀತಿ' ಎಂಬ ಪ್ರಬಂಧವನ್ನು ಬರೆದಾಗ, ಈ ಎಲ್ಲ ಸಂಗತಿಗಳೂ ಅವರ ಮನಸ್ಸಿನಲ್ಲಿ ತುಂಬಿಕೊಂಡಿದ್ದುವು. ಈ ಕಾರಣದಿಂದಾಗಿಯೇ ಆ ಪ್ರಬಂಧದಲ್ಲಿ ತೀವ್ರವಾದ ಭಾವಾವೇಶಗಳು ನುಸುಳಿಕೊಂಡುಬಿಟ್ಟಿವೆ.

ರವೀಂದ್ರರು ದಿಲೀಪ್‌ಕುಮಾರ್ ರಾಯ್ ಅವರಿಗೆ ಕೆಲವು ಪತ್ರಗಳನ್ನು ಬರೆದಿದ್ದರು. ಅವುಗಳಿಗೆ ಸಂಬಂಧಿಸಿದಂತೆ ಇನ್ನೊಮ್ಮೆ[1] ಅವರಿಗೂ ರವೀಂದ್ರರಿಗೂ ಘರ್ಷಣೆ ಉಂಟಾಯಿತು. ಈ ಪತ್ರಗಳಿಗೆ ಸಂಬಂಧಿಸಿದಂತೆ ಅತುಲಾನಂದ ರಾಯ್ ಅವರು ಶರತ್‌ಚಂದ್ರರ ಅಭಿಪ್ರಾಯವನ್ನು ತಿಳಿಯಬಯಸಿದ್ದರು. ಉತ್ತರರೂಪವಾಗಿ ಅವರು ರಾಯ್ ಅವರಿಗೆ ತುಂಬ ದೀರ್ಘವಾದ ಪತ್ರವನ್ನು ಬರೆದಿದ್ದರು:

"ನೀವು 'ಪರಿಚಯ' ಪತ್ರಿಕೆಯಲ್ಲಿ ದಿಲೀಪಕುಮಾರ್ ರಾಯ್ ಅವರಿಗೆ ರವೀಂದ್ರರು ಬರೆದಿರುವ 'ಸಾಹಿತ್ಯದ ಪ್ರಮಾಣ' ಎಂಬ ಪತ್ರದ ಬಗ್ಗೆ ನನ್ನ ಅಭಿಪ್ರಾಯವನ್ನು ತಿಳಿಯ ಬಯಸಿದ್ದೀರಿ. ಈ ಪತ್ರ ವೈಯಕ್ತಿಕವಾದುದಾದರೂ, ಪ್ರಕಟವಾಗಿರುವುದರಿಂದ ನೀವು ಹೀಗೆ ಒತ್ತಾಯಪಡಿಸಬಹುದಾಗಿದೆ.

".....ಯಾರ ವಿಷಯದಲ್ಲಿ ನಿರಾಶರಾಗಿ ಕವಿವರ್ಯರು ಪತ್ರವ್ಯವಹಾರವನ್ನು ನಿಲ್ಲಿಸಿಬಿಟ್ಟಿದ್ದಾರೋ ಅವರಲ್ಲಿ ನಾನೂ ಸೇರಿದ್ದೇನೆ ಎಂಬುದು ನಿಮ್ಮ ಸಂದೇಹ. ಇದು ಅಸಂಭವವೇನಲ್ಲ. ಈ ಪ್ರಬಂಧದಲ್ಲಿ ಕವಿವರ್ಯರು ಈ ಆರೋಪಗಳನ್ನು ಮಾಡಿದ್ದಾರೆ: "ಅವರು (ಅಂದರೆ ಇತರರು) ಮದಿಸಿದ ಆನೆಗಳು, ಅವರು ಬಾಯಿಗೆ ಬಂದಂತೆ ಹರಟುತ್ತಾರೆ; ಪುಂಡಾಟಿಕೆಯನ್ನು ತೋರುತ್ತಾರೆ; ಕಸರತ್ತು-ಕರಾಮತ್ತು

1. ಶ್ರಾವಣ 1340 (ಜುಲೈ-ಆಗಸ್ಟ್ 1933).

ಮಾಡುವುದಕ್ಕೆ ಸಿದ್ಧವಾಗಿರುತ್ತಾರೆ; 'ಪ್ರಾಬ್ಲೆಮ್ ಸಾಲ್ವ್' ಮಾಡುತ್ತಾರೆ; ಆದ್ದರಿಂದ ಅವರು...... ಇತ್ಯಾದಿ, ಇತ್ಯಾದಿ.'

"ಈ ಮಾತುಗಳನ್ನು ಯಾರ ವಿಷಯದಲ್ಲಾದರೂ ಹೇಳಿರಲಿ, ಇವು ಸುಂದರವಾಗಿಯೂ ಇಲ್ಲ; ಕಿವಿಗೂ ಇಂಪಾಗಿಲ್ಲ. ಶ್ಲೇಷೆ ಮತ್ತು ವಿದ್ರೂಪದ ವಾತಾವರಣದಿಂದಾಗಿ ಮನಸ್ಸಿನಲ್ಲಿ ಒಂದು ಬಗೆಯ ಕಿರಿಕಿರಿ (ಇರಿಟೇಶನ್) ಉಂಟಾಗುತ್ತದೆ. ಇದರಿಂದ ಕಲೆಯ ಉದ್ದೇಶ ವ್ಯರ್ಥವಾಗಿಬಿಡುತ್ತದೆ. ಶ್ರೋತೃವಿನ ಮನಸ್ಸೂ ಖಿನ್ನವಾಗುತ್ತದೆ. ಜೊತೆಗೆ, ಕ್ಷೋಭೆಯನ್ನು ವ್ಯಕ್ತಗೊಳಿಸುವುದು ಹೇಗೆ ನಿರರ್ಥಕವೋ, ವಿರೋಧಿಸುವುದೂ ಹಾಗೆಯೇ ವ್ಯರ್ಥ. ನಾನು ಯಾರ ಮಾತುಗಳನ್ನು ಗಿಣಿಯಂತೆ ಪುನರುಚ್ಚರಿಸಿದ್ದೇನೆ, ನಾನು ಯಾವಾಗ ಪುಂಡಾಟಿಕೆಯನ್ನು ತೋರಿಸಿದ್ದೇನೆ. ಎಲ್ಲಿ ತೋರಿಸಿದ್ದೇನೆ - ಇವುಗಳ ಬಗ್ಗೆ ಕ್ರುದ್ಧ ಕವಿವರ್ಯರ ಬಳಿ ಜಿಜ್ಞಾಸೆ ಮಾಡುವುದು ಅನಪೇಕ್ಷಣೀಯವೇ ಸರಿ. ನನಗೆ ನನ್ನ ಬಾಲ್ಯದ ನೆನಪು ಬರುತ್ತದೆ. ಆಟದ ಮೈದಾನದಲ್ಲಿ ಯಾರೋ ಒಬ್ಬ ಇಂಥವನು ಹೇಸಿಗೆಯ ಮೇಲೆ ಕಾಲಿರಿಸಿದ್ದಾನೆ ಎಂದು ಹೇಳಿಬಿಟ್ಟ. ಸರಿ, ಇನ್ನು ಕೇಳಬೇಕೆ ? ಎಲ್ಲಿ ಕಾಲಿಟ್ಟ, ಯಾರು ಹೇಳಿದರು, ಯಾರು ನೋಡಿದರು, ಅದು ಹೇಸಿಗೆಯಲ್ಲ ಸಗಣಿ - ಈ ಯಾವುದೇ ಮಾತುಗಳಿಗೆ ಎಡೆ ಇರುತ್ತಿರಲಿಲ್ಲ; ಹೇಳಿದ್ದೆಲ್ಲ ವ್ಯರ್ಥ ವಾಗುತ್ತಿತ್ತು. ಮನೆಗೆ ಹಿಂದಿರುಗಿದ ಬಳಿಕ ತಾಯಿಯೇ ಮೊದಲಾದವರು ಸ್ನಾನಮಾಡದೆ ಹಾಗೂ ತಲೆಯ ಮೇಲೆ ಗಂಗಾಜಲವನ್ನು ಪ್ರೋಕ್ಷಿಸದೆ ಮನೆಯೊಳಕ್ಕೆ ಬರಲು ಬಿಡುತ್ತಿರಲಿಲ್ಲ. ಈಗಿನ ನನ್ನ ಸ್ಥಿತಿಯೂ ಅದೇ ಆಗಿದೆ.

" 'ಸಾಹಿತ್ಯದ ಪ್ರಮಾಣ' ಎಂಬ ಪ್ರಬಂಧವೇ ಏಕೆ, ಕವಿವರ್ಯರ ಇಂಥ ಪ್ರಬಂಧಗಳಲ್ಲಿ ಅನೇಕವನ್ನು ಅರ್ಥಮಾಡಿಕೊಳ್ಳುವ ಬುದ್ಧಿ ನನ್ನಲ್ಲಿಲ್ಲ. ಅವರ ಉಪಮೆ-ಉದಾಹರಣೆಗಳಲ್ಲಿ ಯಂತ್ರೋಪಕರಣಗಳು, ಸಂತೆ-ಪೇಟೆ, ಆನೆ-ಕುದುರೆ, ಪ್ರಾಣಿ-ಮೂರ್ಖ ಇವೆಲ್ಲ ಬರುತ್ತವೆ. ಆದರೆ, ಮನುಷ್ಯನ ಸಾಮಾಜಿಕ ಸಮಸ್ಯೆ ಗಳನ್ನು ಹಾಗೂ ಗಂಡು-ಹೆಣ್ಣುಗಳ ಪರಸ್ಪರ ಸಂಬಂಧವನ್ನು ಕುರಿತು ಚರ್ಚಿಸುವಾಗ ಇವೆಲ್ಲ ಏಕೆ ಬರುತ್ತವೆ ಹಾಗೂ ಇವುಗಳಿಂದ ಏನು ಸಿದ್ಧವಾಗುತ್ತದೆ ಎಂಬುದು ಅರ್ಥವಾಗುವುದಿಲ್ಲ. ಕೇಳುವಾಗ ಚೆನ್ನಾಗಿ ತೋರಿದರೂ, ತರ್ಕಬದ್ಧ ವೆನ್ನಿಸುವುದಿಲ್ಲ.

"ಒಂದು ಉದಾಹರಣೆ ಕೊಡುತ್ತೇನೆ. ಕೆಲವು ದಿನಗಳ ಹಿಂದೆ, ಹರಿಜನರ ವಿರುದ್ಧ ನಡೆಯುತ್ತಿರುವ ಅನ್ಯಾಯಗಳಿಂದ ದುಃಖಗೊಂಡು ಅವರು ಹರಿಜನ ಪ್ರವರ್ತಕ ಸಂಘದ ಮತಿ ಬಾಬೂ ಅವರಿಗೆ ಒಂದು ಪತ್ರ ಬರೆದಿದ್ದರು. ಇದರಲ್ಲಿ ಅವರು ಒಂದು ಆರೋಪ ಮಾಡಿದ್ದರು: ಬ್ರಾಹ್ಮಣಿಯೊಬ್ಬಳು ಸಾಕಿಕೊಂಡಿರುವ ಬೆಕ್ಕು ಎಂಜಲು ಬಾಯಿಂದ ಹೋಗಿ ಆಕೆಯ ತೊಡೆಯನ್ನೇರಿ ಬಿಡುತ್ತದೆ. ಇದರಿಂದ ಆಕೆಯ ಮಡಿ ಹಾಳಾಗಿ ಬಿಡುತ್ತದೆ. ಆದರೆ, ಆಕೆ ಇದರ ಬಗ್ಗೆ ಆಕ್ಷೇಪವನ್ನೆತ್ತುವುದೇ ಇಲ್ಲ. ಆಕೆ ಆಕ್ಷೇಪವನ್ನೆತ್ತದಿರುವುದೇನೋ ಸರಿ. ಆದರೆ, ಇದರಿಂದ ಹರಿಜನ ರಿಗೇನಾದರೂ ಸೌಲಭ್ಯ ದೊರೆತಂತೆ ಆಯಿತೆ ? ಇದರಿಂದ ಏನು ಸಿದ್ಧವಾದಂತಾಯಿತು ? ಈ ಬೆಕ್ಕಿನ ಪ್ರಸಂಗದ ಆಧಾರದ ಮೇಲೆ ಆ ಬ್ರಾಹ್ಮಣಿಗೆ

ಹೀಗೆಂದು ಹೇಳಲಾದೀತೆ: ಅತ್ಯಂತ ನಿಕೃಷ್ಟ ಜೀವಿಯಾದ ಬೆಕ್ಕು ನಿನ್ನ ತೊಡೆಯ ಮೇಲೆ ಬಂದು ಕುಳಿತಿದೆ; ಆದರೆ, ನೀನು ಇದಕ್ಕೆ ಆಕ್ಷೇಪವನ್ನೇನೂ ವ್ಯಕ್ತಪಡಿಸಿಲ್ಲ. ಆದ್ದರಿಂದ ಅತ್ಯಂತ ಉತ್ಕೃಷ್ಟ ಜೀವಿಯಾದ ನಾನೂ ಬಂದು ನಿನ್ನ ತೊಡೆಯ ಮೇಲೆ ಕುಳಿತುಕೊಳ್ಳುತ್ತೇನೆ; ನೀನು ಇದರ ಬಗ್ಗೆ ಆಕ್ಷೇಪವೆತ್ತುವಂತಿಲ್ಲ! ಬೆಕ್ಕು ಏಕೆ ತೊಡೆಯ ಮೇಲೆ ಹೋಗಿ ಕುಳಿತುಕೊಳ್ಳುತ್ತದೆ! ಇರುವೆಗಳು ಏಕೆ ತಟ್ಟೆಯ ಮೇಲೆ ಹರಿದಾಡುತ್ತವೆ? - ಈ ಎಲ್ಲ ತರ್ಕಗಳಿಂದ ಮನುಷ್ಯ ಮನುಷ್ಯರ ನಡುವಣ ನ್ಯಾಯಾನ್ಯಾಯಗಳ ವಿವೇಚನೆ ಮಾಡಲಾಗುವುದಿಲ್ಲ. ಈ ಎಲ್ಲ ಉಪಮೆಗಳು ಕೇಳಲು ಸುಂದರವಾಗಿರಬಹುದು; ಎದ್ದು ಕಾಣುವಂಥವೂ ಆಗಿರಬಹುದು. ಆದರೆ, ಒರೆಗಲ್ಲಿನಲ್ಲಿ ಉಜ್ಜಿನೋಡಿದಾಗ, ಅವು ತುಂಬ ತುಚ್ಛವಾದುವೆಂಬುದು ಸಿದ್ಧವಾಗುತ್ತದೆ. ಆಧುನಿಕ ಯುಗದ ಯಂತ್ರೋಪಕರಣಗಳನ್ನೂ ಕಾರ್ಖಾನೆಗಳನ್ನೂ ಅನೇಕ ಕಾರಣಗಳಿಗಾಗಿ ಅನೇಕರು ನಿಂದಿಸುತ್ತಾರೆ. ರವೀಂದ್ರರೂ ನಿಂದಿಸುತ್ತಾರೆ. ಇದರಲ್ಲಿ ತಪ್ಪೇನೂ ಇಲ್ಲ. ಅವು ಇಂದು ಫ್ಯಾಶನ್ ಕೂಡ ಆಗಿಬಿಟ್ಟಿವೆ. ತಮ್ಮ ಇಚ್ಛೆಯಿಂದಾಗಲೀ ಅನಿಚ್ಛೆಯಿಂದಾಗಲೀ, ಈ ಅತಿನಿಂದಿತ ವಸ್ತುಗಳ ಸಂಪರ್ಕ ಹೊಂದುವ ಜನರ ಸುಖದುಃಖಗಳ ಕಾರಣಗಳೂ ಜಟಿಲವಾಗಿ ಬಿಟ್ಟಿವೆ; ಅವರ ಜೀವನಯಾತ್ರೆಯ ವಿಧಾನಗಳೂ ಬದಲಾಗಿಬಿಟ್ಟಿವೆ. ಇತರ ರೈತರ ಜೀವನದೊಂದಿಗೆ ಅವರ ಜೀವನ ಅಕ್ಷರಶಃ ಒಂದಾಗಿರುವುದಿಲ್ಲ. ಇದರ ಬಗ್ಗೆ ಯಾರು ಬೇಕಾದರೂ ವಿಷಾದವನ್ನು ವ್ಯಕ್ತಪಡಿಸಲಿ, ಅವರ ಜೀವನದ ವಿಚಿತ್ರ ಘಟನೆಗಳ ಬಗ್ಗೆ ಯಾರಾದರೂ ಕಥೆಯನ್ನು ಬರೆದರೆ ಅದೇಕೆ ಸಾಹಿತ್ಯವಾಗುವುದಿಲ್ಲ? ಅದು ಸಾಹಿತ್ಯವಾಗಲಾರದು ಎಂದು ಕವಿವರ್ಯರೂ ಹೇಳಲಾರರು. ಸಾಹಿತ್ಯದ ಪ್ರಮಾಣವನ್ನು ಮೀರಬಾರದು ಎಂದಷ್ಟೇ ಅವರು ಆಕ್ಷೇಪಿಸಬಹುದು. ಆದರೆ, ಈ ಪ್ರಮಾಣವನ್ನು ನಿರ್ಧರಿಸುವುದಾದರೂ ಹೇಗೆ? ಕಲಹದಿಂದಾಗುತ್ತದೆಯೇ ಅಥವಾ ಕಟುವಾಕ್ಯಗಳ ಬಳಕೆಯಿಂದಲೇ? ಸಾಹಿತ್ಯದ ಚಿರಂತನ ಮೂಲ ನೀತಿಯ ಆಧಾರದ ಮೇಲೆ ಇದನ್ನು ನಿರ್ಣಯಿಸಲಾಗುತ್ತದೆ ಎಂದು ಕವಿವರ್ಯರು ಹೇಳುತ್ತಾರೆ, ಆದರೆ, ಈ ಮೂಲ ನೀತಿ ಎಂಬುದು ಲೇಖಕನ ಬೌದ್ಧಿಕ ಅರಿವು ಹಾಗೂ ರಸೋಪಲಬ್ಧಿಯ ಆದರ್ಶಗಳಿಗಿಂತ ಭಿನ್ನವಾದ ಬೇರೆ ಯಾವುದಾದರೂ ವಸ್ತುವೆ? ಚಿರಂತನದ ಘೋಷಣೆಯನ್ನು ಒತ್ತಾಯಪೂರ್ವಕವಾಗಿ ಮಾಡಬಹುದು. ಆದರೆ, ವಾಸ್ತವವಾಗಿ ಅದೊಂದು ಮರೀಚಿಕೆ ಮಾತ್ರ.

"ಕಾದಂಬರಿ ಸಾಹಿತ್ಯದ ಸ್ಥಿತಿಯೂ ಹೀಗೆಯೇ ಇದೆ ಎಂದು ಕವಿವರ್ಯರು ಹೇಳಿದ್ದಾರೆ. ಮನುಷ್ಯನ ಪ್ರಾಣ ಚಿಂತನೆಯ ಸ್ತೂಪದ ಕೆಳಗೆ ಸಿಕ್ಕಿಕೊಂಡು ಬಿಟ್ಟಿದೆ ಎಂಬುದು ಅವರ ಅಂಬೋಣ. ಇದಕ್ಕೆ ಉತ್ತರವಾಗಿ ಮನುಷ್ಯನ ಪ್ರಾಣ ಚಿಂತನೆಯ ಸ್ತೂಪದ ಕೆಳಗೆ ಸಿಕ್ಕಿಕೊಂಡಿಲ್ಲ; ಚಿಂತನೆಯ ಸೂರ್ಯನ ಬೆಳಕಿನಲ್ಲಿ ಅದು ಮತ್ತಷ್ಟು ಉಜ್ವಲವಾಗಿ ಪರಿಣಮಿಸಿದೆ ಎಂದು ಯಾರಾದರೂ ಹೇಳಿದರೆ, ಆತನನ್ನು ಯಾವ ತರ್ಕದಿಂದ ತಡೆಯಲು ಸಾಧ್ಯವಾದೀತು? ಇದರ ಜೊತೆಗೆ, ಇನ್ನೊಂದು ಮಾತು ಸಹ ಈ ದಿನಗಳಲ್ಲಿ ಕೇಳಿಬರುತ್ತಿದೆ. ಅದರಲ್ಲಿ ರವೀಂದ್ರರೂ ಸಹಕರಿಸಿದ್ದಾರೆ. ತಲೆ ನೆಟ್ಟಗಿರುವ ಯಾವನಾದರೂ ಕಥೆಯ ಗೋಷ್ಠಿಗೆ ಬಂದರೆ ಕಥೆಯನ್ನೇ

ಕೇಳಬಯಸುತ್ತಾನೆ ಎಂಬುದೇ ಆ ಮಾತು. ಈ ಮಾತನ್ನು ಒಪ್ಪಿಯೂ, ನಮ್ಮ ತಲೆ ನೆಟ್ಟಗಿದೆ; ಆದರೆ, ಕಾಲ ಬದಲಾಗಿದೆ; ನಮಗೆ ವಯಸ್ಸೂ ಹೆಚ್ಚಿದೆ; ಆದ್ದರಿಂದ ರಾಜಕುಮಾರ ಮತ್ತು ಗಂಡುಕಪ್ಪೆ - ಹೆಣ್ಣುಕಪ್ಪೆ ಕಥೆಗಳು ನಮಗೆ ತೃಪ್ತಿಯನ್ನು ನೀಡಲಾರವು ಎಂದು ಯಾವನಾದರೂ ಓದುಗ ಹೇಳಿದರೆ, ಆ ಮಾತಿನಲ್ಲಿ ಅವಿನಯ ತುಂಬಿದೆ ಎಂದು ಹೇಳಲಾಗುವುದಿಲ್ಲ. ಕಥೆಯಲ್ಲಿ ಚಿಂತನಶಕ್ತಿಯ ಮುದ್ರೆ ಬಿದ್ದಿದ್ದರೆ, ಆ ಕಾರಣಕ್ಕಾಗಿಯೇ ಅದು ಪರಿತ್ಯಾಜ್ಯವಾಗುವುದಿಲ್ಲವೆಂದೂ, ವಿಶುದ್ಧ ಕಥೆಯನ್ನು ರಚಿಸುವ ಸಲುವಾಗಿ ಲೇಖಕನು ಚಿಂತನಶಕ್ತಿಯನ್ನು ವಿಸರ್ಜಿಸುವ ಅಗತ್ಯವೇನೂ ಇಲ್ಲ ಎಂದೂ ಅವರು ಅನಾಯಾಸವಾಗಿ ಹೇಳಿಬಿಡುತ್ತಾರೆ.

"ಕವಿವರ್ಯರು ರಾಮಾಯಣ ಮತ್ತು ಮಹಾಭಾರತಗಳನ್ನು ಉಲ್ಲೇಖಿಸುತ್ತ, ರಾಮ ಮತ್ತು ಭೀಷ್ಮರ ಪಾತ್ರಗಳನ್ನು ವಿಮರ್ಶಿಸುತ್ತ, ಕಂಠಪಾಠ ಮಾಡಿರುವಂಥ ಮಾತುಗಳನ್ನು ಆಡುವುದರಿಂದ ಎರಡೂ ಪಾತ್ರಗಳು ಎದ್ದುನಿಲ್ಲುವುದಿಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅವು ಕೇವಲ ಕಾವ್ಯಗ್ರಂಥಗಳಾಗಿರದೆ ಧರ್ಮಗ್ರಂಥಗಳೂ ಆಗಿರುವುದರಿಂದ ಹಾಗೂ ಬಹುಶಃ ಸ್ವಲ್ಪ ಮಟ್ಟಿಗೆ ಇತಿಹಾಸವೂ ಆಗಿರುವುದರಿಂದ ಇದರ ಬಗ್ಗೆ ನಾನು ಟೀಕೆ ಮಾಡುವುದಿಲ್ಲ. ಅವು ಸಾಮಾನ್ಯ ಕಾದಂಬರಿಗಾಗಿಯೇ ರೂಪಿಸಿದ ಪಾತ್ರಗಳೂ ಅಲ್ಲವಾಗಿರಬಹುದು. ಆದ್ದರಿಂದ ಸಾಮಾನ್ಯ ಕಾವ್ಯ ಅಥವಾ ಕಾದಂಬರಿಯ ಅಳತೆಗೋಲಿನಿಂದ ಅವುಗಳನ್ನು ಅಳೆಯಲು ನಾನು ಹಿಂದೆ ಮುಂದೆ ನೋಡುತ್ತೇನೆ.

"ಕವಿವರ್ಯರ ಪತ್ರದಲ್ಲಿ 'ಇಂಟಲೆಕ್ಟ್' ಎಂಬ ಶಬ್ದ ಮತ್ತೆ ಮತ್ತೆ ಬಳಕೆಯಾಗಿದೆ. ಇದನ್ನು ಕವಿವರ್ಯರು ವಿದ್ಯೆ ಮತ್ತು ಬುದ್ಧಿ ಎಂಬ ಎರಡೂ ಅರ್ಥಗಳಲ್ಲಿ ಬಳಸಿರುವಂತೆ ತೋರುತ್ತದೆ. 'ಪ್ರಾಬ್ಲೆಮ್' ಶಬ್ದದ ಕಥೆಯೂ ಇದೇ. ಕಾದಂಬರಿಯಲ್ಲಿ ಬಗೆಬಗೆಯಾದ 'ಪ್ರಾಬ್ಲಾಮ್'ಗಳಿರುತ್ತವೆ: ವೈಯಕ್ತಿಕ, ನೈತಿಕ, ಸಾಮಾಜಿಕ ಮತ್ತು ಸಾಂಸಾರಿಕ. ಇದರ ಜೊತೆಗೆ ಕಥೆಗೆ ತನ್ನದೇ ಆದ ಸಮಸ್ಯೆಯೂ ಇರುತ್ತದೆ. ಈ 'ಪ್ಲಾಟ್'ನ ಸಮಸ್ಯೆಯೂ ಇದೆ. ಇದರ ಗಂಟುಗಳು ಎಲ್ಲಕ್ಕಿಂತಲೂ ಜಟಿಲವಾಗಿರುತ್ತವೆ. 'ಕುಮಾರಸಂಭವ'ದ ಪ್ರಾಬ್ಲೆಮ್ ಮತ್ತು ಉತ್ತರ ಕಾಂಡದಲ್ಲಿ ರಾಮನ 'ಪ್ರಾಬ್ಲೆಮ್' 'ಡಾಲ್ಸ್ ಹೌಸ್'ನಲ್ಲಿನ ನೋರಾಳ ಪ್ರಾಬ್ಲೆಮ್, ಹಾಗೂ ಯೋಗಾಯೋಗಾದಲ್ಲಿನ ಕುಮುವಿನ ಪ್ರಾಬ್ಲೆಮ್ ಒಂದೇ ಬಗೆಯವಲ್ಲ. 'ಯೋಗಾಯೋಗ' ಕಾದಂಬರಿ ಧಾರಾವಾಹಿಯಾಗಿ 'ವಿಚಿತ್ರಾ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದಾಗ ಹಾಗೂ ಒಂದೊಂದು ಅಧ್ಯಾಯದಲ್ಲಿಯೂ ಅವಳು ಉಂಟು ಮಾಡುತ್ತಿದ್ದ ಉಪದ್ರವಗಳನ್ನು ನೋಡುತ್ತಿದ್ದಾಗ ದುರ್ಧರ್ಷ-ಪ್ರಬಲ-ಪರಾಕ್ರಾಂತ ಮಧುಸೂದನನೊಂದಿಗಿನ ಅವಳ 'ಟಗ್-ಆಫ್-ವಾರ್'ನ ಪರಿಣಾಮ ಏನಾದೀತು ಎಂಬುದನ್ನು ಯೋಚಿಸಲೂ ನನಗೆ ಸಾಧ್ಯವಾಗುತ್ತಿರಲಿಲ್ಲ. ಆದರೆ, ಸಮಸ್ಯೆ ಇಷ್ಟು ಸಾಮಾನ್ಯವಾದುದು ಹಾಗೂ ಮಹಿಳಾ ವೈದ್ಯರು ಒಂದು ನಿಮಿಷದಲ್ಲಿ ಅದನ್ನು ಪರಿಹರಿಸಿಬಿಡುತ್ತಾರೆ ಎಂಬುದು ಯಾರಿಗೆ ಗೊತ್ತಿತ್ತು? ನಮ್ಮ ಜಲಧರ ದಾದಾ ಅವರಿಗೂ ಸಮಸ್ಯೆ ಸ್ವಲ್ಪವೂ ಸೇರುತ್ತಿರಲಿಲ್ಲ. ಅವರ ಒಂದು ಪುಸ್ತಕದಲ್ಲಿ ಇದೇ ರೀತಿ ಒಬ್ಬ ವ್ಯಕ್ತಿ ಒಂದು ಭಾರಿ ಸಮಸ್ಯೆಯನ್ನು ಸೃಷ್ಟಿಸಿಬಿಟ್ಟಿದ್ದ. ಆದರೆ, ಬೇರೊಂದು

ಉಪಾಯದಿಂದ ಆ ಸಮಸ್ಯೆ ಪರಿಹಾರವಾಗಿ ಬಿಟ್ಟಿತು. ನಿಜವಾದ ಒಂದು ನಾಗರಹಾವು ಬಂದು ಹೆಡೆಯೆತ್ತಿ ಅಪ್ಪಳಿಸಿ ಅವನನ್ನು ಕಚ್ಚಿಬಿಟ್ಟಿತು. ನಾನು ದಾದಾ ಅವರನ್ನು ಕೇಳಿದೆ: 'ಏನಪ್ಪ, ಇದೇನು ಮಾಡಿಬಿಟ್ಟರಿ ?' ಆಗ ಅವರೆಂದರು: 'ಅಲ್ಲ, ಇದರಲ್ಲಿ ಏನು ಸಮಸ್ಯೆ ಇದೆ ? ಹಾವು ಎಂದೂ ಯಾರನ್ನೂ ಕಚ್ಚುವುದೇ ಇಲ್ಲವೆ ?'

"ಕೊನೆಯಲ್ಲಿ ಇನ್ನೊಂದು ಮಾತನ್ನು ಹೇಳಬೇಕಾಗಿದೆ. 'ಒಂದು ಕಾಲದಲ್ಲಿ ಇಬ್ಸನ್ನನ ನಾಟಕಗಳಿಗೆ ತುಂಬ ಗೌರವವಿತ್ತು. ಆದರೆ, ಈ ಮಧ್ಯೆ ಅವುಗಳ ಪ್ರಭಾವ ಕಡಿಮೆಯಾಗಿ ಬಿಟ್ಟಿಲ್ಲವೆ ? ಮುಂದೆ ಒಂದು ದಿನ ಅವು ಕಣ್ಮರೆಯಾಗಿ ಬಿಡುವುದಿಲ್ಲವೆ ?' ಎಂದು ರವೀಂದ್ರರು ಬರೆದಿದ್ದಾರೆ. ಕಣ್ಮರೆಯಾಗಬಹುದು, ಆದರೆ ಇದೊಂದು ಊಹೆಯೇ ಹೊರತು, ಪ್ರಮಾಣವಲ್ಲ. ಮುಂದೆ ಎಂದಾದರೊಂದು ದಿನ ಇಬ್ಸನ್ನನ ಹಿಂದಿನ ಗೌರವ ಮರಳಿಬರಬಹುದಾದ ಸಂಭವವೂ ಇದೆ. ಇಂದಿನ ಕಾಲವೇ ಸಾಹಿತ್ಯದ ಕಟ್ಟಕಡೆಯ ಉಚ್ಚ-ನ್ಯಾಯಾಲಯವಲ್ಲ."

ಈ ಪತ್ರ ಶರತ್‌ಚಂದ್ರರ ಅನೇಕ ಭಕ್ತರಿಗೆ ಮತ್ತು ಮಿತ್ರರಿಗೆ ಅಸಂತೋಷವನ್ನು ಉಂಟುಮಾಡಿತು. ರವೀಂದ್ರರೂ ತುಂಬ ಕ್ಷುಬ್ಧರಾಗಿದ್ದರು. ಅದಕ್ಕೆ ಪ್ರತಿಭಟನೆಯನ್ನು ಸೂಚಿಸುತ್ತ, ಆ ಲೇಖನದಲ್ಲಿ ತಾವು ಶರತ್‌ಚಂದ್ರರನ್ನು ದೃಷ್ಟಿಯಲ್ಲಿರಿಸಿಕೊಂಡಿರಲಿಲ್ಲವೆಂದು ತಿಳಿಸಿದರು: "ನಾನು ಹಾಗೆ ಮಾಡಿಲ್ಲವೆಂದು ನಂಬು. ನೀನು ಮತ್ತೆ ಮತ್ತೆ ತೀಕ್ಷ್ಣವಾದ, ಕಠೋರವಾದ ಭಾಷೆಯಲ್ಲಿ ನನ್ನನ್ನು ಟೀಕಿಸಿದ್ದೀಯೆ. ಆದರೆ, ನಾನೆಂದೂ ಬಹಿರಂಗವಾಗಿಯಾಗಲೀ, ಗುಪ್ತರೂಪ ದಲ್ಲಿಯಾಗಲೀ ಯಾರನ್ನೂ ನಿಂದಿಸಿ ಸೇಡು ತೀರಿಸಿಕೊಂಡಿಲ್ಲ. ಈ ಲೇಖನ ಆ ಪಟ್ಟಿಗೆ ಇನ್ನೊಂದು ಪ್ರಕರಣವನ್ನು ಸೇರಿಸಿದೆ."

ಸ್ವತಃ ಶರತ್‌ಚಂದ್ರರ ದುಃಖಕ್ಕೆ ಮೇರೆಯೇ ಇರಲಿಲ್ಲ. ರವೀಂದ್ರರೊಡನೆ ತಮ್ಮ ಸಂಬಂಧ ಸಂಪೂರ್ಣವಾಗಿ ಕಡಿದೇ ಹೋಯಿತು ಎಂದು ಅವರಿಗೆ ಅನ್ನಿಸಿತು: "ಬರೆದದ್ದನ್ನು ಈಗ ಹಿಂದಕ್ಕೆ ತೆಗೆದುಕೊಳ್ಳಲಾಗುವುದಿಲ್ಲ. ಕವಿಯೊಂದಿಗೆ ನನ್ನ ವಿಚ್ಛೇದ ಬಹುಶಃ ಪೂರ್ಣಗೊಂಡುಬಿಟ್ಟಿದೆ.... ಆದರೆ, ನನಗೆ ಏನಾಯಿತೆಂಬುದೇ ತಿಳಿಯದು. 'ಪರಿಚಯ'ದಲ್ಲಿ ಆ ಲೇಖನವನ್ನು ಓದುತ್ತಿದ್ದಂತೆಯೇ ಇಡೀ ಮೈಗೆ ಬೆಂಕಿ ಹೊತ್ತಿಕೊಂಡ ಅನುಭವವಾಯಿತು. ಆಗ ಹಾಳೆ ಮತ್ತು ಲೇಖನಿ ಯನ್ನೆತ್ತಿಕೊಂಡು ಒಂದು ಪತ್ರದಲ್ಲಿ ಬರೆದುಹಾಕಿಬಿಟ್ಟೆ."[1]

ಆ ಬಳಿಕವೂ ರವೀಂದ್ರರ ವಿಷಯದಲ್ಲಿ ಅವರ ಆಕ್ರೋಶ ತಣ್ಣಗಾಗಲಿಲ್ಲ. ದಿಲೀಪಕುಮಾರ್ ರಾಯ್ ಅವರಿಗೆ ಬರೆದ ಒಂದು ಪತ್ರದಲ್ಲಿ[2] ಅವರು ಹೀಗೆಂದು ತಿಳಿಸಿದರು: "ಉಪಮೆ ಅಥವಾ ಉದಾಹರಣೆ ಯಾವುದಾದರೂ ರವೀಂದ್ರರ ಉಪಮೆ-ಉದಾಹರಣೆಗಳಂತೆ ನಿರರ್ಥಕವೂ ಅಸಂಬದ್ಧವೂ ಆಗಿರದಿರಲಿ. ತರ್ಕ ಯಾವುದೇ ವಿಚಾರದಿಂದ ಭಾಷ್ಪಾಚ್ಛಾದಿತವಾಗದಿರಲಿ. ಮನುಷ್ಯನನ್ನು ಅಲಂಕಾರ ಗಳಿಂದ ಸಿಂಗರಿಸುವ ಅಭಿರುಚಿಯೇ ಬೇರೆ; ಚೆನಿವಾರರ ಅಂಗಡಿಯಲ್ಲಿನ ಷೋ-ಕೇಸನ್ನು ಅಲಂಕಾರಗಳಿಂದ ಸಿಂಗರಿಸುವ ಅಭಿರುಚಿಯೇ ಬೇರೆ. ಈ

1. ಜನವರಿ 1934. 2. ಫೆಬ್ರುವರಿ 3, 1934.

ವಿಚಾರವನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳಬೇಕು. ಅಲಂಕೃತ ವಾಕ್ಯದ ಹೊರೆ ಎಷ್ಟು ನೋವನ್ನು ಉಂಟುಮಾಡುತ್ತದೆ ಎಂಬುದನ್ನು ಓದುಗರು ಮಾತ್ರವೇ ಅರ್ಥಮಾಡಿಕೊಳ್ಳಬಲ್ಲರು."

ಕವಿವರ್ಯರೊಂದಿಗಿನ ಅವರ ಈ ಸಂಘರ್ಷಗಳು ಆಗಾಗ್ಗೆ ಖಂಡಿತವಾಗಿಯೂ ಉಗ್ರರೂಪವನ್ನು ತಳೆದುಬಿಡುತ್ತಿದ್ದುವು. ಆದರೆ, ಆವೇಶ-ಆಕ್ರೋಶಗಳ ತೀವ್ರತೆ ಕೊನೆಗೊಂಡ ಬಳಿಕ ಅವರು ಪಶ್ಚಾತ್ತಾಪದ ಬೆಂಕಿಯಲ್ಲಿ ಬೆಂದುಹೋಗುತ್ತಿದ್ದರು. ಗೆಳೆಯರಿಗೆ ಪತ್ರ ಬರೆದು ಮತ್ತೆ ಮತ್ತೆ ಸ್ಪಷ್ಟೀಕರಣ ನೀಡುವ ಪ್ರಯತ್ನ ಮಾಡುತ್ತಿದ್ದರು. ಒಂದು ಪತ್ರದಲ್ಲಿ[1] ಅವರು ಹೀಗೆ ಬರೆದಿದ್ದರು:

"ಇದಲ್ಲದೆ, ನನ್ನ ಮನಸ್ಸಿನಲ್ಲಿ ನನಗಿಂತ ಯಾರು ಶ್ರೇಷ್ಠರು ಹಾಗೂ ಯಾರು ಕೀಳು ಎಂಬ ಬಗ್ಗೆ ಯಾವುದೇ ವಿಷಾದವಾಗಲೀ ಉದ್ವೇಗವಾಗಲೀ ನಿಜವಾಗಿಯೂ ಇಲ್ಲ. ರವೀಂದ್ರರೇನಾದರೂ ನನ್ನದು ಎನ್ನುವ ಯಾವುದೇ ಕೃತಿಯಿಲ್ಲ, ಕಾದಂಬರಿಯಿಲ್ಲ, ಪದವಿಲ್ಲ, ವಾಕ್ಯವಿಲ್ಲ ಎಂದು ಹೇಳಿಬಿಟ್ಟಿದ್ದರೆ, ಅದರಿಂದ ಆ ಸಮಯದಲ್ಲಿ ನೋವುಂಟಾಗುವುದಕ್ಕಿಂತ ಹೆಚ್ಚಾಗಿ ಇನ್ನೇನೂ ಆಗುತ್ತಿರಲಿಲ್ಲ. ಬಹುಶಃ ಇದನ್ನು ನಂಬುವುದು ಕಷ್ಟ. ನಾನು ಹೆಚ್ಚಿನ ದೈನ್ಯವನ್ನು ತೋರುತ್ತಿದ್ದೇನೆ ಎಂದೂ ಬಹುಶಃ ತೀರ್ಮಾನಿಸಬಹುದು. ಆದರೆ, ಇಡೀ ಬದುಕಿನಲ್ಲಿ ನಾನು ಇದೇ ಸಾಧನೆ ಮಾಡಿದ್ದೇನೆ. ಆದ್ದರಿಂದಲೇ ನಾನು ಯಾವುದೇ ಟೀಕೆಗೂ ಪ್ರತಿಭಟನೆಯನ್ನು ತೋರುವುದಿಲ್ಲ. ಯೌವನದಲ್ಲಿ (ಪ್ರೌಢಾವಸ್ಥೆಯಲ್ಲಿಯೂ) ಒಂದೆರಡು ಬಾರಿ ರವೀಂದ್ರರಿಗೆ ವಿರುದ್ಧವಾಗಿ ನಾನು ಒಂದೆರಡು ಮಾತುಗಳನ್ನು ಹೇಳಿದ್ದೆ. ಆದರೆ, ಅದು ನನ್ನ ಪ್ರಕೃತಿ ಅಥವಾ ಸಹಜ ಸ್ವಭಾವವಾಗಿರದೆ ವಿಕೃತಿಯಾಗಿತ್ತು. ಅನೇಕ ಕಾರಣಗಳಿದ್ದುವು. ಆದ್ದರಿಂದಲೇ ನಾನು ಈ ತಪ್ಪು ಮಾಡಿದೆ."

ಮತ್ತೆ ಮತ್ತೆ ಅವರು ದಿಲೀಪ್‌ಕುಮಾರ್ ಅವರೊಂದಿಗೆ ಹೀಗೆ ಹೇಳಿದ್ದರು: "ನನ್ನ ಈ ಮಾತನ್ನು ನಂಬಿ. ಅವರು ನಿಜವಾಗಿಯೂ ವಿರಾಟ್-ಪುರುಷರು. ಅವರಂಥ ಸರ್ವಾಂಗ ಸುಂದರ ವ್ಯಕ್ತಿ ಆವಿರ್ಭವಿಸಿರುವುದರಿಂದಲೇ ನಮ್ಮ ಸಮುದಾಯ ಅಕಾಲ ಮೃತ್ಯುವಿಗೆ ತುತ್ತಾಗುವುದಿಲ್ಲವೆಂದು ನಾನು ಭಾವಿಸಿದ್ದೇನೆ. ಈ ಯುಗದಲ್ಲಿಯೇ ಇಬ್ಬರು ಮಹಾಪುರುಷರು ಈ ನಾಡಿನ ಮುಖವನ್ನು ಉಜ್ವಲಗೊಳಿಸಿದ್ದಾರೆ. ರವೀಂದ್ರರು ಮತ್ತು ದೇಶಬಂಧು ಅವರೇ ಇಬ್ಬರು ಮಹಾಪುರುಷರು......"

ರವೀಂದ್ರರು ಅನೇಕ ಸಲ ಶರತ್‌ಚಂದ್ರರನ್ನು ಮುಕ್ತಕಂಠದಿಂದ ಪ್ರಶಂಸಿಸಿದ್ದರು. ಆದರೆ, ಆ ಗುರುದೇವರು ಎಂದೂ ಹೃತ್ಪೂರ್ವಕವಾಗಿ ತಮ್ಮನ್ನು ಮೆಚ್ಚಿಕೊಳ್ಳಲಿಲ್ಲವೆಂಬ ಅಸಮಾಧಾನ ಶರತ್‌ಚಂದ್ರರಿಗೆ ಉದ್ದಕ್ಕೂ ಇದ್ದೇ ಇತ್ತು. ಶ್ರೇಷ್ಠ-ಕೀಳು ಎಂಬ ಮಾತು ಅವರ ಪತ್ರದಲ್ಲಿ ಬಂದೇ ಇದೆ. ದಿಲೀಪಕುಮಾರ್ ಅವರಿಗೆ ಬರೆದ ಪತ್ರದಲ್ಲಿ ರವೀಂದ್ರರೂ ಇಂಥವೇ ಮಾತುಗಳನ್ನಾಡಿದ್ದರು.[2] ಈ

1. ಜನವರಿ 1936.
2. ನೋಡಿ: ಅಧ್ಯಾಯ 18.

ಪ್ರಶ್ನೆಗಳು ಈ ಅತಿರಥ-ಮಹಾರಥರನ್ನು ಏಕೆ ಕಾಡುತ್ತಿದ್ದುವು ಎಂಬುದರ ಮೇಲೆ ರವೀಂದ್ರರ ಈ ಪತ್ರ ಬೆಳಕು ಚೆಲ್ಲುತ್ತದೆ. ಶರತ್‌ಚಂದ್ರರು ತೀರಿಕೊಂಡ ತರುವಾಯ ಹೀಗೆಂದು ಬರೆದಿದ್ದರು:

"ಶರತ್‌ಚಂದ್ರರ ಸಾವಿನ ಬಗ್ಗೆ ಒಂದು ಚೌಪದಿಯನ್ನು ಸಾರ್ವಜನಿಕವಾಗಿ ಬರೆದುಕಳಿಸಿಕೊಟ್ಟಿದ್ದನ್ನು ಬಿಟ್ಟರೆ, ಬೇರೆನನ್ನೂ ಮಾಡಲಾಗಿಲ್ಲ. ನನ್ನಿಂದ ಶರತ್‌ಚಂದ್ರರು ಪಡೆಯಬಹುದಾಗಿದ್ದ ಪ್ರಶಸ್ತಿಯನ್ನು ನಾನು ಹಿಂದೆಮುಂದೆ ನೋಡದೆ ಅವರು ತೀರಿಕೊಳ್ಳುವುದಕ್ಕೆ ಮುನ್ನವೇ ಅಕೃಪಣಭಾವದಿಂದ ಕೊಟ್ಟುಬಿಟ್ಟಿದ್ದೆ. ನನ್ನ ಸಾವಿನ ಸಂದರ್ಭದಲ್ಲಿ ಶರತ್‌ಚಂದ್ರರು ಈ ಮಾತನ್ನು ಕೃತಜ್ಞತೆಯಿಂದ ನೆನೆಯುತ್ತಿದ್ದರು. ನನ್ನ ಹೃದಯದಲ್ಲಿ ಇದೇ ಅಭಿಲಾಷೆ ಇದ್ದಂತೆ ಕಾಣುತ್ತದೆ. ಆದರೆ, ವಿಧಿ ಇದಕ್ಕೆ ತದ್ವಿರುದ್ಧವಾಗಿ ಸಂಕಲ್ಪಿಸಿತ್ತು. ನಾನು ಬದುಕಿರುವಾಗಲೇ ಅಕಾರಣವಾಗಿ ಅಸಹಿಷ್ಣುಗಳಾಗಿ ಶರತ್‌ಚಂದ್ರರು ಅವಿಚಾರಪೂರ್ಣವಾದ ಮಾತುಗಳನ್ನಾಡಿದರು. ಸಕಾಲದಲ್ಲಿ ಅವರು ಸಾವನ್ನಪ್ಪಿದ್ದರೆ, ಖಂಡಿತವಾಗಿಯೂ ಯಥೋಚಿತ ರೂಪದಲ್ಲಿ ಆ ಅವಿಚಾರಿಕತೆಗಾಗಿ ಪಶ್ಚಾತ್ತಾಪವನ್ನು ವ್ಯಕ್ತಪಡಿಸುತ್ತಿದ್ದರು.

"ನನ್ನ ಜೀವಿತಕಾಲದಲ್ಲಿ ಬಂಗಾಳಿ ಸಾಹಿತ್ಯದಲ್ಲಿ ಮೂರು ಘಟ್ಟಗಳು ಕಾಣಿಸಿಕೊಂಡುವು. ಸಭೆಯಲ್ಲಿ ಜಮಖಾನದ ಒಂದು ಮೂಲೆಯಲ್ಲಿ ನಾನು ಕುಳಿತಿದ್ದಾಗ ಹೇಮಚಂದ್ರರು ಮತ್ತು ನವೀನ ಚಂದ್ರರು ಕವಿಯ ಉನ್ನತ ಆಸನದಲ್ಲಿ ಪ್ರತಿಷ್ಠಿತರಾಗಿದ್ದರು; ಬಂಕಿಮಚಂದ್ರರು ಸಿಂಹಾಸನದ ಮೇಲೆ ಕುಳಿತಿದ್ದರು. ಮಧುಸೂದನ ಅವರು ನಮ್ಮನ್ನು ಅಗಲಿದ್ದರು. ಅವರು ತೀರಿಕೊಳ್ಳುವುದಕ್ಕೆ ಸ್ವಲ್ಪ ಮುಂಚೆಯೇ ಎರಡನೆಯ ಘಟ್ಟ ಆರಂಭಗೊಂಡಿತು. ಮೊದಲ ಘಟ್ಟದಲ್ಲಿ ನಾನು ಎಲ್ಲರಿಗಿಂತಲೂ ಕಿರಿಯವನಾಗಿದ್ದೆ; ಎರಡನೆಯ ಘಟ್ಟದಲ್ಲಿ ಎಲ್ಲರಿಗಿಂತಲೂ ಹಿರಿಯವನಾಗಿದ್ದೆ. ಇದರ ಪರಿಣಾಮವಾಗಿ ಸಾಹಿತಿಗಳೊಂದಿಗೆ ವಯಸ್ಸಿನ ದೃಷ್ಟಿಯಿಂದ ಸಹಜವಾದಂಥ ಸಂಬಂಧ ಸ್ಥಾಪಿತವಾಗಲೇ ಇಲ್ಲ. ಒಂಟಿಯಾಗಿಯೇ ಉಳಿದುಬಿಟ್ಟೆ. ಅದೃಷ್ಟವಶಾತ್, ಅಕೃತ್ರಿಮ ಶ್ರದ್ಧೆಯಿಂದಾಗಿ ವಯಸ್ಸಿನ ಅಡ್ಡಿಯನ್ನು ಮೀರಿನಿಂತು ಸತ್ಯೇಂದ್ರರು ಮಾತ್ರವೇ ನನ್ನ ಬಳಿ ಸುಳಿದರು. ಇಬ್ಬರ ಈ ಮಿಲನದಿಂದ ದೊರೆತ ಆನಂದದಿಂದ ನಮಗೆ ತುಂಬ ಪ್ರಯೋಜನವಾಯಿತು ಎಂದು ನನಗೆ ಅನ್ನಿಸಿದೆ. ಮನುಷ್ಯನ ರೂಪದಲ್ಲಿ ನನ್ನ ಬಳಿಗೆ ಬಂದಿದ್ದರಿಂದ ಅವರು ಕವಿಯಾಗಿ ವಾಸ್ತವ ರೂಪದಲ್ಲಿ ನನ್ನನ್ನು ಪಡೆದರು ಎಂದು ನಾನು ನಂಬಿದ್ದೇನೆ.

"ಮೂರನೆಯ ಘಟ್ಟ ಆರಂಭವಾದದ್ದು ಶರತ್‌ಚಂದ್ರರೊಂದಿಗೆ. ಹೊಸ ಬರೊಂದಿಗೆ ಅವರು ಎಷ್ಟು ಹತ್ತಿರದ ಸಂಬಂಧವನ್ನು ಸ್ಥಾಪಿಸಿಕೊಳ್ಳಬಲ್ಲವ ರಾಗಿದ್ದರೋ ಅಂಥ ಸಂಬಂಧವನ್ನು ನಾನು ನನ್ನ ಹಿಂದಿನವರೊಂದಿಗೆ ಸ್ಥಾಪಿಸಿ ಕೊಳ್ಳಲಾರದೆ ಹೋದೆ. ಅವರು ಸಂಪೂರ್ಣವಾಗಿ ತಮ್ಮ ದೇಶ ಮತ್ತು ತಮ್ಮ ಕಾಲಕ್ಕೆ ಸಂಬಂಧಿಸಿದವರಾಗಿದ್ದರು. ಇದು ಸಹಜವಾದ ಸಂಗತಿಯೇನೂ ಅಲ್ಲ. ಕೇಳಿದಾಗ ಇದು ಸ್ವತಃ ವಿರೋಧಿ ಸಂಗತಿ ಎಂದೆನಿಸುತ್ತದೆ; ಆದರೆ, ನೋಡಿದಾಗ ಕೃತ್ರಿಮವಾಗಿರುವುದೇ ಸಹಜವೆನ್ನಿಸುತ್ತಿದೆ; ಸ್ವಾಭಾವಿಕವಾಗಿರುವುದೇ ಅಸಹಜ

ವೆನ್ನಿಸುತ್ತದೆ. ಈ ರೀತಿ ತಮ್ಮ ದೇಶ-ಕಾಲದೊಂದಿಗೆ ಘನಿಷ್ಠ ಭಾವದೊಂದಿಗೆ ಬೆರೆತುಕೊಂಡು ಬಿಡುವುದು ಎಲ್ಲರ ಭಾಗ್ಯದಲ್ಲಿ ಬರೆದಿರುವುದಿಲ್ಲ. ಎಲ್ಲರೂ ತಮ್ಮ ದೇಶ-ಕಾಲಗಳಲ್ಲಿಯೇ ಜನ್ಮಿಸುತ್ತಾರೆಂದೇನೂ ಅಲ್ಲ. ಹುಟ್ಟಿಸುವ ದೇವರು ಹುಟ್ಟಲಿರುವವನ ಜಾಗವನ್ನು ಗೊತ್ತು ಪಡಿಸಲಿರುವಾಗ ಎಲ್ಲ ಸಂದರ್ಭಗಳಲ್ಲಿಯೂ ಅಂದಂದಿನ ಕಾಲವನ್ನೇ ಗೊತ್ತುಪಡಿಸಿ ಮುನ್ನಡೆಯುವುದಿಲ್ಲ. ಸಾಹಿತ್ಯದಲ್ಲಿ ಇದರ ಫಲ ವಿಚಿತ್ರವಾಗಿ ಬಿಡುತ್ತದೆ. ಯಥೋಚಿತ ದೇಶಕಾಲಗಳ ಚಿರ-ನಿರ್ವಾಸನ ದಲ್ಲಿಯೇ ಜನ್ಮತಳೆದಂಥವರ ಕೊರತೆಯೇನೂ ಇಲ್ಲ. ಸೃಷ್ಟಿಯ ವೈಚಿತ್ರ್ಯದ ದೃಷ್ಟಿ ಯಿಂದ ಅವರಿಂದಲೂ ಪ್ರಯೋಜನವಾಗುತ್ತದೆ. ಶರತ್‌ಚಂದ್ರರು ಇದ್ದಕ್ಕಿದ್ದಂತೆಯೇ ಬಂಗಾಳಿ ಸಾಹಿತ್ಯ ಮಂಡಲದಲ್ಲಿ ಕಾಣಿಸಿಕೊಂಡುಬಿಟ್ಟರು ಎಂದು ಹೇಳುವುದು ವ್ಯರ್ಥ. ಅಪರಿಚಯತ್ವದ ಕ್ಷೇತ್ರದಿಂದ ಪರಿಚಯತ್ವದ ಕ್ಷೇತ್ರಕ್ಕೆ ಬರಲು ತಡವೇನೂ ಆಗಲಿಲ್ಲ. ಯಾರು ಏನು ಎಂಬುದರ ಅರಿವಾಗುವುದಕ್ಕೂ ಮೊದಲೇ ಅವರು ಪರಿಚಿತ ವ್ಯಕ್ತಿಯಾಗಿಬಿಟ್ಟರು. ದ್ವಾರಪಾಲಕ ಅವರನ್ನು ತಡೆಗಟ್ಟಲೇ ಇಲ್ಲ. ಸಾಹಿತ್ಯದ ಕ್ಷೇತ್ರದಲ್ಲಿ ಎಲ್ಲಿ ಯಾವುದೇ ಅಡೆತಡೆಗಳಿಲ್ಲದೆ ಏಕಕಾಲದಲ್ಲಿ ಓದುಗರ ಚಿತ್ತ-ಪರಿಚಯ ಹಾಗೂ ಲೇಖಕನ ಆತ್ಮಪರಿಚಯ ಸಾಧಿತವಾಗಿ ಬಿಡುತ್ತದೆಯೋ ಅಲ್ಲಿ ಹೀಗೆಯೇ ಆಗಿಬಿಡುತ್ತದೆ. ಪೂರ್ವರಾಗ ಮತ್ತು ಅನುರಾಗಗಳ ನಡುವೆ ಸಮಯ ಹಾಳಾಗುವುದಿಲ್ಲ. ಆ ಹೊತ್ತಿಗೆ ಸರಿಯಾಗಿ, ನನ್ನ ಕಾರ್ಯ ಮತ್ತು ವಯಸ್ಸಿನ ಭೇದದಿಂದಾಗಿ ನಾನು ದೂರದಲ್ಲಿಯೇ ಉಳಿದುಬಿಟ್ಟೆ. ಕಲ್ಕತ್ತೆಯ ಮನೆಯನ್ನೂ ಬಿಟ್ಟು ಬಿಟ್ಟೆ. ನನಗೆ ಸಂಬಂಧಿಸಿದಂತೆ ಬಗೆಬಗೆಯಾದ ಮಾತುಗಳು ಮೂಡಿ ಬಂದುವು. ಅವುಗಳಲ್ಲಿ ಬಹುಪಾಲಿನವು ನಿಜವೂ ಆಗಿರಲಿಲ್ಲ, ಪ್ರಿಯವೂ ಆಗಿರಲಿಲ್ಲ. ಅದರಿಂದಾಗಿ, ನನ್ನ ಮನಸ್ಸು ಮತ್ತಷ್ಟು ದೂರ ಸರಿದುಬಿಟ್ಟಿತು. ಆ ಹೊತ್ತಿನಲ್ಲಿ ಶರತ್‌ಚಂದ್ರರು ಕಾಣಿಸಿಕೊಂಡರು. ಶಾಂತಿಗಾಗಿ ಯಾವ ಏಕಾಂತದ ಆಸರೆಯನ್ನು ಪಡೆದು ನನ್ನ ಕೆಲಸದಲ್ಲಿ ಮಗ್ನನಾಗಿ ಬಿಟ್ಟೆನೋ ಅಲ್ಲಿಂದ ಶರತ್‌ಚಂದ್ರರನ್ನು ಹತ್ತಿರದಿಂದ ಕಂಡು ಬೆರೆಯುವ ಸದವಕಾಶ ಇಲ್ಲದಂತಾಗಿಬಿಟ್ಟಿತು.

"ಕೆಲವು ವ್ಯಕ್ತಿಗಳು ಹೀಗೂ ಇರುತ್ತಾರೆ. ಅವರ ಪ್ರತ್ಯಕ್ಷ ಪರಿಚಯಕ್ಕಿಂತ ಪರೋಕ್ಷ ಪರಿಚಯವೇ ಹೆಚ್ಚು ಸುಗಮವಾಗಿರುತ್ತದೆ. ಶರತ್‌ಚಂದ್ರರು ಆ ವರ್ಗಕ್ಕೆ ಸೇರಿದ ವ್ಯಕ್ತಿಯಲ್ಲ. ಅವರ ಬಳಿಗೆ ಹೋಗಿಯೇ ಅವರನ್ನು ಪಡೆಯಬಹುದಾಗಿತ್ತು. ನನಗೆ ಇದೇ ಅಡ್ಡಿಗಟ್ಟಾಗಿ ಬಿಟ್ಟಿತು. ಇಷ್ಟಾಗಿಯೂ, ಅವರನ್ನು ಭೇಟಿಯಾಗುವ ಅಥವಾ ಅವರೊಡನೆ ಮಾತುಕತೆಗಳನ್ನಾಡುವ ಅವಕಾಶಗಳೇ ಒದಗಲಿಲ್ಲವೆಂದೇನೂ ಅಲ್ಲ. ಭೇಟಿಯಾಗುವುದಷ್ಟೇ ಅಲ್ಲ, ಅವರನ್ನು ಅರಿತುಕೊಳ್ಳುವಂತಾಗಿದ್ದರೆ ಚೆನ್ನಾಗಿರುತ್ತಿತ್ತು. ಸಮಕಾಲೀನನಾಗುವ ಸೌಭಾಗ್ಯ ಸಾರ್ಥಕವೂ ಆಗುತ್ತಿತ್ತು. ಹಾಗಾಗಲಿಲ್ಲ, ಆದರೆ, ಅದೇ ಕಾಲದಲ್ಲಿ ಆಶ್ಚರ್ಯಕಾರಕ ಆನಂದದಿಂದೊಡಗೂಡಿ ದೂರದಿಂದಲೇ ನಾನು ಅವರ 'ಬಿಂದೋ ಕಾ ಲಲ್ಲಾ', 'ಬಿರಾಜ್ ಬಹೂ', 'ರಾಮೇರ್ ಸುಮತೀ', 'ಬಡೀ ದೀದೀ' ಕಾದಂಬರಿಗಳನ್ನು ಓದಿದ್ದೇನೆ. ಮನಸ್ಸಿನ ಮನುಷ್ಯನನ್ನು ಪಡೆದೆ ಎಂದು ಆಲೋಚಿಸಿದೆ. ಮನುಷ್ಯನನ್ನು ಪ್ರೀತಿಸುವುದಕ್ಕೆ ಇಷ್ಟೇ ಸಾಕು."

ಆದರೆ, ಇಷ್ಟೇ ಸಾಕಾಗಲಿಲ್ಲ. ಮನುಷ್ಯರಾಗಿ ಶರತ್‌ಚಂದ್ರರು ಮತ್ತು ಮನುಷ್ಯರಾಗಿ ರವೀಂದ್ರರು ಘನಿಷ್ಠ ಭಾವದಿಂದ ಪರಸ್ಪರ ಹತ್ತಿರ ಬರಲಾರದೆ ಹೋದರು ಹಾಗೂ ಈ ಕಾರಣದಿಂದಾಗಿಯೇ ವೈಮನಸ್ಯದ ಸಂದರ್ಭಗಳು ಬರುತ್ತಲೇ ಇದ್ದುವು; ಈ ಎರಡು ಪ್ರತಿಭೆಗಳು ಪರಸ್ಪರ ಘರ್ಷಿಸುವುದನ್ನು ಕಂಡು ಸಂತೋಷಪಡಬಯಸುತ್ತಿದ್ದಂಥ ವ್ಯಕ್ತಿಗಳು ಆ ಘರ್ಷಣೆ ಹೆಚ್ಚಲು ನೆರವಾಗುತ್ತಿದ್ದರು. ಶರತ್‌ಚಂದ್ರರ ದೃಷ್ಟಿ ಅಂದಿನ ಕಾಲದ ಮೇಲೆಯೇ ಇತ್ತು. ರವೀಂದ್ರರು ಶಾಶ್ವತ ಮಾನವನನ್ನು ವಿರಾಟ್‌ರೂಪದಲ್ಲಿ ಚಿತ್ರಿಸಬಲ್ಲಂಥ ಚಿತ್ರಕಾರರಾಗಿದ್ದರು. ಶರತ್‌ಚಂದ್ರರು ಅನ್ಯಾಯವನ್ನಷ್ಟೇ ವಿರೋಧಿಸುತ್ತಿದ್ದರು ಹಾಗೂ ಯಾವುದೇ ರೀತಿಯಲ್ಲಿಯೂ ಮನುಷ್ಯನನ್ನು ಕೀಳೆಂದು ಭಾವಿಸುತ್ತಿರಲಿಲ್ಲ. ಪತಿತೆಯರಲ್ಲಿ ಅಡಗಿದ್ದ ನಾರೀತ್ವವನ್ನು ಅವರು ತೋರಿಸಿಕೊಟ್ಟಿದ್ದಾರೆ. ಇದೇ ಅವರ ಜೀವನದರ್ಶನವಾಗಿತ್ತು. ಆದರೆ, ಅವರ ಗಂಡು-ಹೆಣ್ಣುಗಳು ಹೆಚ್ಚಾಗಿ ಇದೇ ದೇಶದವರಾಗಿದ್ದರು. ಇದಕ್ಕೆ ವಿರುದ್ಧವಾಗಿ ರವೀಂದ್ರರು ಚಿರಕಾಲದ ಸತ್ಯಗಳನ್ನು ಮತ್ತೆ ಮತ್ತೆ ಆದರ್ಶವೆಂಬಂತೆ ದೇಶದ ಮುಂದೆ ಹಾಗೂ ಸಮಾಜದ ಮುಂದೆ ಇರಿಸುತ್ತಿದ್ದರು. ಬಂಕಿಮಹದ್ದೈವದ ಉಪಾಸಕರಾಗಿದ್ದರೂ ವಿಶ್ವಮಾನವರಾಗಿದ್ದರು. ಅವರ ಅನುಭೂತಿ ಅತೀಂದ್ರಿಯ ಸ್ವರೂಪದ್ದಾಗಿತ್ತು. ಆದರೆ, ಶರತ್‌ಚಂದ್ರರು ಈ ನೆಲದ ಮಣ್ಣಿಗೇ ಮಹಿಮೆಯನ್ನು ತಂದುಕೊಟ್ಟರು. ಅವರು ಬಂಗಾಳದ ತಮ್ಮ ಭಾಷೆಯನ್ನೇ ಬಳಸಿದರು. ಬಂಗಾಳದ ಗಂಡು-ಹೆಣ್ಣುಗಳ (ಮಾನವರ) ಪ್ರೇಮವನ್ನು ಅವರು ನಿರೂಪಿಸಿದ್ದಾರೆ. ಅವರ ವಾಸ್ತವವಾದದಲ್ಲಿ - ಅದನ್ನು ವಾಸ್ತವವಾದ ಎಂದು ಕರೆಯುವುದಾದಲ್ಲಿ - ಸಂವೇದನೆಯ ಹಾಗೂ ಕರುಣಾಮಯ ಚಿತ್ತದ ಸಂಸ್ಪರ್ಶ ಕಾಣದೊರೆಯುತ್ತದೆ. ಇಬ್ಬರಲ್ಲಿ ಇದ್ದ ಮೂಲಭೂತ ವ್ಯತ್ಯಾಸ ಇದು.

ಇನ್ನೊಂದು ವ್ಯತ್ಯಾಸವೂ ಇತ್ತು ಹಾಗೂ ಅದು ಮಹತ್ವದ್ದೂ ಆಗಿತ್ತು. ರವೀಂದ್ರರು ಅಭಿಜಾತವರ್ಗದವರಾಗಿದ್ದರೆ, ಶರತ್‌ಚಂದ್ರರು ಚಿರವ್ರಾತ್ಯವರ್ಗದವರಾಗಿದ್ದರು. ಈ ವ್ಯತ್ಯಾಸವೇ ಅವರಿಗೆ ಅರಿವಿಲ್ಲದಂತೆ ಕೋಪೋದ್ರೇಕದ ಕ್ಷಣಗಳನ್ನು ಮತ್ತಷ್ಟು ಕಟುವಾಗಿಸಿಬಿಡುತ್ತಿತ್ತು. ಇದನ್ನು ಬಿಟ್ಟರೆ, ಶರತ್‌ಚಂದ್ರರ ಪ್ರತಿಭೆಯನ್ನು ಪುರಸ್ಕರಿಸುವ ಯಾವೊಂದು ಅವಕಾಶವನ್ನೂ ರವೀಂದ್ರರು ಬಿಟ್ಟುಕೊಟ್ಟಿರಲಿಲ್ಲ. ಶರತ್‌ಚಂದ್ರರೂ ರವೀಂದ್ರರನ್ನು ಗುರುಸ್ಥಾನೀಯರೆಂದೂ, ವ್ಯಾಸರ ಅನಂತರ ಬಂದ ಸರ್ವಶ್ರೇಷ್ಠ ಕವಿಯೆಂದೂ ಗೌರವಿಸುತ್ತಿದ್ದರು ಹಾಗೂ ಸಂಪೂರ್ಣ ಅಂತಃಶ್ರದ್ಧೆಯಿಂದ ಅವರನ್ನು ಪ್ರೀತಿಸುತ್ತಿದ್ದರು. ರವೀಂದ್ರರಂತೆ ತಾವೆಂದೂ ಬರೆಯಲಾಗುವುದಿಲ್ಲವೆಂದೂ ಅವರು ಭಾವಿಸಿದ್ದರು.

ಸಾವಿಗೆ ನಾಲ್ಕು ತಿಂಗಳ ಮುನ್ನ, ತಮ್ಮ ಅರುವತ್ತೆರಡನೆಯ ಹುಟ್ಟು-ಹಬ್ಬದ ಸಂದರ್ಭದಲ್ಲಿ, ಆಕಾಶವಾಣಿಯವರು ಆಯೋಜಿಸಿದ 'ಶರತ್-ಶರ್ವರೀ' ಕಾರ್ಯಕ್ರಮದಲ್ಲಿ ಅಭಿನಂದನೆಗೆ ಉತ್ತರವನ್ನು ಕೊಡುವಾಗ ಅವರು ಮೊಟ್ಟ ಮೊದಲು ಈ ಕವಿಗುರುವಿಗೇ ನಮನಗಳನ್ನು ಸಲ್ಲಿಸಿದ್ದರು; ಹಾಗೂ ಅವರ ಆಶೀರ್ವಾದ ತಮಗೆ ದೊರೆಯಬೇಕೆಂದು ಹಾರೈಸಿದ್ದರು.

ಈ ಆಶೀರ್ವಾದ ಮಾತ್ರವೇ ಅವರ ಪಾಲಿಗೆ ಸತ್ಯವಾಗಿತ್ತು. ಉಳಿದುದೆಲ್ಲ ಕ್ಷಣಿಕ

ಉದ್ವೇಗದ ಕುದಿತ ಮಾತ್ರ. ದೊಡ್ಡವರು ಯಾವಾಗಲೂ ದೊಡ್ಡವರಾಗಿಯೇ ಇರುತ್ತಾರೆ. ಅವರ ಕೋಪ ಭಾದ್ರಪದದ ಮೋಡದಂತೆ ಇರುವಂಥದು. ಅಧು ಧೋ ಎಂದು ಮಳೆ ಸುರಿಸಿ ಮರುಕ್ಷಣವೇ ಇಲ್ಲವಾಗಿಬಿಡುತ್ತದೆ. ರವೀಂದ್ರ ಜಯಂತಿಯ ಸಂದರ್ಭದಲ್ಲಿ ಅವರು ಮಾಡಿದ ಭಾಷಣ ಬಂಗಾಳಿ ಸಾಹಿತ್ಯೇತಿಹಾಸದ ಸಂಪತ್ತು ಎನಿಸಿಕೊಂಡಿದೆ.

ವಿಶ್ವಸಾಹಿತ್ಯದಲ್ಲಿ ಮಹಾ ಸೃಜನಶೀಲ ಸಾಹಿತ್ಯಗಳು ಮತ್ತು ಸಾಹಿತ್ಯಶಿಲ್ಪಿಗಳ ನಡುವೆ ನಡೆದ ಈ ಬಗೆಯ ಘರ್ಷಣೆಗಳ ನಿದರ್ಶನಗಳು ಕಮ್ಮಿಯೇನೂ ಇಲ್ಲವೆಂಬುದೂ ನಿಜ. ತುರ್ಗನೇವ್ ಅವರು ಟಾಲ್‌ಸ್ಟಾಯ್ ಅವರ ಪ್ರತಿಭೆಯನ್ನು ಗುರುತಿಸಿದ ಮೊದಲಿಗರು. ಆದರೆ, ಯಾವುದೋ ಕಾರಣಗಳಿಂದಾಗಿ ಆ ಪ್ರಶಂಸೆ ಅಪ್ರಿಯ ಸಂಘರ್ಷವಾಗಿ ಬದಲಾಗಿಬಿಟ್ಟಿತು. ಇಬ್ಬರೂ ಮತ್ತೆ ಮತ್ತೆ ಪರಸ್ಪರರನ್ನು ಟೀಕಿಸಿದರು; ಮತ್ತೆ ಮತ್ತೆ ಕ್ಷಮೆಯನ್ನು ಕೋರಿದರು. ಮೃತ್ಯುಶಯ್ಯೆಯಲ್ಲಿ ಮಲಗಿದ್ದ ತುರ್ಗಿನೇವ್ ಅವರು ವೇದನಾಪೂರ್ಣ ಶಬ್ದಗಳಲ್ಲಿ ಹೀಗೆಂದರು: "ನಾನು ನಿನ್ನ ಸಮಕಾಲೀನನಾಗಿದ್ದೆ ಎಂಬುದು ನನಗೆಷ್ಟು ಸಂತೋಷದ ಸಂಗತಿ, ಗೊತ್ತೆ? ನನ್ನ ಗೆಳೆಯನೆ, ನನ್ನ ಈ ಕೊನೆಯ ಕೋರಿಕೆಯನ್ನು ಸಲ್ಲಿಸು. ನಿನ್ನ ಸೃಜನಶೀಲ ಚಟುವಟಿಕೆಗಳತ್ತ ಮತ್ತೆ ಗಮನಕೊಡು..... ನನ್ನ ಗೆಳೆಯನೆ, ನನ್ನ ನಾಡಾದ ರಷ್ಯದ ಮಹಾನ್ ಲೇಖಕನೆ, ನನ್ನ ಕೋರಿಕೆಯತ್ತ ತಪ್ಪದೆ ಗಮನ ಹರಿಸು. ಮತ್ತೊಮ್ಮೆ ನಿನ್ನನ್ನು ಪ್ರೀತಿಯಿಂದ ಆಲಿಂಗಿಸಲು ಅಪ್ಪಣೆಕೊಡು..... ನಾನ್ನಿನ್ನು ಹೆಚ್ಚು ಹೇಳಲಾರೆ. ತುಂಬ ಬಳಲಿಬಿಟ್ಟಿದ್ದೇನೆ."

ಎರಡು ತಿಂಗಳ ಬಳಿಕ ತುರ್ಗಿನೇವ್ ತೀರಿಕೊಂಡರು. ಟಾಲ್‌ಸ್ಟಾಯ್ ಅವರು ಮತ್ತೊಮ್ಮೆ ತುರ್ಗಿನೇವ್ ಅವರ ಕೃತಿಗಳನ್ನು ಓದಲು ಮೊದಲು ಮಾಡಿದರು......

## 22

ಶರತ್‌ಚಂದ್ರರಿಗೆ ಇನ್ನೂ ಅರವತ್ತು ವರ್ಷವೂ ಆಗಿರಲಿಲ್ಲ. ಆದರೆ, ಅಷ್ಟರಲ್ಲಿಯೇ ಅವರ ಆರೋಗ್ಯ ತುಂಬ ಕೆಟ್ಟುಬಿಟ್ಟಿತ್ತು. ಪ್ರತಿಯೊಂದು ಕಾಗದದಲ್ಲಿಯೂ ಇವರು ಇದರ ಬಗ್ಗೆ ದೂರುತ್ತಿರುವಂತೆ ಕಾಣುತ್ತದೆ: "ತಲೆ ನೋಯುತ್ತಲೇ ಇರುತ್ತದೆ. ರಕ್ತದ ಒತ್ತಡವೂ ಸರಿಯಾಗಿಲ್ಲ. ತುಂಬ ಕಷ್ಟದಿಂದ ಓದಿ-ಬರೆದು ಮಾಡುತ್ತಿದ್ದೇನೆ. ಇತ್ಯಾದಿ ಇತ್ಯಾದಿ...."

ಎರಡು-ಎರಡೂವರೆ ವರ್ಷಗಳ ಹಿಂದೆ[1] ಅವರ ಸೋದರಿಯ ಗಂಡ ತೀರಿಕೊಂಡಾಗ ತಮ್ಮ ದಿನಚರಿಯಲ್ಲಿ ಅವರು ಹೀಗೆ ಬರೆದಿದ್ದರು: "ಮೂಖುಜ್ಜೆ ಮೋಶಾಈ (ಮುಖರ್ಜಿ ಮಹಾಶಯ) ತೀರಿಕೊಂಡರು. 10 ಅಗ್ರಹಾಯಣ 1340, ಭಾನುವಾರ, ರಾತ್ರಿ ಮೂರೂವರೆ. ಒಂದು ವರ್ಷದಿಂದಲೂ ಅವರು ಹೃದಯಾಂತ ರಾಳದಿಂದ ಮೃತ್ಯುವನ್ನು ಆಹ್ವಾನಿಸುತ್ತಿದ್ದರು. ಇಂದು ಅವರ ಆ ಕರೆಗೆ ಒಪ್ಪಿಗೆ ದೊರೆತಿದೆ. ನನ್ನ ಕೋರಿಕೆಗೆ ಯಾವುತ್ತು ಒಪ್ಪಿಗೆ ದೊರೆಯುತ್ತದೆಯೋ ಏನೋ."

1. ನವಂಬರ್ 1933 (10 ಅಗ್ರಹಾಯಣ 1340)

ಅವರು ಮೂಲವ್ಯಾಧಿಯ ಹಳೆಯ ರೋಗಿಯಾಗಿದ್ದರು. ದೌರ್ಬಲ್ಯ ಹೆಚ್ಚುವುದು ಸಹಜವೇ ಆಗಿತ್ತು. ಒಮ್ಮೆ ಜೇಷ್ಠ ಮಾಸದಲ್ಲಿ ಎಲ್ಲಿಂದಲೋ ಹಿಂದಿರುಗುತ್ತಿರುವಾಗ ಒಮ್ಮೆಗೇ ಅವರಿಗೆ ಬಿಸಿಲಿನ ಝಳತಟ್ಟಿತು. ನೋವು ಮತ್ತಷ್ಟು ಹೆಚ್ಚಿತು. ಪತ್ರಿಕೆಗಳನ್ನು ಓದುವುದೂ ಕಷ್ಟವಾಯಿತು. ಒಂದು ಕಾಗದದಲ್ಲಿ ಹೀಗೆಂದು ಬರೆದಿದ್ದರು[1]: "ಓದುವುದು-ಬರೆಯುವುದು ಎಲ್ಲ ನಿಂತುಹೋಗಿದೆ. ಪತ್ರಿಕೆಗಳನ್ನು ಓದುವುದಕ್ಕಾಗುತ್ತಿಲ್ಲ. ಈ ಬಾಳಿನ ಮಟ್ಟಿಗೆ ಓದುವುದು-ಬರೆಯುವುದು ಕೊನೆಗೊಂಡಿತೆಂದರೆ ಅದರ ಬಗ್ಗೆ ನಾನೇನೂ ಗೊಣಗಾಡುವುದಿಲ್ಲ. ನನ್ನ ಶಕ್ತಿ-ಸಾಮರ್ಥ್ಯ ಎಷ್ಟಿತ್ತೋ ಅಷ್ಟೂ ಮಾಡಿದ್ದೇನೆ. ಅದಕ್ಕಿಂತಲೂ ಹೆಚ್ಚು ಮಾಡಲಾಗಲಿಲ್ಲವೆಂದರೆ ಅದಕ್ಕಾಗಿ ನಾನೇಕೆ ಕ್ಷುಬ್ಧನಾಗಲಿ ? ಅಂತರ್ಯದಲ್ಲಿ ನಾನು ಯಾವಾಗಲೂ ವಿರಾಗಿಯೇ ಆಗಿದ್ದೇನೆ. ಮುಂದೆಯೂ ಹಾಗೆಯೇ ಇರಬಲ್ಲೆ."

ಬರಲಿದ್ದ ಸಾವಿನ ಅರಿವು ಅವರಿಗೆ ಆಗಲೇ ಆಗತೊಡಗಿದ್ದಂತೆ ಕಾಣುತ್ತದೆ. ಕಲ್ಕತ್ತೆಯಿಂದ ಅವರು ತಮ್ಮ ಗೆಳೆಯರೊಬ್ಬರಿಗೆ ಹೀಗೆ ಬರೆದಿದ್ದರು[2]: "ಈ ಮಧ್ಯೆ ನಾನು ಹಳ್ಳಿಗೆ ಹೋಗಿದ್ದೆ. ಹಳ್ಳಿಯ ಮಣ್ಣಿನ ಮನೆ ಮತ್ತು ರೂಪನಾರಾಯಣ ನದಿ - ಇವುಗಳ ಬಗೆಗಿನ ಮೋಹವನ್ನು ತ್ಯಜಿಸಿ ನಾನು ಇರಲಾರೆ. ಇಷ್ಟಾಗಿಯೂ, ಈ ಮಾಯೆಯ ಬಲೆಯನ್ನು ಕತ್ತರಿಸಿಕೊಂಡು ಹೋಗುವ ದಿನಗಳು ಇನ್ನು ದೂರವಿಲ್ಲ ಎಂಬುದು ನಿಜ. ಅನೇಕ ಹಳೆಯ ಗೆಳೆಯರು ಈಗಾಗಲೇ ಹೋಗಿಬಿಟ್ಟಿದ್ದಾರೆ. ಅವರನ್ನು ನಾನು ಪ್ರತಿದಿನವೂ ನೆನಪು ಮಾಡಿಕೊಳ್ಳುತ್ತೇನೆ. ಈಗಷ್ಟೇ ಅಧ್ಯಾಪಕ ವಿಪಿನಗುಪ್ತರ ಶ್ರಾದ್ಧಭೋಜನಕ್ಕೆ ಬರಬೇಕೆಂಬ ಆಹ್ವಾನ ಬಂದಿದೆ. ಶಿವಪುರದಲ್ಲಿ ಅದೆಷ್ಟು ದಿನಗಳವರೆಗೆ ಸಂಜೆಯ ಹೊತ್ತು ನಾವು ವಾದ-ವಿವಾದಗಳನ್ನು ನಡೆಸುತ್ತಿದ್ದೆವು. ಆ ಹಳೆಯ ಕಾಲದ ಗೆಳೆಯರಲ್ಲಿ ಉಳಿದಿರುವವನು ನೀನೊಬ್ಬನೇ. ಕನಿಷ್ಠ ಪಕ್ಷ ನಿನಗಿಂತಲೂ ಮೊದಲೇ ಹೋಗಿ ಬಿಡುತ್ತೇನೆಂಬ ಆಸೆಯನ್ನು ಇರಿಸಿಕೊಂಡಿದ್ದೇನೆ. ಈ ಲೋಕದಲ್ಲಿ ಇನ್ನೊಂದು ದಿವಸ ಇರುವ ಮನಸ್ಸೂ ಇಲ್ಲ. ಯಾವಾಗಲೂ ಹಿಂದಿನ ಸಂಗತಿಗಳನ್ನು ನೆನಪಿಸಿಕೊಳ್ಳುತ್ತ ಇರುತ್ತೇನೆ. ಭವಿಷ್ಯದ ಕಡೆಗೆ ಒಮ್ಮೆಯೂ ಕಣ್ಣು ಸುಳಿಯುವುದಿಲ್ಲ. ಹೋಗಲಿ ಬಿಡು, ಈ ಮಾತುಗಳನ್ನು ಕಟ್ಟಿಕೊಂಡು ಏನು ಪ್ರಯೋಜನ? ನಿನ್ನ ಮನಸ್ಸಿಗೆ ದುಃಖವನ್ನುಂಟು ಮಾಡುವುದರಿಂದ ಏನೂ ಪ್ರಯೋಜನವಿಲ್ಲ."

ನಿರಾಶೆಯ ಧ್ವನಿ ಅವರ ಪತ್ರಗಳಲ್ಲಿ ಎಂದೂ ಪ್ರಮುಖವಾಗಿ ಎದ್ದು ಕಾಣುತ್ತದೆ. ಆದರೆ, ಈ ದಿನಗಳಲ್ಲಿ ಅದು ಹೆಚ್ಚು ನಿಬಿಡವಾಗತೊಡಗಿತ್ತು. ಸಾಹಿತ್ಯ ಕ್ಷೇತ್ರಕ್ಕೆ ಅವರ ಕಾಣಿಕೆ ಈಗ ತುಂಬ ಕಮ್ಮಿಯಾಗಿತ್ತು. 'ಭಾರತ ವರ್ಷ'ದ ಸಂಪಾದಕರಾಗಿದ್ದ ರಾಯಬಹದ್ದೂರ್ ಜಲಧರ ಸೇನ್ ಅವರೂ ಅನೇಕ ಸಲ ಸೋತು ಹಿಂದಿರುಗಿದ್ದರು. ಇಷ್ಟಾಗಿಯೂ, 'ವಿಪ್ರದಾಸ' ಕಾದಂಬರಿಯನ್ನು ಅವರು ಪೂರ್ಣಗೊಳಿಸಿದರು.[3] ಆದರೆ, 'ಶೇಷಪರಿಚಯ'ದ 15ಅಧ್ಯಾಯಗಳನ್ನಷ್ಟೇ ಬರೆದು

1. ಜನವರಿ 17, 1936.
2. ಫೆಬ್ರುವರಿ 11, 1936.
3. ಫೆಬ್ರುವರಿ 1, 1935.

ಮುಗಿಸಲು ಅವರಿಗೆ ಸಾಧ್ಯವಾಯಿತು.[1]

ಈ ಕಾದಂಬರಿಯನ್ನು ಆರಂಭಿಸಿದಾಗ, ಇದನ್ನು ನಿಯತರೂಪದಲ್ಲಿ ಬರೆದುಕೊಡುವುದಾಗಿ ಹರಿದಾಸ ಬಾಬೂ ಅವರಿಗೆ ಆಶ್ವಾಸನೆಯನ್ನು ಕೊಟ್ಟಿದ್ದರು. ಆದರೆ, ಅವರಿಗೆ ತಮ್ಮ ಈ ಮಾತನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಬರೆಯಬೇಕೆಂಬ ಮನಸ್ಸೇ ಮತ್ತೆ ಬರಲಿಲ್ಲ. ಇಷ್ಟಾಗಿಯೂ, " 'ಶೇಷ ಪರಿಚಯ'ವನ್ನು ಬರೆದು ಮುಗಿಸಲು ನನಗೆ ಕಾಲಾವಕಾಶವನ್ನು ಕೊಡು. ನನ್ನ ಹೊರತು ಬೇರೆ ಯಾರೂ ಅದನ್ನು ಪೂರ್ಣಗೊಳಿಸಲಾರರು" ಎಂದು ಅವರು ಮೃತ್ಯುಶಯ್ಯೆಯಲ್ಲಿಯೂ ಅನೇಕ ಸಲ ಹೇಳಿಕೊಂಡಿದ್ದರು.

ಆದರೆ, ಅವರ ಈ ಕೋರಿಕೆಯನ್ನು ವಿಧಿ ಅಂಗೀಕರಿಸಲಿಲ್ಲ. ಅದನ್ನು ಪೂರೈಸುವ ಹೊಣೆ ರಾಧಾರಾನೀ ದೇವಿ ಅವರ ಪಾಲಿಗೆ ಬಂತು. ಇದರ ಬಗ್ಗೆ ಅವರು ಮಾವ ಸುರೇಂದ್ರನಾಥರು ಮತ್ತು ಕವಯಿತ್ರಿ ರಾಧಾರಾನಿಯವರೊಂದಿಗೆ ಅನೇಕ ಸಲ ಚರ್ಚಿಸಿದ್ದರು. ಭಾಗಲ್ಪುರದಲ್ಲಿ ನಿಜವಾಗಿಯೂ ನಡೆದ ಘಟನೆಯೊಂದು ಇದಕ್ಕೆ ಆಧಾರವಾಗಿತ್ತು. ಇದರ ನಾಯಿಕೆಯಾದ ಸವಿತಾ ಗಂಡನಲ್ಲಿ ಸಂಪೂರ್ಣವಾಗಿ ಅನುರಕ್ತಳಾಗಿದ್ದಂಥವಳು. ಆದರೂ, ಒಂದು ದಿವಸ ಆಕೆ ದೂರದ ನಂಟನೊಬ್ಬನೊಂದಿಗೆ, ಒಂದು ಕ್ಷಣದ ಮಟ್ಟಿಗೂ ತನ್ನ ಗಂಡ ಮತ್ತು ಮಗಳ ಮರ್ಯಾದೆಯ ಬಗ್ಗೆ ಕಿಂಚಿತ್ತು ಯೋಚಿಸದೆ, ಘೋರ ಕಳಂಕವನ್ನು ಸಹಜ ಭಾವದಿಂದ ಸ್ವೀಕರಿಸಿ, ಹೊರಟು ಹೋಗುತ್ತಾಳೆ. ಯಾರೊಡನೆ ಅವಳು ಓಡಿಹೋಗುತ್ತಾಳೋ ಅವನ ವಿಷಯದಲ್ಲಿ ಅವಳಿಗೆ ಒಂದಿಷ್ಟೂ ಪ್ರೀತಿಯಿಲ್ಲ. ಮೊದಲಾಗಲೀ, ಆಮೇಲಾಗಲೀ ಅವಳು ಎಂದೂ ಅವನನ್ನು ಪ್ರೀತಿಸಲಿಲ್ಲ. ಇಷ್ಟಾಗಿಯೂ ಅವಳೇಕೆ ಕಾಲುಜಾರಿದಳು ? 'ಶೇಷ ಪರಿಚಯ'ದಲ್ಲಿ ಇರುವುದು ಇದೇ ಸಮಸ್ಯೆ. ಸಮಸ್ಯೆಯನ್ನು ಎತ್ತಿಕೊಳ್ಳುವುದರಲ್ಲಿ ಶರತ್‌ಚಂದ್ರಗೆ ನಂಬಿಕೆ ಇತ್ತೇ ಹೊರತು ಅದಕ್ಕೆ ಸಮಾಧಾನವನ್ನು ಸೂಚಿಸುವುದರಲ್ಲಲ್ಲ. ಈ ಅಪೂರ್ಣ ಕಾದಂಬರಿಯಲ್ಲಿ ಸಮಸ್ಯೆ ನಮ್ಮ ಮುಂದೆ ಬರುತ್ತದೆ; ಆದರೆ, ಸ್ಪಷ್ಟವಾಗಿ ಏನೂ ಅರ್ಥವಾಗುವುದಿಲ್ಲ. ಒಂದೆಡೆ ಸವಿತಾ ಹೀಗೆನ್ನುತ್ತಾಳೆ: "ಅದಲ್ಲ ಒಮ್ಮೆಗೇ ಸಂಪೂರ್ಣವಾಗಿ, ಅಕಾರಣವಾಗಿ, ನಿರರ್ಥಕತೆಯಲ್ಲಿ ಆಗಿಬಿಡುತ್ತದೆ" ಈ ಹೇಳಿಕೆಯಲ್ಲಿ ಸತ್ಯಾಂಶವಿದೆ. ಆದರೆ, ಕಾದಂಬರಿ ಪೂರ್ಣವಾಗದೆ ಇರುವುದರಿಂದ, ಈ ಪರಿಹಾರವನ್ನು ಶರತ್‌ಚಂದ್ರರ ಕೊನೆಯ ತೀರ್ಮಾನವೆಂದು ಭಾವಿಸಲಾಗುವುದಿಲ್ಲ.

'ಆಗಾಮೀ ಕಲ್' (ಬರಲಿರುವ ನಾಳೆ) ಕಾದಂಬರಿಯ ನಾಲ್ಕು ಅಧ್ಯಾಯಗಳನ್ನಷ್ಟೇ ಬರೆಯಲು ಸಾಧ್ಯವಾಗಿತ್ತು. ರಾಜಕೀಯದಲ್ಲಿ ನಿಂತ ನೀರಿನ ಪರಿಸ್ಥಿತಿ ಉಂಟಾಗಿಬಿಟ್ಟಿದ್ದುದು ಶರತ್‌ಚಂದ್ರರಿಗೆ ತುಂಬ ಬೇಸರವನ್ನು ಉಂಟುಮಾಡಿತ್ತು. ಈ ಕಾದಂಬರಿಯಲ್ಲಿ ಆ ಬೇಸರದ ಇಣುಕು ನೋಟ ಕಾಣದೊರೆಯುತ್ತದೆ. ಸಮಾಜಕಲ್ಯಾಣದ ಬಗ್ಗೆ ಹೆಚ್ಚಿನ ಒಲವು ಇರುವಂತೆ ಕಾಣುತ್ತದೆ.

ಈ ಅವಧಿಯಲ್ಲಿ, ಒಬ್ಬರಿಗಿಂತಲೂ ಹೆಚ್ಚು ವ್ಯಕ್ತಿಗಳು ಲೇಖಕರಾಗಿದ್ದ ಎರಡು ಕಾದಂಬರಿಗಳು ಹೊರಬಂದುವು. ಈ ಬಗೆಯ ಸಹಕರ್ತೃತ್ವದ ಕಾದಂಬರಿಯಾದ

---

1. ಕೊನೆಯ ಕಂತು ಫೆಬ್ರುವರಿ 1935ರಲ್ಲಿ ಪ್ರಕಟವಾಗಿತ್ತು.

'ರಸಚಕ್ರ' ಎಂಬುದರ ಸುಮಾರು ಹತ್ತು ಪುಟಗಳನ್ನು ಮಾತ್ರ ಅವರು ಬರೆದಿದ್ದರು. 'ಬಾಡಿರಕರ್ತಾ' ಎಂಬ ಹೆಸರಿನಲ್ಲಿ ಅವರು ಒಂದು ಕಾದಂಬರಿಯನ್ನು ಬರೆಯ ಬೇಕೆಂದಿದ್ದರು. ಆದರೆ, ಅವರೀಗ ಯಾವುದೇ ದೊಡ್ಡ ಕೆಲಸವನ್ನು ಹಮ್ಮಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಆದ್ದರಿಂದ, ಇದನ್ನು ಸಹಕರ್ತೃತ್ವದ ಕಾದಂಬರಿಯಾಗಿ ಪೂರ್ಣಗೊಳಿಸುವ ತೀರ್ಮಾನವನ್ನು ಕೈಗೊಳ್ಳಲಾಯಿತು. ಹದಿನಾರು ವರ್ಷಗಳಷ್ಟು ಹಿಂದೆ ಈ ಭಾಗ ಕೇದಾರನಾಥ ಬಂದೋಪಾಧ್ಯಾಯರು ಸಂಪಾದಕರಾಗಿದ್ದ ಕಾಶಿಯ 'ಪ್ರವಾಸ ಜ್ಯೋತಿ' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಮುಂದೆ ಅಲ್ಲಿಯ 'ಉತ್ತರಾ' ಪತ್ರಿಕೆಯಲ್ಲಿ ಸಹಕರ್ತೃತ್ವದ ಕಾದಂಬರಿಯಾಗಿ ಅದು ಪ್ರಕಟವಾಯಿತು.[1] 'ರಸಚಕ್ರ' ಸಾಹಿತ್ಯಿಕ ಸಂಸ್ಥೆಯ ಆಶ್ರಯದಲ್ಲಿ ಹೊರಬಂದುದರಿಂದ ಸಾಕಷ್ಟು ಹೆಸರನ್ನೂ ಗಳಿಸಿತು. 'ಭಾಲೋಮಂದ್' ಕೂಡ ಈ ಬಗೆಯ ಇನ್ನೊಂದು ಸಹಕರ್ತೃತ್ವದ ಕಾದಂಬರಿಯೇ. ಇದರ ಮೊದಲ ಒಂಬತ್ತು ಪುಟಗಳನ್ನು ಶರತ್‌ಚಂದ್ರರು ಬರೆದಿದ್ದರು. ಇದು ಅವರ ಬಾಳಿನ ಕೊನೆಯ ಕೃತಿಯಾಗಿತ್ತು.[2] ಇದು ಅವಿನಾಶ ಘೋಷಾಲ್ ಅವರ ಸಂಪಾದಕತ್ವದ 'ವಾತಾಯನ' ಪತ್ರಿಕೆಯ ಶರತ್ಕಾಲೀನ ವಿಶೇಷಾಂಕದಲ್ಲಿ ಪ್ರಕಟವಾಗಿತ್ತು. ಹದಿನಾರು ವರ್ಷಗಳಷ್ಟು ಹಿಂದೆ ಇಂಥ ಇನ್ನೊಂದು ಕಾದಂಬರಿ 'ಭಾರತೀ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಶರತ್‌ಚಂದ್ರರು ಇದರ ಕೊನೆಭಾಗವನ್ನು ಬರೆದಿದ್ದರು.

ಅವರ ಸಾಹಿತ್ಯಿಕ ಜೀವನದ ಕೊನೆಯ ಅಂಗವೂ ಕೊನೆಗೊಳ್ಳುವುದರಲ್ಲಿತ್ತು. ನನ್ನ ಸಾಹಿತ್ಯಿಕ ಜೀವನದಲ್ಲಿ ನಾಲ್ಕು ಘಟ್ಟಗಳಿವೆ ಎಂದು ಸ್ವತಃ ಅವರೇ ಹೇಳಿಕೊಂಡಿದ್ದರು. ಮೊದಲ ಘಟ್ಟದಲ್ಲಿ ಅವರು 'ಬಡೀ ದೀದೀ' ಮತ್ತು 'ದೇವದಾಸ್' ಮೊದಲಾದ ಕಾದಂಬರಿಗಳನ್ನು ಬರೆದಿದ್ದರು. ಅದು ಯೌವನದ ಮೆಲುಸಿರಿನ ಹಾಗೂ ಭಯಂಕರ ಭಾವುಕತೆಯ ಅವಧಿಯಾಗಿತ್ತು.

ಎರಡನೆಯ ಘಟ್ಟದಲ್ಲಿ ಅಸಂಯತವಾದ ಭೀಷಣ ಭಾವುಕತೆ ಸಂಯತವಾದ ಸಂವೇದನೆಯಾಗಿ ಬದಲಾಗುತ್ತದೆ. 'ಪರಿಣೀತಾ', 'ರಾಮೇರ್ ಸುಮತಿ', 'ಚರಿತ್ರಹೀನ', 'ಶ್ರೀಕಾಂತ' ಮೊದಲಾದ ಅವರ ಕೃತಿಗಳು ಜೀವನದ ಅನುಭೂತಿಯಿಂದ ತುಂಬಿತುಳುಕುತ್ತಿವೆ. ಮೂರನೆಯ ಘಟ್ಟದಲ್ಲಿ ಕಲೆ ಪ್ರೌಢವಾಗಿ ಪರಿಣಮಿಸಿದೆ. 'ದತ್ತಾ' ಮತ್ತು 'ಗೃಹದಾಹ'ದಂಥ ಕೃತಿಗಳು ಈ ಅವಧಿಯ ಕೊಡುಗೆಗಳು.

ಕೊನೆಯ ಘಟ್ಟದಲ್ಲಿ ಅವರು ಹೊಸ ಯುಗದ ಸವಾಲನ್ನು ಸ್ವೀಕರಿಸುವಂತೆ ಕಾಣುತ್ತದೆ. ಅವರಲ್ಲಿ ಶಕ್ತಿಯಿತ್ತು. ಆಲೋಚನೆಗಳೂ ಇದ್ದುವು. ಆದರೆ, ಈ ಅವಧಿಯ ಕೃತಿಗಳಲ್ಲಿ ಅನುಭೂತಿಯ ಸಹಜತೆ ಇಲ್ಲ. ವೈಚಾರಿಕ ಆಲೋಚನೆ ಆಯಾಸಪೂರ್ಣವಾಗಿ ಸಾಗುತ್ತದೆ. ಇದು ಕಲೆಯನ್ನು ಹಿಂದೆ ತಳ್ಳಿ, ತಾನೇ ಪ್ರಮುಖವಾಗಿ ಮೆರೆದುಬಿಟ್ಟಿದೆ. 'ಪಥೇರ್ ದಾಬೀ' ಮತ್ತು 'ಶೇಷ ಪ್ರಶ್ನೆ' ಈ ಅವಧಿಯಲ್ಲಿ ರಚಿತವಾದ ಕೃತಿಗಳು.

---

1. 11 ವೈಶಾಖ 1343 (ಏಪ್ರಿಲ್ 1936)
2. ಅಕ್ಟೋಬರ್ 1, 1937 (15 ಆಶ್ವಿನ 1344)

ಶರತ್‌ಚಂದ್ರರು ಮಕ್ಕಳನ್ನು ತುಂಬ ಪ್ರೀತಿಸುತ್ತಿದ್ದರು. ಆದರೆ, ಇದುವರೆಗೆ ಅವರು ಮಕ್ಕಳಿಗಾಗಿ ಏನನ್ನೂ ಬರೆದಿರಲಿಲ್ಲ. ಈ ಕೊನೆಯ ಘಟ್ಟದಲ್ಲಿ ಅವರು ಮಕ್ಕಳಿಗಾಗಿ ಕೆಲವು ಕಥೆಗಳನ್ನು ಬರೆದದ್ದು ಆಶ್ಚರ್ಯದ ಸಂಗತಿಯೇ. ಅವುಗಳಲ್ಲಿ ಪ್ರಸಿದ್ಧವಾದುವೆಂದರೆ 'ಲಾಲೂ 1', 'ಲಾಲೂ 2', 'ಕಲ್ಕತ್ತಾದ ಹೊಸ ಅಣ್ಣಯ್ಯ', ಐವತ್ತು ವರ್ಷಗಳ ಹಿಂದಿನ ಒಂದು ದಿನದ ಕಥೆಯಾದ 'ಛೇಲೇಧರಾ' ಮತ್ತು 'ಲಾಲೂ 3'. 'ಕಲ್ಕತ್ತಾದ ಹೊಸ ಅಣ್ಣಯ್ಯ' ಎಂಬುದು 'ಶ್ರೀಕಾಂತ' ಕಾದಂಬರಿಯ ಮೊದಲ ಭಾಗದ ಮೊದಲನೆಯ ಅಧ್ಯಾಯದಿಂದ ಆಯ್ದುಕೊಳ್ಳಲಾಗಿರುವ ಕಥೆ. ಈ ಕಥೆಗಳ ಸಂಕಲನ ಹೊರಬಂದಾಗ, ಅದಕ್ಕೆ ಬರೆದ 'ಮೊದಲ ಮಾತಿ'ನಲ್ಲಿ ಅವರು ಹೀಗೆಂದು ಹೇಳಿದ್ದಾರೆ: "ಇದಕ್ಕೆ ಮೊದಲು ನಿಮಗಾಗಿ ನಾನೇನೂ ಬರೆದಿಲ್ಲ. ನಿಮ್ಮ ಮೆಚ್ಚಿನ ಲೇಖಕರು, ನಿಮಗಾಗಿ ಸಾಹಿತ್ಯ ರಚನೆ ಮಾಡುವುದು ತುಂಬ ಕಷ್ಟವೆಂದು ಹೇಳುವುದನ್ನು ಕೇಳಿದ್ದೇನೆ. ಆದರೂ ನಾನು ಕೆಲವು ಕಥೆಗಳನ್ನು ಬರೆಯುವಂತೆ ಸಂಪಾದಕರು ಒತ್ತಾಯ ಮಾಡಿದ್ದಾರೆ. ಇದು ಕುಂಬಾರನಿಗೆ ಕೊಡಲಿಯನ್ನು ಮಾಡುವಂತೆ ಹೇಳಿದ ಹಾಗಾಗಿದೆ. ಈ ಕಷ್ಟಕ್ಕೆ ಸಿಕ್ಕಿಕೊಂಡಿದ್ದಾಗ ಗೆಳೆಯನೊಬ್ಬನ ನೆನಪು ಬಂತು. ಅವನ ಒಂದೆರಡು ಮಾತುಗಳನ್ನೇ ಹೇಳಿಬಿಡೋಣ ಎಂದುಕೊಂಡಿದ್ದೇನೆ. ಅವನ್ನು ಕೇಳಿದಾಗ ನಿಮಗೆ ಸಂತೋಷವಾಗುತ್ತದೆ. ಚೆನ್ನಾಗಿಯೇ ಇವೆ."[1]

ಈ 'ಮೊದಲ ಮಾತಿ'ನಲ್ಲಿ ಶರತ್‌ಚಂದ್ರರು ಉಲ್ಲೇಖಿಸಿರುವ ಬಾಲ್ಯದ ಗೆಳೆಯನೇ ಲಾಲೂ 'ಲಾಲೂ' ಎಂದರೆ ಮುದ್ದಿನ, ಪ್ರಿಯ ಎಂದು ಅರ್ಥ. ಇದರ ಬಗ್ಗೆ ಅವರು ಹೀಗೆಂದು ಬರೆದಿದ್ದಾರೆ: "ಈ ಹೆಸರನ್ನು ಯಾರು ಅವನಿಗೆ ಕೊಟ್ಟರೋ ಏನೋ ತಿಳಿಯದು. ಆದರೆ, ಮನುಷ್ಯನೊಂದಿಗೆ ಇಷ್ಟು ಚೆನ್ನಾಗಿ ಹೊಂದಿಕೊಳ್ಳುವಂಥ ಇನ್ನೊಂದು ಮಾತು ಎಲ್ಲಿಯೂ ಸಿಕ್ಕುವುದಿಲ್ಲ. ಅದು ಎಲ್ಲರಿಗೂ ಪ್ರಿಯವಾಗಿತ್ತು."

'ಶ್ರೀಕಾಂತ' ಕಾದಂಬರಿಯಲ್ಲಿನ ಇಂದ್ರನಾಥನೇ ಈ 'ಲಾಲೂ'. ಇವನು ಅವರ ಬಾಲ್ಯದ ನೆಚ್ಚಿನ ಗೆಳೆಯನಾದ ರಾಜೇಂದ್ರನಾಥನೂ ಹೌದು. 'ಲಾಲೂ' ಎಂಬ ಶೀರ್ಷಿಕೆಯನ್ನು ಹೊಂದಿರುವ ಈ ಮೂರು ಕಥೆಗಳಲ್ಲಿಯೂ ರಾಜೇಂದ್ರನಾಥನ ಕಥೆಯೇ ಇದೆ. ಈ ಕಥೆಗಳನ್ನು ಬರೆಯುವ ಮೂಲಕ ಅವರು ತಮ್ಮ ಬಾಲ್ಯದ ನೆಚ್ಚಿನ ಗೆಳೆಯನ ಹಾಗೂ 'ಗುರು'ವಿನ ಋಣವನ್ನು ತೀರಿಸುವ ಪ್ರಯತ್ನ ಮಾಡಿದ್ದಾರೆ.

ಈ ದಿನಗಳಲ್ಲಿ ಹಣಕಾಸಿನ ಮುಗ್ಗಟ್ಟು ತೀವ್ರವಾಗಿತ್ತು. ಕಾಸಿಲ್ಲದೆ ಚಿಕಿತ್ಸೆ ದೊರೆಯುವುದಾದರೂ ಹೇಗೆ ಸಾಧ್ಯ? ಆದ್ದರಿಂದ ಈ ಕಥೆಯ ಹಕ್ಕುಗಳನ್ನು ಅವರು ಸುಧೀರಚಂದ್ರ ಸರ್ಕಾರ್ ಅವರಿಗೆ ಒಂದು ಸಾವಿರ ರೂಪಾಯಿಗಳಿಗೆ ಬಿಟ್ಟುಕೊಟ್ಟರು.

ಬಾಳಿನ ಸಂಜೆಯಲ್ಲಿ ಬಾಲ್ಯದ ನೆನಪಾಗುವುದು ತುಂಬ ಸಹಜ ಸಂಗತಿ. ಆದರೆ,

---

1. ಬಹುತೇಕವಾಗಿ ಈ ಕಥೆಗಳನ್ನು 1937ರಲ್ಲಿಯೇ ಬರೆಯಲಾಯಿತು. ಸಂಕಲನವು ಅವರ ಸಾವಿನ ತರುವಾಯ ಏಪ್ರಿಲ್ 1938 ರಲ್ಲಿ ಪ್ರಕಟವಾಯಿತು.

ಬಾಲ್ಯದ ತಮ್ಮ ಇನ್ನೊಂದು ಕೃತಿಯನ್ನು ತಾವು ಬದುಕಿರುವವರೆಗೂ ಪ್ರಕಟಪಡಿಸಿರಲಿಲ್ಲ. ಅದೇ 'ಶುಭದಾ'. ತಮ್ಮ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಇದನ್ನು ಬರೆದಿದ್ದರು.[1] 'ಬಾಲ್ಯ ಸ್ಮೃತಿ' ಎಂಬ ಪ್ರಬಂಧದಲ್ಲಿ ಅವರು ಇದರ ಬಗ್ಗೆ ಹೀಗೆ ಬರೆದಿದ್ದಾರೆ: "ಬಾಲ್ಯದಲ್ಲಿ ಬರೆದ ನನ್ನ ಅನೇಕ ಪುಸ್ತಕಗಳು ಅಲ್ಲಿ-ಇಲ್ಲಿ ಉಳಿದುಹೋಗಿವೆ. ಅವುಗಳೆಲ್ಲವುಗಳ ಹೆಸರೂ ನನಗೆ ನೆನಪಿಲ್ಲ. ಎರಡು ಪುಸ್ತಕಗಳು ಹಾಳಾಗಿ ಬಿಟ್ಟುದರ ವಿವರಗಳು ಮಾತ್ರವೇ ನನಗೆ ಗೊತ್ತಿವೆ. ಒಂದರ ಹೆಸರು 'ಅಭಿಮಾನ' ಎಂದಾಗಿತ್ತು. ಅದು ಸಾಕಷ್ಟು ದೊಡ್ಡ ಪುಸ್ತಕವೂ ಆಗಿತ್ತು. ಅನೇಕ ಗೆಳೆಯರ ಕೈದಾಟಿ ಕೊನೆಗೆ ಅದು ಬಾಲ್ಯದ ಗೆಳೆಯರಾಗಿದ್ದ ಕೇದಾರಸಿಂಹ ಅವರ ಕೈಸೇರಿತ್ತು. ಬಹು ದಿನಗಳ ವರೆಗೆ ಅವರು ಬಹು ವಿಧವಾದ ಮಾತುಗಳನ್ನಾಡುತ್ತಿದ್ದರೂ, ಆ ಪುಸ್ತಕ ಮಾತ್ರ ನನಗೆ ಮತ್ತೆ ದೊರೆಯಲೇ ಇಲ್ಲ..... ಇನ್ನೊಂದು ಪುಸ್ತಕದ ಹೆಸರು 'ಶುಭದಾ' ಎಂದಾಗಿತ್ತು. ಮೊದಲ ಘಟ್ಟದಲ್ಲಿ ನಾನು ಬರೆದ ಪುಸ್ತಕಗಳಲ್ಲಿ ಅದು ಕೊನೆಯದಾಗಿತ್ತು. ಅಂದರೆ, 'ಬಡೀ ದೀದೀ', 'ಚಂದ್ರನಾಥ', 'ದೇವದಾಸ್' ಮೊದಲಾದುವುಗಳ ಬಳಿಕ ಅದನ್ನು ಬರೆದಿದ್ದೆ.

'ಅಭಿಮಾನ' ಕಳೆದು ಹೋದುದರ ಬಗ್ಗೆಯೇನೋ ಶರತ್‌ಚಂದ್ರರು ವಿವರಗಳನ್ನು ಕೊಟ್ಟಿದ್ದಾರೆ. ಆದರೆ, 'ಶುಭದಾ' ಎಲ್ಲಿ ಮತ್ತು ಹೇಗೆ ಕಳೆದುಹೋಯಿತು ಎಂಬುದರ ಬಗ್ಗೆ ಅವರು ಯಾವುದೇ ವಿವರಣೆಯನ್ನು ಕೊಟ್ಟಿಲ್ಲ. ಕೆಲವರು ಇದು ಕಳೆದುಹೋಯಿತೆಂಬ ಮಾತನ್ನು ನಂಬಿಯೂ ಇದ್ದರು. ಆದರೆ, ಇದು ಸತ್ಯವಲ್ಲ. 'ಶುಭದಾ'ದ ಹಸ್ತಪ್ರತಿ ಯಾವಾಗಲೂ ಅವರ ಬಳಿಯಲ್ಲೇ ಇತ್ತು. ಇದನ್ನು ಸುಟ್ಟುಬಿಡಬೇಕೆಂದು ಅವರು ಒಮ್ಮೆ ರಾಮಕೃಷ್ಣನಿಗೆ[2] ಸೂಚನೆಕೊಟ್ಟಿದ್ದರು. ಆದರೆ, ಆತ ಹಾಗೆ ಮಾಡಲಿಲ್ಲ. ಆತ ಸುಳ್ಳು-ಪಳ್ಳು ಹೇಳಿ ಅವರನ್ನು ನಂಬಿಸಿದ ಹಾಗೂ ಆ ಪುಸ್ತಕವನ್ನು ಬಚ್ಚಿಟ್ಟ. ಇದಕ್ಕೆ ಒಂದು ಕಾರಣವೂ ಇತ್ತು. "ನೀವು ಇದನ್ನೇಕೆ ಸುಟ್ಟು ಹಾಕಬಯಸುತ್ತೀರಿ?" ಎಂದು ಆತ ಶರತ್‌ಚಂದ್ರರನ್ನು ಪ್ರಶ್ನಿಸಿದ್ದ.

ಶರತ್‌ಚಂದ್ರರು ಹೇಳಿದ್ದರು: "ಇದನ್ನು ಸುಡಲೇ ಬೇಕು. ಈ ಪುಸ್ತಕವನ್ನೇನಾದರೂ ಹೊರತಂದರೆ ಒಬ್ಬ ವ್ಯಕ್ತಿ ತಿರಸ್ಕಾರಕ್ಕೆ ಪಾತ್ರರಾಗಿಬಿಡುತ್ತಾರೆ."

ಆವ್ಯಕ್ತಿ ಯಾರೆಂಬ ರಹಸ್ಯವನ್ನು ರಾಮಕೃಷ್ಣ ಪತ್ತೆ ಹಚ್ಚಲಾರದೆ ಹೋದರು. ಆದರೆ, ಪುಸ್ತಕ ಸುಡಲು ಯೋಗ್ಯವಾದುದಲ್ಲ ಎಂಬುದನ್ನು ಅರ್ಥಮಾಡಿಕೊಂಡರು. ಒಂದು ದಿವಸ ಏನನ್ನೋ ಹುಡುಕುವಾಗ ಆಕಸ್ಮಿಕವಾಗಿ ಅದರ ಹಸ್ತಪ್ರತಿ ಮತ್ತೆ ಅವರ ಕಣ್ಣಿಗೆ ಬಿತ್ತು. ಆದರೆ, ಅದೇನು ಆಲೋಚನೆ ಬಂತೋ, ಅದನ್ನು ಅವರು ಹಾಳು ಮಾಡಲಾರದೆ ಹೋದರು.

ಅವರ ಈ ಪುಸ್ತಕದ ಬಗ್ಗೆ ಅವರ ಕೆಲವು ಮಿತ್ರರಿಗೂ ಗೊತ್ತಿತ್ತು. ಅವರು ಅನೇಕ ವೇಳೆ ಅವರನ್ನು ಈ ಕೃತಿಗೆ ಸಂಬಂಧಿಸಿದಂತೆ ಗೋಳು ಹುಯ್ದುಕೊಳ್ಳುತ್ತಿದ್ದರು. ಅದರಲ್ಲಿಯೂ ಅವಿನಾಶಚಂದ್ರ ಘೋಷಾಲರು ಅದನ್ನು ಓದಲು ತುಂಬ

---

1. ಜೂನ್ 20ರಿಂದ ಸೆಪ್ಟೆಂಬರ್ 26, 1898.

2. ಅನಿಲಾ ದೇವಿಯವರ ಭಾವಮೈದುನನ ಮಗ. ಈತ ಇವರ ಬಳಿಯಲ್ಲಿಯೇ ಇದ್ದ.

ಉತ್ಸುಕರಾಗಿದ್ದರು. ಅನೇಕ ಸಲ ಒತ್ತಾಯಿಸಿದ ಮೇಲೆ ಶರತ್‌ಚಂದ್ರರು ಆ ಹಸ್ತಪ್ರತಿಯನ್ನು ಓದಲು ಅವಿನಾಶಚಂದ್ರರಿಗೆ ಕೊಡುವುದಾಗಿ ಒಪ್ಪಿಕೊಂಡರು. ಆದರೆ, ಗೊತ್ತುಪಡಿಸಿದ್ದ ಸಮಯಕ್ಕೆ ಸರಿಯಾಗಿ ಅವರು ಅವರ ಮನೆಗೆ ಹೋದಾಗ ಶರತ್‌ಚಂದ್ರರೆಂದರು: "ಅವಿನಾಶ್, ಎಲ್ಲವೂ ಮುಗಿದುಹೋಯಿತು!"

ತಮ್ಮ ಮಗನ ಸಾವಿನ ಸುದ್ದಿಯನ್ನು ತಿಳಿಸುತ್ತಿದ್ದಾರೋ ಎಂಬಂತಿತ್ತು ಆಗಿನ ಅವರ ಭಾವಭಂಗಿ. ಅವರು ಒಳಗೆ ಹೋಗಿ, ಕಾಗದಗಳನ್ನು ಸುಟ್ಟು ಬೂದಿ ತುಂಬಿದ್ದ ಒಂದು ಡಬ್ಬವನ್ನು ತಂದು ಅವಿನಾಶಚಂದ್ರರಿಗೆ ತೋರಿಸಿದರು. "ನೀನು ನಂಬುವುದಿಲ್ಲ ಎಂದೇ ಇದನ್ನು ಇರಿಸಿದ್ದೇನೆ."

ಇದರ ಹಿಂದೆ ಇರುವ ರಹಸ್ಯವಾದರೂ ಏನು? ಅವರು ರಾಮಕೃಷ್ಣನೊಂದಿಗೆ ಹೇಳಿದ್ದಂತೆ, ಅದು ಹೊರಬಂದರೆ ಯಾರೋ ಒಬ್ಬರು ತಿರಸ್ಕಾರಕ್ಕೆ ಪಾತ್ರವಾಗಿ ಬಿಡುವ ಸಂಭವ ನಿಜವಾಗಿಯೂ ಇತ್ತೆ? ಅಥವಾ ಬೇರೆ ಯಾವುದಾದರೂ ಕಾರಣದಿಂದಾಗಿ ಅವರು ಅದನ್ನು ಪ್ರಕಟಣೆಗೆ ಕೊಡಲು ಇಚ್ಛಿಸುತ್ತಿರಲಿಲ್ಲವೆ? ಅದರಲ್ಲಿ ಅವರು ಬಡತನದ ಹೃದಯಸ್ಪರ್ಶಿ ಚಿತ್ರವನ್ನು ಕೊಟ್ಟಿದ್ದರು. ಅದು ಕೇವಲ ಕಲ್ಪನೆಯ ಸೃಷ್ಟಿಯಾಗಿರಲಿಲ್ಲ. ಅದರಲ್ಲಿ ಪ್ರೌಢ ಕಲಾವಿದನ ಪರಿಪಕ್ವ ದೃಷ್ಟಿ ಇರದೆ ಹೋಗಿರಬಹುದು. ಆದರೆ, ಅದರಲ್ಲಿ ಅವರ ಪ್ರಾರಂಭಿಕ ಜೀವನದ ಸಹಜವಾದ ಅನುಭೂತಿ ಖಂಡಿತವಾಗಿಯೂ ಇತ್ತು. ಆ ಅನುಭೂತಿಗೆ ಆಧಾರವಾಗಿದ್ದುದು ಅವರ ಕುಟುಂಬದ ದಿನದಿನದ ಕಷ್ಟಸುಖಗಳು. ಶರತ್-ಸಾಹಿತ್ಯದ ಎಲ್ಲ ವೈಶಿಷ್ಟ್ಯಗಳ ಬೀಜ ಅದರಲ್ಲಿತ್ತು. ಮೂಲ ನಾರಿಗೆ ದನಿಗೊಟ್ಟಿದ್ದು ಹಾಗೂ ಪತಿತೆ (ಕಾತ್ಯಾಯಿನಿ)ಯ ಹೃದಯಾಂತರಾಳದಲ್ಲಿ ಅಡಗಿದ್ದ ಮಾನವೀಯತೆಯನ್ನು ಅರಸಿದ್ದು - ಇವೆಲ್ಲ ಅದರಲ್ಲಿದ್ದುವು. ಅದರ ಪಾತ್ರಗಳಲ್ಲಿ ಅವರ ತಂದೆ-ತಾಯಿಯರನ್ನು ಗುರುತಿಸುವ ಪ್ರಯತ್ನವನ್ನೂ ಯಾರಾದರೂ ಮಾಡಬಹುದಾಗಿತ್ತು. ಪರಮ ದಾರಿದ್ರ್ಯದ ಚಿತ್ರಣದ ಜೊತೆಗೆ, ತಂದೆಯ ಅಸಮರ್ಥ್ಯತೆ ಹಾಗೂ ತಾಯಿಯ ವೇದನೆಗಳನ್ನು ಚಿತ್ರಿಸುವುದನ್ನೂ ಅವರು ಮರೆತಿರಲಿಲ್ಲ. ಆದರೆ, ಶ್ರೀಕಾಂತನೇ ಹೇಗೆ ಶರತ್‌ಚಂದ್ರರಲ್ಲವೋ, ಹಾಗೆಯೇ 'ಶುಭದಾ'ದಲ್ಲಿನ ಹಾರಾನ್‌ಬಾಬೂ ಅವರು ಮೋತೀಲಾಲರಾಗುವುದಿಲ್ಲ; ಸ್ವತಃ ಶುಭದಾಳೂ ಭುವನ ಮೋಹಿನಿಯಾಗುವುದಿಲ್ಲ. ಆದ್ದರಿಂದಲೇ, ಈ ಪುಸ್ತಕವನ್ನು ಪ್ರಕಟಿಸಲು ಅವಕಾಶ ಕೊಡದೆ ಇದ್ದುದರ ಹಿಂದೆ ಇದೊಂದೇ ಏಕೈಕ ಪ್ರಬಲ ಕಾರಣವಾಗಿದ್ದಿರಲಾರದು.

ಆದರೆ, ತಿರಸ್ಕಾರಕ್ಕೆ ಪಾತ್ರವಾಗುವ ಸಂಭವವಿದೆಯೆಂದು ಭಾವಿಸಿದ್ದ ಆ ವ್ಯಕ್ತಿ ಯಾರು? ಆ ವ್ಯಕ್ತಿಯ ಹೆಸರು ಈಗ ಬಹಿರಂಗವಾಗಿ ಬಿಟ್ಟಿದೆ - ನಿರುಪಮಾ ದೇವಿಯೇ ಆ ವ್ಯಕ್ತಿ. ಈ ಹೆಸರನ್ನು ಕೇಂದ್ರವಾಗಿಸಿಕೊಂಡು ಶರತ್‌ಚಂದ್ರರ ಬಾಳಿಗೆ ಬಗೆಬಗೆಯಾದ ಅಪವಾದಗಳು ಬೆಸೆದುಕೊಂಡುಬಿಟ್ಟಿವೆ. ತಮ್ಮ ಸಾಹಿತ್ಯಿಕ ಜೀವನದ ಮೊದಲಲ್ಲಿ ನಿರುಪಮಾ ದೇವಿಯವರು ಶರತ್‌ಚಂದ್ರರ ಎಲ್ಲ ಕೃತಿಗಳನ್ನೂ ಓದಿದ್ದರು ಹಾಗೂ ಅದರಲ್ಲಿ 'ಶುಭದಾ' ಕೂಡ ಸೇರಿತ್ತು ಎಂಬುದು ಸತ್ಯ. ಅವರ ಮೊದಲ ಕೃತಿಯಾದ 'ಅನ್ನಪೂರ್ಣೆಯ ಮಂದಿರ'ದಲ್ಲಿ 'ಶುಭದಾ'ದ ಪ್ರಭಾವಗೋಚರಿಸುತ್ತದೆ

- ಈ ಮಾತನ್ನು ಸ್ವತಃ ನಿರುಪಮಾ ದೇವಿಯವರೇ ಒಪ್ಪಿಕೊಂಡಿದ್ದಾರೆ:[1] "'ದೀದೀ', 'ಅನ್ನಪೂರ್ಣೆಯ ಮಂದಿರ' ಮೊದಲಾದುವು ಪ್ರಕಟವಾದ ಬಳಿಕ ಹಾಗೂ ಸ್ವತಃ ಶರತ್‌ಚಂದ್ರರು ಪ್ರಸಿದ್ಧರಾದ ತರುವಾಯ, ನಾನು ಶರತ್‌ಚಂದ್ರರಿಂದ ಎಷ್ಟನ್ನು ಸ್ವೀಕರಿಸಿದ್ದೇನೆ, ಅವರ ನೆರವಿನಿಂದ ನಾನು ಯಾವ ಯಾವ ಪುಸ್ತಕಗಳನ್ನು ಬರೆದಿದ್ದೇನೆ, ಅವರೊಡನೆ ಯಾವ ರೂಪದಲ್ಲಿ ಎಷ್ಟು ಸಂಬಂಧ ಇರಿಸಿಕೊಂಡಿದ್ದೇನೆ ಎಂಬುದನ್ನು ತಿಳಿಯಲು ಅನೇಕ ಯುವಕರು ನಾನಾ ಕಡೆಗಳಿಂದ ನನ್ನ ಬಳಿಗೆ ಬರುತ್ತಿದ್ದರು. ಇದರ ಬಗ್ಗೆ ಅವರು ಬಹಳಷ್ಟು ಮಾತುಗಳನ್ನು ಹೇಳುತ್ತಿರುತ್ತಾರೆ. ಇದರಲ್ಲಿ ಆಶ್ಚರ್ಯದ ಸಂಗತಿಯೇನೂ ಇಲ್ಲ. ಅವರು ನನ್ನ ಪ್ರಾರಂಭಿಕ ಜೀವನದ ಸಾಹಿತ್ಯಿಕ ಸಾಧನೆಗೆ ಉತ್ಸಾಹವನ್ನು ನೀಡಿದಂಥ ಗುರುಗಳಾಗಿದ್ದಾರೆ ಎಂಬುದರಲ್ಲಿ ಅನುಮಾನವೇನೂ ಇಲ್ಲ. ಸಾಹಿತ್ಯ ಸಾಮ್ರಾಟರಾದ ಬಂಕಿಮಚಂದ್ರರ ಮತ್ತು ಕವಿಸಾಮ್ರಾಟರಾದ ರವೀಂದ್ರನಾಥ ಠಾಕೂರರ ಕೃತಿಗಳ ಅಧ್ಯಯನದ ಪ್ರಭಾವ ಬಾಲ್ಯದಿಂದ ಮಜ್ಜಾಗತವಾಗಿದೆಯಾದರೂ, ಶರತ್‌ಚಂದ್ರರ ಲೇಖನಗಳಿಂದ ದೊರೆತ ಪ್ರೇರಣೆ ನನ್ನ ಮೇಲೆ ವಿಶೇಷ ಪ್ರಭಾವ ಬೀರಿದೆ ಎಂಬುದರಲ್ಲಿಯೂ ಸಂದೇಹವಿಲ್ಲ. ಈ ಬಗ್ಗೆ ಅನೇಕ ಕಡೆಗಳಲ್ಲಿ ಅನೇಕ ಮಾತುಗಳು ನನ್ನ ಕಿವಿಗೆ ಬಿದ್ದಿವೆ. ಅವುಗಳಲ್ಲಿ 'ಅನ್ನಪೂರ್ಣೆಯ ಮಂದಿರ'ದ ಬಗ್ಗೆ ಮಾತ್ರ ನಾನು ಚರ್ಚಿಸ ಬಯಸುತ್ತೇನೆ. 'ದೀದೀ' ಕಥೆಯನ್ನು ಬರೆದ ಅನೇಕ ವರ್ಷಗಳ ಬಳಿಕ ನಾನು ಅದನ್ನು ಬರೆದೆ..... ಅದನ್ನು ಬರೆಯುವಾಗ ಅಪರೋಕ್ಷ ರೂಪದಲ್ಲಿ ಶರತ್‌ಚಂದ್ರರ 'ಶುಭದಾ'ದ ಭಾಷೆ ನುಸುಳಿಕೊಂಡುಬಿಟ್ಟಿದೆ ಎಂಬುದನ್ನು ನಾನು ಒಪ್ಪಬೇಕಾಗುತ್ತದೆ. ಇದು ನಿಜವಾಗಿಯೂ ಸತ್ಯ. ಕಾವ್ಯವನ್ನು ಬರೆಯುವ ಸಂದರ್ಭದಲ್ಲಿ ಅಸಾಮಾನ್ಯ ಪ್ರತಿಭಾಶಾಲಿಗಳಲ್ಲದವರು ಹೇಗೆ ರವೀಂದ್ರರ ಪ್ರಭಾವದಿಂದ ಮುಕ್ತರಾಗಲು ಸಾಧ್ಯವಾಗಲಾರದೋ ಹಾಗೆಯೇ ಕಥೆಗಳ ಕ್ಷೇತ್ರದಲ್ಲಿ ಶರತ್‌ಚಂದ್ರರ ಪ್ರಭಾವ ನನ್ನ ಮೇಲೆ ಆಗಿದೆ. ಅಂದಿನ ಅರ್ಧಲಿಖಿತ 'ಶುಭದಾ' ಕಾದಂಬರಿಯನ್ನು ಓದಿದ್ದವರಿಗೆ ಶರತ್‌ಚಂದ್ರರ ಲಲನೆ-ವಲನೆಯರಿಗೂ ಸತಿ ಸಾವಿತ್ರಿಗೂ ಎಷ್ಟು ಅಂತರವಿದೆ ಎಂಬುದು ಗೊತ್ತಾಗುತ್ತದೆ. ಶರತ್‌ಚಂದ್ರರ ಶಿಷ್ಯ ಸ್ಥಾನೀಯಳಾಗಿದ್ದರೂ, ಅವರ ಪ್ರತಿಭೆಯನ್ನು ಅನುಸರಿಸುವ ಹಾಗೂ ಅನುಕರಿಸುವ ಸಾಮರ್ಥ್ಯ ನನ್ನಲ್ಲಿಲ್ಲ. ಇದು ನನ್ನ ಕೃತಿಗಳಿಂದ ಸಿದ್ಧವಾಗುತ್ತದೆ."

ಇದರ ಬಗ್ಗೆ ಟೀಕೆ ಮಾಡುತ್ತ ಶರತ್‌ಚಂದ್ರರು ಹೀಗೆ ಬರೆದರು: "ಯಾರು ಯಾರಿಗೆ ಎಷ್ಟರ ಮಟ್ಟಿಗೆ ಋಣಿಗಳಾಗಿದ್ದಾರೆ ಎಂದು ನನ್ನನ್ನೂ ಕೇಳಲಾಗಿದೆ. ಯಾರೂ ಯಾರಿಗೂ ಋಣಿಯಲ್ಲ. ಬಾಲ್ಯದಲ್ಲಿ ಭೇಟಿಯಾದೆವು, ಪರಸ್ಪರ ಪ್ರೋತ್ಸಾಹಿಸಿದೆವು; ಹೊಗಳಿದೆವು. ಇದರಲ್ಲಿ ಋಣವೇನು ಬಂತು? ಚೆನ್ನಾಗಿದೆ ಎನ್ನಿಸಿದರೆ ಚೆನ್ನಾಗಿದೆ ಎಂದೆವು; ಚೆನ್ನಾಗಿಲ್ಲ ಎಂದೆನಿಸಿದರೆ ಮತ್ತೆ ಬರೆಯಲು ಹೇಳಿದೆವು. ಎಂದೂ ತಿದ್ದುಪಡಿ ಮಾಡಲಿಲ್ಲ. ಇದು ಲಿಪಿಬದ್ಧವಾಗಿರಲೆಂದು ಇಷ್ಟು ದಿನಗಳ ಬಳಿಕ ಇದನ್ನು ಬರೆಯುತ್ತಿದ್ದೇನೆ."

ಶರತ್‌ಚಂದ್ರರು ಏನಾದರೂ ಹೇಳಲಿ, ಯಾವ ಕಾರಣಗಳಿಗಾಗಿ ಅವರು

1. 'ಪುರಾತನ ಕಥಾರ್ ಆಲೋಚನಾ': ನಿರುಪಮಾ ದೇವಿ (ಜಯಶ್ರೀ)

'ಶುಭದಾ' ಪ್ರಕಟವಾಗಲು ಅವಕಾಶ ಮಾಡಿಕೊಡಲಿಲ್ಲವೋ ಅವುಗಳಲ್ಲಿ ನಿರುಪಮಾ ದೇವಿಯೂ ಒಂದು ಕಾರಣವಾಗಿದ್ದರು ಎಂಬುದಾಗಿ ನಿರುಪಮಾದೇವಿಯವರ ಈ ಹೇಳಿಕೆಯ ಆಧಾರದ ಮೇಲೆ ಕಲ್ಪಿಸಿಕೊಳ್ಳುವುದು ಅಸಂಗತವೇನೂ ಆಗಲಾರದು. ಯಾವಾಗಲಾದರೂ ಅದರಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿ ಅಚ್ಚಿಸುವುದು ಉಚಿತವಾಗಬಹುದೆಂದು ಅನಂತರದಲ್ಲಿ ಬಹುಶಃ ಅವರೂ ಯೋಚಿಸಿದ್ದಿರಬೇಕು. ಆದ್ದರಿಂದಲೇ, ಹಸ್ತಪ್ರತಿ ಎರಡನೆಯ ಸಲ ಸಿಕ್ಕಾಗ, ಅವರು ಅದನ್ನು ನಾಶಪಡಿಸದೆ ಇದ್ದಿರಬೇಕು.

ಶರತ್‌ಚಂದ್ರರ ಬಾಳಿನಲ್ಲಿ ನಿರುಪಮಾ ದೇವಿಯವರಿಗಿದ್ದ ಸ್ಥಾನವೇನು ಎಂಬುದರ ಬಗ್ಗೆ ನಮಗೆ ಸಾಸಿವೆಕಾಳಿನಷ್ಟು ವಿವರಣೆ ದೊರೆಯದೇ ಇದ್ದರೂ, ಅವರಿಗೆ ಆಕೆಯನ್ನು ಮರೆಯಲಾಗಲಿಲ್ಲ ಎಂಬುದಂತೂ ಸತ್ಯ. ಬರ್ಮಾಕ್ಕೆ ಹೋದ ಬಳಿಕ ಅವರು ಕತ್ತಲಿನಲ್ಲಿದ್ದರು ಎಂದು ಭಾವಿಸಲಾಗಿದೆ. ಆದರೆ, ಅಂಥ ಕತ್ತಲೇನಾದರೂ ನಿಜವಾಗಿಯೂ ಕವಿದುಕೊಂಡಿದ್ದಿತಾದರೂ, 'ಬಡೀ ದೀದೀ'ಯು ಪ್ರಕಟವಾದ ಒಂದು ವರ್ಷದ ಬಳಿಕ[1], ಹಳೆಯ ಸಂಗತಿಗಳನ್ನು ನೆನಪುಮಾಡಿಕೊಳ್ಳುತ್ತ ಅವರು ವಿಭೂತಿಭೂಷಣ್ ಅವರಿಗೆ ಹೀಗೆಂದು ಬರೆದಿದ್ದರು: "ಬೂಡಿಯ (ನಿರುಪಮಾ) ಸುದ್ದಿಯೂ ಸಿಕ್ಕುತ್ತದೆ. ಮನಸ್ಸಿನಲ್ಲಿಯೇ ಅದೆಷ್ಟು ಆಶೀರ್ವಾದ ಮಾಡುತ್ತೇನೆ, ಅದೆಷ್ಟು ಹೆಮ್ಮೆಪಡುತ್ತಿದ್ದೇನೆ ಎಂಬುದು ನನಗೆ ಮಾತ್ರವೇ ಗೊತ್ತು. ಆಕೆ ಬರೆದಿರುವುದರ ಸ್ವಲ್ಪ ಭಾಗವನ್ನು ಮನಸ್ಸಿನಲ್ಲಿಯೇ ನೆನಪುಮಾಡಿಕೊಳ್ಳುತ್ತ ನದಿಯ ತೀರದಲ್ಲಿ, ಹಡಗುಕಟ್ಟೆಯಲ್ಲಿ ಕುಳಿತುಕೊಂಡು ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತೇನೆ. ಬದುಕಿದ್ದರೆ ಒಂದು ಒಳ್ಳೆಯ ಕೃತಿಯನ್ನು ಓದಿನೋಡಿ ಆನಂದಿಸಬಹುದು ಎಂದು ಆಶಿಸುತ್ತೇನೆ. ಬೂಡಿಯ ಪುಸ್ತಕ ಅದೆಷ್ಟು ದಪ್ಪವಾಗಿ ಬಿಟ್ಟಿದೆ! ಒಮ್ಮೆ ಓದಬೇಕು ಎಂದೆನಿಸುತ್ತಿದೆ. ಆಕೆ ಬರೆದು ತಿದ್ದಿ ಹೊಡೆದು ಹಾಕಿರುವ ಕರಡು ಪ್ರತಿ ಇಲ್ಲವೇನು ? ಸದ್ದಿಲ್ಲದೆ ಅದನ್ನು ಕದ್ದು ಒಂದು ಸಲ ನನಗೆ ಕಳಿಸಿಕೊಟ್ಟರೆ, ಮೂರು-ನಾಲ್ಕು ದಿನಗಳ ಒಳಗಾಗಿ ಹುಡುಕಾಡಿದರೆ ಯಾರೋ ಒಬ್ಬ ಒಳ್ಳೆಯ ವ್ಯಕ್ತಿ ಓದುವುದಕ್ಕೆಂದು ತೆಗೆದುಕೊಂಡು ಹೋಗಿದ್ದಾನೆ ಎಂದು ಹೇಳು ಆಗ ಆಕೆ ತುಂಬ ಒದ್ದಾಡುವುದಿಲ್ಲ."

ಇದೇ ಪತ್ರದಲ್ಲಿ ಅವರು ತಮ್ಮ ಒಂದು ಪ್ರಣಯ ಕಥೆಯನ್ನೂ ಉಲ್ಲೇಖಿಸಿದ್ದಾರೆ. ಆ ಕಥೆಗೆ ಯಾವುದೇ ಆಧಾರವೂ ಇಲ್ಲ. ಇಂಥ ಸುದ್ದಿಗಳನ್ನು ಹರಡುವುದು ಅವರ ಸ್ವಭಾವವೇ ಆಗಿಬಿಟ್ಟಿತ್ತು. ನಿರುಪಮಾದೇವಿಯ ಕಿವಿಗೆ ಬೀಳಲೆಂದೇ ಆ ಕಥೆಯನ್ನು ಕಟ್ಟಿರಬಹುದು. ನಿನ್ನಿಂದಾಗಿಯೇ ನನ್ನ ಸ್ಥಿತಿ ಹೀಗಾಗಿ ಬಿಟ್ಟಿದೆಯೆಂದು ತಿಳಿಸುವುದೂ ಬಹುಶಃ ಅವರ ಉದ್ದೇಶವಾಗಿತ್ತೋ ಏನೋ!

ಹೀಗೆ ಇಲ್ಲದೆಯೂ ಇರಬಹುದು. ಆದರೆ, ಆಗಿಂದಾಗ್ಗೆ ಬರೆದ ತಮ್ಮ ಪತ್ರಗಳಲ್ಲಿ ಅವರು ಮತ್ತೆ ಮತ್ತೆ ಅಧಿಕಾರಪೂರ್ವಕವಾಗಿ, ಸ್ನೇಹಮಯವಾಗಿ ನಿರುಪಮಾ ದೇವಿಯವರ ಬಗ್ಗೆ ಚರ್ಚಿಸುತ್ತಾರೆ ಎಂಬುದರಲ್ಲಿ ಸಂದೇಹವೇನೂ ಇಲ್ಲ. ತಮ್ಮ ಒಬ್ಬ ಶಿಷ್ಯೆಯಾದ ಲೀಲಾರಾನೀ ಗಂಗೋಪಾಧ್ಯಾಯ ಅವರಿಗೆ ಅವರು ಹೀಗೆಂದು

---

1. ಫೆಬ್ರುವರಿ 22, 1908.

ಬರೆದಿದ್ದರು: "ಆಕೆ ನನ್ನ ನಿಜವಾದ ಶಿಷ್ಯೆ. ಸೋದರಿಗಿಂತಲೂ ಹೆಚ್ಚಾದವಳು. ಆಕೆಯ ಹೆಸರು ನಿರುಪಮಾ ಎಂದು. ಇಂದಿನ ಸಾಹಿತ್ಯ ಲೋಕದಲ್ಲಿ ನಿನಗೆ ಆಕೆ ಅಪರಿಚಿತಳಾಗಿಯೇನೂ ಇಲ್ಲವೆಂದು ಭಾವಿಸಿದ್ದೇನೆ. 'ದೀದೀ', 'ಅನ್ನಪೂರ್ಣೆಯ ಮಂದಿರ', 'ವಿಧಿ ಲಿಪಿ' ಮೊದಲಾದುವು ಆಕೆಯ ರಚನೆಗಳು. ಇದೇ ಹುಡುಗಿ, ಒಂದು ದಿವಸ ತನ್ನ ಹದಿನಾರನೆಯ ವಯಸ್ಸಿನಲ್ಲಿ ವಿಧವೆಯಾಗಿ ಸ್ತಬ್ಧಳಾಗಿ ಕುಳಿತುಬಿಟ್ಟಾಗ, ವಿಧವೆಯಾಗುವುದು ಹೆಣ್ಣಿನ ಜೀವನದ ಮಹಾ ನಷ್ಟವೇನೂ ಅಲ್ಲ, ಸಧವೆಯಾಗಿರುವುದು ಪರಮ ಸಾರ್ಥಕತೆಯೂ ಅಲ್ಲ, ಈ ಎರಡರಲ್ಲಿ ಯಾವುದೂ ಪರಮ ಸತ್ಯವಲ್ಲ ಎಂದು ಆಕೆಗೆ ಮತ್ತೆ ಮತ್ತೆ ತಿಳಿಯ ಹೇಳಿದೆ. ಆಗಿನಿಂದ ಆಕೆಯನ್ನು ಮನಃಪೂರ್ವಕವಾಗಿ ಸಾಹಿತ್ಯದಲ್ಲಿ ತೊಡಗಿಸಿದೆ. ಆಕೆಯ ಎಲ್ಲ ಬರೆಹಗಳನ್ನೂ ತಿದ್ದಿಕೊಡುತ್ತಿದ್ದೆ[1]; ಕೈಹಿಡಿದು ಬರೆಯುವುದನ್ನೂ ಕಲಿಸಿಕೊಡುತ್ತಿದ್ದೆ. ಆದ್ದರಿಂದ, ಇಂದು ಆಕೆ ಮನುಷ್ಯಳಾಗಿದ್ದಾಳೆ; ಕೇವಲ ಹೆಣ್ಣಾಗಿದ್ದುದರಿಂದ ಮಾತ್ರ ಇದು ಸಾಧ್ಯವಾಗಲಿಲ್ಲ. ಇದು ತುಂಬ ಹೆಮ್ಮೆಯ ಸಂಗತಿ."[2]

"ನಿನ್ನ ಕಾಗದ ಬರೆಯುವ ರೀತಿ ಮತ್ತು ಲೇಖನಗಳನ್ನು ಬರೆಯುವ ಶೈಲಿ - ಇವುಗಳನ್ನು ನೋಡಿದಾಗ ನನಗೆ ಮತ್ತೆ ಮತ್ತೆ ಬೂಡಿಯ (ನಿರುಪಮಾ) ನೆನಪು ಬರುತ್ತದೆ. ನಿಮ್ಮಿಬ್ಬರ ಕೈ ಬರೆಹವೂ ಬಹುಮಟ್ಟಿಗೆ ಒಂದೇ ರೀತಿಯಲ್ಲಿದೆ..... ನಿನ್ನ ಹಸ್ತಪ್ರತಿಯನ್ನು ಓದುವ ಅವಕಾಶ ದೊರೆಯಿತು. ಓದುತ್ತ ಓದುತ್ತ ನನಗೆ ಹೇಗನ್ನಿಸಿತು, ಗೊತ್ತೇನು! ಬೆಲೆ ಬಾಳುವ ವಸ್ತುಗಳ ಒಂದು ಅಂಗಡಿಯಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ವಸ್ತುಗಳನ್ನು ನೋಡಿದಾಗ, ಆ ವಸ್ತುಗಳ ನಿಜವಾದ ಬೆಲೆಯನ್ನು ಬಲ್ಲವನಿಗೆ ಆಗುವಂಥ ವೇದನೆಯೇ ನನಗೂ ಆಯಿತು. ಒಮ್ಮೆ ಅದೇ ಸ್ಥಿತಿಯಲ್ಲಿ ಬೂಡಿಯ ರಚನೆಗಳೂ ಇದ್ದುವು. ನಿನ್ನ ಬಳಿ ತುಂಬ ಬೆಲೆ ಬಾಳುವ ವಸ್ತುಗಳು ಸರಕುಗಳು ಇವೆ. ಆದರೆ, ಅವು ತುಂಬ ವಿಚ್ಛೃಂಖಲವಾಗಿವೆ. ನನ್ನ ವೃತ್ತಿಯೂ ಇದೇ. ಆದ್ದರಿಂದ, ಆಕೆಯಂತೆ ನಿನಗೂ ಕೈಹಿಡಿದು ಕಲಿಸುವುದು ಸಾಧ್ಯವಾಗಿದ್ದರೆ, ಇದಕ್ಕೆ ಮೊದಲು ನಾನು ನಿನಗೆ ಆಶೀರ್ವದಿಸಿದ್ದಂತೆ, ಇಂದು ಅದರ ಕೊಂಬೆ ಕೊಂಬೆಗಳಲ್ಲಿಯೂ ಹೂವು-ಹಣ್ಣುಗಳು ತುಂಬಿ ತೊನೆಯಲು ಹೆಚ್ಚು ಹೊತ್ತು ಹಿಡಿಯುತ್ತಿರಲಿಲ್ಲ ಹಾಗೂ 'ದೀದೀ'ಯ ಶ್ರೇಣಿಯ ಇನ್ನೊಂದು ಪುಸ್ತಕ ಜನರ ಕಣ್ಣಿಗೆ ಬೀಳಲು ತಡವಾಗುತ್ತಿರಲಿಲ್ಲ ಎಂದು ಮತ್ತೆ ಮತ್ತೆ ನನಗೆ ಅನ್ನಿಸುತ್ತಿದೆ."[3]

".....ಬೂಡಿಯ ಬಗ್ಗೆ ನಾನು ತುಂಬ ಆಸೆಯನ್ನಿರಿಸಿಕೊಂಡಿದ್ದೆ. ಆದರೆ, 'ದೀದೀ'ಯನ್ನು ಬಿಟ್ಟು ಆಕೆ ಬೇರೇನನ್ನೂ ಬರೆಯಲಾರದೆ ಹೋದಳು. ಏಕೆ, ಗೊತ್ತೇನು ? ವಾರ-ವ್ರತ, ಜಪ-ತಪ ಮೊದಲಾದುವುಗಳ ಜಂಜಾಟದ ಬೆಂಕಿಯಲ್ಲಿ ಆಕೆಯ ಹೃದಯಾಂತರಾಳದಲ್ಲಿ ಅಡಗಿದ್ದ ಮಾಧುರ್ಯ ದಿನಗಳೆದಂತೆ ಇಂಗಿ ಹೋಯಿತು. ಅತಿರೇಕದಿಂದಾಗಿಯೇ ಖಂಡಿತವಾಗಿಯೂ ಹೀಗಾಯಿತು.

1. ತಿದ್ದಿಕೊಡುತ್ತಿದ್ದ ವಿಚಾರವನ್ನು ಅನಂತರದಲ್ಲಿ ಅವರು ನಿರಾಕರಿಸಿದರು. ನೋಡಿ: ಹಿಂದಿನ ಪುಟ.
2. ಜುಲೈ 24, 1919.
3. ಆಗಸ್ಟ್ 5, 1919.

ಇಲ್ಲವಾಗಿದ್ದಲ್ಲಿ ಹೀಗೇಕೆ ಆಗುತ್ತಿತ್ತು? ಇವುಗಳನ್ನು ಸ್ವಲ್ಪ ಮಟ್ಟಿಗಾದರೂ ಆಚರಿಸದೆ ಇರುವಂಥ ಹೆಂಗಸರು ನಮ್ಮ ಮನೆಗಳಲ್ಲಿ ಇದ್ದಾರೇನು?"[1]

ಒಮ್ಮೆ ವಿಭೂತಿ ಭೂಷಣರು ಅವರನ್ನು ಕಾಣಲು ಬಂದರು. ಭಾಗಲ್ಪುರದ ಬಗೆಗಿನ ಮಾತುಗಳಿಗೆ ಕೊನೆ ಮೊದಲೆಂಬುದೇ ಇರಲಿಲ್ಲ. ಒಮ್ಮೆಗೇ ಶರತ್‌ಚಂದ್ರರು ಕೇಳಿದರು: ಸರಿ, ಪಂಟೂ! ಬೂಡಿ ಈಗಲೂ ಪೂಜಾಪಾಠಗಳಲ್ಲಿಯೇ ಮುಳುಗಿರುತ್ತಾಳೇನು?"

ವಿಭೂತಿ ಭೂಷಣರು ಹೇಳಿದರು: "ಏನು ಮಾಡಿಯಾಳು ಶರತ್? ಬ್ರಾಹ್ಮಣ ವಿಧವೆಯಲ್ಲವೆ? ಮಕ್ಕಳೂ ಇಲ್ಲ, ನನ್ನ ಮಕ್ಕಳನ್ನು ಮತ್ತು ದೇವರ ಮುಖವನ್ನು ನೋಡಿಕೊಂಡು ಹೇಗೋ ದಿನ ಕಳೆಯುತ್ತಾಳೆ. ಬಾಕಿಯದನ್ನೆಲ್ಲ ಮರೆತೇ ಇರಬೇಕಾಗುತ್ತದೆ."

ಶರತ್‌ಚಂದ್ರರೆಂದರು: "ಇಲ್ಲ, ಇಲ್ಲ, ನಾನು ಅದನ್ನೆಲ್ಲ ಹೇಳುತ್ತಿಲ್ಲ. ನಾನು ನಾಸ್ತಿಕನೇನೂ ಅಲ್ಲ. ಆದರೆ, ಸಾಹಿತ್ಯಕ್ಕೆ ತನ್ನ ಕೊಡುಗೆಯನ್ನು ಸಾಕಷ್ಟು ಪ್ರಮಾಣದಲ್ಲಿ ಕೊಡುವ ಶಕ್ತಿ ಆಕೆಯಲ್ಲಿತ್ತು. ಈ ದೇವರ ಬಗೆಗಿನ ಭಯದಿಂದಾಗಿ ಆಕೆಗೆ ನಿಜವನ್ನು ಹೇಳಲಾಗುತ್ತಿಲ್ಲವೆಂದು ತೋರುತ್ತದೆ. ಆಕೆಯಲ್ಲಿ ಅಂತರ್ದೃಷ್ಟಿ ಇದೆ. ಮನುಷ್ಯನನ್ನು ನಿಜವಾದ ರೂಪದಲ್ಲಿ ಕಾಣುವ ಶಕ್ತಿ ಇದೆ. ಆದರೆ, ಇದಕ್ಕೆಲ್ಲ ಧೈರ್ಯಬೇಕಲ್ಲ."

ಫಣೀಂದ್ರ ನಾಥರಿಗೂ ಮತ್ತೆ ಮತ್ತೆ ಹೀಗೆಂದು ಬರೆದಿದ್ದರು: "ನಿರುಪಮಾಳನ್ನು ನಿಮ್ಮ ಗುಂಪಿನತ್ತ ಎಳೆದುಕೊಳ್ಳಲು ಪ್ರಯತ್ನಿಸಿ. ಆಕೆ ನಿಜವಾಗಿಯೂ ಚೆನ್ನಾಗಿ ಬರೆಯುತ್ತಾಳೆ. ಪೇಟೆಯಲ್ಲಿಯೂ ಆಕೆಗೆ ಹೆಸರಿದೆ. ಬಹುತೇಕವಾಗಿ ಆಕೆಯ ರಚನೆಗಳು ನನ್ನ ರಚನೆಗಳಿಗಿಂತಲೂ ಚೆನ್ನಾಗಿರುತ್ತವೆ ಎಂಬುದು ನನ್ನ ಭಾವನೆ."[2]

"ಈಗ ನಿರುಪಮಾಳಿಗೆ ಕಾಗದ ಬರೆದಿದ್ದೇನೆ. 'ಯಮುನಾ' ಪತ್ರಿಕೆಗೆ ವಿಶೇಷವಾಗಿ ನೆರವಾಗಬೇಕೆಂದು ತಿಳಿಸಿದ್ದೇನೆ. ಆಕೆ ಯಾವ ವಿಧದಲ್ಲೂ ನನ್ನ ಅಪ್ಪಣೆಯನ್ನು ಮೀರುವುದಿಲ್ಲವೆಂದು ನನಗೆ ನಂಬಿಕೆ ಇದೆ."[3]

ಸ್ವತಃ ನಿರುಪಮಾ ದೇವಿ ಅವರಿಗೆ ಬರೆದ ಒಂದು ಪತ್ರ ಸಿಕ್ಕಿದೆ.[4] ಅದರಿಂದಲೂ ಈ ಮಾತಿಗೆ ಪುಷ್ಟಿ ದೊರೆಯುತ್ತದೆ. ಅದರಲ್ಲಿ ಅವರು ಹೀಗೆಂದು ಬರೆದಿದ್ದರು: "ಧರ್ಮ-ಕರ್ಮಗಳಲ್ಲಿಯೇ ಮುಳುಗಿ ಹೋಗಿದ್ದರೆ, ನೀನು ಸಾಹಿತ್ಯದ ಅಂಚನ್ನೂ ಅರಸಲಾರೆ. ಆದ್ದರಿಂದ, ಹೀಗೆ ನಿನ್ನನ್ನು ಒತ್ತಾಯಪಡಿಸಿ ಪ್ರತಿತಿಂಗಳೂ ಏನನ್ನಾದರೂ ಬರೆಸಬೇಕೆಂದು ಯೋಚಿಸಿದ್ದೇನೆ.... ನನ್ನ ಮಾತು ಕೇಳಲು ಕಟುವಾಗಿ ತೋರಬಹುದು. ಆದರೆ, ವಾಸ್ತವವಾಗಿಯೂ ನಾನು ನಿನ್ನ ಹಿತವನ್ನು ಬಯಸುವಂಥವನು. ಇದರ ಬಗ್ಗೆ ನಿನಗೆ ಅನುಮಾನವಿರಬಾರದು. ಜೊತೆಗೆ ನಿನ್ನನ್ನು ಮನುಷ್ಯಳಾಗಿಸಿದ್ದೇನಲ್ಲ, ಇದಕ್ಕಾಗಿ ನಾನು ಮನಸ್ಸಿನಲ್ಲಿಯೇ ಹೆಮ್ಮೆ ಪಡುತ್ತಿದ್ದೇನೆ.

---

1. 6 ಭಾದ್ರ 1326 (ಆಗಸ್ಟ್ 22, 1919)
2. ಚೈತ್ರ 1319 ಮಾರ್ಚ್-ಏಪ್ರಿಲ್ 1913.
3. ಸೆಪ್ಟೆಂಬರ್ 30, 1913.
4. ಏಪ್ರಿಲ್ 27, 1917.

ಹೀಗೆ ಹೇಳುವುದು ಸರಿಯಲ್ಲ ಎಂಬುದು ನನಗೆ ಗೊತ್ತಿಲ್ಲವೆಂದೇನೂ ಅಲ್ಲ. ಆದರೆ, ನನ್ನ ದೊಡ್ಡಸ್ತಿಕೆಯನ್ನು ಕೊಚ್ಚಿಕೊಳ್ಳುವ ಲೋಭವನ್ನು ಬಿಡಲಾರೆ. ಮನಸ್ಸಿಗೆ ಬಂದಹಾಗೆ ಒರಟೊರಟಾಗಿ ಹೇಳಿಬಿಡುತ್ತೇನೆ....."

ತಮ್ಮ ಇನ್ನೊಬ್ಬ ಶಿಷ್ಯೆಯೂ ಸುಪರಿಚಿತ ಕವಯಿತ್ರಿಯೂ ಆಗಿದ್ದ ರಾಧಾರಾನಿಯವರೆಗೆ ಬರೆದ ಪತ್ರಗಳಲ್ಲಿ ಅವರು ತಮ್ಮ ಒಬ್ಬ 'ಗಾರ್ಡಿಯನ್' ವಿಚಾರವನ್ನು ಹಾಗೂ ಒಂದು ಗುಪ್ತವೇದನೆಯನ್ನು ಕುರಿತು ಚರ್ಚಿಸಿದ್ದಾರೆ. ಅವುಗಳಲ್ಲಿ ಅವರು ಹೀಗೆ ತಿಳಿಸಿದ್ದಾರೆ: "ನನ್ನಂಥ ಇನ್ನೊಬ್ಬ ಸೋಮಾರಿ ಇಡೀ ಜಗತ್ತಿನಲ್ಲೇ ಇಲ್ಲ. ಭಾರಿ ಒತ್ತಾಯ ಬರದ ಹೊರತು ಎಂದೂ ನಾನು ಯಾವ ಕೆಲಸವನ್ನೂ ಮಾಡಲಾರೆ. ಇಷ್ಟಾಗಿಯೂ ಇಷ್ಟೊಂದು ಪುಸ್ತಕಗಳನ್ನು ಹೇಗೆ ಬರೆದು ಹಾಕಿದೆ ಎಂಬುದರ ಇತಿಹಾಸವನ್ನು ತಿಳಿಸುತ್ತೇನೆ. ನನಗೊಬ್ಬ 'ಗಾರ್ಡಿಯನ್' ಇದ್ದಳು. ಆಕೆ ಯಾರು ಎಂಬುದನ್ನು ತಿಳಿದುಕೊಳ್ಳಲು ಇಚ್ಛಿಸಬೇಡ. ಆಕೆಯ ಹಾಗೆ ಭಾರಿ ಒತ್ತಾಯವನ್ನು ತರುವ ವ್ಯಕ್ತಿ ಬಹುಶಃ ಈ ಭೂಮಿಯ ಮೇಲೆ ಇನ್ನೊಬ್ಬಳಿಲ್ಲ ಎಂದು ತಿಳಿದುಕೊ. ಆಕೆ ನನ್ನ ಕೃತಿಗಳ ಬಗೆಗಿನ ಅತ್ಯಂತ ಕಠೋರ ವಿಮರ್ಶಕಿಯೂ ಆಗಿದ್ದಳು. ಆಕೆಯ ತೀಕ್ಷ್ಣ ತಿರಸ್ಕಾರದಿಂದಾಗಿ ನಾನು ಸೋಮಾರಿತನದಿಂದ ಇರಲೂ ಸಾಧ್ಯವಾಗುತ್ತಿರಲಿಲ್ಲ; ನನ್ನ ಕೃತಿಗಳಲ್ಲಿ ಕಲಬೆರಕೆ ಮಾಡಿ ಪಿಷ್ಟಪೇಷಣ ಮಾಡುವುದೂ ಸಾಧ್ಯವಾಗುತ್ತಿರಲಿಲ್ಲ. ಒಂದು ಪಂಕ್ತಿಯೂ ಆಕೆಯ ಕಣ್ಣಿನಿಂದ ತಪ್ಪಿಸಿಕೊಳ್ಳುತ್ತಿರಲಿಲ್ಲ. ಆದರೆ, ಅವಳೀಗ ಎಲ್ಲವನ್ನೂ ಬಿಟ್ಟುಬಿಟ್ಟು ಧರ್ಮ-ಕರ್ಮಗಳಲ್ಲಿ ಮುಳುಗಿಹೋಗಿದ್ದಾಳೆ. 'ಗೀತೆ' ಮತ್ತು ಉಪನಿಷತ್ತುಗಳನ್ನು ಬಿಟ್ಟು ಬೇರಾವುದರ ಬಗೆಗೂ ಆಕೆಗೆ ಆಸಕ್ತಿ ಇಲ್ಲ. ಏನು-ಎತ್ತ ಎಂದೂ ವಿಚಾರಿಸುತ್ತಿಲ್ಲ. ಆಕೆಯ ಕಟು ಟೀಕೆಯಿಂದ ಮುಕ್ತನಾಗಿ ನಾನೂ ನಿಶ್ಚಿಂತನಾಗಿ ಬಿಟ್ಟಿದ್ದೇನೆ. ನಡುನಡುವೆ ಹೊರಗಿನ ಪೆಟ್ಟಿನಿಂದಾಗಿ ಸ್ವಭಾವ ಜನ್ಯವಾದ ಜಡತೆ ಸ್ವಲ್ಪ ಕಾಲದ ಮಟ್ಟಿಗೆ ದೂರವಾಗುತ್ತದೆಯಾದರೂ, ಈಗಾಗಲೇ ಸಾಕಷ್ಟು ಬರೆದಿದ್ದೇನೆ, ಬೇರೆ ಯಾರಿಗಾಗಿ ಬರೆಯಲಿ ಎಂಬ ಭಾವನೆ ಮನಸ್ಸಿನಲ್ಲಿ ತುಂಬಿಕೊಳ್ಳುತ್ತದೆ.

"....ಬರೆಯಲು ಎಷ್ಟೊಂದು ಇದೆ, ಬರೆಯದೆ ಎಷ್ಟು ಉಳಿದು ಹೋಗಿದೆ; ಈ ತಪ್ಪಿಗಾಗಿ ಪರಲೋಕದಲ್ಲಿ ವಾಗ್ದೇವತೆ ವಿವರಣೆಯನ್ನೇನಾದರೂ ಕೇಳಿದರೆ, ಒಬ್ಬ ವ್ಯಕ್ತಿಯ ಕಡೆಗೆ ಬೆರಳು ತೋರಿಸಬಲ್ಲೆ. ನನಗೆ ಇರುವ ಸಮಾಧಾನ ಇದೇ."

ತಮ್ಮ ಗುಪ್ತ ವೇದನೆಯ ಬಗ್ಗೆ ಅವರು ಲೀಲಾರಾನೀ ಗಂಗೋಪಾಧ್ಯಾಯ ಅವರೊಂದಿಗೂ ಚರ್ಚಿಸಿದ್ದರು: "ನನ್ನ ಮಾನಸಿಕ ಪರಿವರ್ತನೆಯ ಬಗ್ಗೆ ನೀನು ಬಹಳ ದಿನಗಳಿಂದಲೂ ನನ್ನನ್ನು ಪ್ರಶ್ನಿಸುತ್ತಿದ್ದೀಯೆ ಹಾಗೂ ನಾನು ಈ ಬಗ್ಗೆ ಮೌನವಾಗಿದ್ದೇನೆ. ಆದರೆ ನನ್ನ ಹಾಗೆಯೇ ನಿನಗೂ ವಯಸ್ಸಾದಾಗ, ಯಾರೊಂದಿಗೂ ಹೇಳಲಾಗದಂಥ ಕೆಲವು ಸಂಗತಿಗಳು ಈ ಲೋಕದಲ್ಲಿ ಇರುತ್ತವೆ ಎಂಬುದನ್ನು ಬಹುಶಃ ನೀನು ಅರ್ಥಮಾಡಿಕೊಳ್ಳಬಲ್ಲೆ. ಹಾಗೇನಾದರೂ ಹೇಳಿ ಬಿಟ್ಟರೆ, ಒಳ್ಳೆಯದಾಗುವುದಕ್ಕಿಂತಲೂ ಕೆಡುಕಾಗುವುದೇ ಹೆಚ್ಚು. ಆದ್ದರಿಂದಲೇ, ಈ ಮೌನ ಶಿಕ್ಷೆ ತುಂಬ ಕಠಿಣವಾದುದು. ಭೀಷ್ಮ ಒಂದು ದಿವಸ ಸ್ತಬ್ಧನಾಗಿ ಬಾಣಗಳ ಸುರಿಮಳೆಯನ್ನು ಸಹಿಸಿಕೊಂಡಿದ್ದ ಎಂಬ ಮಾತನ್ನು 'ಮಹಾಭಾರತ'ದಲ್ಲಿ ಎಲ್ಲ

ಕಾಲಕ್ಕೂ ಬರೆದಿಡಲಾಗಿದೆ. ಆದರೆ, ಅದೆಷ್ಟು ಅಲಿಖಿತ ಮಹಾಭಾರತಗಳಲ್ಲಿ ಈ ಬಗೆಯ ಅದೆಷ್ಟು ಶರಶಯ್ಯೆಗಳು ಸದ್ದಿಲ್ಲದೆ ರಚಿತವಾಗುತ್ತಲೇ ಇರುತ್ತವೆ! ಇವುಗಳ ಬಗ್ಗೆ ಎಲ್ಲಿಯೂ ಒಂದು ಪಂಕ್ತಿಯನ್ನೂ ಬರೆದಿರುವುದಿಲ್ಲ. ಲೋಕದಲ್ಲಿ ಹೀಗೆಯೇ ಆಗುತ್ತದೆ. ನಿಮ್ಮ ಈ ಅಣ್ಣಯ್ಯನಿಗೆ ಈಗ ತುಂಬ ವಯಸ್ಸಾಗಿಬಿಟ್ಟಿದೆ. ಜ್ಞಾನ-ವಿಜ್ಞಾನಗಳ ದೃಷ್ಟಿಯಿಂದ ಕುತೂಹಲಕಾರಕ ವಸ್ತುಗಳ ಮೌಲ್ಯ ಎಷ್ಟೇ ಹಿರಿದಾಗಿರಲಿ, ಅದನ್ನು ದಮನ ಮಾಡುವ ಕಾರ್ಯದ ಪುಣ್ಯವೂ ಕಡಿಮೆಯಾದುದೇನೂ ಅಲ್ಲ ಎಂಬ ಅವನ ಈ ಉಪದೇಶವನ್ನು ಎಂದೂ ಮರೆಯಬೇಡ. ಯಾವ ವೇದನೆಗೆ ಯ್ಯಾವುದೇ ಪ್ರತೀಕಾರವೂ ಇರುವುದಿಲ್ಲವೋ ಅದರ ಬಗ್ಗೆ ದೂರಿದರೆ, ಕೆಳಗಿರುವ ಕೆಸರೇ ಫಕ್ಕನೆ ಮೇಲೆ ಬರುತ್ತದೆ. ಅದನ್ನು ತಪ್ಪಿಸುವುದು ಸಾಧ್ಯವಾದರೆ ಒಳ್ಳೆಯದು."

ಶರತ್‌ಚಂದ್ರರ ಸ್ತ್ರೀಪಾತ್ರಗಳಲ್ಲಿ ಎಲ್ಲೆಲ್ಲಿ ಅವರ ಬಾಲ್ಯದ ಜೊತೆಗಾರ್ತಿಯ ಚಿತ್ರ ಮೇಲೆದ್ದು ಕಾಣುತ್ತದೆಯೋ ಅಲ್ಲೆಲ್ಲ - ಅದರಲ್ಲಿಯೂ ವಿಧವೆಯರ ಪಾತ್ರಗಳಲ್ಲಿ - ನಿರುಪಮಾ ದೇವಿಯವರ ಚಿತ್ರ ಕಾಣಿಸುವುದಿಲ್ಲವೆ? 'ಶ್ರೀಕಾಂತ'ದ ರಾಜಲಕ್ಷ್ಮಿ ನಿರುಪಮಾ ದೇವಿಯಂತೆಯೇ ಜಪ-ತಪ-ವಾರ-ವ್ರತಗಳಲ್ಲಿ ತೊಡಗಿರುವುದಿಲ್ಲವೆ? ಸಂಪ್ರದಾಯಬದ್ಧ ಹಿಂದೂ ಸಂಸ್ಕಾರಗಳಿಂದಾಗಿಯೇ ವಿಧವೆ ರಾಜಲಕ್ಷ್ಮಿ ಶ್ರೀಕಾಂತ ನನ್ನು ಮದುವೆಯಾಗಲಾರದೆ ಹೋಗುತ್ತಾಳೆ. ಇದೇ ಕಾರಣದಿಂದಾಗಿ ರಮೇಶನೂ ರಮಾಳನ್ನು ಪಡೆದುಕೊಳ್ಳಲಾಗುವುದಿಲ್ಲ. ಇದರ ಹಿಂದೆ ಶರತ್‌ಚಂದ್ರರ ಸ್ವಂತ ಅನುಭವವೇ ಇಲ್ಲವೇನು? ವಿಧವೆಯಾಗಿದ್ದುದರಿಂದಲೇ ಅವರು ನಿರುಪಮಾ ದೇವಿಯನ್ನು ಪಡೆದುಕೊಳ್ಳಲಾಗಿರಲಿಲ್ಲ. ಬೇರೆ ಕಾರಣಗಳನ್ನೂ ಆರಸಬಹುದು. ಉದಾಹರಣೆಗೆ, ಎರಡು ಕುಟುಂಬಗಳ ನಡುವಣ ಆರ್ಥಿಕ-ವೈಷಮ್ಯ, ಉಪಜಾತಿ ಭೇದಗಳು, ಹಾಗೂ ಶರತ್‌ಚಂದ್ರರ ಚಾರಿತ್ರ್ಯದ ಬಗೆಗಿನ ನಂಬಿಕೆಗಳು. ಆದರೆ ಇವೆಲ್ಲ ಗೌಣವಾದಂಥವೇ. ಮುಖ್ಯವಾದ ಕಾರಣ ವಿಧವಾ-ವಿವಾಹವೇ. ಲೀಲಾರಾನಿಯವರಿಗೆ ಅವರು ಹೀಗೆಂದು ಬರೆದಿದ್ದರು: "ನನ್ನ ಎಲ್ಲ ಪುಸ್ತಕಗಳನ್ನೂ ನೀನು ಓದಿದ್ದೀಯೋ ಇಲ್ಲವೋ? ಸಮಾಜಕ್ಕೆ ವಿಧವಾ-ವಿವಾಹ ಒಪ್ಪಿಗೆ ಯಾಗಿಲ್ಲವೆಂಬ ಕಾರಣದಿಂದಾಗಿಯೇ ಅನೇಕ ಮಹತ್ತರವಾದ ಹಾಗೂ ಸುಂದರ ವಾದ ಬಾಳ್ವೆಗಳು ಶಾಶ್ವತವಾಗಿ ವ್ಯರ್ಥವೂ, ನಿಷ್ಫಲವೂ ಆಗಿಬಿಟ್ಟಿವೆ ಎಂಬುದು ಅವುಗಳನ್ನು ಓದಿದರೆ ನಿನಗೆ ಎದ್ದು ಕಾಣುತ್ತದೆ."

ಇದು ತಮ್ಮ ಬಾಳಿನ ನಿಷ್ಫಲತೆಯ ಬಗೆಗಿನ ತೋರುಬೆರಳೇ ಆಗಿಲ್ಲವೇನು? ತಮ್ಮ ಪತ್ರಗಳಲ್ಲಿ ಮತ್ತು ಕೃತಿಗಳಲ್ಲಿ ಅವರು ಮತ್ತೆ ಮತ್ತೆ ಈ ನಿಷ್ಫಲತೆಯ ವಿಚಾರವನ್ನು ಹೇಳುತ್ತಿರಲಿಲ್ಲವೆ? ಸ್ಪಷ್ಟವಾಗಿ ಹೇಳದೆ ಇದ್ದರೂ, ಪರೋಕ್ಷವಾಗಿ ತಮ್ಮ ವೇದನೆಯನ್ನು ತೋಡಿಕೊಂಡಿದ್ದಾರೆ. ತಮ್ಮ ಗೆಳೆಯ ಹರಿದಾಸಶಾಸ್ತ್ರೀ ಅವರೊಂದಿಗೂ ಬಹುಶಃ ತಮ್ಮ ಕಿಶೋರಾವಸ್ಥೆಯ ಈ ಅಸಫಲ ಪ್ರೇಮದ ವಿಚಾರವನ್ನು ಅವರು ಹೇಳಿದ್ದರು: "ಸ್ತ್ರೀ ಸಮುದಾಯದ ವಿಷಯದಲ್ಲಿ ನಾನೆಂದೂ ಉಚ್ಛೃಂಖಲನಾಗಿರಲಿಲ್ಲ; ಇಂದೂ ಆಗಿಲ್ಲ. ನಾನು ಅತಿಯಾಗಿ ಮಾದಕವಸ್ತುಗಳನ್ನು ಸೇವಿಸಿದ್ದೇನೆ, ಕೆಟ್ಟ ಜಾಗಗಳಿಗೂ ಹೋಗಿದ್ದೇನೆ. ಆದರೆ, ಅವರೆಲ್ಲ ನನ್ನ ವಿಷಯದಲ್ಲಿ

ತುಂಬ ಗೌರವ ಇರಿಸಿಕೊಂಡಿದ್ದರೆಂಬುದು ಅಲ್ಲಿ ಹೋಗಿ ವಿಚಾರಿಸಿದರೆ ನಿನಗೆ ಗೊತ್ತಾಗುತ್ತದೆ. ಕೆಲವರು ನನ್ನನ್ನು 'ದಾದಾ ಠಾಕುರ್' ಎಂದು ಕರೆದರೆ, ಇನ್ನು ಕೆಲವರು 'ಬಾಬಾ ಠಾಕುರ್' ಎಂದು ಕರೆಯುತ್ತಿದ್ದರು. ಏಕೆಂದರೆ, ತುಂಬ ಮೈಮರೆತಿದ್ದರೂ ನಾನೆಂದೂ ಅವರ ಶರೀರದ ಬಗ್ಗೆ ಲಾಲಸೆಯನ್ನು ತೋರಿರಲಿಲ್ಲ. ನಾನು ಸಂಯಮಿಯಾಗಿದ್ದೆ, ಸಾಧುವಾಗಿದ್ದೆ ಅಥವಾ ನೀತಿಜ್ಞನಾಗಿದ್ದೆ ಎಂಬುದು ಇದಕ್ಕೆ ಕಾರಣವಾಗಿರಲಿಲ್ಲ. ಹೀಗೆ ಮಾಡುವುದು ನನ್ನ ಎಂದಿನ ಅಭಿರುಚಿಗೆ ವಿರುದ್ಧವಾಗಿತ್ತೆಂಬುದೇ ಇದಕ್ಕೆ ಕಾರಣವಾಗಿತ್ತು. ನಾನು ಪ್ರೀತಿಸದೆ ಇರುವವರನ್ನು ಉಪಭೋಗಿಸುವ ಲಾಲಸೆ ನನ್ನ ಶರೀರದಲ್ಲಿ ಎಂದೂ ಜಾಗೃತವಾಗಲಿಲ್ಲ. ಇವಕ್ಕೆ ಬೇರಾವ ಕಾರಣವೂ ಇರಲಿಲ್ಲ."

ಶಾಸ್ತ್ರಿಗಳು ಕೇಳಿದರು: "ಇನ್ನೇನಾದರೂ ?"

ಶರತ್‌ಚಂದ್ರರು ಹೇಳಿದರು: "ವಿಶ್ವಕವಿಯ ಆ ಗೀತೆ ನಿನಗೆ ನೆನಪಿದೆ ತಾನೆ ?"

"ಕಖಾನೋ ಕುಪಥೇ ಯದಿ ಭ್ರಮಿತೇ ಚಾಹೇ ಹೇ ಹೃದಿ ।
ಅಮನಿ ಓ ಮುಖ ಸ್ಮರಿ ಸರಮೇತೇ ಹೋ ಈ ಸಾರಾ ॥

ಶಾಸ್ತ್ರಿಗಳು ಕೇಳಿದರು: "ಇದರ ಅರ್ಥವೇನು ?"

"ಇದರ ಅರ್ಥವನ್ನೂ ತಿಳಿದುಕೊಳ್ಳಬೇಕೆ ? ಸರಿ, ಕೇಳು. ಯೌವನದ ಮೊದಲ ಗಳಿಗೆಯಲ್ಲಿ ನಾನೊಬ್ಬ ಹುಡುಗಿಯನ್ನು ಪ್ರೀತಿಸಿದ್ದೆ. ಆ ಪ್ರೀತಿ ವ್ಯರ್ಥವಾಯಿತು. ಆದರೆ, ಎಲ್ಲ ಉಚ್ಛೃಂಖಲತೆಯ ನಡುವೆಯೂ ಅದು ಯಾವಾಗಲೂ ನನ್ನೆದುರಿಗೆ ಬಂದು ನಿಲ್ಲುತ್ತಿತ್ತು. ಆದರೆ, ಯಾವುದಕ್ಕೆ ಯಾವೊಂದು ಸ್ವರೂಪವೂ ಇಲ್ಲವೋ ಅದರ ಬಗ್ಗೆ ನಿನಗೆ ಹೇಗೆ ತಾನೆ ತಿಳಿಯ ಹೇಳಲಿ ?"

ಶಾಸ್ತ್ರಿಗಳು ಹೇಳಿದರು: "ತಿಳಿಯಹೇಳಲಾಗುವುದಿಲ್ಲ. ಮುಂದೆ ?"

ಶರತ್‌ಚಂದ್ರರೆಂದರು: "ಮುಂದೆ ಆ ಹುಡುಗಿ ಯಾರು ಎಂದು ತಿಳಿಯ ಬಯಸುತ್ತೀಯಲ್ಲವೆ ? ಇಲ್ಲ, ಅದನ್ನು ತಿಳಿಸುವುದಿಲ್ಲ. ಇನ್ನೊಂದು ಮಾತನ್ನು ಹೇಳುತ್ತೇನೆ. ಈ ಎಲ್ಲ ವಿಚಾರಗಳ ಬಗ್ಗೆ ನೀನು ಬೇರೆ ಯಾರೊಂದಿಗೂ ಚರ್ಚಿಸ ಬಾರದು. ಇದು ನನ್ನ ಅಪ್ಪಣೆ."

ಶರತ್‌ಚಂದ್ರರ ಮನಸ್ಸಿನ ವ್ಯಥೆ ಹೇಗಾದರೂ ಇದ್ದಿರಲಿ, ಅದು ಅನೇಕ ಮಾರ್ಗಗಳಲ್ಲಿ ತನ್ನ ಅಭಿವ್ಯಕ್ತಿಯನ್ನು ಕಂಡುಕೊಂಡಿತು. ಬರ್ಮಾದ ಅವರ ಗೆಳೆಯರಾಗಿದ್ದ ಗಿರೀಂದ್ರನಾಥ ಸರ್ಕಾರ್ ಅವರೂ ತಮ್ಮ ಪುಸ್ತಕದಲ್ಲಿ ಅವರ ಈ ಕೈಶೋರ್ಯದ ಅಸಫಲ ಪ್ರೇಮದ ವಿಚಾರವನ್ನು ಚರ್ಚಿಸಿದ್ದಾರೆ; ಅಂತೆಯೇ ಸೌರೀಂದ್ರಮೋಹನ್ ಅವರು ಸಹ.

ಶರತ್‌ಚಂದ್ರರು ನಿರುಪಮಾದೇವಿ ಅವರಿಗೆ ಈ ಅರ್ಥಪತ್ರವೊಂದನ್ನು ಬರೆದಿದ್ದರು ಎಂದೂ ಹೇಳಲಾಗಿತ್ತು. ಅನೇಕರಿಗೆ ಈ ಪತ್ರ ವಿಚಾರ ಗೊತ್ತಿತ್ತು. ಕತ್ತಲಿನಿಂದ ಹೊರಬಂದ ಮೇಲೆ ಅವರು ಒಮ್ಮೆ ಬಹರಾಮಪುರಕ್ಕೆ ಹೋಗಿದ್ದರು. ಆಗ ಕೆಲವು ದಿನಗಳವರೆಗೆ ಅಲ್ಲಿಯೇ ತಂಗಿದ್ದರು. ಆಗ ಈ ವಿಷಯದ ಬಗ್ಗೆ ಅವರಿಬ್ಬರ ನಡುವೆ ಮಾತುಕತೆಗಳು ನಡೆದಿದ್ದಿರಬಹುದೆ ? ನಿರುಪಮಾ ದೇವಿ ಯವರೂ ಎಂದಾದರೊಮ್ಮೆ ತಮ್ಮ ಮನಸ್ಸಿನ ವ್ಯಥೆಯನ್ನು ತೋಡಿಕೊಂಡಿದ್ದರೆ ?

ಶರತ್‌ಚಂದ್ರರ ಬಗ್ಗೆ ಅವರು ಅನೇಕ ಸಲ ಬರೆಯಬೇಕಾಗಿ ಬಂತು. ಅನೇಕ ಸಂಗತಿಗಳ ಬಗ್ಗೆ ಅವರು ಸ್ಪಷ್ಟೀಕರಣವನ್ನೂ ಕೊಟ್ಟರು. ತಮ್ಮ ಪುಸ್ತಕದ ಮೇಲೆ 'ಶುಭದಾ'ದ ಪ್ರಭಾವ ಬಿದ್ದಿರುವುದನ್ನು ಅವರು ಮುಕ್ತಕಂಠದಿಂದ ಒಪ್ಪಿ ಕೊಂಡಿದ್ದಾರೆ. ತುಂಬ ವಿಶ್ವಾಸ-ಗೌರವಗಳಿಂದ ಅವರ ಗೌರವಾರ್ಥವಾಗಿ ಅವರು ಕವಿತೆಗಳನ್ನೂ ಬರೆದಿದ್ದಾರೆ. ಅವರ ಒಂದು ಗೀತೆಯ ಆರಂಭ ಎಷ್ಟು ಅರ್ಥಪೂರ್ಣವಾಗಿದೆ!

"ತುಮಿ ಜೇ ಮಧುಕರ ಕಮಲ ಬನೇ।
ಆ ಹರಿ ಆನ್ ಮಧು ಆಪನ ಮನೇ॥"

ಒಮ್ಮೆ ಅವರೂ ಸ್ಪಷ್ಟರೂಪದಲ್ಲಿ ಈ ಮಾತನ್ನು ಒಪ್ಪಿಕೊಂಡಿದ್ದಾರೆ. ಅವರು ಬಹುಶಃ ತೀರ್ಥಯಾತ್ರೆಗೆ ಹೋಗುತ್ತಿದ್ದರು. ಪ್ರಭೂಪಾದ ಶ್ರೀ ಹರಿದಾಸ ಗೋಸ್ವಾಮಿ ಅವರೊಂದಿಗೆ ಅವರು ಮಾಂದಾರದ ಯಾತ್ರೆಯನ್ನು ಕೈಗೊಂಡಿದ್ದರು.[1] ಸಾಯುವುದಕ್ಕೆ ಕೆಲವು ದಿವಸಗಳ ಮುನ್ನ ಅವರು ವೃಂದಾವನದಲ್ಲಿ ವಾಸಮಾಡತೊಡಗಿದ್ದರು. ಆಗ ಕವಿ ನರೇಂದ್ರ ದೇವ್ ಮತ್ತು ರಾಧಾರಾನೀ ದೇವಿ ಅವರು ಅಲ್ಲಿಗೇ ಹೋಗಿ ಅವರನ್ನು ಭೇಟಿಯಾಗಿದ್ದರು. ಆಗ ಭಾವವಿಹ್ವಲರಾಗಿ ರಾಧಾರಾನೀ ದೇವಿಯವರನ್ನು ಅಪ್ಪಿಕೊಂಡು ನಿರುಪಮಾದೇವಿಯವರು ಹೀಗೆಂದು ಹೇಳಿದ್ದರು: "ತೂಮಿ ಆಮಾರ್ ಶರತ್‌ದಾರ್ ರಾಧೂ! ತೂಮಿ ಆಮಾರ್ ಶರತ್‌ದಾರ್ ರಾಧೂ!" (ಅಂದರೆ, ನೀನೇ ನಮ್ಮ ಶರತ್‌ಚಂದ್ರನ ರಾಧುವೇ? ನೀನೇ ನಮ್ಮ ಶರತ್‌ಚಂದ್ರನ ರಾಧುವೇ?) ಅದಾದ ಬಳಿಕ, ಯಾವುದೋ ಮಾತುಕತೆಯ ಸಂದರ್ಭದಲ್ಲಿ ಹೀಗೆಂದೂ ಹೇಳಿದ್ದರು: "ನನ್ನಿಂದಾಗಿಯೇ ಶರತ್‌ಚಂದ್ರರಿಗೆ ಆ ದುಃಸ್ಥಿತಿ ಉಂಟಾಯಿತು."[2]

ಅವರಿಬ್ಬರ ಸಂಬಂಧಗಳ ಬಗ್ಗೆ ಆಲೋಚನೆ ಮಾಡಿದರೆ, ಇದನ್ನು ಅಸತ್ಯವೆಂದು ಒಪ್ಪಲು ಮನಸ್ಸಾಗುವುದಿಲ್ಲ. ತಮ್ಮ ದೊಡ್ಡಸ್ತಿಕೆಯನ್ನು ತೋರಿಸಲು ಒಬ್ಬ ಕುಲೀನ ಮನೆತನದ ವಿಧವೆಯ ಬಗ್ಗೆ ಮನಸ್ಸಿಗೆ ಬಂದಂತೆಲ್ಲ ಬರೆಯುತ್ತಿದ್ದ ಬಗ್ಗೆ ಸ್ವತಃ ಒಳ್ಳೆಯ ಲೇಖಕಿಯೆಂದು ಹೆಸರುಗಳಿಸಿದ್ದವರೂ, ಶರತ್‌ಚಂದ್ರರ ಸ್ನೇಹಿತೆಯೂ ಆಗಿದ್ದ ಅನುರೂಪಾ ದೇವಿ ಅವರು ಅವರ ವಿಷಯದಲ್ಲಿ ತುಂಬ ಕೋಪ ಮಾಡಿ ಕೊಂಡಿದ್ದರು. ಇಂದು ಗೌರವಾನ್ವಿತರಾಗಿರುವ, ಆದರೆ ಒಂದು ಕಾಲದಲ್ಲಿ ಆಸರೆ ಇಲ್ಲದವರೂ ಅಲೆಮಾರಿಯೂ ಆಗಿದ್ದ ವ್ಯಕ್ತಿ ಈ ರೀತಿಯಲ್ಲಿ ಪ್ರಚಾರಮಾಡುತ್ತಿದ್ದುದು ಧರ್ಮಪರಾಯಣೆಯಾಗಿದ್ದ ಆ ಮಹಿಳೆಗೆ ತುಂಬ ಅಸಮಾಧಾನವನ್ನುಂಟು ಮಾಡಿತ್ತು..... ತಮ್ಮ ಗೆಳೆಯನ ಸೋದರಿಯನ್ನು ಅವರು 'ಬೂಡೀ' ಎಂದು ಕರೆಯಬಹುದು. ಅದರಲ್ಲೇನೂ ವಿಚಿತ್ರ ಸಂಗತಿ ಇಲ್ಲ. ಆದರೆ, ಇದರಿಂದ ಐವತ್ತು ವರ್ಷಗಳ ಹಿಂದೆ, ಒಂದು ಅತ್ಯಂತ ರಕ್ಷಣಶೀಲ ಕುಟುಂಬದ ಬಾಲವಿಧವೆ ಶರತ್‌ಚಂದ್ರರಂಥ ಚಾರಿತ್ರ್ಯದ ಒಬ್ಬ ಆತ್ಮೀಯನಲ್ಲದ ತರುಣನೊಂದಿಗೆ ಅಂತ ರಂಗದ ಆರ್ದ್ರಭಾವನೆಗಳೊಂದಿಗೆ ಒಡನಾಟ ನಡೆಸಿದ್ದಳು ಎಂದೇನೂ ಸಿದ್ಧವಾಗುವುದಿಲ್ಲವಲ್ಲ.

---

1. 1939ರಲ್ಲಿ.
2. ಈ ಲೇಖಕ ಈ ಮಾತನ್ನು ಸ್ವತಃ ರಾಧಾರಾನೀ ದೇವಿ ಅವರ ಬಾಯಿಂದಲೇ ಕೇಳಿದ್ದಾನೆ.

ಅಂತರಂಗದ ಆರ್ದ್ರಭಾವನೆಗಳೊಂದಿಗೆ ಅಲ್ಲದಿದ್ದರೂ, ಪರಸ್ಪರ ಭೇಟಿ ಮತ್ತು ಮಾತುಕತೆಗಳ ಒಡನಾಟವಂತೂ ಇದ್ದೇ ಇತ್ತು. ಸ್ವತಃ ನಿರುಪಮಾ ದೇವಿ ಅವರೇ ಈ ಮಾತನ್ನು ಒಪ್ಪಿಕೊಂಡಿದ್ದಾರೆ. ಹದಿನಾಲ್ಕನೆಯ ವರ್ಷದಲ್ಲಿಯೇ ವಿಧವೆಯಾಗಿ ತಂದೆಯ ಮನೆಗೆ ಬಂದು ವಾಸಮಾಡತೊಡಗುವ ಹೊತ್ತಿಗೆ ಶರತ್‌ಚಂದ್ರರು ಆ ಕುಟುಂಬಕ್ಕೆ ತುಂಬ ಪರಿಚಿತರಾಗಿಬಿಟ್ಟಿದ್ದರು. ಮೊದಲ ಶ್ರಾದ್ಧದ ಸಂದರ್ಭದಲ್ಲಿ ಮಾರನೆಯ ವರ್ಷ ಗಂಡನಿಗೆ ಪಿಂಡದಾನ ಮಾಡುವ ಸಲುವಾಗಿ ಕಿಶೋರಿ ನಿರುಪಮಾ ಹತ್ತಿರದಲ್ಲಿಯೇ ಇದ್ದ ನದಿಯ ತೀರಕ್ಕೆ ಹೋದಾಗ ಆಕೆಯೊಡನೆ ಇದ್ದವರು ಈ ಮೂವರು ವ್ಯಕ್ತಿಗಳು ಮಾತ್ರ - ವಿಧವೆ ಅತ್ತಿಗೆ, ಕಿರಿಯ ಸೋದರ ವಿಭೂತಿ ಭೂಷಣ ಮತ್ತು ಶರತ್‌ಚಂದ್ರರು. ಶರತ್‌ಚಂದ್ರರು ಕೇವಲ ಜೊತೆಯಲ್ಲಿ ಹೋಗಿದ್ದುದು ಮಾತ್ರವಲ್ಲ, ಆ ಶ್ರಾದ್ಧಕರ್ಮಗಳಲ್ಲಿ ಸಕ್ರಿಯ ಪಾತ್ರವಹಿಸಿದ್ದರು. ಆಗ ಎಲ್ಲಿಂದಲೋ ಬಂದ ಒಂದು ಜೇನು ನಿರುಪಮಾಳನ್ನು ಕಚ್ಚಿಬಿಟ್ಟಿತ್ತು. ಬಹುಶಃ ಜೇನುತುಪ್ಪದ ಆಕರ್ಷಣೆಯಿಂದ ಅದು ಅಲ್ಲಿಗೆ ಬಂದಿತ್ತು. ಆಗ ಶರತ್‌ಚಂದ್ರರು ತುಂಬ ವ್ಯಾಕುಲರಾಗಿದ್ದರು. ವ್ಯಾಕುಲ ಭಾವದಿಂದ ಒಮ್ಮೆ ಅದಕ್ಕೆ ಮೊಸರನ್ನು ಸವರು ಎಂದು ಹೇಳಿದರೆ, ಇನ್ನೊಮ್ಮೆ ಜೇನುತುಪ್ಪವನ್ನು ಸವರು ಎಂದು ಹೇಳುತ್ತಿದ್ದರು.

ಅಷ್ಟೇ ಅಲ್ಲ, ಶ್ರಾದ್ಧವನ್ನು ಮುಗಿಸಿ ನಿರುಪಮಾ ಹಿಂದಿರುಗುತ್ತಿದ್ದಾಗ ಅವರು ಆಕೆಯ ಮನೆಗೆ ಹೋಗಿ, ಉಡಲು ಅಂಚುಳ್ಳ ಒಂದು ಸೀರೆಯನ್ನೂ ಹಾಗೂ ಕೈಗೆ ಹಾಕಿಕೊಳ್ಳಲು ಚಿನ್ನದ ಬಳೆಯನ್ನೂ ಅಲ್ಲಿಗೇ ತಂದುಕೊಟ್ಟಿದ್ದರು. ಶ್ರಾದ್ಧದ ಸಮಯದಲ್ಲಿ ಇವುಗಳನ್ನು ಧರಿಸುವುದಿಲ್ಲ. ಆಗ ತುಂಬ ಕರುಣಾಜನಕ ದೃಶ್ಯ ಏರ್ಪಟ್ಟಿತ್ತು. ಎಲ್ಲರೂ ಕಣ್ಣೀರು ಸುರಿಸಿದ್ದರು. ಅವರಲ್ಲಿ ಶರತ್‌ಚಂದ್ರರೂ ಒಬ್ಬರಾಗಿದ್ದರು.

ಸ್ವತಃ ನಿರುಪಮಾ ದೇವಿಯವರೇ ಈ ಘಟನೆಯನ್ನು ವರ್ಣಿಸಿದ್ದಾರೆ. ಕೊನೆಗೆ ಹೀಗೆ ಬರೆದಿದ್ದಾರೆ: "ಶರತ್‌ಚಂದ್ರರ ಗೆಳೆಯರು ಅವರ ಮನಸ್ಸು ತುಂಬ ಕೋಮಲವಾದುದೆಂದೂ, ಅವರು ಪರದುಃಖಕಾತರರೆಂದೂ ಹೇಳುತ್ತಿದ್ದರು. ಅಂದು ನನಗೂ ಈ ಮಾತಿಗೆ ಸಾಕ್ಷ್ಯ ಸಿಕ್ಕಿತ್ತು."

ಇಷ್ಟಾಗಿಯೂ, ಶರತ್‌ಚಂದ್ರರು ಆಗ ಪ್ರಶ್ನಾರ್ಹ ಚಾರಿತ್ರ್ಯದ ಆತ್ಮೀಯನಲ್ಲದ ತರುಣ ಮಾತ್ರರಾಗಿದ್ದರು ಎಂಬ ಅನುರೂಪಾದೇವಿಯವರ ಹೇಳಿಕೆಯನ್ನು ನಂಬಲು ಸಾಧ್ಯವಾಗುತ್ತದೆಯೆ ? ವಾಸ್ತವವಾಗಿ, ಅನುರೂಪಾ ದೇವಿಯರು ತುಂಬ ಧರ್ಮಪರಾಯಣೆಯಾದ ಮಹಿಳೆಯಾಗಿದ್ದರು; ಧರ್ಮ ಮನೋವ್ಯಾಪಾರವನ್ನು - ಅಂದರೆ ಮನಸ್ಸಿನ ವ್ಯಾಕುಲತೆಯನ್ನು - ಅರ್ಥಮಾಡಿಕೊಳ್ಳುವ ದೃಷ್ಟಿಯನ್ನೇ ನೀಡುವುದಿಲ್ಲ. ಜೊತೆಗೆ, ಒಮ್ಮೆ ಶರತ್‌ಚಂದ್ರರು ಅನುರೂಪಾದೇವಿಯವರ ಒಂದು ಕಾದಂಬರಿಯ ಬಗ್ಗೆ ತುಂಬ ಕಟುವಾಗಿ ಟೀಕೆಮಾಡಿದ್ದರು. ಬಹುಶಃ ಆ ಕಾರಣದಿಂದಾಗಿಯೂ ಆಕೆ ಅಸಂತುಷ್ಟೆಯಾಗಿದ್ದರು. ಆದ್ದರಿಂದ, ಆಕೆಯನ್ನು ದೂರಿ ಪ್ರಯೋಜನವಿಲ್ಲ. ಹೀಗಾಗಿ, ಶರತ್‌ಚಂದ್ರರು ಮೊದಲಿನಿಂದಲೂ ನಿರುಪಮಾದೇವಿಯವರ ವಿಷಯದಲ್ಲಿ ಅನುರಕ್ತರಾಗಿದ್ದರು ಎಂಬ ಸಂಗತಿಯನ್ನು ನಿಸ್ಸಂಕೋಚವಾಗಿ

ಒಪ್ಪಿಕೊಳ್ಳಬಹುದಾಗಿದೆ. ಇದರಲ್ಲಿ ವಿಚಿತ್ರವಾದುದೇನೂ ಇಲ್ಲ. ಯಾವುದೋ ಕಾರಣಗಳಿಂದಾಗಿ ಆ ಪ್ರೀತಿ ಫಲಿಸಲಿಲ್ಲ ಎಂಬುದು ಬೇರೆ ವಿಚಾರ. ಈ ಕೊರತೆಯೇ ಗುಪ್ತವೇದನೆಯ ರೂಪದಲ್ಲಿ ಅವರ ಮನಸ್ಸಿನಲ್ಲಿ ಶಾಶ್ವತವಾಗಿ ನೆಲೆಸಿಬಿಟ್ಟಿತು ಹಾಗೂ ಅವರ ಸೃಜನಶೀಲ ಶಕ್ತಿಯಾಗಿ ಪರಿಣಮಿಸಿತು. ಪ್ರೇಮಿಯ ಹೃದಯದ ಮೇಲೆ ಪ್ರೇಮಿಕೆಯ ಅಗಲಿಕೆಯ ಸಿಡಿಲು ಬಡಿದಾಗ ಪ್ರೇಮಿ ಹುಚ್ಚನಾಗುತ್ತಾನೆ ಇಲ್ಲವೇ ಮಹಾ ಕಲಾವಿದನಾಗುತ್ತಾನೆ. ತೃಪ್ತಿ ಎಂಬುದು ಮನುಷ್ಯನ ಹಾದಿಯಲ್ಲಿ ಅಡ್ಡಗಲ್ಲಾಗಿ ಬಿಡುತ್ತದೆ. ಪ್ರಗತಿಯ ಹಾದಿ ಅತೃಪ್ತಿಯ ಒಳಗಿನಿಂದಲೇ ಹಾಯ್ದು ಮುನ್ನಡೆಯುತ್ತದೆ.

ನಿರುಪಮಾದೇವಿಯವರ ಮನಸ್ಸಿನ ವ್ಯಥೆ ಶರತ್‌ಚಂದ್ರರಿಗೆ ಗೊತ್ತಿತ್ತೆಂಬುದು ಅವರು ರಾಧಾರಾನೀ ದೇವಿಯವರಿಗೆ ಬರೆದ ಇನ್ನೊಂದು ಪತ್ರದಿಂದ ತಿಳಿದು ಬರುತ್ತದೆ. ಅವರು ಆ ಪತ್ರದಲ್ಲಿ ಹೀಗೆಂದು ಬರೆದಿದ್ದರು: "ಸ್ತ್ರೀಯರಾದ ನಿಮ್ಮನ್ನು ಇಂದೂ ನಾನು ಸರಿಯಾಗಿ ಅರ್ಥಮಾಡಿಕೊಳ್ಳಲಾರದೆ ಹೋಗಿದ್ದೇನೆ. ಜೀವನದಲ್ಲಿ ತುಂಬ ದುಃಖವನ್ನು ಅನುಭವಿಸಿಯೇ ಈ ಅರಿವನ್ನು ಸಂಚಯಿಸಿಕೊಂಡಿದ್ದೇನೆ. ತಿಳಿದೋ-ತಿಳಿಯದೆಯೋ ಇದೇ ವಿಚಾರ ಮತ್ತೆ ಮತ್ತೆ ನನ್ನ ಸಾಹಿತ್ಯದಲ್ಲಿ ಪ್ರತಿಧ್ವನಿತವಾಗಿದೆ.... ನಾನು ಮಾತ್ರವೇ ನಿಮ್ಮನ್ನು ಗುರುತಿಸಲಾರದೆ ಹೋದೆ ಎಂದಲ್ಲ; ಸ್ವತಃ ನೀವುಗಳೇ ನಿಮ್ಮನ್ನು ಗುರುತಿಸಿಕೊಳ್ಳಲಾರದೆ ಹೋಗಿದ್ದೀರಿ ಅಥವಾ ಗುರುತಿಸಲು ಹೆದರುತ್ತೀರಿ. ನೀವು ನಿಮ್ಮನ್ನು ಗುರುತಿಸಿಕೊಂಡಿದ್ದರೂ, ಆ ಮಾತನ್ನು ಒಪ್ಪಿಕೊಳ್ಳಲು ನಿಮಗೆ ಇಷ್ಟವಿಲ್ಲದೆಯೂ ಇರಬಹುದಾದ ಸಂಭವವೂ ಇದೆ. ಇದು ಕೇವಲ ಅನುಭವದಿಂದ ಮೂಡಿರುವ ಭಾವನೆ. ಆದ್ದರಿಂದ, ಈ ಮಾತನ್ನು ಹಾಗೆಯೇ ಹಾರಿಸಿಬಿಡಲಾಗುವುದಿಲ್ಲ."

ಈ ಪತ್ರವನ್ನೂ ಅವರು ರಾಧಾರಾನೀ ದೇವಿಯವರಿಗೇ ಬರೆದಿದ್ದರು. ಹೀಗಿರುವಾಗ ಇನ್ನೇನಾದರೂ ಹೇಳಬೇಕಾದ ಅಗತ್ಯ ಉಳಿದಿರುತ್ತದೆಯೇನು ?

".....ನಿಜವಾದ ಪ್ರೇಮವನ್ನು ಒರೆಹಚ್ಚಿ ನೋಡುವುದು ತ್ಯಾಗದ ಮನೋಧರ್ಮದ ಆಧಾರದ ಮೇಲೆ. ಯಾರ ಪ್ರೇಮದಲ್ಲಿ ಒಳಿತನ್ನೆಸಗುವ ಬುದ್ಧಿ ಎಷ್ಟು ಹೆಚ್ಚಾಗಿರುತ್ತದೆಯೋ, ಆತ್ಮೋತ್ಸರ್ಗದ ಪ್ರವೃತ್ತಿ ಎಷ್ಟು ಹೆಚ್ಚಾಗಿರುತ್ತದೆಯೋ ಅದರಲ್ಲಿ ತ್ಯಾಗದ ಮನೋಧರ್ಮವೂ ತನ್ನಿಂದ ತಾನೇ ಹೆಚ್ಚು ಹೆಚ್ಚು ಗಂಭೀರವೂ ದೃಢವೂ ಆಗಿರುತ್ತದೆ. ಆ ಪ್ರೇಮವೇ ಶುದ್ಧವಾದ ಪ್ರೇಮ.

"ಪ್ರೇಮ ಹೃದಯದಲ್ಲಿ ಮೂಡಿದಾಗ, ಅದಕ್ಕೆ ಯಾವುದಾದರೂ ಒಂದು ಆಧಾರ ಅಥವಾ ಆಶ್ರಯ ಬೇಕಾಗುತ್ತದೆ. ಆ ಆಧಾರ ಎಲ್ಲ ಸಂದರ್ಭಗಳಲ್ಲಿಯೂ ಸೂಕ್ತವೂ ಸುಂದರವೂ ಆಗಿರುವುದಿಲ್ಲ. ಪ್ರೇಮ ತನ್ನಿಂದ ತಾನೇ ತನ್ನ ಹೃದಯದ ಅನುಭೂತಿಯಲ್ಲಿ ತನ್ನ ಪಾತ್ರವನ್ನು ರೂಪಿಸಿಕೊಂಡು ಬಿಡುತ್ತದೆ.

"ಮಹಾಪ್ರೇಮ ಸಹಜವಾಗಿಯೇ ನಿಸ್ವಾರ್ಥವಾದುದಾಗಿರುತ್ತದೆ. ರಾಧು, ಇದು ಕೇವಲ ಉಪಲಬ್ಧಿಯ ವಸ್ತುವಾಗಿರುತ್ತದೆ. ಹೃದಯದ ಮಹದ್‌ವೃತ್ತಿಗಳ ನೆರವಿನಿಂದ ಉಪಲಬ್ಧಿಯ ಮೂಲಕವೇ ಅದನ್ನು ಸ್ಪರ್ಶಿಸಲು ಸಾಧ್ಯವಾಗುತ್ತದೆ; ಬುದ್ಧಿ-ವಿಚಾರ-ಜ್ಞಾನ-ತರ್ಕ ಅಥವಾ ಯುಕ್ತಿಗಳಿಂದಲ್ಲ. ಇದು ನನ್ನ ಸ್ವಂತ ನಿಲುವು.

"ಲೋಕದಲ್ಲಿ ಇಂಥ ಪ್ರೀತಿಯ ನಿದರ್ಶನಗಳೂ ಇರುತ್ತವೆ. ಅವರು ಇಡೀ ಬಾಳು ತಾವು ಪ್ರೀತಿಸಿದಂಥ ವ್ಯಕ್ತಿಯಿಂದ ದೂರವಾಗಿಯೇ ಇದ್ದು ಬಿಡಬಯಸುತ್ತಾರೆ. ಅವರ ಪ್ರೀತಿಯೇ ಅವರಲ್ಲಿ ದೂರಹೋಗಿಬಿಡುವಂಥ ಪ್ರವೃತ್ತಿಯನ್ನು ಮೂಡಿಸುತ್ತದೆ. ಹತ್ತಿರದಲ್ಲಿದ್ದರೆ, ಕಣ್ಣಾರೆ ನೋಡಬೇಕೆಂಬ ಆಕಾಂಕ್ಷೆ ಮೂಡುವುದು ಸಹಜ. ಆ ವ್ಯಾಕುಲ ಮತ್ತು ತೀವ್ರ ಪ್ರವೃತ್ತಿಯನ್ನು ಸಂವರಣಗೊಳಿಸುವ ಶಕ್ತಿಯೂ ಆ ಶುದ್ಧ ಪ್ರೇಮದಿಂದಲೇ ಮೂಡಿಬರುತ್ತದೆ. ನಿಜವಾದ ಪ್ರೀತಿ ಪ್ರೇಮಿಕೆ ಅಥವಾ ಪ್ರೇಮಿ ನಿಶ್ಚಿಂತೆಯಿಂದ ಹಾಗೂ ಸುಖದಿಂದ ಇರುವುದನ್ನು ಕಾಣಬಯಸುತ್ತದೆ; ಅರ್ಥಪೂರ್ಣವೂ ಗ್ಲಾನಿರಹಿತವೂ ಆಗಿರುವುದನ್ನು ಕಾಣಬಯಸುತ್ತದೆ. ಇದೇ ಅದರ ಆತ್ಮತೃಪ್ತಿಯಾಗಿರುತ್ತದೆ.

"ಯಾವುದೇ ಭೇಟಿ ಅಥವಾ ಒಡನಾಟ ಪ್ರೇಮಿಕೆ ಅಗೌರವದಿಂದ ತಲೆತಗ್ಗಿಸುವಂತೆ ಮಾಡಿಬಿಡುತ್ತದೆಯೋ, ಆಕೆಯನ್ನು ಬಾಳಿನ ಕರ್ತವ್ಯದಿಂದ ವಿಮುಖವಾಗಿಸಿಬಿಡುತ್ತದೆಯೋ, ಕಿಂಚಿತ್ತಾದರೂ ಶಿಕ್ಷೆ, ದುಃಖ ಅಥವಾ ಅನುತಾಪ-ಅನುಶೋಚನೆಗಳಿಗೆ ಕಾರಣವಾಗುತ್ತದೆಯೋ ಅದು ಎಂದೂ ಒಳಿತನ್ನು ಸಾಧಿಸುವಂಥದಾಗಲಾರದು. ಹೀಗಾಗಿ, ಅದು ವಾಂಛನೀಯವಾಗುವುದಿಲ್ಲ.

"ಗಂಭೀರವಾದ ಪ್ರೇಮಕ್ಕೆ ತುಂಬ ಹೆಚ್ಚಿನ ಮನಃಶಕ್ತಿಯ ಅಗತ್ಯ ಉಂಟಾಗುತ್ತದೆ. ಮಿಲನ ಮತ್ತು ಅಗಲಿಕೆ - ಇವೆರಡರಲ್ಲಿಯೂ ಕಠಿಣವಾದ ಸಂಯಮ ಮತ್ತು ದೃಢವಾದ ಶಕ್ತಿ ಅಗತ್ಯವಾಗುತ್ತವೆ..... ಆತ್ಮದಾನದಲ್ಲಿ ಮಾತ್ರವೇ ಪ್ರೀತಿಯ ಸಾರ್ಥಕತೆ ಅಡಗಿರುವುದಿಲ್ಲ, ಆತ್ಮಸಂವರಣದಲ್ಲಿಯೂ ಅದು ನಿಹಿತವಾಗಿರುತ್ತದೆ.

"ನನ್ನ ಸಾಹಿತ್ಯದಲ್ಲಿ ನೀವು ಏನನ್ನು ಪಡೆದಿದ್ದೀರೋ, ಅದನ್ನು ನಾನು ನನ್ನ ಬಾಳಿನಲ್ಲಿ ಪಡೆಯದೆ ಹೋಗಿದ್ದರೆ ಅಂಥ ಸಾಹಿತ್ಯದ ಸೃಷ್ಟಿ ಸಾಧ್ಯವಾಗುತ್ತಿತ್ತೆ? ನಿನ್ನ ಈ ಮುದಿಯ ಅಣ್ಣಯ್ಯನ ಜೀವನ ಸಂಪೂರ್ಣವಾಗಿ ಸುಳ್ಳಿನ ನೆಲೆಗಟ್ಟಿನ ಮೇಲೆ ನಿಂತಿಲ್ಲ. ಸಾಧ್ಯವಾದರೆ ಎಂದಾದರೂ ಒಂದು ದಿನ ನಿನಗೊಂದು ಕಥೆ ಹೇಳುತ್ತೇನೆ. ಕೇಳಿದರೆ ಕಥೆಯೋ ಕಾದಂಬರಿಯೋ ಎಂಬಂತೆ ಅಸಹಜವಾಗಿ ತೋರಬಹುದು. ಆದರೆ, ಅದಕ್ಕಿಂತಲೂ ಹೆಚ್ಚು ವಾಸ್ತವಿಕವಾದ ಸತ್ಯ ನನ್ನ ಬಾಳಿನಲ್ಲಿ ಬೇರಾವುದೂ ಇಲ್ಲ."

ಆದರೆ ತಮ್ಮನ್ನು ತಾವೇ ಗೋಪನೀಯವಾಗಿರಿಸುವ ಅವರ ಪ್ರವೃತ್ತಿಯಿಂದಾಗಿ ಆ ಕಥೆಯನ್ನು ಕೇಳುವ ಅವಕಾಶ ಒದಗಿಬರಲೇ ಇಲ್ಲ; ಒದಗಿ ಬರುವ ಸಂಭವವೂ ಇರಲಿಲ್ಲ.

## 23

ಶರತ್‌ಚಂದ್ರರ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿದ ಎರಡು ನಾಟಕಗಳು ಈ ಅವಧಿಯಲ್ಲಿಯೇ ಹೊರಬಂದುವು. 'ಬಿರಾಜ್ ಬಹೂ' ಕಾದಂಬರಿಯ ನಾಟಕ ರೂಪ ಅದೇ ಹೆಸರಿನಿಂದ ಪ್ರಕಟವಾಯಿತು.[1] ಆದರೆ 'ದತ್ತಾ'ದ ನಾಟಕ ರೂಪ

1. ಆಗಸ್ಟ್ 18, 1934.

'ವಿಜಯಾ' ಎಂಬ ಹೆಸರಿನಲ್ಲಿ ಬೆಳಕು ಕಂಡಿತು.[1]

ಶಿಶಿರ್ ಭಾದುರಿ ಅವರು 'ಬಿರಾಜ್ ಬಹೂ'ವಿನ ರೂಪಾಂತರವನ್ನು ಸಿದ್ಧಪಡಿಸಿದ್ದರು ಹಾಗೂ ತಮ್ಮ ಸುಂದರ ಅಭಿನಯದೊಂದಿಗೆ ಅದನ್ನು ರಂಗಭೂಮಿಯ ಮೇಲೂ ಸಾದರಪಡಿಸಿದ್ದರು. ಆದರೆ, ಪೇಟೆಯಲ್ಲಿ ಲಭ್ಯವಾಗಿದ್ದ ರೂಪಾಂತರವನ್ನು ಸಿದ್ಧಪಡಿಸಿದ್ದವರು ಕಾನಾಯಿ ಬಸು ಅವರು. 'ವಿಜಯಾ' ನಾಟಕ ರೂಪಾಂತರವನ್ನು ನವ ನಾಟ್ಯ ಮಂದಿರದವರು ಸ್ಟಾರ್ ರಂಗಭೂಮಿಯಲ್ಲಿ ಸಾದರ ಪಡಿಸಿದ್ದರು.[2] ಶಿಶಿರ್ ಅವರು ಅದರಲ್ಲಿ ನರೇಂದ್ರನ ಪಾತ್ರವನ್ನು ಅಭಿನಯಿಸ ಬಯಸಿದ್ದರು. ಆದರೆ, ಇದರ ಬಗ್ಗೆ ಪತ್ರಿಕೆಗಳಲ್ಲಿ ತುಂಬ ವಾದ-ವಿವಾದಗಳು ನಡೆದು, ಕೊನೆಗೆ ಅವರು ರಾಸಬಿಹಾರಿಯ ಪಾತ್ರವನ್ನು ಅಭಿನಯಿಸಿದರು.

ಶಿಶಿರ್ ಬಾಬೂ ಅವರು 'ನವವಿಧಾನ' ಮತ್ತು 'ಗೃಹದಾಹ'ಗಳ ನಾಟ್ಯರೂಪಾಂತರವನ್ನು ಸಿದ್ಧಪಡಿಸಬೇಕೆಂದೂ ಒತ್ತಾಯಪಡಿಸಿದ್ದರು. ಆದರೆ, ಅನಿರೀಕ್ಷಿತವಾಗಿ ಅವರು ತುಂಬ ಅಸ್ವಸ್ಥರಾದುದರಿಂದಲೂ, ಶರತ್‌ಚಂದ್ರರು ಯೂರೋಪಿನ ಪ್ರವಾಸ ಕೈಗೊಳ್ಳುವ ಸಂಭವ ಏರ್ಪಟ್ಟಿದ್ದರಿಂದಲೂ ಇದು ಸಾಧ್ಯವಾಗಲಿಲ್ಲ. 'ಗೃಹದಾಹ'ದ ಎರಡು ಅಂಕಗಳನ್ನು ಸ್ವತಃ ಅವರೇ ಸಿದ್ಧಪಡಿಸಿದ್ದರು. ಉಳಿದ ರೂಪಾಂತರವನ್ನು ಮುಂದೆ 'ಬಂಗ್ಲಾ ಸಾಪ್ತಾಹಿಕ'ದ ಯತೀಂದ್ರನಾಥ ರಾಯ್ ಅವರು ಪೂರೈಸಿದರು. ಆದರೆ, ಅದು ಚೆನ್ನಾಗಿ ಬರಲಿಲ್ಲ. ರಂಗಭೂಮಿಯಲ್ಲೂ ಅದು ಯಶಸ್ವಿಯಾಗಲಿಲ್ಲ.

ಈ ದಿನಗಳಲ್ಲಿಯೇ 'ನ್ಯೂ ಥಿಯೇಟರ್ಸ್' ಸಂಸ್ಥೆಯವರು ಅವರ ಕಾದಂಬರಿಗಳನ್ನು ರಜತಪರದೆಗೆ ಅಳವಡಿಸತೊಡಗಿದರು. ನ್ಯೂ ಥಿಯೇಟರ್ಸ್‌ನವರು ತಮ್ಮ ಸಂಸ್ಥೆಯ ಸ್ಥಾಪನೆಯ[3] ಬಳಿಕ, ಅದೇ ವರ್ಷದ ಉತ್ತರಾರ್ಧದಲ್ಲಿ ಪ್ರೇಮಾಂಕುರ ಆತರ್ಥಿಯವರ ನಿರ್ದೇಶನದಲ್ಲಿ 'ದೇನಾ-ಪಾವನಾ'ವನ್ನು ನಿರ್ಮಿಸಿ, ತಮ್ಮ ಯಾತ್ರೆಯನ್ನು ಆರಂಭಿಸಿದರು. ಈ ಚಿತ್ರದಿಂದ ವೀರೇಂದ್ರನಾಥ ಸರ್ಕಾರ್ ಅವರಿಗೆ ಸಾಕಷ್ಟು ಹಣ ಲಭ್ಯವಾದುದು ಮಾತ್ರವಲ್ಲದೆ, ಒಂದು ರೋಮಾಂಚಕ ಅನುಭವವೂ ದೊರೆಯಿತು. ಶರತ್‌ಚಂದ್ರರಿಗೆ ಇದಕ್ಕಾಗಿ ದೊರೆತದ್ದು ಕೇವಲ ಒಂದು ಸಾವಿರ ರೂಪಾಯಿಗಳು. 'ದೇವದಾಸ್'ಗೆ ದೊರೆತದ್ದು ಎರಡು ಸಾವಿರ ರೂಪಾಯಿಗಳು.

ಸರ್ಕಾರ್ ಅವರೊಂದಿಗೆ ಅವರ ಸಂಬಂಧಗಳು ತುಂಬ ಹಾರ್ದಿಕವಾಗಿದ್ದುವು. ಅವರ 'ನ್ಯೂ ಸಿನೆಮಾ' ಎಂಬ ಚಿತ್ರಮಂದಿರವನ್ನೂ ಶರತ್‌ಚಂದ್ರರೇ ಉದ್ಘಾಟಿಸಿದರು. 'ವಿಜಯಾ'ದ ಚಲನಚಿತ್ರ ಅವರಿಗೆ ತುಂಬ ಇಷ್ಟವಾಯಿತು. ಅದನ್ನು ಅವರು ಮುಕ್ತಕಂಠದಿಂದ ಪ್ರಶಂಸಿಸಿದರು.[4] ಆದರೆ, 'ದೇವದಾಸ್' ಟಾಕಿ ಚಿತ್ರವನ್ನು ನಿರ್ಮಿಸಿದ ಪ್ರಮಥೇಶ ಬರುವಾ ಅವರಿಗೆ ದೊರೆತಷ್ಟು ಯಶಸ್ಸು ಬೇರೆ ಯಾರಿಗೂ

1. ಡಿಸೆಂಬರ್ 24, 1934.
2. 6 ಪೌಷ 1341 (ಡಿಸೆಂಬರ್ 1934)
3. ಫೆಬ್ರುವರಿ 10, 1931.
4. 20 ಕಾರ್ತಿಕ 1343 (6 ನವೆಂಬರ್ 1936).

ದೊರೆಯಲಿಲ್ಲ. ಗೌರೀಪುರದ ರಾಜಕುಮಾರರಾಗಿದ್ದ ಪ್ರಮಥೇಶ ಬರುವಾ ಅವರು 'ದೇವದಾಸ್' ಚಿತ್ರವನ್ನು ನಿರ್ಮಿಸುವ ಯೋಜನೆಯನ್ನು ಮುಂದಿಟ್ಟುಕೊಂಡು ಬಂದು ಶರತ್‌ಚಂದ್ರರನ್ನು ಕಂಡಾಗ, ಅವರು ಇದಕ್ಕೆ ಅನುಮತಿ ಕೊಡಲು ಸ್ಪಷ್ಟವಾಗಿ ನಿರಾಕರಿಸಿದರು. ಅದಕ್ಕೆ ಅವರು ಕೊಟ್ಟಿದ್ದ ಕಾರಣ ಇದು: "ನನ್ನ 'ದೇವದಾಸ್' ಮಹಾಭಾವುಕ ವ್ಯಕ್ತಿ. ಆವನನ್ನು ರಜತ ಪರದೆಯ ಮೇಲೆ ಮೂಡಿಸುವುದು ಸಹಜವಾಗಿರುವುದಿಲ್ಲ. ನಾನು ನಿಮಗೆ ಯಾವ ರೂಪದಲ್ಲಿಯೂ ಅನುಮತಿ ಕೊಡಲಾರೆ. ನನ್ನ ಇನ್ನೂ ಕೆಲವು ಕಾದಂಬರಿಗಳಿವೆ. ಅವುಗಳಲ್ಲಿ ಯಾವುದಾದ ರಿಂದಲೂ ಒಂದನ್ನು ಆರಿಸಿಕೊಳ್ಳಿ.. 'ದೇವದಾಸ'ನನ್ನು ಮುಟ್ಟಲು ನಾನು ಅವಕಾಶ ಕೊಡುವುದಿಲ್ಲ. ನನ್ನ 'ದೇವದಾಸ' ತುಂಬ ಇಮೋಶನಲ್."

ಬರುವಾ ಅವರು ಉದಾಸರಾದರೂ ಹತಾಶರಾಗಲಿಲ್ಲ. ಆದ್ದರಿಂದ, ಕೊನೆಗೆ ಶರತ್‌ಚಂದ್ರರು ಅವರೊಂದಿಗೆ ಒಂದು ಒಪ್ಪಂದಕ್ಕೆ ಬರಲೇ ಬೇಕಾಯಿತು. ಅವರು ಹೀಗೆ ಹೇಳಲೇ ಬೇಕಾಗಿ ಬಂದಿತು: "ನಾನು 'ದೇವದಾಸ್'ಚಿತ್ರವನ್ನು ನಿರ್ಮಿಸಲು ನಿಮಗೆ ಅನುಮತಿ ಕೊಡುತ್ತೇನೆ. ಆದರೆ, ರಜತಪರದೆಯ ಮೇಲೆ ಅವನಿಗೆ ವಾಸ್ತವಿಕ ರೂಪವನ್ನೇ ಕೊಡಬೇಕು. ದೇವದಾಸನ ಪಾತ್ರಕ್ಕೆ ನೀವು ಸರಿ ಹೋಗುತ್ತೀರಿ ಎಂದು ನನಗೆ ಪೂರ್ಣನಂಬಿಕೆ ಇದೆ. ಆದರೆ, ಪಾರೋ ಮತ್ತು ಚುನ್ನೀಲಾಲ್ ಅವರ ಪಾತ್ರಗಳೂ ಕಡಿಮೆ ಮಹತ್ವದವೇನಲ್ಲ. ಅವುಗಳ ಬಗ್ಗೆಯೂ ವಿಶೇಷ ಗಮನ ಹರಿಸಬೇಕು."

ಮೊದಲಿಗೆ ಶರತ್‌ಚಂದ್ರರು ಶೂಟಿಂಗ್ ಸಮಯದಲ್ಲಿ ಸೆಟ್‌ನಲ್ಲಿ ಇರುತ್ತಿದ್ದರು. ಆದರೆ, ಬರುವಾ ಅವರು ಪ್ರಾಮಾಣಿಕವಾಗಿ ಚಿತ್ರೀಕರಿಸಲು ಪ್ರಯತ್ನಿಸುತ್ತಿದ್ದಾರೆಂದು ಅವರಿಗೆ ಬಹುಬೇಗ ಮನದಟ್ಟಾಯಿತು. ಆಮೇಲೆ ಅವರು ಚಿತ್ರೀಕರಣಕ್ಕೆ ಹೋಗುವುದನ್ನು ಬಿಟ್ಟರು. ನಿರ್ದೇಶಕರಾಗಿ ಮತ್ತು ನಟರಾಗಿ-ಎರಡೂ ರೀತಿಗಳಲ್ಲಿ ಬರುವಾ ಅವರು ಚಿತ್ರದ ಮಾರ್ಮಿಕ ಹಾಗೂ ಭಾವುಕತಾಪೂರ್ಣ ಸನ್ನಿವೇಶಗಳನ್ನು ಸಂಯಮದಿಂದ ಹಾಗೂ ಎಚ್ಚರದಿಂದ ಚಿತ್ರೀಕರಿಸುತ್ತಿದ್ದಾರೆಂಬುದನ್ನು ಅವರೇ ತಮ್ಮ ಕಣ್ಣಾರೆ ನೋಡಿದ್ದರು.

ಕೊನೆಗೆ 'ದೇವದಾಸ್' ಚಿತ್ರರೂಪದಲ್ಲಿ ಸಿದ್ಧವಾಯಿತು, ಮಹದಾಶೆಯಿಂದ ಬರುವಾ ಅವರು ಶರತ್‌ಚಂದ್ರರಿಗೆ ಆ ಚಿತ್ರವನ್ನು ತೋರಿಸಲು ತೆಗೆದುಕೊಂಡು ಬಂದರು. ಇಡೀ ಚಿತ್ರವನ್ನು ನೋಡಿದ ಮೇಲೆ ಶರತ್‌ಚಂದ್ರರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಅವರು ಮನಃಪೂರ್ವಕವಾಗಿ ಬರುವಾ ಅವರನ್ನು ಆಶೀರ್ವದಿಸಿದರು. ಜನತೆಯೂ ಮುಕ್ತ ಮನಸ್ಸಿನಿಂದ 'ದೇವದಾಸ್' ಚಿತ್ರವನ್ನು ಸ್ವಾಗತಿಸಿತು.

ನ್ಯೂ ಥಿಯೇಟರ್ಸ್‌ನವರಿಗೆ ಅವರು ತಮ್ಮ ಇತರ ಕೃತಿಗಳ ಚಿತ್ರೀಕರಣದ ಹಕ್ಕುಗಳನ್ನೂ ಮಾರಿದ್ದರು. ಛಾಯಾ ಸಿನೆಮಾದ ಶಚೀಂದ್ರನಾಥ ವಾರಿಕ್ ಅವರು ಮುಂದೆ ಅವರಿಂದಲೇ 1500ರೂ.ಗಳಿಗೆ 'ಚಂದ್ರನಾಥ' ಚಿತ್ರೀಕರಣದ ಹಕ್ಕುಗಳನ್ನು ಕೊಂಡುಕೊಂಡರು.[1] ಅವರ ಅನೇಕ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಅನೇಕ

1. ಆಗಸ್ಟ್ 22, 1936.

ಚಿತ್ರಗಳು ತಯಾರಾದುವು. ಆದರೆ, ಆ ಭಯಂಕರ ಭಾವುಕ 'ದೇವದಾಸ್' ತಂದು ಕೊಟ್ಟ ಯಶಸ್ಸು ಅಭೂತಪೂರ್ವವಾದುದಾಗಿತ್ತು.

"ಶರತ್-ಗ್ರಂಥಾವಳಿ'ಯ ಆರು[1] ಮತ್ತು ಏಳನೆಯ[2] ಭಾಗಗಳು ಹಾಗೂ ಅವರ ಲೇಖನಗಳ ಒಂದು ಸಂಗ್ರಹ ಇದೇ ಅವಧಿಯಲ್ಲಿ ಹೊರಬಂದುವು. ಈಗಲೂ ಅವರು ತಮ್ಮ ಹಿಂದಿನ ರಚನೆಗಳಲ್ಲಿ ಬದಲಾವಣೆಗಳನ್ನು ಮಾಡುತ್ತಲಿದ್ದರು. 'ಚಂದ್ರನಾಥ' ಕಾದಂಬರಿಯ 14ನೆಯ ಆವೃತ್ತಿಯ ಮುನ್ನುಡಿಯಲ್ಲಿ ಅವರು ಈ ವಿಚಾರವನ್ನು ಒಪ್ಪಿಕೊಂಡಿದ್ದಾರೆ: " 'ಚಂದ್ರನಾಥ' ನನ್ನ ಬಾಲ್ಯಕಾಲದ ಕೃತಿ. ಆ ದಿನಗಳಲ್ಲಿ ಕಥೆ-ಕಾದಂಬರಿಗಳಲ್ಲಿ ಬಳಸುತ್ತಿದ್ದ ಭಾಷೆಯೇ ಈ ಪುಸ್ತಕದಲ್ಲಿಯೂ ಇತ್ತು. ಈ ಆವೃತ್ತಿಯಲ್ಲಿ ಇದರಲ್ಲಿ ಬದಲಾವಣೆಗಳನ್ನು ಮಾಡಲಾಗಿದೆ."[3]

ಈ ಅವಧಿಯಲ್ಲಿ ನಡೆದ ಒಂದು ಘಟನೆ ಉಲ್ಲೇಖನೀಯವಾಗಿದೆ. 'ನಿಷ್ಕೃತಿ'ಯ ಇಂಗ್ಲಿಷ್ ಅನುವಾದದ ಪ್ರಕಟಣೆಯೇ ಆ ಘಟನೆ. ದಿಲೀಪಕುಮಾರ್ ರಾಯ್ ಅವರು ಈ ಅನುವಾದವನ್ನು ಸಿದ್ಧಪಡಿಸಿದ್ದರು.[4] ಇದನ್ನು ಶರತ್‌ಚಂದ್ರರ ಮೂರು ಸರ್ವಶ್ರೇಷ್ಠ ಕಥೆಗಳಲ್ಲಿ ಒಂದೆಂದು ಅವರು ಭಾವಿಸಿದ್ದರು. ಉಳಿದ ಎರಡು ಕೃತಿಗಳೆಂದರೆ 'ರಾಮೇರ್ ಸುಮತಿ' ಮತ್ತು 'ಬಿಂದೂರ್ ಛೇಲೇ'[5]. ಈ ಮೂರನ್ನೂ ಅವರು ಅನುವಾದಿಸಬಯಸಿದ್ದರು. ಶರತ್‌ಚಂದ್ರರ ವಿಷಯದಲ್ಲಿ ಅವರಿಗೆ ತುಂಬ ಗೌರವವಿತ್ತು. ಅವರಿಂದಲೂ ಅವರು ಆಳವಾದ ಆತ್ಮೀಯತೆಯನ್ನೂ, ಅಗಾಧವಾದ ಸ್ನೇಹವನ್ನೂ ಪಡೆದಿದ್ದರು. ಬಹುಶಃ ಈ ಋಣವನ್ನು ತೀರಿಸುವುದಕ್ಕಾಗಿಯೇ ಅವರು ಈ ಕೆಲಸವನ್ನು ಮಾಡಲು ಸಿದ್ಧರಾಗಿದ್ದರು. ಅವರು ಅರವಿಂದರೊಂದಿಗೆ ಹೀಗೆ ಹೇಳಿದ್ದರು: "ನಾನು 'ನಿಷ್ಕೃತಿ'ಯನ್ನು ಅನುವಾದ ಮಾಡಬಯಸಿದ್ದೇನೆ. ನೀವು ಅದನ್ನು ನೋಡಿಕೊಡಬೇಕು."

ಅವರು ಅದಕ್ಕೆ ಒಪ್ಪಿದ್ದರು. ಶರತ್‌ಚಂದ್ರರ ಆಶೀರ್ವಾದವಂತೂ ಅವರಿಗೆ ದೊರೆತೇ ಇತ್ತು. ತುಂಬ ಉತ್ಸಾಹದಿಂದ ಅವರು ಅದನ್ನು ಅನುವಾದಿಸ ತೊಡಗಿದರು. ಅನುವಾದ ಕಾರ್ಯ ಮುಗಿದ ಮೇಲೆ, ಅದನ್ನು ಪ್ರಶಂಸಿಸಿ ಅವರು ಕೆಲವು ಪಂಕ್ತಿಗಳನ್ನು ಬರೆದಿದ್ದರು:

"ಶರತ್‌ಚಂದ್ರರ ಕೃತಿಗಳಲ್ಲಿ ಅವರ ವ್ಯಾಪಕ ಮೇಧಾಶಕ್ತಿ, ವ್ಯಕ್ತಿಗಳ ಮತ್ತು ವಸ್ತುಗಳ ಸೂಕ್ಷ್ಮವಾದ ಮತ್ತು ಸರಿಯಾದ ಅವಲೋಕನ ಮತ್ತು ದುಃಖ ಮತ್ತು ವೇದನೆಗಳ ವಿಷಯದಲ್ಲಿನ ಸಹಾನುಭೂತಿಪೂರ್ಣ ಹೃದಯದ ಅಚ್ಚಳಿಯದ ಮುದ್ರೆ ಕಾಣದೊರೆಯುತ್ತವೆ. ಅವರು ಅದೆಷ್ಟು ಸಂವೇದನಶೀಲರಾಗಿದ್ದಾರೆಂದರೆ ಅವರಿಗ ಈ ಲೋಕದಲ್ಲಿ ಶಾಂತಿ ದೊರೆಯುವುದಾದರೂ ಹೇಗೆ ಸಾಧ್ಯ? ಬಹುಶಃ ಅವರ

1. 25-09-1934.
2. 27-09-1935.
3. ಅಕ್ಟೋಬರ್ 4, 1937.
4. ಮಾರ್ಚ್ 29, 1935.
5. ಇವುಗಳನ್ನು ಅವರು ತೀರಿಕೊಂಡ ಬಳಿಕ, ದಿಲೀಪ್ ಕುಮಾರ್ ರಾಯ್ ಅವರು ಅನುವಾದಿಸಿದ್ದರು. 'ಮದರ್ಸ್ ಅಂಡ್ ಸನ್ಸ್'ನಲ್ಲಿ ಈ ಎರಡು ಕಿರು ಕಾದಂಬರಿಗಳೂ ಸೇರಿಕೊಂಡಿವೆ.

ದೃಷ್ಟಿಯೂ ಅಷ್ಟೇ ತೀಕ್ಷ್ಣವಾಗಿದೆ. ಅವರ ಮನಸ್ಸು ತುಂಬ ನಿರ್ಮಲವಾಗಿದೆ ಹಾಗೂ ಅವರ ಮನೋವೃತ್ತಿ ತುಂಬ ಉದಾರವಾಗಿದೆ."

ಈ ಅನುವಾದಕ್ಕೆ ಮುನ್ನುಡಿ ಬರೆಯಬೇಕೆಂದು ದಿಲೀಪ್‌ಕುಮಾರ್ ರಾಯ್ ಅವರು ಕವಿವರ್ಯ ರವೀಂದ್ರರನ್ನು ಕೋರಿದರು. ಆ ಅವಧಿಯಲ್ಲಿ ಶರತ್‌ಚಂದ್ರರ ಮತ್ತು ರವೀಂದ್ರರ ನಡುವಣ ಮನಸ್ತಾಪ ತುಂಬ ಗಂಭೀರವಾಗಿತ್ತು. ಆದ್ದರಿಂದ, ಕವಿವರ್ಯರು ತಮ್ಮ ಕೋರಿಕೆಯನ್ನು ಮನ್ನಿಸುತ್ತಾರೆಂಬ ಭರವಸೆ ಅವರಿಗೆ ಇರಲಿಲ್ಲ. ಆದರೆ, ಅವರು ಸುದೀರ್ಘಪತ್ರವೊಂದರಲ್ಲಿ ಶರತ್‌ಚಂದ್ರರ ಮನೋವ್ಯಥೆ ಏನು ಎಂಬುದನ್ನು ಉಲ್ಲೇಖಿಸಿದ್ದಾರೆ. ಕೊನೆಗೆ, ಕವಿವರ್ಯರು ಶರತ್‌ಚಂದ್ರರ ಪ್ರತಿಭೆಯನ್ನು ಗೌರವಿಸಿ, ನಿಷ್ಕೃತಿಗೆ ಚಿಕ್ಕದೊಂದು ಮುನ್ನುಡಿಯನ್ನು ಬರೆದುಕಳಿಸಿದರು: "ಶರತ್‌ಚಂದ್ರರು ನಮ್ಮ ನವೀನತಮ ನೇತಾರರು. ಅವರು ಮುಕ್ತಿಯ ಮಾರ್ಗದ ಮೂಲಕ ಬಂಗಾಳಿ ಕಾದಂಬರಿಯನ್ನು ಆಧುನಿಕ ವಿಶ್ವಸಾಹಿತ್ಯದ ಪರಿಕಲ್ಪನೆಯ ಹತ್ತಿರ ತರುವ ಕಾರ್ಯವನ್ನು ಮಾಡಿದ್ದಾರೆ. ಅವರು ನಮ್ಮ ಭಾಷೆಗೆ ಹೊಸ ಶಕ್ತಿಯನ್ನು ತಂದುಕೊಟ್ಟಿದ್ದಾರೆ. ತಮ್ಮ ಕತೆಗಳಲ್ಲಿ ಅವರು ಬಂಗಾಳಿ ಹೃದಯವನ್ನು ಹೊಸ ದೃಷ್ಟಿಯ ಬೆಳಕಿನಿಂದ ಬೆಳಗಿದ್ದಾರೆ. ಅವರು ಜನತೆಯ ವ್ಯಕ್ತಿತ್ವದಲ್ಲಿ ಅಡಗಿದ್ದ ಸಾಮಾನ್ಯ ಸಂಗತಿಗಳ ಜೀವಂತ ಮಹತ್ವವನ್ನು ಹೊರಗೆಳೆದಿದ್ದಾರೆ. ಒಬ್ಬ ಕಾದಂಬರಿಕಾರನಿಗೆ ದೊರೆಯಬಹುದಾಗಿರುವಂಥ ಸರ್ವಶ್ರೇಷ್ಠ ಪ್ರಶಸ್ತಿಯನ್ನು ಗಳಿಸಿದ್ದಾರೆ. ಬಂಗಾಳಿ ಓದುಗರ ಹೃದಯವನ್ನು ಅವರು ಸಂಪೂರ್ಣವಾಗಿ ಗೆದ್ದುಕೊಂಡು ಬಿಟ್ಟಿದ್ದಾರೆ."

ಅರವಿಂದರು ಆ ಅನುವಾದವನ್ನು ಪರಿಷ್ಕರಿಸುತ್ತಿದ್ದಾರೆಂದು ತಿಳಿದಾಗ, ಶರತ್‌ಚಂದ್ರರು ದಿಲೀಪಕುಮಾರ್ ಅವರಿಗೆ ಒಂದು ಪತ್ರವನ್ನು ಬರೆದರು. ಆ ಪತ್ರ ಹಲವು ದೃಷ್ಟಿಗಳಿಂದ ಮಹತ್ವಪೂರ್ಣವಾದ ದಾಖಲೆಯಾಗಿದೆ.

ಪಿ-566, ಮನೋಹರ ಪುಕುರ
ಕಲ್ಕತ್ತಾ
3 ಮಾಘ 1341.

ಪರಮಕಲ್ಯಾಣಯೋಷು ಮಂಟೂ:

ನಿನ್ನೆ ರಾತ್ರಿ ಹಳ್ಳಿಯ ಮನೆಯಿಂದ ಇಲ್ಲಿಗೆ ಬಂದಿದ್ದೇನೆ. ನಿನ್ನ ಪತ್ರಗಳು ತಲುಪಿವೆ. ಒಂದೊಂದಾಗಿ, ಮುಖ್ಯವಾದ ಸಂಗತಿಗಳಿಗೆ ಉತ್ತರ ಕೊಡುತ್ತೇನೆ:

1) ನಿಮ್ಮ ನಿಶಿಕಾಂತನ ಚಿತ್ರ ಚೆನ್ನಾಗಿ ಬಂದಿದೆ. ಬಹುದಿನಗಳ ಬಳಿಕ ಮತ್ತೆ ನಿನ್ನ ಮುಖವನ್ನು ನೋಡಿದಂತಾಯಿತು. ತುಂಬ ಸಂತೋಷವಾಯಿತು. ಈಗ ನಿಜವಾಗಿಯೂ ಬಂದು ನೋಡಿಕೊಂಡು ಬರಬೇಕೆಂದು ತುಂಬ ಆಸೆಯಾಗಿದೆ. ಆದರೆ, ಆ ಆಸೆಯನ್ನು ಬಿಟ್ಟಿದ್ದೇನೆ. ಈ ಜೀವನದಲ್ಲಿ ಮತ್ತೆ ನಿಮ್ಮನ್ನೆಲ್ಲ ನೋಡಲಾರೆ ಎಂದು ಅನ್ನಿಸಿದೆ.

2) ಟೈಪ್‌ರೈಟರ್ ಸುರಕ್ಷಿತ ಸ್ಥಿತಿಯಲ್ಲಿ ಬಂದು ಸೇರಿದೆಯಲ್ಲ, ಅದು ಸಂತೋಷದ ಸಂಗತಿ. ವಿಕಲಾಂಗವಾಗಿ ನಿನ್ನ ಆಶ್ರಮವನ್ನು ಸೇರಿಬಿಡುತ್ತದೆಯೇನೋ ಎಂಬ

ಭಯವಿತ್ತು. 'ಮಂಟೂ ಅವರ ಸ್ವಂತದ ಟೈಪ್‌ರೈಟರ್ ಹಳೆಯದಾಗಿ ಬಿಟ್ಟಿದೆ; ಅವರಿಗೊಂದು ಹೊಸ ಮೆಶೀನ್ ಬೇಕಾಗಿದೆ' ಎಂದು ಅವತ್ತು ಹೀರೇನ್ ಬಂದು ತಿಳಿಸಿದ. 'ಏನಾದರೂ ಸ್ವಲ್ಪ ಪ್ರಯತ್ನಮಾಡಿ ಕಳಿಸಿಬಿಡು, ಹೀರೇನ್' ಎಂದು ಹೇಳಿದ್ದೆ. ಅವನೂ ಒಪ್ಪಿಕೊಂಡಿದ್ದ. ಇದೆಲ್ಲ ಅವನೇ ಮಾಡಿದ್ದಾನೆ. ನಾನು ಜಡವಸ್ತುವಾಗಿ ಬಿಟ್ಟಿದ್ದೇನೆ. ನನ್ನಿಂದ ಏನೂ ಆಗುವುದಿಲ್ಲ. ನಾನು ಹಣದ ಚೆಕ್ಕಿಗೆ ಸಹಿ ಹಾಕಿದ್ದೆ ಅಷ್ಟೆ. ಅದು ನಿನಗೆ ಇಷ್ಟವಾಗಿದೆ ಎಂಬುದಕ್ಕಿಂತ ಹೆಚ್ಚಿನ ಆನಂದದ ಸಂಗತಿ ಯಾವುದೂ ಇಲ್ಲ. ಎಲ್ಲವನ್ನೂ ಸಮರ್ಪಿಸಿಬಿಟ್ಟಿರುವಂಥ ವ್ಯಕ್ತಿ ಇನ್ನೇನನ್ನೂ ಕೊಡಬೇಕಾಗಿಲ್ಲ; ಪ್ರತಿಯಾಗಿ ಪಡೆಯಬೇಕಾಗಿದೆ. ನನಗೆ ಸಾಕಷ್ಟು ದೊರೆತಿದೆ, ನಿನಗಿಂತಲೂ ತುಂಬ ಹೆಚ್ಚಾಗಿ.

3) ಅರವಿಂದರು ಸ್ವಹಸ್ತದಲ್ಲಿ ಬರೆದಿರುವ ಕಾಗದವನ್ನು ಜೋಪಾನವಾಗಿ ಎತ್ತಿಟ್ಟಿದ್ದೇನೆ. ಅದೊಂದು ರತ್ನವೇ ಸರಿ.

4) 'ನಿಷ್ಕೃತಿ'ಯ ಉತ್ತಮ ಅನುವಾದವನ್ನು ಕೊಡಲು ನಿನ್ನಿಂದ ಸಾಧ್ಯವಿದ್ದಷ್ಟು ಪ್ರಯತ್ನ ಮಾಡುತ್ತೀಯೆ ಎಂಬುದು ನನಗೆ ಗೊತ್ತಿತ್ತು. ನೀನು ನನ್ನನ್ನು ನಿಜವಾಗಿಯೂ ಪ್ರೀತಿಸುತ್ತೀಯೆ ಎಂಬ ಕಾರಣಕ್ಕಾಗಿಯೇ ಅಲ್ಲ; ವಾಸ್ತವವಾಗಿ ಯಾರು ಸಾಧುವಿನ ವ್ರತವನ್ನು ಸ್ವೀಕರಿಸಿರುತ್ತಾರೋ ಅವರ ಸ್ವಭಾವವೇ ಅದು. ಅಂಥವರಿಗೆ ಹಾಗೆ ಮಾಡದೆ ಇರಲು ಸಾಧ್ಯವಾಗುವುದೇ ಇಲ್ಲ; ಅವರು ಮಾಡುವುದೇ ಇಲ್ಲ; ಮಾಡಿದರೆ ಕಳಪೆ ಕೆಲಸವನ್ನಂತೂ ಮಾಡುವುದಿಲ್ಲ.

5) ಅರವಿಂದರೇ ಸ್ವತಃ ಅನುವಾದವನ್ನು ನೋಡಿಕೊಡಲು ಒಪ್ಪಿರುವಾಗ, ಅನುವಾದ ಒಳ್ಳೆಯದೇ ಆಗುತ್ತದೆ. ಆದರೆ, ಮಂಟೂ, ಪುಸ್ತಕದಲ್ಲಿ ಅಂಥ ವೈಶಿಷ್ಟ್ಯವೇನಿದೆ? ಅರವಿಂದರಿಗೆ ಅದು ಏಕೆ ಇಷ್ಟವಾಯಿತು? -ನನಗೆ ಗೊತ್ತಿಲ್ಲ. ಅವರಿಗೆ ಇಷ್ಟವಾಗದೆ ಹೋಗಿದ್ದರೆ, ಅದರಲ್ಲಿ ಆಶ್ಚರ್ಯವೇನೂ ಇರುತ್ತಿರಲಿಲ್ಲ; ದುಃಖವೂ ಆಗುತ್ತಿರಲಿಲ್ಲ. 'ಶ್ರೀಕಾಂತ' ಕಾದಂಬರಿಗೆ ಪ್ರಚಾರವನ್ನು ದೊರಕಿಸಿಕೊಡಲು ನಿನಗೆ ಸಾಧ್ಯವಾದಾಗ, ಬಂಗಾಳಿ ಕಾದಂಬರಿಕಾರನೊಬ್ಬನನ್ನು ಪಶ್ಚಿಮದ ಜನತೆ ಶ್ರದ್ಧೆ-ಗೌರವಗಳಿಂದ ಕಾಣತೊಡಗುತ್ತದೆಂದು ಭಾವಿಸುತ್ತೇನೆ. ನಿನ್ನ ಪ್ರಯತ್ನ ಮತ್ತು ಅರವಿಂದರ ಆಶೀರ್ವಾದ ಇದ್ದರೆ, ಈ ಅಸಂಭವವೂ ಒಂದು ದಿನ ಸಂಭವವಾಗಿ ಬಿಡುತ್ತದೆ ಎಂದು ನನಗೆ ನಂಬಿಕೆ ಇದೆ.

6) ಅನುವಾದದ ವಿಷಯದಲ್ಲಿ ನಿನಗೆ ಪೂರ್ಣ ಸ್ವಾತಂತ್ರ್ಯವಿರಬೇಕೆಂಬುದನ್ನು ನಾನು ಒಪ್ಪಿದ್ದೇನೆ. ಇದಕ್ಕೆ ಕಾರಣವೇನೆಂದರೆ ನೀನು ಅನುವಾದಕ ಮಾತ್ರವಾಗಿರದೆ ಸ್ವತಃ ದೊಡ್ಡ ಲೇಖಕನೂ ಆಗಿರುವುದು. ಅಕಿಂಚನನೆಂದು ನಿನ್ನನ್ನು ಸಾಧಿಸಿ ತೋರುವಂಥ ಜನರಿಗೇನೂ ಕೊರತೆ ಇಲ್ಲ..... ಆದರೆ ಅವರೆಲ್ಲರ ಸಾಮೂಹಿಕ ಪ್ರಯತ್ನಕ್ಕಿಂತಲೂ ನಿನ್ನ ಪ್ರತಿಭೆ ಮತ್ತು ಏಕಾಗ್ರಸಾಧನೆ ಎಷ್ಟೋ ಹಿರಿದಾದುದು. ಎಲ್ಲದರ ಹಿಂದೆ ನಿನ್ನ ಗುರುವಿನ ಶುಭಾಕಾಂಕ್ಷೆ ಇದ್ದೇ ಇದೆ. ಅವರ ಎಲ್ಲ ಪ್ರಯತ್ನಗಳೂ ಯಶಸ್ವಿಯಾಗಿ, ನಿನ್ನ ಆಂತರ್ಯದ ಜಾಗ್ರತಶಕ್ತಿ ಸಾರ್ಥಕವಾಗದೆ ಹೋಗುವುದು ಸಾಧ್ಯವೇ ಇಲ್ಲ, ಮಂಟೂ!

7) ರವೀಂದ್ರರು ನನ್ನನ್ನು ಪರಿಚಯಿಸಿಕೊಡಬಯಸಿದ್ದಾರೆ ಎಂಬುದನ್ನು ನಾನು

ನಂಬಲಾರೆ. ನನ್ನ ವಿಷಯದಲ್ಲಿ ಅವರು ಪ್ರಸನ್ನರಾಗಿಲ್ಲ. ಇದಲ್ಲದೆ, ಅವರಿಗೆ ಬಿಡುವಾದರೂ ಎಲ್ಲಿ ಬರಬೇಕು ? ಸಾಹಿತ್ಯಸೇವೆಯ ಕಾರ್ಯಕ್ಕೆ ಸಂಬಂಧಿಸಿದಂತೆ ಅವರು ನನಗೆ ಗುರುಸದೃಶರು. ಅವರ ಋಣವನ್ನು ನಾನೆಂದೂ ತೀರಿಸಲಾರೆ. ಮನಸ್ಸಿನಲ್ಲಿ ಅವರ ಬಗ್ಗೆ ತುಂಬ ಶ್ರದ್ಧೆ-ಗೌರವಗಳನ್ನಿರಿಸಿಕೊಂಡಿದ್ದೇನೆ. ಆದರೆ, ಅದೃಷ್ಟ ಅದಕ್ಕೆ ಸಾಕ್ಷಿಯನ್ನು ನುಡಿಯಲಾರದೆ ಹೋಗಿದೆ. ನನ್ನ ವಿಷಯದಲ್ಲಿ ಅವರು ವಿಮುಖರಾಗಿರುವುದಕ್ಕೆ ಕೊನೆಯೇ ಇಲ್ಲವೇನೋ. ಆದ್ದರಿಂದ ಇದಕ್ಕಾಗಿ ಪ್ರಯತ್ನಿಸುವುದು ವ್ಯರ್ಥ.

8) ಹೀರೇನ್ ಇವತ್ತು-ನಾಳೆ ಬರಬಹುದು. ನಿನ್ನ ಕಾಗದಗಳನ್ನು ಕಳಿಸಿಕೊಡುವಂತೆ ಅವನಿಗೆ ಹೇಳುತ್ತೇನೆ.

9) ಇನ್ನು ಉಳಿದಿರುವುದು ನಿನ್ನ ವಿಚಾರ. ನಾನು ನಿನಗೆ ತುಂಬ ಕೃತಜ್ಞನಾಗಿದ್ದೇನೆ, ಮಂಟೂ. ಇದಕ್ಕಿಂತ ಹೆಚ್ಚೇನು ಹೇಳಲಿ? ಕಾಗದ ಬರೆಯುವುದು ನನಗೆ ಎಂದೂ ತೊಡಕಿನ ಕೆಲಸವೇ ಆಗಿದೆ. ಸಂಭಾಳಿಸಿಕೊಂಡು ಬರೆಯಲಾರದೆ ಹೋಗುತ್ತೇನೆ. ಆದ್ದರಿಂದ, ನಾನು ಹೇಳಬೇಕಾಗಿದ್ದ ಮಾತುಗಳನ್ನು ಹೇಳಲಾರದೆ ಹೋದೆ. ಅದು ನನ್ನ ಅಸಾಮರ್ಥ್ಯವೇ ಹೊರತು, ಅನಿಚ್ಛೆ ಎಂದೂ ಅಲ್ಲ. ಇದನ್ನು ನಂಬು.

ನನ್ನ ಪ್ರೀತಿಯ ಆಶೀರ್ವಾದಗಳನ್ನು ಸ್ವೀಕರಿಸು. ಸೌರೀನ್‌ಗೆ ಹೇಳು ಹುಡುಗನ ವಿಚಾರ ನೆನಪಿಗೆ ಬರುತ್ತಿಲ್ಲ. ದಿವಂಗತ ದಾದಾ ಅವರ ಮನೆಯಲ್ಲಿ ಅಥವಾ ತಕೂ ಅವರ ಮನೆಯಲ್ಲಿ ಬಹುಶಃ ನೋಡಿರಬೇಕು.

10) ಅರವಿಂದರ ಹೊಸವರ್ಷದ ಪ್ರಾರ್ಥನೆ ನಿಜವಾಗಿಯೂ ತುಂಬ ಇಷ್ಟವಾಯಿತು. ವಾಸ್ತವವಾಗಿ ಅವರು ತುಂಬ ದೊಡ್ಡ ಕವಿಗಳು.

ಶುಭಾಕಾಂಕ್ಷಿ
ಶರತ್‌ಚಂದ್ರ ಚಟ್ಟೋಪಾಧ್ಯಾಯ

ದಿಲೀಪ್‌ಕುಮಾರ್ ಅವರು ಈ ಪತ್ರವನ್ನು ಅರವಿಂದರಿಗೆ ಕಳಿಸಿಕೊಟ್ಟರು ಮತ್ತು ಹೀಗೆ ಬರೆದರು: "ಮನುಷ್ಯನ ಚೈತನ್ಯದ ಲೀಲೆಯೇ ಈ ಜೀವನದ ಮೂಲವನ್ನು ಸರಸವಾಗಿರಿಸುತ್ತದೆ ಹಾಗೂ ವಸಂತವನ್ನು ವರ್ಣಮಯವಾಗಿಸುತ್ತದೆ."

ಇದಕ್ಕೆ ಅರವಿಂದರು ಕೊಟ್ಟ ಉತ್ತರವೂ ಅತ್ಯಂತ ಮಹತ್ವಪೂರ್ಣವಾಗಿದೆ: "ಶರತ್‌ಚಂದ್ರರ ಪತ್ರಕ್ಕೆ ಮಹತ್ವ ಇರುವುದು ಅದರ ಜೀವಂತಿಕೆಯಿಂದಾಗಿ ಅಲ್ಲ. ಅದು ಆ ಜೀವಂತಿಕೆಯ ನಡುವಿನಿಂದಲೇ ಹೊರಹೊಮ್ಮಿದ್ದರೂ, ಆ ಜೀವಂತಿಕೆ ಅದರ ಮೂಲ ಪ್ರೇರಣೆಯಾಗಿಲ್ಲ. ಅದರ ಪ್ರತಿಯೊಂದು ಪಂಕ್ತಿಯಲ್ಲಿಯೂ ಅಂತರಾತ್ಮನ ಬೆಳಕು ಚಿಮ್ಮಿ ಹರಿಯುತ್ತದೆ. ಮನುಷ್ಯನಲ್ಲಿ ಈ ಬೆಳಕು ಹೇಗೆ ಸಕ್ರಿಯವಾಗುತ್ತದೆ ಎಂದು ಯಾರಾದರೂ ನನ್ನನ್ನು ಕೇಳಿದರೆ, ಆಗ ಅಕುಂಠಿತ ಭಾವನೆಯಿಂದ ಹೇಳುತ್ತೇನೆ - ಹೀಗೆ ಈ ಪತ್ರದಂತೆ. ಈ ಅಂತರಾತ್ಮನೇ ನಮ್ಮ ನಿಜವಾದ ಸಂಪತ್ತು. ವಸ್ತು, ಪ್ರಾಣ ಮತ್ತು ಮನಸ್ಸುಗಳಿಗೆ ಜೀವಂತಶಕ್ತಿಯನ್ನು ತುಂಬುವುದೂ ಇದೇ; ಇದರ ಮಾಧ್ಯಮದಿಂದಲೇ ಅದು ತನ್ನನ್ನು

ಬೆಳಗಿಸಿಕೊಳ್ಳುತ್ತದೆ ಹಾಗೂ ವಿಕಾಸಗೊಳಿಸಿಕೊಳ್ಳುತ್ತದೆ - ಲಾವಣ್ಯ ಮತ್ತು ಸೌಕುಮಾರ್ಯಗಳ ರಸಾಯನದಲ್ಲಿ ಮನುಷ್ಯರಲ್ಲಿ ಮಾತ್ರವೇ ಇದು ಶಕ್ತಿಯಿಂದ ಹಾಗೂ ಸ್ವತಂತ್ರವಾಗಿ ಕೆಲಸ ಮಾಡುತ್ತದೆ. ಆದರೆ, ಇದು ತುಂಬ ಅಜ್ಞಾನ, ದುರ್ಬಲತೆ, ಕರ್ಕಶತೆ ಮತ್ತು ಕಠಿಣತೆಗಳ ಹೊರೆಯನ್ನು ಹೊರಬೇಕಾಗುತ್ತದೆ. ಯೋಗದ ಹಿನ್ನೆಲೆಯಲ್ಲಿ ಈ ಅಂತಃಶಕ್ತಿ ತನ್ನ ಲಕ್ಷ್ಯಕ್ಕೆ ಸಂಬಂಧಿಸಿದಂತೆ ಸಚೇತನವಾಗಿ ಪರಿಣಮಿಸಿ ಒಳಗಿಂದೊಳಗೇ ಭಗವನ್ಮುಖಿಯಾಗುತ್ತದೆ. ಇದು ಹಿಂದೆ ಮತ್ತು ಮೇಲೆ ನೋಡುತ್ತದೆ. ಇದೇ ಇದರಲ್ಲಿರುವ ವ್ಯತ್ಯಾಸ."[1]

ಶರತ್‌ಚಂದ್ರರ ಪತ್ರದ ಬಗೆಗಿನ ಈ ವ್ಯಾಖ್ಯಾನ ಅನೇಕರನ್ನು ವಿಸ್ಮಯಗೊಳಿಸುತ್ತದೆ. ಆದರೆ, ಇದು ತುಂಬ ಸರಿಯಾಗಿಯೇ ಇದೆ. ಅರವಿಂದರ ವಿಷಯದಲ್ಲಿ ಶರತ್‌ಚಂದ್ರರಿಗೆ ಕಡಿಮೆ ಭಕ್ತಿಯೇನೂ ಇರಲಿಲ್ಲ. ಅವರ ದರ್ಶನವನ್ನು ಅವರು ಸಂಪೂರ್ಣವಾಗಿ ಅರ್ಥೈಸಿಕೊಂಡಿರಲಿಲ್ಲವಾದರೂ, ಅವರ ಪ್ರತಿಭೆ ಮತ್ತು ಪಾಂಡಿತ್ಯವನ್ನು ಅವರು ಮತ್ತೆ ಮತ್ತೆ ಗೌರವಿಸಿದ್ದರು.

ಭಿನ್ನಾಭಿಪ್ರಾಯವನ್ನು ಅವರು ತುಂಬ ಸಹಜರೂಪದಲ್ಲಿ ವ್ಯಕ್ತಪಡಿಸಿದರು: "ಅರವಿಂದರು ನಿಮಗೆ ಕಳಿಸುವ ಸಣ್ಣಪುಟ್ಟ ಸಂದೇಶಗಳನ್ನೂ, ನಿಮ್ಮ ಪ್ರಶ್ನೆಗಳಿಗೆ ಅವರು ಕೊಡುವ ಉತ್ತರಗಳನ್ನೂ ನೀವೆಲ್ಲ ಎಚ್ಚರಿಕೆಯಿಂದ ನನ್ನ ಬಳಿಗೆ ಕಳಿಸುತ್ತೀರಿ. ಅವುಗಳನ್ನು ನಾನು ಓದುತ್ತೇನೆ, ಯೋಚಿಸುತ್ತೇನೆ, ಮತ್ತೆ ಓದುತ್ತೇನೆ. ಆದರೆ, ಅವುಗಳಲ್ಲಿ ಬಹುಮಟ್ಟಿನವನ್ನು ನಾನು ಅರ್ಥಮಾಡಿಕೊಳ್ಳಲಾರೆ. ಆಗಾಗ್ಗೆ ಅವರು ಮನಸ್ಸು, ಚೇತನ ಅಥವಾ ಕಾನ್‌ಶಿಯಸ್‌ನೆಸ್‌ನ ಎಷ್ಟೊಂದು ಭಿನ್ನಭಿನ್ನ ಹಾಗೂ ಸೂಕ್ಷ್ಮಾತಿ ಸೂಕ್ಷ್ಮ ಪರ್ಯಾಯಗಳನ್ನು ಅಥವಾ ಸ್ತರಗಳನ್ನು ತಿಳಿಸುತ್ತಾರೆಂದರೆ ಅವು ನನ್ನ ಬುದ್ಧಿಶಕ್ತಿಗೆ ಹೊರತಾಗಿ ಬಿಡುತ್ತವೆ. ಕಾವ್ಯಕ್ಕೆ ಸಂಬಂಧಿಸಿದಂತೆಯೂ ಅವರ ಆಲೋಚನೆಗಳನ್ನು ನಾನು ಯಾವಾಗಲೂ ಒಪ್ಪಲಾರದೆ ಹೋಗಿದ್ದೇನೆ......"[2]

ಅರವಿಂದರ ಬಗ್ಗೆ ಅವರಿಗೆ ಶ್ರದ್ಧೆ ಇದ್ದರೂ, ಅವರ ಶಿಷ್ಯರ ಬಗ್ಗೆ ಅವರು ಎಂದೂ ಅಷ್ಟೊಂದು ಶ್ರದ್ಧೆಯನ್ನು ತಾಳಲಾರದೆ ಹೋದರು. ದಿಲೀಪಕುಮಾರರು ಸಾಧುವಿನ ವೇಷವನ್ನು ತೊಟ್ಟಾಗ ಅವರು ತುಂಬ ದುಃಖಿತರಾಗಿದ್ದರು. ಈ ವಿಚಾರವನ್ನು ಅವರೆಂದೂ ಮರೆಮಾಚಲಿಲ್ಲ. ಬಹಳ ಹಿಂದೆಯೇ ದಿಲೀಪಕುಮಾರ್ ಅವರಿಗೆ ಅವರು ಸ್ಪಷ್ಟವಾಗಿ ಬರೆದಿದ್ದರು:[3]

ನಿನ್ನ ಹೆಸರಿಗೇನು ವಾರಂಟ್ ಇರಲಿಲ್ಲವಲ್ಲ! ನೀನೇಕೆ ಸಾಧು ಆಗಲು ಹೋದೆ. ಸಾಕು, ಇನ್ನೂ ಮುಂದೆ ಹೋಗಬೇಡ. ಈ ಕಾಗದ ಕೈಗೆ ಸಿಕ್ಕಿದೊಡನೆಯೇ ಬಂದು ಬಿಡು. ಆಗದಿದ್ದರೆ, ಕೆಲವು ದಿವಸ ಬಿಟ್ಟುಕೊಂಡು ಹಿಂದಿರುಗಬಹುದು. ಇದರಿಂದ ಯಾವ ತೊಂದರೆಯೂ ಆಗುವುದಿಲ್ಲ. ನಾನು ಅನುಭವವನ್ನುಳ್ಳ ವ್ಯಕ್ತಿ; ನನ್ನ ಮಾತನ್ನು ಕೇಳು. ನಿನ್ನ ವಯಸ್ಸಿನಲ್ಲಿ ನಾನು ನಾಲ್ಕಾರು ಬಾರಿ ಸನ್ಯಾಸಿಯಾಗಿದ್ದೆ.

1. ಜನವರಿ 1935.
2. 6 ಭಾದ್ರಪದ 1338 (23 ಆಗಸ್ಟ್ 1931).
3. ಜೂನ್ 13, 1929.

ಅತ್ತಕಡೆ ನೊಣಗಳು ಮತ್ತು ಸೊಳ್ಳೆಗಳು ಬಹುಶಃ ಕಮ್ಮಿ, ಇಲ್ಲವಾದಲ್ಲಿ, ಹಿಂದೂಸ್ತಾನದವರ ಬೆನ್ನಿನ ಚರ್ಮವನ್ನು ಬಿಟ್ಟರೆ, ಅವುಗಳ ಕಚ್ಚುವಿಕೆಯನ್ನು ಸಹಿಸಿಕೊಳ್ಳುವ ಶಕ್ತಿ ಬೇರೆ ಯಾರಲ್ಲಿದೆ? ಅಪ್ಪ, ಇದು ಬಂಗಾಳಿಗಳ ವೃತ್ತಿಯಲ್ಲ. ನನ್ನ ಮಾತನ್ನು ಕೇಳು. ಹೊರಟು ಬಾ! ನೀನು ಬಂದ ಮೇಲೆ, ಈ ಸಲ ಮಳೆಗಾಲ ಕಳೆದ ಮೇಲೆ ನಾವು ಜೊತೆಯಾಗಿ ಉತ್ತರ ಮತ್ತು ದಕ್ಷಿಣ ಭಾರತದ ಪ್ರವಾಸಕ್ಕೆ ಹೊರಡೋಣ. ನೀನು ಜೊತೆಗಿರದಿದ್ದರೆ ಆದರ ಸತ್ಕಾರಗಳು ಸರಿಯಾಗಿ ದೊರೆಯುವುದಿಲ್ಲ; ಊಟ-ತಿಂಡಿಗಳಿಗೆ ಅಷ್ಟೊಂದು ಅನುಕೂಲವಾಗುವುದಿಲ್ಲ. ಯಾವಾಗ ಬರುತ್ತೀಯೆ ಎಂಬುದನ್ನು ಈ ಕಾಗದ ಸಿಕ್ಕಿದ ಕೂಡಲೇ ತಿಳಿಸು. ನಾನು ಸ್ಟೇಶನ್ನಿಗೆ ಬರುತ್ತೇನೆ.

ಇನ್ನೊಂದು ವಿಚಾರ. ಬಾರೀನ್ (ಅರವಿಂದರ ತಮ್ಮನಾದ ಬಾರೀಂದ್ರಕುಮಾರ ಘೋಷ್) ಯಾವುದೇ ಮರದ ಎಲೆಯನ್ನು ನಿನ್ನ ಮೂಗಿನ ಮೇಲೆ ಉಜ್ಜಿ, ಯಾವುದೇ ಹೂವಿನ ಸುವಾಸನೆ ಬರುವಂತೆ ಮಾಡಬಲ್ಲ ಎಂದು ಕೇಳಿದ್ದೇನೆ. ಅವನಿಗೆ ಈ ವಿದ್ಯೆ ಕರ್ತಾ ಅವರಿಂದ (ಅರವಿಂದ ಘೋಷ್) ಸಿದ್ಧಿಸಿದೆ ಎಂದು ಉಪೇನ್ ಬಂದೋಪಾಧ್ಯಾಯ ಅವರು ಹೇಳುತ್ತಾರೆ. ಬರುವಾಗ ನೀನು ಇದನ್ನು ಕಲಿತುಕೊಂಡು ಬಾ. ಅವನು ಬಡಪೆಟ್ಟಿಗೆ ಒಪ್ಪುವುದಿಲ್ಲ; ಆದರೆ ನೀನು ಬಿಡಬೇಡ. ಕೆಲವು ದಿನಗಳವರೆಗೆ ಆತನ 'ಅಂಡಮಾನಿನ ಕೊಳಲ'ನ್ನು ಚೆನ್ನಾಗಿ ಹೊಗಳುತ್ತ ಇರು. ಪುಸ್ತಕವನ್ನು ಸದಾ ಕೈಯಲ್ಲಿ ಹಿಡಿದುಕೊಂಡು ಓಡಾಡುತ್ತಿರು. 'ಈ ಪುಸ್ತಕವನ್ನು ಇಷ್ಟು ದಿನಗಳಾದರೂ ಓದಿಲ್ಲವೆ?' ಎಂದು ಮಧ್ಯ-ಮಧ್ಯ ಅವನೆದುರಿಗೆ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಿರು. ಬಹುಮಟ್ಟಿಗೆ ಇಷ್ಟರಿಂದಲೇ ಅವನ 'ವಿಭೂತಿ'ಯನ್ನು ನೀನೂ ಸಾಧಿಸಿಕೊಂಡು ಬಿಡಬಹುದು. ಉತ್ತರಭಾರತ ದಲ್ಲಿ ಸಂಚರಿಸುವಾಗ ಅದು ವಿಶೇಷವಾಗಿ ಉಪಯೋಗಕ್ಕೆ ಬರುತ್ತದೆ.

ಅನಿವರಣ ಮಣ್ಣನ್ನು ಸಕ್ಕರೆಯಾಗಿಸುತ್ತಾನೆಂದೂ, ತುಂಬ ಹೊತ್ತಿನವರೆಗೆ ಅದು ಹಾಗೆಯೇ ಇರುವುದಿಲ್ಲವಾದರೂ ಐದಾರು ಘಂಟೆಗಳವರೆಗೆ ಅದು ನೋಡಲು ಮತ್ತು ತಿನ್ನಲು ಸಕ್ಕರೆಯಂತೆಯೇ ಇರುತ್ತದೆಂದು ಕೇಳಿದ್ದೇನೆ. ಇದನ್ನೂ ಕಲಿತು ಕೊಂಡು ಬರಲು ಖಂಡಿತವಾಗಿಯೂ ಪ್ರಯತ್ನಿಸು. ಅನಿವರಣ ಸರಳ ವ್ಯಕಿತ್ವದವನು ಹಾಗೂ ಒಳ್ಳೆಯ ಮನುಷ್ಯ. ಕಲಿಸಿಕೊಡುವುದಕ್ಕೆ ಅವನೇನಾದರೂ ಆಕ್ಷೇಪಣೆ ಎತ್ತಿದರೆ, ಭೂತ-ಪ್ರೇತಗಳ ಮತ್ತು ಪಿಶಾಚಿನಿಯರ ಕಥೆಗಳನ್ನು ಸಾಕಷ್ಟು ಹೇಳಿ ಬಿಡು. ನನ್ನ ಕಣ್ಣಾರೆ ಪಿಶಾಚಿನಿಯನ್ನು ನೋಡಿದ್ದೇನೆಂದು ಅವನಿಗೆ ಆಣೆ-ಪ್ರಮಾಣ ಮಾಡಿ ಹೇಳು. ಆಮೇಲೆ ಚಿಂತೆ ಮಾಡಬೇಕಾಗಿ ಬರುವುದಿಲ್ಲ. ಅನಾಯಾಸವಾಗಿ ಆ 'ಕೌಶಲ' ನಿನಗೆ ಕೈ ಹತ್ತುತ್ತದೆ. ಈ ಎರಡು ವಿದ್ಯೆಗಳನ್ನೂ ನೀನು ಕಲಿತುಕೊಂಡು ಬಿಟ್ಟರೆ, ಅಲ್ಲಿ ಕಷ್ಟವನ್ನು ಸಹಿಸಿಕೊಂಡು ಇರುವ ಅಗತ್ಯವಾದರೂ ಏನಿರುತ್ತದೆ?

ನಿನ್ನನ್ನು ನೋಡಿ ತುಂಬ ದಿನಗಳೇ ಆಗಿವೆ. ನೋಡಬೇಕೆಂದು ತುಂಬ ಆಸೆಯಾಗುತ್ತಿದೆ. ಹಾಡನ್ನು ಕೇಳಬೇಕೆಂಬ ಅಭಿಲಾಷೆಯೂ ಇದೆ. ಯಾವಾಗ ಬರುತ್ತೀಯೆ? ಬರಿ. ನನ್ನ ಸ್ನೇಹದ ಶುಭಾಶಯಗಳನ್ನು ಸ್ವೀಕರಿಸು.

ಶರತ್‌ಚಂದ್ರ ಚಟ್ಟೋಪಾಧ್ಯಾಯ

ಪುನಶ್ಚ: 'ವಿಭೂತಿ'ಗಳನ್ನು ತರಲೇಬೇಕು. ಸಕಾಲದಲ್ಲಿ-ಅಕಾಲದಲ್ಲಿ, ಎಲ್ಲ ಹೊತ್ತಿನಲ್ಲಿಯೂ ಅವು ಉಪಯೋಗಕ್ಕೆ ಬರುತ್ತವೆ. ಏನಾದರೂ ಆಗಲಿ, ಬೇಗ ಬಂದು ಬಿಡು. ಸನ್ಯಾಸಿಯಾಗುವುದು ತುಂಬ ಕೆಟ್ಟದ್ದು, ಮಂಟೂ. ನನ್ನ ಮಾತನ್ನು ನಂಬೂ. ಈ ದಿನಗಳಲ್ಲಿ ಇದರಲ್ಲಿ ಯಾವ ಮಜವೂ ಇಲ್ಲ. ಯಾವಾಗ ಬರುತ್ತೀಯೆ ? ಸರಿಯಾಗಿ ಬರಿ.....

ಎರಡು ವರ್ಷಗಳ ಬಳಿಕ, ಇನ್ನೊಂದು ಕಾಗದದಲ್ಲಿ ಹೀಗೆ ಬರೆದರು:[1] "ನಿನ್ನನ್ನು ಶೀಘ್ರವೇ ಭೇಟಿಯಾಗಲಿದ್ದೇನೆ. ನೀನು ಅವನ ಬಗ್ಗೆ ನನಗೆ ಬರೆದಿದ್ದೀಯೆ ಎಂದೇನೂ ನಾನು ತಿಳಿಸುವುದಿಲ್ಲ. ಆದರೆ, ನೀನು ನನಗೆ ಕೊಟ್ಟಿರುವಷ್ಟು ಸೂಚನೆಯಿಂದಲೇ ಅವನನ್ನು ಪಾಟೀ-ಸವಾಲಿಗೆ ಒಳಪಡಿಸಿ ಸತ್ಯವನ್ನು ಕಂಡು ಕೊಳ್ಳುವ ಪ್ರಯತ್ನ ಮಾಡುತ್ತೇನೆ. ನೋಡೋಣ, 'ತ' ಇದರ ಬಗ್ಗೆ ಏನು ಹೇಳುತ್ತಾನೋ ಏನೋ. ಅರವಿಂದರ ಬಗ್ಗೆ ನಾನು ಎಲ್ಲಿಯೂ ಆ ಮಾತನ್ನು ಆಡಿಲ್ಲ. ನಾಡಿನ ಎಲ್ಲ ಜನರೂ ಅವರ ಬಗ್ಗೆ ಆಳವಾದ ಶ್ರದ್ಧೆ ಇರಿಸಿಕೊಂಡಿದ್ದಾರೆ. ನಾನೊಬ್ಬ ಮಾತ್ರವೇ ಇಟ್ಟುಕೊಂಡಿಲ್ಲವೇನು ? ಆದರೆ, ಆಶ್ರಯವಾಸಿಗಳ ವಿಷಯದಲ್ಲಿ ನನ್ನ ಮನಸ್ಸು ಅಷ್ಟು ಪ್ರಸನ್ನವಾಗಿಲ್ಲ. 'ತ' ಇವರ ಬಗ್ಗೆ ಹೇಳಿರುವ ಮಾತುಗಳು ಹಾಗೂ ಆಶ್ರಮವಾಸಿಗಳ ಬಗೆಗಿನ ನನ್ನ ವೈಯಕ್ತಿಕ ಅನುಭವಗಳು ಇದಕ್ಕೆ ಕಾರಣವಾಗಿವೆ. ಜೊತೆಗೆ, ನೀನು ಹೊರಟು ಹೋಗಿರುವುದು ನನಗೆ ತುಂಬ ನೋವನ್ನುಂಟುಮಾಡಿದೆ. ನೀನು ಐ.ಸಿ.ಎಸ್. ಪರೀಕ್ಷೆಯನ್ನು ತೆಗೆದುಕೊಳ್ಳದೆ ಇದ್ದಾಗ ಅಥವಾ ಕಾನೂನನ್ನು ಓದದೇ ಇದ್ದಾಗ ನನಗೆ ತುಂಬ ದುಃಖವಾಗಿತ್ತು. ಆದರೆ, ಸಂಗೀತ-ವಾದ್ಯಗಳ ಜೊತೆಗೆ ನೀನು ಸಾಹಿತ್ಯಕ್ಕೂ ಕೈ ಹಾಕಿದಾಗ ಆಕ್ಷೋಭೆ ದೂರವಾಗಿತ್ತು. ಎಲ್ಲರೂ ಕೆಲಸಕ್ಕೆ ಸೇರುತ್ತಾರೆ; ದೊಡ್ಡ ಅಧಿಕಾರಿ ಅಥವಾ ಬ್ಯಾರಿಸ್ಟರ್ ಆಗಿ ನಮ್ಮ ನಾಡಿನ ಪ್ರಜೆಗಳನ್ನೇ ಜೈಲಿಗೆ ಕಳಿಸುತ್ತಾರೆ. ಹೀಗೇಕೆ ಆಗುತ್ತಿದೆ ? ಎಂದು ಯೋಚಿಸಿದ್ದೆ. ಮಂಟೂಗೆ ಉಣ್ಣಲು-ಉಡಲು ಕೊರತೆ ಇಲ್ಲ. ಭಾರತದ ಕಲೆ-ಶಿಲ್ಪಗಳನ್ನು ವಿದೇಶೀಯರ ದೃಷ್ಟಿಯಲ್ಲಿ ಹಿರಿದಾಗಿಸಿದರೆ, ಅದರ ಸವೆದ ಜಾಡನ್ನು ಬಿಟ್ಟು ತನ್ನ ಪ್ರತಿಭೆಯಿಂದ ಹೊಸ ಹಾದಿಯನ್ನು ತೆರೆದು ತೋರಿದರೆ ಅದರಿಂದ ನಾಡಿಗೆ ಕಡಿಮೆ ಗೌರವ ದೊರೆತಂತಾಗುತ್ತದೆಯೆ ? ಎಂದೂ ಆಲೋಚಿಸಿದ್ದೆ.... ಇದಾದ ಬಳಿಕ ಒಂದು ದಿನ, ನೀನು ಎಲ್ಲವನ್ನು ಬಿಟ್ಟು ಬೈರಾಗಿಯಾಗಲು ಹೊರಟಿದ್ದೀಯೆ ಎಂಬ ಸುದ್ದಿಯನ್ನು ಕೇಳಿದೆ. ಆಗ, ಒಮ್ಮೆಗೇ ನನಗೇ ಏನೋ ದೊಡ್ಡ ಹಾನಿಯಾದಂಥ ಅನುಭವವಾಯಿತು. ಈ ಜೀವನದಲ್ಲಿ ಬಹುಶಃ ಮತ್ತೆ ನಿನ್ನನ್ನು ನೋಡಲಾರೆ ಎಂದನ್ನಿಸಿತು. ಇದು ನನ್ನ ಪಾಲಿಗೆ ಸಣ್ಣ ದುಃಖವೆಂದು ಭಾವಿಸಿದ್ದೀಯೇನು ? ಬೇರೆಯವರು ನಂಬಲಿ ಬಿಡಲಿ, ನಿನಗಂತೂ ಗೊತ್ತೇ ಇದೆ. ನನಗೆ ಪ್ರತಿ ದಿನವೂ ಇದರಿಂದ ತುಂಬ ದುಃಖವಾಗುತ್ತದೆ. ಇದರಲ್ಲಿ ಸಂದೇಹವಿಲ್ಲ......

"ನಿಮ್ಮ ಅನಿಲವರಣ ಮಣ್ಣನ್ನು ಸಕ್ಕರೆಯಾಗಿಸುತ್ತಾನೆಂದು ಕೇಳಿದ್ದೇನೆ. ಆಶ್ರಮಕ್ಕೆ

---

1. 4 ಕಾರ್ತಿಕ 1338 (ಅಕ್ಟೋಬರ್ 21, 1931)

ಬೇಕಾಗಿರುವ ಸಕ್ಕರೆ ಎಲ್ಲವನ್ನೂ ಅವನೇ ಒದಗಿಸುತ್ತಾನೆಂದು ಹೇಳುತ್ತಾರೆ. ಇದು ನಿಜವೆ? ನನಗಂತೂ ನಂಬಿಕೆಯಿಲ್ಲ. ಏಕೆಂದರೆ, ಹಾಗಿದ್ದಲ್ಲಿ ಅವನೇಕೆ ಆಶ್ರಮದಲ್ಲಿ ಇರಲು ಹೋಗುತ್ತಿದ್ದ? ಕಲ್ಕತ್ತೆಗೆ ಬಂದು ಕಷ್ಟವಿಲ್ಲದೆ ಒಂದು ಸಕ್ಕರೆ ಅಂಗಡಿಯನ್ನುತೆರೆಯಬಹುದಾಗಿತ್ತಲ್ಲ!

"ಬಾರೀನ್‌ನೊಂದಿಗೆ ಸಾಮಾನ್ಯವಾಗಿ ಭೇಟಿಯಾಗುತ್ತಿರುತ್ತದೆ. ಈಗ ತಾನು ಅತ್ತ ಕಡೆ ಹೋಗುವುದೇ ಇಲ್ಲವೆಂದು ಅವನು ಹೇಳುತ್ತಾನೆ. ಆ ಭಯಂಕರ ಕಟ್ಟು ಕಟ್ಟಳೆಗಳ ನಡುವೆ ಅವನ ಆತ್ಮ ದೇಹದ ಪಂಜರವನ್ನು ಬಿಟ್ಟು ಹೋಗಲಿಲ್ಲ ಎಂಬುದೇ ಸೌಭಾಗ್ಯದ ಸಂಗತಿ. ಆದರೆ, ನಿಮ್ಮ 'ಮದರ್' ಅವರ ಬಗ್ಗೆ ಅವರ ಹೃದಯದಲ್ಲಿ ಆಳವಾದ ಭಕ್ತಿ ಇದೆ. ಅಂಥ ಅದ್ಭುತವ್ಯಕ್ತಿ ನೋಡಲೂ ಸಿಕ್ಕುವುದಿಲ್ಲವೆಂದೂ, ಅವರ ಸೂಕ್ಷ್ಮ ದೃಷ್ಟಿಯೇ ಒಂದು ಅದ್ಭುತ ವಸ್ತುವೆಂದೂ ಹೇಳುತ್ತಾನೆ. ಕೆಲಸ ಮಾಡುವ ಶಕ್ತಿ ಎಷ್ಟಿದೆಯೋ, ಎಷ್ಟರ ಮಟ್ಟಿನ ಶಿಸ್ತು ಇದೆಯೋ, ಅಷ್ಟರಮಟ್ಟಿನ ಪ್ರಖರವಾದ ಬುದ್ಧಿಯೂ ಇದೆ. ಪ್ರತಿಯೊಬ್ಬ ವ್ಯಕ್ತಿಯ ಪ್ರತಿಯೊಂದು ವಿಚಾರವೂ ಆಕೆಯ ಕಣ್ಣಿನ ಮುಂದೆಯೇ ಇರುತ್ತದೆ. ಅವರ ಆದೇಶ ಉಪದೇಶಗಳನ್ನು ಹೊರತುಪಡಿಸಿ, ಅಲ್ಲಿ ಏನೂ ನಡೆಯಲಾರದು. ಆದ್ದರಿಂದ, ಹೊರಗಿನಿಂದ ಆಕಸ್ಮಿಕವಾಗಿ ಬರುವ ಜನರು ಅವರ ಬಗ್ಗೆ ಬಗೆಬಗೆಯಾದ ತಪ್ಪು-ಒಪ್ಪು ಭಾವನೆಗಳೊಂದಿಗೆ ಹಿಂದಿರುಗುತ್ತಾರೆ....."

'ನಿಷ್ಕೃತಿ'ಯ ಅನುವಾದದ ಬಗ್ಗೆ ಅವರ ಮನಸ್ಸಿನಲ್ಲಿ ಭಾರಿ ಅಭೀಪ್ಸೆಗಳು ಮೂಡಿದ್ದುವು: " 'ನಿಷ್ಕೃತಿ'ಯ ಫ್ರೆಂಚ್ ಅನುವಾದದ ಆಲೋಚನೆಯೂ ನಿನ್ನ ಮನಸ್ಸಿನಲ್ಲಿದೆಯೆ! ನನಗಂತೂ ನಂಬಿಕೆಯಾಗುತ್ತಿಲ್ಲ. ಆದರೆ, ಅರವಿಂದರ ಆಶೀರ್ವಾದದಿಂದ ಅಸಂಭವವೂ ಸಂಭವವಾಗುತ್ತದೆ." ಎಂದು ಬರೆದಿದ್ದರು.

ದಿಲೀಪ್‌ಕುಮಾರ್ ಅವರು ಅನುವಾದಿಸಿದ್ದಾರೆ ಹಾಗೂ ಅರವಿಂದರು ಅದನ್ನು ನೋಡಿ ಪರಿಷ್ಕರಿಸಿದ್ದಾರೆ ಎಂಬುದನ್ನು ತಿಳಿದು, ಇನ್ನೂ ಅನೇಕರು ಅದರ ಪ್ರಕಟಣೆಯ ಬಗೆ ಆಸಕ್ತಿ ತೋರಿದರು. ಒಮ್ಮೆ 'ಏಷ್ಯಾ' ಪತ್ರಿಕೆಯ ಸಂಪಾದಕಿಯಾಗಿದ್ದ ಹಾಗೂ ಈಗ ಒಬ್ಬ ಬಂಗಾಳಿ ಸದ್ಗೃಹಸ್ಥನ ಮಡದಿಯಾಗಿದ್ದ ಒಬ್ಬ ಅಮೆರಿಕನ್ ಮಹಿಳೆ, ಆ ಅನುವಾದವನ್ನು ಅಮೆರಿಕಾದಲ್ಲಿ ಪ್ರಕಟಿಸುವ ಬಗ್ಗೆ ಆಸಕ್ತಿ ತೋರಿದಳು. ಆದರೆ, 'ನಿಷ್ಕೃತಿ'ಗೆ ಬದಲಾಗಿ 'ಶ್ರೀಕಾಂತ' ಕಾದಂಬರಿಯನ್ನು ಅನುವಾದಿಸಬೇಕಾಗಿತ್ತು, ಈಗಲಾದರೂ ಅನುವಾದಿಸಬೇಕು, ಆ ನಾಡಿನಲ್ಲಿ 'ನಿಷ್ಕೃತಿ'ಯನ್ನು ಯಾವ ಗುಣದ ಆಧಾರದ ಮೇಲೆ ಗೌರವಿಸಿಯಾರು ಎಂಬುದು ಈಗಲೂ ಶರತ್‌ಚಂದ್ರರ ಅಭಿಪ್ರಾಯವಾಗಿತ್ತು. ಮತ್ತೆ ಮತ್ತೆ ಅವರು ದಿಲೀಪ್‌ಕುಮಾರ್ ಅವರಿಗೆ ಹೀಗೆಂದು ಬರೆಯುತ್ತಿದ್ದರು: " 'ಶ್ರೀಕಾಂತ' ಕಾದಂಬರಿಯನ್ನು ಅನುವಾದಿಸಲು ನೀನೇಕೆ ಹಿಂದೆ ಮುಂದೆ ನೋಡುತ್ತೀಯೆ? ಅದು ಆಗಬೇಕಾಗಿದ್ದರೆ ನಿನ್ನಿಂದಲೇ ಆಗಬೇಕು."[1]

"ಈ ಸಲ ನೀನು 'ಶ್ರೀಕಾಂತ'ದ ಭಾಷಾಂತರವನ್ನು ಕೈಗೆತ್ತಿಕೊ. ನಾನು ಬದುಕಿರು

---

1. 6 ಜ್ಯೇಷ್ಠ 1342 (ಮೇ 21, 1935).

ವಾಗಲೇ ಅದರ ಭಾಷಾಂತರ ಹೊರಬರುವುದನ್ನು ನೋಡಬಯಸುತ್ತೇನೆ...."[1]

ಆದರೆ, ಅವರ ಈ ಬಯಕೆ ಈಡೇರಲಿಲ್ಲ. ದಿಲೀಪಕುಮಾರರು 'ಶ್ರೀಕಾಂತ' ಕಾದಂಬರಿಯನ್ನು ಅನುವಾದಿಸಲಾರದೆ ಹೋದರು. ಬೇರೆಯವರು ಪ್ರಯತ್ನಿಸಿದರು. ಆದರೆ, ಅದೆಲ್ಲ ವ್ಯರ್ಥವಾಗಿ ಪರಿಣಮಿಸಿತು.

ವದಂತಿಗಳು ಇನ್ನೂ ಅವರ ಬೆನ್ನುಬಿಟ್ಟಿರಲಿಲ್ಲ. ಅವರಿಗೆ ನೊಬೆಲ್ ಪ್ರಶಸ್ತಿ ದೊರೆಯಲಿದೆ ಎಂಬ ವದಂತಿಯೂ ಈ ಅವಧಿಯಲ್ಲಿ ಕೇಳಿಬಂದಿತು. ಅವರ ಹೆಸರನ್ನು ಇದಕ್ಕೆ ಸೂಚಿಸಬೇಕೆಂದು ದಿಲೀಪಕುಮಾರ ರಾಯ್ ಮತ್ತು ಇತರ ಶುಭಾಕಾಂಕ್ಷಿಗಳು ಕವಿಗುರು ರವೀಂದ್ರನಾಥರನ್ನು ಕೋರಿದ್ದಾರೆಂದೂ, ಆದರೆ ಯಾವುದೋ ಅರಿಯದ ಕಾರಣಕ್ಕಾಗಿ ಕವಿವರ್ಯರು ಹಾಗೆ ಮಾಡಲಿಲ್ಲವೆಂದೂ ಹೇಳಲಾಯಿತು.

ವಾಸ್ತವವಾಗಿದ್ದ ಸಂಗತಿ ಇದು: ಡಾ. ಕಾನಾಈ ಗಾಂಗುಲಿ ಮತ್ತು ದಿಲೀಪ್ ಕುಮಾರ್ ರಾಯ್ ಅವರ ವಿಶೇಷ ಒತ್ತಾಯದ ಮೇರೆಗೆ ಶರತ್‌ಚಂದ್ರರು ಯೂರೋಪಿನ ಪ್ರವಾಸವನ್ನು ಕೈಗೊಳ್ಳಲು ಒಪ್ಪಿದ್ದರು. ಇದನ್ನೇ ನೆಪವಾಗಿಸಿಕೊಂಡು 'ಆನಂದ ಬಾಜಾರ್ ಪತ್ರಿಕೆ' ನೊಬೆಲ್ ಪ್ರಶಸ್ತಿಗಾಗಿ ಪ್ರಯತ್ನಿಸಲು ಶರತ್‌ಚಂದ್ರರು ಯೂರೋಪಿಗೆ ಹೊರಟಿದ್ದಾರೆಂಬ ವದಂತಿಯನ್ನು ಹುಟ್ಟಿಸಿಬಿಟ್ಟಿತು.

ಇದೆಲ್ಲ ಪರಸ್ಪರ ಈರ್ಷ್ಯಾ-ದ್ವೇಷಗಳ ಪರಿಣಾಮವಾಗಿತ್ತು. ರಾಜಕೀಯದಲ್ಲಿ ಅಂದು ಶರತ್‌ಚಂದ್ರರು ಸತ್ಯಾಗ್ರಹ ಮತ್ತು ಚರಖಾ ಕಾರ್ಯಕ್ರಮಗಳಿಗೆ ವಿರುದ್ಧವಾಗಿದ್ದರು. ಆದ್ದರಿಂದ, ಇನ್ನೊಂದು ಗುಂಪಿನ ಜನರು ನಾನಾ ಬಗೆಯ ವದಂತಿಗಳನ್ನು ಹರಡುತ್ತಿದ್ದರು. ಅನೇಕವೇಳೆ ಇವು ಹಾಸ್ಯಾಸ್ಪದವೆನ್ನಿಸುವ ಮಟ್ಟಕ್ಕೂ ಇಳಿಯುತ್ತಿದ್ದುವು. ಯಾರೋ ಒಬ್ಬ ನಟನ ಹೆಸರೂ ಶರತ್‌ಚಂದ್ರ ಚಟ್ಟೋಪಾಧ್ಯಾಯ ಎಂದೇ ಇತ್ತು. ಕೆಲವು ದಿನಗಳ ಹಿಂದೆ 'ಶನಿವಾರೇರ್ ಚಿಠಿ'ಯಲ್ಲಿ ನಟರಾಜನ ವೇಷಭೂಷಣಗಳಲ್ಲಿ ಆತನ ಒಂದು ಚಿತ್ರವೂ ಅಚ್ಚಾಗಿತ್ತು. ಅದರ ಕೆಳಗೆ 'ಶರತ್‌ಚಂದ್ರ ಚಟ್ಟೋಪಾಧ್ಯಾಯ' ಎಂದು ಮಾತ್ರ ಅಚ್ಚಿಸಲಾಗಿತ್ತು.

ಆದರೆ, ಈ ವದಂತಿಗಳು ಅವರ ಸಮತೋಲನವನ್ನು ಸ್ವಲ್ಪವೂ ಅಲುಗಾಡಿಸಲಾರದೆ ಹೋಗುತ್ತಿದ್ದುವು. ಆಕ್ರಮಣ ತೀವ್ರವಾದಷ್ಟೂ ಅವರು ನಿರ್ಭೀತರಾಗುತ್ತಿದ್ದರು. ಈ ಅವಧಿಯಲ್ಲಿ ಅವರು ಹೊಸದೊಂದು ಕಾದಂಬರಿಯನ್ನು ಬರೆಯಲೂ ಆರಂಭಿಸಿದ್ದರು. ಅದರ ಹೆಸರು 'ಅನಾಗತ' ಎಂದಾಗಿತ್ತು. 'ಆನಂದ ಬಾಜಾರ್ ಪತ್ರಿಕಾ' ಅವರನ್ನು ಅಪಮಾನಗೊಳಿಸಿತ್ತು. ಆದರೆ, ಅದರ ಸಂಪಾದಕರಲ್ಲಿ ಒಬ್ಬರಾದ ಪ್ರಫುಲ್ಲಕುಮಾರ್ ಸರ್ಕಾರ್ ಅವರದೂ ಅದೇ ಹೆಸರಿನ ಒಂದು ಕಾದಂಬರಿ ಇತ್ತು. ಅವರ ಈ ಭಯ ಅಂದರೆ, ಶರತ್‌ಚಂದ್ರರ ಕಾದಂಬರಿಯ ಮುಂದೆ ಅವರ ಕಾದಂಬರಿಯನ್ನು ಕೇಳುವಂಥವರು ಯಾರೂ ಇರುವುದಿಲ್ಲವೆಂಬ ಭಯ-ಸಹಜವೇ ಆಗಿತ್ತು. ಅವರು ಹೆದರುತ್ತ ಹೆದರುತ್ತ, ಅವಿನಾಶಚಂದ್ರ ಘೋಷಾಲ್ ಅವರ ಮೂಲಕ, ತಮ್ಮ ಕಾದಂಬರಿಯ ಹೆಸರನ್ನು ಬದಲಾಯಿಸಬೇಕೆಂದು ಶರತ್‌ಚಂದ್ರರನ್ನು ಕೋರಿದರು. ಶರತ್‌ಚಂದ್ರರು ಆ ಕ್ಷಣವೇ

1. ಚೈತ್ರ 7, 1341 (ಮಾರ್ಚ್ 21, 1935).

ಒಪ್ಪಿಕೊಂಡುಬಿಟ್ಟರು. ಅದರ ಎರಡನೆಯ ಅಧ್ಯಾಯ 'ಆಗಾಮೀ ಕಲ್' ಎಂಬ ಹೆಸರಿನಲ್ಲಿ ಅಚ್ಚಾಯಿತು. ಈ ಕಾದಂಬರಿ ಅವರ ಅಪೂರ್ಣ ಕಾದಂಬರಿಗಳ ಸಂಖ್ಯೆಯನ್ನು ಇನ್ನಷ್ಟು ಹೆಚ್ಚಿಸಿತು, ಅಷ್ಟೇ ಎಂಬುದು ಬೇರೆ ಮಾತು.

ಯೂರೋಪಿಗೆ ಹೋಗುವ ವಿಚಾರ ಸಾಕಷ್ಟು ಮುಂದುವರಿದಿತ್ತು. ಈ ಸುದ್ದಿಯನ್ನು ಕೇಳಿ, ಲಂಡನ್ನಿನಲ್ಲಿ ಒಂದು ಸನ್ಮಾನ ಸಮಿತಿಯನ್ನು ರಚಿಸಬೇಕೆಂದು ತೀರ್ಮಾನಿಸಲಾಯಿತು ಹಾಗೂ ಅದರಲ್ಲಿ ಬರ್ನಾರ್ಡ್ ಷಾ, ಎಚ್.ಜಿ. ವೆಲ್ಸ್ ಮತ್ತು ಆಲ್ಡುಅಸ್ ಹಕ್ಸ್-ಲೆ ಅವರನ್ನು ಸೇರಿಸಿಕೊಳ್ಳುವ ಪ್ರಯತ್ನವನ್ನೂ ನಡೆಸಲಾಯಿತು. ಆದರೆ, ಆರೋಗ್ಯ ಕೆಟ್ಟಿದ್ದರಿಂದ ಶರತ್‌ಚಂದ್ರರು ತಮ್ಮ ಪ್ರವಾಸವನ್ನು ಮುಂದೂಡಿಬಿಟ್ಟರು.

## 24

ಶರತ್‌ಚಂದ್ರರು ಹಳ್ಳಿಯಲ್ಲಿ ವಾಸಮಾಡತೊಡಗಿ ಸಾಕಷ್ಟು ವರ್ಷಗಳೇ ಕಳೆದಿದ್ದುವು. ಆ ಬಾಳಿಗೆ ತನ್ನದೇ ಆದ ಆನಂದವಿತ್ತು. ಆದರೆ ಅನಾನುಕೂಲಗಳು ಕಮ್ಮಿಯಾಗೇನೂ ಇರಲಿಲ್ಲ. ಮತ್ತೆ ಮತ್ತೆ ಪೌರ ಹಾಗೂ ಅಪರಾಧಿಕ ಮೊಕದ್ದಮೆಗಳಲ್ಲಿ ಸಿಲುಕಿಕೊಳ್ಳಬೇಕಾಗುತ್ತಿತ್ತು. ಹಳ್ಳಿಯವರ ಸಮಸ್ಯೆಗಳನ್ನು ಬಗೆಹರಿಸಿ, ಅವರಿಗೆ ಬೇಸರ ಬಂದುಬಿಡುತ್ತಿತ್ತು. ಆಗೆಲ್ಲ ಅಲ್ಲಿಂದ ಓಡಿಹೋಗಿಬಿಡಬೇಕೆಂದು ಮನಸ್ಸಾಗುತ್ತಿತ್ತು.

ಮತ್ತೆ ಮತ್ತೆ ಅವರು ಕಲ್ಕತ್ತೆಗೆ ಹೋಗಬೇಕಾಗುತ್ತಿತ್ತು. ಅವರ ಎಲ್ಲ ಪುಸ್ತಕಗಳೂ ಅಲ್ಲಿಂದಲೇ ಪ್ರಕಟವಾಗುತ್ತಿದ್ದುವು. ಸಂಘ-ಸಂಸ್ಥೆಗಳಿಂದ ಬರುತ್ತಿದ್ದ ಆಹ್ವಾನಗಳಿಗೇನೂ ಕೊರತೆ ಇರಲಿಲ್ಲ. ಆದರೆ, ಅಲ್ಲಿಯವರೆಗೆ ಹೋಗಿ ತಲುಪುವುದಕ್ಕೇ ತುಂಬ ಅನಾನುಕೂಲವಾಗುತ್ತಿತ್ತು. ರೈಲು ನಿಲ್ದಾಣ ಸುಮಾರು ಎರಡು ಮೈಲಿಗಳಷ್ಟು ದೂರದಲ್ಲಿತ್ತು. ಅಲ್ಲಿಯ ವರೆಗಿನ ರಸ್ತೆ ತುಂಬ ಕಚ್ಚಾ ರಸ್ತೆಯಾಗಿತ್ತು. ಮಳೆಗಾಲದಲ್ಲಿ ಅಲ್ಲಿ ಕೆಸರು ರಾಡಿಯೇಳುತ್ತಿತ್ತು. ಇದರ ಬಗ್ಗೆ ಉಲ್ಲೇಖಿಸುತ್ತ ಒಮ್ಮೆ ಅವರು ತಮ್ಮ ಸಹಜ ಶೈಲಿಯಲ್ಲಿ ಹೀಗೆಂದು ಬರೆದಿದ್ದರು: "ಮಳೆಯ ದಿನಗಳಲ್ಲಿ ರೈಲು ನಿಲ್ದಾಣದ ಕಡೆಗೆ ಹೋಗುವ ಏಕೈಕ ರಸ್ತೆಯಲ್ಲಿ ಹೋಗಿಬರುವ ಕಲ್ಪನೆಯೇ ಭಯವನ್ನು ಹುಟ್ಟಿಸುತ್ತಿತ್ತು. ಕಾಲು ಜಾರಿದರೆ ಎಲ್ಲಿಯಾದರೂ ಒಡ್ಡಿನಿಂದ ಕೆಳಗೆ ನಾಲೆಗೆ ಬಿದ್ದು ಮುಳುಗಿಹೋಗಬೇಕಾಗುತ್ತದೆ ಎಂದು ಡೋಲಿಯವರು ಹೆದರುತ್ತಿದ್ದರು. ಒಳ್ಳೆಯ ಜಾಗಕ್ಕೆ ಬಂದು ಸೇರಿಕೊಂಡಿದ್ದೇನೆ! ಇಲ್ಲಿಯ ಜನಗಳಿಗೆ ಒಂದು ಅನುಕೂಲವಿದೆ. ಮಳೆಗಾಲದಲ್ಲಿ ಅವರ ಕಾಲುಗಳಲ್ಲಿ ಗೊರಸು ಮೂಡುತ್ತದೆ. ಆದ್ದರಿಂದಲೇ, ಅವರು ಖಟ್‌ಖಟ್ ಎಂದು ನಡೆಯುತ್ತಿರುತ್ತಾರೆ. ಅವರಿಗೆ ಜಾರುವ ಭಯವೇ ಇರುವುದಿಲ್ಲ. ನನಗಿನ್ನೂ ಗೊರಸುಗಳು ಮೂಡಿಲ್ಲ. ಆದರೆ, ಒಂದೆರಡು ವರ್ಷಗಳ ಕಾಲ ಇಲ್ಲಿಯೇ ಇದ್ದುಬಿಟ್ಟರೆ ಅವೂ ಮೂಡಿಬಿಡುತ್ತವೆಂಬ ಭರವಸೆ ಇದೆ. ಅಸಂಭವವೆಂಬುದೇನೂ ಇಲ್ಲ. ಆದರೆ, ಗೊರಸುಗಳಿಂದ ನನಗೇನು ಪ್ರಯೋಜನ? ನಾನು ಎಲ್ಲಿದ್ದೇನೋ ಅಲ್ಲಿಗೇ ಹಿಂದಿರುಗಿ ಬಿಡುತ್ತೇನೆ."[1]

---

1. ಈ ಲೇಖಕ 1973 ಮಾರ್ಚ್ ತಿಂಗಳಲ್ಲಿ ಈ ಜಾಗವನ್ನು ನೋಡಿದಾಗಲೂ ಗೊರಸುಗಳು ಅಗತ್ಯವಾಗಿರುವಂಥ ಸ್ಥಿತಿಯೇ ಇತ್ತು.

ಈಗೀಗ ಅವರ ಮನಸ್ಸು ಅಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಿತ್ತು. ಅವರ ಆರೋಗ್ಯ ಎಂದೂ ಚೆನ್ನಾಗಿ ಇರಲೇ ಇಲ್ಲ. ವಯಸ್ಸು ಹೆಚ್ಚುತ್ತ ಬಂದಂತೆಲ್ಲ ತೊಂದರೆಗಳು ಹೆಚ್ಚುತ್ತಲೇ ಹೋದುವು. ಈ ನಾನಾಕಾರಣಗಳಿಂದಾಗಿ ಪೇಟೆಯಲ್ಲಿಯೂ ಒಂದು ಮನೆ ಮಾಡಬೇಕೆಂದು ಅವರು ತೀರ್ಮಾನಿಸಿದರು. ಹಿರಣ್ಮಯೀ ದೇವಿಯವರು ಸತತವಾಗಿ ಈ ಬಗ್ಗೆ ಒತ್ತಾಯ ಮಾಡುತ್ತಲೇ ಇದ್ದರು. ಆದರೆ, ಮನೆಕಟ್ಟಲು ಹಣ ಬೇಕಲ್ಲ. ಅವರು ಬರವಣಿಗೆಯತ್ತ ಮನಸ್ಸು ಕೊಡಲು ಪ್ರಯತ್ನಿಸಿದರು. ಹಣ ಒದಗಿಸುವಂತೆ ಪ್ರಕಾಶಕರನ್ನೂ ಕೇಳಿದರು. ಒಂದು ಪತ್ರದಲ್ಲಿ ಅವರು ಹೀಗೆ ಬರೆದಿದ್ದರು:[1]

"ಕಲ್ಕತ್ತಾದಲ್ಲಿನ ನನ್ನ ಮನೆಯ ಕೆಲಸ ಮುಗಿದಿದೆ. ಈಗ ನೀವು ಐದು ಸಾವಿರ ರೂಪಾಯಿಗಳನ್ನು ಕೊಟ್ಟರೆ ನನ್ನ ಚಿಂತೆ ದೂರವಾಗುತ್ತದೆ. ಕೊನೆಗೊಳ್ಳಲಿರುವ ಮೂರು ಪುಸ್ತಕಗಳಿಂದ, ಒಂದು ವರ್ಷದ ಒಳಗಾಗಿ ಈ ಸಾಲವನ್ನು ತೀರಿಸಿಬಿಡಬಹುದೆಂದು ನಂಬಿದ್ದೇನೆ. ಮನೆಯ ಅಂದಾಜು ವೆಚ್ಚ ಹದಿನಾಲ್ಕು ಸಾವಿರದವರೆಗೆ ಬರಬಹುದೆಂದುಕೊಂಡಿದ್ದೆವು. ಯಾರೊಡನೆ ಮಾತುಕತೆ ಆಡಿದ್ದೇನೋ ಅವರೊಂದಿಗೆ ಈ ವರ್ಷ ಅರ್ಧ ಹಣವನ್ನು ಕೊಡುವುದೆಂದೂ, ಮುಂದಿನ ವರ್ಷ ಉಳಿದ ಅರ್ಧವನ್ನು ಕೊಡುವುದೆಂದೂ ಒಪ್ಪಂದ ಮಾಡಿಕೊಂಡಿದ್ದೆ. ಆದರೆ, ಏನೇನೋ ಆಗಿ ಖರ್ಚು ಹೆಚ್ಚಿ, ಮೂರು ಸಾವಿರ ರೂಪಾಯಿಗಳಷ್ಟು ಹೆಚ್ಚು ವೆಚ್ಚವಾಗಿ ಬಿಟ್ಟಿದೆ. ಇಲ್ಲವಾಗಿದ್ದಲ್ಲಿ, ಹಣದ ಅಗತ್ಯ ಉಂಟಾಗುತ್ತಿರಲಿಲ್ಲ. ಸಾಲ ಮಾಡದೆಯೇ ಪಾವತಿ ಮಾಡಿಬಿಡುತ್ತಿದ್ದೆ. ಇಲ್ಲಿ ಹಳ್ಳಿಯ ಮನೆಯ ಮೇಲೆ ಹದಿನಾರು-ಹದಿನೇಳು ಸಾವಿರ ರೂಪಾಯಿ ಖರ್ಚುಮಾಡಿದ್ದೇನೆ. ಕಲ್ಕತ್ತಾದ ಮನೆಗೆ ಮುವತ್ತು ಸಾವಿರ ರೂಪಾಯಿಗಳ ಖರ್ಚು ಬರುವಂತೆ ತೋರುತ್ತದೆ."

ಅವರ ಆದಾಯ ಸಾಕಷ್ಟು ಚೆನ್ನಾಗಿತ್ತು. ಆದರೂ ಮೇಲಿಂದ ಮೇಲೆ ಏಕೆ ಹೀಗೆ ಸಾಲವಾಗುತ್ತಿತ್ತು ? ಬೇಕಿರಲಿ, ಬೇಡದಿರಲಿ, ಪೇಟೆಗೆ ಹೋಗಿ ಏನಾದರೂ ವ್ಯಾಪಾರ ಮಾಡಿಕೊಂಡು ಬರುವುದೇ ಅವರ ಅಭ್ಯಾಸವಾಗಿ ಬಿಟ್ಟಿತ್ತು. ಒಂದು ರೂಪಾಯಿಯಷ್ಟು ಅಗತ್ಯವಾದ ವಸ್ತುಗಳನ್ನು ತೆಗೆದುಕೊಂಡರೆ, ಇಪ್ಪತ್ತೈದು ರೂಪಾಯಿಗಳಷ್ಟು ಅನಗತ್ಯ ವಸ್ತುಗಳನ್ನು ಕೊಂಡುಕೊಂಡು ಬರುತ್ತಿದ್ದರು. ಯಾರಾದರೂ ಕೇಳುತ್ತಿದ್ದರು: "ಅಣ್ಣಯ್ಯ, ಇವುಗಳ ಅಗತ್ಯವೇನೂ ಇರಲಿಲ್ಲ! ಇವನ್ನೇಕೆ ಕೊಂಡುಕೊಳ್ಳುತ್ತಿದ್ದೀರಿ ?"

"ಅರೆ, ನಿನಗೆ ಅರ್ಥವೇ ಆಗುವುದಿಲ್ಲವೆ ? ಇನ್ನು ಯಾವಾಗಲಾದರೂ ಅಗತ್ಯ ಉಂಟಾಗಬಹುದು" ಎಂದು ಉತ್ತರ ಸಿಕ್ಕುತ್ತಿತ್ತು.

ಒಮ್ಮೆ ಒಂದು ಸಿಗರೇಟ್ ಕೇಸನ್ನು ನೋಡಿದರು. ಅದು ನಿಜವಾಗಿಯೂ ಸುಂದರವಾಗಿತ್ತು. ಕೊಂಡುಕೊಂಡು ಬಿಟ್ಟರು. ಜೊತೆಯಲ್ಲಿದ್ದ ಮಿತ್ರರು ಕೇಳಿದರು: "ಅಣ್ಣಯ್ಯ, ನೀವು ಹುಕ್ಕಾ ಅಥವಾ ಪೈಪ್ ಸೇದುತ್ತೀರಿ. ವ್ಯರ್ಥವಾಗಿ ಈ ಸಿಗರೇಟ್ ಕೇಸನ್ನೇಕೆ ಕೊಂಡುಕೊಂಡಿರಿ ?"

---

1. ಮಾರ್ಚ್ 28, 1934.

"ನಿನಗೆ ಅರ್ಥ ಆಗುವುದಿಲ್ಲಪ್ಪ! ಎಷ್ಟು ಸುಂದರವಾದ ಡಿಜೈನ್ ಇದು! ನನ್ನ ಹತ್ತಿರವೇ ಇರುತ್ತದೆ. ಯಾವಾಗಲಾದರೂ ಸಿಗರೇಟ್ ಸೇದಲು ನಾನೂ ಪ್ರಾರಂಭಿಸಬಹುದು" ಎಂದು ಅವರು ಉತ್ತರಿಸಿದರು.

ಇದೇ ರೀತಿ ಸುಂದರವಾದ ನೋಟ್‌ಬುಕ್ಕುಗಳು, ಸುಂದರವಾದ ವಿದೇಶೀ ಹಣದ ಚೀಲ, ಗಾಜಿನ ಮುದ್ದಾದ ದೌತಿ, ಹೀಗೆ ಏನೇನನ್ನು ಕೊಂಡುಕೊಳ್ಳುತ್ತಿದ್ದರೋ ಏನೋ. ಹಣವನ್ನು ಕೂಡಿಡುವುದು ಅವರಿಗೆ ಅಸಹ್ಯದ ಸಂಗತಿಯಾಗಿತ್ತು. ಗಂಭೀರವಾಗಿ ಅವರು ಆಗಾಗ್ಗೆ ಹೀಗೆನ್ನುತ್ತಿದ್ದರು: "ಬಿಡಪ್ಪ, ಜೀವನವಿಡೀ ಹಣಕ್ಕಾಗಿ ಕಷ್ಟಪಟ್ಟಿದ್ದಾಯಿತು. ಈಗ ಸಾಯುವ ಕಾಲಕ್ಕೆ ದೇವರು ಅದನ್ನು ಕೊಟ್ಟಿದ್ದಾನೆ. ಈಗ ಇದರ ಅಗತ್ಯವಾದರೂ ನನಗೇನಿದೆ?"

ಅವರು ಮಾರಿಸ್ ಕಾರನ್ನೂ ಕೊಂಡಿದ್ದರು. ಗೆಳೆಯರಿಗೆ ನೆರವಾಗಲು ಸದಾ ಅವರು ತುದಿಗಾಲಿನ ಮೇಲೇ ನಿಂತಿರುತ್ತಿದ್ದರು. ಪೇಟೆಯಲ್ಲಿ ಏಳು ರೂಪಾಯಿ ಬೆಲೆಯ ವಸ್ತುವನ್ನು ಕೊಂಡುಕೊಂಡರೆ, ಅಂಗಡಿಯವನಿಗೆ ಹತ್ತು ರೂಪಾಯಿ ನೋಟನ್ನು ಕೊಡುತ್ತಿದ್ದರು. ಬಾಕಿ ಹಣವನ್ನು ಹಿಂದಕ್ಕೆ ಪಡೆಯುವ ಚಿಂತೆಯೇ ಅವರಿಗೆ ಎಂದೂ ಇರುತ್ತಿರಲಿಲ್ಲ. ನೆನಪು ಮಾಡಿಕೊಟ್ಟರೆ, "ಹೋಗಲಿ ಬಿಡಪ್ಪ. ಎಲ್ಲೋ ಮರೆತುಬಿಟ್ಟಿರಬೇಕು. ಕೊಡುತ್ತಾನೆ ಬಿಡು" ಎಂದು ಬಿಡುತ್ತಿದ್ದರು.

ಔಷಧಿಗಳನ್ನೂ ಸಗಟು ಪ್ರಮಾಣದಲ್ಲಿಯೇ ಕೊಳ್ಳುತ್ತಿದ್ದರು. ತಲೆನೋವಿನ ಮಾತ್ರೆಗಳ ಒಂದು ಶೀಶೆ ಮಲಗುವ ಕೋಣೆಯ ತಿವಟಿಗೆಯ ಮೇಲಿದ್ದರೆ, ಅಂಗಳದ ಮೇಜಿನ ಮೇಲೆ ಇನ್ನೊಂದು ಶೀಶೆ ಇರುತ್ತಿತ್ತು; ಶೌಚಾಲಯದ ಕಾರ್ನೀಸಿನ ಮೇಲೆ ಮತ್ತೊಂದು ಶೀಶೆ ಇದ್ದರೆ ದಿವಾನಖಾನೆಯಲ್ಲಿ ಮಗದೊಂದು ಶೀಶೆ ಇರುತ್ತಿತ್ತು. ಇಂಥ ಸಂಗತಿಗಳಿಗೆ ಕೊನೆ ಎಂಬುದೇ ಇರಲಿಲ್ಲ. ಹಣ ಹೀಗೆ ಮುಕ್ತ ರೂಪದಲ್ಲಿ ಹರಿದು ಹೋಗುತ್ತಿತ್ತು.

ನಾಲ್ಕು ತಿಂಗಳ ಬಳಿಕ ಕಲ್ಕತ್ತೆಯ ಈ ಮನೆಯ ನಿರ್ಮಾಣ ಕಾರ್ಯವೂ ಮುಗಿಯಿತು. ಈ ಮನೆಯ ಗೃಹಪ್ರವೇಶದ ಸಂದರ್ಭದಲ್ಲಿ[1] ಆಗಮಿಸಿದ್ದ ಅನೇಕ ಗಣ್ಯ ಅತಿಥಿಗಳಲ್ಲಿ ಕವಿಗುರು ರವೀಂದ್ರನಾಥರೂ ಒಬ್ಬರಾಗಿದ್ದರು. ಈ ಸಮಾರಂಭದಲ್ಲಿ ಹಾಜರಾಗಿದ್ದುದು ಮಾತ್ರವಲ್ಲದೆ, ಈ ಸಂದರ್ಭದಲ್ಲಿ ರವೀಂದ್ರರು ತಮ್ಮ ಎರಡು ಕವಿತೆಗಳನ್ನೂ ಓದಿದ್ದರು. ಕವಿಗುರುಗಳು ತಮ್ಮ ಘನ-ಗಂಭೀರ ಸ್ವರದಲ್ಲಿ ಈ ಕವಿತೆಯನ್ನು ಮೊಳಗಿಸಿದ್ದಾಗ ಅದೆಂಥ ಮಾದಕಸ್ತಬ್ಧತೆ ಆ ವಾತಾವರಣದಲ್ಲಿ ಕವಿದುಕೊಂಡಿದ್ದಿರಬೇಕು:

"ಯದಿ ಓ ಸಂಧ್ಯಾ ಆಸಿಛೇ ಮಂದ ಮಂಥರೇ
ಸಬ್ ಸಂಗೀತ್ ಗೇಛೇ ಇಂಗೀತೇ ಥಾಮಿಯಾ ।
ಯದಿ ಓ ಸಂಗಿ ನಾಹಿ ಅನಂತ ಅಂಬರೇ,
ಯದಿ ಓ ಕ್ಲಾಂತಿ ಆಸಿಛೇ ಅಂಗೇ ನಾಮಿಯಾ ।
ಮಹಾ ಆಶಂಕಾ ಜಪಿಛೇ ಮೌನ ಮಂತರೇ
ದಿಗ್-ದಿಗಂತ ಅವಗುಂಠನೇ ಢಾಕಾ ।

1. ಜುಲೈ 1934.

ತಬು ಬಿಹಂಗ, ಓರೇ ಬಿಹಂಗ ಮೋರ
ಏಖನಿ ಅಂಧ, ಬಂಧ ಕೋರೋ ನಾ ಪಾಖಾ !"

ಈ ಮನೆ ಆಗಿಬಿಟ್ಟಿದ್ದರಿಂದ ಅವರಿಗೆ ತುಂಬ ಅನುಕೂಲವಾಯಿತು. ಈಗ ಅವರಿಗೆ ಸುಲಭವಾಗಿ ಚಿಕಿತ್ಸೆ ದೊರೆಯುವಂತಾಯಿತು. ಅವರನ್ನು ಭೇಟಿಯಾಗಲು ಅಷ್ಟು ದೂರ ಹಳ್ಳಿಗೆ ಹೋಗುತ್ತಿದ್ದ ಜನರ ಕಷ್ಟವೂ ಕಡಿಮೆಯಾಯಿತು. ಹೊಸ ಹೊಸ ಲೇಖಕರು ಹೃದಯದಲ್ಲಿ ಅಗಾಧ ಶ್ರದ್ಧಾ-ಭಕ್ತಿಗಳನ್ನು ತುಂಬಿಕೊಂಡು ಅವರ ಬಳಿಗೆ ಬರುತ್ತಿದ್ದರು ಹಾಗೂ ಅವರ ಪ್ರತಿಯೊಂದು ಚಲನವಲನವನ್ನೂ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದರು. ಶರತ್‌ಚಂದ್ರರು ದಿವಾನಖಾನೆಯಲ್ಲಿ ಆರಾಮಕುರ್ಚಿಯಲ್ಲಿ ಕುಳಿತಿದ್ದಾರೆ; ಎರಡೂ ಪಕ್ಕಗಳಲ್ಲಿ ಸಣ್ಣಸಣ್ಣ ಮೇಜುಗಳಿವೆ, ಅವುಗಳ ಮೇಲೆ ಒಂದೇ ಬಗೆಯ ವಸ್ತುಗಳನ್ನು ಇರಿಸಲಾಗಿದೆ - ಬ್ಲಾಟಿಂಗ್ ಪೇಪರ್, ಸುಂದರವಾದ ಪ್ಯಾಡ್, ತುಂಬ ಬೆಲೆ ಬಾಳುವ ಫೌಂಟನ್ ಪೆನ್, ಪೆನ್ಸಿಲ್ಲುಗಳು. ಅವರ ಮನಸ್ಸು ಯಾವ ಕಡೆ ಹರಿದರೆ ಆ ಕಡೆಯಿಂದಲೇ ಲೇಖನಿಯನ್ನೆತ್ತಿಕೊಂಡು ಬರೆಯಲು ಪ್ರಾರಂಭಿಸಿಬಿಡುತ್ತಾರೆ; ದುಡ್ಡಿನ ಒಂದು ಡಬ್ಬಿಯಲ್ಲಿ ಅಫೀಮನ್ನಿಟ್ಟುಕೊಂಡಿದ್ದಾರೆ. ಆದರೆ, ಅಂಥ ಡಬ್ಬ ಇರುವುದು ಒಂದೇ ಒಂದು. ಹುಕ್ಕಾದ ಉದ್ದನೆಯ ಕೊಳವೆಯ ಮೂತಿಯ ಭಾಗ ಅವರ ಕೈಯಲ್ಲಿದೆ. ಚಿಲುಮೆ ಆರಿ ಹೋದಾಗ, ನೌಕರನಿಗೆ ಕರೆಕೊಡುತ್ತಾರೆ: "ಬೃಂದಾವನ್!"

ಹಳೆಯ ಗೆಳೆಯರು ಬರುವುದೂ ಹೆಚ್ಚಾಗಿತ್ತು. ಭೇಟಿಯಾಗುವ ಹಾಗೂ ಗೋಷ್ಠಿಯನ್ನು ಕೂಡಿಸುವ ಅಭ್ಯಾಸ ಜೀವನವಿಡೀ ಉಳಿದು-ಬೆಳೆದು ಬಂದಿತ್ತು. ಅದೇ ಊಟ-ತಿಂಡಿ; ಅದೇ ಹರಟೆ. ಕಾಲ ಎಲ್ಲಿಂದ ಬಂದು ಎಲ್ಲಿಗೆ ಹೋಗಿಬಿಡುತ್ತಿತ್ತೋ, ಯಾರಿಗೂ ಗೊತ್ತಾಗುತ್ತಿರಲಿಲ್ಲ. ಅಂದು ಒಮ್ಮೆ ಹೀಗೆಯೇ ಬೆಳಗ್ಗೆ ರಾತ್ರಿಯಲ್ಲಿ ಪರ್ಯವಸಾನಗೊಂಡಿತು. ಹರಿದಾಸಬಾಬೂ ಅವರಿದ್ದರು. ದಿಲೀಪಕುಮಾರ್ ಅವರಿದ್ದರು; ಇನ್ನೂ ಅನೇಕ ಲೇಖಕರಿದ್ದರು. ಒಮ್ಮೆಲೇ ಹರಿದಾಸ ಬಾಬೂ ಅವರೆಂದರು: "ರಾತ್ರಿ ತುಂಬ ಹೊತ್ತು ಆಗಿಬಿಟ್ಟಿದೆ. ನಡೆಯಿರಿ, ಇನ್ನು ಹೋಗೋಣ. ಇಲ್ಲದಿದ್ದರೆ, ಉಯಿಲನ್ನು ತೆಗೆದುಕೊಂಡು ಬರುವಂತೆ ಶರತ್‌ಚಂದ್ರರು ನೌಕರನಿಗೆ ಅಪ್ಪಣೆ ಮಾಡುತ್ತಾರೆ."

ಶರತ್‌ಚಂದ್ರರು ನಗುತ್ತ ಕೇಳಿದರು: "ಉಯಿಲು ಯಾತಕ್ಕೆ?"

ಹರಿದಾಸ್ ಅವರೆಂದರು: "ನಿಮ್ಮ ಹಾಗೆಯೇ ಒಬ್ಬ ಒಳ್ಳೆಯ ಬ್ರಾಹ್ಮಣನಿದ್ದ. ಸರಸ್ವತೀ ಪೂಜೆಯ ದಿವಸ ಅವನು ಅನೇಕ ವ್ಯಕ್ತಿಗಳನ್ನು ಆಹ್ವಾನಿಸಿದ್ದ. ಊಟ-ತಿಂಡಿ ಎಲ್ಲ ಆದರೂ ಯಾರೂ ಅಲ್ಲಿಂದ ಏಳುವ ಸೂಚನೆಯೇ ಕಾಣಿಸುತ್ತಿರಲಿಲ್ಲ. ಆಗ ಆತನು ಸೇವಕನನ್ನು ಕರೆದು ಹೇಳಿದ: 'ನೋಡು, ಈ ಬೀಗದ ಕೈ ತೆಗೆದುಕೊಂಡು, ಕಬ್ಬಿಣದ ಪೆಟ್ಟಿಗೆಯನ್ನು ತೆಗೆದು ನಮ್ಮ ಅಪ್ಪ ಬರೆದಿಟ್ಟಿರುವ ಉಯಿಲನ್ನು ತೆಗೆದುಕೊಂಡು ಬಾ'.

"ಬಡಪಾಯಿ ಅತಿಥಿಗಳೆಲ್ಲರೂ ಮೌನವಾಗಿ ಬಿಟ್ಟರು. ಸೇವಕ ಹಿಂದೆ ಮುಂದೆ ನೋಡುತ್ತ ಕೇಳಿದ: 'ಉಯಿಲೆ?'

"ಮನೆಯೊಡೆಯ ಹೇಳಿದ: 'ಹೌದು, ಹೌದು. ನಮ್ಮಪ್ಪ ಈ ಮನೆಯನ್ನು ನನ್ನ

ಹೆಸರಿಗೆ ಬರೆದಿದ್ದಾರೋ ಅಥವಾ ಇವರೆಲ್ಲರ ಹೆಸರಿಗೆ ಬರೆದಿದ್ದಾರೋ ಎಂದು ನೋಡಬೇಕು.' "

ಆ ಬಳಿಕ ಹುಚ್ಚು ಹೊಳೆಯಾಗಿ ಹರಿದ ಆ ಅಟ್ಟಹಾಸವನ್ನು ಊಹಿಸಿಕೊಂಡೇ ಆನಂದಿಸಬೇಕು.

ಪ್ರಸಿದ್ಧ ಭಾಷಾ-ವಿಜ್ಞಾನಿಯಾಗಿದ್ದ ಸುನೀತಿ ಕುಮಾರ್ ಚಟರ್ಜಿಯವರಿಗೆ ಶರತ್‌ಚಂದ್ರರ ಪರಿಚಯವಾಗಿತ್ತು. ಆದರೆ ಹಳ್ಳಿಗೆ ಹೋಗುವುದು ಅವರಿಗೆ ಸಾಧ್ಯವಿರಲಿಲ್ಲ. ಸಭೆ-ಸಮಿತಿಗಳಲ್ಲಿ ಮಾತ್ರವೇ ಅವರು ಭೇಟಿಯಾಗುತ್ತಿದ್ದರು. ಆದರೆ, ಈಗ ಶರತ್‌ಚಂದ್ರರ ಮನೆ ಅವರ ಮನೆಯ ಹತ್ತಿರವೇ ಇತ್ತು. ಆಗಾಗ್ಗೆ ಬಂದು ಹೋಗಿ ಮಾಡುತ್ತಿದ್ದರು. ಒಂದು ದಿವಸ ಇಂಥದೇ ಒಂದು ಭೇಟಿಯ ಸಂದರ್ಭದಲ್ಲಿ ಶರತ್‌ಚಂದ್ರರು ಅವರ ಮುಂದೆ ಒಂದು ಮನೋವೈಜ್ಞಾನಿಕ ಸಮಸ್ಯೆಯನ್ನು ಮುಂದಿರಿಸಿದರು. ಅದಕ್ಕೆ ಪರಿಹಾರವನ್ನು ಅರಸುವುದು ಸುಲಭವಾಗಿರಲಿಲ್ಲ. ಶರತ್‌ಚಂದ್ರರು ಕೇಳಿದರು: "ಸರಿ ಸುನೀತಿ, ನಿಮ್ಮ ಅಭಿಪ್ರಾಯವೇನು ? ಇವುಗಳಲ್ಲಿ ಪ್ರಬಲವಾದದ್ದು ಯಾವುದು - ನಮ್ಮ ಪೂರ್ವಜರಿಂದ ಹಾಗೂ ಸಾಮಾಜಿಕ ವಾತಾವರಣದಿಂದ ನಾವು ಪಡೆದುಕೊಳ್ಳುವ ಸಂಸ್ಕಾರವೆ ? ಅಥವಾ ಮನುಷ್ಯನ ಮೂಲ ಸ್ವಭಾವವೆ ?"

ಸುನೀತಿ ಬಾಬೂ ಅವರಿಗೆ ಕೂಡಲೇ ಉತ್ತರಿಸಲು ಸಾಧ್ಯವಾಗಲಿಲ್ಲ. "ನಿಮ್ಮ ಮನಸ್ಸಿನಲ್ಲಿ ಈ ಪ್ರಶ್ನೆ ಏಕೆ ಕುಳಿತುಕೊಂಡು ಬಿಟ್ಟಿದೆ ?" ಎಂದು ಕೇಳಿದರು.

ಶರತ್‌ಚಂದ್ರರು ಹೇಳಿದರು: "ಏಕೋ ಏನೋ, ನಿಮ್ಮನ್ನು ನೋಡಿದ ಕೂಡಲೇ ಬರ್ಮಾದ ಘಟನೆಯೊಂದು ನೆನಪಿಗೆ ಬಂದಿತು. ಅದನ್ನು ಹೇಳುತ್ತೇನೆ, ಕೇಳಿ. ಬಹುಶಃ ನನ್ನ ಪ್ರಶ್ನೆಯನ್ನು ಅರ್ಥಮಾಡಿಕೊಳ್ಳಲು ಅದು ನೆರವಾಗಬಹುದು. ರಂಗೂನಿನಲ್ಲಿ ವಾಸಮಾಡತೊಡಗಿ ಆಗಲೇ ಕೆಲವು ವರ್ಷಗಳು ಕಳೆದಿದ್ದುವು. ಒಂದು ದಿವಸ ನನ್ನ ಪರಿಚಯದ ಬಂಗಾಳಿ ಸದ್ಗೃಹಸ್ಥರೊಬ್ಬರು ನನ್ನ ಬಳಿಗೆ ಬಂದು ಹೇಳಿದರು: 'ನೋಡಿ, ಶರತ್‌ಬಾಬೂ ! ನನ್ನ ಪರಿಚಯದ ಬ್ರಾಹ್ಮಣನೊಬ್ಬನ ಮಗ ಚಟಗಾಂವ್‌ನಿಂದ ಇಲ್ಲಿಗೆ ಬಂದಿದ್ದಾನೆ. ಕೆಲಸ ಹುಡುಕುತ್ತಿದ್ದಾನೆ. ಅವನಿಗೆ ನೀವೇನಾದರೂ ಕೆಲಸದ ಏರ್ಪಾಟು ಮಾಡಿದರೆ ಉಪಕಾರಮಾಡಿದ ಹಾಗೆ ಆಗುತ್ತದೆ."

"ನನ್ನ ಗೆಳೆಯನೊಬ್ಬ ಸಾಗವಾನಿ ಮರದ ಸಾಕಷ್ಟು ದೊಡ್ಡ ವಹಿವಾಟನ್ನೇ ನಡೆಸುತ್ತಿದ್ದ. ಅವನ ಬಳಿಯಲ್ಲಿಯೇ ಆ ಹುಡುಗನನ್ನು ಕಿರಾಣಿ ಕೆಲಸಕ್ಕೆ ಹಚ್ಚಿದ್ದೆ. ಕೆಲವು ತಿಂಗಳುಗಳ ಬಳಿಕ ಆಕಸ್ಮಿಕವಾಗಿ ಅವನ ಭೇಟಿಯಾಯಿತು. ಅಷ್ಟು ಹೊತ್ತಿಗಾಗಲೇ ಅವನ ರೂಪವೇ ಬೇರೆಯಾಗಿಬಿಟ್ಟಿತ್ತು. ಮೈಮೇಲೆ ಪಂಚೆಯಾಗಲೀ, ನಿಲುವಂಗಿಯಾಗಲೀ, ಕಾಲಿನಲ್ಲಿ ಚಪ್ಪಲಿಯಾಗಲೀ ಇರಲಿಲ್ಲ. ರಾಮನಾಮಾಂಕಿತವುಳ್ಳ ಶಾಲೊಂದನ್ನು ಹೊದ್ದುಕೊಂಡಿದ್ದ; ತಲೆಯಲ್ಲಿ ಭಾರಿ ಜುಟ್ಟು; ಹಣೆಯ ಮೇಲೆ ಚಂದನ ! ಪಕ್ಕಾ ಪುರೋಹಿತನಾಗಿಬಿಟ್ಟಿದ್ದ. ನನ್ನನ್ನು ನೋಡಿ ಅವನು ನಮಸ್ಕಾರ ಮಾಡಿದ. ನಾನೆಂದೆ: 'ಏನಪ್ಪ, ಪುರೋಹಿತರ ವೃತ್ತಿಯನ್ನು ಆರಂಭಿಸಿಬಿಟ್ಟದ್ದೀಯೇನು ?'

"ಅವನು ತುಂಬ ವಿನಯದಿಂದ ಹೇಳಿದ: 'ಏನು ಮಾಡಲಿ, ಹೇಳಿ. ಅಲ್ಲಿ ಅವರು ಕೊಡುತ್ತಿದ್ದುದು ಹೊಟ್ಟೆಗೂ ಬಟ್ಟೆಗೂ ಸಾಕಾಗುತ್ತಿರಲಿಲ್ಲ. ಇಲ್ಲಿ ಇಷ್ಟೊಂದು ಜನ ಬಂಗಾಳೀ ಹಿಂದೂಗಳು ವಾಸಮಾಡುತ್ತಿದ್ದಾರೆ. ಪೂಜೆ-ಪುರಸ್ಕಾರಗಳಿಗೆ ಅವರಿಗೆಲ್ಲ ಬ್ರಾಹ್ಮಣನ ಅಗತ್ಯ ಇದ್ದೇ ಇದೆ; ನಾನೂ ಒಬ್ಬ ಬ್ರಾಹ್ಮಣನ ಮಗನಲ್ಲವೆ? ನಾನೇಕೆ ಪುರೋಹಿತ ವೃತ್ತಿಯನ್ನೇ ಆರಂಭಿಸಬಾರದು?-ಎಂದು ಯೋಚಿಸಿದೆ. ನಿಮ್ಮ ಆಶೀರ್ವಾದದಿಂದ ಆ ಕೆಲಸಕ್ಕಿಂತಲೂ ಹೆಚ್ಚು ಹಣವನ್ನು ಸಂಪಾದಿಸುತ್ತಿದ್ದೇನೆ.'

"ಇದಾದ ಬಳಿಕ ಇನ್ನೂ ಕೆಲವು ವರ್ಷಗಳು ಕಳೆದುಹೋದುವು. ನಾನು ಬಹುಮಟ್ಟಿಗೆ ಅವನನ್ನು ಮರೆತೇಬಿಟ್ಟಿದ್ದೆ. ಆದರೆ, ಆಕಸ್ಮಿಕನಾಗಿ ನಾನೊಮ್ಮೆ ಉತ್ತರ ಬರ್ಮಾದ ಮೇಮಿಯೋ ನಗರಕ್ಕೆ ಹೋಗಬೇಕಾಗಿ ಬಂತು. ಆ ಬೆಟ್ಟಗಾಡಿನ ಪ್ರದೇಶ ತುಂಬ ಸುಂದರವಾಗಿದೆ. ಒಂದು ದಿವಸ ಒಂಟಿಯಾಗಿ ಒಂದು ಸಾರ್ವಜನಿಕ ಉದ್ಯಾನದಲ್ಲಿ ಅಡ್ಡಾಡುತ್ತಿದ್ದೆ. ಒಮ್ಮೆಗೇ 'ಶರತ್‌ಬಾಬೂ!', 'ಶರತ್‌ಬಾಬೂ!' ಎಂಬ ಧ್ವನಿ ಕಿವಿಗೆ ಬಿತ್ತು. ತಿರುಗಿ ನೋಡಿದೆ. ನನ್ನ ಪರಿಚಯದ ಯಾವ ವ್ಯಕ್ತಿಯೂ ಕಾಣಲಿಲ್ಲ. ಒಬ್ಬ ಮುಸ್ಲಿಮ್ ನನ್ನ ಕಡೆಗೆ ಬರುತ್ತಿರುವುದು ಕಂಡಿತು. ಹತ್ತಿರ ಬಂದು ಅವನು ಹೇಳಿದ: 'ನಿಮಗೆ ನನ್ನ ಗುರುತು ಸಿಗಲಿಲ್ಲ ಎಂದು ಕಾಣುತ್ತದೆ.'

"ನಾನು ಹೇಳಿದೆ: 'ಹೌದಪ್ಪ ನಿನ್ನನ್ನು ಯಾವಾಗಲಾದರೂ ಭೇಟಿಯಾಗಿದ್ದೇನೆಯೇ ಎಂಬುದು ನೆನಪಿಗೆ ಬರುತ್ತಿಲ್ಲ.'

"ನನ್ನ ಮಾತನ್ನು ಕೇಳಿ ಅವನು ನಕ್ಕು ಹೇಳಿದ: 'ನಾನು ಅದೇ ಚಕ್ರವರ್ತಿ ಬ್ರಾಹ್ಮಣ. ಮರದ ಗೋದಾಮಿನಲ್ಲಿ ನೀವೇ ನನಗೆ ಕೆಲಸ ಕೊಡಿಸಿದ್ದಿರಲ್ಲ!'

"ನಾನು ಆಗ ನೆಟ್ಟಕಣ್ಣಿನಿಂದ ಅವನನ್ನು ನೋಡಿದೆ. 'ಅದು ಸರಿ, ಇದೇನು ವೇಷ ಮಾಡಿಕೊಂಡಿದ್ದೀಯೆ?' ಎಂದು ಕೇಳಿದೆ.

"ಅವನು ಹೇಳಿದ: 'ನಾನೀಗ ಇಸ್ಲಾಂ ಧರ್ಮವನ್ನು ಅಂಗೀಕರಿಸಿದ್ದೇನೆ. ಏನು ಮಾಡಲಿ, ಶರತ್‌ಬಾಬೂ! ಪುರೋಹಿತ ವೃತ್ತಿಯನ್ನೇನೋ ಆರಂಭಿಸಿದ್ದೆ. ಆದರೆ ಕೆಲವೇ ದಿನಗಳಲ್ಲಿ ಸಂಪಾದನೆ ತುಂಬ ಕಮ್ಮಿಯಾಗಿಬಿಟ್ಟಿತು. ಇಂಗ್ಲಿಷ್ ಬರುತ್ತಾ ಇರಲಿಲ್ಲ. ಆದ್ದರಿಂದ, ಒಳ್ಳೆಯ ಕೆಲಸವೂ ಸಿಕ್ಕಲಿಲ್ಲ. ಇಲ್ಲಿ ಮೇಮಿಯೋಗೆ ಬಂದ ಮೇಲೆ ಬಂಗಾಳಿ ಮುಸ್ಲಿಮರ ಪರಿಚಯ ಆಯಿತು. ಅವರಲ್ಲಿಯೇ ಒಬ್ಬ ತನ್ನ ಮನೆಯಲ್ಲಿ ನನಗೆ ಆಶ್ರಯ ನೀಡಿದ. ಅವನು ಮಾಂಸದ ವ್ಯಾಪಾರ ಮಾಡುತ್ತಿದ್ದ. ಆ ವ್ಯಾಪಾರದಲ್ಲಿ ಅವನಿಗೆ ಸಾಕಷ್ಟು ಲಾಭವೂ ಬರುತ್ತಿತ್ತು. ಕ್ರಮೇಣ ಅವನ ಜೊತೆಯಲ್ಲಿಯೇ ಕೆಲಸ ಮಾಡತೊಡಗಿದೆ. ಒಂದು ದಿವಸ ನಾನು ಧರ್ಮಾಂತರ ವನ್ನೂ ಮಾಡಿಬಿಟ್ಟೆ. ಇದ್ದಕ್ಕಿದ್ದಂತೆ ಅವನು ಅಸ್ವಸ್ಥನಾಗಿ ತೀರಿಕೊಂಡ. ಅದಾದ ಕೆಲವು ದಿನಗಳ ಬಳಿಕೆ, ಅವನ ಹೆಂಡತಿ ನನ್ನನ್ನು ಮದುವೆಯಾದಳು. ಅವನ ಇಡೀ ವಹಿವಾಟು, ಹಣಕಾಸು, ಆಸ್ತಿಪಾಸ್ತಿ ಎಲ್ಲ ನನ್ನದಾಯಿತು. ನಾನೀಗ ಶ್ರೀಮಂತನಾಗಿ ಬಿಟ್ಟಿದ್ದೇನೆ.'

"ನಾನು ತುಂಬ ಆಶ್ಚರ್ಯದಿಂದ ಅವನ ಕಥೆಯನ್ನು ಕೇಳುತ್ತಿದ್ದೆ. ಕೇಳಿದೆ: 'ಯಾವ ಯಾವ ಪ್ರಾಣಿಗಳ ಮಾಂಸವನ್ನು ಮಾರುತ್ತೀಯೆ?'

"ಅವನು ಸಹಜ ಭಾವದಿಂದ ಉತ್ತರಿಸಿದ: 'ಅದೇ ಕುರಿ, ಮೇಕೆ ಮತ್ತು ಹಸುವಿನ

ಮಾಂಸ ಮಾರುತ್ತೇನೆ. ಎಲ್ಲ ಜಾತಿಯ ಜನಗಳೂ ಬರುತ್ತಾರೆ. ನಾವು ಎಲ್ಲರ ಕಡೆಗೂ ಗಮನ ಕೊಡಬೇಕಲ್ಲ!'

"ನಾನು ಕೇಳಿದೆ: 'ಪ್ರಾಣಿಗಳನ್ನು ಕತ್ತರಿಸುವವರು ಯಾರು ?'

"ಅವನು ಹೇಳಿದ: 'ಮೊದಲು ಬೇರೆಯವರು ಕತ್ತರಿಸುತ್ತಿದ್ದರು. ಅವರಿಗೆ ಹಣ ಕೊಡಬೇಕಾಗುತ್ತಿತ್ತು. ಆ ಹಣವನ್ನು ಉಳಿಸುವುದಕ್ಕಾಗಿ, ಕ್ರಮೇಣ ನಾನೇ ಆ ಕೆಲಸವನ್ನೂ ಮಾಡತೊಡಗಿದೆ. ಹಸುವನ್ನು ಕತ್ತರಿಸುವಾಗ ಮಾತ್ರ ಕೆಲವರ ಸಹಾಯ ಬೇಕಾಗುತ್ತದೆ.'

"ಇದನ್ನು ಕೇಳಿ ನಾನು ಹತಪ್ರಭನಾಗಿ ಬಿಟ್ಟೆ. ಅವನು ಬ್ರಾಹ್ಮಣನ ಮಗನಾಗಿದ್ದ. ಅವನ ರಕ್ತದಲ್ಲಿ ಬ್ರಾಹ್ಮಣನ ಸಂಸ್ಕೃತಿಯೇ ಇತ್ತು. ಇಷ್ಟಾಗಿಯೂ ಇದೆಲ್ಲ ಹೇಗೆ ಆಗಿಬಿಟ್ಟಿತು ? ಶಿಕ್ಷಣ, ಸಾಮಾಜಿಕ ವಾತಾವರಣ ಮತ್ತು ಪೂರ್ವಜರಿಂದ ನಾವು ಪಡೆಯುವ ಸಂಸ್ಕಾರಗಳು - ಇವೆಲ್ಲ ತೆಳುವಾದ ಮೇಲು ಹೊದಿಕೆಯಂತೆ ನಮ್ಮ ಮೇಲೆ ಕವಿದುಕೊಂಡಿರುತ್ತವೆಯೆ ? ಮನಸ್ಸಿಗೆ ಬಂದಾಗ ಅವನ್ನು ಕಿತ್ತೊಗೆಯಬಹುದೆ ?"

ಇಷ್ಟನ್ನು ಹೇಳಿ, ಶರತ್‌ಚಂದ್ರರು ಕೇಳಿದರು: "ಈಗ ನಿಮಗೆ ನನ್ನ ಪ್ರಶ್ನೆ ಅರ್ಥವಾಗಿರಬೇಕಲ್ಲವೆ ? ಈಗ ಹೇಳಿ, ನಿಮ್ಮ ಅಭಿಪ್ರಾಯವೇನು ?"

ಸುನೀತಿ ಬಾಬೂಗಳು ಹೇಳಿದರು: "ಇದಕ್ಕೆ ಇನ್ನೊಂದು ಮುಖವೂ ಇದ್ದಿರಬಹುದು. 'ಪ್ರಾಣವನ್ನಾದರೂ ಬಿಟ್ಟೇವು; ಆದರೆ, ಜೀವಹತ್ಯೆಯನ್ನು ಮಾತ್ರ ಮಾಡುವುದಿಲ್ಲ' ಎಂದು ಹೇಳುವಂಥ ಜನರೂ ಇರಬಹುದಲ್ಲವೆ ? ಏನು ಅಡ್ಡಿ ಆತಂಕಗಳು ಬಂದರೂ ನಮ್ಮ ಸಂಸ್ಕೃತಿಯನ್ನು ಮಾತ್ರ ತ್ಯಜಿಸುವುದಿಲ್ಲ. ವಾಸ್ತವವಾಗಿ, ಇದೆಲ್ಲ ವ್ಯಕ್ತಿ ಯಾವ ಪ್ರಮಾಣದಲ್ಲಿ ಸಂಸ್ಕೃತಿಯನ್ನು ರಕ್ತಗತವಾಗಿಸಿಕೊಂಡಿದ್ದಾನೆ ಎಂಬುದನ್ನು ಅವಲಂಬಿಸಿರುತ್ತದೆ. ಅದಿರಲಿ, ನೀವು ಯಾವ ತೀರ್ಮಾನಕ್ಕೆ ಬಂದಿದ್ದೀರಿ ಎಂಬುದನ್ನು ತಿಳಿಸಿ."

"ನಾನೂ ಯಾವುದೇ ತೀರ್ಮಾನಕ್ಕೆ ಬರಲು ಸಾಧ್ಯವಾಗಿರಲಿಲ್ಲ. ಬಹುಮಟ್ಟಿಗೆ ಇವು ಮನುಷ್ಯನ ಪ್ರವೃತ್ತಿಯನ್ನು ಅವಲಂಬಿಸಿರುತ್ತವೆ. ಸಂಸ್ಕಾರ ಎಂಬುದು ಮೇಲು ಮೇಲಿನ ವಸ್ತು ಎಂಬ ಭಾವನೆ ಖಂಡಿತವಾಗಿಯೂ ನನ್ನ ಮನಸ್ಸಿನಲ್ಲಿ ಬಂದಿದೆ. ಸಂಕಟದ ಸನ್ನಿವೇಶ ಎದುರಾದಾಗ ಮಾತ್ರವೇ ಮನುಷ್ಯನ ನಿಜವಾದ ಸ್ವರೂಪ ಬೆಳಕಿಗೆ ಬರುತ್ತದೆ."

ಈ ರೀತಿ ಶರತ್‌ಚಂದ್ರರು ಗೆಳೆಯರ ಗೋಷ್ಠಿಗಳಲ್ಲಿಯೂ ಸಮಸ್ಯೆಗಳನ್ನು ಎತ್ತುತ್ತಿದ್ದರು; ಅವುಗಳಿಗೆ ಪರಿಹಾರವನ್ನೂ ಅರಸುತ್ತಿದ್ದರು. ಕೇವಲ ಹರಟೆ ಹೊಡೆಯುವುದರಲ್ಲಿಯೇ ಮುಗಿಸಿಬಿಡುತ್ತಿರಲಿಲ್ಲ. ಈ ಸಮಸ್ಯೆಗಳೇ ನಾನಾ ರೂಪಗಳಲ್ಲಿ ಅವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತಿದ್ದುವು.

'ವಿಲಾಸೀ' ಎಂಬ ಕಥೆಯಲ್ಲಿ ಅವರು ಹೀಗೆ ಬರೆದಿದ್ದಾರೆ:

"ಒಳ್ಳೆಯ ಕುಟುಂಬಕ್ಕೆ ಸೇರಿದ ಕಾಯಸ್ಥ ಬ್ರಾಹ್ಮಣನ ಮಗ ಕಟುಕನ ಮಗಳನ್ನು ಮದುವೆಯಾಗಿ, ತಾನೂ ಕಟುಕನಾಗಿಬಿಟ್ಟಿರುವುದನ್ನು ನಾನು ಕಂಡಿದ್ದೇನೆ. ಇಂದು ಅವನು ತನ್ನ ಕೈಯಾರೆ ಹಸುವನ್ನು ಕೊಂದು, ಅದರ ಮಾಂಸವನ್ನು ಮಾರುತ್ತಾನೆ.

ಅವನನ್ನು ನೋಡಿದರೆ. ಅವನು ಹಿಂದೊಮ್ಮೆ ಕಟುಕನಾಗಿರದೆ ಬೇರೇನೋ ಆಗಿದ್ದ ಎಂದು ಹೇಳಲು ಯಾರಿಗೆ ಧೈರ್ಯ ಬರುತ್ತದೆ!"

ಗೋಷ್ಠಿಗಳಲ್ಲಿ ಮಾತ್ರವಲ್ಲದೆ, ಅಧಿಕಾರಿಗಳ ಮುಂದೆಯೂ ಅವರು ತಮ್ಮ ಸಮಸ್ಯೆಗಳನ್ನು ಇಡುತ್ತಿದ್ದರು. ಅವರ ಒಂದು ಸಮಸ್ಯೆ ಈ ರೀತಿಯಲ್ಲಿಯೇ ಮಹಾತ್ಮ ಗಾಂಧೀಜಿಯವರ ವರೆಗೂ ಬಂದು ತಲುಪಿತ್ತು. ಪ್ರವರ್ತಕ ಸಂಘದ ಮತಿ ಬಾಬೂ ಅವರಿಗೆ ಬರೆದ ಒಂದು ಪತ್ರದಲ್ಲಿ[1] ಅವರು ಹೀಗೆಂದು ಕೇಳಿದ್ದರು: "ಸತ್ಯ, ಶಿವ ಮತ್ತು ಸುಂದರ - ಇದೇ ಕಲಾಸಾಧನೆಯ ಮೂಲಸೂತ್ರವೆಂದು ಆಚಾರ್ಯರುಗಳು ಹೇಳಿದ್ದಾರೆ. ಅಂದರೆ, ಸಾಧನೆ ಎಂಬುದು ಸತ್ಯದ ಮೇಲೆ ನೆಲೆಗೊಂಡಿರುತ್ತದೆ; ಸುಂದರವಾದುದರ ಮೇಲೆ ನೆಲೆಗೊಂಡಿರುತ್ತದೆ; ಹಾಗೂ ಶಿವ ಅಥವಾ ಒಳಿತು ಎಂಬುದು ಅದರ ಫಲವಾಗಿರುತ್ತದೆ. ಆದರೆ, ವಿಜ್ಞಾನಿಗಳು (ತತ್ತ್ವಜ್ಞಾನಿಗಳು ಎಂಬ ಅರ್ಥದಲ್ಲಲ್ಲ; ಸಾಮಾನ್ಯ ಬಳಕೆಯ ಅರ್ಥದ ವಿಜ್ಞಾನಿಗಳು ಎಂಬ ಅರ್ಥದಲ್ಲಿ) 'ಸತ್ಯ'ವನ್ನೇ ಏಕೈಕ ಮಂತ್ರವೆಂದು ಭಾವಿಸಿರುತ್ತಾರೆ. ತಮ್ಮ ಸಾಧನೆಯ ಪರಿಣಾಮ ಸುಂದರವಾಗಿರುತ್ತದೆಯೋ, ಅಸುಂದರವಾಗಿರುತ್ತದೆಯೋ, ಒಳಿತಾಗಿರುತ್ತದೆಯೋ, ಕೆಡುಕಾಗಿರುತ್ತದೆಯೋ ಎಂಬುದು ಅವರ ಕಾಳಜಿಯಾಗಿರುವುದಿಲ್ಲ. ಆದರೆ ಒಳ್ಳೆಯದು ಆಗದಿದ್ದರೆ ಅಪರಾಧವೇನೂ ಅಲ್ಲ ಎಂಬುದು ಅವರ ಧೋರಣೆಯಾಗಿರುತ್ತದೆ.

"ಬಹು ದಿನಗಳಿಂದ ಸಾಹಿತ್ಯಸೇವೆಯ ವ್ರತವನ್ನು ನಡೆಸಿಕೊಂಡು ಬಂದಿರುವುದರಿಂದ, ಸತ್ಯ ಮತ್ತು ಸುಂದರ - ಇವುಗಳಲ್ಲಿ ಹೆಜ್ಜೆಹೆಜ್ಜೆಗೂ ವಿರೋಧ ಏರ್ಪಡುತ್ತದೆ ಎಂಬುದು ಸತತವಾಗಿ ನನ್ನ ಅನುಭವಕ್ಕೆ ಬಂದಿದೆ. ಲೋಕದಲ್ಲಿ ಯಾವ ಘಟನೆಗಳು ಸತ್ಯವಾಗಿರುತ್ತವೆಯೋ ಅವು ಸಾಹಿತ್ಯದಲ್ಲಿ ಸುಂದರವಾಗಿರದೆ ಹೋಗಬಹುದು; ಹಾಗೂ ಯಾವುವು ಸುಂದರವಾಗಿರುತ್ತವೆಯೋ ಅವು ಸಾಹಿತ್ಯದಲ್ಲಿ ಸಂಪೂರ್ಣವಾಗಿ ಮಿಥ್ಯೆಯಾಗಿರಬಹುದು. ನಾನು ಸತ್ಯವೆಂದು ತಿಳಿದಿರುವುದಕ್ಕೆ ರೂಪುಕೊಟ್ಟಾಗ ನೋಡಿದರೆ, ಅದು ಬೀಭತ್ಸವಾಗಿ ಬಿಟ್ಟಿರುತ್ತದೆ. ಅಸತ್ಯವನ್ನು ವರ್ಜಿಸಿದರೂ ಅದು ಸುಂದರ ರೂಪವನ್ನು ತಳೆಯುವಂತೆ ತೋರುವುದಿಲ್ಲ. ಮಂಗಳ ಮತ್ತು ಅಮಂಗಳ ಅಥವಾ ಒಳಿತು ಮತ್ತು ಕೆಡಕುಗಳ ವಿಚಾರವೂ ಇಷ್ಟೆ.....ಸತ್ಯ ಎಂಬುದು ಸೌಂದರ್ಯದ ಹಾದಿಯಲ್ಲೇ ನಡೆಯುವುದಾದರೆ, ಒಳಿತು-ಕೆಡಕುಗಳ ಪ್ರಶ್ನೆ ಗೌಣವಾಗುವುದಾದರೆ, ಸಾಹಿತ್ಯ ಸಾಧನೆಯಲ್ಲಿ ಯಾವ ವಿಧಾನದಲ್ಲಿ ಈ ಸಮಸ್ಯೆಯ ಮೀಮಾಂಸೆ ಸಾಧ್ಯವಾಗುತ್ತದೆ ಎಂಬುದನ್ನು ನಾನು ತಿಳಿದುಕೊಳ್ಳಬಯಸುತ್ತೇನೆ."

ಮತಿಬಾಬೂ ಅವರಿಗೂ ಗಾಂಧೀಜಿವರಿಗೂ ಸಾಕಷ್ಟು ನಿಕಟವಾದ ಸಂಬಂಧವಿತ್ತು. ಅವರು ಶರತ್‌ಚಂದ್ರರಿಗೆ ತಾವೇ ಯಾವುದೇ ಉತ್ತರವನ್ನು ಕೊಡಲಿಲ್ಲ. ಅವರ ಪತ್ರವನ್ನು ಗಾಂಧೀಜಿಯವರಿಗೆ ಕಳಿಸಿಕೊಟ್ಟರು.

ಈ ಪತ್ರಕ್ಕೆ[2] ಉತ್ತರವಾಗಿ ಗಾಂಧೀಜಿಯವರು ಹೀಗೆ ಬರೆದರು:

"ಶರತ್‌ಚಂದ್ರರ ಪತ್ರಕ್ಕೆ ಸಂಬಂಧಿಸಿದಂತೆ ನನ್ನ ಅಭಿಪ್ರಾಯ ಯಾವಾಗಲೂ

1. ಆಶ್ವಿನ್ 17, 1341 (ಅಕ್ಟೋಬರ್ 1934).
2. ನವೆಂಬರ್ 12, 1934.

ಇದೇ ಆಗಿದೆ: ವಾಸ್ತವಿಕ ಸೌಂದರ್ಯ ಮತ್ತು ಸತ್ಯಗಳ ನಡುವೆ ಯಾವ ವಿರೋಧವೂ ಇಲ್ಲ. ಆದ್ದರಿಂದ ಸತ್ಯ ಯಾವಾಗಲೂ ಸುಂದರವಾಗಿಯೇ ಇರುತ್ತದೆ. ಆದ್ದರಿಂದ, ನನ್ನ ಅಭಿಪ್ರಾಯದ ಮೇರೆಗೆ ಸತ್ಯವೇ ಸಂಪೂರ್ಣ ಕಲೆ. ಸತ್ಯವಿಹೀನವಾದ ಕಲೆ ಕಲೆಯೇ ಅಲ್ಲ; ಸತ್ಯವಿಹೀನವಾದ ಸೌಂದರ್ಯ ಶುದ್ಧಾಂಗವಾಗಿ ಕುರೂಪತೆಯೇ. ಈ ಲೋಕದಲ್ಲಿ ಅನೇಕ ಕುರೂಪ ವಸ್ತುಗಳನ್ನು ಸುಂದರವೆಂದು ಭಾವಿಸಿಕೊಂಡು ಬಿಡುತ್ತೇವೆ ಎಂಬುದೂ ಸತ್ಯ. ಹೀಗಾಗುವುದಕ್ಕೆ ಕಾರಣ ನಾವು ಸತ್ಯಕ್ಕೆ ಮಹತ್ವವನ್ನು ಕೊಡದಿರುವುದು."

ಬರವಣಿಗೆ ಕಮ್ಮಿಯಾಗಿಬಿಟ್ಟಿತ್ತು. ಆದರೆ, ಚಿಂತನೆಯಿಂದ ಅವರ ಮನಸ್ಸು ಮುಕ್ತವಾಗಿರಲಿಲ್ಲ. ಅನೇಕ ಪ್ರಶ್ನೆಗಳು ಅವರನ್ನು ಮುತ್ತಿಕೊಂಡಿರುತ್ತಿದ್ದುವು. ಕಥೆ ಕಾದಂಬರಿಗಳನ್ನೇ ಹೆಚ್ಚು ಹೆಚ್ಚಾಗಿ ಬರೆಯುತ್ತಿರುವುದಕ್ಕೆ ಕಾರಣವೇನು? ಜ್ಞಾನ-ವಿಜ್ಞಾನಗಳಿಗೆ ಸಂಬಂಧಿಸಿದ ಬೇರೆ ಬಗೆಯ ಸಾಹಿತ್ಯವೇಕೆ ಪ್ರಕಟವಾಗುತ್ತಿಲ್ಲ? - ಈ ಬಗೆಯ ಪ್ರಶ್ನೆಗಳು ಆ ದಿನಗಳಲ್ಲಿ ತೀವ್ರಗತಿಯಲ್ಲಿ ಮೇಲೆದ್ದು ಬರುತ್ತಿದ್ದುವು. ಕೋನ್ ನಗರದ ಅಧ್ಯಯನ ಕೂಟದ ಸಮಾವೇಶವೊಂದರ ಅಧ್ಯಕ್ಷ ಭಾಷಣ ಮಾಡುತ್ತ ಸ್ವತಃ ಅವರೇ ಈ ಪ್ರಶ್ನೆಗಳಿಗೆ ಉತ್ತರ ಕೊಡುವ ಪ್ರಯತ್ನ ಮಾಡಿದ್ದಾರೆ.[1] ಆಗ ಅವರು ಹೀಗೆಂದಿದ್ದರು: "ಕಥೆ-ಕಾದಂಬರಿಗಳನ್ನು ಬರೆಯುವವರ ಮೇಲೆ ಆರೋಪವನ್ನು ಹೊರಿಸಿದರೆ ಏನು ಮಾಡಿದಂತಾಯಿತು? ಹಣಕಾಸಿನ ಕೊರತೆಯಿಂದಾಗಿ ಎಂಥೆಂಥ ಮಹಾಪ್ರತಿಭೆಗಳೆಲ್ಲ ಮಣ್ಣುಮುಕ್ಕುತ್ತಿವೆ ಎಂಬುದರ ಬಗ್ಗೆ ಯಾರಾದರೂ ಗಮನ ಹರಿಸಿದ್ದಾರೆಯೆ? ಯುವಕನಾಗಿದ್ದಾಗ ನಾನೊಂದು ಕಲ್ಪನೆಯನ್ನಿರಿಸಿಕೊಂಡಿದ್ದೆ. 'ದ್ವಾದಶ ಮೌಲ್ಯಗಳು' ಎಂಬ ಹೆಸರಿನಲ್ಲಿ - ಉದಾಹರಣೆಗೆ, ಸತ್ಯದ ಮೌಲ್ಯ, ಮಿಥ್ಯೆಯ ಮೌಲ್ಯ, ದುಃಖದ ಮೌಲ್ಯ, ಪುರುಷನ ಮೌಲ್ಯ, ಮಹಿಳೆಯ ಮೌಲ್ಯ, ಈ ಬಗೆಯ ಮೌಲ್ಯಗಳನ್ನು ಕುರಿತು ವಿವೇಚನೆಯನ್ನು ಒಳಗೊಳ್ಳುವಂತೆ - ಒಂದು ಪುಸ್ತಕ ಮಾಲೆಯನ್ನೇ ಹೊರತರಬೇಕು ಎಂದು ಕೊಂಡಿದ್ದೆ. ಅದಕ್ಕೆ ಭೂಮಿಕೆ ಎಂಬಂತೆ ನಾನು 'ಮಹಿಳೆಯ ಮೌಲ್ಯ' ಎಂಬ ಪುಸ್ತಕವನ್ನು ಬರೆದಿದ್ದೆ. ಅದು ಬಹುದಿನಗಳ ವರೆಗೆ ಅಪ್ರಕಟಿತವಾಗಿಯೇ ಉಳಿದಿತ್ತು. ಮುಂದೆ ಅದು 'ಯಮುನಾ' ಪತ್ರಿಕೆಯಲ್ಲಿ ಪ್ರಕಟವಾಯಿತು. ಆದರೆ ಮತ್ತೆ ಆ 'ದ್ವಾದಶ ಮೌಲ್ಯ'ಗಳನ್ನು ಕುರಿತು ಬರೆಯಲಾಗಲೇ ಇಲ್ಲ. ಹಣಕಾಸಿನ ಅಭಾವವೇ ಅದಕ್ಕೆ ಕಾರಣವಾಗಿತ್ತು. ನನಗೇನು ಜಹಗೀರಿ ಇರಲಿಲ್ಲ. ನನ್ನ ಹತ್ತಿರ ಹಣವೂ ಇರಲಿಲ್ಲ. ಆ ದಿನಗಳಲ್ಲಿ ಎರಡು ಹೊತ್ತು ಊಟಮಾಡುವುದಕ್ಕೆ ಬೇಕಾದಷ್ಟು ಹಣವೂ ಇರಲಿಲ್ಲ. ಇದೆಲ್ಲ ನಡೆಯುವುದಿಲ್ಲ; ಹೇಗಾದರೂ ಮಾಡಿ ನಾಲ್ಕಾರು ಕಥೆಗಳನ್ನು ಬರೆದು ಬಿಡಿ; ಅವುಗಳ ಸಾವಿರ ಸಾವಿರ ಪ್ರತಿಗಳು ಮಾರಾಟವಾಗಿ ಬಿಡುತ್ತವೆ ಎಂದು ನನ್ನ ಪ್ರಕಾಶಕರು ನನಗೆ ಬುದ್ಧಿವಾದ ಹೇಳಿದರು..... ಇದನ್ನು ನಮ್ಮ ಜನಗಳ ವೈಶಿಷ್ಟ್ಯವೆಂದಾದರೂ ಕರೆಯಿರಿ, ದೌರ್ಭಾಗ್ಯವೆಂದಾದರೂ ಕರೆಯಿರಿ - ಪುಸ್ತಕಗಳನ್ನು ಕೊಂಡುಕೊಂಡು ನಾವು ನಮ್ಮ ಲೇಖಕರಿಗೆ ನೆರವಾಗುವುದೇ ಇಲ್ಲ. ಹಣವಂತರಾಗಿರುವವರು ಅವುಗಳನ್ನು ಕೊಳ್ಳಬಹುದು. ಆದರೆ ಅವರೂ ಕೊಂಡು

1. ಸಪ್ಟೆಂಬರ್ 1935.

ಕೊಳ್ಳುವುದಿಲ್ಲ. ಆದರೆ, ಕಥೆ-ಕಾದಂಬರಿಗಳನ್ನು ಬರೆಯುವುದರಿಂದ ಏನು ಸಾಧಿಸಿದಂತಾಯಿತು ಎಂದು ಆರೋಪವನ್ನು ಮಾತ್ರ ಹೊರಿಸಿಬಿಡುತ್ತಾರೆ. ಇಷ್ಟಾಗಿಯೂ, ಇಂದು ಮನೆಗಳಲ್ಲಿ ಮಹಿಳೆಯರ ಶಿಕ್ಷಣದ ವಿಚಾರ ಪ್ರಚಾರವನ್ನು ಪಡೆಯುತ್ತಿದ್ದರೆ, ಅದಕ್ಕೆ ಈ ಕಥೆ-ಕಾದಂಬರಿಗಳೇ ಕಾರಣವಾಗಿವೆ; ಅವುಗಳ ಮೂಲಕವೇ ಅದು ಮುನ್ನಡೆದಿದೆ.... ನಮ್ಮ ಈ ದೊಡ್ಡ ದೊಡ್ಡ ಜನಗಳು, ಕನಿಷ್ಠ ಪಕ್ಷ ತಮ್ಮ ಸಾಮಾಜಿಕ ಕರ್ತವ್ಯವೆಂದಾದರೂ ಭಾವಿಸಿ ಪುಸ್ತಕಗಳನ್ನು ಕೊಂಡು ಕೊಂಡರೆ - ಅಂದರೆ, ಆ ಮೂಲಕ ನಾಡಿನ ಲೇಖಕರಿಗೆ ನೆರವಾಗುವಂಥ ಪ್ರಯತ್ನ ಮಾಡಿದರೆ - ಸಾಹಿತ್ಯದ ಏಳಿಗೆ ಸಾಧ್ಯವಾಗುತ್ತದೆ. ಲೇಖಕರಿಗೆ ಉತ್ಸಾಹ ಮೂಡಿದಂತಾಗುತ್ತದೆ; ಹೊಟ್ಟೆತುಂಬ ಊಟ ಮಾಡಲು ದೊರೆತಂತಾಗುತ್ತದೆ; ಸ್ವತಃ ಅವರಿಗೂ ಬಗೆಬಗೆಯಾದ ಪುಸ್ತಕಗಳನ್ನು ಓದುವ ಅವಕಾಶ ಲಭಿಸಿದಂತಾಗುತ್ತದೆ. ಇದರ ಪರಿಣಾಮವೆಂಬಂತೆ ಅವರ ಜ್ಞಾನವೂ ಹೆಚ್ಚುತ್ತದೆ. ಹೀಗಾದಾಗ ಮಾತ್ರವೇ ಅವರು ಜ್ಞಾನಗರ್ಭಿಯಾಗಿರುವಂಥ ಪುಸ್ತಕಗಳನ್ನು ಬರೆಯಬಲ್ಲರು."

ಅವರ ಬಳಿಗೆ ಬರುತ್ತಿದ್ದ ಸಾಹಿತಿಗಳಲ್ಲಿ ತರುಣರ ಸಂಖ್ಯೆ ಸಾಕಷ್ಟಿರುತ್ತಿತ್ತು. ಅವರು ಅವರನ್ನು ತುಂಬ ಪ್ರೀತಿಸುತ್ತಿದ್ದುದೂ ನಿಜ. ಬಂಗಾಳದ ಸಾಹಿತ್ಯ ಪರಿಷತ್ತು ಅಲ್ಲಿಯತನಕ ಅವರನ್ನು ತನ್ನ ಸದಸ್ಯನನ್ನಾಗಿಸಿಕೊಂಡಿರಲಿಲ್ಲ. ಅವರನ್ನು ವಿಶೇಷ ಸದಸ್ಯರನ್ನಾಗಿ ಸ್ವೀಕರಿಸಬೇಕೆಂಬ ಪ್ರಶ್ನೆ ಬಂದಾಗಲೆಲ್ಲ, ಹಳೆಯ ಗುಂಪಿನವರು ಆ ಸೂಚನೆಯನ್ನು ಪ್ರಬಲವಾಗಿ ವಿರೋಧಿಸುತ್ತಿದ್ದರು. ಅವರು ಶರತ್‌ಚಂದ್ರರನ್ನು ಅನೀತಿಯುತ ಸಾಹಿತ್ಯವನ್ನು ಸೃಷ್ಟಿಸುವಂಥವರೆಂದು ಘೋಷಿಸಿಬಿಟ್ಟಿದ್ದರು. ಇಂಥ ವ್ಯಕ್ತಿಯನ್ನು ಪರಿಷತ್ತಿನ ಗೌರವಾರ್ಹ ಸದಸ್ಯರೆಂದು ಆರಿಸುವುದಾದರೂ ಹೇಗೆ ಎಂದು ಪ್ರಶ್ನಿಸುತ್ತಿದ್ದರು. ಆದರೆ, ತರುಣರು ಪ್ರತಿಯೊಂದು ಯುಗದಲ್ಲೂ ಕ್ರಾಂತಿ ಯನ್ನೆಸಗಿದ್ದಾರೆ. ಅಂದೂ ಅವರು ಕ್ರಾಂತಿಯನ್ನೆಸಗಿದರು. ಶರತ್‌ಚಂದ್ರರನ್ನು ಪರಿಷತ್ತಿನ ವಿಶಿಷ್ಟ ಗೌರವ-ಸದ್ಯಸ್ಯರೆಂದು ಆಯ್ಕೆ ಮಾಡಿಸಿಯೇ ಬಿಟ್ಟರು.

ಗೃಹಪ್ರವೇಶ ನಡೆದ ಎರಡು ದಿವಸಗಳ ತರುವಾಯ ಅವರ ಹುಟ್ಟು ಹಬ್ಬದ ದಿನ ಬಂತು. ಅಂದು ಗೌರೀನಾಥ ಮುಕರ್ಜಿಯವರ ಮನೆಯಲ್ಲಿ ವಿಶೇಷ ಸಮಾರಂಭವನ್ನು ಇಟ್ಟುಕೊಳ್ಳಲಾಗಿತ್ತು. ಅವರಿಗೆ ಸಂಭಾವನಾ ಗ್ರಂಥವೊಂದನ್ನು ಅರ್ಪಿಸಲಾಯಿತು. ಅಂದು ಸ್ವತಃ ಆಚಾರ್ಯ ಪ್ರಫುಲ್ಲ ಚಂದ್ರರಾಯ್ ಅವರೇ ಪ್ರಶಸ್ತಿ ವಾಚನ ಮಾಡಿದ್ದರು.

ಕಲ್ಕತ್ತೆಯಲ್ಲಿ ವಾಸ ಮಾಡತೊಡಗಿದ್ದರಿಂದ ಅವರಿಗೆ ಅನೇಕ ಸೌಕರ್ಯಗಳು ದೊರೆತಿದ್ದುವು. ಆದರೆ, ಅವು ಅವರನ್ನು ಬಂಧಿಸಿಡಲಾರದೆ ಹೋದುವೆಂದು ತೋರುತ್ತದೆ. ಬಹುಬೇಗ ಈ ನಾಗರಿಕ ಜೀವನವೂ ಅವರಿಗೆ ಬೇಸರವನ್ನುಂಟು ಮಾಡಿಬಿಟ್ಟಿತು. ಹೀಗಾಗಿ, ಅವಕಾಶ ಸಿಕ್ಕ ಕೂಡಲೇ ಅವರು ಹಳ್ಳಿಗೆ ಹೊರಟು ನಿಲ್ಲುತ್ತಿದ್ದರು. ಆ ಮನೆ ಅವರನ್ನು ಕರೆಯುತ್ತಲೇ ಇರುತ್ತಿತ್ತೇನೋ ಎಂದೆನಿಸುತ್ತಿತ್ತು. ಅವರ ಏಕಾಂತಪ್ರಿಯತೆ ಹಾಗೂ ತಮ್ಮನ್ನು ತಾವೇ ಮರೆತುಬಿಡುವಂಥ ಅವರ ಪ್ರವೃತ್ತಿ ಅವರನ್ನು ಇಲ್ಲಿಂದ ಹೊರದೂಡುತ್ತಿರುತ್ತದೇನೋ ಎಂದು ತೋರುತ್ತಿತ್ತು. ಬಾರೀಂದ್ರ ಕುಮಾರ ಘೋಷ್ ಅವರಿಗೆ ಬರೆದ ಒಂದು ಪತ್ರದಿಂದ ಅವರ ಈ

ಮನಃಸ್ಥಿತಿ ಸ್ಪಷ್ಟವಾಗುತ್ತದೆ: "ಹಳ್ಳಿಯ ಮನೆಯನ್ನು ಬಿಟ್ಟು ನಾನು ಎಂದಾದರೂ ಪಟ್ಟಣದಲ್ಲಿಯೇ ನೆಲೆಸುತ್ತೇನೆಂಬುದು - ನಿಮ್ಮಮದುವೆಯಂತೆಯೇ ಆಗಿಬಿಡುತ್ತದೆ. ನನ್ನನ್ನು ಎಷ್ಟೇ ಒತ್ತಾಯಿಸಿದರೂ, ನಾನು ಬಡಪೆಟ್ಟಿಗೆ ಅದಕ್ಕೆ ಒಪ್ಪುವುದಿಲ್ಲ (ಬಾರೀಂದ್ರಕುಮಾರರು ತಮ್ಮ ಐವತ್ತಮೂರನೆಯ ವರ್ಷದಲ್ಲಿ ಹಲವು ಮಕ್ಕಳ ತಾಯಿಯಾಗಿದ್ದ ವಿಧವೆಯನ್ನು ಮದುವೆಯಾಗಿದ್ದರು. ಶರತ್‌ಚಂದ್ರರ ಇಂಗಿತ ಇರುವುದು ಇದರತ್ತಲೇ) ಇಲ್ಲಿ ದಿನವೂ ಗಡ್ಡ ಬೋಳಿಸಬೇಕಾಗುತ್ತದೆ. ಇದೆಂಥ ದೊಡ್ಡ ಹಿಂಸೆಯ ಕೆಲಸ! ಇದನ್ನು ನಾನು ಯೋಚಿಸಲೂ ಸಾಧ್ಯವಿಲ್ಲ.

"ತುಂಬ ದಿನಗಳಿಂದ ನಿಮ್ಮ ಭೇಟಿಯೇ ಆಗಿಲ್ಲ. ಎಂದಾದರೂ ಒಂದು ದಿನ ಮಧ್ಯಾಹ್ನ ಬಂದು ಬಿಡಿ. ಆಗ ಗುಂಪು ಸ್ವಲ್ಪ ಕಡಿಮೆಯಾಗಿರುತ್ತದೆ. ಇನ್ನೂ ನಾಲ್ಕೈದು ದಿವಸ ಇಲ್ಲಿಯೇ ಇರುತ್ತೇನೆ. ಆ ಬಳಿಕ ಇಲ್ಲಿಂದ ಓಡಿ ಹೋಗಿ ಬಿಡುತ್ತೇನೆ. ಬಹಳ ದಿವಸಗಳ ವರೆಗೆ ಮತ್ತೆ ಈ ಕಡೆ ತಲೆ ಹಾಕುವುದಿಲ್ಲ."[1]

ಅವರ ಬಾಳಿನ ಕೊನೆಯ ಮೂರು-ಮೂರೂವರೆ ವರ್ಷಗಳ ಅವಧಿ ಕಲ್ಕತ್ತೆ ಮತ್ತು ಸಾಮತಾಬೇಡಗಳ ನಡುವೆ ಓಡಾಡುವುದರಲ್ಲಿಯೇ ಕಳೆದುಹೋಯಿತು.

ಪ್ರತಿವರ್ಷವೂ ಅವರ ಹುಟ್ಟುಹಬ್ಬವನ್ನು ಆಚರಿಸಲಾಗುತ್ತಿತ್ತು. ಆದರೆ, ಈ ವರ್ಷ ಅದರ ಮಹತ್ವ ಮತ್ತಷ್ಟು ಹೆಚ್ಚಿತ್ತು. ಅವರಿಗೆ ಅರುವತ್ತು ವರ್ಷ ತುಂಬಲಿತ್ತು. ಆದ್ದರಿಂದ ಸ್ವತಃ ರವೀಂದ್ರರೇ ಈ ವಿಷಯದಲ್ಲಿ ಆಸಕ್ತಿಯನ್ನು ತೋರಿದ್ದರು. ಅವರು ಶರತ್‌ಚಂದ್ರರಿಗೆ ಹೀಗೆಂದು ಬರೆದಿದ್ದರು[2]: "ಮುಂದಿನ ಭಾನುವಾರ ನಿಮಗೆ ಷಷ್ಟಿಪೂರ್ತಿಯಾಗಲಿರುವ ಸಂದರ್ಭದಲ್ಲಿ ನಿಮ್ಮನ್ನು ಅಭಿನಂದಿಸಬೇಕೆಂದು ತೀರ್ಮಾನಿಸಲಾಗಿದೆ. ಅಂದು ಭಾವನೀಪುರದ ಆಶುತೋಷ್ ಕಾಲೇಜಿನ ಸಭಾಂಗಣದಲ್ಲಿ ಒಂದು ಗೀತನೃತ್ಯವನ್ನು ಅಭಿನಯಿಸಬೇಕೆಂದು ವ್ಯವಸ್ಥೆ ಮಾಡಲಾಗಿದೆ. ಅಲ್ಲಿಯೇ ನಿಮ್ಮನ್ನು ಸನ್ಮಾನಿಸಲಾಗುತ್ತದೆ. ಬೇರೆಲ್ಲಿಯೂ, ಹಿಂದೆಂದೂ ಹೀಗೆ ಮಾಡುವುದು ಸಾಧ್ಯವಾಗಿರಲಿಲ್ಲ.

"ನಾನು ನಾಳೆ ಗುರುವಾರ ಮಧ್ಯಾಹ್ನದ ಬಳಿಕ ಕಲ್ಕತ್ತೆಗೆ ಬರಲಿದ್ದೇನೆ. ಆಗ ನಿಮ್ಮ ಒಪ್ಪಿಗೆ ದೊರೆತರೆ, ಈ ವಿಚಾರವನ್ನು ಇತ್ಯರ್ಥ ಮಾಡಿಬಿಡಬಹುದು."

ಅವರಿಗೆ ಷಷ್ಟಿಪೂರ್ತಿಯಾದಾಗ, 'ರವಿವಾಸರ'ದ ವಿಶೇಷ ಸಮಾರಂಭ ದಮ್ ದಮ್ ವಿಭಾಗದ ಗೌರೀಪುರದಲ್ಲಿ ಸುಶೀಲ ಮುಖೋಪಾಧ್ಯಾಯ ಅವರ ತೋಟ 'ಅಲಕಾ'ದಲ್ಲಿ ನಡೆದಿತ್ತು.[3] ಅದರಲ್ಲಿ ಭಾಗವಹಿಸುವುದು ರವೀಂದ್ರರಿಗೆ ಸಾಧ್ಯವಾಗಿರಲಿಲ್ಲ. ಆದ್ದರಿಂದಲೇ, ಅವರು ಈ ಇನ್ನೊಂದು ವಿಶೇಷ ಸಮಾರಂಭವನ್ನು ವ್ಯವಸ್ಥೆಗೊಳಿಸುವ ಸೂಚನೆಯನ್ನು ಮುಂದಿರಿಸಿದ್ದರು. ಅವರ ಹುಟ್ಟುಹಬ್ಬ ನಡೆದ ಎರಡು ವಾರಗಳ ಬಳಿಕ, 'ರವಿವಾಸರ'ದ ಆಶ್ರಯದಲ್ಲಿ ಬೇಲಿಯಾಘಾಟ್‌ನ 'ಪ್ರಫುಲ್ಲ ಕಾನನ'ದಲ್ಲಿ ನಡೆಯಿತು.[4] ಅಂದು ಒಂಬತ್ತು ಘಂಟೆಯ ಹೊತ್ತಿಗೇ ಸದಸ್ಯರು

---

1: 26 ಆಷಾಢ 1341 (13-7-1934)
2. ಅಕ್ಟೋಬರ್ 1, 1936.
3. ಸೆಪ್ಟೆಂಬರ್ 28, 1936.
4. ಅಕ್ಟೋಬರ್ 11, 1936.

ಬರತೊಡಗಿದ್ದರು. ರವೀಂದ್ರರು ಉಪಾಹಾರವನ್ನು ಮುಗಿಸಿಕೊಂಡು ಹತ್ತೂವರೆಯ ಹೊತ್ತಿಗೆ ಅಲ್ಲಿಗೆ ಬಂದರು. ಜಲಧರ ಸೇನ್ ಅವರು ಅವರನ್ನು ಸ್ವಾಗತಿಸಿದರು. ಸಾಹಿತ್ಯಲೋಕದ ಸೂರ್ಯ ಮತ್ತು ಚಂದ್ರರಾಗಿದ್ದ ರವೀಂದ್ರರು ಮತ್ತು ಶರತ್‌ಚಂದ್ರರು ಜೊತೆಜೊತೆಯಾಗಿ ಕುಳಿತುಕೊಂಡರು. ಆ ಆನಂದೋಲ್ಲಾಸಗಳ ನಡುವೆ ರವೀಂದ್ರರು ತಮ್ಮ ಆಶೀರ್ವಚನವನ್ನು ಓದಿದರು:

"ಕಲ್ಯಾಣಯೋಷು ಶರತ್‌ಚಂದ್ರ: ಬಾಳಿನ ನಿರ್ದಿಷ್ಟಪಥದಲ್ಲಿ ನೀವು ಬಹುಶಃ ಮೂರನೇ ಎರಡರಷ್ಟು ಉತ್ತೀರ್ಣರಾಗಿದ್ದೀರಿ. ಇದನ್ನು ಗಮನಿಸಿ, ನಿಮ್ಮನ್ನು ಅಭಿನಂದಿಸುವುದಕ್ಕಾಗಿ ನಿಮ್ಮ ಗೆಳೆಯರು ಈ ಅಭಿನಂದನ ಸಮಾರಂಭವನ್ನು ಏರ್ಪಡಿಸಿದ್ದಾರೆ.

"ವಯಸ್ಸು ಹೆಚ್ಚುತ್ತ ಹೋಗುತ್ತದೆ; ಆಯುಸ್ಸು ಕ್ಷೀಣಿಸುತ್ತ ಹೋಗುತ್ತದೆ. ಆ ಕಾರಣಕ್ಕಾಗಿ ಆನಂದೋತ್ಸವವನ್ನು ಆಚರಿಸುವ ಅಗತ್ಯವಿಲ್ಲ. ಆದರೆ, ಬಾಳಿನ ಪರಿಣತಿಯೊಂದಿಗೆ ಜೊತೆ ಜೊತೆಯಾಗಿ ಬಾಳಿನ ಕೊಡುಗೆಯ ಪರಿಮಾಣ ಕ್ಷಯಿಸದೆ ಇರುವುದನ್ನು ನಿಮ್ಮಲ್ಲಿ ಕಂಡಿರುವುದರಿಂದ, ನಾನು ಆನಂದ ಪಡುತ್ತಿದ್ದೇನೆ. ನಿಮ್ಮ ಸಾಹಿತ್ಯ ರಸ-ಸೂತ್ರದ ಆಹ್ವಾನ ಇಂದೂ ಉನ್ಮುಕ್ತವಾಗಿಯೇ ಇದೆ. ನಿಮ್ಮ ಪರಿವೇಷಣ ಪಾತ್ರ[1] ಅಕೃಪಣ ಔದಾರ್ಯದಿಂದ ಕೂಡಿದೆ. ಆದ್ದರಿಂದ, ಜಯಧ್ವನಿಯನ್ನು ಮೊಳಗಿಸುತ್ತ ನಿಮ್ಮ ದೇಶ ಬಾಂಧವರು ನಿಮ್ಮ ಮನೆಯ ಬಾಗಿಲಿಗೆ ಬಂದಿದ್ದಾರೆ.

"ಇಂದು ಶರತ್‌ಚಂದ್ರರ ಅಭಿನಂದನೆಗೆ ಇರುವ ಮೌಲ್ಯ ಇದು: ನಾಡಿನ ಜನರು ಇಂದು ಅವರ ಕೊಡುಗೆಯ ಮನೋಹರ ಸೌಂದರ್ಯವನ್ನು ಮಾತ್ರವೇ ಅನುಭವಿಸುತ್ತಿಲ್ಲ; ಅದು ಅಕ್ಷಯವಾಗಿದೆ ಎಂದೂ ಅವರಿಗೆ ಅನ್ನಿಸುತ್ತಿದೆ. ಯಾವ ಕೃತಿಯಲ್ಲಿ ಸತ್ವ ಇರುತ್ತದೆಯೋ, ವಿರೋಧವಿದ್ದರೂ ಅದರ ಯಶಸ್ಸಿನ ಮೌಲ್ಯ ಅದರ ವಾಸ್ತವಿಕ ಮೌಲ್ಯವನ್ನು ಹೆಚ್ಚಿಸುತ್ತದೆ. ಈ ವಿರೋಧವನ್ನು ವ್ಯಕ್ತಪಡಿಸುವವರು ಇನ್ನೊಂದು ರೀತಿಯ ಭಕ್ತರು. ರಾಮನ ಭಯಂಕರ ಭಕ್ತನಾದ ರಾವಣನಂತೆ ಇರುತ್ತಾರೆ ಇವರು.

"ಖಗೋಳ ವಿಜ್ಞಾನಿ ಅಸೀಮ ಆಕಾಶದಲ್ಲಿ ಮುಳುಗಿ ನಾನಾ ರಶ್ಮಿ ಸಮೂಹಗಳಿಂದ ನಿರ್ಮಿತವಾಗಿರುವ ನಾನಾ ಜಗತ್ತುಗಳನ್ನು ಆವಿಷ್ಕರಿಸುತ್ತಾನೆ. ಇವು ಅನೇಕ ಕಕ್ಷೆಗಳ ಮಾರ್ಗವಾಗಿ ತೀವ್ರವೇಗದಿಂದ ಅವತರಿಸುತ್ತಿರುತ್ತವೆ. ಶರತ್‌ಚಂದ್ರರ ದೃಷ್ಟಿ ಬಂಗಾಳಿ ಹೃದಯದ ರಹಸ್ಯದಲ್ಲಿ ಮುಳುಗಿ ಹೋಗಿದೆ. ಸುಖದಲ್ಲಿ, ದುಃಖದಲ್ಲಿ, ಮಿಲನದಲ್ಲಿ. ವಿರಹದಲ್ಲಿ ಬಂಗಾಳಿಗಳು ತಮ್ಮನ್ನು ತಾವೇ ಪ್ರತ್ಯಕ್ಷವಾಗಿ ಕಂಡುಕೊಳ್ಳುವಂತೆ ಇವುಗಳಲ್ಲೆಲ್ಲ ಮೈದಳೆದಿರುವ ಅಪೂರ್ವ ವೈಶಿಷ್ಟ್ಯವನ್ನು ಅವರು ಪರಿಚಯಿಸಿಕೊಟ್ಟಿದ್ದಾರೆ. ....ಇತರ ಲೇಖಕರು ಅನೇಕರು ಪ್ರಶಂಸೆಯನ್ನು ಗಳಿಸಿದ್ದಾರೆ; ಆದರೆ, ಜನಸಾಮಾನ್ಯರ ಹೃದಯದ ಆತಿಥ್ಯವನ್ನು ಅವರಂತೆ ಪಡೆದವರು ಇನ್ನೊಬ್ಬರಿಲ್ಲ. ಇದು ವಿಚಿತ್ರ ಸಂಗತಿಯೇನೂ ಅಲ್ಲ; ಇದೇ

1. ಬಡಿಸುವ ಪಾತ್ರೆ.

ಪ್ರೀತಿ. ಅನಾಯಾಸವಾಗಿ ಅವರು ಗಳಿಸಿರುವ ಈ ಅದ್ಭುತ ಯಶಸ್ಸು ನಾನೂ ಅವರ ವಿಷಯದಲ್ಲಿ ಹೊಟ್ಟೆಕಿಚ್ಚು ಪಡುವಂತೆ ಮಾಡಿದೆ.

"ನಿಮ್ಮನ್ನು ಸಂಪೂರ್ಣವಾಗಿ ಬೆಳಕಿಗೆ ತಂದವನು ನಾನು ಎಂದು ಹೇಳಿಕೊಳ್ಳಬಹುದಾಗಿದ್ದರೆ, ಇಂದು ಶರತ್‌ಚಂದ್ರರ ಅಭಿನಂದನ ಸಮಾರಂಭದಲ್ಲಿ ನಾನು ವಿಶೇಷ ಅಭಿಮಾನಪಟ್ಟುಕೊಳ್ಳಬಹುದಾಗಿತ್ತು. ಆದರೆ, ಅವರು ಯಾರದೇ ಹಸ್ತಾಕ್ಷರವನ್ನೊಳಗೊಂಡ ಅಥವಾ ಯಾರೇ ಬರೆದುಕೊಟ್ಟ ಪರಿಚಯ ಪತ್ರಕ್ಕಾಗಿ ಬಾಯಿಬಿಟ್ಟುಕೊಂಡು ಕುಳಿತಿರಲಿಲ್ಲ. ಇಂದು ಅವರ ಅಭಿನಂದನೆ ನಮ್ಮ ನಾಡಿನ ಮನೆಮನೆಗಳಲ್ಲೂ ಮಾರ್ಮೊಳಗುತ್ತಿದೆ.... ಅವರು ಬಂಗಾಳೀ ವೇದನೆಯ ಕೇಂದ್ರದಲ್ಲಿ ತಮ್ಮ ವಾಣಿಯಿಂದ ಸ್ಪಂದನೆಯನ್ನು ಮೂಡಿಸಿದ್ದಾರೆ. ಸಾಹಿತ್ಯದಲ್ಲಿ ಉಪದೇಶಕನಿಗಿಂತಲೂ ಸೃಷ್ಟಾರನ ಸ್ಥಾನ ತುಂಬ ಹಿರಿದಾಗಿರುತ್ತದೆ. ಚಿಂತನಶಕ್ತಿಯ ವಿತರ್ಕವಲ್ಲ, ಕಲ್ಪನಾಶಕ್ತಿಯ ಪೂರ್ಣದೃಷ್ಟಿ ಮಾತ್ರವೇ ಸಾಹಿತ್ಯದಲ್ಲಿ ಶಾಶ್ವತ ಗೌರವದ ಸ್ಥಾನದಲ್ಲಿ ನೆಲೆಗೊಳ್ಳುತ್ತದೆ. ಕವಿಯ ಆಸನದಲ್ಲಿ ಕುಳಿತಿರುವ ನಾನು ವಿಶೇಷವಾಗಿ ಆ ಸೃಷ್ಟಾರರಾಗಿರುವ ಶರತ್‌ಚಂದ್ರರಿಗೆ ಮಾಲಾರ್ಪಣೆ ಮಾಡುತ್ತೇನೆ. ಅವರು ಶತಾಯುವಾಗಿ ಬಂಗಾಳಿ ಸಾಹಿತ್ಯವನ್ನು ಸಮೃದ್ಧಗೊಳಿಸಲಿ! ತಮ್ಮ ಓದುಗರಿಗೆ ಮನುಷ್ಯನನ್ನು ನಿಜವಾದ ರೂಪದಲ್ಲಿ ಕಾಣುವಂಥ ಶಿಕ್ಷಣವನ್ನು ಕೊಡಲಿ. ಮನುಷ್ಯನನ್ನು ಆತನ ಗುಣ-ದೋಷಗಳೊಂದಿಗೆ, ಒಳಿತು-ಕೆಡಕು ಗಳೊಂದಿಗೆ ಚಿತ್ರಿಸಲಿ. ಚಮತ್ಕಾರ ರೂಪದ, ಉಪದೇಶ ಸ್ವರೂಪದ ಯಾವುದೋ ದೃಷ್ಟಾಂತವನ್ನಲ್ಲ, ತಮ್ಮ ಸ್ವಚ್ಛ ಪ್ರಾಂಜಲ ಭಾಷೆಯಲ್ಲಿ ಮಾನವನ ಚಿರಂತನ ಅಭಿಜ್ಞತೆಯನ್ನು ಪ್ರಕಟಗೊಳಿಸಲಿ......"

ಈ ಬರೆದ ಭಾಷಣದ ಬಳಿಕ ಮಾಡಿದ ಆಶುಭಾಷಣದಲ್ಲಿ ಅವರು ಮತ್ತೆ ಹೀಗೆಂದರು: "ನನ್ನ ಬಾಲ್ಯದಲ್ಲಿ ಬಂಕಿಮಚಂದ್ರರ ಅಭ್ಯುದಯದಲ್ಲಿ ಬಂಗಾಳಿ ಸಾಹಿತ್ಯದಲ್ಲಿ ಒಂದು ಹೊಸಭಾವನೆ ಉಕ್ಕಿ ಹರಿದುದನ್ನು ಕಂಡಿದ್ದೆ. ಭಗೀರಥನಂತೆ ಬಂಕಿಮಚಂದ್ರರು ಹೊತ್ತು ತಂದ ಹೊಸ ಸಾಹಿತ್ಯ ಬಂಗಾಳದ ಶ್ರೀಸಾಮಾನ್ಯನ ಅಂತರ್ಯವನ್ನು ಮುಟ್ಟಿತು. ಅವರು ಗೌರವಪೂರ್ವಕವಾಗಿ ಅವರನ್ನು ತಮ್ಮವ ರೆಂದು ಸ್ವೀಕರಿಸಿದರು. ಅಂದಿನ ತರುಣರ ಮತ್ತು ಯುವಕರ ಮೇಲೆ ಮಾತ್ರವಲ್ಲದೆ ಅಡುಗೆಯ ಮನೆಯ ಅಂಗನೆಯರ ಮೇಲೂ ಬಂಕಿಮ ಸಾಹಿತ್ಯದ ಹೊಸಗಾಳಿ ಬೀಸಿತು. ನಿಂದನೆ ಮತ್ತು ಪ್ರತಿಭಟನೆಯ ವಿಷಯದಲ್ಲಿ ವಿರೋಧಿಗಳು ಯಾವುದೇ ಕೊರೆಯನ್ನೂ ಉಳಿಸಲಿಲ್ಲ; ಏಕೆಂದರೆ, ಬಂಕಿಮ ಸಾಹಿತ್ಯ ಅದೆಲ್ಲವನ್ನೂ ನುಂಗಿ, ನೀರುಕುಡಿದು ತನ್ನನ್ನು ನೆಲೆಗೊಳಿಸಿಕೊಂಡಿತು..... ನನ್ನ ವೃದ್ಧಾಪ್ಯದಲ್ಲಿ ಶರತ್‌ಚಂದ್ರರ ಅಭ್ಯುದಯದಲ್ಲಿ ನಾನು ಮತ್ತೆ ಅದೇ ಪ್ರಕ್ರಿಯೆಯನ್ನು ಕಂಡೆ. ಕಥಾ-ಸಾಹಿತ್ಯಕ್ಕೆ ಸಂಬಂಧಿಸಿದಂತೆ ಶರತ್‌ಚಂದ್ರರು ಬಂಗಾಳಿ ಸಾಹಿತ್ಯಕ್ಕೆ ಹೊತ್ತು ತಂದಂಥ ವಸ್ತು ಬಂಗಾಳದ ಜನಸಾಮಾನ್ಯರ ಅಂತರ್ಯವನ್ನು ತಟ್ಟಿತು. ಅವರ ನಿಗೂಢತಮ ವೇದನೆಯ ತಲದ ಮೇಲೆಯೇ ಅದು ಆಘಾತವನ್ನೆಸಗಿತು. ಆದ್ದರಿಂದಲೇ ಬಂಗಾಳದ ಎಲ್ಲ ಜನರೂ ಶರತ್‌ಚಂದ್ರರ ಸಾಹಿತ್ಯವನ್ನು ತಮ್ಮದೆಂದು ಅಂಗೀಕರಿಸಿದರು. ಶರತ್‌ಚಂದ್ರರು ತಮ್ಮ ಪ್ರತಿಭೆಯ ಬಲದ ಮೇಲೆಯೇ ಬಂಗಾಳದ

ಹೃದಯವನ್ನು ಗೆದ್ದುಕೊಂಡಿದ್ದಾರೆ. ಯಾವುದೇ ಪ್ರಮಾಣಪತ್ರವನ್ನು ಕೊಂಡೊಯ್ಯು ಬೇಕಾದ ಅಗತ್ಯ ಅವರಿಗೆ ಉಂಟಾಗಲಿಲ್ಲ."

ರವೀಂದ್ರರ ಈ ಆಶೀರ್ವಚನದಿಂದ ಅಂದು ಶರತ್‌ಚಂದ್ರರು ತುಂಬ ಸಂತುಷ್ಟರಾಗಿದ್ದರು. ಕವಿವರ್ಯರು ಅಕೃಪಣ ಭಾಷೆಯಲ್ಲಿ ತೆರೆದ ಹೃದಯದಿಂದ ಶುಭಾಶಯಗಳನ್ನು ಸಲ್ಲಿಸಿದರೆಂದು ಅವರೇ ಒಪ್ಪಿಕೊಂಡರು. ಈಗ ಅವರ ಮನಸ್ಸಿನಲ್ಲಿ ಯಾವುದೇ ಬಗೆಯ ಕ್ಷೋಭೆಯೂ ಉಳಿದಿರಲಿಲ್ಲ. ಇದಕ್ಕಿಂತಲೂ ಹೆಚ್ಚಿನ ಪ್ರಶಂಸೆ ಅವರಿಗೇನು ಸಿಕ್ಕಬಹುದಾಗಿತ್ತು ಅಥವಾ ಕವಿವರ್ಯರು ಇದಕ್ಕಿಂತಲೂ ಸುಂದರವಾದ ಶಬ್ದಗಳನ್ನು ಬೇರೆಲ್ಲಿಂದ ತರಬಹುದಾಗಿತ್ತು?

ಈ ಸಮಾರಂಭ ನಡೆಯುವುದಕ್ಕೆ ಮೂರು ತಿಂಗಳ ಹಿಂದೆ[1] ರವೀಂದ್ರರು 'ರವಿ-ವಾಸರ'ದ ಆಶ್ರಯದಲ್ಲಿ ನಡೆದ ಇನ್ನೊಂದು ಸಭೆಗೆ ಬಂದಿದ್ದರು. ಈ ಸಭೆ ಶರತ್‌ಚಂದ್ರರ ಕಲ್ಕತ್ತಾದ ಮನೆಯಲ್ಲಿ ನಡೆದದ್ದು, ಶರತ್‌ಚಂದ್ರರ ದೃಷ್ಟಿಯಿಂದ ಮಹತ್ವದ ಸಂಗತಿಯಾಗಿತ್ತು. ಕವಿವರ್ಯರನ್ನು ಕರೆತರಲು ತಮ್ಮ ಸಹೋದರಿಯ ಮಗಳು ಹಾಗೂ ಕವಿ ಗಿರಿಜಾಕುಮಾರ್ ಅವರೊಂದಿಗೆ ಸ್ವತಃ ಶರತ್‌ಚಂದ್ರರೇ ಹೋಗಿದ್ದರು. ರವೀಂದ್ರರ ಒತ್ತಾಯದ ಮೇರೆಗೆ, ಅವರ ಆಗಮನದ ಸುದ್ದಿಗೆ ಮೊದಲೇ ಪ್ರಚಾರವನ್ನು ಕೊಟ್ಟಿರಲಿಲ್ಲ. ಅವರು ಆಗಮಿಸಿದುದನ್ನು ಕಂಡಾಗ ಸದಸ್ಯರ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲ. ಅನೇಕ ಪರಿಚಿತ ವ್ಯಕ್ತಿಗಳನ್ನು ಮತ್ತು ತರುಣಸಾಹಿತಿಗಳನ್ನು ಒಂದೇ ಎಡೆಯಲ್ಲಿ ಕಂಡು ಸ್ವತಃ ಕವಿವರ್ಯರಿಗೂ ತುಂಬ ಸಂತೋಷವಾಯಿತು. ತಮ್ಮ ಸುದೀರ್ಘ ಭಾಷಣದಲ್ಲಿ ಅವರು ತಮ್ಮ ಹಾಗೂ ತಮ್ಮ ಸಾಹಿತ್ಯದ ರಚನಾ ಪ್ರಕ್ರಿಯೆಯನ್ನು ವಿಶ್ಲೇಷಿಸಿದರು. 'ಬಲಾಕಾ' ಸಂಗ್ರಹದ 'ಛವಿ' ಕವಿತೆಯನ್ನು - "ತೂಮಿ ಕಿ ಕೇವಲಿ ಛವಿ ಶುಧು ಪಟೇ ಲಿಖಾ" ಎಂದು ಆರಂಭವಾಗುವ ಕವಿತೆಯನ್ನು-ಓದಿದರು.

ಅವರು 'ರವಿವಾಸರ'ದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಲೂ ಒಪ್ಪಿಗೆ ನೀಡಿದರು.

ಹೃದಯಸ್ಪರ್ಶಿಯಾಗಿದ್ದಂಥ ಮಾತುಗಳ ಮೂಲಕ ಮತ್ತೊಮ್ಮೆ ಶರತ್‌ಚಂದ್ರರು ಕವಿವರ್ಯರ ವಿಷಯದಲ್ಲಿ ತಮ್ಮ ಶ್ರದ್ಧೆ-ಗೌರವಗಳನ್ನು ವ್ಯಕ್ತಪಡಿಸಿದರು. ಅಂದು ರಾತ್ರಿ ತುಂಬ ಹೊತ್ತಿನ ವರೆಗೆ ಆ ಸಭೆ ಮುಂದುವರಿಯಿತು. ಆದರೆ, ರವೀಂದ್ರರು ಹೊರಟು ಹೋದರು. ಈ ದಿನಗಳಲ್ಲಿ ಪರಸ್ಪರ ಸಿಟ್ಟು-ಸೆಡವು-ಅಹಂಭಾವಗಳೇನೂ ಇರಲಿಲ್ಲ. ಇಬ್ಬರೂ ಪರಸ್ಪರ ತುಂಬ ಹತ್ತಿರಕ್ಕೆ ಬಂದಿದ್ದರು.

ಮಾರನೆಯ ವರ್ಷ ಅವರ ಅರುವತ್ತೆರಡನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ನಡೆದಷ್ಟು ಸಮಾರಂಭಗಳು ಹಿಂದೆಂದೂ ನಡೆದಿರಲಿಲ್ಲ; ಅಷ್ಟೊಂದು ಎಡೆಗಳಲ್ಲಿಯೂ ನಡೆದಿರಲಿಲ್ಲ. ಇತ್ತ ಕೆಲವು ವರ್ಷಗಳಿಂದ ಕಲ್ಕತ್ತಾದ ಆಕಾಶವಾಣಿ ಕೇಂದ್ರದಿಂದ 'ಶರತ್-ಶರ್ವರೀ' ಎಂಬ ಕಾರ್ಯಕ್ರಮ ನಡೆದುಕೊಂಡು ಬರುತ್ತಿತ್ತು. ಈ ವರ್ಷ ಈ ಏರ್ಪಾಟಿಗೆ ಅಸಾಮಾನ್ಯ ಯಶಸ್ಸು ದೊರೆಯಿತು.[2] ಈ

1. ಜುಲೈ 19, 1936.

2. ಸೆಪ್ಟೆಂಬರ್ 17, 1937 ಶುಕ್ರವಾರದಂದು ಸಂಜೆ ('ಬೇತಾರ್ ಜಗತ್' 1-10-1937). ಈ ಆಕಾಶವಾಣಿಯ ವರದಿಯನ್ನು ಆಸಮಂಜಸ ಮುಖೋಪಾಧ್ಯಾಯರು ಉದ್ಧರಿಸಿದ್ದಾರೆ.

ಅಧಿವೇಶನದಲ್ಲಿ ಅವರ ಅನೇಕ ಪ್ರಶಂಸಕರು ಹಾಗೂ ಇಷ್ಟಮಿತ್ರರು ಹಾಜರಿದ್ದರು: ನಾಟೌರಿನ ಮಹಾರಾಜರು, ಕಾಸಿಮ್ ಬಾಜಾರಿನ ಮಹಾರಾಜರು, ರಾಯ್ ಬಹಾದುರ್ ಜಲಧರ್‌ಸೇನ್ ಅವರು, ರಾಯ್ ಬಹಾದುರ್ ಎನ್.ಕೆ.ಸೇನ್, ಕಾಳಿದಾಸ ರಾಯ್, ಗಿರಿಜಾ ಕುಮಾರ ಬಸು, ಕಾಜೀ ನಜರುಲ್ ಇಸ್ಲಾಮ್, ವಸಂತಕುಮಾರ ಚಟ್ಟೋಪಾಧ್ಯಾಯ, ನರೇಂದ್ರ ದೇವ, ಮುಕುಂದ-ಚಂದ್ರದೇವ, ಹೇಮೇಂದ್ರ ಕುಮಾರ್ ರಾಯ್, ಅವಿನಾಶಚಂದ್ರ ಘೋಷಾಲ್ ಮತ್ತು ಅಸಮಂಜಸ ಮುಖೋಪಾಧ್ಯಾಯ ಮೊದಲಾದವರೆಲ್ಲ ಅಂದು ಅಲ್ಲಿಗೆ ಬಂದಿದ್ದರು. ಶರತ್‌ಚಂದ್ರರ 'ಸತೀ' ಎಂಬ ಕಥೆಯ ನಾಟ್ಯ ರೂಪಾಂತರವನ್ನೂ ಈ ಅವಧಿಯಲ್ಲಿ ಯಶಸ್ವಿಯಾಗಿ ಪ್ರಯೋಗಿಸಲಾಗಿತ್ತು.

ಸಭೆಯಲ್ಲಿ ಹಾಜರಿದ್ದವರೆಲ್ಲರೂ ಮನಃಪೂರ್ವಕವಾಗಿ ಅವರು ದೀರ್ಘಾಯು ವಾಗಲೆಂದು ಹಾರೈಸಿದರು. ಆದರೆ, ಹೇಮೇಂದ್ರ ಕುಮಾರ್ ರಾಯ್ ಅವರು ಭವಿಷ್ಯವನ್ನು ಕಂಡುಕೊಂಡು ಬಿಟ್ಟಿದ್ದಂತೆ ಕಾಣುತ್ತದೆ: "ನಾನು ವ್ಯಕ್ತಿಯಾಗಿ ಶರತ್‌ಚಂದ್ರರಿಗೆ ದೀರ್ಘಾಯುಸ್ಸನ್ನೇನೂ ಕೋರುವುದಿಲ್ಲ; ಸಾಹಿತಿ ಶರತ್‌ಚಂದ್ರರು ದೀರ್ಘಾಯುವಾಗಲೆಂದು ಹಾರೈಸುತ್ತೇನೆ" ಎಂದು ಅವರು ಹೇಳಿಬಿಟ್ಟಿದ್ದರು.

ಈ ಎಲ್ಲ ಶುಭಕಾಮನೆಗಳಿಗೆ ಹೃದಯಸ್ಪರ್ಶೀ ಭಾಷೆಯಲ್ಲಿ ಉತ್ತರ ಕೊಡುತ್ತ ಶರತ್‌ಚಂದ್ರರು ಹೀಗೆಂದರು: "ಅರುವತ್ತೆರಡನೆಯ ವರ್ಷದಲ್ಲಿ ಕಾಲಿರಿಸುತ್ತಿರುವ ಈ ನನ್ನ ಹುಟ್ಟು ಹಬ್ಬದ ಸಂದರ್ಭದಲ್ಲಿ ಎಲ್ಲರ ಆಶೀರ್ವಾದಗಳನ್ನು ಪಡೆದುಕೊಳ್ಳಬಯಸುವ ಮೊದಲು, ಈಗ ರೋಗಶಯ್ಯೆಯಲ್ಲಿರುವ ರವೀಂದ್ರ ನಾಥರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಈ ಲೋಕದಲ್ಲಿ ಸಾಹಿತ್ಯಸಾಧನೆಗೆ ಅವರ ಆಶೀರ್ವಾದ, ನನಗೆ ಮಾತ್ರವಲ್ಲ, ಪ್ರತಿಯೊಬ್ಬ ಸಾಹಿತಿಗೂ ಅಮೂಲ್ಯ ಆಸ್ತಿಯಾಗಿರುತ್ತದೆ. ನಾನು ಇಂದು ಆ ಆಶೀರ್ವಾದವನ್ನು ಅವರಿಂದ ಪಡೆದುಕೊಂಡಿದ್ದೇನೆ. ನನ್ನ ಸಾಹಿತ್ಯ ಸಾಧನೆಯ ಬಗ್ಗೆ ನನ್ನ ಬಾಯಿಂದಲೇ ಏನನ್ನಾದರೂ ಹೇಳುವುದು ಸರಿಯಲ್ಲ. ಆದರೂ, ಇಷ್ಟು ಮಾತ್ರ ಹೇಳ ಬಯಸುತ್ತೇನೆ: ಬಹಳ ಕಷ್ಟಸಂಕಟಗಳ ಮೂಲಕ ಹಾಯ್ದು ಈ ಸಾಧನೆ ನಿಧಾನವಾಗಿ ಮುನ್ನಡೆದಿದೆ. ನಾನು ಸಾಹಿತಿ ಎನ್ನಿಸಿಕೊಳ್ಳುತ್ತೇನೆ ಅಥವಾ ನನ್ನ ಪುಸ್ತಕವೂ ಅಚ್ಚಾಗುತ್ತದೆ ಎಂದು ನಾನು ಹಿಂದೆ ಯೋಚಿಸಿಯೂ ಇರಲಿಲ್ಲ. ಸಂಕೋಚದಿಂದ, ಇಬ್ಬಂದಿಯಿಂದ ಬರೆದದ್ದನ್ನೆಲ್ಲ ಬೇರೆಯವರ ಹೆಸರಿನಲ್ಲಿ ಬರೆದೆ. ಅದಕ್ಕೂ ತನ್ನದೇ ಆದ ಬೆಲೆ ಇರುತ್ತದೆಂದೂ ನಾನು ಯೋಚಿಸಿರಲಿಲ್ಲ. ಆ ಬಳಿಕ, ಬಹು ದಿನಗಳ ವರೆಗೆ - ಸುಮಾರು ಹದಿನೈದು ಹದಿನಾರು ವರ್ಷಗಳ ವರೆಗೆ ಎಂದು ಕಾಣುತ್ತದೆ - ಸಾಹಿತ್ಯ ಚರ್ಚೆಯ ಹತ್ತಿರವೂ ಸುಳಿದಿರಲಿಲ್ಲ. ಎಂದಾದರೂ ಒಂದು ದಿವಸ ಏನನ್ನಾದರೂ ಬರೆಯುತ್ತೇನೆಂಬ ಭಾವನೆ ಅಪ್ಪಿ-ತಪ್ಪಿಯೂ ಮನಸ್ಸಿಗೆ ಬಂದಿರಲಿಲ್ಲ. ಅದಾದ ಬಳಿಕ ನಾನಾಕಾರಣಗಳಿಂದಾಗಿ ಈ ಜೀವನ........ ಬಹುಶಃ ಇದೇ ನನ್ನ ನಿಜವಾದ ಜೀವನವೆಂದು ತೋರುತ್ತದೆ. ಭಗವಂತ ಕೊನೆಗೆ ನನಗೆ ಈ ಬಾಳನ್ನೇ ಗೊತ್ತುಪಡಿಸಿದ್ದನೆಂದು ತೋರುತ್ತದೆ. ಆದ್ದರಿಂದ, ಇಷ್ಟವಿಲ್ಲದಿದ್ದರೂ ಅಲೆದು-ಸುತ್ತಿ ಇದರ ನಡುವೆಯೇ ಅರುವತ್ತೊಂದು ವರ್ಷಗಳನ್ನು ಕಳೆಯಬೇಕಾಗಿ ಬಂತು.

ನಿಮ್ಮ ನಡುವೆ ತುಂಬ ದಿನಗಳ ವರೆಗೆ ನಾನು ಇರಲಿ, ಇಲ್ಲದಿರಲಿ, ಅನೇಕ ಕಷ್ಟ ಸಂಕಟಗಳ ಮೂಲಕ ಹಾಯ್ದು ಅಡೆತಡೆಗಳನ್ನು ತಳ್ಳಿಕೊಂಡು ಈ ಸಾಧನೆ ನಿಧಾನವಾಗಿ ಮುನ್ನಡೆದಿದೆ ಎಂದು ನಾನು ಹೇಳಿ ಹೋಗಿದ್ದೆನೆಂಬುದು ನಿಮಗೆ ನಡುನಡುವೆ ನೆನಪಾಗುತ್ತದೆ."

ಹೇಮೇಂದ್ರಕುಮಾರ್ ರಾಯ್ ಅವರ ಮಾತುಗಳನ್ನು ಸಮರ್ಥಿಸುತ್ತ, ದೀರ್ಘ ಜೀವನದ ಬಯಕೆ ಆರೋಗ್ಯ ಮತ್ತು ಕಾರ್ಯಶಕ್ತಿ ಚೆನ್ನಾಗಿದ್ದಾಗ ಮಾತ್ರವೇ ಅರ್ಥತ್ತಾಗಿರುತ್ತದೆಂದೂ ಅವರು ಹೇಳಿದ್ದರು. ಹಾಗಿಲ್ಲದಿದ್ದರೆ, ರೋಗಿಯಾಗಿ ಪಂಗುವಾಗಿ ಬದುಕಿರಬೇಕಾಗಿ ಬಂದರೆ, ಅಂಥ ಜೀವನ ಯಾರಿಗೂ - ಅದರಲ್ಲಿಯೂ ಸಾಹಿತಿಗೆ ಎಂದೆಂದೂ - ಕಾಮ್ಯವಾಗುವುದಿಲ್ಲ.

ಆ ಕಡೆಯಿಂದ ರಾಜದೂತನು ಕರೆಯೋಲೆಯೊಂದಿಗೆ ಆಗಮಿಸಲಿದ್ದಾನೆ ಎಂಬುದು ಅವರಿಗೆ ಅರಿವಾಗಿ ಬಿಟ್ಟಿದ್ದಂತೆ ತೋರುತ್ತದೆ. ಏಕೆಂದರೆ, ಸ್ಕಾಟಿಷ್ ಚರ್ಚ್ ಕಾಲೇಜಿನ ಬಾಂಗ್ಲಾ ಸಾಹಿತ್ಯ ಸಮಿತಿಯ ಅಭಿನಂದನೆಗೆ ಉತ್ತರವಾಗಿ ಅವರು ಹೀಗೆಂದಿದ್ದರು: "ಬಹುಶಃ 31 ಭಾದ್ರಪದ ಮತ್ತೆ ಬರಲಾರದು. ಆದ್ದರಿಂದಲೇ ಬರಬೇಕಾಗಿ ಬಂತು. ನಿಮ್ಮ ಕರೆಯನ್ನು ಉಪೇಕ್ಷಿಸಲು ಸಾಧ್ಯವಾಗಲಿಲ್ಲ. ಅರುವತ್ತೊಂದು ವರ್ಷಗಳು ಕಳೆದು ಹೋಗಿವೆ. ಏನೂ ಮಾಡಲು ಸಾಧ್ಯವಾಗಲಿಲ್ಲ. ಅರುವತ್ತೆರಡನೆಯ ವರ್ಷ ಹೇಗೆ ಕಳೆಯುತ್ತದೆಯೋ ಗೊತ್ತಿಲ್ಲ. 31 ಭಾದ್ರಪದ ಮತ್ತೆ ಬಂದರೆ, ಖಂಡಿತವಾಗಿಯೂ ನಿಮ್ಮ ಬಳಿಗೆ ಬರುತ್ತೇನೆ."

ಇನ್ನೊಂದು ಕಡೆಯೂ ಅವರು ಹೀಗೆಂದಿದ್ದರು: "31 ಭಾದ್ರಪದ ಮತ್ತೆ ಮತ್ತೆ ಪ್ರತಿ ವರ್ಷವೂ ಬರುತ್ತದೆ. ಆದರೆ, ಒಂದು ದಿನ ನಾನಿರುವುದಿಲ್ಲ. ಅಂದು ಈ ಕಥೆ ವ್ಯಥೆಯೊಂದಿಗೆ ಯಾರಿಗಾದರೂ ನೆನಪಾಗುತ್ತದೆ. ಯಾರಾದರೂ ಬೇರೆ ಕೆಲಸಗಳಲ್ಲಿ ಮಗ್ನರಾಗಿದ್ದರೆ ಮರೆತು ಬಿಡಬಹುದು. ಆದ್ದರಿಂದಲೇ, ಇಂದು ಎಲ್ಲರನ್ನೂ ಕೃತಜ್ಞ ಚಿತ್ತದಿಂದ ನೆನಪು ಮಾಡಿಕೊಳ್ಳುತ್ತೇನೆ. ಮತ್ತೆ 31 ಭಾದ್ರಪದ ಬಂದರೆ, ನಿಮ್ಮನ್ನು ಭೇಟಿಯಾಗುತ್ತೇನೆ. ಇಲ್ಲವಾದಲ್ಲಿ ಇದೇ ನನ್ನ ಬೀಳ್ಕೊಡುಗೆಯ ನಮಸ್ಕಾರ."

ಇದು ನಿಜವಾಗಿಯೂ ಬೀಳ್ಕೊಡುಗೆಯ ನಮಸ್ಕಾರವೇ ಆಗಿತ್ತು. ಏಕೆಂದರೆ, 31 ಭಾದ್ರಪದವೇನೋ ಬಂತು; ಆದರೆ ಅವರು ಈ ಲೋಕದಲ್ಲಿರಲಿಲ್ಲ.

ಇದಕ್ಕೆ ಸುಮಾರು ಒಂದು ವರ್ಷ ಮುಂಚೆ[1] ಢಾಕಾ ವಿಶ್ವವಿದ್ಯಾನಿಲಯ ಅವರಿಗೆ ಡಿ.ಲಿಟ್. ಗೌರವ ಪದವಿಯನ್ನು ನೀಡಿ ಗೌರವಿಸಿತು. ಅವರ ಜೊತೆಯಲ್ಲಿಯೇ ಆಚಾರ್ಯ ಪ್ರಫುಲ್ಲ ಚಂದ್ರರಾಯ್ ಮತ್ತು ಯದುನಾಥ ಸರ್ಕಾರ್ ಅವರನ್ನೂ ಗೌರವಿಸಲಾಗಿತ್ತು. ಎಂದಿನಂತೆ ಈ ಸಲವೂ ಒಂದು ಪಕ್ಷ ಮುಕ್ತ ಕಂಠದಿಂದ ಅವರನ್ನು ಬೆಂಬಲಿಸಿದರೆ, ಇನ್ನೊಂದು ಪಕ್ಷ ಅಷ್ಟೇ ಪ್ರಬಲವಾಗಿ ವಿರೋಧಿಸಿತು. ಕೊನೆಗೆ ಡಾ. ರಮೇಶಚಂದ್ರ ಮಜೂಮ್‌ದಾರ್ ಅವರು ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ಒಪ್ಪಿಸುವಲ್ಲಿ ಯಶಸ್ವಿಯಾಗಿದ್ದರು. ಈ ಪದವಿಯನ್ನು ಸ್ವೀಕರಿಸಲು ಅವರು ಢಾಕಾಗೆ ಬಂದಾಗ ಅವರನ್ನು ಸ್ವಾಗತಿಸುವುದಕ್ಕೆ ಒಂದು ಸ್ಪರ್ಧೆಯೇ

1. ಜುಲೈ 1936.

ನಡೆದುಹೋಯಿತು. ಮುಸ್ಲಿಮ್ ಸಾಹಿತ್ಯ ಸಮ್ಮೇಳನದ ಹತ್ತನೆಯ ವಾರ್ಷಿಕ ಅಧಿವೇಶನಕ್ಕೆ[1] ಅವರು ಅಧ್ಯಕ್ಷರಾಗಿದ್ದರು. ಇದರ ಜೊತೆಗೆ ವಿಶ್ವವಿದ್ಯಾನಿಲಯದ ಅನೇಕ ವಿದ್ಯಾರ್ಥಿ ಸಂಘಗಳು, ಕಮರುನ್ನೀಸಾ ಗರ್ಲ್ಸ್ ಕಾಲೇಜು, ಮಿಲನ್ ಪರಿಷದ್, ಶಾಂತಿ ಸಾಹಿತ್ಯ ಸಮ್ಮಿಲನಿ ಮೊದಲಾದ ಸಂಸ್ಥೆಗಳೂ ಅವರನ್ನು ಅಭಿನಂದಿಸಿದುವು. ಒಬ್ಬರಾದ ಮೇಲೆ ಒಬ್ಬರಂತೆ ಅವರು ತಮ್ಮ ಅನೇಕ ಗೆಳೆಯರ ಮನೆಗಳಲ್ಲಿ ತಂಗಿದರು. ಅಧ್ಯಾಪಕರಾಗಿದ್ದ ಚಾರುಚಂದ್ರ ಬಂದೋಪಾಧ್ಯಾಯರ ಮನೆಯಲ್ಲಿ ಬಂಕಿಮ ಸಾಹಿತ್ಯದ ಬಗ್ಗೆ ಮೋಹಿತಲಾಲ್ ಮಜೂಮ್‌ದಾರ್ ಅವರೊಂದಿಗೆ ಸುದೀರ್ಘ ಚರ್ಚೆಯನ್ನೇ ನಡೆಸಿದರು. ಅವರು ಅನೇಕ ಸಲ ಬಂಕಿಮ ಸಾಹಿತ್ಯವನ್ನು ವಿರೋಧಿಸಿದ್ದರು. ಆ ವಿರೋಧವನ್ನು ನ್ಯಾಯೋಚಿತವಾದುದೆಂದು ವಾದಿಸುತ್ತ, ಅವರು ದೇವಾನಂದಪುರದ ಬಾಲವಿಧವೆ ನೀರೂ ದೀದಿಯ ಕಥೆಯನ್ನು ಹೇಳಿದ್ದರು. ಆ ಪರದುಃಖಕಾತರಳಾಗಿದ್ದ ನಾರಿ ತನ್ನ ಮುವ್ವತ್ತೆರಡನೆಯ ವಯಸ್ಸಿನಲ್ಲಿ ಕಾಲು ಜಾರಿದಳು. ಆಗ ಧರ್ಮಶೀಲ ಸಮಾಜ ಅವಳು ಸ್ವಲ್ಪಸ್ವಲ್ಪವಾಗಿ ಒದ್ದಾಡಿ ಒದ್ದಾಡಿ ಸಾಯುವಂತೆ ಮಾಡಿತು.[2] ಈ ಕಥೆ ಹೇಳುತ್ತ ಹೇಳುತ್ತ ಅವರ ಕಂಠ ತುಂಬಿ ಬಂತು. ಸ್ವಲ್ಪ ಕಾಲ ಅವರು ಸುಮ್ಮನೆ ಕುಳಿತಿದ್ದರು. ಆಮೇಲೆ ನಿಧಾನವಾಗಿ ಹೇಳಿದರು: "ಮನುಷ್ಯನಲ್ಲಿರುವ ದೈವತ್ವಕ್ಕೆ ಇದೇ ರೀತಿ ಅಪಮಾನ ಮಾಡುತ್ತೇವೆ. ರೋಹಿಣಿಯ ಕಳಂಕ ಮತ್ತು ಶಿಕ್ಷೆ ಇದೇ ಬಗೆಯದು. ಇಂಥ ಒಂದು ನಾರಿ ಪಾತ್ರಕ್ಕೆ ಬಂಕಿಮಚಂದ್ರರು ಅದೆಂಥ ದುರ್ಗತಿಯನ್ನುಂಟುಮಾಡಿಬಿಟ್ಟಿದ್ದಾರೆ."

ಆದರೆ, ಬಂಕಿಮಚಂದ್ರರ ಇತಿಮಿತಿಗಳು ಅವರಿಗೆ ಗೊತ್ತಿರಲಿಲ್ಲವೆಂದೇನೂ ಅಲ್ಲ. ರವೀಂದ್ರರಂತೆ ಬಂಕಿಮಚಂದ್ರರು ಏಕೆ ಯುಗದ ಸಂಸ್ಕಾರಗಳಿಂದ ಮೇಲೆದ್ದು ನಿಂತು 'ಕಣ್ಣಿನ ಕಿರಿಕಿರಿ'ಯಂಥ ಕೃತಿಯನ್ನು ರಚಿಸಲಾರದೆ ಹೋದರು ಎಂಬುದೇ ಅವರ ಆಕ್ಷೇಪವಾಗಿತ್ತು. ಅವರು ಎಡವುತ್ತಿದ್ದುದು ಇಲ್ಲಿಯೇ. ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ಸಾಮರ್ಥ್ಯವಿರುತ್ತದೆ. ಆದರೆ, ಅಸಾಮರ್ಥ್ಯವೆಂಬುದು ಅಪರಾಧ ವೇನೂ ಅಲ್ಲ. ಈ ಮಾತನ್ನು ಅವರೇ ಅನೇಕ ಸಲ ಘೋಷಿಸಿದ್ದರು. ಇದಲ್ಲದೆ, ಬಂಕಿಮ ಚಂದ್ರರೂ ತಮ್ಮ ಯುಗಕ್ಕೆ ವಿರುದ್ಧವಾಗಿ ಕ್ರಾಂತಿಯನ್ನೆಸಗಿದ್ದರು. ಒಂದು ಎಲ್ಲೆಯ ವರೆಗೆ ಬಂದು ಅವರು ಅಸಮರ್ಥರಾಗಿಬಿಟ್ಟಿದ್ದರೆ ಅಥವಾ ಅಸಮರ್ಥ ರಾಗಿದ್ದಂತೆ ತೋರಿದ್ದರೆ ಏನಾಯಿತು? ಸ್ವತಃ ಶರತ್‌ಚಂದ್ರರೂ ಇದೇ ಅಸಾಮರ್ಥ್ಯಕ್ಕೆ ಬಲಿಯಾಗಿರಲಿಲ್ಲವೆ? ಅಂದಿನ ಯುಗವನ್ನು ದೃಷ್ಟಿಯಲ್ಲಿಟ್ಟು ಕೊಂಡು ನೋಡಿದರೆ ಬಂಕಿಮಚಂದ್ರರೂ ಪ್ರಗತಿಶೀಲರೇ ಆಗಿದ್ದರು. ಗತಾನುಗತಿ ಕತೆಗೆ ಬದಲಾಗಿ 'ಬುದ್ಧಿವಾದ'ಕ್ಕೆ ಮಾನ್ಯತೆ ನೀಡಲು ಅವರು ಪ್ರಯತ್ನಿಸಿದರು. ಅವರು ಹೀಗೆಂದು ಹೇಳಿಯೂ ಇದ್ದಾರೆ: "ಮೂರು-ನಾಲ್ಕು ಸಾವಿರ ವರ್ಷಗಳಷ್ಟು ಹಿಂದೆ ಭರತಖಂಡಕ್ಕೆಂದು ರೂಪಿಸಿದ್ದಂಥ ಕಾಯ್ದೆ ಕಾನೂನುಗಳನ್ನು ಇಂದು ಅಕ್ಷರಶಃ ಒಪ್ಪಿ ನಡೆಯುವುದು ಅಸಾಧ್ಯ."

---

1. ಮುಂದಿನ ಅಧ್ಯಾಯವನ್ನು ನೋಡಿ.
2. ಮೊದಲ ಭಾಗ, ಪು. 46-47.

ಇದೇ ವರ್ಷ[1] ಶಾಂತಿಪುರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಹನ್ನೆರಡನೆಯ ಅಧಿವೇಶನಕ್ಕೂ ಅವರು ಮೂಲ ಸಭಾಧ್ಯಕ್ಷರಾಗಿ ಆಯ್ಕೆಗೊಂಡಿದ್ದರು. ಅವರಿಗೆ ಈ ಗೌರವ ದೊರೆಯಲೂ ಬೇಕಾಗಿತ್ತು; ದೊರೆಯುತ್ತಲೂ ಇತ್ತು. ಆದರೆ, ಕೆಲವು ವೇಳೆ ತಮ್ಮ ಮೇಲಿನ ಟೀಕೆಯನ್ನು ಕೇಳಿ ಉದ್ವಿಗ್ನರಾಗುತ್ತಿದ್ದಂತೆಯೇ ತಮ್ಮ ಬಗೆಗಿನ ಅತಿಯಾದ ಹೊಗಳಿಕೆಯೂ ಅವರಿಗೆ ಇಷ್ಟವಾಗುತ್ತಿರಲಿಲ್ಲ. ಒಮ್ಮೆ ಒಬ್ಬ ಯುವಕ ಅವರ ಬಳಿಗೆ ಬಂದು, ಎಲ್ಲರಿಗಿಂತಲೂ ಚೆನ್ನಾಗಿ ಬರೆಯುವವರು ಅವರೇ ಎಂದು ಘೋಷಿಸಿದ. ಅವರು ಆರಾಮಕುರ್ಚಿಯಲ್ಲಿ ಒರಗಿ ಕುಳಿತು ಹುಕ್ಕಾ ಎಳೆಯುತ್ತಿದ್ದರು. ನಡುನಡುವೆ 'ಹಾಂ', 'ಹೂಂ' ಎಂದೆನ್ನುತ್ತಿದ್ದರು. ಕೊನೆಯಲ್ಲಿ ಆ ಯುವಕ ಹೇಳಿದ: "ಅನೇಕ ವಿದೇಶಿ ಕಾದಂಬರಿಗಳನ್ನು ಓದಿದ್ದೇನೆ. ಆದರೆ, ನಿಮ್ಮ ಕಾದಂಬರಿಗಳಲ್ಲಿ ಕಾಣುವಂಥ ನೋವು ಬೇರೆಲ್ಲಿಯೂ ಕಾಣದೊರೆಯುವುದಿಲ್ಲ. ಅವರ ಕೃತಿಗಳನ್ನು ಓದಿದರೆ, ಕಣ್ಣುಗಳು ಒದ್ದೆಯಾಗುವುದೇ ಇಲ್ಲ. ನಿಮ್ಮ ಕಾದಂಬರಿಗಳನ್ನು ಓದಿ ಅದೆಷ್ಟು ಕಣ್ಣೀರು ಸುರಿಸಿದ್ದೇನೆ!"

ಶರತ್‌ಚಂದ್ರರು ಕೂಡಲೇ ಹೇಳಿದರು: "ಬೇಡ, ಬೇಡ. ಅಷ್ಟೊಂದು ಅಳುವುದು ಒಳ್ಳೆಯದಲ್ಲ. ಕಣ್ಣುಗಳು ಹಾಳಾಗಿ ಬಿಡುತ್ತವೆ. ನಡುನಡುವೆ ಹಾಸ್ಯ-ವಿನೋದದ ಕಥೆಗಳನ್ನೂ ಓದು."

ಆ ಬಳಿಕ ಆ ಯುವಕ ಕ್ಷಮೆಕೋರಿ, ಹೊರಟುಹೋದ. ಅವರೆಂದರು: "ನನ್ನ ಹೊಗಳಿಕೆಯನ್ನು ಕೇಳಿ ಕೇಳಿ, ಹೊಗೆಸೊಪ್ಪು ಸಹಿತ ಹಾಳಾಗಿ ಬಿಟ್ಟಿತು."

ಇನ್ನೊಂದು ದಿವಸ ಇನ್ನೊಬ್ಬ ಯುವಕ ಹೇಳಿದ: "ನಿಮ್ಮ 'ಸತೀ' ಕಥೆಯನ್ನು ಓದಿದೆ. ನೀವು ಮಾತ್ರವೇ ಇಂಥ ಕಥೆಯನ್ನು ಬರೆಯಬಲ್ಲಿರಿ. ಬಂಗಾಳಿ ಸಾಹಿತ್ಯದಲ್ಲಿಯೇ ಇಂಥ ಕಥೆ ದುರ್ಲಭ."

ಶರತ್‌ಚಂದ್ರರು ಕೇಳಿದರು: "ರವೀಂದ್ರರ ಕಥೆಗಳನ್ನು ಓದಿದ್ದೀಯಾ?"

"ಓದಿದ್ದೇನೆ. ಆದರೆ ಅವು ಅಷ್ಟು ಚೆನ್ನಾಗಿಲ್ಲ."

"ಚೆನ್ನಾಗಿ ಓದು. ಅಂಥ ಕಥೆಗಳು ವಿಶ್ವಸಾಹಿತ್ಯದಲ್ಲಿಯೇ ಇಲ್ಲ ಎಂಬುದು ಗೊತ್ತಾಗುತ್ತದೆ."

ಪ್ರಶಂಸೆ ಮತ್ತು ನಿಂದೆ ಶರತ್‌ಚಂದ್ರರಂಥ ವ್ಯಕ್ತಿಯ ಜೀವನದಲ್ಲಿ ಸಹಜವಾಗಿ ದೊರೆಯುವಂಥವೇ. ಆದರಲ್ಲಿಯೂ ನಿಂದೆ ಅವರ ಪಾಲಿಗೆ ಹೆಚ್ಚು ಮಹತ್ವಪೂರ್ಣವಾದುದಾಗಿರುತ್ತಿತ್ತು. ಆದರೆ, ಮೃತ್ಯುಲೋಕದ ದ್ವಾರದ ಬಳಿಗೆ ಬಂದು ತಲುಪಿರುವವರ ಪಾಲಿಗೆ ಇವು ಯಾವುವೂ ವಿಶೇಷವಾದ ಅರ್ಥವನ್ನು ಹೊಂದಿರುವುದಿಲ್ಲ. ಅವರ ವಿಷಯದಲ್ಲಿ ಆದದ್ದೂ ಇದೇ. ಮೃತ್ಯು ಅವರ ಮನೆಯ ಬಾಗಿಲನ್ನು ತಟ್ಟುತ್ತಿದ್ದಾಗ, ಪ್ರಬೋಧ ಕುಮಾರ ಸಾನ್ಯಾಲ್ ಅವರು ಅವರ ಮೇಲೆ ತೀವ್ರವಾದ ಟೀಕೆ-ಟಿಪ್ಪಣಿಗಳನ್ನು ಮಾಡಿದರು. ಕೆಲವು ವರ್ಷಗಳ ಹಿಂದೆ[2] ಇದೇ ಪ್ರಬೋಧಕುಮಾರ್ ಅವರು ಶರತ್‌ಸಾಹಿತ್ಯವನ್ನು ಹೊಗಳಿ ಅಟ್ಟಕ್ಕೇರಿಸಿದ್ದರು. ಅವರ ಸಹಜ ಪಾತ್ರ-ಚಿತ್ರಣ, ವಿಪುಲವಾದ ಅನುಭವ, ಮಧುರ-ಕೋಮಲ ಭಾಷೆ

1. ಜೂನ್ 8, 1936.

2. 1932ರಲ್ಲಿ.

ಹಾಗೂ ಶಬ್ದ ಸಂಪತ್ತಿನ ಅರ್ಥಪೂರ್ಣವಾದ ಬಳಕೆ - ಇವನ್ನು ಕಂಡು ಆಗ ಅವರು ಮುಗ್ಧರಾಗಿಬಿಟ್ಟಿದ್ದರು. ಅದೇ ಪ್ರಬೋಧಕುಮಾರ್ ಅವರು ಈಗ ಅವರ ಸಾಹಿತ್ಯವನ್ನು ಕಟುವಾಗಿ ಟೀಕಿಸಿದ್ದು ಮಾತ್ರವಲ್ಲದೆ, ಅವರ ವ್ಯಕ್ತಿತ್ವದ ಮೇಲೂ ಭಾರಿ ಆಘಾತವನ್ನೆಸಗಿದರು. "ಶರತ್‌ಚಂದ್ರರಿಗೆ ತಮ್ಮದೇ ಆದ ಹೇಳುವ ಶೈಲಿಯೊಂದಿದೆ, ಅಷ್ಟೆ. ಮುಂಬರುವ ಕಾಲಕ್ಕೆ ಕೊಡಬಹುದಾಗಿರುವ ಸಂದೇಶವಾವುದೂ ಅದರಲ್ಲಿಲ್ಲ. ಅವರ ಮಾತು ಮತ್ತು ಕೃತಿಗಳಲ್ಲಿ, ನಡತೆ ಮತ್ತು ಸದಾಚಾರಗಳಲ್ಲಿ ಯಾವುದೇ ಸಾಂಗತ್ಯವೂ ಇಲ್ಲ." ಎಂದು ಅವರು ಟೀಕಿಸಿದ್ದರು.

ಈ ಬಗೆಯ ಎರಡು ಲೇಖನಗಳು 'ಶ್ರೀಹರ್ಷ' ಪತ್ರಿಕೆಯಲ್ಲಿ ಪ್ರಕಟವಾದುವು. ಬಿರುಗಾಳಿ ಬೀಸಿದಂತಾಯಿತು. ನೋಡು-ನೋಡುತ್ತಿದ್ದಂತೆಯೇ ಪಕ್ಷ-ಪ್ರತಿಪಕ್ಷಗಳ ನಡುವೆ ವಾದ-ವಿವಾದಗಳ ಪ್ರವಾಹ ಉಕ್ಕಿ ಹರಿಯ ತೊಡಗಿತು. ಇದೆಲ್ಲ ಹೊಟ್ಟೆಯ ಕಿಚ್ಚಿನ ಪರಿಣಾಮ ಎಂದು ಶರತ್‌ಚಂದ್ರರ ಗೆಳೆಯರು ಹೇಳಿದರು. ಪ್ರಬೋಧ ಕುಮಾರರ ಬೆಂಬಲಿಗರೊಬ್ಬರು ಶರತ್‌ಚಂದ್ರರ ಪ್ರಶಂಸಕರೊಬ್ಬರ ಹೆಸರನ್ನೇ ಹೇಳಿ ಲೇಖನ ಬರೆದರು. "ಬಂಕಿಮ, ಮೈಕೇಲ್ ಮತ್ತು ರವೀಂದ್ರ ಯಾವ ಬಂಗಾಳಿ ಭಾಷೆಗೆ ಸೇವೆಯನ್ನು ಸಲ್ಲಿಸಿದರೋ, ಅದರ ಪವಿತ್ರ ಅಂಗಾಂಗಗಳಿಗೆ ಬರ್ಮಾದಲ್ಲಿ ಅಲೆಮಾರಿ ಶರತ್‌ಚಂದ್ರನ ಲೇಖನಿ ಭಯಂಕರವಾದ ಗಾಯಗಳನ್ನುಂಟುಮಾಡಿದೆ. ಅದರಿಂದಾಗಿ ಅವರ ಇಡೀ ಶರೀರ ಕೊಳೆಯ ತೊಡಗಿದೆ."

ಆ ಲೇಖಕ-ಮಿತ್ರರು ಶರತ್‌ಚಂದ್ರರ ಬಳಿಗೆ ಬಂದು ಹೇಳಿದರು: "ನಾನು ಇದನ್ನು ಖಂಡಿಸಿ ಉತ್ತರ ಬರೆಯುತ್ತೇನೆ."

ಶರತ್‌ಚಂದ್ರರು ಹೇಳಿದರು: "ಬೇಡ, ಬೇಡ. ಹಾಗೆಲ್ಲ ಮಾಡಬೇಡಿ. ನಾನು ಇದನ್ನೆಲ್ಲ ಸಹಿಸಲಾರೆ. ನನ್ನ ಬಗ್ಗೆ ಈಗೇಕೆ ಈ ವಾದ-ಪ್ರತಿವಾದಗಳೆಲ್ಲ? ನನ್ನ ಮಾತು ಕೇಳಿ. ಸುಮ್ಮನೆ ಇದ್ದುಬಿಡಿ."

ಶರತ್‌ಚಂದ್ರರು ದಿಲೀಪಕುಮಾರ್ ರಾಯ್ ಅವರಿಂದ ವಿದೇಶಿ ಭಾವಧಾರೆಯನ್ನು ಪಡೆದುಕೊಂಡಿದ್ದಾರೆ, ಕಿರಣಶಂಕರ ರಾಯ್ ಅವರಿಂದ ರಾಜಕೀಯವನ್ನು ಕಲಿತಿದ್ದಾರೆ ಮತ್ತು ಕಾಲಿದಾಸ ರಾಯ್ ಅವರಿಂದ ವ್ಯಾಕರಣವನ್ನು ಕಲಿತಿದ್ದಾರೆ ಎಂದೂ ಪ್ರಬೋಧ ಕುಮಾರರು ಬರೆದುಬಿಟ್ಟಿದ್ದರು.

ಇದನ್ನು ಖಂಡಿಸಿ ಒಂದು ಲೇಖನವನ್ನು ಸಿದ್ಧಪಡಿಸಿಕೊಂಡು ಕಾಲಿದಾಸ ರಾಯ್ ಅವರು ಶರತ್‌ಚಂದ್ರರ ಬಳಿಗೆ ಬಂದರು. ಅವರು ಆ ಲೇಖನವನ್ನು ಓದಿಸಿ ಕೇಳಿದರು. ಅದನ್ನು ಹೊಗಳಿದರು. ಆಮೇಲೆ ಅದನ್ನು ಕೈಗೆತ್ತಿಕೊಂಡು, ಹರಿದು ಚೂರುಚೂರು ಮಾಡಿಬಿಟ್ಟರು. ಅಷ್ಟೇ ಅಲ್ಲ, ಆ ಎಲ್ಲ ಚೂರುಗಳನ್ನೂ ನಿಗಿನಿಗಿಯಾಗಿದ್ದ ಚಿಲುಮೆಯ ಮೇಲೆ ಹಾಕಿಬಿಟ್ಟರು. ಕ್ಷಣಮಾತ್ರದಲ್ಲಿ ಎಲ್ಲವೂ ಉರಿದು ಬೂದಿಯಾಗಿಬಿಟ್ಟಿತು. ಆಮೇಲೆ ಅವರು ಹೀಗೆಂದರು: "ಕಾಲಿದಾಸ್, ಯುವಕರ ಮೇಲೆ ತೀವ್ರವಾದ ಟೀಕೆ-ಟಿಪ್ಪಣಿ ಮಾಡಿದರೆ, ಅದರಿಂದ ಏನಾದರೂ ಪರಿಣಾಮ ಉಂಟಾಗುತ್ತದೆ. ಅವರು ಆಘಾತಗಳನ್ನೂ ತಡೆದುಕೊಳ್ಳಬಲ್ಲರು, ತಿದ್ದಿಕೊಳ್ಳಬಲ್ಲರು. ಆದರೆ ನನ್ನಂಥ ಸಾವಿರ ಹಾದಿಯ ದಾರಿಹೋಕನ ಮೇಲೆ ಇಂಥ ಟೀಕೆ-ಟಿಪ್ಪಣಿಗಳನ್ನು ಮಾಡುವುದರಿಂದ ಏನು ಪ್ರಯೋಜನ? ಒಂದೆರಡು ದಿನಗಳ

ಬಳಿಕ ಪಶ್ಚಾತ್ತಾಪ ಪಡಬೇಕಾಗುತ್ತದೆ. ನನ್ನ ಕಾಲ ಮುಗಿದು ಹೋಯಿತು. ಕಣ್ಣು ಮುಚ್ಚಿಕೊಳ್ಳುವ ಮುನ್ನ ಯಾರನ್ನೂ ಖಂಡಿಸಿವಮಾಡುವ ಬಯಕೆ ನನಗಿಲ್ಲ. ಯಾರು ಏನು ಬೇಕಾದರೂ ಹೇಳಿಕೊಳ್ಳಲಿ. ನೀವು ಯಾರೂ ಯಾವುದೇ ಖಂಡನೆ ಮಾಡಲು ಹೋಗಬೇಡಿ."[1]

ಪ್ರಬೋಧಕುಮಾರರು ಒಮ್ಮೆಗೇ ಏಕೆ ಇಷ್ಟು ಕಟುವಾಗಿಬಿಟ್ಟರು? ಯೌವನದ ಆವೇಶ ಮತ್ತು ಪೀಡಿತರ ಹೋರಾಟವೇ ಇದಕ್ಕೆ ಏಕಮಾತ್ರ ಕಾರಣವಾಗಿತ್ತೆ? ಅವರ ಹೆಸರಿಗೆ ಶರತ್‌ಚಂದ್ರರು ಬರೆದ ಪತ್ರದಿಂದ[2] ಗೊತ್ತಾಗುವ ಸಂಗತಿ ಇದು: 'ಮಹಾಪ್ರಸ್ಥಾನೇರ್ ಪಥ' ಎಂಬ ತಮ್ಮ ಕೃತಿಗೆ ಮುನ್ನುಡಿಯನ್ನು ಬರೆದುಕೊಡಬೇಕೆಂದು ಅವರು ಶರತ್‌ಚಂದ್ರರನ್ನು ಕೋರಿದ್ದರು. ಆದರೆ, ಕಾರಣ ಯಾವುದಾದರೂ ಆಗಿರಲಿ, ಶರತ್‌ಚಂದ್ರರು ಅದನ್ನು ಬರೆದು ಕೊಟ್ಟಿರಲಿಲ್ಲ. ಇದು ಪ್ರಬೋಧ ಚಂದ್ರರ ಸಂಯಮರಹಿತ ಕಟುತ್ವಕ್ಕೆ ಒಂದು ಕಾರಣವಾಗಿದ್ದಿರಲಾರದೆ?

ಟಾಲ್‌ಸ್ಟಾಯ್ ಅವರು ಜೀವನವಿಡೀ ಅನ್ಯಾಯಕ್ಕೆ ಎದುರಾಗಿ ಹಾಗೂ ತಮಗೇ ಎದುರಾಗಿ ಹೋರಾಡುತ್ತಿದ್ದರು. ಆದರೆ, ಕೊನೆಗೆ ಅವರು ಹೀಗೆಂದರು: "ಮನುಷ್ಯ ವೃದ್ಧಾಪ್ಯಕ್ಕೆ ಅಂದರೆ, ಸಾವಿಗೆ - ಹತ್ತಿರವಾಗುತ್ತ ಬಂದಂತೆ ಅವನ ಬಾಳೇ ಬದಲಾಗ ತೊಡಗುತ್ತದೆ ಎಂಬುದನ್ನು ನೀವು ಕಲ್ಪಿಸಿಕೊಳ್ಳಲಾರಿರಿ. ಶ್ರೀಮಂತನಾಗಿರಲಿ ಅಥವಾ ಭಿಖಾರಿಯಾಗಿರಲಿ, ಎಲ್ಲರೊಂದಿಗೆ ಸ್ನೇಹದಿಂದ ನಡೆದುಕೊಳ್ಳುವುದೇ ಇಷ್ಟವಾಗಿ ತೋರುತ್ತದೆ."

ಶರತ್‌ಚಂದ್ರರ ಆಂತರಿಕ ಇಚ್ಛೆಯೂ ಇದೇ ಆಗಿತ್ತು. ತೀರಿಕೊಳ್ಳುವುದಕ್ಕೆ ಸುಮಾರು ಆರು ತಿಂಗಳ ಹಿಂದೆ[3], ಇಂಥ ಒಂದು ಟೀಕೆಗೆ ಉತ್ತರವಾಗಿ ಅವರು ಹೀಗೆಂದಿದ್ದರು: "ಹೋಗುವ ಕಾಲ ಹತ್ತಿರ ಬಂದಿದೆ. ಮೊಕದ್ದಮೆ ಹೂಡಿ ಮತ್ತಷ್ಟು ಅಶಾಂತಿಯನ್ನು ಕೊಂಡುಕೊಳ್ಳಬಾರದು ಎಂದು ಸಂಕಲ್ಪಮಾಡಿದ್ದೇನೆ. ನನ್ನನ್ನು ನಿಜವಾಗಿಯೂ ಪ್ರೀತಿಸುವವರಿಗೆ ಇದರಿಂದ ದುಃಖವಾಗುತ್ತದೆ ಎಂಬುದನ್ನು ನಾನು ಬಲ್ಲೆ. ಆದರೆ, ಇದನ್ನು ಸಹಿಸಿಕೊಳ್ಳುವುದರ ಹೊರತು ಬೇರಾವುದೇ ಪ್ರತೀಕಾರದ ಮಾರ್ಗವೂ ಇಲ್ಲ."

ನಿಜವಾಗಿಯೂ ಹಾದಿಯ ಕೊನೆ ಬಂದು ತಲುಪಿತ್ತು. ಬಹಳಷ್ಟು ದಿನಗಳ ಹಿಂದಿನಿಂದಲೇ ಸೃಜನಶಕ್ತಿ ಇಂಗಿಹೋದಂತಾಗಿತ್ತು. ನೌಕೆಯನ್ನು ಹುಟ್ಟುಗಳ ಅಥವಾ ಗಳುಗಳ ಬಲದಿಂದಲ್ಲದೆ ಹಗ್ಗದ ಬಲದಿಂದ ಎಳೆಯುತ್ತಿರುವಂತೆ ತೋರುತ್ತಿತ್ತು. ಒಮ್ಮೆ ಹೇಮೇಂದ್ರರು ಅವರ ಲೇಖನವನ್ನು ಕೇಳಲು ಬಂದಿದ್ದಾಗ,

---

1. ಕೆಲವೇ ತಿಂಗಳುಗಳ ಬಳಿಕ ಅವರು ತೀರಿಕೊಂಡರು. ಅಂದು ಅವರ ಬೃಹತ್ ಶವಯಾತ್ರೆಯಲ್ಲಿ ಪ್ರಬೋಧ ಕುಮಾರ್ ಅವರೇ ಹೆಗಲು ಕೊಡಲು ಎಲ್ಲರಿಗಿಂತ ಮುಂದಾಗಿದ್ದರು. ಅಷ್ಟೇ ಅಲ್ಲ, ಅವರ ನೆನಪಿಗಾಗಿ ಹೊರತಂದ 'ಭಾರತವರ್ಷ'ದ ಎರಡು ವಿಶೇಷಾಂಕಗಳನ್ನು ಸ್ವಂತ ಇಚ್ಛೆಯಿಂದ ಅವರೇ ಸಂಪಾದಿಸಿದರು. ತಾವು ಶರತ್‌ಚಂದ್ರರನ್ನು ತುಂಬ ಪ್ರೀತಿಸುತ್ತಿದ್ದುದಾಗಿ ಅವರು ಈ ಲೇಖಕನೊಂದಿಗೆ ಹೇಳಿಕೊಂಡರು.

2. 1933ರ ಒಂದು ಅಪ್ರಕಟಿತ ಪತ್ರ.

3. ಜುಲೈ 9, 1937.

ತುಂಬ ದುಃಖದಿಂದ ಅವರು ಹೇಳಿದ್ದರು: "ನಾನು ಇನ್ನು ಲೇಖನಗಳನ್ನು ಕೊಡಲಾರೆ. ತಲೆಯಲ್ಲಿ ತಡೆಯಲಾರದಷ್ಟು ನೋವಿದೆ. ಲೇಖನಿಯನ್ನು ಹಿಡಿದುಕೊಳ್ಳಲೂ ಸಾಧ್ಯವಿಲ್ಲ.

ಹೇಮೇಂದ್ರರು ಮತ್ತೆ ಒತ್ತಾಯ ಪಡಿಸಿದಾಗ ಅವರು ಉದ್ವಿಗ್ನರಾದರು: "ನನ್ನ ಮಾತನ್ನು ನಂಬು, ಹೇಮೇಂದ್ರ. ನಾನಿನ್ನು ಬರೆಯಲಾರೆ. ನನ್ನ ಶರೀರದ ಸ್ಥಿತಿ ಹೇಗಿದೆ ಎಂಬುದು ನಿನಗೆ ಗೊತ್ತಿಲ್ಲ. ನನಗೆ ಬರೆಯಲು ಸಾಧ್ಯವೇ ಇಲ್ಲ."

## 25

ರಾಜಕೀಯ ಕ್ಷೇತ್ರದಲ್ಲಿಯೂ ಅವರೀಗ ಸಕ್ರಿಯ ಸಹಕಾರ ನೀಡುವ ಸ್ಥಿತಿಯಲ್ಲಿರಲಿಲ್ಲ. ಆದರೆ, ಧಾರ್ಮಿಕ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಸ್ಪಷ್ಟರೂಪದಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಅನೇಕ ಅವಕಾಶಗಳು ಅವರಿಗೆ ಒದಗಿಬಂದುವು. ಅವರು ಮತ್ತೆ ಮತ್ತೆ ನಾಯಕರನ್ನು ಟೀಕಿಸಿದರೂ, ಎಂದೂ ಅಸಭ್ಯವಾಗಿ ನಡೆದುಕೊಳ್ಳಲಿಲ್ಲ. ತಮ್ಮ ಪ್ರಿಯಸ್ನೇಹಿತರೊಬ್ಬರೊಂದಿಗೆ ಹೀಗೆ ಹೇಳಿದರು: "ವಿಶಿಷ್ಟ ವ್ಯಕ್ತಿಗಳ ಕೆಲಸಕಾರ್ಯಗಳನ್ನು ಟೀಕಿಸುವುದಕ್ಕೆ ಅಭ್ಯಂತರ ವೇನೂ ಅಲ್ಲ. ಆದರೆ, ಹೇಳಬೇಕಾದುದನ್ನು ಶ್ರದ್ಧೆ-ಗೌರವಗಳು ಕಡಿಮೆಯಾಗದಂತೆ ಹೇಳಬೇಕು."

ಧಾರ್ಮಿಕ ಪ್ರಶ್ನೆಗೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿ,[1] ಪಂಡಿತ ಮದನಮೋಹನ ಮಾಳವೀಯ ಅವರು ಮತ್ತು ಅಣೆ ಅವರು ಕಾಂಗ್ರೆಸ್ ಪಕ್ಷದಿಂದ ಬೇರೆಯಾಗಿ, ಬೇರೊಂದು ಪಕ್ಷವನ್ನು ರಚಿಸಿದಾಗ, ಅವರ ಈ ಕ್ರಮ ಶರತ್‌ಚಂದ್ರಗೆ ಇಷ್ಟವಾಗಲಿಲ್ಲ. ಕಾಂಗ್ರೆಸ್ಸಿನ ಒಳಗೇ ಅವರು ಒಂದು ಗುಂಪಿನವರಾಗಬಹುದಾಗಿತ್ತು. ಆದರೆ ಅದನ್ನು ದುರ್ಬಲಗೊಳಿಸಲು ಅವರೆಂದೂ ಸಿದ್ಧರಾಗಿರಲಿಲ್ಲ. ಅವರು ಆ ಸಂದರ್ಭದಲ್ಲಿ ಹೀಗೆಂದಿದ್ದರು: "ಈ ಹೊಸ ಆಂದೋಳನದ ಮುಖಂಡರಾಗಿರುವವರ ವಿಷಯದಲ್ಲಿ ಏಕನಿಷ್ಠ ಪ್ರವೀಣ ಕಾರ್ಯಕರ್ತರೆಂದು ನಾನು ಗೌರವವನ್ನಿರಿಸಿಕೊಂಡಿದ್ದೇನೆ. ನಾಡಿನ ರಾಜಕೀಯ ಸಾಧನೆಯ ಇತಿಹಾಸಕ್ಕೆ ಅವರು ನೀಡಿರುವ ಕೊಡುಗೆ ಕಮ್ಮಿ ಎಂದೇನೂ ನಾನು ಭಾವಿಸಿಲ್ಲ. ಆದರೆ ಕಾಂಗ್ರೆಸ್ ಪಕ್ಷಕ್ಕಿಂತ ಹೆಚ್ಚಾಗಿ ನಾಡಿಗಾಗಿ ತಾವು ದುಃಖದ ಹೊರೆಯನ್ನು ಹೊತ್ತಿದ್ದೇವೆಂಬುದನ್ನು ತೋರಿಸಿಕೊಡುವುದಕ್ಕಾಗಿ ಹೊಸ ಪಕ್ಷವನ್ನು ಕಟ್ಟುವುದರಿಂದ ಏನೂ ಪ್ರಯೋಜನವಾಗುವುದಿಲ್ಲ ಎಂಬುದಾಗಿ ನಾನು ಭಾವಿಸಿದ್ದೇನೆ. ಕಾಂಗ್ರೆಸ್ ಪಕ್ಷ ನಾಡಿನ ಬಹುದೊಡ್ಡ ರಾಜಕೀಯ ಸಂಸ್ಥೆ. ಧಾರ್ಮಿಕ ಭೇದಭಾವನೆಗಳಿಗೆ ವಿರುದ್ಧವಾಗಿ ಅದು ಎಂದಿನಿಂದಲೂ ಹೋರಾಡುತ್ತ ಬಂದಿದೆ. ಇಂದು ಅದನ್ನು ಸಣ್ಣದೆಂದು ತೋರಿಸಿಕೊಡುವ ಪ್ರಯತ್ನದಿಂದ ವ್ಯೆಯಕ್ತಿಕವಾಗಿ ಯಾರದಾದರೂ ಗೌರವ ಒಂದಿಷ್ಟು ಹೆಚ್ಚಿತೋ ಇಲ್ಲವೋ ನನಗೆ ತಿಳಿಯದು; ಆದರೆ, ನಾಡಿನ ಗೌರವ ಮಾತ್ರ ಒಂದಿಷ್ಟೂ ಹೆಚ್ಚಿಲ್ಲ.

---

1. ಜುಲೈ 1934 - 'ವರ್ತಮಾನ್ ರಾಜನೀತಿಕ್ ಪ್ರಸಂಗ್' -ಶಾರದೀಯಾ ನಾಗರಿಕ ಪತ್ರಿಕಾ.

"ದೇಶ ಸೇವೆ ಎಂಬುದು ಎಲ್ಲಿಯವರೆಗೆ ಧರ್ಮದ ರೂಪವನ್ನು ಪಡೆದುಕೊಳ್ಳುವುದಿಲ್ಲವೋ ಅಲ್ಲಿಯ ವರೆಗೆ ಅದರಲ್ಲಿ ಸ್ವಲ್ಪ ಮಟ್ಟಿನ ಮೋಸಗಾರಿಕೆಗೆ ಎಡೆ ಇರುತ್ತದೆ. ಈ ಮಾತು ಪ್ರತಿ ದಿನವೂ ನನಗೆ ಎದೆತಟ್ಟುವಂತೆ ಅನುಭವಕ್ಕೆ ಬರುತ್ತಿದೆ. ಧರ್ಮಕ್ಕೆ ನಾವು ಯಾವಾಗ ದೇಶಕ್ಕಿಂತಲೂ ಹಿರಿದಾದ ಸ್ಥಾನವನ್ನು ಕೊಡುತ್ತೇವೆಯೋ ಆಗಲೂ ತೊಂದರೆ ಉಂಟಾಗಿಯೇ ತೀರುತ್ತದೆ. ಅವರು ತಪ್ಪು ಮಾಡಿಲ್ಲ ಎಂಬುದು ಗಾಂಧೀಜಿಯವರಿಗೂ ಗೊತ್ತಿದೆ; ಕಾರ್ಯಕಾರಿ ಸಮಿತಿಗೂ ಗೊತ್ತಿದೆ. ಮಾಳವೀಯರ ಮತ್ತು ಅಣೆಯವರ ವಿರುದ್ಧ ಕಾರ್ಯಚರಣೆ ಗಾಂಧೀಜಿಯವರನ್ನು ವಿಚಲಿತರನ್ನಾಗಿಸಲಾರದೆ ಹೋಗಿದೆ. ಹೀಗಾಗಿ, ಅವರು ಕಾಂಗ್ರೆಸ್ ಪಕ್ಷದೊಡನೆ ಸಂಬಂಧವನ್ನು ಕಳೆದುಕೊಂಡರೂ, ಅದಕ್ಕೂ ಈ ಗಲಭೆ-ಗೊಂದಲಕ್ಕೂ ಯಾವುದೇ ಸಂಬಂಧವಿರುವುದಿಲ್ಲ.

"ಒಂದು ವಿಚಾರ ನನಗೆ ಗೊತ್ತಿದೆ. ಬಂಗಾಳದ ಮುಸಲ್ಮಾನರು ಕೂಡ 'ಜಾಯಿಂಟ್ ಎಲೆಕ್ಟೋರೇಲ್'- ಅಂದರೆ, ಸಂಯುಕ್ತ ಚುನಾವಣೆಯನ್ನು - ಕೋರ ತೊಡಗಿದ್ದಾರೆ. ಇದು ಆಗದಿದ್ದರೆ, ಇದಕ್ಕೆ ಕಾರಣವೇನು ಅಥವಾ ತಪ್ಪು ಎಲ್ಲಿದೆ ಎಂಬುದು ಅವರಿಗೆ ಚೆನ್ನಾಗಿ ಗೊತ್ತಿದೆ. ಅನೇಕ ಶ್ರೀಮಂತ ಮುಸಲ್ಮಾನರು ಸಹಾಯಕರ, ಗುಮಾಸ್ತರ, ವಕೀಲರ ಮತ್ತು ವೈದ್ಯರ ಕೆಲಸಗಳಿಗೆ ತಮ್ಮ ಜಾತಿಯವರಿಗಿಂತಲೂ ಹಿಂದೂಗಳೇ ಹೆಚ್ಚು ನಂಬಿಕೆಗೆ ಅರ್ಹರಾಗಿರುವರೆಂದು ಭಾವಿಸಿದ್ದಾರೆ ಎಂಬುದನ್ನು ನಾವು ಮರೆಯಬಾರದು. ಜೊತೆಗೆ, ಪ್ರತಿಯೊಬ್ಬ ಹಿಂದುವೂ ಮನಸ್ಸಿನಿಂದ, ಹೃದಯದಿಂದ ರಾಷ್ಟ್ರವಾದಿಯಾಗಿದ್ದಾನೆ ಎಂಬುದನ್ನೂ ನಾನು ಹೇಳಬಯಸುತ್ತೇನೆ. ಧಾರ್ಮಿಕ ನಂಬಿಕೆಗಳಲ್ಲಿ ಅವರು ಯಾರಿಗಿಂತಲೂ ಕಮ್ಮಿಯೂ ಅಲ್ಲ, ಚಿಕ್ಕವರೂ ಅಲ್ಲ. ಅವರ ವೇದಉಪನಿಷತ್ತುಗಳು ಬಹು ಜನರ ಭಾರಿಭಾರಿ ತಪಸ್ಸಿನ ಫಲಗಳೇ ಆಗಿವೆ. ಇಲ್ಲಿ ತಪಸ್ಸು ಎಂದರೆ ಚಿಂತನ ಎಂದೇ ಅರ್ಥ. ಬಹು ಜನಗಳ ಬಹಳಷ್ಟು ಚಿಂತನೆಯ ಫಲವಾಗಿ ರೂಪುದಳೆದಿರುವ ಧರ್ಮಕ್ಕೆ ವಿಧಾನ ಸಭೆಯಲ್ಲಿ ಕೆಲವು ಸ್ಥಾನಗಳು ಕಮ್ಮಿಯಾಗಿಬಿಟ್ಟರೆ, ಅದರಿಂದ ಸರ್ವನಾಶವಾಗಿ ಬಿಡುತ್ತದೆಂಬ ಭಯವನ್ನು ಮುಂದು ಮಾಡುವುದರಿಂದ ಪ್ರಯೋಜನವೇನೂ ಇಲ್ಲ."

ಆದರೆ, ಎರಡು ವರ್ಷಗಳ ಬಳಿಕ ಧಾರ್ಮಿಕ ವಿಭಜನೆಯ ಸೂಚನೆ ಮುಂದ ಬಂದಾಗ, ಅದಕ್ಕೆ ವಿರುದ್ಧವಾಗಿ ದನಿಯೆತ್ತಲು ಅವರೇನೂ ಹಿಂದೆಮುಂದ ನೋಡಲಿಲ್ಲ. ಆದರಿಂದ ಬಂಗಾಳದ ಹಿಂದೂಗಳಿಗೆ ಆದ ನಷ್ಟಕ್ಕೆ ವಿರುದ್ಧವಾಗಿ ಕವಿಗುರು ರವೀಂದ್ರನಾಥ ಠಾಕೂರರ ಅಧ್ಯಕ್ಷತೆಯಲ್ಲಿ ಪುರಭವನದಲ್ಲಿ ಒಂದು ಸಭೆ ನಡೆಯಿತು.[1] ಆಗ ಅವರು ಸ್ಪಷ್ಟವಾದ ಮಾತುಗಳಲ್ಲಿ ಹೀಗೆಂದಿದ್ದರು: "ಈ ಹೊಸ ಆಡಳಿತ ವ್ಯವಸ್ಥೆ ಮೊದಲಿನಿಂದ ಕೊನೆಯವರೆಗೂ ದೋಷ ಪೂರ್ಣವಾಗಿದೆ. ಅದರ ಅಪರಿಮಿತ ದೋಷಗಳಿಂದಾಗಿ ಬಂಗಾಳದ ಹಿಂದೂಗಳಿಗೇ ಎಲ್ಲರಿಗಿಂತಲೂ ಹೆಚ್ಚು ಹಾನಿಯಾಗಿದೆ. ಶಾಸನದ ಗೂಟವನ್ನು ಬಡಿದು ಅವರನ್ನು ಶಾಶ್ವತವಾಗಿ ಕೆಳಕ್ಕೆ ತಳ್ಳಿಬಿಡಲಾಗಿದೆ. ಅಂತೆಯೇ, ಈ ನಾಡಿನ ಮುಸಲ್ಮಾನರಿಗೆ, ಅವರಿಗೆ

1. ಜುಲೈ 15, 1936.

ದೊರೆಯಬೇಕಾಗಿದ್ದುದಕ್ಕಿಂತಲೂ ಹತ್ತು-ಹದಿನೈದು ಹೆಚ್ಚು ಸ್ಥಾನಗಳು ದೊರೆತಿವೆ. ಆದ್ದರಿಂದ, ಒಬ್ಬ ವ್ಯಕ್ತಿಗೆ ಸಂಬಂಧಿಸಿದಂತೆಯೇ ಅನ್ಯಾಯ-ಅನಾಚಾರಗಳು ನಡೆದರೂ, ಅವುಗಳಿಂದ ಕೆಡುಕೇ ಆಗುತ್ತದೆಂದು ಅವರಿಗೆ ನಾನು ತಿಳಿಸ ಬಯಸುತ್ತೇನೆ. ಆದರಿಂದ ಕೊನೆಯವರೆಗೂ ಮುಸಲ್ಮಾನರಿಗಾಗಲೀ, ಹಿಂದೂ ಗಳಿಗಾಗಲೀ, ಈ ನಮ್ಮ ಜನ್ಮಭೂಮಿಗಾಗಲೀ, ಯಾರಿಗೇ ಆಗಲೀ ಒಳಿತಾಗುವುದಿಲ್ಲ."

ಅದೇ ದಿನ ಇದೇ ಬಗೆಯ ಇನ್ನೊಂದು ಸಭೆ ಆಲ್ಬರ್ಟ್ ಹಾಲ್‌ನಲ್ಲಿ ನಡೆಯಿತು. ಅದರ ಅಧ್ಯಕ್ಷತೆ ವಹಿಸಿದ್ದುದು ಸ್ವತಃ ಶರತ್‌ಚಂದ್ರರೇ. ಅಲ್ಲಿಯೂ ಅವರು ಈ ಮಾತನ್ನು ಹೇಳಿದ್ದರು: "ಇದಾದ ಬಳಿಕ, ನಮ್ಮ ವಿಷಯದಲ್ಲಿ, ಹಿಂದೂಗಳ ವಿಷಯದಲ್ಲಿ ಇಷ್ಟು ದೊಡ್ಡ ಅನ್ಯಾಯವಾಗಿದ್ದರೂ ಅವರು ತೆಪ್ಪಗಿರುವುದು ಅತ್ಯಂತ ದುಃಖದ ಸಂಗತಿಯಾಗಿದೆ. ಹಿಂದೂಗಳ ಮನಸ್ಸಿನಲ್ಲಿ ತುಂಬಿಕೊಳ್ಳುತ್ತಿರುವ ಈ ವಿಷ, ಈ ಕ್ಷೋಭೆ ಒಂದಲ್ಲ ಒಂದು ದಿನ ವ್ಯಕ್ತ ರೂಪವನ್ನು ಪಡೆದುಕೊಂಡೇ ತೀರುತ್ತದೆ ಎಂಬುದನ್ನು ಅವರೇಕೆ ಅರ್ಥಮಾಡಿಕೊಳ್ಳುತ್ತಿಲ್ಲ ? ಈ ರೀತಿ ಯಾವುದೇ ದೇಶ ನಡೆಯಲಾರದು, ಯಾವುದೇ ಸಮುದಾಯ ಬದುಕಿರಲಾರದು. ಇದು ಅವರಿಗೂ ಜನ್ಮಭೂಮಿಯಲ್ಲವೆ! ಕೊಡುವುದರಿಂದಷ್ಟೇ ಏನೂ ಆಗಲಾರದು; ಸ್ವೀಕರಿಸುವ ಶಕ್ತಿಯೂ ಒಂದು ಶಕ್ತಿಯಲ್ಲವೆ! ಬ್ರಿಟಿಷ್ ಸರ್ಕಾರ ಕೊಟ್ಟಿದ್ದರಿಂದ ತಾವು ಪಡೆದುಕೊಂಡಂತೆಯೇ ಆಯಿತೆಂದು ಇಂದು ಅವರೇನಾದರೂ ಭಾವಿಸಿಕೊಂಡಿದ್ದರೆ, ಇದಕ್ಕಿಂತಲೂ ಘೋರವಾದ ತಪ್ಪು ಇನ್ನೊಂದಿಲ್ಲವೆಂಬುದು ಅವರಿಗೆ ಒಂದು ದಿವಸ ಗೊತ್ತಾಗಿಯೇ ತೀರುತ್ತದೆ. ಸಂಸ್ಕೃತಿಯತ್ತ ಕಣ್ಣಿಡಿ, ಸಾಹಿತ್ಯದತ್ತ ಕಣ್ಣಿಡಿ; ಚಿಕ್ಕ ಮಕ್ಕಳ ಹಾಗೆ ಹರಿತವಾದ ಚೂರಿಗಳನ್ನು ಕೈಯಲ್ಲಿ ಹಿಡಿದುಕೊಂಡು, ಹುಚ್ಚರಾಗಿ ಸಿಕ್ಕಿದ್ದೆಲ್ಲವನ್ನೂ ಕತ್ತರಿಸಿ ಹಾಕುತ್ತ ಅಲೆಯಬೇಡಿ ಎಂದು ನನ್ನ ಮುಸ್ಲಿಮ್ ಬಂಧುಗಳಿಗೆ ಹೇಳಬಯಸುತ್ತೇನೆ."

ಹತ್ತು ವರ್ಷಗಳ ಹಿಂದೆ ಕಲ್ಕತ್ತಾದಲ್ಲಿ ಧಾರ್ಮಿಕ ದಂಗೆಗಳು ನಡೆದಾಗ[1], ಅವರು 'ಇಂದಿನ ಹಿಂದೂ-ಮುಸ್ಲಿಮ್ ಸಮಸ್ಯೆ' ಎಂಬ ಲೇಖನವನ್ನು ಬರೆದಿದ್ದರು. ಅದರಲ್ಲಿ ಅವರು ಹೀಗೆಂದು ಹೇಳಿದ್ದರು: ".....ಭಾರತದ ಸ್ವಾತಂತ್ರ್ಯದಿಂದ ಮುಸಲ್ಮಾನರಿಗೂ ಸ್ವಾತಂತ್ರ್ಯ ದೊರೆಯಬಹುದು. ಈ ಸತ್ಯವನ್ನು ಅವರೆಂದೂ ನಿಷ್ಕಪಟಭಾವದಿಂದ ಅಂಗೀಕರಿಸುವುದಿಲ್ಲ. ತಮ್ಮ ಧರ್ಮದ ಬಗೆಗಿನ ಅವರ ವ್ಯಾಮೋಹ ಕಮ್ಮಿ ಯಾದಂದು ಮಾತ್ರವೇ, ಧರ್ಮ ಯಾವುದಾದರೂ ಆಗಲಿ, ಅದರ ಬಗೆಗಿನ ಅಂಥ ವಿಶ್ವಾಸದ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುವುದಕ್ಕೆ ಸಮನಾದಂಥ ನಾಚಿಕೆಗೇಡಿನ ಸಂಗತಿ ಮನುಷ್ಯನಿಗೆ ಇನ್ನೊಂದಿಲ್ಲ, ಇಷ್ಟು ಭಾರಿ ಬರ್ಬರತೆ ಮತ್ತೊಂದಿಲ್ಲ ಎಂಬುದನ್ನು ಅರಿತುಕೊಂಡಾಗ ಮಾತ್ರವೇ ಅವರು ಇದನ್ನು ಅಂಗೀಕರಿಸಬಹುದು. ಆದರೆ, ಅವರು ಇದನ್ನು ಅರ್ಥಮಾಡಿಕೊಳ್ಳಲು ಇನ್ನೂ ತುಂಬ ಕಾಲ ಬೇಕಾಗುತ್ತದೆ; ಇಡೀ ಜಗತ್ತಿನ ಜನರೆಲ್ಲ ಸೇರಿ ಮುಸಲ್ಮಾನರ ಶಿಕ್ಷಣಕ್ಕೆ ಏರ್ಪಾಟು ಮಾಡದಿದ್ದರೆ, ಎಂದಾದರೊಂದು ದಿನ ಅವರ ಕಣ್ಣು ತೆರೆಯುತ್ತದೆಯೇ ಇಲ್ಲವೇ ಎಂಬ ಬಗ್ಗೆ

1. 1926ರಲ್ಲಿ.

ನನಗೆ ಅನುಮಾನವಿದೆ. ನಾಡಿನ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ನಾಡಿನ ಎಲ್ಲ ಜನರೂ ಟೊಂಕಕಟ್ಟಿ ನಿಲ್ಲುತ್ತಾರೇನು? ಅಮೆರಿಕಾ ತನ್ನ ಸ್ವಾತಂತ್ರ್ಯ ಸಂಗ್ರಾಮವನ್ನು ಆರಂಭಿಸಿದಾಗ, ಆ ದೇಶದ ಅರ್ಧಕ್ಕೂ ಹೆಚ್ಚು ಜನ ಆಂಗ್ಲರ ಪಕ್ಷಪಾತಿಗಳಾಗಿದ್ದರು. ಐರ್ಲೆಂಡಿನ ಬಿಡುಗಡೆಯ ಹೋರಾಟದಲ್ಲಿ ಅಲ್ಲಿಯ ಎಷ್ಟು ಜನ ಭಾಗ ವಹಿಸಿದ್ದರು? ಯಾವ ಬೋಲ್ಷೆವಿಕ್ (ಸಾಮ್ಯವಾದಿ ಅಥವಾ ಕಮ್ಯೂನಿಸ್ಟ್) ಸರ್ಕಾರ ಇಂದು ರಷ್ಯಾದಲ್ಲಿ ಆಡಳಿತ ನಡೆಸುತ್ತಿದೆಯೋ ಅದರ ಪಕ್ಷಪಾತಿ ಗಳಾಗಿದ್ದವರ ಸಂಖ್ಯೆ ಆ ನಾಡಿನ ಜನಸಂಖ್ಯೆಯ ಶೇಕಡಾ ಒಂದರಷ್ಟು ಆಗಿರಲಿಲ್ಲ. ಗುಂಪಿನ ಗಾತ್ರವನ್ನು ನೋಡಿಯೇ ಸತ್ಯ-ಅಸತ್ಯಗಳನ್ನು ತೀರ್ಮಾನಿಸುವುದಿಲ್ಲ; ಅವರ ತಪಸ್ಸನ್ನು, ಅವರ ಶ್ರದ್ಧೆಯನ್ನು ಪರಿಗಣಿಸಿ ತೀರ್ಮಾನಿಸಬೇಕಾಗುತ್ತದೆ. ಈ ಏಕಾಗ್ರ ತಪಸ್ಸಿನ ಭಾರ ನಾಡಿನ ಯುವಕರ ಹೆಗಲಿನ ಮೇಲೆ ಇರುತ್ತದೆ. ಹಿಂದೂ ಮುಸ್ಲಿಮ್ ಏಕತೆಯ ಬಗ್ಗೆ ಯೋಚಿಸುವುದೂ ಅವರ ಕೆಲಸವಲ್ಲ; ಯಾವ ಪ್ರಮುಖ ರಾಜಕೀಯ ಪಕ್ಷಗಳು ಇದೇ ತಂತ್ರ ಅಥವಾ ಕೂಟಕೌಶಲವನ್ನು ಭಾರತದ ಬಿಡುಗಡೆಯ ಏಕೈಕ ಮಾರ್ಗವೆಂದು ಅರಚಿಕೊಳ್ಳುತ್ತಿವೆಯೋ ಅವುಗಳ ಹಿಂದೆ ಜಯಧ್ವನಿಯನ್ನು ಮೊಳಗಿಸುತ್ತ, ಕಾಲಹರಣ ಮಾಡಿಕೊಂಡು ಅಲೆಯುವುದೂ ಅವರ ಕೆಲಸವಲ್ಲ. ಬಿಡುವುದರಿಂದ ಮಾತ್ರವೇ ಪಡೆಯಬಹುದಾಗಿರುವಂಥ ಅನೇಕ ವಸ್ತುಗಳು ಈ ಲೋಕದಲ್ಲಿವೆ. ಹಿಂದೂ-ಮುಸ್ಲಿಮ್ ಏಕತೆಯೂ ಇದೇ ಬಗೆಯದು. ಇದನ್ನು ಸಂಪೂರ್ಣವಾಗಿ ಮರೆತು, ಕಾರ್ಯಮಗ್ನರಾಗುವುದರಿಂದ ಮಾತ್ರವೇ ಒಂದು ದಿವಸ ಈ ಅತ್ಯಂತ ದುಷ್ಪ್ರಾಪ್ಯವಾಗಿರುವ ನಿಧಿಯ ದರ್ಶನ ನಮಗೆ ಆದೀತು. ಏಕೆಂದರೆ, ಆಗ ಮಿಲನ ಅಥವಾ ಒಂದುಗೂಡಿಕೆ ಎಂಬುದು ಯಾರೋ ಒಬ್ಬರ ಪ್ರಯತ್ನ ಮಾತ್ರವಾಗಿರದೆ, ಎರಡೂ ಕಡೆಯವರ ಹಾರ್ದಿಕ ಮತ್ತು ಸಂಪೂರ್ಣ ಇಚ್ಛೆಯ ಫಲವಾಗಿರುತ್ತದೆ."

ಢಾಕಾದಲ್ಲಿ ಮುಸ್ಲಿಮ್ ಸಾಹಿತ್ಯ ಸಮಾಜದ ಹತ್ತನೆಯ ವಾರ್ಷಿಕ ಅಧಿವೇಶನದ ಅಧ್ಯಕ್ಷ ಸ್ಥಾನದಿಂದಲೂ[1] ಅವರು ಮತ್ತೊಮ್ಮೆ ತಮ್ಮ ದೃಷ್ಟಿಕೋನವನ್ನು ಸ್ಪಷ್ಟಪಡಿಸಿದರು: "ವಾಜಿದ್ ಅಲೀ ಸಾಹಬ್ ಅವರು ಅತ್ಯಂತ ಹೃದಯ ವಿದ್ರಾವಕವಾದ ಮಾತನ್ನು ಇಲ್ಲಿ ಹೇಳಿದ್ದಾರೆ. ವಾಸ್ತವವಾಗಿ ಈ ವಿಕ್ಷೋಭೆ ಎರಡು ವಿಷಮ ಅನಾತ್ಮೀಯ ಸಂಸ್ಕೃತಿಗಳ ಸಂಘರ್ಷದ ಫಲವೇ ಆಗಿದೆ. ಇದಕ್ಕಾಗಿ ಆಕ್ಷೇಪಿಸುವುದು ಅಥವಾ ದುಃಖಿಸುವುದು ವ್ಯರ್ಥ. ಹಿಂದೂಗಳು ಮುಸಲ್ಮಾನರನ್ನು ಅರ್ಥಮಾಡಿಕೊಳ್ಳುವುದಿಲ್ಲವೆಂಬ ಕಾರಣಕ್ಕಾಗಿ ನಾಲ್ಕೂ ಕಡೆಗಳಲ್ಲಿ ವಿಷಾದದ ಗೋಳುದನಿ ಮೊಳಗುತ್ತಿದೆ. ಆದರೆ ಇದೂ ಸಾಧ್ಯ: ಅವರ ಭಾರತೀಯ ಆಚಾರ-ವಿಚಾರಗಳು ಹಾಗೂ ಸಮಾಜ ಮತ್ತು ಸಂಸ್ಕೃತಿಗಳು ಅವರ ಮನಸ್ಸನ್ನು ಕಿರಿದಾಗಿಸಿರಬಹುದು, ದೃಷ್ಟಿಯನ್ನು ಮುಚ್ಚಿಬಿಟ್ಟಿರಬಹುದು. ಅವರು ತಮ್ಮ ಪರಿಧಿಯನ್ನು ದಾಟಿ ಬರಲಾರದ ಹೋಗಿದ್ದಾರೆ. ತಮ್ಮ ಅಭಿಜಾತ್ಯತೆ ಅಥವಾ ಶ್ರೇಷ್ಠತೆಯ ಹೆಮ್ಮೆಯಲ್ಲಿಯೇ ಚಿರಕಾಲದಿಂದ ಮುಳುಗಿ ಬಿಟ್ಟಿರುವಂಥ, ಪರಾಜಯದ ಪ್ರಾಚೀನ ರೋಷ ಇಂದಿಗೂ ದುರ್ಜೇಯವಾಗಿರುವ

1. ಜುಲೈ 31, 1936.

ಮನೋವೃತ್ತಿಯನ್ನುಳ್ಳಂಥ, ಯುದ್ಧ ಮಾಡದೆ ಸೂಜಿಯ ಮೊನೆಯಷ್ಟು ಭೂಮಿಯನ್ನು ಕೊಡಲು ಕೊನೆಯೇ ಇಲ್ಲದಷ್ಟು ಆಕ್ಷೇಪಗಳನ್ನೆತ್ತುವಂಥ ವ್ಯಕ್ತಿಗಳ ಬುದ್ಧಿಯನ್ನು ಮುಕ್ತವೆಂದು ಹೇಳುವುದು ಕಷ್ಟ. ಮುಕ್ತನಾಗಿರುವವನು ಚಲಿಸುವುದಿಲ್ಲ; ಚಲಿಸಲಾರ. ಅವನು ಜಡನಾಗಿರುತ್ತಾನೆ. ಈ ಆತ್ಮ ಕೇಂದ್ರಿತ - ಪರವಿಮುಖ ಜಡಬುದ್ಧಿಯ ಪರಿವೇಶವೇ ಮುಸಲ್ಮಾನರನ್ನು ತಮ್ಮ ಜನ್ಮಭೂಮಿಯಲ್ಲಿಯೇ ಪರದೇಶಿಗಳನ್ನಾಗಿಸಿಬಿಟ್ಟಿದೆ. ಭಾರತದ ಮಣ್ಣಿನ ಸಾರದಿಂದ ರಸಪೂರ್ಣವಾಗಿಯೂ ಅವರ ಮನಸ್ಸು ಆರ್ದ್ರವಾಗುವಂತೆ ತೋರುವುದಿಲ್ಲ.

"ಈ ವಿಕ್ಷೋಭೆ ಎರಡು ವಿಷಮ-ಅನಾತ್ಮೀಯ ಸಂಸ್ಕೃತಿಗಳ ಸಂಘರ್ಷದ ಫಲ ಎಂದು ಹೇಳಿದ್ದೇನಲ್ಲ, ಅದರ ಬಗ್ಗೆ ಆಕ್ಷೇಪವನ್ನೆತ್ತುವುದು ವ್ಯರ್ಥ. ನಾವಿಬ್ಬರೂ ಪರಸ್ಪರ ನೆರೆಹೊರೆಯವರು. ನಮ್ಮ ಆಕಾಶ, ಗಾಳಿ, ನೀರು ಎಲ್ಲ ಒಂದೇ, ಮಾತೃಭಾಷೆಯೂ ಒಂದೇ ಎಂದು ನಾವು ಒಪ್ಪುತ್ತೇವೆ. ಇಷ್ಟಾಗಿಯೂ, ಹೋರಾಟ ಎಷ್ಟು ಕಠೋರವಾಗಿದೆಯೆಂದರೆ ಅದರ ಬಗ್ಗೆ ಆಕ್ಷೇಪವನ್ನೆತ್ತುವುದೂ ವ್ಯರ್ಥ ಎಂಬಂತಾಗಿದೆ. ನಿಜವಾಗಿಯೂ ಸಮಸ್ತ ಹಿಂದೂ-ಮುಸಲ್ಮಾನರ ಮನೋಭಾವ ಇದೇ ಆಗಿದ್ದರೆ, ಮನುಷ್ಯನಿಗೆ ಇದಕ್ಕಿಂತಲೂ ಹೆಚ್ಚಿನ ದುರ್ಗತಿ ಸಾಧ್ಯವಿಲ್ಲವೆಂದು ಹೇಳಬಯಸುತ್ತೇನೆ. ರವೀಂದ್ರನಾಥರ ಬುದ್ಧಿಯೂ ಜಡಬುದ್ಧಿಯೇನು? ಅವರ ಮನಸ್ಸು ಮುಕ್ತವಾಗಿರಲಿಲ್ಲವೆ? - ಎಂದು ನಾನು ಕೇಳಬಯಸುತ್ತೇನೆ. ಈ ಮಾತು ಸತ್ಯವೆಂದಾದರೆ ವಾಜಿದ್ ಅಲೀ ಸಾಹೇಬರ ಈ ಭಾಷೆ ಎಲ್ಲಿಂದ ಬಂತು? ಸಹಜ ಸುಂದರ ರೀತಿಯಲ್ಲಿ ಅನಾಯಾಸವಾಗಿ ತಮ್ಮ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸುವ ಶಕ್ತಿಯನ್ನು ಅವರಿಗೆ ಕೊಟ್ಟವರಾರು? ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ರವೀಂದ್ರರಿಗೆ ಋಣಿಯಾಗಿಲ್ಲದಿರುವಂಥ ಯಾವನಾದರೂ ಲೇಖಕ ಅಥವಾ ಸಾಹಿತ್ಯಸೇವಿ ಈ ಯುಗದಲ್ಲಿ ಇದ್ದಾನೆಯೆ? ಸಾಹಿತ್ಯ ಎಂಬುದು ಧರ್ಮ-ಗ್ರಂಥವಲ್ಲ; ನೀತಿಯನ್ನು ಹೇಳಿಕೊಡುವ ಪುಸ್ತಕವೂ ಅಲ್ಲ. ಅದು ತನ್ನ ವಿಶಾಲ ಪರಿಧಿಯ ಒಳಗೆ ತನ್ನ ಮಾಧುರ್ಯದಿಂದ ಎಲ್ಲವನ್ನೂ ತನ್ನದಾಗಿಸಿ ಇರಿಸಿಕೊಂಡಿದೆ. ಆದ್ದರಿಂದಲೇ ಇಂದೂ ಯಾರಿಗೂ ಅದರ ಸತ್ಯವನ್ನು - ಅಂದರೆ, ಸಾಹಿತ್ಯ ಯಾವುದು, ರಸವಸ್ತು ಯಾವುದು ಎಂಬುದನ್ನು - ಬೆಟ್ಟುಮಾಡಿ ತೋರಿಸುವುದು ಸಾಧ್ಯವಾಗಿಲ್ಲ. ಈ ವಿಷಯದಲ್ಲಿ ಅದೆಷ್ಟು ತರ್ಕ ನಡೆದಿದೆ? ಅದೆಷ್ಟು ಭಿನ್ನಾಭಿಪ್ರಾಯ ವ್ಯಕ್ತವಾಗಿದೆ? ಈ ಅನಪೇಕ್ಷಿತ ವ್ಯವಧಾನಕ್ಕೆ ಸಂಬಂಧಿಸಿದಂತೆ ಮಿಜಾತುರ್ ರಹಮಾನ್ ಸಾಹೇಬರು 'ಬುಲ್‌ಬುಲ್' ಮಾಸಪತ್ರಿಕೆಯ ಜ್ಯೇಷ್ಠ ಸಂಚಿಕೆಯಲ್ಲಿನ ತಮ್ಮ ಲೇಖನದಲ್ಲಿ ಒಂದೆಡೆ ನಿಷ್ಕರುಣೆಯಿಂದ ಹೀಗೆಂದಿದ್ದಾರೆ: ಶರತ್‌ಚಂದ್ರರು ತಮ್ಮ ಬಹಳಷ್ಟು ಕಾದಂಬರಿಗಳಲ್ಲಿ ಅಲ್ಲಿಲ್ಲಿ ಕೊಟ್ಟಿರುವ ಮುಸ್ಲಿಮ್ ಸಮಾಜದ ಚಿತ್ರಗಳು ಮುಸ್ಲಿಮ್ ಸಮಾಜದ ಬಹು ಉತ್ಕೃಷ್ಟ ಶ್ರೇಣಿಯ ಜನರ ಚಿತ್ರಗಳಲ್ಲಿ. ನನ್ನ ಪ್ರಶ್ನೆ ಇಷ್ಟು: ಮೇಲು ದರ್ಜೆಯ ಅಥವಾ ಕೆಳದರ್ಜೆಯ ಹೆಣ್ಣು-ಗಂಡು ಪಾತ್ರಗಳ ಆಧಾರದ ಮೇಲೆಯೇ ಕಾದಂಬರಿಯ ಶ್ರೇಷ್ಠತೆ ಅಥವಾ ಕನಿಷ್ಠತೆ, ಅದರ ಒಳ್ಳೆಯತನ ಅಥವಾ ಕೆಟ್ಟತನ ನಿರ್ಧಾರವಾಗುತ್ತದೆಯೇ? ಇದೇ ಅವರ ಅಭಿಪ್ರಾಯವಾಗಿದ್ದಲ್ಲಿ, ನನ್ನ ಅವರ

ಅಭಿಪ್ರಾಯಗಳು ಹೊಂದುವುದೇ ಇಲ್ಲ. ಹೊಂದಾಣಿಕೆ ಇಲ್ಲದಿದ್ದರೆ ಚಿಂತೆಯಿಲ್ಲ. ಆದರೆ, ಶರತ್‌ಚಂದ್ರರು ಹಿಂದೂ ಸಮಾಜದ ವಿವಿಧ ಕುಂದುಕೊರತೆಗಳನ್ನು ಮತ್ತು ಸಮಸ್ಯೆಗಳನ್ನು ಎತ್ತಿಕೊಂಡು ಬರೆದಿರುವ ಎಲ್ಲ ಕಥೆ-ಕಾದಂಬರಿಗಳನ್ನು ಹಾಗೂ ಪ್ರತೀಕಾರದ ಉದ್ದೇಶದಿಂದ ತಮ್ಮ ಸಮಾಜಕ್ಕೆ ಬಾರಿಸಿರುವ ಚಾವಟಿಯ ಏಟುಗಳನ್ನು - ಆ ಸದಿಚ್ಛಾ ಪ್ರಚೋದಿತ ನಿಷ್ಠುರ ಕರಾಘಾತಗಳನ್ನು - ಮುಸ್ಲಿಮ್ ಸಮಾಜವೂ ಅಮ್ಲಾನ ವದನದಿಂದ ಸ್ವೀಕರಿಸುತ್ತದೆ ಎಂದು ಅವರು ಉಪಸಂಹಾರ ಭಾಗದಲ್ಲಿ ಹೇಳಿದ್ದಾರೆ. ಬಂಗಾಳದ ಕಥಾಸಾಹಿತ್ಯ ಸಮ್ರಾಟರನ್ನು ನಾನು ಒತ್ತಾಯ ಪೂರ್ವಕವಾಗಿ ಕೇಳುವುದಿಷ್ಟು: ಒಮ್ಮೆ ಪರೀಕ್ಷಿಸಿ ನೋಡಿ. ಈ ಮಾತನ್ನು ನಾನು ಒತ್ತಿ ಹೇಳಬಯಸುತ್ತೇನೆ.

"ಅಂದು ಜಗನ್ನಾಥ ಸಭಾಂಗಣದಲ್ಲಿ, ನನ್ನನ್ನು ಅಭಿನಂದಿಸಿದ್ದಕ್ಕೆ ಉತ್ತರವಾಗಿ ಹೇಳಿದ ಮಾತುಗಳಲ್ಲಿ ನಾನು ಈ ಪ್ರಶ್ನೆಗೆ ಉತ್ತರವನ್ನು ಕೊಟ್ಟಿದ್ದೇನೆ. ಹಾರ್ದಿಕ ಶುಭಾಶಯಗಳನ್ನು ಈ ಜನ ಹೇಗೆ ಸ್ವೀಕರಿಸುತ್ತಾರೆ ಎಂಬುದನ್ನು ನಾನು ಈ ಲೋಕವನ್ನು ಬಿಟ್ಟು ತೆರಳುವುದಕ್ಕೆ ಮೊದಲು ನೋಡಿಯೇ ಹೋಗುತ್ತೇನೆ. ಇರಲಿ, ಅದು ಏನು ಬೇಕಾದರೂ ಆಗಲಿ. ಮನುಷ್ಯ ತನ್ನ ಇಚ್ಛೆಯನ್ನು ಮಾತ್ರವೇ ವ್ಯಕ್ತಪಡಿಸಬಲ್ಲ. ಆದರೆ ಅದನ್ನು ಪರಿಪೂರ್ಣವಾಗಿಸುವ ಹೊಣೆ ಇನ್ನೊಬ್ಬ ವ್ಯಕ್ತಿಯನ್ನು ಅವಲಂಬಿಸಿರುತ್ತದೆ. ಆತ ಮಾತು ಮತ್ತು ಮನಸ್ಸುಗಳಿಗೆ ಅಗೋಚರನಾಗಿರುತ್ತಾನೆ. ಅಂದು ಭೋಜನಕೂಟದಲ್ಲಿ ಘನತೆವೆತ್ತ ಗವರ್ನರು ಅವರೂ ನನಗೆ ಇದೇ ಪ್ರಶ್ನೆಯನ್ನು ಹಾಕಿದ್ದರು. ಎರಡೂ ಸಮುದಾಯಗಳ ಆಶೀರ್ವಾದದೊಂದಿಗೆ ನನ್ನ ಆಶಯಗಳನ್ನು ಕಾರ್ಯರೂಪಕ್ಕೆ ತರಲು ನಾನು ಇಚ್ಛಿಸುತ್ತೇನೆ ಎಂದು ಉತ್ತರಕೊಟ್ಟಿದ್ದೆ. ಶಾಬ್ದಿಕ ಅರ್ಥದಲ್ಲಿ ಎರಡೂ ಸಮುದಾಯ ಗಳ ಆಶೀರ್ವಾದವನ್ನಲ್ಲ, ಈ ಎರಡೂ ಸಮುದಾಯಗಳಿಗೆ ಸೇರಿದ ಸಾಹಿತ್ಯಸೇವಿಗಳ ಆಶೀರ್ವಾದವನ್ನು ನಾನು ಬಯಸುತ್ತೇನೆ. ಯಾವ ಭಾಷೆಯಲ್ಲಿ, ಇಷ್ಟು ದಿನಗಳವರೆಗೆ ಸಾಹಿತ್ಯ ಸೇವೆಯನ್ನು ಮಾಡಿಕೊಂಡು ಬಂದಿದ್ದೇನೋ ಅದರ ಮೇಲೆ ಅಕಾರಣವಾಗಿ ಅನಾಚಾರವಾಗುವುದನ್ನು ನಾನು ಸಹಿಸಲಾರೆ. ನನ್ನಂತೆ ವಾಸ್ತವವಾಗಿ ಸಾಹಿತ್ಯಸಾಧನೆಯನ್ನು ಮಾಡಿರುವ ಯಾರೂ - ಅವರು ಹಿಂದೂಗಳಾಗಿರಲಿ ಅಥವಾ ಮುಸಲ್ಮಾನರಾಗಲಿ - ಈ ಅನಾಚಾರವನ್ನು ಸಹಿಸಲಾರರೆಂದು ನನ್ನ ಮನಸ್ಸು ಸಂಪೂರ್ಣವಾಗಿ ನಂಬಿದೆ. ಸೌಂದರ್ಯ ಮತ್ತು ಮಾಧುರ್ಯಗಳಿಗಾಗಿ ಕೆಲವೊಂದು ಬದಲಾವಣೆಗಳನ್ನು ಮಾಡಬೇಕಾಗಿದ್ದರೆ - ಹೀಗೆ ಅನೇಕ ಸಲ ನಡೆದಿದೆ - ಈ ಕೆಲಸವನ್ನು ನಿಧಾನವಾಗಿ ಈ ಜನರೇ ಮಾಡಿಕೊಳ್ಳುತ್ತಾರೆಯೇ ಹೊರತು, ಬೇರೆ ಯಾರೂ ಮಾಡುವುದಿಲ್ಲ. ಹಾಗೆ ಮಾಡುವುದು ಹಿಂದೂತ್ವದ ಒಳಿತಿಗಾಗಿ ಅಲ್ಲ, ಮುಸಲ್ಮಾನತ್ವದ ಒಳಿತಿಗಾಗಿಯೂ ಅಲ್ಲ; ಮಾತೃಭಾಷೆ ಮತ್ತು ಸಾಹಿತ್ಯಗಳ ಒಳಿತಿಗಾಗಿ ಮಾತ್ರ. ಇದು ಸಾಮಾನ್ಯವಾಗಿ ನಾನು ಸಲ್ಲಿಸುವ ಏಕೈಕ ಪ್ರಾರ್ಥನೆ."

ಈ ಭಾಷಣದಲ್ಲಿ ಅವರು ಗವರ್ನರ್ ಅವರೊಂದಿಗೆ ನಡೆದ ಮಾತುಕತೆಗಳ ವಿಚಾರವನ್ನು ಉಲ್ಲೇಖಿಸಿದ್ದಾರೆ. ಇದನ್ನೇ ನೆಪವಾಗಿಸಿಕೊಂಡು, ಕಲ್ಕತ್ತಾದಲ್ಲಿ ಅವರ ಬಗ್ಗೆ ತುಂಬ ಅಪವಾದಗಳನ್ನು ಹರಡಲಾಯಿತು. ಧಾರ್ಮಿಕ ವಿಭಜನೆಯ ಆ

ದಿನಗಳಲ್ಲಿ ಈ ದೋಷ ದೂರವಾದ ಘಟನೆಯೂ ವಿದ್ವೇಷದ ರೂಪವನ್ನು ಪಡೆದುಕೊಂಡುಬಿಟ್ಟಿತು. ಇನ್ನು ಮುಂದೆ ಮುಸ್ಲಿಮ್ ಸಮಾಜವನ್ನು ವಸ್ತುವಾಗಿಸಿಕೊಂಡು ಸಾಹಿತ್ಯರಚನೆ ಮಾಡುವುದಾಗಿ ಢಾಕಾದಲ್ಲಿ ಘಟಿಕೋತ್ಸವದ ಸಂದರ್ಭದಲ್ಲಿ ಶರತ್‌ಚಂದ್ರರು ಹೇಳಿಬಿಟ್ಟಿದ್ದಾರೆಂದು ಸುದ್ದಿ ಹರಡಿತು. ಕಾದಂಬರಿಗಳನ್ನು ಮಾತ್ರವೇ ಬರೆದು ಬಹುವಾಂಛಿತವಾದ ಡಾಕ್ಟೋರೇಟ್ ಪದವಿಯನ್ನು - ಅದೂ ರಹಮಾನ್ ಸಾಹೇಬರ ಕೈಯಿಂದ - ಪಡೆದು, ಇನ್ನು, ಮುಂದೆ ಮುಸ್ಲಿಮ್ ಬಂಧುಗಳನ್ನು ಕುರಿತೇ ಕಾದಂಬರಿಗಳನ್ನು ಬರೆಯುವುದಾಗಿ ಈ ಬ್ರಾಹ್ಮಣವಟು ಆವೇಶದಿಂದ ಹೇಳಿಬಿಟ್ಟಿದ್ದಾನೆ. ಅಯ್ಯೋ ಶರತ್‌ಚಂದ್ರ, ನಿನ್ನ ಪ್ರಾಣಶಕ್ತಿಯ ಈ ದಾರಿದ್ರ್ಯವನ್ನು ಕಂಡು ನಿಜವಾಗಿಯೂ ನಿನ್ನ ಮೇಲೆ ಕರುಣೆ ತೋರಬೇಕೆಂದು ಮನಸ್ಸಾಗುತ್ತಿದೆ - ಎಂದೆಲ್ಲ ವ್ಯಂಗ್ಯದ, ವಿದ್ರೂಪದ ಮಾತುಗಳನ್ನು ಬರೆದರು.

'ಶನಿವಾರೇರ್ ಚಿಠಿ' ಪತ್ರಿಕೆ ತೀವ್ರ ಟೀಕೆ ಮಾಡುತ್ತ ಹೀಗೆಂದು ಬರೆಯಿತು: "ಶರತ್‌ಚಂದ್ರರ ಸಾಹಿತ್ಯದ ವೈಶಿಷ್ಟ್ಯವೆಂದರೆ ಅವರ ಅಪಾರ ಅನುಭವ. ಬಾಲೀಗಂಜ್‌ನ ಮನೆಯ ಗೋಡೆಯನ್ನು ದಾಟಿ ಬಂಗಾಳದ ಮುಸ್ಲಿಮ್ ಸಮುದಾಯದ ಬಗೆಗಿನ ಅನುಭವವನ್ನು ಗಳಿಸಿಕೊಳ್ಳುವುದು ಬಾಗ್‌ಬಾಜಾರಿನಲ್ಲಿ ಕುಳಿತುಕೊಂಡು ಲಂಡನ್ನಿನ ಪತ್ರಿಕಾವರದಿಗಾರನಾಗುವುದಕ್ಕಿಂತಲೂ ಹೆಚ್ಚು ಕಷ್ಟದ ಕೆಲಸ. ಶರತ್‌ಚಂದ್ರರು ಹೀಗೆ ಮಾಡಕೂಡದು ಅಂಥ ವಯಸ್ಸೂ ಅವರದಲ್ಲ."

ಅಷ್ಟೇ ಅಲ್ಲ ಭಾಷೆಯನ್ನು ಹದಗೆಡಿಸಿದ ಆರೋಪವನ್ನು ಅದು ಅವರ ಮೇಲೆ ಹೊರಿಸಿತು.

ಆದರೆ, ಎಂದಿನಂತೆ, ಈ ಯಾವ ಅಪವಾದವೂ ಶರತ್‌ಚಂದ್ರರ ಮೇಲೆ ಯಾವುದೇ ಪ್ರಭಾವವನ್ನು ಬೀರಲಿಲ್ಲ. ತಮ್ಮ ಅರುವತ್ತೊಂದನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ, ಈ ಅಪವಾದಗಳ ಬಗ್ಗೆ ಉಲ್ಲೇಖಿಸುತ್ತ ಅವರು ಹೀಗೆಂದಿದ್ದರು: "ಮುಸ್ಲಿಮರು ನಮ್ಮ ನೆರೆಹೊರೆಯವರು. ಬಂಗಾಳಿ ಭಾಷೆ ಅವರ ಮಾತೃಭಾಷೆಯೂ ಹೌದು. ನಿಜವಾಗಿಯೂ ನಾವು ಸಹಾನುಭೂತಿಯಿಂದ ಅವರೊಡನೆ ಮಾತನಾಡಿದರೆ, ಅವರು ನಮ್ಮ ಮಾತುಗಳನ್ನು ಕೇಳಲು ಬಾಧ್ಯರಾಗುತ್ತಾರೆ. ಅವರೂ ಮನುಷ್ಯರು." ಅವರೆಂದೂ ಮುಸ್ಲಿಮರನ್ನು ದ್ವೇಷಿಸುವಂಥವರಾಗಿರಲಿಲ್ಲ. ಸಾಹಿತ್ಯದಲ್ಲಿ ಅವರು ಸತತವಾಗಿ ಜಾತಿವಾದವನ್ನು ವಿರೋಧಿಸುತ್ತಲೇ ಇದ್ದರು. ಅವರು ಹೀಗೆಂದು ಹೇಳಿದ್ದರು: "ನನ್ನ 'ಮಹೇಶ' ಕಥೆಯನ್ನು ಮುಸ್ಲಿಮರು ಅದೆಷ್ಟು ಪ್ರೀತಿಸುತ್ತಾರೆ! ಆದರೆ, ನಾನು ಅವರನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನು ಬರೆದಿದ್ದೆನೇ ? ಈಗಲೂ ಅವರಿಗೆ ಪ್ರಚಾರ ಕೊಡಲು ಕಾದಂಬರಿ ಬರೆಯುತ್ತೇನೆಯೆ ? ಸಾಹಿತ್ಯ ಮನುಷ್ಯನಿಗೆ ಸಂಬಂಧಿಸಿದ್ದು. ಅದು ಯಾವುದೇ ಸಮುದಾಯಕ್ಕಾದರೂ ಸಂಬಂಧಿಸಿರಬಹುದು. ಎಲ್ಲ ಸಮುದಾಯಗಳಿಗೆ ಸೇರಿದ ಮನುಷ್ಯರನ್ನು ಕುರಿತು ಬರೆಯಬೇಕು. ಆದರೆ, ನನ್ನ ಶರೀರ ಈಗ ತುಂಬ ಅಸ್ವಸ್ಥವಾಗಿಬಿಟ್ಟಿದೆ. ಏನು ಮಾಡಬಲ್ಲೆ ಎಂಬುದು ನನಗೇ ಗೊತ್ತಿಲ್ಲ. ನಾನು ಯಾರಿಗೂ ಹೆದರುವುದಿಲ್ಲ. ಆರೋಗ್ಯವಾಗಿದ್ದರೆ, ನಾನು ಕೊಟ್ಟಿರುವ ಮಾತನ್ನು ನಡೆಸಿಕೊಡುತ್ತೇನೆ."

ಸಾರ್ವಜನಿಕ ಸಭೆಯೊಂದರಲ್ಲಿ ಮುಸ್ಲಿಮ್ ಸಜ್ಜನನೊಬ್ಬನ ಸೂಚನೆಯಂತೆ, "ಈ ಸಲ ಮುಸ್ಲಿಮ್ ಸಮಾಜದ ಬಗ್ಗೆ ಕಾದಂಬರಿಯನ್ನು ರಚಿಸುತ್ತೇನೆಂದು ನಾನು ಹೇಳಿರುವುದು ಸರಿಯಾಗಿಯೇ ಇದೆ" ಎಂದು ಘೋಷಿಸಿದ್ದರು. ಕಾಜಿ ಅಬ್ದುಲ್ ವದ್ದೂ ಅವರಂಥ ಮುಸ್ಲಿಮ್ ಸಾಹಿತಿಗಳೊಂದಿಗೂ ಅವರು ಈ ಬಗ್ಗೆ ವಿಚಾರ ವಿನಿಮಯ ನಡೆಸಿದ್ದರು. ಬರೆಯುವುದಕ್ಕೆ ಮೊದಲು ಮುಸ್ಲಿಮ್ ಸಮುದಾಯದ ಬದುಕಿನ ರೀತಿ-ನೀತಿಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಯಸಿದ್ದರು. ಕಾಜಿ ಸಾಹೇಬರ ವತಿಯಿಂದ ಸಹಕಾರದ ಭರವಸೆಯನ್ನು ಪಡೆದಿದ್ದ ಅವರು ಸ್ವಲ್ಪಮಟ್ಟಿಗೆ ಟಿಪ್ಪಣಿಗಳನ್ನೂ ತಯಾರಿಸಿಕೊಂಡಿದ್ದರು. ಢಾಕಾದಲ್ಲಿ ಇದ್ದಾಗಲೇ ಮೊದಲಿನಿಂದ ಕೊನೆಯವರೆಗೂ ಕಥಾನಕದ ರೂಪ ರೇಷೆಗಳನ್ನು ಕುರಿತು ಚಿಂತಿಸಿದ್ದರು.

ಆಗ ಚಾರು ಬಾಬು ಅವರು ಹೀಗೆಂದಿದ್ದರು: "ನಿಮ್ಮನ್ನು ಬಿಟ್ಟರೆ ಬೇರೆ ಯಾರೂ ಈ ಕೆಲಸವನ್ನು ಮಾಡಲಾರರು. ಬೇಗ ಚೇತರಿಸಿಕೊಂಡು ನಮ್ಮ ಸಾಹಿತ್ಯದ ಈ ಕೊರತೆಯನ್ನು ದೂರಮಾಡಿ. ಇದು ನಮ್ಮ ಇಚ್ಛೆಯೂ ಹೌದು."

ಆದರೆ, ಸಾವಿನ ಹೆಜ್ಜೆಯ ಸಪ್ಪಳಗಳು ತುಂಬ ಹತ್ತಿರದಲ್ಲಿಯೇ ಕೇಳಿಸತೊಡಗಿದ್ದುವು. ಅವರು ತಮ್ಮ ಮಾತಿನಂತೆ ನಡೆದುಕೊಳ್ಳಲಾರದೆ ಹೋದರು. ಬಾಳು ಅವರ ಜೊತೆಯಲ್ಲಿ ಸಹಕರಿಸಿದ್ದರೆ, ಕಲೆಯ ದೃಷ್ಟಿಯಿಂದಲ್ಲದಿದ್ದರೂ, 'ಶೇಷ ಪ್ರಶ್ನೆ'ಯಂತೆ ವೈಚಾರಿಕ ದೃಷ್ಟಿಯಿಂದ ಸುಂದರವಾದ ಇನ್ನೊಂದು ಕೃತಿಯನ್ನು ಖಂಡಿತವಾಗಿಯೂ ಕೊಡುತ್ತಿದ್ದರು. ಅವರ ಈ ಸಂಕಲ್ಪ ಮೇಲಿನಿಂದ ಹೊರಿಸಿದ್ದಾಗಿರದೆ, ಆಂತರ್ಯದ ನಂಬಿಕೆಯ ಫಲವೇ ಆಗಿತ್ತು. ಬಹಳ ದಿನಗಳ ಹಿಂದೆ ಅವರು ಬಿಹಾರ್ ಷರೀಫ್‌ಗೆ ಹೋಗಿದ್ದರು. ಭಾಗಲ್ಪುರದ ವಕೀಲ ಚಂಡೀ ಚರಣಘೋಷ್ ಅವರು ಆಗ ಅವರೊಡನೆ ಇದ್ದರು. ಇಬ್ಬರೂ ಅಲ್ಲಿಯ ದೊಡ್ಡ ಮಸೀದಿಯನ್ನು ನೋಡಲು ಹೋದರು. ಒಳಗೆ ಕಾಲಿರಿಸುತ್ತಿದ್ದಂತೆಯೇ, ವಿನೋದ ಪ್ರಿಯರಾಗಿರುತ್ತಿದ್ದಂಥ ಶರತ್‌ಚಂದ್ರರು ಒಮ್ಮೆಗೇ ಗಂಭೀರರಾಗಿಬಿಟ್ಟರು ಹಾಗೂ ಮತ್ತೆ ಮತ್ತೆ 'ಅಲ್ಲಾಹ್-ಅಲ್ಲಾಹ್' ಎಂದು ಕೂಗತೊಡಗಿದರು. ಚಂಡೀ ಬಾಬುಗಳು ಮುಗುಳ್ನಕ್ಕು ಕೇಳಿದರು: "ಏನು ಮುಸಲ್ಮಾನರಾಗಿ ಬಿಟ್ಟಿರೇನು ?"

ಉತ್ತರ ದೊರೆಯಿತು: "ನೋಡಿ, ಚಂಡೀಚರಣ್, ಎಲ್ಲರೂ ಭಗವಂತನನ್ನು ನೆನೆಯುತ್ತಾರೆ. ಯಾವ ಹೆಸರಿನಿಂದ ಬೇಕಾದರೂ ಕರೆಯಿರಿ. ಅಲ್ಲಾಹ್ ಎಂದು ಬೇಕಾದರೂ ಕರೆಯಿರಿ ಅಥವಾ ಬೇರೆ ಏನು ಬೇಕಾದರೂ ಕರೆಯಿರಿ. ಒಳಕ್ಕೆ ಬಂದ ಮೇಲೆ ನನಗೆ ತುಂಬ ಸಂತೋಷವೆನ್ನಿಸುತ್ತಿದೆ."

ಒಮ್ಮೆ ಇಬ್ಬರು ಮುಸಲ್ಮಾನ ದಾರಿಹೋಕರು ಪಾಣಿತ್ರಾಸದ ಅವರ ಮನೆಯ ಹತ್ತಿರದಿಂದ ಹಾದು ಹೋಗುತ್ತಿದ್ದರು. ಆಗ ನಮಾಜಿನ ಸಮಯವಾಗಿಬಿಟ್ಟಿತ್ತು. ಅವರು ಅಲ್ಲಿಯೇ ನಿಂತರು. ಕೈಕಾಲು ತೊಳೆದುಕೊಳ್ಳುವುದಕ್ಕಾಗಿ ಅವರು ಶರತ್‌ಚಂದ್ರರನ್ನು ಒಂದು ಚೆಂಬು ನೀರು ಕೊಡುವಂತೆ ಕೇಳಿದರು. ಅವರು ಕುಡಿಯಲು ನೀರು ಕೇಳುತ್ತಿದ್ದಾರೆಂದು ಶರತ್‌ಚಂದ್ರರು ಭಾವಿಸಿದರು. ಅವರು ನೀರನ್ನು ಕೊಟ್ಟರು. ಆ ನೀರಿನಿಂದ ಅವರಿಬ್ಬರೂ ಕೈಕಾಲು ತೊಳೆದುಕೊಂಡು, ನಮಾಜು ಮಾಡುವ ಸಲುವಾಗಿ ಒಂದು ಮರದ ಕೆಳಗೆ ಸಿದ್ಧತೆ ನಡೆಸತೊಡಗಿದರು.

ಆಗ ಶರತ್‌ಚಂದ್ರರು ಅವರನ್ನು ಒಳಕ್ಕೆ ಕರೆದು ತಮ್ಮ ಮನೆಯ ಪಶ್ಚಿಮದ ಅಂಗಳದಲ್ಲಿ ಕುಳಿತು ನಮಾಜು ಮಾಡಬಹುದೆಂದು ತಿಳಿಸಿದರು. ಅವರು ಅಲ್ಲಿ ಒಂದು ರತ್ನಗಂಬಳಿಯನ್ನೂ ಹಾಸಿಸಿದರು. ಅಷ್ಟೇ ಅಲ್ಲ, ನಮಾಜು ಮುಗಿದ ಬಳಿಕ, ಇತರ ಅತಿಥಿಗಳಂತೆಯೇ ಅವರನ್ನೂ ಸತ್ಕರಿಸಿದರು. ಅವರಿಗೆ ಊಟ-ತಿಂಡಿಗಳನ್ನೆಲ್ಲ ಒದಗಿಸಿ, ರಾತ್ರಿ ಅಲ್ಲಿಗೇ ತಂಗಬಹುದೆಂದೂ ಹೇಳಿದರು.

ಈ ವಿಷಯದ ಬಗ್ಗೆ ಜಹಾನ್-ಆರಾ ಚೌಧರಿ ಅವರಿಗೆ ಬರೆದ ಒಂದು ಪತ್ರವೂ ತುಂಬ ಮಹತ್ವದ್ದಾಗಿದೆ.[1] ಬಂಗಾಳದಲ್ಲಿ ಮುಸ್ಲಿಮ್ ಸಾಹಿತಿಗಳ ಸಂಖ್ಯೆಯೇನೂ ಕಮ್ಮಿಯಾಗಿರಲಿಲ್ಲ. ಆದರೆ, ಹಿಂದೂ ಸಾಹಿತಿಗಳು ಎಷ್ಟು ಪ್ರಮಾಣದಲ್ಲಿ ಕಂಡು ಬರುತ್ತಾರೋ ಆ ಪ್ರಮಾಣದಲ್ಲಿ ಮುಸ್ಲಿಮ್ ಸಾಹಿತಿಗಳು ಕಂಡುಬರುವುದಿಲ್ಲ. ಈ ಸಮಸ್ಯೆಯ ವಿವಿಧ ಮುಖಗಳನ್ನು ಚರ್ಚಿಸುತ್ತ ಅವರು ಹೀಗೆಂದು ಬರೆದಿದ್ದಾರೆ: "ಕೆಲವು ದಿವಸಗಳ ಹಿಂದೆ ನನ್ನ ಒಬ್ಬ ಹೊಸ ಮುಸ್ಲಿಮ್ ಗೆಳೆಯರು ಈ ವಿಷಯದ ಬಗ್ಗೆ ಕ್ಷೋಭೆಯನ್ನು ವ್ಯಕ್ತಪಡಿಸಿದ್ದರು. ಸ್ವತಃ ಅವರು ಸಾಹಿತ್ಯಸೇವಿಗಳಾಗಿದ್ದರು; ಪಂಡಿತ ಅಧ್ಯಾಪಕರಾಗಿದ್ದರು. ಧಾರ್ಮಿಕ ಮಲಿನತೆ ಇನ್ನೂ ಅವರ ಹೃದಯವನ್ನು ಮತ್ತು ದೃಷ್ಟಿಯನ್ನು ಕಲುಷಿತಗೊಳಿಸಿರಲಿಲ್ಲ. ಅವರು ಹೀಗೆಂದಿದ್ದರು: 'ಈ ಎರಡು ಸಂಪ್ರದಾಯಗಳವರು ಒಂದೇ ನಾಡಿನಲ್ಲಿ, ಒಂದೇ ವಾತಾವರಣದಲ್ಲಿ, ಅಕ್ಕಪಕ್ಕದಲ್ಲಿ ನೆರೆಹೊರೆ ಎಂಬಂತೆ ವಾಸಿಸುತ್ತಿದ್ದಾರೆ. ಹುಟ್ಟಿದಂದಿನಿಂದಲೂ ಒಂದೇ ಭಾಷೆಯನ್ನು ಮಾತನಾಡುತ್ತಿದ್ದಾರೆ. ಇಷ್ಟಾಗಿಯೂ, ಎಷ್ಟೊಂದು ತುಂಡರಿಸಲ್ಪಟ್ಟಂತೆ ಹಾಗೂ ಪರಸ್ಪರ ಪರಕೀಯರೆಂಬಂತೆ ಆಗಿಬಿಟ್ಟಿದ್ದಾರೆಂದರೆ, ಇದನ್ನು ಕುರಿತು ಯೋಚಿಸಿದರೆ ಆಶ್ಚರ್ಯಚಕಿತರಾಗುತ್ತೇವೆ. ಪ್ರಾಪಂಚಿಕ ಪ್ರಯೋಜನಗಳಿಗಾಗಿ ಹಾಗೂ ಬದುಕಿ-ಬಾಳುವ ಉದ್ದೇಶಗಳಿಗಾಗಿ ಇವರ ನಡುವೆ ಹೊರಗಿನ ಕೊಳುಕೊಡೆ ಮಾತ್ರವಿದೆ, ಆಂತರಿಕವಾದ ಕೊಳುಕೊಡೆ ಎಂಬುದು ಸುತರಾಂ ಇಲ್ಲವೇ ಇಲ್ಲ ಎಂದು ಹೇಳುವುದು ಸುಳ್ಳೇನೂ ಆಗಲಾರದು. ಏಕೆ ಹೀಗಾಯಿತು ಎಂಬುದರ ಬಗ್ಗೆ ಸಂಶೋಧನೆ ನಡೆಸುವ ಅಗತ್ಯವಿಲ್ಲ. ಆದರೆ, ಇಂದು ವಿಚ್ಛೇದಕ್ಕೆ ಇರುವ ಅರ್ಥವಾದರೂ ಏನು? ಈ ದುಃಖಮಯ ಅಂತರವನ್ನು ಕೊನೆಗಾಣಿಸಲೇ ಬೇಕಾಗಿದೆ. ಇಲ್ಲವಾದರೆ, ಯಾರಿಗೂ ಒಳಿತಾಗುವುದಿಲ್ಲ."

"ನಾನೆಂದೆ: 'ಈ ಮಾತನ್ನು ನಾನು ಒಪ್ಪುತ್ತೇನೆ. ಆದರೆ, ದುಸ್ಸಾಧ್ಯವಾಗಿರುವ ಇದನ್ನು ಸಾಧಿಸಲು ಯಾವ ಉಪಾಯವನ್ನು ಆಲೋಚಿಸಿದ್ದೀರಿ?'

"ಅವರೆಂದರು: 'ಸಾಹಿತ್ಯ ಒಂದೇ ಇದಕ್ಕಿರುವ ಉಪಾಯ, ನೀವು ನಮ್ಮನ್ನು ನಿಮ್ಮತ್ತ ಎಳೆದುಕೊಂಡುಬಿಡಿ. ಸ್ನೇಹದೊಂದಿಗೆ, ಸಹಾನುಭೂತಿಯೊಂದಿಗೆ ನಮ್ಮ ವಿಚಾರಗಳನ್ನು ನಿರೂಪಿಸಿ. ಆದರೆ, ಹಿಂದೂಗಳಿಗಾಗಿ ಹಿಂದೂ ಸಾಹಿತ್ಯವನ್ನು ಸೃಷ್ಟಿಸಬೇಡಿ. ಮುಸ್ಲಿಮ್ ಓದುಗರ ವಿಚಾರವನ್ನೂ ಸ್ವಲ್ಪ ಗಮನದಲ್ಲಿಟ್ಟುಕೊಂಡಿರಿ. ಹೊರಗಿನ ಅಂತರ ಎಷ್ಟೇ ದೊಡ್ಡದಾಗಿ ಬೇಕಾದರೂ ಕಾಣಿಸಲಿ, ಇಬ್ಬರ ನರ-ನಾಡಿಗಳಲ್ಲಿಯೂ ಒಂದೇ ಬಗೆಯ ಆನಂದ, ಒಂದೇ ಬಗೆಯ ವೇದನೆ ಹರಿಯತೊಡಗುತ್ತದೆ ಎಂಬುದನ್ನು ನೀವು ಕಾಣುತ್ತೀರಿ.'

---

1. ಜನವರಿ 26, 1936.

"ನಾನೆಂದೆ: 'ಈ ವಿಚಾರ ನನಗೆ ಗೊತ್ತಿದೆ. ಆದರೆ, ಅನುರಾಗದೊಂದಿಗೆ ಪಿರಾಗ, ಹೊಗಳಿಕೆಯೊಂದಿಗೆ ತೆಗಳಿಕೆ, ಒಳ್ಳೆಯ ವಿಚಾರಗಳೊಂದಿಗೆ ಕೆಟ್ಟ ವಿಚಾರಗಳು ಕಥಾಸಾಹಿತ್ಯದ ಅನಿವಾರ್ಯ ಅಂಗವೇ ಆಗಿರುತ್ತವೆ. ಆದರೆ, ಇದರ ಬಗ್ಗೆ ನೀವು ಆಲೋಚನೆ ಮಾಡುವುದಿಲ್ಲ, ಕ್ಷಮೆ ತೋರುವುದಿಲ್ಲ. ಬಹುಶಃ ಅದಕ್ಕೆ ಎಂಥ ದಂಡ ಅಥವಾ ಶಿಕ್ಷೆಯನ್ನು ವಿಧಿಸಬೇಕೆಂದು ಯೋಚಿಸುತ್ತೀರೆಂದರೆ ಅದನ್ನು ಕಲ್ಪಿಸಿ ಕೊಂಡರೇ ಮೈ ಥರಥರ ಕಂಪಿಸತೊಡಗುತ್ತದೆ. ಆದ್ದರಿಂದ, ಈಗ ಏನಿದೆಯೋ ಅದು ನಿರಾಪದವಾಗಿದೆ.'

"ಆ ಬಳಿಕ ಇಬ್ಬರೂ ಸುಮ್ಮನಿದ್ದರು. ಕೊನೆಗೆ ನಾನು ಹೇಳಿದೆ: 'ನಾನು ಹೇಡಿಗಳೆಂದೂ, ನೀವು ವೀರರೆಂದೂ ಬಹುಶಃ ನಿಮ್ಮಲ್ಲಿ ಯಾರಾದರೂ ಹೇಳಿಬಿಡುತ್ತೀರಿ. ಹಿಂದೂಗಳ ಲೇಖನಿಯಿಂದ ಬರುವ ನಿಂದೆಯನ್ನು ನೀವು ಸಹಿಸಿಕೊಳ್ಳುವುದಿಲ್ಲ; ಇದಕ್ಕೆ ನೀವು ಸೇಡು ತೀರಿಸಿಕೊಳ್ಳುವುದೂ ಅತಿರೇಕದ ಮಟ್ಟದಲ್ಲಿ ಎಂಬುದನ್ನೂ ನಾನು ಒಪ್ಪುತ್ತೇನೆ. ನಿಮ್ಮನ್ನು ವೀರರೆಂದು ಕರೆಯಲು ವೈಯಕ್ತಿಕವಾಗಿ ನನಗೆ ಅಭ್ಯಂತರವೇನೂ ಇಲ್ಲ. ಆದರೆ, ವೀರತ್ವದ ಬಗೆಗಿನ ನಿಮ್ಮ ನಿಲುವು ಎಂದಾದರೂ ಬದಲಾಗದಿದ್ದರೆ, ಎಲ್ಲರಿಗಿಂತಲೂ ಹೆಚ್ಚು ಕ್ಷತಿಗ್ರಸ್ತ ರಾಗಿರುವವರು ನೀವೇ ಎಂಬುದನ್ನು ನೀವು ಕಂಡುಕೊಳ್ಳುತ್ತೀರಿ ಎಂದೂ ನಾನು ಹೇಳಬಯಸುತ್ತೇನೆ.'

"ನನ್ನ ಆ ತರುಣ ಮಿತ್ರರ ಮುಖದಲ್ಲಿ ವಿಷಣ್ಣತೆಯ ಭಾವ ತುಂಬಿಕೊಂಡಿತು. 'ಹಾಗಾದರೆ, ಈ ಬಗೆಯ ಅಸಹಕಾರ ಚಿರಕಾಲದ ವರೆಗೆ ಮುಂದುವರಿಯ ಬೇಕೇನು ?' ಎಂದು ಕೇಳಿದರು.

ನಾನೆಂದೆ: " 'ಇಲ್ಲ, ಚಿರಕಾಲದ ವರೆಗೆ ಮುಂದುವರಿಯುವುದಿಲ್ಲ. ಏಕೆಂದರೆ, ಸಾಹಿತ್ಯ ಸೇವೆಯಲ್ಲಿ ತೊಡಗಿರುವವರಿಗೆ ತಮ್ಮದೇ ಆದ ಬೇರೊಂದು ಜಾತಿ, ಸಂಪ್ರದಾಯ ಎಂಬುದು ಇರುವುದಿಲ್ಲ. ಹೃದಯದಲ್ಲಿ ಅವರೆಲ್ಲ ಒಂದೇ ಆಗಿರುತ್ತಾರೆ. ಆ ಸತ್ಯವನ್ನು ಕಂಡುಕೊಂಡು, ಈ ಅನಪೇಕ್ಷಿತವಾದ ಧಾರ್ಮಿಕ ಭೇದವನ್ನು ಇಂದು ನೀವುಗಳೇ ಕೊನೆಗಾಣಿಸಬೇಕು.'

"ಗೆಳೆಯನೆಂದ: 'ಇನ್ನು ಮುಂದೆ ಈ ದಿಕ್ಕಿನಲ್ಲಿ ಪ್ರಯತ್ನ ನಡೆಸುತ್ತೇನೆ.'

"ನಾನೆಂದೆ: 'ನಡೆಸಿ. ನಿಮ್ಮ ಪ್ರಯತ್ನದ ತರುವಾಯ, ಪ್ರತಿ ದಿನವೂ ಇದಕ್ಕೆ ಭಗವಂತನ ಆಶೀರ್ವಾದವಿದೆಯೆಂಬ ಅನುಭವ ನಿಮಗಾಗುತ್ತದೆ.' "

## 26

ತಲೆನೋವು ತುಂಬ ತೊಂದರೆ ಕೊಡುತ್ತಿತ್ತು. ಪರೀಕ್ಷೆ ಮಾಡಿದ ವೈದ್ಯರುಗಳು ಇದು 'ನ್ಯೂರಾಲಾಜಿಕಲ್' ತೊಂದರೆ ಎಂದು ಹೇಳಿದ್ದರು. ಇದಕ್ಕೆ 'ಅಲ್ಟ್ರಾವಯೊಲೆಟ್' ಕಿರಣಗಳ ಚಿಕಿತ್ಸೆಯನ್ನು ಕೊಡಲಾಯಿತು. ಆದರೆ, ಯಾವುದೂ ಫಲಕಾರಿಯಾಗಲಿಲ್ಲ. ಬಹುಶಃ ಕನ್ನಡಕದಿಂದಾಗಿ ಈ ತೊಂದರೆ ಉದ್ಭವಿಸಿರ ಬೇಕೆಂದು ಯೋಚಿಸಿದರು. ಆದರೆ, ಅದನ್ನು ಬದಲಾಯಿಸಿದರೂ ಏನೂ ಪ್ರಯೋಜನ ವಾಗಲಿಲ್ಲ. ಜ್ವರ ಬರ ತೊಡಗಿತು. ಎಷ್ಟೇ ಪ್ರಯತ್ನಮಾಡಿದರೂ

ಅದು ಇಳಿಯಲೇ ಇಲ್ಲ; ಹೆಚ್ಚುತ್ತಲೇ ಹೋಯಿತು. ಕೊನೆಗೆ ಹಾಸಿಗೆ ಹಿಡಿಯಲೇ ಬೇಕಾಗಿ ಬಂತು. ಅವರನ್ನು ಪರೀಕ್ಷಿಸುವುದಕ್ಕಾಗಿ ಕಲ್ಕತ್ತಾದ ದೊಡ್ಡ ದೊಡ್ಡ ವೈದ್ಯರೆಲ್ಲ ಬಂದರು. "ಇದೆಲ್ಲ ಮಲೇರಿಯಾದಿಂದ ಉಂಟಾದ ತೊಂದರೆ" ಎಂದು ಅವರು ಹೇಳಿದರು.

ಈಗ ಮಲೇರಿಯಾಕ್ಕೆ ಚಿಕಿತ್ಸೆ ನಡೆಯತೊಡಗಿತು. ಕ್ವಿನೈನ್ ಮಾತ್ರೆಗಳನ್ನು ನುಂಗಬೇಕಾಗಿ ಬಂತು. ಇಂಜೆಕ್ಷನ್ನುಗಳನ್ನೂ ಕೊಡಲಾಯಿತು. ಇದರ ನೋವಿನ ಬಗ್ಗೆ ಉಲ್ಲೇಖಿಸುತ್ತ, ಅವರು ಒಂದು ಪತ್ರದಲ್ಲಿ ಹೀಗೆಂದು ಬರೆದರು: "ನೆನ್ನೆ ಡಾಕ್ಟರ್ ವಿಧಾನ್ ಅವರು ಚುಚ್ಚು ಮದ್ದು ಕೊಟ್ಟಿದ್ದಾರೆ. ಶರೀರದ ಯಾವ ಅಂಗದ ಮೇಲೆ ಭಾರ ಹಾಕಿ, ಆರಾಮವಾಗಿ ಕುಳಿತುಕೊಳ್ಳುತ್ತೇವೆಯೋ ಅದೇ ಜಾಗಕ್ಕೆ ಚುಚ್ಚಿದ್ದಾರೆ. ಓಹ್ ಅದೆಂಥ ನೋವು. ಉಪ್ಪಿನ ಪೊಟ್ಟಣ ಮತ್ತು ಮುರಿದಿರುವ ಹರಿಕೇನ್ ಲಾಟೀನನ್ನು ಹಿಡಿದುಕೊಂಡು ಬೆಳಗಿನಿಂದಲೂ ಕುಳಿತಿದ್ದೇನೆ."[1]

ಇಷ್ಟಾಗಿಯೂ ಜ್ವರ ತನ್ನ ಪಟ್ಟನ್ನು ಬಿಡಲೇ ಇಲ್ಲ. ಪರಿಸ್ಥಿತಿ ದಿನೇ ದಿನೇ ಹದಗೆಡುತ್ತ ಹೋಯಿತು. ಡಾಕ್ಟರುಗಳ ಒಂದು ತಂಡ ಅವರನ್ನು ಪರೀಕ್ಷಿಸಲು ಮತ್ತೆ ಆಗಮಿಸಿತು. ಈ ಸಲ ಇದು 'ಪೀಕೋಲಾಈ' ಎಂದು ಅವರು ತೀರ್ಮಾನಿಸಿದರು.

ಚಿಕಿತ್ಸೆ ನಡೆಸಿದ ಬಳಿಕ ಜ್ವರವೂ ಕಡಿಮೆಯಾಯಿತು. ನಿಧಾನವಾಗಿ ಆರೋಗ್ಯವೂ ಸುಧಾರಿಸತೊಡಗಿತು. ಈ ಸ್ಥಿತಿಯಲ್ಲಿ ಹವಾ-ಬದಲಾವಣೆ ತುಂಬ ಲಾಭದಾಯಕ ವಾಗುತ್ತದೆಂದು ವೈದ್ಯರು, ಗೆಳೆಯರು ಮತ್ತು ಬಂಧುಗಳು ಒತ್ತಾಯಪಡಿಸ ತೊಡಗಿದರು. ಆದರೆ, ಬೇರೆಲ್ಲಿಗಾದರೂ ಹೊರಡುವುದಕ್ಕೆ ಮೊದಲೇ ಮತ್ತೆ ಜ್ವರ ಆಕ್ರಮಿಸಿಕೊಂಡಿತು. ಯಾವಾಗಲೂ ಅದೂ 99 ಡಿಗ್ರಿಯಷ್ಟೆ ಇರುತ್ತಿತ್ತು. ಡಾ. ರಮೇಶ್ ಚಂದ್ರ ಮಜೂಮದಾರ್ ಅವರಿಗೆ ತಮ್ಮ ಎಂದಿನ ಸಹಜ-ಪರಿಹಾಸ್ಯ ಪ್ರಿಯ ಶೈಲಿಯಲ್ಲಿ ಹೀಗೆಂದು ಬರೆದರು[2]:"ಇತ್ತ ನನ್ನ ಜ್ವರ ಗುಣವಾಗುತ್ತಿಲ್ಲ. ಡಾ. ವಿಧಾನ ಚಂದ್ರ ರಾಯ್ ಮೊದಲಾದವರಿಗೆ ರೋಗ ಯಾವುದೆಂದು ಪತ್ತೆ ಮಾಡಲಾಗುತ್ತಿಲ್ಲ:

'ಬಂದಿಲ್ಲಿ ಕುಳಿತಿಹವು ಬಗೆಬಗೆಯ ಬ್ರಾಂಡಿನಾ ಶೀಶೆಗಳು
ರಾಶಿಯೊಟ್ಟಿಹುದಿಲ್ಲಿ ಬಗೆಬಗೆಯ ಅಳತೆಯಾ ಡಬ್ಬಿಗಳು
ರೋಗವನ್ನು ಮೀರಿ ಬೀಸುತಿದೆ ಬಿರುಗಾಳಿಯದು ಬಿಡದೆ
ಜರ್ಜರವಾಗಿಸುತೆ ತಾನಿಂದು ನನ್ನ ಈ ಅಸ್ಥಿಯನು-
ಡಾಕ್ಟರುಗಳೆಂದಿಹರು ಬದಲಿಸಿರಿ ಈಗ ರೋಗಿಗೆ ಹವೆಯನು.'

"ಆದ್ದರಿಂದ ಒಂದೆರಡು ದಿವಸಗಳಲ್ಲಿಯೇ ಜಾಗ ಬದಲಾಯಿಸಬೇಕೆಂಬ ಇಚ್ಛೆಯಿದೆ - ನನಗಲ್ಲ, ಇತರರಿಗೆ. ಮನಸ್ಸಿನಲ್ಲಿಯೇ ಹೀಗೆಂದು ಹೇಳಿಕೊಳ್ಳುತ್ತೇನೆ: 'ಹೇ ಸಂಜೆಯ ಹೊತ್ತಿನ ಸಿತ್ತದ ಗೆಳೆಯನಾಗಿರುವ 99 ಡಿಗ್ರಿಯ ಜ್ವರವೆ! ನೀನು ಇನ್ನೂ ಸ್ವಲ್ಪ ಪ್ರಸನ್ನನಾಗು. ಯಾವ ಕಾರ್ಯಕ್ಕೆ ನೀನು ಅಸ್ಥಿಭಾರವನ್ನು

1. ಸಪ್ಟೆಂಬರ್ 18, 1936.
2. ಡಿಸೆಂಬರ್ 26, 1936 (11 ಪೌಷ 1343).

ಹಾಕಿದ್ದೀಯೋ ಅದನ್ನು ಬೇಗಬೇಗ ಮಾಡಿ ಮುಗಿಸಿಬಿಡು. ನನಗಾದರೂ ಬಿಡುವು ದೊರೆಯಲಿ."

ಕೊನೆಗೆ ಅವರು ದೇವಘರ್ ಎಂಬಲ್ಲಿಗೆ ಹೋದರು. ಮಾವ ಸುರೇಂದ್ರನಾಥರ ತಮ್ಮ ಸತ್ಯೇಂದ್ರನಾಥರು ಅಲ್ಲಿ ಸಿವಿಲ್ ಸರ್ಜನ್ ಆಗಿದ್ದರು. ಅವರು ತಂಗುವುದಕ್ಕಾಗಿ ಹರಿದಾಸ ಚಟ್ಟೋಪಾಧ್ಯಾಯ ಅವರು ತಮ್ಮ ಮನೆಯನ್ನು ಬಿಟ್ಟುಕೊಟ್ಟಿದ್ದರು. ಕೆಲವು ತಿಂಗಳ ಕಾಲ ಅವರು ಅಲ್ಲಿ ತಂಗಿದ್ದರು. ಹಿಂದಿರುಗುವಾಗ ಅವರ ಆರೋಗ್ಯ ಸಾಕಷ್ಟು ಸುಧಾರಿಸಿತ್ತು.

ತಮ್ಮ ಈ ಪ್ರವಾಸದ ಅನುಭವಗಳನ್ನು ಆಧಾರವಾಗಿಟ್ಟುಕೊಂಡು ಅವರು 'ದೇವಘರ್‌ನ ನೆನಪುಗಳು' ಎಂಬ ಹೆಸರಿನಲ್ಲಿ ಪ್ರಬಂಧವೊಂದನ್ನು ಬರೆದಿದ್ದಾರೆ. ಅದರಲ್ಲಿ ಅವರ ಕವಿ ಹೃದಯವೇ ಮಾತನಾಡುತ್ತಿರುವಂತೆ ತೋರುತ್ತದೆ. ಅವರ ವಿಪುಲ ಸಾಹಿತ್ಯದಲ್ಲಿ ಪಶುಪಕ್ಷಿಗಳ ಬಗೆಗಿನ ಅವರ ಉತ್ಕಟ ಪ್ರೀತಿಯ ಪರಿಚಯ ಅಷ್ಟಾಗಿ ಸಿಕ್ಕುವುದಿಲ್ಲ.[1] ಈ ಲೇಖನದಲ್ಲಿ ಆ ಪ್ರೀತಿ ಸಾಕಾರ ರೂಪವನ್ನು ಪಡೆದಿರುವಂತೆ ಕಾಣುತ್ತದೆ. ರಾಜಕೀಯವಾಗಿ ಅದು 1935ರ ಕಾಯ್ದೆಯ ಮೇರೆಗೆ ಕಾಂಗ್ರೆಸ್ ಪಕ್ಷ ಅಧಿಕಾರವನ್ನು ಸ್ವೀಕರಿಸಲು ಒಪ್ಪಿಕೊಂಡಿದ್ದಂಥ ಕಾಲ. ಆಗ ಅಧಿಕಾರ ಸ್ಥಾನಗಳಿಗಾಗಿ ನಡೆದ ಕಚ್ಚಾಟದ ಬಗೆಗಿನ ಉಲ್ಲೇಖವೂ ಈ ಪ್ರಬಂಧದಲ್ಲಿ ಬಂದಿದೆ. ಈ ಬಗ್ಗೆ ಅವರು ಹೀಗೆಂದಿದ್ದಾರೆ: "ಖಿನ್ನನಾಗಿ ಮನಸ್ಸಿನಲ್ಲಿಯೇ ಹೀಗೆಂದು ಯೋಚಿಸುತ್ತಿದ್ದೆ: ಕಾಂಗ್ರೆಸ್ ಪಕ್ಷದ ಈ ಪಂಡರು ಅಥವಾ ಮಹಂತರಲ್ಲಿ ಮಂತ್ರಿಯಾಗಬೇಕೆಂಬ ಆಸೆ ಅದೆಷ್ಟು ತೀವ್ರವಾಗಿದೆ. ಇದೆಂಥ ಅಧಿಕಾರಲೋಲುಪತೆ ಅಥವಾ ನಿಸ್ಪೃಹತೆಯ ಆವರಣದಲ್ಲಿ ಅದನ್ನು ಅಡಗಿಸಿಡಲು ಅದೆಂಥ ಕೌಶಲವನ್ನು ಮೆರೆಯುತ್ತಿದ್ದಾರೆ! ಕಾನೂನನ್ನು ರೂಪಿಸಿದವರು ಕೂಡ ಒಂದು ಮಾತನ್ನೂ ಕೇಳುತ್ತಿಲ್ಲ. ತಮಗೆ ಅನುಕೂಲವಾಗುವಂತೆ ಕಾನೂನಿಗೆ ವ್ಯಾಖ್ಯಾನ ಮಾಡಲು ಅದೆಂಥ ಹೋರಾಟವನ್ನು ನಡೆಸಿದ್ದಾರೆ; ಅದೆಂಥ ಯುದ್ಧವನ್ನೇ ಹೂಡಿದ್ದಾರೆ! ಈ ಕಾಂಗ್ರೆಸ್ಸಿಗರು ಸಿದ್ಧಮಾಡಿ ತೋರಿಸ ಹೊರಟಿರುವುದು ಇದನ್ನು - ಕಾನೂನನ್ನು ರೂಪಿಸಿದವರ ಉದ್ದೇಶವೇ ಒಳ್ಳೆಯದಾಗಿರಲಿಲ್ಲ! ಇನ್ನು ಯಾವುದನ್ನು ನಾವು ವಿಡಂಬನೆ ಎನ್ನಬಹುದು ?"

ಬರೆಯುವುದು ಬಹುಶಃ ನಿಂತೇ ಹೋಗಿತ್ತು. ಆದರೆ, 'ನಿಮ್ಮ ಆತ್ಮಕಥೆಯನ್ನು ಬರೆದುಕೊಡಿ' ಎಂದು ಪ್ರಕಾಶಕರು ಅವರನ್ನು ಒತ್ತಾಯಪಡಿಸುತ್ತಲೇ ಇದ್ದರು. ಅದಕ್ಕೆ ಅವರು ಹೀಗೆಂದಿದ್ದರು: "ನಾನು ಆತ್ಮಕಥೆಯನ್ನು ಬರೆಯಲಾರೆ. ಏಕೆಂದರೆ ನಾನು ಅಂಥ ಸತ್ಯವಾದಿಯೂ ಅಲ್ಲ; ಆತ್ಮಕಥೆಯ ಲೇಖಕನಿಗೆ ಇರಬೇಕಾದಂಥ ಧೈರ್ಯವೂ ನನಗಿಲ್ಲ."

ರವೀಂದ್ರರೂ ಒಮ್ಮೆ ಅವರೊಂದಿಗೆ ಹೀಗೆಂದಿದ್ದರಂತೆ: "ಶರತ್! ನಿನ್ನ ಆತ್ಮಕಥೆಯನ್ನು ಬರೆದು ಬಿಡು."

ಇದಕ್ಕೆ ಅವರು ಕೊಟ್ಟಿದ್ದ ಉತ್ತರ ಇದು: "ಗುರುದೇವರೆ, ನಾನು ಇಷ್ಟು ದೊಡ್ಡ

1. ನೋಡಿ: ಅಧ್ಯಾಯ 20.

ಮನುಷ್ಯನಾಗುತ್ತೇನೆ ಎಂದುಕೊಂಡಿದ್ದರೆ ನಾನು ಬೇರೆ ಬಗೆಯ ಬಾಳನ್ನೇ ಬದುಕುತ್ತಿದ್ದೆ."

ಟಾಲ್‌ಸ್ಟಾಯ್ ಮಾಡಿದಂತೆ ಶರತ್‌ಚಂದ್ರರೂ ತಮ್ಮ ದಿನಚರಿಯನ್ನು ಬರೆದಿಟ್ಟಿದ್ದರೆ ಅದೆಷ್ಟು ಚೆನ್ನಾಗಿರುತ್ತಿತ್ತು. ಬಹುಶಃ ಅದು ಅವರ ಕೃತಿಗಳಲ್ಲಿಯೇ ತುಂಬ ಶ್ರೇಷ್ಠ ಕೃತಿಯಾಗುತ್ತಿತ್ತು; ಮನುಷ್ಯನ ರಹಸ್ಯಮಯ ಅಂಧಕೂಪದೊಳಕ್ಕೆ ಇಳಿಯುವ ಹಾದಿಯನ್ನು ತೋರುವ ಬೆಳಕಿನ ಕಿರಣವಾಗುತ್ತಿತ್ತು!.... ತಾವು ಅಲೆಮಾರಿ ಜೀವನವನ್ನು ನಡೆಸಿದ ಬಗ್ಗೆ, ಹೆಂಡಕುಡುಕರಾಗಿದ್ದ ಬಗ್ಗೆ, ವೇಶ್ಯೆಯರ ಸಂಗದಲ್ಲಿ ಕಾಲಕಳೆದಿದ್ದರ ಬಗ್ಗೆ, ನಾನಾ ಬಗೆಯ ವಾಸ್ತವಿಕ ಹಾಗೂ ಅವಾಸ್ತವಿಕ ಪ್ರೇಮದ ಜಂಜಾಟಗಳಲ್ಲಿ ಸಿಲುಕಿಕೊಂಡಿದ್ದುದರ ಬಗ್ಗೆ ತಮ್ಮ ಬಾಳಿನ ಸಂಜೆಯಲ್ಲಿ ಅವರಿಗೆ ವಿಷಾದ ಉಂಟಾಗಿತ್ತೆ? ಆದರೆ, ಇದೆಲ್ಲದರ ಬಗ್ಗೆ ತಾವು ನಿರ್ಲಿಪ್ತರಾಗಿದ್ದ ಬಗೆಯೂ ಅವರು ಹೇಳಿಕೊಂಡಿದ್ದಾರೆ. 'ಶ್ರೀಕಾಂತ' ಕಾದಂಬರಿಯ ಎರಡನೆಯ ಭಾಗದಲ್ಲಿ ಗುರುದೇವ ರಾಜಲಕ್ಷ್ಮಿಯೊಂದಿಗೆ ಹೀಗೆಂದು ಹೇಳುತ್ತಾನೆ: "ಯಾವ ಅಪರಾಧ ಒಬ್ಬ ವ್ಯಕ್ತಿಯನ್ನು ಮಣ್ಣುಗೂಡಿಸುತ್ತದೆಯೋ, ಅಂಥದೇ ಅಪರಾಧವನ್ನು ಎಸಗಿಯೂ ಇನ್ನೊಬ್ಬ ವ್ಯಕ್ತಿ ಪಾರಾಗಿ ಅನಿರ್ಬಂಧಿತವಾಗಿ ಓಡಾಡಿಕೊಂಡಿರುತ್ತಾನೆ. ಹೀಗಾಗಿ, ಎಲ್ಲ ವಿಧಿ ನಿಷೇಧಗಳೂ ಎಲ್ಲರನ್ನೂ ಒಂದೇ ಹಗ್ಗದಲ್ಲಿ ಬಂಧಿಸಲಾರವು."

ತಾವು ಏನೆಲ್ಲ ಮಾಡಿದ್ದರೂ, ಕೀಳು ಕೆಲಸವನ್ನು ಮಾತ್ರ ಮಾಡಿಲ್ಲವೆಂದು ಅವರು ಒಮ್ಮೆ ಹೇಳಿಯೂ ಇದ್ದರು. ಕೀಳು ಕೆಲಸ ಮಾಡಿರುವಂಥ - ಅಂದರೆ, ಮನಸ್ಸನ್ನು ಮಲಿನವಾಗಿಸಿಕೊಂಡಿರುವಂಥ ವ್ಯಕ್ತಿ ತನ್ನ ಕೃತಿಗಳ ಮೂಲಕ ಇತರರ ಮನಸ್ಸಿನ ಮೇಲೆ ಇಷ್ಟೊಂದು ಪ್ರಭಾವ ಬೀರಲು ಸಾಧ್ಯವೆ? ಹಾಗಿದ್ದರೆ, ಅವರೇಕೆ ಹೆದರುತ್ತಿದ್ದರು? ಶ್ರೀಕಾಂತ ಇದಕ್ಕೆ ಉತ್ತರವನ್ನು ಕೊಟ್ಟಿದ್ದಾನೆ. ರಾಜಲಕ್ಷ್ಮಿಯನ್ನು ಬಿಟ್ಟು ಹೊರಟು ಹೋಗಿದ್ದಕ್ಕೆ ಕಾರಣವೇನೆಂಬುದನ್ನು ತಿಳಿಸುತ್ತ ಅವನು ಹೀಗೆಂದು ಹೇಳಿದ್ದಾನೆ: "ಪಂಡಿತರ ಪಾಠಶಾಲೆಯ ಆ ರಾಜಲಕ್ಷ್ಮಿಯನ್ನು ಈ ಲೋಕ ಮನಃಪೂರ್ವಕವಾಗಿ ಮಾನ್ಯಮಾಡುವುದಿಲ್ಲ. ಅದು ಮಾನ್ಯಮಾಡುವುದು ಪ್ರಸಿದ್ಧಳಾದ ಪಟ್ನಾದ ಪ್ಯಾರೀ ಬಾಯಿಯನ್ನು ಮಾತ್ರವೇ. ಹೀಗಿರುವಾಗ, ಲೋಕದ ಕಣ್ಣಿನಲ್ಲಿ ನಾನೆಷ್ಟು ಕೀಳಾಗಿ ಬಿಡುತ್ತೇನೆಂಬುದು ನಿನಗೆ ಗೊತ್ತಾಗುವುದಿಲ್ಲವೆ?"

"ಆದರೆ, ಇದನ್ನು ನಿಜವಾಗಿಯೂ ಕೀಳಾಗುವುದೆಂದು ಯಾರೂ ಭಾವಿಸುವುದಿಲ್ಲ."

"ದೇವರ ಕಣ್ಣಿನಲ್ಲಿ ಅಲ್ಲದಿರಬಹುದು. ಆದರೆ, ಲೋಕದ ಕಣ್ಣಾದರೂ ಉಪೇಕ್ಷಿಸಬಹುದಾದ ವಸ್ತುವಲ್ಲ, ಲಕ್ಷ್ಮಿ."

ಈ ಲೋಕದ ಕಣ್ಣುಗಳಿಗೆ ಅವರು ಹೆದರಿಕೊಳ್ಳುತ್ತಿದ್ದರು. ಏಕೆಂದರೆ, ಹತ್ತಾರು ವ್ಯಕ್ತಿಗಳ ಅಂತರ್ಯದಿಂದ ಬೆಳಕನ್ನು ಪಡೆಯುವ ದೃಷ್ಟಿಯೂ ಭಗವಂತನ ದೃಷ್ಟಿಯೇ ಎಂದೂ, ಅದನ್ನು ಒಪ್ಪದೆ ಇರುವುದು ನ್ಯಾಯುವಲ್ಲವೆಂದೂ ಅವರು ಭಾವಿಸಿದ್ದರು. ಆದ್ದರಿಂದಲೇ ಅವರು ಹೆದರುತ್ತಿದ್ದರು. ಟಾಲ್‌ಸ್ಟಾಯ್ ಅಭಿಜಾತ ವರ್ಗಕ್ಕೆ ಸೇರಿದವರಾಗಿದ್ದರು, ಶ್ರೀಮಂತರಾಗಿದ್ದರು. ಬಡವ, ಅಲೆಮಾರಿ ಶರತ್‌ಚಂದ್ರರು

ಮಾಡಿದ್ದಂಥ ಕೆಲಸಗಳನ್ನೇ ಅವರೂ ತಮ್ಮ ಯೌವನದಲ್ಲಿ ಮಾಡಿದ್ದರು. ಅವರೂ ದೊಡ್ಡವರಾದ ಮೇಲೆ, ತಮ್ಮ ಯೌವನ ಕಾಲದ ಚಟುವಟಿಕೆಗಳ ಬಗ್ಗೆ ಚರ್ಚಿಸಲು ಇಷ್ಟಪಡುತ್ತಿರಲಿಲ್ಲ. ಯಾರಾದರೂ ಈ ಬಗ್ಗೆ ಕೇಳಿದರೆ, ಹೃದಯಾಂತರಾಳದ ವೇದನೆಯಿಂದ ಅವರು ನಿಟ್ಟುಸಿರುಬಿಡುತ್ತಿದ್ದರು. ಶರತ್‌ಚಂದ್ರರೂ ಬಹುಶಃ ಇಂಥ ಪ್ರಶ್ನೆಗಳಿಂದ ಉದ್ವಿಗ್ನರಾಗಿಬಿಡುತ್ತಿದ್ದರು. ಒಮ್ಮೆ ಅವರು ಅವಿನಾಶ ಘೋಷಾಲ್ ಅವರಿಗೆ ಹೀಗೆಂದು ಹೇಳಿದ್ದರು: "ನೋಡಿ, ಲೇಖಕನ ವೈಯಕ್ತಿಕ ಜೀವನದ ಬಗ್ಗೆ ತಲೆಕೆಡಿಸಿಕೊಳ್ಳುವುದರಿಂದ ದೊರೆಯುವ ಪ್ರಯೋಜನವಾದರೂ ಏನು ? ಅವನು ಲೇಖಕನಾಗಿರುವುದರಿಂದ, ತನ್ನ ಬಾಳಿನ ಎಲ್ಲ ಸಂಗತಿಗಳನ್ನೂ ಬಯಲು ಮಾಡಬೇಕು ಎಂದರೆ ಏನು ಅರ್ಥ ? ಅವನ ಕೃತಿಗಳ ಮೂಲಕ ಅವನ ಪರಿಚಯ ಎಷ್ಟು ದೊರೆಯುತ್ತದೆಯೋ ಅಷ್ಟರಿಂದಲೇ ಸಂತೃಪ್ತರಾಗುವುದು ಉಚಿತ. ಅದೇ ಲೇಖಕನ ನಿಜವಾದ ಪರಿಚಯ. ಲೇಖಕನ ವೈಯಕ್ತಿಕ ಜೀವನ ಮತ್ತು ಲೇಖಕನಾಗಿ ಅವನ ಜೀವನ - ಇವೆರಡೂ ಒಂದೇ ಆಗಿರುವುದಿಲ್ಲವೆಂದು ನಾನು ಹೇಳುವುದು ಈ ಕಾರಣಕ್ಕಾಗಿಯೇ. ಎಷ್ಟರ ಮಟ್ಟಿಗೆ ನನ್ನ ಕೃತಿಗಳಲ್ಲಿ ನನ್ನನ್ನು ನಾನು ವ್ಯಕ್ತಪಡಿಸಿ ಕೊಂಡಿದ್ದೇನೋ ಅಷ್ಟು ಮಾತ್ರವೇ ನಾನು ಎಂದು ಅರ್ಥಮಾಡಿಕೊಳ್ಳಬೇಕು. ಓದುಗರಿಗೆ ನನ್ನ ಅಷ್ಟು ಪರಿಚಯವೇ ಸಾಕು."

ಇಷ್ಟಾಗಿಯೂ, ಅವರ ಬಗ್ಗೆ ಬಾಯಿಗೆ ಬಂದದ್ದನ್ನೆಲ್ಲ ಬರೆದುಬಿಡುತ್ತಿದ್ದರು. ಸತ್ಯ ಮತ್ತು ಮಿಥ್ಯಗಳ ನಡುವೆ ಯಾವುದೇ ಅಂತರವೂ ಉಳಿದಿರಲಿಲ್ಲ. ಆದರೆ, ಅವರೆಂದೂ ಯಾವುದಕ್ಕೂ ಪ್ರತಿಭಟನೆಯನ್ನು ತೋರಲಿಲ್ಲ, ಯಾವುದನ್ನೂ ಖಂಡಿಸಲಿಲ್ಲ. ಇದೇ ಸಂದರ್ಭದಲ್ಲಿ ಅವರು ಒಂದು ಕಡೆ ಹೀಗೆಂದು ಹೇಳಿದ್ದರು: "ನನ್ನ ಹಿಂದಿನ ಬಾಳಿನ ಇತಿವೃತ್ತದ ವಿಷಯದಲ್ಲಿ ನಾನು ಸಂಪೂರ್ಣವಾಗಿ ಉದಾಸೀನನಾಗಿದ್ದೇನೆ. ಇದರ ಬಗ್ಗೆ ಅನೇಕ ಕಲ್ಪನೆಗಳು ಹುಟ್ಟಿಕೊಂಡಿವೆ. ನಾನಾ ಬಗೆಯ ವದಂತಿಗಳನ್ನು ಸೃಷ್ಟಿಸಲಾಗಿದೆ. ಆದರೆ, ಇದಾವುದೂ ನನ್ನ ಆಲಸ್ಯದ ಮೇಲೆ ಒಂದಿಷ್ಟೂ ಪ್ರಭಾವ ಬೀರಿಲ್ಲ. ನಿಮ್ಮ ಬಗ್ಗೆ ಸುಳ್ಳು-ಪಳ್ಳು ಏನೇನೋ ಮಾತುಗಳನ್ನು ಹರಡುತ್ತಿದ್ದಾರೆ. ಅವನ್ನೆಲ್ಲ ನೀವೇಕೆ ಖಂಡಿಸಬಾರದು ಎಂದು ನನ್ನ ಹಿತೈಷಿಗಳು ಆಗಾಗ್ಗೆ ಬಂದು ನನಗೆ ಹೇಳುತ್ತಿರುತ್ತಾರೆ. ಅದೆಲ್ಲ ಸುಳ್ಳಾದರೆ, ನಾನು ಅದನ್ನು ಪ್ರಚಾರ ಮಾಡದದ ಇರುವುದರಿಂದ, ಅದನ್ನು ಖಂಡಿಸುವ ಹೊಣೆಗಾರಿಕೆಯೂ ನನ್ನ ಮೇಲಿಲ್ಲ. ಆ ಹೊಣೆಗಾರಿಕೆ ಇರುವುದು ಇದನ್ನು ಪ್ರಚಾರಮಾಡಿರುವವರ ಮೇಲೆ. ಅವರಿಗೇ ಹೋಗಿ ಹೇಳಿ ಎಂದು ನಾನು ಅವರಿಗೆಲ್ಲ ಹೇಳುತ್ತಿರುತ್ತೇನೆ."

ಇಂಥ ವದಂತಿಗಳಿಗೆ ಸ್ವತಃ ಅವರೂ ತಮ್ಮ ಕಾಣಿಕೆಯನ್ನು ಸಲ್ಲಿಸಲು ಅವರು ಸ್ವಲ್ಪವೂ ಹಿಂದೆಗೆಯದೆ ಹೋಗುತ್ತಿದ್ದುದರಿಂದ, ಅವರು ಹೆಂಗಸರ ಹಿಂದೆ ಅಲೆದಾಡುತ್ತಿರುತ್ತಾರೆ, ಅವರು ಆ ನಾಯಿಕೆಗೆ ಪ್ರೇಮ ಪತ್ರ ಬರೆದಿದ್ದಾರೆ ಇವೇ ಮೊದಲಾದ ಕಿಂವದಂತಿಗಳ ವಲಯದಲ್ಲಿ ಸಿಕ್ಕಿಕೊಂಡಿದ್ದ ಅವರ ವ್ಯಕ್ತಿತ್ವ ಮತ್ತಷ್ಟು ಜಟಿಲವಾಗಿ ಬಿಡುತ್ತಿತ್ತು. ತಮ್ಮನ್ನು ತಾವೇ ಅಡಗಿಸಿಡುವ ಪ್ರವೃತ್ತಿಯಿಂದ ಅವರೆಂದೂ ಮುಕ್ತರಾಗಲೇ ಇಲ್ಲ. ಅವರ ಸ್ವಭಾವದಲ್ಲಿಯೇ ಅದ್ಭುತವಾದ ವಿರೋಧಾಭಾಸವಿತ್ತು. ಒಂದೆಡೆ ವಿರಾಗಿಯ ಮನಸ್ಸಿದ್ದರೆ, ಇನ್ನೊಂದೆಡೆ ಅಲಿಪ್ತತೆಯ

ಎಲ್ಲೆಯವರೆಗೆ ಬಂದುಬಿಡುವಂಥ ವಿನೋದಶೀಲತೆಯೂ ಅದರಲ್ಲಿ ಮನೆಮಾಡಿ ಕೊಂಡಿತ್ತು. ಅನೇಕ ಮಂದಿ ಶರತ್‌ಚಂದ್ರರು ಆ ವ್ಯಕ್ತಿತ್ವದಲ್ಲಿ ಬೆರೆತುಕೊಂಡು ಬಿಟ್ಟಿದ್ದಾರೋ ಎಂದೆನಿಸುತ್ತಿತ್ತು. ಈ ಕಾರಣದಿಂದಾಗಿಯೇ, ಅನೇಕ ವೇಳೆ ಮಹಾನತೆಗೆ ಮಾರು ದೂರವಾಗಿರುವಂಥ ಹಾಗೂ ಸಭ್ಯಸಮಾಜದ ಒಡನಾಟವೇ ದೊರೆತಿಲ್ಲವೋ ಎಂಬಂಥ ಸಂಸ್ಕಾರಹೀನ, ಅಸಭ್ಯ ಅಶಿಷ್ಟ ವ್ಯಕ್ತಿಯನ್ನು ಅನೇಕರು ಅವರಲ್ಲಿ ಕಾಣುತ್ತಿದ್ದರು. ಆದರೆ, ಅವರಲ್ಲಿನ ಕೃತಿಕಾರನ ವೈಶಿಷ್ಟ್ಯವನ್ನು ಅರಸಿ ಹೊರತೆಗೆಯುವಂಥ ವ್ಯಕ್ತಿಗಳೂ ಇದ್ದರು. ಅವರ ಪ್ರಭಾವಹೀನ ವ್ಯಕ್ತಿತ್ವದಲ್ಲಿ ಒಂದು ಬಗೆಯ ಒರಟುತನವಿತ್ತು. ಆದರೆ, ಅದರ ಕೆಳಗೆ ಹರಿಯುತ್ತಿದ್ದ ಮಾನವೀಯ ಸಂವೇದನೆಯ ಮಹಾಸ್ರೋತ ಅಸಂಖ್ಯಾತ ಅಭಿಮಾನಿಗಳನ್ನು ಅವರಿಗಾಗಿ ಸೃಷ್ಟಿಸಿಕೊಟ್ಟಿತ್ತು. ಅವರಲ್ಲಿ ಪ್ರಾಮಾಣಿಕತೆ ಮತ್ತು ಗಂಭೀರವಾದ ವಿವೇಕ ತುಂಬಿ ತುಳುಕುತ್ತಿತ್ತು. ಮನುಷ್ಯನನ್ನು ಅರ್ಥಮಾಡಿಕೊಳ್ಳುವ ಅದ್ಭುತ ಸಾಮರ್ಥ್ಯ ಅವರಿಗೆ ಲಭಿಸಿತ್ತು. ತಮ್ಮ ಯಶಸ್ಸು, ಪ್ರತಿಷ್ಠೆ, ಕೀರ್ತಿ ಯಾವುದರ ಬಗೆಗೂ ಅವರೆಂದೂ ತಲೆಕೆಡಿಸಿಕೊಂಡಿರಲಿಲ್ಲ. ವಿನೋದಶೀಲತೆ ಹೇಗೆ ಎದ್ದು ಕಾಣುತ್ತಿತ್ತೊ ಹಾಗೆಯೇ ಉದಾಸೀನತೆಯೂ ಅವರ ವ್ಯಕ್ತಿತ್ವದ ಒಂದು ನಿಜವಾದ ಅಂಶವಾಗಿತ್ತು. ಇಲ್ಲವಾಗಿದ್ದಲ್ಲಿ ಅವರು ತಮ್ಮ ಸೋದರಿಯ ಊರಿನ ಬಳಿ ಬಂದು ನೆಲೆಸುತ್ತಿರಲಿಲ್ಲ. ಅಲ್ಲಿಯ ಸಮುದಾಯದಲ್ಲಿ ಅವರು ಜಾತಿಯಿಂದ ಬಹಿಷ್ಕೃತರಾಗಿದ್ದರೆಂಬುದನ್ನೂ ನೆನಪಿನಲ್ಲಿಟ್ಟುಕೊಳ್ಳಬೇಕು. ಸಮಾಜದ ಗುತ್ತಿಗೆದಾರರು ಈ ವಿಷಯದಲ್ಲಿ ಅವರನ್ನು ಗೋಳುಹುಯ್ದುಕೊಳ್ಳಲು ನಡೆಸದೆ ಇದ್ದ ಪ್ರಯತ್ನವಿರಲಿಲ್ಲ. ಬಗೆಬಗೆಯ ಸೂಚನೆಗಳು ಅವರ ಬಳಿಗೆ ಬರುತ್ತಿದ್ದುವು. ಆದರೆ, ಮತ್ತೆ ಜಾತಿಗೆ ಸೇರಿಕೊಳ್ಳಲು ಅವರು ಒಂದಿಷ್ಟೂ ಪ್ರಯತ್ನಮಾಡಲಿಲ್ಲ. ತಮ್ಮ ಎಲ್ಲ ಪ್ರಯತ್ನಗಳೂ ಹೀಗೆ ವಿಫಲಗೊಂಡಾಗ, ಸಮಾಜದ ಈ ಗುತ್ತಿಗೆದಾರರು ತಮಗೇ ಅವಮಾನ ವಾಯಿತೆಂದು ಭಾವಿಸಿದರು ಹಾಗೂ ಸೇಡು ತೀರಿಸಿಕೊಳ್ಳಲು ಅವಕಾಶವನ್ನು ಅರಸತೊಡಗಿದರು. ಆ ಹೊತ್ತಿಗೆ, ಅನಿರೀಕ್ಷಿತವಾಗಿ ಪಕ್ಕದ ಹಳ್ಳಿಯಲ್ಲಿದ್ದ ಆಶುತೋಷ ಚಟ್ಟೋಪಾಧ್ಯಾಯರೆಂಬ ಸಭ್ಯಗೃಹಸ್ಥರ ತಾಯಿ ತೀರಿಕೊಂಡರು. ಸಮಾಜದ ಈ ಗುತ್ತಿಗೆದಾರರು ಇಂಥ ಸಂದರ್ಭಕ್ಕಾಗಿ ಕಾದಿದ್ದರು. ಅವರ ತಾಯಿಯ ಶ್ರಾದ್ಧವನ್ನು ಅವರು ವೈಭವಪೂರ್ಣವಾಗಿ ಆಚರಿಸಬೇಕೆಂದು - ಅಂದರೆ, ಸುತ್ತಲ ಐದು ಹಳ್ಳಿಗಳಲ್ಲಿದ್ದ ಬ್ರಾಹ್ಮಣರಿಗೆ ಮತ್ತು ಸ್ತ್ರೀ ಪುರುಷರಿಗೆ ಊಟ ಹಾಕಿಸಬೇಕೆಂದು - ಮತ್ತು ಹಾಗೆ ಮಾಡಿದರೆ ಮಾತ್ರ ಅವರ ತಾಯಿಯ ಆತ್ಮಕ್ಕೆ ಶಾಂತಿ ದೊರೆಯುತ್ತದೆಂದು ಅವರು ಆ ಗೃಹಸ್ಥರಿಗೆ ಹೇಳಿದರು.

ಆಶುತೋಷ ಬಾಬುಗಳು ಅನುಕೂಲಸ್ಥರಾಗಿದ್ದರು. ಆದ್ದರಿಂದ ಈ ಅದ್ದೂರಿಯ ಭೋಜನದ ಏರ್ಪಾಟು ಮಾಡಲು ಅವರು ಒಪ್ಪಿಕೊಂಡರು. ಆಗ ಸಮಾಜದ ಈ ಗುತ್ತಿಗೆದಾರರು ಅವರೊಂದಿಗೆ ಹೇಳಿದರು: "ಶರತ್‌ಚಂದ್ರರ ಮನೆಗೆ ನೀವೇ ಹೋಗಿ, ಶ್ರಾದ್ಧ ಭೋಜನಕ್ಕೆ ಬರುವಂತೆ ಎಲ್ಲರನ್ನೂ ಆಹ್ವಾನಿಸಿ ಬನ್ನಿ."

ಈ ಸೂಚನೆಯ ಹಿಂದೆ ಅವರೊಂದು ದುರುದ್ದೇಶವನ್ನಿಟ್ಟುಕೊಂಡಿದ್ದರು. ಶರತ್‌ಚಂದ್ರರು ಆಹ್ವಾನವನ್ನು ಒಪ್ಪಿಕೊಂಡು ಊಟಕ್ಕೆ ಬಂದರೆ, ಜಾತಿ-

ಬಹಿಷ್ಕೃತರೆಂದು ಹೇಳಿ ಅವರನ್ನು ಊಟದ ಪಂಕ್ತಿಯಿಂದ ಎಬ್ಬಿಸಬಹುದು; ಬರದೆ ಹೋದರೆ ಆಹ್ವಾನವನ್ನು ಅಂಗೀಕರಿಸದೆ ಹೋದ ಆರೋಪವನ್ನು ಹೊರಿಸಿ ಅಪಮಾನಗೊಳಿಸಬಹುದು ಎಂದು ಅವರು ಯೋಚಿಸಿದ್ದರು.

ಸ್ವತಃ ಶರತ್‌ಚಂದ್ರರು ಹೋಗುವುದಿರಲಿ, ಅವರ ಮನೆಯ ಯಾವೊಬ್ಬ ವ್ಯಕ್ತಿಯೂ ಆ ಶ್ರಾದ್ಧ ಭೋಜನಕ್ಕೆ ಹೋಗಲಿಲ್ಲ. ಕೆಲವು ದಿವಸಗಳ ವರೆಗೆ ಆ ಸಮುದಾಯದಲ್ಲಿ ಈ ವಿಚಾರದ ಬಗ್ಗೆ ಬಿಸಿಬಿಸಿ ಮಾತುಕತೆಗಳು ನಡೆಯುತ್ತಿದ್ದುವು. ಆದರೆ, ಇದಾವುದೂ ಶರತ್‌ಚಂದ್ರರನ್ನು ಸ್ವಲ್ಪವೂ ವಿಚಲಿತಗೊಳಿಸಲಿಲ್ಲ. ಸಮಾಜದ ಗುತ್ತಿಗೆದಾರರು ಇಂಥ ಭಾರಿ ಅಪಮಾನವನ್ನು ಹೇಗೆ ತಾನೆ ಸಹಿಸಿಯಾರು? ಅವರನ್ನು ಅಪಮಾನಗೊಳಿಸುವ ಇನ್ನೊಂದು ಮಾರ್ಗವನ್ನು ಅವರು ಅರಸಿದರು. ನದಿಯ ಒಡ್ಡನ್ನು ಒಡೆದು, ಹಳ್ಳಿಯ ಜನಗಳ ಭತ್ತದ ಗದ್ದೆಗಳಿಗೆ ನಷ್ಟವನ್ನುಂಟು ಮಾಡಲು ಪ್ರಯತ್ನಿಸಿದ್ದಾರೆಂದು ನ್ಯಾಯಾಲಯದಲ್ಲಿ ಅವರ ಮೇಲೆ ಆರೋಪವನ್ನು ಹೊರಿಸಿ ಮೊಕದ್ದಮೆಯನ್ನು ಹೂಡಿದರು. ಸಾಮತಾ ಹಾಗೂ ಗೋವಿಂದಪುರ ಮೊದಲಾದ ಎಲ್ಲ ಹಳ್ಳಿಗಳೂ ರೂಪನಾರಾಯಣ ನದಿಯ ತೀರದಲ್ಲಿ ನೆಲೆಗೊಂಡಿದ್ದುವು. ಒಮ್ಮೆ ರೂಪನಾರಾಯಣ ನದಿ ದಡವನ್ನು ಕೊಚ್ಚಿಕೊಂಡು ಈ ಹಳ್ಳಿಗಳಿಗೆ ನುಗ್ಗಿ ಬಂದಿತ್ತು. ಆಗ ಸರ್ಕಾರ ಅಲ್ಲಿ ಒಂದು ಒಡ್ಡನ್ನು ನಿರ್ಮಿಸಿತ್ತು. ಆದರೆ, ಮಳೆಗಾಲದಲ್ಲಿ ರೂಪನಾರಾಯಣ ನದಿ ಆ ಒಡ್ಡನ್ನೂ ಅಲ್ಲಲ್ಲಿ ಒಡೆದು ಹಾಕಿತ್ತು. ಇದಾದ ಮೇಲೆ ಸರ್ಕಾರ ಇನ್ನಷ್ಟು ದೂರದಲ್ಲಿ ಎತ್ತರವಾದ ಇನ್ನೊಂದು ಒಡ್ಡನ್ನು ನಿರ್ಮಿಸಿತ್ತು. ಸಮಾಜದ ಈ ಗುತ್ತಿಗೆದಾರರು ಎಂದೋ ಒಡೆದು ಹೋಗಿದ್ದ ಒಡ್ಡನ್ನು ಒಡೆದು ಹಾಕಿದ ಆರೋಪವನ್ನು ಶರತ್‌ಚಂದ್ರರ ಮೇಲೆ ಹೊರಿಸಿದ್ದರು. ಈ ಸುಳ್ಳು ಆರೋಪ ಅವರಿಗೆ ತುಂಬ ದುಃಖವನ್ನುಂಟುಮಾಡಿತು. ತಮ್ಮ ಬಚಾವಿಗಾಗಿ ಅವರು ಅಂದಿನ ಸುವಿಖ್ಯಾತ ವಕೀಲರೊಬ್ಬರನ್ನು ಗೊತ್ತುಪಡಿಸಿದರು. ಆದರೆ, ಅವರ ಭಾವ ಪಂಚಾನನ ಮುಖರ್ಜಿಯವರ ಪ್ರಯತ್ನಗಳ ಫಲವಾಗಿ ಈ ಪ್ರಕರಣವನ್ನು ಪಂಚಾಯತಿಯ ಮಧ್ಯಸ್ಥಿಕೆಗೆ ಒಪ್ಪಿಸಲಾಯಿತು. ತನಿಖೆಯ ಬಳಿಕ ಆ ಒಡ್ಡು ಹಿಂದೆಯೇ ಎಂದೋ ತಾನಾಗಿಯೇ ಒಡೆದು ಹೋಗಿತ್ತೆಂಬುದು ಅವರಿಗೆ ತಿಳಿದು ಬಂದಿತು. ಶರತ್‌ಚಂದ್ರರಿಗೂ ಅದಕ್ಕೂ ಯಾವುದೇ ಸಂಬಂಧವಿಲ್ಲವೆಂದೂ, ಅವರು ನಿರ್ದೋಷಿಗಳೆಂದೂ ಅವರು ತೀರ್ಮಾನಿಸಿದರು.

## 27

ಹಿರಣ್ಮಯೀ ದೇವಿಯವರು ಶರತ್‌ಚಂದ್ರರ ಧರ್ಮಪತ್ನಿಯಾಗಿದ್ದರೆ ಅಥವಾ ಅವರ ಬಾಳಿನ ಜೊತೆಗಾರ್ತಿ ಮಾತ್ರವಾಗಿದ್ದರೆ ಎಂಬ ಪ್ರಶ್ನೆಗೆ ಉತ್ತರ ಲಭ್ಯವಾಗಿದ್ದರೂ, ಯಾರೂ ಅದನ್ನು ಒಪ್ಪಲು ಇಚ್ಛಿಸುತ್ತಿರಲಿಲ್ಲ. ಅವರ ವಿಷಯದಲ್ಲಿ ಶರತ್‌ಚಂದ್ರರ ಪ್ರೀತಿ ನಿಜವಾಗಿಯೂ ಹಾರ್ದಿಕವಾಗಿತ್ತು ಎಂಬುದರಲ್ಲಿ ಕಿಂಚಿತ್ತೂ ಅನುಮಾನವಿಲ್ಲ. ಅತ್ಯಲ್ಪ ಶಿಕ್ಷಣವನ್ನು ಪಡೆದಿದ್ದ, ಅನೇಕ ವಿಚಾರಗಳಲ್ಲಿ ಏನೇನೂ ಅನುಭವವಿರದ ಇದ್ದ, ಸರಳ ಹೃದಯದ ಹಳ್ಳಿಗಾಡಿನ ಆ ಹೆಣ್ಣುಹೆಂಗಸು ಶರತ್‌ಚಂದ್ರರ ಪ್ರತಿಭೆಗೆ

ಯಾವ ರೀತಿಯಲ್ಲಿಯೂ ಸರಿದೊರೆಯಾದ ಜೋಡಿಯಾಗಿರಲಿಲ್ಲ. ಯಾವಾಗಲಾದರೂ ಯಾರಾದರೂ ಆಕೆಯೊಂದಿಗೆ ಶರತ್‌ಸಾಹಿತ್ಯದ ಅಮರ ನಾರೀ ಪಾತ್ರಗಳ ಬಗ್ಗೆ ಚರ್ಚಿಸಿದರೆ, ಆಕೆ ನಕ್ಕು ಹೀಗೆಂದು ಹೇಳುತ್ತಿದ್ದರು: "ಮೂರ್ಖಳಾದ ನನಗೆ ಅವರ ವಿಚಾರವೇನು ಗೊತ್ತು? ನಿಮ್ಮ ಅಣ್ಣಯ್ಯನವರಿಗೇ ಅದೆಲ್ಲ ಗೊತ್ತು."

ಪಾರ್ವತಿಯ ಬಗ್ಗೆ ಒಮ್ಮೆ ಮಾತನಾಡತೊಡಗಿದಾಗ ಆಕೆ ಹೀಗೆಂದರು: "ನಿಮ್ಮ 'ದಾದೂ' ಅವರು[1] ಹೇಳಿದ ಮಾತೆಲ್ಲ ಹಾಗಿರಲಿ ಬಿಡಿ. 'ದೇವದಾಸ್' ಚಿತ್ರ ಬಂದ ದಿನವೇ ಇಬ್ಬರು ಹುಡುಗ-ಹುಡುಗಿಯರು ಸರೋವರಕ್ಕೆ ಬಿದ್ದು ಸತ್ತರು."

ಇನ್ನೊಮ್ಮೆ ಆಕೆ ಜಲಧರ ಸೇನ್ ಅವರ ಪುಸ್ತಕವೊಂದನ್ನು ಓದುತ್ತಿದ್ದರು. ಕಣ್ಣೀರು ಒಂದೇ ಸಮನೆ ಸುರಿಯುತ್ತಿತ್ತು. ಆ ಹೊತ್ತಿಗೆ ಸರಿಯಾಗಿ ಶರತ್‌ಚಂದ್ರರು ಮನೆಗೆ ಬಂದರು. ಆಗ ಆಕೆ ಹೀಗೆಂದರು: "ನೀವು ಏನೆಲ್ಲ ಕೆಲಸಕ್ಕೆ ಬಾರದ ಪುರಾಣ ಬರೆಯುತ್ತೀರಿ? ಇಂಥ ಪುಸ್ತಕ ಬರೆಯಬಾರದ!"

ಎಂಥ ಮುಗ್ಧ ಮನಸ್ಸು ಆಕೆಯದು! ಆದರೆ, ತನ್ನ ಆಂತರ್ಯದ ಐಶ್ವರ್ಯದಿಂದ, ದೃಢವಾದ ಪ್ರೀತಿಯಿಂದ ಆಕೆ ಎಲ್ಲರ ಮನಸ್ಸನ್ನು ಗೆದ್ದಿದ್ದ ಕಥಾಶಿಲ್ಪಿಯ ಮನಸ್ಸನ್ನೂ ಗೆದ್ದುಬಿಟ್ಟಿದ್ದರು. ಆಕೆ ಧರ್ಮಪರಾಯಣೆಯಾಗಿದ್ದಷ್ಟೇ ಕೋಮಲ ಹೃದಯಿಯೂ, ಸೇವಾನಿರತೆಯೂ ಆಗಿದ್ದರು. ಆದರೆ, ಆಕೆ ಶರತ್‌ಚಂದ್ರರ ಜೊತೆಯಲ್ಲಿ ಎಂದೂ ಯಾವುದೇ ಗೆಳೆಯರ ಅಥವಾ ಬಂಧುಗಳ ಮನೆಗೆ ಹೋಗುತ್ತಿರಲಿಲ್ಲ.

ಶರತ್‌ಚಂದ್ರರು ತಮ್ಮೊಡನೆ ವಿಧಿವತ್ತಾಗಿ ಮದುವೆ ಮಾಡಿಕೊಂಡು ತಮಗಿನ್ನೂ ಪತ್ನಿಯ ಸ್ಥಾನವನ್ನು ಕೊಟ್ಟಿಲ್ಲವೆಂಬುದು ಆಕೆಯ ಆರೋಪವಾಗಿತ್ತು ಎಂದು ಹೇಳಲಾಗಿದೆ. ಹೀಗಾಗಿ, ಒಂದು ದಿವಸ ಸಾಮತಾಬೇಡದಲ್ಲಿ ವೈದಿಕ ರೀತಿಯಿಂದ ಆಕೆಯನ್ನು ಮದುವೆಮಾಡಿಕೊಂಡು ಆಕೆಗೆ ವಿಧಿವತ್ತಾಗಿ ಪತ್ನಿಯ ಸ್ಥಾನಮಾನಗಳನ್ನು ಕೊಟ್ಟಿದ್ದರು. ಇಷ್ಟಾಗಿಯೂ, ಆಕೆ ಎಂದೂ ಅವರೊಡನೆ ಹೋಗುತ್ತಿರಲಿಲ್ಲ. ಆದರೆ, ಶರತ್‌ಚಂದ್ರರ ನೆಂಟರು ಗೆಳೆಯರು, ಅಭಿಮಾನಿಗಳು ಯಾರೇ ಮನೆಗೆ ಬಂದರೂ ತುಂಬ ಪ್ರೀತಿ-ವಿಶ್ವಾಸಗಳಿಂದ ಸ್ವಾಗತ ಸತ್ಕಾರ-ಉಪಚಾರಗಳನ್ನು ಮಾಡುತ್ತಿದ್ದರು. ಚೆನ್ನಾಗಿ ಊಟ-ತಿಂಡಿಗಳನ್ನು ಉಣಬಡಿಸುತ್ತಿದ್ದರು; ಮನೆವಾರ್ತೆಯ ಮಾತುಕತೆಗಳಲ್ಲಿ ಆತ್ಮೀಯತೆಯಿಂದ ಪಾಲ್ಗೊಳ್ಳುತ್ತಿದ್ದರು. ಅವರ ಪ್ರೀತಿಗೆ ಮೇರೆ ಎಂಬುದೇ ಇರಲಿಲ್ಲ. ಮನೆಯಲ್ಲಿ ಆಕೆಯದೇ ಏಕಛತ್ರಾಧಿಪತ್ಯವಾಗಿತ್ತು.

ಅವರಿಬ್ಬರೂ ಒಟ್ಟಿಗಿರುವಂಥ ಒಂದೇ ಒಂದು ಚಿತ್ರವೂ ಇಲ್ಲವೆಂಬುದು ಆಶ್ಚರ್ಯದ ಸಂಗತಿಯಲ್ಲವೆ? ಹಿರಣ್ಮಯಿ ದೇವಿಯವರ ಬಿಡಿ ಚಿತ್ರವೂ ಇಲ್ಲ. ಬರ್ಮಾದಲ್ಲಿ ಒಮ್ಮೆ ಅವರು ಫೋಟೋ ತೆಗೆಸಿಕೊಳ್ಳುವ ಪ್ರಯತ್ನವನ್ನೇನೋ ಮಾಡಿದ್ದರು. ಆದರೆ, ಹೊತ್ತಿಗೆ ಸರಿಯಾಗಿ ತೀವ್ರವಾದ ಹೊಟ್ಟೆನೋವು ಬಂದುಬಿಟ್ಟಿದ್ದುದರಿಂದ, ಆ ಚಿತ್ರವನ್ನು ತೆಗೆಯಲು ಸಾಧ್ಯವಾಗಿರಲಿಲ್ಲ. ಭಾವಚಿತ್ರ

---

1. ಶರತ್‌ಚಂದ್ರರನ್ನು ಆಕೆ ಸಂಬೋಧಿಸುತ್ತಿದ್ದ ರೀತಿ. 'ಅಣ್ಣಯ್ಯ' ಎಂಬ ಅರ್ಥದ ಮಾತು.-ಅನುವಾದಕನ ಅಡಿಟಿಪ್ಪಣಿ.

ತೆಗೆಸಿಕೊಳ್ಳುವ ವಿಷಯದಲ್ಲಿ ಆಕೆಗೆ ಅಂಥ ಆಸಕ್ತಿಯೇ ಇರಲಿಲ್ಲವೆಂದು ತೋರುತ್ತದೆ. ಆದ್ದರಿಂದ, ಶರತ್‌ಚಂದ್ರರು ಆಕೆಯನ್ನು ಮತ್ತೆಂದೂ ಇದರ ಬಗ್ಗೆ ಒತ್ತಾಯಪಡಿಸಿರಲಿಲ್ಲ. ಒಂದು ದಿವಸ ಅವರ ಒಂದು ನಾಟಕದ ಐವತ್ತನೆಯ ಪ್ರದರ್ಶನ ನಡೆಯಲಿತ್ತು. ಅಂದು ರಾತ್ರಿ, ಹಿರಣ್ಮಯಿ ದೇವಿಯವರೊಂದಿಗೆ ವೇದಿಕೆಯ ಮೇಲೆ ಬರಬೇಕೆಂದೂ, ಒಟ್ಟಾಗಿ ಚಿತ್ರ ತೆಗೆಸಿಕೊಳ್ಳಬೇಕಂದೂ ಅವರ ಅಭಿಮಾನಿಗಳು ತುಂಬ ಒತ್ತಾಯಪಡಿಸಿದರು. ಆಗ ಉದ್ವಿಗ್ನರಾಗಿ ಶರತ್‌ಚಂದ್ರರು ಹೀಗೆಂದು ಹೇಳಿದ್ದರು: "ನಾಟಕ ಬರೆದಿರುವುದು ನಾನೇ ಹೊರತು, ಹಿರಣ್ಮಯೀ ದೇವಿಯಲ್ಲ!"

ಈ ಉದ್ವಿಗ್ನತೆಯ ಹಿಂದೆಯೂ ಅದೇ ತಥ್ಯವಿತ್ತು. ಸಮಾಜ ಆಕೆಯನ್ನು ಅಂಗೀಕರಿಸಿರಲಿಲ್ಲ. ಅಂಗೀಕರಿಸದೆ ಇದ್ದರೆ ಏನಂತೆ, ಶರತ್‌ಚಂದ್ರರಂತೂ ಮನಃಪೂರ್ವಕವಾಗಿ ಆಕೆಯನ್ನು ವರಿಸಿದ್ದರು. ಧಾರ್ಮಿಕ ಕಾರ್ಯಚರಣೆಗಳಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಆದರೆ, ಹಿರಣ್ಮಯಿ ದೇವಿಯವರ ವ್ರತಾಚರಣೆಗಳಲ್ಲಿ ಅವರು ಯಾವಾಗಲೂ ಸಹಕಾರ ನೀಡುತ್ತಿದ್ದರು. ಕಾಶಿಯ ಅಸಾಧ್ಯವಾದ ಬಿಸಿಲು ಸಹ ಈ ಬಗೆಯ ಆಚರಣೆಗಳಿಂದ ಆಕೆಯನ್ನು ಹಿಮ್ಮೆಟ್ಟಿಸಲಾರದೆ ಹೋಗಿತ್ತು. ಕಲ್ಕತ್ತಾದಲ್ಲಿ ಆಕೆಯನ್ನು ಪ್ರತಿದಿನವೂ ಅವರು ಗಂಗಾಸ್ನಾನಕ್ಕೆ ಕರೆದೊಯ್ಯುತ್ತಿದ್ದರು. ಆಕೆಯ ಆರೋಗ್ಯದ ಬಗ್ಗೆ ಅವರಿಗೆ ತುಂಬ ಕಾಳಜಿ ಇತ್ತು. ಒಮ್ಮೆ ಆಕೆಗೆ ನ್ಯೂಮೋನಿಯಾ ಆಗಿದ್ದಾಗ, ಆಕೆಯನ್ನು ನೋಡಿಕೊಂಡು ಹೋಗಲೆಂದು ಬಂದಿದ್ದ ಮಣೀಂದ್ರನಾಥ ರಾಯ್ ಅವರೊಂದಿಗೆ ತುಂಬ ದುಃಖದ ಧ್ವನಿಯಲ್ಲಿ ಶರತ್‌ಚಂದ್ರರು ಹೀಗೆಂದಿದ್ದರು: "ಡಬ್ಬಲ್ ನ್ಯೂಮೋನಿಯಾ ಆಗಿಬಿಟ್ಟಿದೆ. ಈ ಸಲ ಆಕೆಯನ್ನು ಉಳಿಸಿಕೊಳ್ಳಲಾರೆನೆಂದೇ ತೋರುತ್ತದೆ. ಎದೆ, ಬೆನ್ನು ಎಲ್ಲ ಕಡೆಗಳಲ್ಲಿಯೂ ಶೀತ ತುಂಬಿಕೊಂಡು ಬಿಟ್ಟಿದೆ. ಜ್ವರವೂ ತುಂಬ ಹೆಚ್ಚಾಗಿದೆ. ಅಚೇತನ ಸ್ಥಿತಿಯಲ್ಲಿ....."

ಮಾತನಾಡುತ್ತ ಇದ್ದಂತೆಯೇ ಕಣ್ಣು ತುಂಬಿ ಬಂದಿತ್ತು. ಹೊರಗಡೆ ಎಲ್ಲಿಯಾದರೂ ಹೋದಾಗ, ಈ ಚಿಂತೆ ಮತ್ತಷ್ಟು ಎದ್ದು ಕಾಣುತ್ತಿತ್ತು. ತಮ್ಮ ದೇವಘರ್‌ನ ಪ್ರವಾಸದಲ್ಲಿ ಅವರು ರಾಮಕೃಷ್ಣ ಮುಖೋಪಾಧ್ಯಾಯರಿಗೆ (ಅಡ್ಡ ಹೆಸರು 'ಹೋಂದಲ್') ಒಂದು ಕಾಗದ ಬರೆದಿದ್ದರು. ಅದು ಹಿರಣ್ಮಯಿ ದೇವಿಯವರ ಬಗೆಗಿನ ಕಾಳಜಿಯನ್ನು ಸ್ಪಷ್ಟಪಡಿಸುತ್ತದೆ:

"ಹೋಂದಲ್. ಎಂಟು-ಹತ್ತು ದಿವಸಗಳಲ್ಲಿ ಒಂದೇ ಒಂದು ಕಾಗದದಿಂದ ಮನೆಯ ಸುದ್ದಿ ತಿಳಿದು ಬಂದಿದೆ. ಶರೀರ ಅಸ್ವಸ್ಥವಾಗಿದ್ದರೂ, ಎಲ್ಲರ ಬಗೆಗೂ ತುಂಬ ಚಿಂತೆಯಾಗುತ್ತಿದೆ. ನಿಮ್ಮ ಅತ್ತಿಗೆ ಕಾಗದ ಬರೆಯಲು ಬರುವುದಿಲ್ಲ. ಆದ್ದರಿಂದ, ಪ್ರತಿದಿನ ಅಲ್ಲವಾದರೂ, ದಿನಬಿಟ್ಟು ದಿನವಾದರೂ ನೀನು ದಯವಿಟ್ಟು ಒಂದು ಅಂಚೆಯ ಕಾರ್ಡನ್ನು ಹಾಕಿದರೆ, ನನ್ನ ಚಿಂತೆ ಕಡಿಮೆಯಾಗುತ್ತದೆ."[1]

ದೇವಘರ್ ತಲುಪಿದ ಕೂಡಲೇ ಅವರು ಸ್ವತಃ ಹಿರಣ್ಮಯೀ ದೇವಿಯವರಿಗೆ

1. ಮಾರ್ಚ್ 9, 1937.

ಒಂದು ಕಾಗದ ಬರೆದಿದ್ದರು. ಅವರು ತಮ್ಮ ಪತ್ನಿಗೆ ಬರೆದ ಎರಡು ಪತ್ರಗಳು ಮಾತ್ರ ದೊರೆತಿವೆ. ಅವುಗಳಲ್ಲಿ ಒಂದು ಹೀಗಿದೆ:

"ಕಲ್ಯಾಣಮಯಿಯಾದ ಹಿರಿಯ ಸೊಸೆ:

"ನೆನ್ನೆ ಮೂರೂವರೆ ಘಂಟೆಗೆ ಇಲ್ಲಿಗೆ ಬಂದು ತಲುಪಿದೆ. ಸ್ಟೇಷನ್ನಿಗೆ ಸತ್ಯಮಾವ ಮತ್ತು ಮೃತ್ಯುಂಜಯ ಕಾರು ತೆಗೆದುಕೊಂಡು ಬಂದಿದ್ದರು. ದಾರಿಯಲ್ಲಿ ಸ್ವಲ್ಪವೂ ತೊಂದರೆಯಾಗಲಿಲ್ಲ. ಹರಿದಾಸರ ಈ 'ಮಲಾಂಚ' ಭವನ ಅದ್ಭುತವಾಗಿದೆ. ತುಂಬ ಸುಂದರವಾಗಿದೆ. ಜಾಗವೂ ಬೇಕಾದಷ್ಟಿದೆ. ಶೌಚಾಲಯ ಕೆಳಗಿದೆ; ಆದರೆ, ಸುಂದರವಾಗಿದೆ. ಇಂದು ಬೆಳಿಗ್ಗೆ ಚಹಾಕ್ಕೆ ಆಡಿನ ಹಾಲು ದೊರೆಯಿತು. ಕ್ರಮಶಃ ನನಗೆ ಸುಮಾರು ಒಂದು ಸೇರಿನಷ್ಟು ಹಾಲು ಬೇಕಾಗುತ್ತದೆಂದು ಅವನಿಗೆ ತಿಳಿಸಿದ್ದೇನೆ. ಸೊಳ್ಳೆಗಳು ತುಂಬ ಇವೆ. ನೆನ್ನೆ ರಾತ್ರಿ ಸೊಳ್ಳೆಯ ಪರದೆಯನ್ನು ಕಟ್ಟಿಕೊಳ್ಳಲಿಲ್ಲ. ಸೊಳ್ಳೆಗಳಿಲ್ಲ ಎಂದು ಭಾವಿಸಿದ್ದೆ. ರಾತ್ರಿ ಮೂರು-ಮೂರೂವರೆ ಘಂಟೆಯ ಹೊತ್ತಿಗೆ ಸೊಳ್ಳೆಗಳು ಕಚ್ಚಲಾರಂಭಿಸಿದುವು. ಹೇಗೋ ರಜಾಯಿಯಲ್ಲಿ ಮುಖ ಮುಚ್ಚಿಕೊಂಡು ಮಲಗಿದ್ದೆ. ಚಳಿ ಇರುವುದರಿಂದ ರಕ್ಷಣೆ ದೊರೆತಂತಾಯಿತು.

"ಒಂದೆರಡು ತಿಂಗಳ ವರೆಗೆ ಇಲ್ಲಿ ವಾಸಮಾಡಿದರೆ ಆರೋಗ್ಯ ಚೆನ್ನಾಗಿ ಸುಧಾರಿಸುತ್ತದೆಂದು ಎಲ್ಲರೂ ಹೇಳುತ್ತಾರೆ. ಎಷ್ಟು ದಿನ ಇರಲು ಸಾಧ್ಯವಾಗುತ್ತದೆಯೋ, ನೋಡೋಣ. ನನಗಿರುವ ಚಿಂತೆಯೆಲ್ಲ ನಿನ್ನದೇ. ಎಚ್ಚರದಿಂದ ಇರದೆ ಹೋದರೆ, ನೀನು ಕಾಯಿಲೆ ಬೀಳಬಹುದು. ನಿನಗೆ ಹುಷಾರಿಲ್ಲ ಎಂದು ಸುದ್ದಿಯೇನಾದರೂ ಬಂದರೆ, ಅಂದೇ ದೇವಘರ್‌ನಿಂದ ಕಲ್ಕತ್ತೆಗೆ ವಾಪಸು ಬಂದುಬಿಡುತ್ತೇನೆ.

"ಇಲ್ಲಿ ಎಣ್ಣೆ ಮತ್ತು ತುಪ್ಪ ಚೆನ್ನಾಗಿಲ್ಲ. ಆದ್ದರಿಂದ, ಇವೆರಡನ್ನು ತಾವೇ ತಂದು ಕೊಡುವುದಾಗಿ ಸತ್ಯ ಮಾವ ಹೇಳಿದ್ದಾರೆ. ಗೋಧಿ ಕೊಂಡುಕೊಂಡು ಅವರ ಮನೆಗೆ ಕಳಿಸಿಕೊಡಬೇಕು. ಅವರು ಜೈಲಿನಲ್ಲಿ ಅದನ್ನು ಬೀಸುವುದಕ್ಕೆ ಏರ್ಪಾಟು ಮಾಡುತ್ತಾರೆ. ಇಲ್ಲಿ ಅಂಥ ವಿಶೇಷ ಕಷ್ಟವೇನೂ ಆಗಲಾರದೆಂದು ತೋರುತ್ತದೆ. ಓಡಾಡಬೇಕಾದ್ದು ಅಗತ್ಯ. ಅದಕ್ಕೆ ಕಾರು ಬೇಕು. ನಡೆದಾಡಲು ಕಾಲುಗಳಲ್ಲಿ ಶಕ್ತಿಯೇ ಇಲ್ಲ. ಬಹುಶಃ ಕಾಳಿ ಕಾರನ್ನು ತೆಗೆದುಕೊಂಡು ಇಲ್ಲಿಗೆ ಬರಬೇಕಾಗ ಬಹುದು. ಆರೇಳು ದಿವಸಗಳಲ್ಲಿ ಯಾವುದನ್ನೂ ತೀರ್ಮಾನಿಸಿ, ಕಾಗದ ಬರೆಯುತ್ತೇನೆ.

"ಬೂಡಿ, ಬಾಧಾ[1] ಅತಿಯಾದ ತುಂಟಾಟಗಳಲ್ಲಿ ತೊಡಗಿ ಎಲ್ಲಿಯಾದರೂ ಕಾಯಿಲೆಬಿದ್ದಾರು, ನೋಡಿಕೊ. ಅಕ್ಕ ತನ್ನ ಮನೆಗೆ ಹಿಂದಿರುಗಿ ಹೋಗಿರಬೇಕು. ಅಲ್ಲಿಯೇ ಇದ್ದಿದ್ದರೆ ನಿಮಗೆಲ್ಲ ಅನುಕೂಲವಾಗುತ್ತಿತ್ತು. ಯಾವನಾದರೂ ಅಡಿಗೆಯವನು ಸಿಕ್ಕಿದನೋ ಇಲ್ಲವೋ? ನನಗೆ ಇದೇ ಯೋಚನೆಯಾಗಿದೆ. ಹೇಗಾದರೂ ಸರಿ, ಎಷ್ಟಾದರೂ ದುಡ್ಡುಕೊಟ್ಟು, ಯಾವನಾದರೂ ಒಬ್ಬನನ್ನು

1. ಪ್ರಕಾಶಚಂದ್ರರ ಮಕ್ಕಳು.

ಗೊತ್ತುಮಾಡಿಕೊ. ಇಲ್ಲದೆ ಹೋದರೆ ಮನೆಯಲ್ಲಿ ಎಲ್ಲರಿಗೂ ತೊಂದರೆ ಆಗುತ್ತದೆ.

"ಪ್ರಕಾಶನಿಗೆ ಈ ಕಾಗದವನ್ನು ತೋರಿಸಿ, ಇನ್ನು ಎಲ್ಲ ಭಾರವೂ ಅವನ ಮೇಲೆ ಬಿದ್ದಿದೆ ಎಂದು ಹೇಳು. ಯಾರಿಗಾದರೂ ಆರೋಗ್ಯ ಸರಿ ಇಲ್ಲದೆ ಇದ್ದರೆ, ಕೂಡಲೇ ನನಗೆ ತಿಳಿಸು. ಇವತ್ತು ಅಥವಾ ನಾಳೆ ಡಾ. ಕುಮುದ ಶಂಕರ್ ಅವರಿಗೆ ಕಾಗದ ಬರೆಯುತ್ತೇನೆ. ನಮ್ಮ ಮನೆಗೆ ಬಂದು ನೋಡಿಕೊಂಡು ಹೋಗಬೇಕೆಂದು ಪ್ರಕಾಶ ಅವರಿಗೆ ತಿಳಿಸಲಿ.

ಕಿರಿಯ ಸೊಸೆಗೆ, ಮಕ್ಕಳಿಗೆ, ಹೋಂದಲ್ ಮತ್ತು ಪ್ರಕಾಶ್ ಹಾಗೂ ನಿನಗೆ ನನ್ನ ಆಶೀರ್ವಾದಗಳು. ಅಕ್ಕನಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ಇತಿ. 18 ಫಾಲ್ಗುಣ 1343 (ಫೆಬ್ರುವರಿ 1937)

ಶುಭಾಕಾಂಕ್ಷಿ

ಶರತ್‌ಚಂದ್ರ ಚಟ್ಟೋಪಾಧ್ಯಾಯ

ಮರೆತ ಮಾತು: ಪೇಟೆಯಿಂದ ಹಿಂದಿರುಗಿದ ಮೃತ್ಯುಂಜಯ, ನಾನು ಇಲ್ಲಿಗೆ ಬಂದು ಸೇರಿದ್ದರ ಬಗ್ಗೆ ನಿನಗೆ ತಂತಿಯ ಮೂಲಕ ಸುದ್ದಿ ಮುಟ್ಟಿಸಿರುವುದಾಗಿ ಇದೇ ತಾನೆ ಹೇಳಿದ್ದಾನೆ.

ಶ.ಚ."

ಈ ಪತ್ರದಲ್ಲಿ ಶರತ್‌ಚಂದ್ರರು ಹಿರಣ್ಮಯೀ ದೇವಿ ಅವರನ್ನು 'ಕಲ್ಯಾಣಮಯಿ' ('ಕಲ್ಯಾಣಿಯಾಶು') ಎಂದು ಸಂಬೋಧಿಸಿದ್ದಾರೆ. ಇದು ಪ್ರೀತಿಯ ಸಂಬೋಧನೆಯೇನೂ ಅಲ್ಲ. ಆದರೆ, ಅದರಲ್ಲಿ ಒಂದೊಂದು ಮಾತೂ ಅವರ ಆಳವಾದ ಪ್ರೀತಿಯನ್ನು ತೋರುತ್ತದೆ. ಅವರು ಆಕೆಯನ್ನು ಸದಾ 'ಸೊಸೆ' ಅಥವಾ 'ಹಿರಿಯ ಸೊಸೆ' ಎಂದು ಕರೆಯುತ್ತಿದ್ದರು. ಆಕೆ ಸುಂದರವಾಗಿರಲಿಲ್ಲ, ಆದರೆ, ಅವರ ಕಣ್ಣುಗಳಿಗೆ ಪ್ರೇಮದ ಅಂಜನವನ್ನು ಹಚ್ಚಿಬಿಟ್ಟಿದ್ದರು. ಆಕೆಯ ರೂಪವನ್ನು ವರ್ಣಿಸಿ ಅವರೆಂದೂ ದಣಿಯುತ್ತಿರಲಿಲ್ಲ. "ಹಿರಿಯ ಸೊಸೆಯ ಬಣ್ಣ ತುಂಬ ಬಿಳುಪಲ್ಲವಾದರೂ, ಆಕೆಯಂಥ ಮೈಕಟ್ಟು ಬಂಗಾಳಿ ಹೆಣ್ಣುಗಳಲ್ಲಿ ಅಷ್ಟಾಗಿ ಕಾಣದೊರೆಯುವುದಿಲ್ಲ" ಎನ್ನುತ್ತಿದ್ದರು.

ಆಗಾಗ ತಮ್ಮ ಗೆಳೆಯರಿಗೆ ಮತ್ತು ಅಭಿಮಾನಿಗಳಿಗೆ ಬರೆದ ಪತ್ರಗಳಲ್ಲಿ ಅವರು ತುಂಬ ಆತ್ಮೀಯತೆಯಿಂದ ತಮ್ಮ ಗೃಹಸ್ಥ ಜೀವನದ ಬಗ್ಗೆ ಉಲ್ಲೇಖಿಸಿದ್ದಾರೆ ಹಾಗೂ ತಮ್ಮ ಯಶಸ್ಸಿನ ಶ್ರೇಯಸ್ಸು ತಮ್ಮ ಪತ್ನಿಗೇ ಸಲ್ಲತಕ್ಕದ್ದು ಎಂದೂ ಹೇಳಿದ್ದಾರೆ. ಹಿರಣ್ಮಯೀ ದೇವಿ ಅವರ ಊಟ-ತಿಂಡಿಗಳ ಮೇಲೆ ಮಾತ್ರವಲ್ಲದೆ, ಅವರ ಚಲನವಲನಗಳ ಮೇಲೂ ಅಂಕುಶವನ್ನಿಟ್ಟುಕೊಂಡಿದ್ದರು ಎಂಬುದೂ ಅವರ ಪತ್ರಗಳಿಂದ ತಿಳಿದು ಬರುತ್ತದೆ. ಒಂದು ಸೇರಿನಷ್ಟು ಹೊಗೆಸೊಪ್ಪನ್ನು ಒಂದು ವಾರದ ವರೆಗೆ ಹೇಗಾದರೂ ಸರಿಸಿಕೊಳ್ಳಬೇಕೆಂದು ಆಕೆ ಕಟ್ಟುಪಾಡು ವಿಧಿಸುತ್ತಿದ್ದರು. ಆದರೆ, ವಯಸ್ಸಾಗುತ್ತ ಬಂದಂತೆ ಪ್ರೀತಿಯ ಈ ಕಟ್ಟುಪಾಡುಗಳು ಹಾರ್ದಿಕತೆಯ ಹಾಗೂ ಆಳವಾದ ಆತ್ಮೀಯತೆಯ ರೂಪವನ್ನು ಪಡೆದುಕೊಂಡು ಬಿಟ್ಟಿದ್ದುವು. ಅಣ್ಣನ ಮಕ್ಕಳ ವಿಷಯದಲ್ಲಿ ಅವರಿಗೆ ಅದೆಷ್ಟು ಕಾಳಜಿ ಇತ್ತೆಂಬುದೂ

ಈ ಪತ್ರದಿಂದ ಸ್ಪಷ್ಟವಾಗುತ್ತದೆ. ತಮ್ಮ ಸೋದರಿಯ ಬಗ್ಗೆ ಅವರಿಗೆಷ್ಟು ಪ್ರೀತಿ-ಆದರಗಳಿದ್ದುವೆಂಬುದೂ ಇದರಿಂದ ತಿಳಿದುಬರುತ್ತದೆ. ತಿಳಿದಂತೆ, ತಿಳಿಯದಂತೆ, ಕಂಡಂತೆ, ಕಾಣದಂತೆ ಈ ಸೋದರಿ ಅವರ ಮೇಲೆ ತುಂಬ ಪ್ರಭಾವ ಬೀರಿದ್ದರು. ಆದ್ದರಿಂದಲೇ, ಅವರು ಆಕೆಯನ್ನು ತಮ್ಮ ಸಾಹಿತ್ಯದಲ್ಲಿ ಅಮರವಾಗಿಸಿಬಿಟ್ಟಿದ್ದಾರೆ.

ದೇವಘರ್‌ನಿಂದ ಹಿಂದಿರುಗಿದ ಬಳಿಕ, ಬಹು ದಿನಗಳ ವರೆಗೆ ಅವರು ಉತ್ತಮ ಆರೋಗ್ಯದಿಂದ ಇರಲಿಲ್ಲ. ಮತ್ತೆ ಮತ್ತೆ ತಮ್ಮ ಪತ್ರಗಳಲ್ಲಿ ಅವರು ಇದೇ ವಿಚಾರವನ್ನು ಚರ್ಚಿಸಿದ್ದಾರೆ. ಹರಿದಾಸ್ ಅವರಿಗೆ ಹೀಗೆಂದು ಬರೆದಿದ್ದರು: "ನಾನು ಚೆನ್ನಾಗಿಯೇನೂ ಇಲ್ಲ. ಶರೀರ ನಿಜವಾಗಿಯೂ ಮುರಿದು ಬಿದ್ದಂತೆಯೇ ಆಗಿಬಿಟ್ಟಿದೆ. ಏನಾದರೂ ತೊಂದರೆ ಅಂಟಿಕೊಂಡೇ ಇರುತ್ತದೆ. ಎಷ್ಟುದಿನ ಕಳೆಯಬಹುದು ಎಂದು ಪ್ರತಿದಿನವೂ ಮನಸ್ಸಿನಲ್ಲಿಯೇ ಲೆಕ್ಕ ಹಾಕುತ್ತ ಇರುತ್ತೇನೆ. ಇನ್ನು ಹೆಚ್ಚು ದಿನ ಕಾಯಬೇಕಾಗಿಲ್ಲ ಎಂದು ನಂಬಿದ್ದೇನೆ. ವಿರಾಗಿಯ ಬಾಳು ಎಷ್ಟು ಬೇಗ ಕೊನೆಗೊಂಡರೆ ಅಷ್ಟೂ ಒಳ್ಳೆಯದು."[1]

ಮಾವ ಡಾ. ಸತ್ಯೇಂದ್ರನಾಥ ಗಾಂಗೂಲಿ ಅವರಿಗೆ ಹೀಗೆಂದು ಬರೆದಿದ್ದರು: "ಪಾಳು ಬಿದ್ದಿರುವ ಮನೆಯಲ್ಲಿ ಅದೆಷ್ಟು ಭೂತಗಳು ಹೊಕ್ಕಿಬಿಟ್ಟಿವೆ. ಆರಾಮ ಕುರ್ಚಿಯಲ್ಲಿ ಕುಳಿತುಕೊಂಡು ಇದನ್ನೇ ಯೋಚಿಸುತ್ತಿರುತ್ತೇನೆ; 'ದಯಾಮಯನೇ ಇನ್ನೆಷ್ಟು ಕಾಲ ಕಾಯಬೇಕು ?' ಎಂದು ಕೇಳಿಕೊಳ್ಳುತ್ತಿರುತ್ತೇನೆ."[2]

ಸಾವಿನ ಹೆಜ್ಜೆಯ ಸಪ್ಪಳ ಮತ್ತಷ್ಟು ಹತ್ತಿರದಲ್ಲಿ ಕೇಳಿ ಬರುತ್ತಿತ್ತು. ಆದರೆ, ಅವರ ಮನಸ್ಸು ಸ್ವಲ್ಪ ಗೆಲುವಾಗಿದ್ದರೂ ಗೆಳೆಯರ ಸುಖ-ದುಃಖಗಳ ಬಗ್ಗೆ, ಗೌರವಾದರಗಳ ಬಗ್ಗೆ ಅವರು ಕಾಳಜಿ ತೋರುತ್ತಿದ್ದರು. ದೇವಘರ್‌ನಿಂದ ಹಿಂದಿರುಗಿದ ಬಳಿಕ ಅವರಿಗೆ ಹೀಗನ್ನಿಸಿತು: ನನ್ನ ಆತ್ಮೀಯ ಗೆಳೆಯರಾದ ಅಸಮಂಜಸ ಮುಖೋಪಾಧ್ಯಾಯ ಅವರಿಗೆ ಸರಿಯಾದ ಸ್ಥಾನ-ಮಾನಗಳನ್ನು ಕೊಟ್ಟಿಲ್ಲ; ಅವರ ಕೃತಿಗಳಿಗೆ ಸರಿಯಾಗಿ ಬೆಲೆಕಟ್ಟುವ ಕೆಲಸ ನಡೆದಿಲ್ಲ. ಆದ್ದರಿಂದ, 'ರಸಚಕ್ರ'ದ ಆಶ್ರಯದಲ್ಲಿ ಅವರಿಗೆ ಸನ್ಮಾನ ಸಮಾರಂಭವನ್ನು ಏರ್ಪಡಿಸಬೇಕೆಂದು ಅವರು ತೀರ್ಮಾನಿಸಿದರು.

ಬಹುಶಃ ಎಲ್ಲ ಖ್ಯಾತಿವೆತ್ತ ಸಾಹಿತಿಗಳ ಸಮ್ಮುಖದಲ್ಲಿ ಬೇಲ್‌ಗಛಿಯಾದ ದ್ವಾರಕಾ ತೋಟದಲ್ಲಿ, ಎಲ್ಲ ವಿಧಿ-ವಿಧಾನಗಳೊಂದಿಗೆ, ತಮ್ಮ ಎದುರಿಗೇ ಕೂಡಿಸಿಕೊಂಡು ಅವರು ಮುಖರ್ಜಿ ಮಹಾಶಯರನ್ನು ಅಭಿನಂದಿಸಿದರು. ಅವರಿಗೆ ಬಹುಮೂಲ್ಯ ಕಾಣಿಕೆಗಳನ್ನು ಅರ್ಪಿಸಿದರು; ಅಭಿನಂದನ ಪತ್ರವನ್ನು ಒಪ್ಪಿಸಿದರು; ಆ ತರುವಾಯ ಭೂರಿ ಭೋಜನದ ಏರ್ಪಾಟಿನಲ್ಲಿಯೂ ಯಾವುದೇ ಲೋಪವಿರಲಿಲ್ಲ. ಅಷ್ಟೇ ಅಲ್ಲ, ಇದರ ಎಲ್ಲ ವೆಚ್ಚವನ್ನೂ ಸ್ವತಃ ಶರತ್‌ಚಂದ್ರರೇ ಭರಿಸಿದರು.

ಆದರೆ ಈ ಉತ್ಸಾಹ ಕ್ಷಣಿಕವಾಗಿತ್ತು. ದಯಾಮಯ ಈಗ ಇನ್ನು ಹೆಚ್ಚು ಕಾಲ ಕಾಯುವ 'ಮೂಡ್'ನಲ್ಲಿ ಇರಲಿಲ್ಲ. ಆದ್ದರಿಂದ, ಈ ಸಲ ರೋಗ ಹೊಟ್ಟೆಯ ಮೇಲೆ ಆಕ್ರಮಣ ನಡೆಸಿತು. ತಪಾಸಣೆ ನಡೆಸಿದ ವೈದ್ಯರು 'ಡಿಸ್ಪೆಪ್ಸಿಯಾ'

---

1. ಆಗಸ್ಟ್ 31, 1937.
2. ಭಾದ್ರ 27, 1344 (ಸಪ್ಟಂಬರ್ 10-12, 1937).

ಆಗಿದೆಯೆಂದು ಘೋಷಿಸಿದರು.

ಈಗ 'ಡಿಸ್ಪೆಪ್ಸಿಯಾ' ಚಿಕಿತ್ಸೆ ಆರಂಭವಾಯಿತು. ಔಷಧಿಯ ಮೇಲೆ ಔಷಧಿಯನ್ನು ಸೇವಿಸಬೇಕಾಯಿತು. ಆದರೆ, ಸುಧಾರಣೆಯ ಖಾತೆಯಲ್ಲಿ ಸೊನ್ನೆಯಿಂದ ಆಚೆಗೆ ಯಾವುದೇ ಪ್ರಗತಿ ಕಂಡುಬರಲಿಲ್ಲ. ಬಂಧುಗಳು ಚಿಂತೆಗೊಳಗಾದರು. ಇಂಥ ಸಂದರ್ಭದಲ್ಲಿ ಅವರಿಗೆ ಬಹುಶಃ ತಮ್ಮ ಮಿತ್ರನೂ ಮಾವನೂ ಆಗಿದ್ದ ಸುರೇಂದ್ರನಾಥ ಗಂಗೂಲಿಯವರ ನೆನಪು ಬರುತ್ತಿತ್ತು. ಸುದ್ದಿ ತಿಳಿದೊಡನೆಯೇ ಅವರು ಓಡಿಬಂದರು.[1] ನೋಡಿದರೆ, ಎಲ್ಲವೂ ಗಡಿಬಿಡಿಯಿಂದ ಕೂಡಿತ್ತು. ರೋಗಿಯು ಪಥ್ಯವನ್ನು ಕಟ್ಟುನಿಟ್ಟಾಗಿ ಅನುಸರಿಸುವುದು ಅಗತ್ಯವೆಂದು ಅವರಿಗೆ ತೋರಿತು. ಆದರೆ, ಹಿರಣ್ಮಯೀ ದೇವಿಯವರು ಯಾರ ಮಾತನ್ನೂ ಕೇಳಲು ಸಿದ್ಧರಾಗಿರಲಿಲ್ಲ. ಊಟ-ತಿಂಡಿ ಮಾಡದೆ ಇರುವುದರಿಂದಲೇ ಇದೆಲ್ಲ ಆಗಿಬಿಟ್ಟಿದೆ ಎಂದು ಆಕೆ ನಂಬಿದ್ದರು. ಆದ್ದರಿಂದ ಶರತ್‌ಚಂದ್ರರು ಚೆನ್ನಾಗಿ ಊಟತಿಂಡಿ ಮಾಡಿಕೊಂಡಿರಬೇಕು ಎಂದೇ ಆಕೆ ಸದಾ ಚಿಂತಿಸುತ್ತಿದ್ದರು. ಅವರು ತಿಂದು ಒದ್ದಾಡುತ್ತಿದ್ದರು. ವೈದ್ಯರು ಒತ್ತಾಯಪೂರ್ವಕವಾಗಿ ಹೇಳಿದ ಮೇಲೆ ಚಹಾ ಕುಡಿಯುವುದನ್ನು ಬಿಡಲು ಪ್ರಯತ್ನಿಸಿದರು. ಆದರೆ ಆ ಹಳೆಯ ಹಾಗೂ ತೀರ ಹತ್ತಿರದ ಗೆಳೆಯನ ಬಗೆಗಿನ ಮಮತೆ ಅಷ್ಟು ಸುಲಭವಾಗಿ ಬಿಟ್ಟು ಹೋಗುತ್ತದೆಯೆ? ಮಾವ ಸುರೇಂದ್ರನಾಥರೆಂದರು: "ಇನ್ನೂ ಮಾಡಬೇಕಾದ ಕೆಲಸ ಬೇಕಾದಷ್ಟಿದೆ."

ಅವರೆಂದರು: "ಈಗ ರೋಗದ ನೋವನ್ನು ಸಹಿಸುವುದನ್ನು ಬಿಟ್ಟರೆ ಬೇರೆ ಯಾವ ಕೆಲಸವೂ ಉಳಿದಿಲ್ಲ."

ಮಾವನವರೆಂದರು: "ನಾಡು ಇನ್ನೂ ನಿಮ್ಮಿಂದ ಬಹಳಷ್ಟು ನಿರೀಕ್ಷಿಸುತ್ತಿದೆ."

ನಿಟ್ಟುಸಿರು ಬಿಡುತ್ತ ಶರತ್‌ಚಂದ್ರರೆಂದರು: "ನಿಜವಾಗಿಯೂ ಬಹಳಷ್ಟು ಕೆಲಸ ಉಳಿದುಹೋಗಿದೆ. ಕಾಲಾವಕಾಶ ದೊರೆತಿದ್ದರೆ, ಅಪೂರ್ಣವಾಗಿರುವ ಕೃತಿಗಳನ್ನಾದರೂ ಮುಗಿಸುತ್ತಿದ್ದೆ."

ಸುರೇಂದ್ರನಾಥರು ಧೈರ್ಯ ನೀಡುತ್ತ ಹೇಳಿದರು: "ಕಾಲಾವಕಾಶ ಖಂಡಿತವಾಗಿಯೂ ದೊರೆಯುತ್ತದೆ."

ಆದರೆ, ಇನ್ನು ಕಾಲಾವಕಾಶವೇನೂ ಉಳಿದಿಲ್ಲವೆಂಬುದು ಅವರಿಗೆ ಗೊತ್ತಾಗಿ ಬಿಟ್ಟಿತ್ತು. ವೈರಾಗ್ಯಶೀಲವಾಗಿದ್ದ ಅವರ ಮನಸ್ಸು ಮತ್ತಷ್ಟು ವೈರಾಗ್ಯವನ್ನು ತಾಳಿತ್ತು. ಸುರೇಂದ್ರನಾಥರು ಕೆಲವು ದಿನಗಳ ಬಳಿಕ ಹಿಂದಿರುಗಿದರು. ಹೆಚ್ಚು ಕಾಲ ಅಲ್ಲಿಯೇ ಇರುವುದು ಅವರಿಗೆ ಸಾಧ್ಯವಿರಲಿಲ್ಲ. ವೈದ್ಯರೆಂದರು: "ರಾಜಗೃಹಕ್ಕೆ ಹೋದರೆ ಪ್ರಯೋಜನವಾಗಬಹುದು."

ಆದರೆ, ಆರೋಗ್ಯ ತೀವ್ರಗತಿಯಲ್ಲಿ ಕುಸಿಯುತ್ತ ನಡೆದಿತ್ತು. ಅಲ್ಲಿಗೆ ಹೋಗುವುದು ಈಗ ಸಾಧ್ಯವಿರಲಿಲ್ಲ. ಆರೋಗ್ಯ ಮತ್ತೆ ಹದಗೆಟ್ಟಾಗ ಪ್ರಕಾಶಚಂದ್ರರು ಸುರೇಂದ್ರನಾಥರಿಗೆ ಹೇಳಿಕಳಿಸಿದರು. "ಕೂಡಲೇ ಹೊರಟು ಬನ್ನಿ" ಎಂದು ಬರೆದು ಕಳಿಸಿದ್ದರು.

---

1. ನವೆಂಬರ್ 3, 1937.

ಸುರೇಂದ್ರನಾಥರು ಬಂದರು. ಆ ಹೊತ್ತಿಗೆ ಕಾಳೀಪೂಜೆಯ ಉತ್ಸವ ಕೊನೆಗೊಂಡಿತ್ತು. ವಯಸ್ಸಿನಿಂದಾಗಿ ಶಿಥಿಲಗೊಂಡಿದ್ದ ಶರತ್‌ಚಂದ್ರರ ಶರೀರವನ್ನು ಕಂಡು ಅವರು ಬೆಚ್ಚಿದರು. ಅಲ್ಲಿಂದ ಹೊರಗೆ ಕೊಂಡೊಯ್ಯದಿದ್ದರೆ ಅವರು ಬದುಕಿ ಉಳಿಯುವುದು ಸಾಧ್ಯವಿಲ್ಲವೆಂದು ಅವರಿಗೆ ಅರ್ಥವಾಯಿತು.

ಶರತ್‌ಚಂದ್ರರೆಂದರು: "ಈ ರೋಗಕ್ಕೆ ಯಾವ ಚಿಕಿತ್ಸೆಯೂ ಇಲ್ಲ. ಶಾಂತಿಯಿಂದ ಕಣ್ಣು ಮುಚ್ಚಲು ಬಿಡು - ಇಲ್ಲಿಯೇ ರೂಪನಾರಾಯಣ ನದಿಯ ತೀರದಲ್ಲಿ, ಪ್ರಭಾಸನ ಸಮಾಧಿಯ ಬಳಿ."

ಸುರೇಂದ್ರನಾಥರೆಂದರು: "ಇದೇನು ಕೆಲಸಕ್ಕೆ ಬಾರದ ಮಾತನಾಡುತ್ತಿದ್ದೀಯೇ ?"

ಆದರೆ, ಇವು ಕೆಲಸಕ್ಕೆ ಬಾರದ ಮಾತುಗಳೇನೂ ಆಗಿರಲಿಲ್ಲ. ಸಾವಿನ ಹೆಜ್ಜೆಯ ಸಪ್ಪಳ ಇಬ್ಬರಿಗೂ ಕೇಳಿಸುತ್ತಿತ್ತು. ಆದರೂ, ಅದನ್ನು ಮರೆಯಲು ಪ್ರಯತ್ನಿಸುತ್ತಿದ್ದರು. ಒಮ್ಮೆ ಮೀನುಗಳ ಬಗ್ಗೆ ಯೋಚಿಸಿದರೆ, ಇನ್ನೊಮ್ಮೆ ತೋಟದ ಹೂವುಗಳ ವಿಷಯದಲ್ಲಿ ಮನಸ್ಸನ್ನು ತೊಡಗಿಸಿಕೊಳ್ಳುತ್ತಿದ್ದರು. ಬಂಧುಗಳು, ಮಿತ್ರರು ಮತ್ತು ಅಭಿಮಾನಿಗಳು ಈಗಲೂ ಹಿಂದಿನಂತೆಯೇ ಬರುತ್ತಿದ್ದರು ಹಾಗೂ ಅವರ ಈ ಸ್ಥಿತಿಯನ್ನು ಕಂಡು ಚಿಂತೆಗೊಳಗಾಗುತ್ತಿದ್ದರು. ಒಂದು ದಿವಸ ಹಿಂದೀ ಬರೆಹಗಾರ ಅಮೃತಲಾಲ್ ನಾಗರ್ ಅವರು ಬಂದಿದ್ದರು. ಅವರ ಒಬ್ಬ ಗೆಳೆಯ ಶರತ್‌ಚಂದ್ರರ ಎಂಥ ಭಕ್ತನಾಗಿದ್ದನೆಂದರೆ ಪುಸ್ತಕಗಳ ಬೀರುವಿನ ಮೇಲೆ 'ಶ್ರೀ ಗಣೇಶಾಯ ನಮಃ' ಎಂಬುದಕ್ಕೆ ಬದಲಾಗಿ 'ಶ್ರೀ ಶರತ್‌ಚಂದ್ರ ಚಟ್ಟೋಪಾಧ್ಯಾಯ ನಮಃ' ಎಂದು ಬರೆಸಿದ್ದ. ಸ್ವತಃ ಶರತ್‌ಚಂದ್ರರೂ ಇಂಥ ಒಬ್ಬ ಮಹಾ ಭಕ್ತೆಯನ್ನು ಕಂಡಿದ್ದರು. ಆಕೆ ಮನೆಯಲ್ಲಿ ದೇವರ ಕೋಣೆಯನ್ನು ಮಾಡಿಸಿ, ವೇದಿಕೆಯ ಮೇಲೆ ಶರತ್‌ಚಂದ್ರರ ಪುಸ್ತಕಗಳನ್ನು ಜೋಡಿಸಿ ಇಟ್ಟಿದ್ದಳು. ಪ್ರತಿದಿನವೂ ಪೂಜೆ-ಪುರಸ್ಕಾರಗಳು ಯಥಾವಿಧಿಯಾಗಿ ಅನಿರ್ಬಂಧಿತರೂಪದಲ್ಲಿ ನಡೆಯುತ್ತಿದ್ದುವು. ಆ ಏಕಾಂತದಲ್ಲಿ ಆಕೆ ಶರತ್‌ಚಂದ್ರರಿಗೆ ತನ್ನ ಇಡೀ ಕಥೆಯನ್ನು ಹೇಳಿಕೊಂಡಿದ್ದಳು. ಒಂದು ಗೌರವಸ್ಥ ಕುಟುಂಬದ ಸುಶಿಕ್ಷಿತ ಮಹಿಳೆಯಾಗಿದ್ದ ಆಕೆ ಆ ಮನೆಯ ಸದ್ಗೃಹಸ್ಥನ ರಕ್ಷಣೆಯಲ್ಲಿದ್ದಳು.

ಅಂದು ಶರತ್‌ಚಂದ್ರರಿಗೆ ಅದೆಷ್ಟು ಸಮಾಧಾನ ದೊರೆತಿತ್ತು! ತಮ್ಮ ಸಾಹಿತ್ಯ ರಚನೆ ಸಾರ್ಥಕವಾಯಿತೇನೋ ಎಂದೆನಿಸಿತ್ತು. ನಾಗರ್ ಅವರೂ ಕಡಿಮೆ ಪ್ರಭಾವಿತರೇನೂ ಆಗಿರಲಿಲ್ಲ. ಆಗಾಗ್ಗೆ ಅವರನ್ನು ನೋಡಲು ಬರುತ್ತಿದ್ದರು. ಈ ಬಾರಿ ಬಂದಾಗ[1] ಅವರನ್ನು ನೋಡಿ ಆಶ್ಚರ್ಯಗೊಂಡರು. ವಿಚಾರಿಸಿದಾಗ ಜಠರಕೋಶದ ತೊಂದರೆ ಇದೆಯೆಂದೂ, ತಿಂದದ್ದೇನೂ ಅರಗುತ್ತಲೇ ಇಲ್ಲವೆಂದೂ ಅವರಿಗೆ ತಿಳಿದು ಬಂದಿತು. 'ಕ್ವೇಟರ್ ಓಟ್' ಕೂಡ ಜೀರ್ಣವಾಗುತ್ತಿರಲಿಲ್ಲ. ಒಣಗಿ ಕಡ್ಡಿಯಂತಾಗಿಬಿಟ್ಟಿದ್ದರು.

ನಾಗರ್ ಅವರನ್ನು ನೋಡಿ ಶರತ್‌ಚಂದ್ರರಿಗೆ ತುಂಬ ಸಂತೋಷವಾಯಿತು.

---

1. ಸಪ್ಟೆಂಬರ್ 1, 1937.

ಅವರೆಂದರು: "ನೀವು ಬಂದಿದ್ದರಿಂದ ನನಗೆ ತುಂಬ ಸಂತೋಷವಾಗಿದೆ. ಇನ್ನು ನನಗೆ ಈ ಬಾಳಿನಲ್ಲಿ ಯಾವ ಆಸೆಯೂ ಉಳಿದಿಲ್ಲ. ಈ ಶರೀರವೂ ಬಹುಶಃ ನಿರ್ಜೀವದಂತಾಗಿಬಿಟ್ಟಿದೆ. ತುಂಬ ಬಳಲಿಬಿಟ್ಟಿದ್ದೇನೆ. ಯಮಧರ್ಮ ಯಾವ ಕ್ಷಣದಲ್ಲಿ ಇನ್ವಿಟೇಷನ್ ಕಳಿಸಿದರೂ ಆ ಕ್ಷಣದಲ್ಲಿಯೇ ಹೊರಡಲು ನಾನು ಸಿದ್ಧನಾಗಿ ಕುಳಿತಿದ್ದೇನೆ."

ಕೆಲವು ಕ್ಷಣಗಳವರೆಗೆ ಸುಮ್ಮನಿದ್ದ ಬಳಿಕ ಅವರ ಅಂತರ್ಯದಲ್ಲಿನ ಅಲೆಮಾರಿ ಪ್ರವೃತ್ತಿ ಮತ್ತೆ ಜಾಗೃತಗೊಂಡಿತೋ ಎಂಬಂತೆ ಹೀಗೆಂದು ಹೇಳಿದರು: "ಹವಾಗುಣದ ಬದಲಾವಣೆಗಾಗಿ ಬಂಗಾಳವನ್ನು ಬಿಟ್ಟು ಬೇರೆಲ್ಲಿಗಾದರೂ ಹೋಗಬೇಕು ಎಂದೆನ್ನಿಸುತ್ತಿದೆ. ಆದರೆ, ಯಾವುದೇ ಒಂದು ಜಾಗದಲ್ಲಿ ಕಚ್ಚಿಕೊಂಡು ಕುಳಿತಿರುವ ಮನಸ್ಸಿಲ್ಲ. ಟ್ರೈನುಗಳಲ್ಲಿಯೇ ಸಂಚರಿಸುತ್ತಿರಬೇಕು, ಒಂದೆರಡು ದಿವಸಗಳಿಗಿಂತ ಹೆಚ್ಚಾಗಿ ಯಾವುದೇ ಒಂದು ಕಡೆ ತಂಗದಂತೆ ಮುಂದೆ ಮುಂದೆ ಹೋಗುತ್ತಿರಬೇಕು ಎಂದೆಲ್ಲ ಯೋಚನೆ ಬರುತ್ತದೆ."

ನಾಗರ್ ಅವರೆಂದರು: "ಹಾಗೆ ಮಾಡುವುದು ಬಹುಶಃ ನಿಮಗೆ ಸರಿಯಾಗಲಿಕ್ಕಿಲ್ಲ. ನೀವು ತುಂಬ ಅಶಕ್ತರಾಗಿ ಬಿಟ್ಟಿದ್ದೀರಿ."

ಅವರು ಏನೂ ಉತ್ತರ ಹೇಳಲಿಲ್ಲ. ಮೌನವಾಗಿ, ಕಣ್ಣುಮುಚ್ಚಿಕೊಂಡು, ಮೈ ಚಾಚಿದರು. ನಾಗರ್ ಮತ್ತೆ ಹೇಳಿದರು: "ನೀವು ನಮ್ಮ ಊರಿಗೆ ಬನ್ನಿ. ಲಕ್ನೋದಲ್ಲಿ ಈ ವ್ಯಾಧಿ ತಜ್ಞರೊಬ್ಬರಿದ್ದಾರೆ. ಕನಖಲ್‌ನಲ್ಲಿಯೂ ಈ ರೋಗಕ್ಕೆ ಬಹಳ ಒಳ್ಳೆಯ ಚಿಕಿತ್ಸೆ ದೊರೆಯುತ್ತದೆ. ಋಷಿಕೇಶ, ಹರಿದ್ವಾರ, ಕನಖಲ್ - ಎಲ್ಲಿ ಬೇಕಾದರೂ ನಿಮ್ಮ ತಂಗಣೆಗೆ ನಾನು ಏರ್ಪಾಟು ಮಾಡಬಲ್ಲೆ. ನಿಮ್ಮ ಆರೋಗ್ಯ ಖಂಡಿತವಾಗಿಯೂ ಸುಧಾರಿಸುತ್ತದೆ."

ಶರತ್‌ಚಂದ್ರರಿಗೆ ಸ್ವಲ್ಪ ಉತ್ಸಾಹ ಮೂಡಿದಂತಾಯಿತು. ಅವರೆಂದರು: "ಅಲ್ಲಿ ತುಂಬ ಚಳಿಯಾಗುತ್ತದಲ್ಲ! ನಾನು ಚಳಿಯನ್ನು ಹೇಗೆ ತಡೆದುಕೊಳ್ಳಬಲ್ಲೆ! ಸರಿ, ಯೋಚನೆ ಮಾಡಿ ನೋಡುತ್ತೇನೆ. ನಾಡಿದ್ದು ಕಲ್ಕತ್ತೆಗೆ ಹೋಗುತ್ತಿದ್ದೇನೆ. ಅಲ್ಲಿಂದ ನಿಮಗೆ ಕಾಗದ ಬರೆಯುತ್ತೇನೆ."

ಸಂಜೆಯ ಹೊತ್ತಿಗೆ, ನಾಗರ್ ಅವರು ಶರತ್‌ಚಂದ್ರರ ಪಾದಗಳನ್ನು ಮುಟ್ಟಿ ನಮಸ್ಕರಿಸಿ, ಡೋಲಿಯಲ್ಲಿ ಕುಳಿತು ಹೊರಡ ತೊಡಗಿದಾಗ, ಒಮ್ಮೆಗೇ ಅವರು ಹೀಗೆಂದರು: "ತಾಳು ಅಮೃತ್, ನಾನೀಗ ನಿಮಗೆ ರೂಪನಾರಾಯಣ ನದಿಯ ಸೌಂದರ್ಯವನ್ನು ತೋರಿಸಬಯಸುತ್ತೇನೆ."

ಡೋಲಿಯಿಂದ ಇಳಿದು ನಾಗರ್, ಅವರೊಡನೆ ರೂಪನಾರಾಯಣ ನದಿಯ ತೀರದ ವರೆಗೆ ನಡೆದರು. ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿದ್ದುವು. ಬಹುಶಃ ಅಂದು ಪೂರ್ಣಿಮೆಯಾಗಿತ್ತು. ಕೈಯಿಂದ ಸುಟ್ಟಿತೋರುತ್ತ ಅವರೆಂದರು: "ಪ್ರವಾಹ ಬಂದಾಗ, ನೀರು ನನ್ನ ಬಂಗಲೆಯ ಬುಡದವರೆಗೂ ಬಂದುಬಿಡುತ್ತದೆ. ಆಗ ನನಗೆ ತುಂಬ ಸಂತೋಷವಾಗುತ್ತದೆ. ನೆಲಕ್ಕೆ ಮತ್ತೆ ಕಾಲೇ ಇರಿಸಬಾರದು ಅನ್ನಿಸುತ್ತದೆ."

ಅದೇ ಚಿರಪರಿಚಿತ ಅಲೆಮಾರಿ ಮನಸ್ಸು ಮಾತನಾಡುತ್ತಿರುವಂತೆ ತೋರುತ್ತಿತ್ತು. ಅಂದು, ಕೊನೆಯ ಬಾರಿಗೆ ರೂಪನಾರಾಯಣ ನದಿಯ ತೀರದಲ್ಲಿ ನಿಂತಿದ್ದ ಆ

ಮಹಾ ಕಲಾವಿದನನ್ನು ಕಾಣುತ್ತಿದ್ದೇನೆ ಎಂದು ನಾಗರ್ ಅವರಿಗೆ ಅರಿವಾಗಿತ್ತು. ಆ ರೂಪನಾರಾಯಣ ನದಿಯ ಬಗ್ಗೆ ಶರತ್‌ಚಂದ್ರರಿಗೆ ತುಂಬ ಪ್ರೀತಿ ಇತ್ತು. ಆಗಾಗ ನದಿಯ ದಡದ ಬಳಿ ಕುಳಿತುಕೊಂಡು. ಅದನ್ನೇ, ನೋಡುತ್ತ ಇದ್ದುಬಿಡುತ್ತಿದ್ದರು. ತಮ್ಮನ್ನು ಕಾಣಲು ಬಂದವರೊಡನೆ ತಾವೇ ಖುದ್ದಾಗಿ ನದಿಯ ತೀರಕ್ಕೆ ಹೋಗಿ, ಆ ನದಿಯ ಬಗ್ಗೆ ಮಾತನಾಡುತ್ತಿದ್ದರು. ಕೆಲವೇ ದಿನಗಳ ಹಿಂದೆ ವಾಚಸ್ಪತಿ ಪಾಠಕರೆಂಬ ಇನ್ನೊಬ್ಬ ಹಿಂದೀ ಲೇಖಕರು ಅವರನ್ನು ಕಾಣಲು ಬಂದಿದ್ದರು. ಅವರು ಹಿಂದಿರುಗಲಿದ್ದಾಗ, ಅವರನ್ನು ತಡೆದು ಹೀಗೆಂದು ಹೇಳಿದ್ದರು: "ತಾಳಿ, ಇನ್ನೊಂದು ವಸ್ತುವನ್ನು ನೋಡಿಕೊಂಡು ಹೋಗಿ."

ಅವರು ಬಿಟ್ಟ ಕಣ್ಣು ಬಿಟ್ಟಂತೆ ನೋಡುತ್ತಲೇ ನಿಂತರು. ಅವರ ಎದುರಿಗೆ ರೂಪನಾರಾಯಣ ನದಿಯ ವಿಶಾಲವಾದ ಪಾತ್ರ ಹರಡಿಕೊಂಡಿತ್ತು. ಆಗ ಅದರಲ್ಲಿ ನೀರಿರಲಿಲ್ಲ. ಆದರೆ, ಮರಳಿನ ವಿಶಾಲವಾದ ಹರಹು ಕಡಿಮೆ ಪ್ರಭಾವ ಶಾಲಿಯಾಗಿಯೇನೂ ಇರುವುದಿಲ್ಲ. ಶರತ್‌ಚಂದ್ರರು ಅವರನ್ನು ಅಲ್ಲಿ ನಿಲ್ಲಿಸಿ, ತಾವು ಹಿಂದಕ್ಕೆ ನಡೆದಿದ್ದರು. ಆ ಹರಹು ಪಾಠಕರನ್ನು ಕಟ್ಟಿಹಾಕಿ ಬಿಟ್ಟಂತಿತ್ತು.

ಅವರು ನಿಜವಾಗಿಯೂ ಕಲಾವಿದರಾಗಿದ್ದರು; ಸೌಂದರ್ಯದ ಉಪಾಸಕ ರಾಗಿದ್ದರು. ಸೌಂದರ್ಯವೇ ಪುರುಷ; ಸೌಂದರ್ಯವೇ ಪ್ರಕೃತಿ. ಆದ್ದರಿಂದ, ಸೌಂದರ್ಯದ ಉಪಾಸಕರಾಗಿರುವವರು ಪ್ರಕೃತಿಯ ಉಪಾಸಕರೂ ಆಗಿರುತ್ತಾರೆ. ಅವರು ಪ್ರಕೃತಿಯ ಎರಡೂ ರೂಪಗಳ - ಅಂದರೆ, ಮನೋಹರ ಹಾಗೂ ಭಯಂಕರ ರೂಪಗಳ - ಉಪಾಸಕರಾಗಿರುತ್ತಾರೆ ಹಾಗೂ ಸ್ವತಃ ಭಗವಂತನ ಉಪಾಸಕರೂ ಆಗಿರುತ್ತಾರೆ. ಏಕೆಂದರೆ, ಸರ್ವೋತ್ತಮ ಸೌಂದರ್ಯವೇ ಭಗವಂತನ ರೂಪವಾಗಿರುತ್ತದೆ.

ನಾಗರ್ ಅವರು ಹಿಂದಿರುಗಿದರು. ಇಂದು ಈ ಮಹಾ ಲೇಖಕ ಅದೆಷ್ಟು ಭಾವುಕನಾಗಿ ಬಿಟ್ಟಿದ್ದಾನೆ. ಈತನ ಹೃದಯಾಂತರಾಳದಲ್ಲಿ ಅದೆಷ್ಟು ಪ್ರೀತಿ ತುಂಬಿಕೊಂಡಿದೆ? ಎಂದೆಲ್ಲ ಯೋಚಿಸುತ್ತಿದ್ದರು. ಯಶಸ್ಸು ದೊರೆತೊಡನೆಯೇ ಜನ ಅಹಂಕಾರದಿಂದ ಬೀಗತೊಡಗುತ್ತಾರೆ; ತಮ್ಮ ಚಾರಿತ್ರ್ಯವನ್ನು ಹಾಳು ಮಾಡಿಕೊಂಡುಬಿಡುತ್ತಾರೆ. ಆದರೆ ದುಃಖಗಳ ನಡುವೆಯೇ ಜೀವನ-ಯಾತ್ರೆಯನ್ನು ಆರಂಭಿಸಿದಂಥ, ಅದೆಷ್ಟೋ ಹಾದಿಗಳಲ್ಲಿ ಘಟ್ಟಗಳಲ್ಲಿ ತಲೆತಿರುಕನಂತ ಅಲೆದಾಡಿರುವಂಥ, ಪಾಪವೆಂದು ಭಾವಿಸಲಾಗಿರುವ ಕೆಲಸಗಳಿಗೂ ಕೈಹಾಕಿದಂಥ, ಆದರೆ ಪ್ರಾಮಾಣಿಕತೆ, ಕೆಚ್ಚು ಮತ್ತು ಕಾರುಣ್ಯಗಳಿಗೆ ಎಂದೂ ತಿಲಾಂಜಲಿಯನ್ನು ಕೊಡದಿದ್ದಂಥ ಹಾಗೂ ಕೊನೆಗೆ ಈ ಗುಣಗಳಿಂದಲೇ ದೊಡ್ಡವನಾಗಿ ಬೆಳೆದು ನಿಂತಂಥ ಒಬ್ಬ ವ್ಯಕ್ತಿಯೂ ಇದ್ದಾರಲ್ಲ! ಅದೆಂಥ ಉನ್ನತ ಲಲಾಟ, ನೀಳ ನಾಸಿಕ ಹಾಗೂ ದೊಡ್ಡ-ದೊಡ್ಡ, ಅಂತರ್ಯವನ್ನೇ ಭೇದಿಸಬಲ್ಲಂಥ ಕಣ್ಣುಗಳು! ಎಂಬಂಥ ಭಾವನೆಗಳು ಅವರ ಮನಸ್ಸಿನಲ್ಲಿ ಸುಳಿದು ಹೋದುವು.

ಎಷ್ಟು ದಿನಗಳ ಹಿಂದಿನ ಸಂಗತಿ. ಆಗ ಅವರು ಪೂರ್ಣ ಆರೋಗ್ಯದಿಂದಿದ್ದರು. ಅಂದು ಸಾಹಿತ್ಯದ ಬಗ್ಗೆ ಅದೆಷ್ಟು ಚರ್ಚೆ ನಡೆಸಿದ್ದರೋ ಏನೋ. ಸಾಹಿತ್ಯದ ಬಗೆಗಿನ ಈ ಚರ್ಚೆಗಳಲ್ಲಿ ರಾಜಕೀಯದ ಮಾತು, ಪ್ರೇಮಚಂದರ ವಿಷಯ ನುಸುಳಿ

ಬಂದಿದ್ದುವು. ಶರತ್‌ಚಂದ್ರರು ಅವರ ಕಥೆಗಳನ್ನು ಓದಿದ್ದರು. ಅನೇಕ ವರ್ಷಗಳ ಹಿಂದೆ, 'ಸಪ್ತ ಸರೋಜ' ಕಥಾ ಸಂಕಲನವನ್ನು ಓದಿ, ಆಗಾಗ್ಗೆ ತಮ್ಮ ಬಳಿಗೆ ಬಂದು-ಹೋಗುತ್ತಿದ್ದ ಕಲ್ಕತ್ತೆಯ 'ಹಿಂದೀ ಪುಸ್ತಕ ಏಜೆನ್ಸಿ'ಯ ಮಹಾವೀರ ಪ್ರಸಾದ ಪೋದ್ದಾರ್ ಅವರಿಗೆ[1] ಅವರು ತಮ್ಮ ಅಭಿಪ್ರಾಯವನ್ನು ಬರೆದು ಕಳಿಸಿದ್ದರು. ಅದರಲ್ಲಿ ಅವರು ಹೀಗೆ ಬರೆದಿದ್ದರು: "ಕಥೆಗಳು ನಿಜವಾಗಿಯೂ ತುಂಬ ಉತ್ತಮವಾಗಿವೆ, ಭಾವಪೂರ್ಣವಾಗಿವೆ. ರವೀಂದ್ರರೊಂದಿಗೆ ಅವರನ್ನು ಹೋಲಿಸುವುದು ಅನ್ಯಾಯದ ಹಾಗೂ ಅನುಚಿತವಾದ ಸಾಹಸವಾಗುತ್ತದೆ. ಆದರೆ, ಬಂಗಾಳದ ಇನ್ನೊಬ್ಬ ಲೇಖಕ ಇಷ್ಟು ಒಳ್ಳೆಯ ಕಥೆಗಳನ್ನು ಬರೆಯುಬಲ್ಲನೇ ಎಂಬ ಬಗ್ಗೆ ನನಗೆ ಸಂದೇಹವಿದೆ."[2]

"ನಿಮ್ಮ ಸಾಹಿತ್ಯ ಸಮ್ಮೇಳನಕ್ಕೆ ಯಾರಾದರೂ ಒಬ್ಬ ಮಹಾಸಾಹಿತಿಯನ್ನು ಅಧ್ಯಕ್ಷನನ್ನಾಗಿ ಮಾಡುವುದಕ್ಕೆ ಬದಲಾಗಿ ರಾಜಕೀಯ ಮುಖಂಡರನ್ನೇಕೆ ಅಧ್ಯಕ್ಷರನ್ನಾಗಿ ಮಾಡುತ್ತೀರಿ ?" ಎಂದೂ ಅವರು ಕೇಳಿದ್ದರು.

ನಾಗರ್ ಉತ್ತರಿಸಿದರು: "ಹಿಂದಿಯಲ್ಲಿ ಸ್ವಯಂಭೂಕರ್ಣಧಾರರ ಒಂದು ಗುಂಪಿದೆ. ಅವರು ತಮ್ಮ ಮನಸ್ಸಿಗೆ ಬಂದಂತೆ ಇದನ್ನೆಲ್ಲ ನಡೆಸುತ್ತಿದ್ದಾರೆ. ಇಲ್ಲದೆ ಹೋದರೆ, ನಮ್ಮ ಹಿಂದೀ ಸಾಹಿತ್ಯದಲ್ಲಿಯೂ ನಾವು ಹೆಮ್ಮೆ ಪಟ್ಟುಕೊಳ್ಳ ಬಹುದಾಗಿರುವಂಥ ಪ್ರೇಮಚಂದ್, ಜಯಶಂಕರ್ ಪ್ರಸಾದ್, ಮೈಥಿಲೀಶರಣ ಗುಪ್ತ, ನಿರಾಲಾ, ಪಂತ್ ಮೊದಲಾದ ಶ್ರೇಷ್ಠ ಸಾಹಿತಿಗಳಿದ್ದಾರೆ."

ಶರತ್‌ಚಂದ್ರರೆಂದರು: "ನಮ್ಮ ಬಂಗಾಳದಲ್ಲಿಯೂ ಹೆಚ್ಚಾಗಿ ದೊಡ್ಡ ದೊಡ್ಡ ಜಮೀನುದಾರರೇ ಸಾಹಿತ್ಯ ಸಮ್ಮೇಳನಗಳಿಗೆ ಅಧ್ಯಕ್ಷರಾಗುತ್ತಿರುತ್ತಾರೆ. ಆದರೆ, ಇದು ನನಗೆ ಇಷ್ಟವಿಲ್ಲ. 'ಸಾಹಿತ್ಯ' ಶಬ್ದದ ನಿಜವಾದ ಅರ್ಥವೇನೆಂಬುದರ ಗಂಧವೂ ಇಲ್ಲದಿರುವಂಥವರನ್ನು ಇಂಥ ಸಮ್ಮೇಳನಗಳಿಗೆ ಅಧ್ಯಕ್ಷರನ್ನಾಗಿಸುವುದು ಮಹಾ ಮೂರ್ಖತೆಯಷ್ಟು."

ಆದರೆ, ಈ ಎಲ್ಲ ಮಾತುಕತೆಗಳ ನಡುವೆಯೂ ಅವರು ತುಂಬ ವಿಶ್ವಾಸದಿಂದ ನಾಗರ್ ಅವರಿಗೆ ಹೀಗೆಂದು ಹೇಳಿದ್ದರು: "ನೋಡಿ ಅಮೃತ್, ನೀವಿನ್ನೂ ಹುಡುಗರು. ಮೇಲಾಗಿ, ನಿಮ್ಮ ತಂದೆಯ ನೆರಳೂ ಈಗ ನಿಮ್ಮ ತಲೆಯ ಮೇಲಿಲ್ಲ. ಇಂಥ ವ್ಯಕ್ತಿಗಳನ್ನು ಎಲ್ಲ ರೀತಿಗಳಿಂದಲೂ ಮೋಸಗೊಳಿಸಲು ಈ ಲೋಕ ಪ್ರಯತ್ನಿಸುತ್ತದೆ. ನಿಮಗೆ ಕುಟುಂಬದ ಹೊರೆಯೂ ಇದೆ. ಆದ್ದರಿಂದಲೇ, ನಿಮಗೆ ಇದನ್ನೆಲ್ಲ ಹೇಳುತ್ತಿದ್ದೇನೆ. ನಿಮ್ಮ ಹತ್ತಿರ ನಾಲ್ಕು ಕಾಸು ಇದ್ದರೆ, ಆ ನಾಲ್ಕು ಕಾಸುಗಳನ್ನು ಮಾತ್ರವೇ ಖರ್ಚುಮಾಡಬೇಕು. ಆದರೆ, ಎಂದೂ ಯಾರಿಂದಲೂ ಐದನೆಯ ಪೈಸೆಯನ್ನು ಸಾಲವಾಗಿ ತೆಗೆದುಕೊಳ್ಳಬೇಡಿ......"

ಅನೇಕ ದಿವಸಗಳ ಹಿಂದೆ ನಾಗರ್ ಅವರೊಂದಿಗೆ ಶರತ್‌ಚಂದ್ರರು ಹೀಗೆಂದಿದ್ದರು:

---

1. ಪೋದ್ದಾರ ಅವರು ಶರತ್‌ಚಂದ್ರರ ಗೆಳೆಯರಾಗಿದ್ದರು. ಈಗ ಅವರು ಜಸೀಡೀಹ್‌ನಲ್ಲಿ ಪ್ರಕೃತಿ ಚಿಕಿತ್ಸಾ ಕೇಂದ್ರವನ್ನು ನಡೆಸುತ್ತಿದ್ದಾರೆ.

2. 'ಸಪ್ತ ಸರೋಜ'ದ (ಎಂಟನೆಯ ಆವೃತ್ತಿ, ಮಾರ್ಗಶೀರ್ಷ, ಸಂ. 1987, ಸನ್ 1930) ಪೀಠಿಕೆ. ಮೊದಲ ಆವೃತ್ತಿ 1927ರಲ್ಲಿ ಅಚ್ಚಾಗಿತ್ತು.

"ನನ್ನ ಪ್ರಾಧ್ಯಾಪಕರು ನನಗೆ ಎರಡು ಮಾತುಗಳನ್ನು ಹೇಳಿದ್ದರು. ಒಂದು, ಎಂದೂ ಯಾರ ಬಗ್ಗೆಯೂ ವೈಯಕ್ತಿಕವಾಗಿ ಟೀಕೆಮಾಡಬೇಡ. ಎರಡು, ನೀನು ಏನನ್ನು ಬರೆದರೂ, ಅದು ನಿನ್ನ ಅನುಭವಕ್ಕೆ ಹೊರತಾಗಿರದಿರಲಿ. ತಮ್ಮಾ ಈ ಎರಡು ಮಾತುಗಳನ್ನೇ ನಾನು ನಿಮಗೂ ಹೇಳುತ್ತೇನೆ."

ದಿವಾಕರನ 'ವಿಷದ ಚೂರಿ' ಎಂಬ ಕಥೆಯನ್ನು ಓದಿ ಕಿರಣ್ಮಯಿಯೂ ಇದೇ ಮಾತನ್ನು ಹೇಳುತ್ತಾಳೆ: "ನಿನಗೇ ಯಾವುದು ಅರ್ಥವಾಗುವುದಿಲ್ಲವೋ ಅದನ್ನು ಬೇರೆಯವರಿಗೆ ತಿಳಿಸಿಹೇಳುವ ಮಿಥ್ಯಾ ಪ್ರಯತ್ನ ಮಾಡಬೇಡ. ಯಾವುದರ ಪರಿಚಯ ನಿನಗೇ ಇಲ್ಲವೋ ಅದನ್ನು ಅಸಂಬದ್ಧ ರೀತಿಯಲ್ಲಿ ಇನ್ನೊಬ್ಬರಿಗೆ ಪರಿಚಯಿಸಲು ಹೋಗಬೇಡ. ಹೊಸ ಕಲ್ಪನೆಯನ್ನೇನೋ ರೂಪಿಸಿಕೊಳ್ಳಬಹುದು; ಆದರೆ, ಅದಕ್ಕೆ ಜೀವವನ್ನು ತುಂಬಲಾಗುವುದಿಲ್ಲ. ಅದಕ್ಕೆ ತೂಕವಿರಬಹುದು; ಆದರೆ, ಅದು ದಾರಿಯನ್ನೇನೂ ತೋರಿಸಲಾರದು."

ಒಮ್ಮೆ ಗ್ರಾಮಾಫೋನಿನಲ್ಲಿ ಇನಾಯತ್ ಖಾನ್ ಅವರ ಸಿತಾರುವಾದನದ ರೆಕಾರ್ಡನ್ನು ಹಾಕಲಾಗಿತ್ತು. ಕೊನೆಯಲ್ಲಿ ಅವರು ತಮ್ಮ ಹೆಸರನ್ನು ಹೇಳಿಕೊಂಡಿದ್ದರು. ಶರತ್‌ಚಂದ್ರರು ಮುಗುಳ್ನಕ್ಕು, ಹುಕ್ಕಾದ ದಮ್ ಎಳೆಯುತ್ತ ಹೇಳಿದರು: "ಅಪ್ಪಾ, ನಾನೂ ನನ್ನ ರಿಕಾರ್ಡನ್ನು ಮಾಡಿಸಿಕೊಳ್ಳಬೇಕು ಹಾಗೂ ಅದರ ಕೊನೆಯಲ್ಲಿ ನಾನೂ ಇದೇ ರೀತಿಯಲ್ಲಿ, 'ನನ್ನ ಹೆಸರು ಶರತ್‌ಚಂದ್ರ ಚಟ್ಟೋಪಾಧ್ಯಾಯ' ಎಂದು ಹೇಳಿಕೊಳ್ಳಬೇಕು ಎಂದು ನನಗೂ ಆಸೆಯಾಗುತ್ತಿದೆ."

ನಾಗರ್ ಅವರು ಬಂದಿದ್ದು ಕುಟುಂಬದ ಎಲ್ಲರಿಗೂ ತುಂಬ ಇಷ್ಟವಾಯಿತು. ಶರತ್‌ಚಂದ್ರರಲ್ಲಿ ಕಲ್ಕತ್ತೆಗೆ ಹೋಗಬೇಕೆಂಬ ಉತ್ಸಾಹವೂ ಕಾಣಿಸಿಕೊಂಡಿತು. ಕಗ್ಗತ್ತಲೆಯಲ್ಲಿ ಯಾರೋ ಬೆಳಕಿನ ಕಿಂಡಿಯನ್ನು ತೆರೆದಂಥ ಅನುಭವಾಯಿತು.

ಮರಾಠೀ ಭಾಷೆಯ ಸುಪ್ರಸಿದ್ಧ ಸಾಹಿತಿ ಮಾಮಾ ವರೇರ್‌ಕರ್ ಅವರೊಂದಿಗೂ ಅವರಿಗೆ ತುಂಬ ಸ್ನೇಹವಿತ್ತು. ಒಮ್ಮೆ ಈ ಲೇಖಕ ಮಾಮಾ ಅವರೊಂದಿಗೆ ಈ ರೀತಿ ಹೇಳಿದ್ದ: "ಮಾಮಾ, ಶರತ್‌ಚಂದ್ರರು ಪ್ರಾಣಿಗಳನ್ನು ತುಂಬ ಪ್ರೀತಿಸುತ್ತಿದ್ದರಲ್ಲ......"

ನಾನು ನನ್ನ ಮಾತುಗಳನ್ನು ಪೂರೈಸುವುದಕ್ಕೆ ಮೊದಲೇ, ಮಾಮಾ ಅವರೆಂದರು: "ಆದ್ದರಿಂದಲೇ, ಅವರು ನನ್ನನ್ನೂ ಪ್ರೀತಿಸುತ್ತಿದ್ದರು."

ಅಟ್ಟಹಾಸದ ನಡುವೆ, ಮಾಮಾ ಅವರೆಂದರು: "ನಾನೂ ಒಂದು ದಿವಸ ಶರತ್‌ಚಂದ್ರರನ್ನು ಕೇಳಿದೆ: 'ನಿಮಗೆ ಮಕ್ಕಳಿಲ್ಲವೆ ?'. ಅವರೆಂದರು: 'ನಾನು ಏನು ಎಂಬುದು ನಿಮಗೆ ಗೊತ್ತೇ ಇದೆ. ನಾನು ಮಾಡದೆ ಇದ್ದ ಕೆಲಸವಿದೆಯೆ ? ಯಾವ ರೋಗಗಳು ತಾನೆ ನನ್ನ ಮೈಗೆ ಅಂಟಿಲ್ಲ ? ನನ್ನ ಬಳಿಕ ಇಂಥ ಮಕ್ಕಳನ್ನು ಬಿಟ್ಟು ಹೋಗಬೇಕೆಂದು ನೀವು ಇಚ್ಛೆಸುತ್ತೀರೇನು ?' "

ಆ ದಿನಗಳಲ್ಲಿ ಅವರ ಸಂವೇದನೆ ಮುಕ್ತಗೊಂಡಿತ್ತು. ಬೆಳಿಗ್ಗೆ ಎದ್ದು ಚಹಾ ಕುಡಿದ ಬಳಿಕ, ದುಡ್ಡನಿಟ್ಟುಕೊಂಡು ಕುಳಿತು ಬಿಡುತ್ತಿದ್ದರು. ಆ ಹಣವನ್ನು ಭಿಕ್ಷುಕರಿಗೆ ಹಂಚುತ್ತಿದ್ದರು. ಎಂದಾದರೂ ಶಾಸ್ತ್ರಿಗಳಿಗೆ ಅನಾರೋಗ್ಯವಾಗಿದ್ದು, ಅವರು ಬರದೆ ಹೋದರೆ, ಸ್ವತಃ ಅವರೇ ರಾಧಾಕೃಷ್ಣರನ್ನು ಪೂಜಿಸುತ್ತಿದ್ದರು. ಆಗೆಲ್ಲ ಅವರ

ಕಣ್ಣುಗಳಿಂದ ಸತತವಾಗಿ ಕಣ್ಣೀರು ಹರಿಯುತ್ತಿತ್ತು.

ಕೊನೆಗೆ, ಭಾನುವಾರದಂದು ಕಲ್ಕತ್ತೆಗೆ ಹೊರಡುವುದೆಂದು ಅವರು ತೀರ್ಮಾನಿಸಿದರು.

ಆಗ ಇದ್ದಕ್ಕಿದ್ದಂತೆ ಸಮಸ್ಯೆ ಹುಟ್ಟಿಕೊಂಡಿತು. ಶಾಸ್ತ್ರಿಗಳನ್ನು ಕರೆಸಿ, ಹಿರಣ್ಮಯೀ ದೇವಿ ಕೇಳಿದರು: "ಭಾನುವಾರ ಹೊರಡಬಹುದೆ? ಒಳ್ಳೆಯದಾಗುತ್ತದೆಯೆ?"

ಪಂಚಾಂಗವನ್ನು ತೆಗೆದು, ಲೆಕ್ಕಾಚಾರ ಹಾಕಿ ಹೇಳಿದರು: "ಭಾನುವಾರದಂದು ಅವರಿಗೆ ಕಲ್ಕತ್ತಾ ಪ್ರಯಾಣದ ಯೋಗವಿಲ್ಲ."

ಈ ಮಾತನ್ನು ಕೇಳಿ ಹಿರಣ್ಮಯೀ ದೇವಿ ತುಂಬ ಹೆದರಿಬಿಟ್ಟರು. ಶರತ್‌ಚಂದ್ರರಿಗೆ ಈ ವಿಚಾರಗಳಲ್ಲಿ ಸುತರಾಂ ನಂಬಿಕೆಯಿರಲಿಲ್ಲ. ಆದರೆ, ಹಿರಣ್ಮಯೀ ದೇವಿಯವರಿಗೆ ಅಪಾರವಾದ ನಂಬಿಕೆ ಇತ್ತು. ಆಕೆ ಹೀಗೆಂದು ಘೋಷಿಸಿಬಿಟ್ಟರು: "ಭಾನುವಾರ ಪ್ರಯಾಣ ಮಾಡುವಂತಿಲ್ಲ."

ಆದರೆ, ಈ ತೀರ್ಮಾನದ ಬಗೆಗಿನ ಸುದ್ದಿಯನ್ನು ಶರತ್‌ಚಂದ್ರರಿಗೆ ತಿಳಿಸುವುದಾದರೂ ಯಾರಿಗೆ ಸಾಧ್ಯವಿತ್ತು? ಅವರು ಕೂಡಲೇ ಅದನ್ನು ಪ್ರತಿಭಟಿಸಿ, "ಇಲ್ಲ, ನಾನು ಭಾನುವಾರದಂದೇ ಹೊರಡುತ್ತೇನೆ" ಎಂದು ಹೇಳಿಬಿಡುತ್ತಿದ್ದರು.

ಕೊನೆಗೆ ಎಲ್ಲರೂ ಸೇರಿ ಒಂದು ಉಪಾಯವನ್ನು ಪತ್ತೆಮಾಡಿದರು. ಪ್ರಕಾಶ ಚಂದ್ರರು, ಶಾಸ್ತ್ರಿಗಳು ಹಾಗೂ ಎಲ್ಲರಿಗೂ ಕೊನೆಯವರಾಗಿ ಕಣ್ಣೀರು ತುಂಬಿದ್ದ ಹಿರಣ್ಮಯೀ ದೇವಿ - ಈ ಮೂವರೂ ಶರತ್‌ಚಂದ್ರರ ಬಳಿಗೆ ಬಂದರು. ಅವರು ಕಣ್ಣುಮುಚ್ಚಿಕೊಂಡು, ಆರಾಮಕುರ್ಚಿಯಲ್ಲಿ ಹಿಂದಕ್ಕೆ ಒರಗಿಕೊಂಡು ಕುಳಿತಿದ್ದರು. ಹೆಜ್ಜೆಯ ಸಪ್ಪಳವನ್ನು ಕೇಳಿ, ಅವರು ಕಣ್ಣೆತ್ತಿನೋಡಿ ಪ್ರಕಾಶಚಂದ್ರರನ್ನು ಕೇಳಿದರು: ಏನಪ್ಪ, ಸಮಾಚಾರ?

"ಭಾನುವಾರ ಹೊರಡಲು ಸಾಧ್ಯವಾಗುವುದಿಲ್ಲ."

"ಮಾಮಾ, ಏನೆನ್ನುತ್ತಾರೆ?"

"ಸೋಮವಾರ ಹೋಗೋಣ ಅನ್ನುತ್ತಾರೆ!"

"ನನಗೂ ಹಾಗೇ ಅನ್ನಿಸುತ್ತ ಇದೆ. ನಾಳೆಯೇ ಎಲ್ಲ ಕೆಲಸಗಳೂ ಪೂರ್ಣವಾಗುವುದಿಲ್ಲ. ಸೋಮವಾರ ಹೊರಡುವುದೇ ಸರಿ."

ಶುಕ್ರವಾರದ ಹೊತ್ತಿಗೆ ಹಿಂದಿರುಗಬೇಕೆಂಬ ಶರತ್ತಿನ ಮೇಲೆ ಅವರು ಕಲ್ಕತ್ತೆಗೆ ಹೊರಡಲು ಸಿದ್ಧರಾಗಿದ್ದರು. ಸೋಮವಾರ ಬೆಳಿಗ್ಗೆ ಎಲ್ಲ ಕೆಲಸಗಳನ್ನು ಮುಗಿಸಿ, ಅವರು ರಾಧಾಕೃಷ್ಣರಿಗೆ ನಮಸ್ಕಾರಮಾಡಿದರು. ಮೆಲುದನಿಯಲ್ಲಿ ರವೀಂದ್ರರ ಈ ಗೀತೆಯನ್ನು ಗುನುಗುತ್ತ ಅವರು ಹೆಜ್ಜೆ ಹಾಕಿದರು:

"ಪಥೇರ್ ಪಥಿಕ್ ಕರೇಛೋ ಆಮಾಯ, ಸೇಯಿ ಭಾಲೋ ಯೇ
ಸೇಯಿ ಭಾಲೋ ।
ಆಲೇಯಾ ಜ್ವಾಲಾಲೇ ಪ್ರಾಂತರ್ ಭಾಲೇ, ಸೇಯಿ ಆಲೋ ಮೋರ್
ಸೇಯಿ ಆಲೋ ॥"

ಹಳ್ಳಿಯನ್ನು ಬಿಟ್ಟು ಹೊರಡುವುದು ಅವರಿಗೆ ತುಂಬ ವೇದನೆಯನ್ನುಂಟು ಮಾಡುತ್ತಿತ್ತು. ದೇಹ ತುಂಬ ದುರ್ಬಲವಾಗಿ ಬಿಟ್ಟಿತ್ತು. ಒಣಗಿ ಕಟ್ಟಿಗೆಯಾಗಿದ್ದಂಥ

ಕಾಲುಗಳಿಗೆ ಕಾಲು ಚೀಲಗಳನ್ನು ಹಾಕಿಕೊಂಡಿದ್ದರು; ಪಾಲಿಶ್ ಮಾಡಿದ ಸುಂದರವಾದ ಬಾದಾಮಿ ಬಣ್ಣದ ಬೂಡ್ಸುಗಳನ್ನು ಧರಿಸಿಕೊಂಡಿದ್ದರು. ಮಹಾಪ್ರಯಾಣಕ್ಕಾಗಿ ಅವರನ್ನು ಸಿಂಗರಿಸಿದ್ದಾರೇನೋ ಎನ್ನುವಂತೆ ತೋರುತ್ತಿತ್ತು. ಮನಸ್ವಿಯಾದ ಕಬೀರ್ ಹೀಗೆಂದು ಹಾಡಿಲ್ಲವೆ? -

"ಮಾಡಿಕೊಳ್ಳಲಂಕಾರವನು ಹೇ ಚತುರ ಸುಂದರಿಯೆ
ಇನಿಯನ ಮನೆಗಿಂದು ನೀ ತೆರಳಬೇಕಾಗಿಹುದು."

ಇದು ಇನಿಯನ ಮನೆಗೆ ಹೋಗುವ ಸಿದ್ಧತೆಯೇ ಆಗಿತ್ತು. ಸ್ಟೇಷನ್ ತಲುಪಿದಾಗ ಸುರೇಂದ್ರನಾಥರೆಂದರು: "ನಿಮಗೆ ಸೆಕೆಂಡ್ ಕ್ಲಾಸಿನ ಹಾಗೂ ನನಗೆ ಮತ್ತು ಗೋಪಾಲನಿಗೆ ಥರ್ಡ್‌ಕ್ಲಾಸಿನ ಟಿಕೆಟ್ಟುಗಳನ್ನು ತೆಗೆದುಕೊಳ್ಳುತ್ತೇನೆ."

ಶರತ್‌ಚಂದ್ರರು ಉತ್ತರಿಸಿದರು: "ಅದು ಹೇಗೆ ಸಾಧ್ಯ? ಎಲ್ಲರೂ 'ಇಂಟರ್ ಕ್ಲಾಸಿನಲ್ಲಿಯೇ ಹೋಗೋಣ."

ಅಂದು ಕೇವಲ ಭಾವುಕತೆಯಿಂದ ಅವರು ಹೀಗೆ ಹೇಳಿರಲಿಲ್ಲ. ಮಾನವರ ಬಗ್ಗೆ ಅವರು ಸದಾ ಇಂಥದೇ ಪ್ರೀತಿಯನ್ನಿರಿಸಿಕೊಂಡಿದ್ದರು. ಒರಿಸ್ಸಾದ ಅಭೋಲಾ ಅನೇಕ ವರ್ಷಗಳ ವರೆಗೆ ಅವರ ಜೊತೆಯಲ್ಲಿದ್ದ. ಎಲ್ಲಿಗೆ ಹೋದರೂ ಅವನನ್ನು ಅವರ ಜೊತೆಯಲ್ಲಿ ಕರೆದೊಯ್ಯುತ್ತಿದ್ದರು. ಅವನು ಅವರ ಚಿರಸಂಗಿಯಾಗಿದ್ದ; ಅವರ ಅಂತರಂಗವೇ ಆಗಿದ್ದ. ಒಂದು ದಿವಸ ಅವನು ಇದ್ದಕ್ಕಿದ್ದಂತೆ ರಜೆ ಪಡೆದು ಊರಿಗೆ ಹೊರಟುಹೋದ. ಆಗ ಅವರು ನೇಮಿಸಿಕೊಂಡ ಇನ್ನೊಬ್ಬ ಸೇವಕನೇ ನನಿ. ಹಾವು ಕಚ್ಚಿದ್ದರಿಂದ ಅವನು ಒಮ್ಮಿಂದೊಮ್ಮೆ ತೀರಿಕೊಂಡಿದ್ದ. ಅವನನ್ನು ಉಳಿಸಿಕೊಳ್ಳಬೇಕೆಂದು ಶರತ್‌ಚಂದ್ರರು ತಮ್ಮಿಂದ ಸಾಧ್ಯವಿದ್ದ ಎಲ್ಲ ಪ್ರಯತ್ನಗಳನ್ನೂ ಮಾಡಿದ್ದರು. ತಮ್ಮ ಖರ್ಚಿನಲ್ಲಿ ಚಿಕಿತ್ಸೆಗಾಗಿ ಅವನನ್ನು ಕಲ್ಕತ್ತೆಗೂ ಕಳಿಸಿದ್ದರು. ರಾತ್ರಿಯಿಡೀ ಅವನ ಬಗ್ಗೆಯೇ ಯೋಚಿಸುತ್ತಿದ್ದರು. ಆದರೂ, ಅವನು ಉಳಿಯಲಿಲ್ಲ. ಈ ಸುದ್ದಿ ತಿಳಿದಾಗ ಅವರಿಗೆ ಆದ ದುಃಖಕ್ಕೆ ಮೇರೆಯೇ ಇರಲಿಲ್ಲ. ಅವರು ಆಗ ಹೀಗೆಂದಿದ್ದರು: "ಬೆಳಗಿನಿಂದ ರಾತ್ರಿಯ ವರೆಗೆ ರಸ್ತೆಯ ಕಡೆಗೇ ಕಣ್ಣಾಗಿ ಕುಳಿತಿದ್ದೆ. ಯಾರಾದರೂ ಒಳ್ಳೆಯ ಸುದ್ದಿ ತರಬಹುದೆಂದಿದ್ದೆ. ಅದಂತೂ ಆಗಲಿಲ್ಲ. ನೀನೆಂಥ ಸುದ್ದಿಯನ್ನು ತಂದೆಯಪ್ಪ!"

ತಾವು ಬದುಕಿದ್ದ ವರೆಗೂ ನನಿಯ ಕುಟುಂಬಕ್ಕೆ ಅವರು ಆರ್ಥಿಕವಾಗಿ ನೆರವಾಗುತ್ತಲೇ ಬಂದಿದ್ದರು. ಅವರು ತೀರಿಕೊಂಡ ಬಳಿಕವೂ ಹಿರಣ್ಮಯೀ ದೇವಿಯವರು ಈ ನೆರವನ್ನು ಮುಂದುವರಿಸಿಕೊಂಡೇ ಬಂದರು. ಡ್ರೈವರ್ ಕಾಲಿಯನ್ನಂತೂ ಅವರು ತಮ್ಮ ಕುಟುಂಬದ ಸದಸ್ಯನೆಂದೇ ಭಾವಿಸಿದ್ದರು. ಒಮ್ಮೆ ಅವರು ಅಸಮಂಜಸ ಉಪಾಧ್ಯಾಯರೊಂದಿಗೆ ಚಹಾ ಕುಡಿಯಲು ಐರೋಪ್ಯ ಹೋಟೆಲ್ ಒಂದಕ್ಕೆ ಹೋಗಿದ್ದರು. ಅಲ್ಲಿ ಒಂದು ಕಪ್ಪ ಚಹಾಕ್ಕೆ ಎಂಟಾಣೆ ಬೆಲೆಯಿತ್ತು. ಇದೇ ಚಹಾ ಬಂಗಾಳೀ ಚಹಾದ ಅಂಗಡಿಯಲ್ಲಿ ಎರಡು ಪೈಸಗೆ ಸಿಕ್ಕುತ್ತಿತ್ತು. "ನಾನು ಅಲ್ಲಿಯೇ ಹೋಗಿ ಚಹಾ ಕುಡಿದು ಬರುತ್ತೇನೆ" ಎಂದು ಕಾಲಿ ಹೇಳಿದ.

ಶರತ್‌ಚಂದ್ರರು ಕೂಡಲೇ ಹೇಳಿದರು: "ನಾವು ಇಲ್ಲಿ ಚಹಾ

ಕುಡಿಯುತ್ತಿರುವಾಗ, ನೀನು ಅಲ್ಲಿಗೆ ಏಕೆ ಹೋಗಬೇಕು ?"

ಆದ್ದರಿಂದಲೇ, ಅಂದೂ ಅವರು ಗೋಪಾಲನೊಂದಿಗೆ ಒಂದೇ ಬೋಗಿಯಲ್ಲಿ ಪ್ರಯಾಣ ಮಾಡಿದರು. ದಾರಿಯಲ್ಲಿ ಯಾವುದೋ ಒಂದು ನಿಲ್ದಾಣದಲ್ಲಿ ರೈಲುನಿಂತಾಗ, ಅವರಿಗೆ ಪರಿಚಿತರಾಗಿದ್ದ ಡಾಕ್ಟರ್ ಒಬ್ಬರು ಬಂದು ನಮಸ್ಕರಿಸಿದರು: "ಹೇಗಿದ್ದೀರಿ, ಅಣ್ಣಯ್ಯ ?" ಎಂದು ಕೇಳಿದರು.

ಶರತ್‌ಚಂದ್ರರೆದರು: "ನೀವೇ ಹೇಳಿ, ನಾನು ಹೇಗಿದ್ದೇನೆ ಅಂತ ?"

"ಮೊದಲಿಗಿಂತಲೂ ಚೆನ್ನಾಗಿ ಇರುವಂತೆ ಕಾಣುತ್ತೀರಿ."

"ನೀವು ಡಾಕ್ಟರ್ ಜಾತಿಗೆ ಸೇರಿದವರು ಎಂಬುದೇ ನನ್ನ ನಂಬಿಕೆಯಾಗಿತ್ತು. ಇಂದು ಆ ನಂಬಿಕೆ ಇನ್ನಷ್ಟು ದೃಢವಾಯಿತು."

"ಇಷ್ಟು ಭಾರೀ ಸರ್ಟಿಫಿಕೇಟನ್ನು ನನಗೇಕೆ ಕೊಡುತ್ತಿದ್ದೀರಿ ?" ಎಂದು ಆ ವೈದ್ಯರು ಕೇಳಿದರು.

ಒಂದು ಕ್ಷಣದ ಮಟ್ಟಿಗೆ ಸುಮ್ಮನಿದ್ದು, ಆ ಮೇಲೆ ಶರತ್‌ಚಂದ್ರರು ಹೀಗೆಂದು ಹೇಳಿದರು: "ಡಾಕ್ಟರ್, ನನ್ನ ಆರೋಗ್ಯ ಚೆನ್ನಾಗಿಲ್ಲ ಎಂಬುದು ನಿಮಗೆ ಚೆನ್ನಾಗಿ ಗೊತ್ತಿದೆ. ಆದರೆ, ಈ ವಿಚಾರವನ್ನು ನನಗೆ ಹೇಳಬಾರದೆಂದೂ ನಿಮಗೆ ಗೊತ್ತಿದೆ. ಆದ್ದರಿಂದಲೇ, ನಿಮ್ಮನ್ನು ದೊಡ್ಡವರೆಂದು ಭಾವಿಸಿದ್ದೇನೆ."

ಕೆಲವು ಕ್ಷಣಗಳ ವರೆಗೆ ಇದೇ ಬಗೆಯ ಮಾತುಗಳನ್ನಾಡುತ್ತಿದ್ದರು. ಕೊನೆಗೆ ಹೇಳಿದರು: "ನನ್ನ ಸ್ಥಿತಿ ಹೇಗಿದೆ ಎಂಬುದು ಬಹಳ ದಿವಸಗಳಿಂದಲೂ ನನಗೆ ಗೊತ್ತಿದೆ. ಮರ-ಗಿಡಗಳನ್ನು ನೋಡಿಕೊಂಡು ಮರೆಯಲು ಯತ್ನಿಸುತ್ತಿದ್ದೇನೆ. ಎಂದಾದರೂ ಒಂದು ದಿವಸ ಸಾಮತಾಕ್ಕೆ ಬಂದರೆ ನೀವೇ ನೋಡಬಹುದು."

"ಅಣ್ಣಯ್ಯ, ಆರೋಗ್ಯ ಸುಧಾರಿಸುವುದಕ್ಕೆ ಇರುವ ಮಾರ್ಗ ಅದೊಂದೇ. ಮನಸ್ಸನ್ನು ನಿರುದ್ವಿಗ್ನವಾಗಿ ಇಟ್ಟುಕೊಳ್ಳಿ. ನಿಮ್ಮ ಆರೋಗ್ಯ ಎಷ್ಟು ಸುಧಾರಿಸಿದೆ ಎಂಬುದು ಆಗ ನಿಮಗೇ ಗೊತ್ತಾಗುತ್ತದೆ."

ಅವರು ತಲೆ ಅಲ್ಲಾಡಿಸುತ್ತ ಹೇಳಿದರು: "ಈಗ ಇನ್ನೇನೂ ಆಗುವುದಿಲ್ಲ."

## 28

ಕಲ್ಕತ್ತೆಯನ್ನು ತಲುಪಿದ ಮೇಲೆಯೂ, ಮರೆಯುವ ಈ ಕಾರ್ಯಗಳಲ್ಲಿ ಯಾವುದೇ ವ್ಯತ್ಯಾಸವಾಗಲಿಲ್ಲ. ಬಾಲ್ಯ ಮತ್ತೆ ಎಚ್ಚೆತ್ತಂತೆ ಆಗಿತ್ತು. ಚಿಟ್ಟೆಗಳ, ತೋಟಗಳ, ಹೂವುಗಳ ನೆನಪಾಗುತ್ತಿತ್ತು; ಮುಂಗುಸಿ, ಕೋಗಿಲೆ ಮತ್ತು ಭೇಲೂ ನೆನಪಿಗೆ ಬರುತ್ತಿದ್ದುವು. ಭೇಲೂ ಪ್ರಸಂಗ ಬಂದಾಗ ಅವರು ತಮ್ಮ ಮಾವನೊಂದಿಗೆ ಹೇಳಿದರು: "ಅದು ನನ್ನ ರಕ್ತ-ಮಾಂಸಗಳ ಒಂದು ಭಾಗವೇ ಆಗಿಬಿಟ್ಟಿತ್ತು. ಅದಕ್ಕೆ ಮೊದಲು ಹಾಗೂ ಆಮೇಲೆ ಅನೇಕ ನಾಯಿಗಳು ಬಂದುವು, ಹೋದುವು. ಆದರೆ, ಅದು ಮಧ್ಯದ ಮಣಿಯಂತಿತ್ತು. ಮನುಷ್ಯನಿಗೆ ದೊರೆಯುವ ಮಹಾಪಾಠ ಈ ಜೀವಜಂತುಗಳಿಂದಲೇ, ಸಾಕುಪ್ರಾಣಿಗಳಿಂದಲೇ ದೊರೆಯುತ್ತದೆ ಎಂಬುದರಲ್ಲಿ ಅನುಮಾನವೇನೂ ಇಲ್ಲ."

ಮತ್ತೆ ಹೇಳಿದರು: "ಅಂದು, ಮಾಳಿಗೆಯ ಮೇಲೆ ಕುಂಜವನ್ನು

ಬೆಳೆಸೋಣವೆಂದು ನೀನು ಹೇಳಿದ್ದೆ. ಅಂದು ಇದೆಲ್ಲ ವ್ಯರ್ಥವೆಂದು ಭಾವಿಸಿದ್ದೆ. ಆದರೆ, ಇಂದು 'ಗ್ಲೋಬ್‌ನರ್ಸರಿ'ಗೆ ನಾನೇ ಹೋಗಿ ಬರುತ್ತೇನೆ. ಬದುಕಿದ್ದರೆ ಖಂಡಿತವಾಗಿಯೂ ಕುಂಜವನವನ್ನು ಬೆಳೆಸುತ್ತೇನೆ."

ಅವರು 'ನರ್ಸರಿ'ಗೆ ಹೋದರು, ಅನೇಕ ಬಗೆಯ, ಆಯಾ ಋತುವಿನ ಹೂವುಗಳ ಬೀಜಗಳನ್ನು ಅವರು ಕೊಂಡುಕೊಂಡರು. ಗುಲಾಬಿ ಅವರಿಗೆ ಉಳಿದೆಲ್ಲ ಹೂವುಗಳಿಗಿಂತಲೂ ಹೆಚ್ಚು ಪ್ರಿಯವಾಗಿತ್ತು. ಅಂದು ಅವರು ಅಂಗಡಿಯ ಬಳಿ ನಿಂತು ಮಾವನೊಂದಿಗೆ ಮಾತನಾಡುತ್ತಿದ್ದಾಗ, ಒಬ್ಬ ಅಪರಿಚಿತ ಯುವಕ ಅಲ್ಲಿಗೆ ಬಂದು ಅವರಿಗೆ ನಮಸ್ಕಾರಮಾಡಿದ. "ತಾವು ನನ್ನ ಅಂಗಡಿಯ ಕಡೆ ದಯವಿಟ್ಟು ಬರುತ್ತೀರಾ ? ನಾನು ನಿಮಗೆ ಒಂದಿಷ್ಟು ಹೂವುಗಳನ್ನು ಕೊಡಬೇಕೆಂದಿದ್ದೇನೆ." ಎಂದು ಅವನು ಹೇಳಿದ.

ಶರತ್‌ಚಂದ್ರರು ಕೇಳಿದರು: "ನನಗೇಕೆ ಕೊಡಬೇಕೆಂದಿದ್ದೀರಿ ?"

"ಅವನ್ನು ನಿಮಗೆ ಕೊಟ್ಟರೆ, ನನಗೆ ಸಂತೋಷವಾಗುತ್ತದೆ, ಅದಕ್ಕೆ."

"ಇಷ್ಟೊಂದು ಜನ ಬರುತ್ತಾರೆ. ಎಲ್ಲರಿಗೂ ಕೊಡುತ್ತೀರೇನು ?"

"ಆದರೆ ಎಲ್ಲರೂ ನನಗೆ ಗುರುತಿನವರಲ್ಲವಲ್ಲ ?"

"ನಾನು ನಿಮ್ಮ ಗುರುತಿನವನೆ ?"

"ಬಂಗಾಳದಲ್ಲಿ ನಿಮ್ಮ ಪರಿಚಯವಿಲ್ಲದಂಥವರು ಯಾರಿದ್ದಾರೆ ?"

ವ್ಯಾಪಾರದಲ್ಲಿಯೂ ಶರತ್‌ಚಂದ್ರರು ಸದಾ ಉದಾರಿಗಳಾಗಿರುತ್ತಿದ್ದರು. ಭಗವಂತ ಈ ವೃದ್ಧಾಪ್ಯದಲ್ಲಿ ಇಷ್ಟೊಂದು ಕೊಟ್ಟಿದ್ದಾನೆ. ಇದನ್ನು ಎಲ್ಲಿ ಹೂತಿಡಲಿ ? ಎಂಬುದು ಅವರ ತರ್ಕವಾಗಿತ್ತು.

ಕಾರಿನಲ್ಲಿ ಕುಳಿತು ಹೂವುಗಳಿಗಾಗಿ ಅವರು ಕಾಯುತ್ತಿದ್ದರು. ಅಷ್ಟರಲ್ಲಿ ಒಬ್ಬ ವೃದ್ಧ ಮುಸಲ್ಮಾನ ಕೆಲವು ಪುಸ್ತಕಗಳನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಕೇಳಿದ: "ನೀವು ಇವನ್ನು ಕೊಂಡುಕೊಳ್ಳಲೇಬೇಕು."

"ಏಕೆ ?"

"ಏಕೆ ಅಂದರೆ ಮನೆಯಲ್ಲಿ ತಿನ್ನಲು ಏನೂ ಇಲ್ಲ. ಬರಿಗೈಯಲ್ಲಿ ಹಿಂದಿರುಗಲಾರೆ."

"ಎಷ್ಟು ಹಣ ಕೊಡಬೇಕು ?"

"ಒಂದು ರೂಪಾಯಿ."

ಅವನಿಗೆ ಎರಡು ರೂಪಾಯಿಗಳನ್ನು ಕೊಡುತ್ತ ಹೇಳಿದರು: "ಒಂದು ರೂಪಾಯಿ ಇವುಗಳ ಬೆಲೆಯಾಗಿ ಕೊಟ್ಟಿದ್ದೇನೆ. ಇನ್ನೊಂದು ರೂಪಾಯಿ ದೇವರ ಹೆಸರಿನಲ್ಲಿ ಕೊಡುತ್ತಾ ಇದ್ದೇನೆ."

ಸಂತೋಷದಿಂದ ಆ ವೃದ್ಧನೆಂದ: "ನೂರುಕಾಲ ಬಾಳಿ, ಬಾಬೂ."

ಈ ಮಾತನ್ನು ಕೇಳಿ ಶರತ್‌ಚಂದ್ರರು ಮುಗುಳ್ನಕ್ಕಿರಬೇಕು. ಅಂತರ್ಯದಲ್ಲಿ ಕುಳಿತಿದ್ದ ಶರತ್ ಹೀಗೆಂದಿದ್ದಿರಬೇಕು: "ಬದುಕಿರಬೇಕೆಂದು ಅವನು ಹೇಳುತ್ತಿದ್ದಾನಲ್ಲವೆ ? ಬಾಳಿನ ಕೊನೆಯ ಕ್ಷಣದ ವರೆಗೂ ನಾನು ಬದುಕಿಯೇ ಇರುತ್ತೇನೆ."

ಇತ್ತ ಇವರು ತಮ್ಮ ನೋವನ್ನು ಮರೆಯುವ ಪ್ರಯತ್ನಮಾಡುತ್ತಿದ್ದರೆ, ಅತ್ತ ಅವರ ತಪಾಸಣೆಯ ಏರ್ಪಾಟುಗಳು ನಡೆಯುತ್ತಿದ್ದುವು. ಡಾ. ಕುಮದ ಶಂಕರ್‌ರಾಯ್ ಅವರು ಶರತ್‌ಚಂದ್ರರನ್ನು ನೋಡಿಕೊಳ್ಳುತ್ತಿದ್ದರು. ಸುದ್ದಿ ತಿಳಿದು ಡಾ. ವಿಧಾನ ಚಂದ್ರ ರಾಯ್ ಅವರಿಗೂ ಅಲ್ಲಿಗೆ ಬಂದರು. "ನೀವು ಯಾವಾಗ ವಾಪಸುಬಂದಿರಿ ? ಇದಲ್ಲ ಏನು ? ಎಲ್ಲಿ, ಸ್ವಲ್ಪ ಮಲಗಿಕೊಳ್ಳಿ."

ಮಲಗಿಕೊಳ್ಳುತ್ತ ಶರತ್‌ಚಂದ್ರರು ಉತ್ತರಿಸಿದರು: "ಹಳ್ಳಿಗೆ ಹೋಗಿ ಸಾಕಷ್ಟು ಮೀನುಗಳನ್ನು ತಿಂದುಹಾಕಿದ್ದೇನೆ. ಆದ್ದರಿಂದ, ಸ್ವಲ್ಪ ಪೆಪ್ಸಿಯಾ ಹೆಚ್ಚಿಬಿಟ್ಟಿದೆ."

"ಅರಗದೆ ಇದ್ದರೆ, ಅಷ್ಟೊಂದೇಕೆ ತಿನ್ನಲು ಹೋಗುತ್ತೀರಿ ?"

ಶರತ್‌ಚಂದ್ರರು ಹೇಳಿದರು: "ದುರಾಸೆಯಿಂದ ಒಂದೇ ದಿವಸದಲ್ಲಿ ಐದ್ಯೆದು ಆರಾರು ತಪಸೆ ಮೀನುಗಳನ್ನು ತಿಂದು ಹಾಕಿದ್ದೇನೆ.

ಡಾಕ್ಟರ್ ಹೇಳಿದರು: "ನೀವು ಮಾಡಿದ್ದು ಸರಿಯಲ್ಲ. ನನಗೂ ಕೊಟ್ಟು ತಿಂದಿದ್ದರೆ ಜೀರ್ಣವಾಗುತ್ತಿತ್ತು."

ತಪಾಸಣೆ ನಡೆಸಿದ ಬಳಿಕ ಸ್ವಲ್ಪ ಹೊತ್ತು ಅದು-ಇದು ಮಾತನಾಡುತ್ತಿದ್ದ ಅವರು ಹೇಗೆ ಬಂದಿದ್ದರೋ ಹಾಗೆಯೇ ಹಿಂದಿರುಗಿದರು. ಶರತ್‌ಚಂದ್ರರು ಮಾವನನ್ನು ಕೇಳಿದರು. "ಏನು ಹೇಳಿದರು ?"

"ಕಿಂಕ್ ಕಿಂಕರ್ಸ್ !"

ಈ ಶಬ್ದ ಅರ್ಥವೇ ಆಗುತ್ತಿರಲಿಲ್ಲ. ನರೇಂದ್ರದೇವ್ ಅವರೂ ಬಂದಿದ್ದರು. ನಿಘಂಟನ್ನೂ ನೋಡಬೇಕಾಯಿತು. ಆಗ ಇದಕ್ಕೆ ಕರುಳಿನಲ್ಲಿ ಉಂಟಾಗಿರುವ ತಡೆ ಎಂಬ ಅರ್ಥವಿದೆಯೆಂದು ಗೊತ್ತಾಯಿತು. ಎಕ್ಸ್-ರೇ ತೆಗೆಸುವುದಷ್ಟರಿಂದಲೇ ಏನೂ ಆಗುವುದಿಲ್ಲ, ಶಸ್ತ್ರಚಿಕಿತ್ಸೆಯನ್ನೂ ಮಾಡಿಸಿಕೊಳ್ಳಬೇಕಾಗುತ್ತದೆ ಎಂದು ಅವರಿಗೆ ಅರ್ಥವಾಯಿತು.

ಈಗ ಇನ್ನು ಹಳ್ಳಿಗೆ ಹಿಂದಿರುಗುವ ಪ್ರಶ್ನೆಯೇ ಇರಲಿಲ್ಲ. ಡಾಕ್ಟರ ಮೇಲೆ ಡಾಕ್ಟರುಗಳು ಬರತೊಡಗಿದರು, ಸಲಹೆ ಸಮಾಲೋಚನೆಗಳು ನಡೆಯತೊಡಗಿದುವು. ಇದರ ಜೊತೆಗೆ ಜ್ಯೋತಿಷದ ಪ್ರಭಾವವೂ ಹೆಚ್ಚುತ್ತ ನಡೆದಿತ್ತು. ಅಂದು ಇಂದ್ರನೀಲ ಮಣಿಯ ಉಂಗುರವನ್ನು ಹಾಕಿಕೊಂಡಿದ್ದರು. ಆಮೇಲೆ ಹವಳದ ಉಂಗುರ ಬಂತು. ಆಗ ಅವರೆಂದರು: "ಸಂಕಟ ಬಂದಾಗ ಮನುಷ್ಯ ಕೆಟ್ಟ ಸಂಸ್ಕಾರಗಳಿಗೆ ದಾಸನಾಗಿಬಿಡುತ್ತಾನೆ. ಇಲ್ಲಿ ನೋಡು, ಈ ನನ್ನ ಹವಳದ ಉಂಗುರ ! ಇದರಿಂದ ಏನಾದೀತು ? ಆದರೂ......"

ಮಾವನವರೆಂದು: "ಅನಾರೋಗ್ಯ ಉಂಟಾದಾಗ ವೈದ್ಯರನ್ನು ಕರೆಸುವುದು ಹೇಗೆ ಕೆಟ್ಟ ಸಂಸ್ಕಾರವಾಗುವುದಿಲ್ಲವೋ ಹಾಗೆಯೇ ಗ್ರಹಗಳು ಪ್ರಸನ್ನವಾಗಿಲ್ಲದೆ ಇರುವಾಗ ಹವಳವನ್ನು ಧರಿಸುವುದೂ ಕೆಟ್ಟ ಸಂಸ್ಕಾರವಾಗುವುದಿಲ್ಲ."

ಸದಾ ಸ್ವೇಚ್ಛೆಯಿಂದ ನಡೆಯುತ್ತಿದ್ದ ಶರತ್‌ಚಂದ್ರರು ಇಷ್ಟು ಮಾತ್ರವೇ ಹೇಳಿದರು: "ಸಂಕಟಕ್ಕೆ ಸಿಲುಕಿ ಹವಳದ ಉಂಗುರವನ್ನು ಹಾಕಿಕೊಂಡಿದ್ದೇನೆ. ಆದರೆ, ಮನಸ್ಸು ಸಿಡಿದೇಳುತ್ತಿದೆ."

ಈ ಒದ್ದಾಟದಿಂದ ಬಿಡುಗಡೆಯನ್ನು ಪಡೆಯುವ ಪ್ರಯತ್ನದ ಅಂಗವಾಗಿ ಅವರ

ವೈರಾಗ್ಯಶೀಲ ಮನಸ್ಸು ತುಂಬ ಚಂಚಲಗೊಂಡಿತು. ಒಮ್ಮೆ ಹೂವುಗಳಲ್ಲಿ ಮನಸ್ಸನ್ನು ತೊಡಗಿಸಿಕೊಂಡರೆ, ಇನ್ನೊಮ್ಮೆ ಹೊಸ ಕಾರನ್ನು ಕೊಂಡುಕೊಂಡು ಭಾಗಲ್ಪುರವನ್ನೆಲ್ಲ ಸುತ್ತಿಕೊಂಡು ಬರಬೇಕೆಂದು ಯೋಚಿಸುತ್ತಿದ್ದರು. ಒಮ್ಮೆ ಪೇಟೆಯಲ್ಲಿ ನವಿಲು ಕಣ್ಣಿಗೆ ಬಿತ್ತು; ಕೂಡಲೇ ಅದನ್ನು ಕೊಂಡುಕೊಂಡು ಬಂದರು. ಆಡಿನ ಹಾಲು ಸುಲಭವಾಗಿ ಜೀರ್ಣವಾಗುತ್ತದೆ; ರೋಗಿಗಳಿಗೆ ಅದೇ ಒಳ್ಳೆಯದು ಎಂದರು. ಸರಿ, ಅವರೇ ಪೇಟೆಗೆ ಹೋಗಿ ಒಂದು ಆಡನ್ನು ವ್ಯಾಪಾರಮಾಡಿಬಿಟ್ಟರು. ಅದರ ಬೆಲೆ ನಲವತ್ತು ರೂಪಾಯಿಯೆಂದೂ, ನಾಲ್ಕು ಸೇರು ಹಾಲು ಕೊಡುತ್ತದೆಂದೂ ಆ ಆಡಿನ ಒಡೆಯ ಹೇಳುತ್ತಿದ್ದ. ಆಶ್ಚರ್ಯದ ಸಂಗತಿಯೆಂದರೆ ಆ ಕುರುಬನಿಗೂ ಶರತ್‌ಚಂದ್ರರ ಪರಿಚಯವಿತ್ತು. ಅವನು ಸುರೇಂದ್ರ ಮಾವನ ಕಿವಿಯಲ್ಲಿ ಹೇಳಿದ: "ಇವರು ಕಥೆಗಳನ್ನು ಬರೆಯುತ್ತಾರಲ್ಲವೆ? ನಾನು ಇವರ ಚಿತ್ರವನ್ನು ನೋಡಿದ್ದೇನೆ. ಇವರಿಗೆ ನಾನು ಇದನ್ನು ಇಪ್ಪತ್ತು ರೂಪಾಯಿಗಳಿಗೇ ಕೊಡುತ್ತೇನೆ."

ಈ ಆಡೂ ಭಾರಿ ವಿಚಿತ್ರದ್ದೇ ಆಗಿತ್ತು. ಅದು ತನ್ನ ಹಾಲನ್ನು ತಾನೇ ಕುಡಿದು ಬಿಡುತ್ತಿತ್ತು. ಹಿರಣ್ಮಯೀ ದೇವಿಯವರೂ ಹಳ್ಳಿಯಿಂದ ಇಲ್ಲಿಗೆ ಬಂದುಬಿಟ್ಟಿದ್ದರು. ಯಾರೋ ಹೇಳಿದರು: "ತನ್ನ ಹಾಲನ್ನು ತಾನೇ ಕುಡಿದು ಬಿಡುವ ಆಡು ಮನೆಯಲ್ಲಿದ್ದರೆ, ಮನೆಯ ಒಡೆಯ ಅಥವಾ ಒಡತಿಯರಲ್ಲಿ ಯಾರಾದರೂ ಒಬ್ಬರು ಸಾವಿಗೀಡಾಗಿ ಬಿಡುತ್ತಾರೆ."

ಆಗ ಹಿರಣ್ಮಯೀ ದೇವಿಯವರು ಅದೆಷ್ಟು ಗಲಾಟೆ ಮಾಡಿಬಿಟ್ಟರೆಂದರೆ ಅದನ್ನು ಸಾಗಹಾಕುವುದನ್ನು ಬಿಟ್ಟು ಬೇರೆ ದಾರಿಯೇ ಇರಲಿಲ್ಲ. ಆದರೆ, ಅವರ ಕೊಳ್ಳಾಟದಲ್ಲಿ ಯಾವ ವ್ಯತ್ಯಾಸವೂ ಉಂಟಾಗಲಿಲ್ಲ. ಈ ಕಾರಣದಿಂದಾಗಿಯೇ ಅವರ ತೋಟ ದಿನೇ ದಿನೇ ಸುಂದರವಾಗಿ ರೂಪುಗೊಳ್ಳತೊಡಗಿತ್ತು. ಇನ್ನೊಂದು ಕಡೆ ಎಕ್ಸ್-ರೇ ತೆಗೆಸುವ ಏರ್ಪಾಟೂ ನಡೆಯುತ್ತಿತ್ತು. ಕೊನೆಗೆ, ಅದು ಯಕೃತ್ತಿನ ಅರ್ಬುದ ರೋಗವೆಂದೂ, ಹೆಚ್ಚುತ್ತ ಹೆಚ್ಚುತ್ತ ಅದು ಜಠರವನ್ನು ವ್ಯಾಪಿಸಿಕೊಂಡಿದೆಯೆಂದೂ ತಿಳಿದುಬಂತು.

ಇದು ಮರಣ ದಂಡನೆಯ ಸ್ಪಷ್ಟ ಘೋಷಣೆಯೇ ಆಗಿತ್ತು. ಸಾವಿನ ಹೆಜ್ಜೆಯ ಸಪ್ಪಳವನ್ನು ಅವರು ಬಹಳ ಹಿಂದಿನಿಂದಲೇ ಕೇಳುತ್ತ ಬಂದಿದ್ದರು. ಅವರು ಕಲ್ಕತ್ತೆಗೆ ಆಗಮಿಸಿದ ದಿನವೇ ಪತ್ರಿಕೆಯನ್ನು ಓದುತ್ತ ಓದುತ್ತ ಅವರು ಸ್ತಬ್ಧರಾಗಿಬಿಟ್ಟಿದ್ದರು. ಮುಖ ಬಣ್ಣಗೆಟ್ಟಿತ್ತು. ಇದನ್ನು ನೋಡಿ ಅವರ ಮಾವ ಕೇಳಿದರು: "ಏನಾಯಿತು ಶರತ್?"

"ಸರ್ ಜಗದೀಶಚಂದ್ರ ಬೋಸ್ ತೀರಿಕೊಂಡಿದ್ದಾರೆ.[1] ಅವರ ಹೃದಯ ದುರ್ಬಲವಾಗಿತ್ತು. ಈಗ ಇನ್ನು ನನ್ನ ಸರದಿ."

"ಇದೆಂಥ ತರ್ಕ, ಶರತ್?"

"ತರ್ಕವಲ್ಲ, ಇಂಟ್ಯೂಷನ್!"

"ಅವರದ್ದೇನೋ ಆಯುಸ್ಸು ಮುಗಿದಿತ್ತು. ಅವರ ಎದುರಿಗೆ ನೀನಿನ್ನೂ

1. 22 ನವೆಂಬರ್ 1937.

ಹುಡುಗ."

ಶರತ್‌ಚಂದ್ರರು ಹೇಳಿದರು: "ನನ್ನ ಹೃದಯವೇನೋ ಸರಿಯಾಗಿದೆ. ಆದರೆ, ಕೆಡಲು ಎಷ್ಟು ಹೊತ್ತು ಬೇಕು ?"

ದೀರ್ಘ ರಜೆಯ ಅವಧಿ ಹತ್ತಿರಬರುತ್ತಿತ್ತು. ಈ ಅವಧಿಯಲ್ಲಿ ಮದ್ರಾಸಿನಲ್ಲಿ ವೈದ್ಯರುಗಳ ಬಂದು ಭಾರಿ ಸಮ್ಮೇಳನ ನಡೆಯಲಿತ್ತು. ಅಲ್ಲಿಗೆ ಹೋಗುವುದಕ್ಕೆ ಮೊದಲು ವೈದ್ಯರುಗಳು ತಮ್ಮ ಬಗ್ಗೆ ಒಂದು ತೀರ್ಮಾನಕ್ಕೆ ಬರಬೇಕೆನ್ನುವುದು ಅವರ ಇಚ್ಛೆಯಾಗಿತ್ತು. ವಿಧಾನ ಬಾಬೂ, ಲಲಿತ ಬಾಬೂ ಮತ್ತು ಕುಮುದ ಬಾಬೂ- ಮೂವರು ವೈದ್ಯರೂ ಅವರನ್ನು ನೋಡಲು ಬಂದರು. ಶಸ್ತ್ರಚಿಕಿತ್ಸೆ ಮಾಡಬೇಕೆಂದು ಅವರು ತೀರ್ಮಾನಕ್ಕೆ ಬಂದರು. ವಿಧಾನ ಚಂದ್ರರಾಯ್ ಅವರೊಂದಿಗೆ ಶರತ್‌ಚಂದ್ರರು ಹೀಗೆಂದರು: "ಆಪರೇಷನ್ ಆಗಲೇ ಬೇಕು ಎನ್ನುವುದಾದರೆ, ನೀವೇ ಮಾಡಿ. ಸತ್ತರೂ ನಿಮ್ಮ ಕೈಯಲ್ಲೇ ಸಾಯುತ್ತೇನೆ."

ನಗುತ್ತ ವಿಧಾನಚಂದ್ರ ರಾಯ್ ಅವರು ಉತ್ತರ ಹೇಳಿದರು: "ಮಲಗಿಕೊಳ್ಳಿ. ಈ ಕೆಲಸವನ್ನು ಮುಗಿಸಿಯೇ ಹೋಗುತ್ತೇನೆ." ಹೀಗೆಂದು ಹೇಳಿ, ಮನೆಯ ಮೂಲೆಯಲ್ಲಿ ಇಟ್ಟಿದ್ದ ಉಕ್ಕಿನ ಸುಂದರವಾದ ಸಣ್ಣ ಕೊಡಲಿಯನ್ನೆತ್ತಿಕೊಂಡು ಬಂದರು. "ನಾನು ಸಿದ್ಧ" ಎಂದರು.

ಎಲ್ಲರೂ ಕೇಕೆ ಹಾಕಿ ನಕ್ಕರು. ಆದರೆ, ಕೂಡಲೇ ಶಸ್ತ್ರಕ್ರಿಯೆಯನ್ನು ನಡೆಸುವುದು ಸಾಧ್ಯವಾಗಲಿಲ್ಲ. ಡಾ. ಲಲಿತ್ ಮೋಹನ್ ಅವರು ಶಸ್ತ್ರಕ್ರಿಯೆ ನಡೆಸಬೇಕೆಂದು ತೀರ್ಮಾನಿಸಲಾಯಿತು. ಆದರೆ, ಅವರ ಶುಲ್ಕ ಸಾವಿರ-ಸಾವಿರದ ಇನ್ನೂರು ರೂಪಾಯಿಗಳಿಂತ ಕಡಿಮೆ ಇರಲಿಲ್ಲ. ಅಷ್ಟೊಂದು ಹಣವನ್ನು ಕೊಡುವ ಶಕ್ತಿ ಶರತ್‌ಚಂದ್ರರಿಗೆ ಇರಲಿಲ್ಲ. ಆದ್ದರಿಂದ, ಆ ವೈದ್ಯರುಗಳು ಅವರನ್ನು ಆ ಸ್ಥಿತಿಯಲ್ಲಿಯೇ ಬಿಟ್ಟು ಮದ್ರಾಸಿಗೆ ಹೋದರು. ಅಲ್ಲಿ ಉಳಿದಿದ್ದವರು ದಾಸ್‌ಗುಪ್ತಾ ಅವರು ಮಾತ್ರ. ಅವರು ಸಣ್ಣಪುಟ್ಟ ಚಿಕಿತ್ಸೆಯಿಂದ ರೋಗದ ತೀವ್ರತೆಯನ್ನು ಕಡಿಮೆಯಾಗಿಸುವ ಪ್ರಯತ್ನ ಮಾಡತೊಡಗಿದರು.

ಶರತ್‌ಚಂದ್ರರು ಒಮ್ಮೆ ಡಾ. ಕುಮುದಶಂಕರ್ ಅವರೊಂದಿಗೂ ಹೀಗೆಯೇ ಹೇಳಿದ್ದರು: "ಆಪರೇಷನ್ ಮಾಡಲೇಬೇಕು ಎನ್ನುವುದಾದರೆ, ಮತ್ತಷ್ಟು ಪರೀಕ್ಷೆ ನಡೆಸುವ ಅಗತ್ಯವೇನೂ ಇಲ್ಲ. ನಾಳೆಯೇ ಆಪರೇಷನ್ ಮಾಡಿಸಿಕೊಳ್ಳಲು ನಾನು ಸಿದ್ಧ. ಮಾವನನ್ನು ಜೊತೆಗೆ ಕರೆದುಕೊಂಡು ನಿಮ್ಮಲ್ಲಿಗೆ ಬಂದುಬಿಡುತ್ತೇನೆ. ನೀವೇ ಆಪರೇಷನ್ ಮಾಡಿಬಿಡಿ. ನಿಮ್ಮಷ್ಟು ದಕ್ಷರಾದ ಇನ್ನೊಬ್ಬ ವೈದ್ಯರು ಕಲ್ಕತ್ತೆಯಲ್ಲಿ ಇಲ್ಲವೆಂಬುದು ನನಗೆ ಚೆನ್ನಾಗಿ ಗೊತ್ತು. ನಿಮ್ಮ ಬಗ್ಗೆ ನೀವು ಇರಿಸಿಕೊಂಡಿರುವ ಆತ್ಮವಿಶ್ವಾಸವನ್ನು ಕಂಡು ನಾನು ಆಶ್ಚರ್ಯಚಕಿತನಾಗಿದ್ದೇನೆ. ನಾನೇನೂ ಹಂಗಸಲ್ಲ. ಶಸ್ತ್ರಕ್ರಿಯೆಯ ಮೇಜಿನ ಮೇಲೆಯೇ ನಾನು ಸತ್ತುಹೋಗುವ ಸಂಭವವೇನೂ ಇಲ್ಲ. ಹಾಗೇನಾದರೂ ಇದ್ದರೆ, ನಾನೇ ಬರೆದು ಕೊಡಬಲ್ಲೆ. ಬೇರೆ ಯಾರನ್ನಾದರೂ ಕರೆಸುವ ಅಗತ್ಯವೇನೂ ಇಲ್ಲ."

ಕುಮುದಶಂಕರ್ ಅವರು ಶಿಲಾಪ್ರತಿಮೆಯಂತೆ ತೆಪ್ಪಗೆ ಕುಳಿತಿದ್ದರು. ಶರತ್‌ಚಂದ್ರರು ಹೇಳಿದರು: "ಏನಾದರೂ ಮಾತನಾಡು, ಕುಮುದ್!"

"ನಾನು ಮಾಡಲಾರೆ."

"ಕುಮುದ್, ನಿಮ್ಮನ್ನು ಬಿಟ್ಟರೆ ಬೇರೆ ಯಾರೂ ಇದನ್ನು ಮಾಡಲಾರರು. ನೀವೇ ನಿಮ್ಮ ಮಗನ ಆಪರೇಷನ್ ಮಾಡಿರಲಿಲ್ಲವೆ ?"

"ನನ್ನ ಮಗನಿಗೂ ನಿಮಗೂ ತುಂಬ ವ್ಯತ್ಯಾಸವಿದೆ. ಒಬ್ಬ ಮಗ ಹೋದರೆ, ಇನ್ನೊಬ್ಬ ಇರಬಹುದು. ಆದರೆ, ಒಬ್ಬರು ಶರತ್‌ಚಂದ್ರರು ಇಲ್ಲವಾದರೆ ಇನ್ನೊಬ್ಬರು ಬರಲಾರರು."

ಸಾವು ಹತ್ತಿರ ಹತ್ತಿರ ಸುಳಿಯತೊಡಗಿದಂತೆ, ಹೆಚ್ಚು ಹೆಚ್ಚು ತಿನ್ನಬೇಕೆಂಬ ಆಸೆಯೂ ಹೆಚ್ಚುತ್ತ ನಡೆದಿತ್ತು. ಒಮ್ಮೆ ದಾಸಗುಪ್ತ ಅವರ ಪ್ರಯೋಗಾಲಯದಲ್ಲಿ ತುಂಬ ಹೊತ್ತಾಗಿ ಬಿಟ್ಟಿತು. ಶರತ್‌ಚಂದ್ರರು ಹೇಳಿದರು: "ಹೊತ್ತಾಗಿ ಬಿಟ್ಟಿತಲ್ಲ. ನಾನು ಏನೂ ತಿಂದು ಬಂದಿರಲಿಲ್ಲ. ನಿಮ್ಮ ಮನೆಯಲ್ಲಿ ಊಟ ಹಾಕುವುದಿಲ್ಲವೇನು ? ದೇಶಬಂಧು ಅವರ ಜೊತೆಯಲ್ಲಿ ನಿಮ್ಮ ಮನೆಯಲ್ಲಿ ಊಟಮಾಡಿದ್ದೆ. ಎಷ್ಟು ದಿವಸ ಆಯಿತು, ಏನು ಕಥೆ ?"

ಡಾಕ್ಟರ್ ದಾಸ್‌ಗುಪ್ತ ಅವರೆಂದರು: "ಈಗಲೇ 'ಓಟ್‌ಮೀಲ್'ಗೆ ಏರ್ಪಾಡು ಮಾಡುತ್ತೇನೆ. ಅದೆ ನಿಮಗೆ ಸರಿಯಾಗುತ್ತದೆ."

ಶರತ್‌ಚಂದ್ರರು ಮಾವನ ಕಡೆಗೆ ತಿರುಗಿ ಹೇಳಿದರು: "ಸುರೇಂದ್ರ, ಶನೀಶ್ವರ ಎನ್ನುವುದು ಇವರನ್ನೇ."

ಜಠರದಲ್ಲಿ ಯಾವ ಯಾವ ರಸಗಳು ಯಾವ ಯಾವ ಪ್ರಮಾಣಗಳಲ್ಲಿ ಇವೆ ಎನ್ನುವುದನ್ನೂ 'ಸ್ಟಮಕ್-ಪಂಪಿ'ನ ಮೂಲಕ ಪರೀಕ್ಷಿಸಿನೋಡಲಾಯಿತು. ಆದರೆ, ಅವರ ಹಸಿವು ಮಾತ್ರ ಕಡಿಮೆಯಾಗಲಿಲ್ಲ. ಕಡಿಮೆ ಪ್ರಮಾಣದ ಸಿಹಿಯನ್ನುಳ್ಳ 'ಸಂದೇಶ'ವನ್ನು ಬೇಕಾದರೆ ತಿನ್ನಬಹುದೆಂದು ಡಾಕ್ಟರುಗಳು ಅನುಮತಿ ಕೊಟ್ಟಿದ್ದರು. ಆದರೆ, ಬಟಾಣಿಯ ಕಚೌಡಿಯಂಥ ರುಚಿಕರವಾದ ವಸ್ತುಗಳನ್ನು ತಿನ್ನಬೇಕೆಂದು ಅವರ ಮನಸ್ಸು ಹಾತೊರೆಯುತ್ತಿತ್ತು. ಹಳ್ಳಿಗೆ ಹಿಂದಿರುಗಬೇಕೆಂಬ ಕಾತರವೂ ಅವರಲ್ಲಿ ಕಮ್ಮಿಯಾಗಿರಲಿಲ್ಲ. ಆದರೆ, ಹೋಗುವುದಾದರೂ ಎಲ್ಲಿ ಸಾಧ್ಯವಿತ್ತು ?

ಕ್ಷೇಮ ಸಮಾಚಾರವನ್ನು ಕೇಳಲು ಬರುತ್ತಿದ್ದ ಗೆಳೆಯರ ಗುಂಪು ಯಾವಾಗಲೂ ಸಾಲುಗಟ್ಟಿಯೇ ಇರುತ್ತಿತ್ತು. ಒಮ್ಮೆ ಅಸಮಂಜಸ ಮುಖೋಪಾಧ್ಯಾಯರು ಬಂದರು. ಅದೇ ಮನೆ, ಅದೇ ಬಾಗಿಲು, ಆದೇ ಪಡಸಾಲೆ, ಅದೇ ಮನೆಯ ಮುಂದಿನ ಕೈದೋಟ - ಆದರೆ ಯಾವುದರಲ್ಲಿಯೂ ಆನಂದದ ಸುಳಿವೇ ಅವರಿಗೆ ಕಾಣಲಿಲ್ಲ. ಕೆಲವೇ ದಿನಗಳ ಹಿಂದೆ ಅವೆಲ್ಲವುಗಳಲ್ಲಿಯೂ ಚೈತನ್ಯದ ಉತ್ಸಾಹ ತುಂಬಿತುಳುಕುತ್ತಿತ್ತು, ಮಾಧುರ್ಯದ ಸ್ಪರ್ಶವಿತ್ತು. ಆದರೆ, ಈಗ ಅಲ್ಲೆಲ್ಲ ಪ್ರಾಣ ಹೀನತೆಯ ನಿಷ್ಕರುಣ ಗಾಳಿ ಸುಳಿಯುತ್ತಿದ್ದಂತೆ ಅವರಿಗೆ ತೋರಿತು. ನೊಂದ ಮನಸ್ಸಿನಿಂದ ಅವರು ಒಳಗೆ ಹೋಗಿ ನಿಂತರು. ಆ ಕೆಟ್ಟ ಮೌನ ಮತ್ತೆ ಮತ್ತೆ ಹಿಂದಿರುಗಿ ಹೋಗುವಂತೆ ಅವರನ್ನು ಒತ್ತಾಯಿಸುತ್ತಿತ್ತು. ಆದರೆ, ಅವರನ್ನು ಕಾಣದ ಹೋಗುವುದು ಹೇಗೆ ಸಾಧ್ಯ ? ಕರೆಗಂಟೆ ಸದ್ದು ಮಾಡಿದಾಗ ಸುರೇಂದ್ರನಾಥರು ಕೆಳಗೆ ಇಳಿದು ಬಂದರು. ಅವರು ಕೊಟ್ಟ ಸಮಾಚಾರ ಒಳ್ಳೆಯದೇನೂ ಆಗಿರಲಿಲ್ಲ. ಕೂಡಲೇ ಅವರು ಶರತ್‌ಚಂದ್ರರಿಗೆ ಸುದ್ದಿ ಮುಟ್ಟಿಸಲು ಹೊರಟರು. ಮತ್ತೆ

ಹಿಂದಿರುಗಿ ಬಂದು ಹೇಳಿದರು: "ಈಗಲೇ ಬರುತ್ತ ಇದ್ದಾರೆ."

ಅಸಮಂಜಸ ಬಾಬೂಗಳು ಹೇಳಿದರು: "ಬೇಡ, ಬೇಡ. ಅವರು ಬರುವ ಅಗತ್ಯವಿಲ್ಲ. ನಾನೇ ಮೇಲೆ ಬರುತ್ತೇನೆ."

ಆದರೆ, ಮೇಲೆ ಹೋಗಲು ಅವರು ಏಳುವುದರ ಒಳಗಾಗಿ, ಚಿರಪರಿಚಿತವಾದ ಹೆಜ್ಜೆಯ ಸಪ್ಪಳ ಕೇಳಿಸಿತು. ನೋಡಿದರೆ, ಅದೇ ಶರತ್‌ಚಂದ್ರರು! ಅತ್ಯಂತ ರುಗ್ಣಾವಸ್ಥೆಯಲ್ಲಿದ್ದ ಅವರು ನಿರ್ಜೀವ ಶರೀರದಂತೆ ಬಂದು ಆರಾಮಕುರ್ಚಿಯ ಮೇಲೆ ಕುಸಿದು ಬಿದ್ದರು. ಅಸಮಂಜಸ ಬಾಬೂಗಳೆಂದರು: "ಇದೇನು ಅನರ್ಥಮಾಡಿಬಿಟ್ಟಿರಿ ? ನೀವು ಹೀಗೆ ಬರಬಾರದಿತ್ತು."

ಶರತ್‌ಚಂದ್ರರು ಹೇಳಿದರು: "ನಿಮ್ಮನ್ನು ಕಳಿಸಿಕೊಡಬೇಕೆಂದು ನಿಮ್ಮ ಮಗನಿಗೆ ಹೇಳಿದ್ದೆ. ನೀವು ಬಂದಿದ್ದೀರಿ ಎಂಬುದನ್ನು ಕೇಳಿಯೂ ನಾನು ಹೊರಬರದಿರುವುದು ಹೇಗೆ ಸಾಧ್ಯ ? ಒಂದಲ್ಲ ಒಂದು ದಿವಸ ಎಲ್ಲರೂ ಸಾಯಲೇಬೇಕಲ್ಲವೆ ? ಅದಕ್ಕಾಗಿ ನಾವೇಕೆ ದುಃಖಿಸಬೇಕು ?"

ಶ್ರೀಕಾಂತನೇ ಮಾತನಾಡುತ್ತಿದ್ದಾನೋ ಏನೋ ಎಂದು ತೋರಿತು. ಇಂದ್ರನಾಥರ ಪ್ರಿಯ ಶಿಷ್ಯನೂ ಬಂಧುವೂ ಆಗಿದ್ದ ಶ್ರೀಕಾಂತನೇ ಮಾತನಾಡುತ್ತಿರುವಂತೆ ತೋರಿತು. ಒಂದು ದಿವಸ ಮತ್ತೆ ಕೆಲವು ಗೆಳೆಯರು ಅವರನ್ನು ಕಾಣಲು ಬಂದರು. ಸಾವು ಖಂಡಿತ ಎಂಬುದು ಎಲ್ಲರಿಗೂ ಗೊತ್ತಿತ್ತು. ಆದರೂ ಎಲ್ಲರೂ ಸಮಾಧಾನ ನೀಡಲು ಪ್ರಯತ್ನಿಸುತ್ತಿದ್ದರು. ಅಂದು ಡಿಸೆಂಬರ್ 23ನೆಯ ತಾರೀಖು, ಗೆಳೆಯನೊಬ್ಬ ಹೇಳಿದ: "ಖಂಡಿತವಾಗಿಯೂ ನೀವು ಹುಷಾರಾಗಿಬಿಡುತ್ತೀರಿ, ಯೋಚಿಸಬೇಡಿ."

ರೋಗದ ಹಿಡಿತಕ್ಕೆ ಸಿಕ್ಕಿ ಬಣ್ಣಗೆಟ್ಟಿದ್ದ ಆ ಮುಖದ ಮೇಲೆ ನಗೆಯ ಗೆರೆಯೊಂದು ಮೂಡಿಬಂತು. ಅವರೆಂದರು: "ನನ್ನ ಒಂದು ಮಾತನ್ನು ನೆನಪಿಟ್ಟುಕೊಳ್ಳಿ. ಜನವರಿ 22ರಂದು ನನ್ನನ್ನು ನೆನಪುಮಾಡಿಕೊಳ್ಳಿ. ನೆನಪಿರುತ್ತದೆ ತಾನೆ ?"

ಜನವರಿ 23ರಂದು ತಾವು ಜೀವಂತ ಇರುವುದಿಲ್ಲವೆಂದು ಅವರು ಸ್ಪಷ್ಟವಾಗಿ ಹೇಳಿದಂತಿತ್ತು. ತಮ್ಮ ಸಾವಿನ ಬಗ್ಗೆ ಅವರಿಗೆ ಚಿಂತೆ ಇರಲಿಲ್ಲ. ಆದರೆ, ಅವರ ಬಳಿಯಲ್ಲಿದ್ದವರ ಹಾಗೂ ಅವರಿಗೆ ಪ್ರಿಯರಾಗಿದ್ದವರ ಚಿಂತೆಗೆ ಪಾರವೇ ಇರಲಿಲ್ಲ. ಉಮಾಪ್ರಸಾದ ಮುಕರ್ಜಿಯವರು ಅಂಥವರಲ್ಲಿ ಒಬ್ಬರಾಗಿದ್ದರು. ಅನಿರೀಕ್ಷಿತವಾಗಿ ಅವರು ಒಂದು ವಾರದ ವರೆಗೆ ಹೊರಗೆ ಹೋಗಬೇಕಾಗಿ ಬಂತು. ಹೋಗುವ ಮೊದಲು ಅವರು ಶರತ್‌ಚಂದ್ರರ ಅನುಮತಿ ಪಡೆಯಬಯಸಿದರು. ಆಗ ಅವರೆಂದರು: "ಕೆಲವು ದಿವಸಗಳ ಮಟ್ಟಿಗೆ ನೀವು ಹೋಗಬಹುದು. ಈ ಅವಧಿಯಲ್ಲಿ ಆಪರೇಷನ್ ನಡೆಯುವ ಸಂಭವವಿಲ್ಲ. ಡಾಕ್ಟರ್ ಕುಮುದ್ ಅವರೂ ಹೊರಗೆ ಹೋಗುತ್ತಿದ್ದಾರೆ. ಕಾಗದಗಳ ಮೂಲಕ ಎಲ್ಲ ಸುದ್ದಿಯೂ ನಿಮಗೆ ದೊರೆಯುತ್ತಿರುತ್ತದೆ. ಅಗತ್ಯ ಬಿದ್ದರೆ ನಿಮ್ಮನ್ನು ಕರೆಸಲು ಕಾಗದ ಬರೆಸುತ್ತೇನೆ."

ಉಮಾಪ್ರಸಾದ್ ಅವರು ಹೊರಟುಹೋದರು. ಹೋಗುವಾಗ ಅವರು ಮಾವ ಸುರೇಂದ್ರನಾಥರಿಗೆ ಹೇಳಿದರು: "ನನಗೆ ಕಾಗದ ಬರೆಯುತ್ತ ಇರಿ."

ಡಿಸೆಂಬರ್ 25ರಂದು ಸುರೇಂದ್ರನಾಥರು ಹೀಗೆ ಬರೆದರು:

"ಬೆಳಗ್ಗೆ ಐದು ಘಂಟೆ.

".....ಅಂದು ಕುಮುದ್ ಬಾಬೂ ಅವರು ಪ್ರಯೋಗಾಲಯದಲ್ಲಿ ಶರತ್‌ಚಂದ್ರರ ತಪಾಸಣೆ ನಡೆಯಿತು. ಸುಬೋಧ ಬಾಬೂ ಅವರು ಎಕ್ಸರೇ-ತೆಗೆಯಲು ಒಪ್ಪಿದ್ದಾರೆ. ಮಾರನೆಯ ದಿವಸ ಅವರ ಮನೆಗೆ ಹೋದೆ. ಎಲ್ಲವನ್ನೂ ವಿವರವಾಗಿ ತಿಳಿದುಕೊಳ್ಳಬೇಕೆಂದು ಇಚ್ಛಿಸಿದ್ದೆ. ಆದರೆ, ವೈದ್ಯರನ್ನು ಬಿಟ್ಟು ಅವರು ಬೇರೆ ಯಾರಿಗೂ ಏನನ್ನೂ ತಿಳಿಸಲು ಇಚ್ಛಿಸುತ್ತಿರಲಿಲ್ಲ.

"ಎರಡು ದಿವಸ ಶರತ್‌ಚಂದ್ರರು ಚೆನ್ನಾಗಿ ಊಟಮಾಡಿದರು. ಇದರಿಂದ ಅವರು ಇನ್ನಷ್ಟು ಅಶಕ್ತರಾಗಿಬಿಟ್ಟಿದ್ದಾರೆ. ನಿನ್ನೆ ಸಂಜೆ ಒಮ್ಮೆಗೇ ಅವರ ಸ್ಥಿತಿ ಹದಗೆಡುತ್ತಿರುವಂತೆ ಕಂಡಿತು. ಕುಮುದ್ ಬಾಬೂಗಳೂ ಊರಿನಲ್ಲಿಲ್ಲ. ಬೇರೆ ಡಾಕ್ಟರನ್ನು ಕರೆಸಲೂ ಅವರು ಅವಕಾಶಕೊಡುತ್ತಿಲ್ಲ. ಒಂದು ರಾಶಿ ಕ್ಯಾಲಿಫಾಸ್ ಮತ್ತು ಅಫೀಮಿನ ನೆರವಿನಿಂದ ಹೇಗೋ ಕೆಲಸ ಸಾಗುತ್ತಿದೆ.

"......ನಿನ್ನೆ ಒಂದು ನರ್ಸಿಂಗ್ ಹೋಮನ್ನು ಗೊತ್ತುಪಡಿಸಿದ್ದೇನೆ. 'ಪಾರ್ಕ್‌ಸ್ಟ್ರೀಟ್'ನಲ್ಲಿ ಸುಶೀಲ್ ಚಟರ್ಜಿಯವರಿದ್ದಾರೆ. ಅದೃಷ್ಟವಶಾತ್ ಆತ ನನ್ನ ಸೋದರ ಸೊಸೆಯ ಮಗನೇ ಆಗಿದ್ದಾನೆ. ಬಹುಶಃ ಡಿಸೆಂಬರ್ 31ರ ಶುಕ್ರವಾರ ಅಲ್ಲಿಗೆ ಹೋಗಬೇಕಾಗಬಹುದು.

"ಇಂದು ಬೆಳಿಗ್ಗೆ ಏಳೂವರೆ ಘಂಟೆಗೆ ಡಾಕ್ಟರ್ ದಾಸಗುಪ್ತ ಅವರೊಂದಿಗೆ ಸುಬೋಧ ಬಾಬೂಗಳ ಬಳಿಗೆ ಹೋಗಿಬರುತ್ತೇನೆ. ಸದ್ಯಕ್ಕೆ ಇಷ್ಟೇ ಸಮಾಚಾರ. ಅಲ್ಲಿಂದ ಹಿಂದಿರುಗಿ ಬಂದ ಮೇಲೆ ಉಳಿದ ಸಮಾಚಾರವನ್ನು ತಿಳಿಸುತ್ತೇನೆ. ನೀವು ನನ್ನ ಮೇಲೆ ನಂಬಿಕೆ ಇರಿಸಿ, ಇಲ್ಲಿಂದ ಹೋಗಿದ್ದೀರಿ. ನಾಲ್ಕಾರು ದಿವಸಗಳ ಒಳಗಾಗಿ ಬರುವುದು ಸಾಧ್ಯವಾದರೆ ಒಳ್ಳೆಯದು. ಬರಲು ನಿಮಗೆ ಸಾಧ್ಯವಾದೀತು ಎಂದು ನಂಬಿದ್ದೇನೆ. 30ನೆಯ ತಾರೀಖಿನ ಒಳಗಾಗಿ ಬಂದುಬಿಡಿ.

"ಹತ್ತೂವರೆ ಘಂಟೆ.

"ಸುಬೋಧ ಬಾಬೂಗಳು ಇಂದು ಆರೂವರೆ ಘಂಟೆಗೆ ಬರುತ್ತಾರೆ. ಇಂದಿನಿಂದ ಅವರು ರೋಗಿಯ ಮೇಲ್ವಿಚಾರಣೆಯನ್ನು ವಹಿಸಿಕೊಳ್ಳುತ್ತಾರೆ."

ಎರಡು ದಿವಸಗಳ ಬಳಿಕ ಮತ್ತೆ ಹೀಗೆಂದು ಬರೆದರು:

"27-12-1937 ಸಮಯ: ಹತ್ತು ಘಂಟೆ.

"ನನ್ನ ಕಾಗದ ಬರೆಯಲು ಸಾಧ್ಯವಾಗಲಿಲ್ಲ. ಇಂದು ಬೆಳಿಗ್ಗೆ ಎಲ್ಲವೂ ಶಾಂತವಾಗಿ ಆರಂಭವಾಯಿತು. ಆದ್ದರಿಂದ ಭಯವಾಗುತ್ತಿದೆ. ಈಗ ಮೂಡಿ[1]ಯೊಂದಿಗೆ ಹುಕ್ಕಾ ಸೇದುವ ಕೆಲಸ ನಡೆಯುತ್ತಿದೆ. ಮೂಡಿಯನ್ನು ತಿಂದು ಮುಗಿಸುತ್ತಾರೆಂಬ ನಂಬಿಕೆಯೇನೂ ಇಲ್ಲ. ತಿನ್ನುವ ಇಚ್ಛೆಯಷ್ಟೇ ಅದರಿಂದ ಪೂರೈಸುತ್ತದೆ. ಆದ್ದರಿಂದಲೇ ಡಾಕ್ಟರು ಅದಕ್ಕೆ ನಿಷೇಧವನ್ನು ಹೊರಿಸಿಲ್ಲ. ನನ್ನ ನಿದ್ದೆ ಮಾಡುವ ಹೊತ್ತಿಗೆ ಹನ್ನೆರಡೂವರೆ ಘಂಟೆಯಾಗಿಬಿಟ್ಟಿತು.

"ಈಗ ಡೂಶ್ ಕೊಡುವ ಹೊತ್ತಿಗೆ ಹನ್ನೆರಡು ಘಂಟೆ ಆಗಿಬಿಡುವಂತೆ

1. ನಮ್ಮಲ್ಲಿಯ ಪುರಿಯಂಥ ವಸ್ತು.

ತೋರುತ್ತದೆ. ಆಮೇಲೆ ಆಲಿವ್ ಎಣ್ಣೆಯಿಂದ ಮಾಲೀಸು ಮಾಡುತ್ತಾರೆ. ಅದಾದ ಮೇಲೆ ಗ್ಲೂಕೋಸ್ ಕೊಡುತ್ತಾರೆ - ಮೊದಲು 'ರೆಕ್ಟಮ್' ಮೂಲಕ ಹಾಗೂ ಆಮೇಲೆ ಇಂಟ್ರಾವೀನಸ್ ಇಂಜೆಕ್ಷನ್ ಮೂಲಕ ಈ ಮಧ್ಯೆ ಹೊತ್ತಿಗೆ ಸರಿಯಾಗಿ 'ಸ್ಟ್ರೀಕ್‌ನಿನ್' ಕೊಡುತ್ತಾರೆ. ಬಾಯಿಯ ಮೂಲಕ ಹೊಟ್ಟೆಗೆ ಆಹಾರ ತಲುಪುವ ಸಂಭವವಿಲ್ಲ. ಇದು ಎಷ್ಟರ ಮಟ್ಟಿಗೆ ವಿಷಮಿಸಿದೆಯೆಂದರೆ ವಿನ್‌ಕಾರ್ನಿಸ್ ಕೂಡ ಕೊಡಲಾಗುವುದಿಲ್ಲ. ಬಾಯಿಯಿಂದ ತಿಂದರೆ ಕಷ್ಟವಾಗುತ್ತದಷ್ಟೇ ಹೊರತು ಲಾಭವೇನೂ ಇಲ್ಲ. ಆದರೆ, ಮನಃಶಾಂತಿಗಾಗಿಯೇ ಇದನ್ನೆಲ್ಲ ಮಾಡಬೇಕಾಗುತ್ತದೆ. ರಾತ್ರಿ ತುಂಬ ತಡವಾಗಿ ಕೆಲಸ ಆರಂಭವಾಯಿತು. ಆಲಿವ್ ಎಣ್ಣೆಯನ್ನು ಮಾಲೀಸು ಮಾಡುವುದು, ಆಮೇಲೆ 'ರೆಕ್ಟಮ್' ಮೂಲಕ ಮೂರು ಔನ್ಸ್‌ನಷ್ಟು ಕುಡಿಸುವುದು - ಇಷ್ಟೆಲ್ಲ ಮಾಡಿ ಮುಗಿಸಿ, ಮಲಗುವ ಹೊತ್ತಿನಲ್ಲಿ ಹೇಳಿದರು: 'ಒಂದು ಹಾಡನ್ನು ಕೇಳು - 'ಶೇಷ್ ಪಾರಾಣೇರ್ ಕಡೀ ಆಮೀ ಕಂಠೇ ನಿಲಾಮ್ ಗೌನ್.....' (ನನ್ನ ಬಹುದಿನಗಳ ಗೆಳೆಯ ನೀನು. ಆದ್ದರಿಂದ ಈ ಹಾಡನ್ನು ಹಾಡುತ್ತಿದ್ದೇನೆ).

"ಉಳಿದಂತೆ ಎಲ್ಲ ಸರಿಯಾಗಿದೆ. ಇದಕ್ಕೆ ಮೊದಲು 'ಬನ್ನಿ' ಎಂದು ನಿಮಗೆ ಬರೆದಿದ್ದೆ. ಈಗ ಮತ್ತೆ ಆ ಮಾತನ್ನು ಒತ್ತಿ ಹೇಳಬಯಸುತ್ತೇನೆ."

ಕಾಗದ ಸಿಕ್ಕಿದ ಕೂಡಲೇ ಉಮಾಪ್ರಸಾದರು ಕಲ್ಕತ್ತೆಗೆ ಹಿಂದಿರುಗಿದರು.[1]

## 29

ಈ ಮಧ್ಯೆ ಒಂದು ದಿವಸ ಶಿಲ್ಪಿ ಮುಕುಲ್ ದೇ ಅವರು ಡಾಕ್ಟರ್ ಮಾಕೀ ಅವರನ್ನು ಕರೆದುಕೊಂಡು ಬಂದರು. ತಪಾಸಣೆ ಮಾಡಿದ ಬಳಿಕ ಅವರೆಂದರು: "ಮನೆಯಲ್ಲಿ ಚಿಕಿತ್ಸೆ ನಡೆಸುವುದು ಸಾಧ್ಯವಿಲ್ಲ. ಪರಿಸ್ಥಿತಿ ಆಶಾದಾಯಕವಾಗಿಲ್ಲ. ಯಾವ ಕ್ಷಣದಲ್ಲಿ ಬೇಕಾದರೂ ಸಾವು ಸಂಭವಿಸಬಹುದು. ಇವರನ್ನು ಕೂಡಲೇ ನರ್ಸಿಂಗ್ ಹೋಮ್‌ಗೆ ಕರೆದೊಯ್ಯಬೇಕು."

ಸುರೇಂದ್ರನಾಥರೆಂದರು: "ನರ್ಸಿಂಗ್ ಹೋಮ್‌ಗೆ ಕರೆದೊಯ್ಯಬೇಕೆಂದೇನೋ ತೀರ್ಮಾನಿಸಿದ್ದೇವೆ. ಆದರೆ 31ಕ್ಕೆ ಮೊದಲು ಹಾಗೆ ಮಾಡುವುದು ಸಾಧ್ಯವಾಗದು."

ಒಂದು ಕ್ಷಣದ ಮಟ್ಟಿಗೆ ಯೋಚಿಸಿ ಡಾಕ್ಟರ್ ಮಾಕೆ ಅವರು ಹೇಳಿದರು: "ಮಿಸ್ಟರ್ ಗಂಗೂಲಿ, ಇಂದೇ ಇವರನ್ನು ನರ್ಸಿಂಗ್ ಹೋಮ್‌ಗೆ ಕರೆದೊಯ್ಯಬೇಕೆಂದು ನಾನು ಒತ್ತಾಯಪಡಿಸುತ್ತೇನೆ."

"ಹಾಗಿದ್ದರೆ, ನೀವೇ ಸಹಾಯಕ್ಕೆ ಬರಬೇಕು."

ಡಾಕ್ಟರ್ ಮಾಕೀ ಅವರು ನರ್ಸಿಂಗ್ ಹೋಮನ್ನು ಗೊತ್ತುಪಡಿಸಿದರು. ಸದರ್ನ್ ಹಾಸ್ಪಿಟಲ್ ರೋಡ್‌ನಲ್ಲಿ ಇದ್ದ ಒಂದು ಐರೋಪ್ಯ ನರ್ಸಿಂಗ್ ಹೋಮ್ ಅದಾಗಿತ್ತು.

ಶರತ್‌ಚಂದ್ರರು ಸಿದ್ಧವಾಗ ತೊಡಗಿದರು. ಆಗ ಆರಂಭಗೊಂಡ ಅಳು ನಿಲ್ಲುವಂತೆಯೇ ಇರಲಿಲ್ಲ. ಶರತ್‌ಚಂದ್ರರು ಮೂರ್ಛೆ ಹೋದವರಂತೆ ಮಂಚದ ಮೇಲೆ ಮಲಗಿಬಿಟ್ಟರು. ಸುರೇಂದ್ರನಾಥರು ಮುಕುಲ್ ದೇ ಅವರಿಗೆ ಹೇಳಿದರು:

---

1. ಡಿಸೆಂಬರ್ 30, 1937.

"ಡಾಕ್ಟರ್ ಮಾಕೇ ಅವರನ್ನು ಕರೆಸಿಬಿಡಿ. ಅವರು ಜೊತೆಗಿದ್ದರೆ ಒಳ್ಳೆಯದು."

ಡಾಕ್ಟರ್ ಮಾಕೇ ಅವರೂ ಬಂದರು. ಶರತ್‌ಚಂದ್ರರು ಸಿದ್ಧವಾಗಿದ್ದರು. ಅವರು ಹೊರಡಲಿದ್ದಾಗ ಹಿರಣ್ಮಯೀ ದೇವಿಯವರು ಚರಣೋದಕವನ್ನು ಸ್ವೀಕರಿಸಿದರು, ಆಮೇಲೆ ಅವರೆಂದರು: "ಸರಿ, ಆಯಿತು ಬಿಡು."

ಶರತ್‌ಚಂದ್ರರು ಹೊರಗೆ ಹೋದರೆ ಹಲವೊಮ್ಮೆ ಅಲ್ಲಿಯೇ ಮುಳುಗೇಳುತ್ತಿದ್ದರು. ಇದನ್ನು ತಡೆಯುವುದಕ್ಕಾಗಿಯೇ ಹಿರಣ್ಮಯೀ ದೇವಿಯವರು ಚರಣೋದಕ ಸ್ವೀಕಾರದ ಪದ್ಧತಿಯನ್ನು ನಡೆಸಿಕೊಂಡು ಬಂದಿದ್ದರು. "ಚರಣೋದಕವನ್ನು ಸ್ವೀಕರಿಸುವ ವರೆಗೆ ಅನ್ನವನ್ನು ಮುಟ್ಟುವುದಿಲ್ಲ" ಎಂದು ಅವರು ಹೇಳಿದ್ದರು.

ಒಮ್ಮೆ ಕೆಲವು ದಿನಗಳ ಬಳಿಕ ಶರತ್‌ಚಂದ್ರರು ಹಿಂದಿರುಗಿದಾಗ, ಹಸಿವು-ನೀರಡಿಕೆಗಳಿಂದ ಬಳಲಿಹೋಗಿದ್ದ ಹಿರಣ್ಮಯೀ ದೇವಿಯವರನ್ನು ಕಂಡರು. ಆಗಿನಿಂದ ಹೀಗೆಲ್ಲ ಹೋಗಿ ಬಂದು ಮಾಡುವುದು ಕಡಿಮೆಯಾಗಿತ್ತು. ಅಂದು ಚರಣೋದಕವನ್ನು ಸ್ವೀಕರಿಸಿದಾಗ ಬಹುಶಃ 'ಆಯಿತು ಬಿಡು. ನಾನಿನ್ನು ಹಿಂದಿರುಗುವುದಿಲ್ಲ' ಎಂದು ಹೇಳುವಂತಿತ್ತು.

ಆ ಐರೋಪ್ಯ ನರ್ಸಿಂಗ್ ಹೋಮ್‌ನಲ್ಲಿ ಇರಲು ಅವರಿಗೆ ಸಾಧ್ಯವಾಗಲಿಲ್ಲ. ಅಲ್ಲಿ ಎಲ್ಲವೂ ಸುಂದರವಾಗಿತ್ತು. ಏರ್ಪಾಟು ಮತ್ತು ಅಚ್ಚುಕಟ್ಟು ಸಹ ಚೆನ್ನಾಗಿತ್ತು. ಮೆಟ್ಟಿಲುಗಳ ಮೇಲೂ ಕಾರ್ಪೆಟ್ ಹಾಸಲಾಗಿತ್ತು. ನಾಲ್ಕೂ ಕಡೆ ಪರಂಗಿ ಗಂಡಸರು ಮತ್ತು ಹೆಂಗಸರು ಕಾಣಿಸುತ್ತಿದ್ದರು. ಭೇಟಿಯ ವೇಳೆಯಲ್ಲಿ ಅಲ್ಲಿಗೆ ಬಂದ ಉಮಾಪ್ರಸಾದರು ಚಕಿತರಾಗಿಬಿಟ್ಟರು. ಬಾಂಗ್ಲಾ ರಾಜ್ಯವನ್ನು ಬಿಟ್ಟು ವಿದೇಶಕ್ಕೆಲ್ಲಿಯಾದರೂ ಬಂದು ಬಿಟ್ಟಿದ್ದೇನೇನೋ ಎಂದು ಅವರಿಗೆ ಅನುಮಾನವೂ ಬಂದಿತು. ಕೋಣೆಯ ಸಂಖ್ಯೆಯನ್ನು ನೋಡಿಕೊಂಡು ಒಳಕ್ಕೆ ಹೋದರು. ಭರ್ಜರಿ ಅಲಂಕರಣ, ಬೆಲೆಬಾಳುವ ಪೀಠೋಪಕರಣಗಳು ದಂಗುಬಡಿಸುವಂತಿದ್ದುವು. ಎದುರಿಗೆ ಒಂದು ಸರಳವಾದ ಮಂಚದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಶರತ್‌ಚಂದ್ರರು ಮೈಚಾಚಿದ್ದರು. ನೊರೆ ಹಾಲಿನಂಥ ಬಿಳುಪಿನ ಶಯ್ಯೆ ಅದಾಗಿತ್ತು. ಆದರೆ, ರೋಗಿಯ ಮುಖದತ್ತ ದೃಷ್ಟಿ ಹರಿದೊಡನೆಯೇ ಅವರು ಬೆಚ್ಚಿಬಿದ್ದರು. ಮುಖ ಬಣ್ಣಗೆಟ್ಟಿತ್ತು; ದೃಷ್ಟಿಯಲ್ಲಿ ಕಳೆಯೇ ಇರಲಿಲ್ಲ. ಅವರನ್ನು ನೋಡಿದೊಡನೆಯೇ ಶರತ್‌ಚಂದ್ರರೆಂದರು: "ನೀವು ಬಂದು ಬಿಟ್ಟಿರಲ್ಲ, ಇನ್ನು ಚಿಕಿತ್ಸೆ ಸರಿಯಾಗಿ ನಡೆಯುತ್ತದೆ."

ಉಮಾಪ್ರಸಾದರು ಕೇಳಿದರು: "ಹೇಗಿದ್ದೀರಿ ?"

ಅವರು ಆ ವ್ಯಾಕ್ಯವನ್ನು, ಇನ್ನೂ ಪೂರೈಸಿಯೇ ಇರಲಿಲ್ಲ; ಅಷ್ಟರಲ್ಲಿಯೇ ಒಬ್ಬಳು ನರ್ಸ್ ಅಲ್ಲಿಗೆ ಬಂದಳು. ಕೈಯಲ್ಲಿ ಗ್ಲೂಕೋಸ್ ನೀರಿತ್ತು. ಶರತ್‌ಚಂದ್ರರೆಂದರು: "ಈಗಲೇ ಬೇಡ. ಆಮೇಲೆ ಕೊಡು."

ನರ್ಸ್ ಅವರ ಮಾತನ್ನು ಕಿವಿಯ ಮೇಲೇ ಹಾಕಿಕೊಳ್ಳಲಿಲ್ಲ. ಆಕೆ ಎಂದಳು: "ಕುಡಿಯಬೇಕಾದ ಹೊತ್ತು ಸಮೀಪಿಸಿದೆ. ಕುಡಿಯಲೇ ಬೇಕು."

ಆಕೆಯ ಮಾತುಕತೆಗಳ ರೀತಿಯಲ್ಲಿ ಸ್ನೇಹದ ಸುಳಿವು ಸಹ ಇರಲಿಲ್ಲ.

ಯಂತ್ರದಾನವಿಯೋ ಎಂಬಂತೆ ಕಠಿಣ-ಕಠೋರ ವರ್ತನೆ ಆಕೆಯದಾಗಿತ್ತು. ಆಕೆಯ ಈ ವರ್ತನೆಯಿಂದ ಶರತ್‌ಚಂದ್ರರು ಉದ್ವಿಗ್ನರಾಗಿಬಿಟ್ಟರು. ಆಗ ಉಮಾಪ್ರಸಾದರು ಆಕೆಯ ಕೈಯಿಂದ ಲೋಟವನ್ನು ತೆಗೆದುಕೊಂಡು ಹೀಗೆಂದು ಹೇಳಿದರು: "ನೀವು ದಯವಿಟ್ಟು ಹೊರಗೆ ಹೋದರೆ, ನಾನು ಇದನ್ನು ಕುಡಿಸುತ್ತೇನೆ."

ನರ್ಸ್ ಕೋಪಗೊಂಡು ಹೊರಗೆ ಹೋದಳು. ಉಮಾಪ್ರಸಾದರು ರೋಗಿಯ ಬಳಿ ಬಂದು ನಿಂತರು. ಅವರ ಕೈಯನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡರು. ಆ ಬಳಿಕ ತಲೆಯ ಮೇಲೆ ಕೈ ಆಡಿಸತೊಡಗಿದರು. ಈಗಲೂ ಆ ದುಸ್ಸಹನೀಯವಾದ ಕೋಪದಿಂದ ಶರತ್‌ಚಂದ್ರರ ಆ ಬಳಲಿದ ಶರೀರ ನಡುಗುತ್ತಲೇ ಇತ್ತು. ಉಮಾಪ್ರಸಾದರು ನಿಧಾನವಾಗಿ ಹೇಳಿದರು: "ಸ್ವಲ್ಪ ನೀರನ್ನಾದರೂ ಕುಡಿಯಿರಿ."

ಶರತ್‌ಚಂದ್ರರು ಅವರ ಮುಖದತ್ತ ಕಣ್ಣಿಟ್ಟು ನೋಡತೊಡಗಿದರು. ಆ ಬಳಿಕ ಶಾಂತ ಸ್ವರದಲ್ಲಿ ಹೇಳಿದರು: "ಸರಿ, ಕುಡಿಯುತ್ತೇನೆ. ಆದರೆ, ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಿಬಿಡಿ. ಇಲ್ಲದೆ ಹೋದರೆ ನಾನೇ ಇಲ್ಲಿಂದ ಓಡಿಹೋಗಿಬಿಡುತ್ತೇನೆ."

ಉಮಾಪ್ರಸಾದರೆಂದರು: "ನನಗೂ ಹಾಗೆ ಅನ್ನಿಸುತ್ತಿದೆ. ನಿಮಗೆ ಇಲ್ಲಿರಲು ಸಾಧ್ಯವಾಗುವುದಿಲ್ಲ. ನಾಳೆಯೇ ಇಲ್ಲಿಂದ ಹೊರಡಿಸುವ ಏರ್ಪಾಟುಮಾಡುತ್ತೇನೆ."

ಶರತ್‌ಚಂದ್ರರು ಸ್ವಚ್ಛಂದ ಕಲೆಗಾರರಾಗಿದ್ದರು. ಬಂಧನದಲ್ಲಿರುವುದು ಅವರಿಗೆ ಹೇಗೆ ಸಾಧ್ಯವಾಗಬಹುದಿತ್ತು? ಅಲ್ಲಿಯಂತೂ ಸಾಕು-ಬೇಕೆನ್ನಿಸುವಷ್ಟು ಕಾಯ್ದೆ-ಕಾನೂನುಗಳಿದ್ದುವು. ಹಾಗೂ ಹೀಗೂ ಒಂದೆರಡು ಸಿಗರೇಟುಗಳನ್ನು ಸೇದಲು ಅನುಮತಿ ದೊರೆತಿತ್ತು. ಆದರೆ, ಅಫೀಮನ್ನು ಸೇವಿಸಲು ಯಾವ ರೀತಿಯಲ್ಲಿಯೂ ಅವಕಾಶಕೊಟ್ಟಿರಲಿಲ್ಲ. ಮೇಲಾಗಿ, ಭಾರತೀಯ ರೋಗಿಯನ್ನು ನೋಡಲು ಬಂಧುಗಳ, ಮಿತ್ರರ ಮತ್ತು ಅಭಿಮಾನಿಗಳ ಗುಂಪು ಗುಂಪಾಗಿ ಬರದೆ ಹೋದರೆ, ಅವರ ಪ್ರೀತಿ ಪ್ರಕಟವಾಗುವುದಾದರೂ ಹೇಗೆ! ಗುಂಪುಗೂಡಿಸಿಕೊಂಡು ಪಟ್ಟಾಂಗ ಹೊಡೆಯುವುದೇ ಅಭ್ಯಾಸವಾಗಿಬಿಟ್ಟಿದ್ದ ವ್ಯಕ್ತಿ ಗೊತ್ತುಪಡಿಸಿದ ವೇಳೆಯಲ್ಲಿ ಕೆಲವೇ ಕೆಲವರನ್ನು ಭೇಟಿಯಾಗುವ ನಿರ್ಬಂಧವನ್ನು ಸಹಿಸುವುದಾದರೂ ಹೇಗೆ ಸಾಧ್ಯ? ಆ ನರ್ಸ್ ಮತ್ತೆ ಮತ್ತೆ ಈ ಸ್ವಚ್ಛಂದ ವ್ಯಕ್ತಿಯೊಂದಿಗೆ ಜಗಳವಾಡುತ್ತಿದ್ದಳು. ಕೊನೆಗೆ ಅಲ್ಲಿಯ ವ್ಯವಸ್ಥಾಪಕಿ ಹೇಳಿದಳು: "ಈ ರೋಗಿಯನ್ನು ನಮ್ಮಲ್ಲಿ ಇಟ್ಟುಕೊಳ್ಳುವುದು ಸಾಧ್ಯವಿಲ್ಲ."

ಅಲ್ಲಿಯ ವೈದ್ಯರೂ ತಪಾಸಣೆ ನಡೆಸಿ, ಹೀಗೆಂದು ಹೇಳಿಬಿಟ್ಟರು: "ರೋಗಿ ಉಳಿಯುವ ಆಸೆಯೇ ಇಲ್ಲ. ಇಲ್ಲಿ ಇಟ್ಟುಕೊಳ್ಳುವುದು ವ್ಯರ್ಥ."

ಸುರೇಂದ್ರನಾಥರು ಡಾ. ಸುಶೀಲ್ ಅವರ ನರ್ಸಿಂಗ್ ಹೋಮ್ ಬಗ್ಗೆ ಚರ್ಚಿಸಿದ್ದರಷ್ಟೆ. ಅಲ್ಲಿಯೇ ಏರ್ಪಾಟುಮಾಡಲಾಯಿತು. ಅಲ್ಲಿಯೂ ನಿಯಮ-ನಿರ್ಬಂಧಗಳಿದ್ದುವು. ಆದರೆ, ರೋಗಿಗೆ ವಿಶೇಷ ತೊಂದರೆಯಾಗದಂತೆ ನೋಡಿಕೊಳ್ಳಬೇಕೆಂಬುದನ್ನು ಗಮನದಲ್ಲಿರಿಸಿಕೊಂಡು ಕೆಲವರಿಗೆ ಬಂದು-ಹೋಗಿ ಮಾಡಲು ವಿನಾಯಿತಿಯನ್ನು ಕೊಡಲಾಗಿತ್ತು. ಉಮಾಪ್ರಸಾದರು ಅವರನ್ನು ಕೇಳಿದರು: "ನೀವು ಇಲ್ಲಿ ಯಾರನ್ನಾದರೂ ನಿಮ್ಮ ಬಳಿ ಇರಿಸಿಕೊಳ್ಳ

ಬಯಸುತ್ತೀರೇನು ? ಅದಕ್ಕೆ ಅನುಗುಣವಾಗಿ ಇಲ್ಲಿ ಏರ್ಪಾಟು ಮಾಡುತ್ತೇವೆ."

ಬಳಲಿದ ಧ್ವನಿಯಲ್ಲಿ ಶರತ್‌ಚಂದ್ರರು ಉತ್ತರಿಸಿದರು: "ಬೇರೆ ಯಾರೂ ಬೇಡ. ನೀವು ಇದ್ದೇ ಇರುತ್ತೀರಲ್ಲ. ನೀವು ಇಲ್ಲಿಯೇ ಕುಳಿತುಕೊಳ್ಳಿ."

ಉಮಾಪ್ರಸಾದರ ಬಗ್ಗೆ ಅವರಿಗೆ ಎಷ್ಟು ಪ್ರೀತಿ ಇತ್ತೋ ಅಷ್ಟೇ ವಿಶ್ವಾಸವೂ ಇತ್ತು. ಒಮ್ಮೆ ಹಿರಣ್ಮಯೀ ದೇವಿಯವರು ಬಂದಾಗ, ಉಮಾಪ್ರಸಾದರನ್ನು ಪರಿಚಯಿಸಿಕೊಡುತ್ತ ಹೀಗೆಂದು ಹೇಳಿದ್ದರು: "ಇವರು ಉಮಾಪ್ರಸಾದ್ ನೀನೇನಾದರೂ ಹೇಳುವುದಿದ್ದರೆ, ಇನ್ನು ಮೇಲೆ ಇವರೊಂದಿಗೆ ಮಾತ್ರವೇ ಹೇಳು."

ಇದು ಒಂದು ರೀತಿಯಲ್ಲಿ ಹಿರಣ್ಮಯೀ ದೇವಿಯವರನ್ನು ಉಮಾಪ್ರಸಾದರ ಕೈಗೆ ಒಪ್ಪಿಸಿದಂತೆಯೇ ಆಗಿತ್ತು. ತಮ್ಮ ಬಾಳು ಕೊನೆಗಾಣಲಿದೆ ಎಂಬ ಬಗ್ಗೆ ಅವರಿಗೆ ಅನುಮಾನವೇನೂ ಇರಲಿಲ್ಲ. ಆದ್ದರಿಂದಲೇ, ಅವರನ್ನು ನೋಡಲು ಬರುವ ಗೆಳೆಯರ ಸಂಖ್ಯೆಗೆ ಕೊನೆಯೇ ಇರಲಿಲ್ಲ. ಶಾಂತಿನಿಕೇತನದಿಂದ ನಂದಗೋಪಾಲ ಸೇನಗುಪ್ತರು ಬಂದಿದ್ದರು. ಕಣ್ಣುಗಳು ಗುಳಿಬಿದ್ದು ಹೋಗಿದ್ದುದನ್ನು ಅವರು ಕಂಡರು; ಬದುಕುವ ಆಸೆತುಂಬ ಕ್ಷೀಣವಾಗಿದ್ದಂತೆ ತೋರಿತು. ಅವರೊಂದಿಗೆ ಶರತ್‌ಚಂದ್ರರು ಹೀಗೆಂದರು: "ಹೀಗೆ ಯಾರು ಒದ್ದಾಡಲು ಇಷ್ಟಪಡುತ್ತಾರೆ ?"

ಸ್ವಲ್ಪ ಹೊತ್ತು ಮಾತನಾಡುತ್ತಿದ್ದ ಬಳಿಕ ಶರತ್‌ಚಂದ್ರರೆಂದರು: "ಇಷ್ಟಾಗಿಯೂ, ಈ ಬಾಳು ವ್ಯರ್ಥವೇನೂ ಆಗಲಿಲ್ಲ. ನಾನು ಒಬ್ಬ ಅಲೆಮಾರಿ ಹುಡುಗನಂತೆ ಬಾಳನ್ನು ಆರಂಭಿಸಿದ್ದೆ. ಅದು ಕೊನೆಗೊಂಡಿದ್ದು... ಇದೆಲ್ಲ ನಿಮಗೆ ಗೊತ್ತೇ ಇದೆಯಲ್ಲ !"

ಯಾರಾದರೂ ಬಂದಾಗ, ಮುಖದ ಮೇಲೆ ಕಾಂತಿಹೀನವಾದ ನಗೆಯ ರೇಖೆಯೊಂದು ಮೂಡುತ್ತಿತ್ತು. ಮನಃಪಟಲದ ಮೇಲೆ ಆಸೆಯ ಕಾಂತಿಯನ್ನು ಮೂಡಿಸಲು ಪ್ರಯತ್ನಿಸುತ್ತಿದ್ದಾರೋ ಎಂಬಂತೆ ತೋರುತ್ತಿತ್ತು. ಬಾಲ್ಯದ ದಿನಗಳನ್ನು ನೆನಪಿಸಿಕೊಳ್ಳುತ್ತಿದ್ದರು. ಭಾಗಲ್ಪುರದಲ್ಲಿನ ಗಂಗೆಯ ಕಥೆಯನ್ನು - ಸುರಿಮಳೆಯ ಕತ್ತಲಿನಲ್ಲಿ ತುಂಬಿ ಹರಿಯುತ್ತಿದ್ದ ಗಂಗೆಯಲ್ಲಿ ಈಜಿಕೊಂಡು ಹೋಗಿ ಎದುರು ದಡವನ್ನು ಸೇರುತ್ತಿದ್ದ ಆ ಕಥೆಯನ್ನು - ಜ್ಞಾಪಿಸಿಕೊಳ್ಳುತ್ತಿದ್ದರು. ಅಮಾವಾಸ್ಯೆಯ ರಾತ್ರಿಯಲ್ಲಿ ಅವರು ಮತ್ತು ರಾಜೂ ಇಬ್ಬರೂ ದೋಣಿಯಲ್ಲಿ ಕುಳಿತು ಬಿರುಗಾಳಿಯಿಂದ ಅಬ್ಬರಿಸುತ್ತಿದ್ದ ಸಾಗರದಲ್ಲಿ ಕೊನೆ ಇಲ್ಲದ ಪಯಣಕ್ಕೆ ಹೊರಟಿರುವಂತೆ ತೋರುತ್ತಿತ್ತು. ಅದೆಷ್ಟು ವರ್ಷಗಳು ಕಳೆದು ಹೋದುವು ! ಆ ವರ್ಷಗಳು ಜೀವನವನ್ನು ಅದೆಷ್ಟು ಕಠೋರವಾಗಿಸಿದ್ದುವು, ಅದೆಷ್ಟು ನಿಷ್ಕರುಣ ವಾಗಿಸಿದ್ದುವು; ಆದರೂ ಅದೆಷ್ಟು ಪ್ರಲೋಭನೀಯವಾಗಿಸಿದ್ದುವು !.......

ಈ ನೆನಪುಗಳ ಮೂಲಕ ತಮ್ಮ ಶಕ್ತಿಯನ್ನು ನೆನೆದು ಅಶಕ್ತತೆಯ ಆ ಕ್ಷಣಗಳಲ್ಲಿ ಕೆಚ್ಚನ್ನು ಮೂಡಿಸಿಕೊಳ್ಳುವ ಸಾಹಸ ಮಾಡುತ್ತಿದ್ದಂತೆ ತೋರುತ್ತಿತ್ತು. ಉಮಾ ಪ್ರಸಾದರೆಂದರು: "ಈ ಸಲ ಗುಣಮುಖರಾಗಿ ಬಿಡಿ ಮತ್ತೆ ನಿಮ್ಮ ಜೊತೆಯಲ್ಲಿಯೇ ಅಲ್ಲಿಗೆಲ್ಲ ಬರುತ್ತೇನೆ."

ಶರತ್‌ಚಂದ್ರರು ನಕ್ಕು ಹೇಳಿದರು: "ಅರೆ, ನಿಮ್ಮ ಆಸೆ ಕಡಿಮೆಯದೇನೂ ಅಲ್ಲ. ಖಂಡಿತವಾಗಿಯೂ ಗಂಗಾನದಿಗೆ ಬರುತ್ತೇನೆ. ನಿಮ್ಮ ಜೊತೆಯೂ ಇರುತ್ತದೆ.

ಆದರೆ, ಅದು ನನ್ನ ಅಂತಿಮ ಯಾತ್ರೆ ಮಾತ್ರವಾಗಿರುತ್ತದೆ."

ಉಮಾಪ್ರಸಾದರೆಂದರು: "ಸುಮ್ಮನಿರಿ. ಹೆಚ್ಚು ಮಾತನಾಡಬಾರದೆಂದು ಹೇಳಿದ್ದಾರೆ."

ಡಾಕ್ಟರ ಅನುಮತಿಯನ್ನು ಪಡೆದು ಉಮಾಪ್ರಸಾದರು ರಾತ್ರಿ ಅಲ್ಲಿಯೇ ಇದ್ದರು. ಹತ್ತಿರವೇ ಕುರ್ಚಿಯೊಂದನ್ನು ಹಾಕಿಕೊಂಡು ಕುಳಿತಿದ್ದರು. ರೋಗಿಯ ಸೇವೆಗಾಗಿ ಹೆಚ್ಚೇನೂ ಮಾಡಬೇಕಾದ್ದಿರಲಿಲ್ಲ. ಕೋಣೆಯ ಒಂದು ಮೂಲೆಯಲ್ಲಿ ಮಿಣುಗುಟ್ಟುತ್ತಿದ್ದ ದೀಪವಿತ್ತು. ಉಮಾ ಬಾಬೂಗಳ ಕಣ್ಣಿಗೆ ನಿದ್ದೆ ಹತ್ತಲೇ ಇಲ್ಲ. ರೆಪ್ಪೆಯನ್ನೂ ಮಿಟುಕಿಸದೆ ಅವರತ್ತಲೇ ನೋಡುತ್ತ ಇದ್ದರು. ಮಹಾಮಾನವನೊಬ್ಬ ಈಗ ರೋಗಶಯ್ಯೆಯಲ್ಲಿದ್ದ. ಅವನೀಗ ಸಾವಿನ ಹಾದಿಯ ಪಯಣಿಗನಾಗಿದ್ದ. ರೋಗದಿಂದ ಮೈ ಬಳಲಿಹೋಗಿತ್ತು; ಆದರೂ ಅವರು ಪೂರ್ಣ ಪ್ರಜ್ಞೆಯಿಂದಿದ್ದರು. ಸಂಜೆಯ ದಾದಿಯ ಪಾಳಿ ಬದಲಾಗಿತ್ತು. ರಾತ್ರಿಯ ದಾದಿ ತನ್ನ ಕೆಲಸದ ಮೇಲೆ ಬಂದಿದ್ದಳು. ಎತ್ತರವಾದ ಹಿಮ್ಮಡಿಯ ಚಪ್ಪಲಿಯನ್ನು ಹಾಕಿಕೊಂಡಿದ್ದ ಅವಳು ಟಕ್ ಟಕ್ ಎಂದು ಸದ್ದು ಮಾಡಿಕೊಂಡು ಓಡಾಡುತ್ತ ಕಾರ್ಯಭಾರವನ್ನು ಸ್ವೀಕರಿಸುತ್ತಿದ್ದಳು. ಅಸ್ಫುಟವಾದ ಶಬ್ದಗಳಲ್ಲಿ ಶರತ್‌ಚಂದ್ರರೆಂದರು: "ಕುಂಟಿ ನರ್ಸ್ ಬಂದಿದ್ದಾಳೆ."

ಆಶ್ಚರ್ಯದಿಂದ ಉಮಾಪ್ರಸಾದರು ಕೇಳಿದರು: "ಕುಂಟಿಯೇ! ಆಕೆ ಕುಂಟಿ ಎಂಬುದು ನಿಮಗೆ ಹೇಗೆ ಗೊತ್ತಾಯಿತು?"

ಮಧುರವಾದ ನಗೆಯನ್ನು ಉಕ್ಕಿಸುತ್ತ ಅವರೆಂದರು: "ಕಣ್ಣಿನಿಂದಲೇ ನೋಡಬೇಕೇನು? ಕಿವಿಯಿಂದ ಕೇಳಿಯೇ ಎಲ್ಲವನ್ನೂ ಗೊತ್ತುಮಾಡಿಕೊಳ್ಳಬಹುದು. ಎರಡೂ ಕಾಲುಗಳ ಚಪ್ಪಲಿಗಳ ಸಪ್ಪಳ ಒಂದೇ ರೀತಿಯಾಗಿಲ್ಲ. ಬೇಕಾದರೆ ನೀವು ಹೋಗಿ ನೋಡಿ ಆಕೆಯ ಒಂದು ಕಾಲು ಖಂಡಿತವಾಗಿಯೂ ಚಿಕ್ಕದಾಗಿದೆ.

ಅಷ್ಟು ಹೊತ್ತಿಗೆ ಸರಿಯಾಗಿ ಆ ನರ್ಸ್ ಕೋಣೆಯೊಳಕ್ಕೆ ಬಂದಳು. ಉಮಾಪ್ರಸಾದರು ಕಣ್ಣಿಟ್ಟು ನೋಡಿದರು. ಕಾಲಿನಲ್ಲಿ ಸ್ವಲ್ಪಮಟ್ಟಿನ ಕುಂಟಿತ್ತು. ಸುಲಭವಾಗಿ ಪತ್ತೆ ಹಚ್ಚಲು ಸಾಧ್ಯವಿರಲಿಲ್ಲ. ಆದರೆ, ಈ ರೋಗಿಯ ಗ್ರಹಣಶಕ್ತಿ ಅದೆಷ್ಟು ತೀಕ್ಷ್ಣವಾಗಿದೆ! ಸಾವಿನ ಹೆಬ್ಬಾಗಿಲವರೆಗೆ ಬಂದಿದ್ದರೂ ಅದೇನೂ ಹ್ರಾಸಗೊಂಡಿಲ್ಲ!

ಶಕ್ತಿ ನಿಧಾನವಾಗಿ ಕ್ಷೀಣಿಸುತ್ತಿತ್ತು. ಯಾರನ್ನೂ ಭೇಟಿಯಾಗಲು ಮನಸ್ಸಾಗುತ್ತಿರಲಿಲ್ಲ. ಅವರೆಂದರು: "ನನ್ನ ಇಡೀ ಬಾಳಿನಲ್ಲಿ ಮನುಷ್ಯರನ್ನು ಪ್ರೀತಿಯಿಂದ ಕಂಡಿದ್ದೇನೆ ಹತ್ತಿರ ಕರೆದಿದ್ದೇನೆ. ಆದರೆ, ಇನ್ನು ಸಾಧ್ಯವಿಲ್ಲ. ಉಳಿದ ದಿನಗಳನ್ನು ನಿಶ್ಚಿಂತೆಯಿಂದ ಮಲಗಿದ್ದು ಕಳೆಯಬಯಸುತ್ತೇನೆ."

ಆದರೆ, ಅವರನ್ನು ನೋಡಲು ಬರುತ್ತಿದ್ದ ಜನ ಒಪ್ಪಬೇಕಲ್ಲ. ಇದಕ್ಕಿದ್ದಂತೆ ಒಬ್ಬ ವ್ಯಕ್ತಿ ಅವರ ಗೆಳೆಯನೆಂದು ಹೇಳಿಕೊಂಡು ಬಂದ ಹಾಗೂ ಅಧಿಕಾರವಾಣಿಯಿಂದ ಲೆಂಬಂತೆ ಹೇಳಿದ: "ಒಂದೇ ಒಂದು ಸಲ ಅವರನ್ನು ನೋಡಬಯಸುತ್ತೇನೆ."

ಎಷ್ಟು ತಿಳಿಯ ಹೇಳಿದರೂ, ಅವನು ಒಪ್ಪಲು ಸಿದ್ಧನಿರಲಿಲ್ಲ. ಕೊನೆಗೆ

ಉಮಾಪ್ರಸಾದರು ಒಳಗೆ ಬಂದು ಶರತ್‌ಚಂದ್ರರೊಂದಿಗೆ ಹೀಗೆಂದರು: "ಅವನು ಬರಲೇಬೇಕೆಂದು ಒತ್ತಾಯಮಾಡುತ್ತಿದ್ದಾನೆ. ನೀವು ತೆಪ್ಪಗೆ ಕಣ್ಣುಮುಚ್ಚಿಕೊಂಡು ಮಲಗಿರಿ. ಕೋಣೆಯೊಳಕ್ಕೆ ಬಂದೊಡನೆಯೇ ಅವರನ್ನು ಸಾಗಿಹಾಕಿಬಿಡುತ್ತೇನೆ."

ಆಮೇಲೆ ಅವರು ಆಗಂತುಕನ ಬಳಿಗೆ ಬಂದು ಹೀಗೆಂದರು: "ರೋಗಿ ನಿದ್ದೆ ಮಾಡುತ್ತಿದ್ದಾರೆ. ಸ್ವಲ್ಪವೂ ಸದ್ದುಮಾಡಬೇಡಿ. ನೋಡಿ ಹೊರಟು ಬಿಡಿ."

ಶ್ರದ್ಧೆ ತುಂಬಿತುಳುಕುತ್ತಿದ್ದ ಆ ಹೊಸ ಆಗಂತುಕ ಕೋಣೆಯೊಳಗೆ ಕಾಲಿರಿಸಿದ. ಕಪಟ ನಿದ್ರೆಯನ್ನು ನಟಿಸುತ್ತಿದ್ದ ರೋಗಿಯತ್ತ ನೋಡಿ, ಕೈಎತ್ತಿ ಮೌನವಾಗಿ ಗೌರವ ಸಲ್ಲಿಸಿದ. ಅವನು ಸರಿಯಾಗಿ ಕಣ್ಣಿಟ್ಟು ನೋಡಿದ್ದರೆ, ಆಗ ಶರತ್‌ಚಂದ್ರರು ಒಂದು ಕಣ್ಣು ತೆರೆದು, ಯಾರಾದರೂ ಸದ್ದಿಲ್ಲದಂತೆ ಕಿಟಕಿಯ ಬಾಗಿಲನ್ನು ತೆರೆದು ನೋಡುವಂತೆ, ಅವನನ್ನು ನೋಡಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದಾಗಿತ್ತು. ಆಗಂತುಕ ಹೊರಟು ಹೋದ ಮೇಲೆ ಅವರು ನಕ್ಕರು. "ಒಳ್ಳೆಯ ನಾಟಕ ಆಡಿದೆ. ಆದರೆ, ಇನ್ನು ನನ್ನಿಂದ ಸಾಧ್ಯವಿಲ್ಲ. ನೀವು ಬಂದು ನನ್ನ ಹತ್ತಿರ ಕುಳಿತುಕೊಳ್ಳಿ."

ತುಂಬ ಬಾಯಾರಿಕೆಯಾಗಿತ್ತು. ಕುಡಿಯಲು ನೀರು ಕೇಳಿದರು. ಆದರೆ, ಕುಡಿಯುವಾಗ ತುಂಬ ತೊಂದರೆಯಾಗುತ್ತಿತ್ತು. ಆದ್ದರಿಂದ ಉಮಾ ಬಾಬುಗಳೆಂದರು: "ಏಕ್‌ಟೂಕ್ ಖಾನೀ ಖಾನ್" ("ಗುಟುಕು ಗುಟುಕಾಗಿ ಕುಡಿಯಿರಿ")

ಕೇಳಿಯೂ ಕೇಳಿಸದಂತಿದ್ದ ಧ್ವನಿಯಲ್ಲಿ ಶರತ್‌ಚಂದ್ರರೆಂದರು: "ಏಕ್‌ಟೂಕ್ ಖಾನೀ."

ಒಂದು ಕ್ಷಣ ಮೌನವಾಗಿದ್ದು, ಮತ್ತೆ ಹೇಳಿದರು: "ನೋಡಿ, ಏಕ್‌ಟೂ ಖಾನೀ, ಏಕ್‌ಟೂಈ ಖಾನೀ, ಏಕ್‌ಟೂಕ್ ಖಾನೀ - ಈ ಶಬ್ದಗಳ ಅರ್ಥದಲ್ಲಿ ಎಷ್ಟೊಂದು ವ್ಯತ್ಯಾಸವಿದೆ ? ಬಂಗಾಳಿ ಭಾಷೆಯ ಸಂಪತ್ತು ಎಷ್ಟು ಅದ್ಭುತವಾಗಿದೆ !"

ಉಮಾ ಪ್ರಸಾದರು ಈ ಬಗ್ಗೆ ಹೀಗೆ ಬರೆದಿದ್ದಾರೆ: "ಬಾಳ ಹೊಳೆಯ ಇನ್ನೊಂದು ದಡವನ್ನು ಸೇರಬೇಕಾಗಿರುವ ಪಯಣಿಗ ಈತ! ಇಷ್ಟಾಗಿಯೂ, ವಾಣಿಯ ಮಂದಿರದಲ್ಲಿ ಈ ಸಾಹಿತ್ಯದ ಪೂಜಾರಿ ಭಕ್ತಿಯ ಅರ್ಘ್ಯವನ್ನು ಸಲ್ಲಿಸುತ್ತಿದ್ದಾನೆ! ಸೌಂದರ್ಯದ ಪಿಪಾಸೆಯುಳ್ಳ ಮನಸ್ಸು ಜಾಗ್ರತವಾಗಿಯೇ ಇದೆ! ದಿನವೂ ಹೂವುಗಳು ಬರುತ್ತವೆ; ಹೂವಿನ ಗುಚ್ಛಗಳು ಬರುತ್ತವೆ. ರೋಗಿಯ ಕೋಣೆ ಸೌಂದರ್ಯದಿಂದ ಜಗಮಗಿಸುತ್ತದೆ; ಸುವಾಸನೆಯಿಂದ ನಲಿಯುತ್ತದೆ. ಹೂವುಗಳನ್ನು ನೋಡಿ ಅವರು ಕೇಳುತ್ತಾರೆ: 'ಯಾರು ತಂದರು ? ಹೂವುಗಳು ತುಂಬ ಇಷ್ಟವಾಗುತ್ತವೆ. ಗುಲಾಬಿಯ ಜನ್ಮ ಸಾರ್ಥಕವಾಯಿತು. ಕೊನೆಗಾಲದಲ್ಲಿಯೂ ಎಂಥ ಆನಂದವನ್ನುಂಟು ಮಾಡಲು ಬಂದಿದೆ!"

ಶ್ರೀಕಾಂತನೂ (ನಾಲ್ಕನೆಯ ಭಾಗದಲ್ಲಿ) ಹೂವುಗಳನ್ನು ಕಂಡರೆ ಅದೆಷ್ಟು ಮುಗ್ಧನಾಗಿಬಿಡುತ್ತಿದ್ದ! ಅದರಲ್ಲಿಯೂ ಗುಲಾಬಿಯ ಬಗ್ಗೆ ಅವನಿಗೆ ವಿಶೇಷ ವ್ಯಾಮೋಹವಿತ್ತು. "ಮನಸ್ಸನ್ನು ಎಲ್ಲಕ್ಕಿಂತಲೂ ಹೆಚ್ಚಾಗಿ ಮರುಳುಗೊಳಿಸುತ್ತಿದ್ದುದು ನಡುವಣ ಭಾಗ. ರಾತ್ರಿಯ ಕೊನೆಯ ಭಾಗದಲ್ಲಿ, ಈ ಮಬ್ಬು ಬೆಳಕಿನಲ್ಲಿಯೂ, ಒಂದರೊಡನೊಂದು ಹೆಣೆದು ಕೊಂಡಿರುತ್ತಿದ್ದ ಗುಂಪು ಗುಂಪಾದ ಆ ಗುಲಾಬಿಯ ಗಿಡಗಳನ್ನು ಗುರುತಿಸಬಹುದಾಗಿತ್ತು. ಅವುಗಳಲ್ಲಿ ಲೆಕ್ಕವಿಲ್ಲದಷ್ಟು

ಹೂವುಗಳಿರುತ್ತಿದ್ದುವು. ಸಾವಿರ-ಸಾವಿರ ಸಂಖ್ಯೆಯಲ್ಲಿ ಹರಡಿಕೊಂಡಿದ್ದ ಆ ಕೆಂಪುಕಣ್ಣುಗಳಿಂದ ತೋಟದ ಎಲ್ಲ ದಿಕ್ಕುಗಳನ್ನೂ ನಿಟ್ಟಿಸುತ್ತಿವೆಯೇನೋ ಎಂದು ತೋರುತ್ತಿತ್ತು....." ಎಂದು ಅವನು ಹೇಳಿಕೊಳ್ಳುತ್ತಾನೆ.

ಆದರೆ, ಅವರಿಗೆ ಹೂವುಗಳಿಂದಷ್ಟೇ ಸಂತೋಷವಾಗುತ್ತಿರಲಿಲ್ಲ. ಸೌಂದರ್ಯ ಶೀಲತೆ ತನ್ನೆಲ್ಲ ಶಕ್ತಿಯೊಂದಿಗೆ ಎಚ್ಚರಗೊಂಡಿತ್ತು. ಅವರು ಸುರೇಂದ್ರನಾಥರಿಗೆ ಹೇಳಿದರು: "ಎರಡು ಕಾನೇರಿ ಹಕ್ಕಿಗಳನ್ನು ತೆಗೆದುಕೊಂಡು ಬರುವಂತೆ ವಿಲಾಸನಿಗೆ ಹೇಳಿದ್ದೆ. ತಂದರೆ ಚೆನ್ನಾಗಿರುತ್ತದೆ."

ಹಕ್ಕಿಗಳು ಬಂದುವು. ಪಂಜರಗಳಲ್ಲಿ ಕುಳಿತಿದ್ದ ಆ ಸುಂದರವಾದ ಹಕ್ಕಿಗಳು ನಿರಂತರವಾಗಿ ಮೃದು-ಮಧುರ ಸಂಗೀತವನ್ನು ಹಾಡುತ್ತಿದ್ದುವು. ಅವುಗಳನ್ನು ನೋಡಿದ ಡಾಕ್ಟರು ಹೇಳಿದರು: "ರಾತ್ರಿ ಇವುಗಳನ್ನು ಇಲ್ಲಿ ಇಟ್ಟುಕೊಳ್ಳುವ ಅಗತ್ಯವಿಲ್ಲ. ನಿದ್ದೆ ಮಾಡಲು ಅವುಗಳಿಂದ ತೊಂದರೆಯಾಗುತ್ತದೆ. ಹಗಲಿನ ಹೊತ್ತು ಬೇಕಾದರೆ ಒಳಗಿನ ಕಿಟಕಿಯ ಬಳಿ ಇಟ್ಟುಕೊಳ್ಳಬಹುದು."

ಶರತ್‌ಚಂದ್ರರು ನಗುತ್ತ ಹೇಳಿದರು: "ನಿದ್ದೆ ಬಂದಾಗ, ಅದನ್ನು ಯಾರೂ ತಡೆಯಲಾರರು. ಇವುಗಳ ಹಾಡನ್ನು ಕೇಳೋಣ, ಬಿಡಿ. ಬಹಳ ಸುಂದರವಾದ ಪಾಠವನ್ನು ಕಲಿಸಿಕೊಡುತ್ತವೆ." ಹೀಗೆಂದು ಹೇಳಿ, ಹಕ್ಕಿಗಳತ್ತ ನೋಡುತ್ತ ಮತ್ತೆ ಹೇಳಿದರು: "ಏಯ್, ಇಷ್ಟು ಚೆನ್ನಾಗಿ ಹಾಡಬೇಡ. ಒಂದು ದಿವಸ ನನ್ನಂತೆಯೇ ನಿನ್ನ ಇನಿದನಿಯ ಕೊರಳೂ ಮುಚ್ಚಿಹೋಗುತ್ತದೆ."

ನೀರವ ರಾತ್ರಿಯಲ್ಲಿ ಅವರು ಮೌನವಾಗಿ ಹಾಸಿಗೆಯ ಮೇಲೆ ಉರುಳಿಕೊಂಡಿದ್ದರು. ಕಣ್ಣುಗಳು ತೆರೆದಿದ್ದುವು. ರೆಪ್ಪೆಗಳಲ್ಲಿ ಒಂದಿಷ್ಟೂ ನಿದ್ದೆಯಿರಲಿಲ್ಲ. ಉಮಾಬಾಬೂಗಳತ್ತ ತಿರುಗಿ, ಅವರನ್ನು ಹತ್ತಿರಕ್ಕೆ ಕರೆದರು. ಉಮಾಪ್ರಸಾದರು ಅಲ್ಲಿಂದಲೇ ಹೇಳಿದರು: "ಮಲಗಿಕೊಳ್ಳಪ್ಪ. ಕಣ್ಣುಮುಚ್ಚಿ ಕೊಂಡು ನಿದ್ದೆ ಮಾಡು."

ಆದರೆ, ಅತ್ತ ಅವರು ಕಣ್ಣು ಮುಚ್ಚಿಕೊಂಡೊಡನೆಯೇ, ಇತ್ತ ಪಿಳಿಪಿಳಿ ಎಂದು ಕಣ್ಣು ಬಿಡುತ್ತ ನಿಟ್ಟಿಸಿ ನೋಡುತ್ತಿದ್ದರು. ಮತ್ತೆ ಕರೆದರು: "ಹತ್ತಿರ ಬನ್ನಿ, ನನ್ನ ಕೊನೆಯಗಳಿಗೆಯ ಏಕೈಕ ಬಂಧುವೇ, ನಾನೊಂದು ಮಾತು ಹೇಳಬೇಕಾಗಿದೆ."

ಉಮಾಪ್ರಸಾದರು ಹತ್ತಿರ ಹೋದರು. ಶರತ್‌ಚಂದ್ರರು ಅವರ ತಲೆಯ ಮೇಲೆ ಕೈ ಇರಿಸಿದರು. ಉಮಾಪ್ರಸಾದರು ಕೇಳಿದರು: "ನನಗೆ ಆಶೀರ್ವಾದ ಮಾಡುತ್ತಿದ್ದೀರೇನು ?"

ಅವರೆಂದರು: "ಅದರಲ್ಲಿ ವಿಶೇಷವೇನು ಬಂತು! ನಾನು ಎಂದಿನಿಂದಲೂ ನಿಮಗೆ ಆಶೀರ್ವಾದ ಮಾಡುತ್ತಲೇ ಬಂದಿದ್ದೇನೆ."

ಹೀಗೆ ಆ ದೀರ್ಘ ರಾತ್ರಿ ಕಳೆಯಿತು. ಬೆಳಗಿನ ಹೊಂಗಿರಣ ಮೂಡಿದರೂ, ಮನಸ್ಸಿನಲ್ಲಿ ಆಸೆಯ ಕಿರಣ ಮೂಡಲಿಲ್ಲ. ಪರಿಸ್ಥಿತಿ ಎಷ್ಟು ಹದಗೆಟ್ಟಿತೆಂದರೆ ಬಾಯಿಂದ ತಿನ್ನುವುದೂ ಕುಡಿಯುವುದೂ ಅಸಾಧ್ಯವಾಗಿಬಿಟ್ಟಿತು. ಹೊಟ್ಟೆಯಲ್ಲಿ ಆಹಾರವಿಲ್ಲವೆಂದರೆ ಸಾವು ಖಚಿತ ಎಂಬಂತಾಗಿತ್ತು. ಚುಚ್ಚು ಮದ್ದುಗಳಿಂದಲೂ ಏನೂ ಪ್ರಯೋಜನವಾಗುತ್ತಿರಲಿಲ್ಲ. ಗುದದ್ವಾರದಿಂದ ಆಹಾರವನ್ನು ತಲುಪಿಸುವ

ವಿಚಾರ ಸ್ವತಃ ಅವರಿಗೇ ಒಪ್ಪಿಗೆಯಾಗಿರಲಿಲ್ಲ. ಉಳಿದಿದ್ದ ಒಂದೇ ಒಂದು ಮಾರ್ಗವೆಂದರೆ ಹೊಟ್ಟೆಯನ್ನು ಸೀಳಿ, ನಳಿಕೆಯ ಮೂಲಕ ದ್ರವಾಹಾರವನ್ನು ಹೊಟ್ಟೆಗೆ ಸೇರಿಸುವುದು.

ಅಂದು ಅವರನ್ನು ನೋಡಲು ವಿಧಾನ ಚಂದ್ರರಾಯ್ ಅವರು ಬಂದಿದ್ದರು: "ಏನು ತೊಂದರೆಯಾಗುತ್ತಿದೆ, ಅಣ್ಣಯ್ಯಾ?" ಎಂದು ಕೇಳಿದರು.

"ತೊಂದರೆ ಏನೂ ಇಲ್ಲ."

"ಅಂದರೆ?"

"ಬಾಯಾರಿಕೆ, ಬಾಯಾರಿಕೆ! ನನ್ನ ಎದೆ ಅಂಟಿಕೊಂಡುಬಿಟ್ಟಿದೆ. ಮರುಭೂಮಿಯ ಎದೆಯನ್ನು ಸೀಳಿಬಿಡುವಂಥ ಬಾಯಾರಿಕೆಯಾಗುತ್ತಿದೆ, ಡಾಕ್ಟರ್!"

ಅಲ್ಲಿದ್ದವರ ಕಣ್ಣುಗಳೆಲ್ಲ ತುಂಬಿ ಬಂದುವು. ಕರವಸ್ತ್ರದಿಂದ ಕಣ್ಣೀರನ್ನು ಒರೆಸಿಕೊಳ್ಳುತ್ತ ವಿಧಾನ ಚಂದ್ರ ರಾಯ್ ಅವರು ಹೊರಗೆ ಬಂದರು. ಶಸ್ತ್ರಚಿಕಿತ್ಸೆ ಮಾಡಲೇಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ನಾನೂರು ರೂಪಾಯಿಗಳನ್ನು ಮಾತ್ರ ಸ್ವೀಕರಿಸಿ, ಆಪರೇಷನ್ ಮಾಡುವಂತೆ ಅವರು ಡಾ. ಲಲಿತ ಮೋಹನ್ ಬ್ಯಾನರ್ಜಿಯವರನ್ನು ಒಪ್ಪಿಸಿದರು.

ಜನವರಿ 12ರಂದು ಶಸ್ತ್ರಚಿಕಿತ್ಸೆ ನಡೆಸಬೇಕೆಂದು ನಿರ್ಧರಿಸಲಾಯಿತು. ನಿಯಮಾನುಗುಣವಾಗಿ ವೈದ್ಯರು ರೋಗಿಯ ಲಿಖಿತ ಸಮ್ಮತಿಯನ್ನು ಪಡೆಯಬಯಸಿದರು. ಶರತ್‌ಚಂದ್ರರ ಮುಖದ ಮೇಲೆ ನಗೆಯ ಒಂದು ಸಣ್ಣ ಎಳೆ ಕಾಣಿಸಿಕೊಂಡಿತು. ಅವರೆಂದರು: "ಬರೆದು ಬಿಡಿ, ಅದಕ್ಕೆ ನಾನು ಸಹಿ ಹಾಕಿ ಕೊಡುತ್ತೇನೆ."

ಕುಮುದಶಂಕರ ರಾಯ್ ಅವರು ಸಮ್ಮತಿ ಪತ್ರವನ್ನು ಬರೆದರು. ಶರತ್‌ಚಂದ್ರರು ಅದಕ್ಕೆ ಇಂಗ್ಲಿಷ್‌ನಲ್ಲಿ ಸಹಿ ಹಾಕಿದರು. ಆಮೇಲೆ ಹೇಳಿದರು: "ಸ್ವಲ್ಪ ತಾಳಿ. ಅದರ ಕೆಳಗೆ ನಾನೇ ಇನ್ನೊಂದೆರಡು ಮಾತುಗಳನ್ನು ಬರೆಯಬಯಸುತ್ತೇನೆ."

ಅದರಲ್ಲಿ ಹೀಗೆಂದು ಬರೆಯಲಾಗಿತ್ತು: "ಶಸ್ತ್ರಚಿಕಿತ್ಸೆಯ ಎಲ್ಲ ಗಂಡಾಂತರಗಳ ಹೊಣೆಯನ್ನೂ ನಾನೇ ಹೊತ್ತುಕೊಂಡು, ನನ್ನ ಮೇಲೆ ಶಸ್ತ್ರಚಿಕಿತ್ಸೆಯನ್ನು ನಡೆಸಬೇಕೆಂದು ಡಾ. ಕೆ.ಎಸ್. ರಾಯ್ ಅವರನ್ನು ಕೋರುತ್ತೇನೆ."

ಅದರ ಮೇಲೆ 12ನೆಯ ತಾರೀಖನ್ನು ನಮೂದಿಸಲಾಗಿತ್ತು: 12 ಜನವರಿ 1938. ಶರತ್‌ಚಂದ್ರರು ಅಡ್ಡಡ್ಡವಾಗಿ ಸಹಿ ಹಾಕಿ, ಅದರ ಕೆಳಗೆ ಮತ್ತೆ ತಾರೀಖನ್ನು ನಮೂದಿಸಿದ್ದರು. ಅದರ ಕೆಳಗೆ ಇನ್ನೊಂದು ವಾಕ್ಯವನ್ನು ಬರೆದಿದ್ದರು: "ನನ್ನ ಎಲ್ಲ ಇಂದ್ರಿಯಗಳು ಮತ್ತು ಧೈರ್ಯ ಸುಸ್ಥಿತಿಯಲ್ಲಿರುವಾಗ."

ಈ ವಾಕ್ಯವನ್ನೂ ಇಂಗ್ಲಿಷ್‌ನಲ್ಲಿಯೇ ಬರೆದಿದ್ದರು. ಆದರೆ, ಅವರ ಮಿದುಳು ಆಗ ಪೂರ್ಣವಾಗಿ ಹಾಗೂ ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಆದ್ದರಿಂದಲೇ 'ಸೆನ್ಸಸ್' ಮತ್ತು 'ಕರೇಜ್' ಶಬ್ದಗಳ ಸ್ಪೆಲ್ಲಿಂಗನ್ನು ತಪ್ಪಾಗಿ ಬರೆದಿದ್ದರು.

ಇದನ್ನೆಲ್ಲ ಬರೆಯುವಾಗ ಅವರಿಗೆ ಅಪೂರ್ಣ ಆನಂದ ಮತ್ತು ತೃಪ್ತಿಯ ಅನುಭವ ಆಗಿತ್ತು. ಈ ಮಾತುಗಳನ್ನು ಬರೆಯಲು ಬಳಸಿದ ಫೌಂಟೆನ್‌ಪೆನ್ನನ್ನು ಉಮಾ ಪ್ರಸಾದರಿಗೆ ಕೊಡುತ್ತ "ಇದನ್ನು ನಿಮ್ಮ ಬಳಿ ಇಟ್ಟುಕೊಳ್ಳಿ" ಎಂದು ಹೇಳಿದರು.

ಆಮೇಲೆ ತೃಪ್ತಿಯ ಉಸಿರೆಳೆಯುತ್ತ ಹೇಳಿದರು: "ಆಹಾ, ಎಷ್ಟು ಆರಾಮ ದೊರೆಯಿತು. ಬರೆಯುವುದು ತುಂಬ ಖುಷಿ ಕೊಟ್ಟಿತು."

ಜೀವನವಿಡೀ ಅವರಿಗೂ ಲೇಖನಿಗೂ ರಕ್ತ ಸಂಬಂಧವೇ ಏರ್ಪಟ್ಟಿತ್ತು. ಕೊನೆಯ ಬೀಳ್ಕೊಡುಗೆಯ ಸಮಯದಲ್ಲಿ ಇದು ಅತ್ಯಂತ ಪ್ರಿಯವ್ಯಕ್ತಿಯ ಕಟ್ಟಕಡೆಯ ಸ್ಪರ್ಶಾನುಭೂತಿಯೋ ಎಂಬಂತಿತ್ತು. ಒಂದು ದಿವಸ ಹಿಂದೆಯಷ್ಟೇ ಅವರು ತಮ್ಮ ಉಯಿಲನ್ನು ಬರೆಸಿದ್ದರು. ಎಲ್ಲವನ್ನೂ ಹಿರಣ್ಮಯೀ ದೇವಿಯವರ ಹೆಸರಿಗೆ ಬರೆದಿದ್ದರು.[1] ಆಕೆಯ ಸಾವಿನ ಬಳಿಕ ಇದೆಲ್ಲವೂ ಅವರ ಸಹೋದರನ ಮಗನಿಗೆ ಸೇರಬೇಕಾಗಿತ್ತು. ಇಂಪೀರಿಯಲ್ ಬ್ಯಾಂಕಿನಲ್ಲೂ ಸ್ವಲ್ಪ ಹಣ ಇತ್ತು. ಅದನ್ನು ಅವರು ತಮ್ಮ ಸಹೋದರಿಯ ಮಗಳ ಮದುವೆಗೆ ಮೀಸಲಾಗಿರಿಸಿದ್ದರು. ಅದರಲ್ಲಿ ಏನಾದರೂ ಉಳಿದರೆ, ಅದನ್ನು ಸಹೋದರನ ಮಕ್ಕಳಿಗೆ ಬಳಸಬೇಕಾಗಿತ್ತು. ತಮ್ಮ ಪ್ರಕಾಶ ಚಂದ್ರರಿಗೆ ಸಪರಿವಾರವಾಗಿ ಅಶ್ವಿನೀದತ್ತ ರಸ್ತೆಯ 24ನೆಯ ನಂಬರಿನ ಮನೆಯಲ್ಲಿ ವಾಸಿಸುವ ಹಕ್ಕು ದೊರೆತಿತ್ತು.

ಡಾಕ್ಟರ್ ಲಲಿತ ಮೋಹನ ಬಂದೋಪಾಧ್ಯಾಯರು 12 ಘಂಟೆಗೆ ಶಸ್ತ್ರಚಿಕಿತ್ಸೆ ಮಾಡಿದರು. ಪಿತ್ತ ಜನಕಾಂಗ ಸಂಪೂರ್ಣವಾಗಿ ಕರಗಿ ಹೋಗಿತ್ತು. ಬದುಕುವ ಆಸೆಯೇ ಇರಲಿಲ್ಲ. ಅವರು ಗಾಯವನ್ನು ಹಾಗೆಯೇ ಹೊಲಿದುಬಿಟ್ಟರು. ಅವರು ಶಾಂತಿಯಿಂದ ತಮ್ಮ ಅಂತಿಮ ಯಾತ್ರೆಯನ್ನು ಕೈಗೊಳ್ಳಲೆಂದು ಹೀಗೆ ಮಾಡಲಾಯಿತು. ಬಾಯಿಂದ ಏನನ್ನೂ ತಿನ್ನದಂತೆ ನಿಷೇಧವನ್ನು ವಿಧಿಸಲಾಗಿತ್ತು. ನಳಿಕೆಯ ಮೂಲಕ ದ್ರವಪದಾರ್ಥವನ್ನು ಮಾತ್ರ ತೆಗೆದುಕೊಳ್ಳಬಹುದಾಗಿತ್ತು. ಅದಕ್ಕೆ ಮಾತ್ರವೇ ಏರ್ಪಾಟುಮಾಡಲಾಯಿತು.

ಶಸ್ತ್ರಚಿಕಿತ್ಸೆಯ ಸಮಯದಲ್ಲಿ ರೋಗಿಗೆ ರಕ್ತದ ಅಗತ್ಯ ಉಂಟಾಗುತ್ತದೆ. ಪ್ರಕಾಶ ಚಂದ್ರರು ತಮ್ಮ ರಕ್ತವನ್ನು ಕೊಟ್ಟರು. ಆದರೆ, ಅಷ್ಟು ಮಾತ್ರವೇ ಸಾಕಾಗಲಿಲ್ಲ. ಆಗ ಅವರ ನೆರೆಮನೆಯ ನಕುಲಚಂದ್ರ ಪತಿಯವರು ತಮ್ಮ ರಕ್ತವನ್ನು ಕೊಟ್ಟರು. ಶರತ್‌ಚಂದ್ರರು ನಕುಲ ಚಂದ್ರರಿಗೆ ಸತತವಾಗಿ ಸಹಾಯಮಾಡುತ್ತ ಬಂದಿದ್ದರು. ಸುಮಾರು ಐದು ವರ್ಷಗಳ ಹಿಂದೆ ಅವರ ತಂದೆಯವರು ತೀರಿಕೊಂಡಿದ್ದಾಗ, ಶರತ್‌ಚಂದ್ರರೇ ಅವರನ್ನು ಸಂಪೂರ್ಣವಾಗಿ ಆತುಕೊಂಡಿದ್ದರು. ಆ ಕುಟುಂಬಕ್ಕೆ ಏನಾದರೂ ಕಷ್ಟ-ಸಂಕಟಗಳು ಬಂದರೆ ಶರತ್‌ಚಂದ್ರರು ತಮ್ಮ ಬೆನ್ನಿಗಿದ್ದಾರೆಂಬ ಧೈರ್ಯ ಅವರಿಗಿತ್ತು. ಅವರು ಆತನನ್ನು ಕಲ್ಕತ್ತೆಗೆ ಕರೆದುಕೊಂಡು ಬಂದಿದ್ದರು. ಹಾಗೂ ಯಾರಿಗೋ ಹೇಳಿ ವಿಶ್ವವಿದ್ಯಾನಿಲಯದಲ್ಲಿ ಒಂದು ಕೆಲಸವನ್ನೂ ಕೊಡಿಸಿದ್ದರು. ಆ ಎಲ್ಲ ಋಣವನ್ನು ತೀರಿಸುವ ಸಲುವಾಗಿಯೇ ನಕುಲಚಂದ್ರ ತಮ್ಮ ರಕ್ತವನ್ನು ಕೊಟ್ಟಂತೆ ಕಾಣುತ್ತಿತ್ತು. ಸ್ಥಿತಿ ಸ್ವಲ್ಪ ಸುಧಾರಿಸುತ್ತಿರುವಂತೆ ತೋರಿತು. ಕೆಲವರ ಮನಸ್ಸಿನಲ್ಲಿ ಆಶೆಯ ಕಿರಣವೂ ಮೂಡಿತು.

ಆದರೆ ಇದು ಕಣ್ಣು-ಮುಚ್ಚಾಲೆ ಮಾತ್ರವಾಗಿತ್ತು. ಅವರನ್ನು ಉಳಿಸಿಕೊಳ್ಳುವ ಎಲ್ಲ ಪ್ರಯತ್ನಗಳೂ ವ್ಯರ್ಥವಾಗಿ ಪರಿಣಮಿಸಿದುವು. ಕ್ರಮೇಣ ಅವರು

1. ಸುಮಾರು 22 ವರ್ಷಗಳ ಬಳಿಕ 15 ಭಾದ್ರ 1367 (ಆಗಸ್ಟ್ 31, 1960) ರಂದು ಈಕೆ ತೀರಿಕೊಂಡರು.)

ಪ್ರಜ್ಞಾಹೀನರಾಗ ತೊಡಗಿದರು. ನಿಧಾನವಾಗಿ ಅವರನ್ನು ತನ್ನ ತೋಳತೆಕ್ಕೆಗೆ ತೆಗೆದುಕೊಳ್ಳಲು ಮೃತ್ಯು ಅವರ ಬಳಿ ಸಾರತೊಡಗಿತು. ಉಸಿರಾಟ ಕ್ಷೀಣವಾಗುತ್ತಿತ್ತು; ಆಮೇಲೆ ಒಮ್ಮೆಗ್ರೇ ತೀಕ್ಷ್ಣವಾಗುತ್ತಿತ್ತು. ಅವರ ಜೀವನ ನಾಟಕದ ಕೊನೆಯ ದೃಶ್ಯಕ್ಕೆ ನಿಧಾನವಾಗಿ ಪರದೆ ಇಳಿಯತೊಡಗಿತ್ತು. ಜನವರಿ 14ರ ಶುಕ್ರವಾರದಂದು ರಾತ್ರಿಯ ತರುವಾಯ ನೋವಿನಿಂದ ಅವರು ನರಳತೊಡಗಿದರು.

ನೋವು...... ಭಯಂಕರವಾದ ನೋವು.

"ಏನು ಶರತ್?"

"ನಾನು ಸಾಯುತ್ತಿದ್ದೇನೆ. ಏನೂ ಕಾಣಿಸುತ್ತಿಲ್ಲ.... ಅವರು ಯಾರು?"

ರಾತ್ರಿ ಇಡೀ ಅವರು ಆರ್ತನಾದ ಮಾಡುತ್ತಿದ್ದರು. ನಾಲ್ಕು ಘಂಟೆಯ ಹೊತ್ತಿಗೆ ಪ್ರಜ್ಞಾಹೀನರಾದರು. ಏಳು ಘಂಟೆಗೆ ಆಕ್ಸಿಜನ್ ಕೊಡಲಾಯಿತು. ಆದರೆ ಎಲ್ಲವೂ ವ್ಯರ್ಥವಾಯಿತು. ಆ ಪ್ರಜ್ಞಾಹೀನ ಸ್ಥಿತಿಯಲ್ಲಿಯೇ ಅವರು ಅನೇಕ ಸಲ ಅರಚಿಕೊಂಡರು. ಅವರ ಕೊನೆಯ ಮಾತುಗಳು ಇವಾಗಿದ್ದುವು: "ಆಮಾಕೇ......ಆಮಾಕೇ....ದಾಓ, ಆಮಾಕೇ....ದಾಓ (ನನಗೆ ಕೊಡು, ನನಗೆ ಕೊಡು)."

ಆದರೆ ಯಾರು ತಾನೆ ಅವರಿಗೆ ಏನು ಕೊಡುವ ಸ್ಥಿತಿಯಲ್ಲಿದ್ದರು? ಅವರಿಗೇನು ಬೇಕಾಗಿತ್ತು? ಅವರಿಗೆ ಏನು ತಾನೆ ಸಿಕ್ಕಿರಲಿಲ್ಲ? ಬಂಗಾಳಿಗಳು ತಮ್ಮ ಪ್ರಾಣಪಾತ್ರೆಯನ್ನೇ ತುಂಬಿ ಅವರಿಗೆ ಕೀರ್ತಿ, ಪ್ರತಿಷ್ಠೆ, ಹಣ ಎಲ್ಲವನ್ನೂ ಕೊಟ್ಟಿದ್ದರು. ಹೀಗಿರುವಾಗ ಈ ಬಾಳವೈರಾಗಿಗೆ, ಅಲೆಮಾರಿ ಕಥಾಶಿಲ್ಪಿಗೆ ಈ ಜೀವನದಲ್ಲಿ ಯಾವ ವಿಷಯದಲ್ಲಿ ಸಮಾಧಾನ ದೊರೆತಿರಲಿಲ್ಲ? ಯಾವ ವಿಷಯದಲ್ಲಿ ಪರಲೋಕದಲ್ಲಿ ಅವರು ತೃಪ್ತಿಯನ್ನು ಪಡೆಯ ಬಯಸಿದ್ದರು? ಈ ವಾಕ್ಯಕ್ಕೆ ಅನೇಕರು ಅನೇಕ ರೀತಿಯಲ್ಲಿ ಅರ್ಥ ಹಚ್ಚಿದ್ದಾರೆ. ಆದರೆ, ನಿಜವಾಗಿಯೂ ಅದಕ್ಕೆ ಏನಾದರೂ ಅರ್ಥವಿತ್ತೆ? ಇನ್ನೂ ಕೆಲವು ಶಬ್ದಗಳು ಅವರ ಬಾಯಿಂದ ಹೊರಬಿದ್ದಿದ್ದುವು. ಅವರಿಗೆ ಬಾಯಾರಿಕೆಯಾಗಿದ್ದು, ಒಂದು ಹನಿ ನೀರನ್ನು ಕೇಳಿದ್ದಿರಬಹುದು. ನೋವಿನಿಂದ ಬಿಡುಗಡೆ ಹೊಂದಲು ಅವರು ಮೃತ್ಯುವನ್ನೂ ಕರೆದಿರಬಹುದು. ಆದರೆ, ಇದೆಲ್ಲ ಕಲ್ಪನೆ ಮಾತ್ರ.

1938ರ ಜನವರಿ 16ರ ಭಾನುವಾರದಂದು, ಬಂಗಾಬ್ದದ 1344ಮಾಘ 2ರಂದು ಹಾಗೂ ಪೌಷ ಪೂರ್ಣಿಮೆಯಂದು ಬೆಳಿಗ್ಗೆ ಹತ್ತು ಘಂಟೆಗೆ ಭಾರತದ ಸೋಲರಿಯದ ಕಥಾಶಿಲ್ಪಿ, ಜನಪ್ರಿಯ ಸಾಹಿತಿ ಶರತ್‌ಚಂದ್ರರು ಕೊನೆಯುಸಿರೆಳೆದರು. ಆಗ ಅವರಿಗೆ ಅರುವತ್ತೊಂದು ವರ್ಷ ಮತ್ತು ನಾಲ್ಕು ತಿಂಗಳ ವಯಸ್ಸಾಗಿತ್ತು. ಸ್ವತಃ ಅವರೇ ಒಂದು ದಿನ ಹೀಗೆಂದು ಹೇಳಿದ್ದರು: "ನನ್ನ ಜೀವನ ಅಂತಿಮವಾಗಿ ಒಂದು ಕಾದಂಬರಿಯಂತೆಯೇ ಇದೆ. ಈ ಕಾದಂಬರಿಯಲ್ಲಿ ಎಲ್ಲವನ್ನೂ ಮಾಡಿದ್ದೇನೆ. ಆದರೆ, ಕೀಳು ಕೆಲಸವನ್ನು ಮಾತ್ರ ಮಾಡಿಲ್ಲ. ಸಾಯುವಾಗ ಸ್ವಚ್ಛವಾಗಿರುವ ಖಾತೆ ಪುಸ್ತಕವನ್ನು ಬಿಟ್ಟು ಹೋಗುತ್ತೇನೆ. ಅದರ ನಡುವೆ ಎಲ್ಲಿಯೂ ಮಸಿಯ ಕಲೆ ಕಾಣಿಸುವುದಿಲ್ಲ."[1]

---

1. ಶ್ರೀಮತಿ ಲೀಲಾರಾಣೀ ಗಂಗೋಪಾಧ್ಯಾಯ ಅವರಿಗೆ ಬರೆದ ಆಗಸ್ಟ್ 24, 1919ರ ಪತ್ರ.

ಅಂದು ಕಲ್ಕತ್ತಾ ನಗರದಲ್ಲಿ ವಿಶೇಷ ಉದ್ವೇಗ ಕಂಡುಬಂದಿತು. ಗಂಡಸರು ಮತ್ತು ಹೆಂಗಸರು ಗುಂಪು-ಗುಂಪಾಗಿ ಹಾದಿ-ಬೀದಿಗಳಲ್ಲಿ ಒಂದುಗೂಡಿ ದಿವಂಗತ ಸಾಹಿತಿಗೆ ಅಂತಿಮ ಶ್ರದ್ಧಾಂಜಲಿಯನ್ನು ಅರ್ಪಿಸುತ್ತಿದ್ದರು. ಎರಡು ಘಂಟೆಗಳ ಒಳಗಾಗಿ ಸಮಾಚಾರ ಪತ್ರಿಕೆಗಳು ವಿಶೇಷ ಸಂಚಿಕೆಗಳನ್ನು ಹೊರತಂದುವು. ರೇಡಿಯೋ ಮೂಲಕವಾಗಿಯೂ ಸಾವಿನ ಸುದ್ದಿಯನ್ನು ಘೋಷಿಸಲಾಯಿತು. ಒಬ್ಬ ಕಾದಂಬರಿಕಾರನಿಗಾಗಿ ಜನ ಇಷ್ಟೊಂದು ವೇದನೆಯನ್ನು, ದುಃಖವನ್ನು ವ್ಯಕ್ತಪಡಿಸುವುದು ವಿರಳವೇ ಸರಿ.

ಕಾರಿನಲ್ಲಿ ಶವವನ್ನು ಮನೆಗೆ ತೆಗೆದುಕೊಂಡು ಹೋಗಲಾಯಿತು. ಮುಂದಿನ ಕೈಸಾಲೆಯಲ್ಲಿ ಒಂದು ಮಂಚದ ಮೇಲೆ ಭರತಖಂಡದ ಅಮರ ಕಥಾಶಿಲ್ಪಿಯ ಪಾರ್ಥಿವ ಶರೀರವನ್ನು ಅಂತಿಮದರ್ಶನಕ್ಕಾಗಿ ಇರಿಸಲಾಯಿತು. ಅವರ ಅಸಂಖ್ಯ ಅಭಿಮಾನಿಗಳನ್ನು ಬಿಟ್ಟು, ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವುದಕ್ಕಾಗಿ ಆಸ್ಪತ್ರೆಗೆ ಅಥವಾ ಮನೆಗೆ ಬಂದಿದ್ದ ಪ್ರಮುಖ ವ್ಯಕ್ತಿಗಳಲ್ಲಿ ಕೆಲವರ ಹೆಸರು ಹೀಗಿವೆ. ಮೇಯರ್ ಸನತ್‌ಕುಮಾರ್ ರಾಯ್ ಚೌಧರೀ, ಆನರೆಬಲ್ ಸತ್ಯೇಂದ್ರಚಂದ್ರ ಮಿತ್ರ, ಶರತ್‌ಚಂದ್ರ ಬಸು, ನಲಿನೀರಂಜನ ಸರ್ಕಾರ್, ಡಾ. ವಿಧಾನ ಚಂದ್ರರಾಯ್, ಶ್ಯಾಮಾಪ್ರಸಾದ ಮುಕರ್ಜಿ, ರಮಾಪ್ರಸಾದ ಮುಕರ್ಜಿ, ಕಿರಣಶಂಕರ ರಾಯ್, ಡಾಕ್ಟರ್ ಪ್ರಭಾವತೀ ದಾಸಗುಪ್ತಾ, ಜ್ಯೋತಿರ್ಮಯ ದೇವೀ, ಜೆ.ಸಿ. ಗುಪ್ತ, ಮಣೀಂದ್ರಲಾಲ್ ಬಸು, ತುಷಾರಕಾಂತಿ ಘೋಷ್, ಹರಿದಾಸ ಚಟ್ಟೋಪಾಧ್ಯಾ., ಕ್ಯಾಪ್ಟನ್ ಎಸ್. ಚಟರ್ಜಿ, ಉಪೇಂದ್ರನಾಥ ಗಾಂಗುಲೀ, ಸುಧಾಂಶು ಶೇಖರ ಚಟ್ಟೋಪಾಧ್ಯಾಯ, ಮುರಲೀಧರ ಬಸು, ನಿರ್ಮಲಚಂದ್ರ 'ಚಂದ್ರ', ರಾಜಾ ಕ್ಷಿತೀಂದ್ರ ದೇವ ರಾಯ್, ಜ್ಞಾನಾಂಜನ ನಿಯೋಗೀ, ಕುಮಾರ ಮಣೀಂದ್ರದೇವ ರಾಯ್, ಜನಾಬ್ ಕೆ. ಅಹಮದ್, ಶ್ರೀ ಮತ್ತು ಶ್ರೀಮತಿ ಮುಕುಲಚಂದ್ರದೇ, ಸತೀಶ ಸಿಂಹ, ರಾಯ್ ಬಹಾದುರ್ ಜಲಧರ ಸೇನ್, ಯತೀಂದ್ರ ಮೋಹನ ಬಾಗ್ಚೀ, ಕಾಲಿದಾಸ್ ರಾಯ್, ಕುಮುದರಂಜನ್ ಮಲ್ಲಿಕ್, ಚಾರುಚಂದ್ರ ಬಂದೋಪಾಧ್ಯಾಯ, ಶೈಲಜಾನಂದ ಮುಖೋಪಾಧ್ಯಾಯ ಮತ್ತು ಪ್ರಬೋಧಕುಮಾರ ಸಾನ್ಯಾಲ್.

ಪಿ.ಇ.ಎನ್. ಕಲ್ಕತ್ತಾ ಶಾಖೆಯ ಪರವಾಗಿ ಶವಕ್ಕೆ ಮಾಲಾರ್ಪಣೆ ಮಾಡಲಾಯಿತು. ಮೂರುಕಾಲು ಘಂಟೆಗೆ ಶವಯಾತ್ರೆ ಆರಂಭಗೊಂಡಿತ್ತು. ದಕ್ಷಿಣ ಕಲ್ಕತ್ತೆಯ ಕಾಂಗ್ರೆಸ್ ಸಮಿತಿ ಶವಯಾತ್ರೆಯ ಉಸ್ತುವಾರಿಯನ್ನು ಹೊತ್ತು ಕೊಂಡಿತ್ತು. ರಾಷ್ಟ್ರಧ್ವಜ ಹಾರಾಡುತ್ತಿತ್ತು. ಜನತೆ ವಂದೇ ಮಾತರಮ್ ಮತ್ತು ಶರತ್‌ಚಂದ್ರರ ಜಯಘೋಷಗಳನ್ನು ಕೂಗುತ್ತಿತ್ತು. ದಾರಿಯಲ್ಲಿ ಸುಭಾಷ್‌ಚಂದ್ರ ಬೋಸ್ ಮತ್ತು ಸರ್ ಆಶುತೋಷ ಮುಕರ್ಜಿಯವರ ಮನೆಗಳ ಬಳಿ ಮಾತ್ರವಲ್ಲದೆ, ಅಲ್ಲಲ್ಲಿ ಅನೇಕ ಸಂಘ-ಸಂಸ್ಥೆಗಳ ಬಳಿ ಹಾಗೂ ಕಾಲೇಜುಗಳ ಬಳಿ ಶವಕ್ಕೆ ಹೂವಿನ ಹಾರಗಳನ್ನು ಅರ್ಪಿಸಲಾಯಿತು. ಇಷ್ಟಾಗಿಯೂ, ಇದು ಒಬ್ಬ ಸಾಹಿತಿಯ ಅಂತಿಮ ಯಾತ್ರೆ ಮಾತ್ರವಾಗಿತ್ತು. ಈ ಸಮೂಹವನ್ನು ನೋಡಿ, ಕಿರಣಶಂಕರ್ ರಾಯ್ ಅವರು ಹೀಗೆಂದರು: "ಬಂಗಾಳದ ಮಾನವತೆ ಇದೇ ಏನು?

ಬಂಗಾಳದ ಕೃತಜ್ಞತೆ ಇದೇ ಏನು ? ಇಂದು ಬಂಗಾಳದ ಇಷ್ಟು ದೊಡ್ಡ ಸಾಹಿತಿ, ಇಷ್ಟು ದೊಡ್ಡ ದೇಶಭಕ್ತ ತೀರಿಕೊಂಡಿದ್ದಾನೆ! ಇದೇ ಏನು ಆತನ ಶವಯಾತ್ರೆ? ಇಡೀ ಕಲ್ಕತ್ತಾ ನಗರ ಕೇವೆಡಾತಲ್ಲೆಯ ಶ್ಮಶಾನಕ್ಕೆ ಏಕೆ ಮುಗಿಬೀಳಲಿಲ್ಲ ?"

ಕೊನೆಗೆ, ಎಲ್ಲಿ ದೇಶಬಂಧು ಚಿತ್ತರಂಜನ ದಾಸ್, ಯತೀಂದ್ರ ಮೋಹನ್, ಆಶುತೋಷ ಮುಕರ್ಜಿ, ಶಾಸಮಲ್, ಮತ್ತು ಯತೀನ್ ದಾಸ್ ಮೊದಲಾದವರ ಪಾರ್ಥಿವ ಶರೀರಗಳು ಅಗ್ನಿಗೆ ಅರ್ಪಿತವಾಗಿದ್ದುವೋ ಆ ಎಡೆಯಲ್ಲಿಯೇ 'ಶ್ರೀಕಾಂತ' ಕಾದಂಬರಿಯ ಸೃಷ್ಟಿಕರ್ತನ, ಚಿರ ಅನುಕಂಪಶೀಲನ, ಚಿರವ್ರಾತ್ಯನ, ಚರಿತ್ರಹೀನನ, ಅಲೆಮಾರಿ ಶರತ್‌ಚಂದ್ರನ ರೋಗ ಕ್ಲೇಶ-ಜರ್ಜರ ಅಸ್ಥಿಪಂಜರವನ್ನು ಚಿತೆಯ ಮೇಲೆ ಇರಿಸಲಾಯಿತು. ತಮ್ಮ ಪ್ರಕಾಶಚಂದ್ರರು ಅಂತಿಮ ಸಂಸ್ಕಾರಗಳನ್ನು ನಡೆಸಿದರು. ಪ್ರಕಾಶಚಂದ್ರರ ಪುಟ್ಟ ಮಗ ಅಗ್ನಿಸ್ಪರ್ಶ ಮಾಡಿದ.

ಹೀಗೆ ಸಂಜೆ ಐದು ಘಂಟೆ ನಲವತ್ತೈದು ನಿಮಿಷಕ್ಕೆ ಕೇವಡಾತಲ್ಲೆಯಲ್ಲಿ ಒಂದು ಬೃಹದ್ ಜನಸಮೂಹದ ಎದುರಿನಲ್ಲಿ ಅವರ ಭೌತಿಕ ಶರೀರವನ್ನು ಅಗ್ನಿಗೆ ಅರ್ಪಿಸಲಾಯಿತು. ಉಳಿದದ್ದು ಅಸಂಖ್ಯಾತವಾದ ತುಂಟಾಟದ ನೆನಪುಗಳು ಹಾಗೂ ಅನ್ಯಾಯದ ವಿರುದ್ಧವಾಗಿ ಸತತವಾಗಿ ಹೋರಾಡಿದ್ದಕ್ಕೆ ಅಮರ ಸಾಕ್ಷಿಯಾಗಿರುವ ಅವರ ವಿಪುಲ ಸಾಹಿತ್ಯ, "ಅನೀತಿಯ ಪ್ರಚಾರಕ್ಕಾಗಿ ನಾನು ಲೇಖನಿಯನ್ನು ಹಿಡಿದಿಲ್ಲ. ಮನುಷ್ಯನ ಅಂತರ್ಯದಲ್ಲಿ ಅಡಗಿರುವ ಎಲ್ಲರೂ ಕಾಣಲಾಗದ ಮನುಷ್ಯತ್ವದ ಮಹಿಮೆಯನ್ನು ನಾನಾ ರೂಪಗಳಲ್ಲಿ ಚಿತ್ರಿಸಿ ನಿಮ್ಮ ಮುಂದಿರಿಸಿದ್ದೇನೆ" ಎಂಬ ಅವರ ಹೇಳಿಕೆಗೆ ಸಾಕ್ಷಿಯಾಗಿರುವ ಅವರ ವಿಪುಲ ಸಾಹಿತ್ಯವಷ್ಟೇ ನಮಗೆ ಉಳಿದಿರುವುದು.

ಇಡೀ ಬಂಗಾಳದಲ್ಲಿ ಹಾಹಾಕಾರ ಉಂಟಾಗಿ ಬಿಟ್ಟಿತು. ಬದುಕಿದ್ದಾಗ ಅವರಿಗೆ ವಿರೋಧಿಗಳಾಗಿದ್ದಂಥವರು ಕೂಡ ಮುಕ್ತಕಂಠದಿಂದ ಅವರ ಪ್ರತಿಭೆಯನ್ನು ಹಾಡಿ ಹೊಗಳಿದರು. ಬಂಗಾಳೀ ಜೀವನದ ಆನಂದ ಮತ್ತು ವೇದನೆಗಳನ್ನು ಸಂಪೂರ್ಣ ಸಹಾನುಭೂತಿಯಿಂದ ಚಿತ್ರಿಸಿದ ಆಧುನಿಕ ಕಾಲದ ಈ ಪ್ರಿಯತಮ ಲೇಖಕನ ಮಹಾಪ್ರಯಾಣದ ಬಗ್ಗೆ, ದೇಶವಾಸಿಗಳೊಂದಿಗೆ ಗಂಭೀರವಾದ ಮಾರ್ಮಿಕ ವೇದನೆಯನ್ನು ಅನುಭವಿಸಿದ ಕವಿಗುರು ರವೀಂದ್ರನಾಥರು ಶೋಕಸಂತಪ್ತರಾಗಿ ಈ ಚರಮ ಗೀತೆಯನ್ನು ಬರೆದರು:

ಜಾಹಾರ್ ಅಮರ್ ಸ್ಥಾನ ಪ್ರೇಮೇರ್ ಆಸನೇ,
ಕ್ಷತಿ ತಾರ ಕ್ಷತಿ ನಯ್ ಮೃತ್ಯುರ್ ಶಾಸನೇ ।
ದೇಶೇರ್ ಮಾಟಿರ್ ಥೇಕೇ ನಿಲೋ ಜಾರೇ ಹರಿ,
ದೇಶೇರ್ ಹೃದಯ್ ತಾಕೇ ರಾಖಿಯೇಛೇ ಬರಿ ।

(ಯಾರ ಅಮರ ಸ್ಥಾನ ಪ್ರೇಮದ ಆಸನದಲ್ಲಿದೆಯೋ ಅವರಿಗೆ ಮೃತ್ಯು ಯಾವುದೇ ಹಾನಿಯನ್ನುಂಟು ಮಾಡಲಾರದು. ಭೌತಿಕ ದೃಷ್ಟಿಯಿಂದ ಅವರನ್ನು ನಾಡಿನಿಂದ ಅಗಲಿಸಿದೆ. ಆದರೆ, ಅದರ ಹೃದಯದಲ್ಲಿ ಎಂದೆಂದಿಗೂ ಅವರಿಗೆ ಸ್ಥಾನ ಇದ್ದೇ ಇರುತ್ತದೆ.)

"ಧನ್ಯ ಶರತ್‌ಚಂದ್ರ! ಇಷ್ಟು ದಿನ ನೀವೆಲ್ಲಿದ್ದಿರಿ? ಎಲ್ಲಿಂದ ಬಂದಿರಿ? ನಿಜವಾಗಿಯೂ ನಿಮ್ಮಂಥ ಲೇಖಕನೊಬ್ಬನ ಅಗತ್ಯವಿತ್ತು. ಸಾಮಾಜಿಕ ವ್ಯಾಧಿ ಮತ್ತು ದುರ್ನೀತಿಗಳನ್ನು ಚಿತ್ರಿಸುವುದಕ್ಕಾಗಿ ನೀವು ಲೇಖನಿಯನ್ನು ಕೈಗೆತ್ತಿಕೊಂಡಿರಲ್ಲ. ಅದಕ್ಕೆ ಯಾವುದೇ ಹೋಲಿಕೆಯೂ ಇಲ್ಲ. ನೀವೆಂದೂ ಧರ್ಮದ ಬಗ್ಗೆ, ಮತದ ಬಗ್ಗೆ ಕೀಳು ಬಗೆಯ ವ್ಯಂಗ್ಯ-ವಿಡಂಬನೆಗಳಿಗೆ ಕೈಹಾಕಲಿಲ್ಲ. ಆದ್ದರಿಂದ, ಕೆಟ್ಟ ಸಂಪ್ರದಾಯಗಳ ಮೇಲೆ ಕುಠಾರಾ ಘಾತವನ್ನು ಎಸಗಲು ಹಿಂದೆ ಮುಂದೆ ನೋಡಲಿಲ್ಲ. ನಿಮ್ಮ ಕೃತಿಗಳು ಹೃದಯಸ್ಪರ್ಶಿಯಾಗಿವೆ. ಹೃದಯಾಂತರಾಳದ ವರೆಗೆ ಪ್ರವೇಶಿಸಬಲ್ಲ ನಿಮ್ಮ ಪಾತ್ರಗಳೊಂದಿಗೆ ನಾವೂ ಒಂದಾಗಿಬಿಡಬಹುದಾಗಿದೆ. ಆ ಪಾತ್ರಗಳ ಸುಖ-ದುಃಖಗಳು ಓದುಗರ ಸುಖ-ದುಃಖಗಳಾಗಿ ಬಿಡುತ್ತವೆ; ಎಲ್ಲವೂ ಸಹಜವಾಗಿವೆ. ಯಾವುದೇ ಕ್ಲಿಷ್ಟ ಕಲ್ಪನೆಯೂ ಇಲ್ಲ; ಎಲ್ಲವೂ ನಿತ್ಯಜೀವನದಿಂದ ಆಯ್ದಿರುವಂಥ ಪಾತ್ರಗಳು ಎಂಬುದು ನಿಮ್ಮ ಇನ್ನೊಂದು ವೈಶಿಷ್ಟ್ಯ."

(ಆಚಾರ್ಯ ಪ್ರಫುಲ್ಲಚಂದ್ರ ರಾಯ್ ಅವರ 'ದಿನಚರಿ'ಯಿಂದ)

* * * *

"ಒಬ್ಬ ಸಾಹಿತಿಯ ದೃಷ್ಟಿಯಿಂದ ಅವರು ತುಂಬ ದೊಡ್ಡವರಾಗಿದ್ದರು. ಆದರೆ ಒಬ್ಬ ದೇಶಭಕ್ತನ ದೃಷ್ಟಿಯಿಂದ ಅವರು ಮತ್ತಷ್ಟು ದೊಡ್ಡವರಾಗಿದ್ದರು. ಅವರ ಸಾವಿನಿಂದ ಕಾಂಗ್ರೆಸ್ ಪಕ್ಷಕ್ಕೆ ಭಾರಿ ನಷ್ಟ ಉಂಟಾಗಿದೆ."

(ಸುಭಾಷ್‌ಚಂದ್ರ ಬೋಸ್ ಅವರ ಅಧ್ಯಕ್ಷ ಭಾಷಣದಿಂದ)

* * * *

# ಅನುಬಂಧ - 1

# ಸಹಾಯಕ ಗ್ರಂಥಗಳು

## ಬಂಗಾಳಿ ಪುಸ್ತಕಗಳು


1. ಸಂಪೂರ್ಣ ಶರತ್-ಸಾಹಿತ್ಯ ಸಂಗ್ರಹ : ಎಂ.ಸಿ. ಸರ್ಕಾರ್ ಅಂಡ್ ಸನ್ಸ್ ಪ್ರೈ ಲಿಮಿಟೆಡ್, ಕಲ್ಕತ್ತಾ
2. ಶ್ರೀಕಾಂತೇರ್ ಶರತ್‌ಚಂದ್ರ : ಮೋಹಿತಲಾಲ್ ಮಜೂಮದಾರ್
3. ಶರತ್‌ಚಂದ್ರ (ಮೂರು ಭಾಗಗಳು) : ಗೋಪಾಲಚಂದ್ರ ರಾಯ್
4. ಶರತ್ ಚೇತನಾ : ಸೋಮಸುಂದರ ಬಂದೋಪಾಧ್ಯಾಯ್
5. ದೇಶಬಂಧು ಓ ಗಾಂಧೀಜಿ : ಶಂಕರಪ್ರಸಾದ ಮಿತ್ರ
6. ಶರತ್ ಪತ್ರಾವಲೀ : ಬೃಜೇಂದ್ರನಾಥ ಬಂದೋಪಾಧ್ಯಾಯ
7. ಶರತ್‌ಚಂದ್ರೇರ್ ರಾಜನೀತಿಕ್ ಜೀವನ : ಶಚೀನಂದನ ಚಟ್ಟೋಪಾಧ್ಯಾಯ್
8. ಶರತ್‌ಚಂದ್ರೇರ್ ಪ್ರಣಯ ಕಾಹಿನೀ : ಗೋಪಾಲಚಂದ್ರ ರಾಯ್
9. ಸ್ಮೃತಿ ಕಥಾ (ನಾಲ್ಕು ಭಾಗಗಳು) : ಉಪೇಂದ್ರನಾಥ ಗಂಗೋಪಾಧ್ಯಾಯ
10. ಶರತ್ ವಂದನಾ : ಸಂ. ನರೇಂದ್ರ ದೇವ್
11. ಬ್ರಹ್ಮಪ್ರವಾಸೇ ಶರತ್‌ಚಂದ್ರ : ಯೋಗೇಂದ್ರನಾಥ ಸರ್ಕಾರ್
12. ಬ್ರಹ್ಮದೇಶೇ ಶರತ್ : ಗಿರೀಂದ್ರನಾಥ ಸರ್ಕಾರ್
13. ಶರತ್ ಪರಿಚಯ : ಬೃಜೇಂದ್ರನಾಥ ಬಂದೋಪಾಧ್ಯಾಯ್
14. ಶರತ್‌ಚಂದ್ರ ಚಟ್ಟೋಪಾಧ್ಯಾಯ : ಬೃಜೇಂದ್ರನಾಥ ಬಂದೋಪಾಧ್ಯಾಯ್
15. ಶರತ್‌ಚಂದ್ರ : ಈನಾಯಿಲಾಲ್ ಘೋಷ್
16. ಶರತ್ ಪ್ರತಿಭಾ : ಸತೀಶಚಂದ್ರ ದಾಸ್

| | | | |
|---|---|---|---|
| 17. | ಶರತ್‌ಚಂದ್ರೇರ್ ಜೀವನೇರ್ ಏಕ್‌ದಿಕ್ (ಎರಡು ಭಾಗಗಳು) | : | ಸುರೇಂದ್ರನಾಥ ಗಂಗೋಪಾಧ್ಯಾಯ |
| 18. | ರವಿವಾಸರೇ ರವೀಂದ್ರನಾಥ್ | : | ಸಂತೋಷಕುಮಾರ್ ದೇ |
| 19. | ರವೀಂದ್ರನಾಥ್ ಓ ಶರತ್‌ಚಂದ್ರ | : | ಗೋಪಾಲಚಂದ್ರ ರಾಯ್ |
| 20. | ಜಾದೇರ್ ದೇಖೇಛಿ | : | ಹೇಮೇಂದ್ರ ಕುಮಾರ್ ರಾಯ್ |
| 21. | ಚಲಮಾನ ಜೀವನ | : | ಪವಿತ್ರ ಗಂಗೋಪಾಧ್ಯಾಯ |
| 22. | ಶೇಷ್ ಬೈಠಕ್ | : | ಉಪೇಂದ್ರನಾಥ ಗಂಗೋಪಾಧ್ಯಾಯ |
| 23. | ಶರತ್‌ಚಂದ್ರ | : | ಸುಬೋಧಸೇನ ಗುಪ್ತ |
| 24. | ಶರತ್ ಚಂದ್ರಿಕಾ | : | ನಂದ ದುಲಾಲ ಚಕ್ರವರ್ತಿ |
| 25. | ಶರತ್‌ಚಂದ್ರೇರ್ ಟೂಕರೋ ಕಥಾ | : | ಅವಿನಾಶ ಘೋಶಾಲ್ |
| 26. | ಶರತ್‌ಚಂದ್ರ | : | ನರೇಂದ್ರ ದೇವ್ |
| 27. | ಶರತ್‌ಚಂದ್ರ - ಚಿಟ್ಕೀ ಪತ್ರ | : | ಗೋಪಾಲಚಂದ್ರ ರಾಯ್ |
| 28. | ಶರತ್‌ಚಂದ್ರೇರ್ ಸಂಗೇ | : | ಅಸಮಂಜಸ ಮುಖೋಪಾಧ್ಯಾಯ |
| 29. | ಶರತ್‌ಚಂದ್ರ (ನಾಟಕ) | : | ನಂದಲಾಲ್ ಚಕ್ರವರ್ತಿ |
| 30. | ದರದೀ ಶರತ್‌ಚಂದ್ರ | : | ಮಣೀಂದ್ರ ಚಕ್ರವರ್ತಿ |
| 31. | ಶರತ್‌ಚಂದ್ರೇರ್ ಜೀವನ ರಹಸ್ಯ | : | ಸೌರೀಂದ್ರಮೋಹನ ಮುಖೋಪಾಧ್ಯಾಯ |
| 32. | ಪಂಚಶಸ್ಯ | : | ಜರಾಸಂಧ್, ಸಿ.ಸಿ. ಚಕ್ರವರ್ತಿ |
| 33. | ಲೇಖಕೇರ್ ಮುಖಾಮುಖಿ | : | ಅರುಣಕುಮಾರ್ ಮುಖೋಪಾಧ್ಯಾಯ |
| 34. | ವಿಪ್ಲವೀ ಶರತ್‌ಚಂದ್ರೇರ್ ಜೀವನ ಪ್ರಶ್ನೆ | : | ಶೈಲೇಶ್ ವಿಶಿ |
| 35. | ಬಾಂಗ್ಲಾ ಸಾಹಿತ್ಯೇರ್ ಇತಿಹಾಸ (ಎಲ್ಲ ಭಾಗಗಳು) | : | ಸುಕುಮಾರ ಸೇನ್ |
| 36. | ರಾಮತನು ಲಾಹಿಡೀ | : | ಶಿವನಾಥ ಶಾಸ್ತ್ರೀ |
| 37. | ಶರತ್ ಪರಿಚಯ | : | ಸುರೇಂದ್ರನಾಥ ಗಂಗೋಪಾಧ್ಯಾಯ |
| 38. | ಶ್ರದ್ಧಾಸ್ಪದೇಷು | : | ನಳಿನೀಕಾಂತ ಸರ್ಕಾರ್ |
| 39. | ಜೀವನಶಿಲ್ಪೀ ಶರತ್‌ಚಂದ್ರ | : | ಅಮಿಯಾರತನ ಮುಖೋಪಾಧ್ಯಾಯ |
| 40. | ಶರತ್‌ಚಂದ್ರ ಓ ತಾರಪರ | : | ಕಾಜೀ ಅಬ್ದುಲ್ ಮಸೂದ್ |
| 41. | ಶರತ್‌ಚಂದ್ರೇರ್ ಗ್ರಂಥ ವಿವರಣ | : | ಅವಿನಾಶ್ ಘೋಶಾಲ್ |
| 42. | ಶರತ್ ಸ್ಮರಣೀ | : | ಸಂ. ಗೋಪಾಲ್ ಭೌಮಿಕ್ |

| | | |
|---|---|---|
| 43. ಅಪ್ರಕಾಶಿತ್ ಡೈರೀ ಕೇ ಅಂಶ್ | : | ಅಕ್ಷಯಕುಮಾರ್ |
| 44. ಶರತ್-ಸ್ಮೃತಿ | : | ಚಾರುಚಂದ್ರ ಬ್ಯಾನರ್ಜೀ |
| 45. ಶರತ್ ವಂದನಾ | : | ಶ್ರೀಗುರುದಾಸ್ ಲೈಬ್ರೆರೀ |
| 46. ಶರತ್‌ಚಂದ್ರ: ಸಾಹಿತ್ಯ ಔರ್ ದರ್ಶನ್ | : | ಮನೋರಂಜನ ಜಾನಾ |
| 47. ಶರತ್‌ಚಂದ್ರ: ದೇಶ್ ಔರ್ ಸಮಾಜ್ | : | ಸೋಮೇಂದ್ರನಾಥ ಠಾಕೂರ್ |
| 48. ಸ್ಮೃತಿ-ಚಾರಣ | : | ದಿಲೀಪ್ ಕುಮಾರ್ ರಾಯ್ |

## ಹಿಂದೀ ಪುಸ್ತಕಗಳು

| | | |
|---|---|---|
| 49. ಸಂಪೂರ್ಣ ಶರತ್ ಸಾಹಿತ್ಯ | : | ಹಿಂದೀ ಗ್ರಂಥ ರತ್ನಾಕರ್, ಮುಂಬಯಿ |
| 50. ಸಂಚಾರಿಣೀ | : | ಶಾಂತಿಪ್ರಿಯ ದ್ವಿವೇದಿ |
| 51. ಅಪ್ರೆಶನ್ | : | ಶರತ್‌ಚಂದ್ರ |
| 52. ಶರತ್‌ಚಂದ್ರ | : | ಲಾವಣ್ಯ ಪ್ರಭಾ ರಾಯ್ |
| 53. ಶರತ್ ಕೀ ಲತೀಫೇ | : | ಡಾ. ಮಹಾದೇವ್ ಸಾಹಾ |
| 54. ದೇಶಬಂಧು ಚಿತ್ತರಂಜನದಾಸ್ | : | ಹೇಮೇಂದ್ರ ದಾಸಗುಪ್ತ |
| 55. ಬಂದೀ ಜೀವನ್ | : | ಶಚೀಂದ್ರನಾಥ್ ಸಾನ್ಯಾಲ್ |
| 56. ಪ್ರಭುಪಾದ ಶ್ರೀ ಹರಿದಾಸ ಗೋಸ್ವಾಮೀ | : | ಪ್ರ. ರಾಮನಿವಾಸ್ ಢಂಢಾರಿಯಾ |
| 57. ಶರತ್‌ಚಂದ್ರ: ವ್ಯಕ್ತಿ ಔರ್ ಸಾಹಿತ್ಯಕಾರ್ | : | ಮನ್ಮಥನಾಥ್ ಗುಪ್ತ |
| 58. ಯೇ ಔರ್ ವೇ | : | ಜೈನೇಂದ್ರ ಕುಮಾರ್ |
| 59. ಕಾಂಗ್ರೆಸ್ ಕಾ ಇತಿಹಾಸ್ | : | ಡಾ. ಪಟ್ಟಾಭಿ ಸೀತಾರಾಮಯ್ಯ |
| 60. ಅಮರನಾಥ್ | : | ಶರತ್‌ಚಂದ್ರ |
| 61. ಬಂಗ್ಲಾ ಸಾಹಿತ್ಯ ದರ್ಶನ | : | ಮನ್ಮಥನಾಥ ಗುಪ್ತ |
| 62. ಬಂಗ್ಲಾ ಸಾಹಿತ್ಯ ಕೀ ಕಥಾ | : | ಡಾ. ಸುಕುಮಾರ ಸೇನ್ |
| 63. ಶರತ್‌ಚಂದ್ರ: ವ್ಯಕ್ತಿ ಔರ್ ಕಲಾಕಾರ್ | : | ಇಳಾಚಂದ್ರ ಜೋಶೀ |
| 64. ಶರತ್‌ಚಂದ್ರ: ಚಿಂತನ್ ವ ಕಲಾ | : | ಇಂದ್ರನಾಥ್ ಮದಾನ್ |
| 65. ಶರತ್ ಕೀ ಸೂಕ್ತಿಯಾಂ | : | ರಾಮಪ್ರಕಾಶ್ ಜೈನ್ |
| 66. ಶರತ್ ಕೇ ನಾರೀಪಾತ್ರ್ | : | ರಾಮಸ್ವರೂಪ್ ಚತುರ್ವೇದಿ |
| 67. ಪ್ರೇಮಚಂದ್: ಕಲಮ್ ಕಾ ಸಿಪಾಗೀ | : | ಅಮೃತ್‌ರಾಯ್ |

## ಇಂಗ್ಲೀಷ್ ಪುಸ್ತಕಗಳು

68. ಟಾಲ್‌ಸ್ಟಾಯ್ : ಅಲೆಕ್ಸಾಂಡ್ರಾ ಟಾಲ್‌ಸ್ಟಾಯ್
69. ಮದರ್ಸ್ ಅಂಡ್ ಸನ್ಸ್ : ಶರತ್‌ಚಂದ್ರ (ಅನು: ದಿಲೀಪಕುಮಾರ್ ರಾಯ್)
70. ಶರತ್‌ಚಂದ್ರ ಚಟರ್ಜಿ : ಹುಮಾಯೂನ್ ಕಬೀರ್
71. ಕಲ್ಕತ್ತಾ ವಿಶ್ವವಿದ್ಯಾಲಯದ ಕ್ಯಾಲೆಂಡರುಗಳು :
72. ಲಸ್ಟ್ ಫಾರ್ ಲೈಫ್ : ಇರ್ವಿಂಗ್ ಸ್ಟೋನ್
73. ಬಾಸ್‌ವೆಲ್ಸ್ ಜಾನ್ಸನ್ : ಸ್ಪ್ಯಾಂಪ್ಲರ್
74. ಅಬ್ರಹಾಮ್ ಲಿಂಕನ್ : ಲಾರ್ಡ್ ಚಾರ್ಲ್ಸ್‌ವುಡ್
75. ಏರಿಯಲ್ : ಆಂದ್ರೆ ಮೋರಾ
76. ನೆಪೋಲಿಯನ್ : ಎಮಿಲ್ ಲುಡ್ವಿಗ್

## ಸಹಾಯಕ ವರ್ತಮಾನ ಪತ್ರಿಕೆಗಳು

| | | | |
|---|---|---|---|
| 1. | ಆಮಾರ್ | (ಬಂಗಾಳಿ) | ನವದೆಹಲಿ |
| 2. | ಉತ್ತರಾ | ” | ವಾರಾಣಾಸಿ |
| 3. | ವಾತಾಯನ | ” | ಕಲ್ಕತ್ತಾ |
| 4. | ಭಾರತವರ್ಷ | ” | ” |
| 5. | ಜಯಶ್ರೀ | ” | ” |
| 6. | ದೀಪಾಲಿ | ” | ” |
| 7. | ಗಲ್ಪಭಾರತೀ | ” | ” |
| 8. | ದೇಶ್ | ” | ” |
| 9. | ರವೀಂದ್ರ ಭಾರತೀ | ” | ” |
| 10. | ಬಸುಮತಿ | ” | ” |
| 11. | ವಿಶ್ವಭಾರತೀ | ” | ಶಾಂತಿನಿಕೇತನ |
| 12. | ಪ್ರವರ್ತಕ | ” | ಕಲ್ಕತ್ತಾ |
| 13. | ಪ್ರವಾಸೀ | ” | ” |
| 14. | ಕಾಲಿಕಲಮ | ” | ” |
| 15. | ತರುಣೇರ್ ಸ್ವಪ್ನ | ” | ” |
| 16. | ಬಂಗಶ್ರೀ | ” | ” |
| 17. | ಕಲ್ಲೋಲ | ” | ” |
| 18. | ಭಾರತೀ | (ಹಿಂದೀ) | ಮುಂಬಯಿ |
| 19. | ನವನೀತ | ” | ” |
| 20. | ಸಾಪ್ತಾಹಿಕ್ ಹಿಂದೂಸ್ತಾನ್ | ” | ನವದೆಹಲಿ |
| 21. | ಧರ್ಮಯುಗ | ಹಿಂದೀ | ಮುಂಬಯಿ |
| 22. | ಓಮಪ್ರಸ್ಥ | ” | ಶಿಮ್ಲಾ |

23. ಟ್ರೆಂಡ್ (ಇಂಗ್ಲಿಷ್) ಕಲ್ಕತ್ತಾ
24. ಮಾಡರ್ನ್ ರಿವ್ಯೂ " "

## ಅನುಬಂಧ-2

# ನೆರವಾದ ವ್ಯಕ್ತಿಗಳು

### (ಅ) ಸಂದರ್ಶಿಸಲಾದ ವ್ಯಕ್ತಿಗಳು

| | | | |
|---|---|---|---|
| 1. | ಅಮೃತಲಾಲ್ ನಾಗರ್ | : | ಪ್ರಸಿದ್ಧ ಹಿಂದೀ ಲೇಖಕರು |
| 2. | ದಿಲೀಪ್ ಕುಮಾರ್ ರಾಯ್ | : | ಆತ್ಮೀಯ ಬಂಧುಗಳು, ಪ್ರಸಿದ್ಧ ಸಂಗೀತಜ್ಞರು ಮತ್ತು ಲೇಖಕರು |
| 3. | ಉಪೇಂದ್ರನಾಥ ಗಂಗೋಪಾಧ್ಯಾಯ | : | ವಾವೆಯಲ್ಲಿ ಮಾವಂದಿರು, ಪ್ರಸಿದ್ಧ ಲೇಖಕರು |
| 4. | ಅಮಲ್ ಹೋಮ್ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 5. | ರಾಜೇಶ್ವರ ಪ್ರಸಾದ ನಾರಾಯಣ ಸಿಂಹ | : | ಪ್ರಸಿದ್ಧ ಲೇಖಕರು |
| 6. | ನರೇಂದ್ರ ದೇವ್ | : | ಆತ್ಮೀಯ ಬಂಧುಗಳು ಮತ್ತು ಪ್ರಸಿದ್ಧ ಸಾಹಿತಿಗಳು |
| 7. | ಉಮಾಪ್ರಸಾದ್ ಮುಖರ್ಜಿ | : | ಆತ್ಮೀಯ ಬಂಧುಗಳು ಮತ್ತು ಪ್ರಸಿದ್ಧ ಸಾಹಿತಿಗಳು |
| 8. | ನಂದಗೋಪಾಲ್ ಸೇನ್‌ಗುಪ್ತ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 9. | ಅಸಮಂಜಸ ಮುಖೋಪಾಧ್ಯಾಯ | : | ಪ್ರಸಿದ್ಧ ಲೇಖಕರು |
| 10. | ಸೋಮೇಂದ್ರನಾಥ ಬಸು | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 11. | ಪ್ರಬೋಧಕುಮಾರ್ ಸನ್ಯಾಲ್ | : | ಪ್ರಸಿದ್ಧ ಸಾಹಿತಿಗಳು |
| 12. | ವೀರೇಂದ್ರನಾಥ ಸರ್ಕಾರ್ | : | ಪ್ರಸಿದ್ಧ ಸಿನೆಮಾ-ಚಿತ್ರ-ಸಂಚಾಲಕರು |

13. ವಾಚಸ್ಪತಿ ಪಾಠಕ್ : ಪ್ರಸಿದ್ಧ ಹಿಂದೀ-ಲೇಖಕರು ಮತ್ತು ಪತ್ರಕರ್ತರು
14. ಪ್ರಮಥನಾಥ ರಾಯ್ : ಮುಜಫ್ಫರಪುರದ ಆತ್ಮೀಯಮಿತ್ರರು
15. ಚಂಡೀಚರಣ ಘೋಷ್ : ಬಾಲ್ಯದ ಪರಿಚಯವುಳ್ಳವರು, ಭಾಗಲ್ಪುರದ ವಕೀಲರು
16. ಚಂದ್ರಶೇಖರ ಘೋಷ್ : ಭಾಗಲ್ಪುರದಲ್ಲಿನ ಬಾಲ್ಯದ ಪರಿಚಯವುಳ್ಳ ಬಂಧುಗಳು
17. ಎಸ್.ಎಂ. ಮಜೂಮದಾರ್ : ಭಾಗಲ್ಪುರದಲ್ಲಿನ ಬಾಲ್ಯದ ಪರಿಚಯವುಳ್ಳ ಗೆಳೆಯರು
18. ಭೂಪತಿಭೂಷಣ ಘೋಷ್ : ಭಾಗಲ್ಪುರದಲ್ಲಿನ ಬಾಲ್ಯದ ಪರಿಚಯವುಳ್ಳ ಗೆಳೆಯರು
19. ಬಲಾಯಿ ಚಾಂದ್ ಮುಖೋಪಾಧ್ಯಾಯ (ಬನಫೂಲ್) : ಪ್ರಸಿದ್ಧ ಸಾಹಿತಿಗಳು
20. ಇಳಾಚಂದ್ರ ಜೋಶೀ : ಪ್ರಸಿದ್ಧ ಸಾಹಿತಿಗಳು
21. ಅವಿನಾಶ ಘೋಷಾಲ್ : ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು
22. ಫಣೀಂದ್ರನಾಥ ಮುಖರ್ಜಿ : ಭಾಗಲ್ಪುರದಲ್ಲಿನ ಬಾಲ್ಯದ ಒಬ್ಬ ಬಂಧುಗಳು
23. ಮಹಾವೀರ ಪ್ರಸಾದ ಪೋದ್ದಾರ್ : ಪ್ರಸಿದ್ಧ ಪ್ರಕೃತಿ ಚಿಕಿತ್ಸಕರು
24. ಎಸ್.ಸಿ. ದಾಸ್ : ರಂಗೂನಿನ ಒಬ್ಬ ಪರಿಚಿತ ಬಂಧುಗಳು
25. ಎಂ.ಎಸ್. ದೋಷಿ : ರಂಗೂನಿನ ಒಬ್ಬ ಬಂಧುಗಳು
26. ಡಾ. ಅಮಿಯ ಕುಮಾರ್ ಸೇನ್ : ರಂಗೂನಿನ ಕಛೇರಿ ಸಹೋದ್ಯೋಗಿಯೊಬ್ಬರ ಮಗ
27. ಎಂ.ಎಂ. ದಾಸ್ : ರಂಗೂನಿನ ಒಬ್ಬ ಬಂಧುಗಳು
28. ಸುಬೋಧ ಚಟರ್ಜಿ : ರಂಗೂನಿನ ಒಬ್ಬ ಬಂಧುಗಳು
29. ಡಾ. ಮಹಾದೇವ ಸಾಹಾ : ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು
30. ಪ್ರಫುಲ್ಲ ಕುಮಾರ ಚಟರ್ಜಿ : ವಾರಾಣಸಿಯ ಒಬ್ಬ ಪರಿಚಿತ ಬಂಧುಗಳು
31. ಸುರೇಂದ್ರ ಮೋಹನ ಘೋಷ್ : ಸುಪ್ರಸಿದ್ಧ ಕ್ರಾಂತಿಕಾರಿಗಳು
32. ಎ.ಎನ್. ವಿಶ್ವವಾಸ್ : ರಂಗೂನಿನ ಒಬ್ಬ ಪರಿಚಿತ ಬಂಧುಗಳು
33. ರೂಪೇನ್ ಸೇನ್ : ರಂಗೂನ್

| | | | |
|---|---|---|---|
| 34. | ಭೂಪೇನ್ ಚೌಧರಿ | : | ರಂಗೂನ್ |
| 35. | ಹೇಮೇನ್ ರಾಯ್ | : | ಭಾಗಲ್ಪುರದಲ್ಲಿ ಒಬ್ಬ ಪರಿಚಿತ ಬಂಧುಗಳು |
| 36. | ರವೀಂದ್ರ ಗಂಗೂಲಿ | : | ಮಾವ ಸುರೇಂದ್ರನಾಥರ ಮಗ |
| 37. | ಪೂರ್ಣೇಂದ್ರ ಗಂಗೂಲಿ | : | ಮಾವ ಸುರೇಂದ್ರನಾಥರ ಮಗ |
| 38. | ಸುಖರಂಜನ ಮುಖೋಪಾಧ್ಯಾಯ | : | ಪ್ರಸಿದ್ಧ ಲೇಖಕರು |
| 39. | ಸುಧೀರ್ ಕುಮಾರ್ ಮುಖರ್ಜಿ ಮೊದಲಾದವರು | : | ಸೋದರಿಯ ಕುಟುಂಬದವರು |
| 40. | ಶ್ರೀಮತಿ ರಾಧಾರಾನೀ ದೇವಿ | : | ಬಂಗಾಳದ ಪ್ರಸಿದ್ಧ ಕವಯಿತ್ರಿ |
| 41. | ಶ್ರೀಮತಿ ರೇಣುಕಾ ಕರ್ | : | ರಂಗೂನಿನ ಒಬ್ಬ ಸಹೋದ್ಯೋಗಿಯ ಮಗಳು |
| 42. | ಸತ್ಯೇಂದ್ರನಾಥ ಚಟರ್ಜಿ | : | ಚಿಕ್ಕಮ್ಮನ ಮಗ |
| 43. | ರಜನೀಕಾಂತ ದಾಸ್ | : | ಪ್ರಸಿದ್ಧ ಬಂಗಾಳಿ ಲೇಖಕರು ಮತ್ತು ಪತ್ರಕರ್ತರು |
| 44. | ಸೌರೀಂದ್ರ ಮೋಹನ ಮುಖೋಪಾಧ್ಯಾಯ | : | ಬಾಲ್ಯದ ಆತ್ಮೀಯ ಗೆಳೆಯರು ಮತ್ತು ಪ್ರಸಿದ್ಧ ಲೇಖಕರು |
| 45. | ಪ್ರೇಮೇಂದ್ರ ಮಿತ್ರ | : | ಪ್ರಸಿದ್ಧ ಸಾಹಿತಿಗಳು |
| 46. | ನಕುಲಚಂದ್ರ ಪತಿ | : | ಹಳ್ಳಿಯ ಒಬ್ಬ ನೆರೆಮನೆಯಾತ |
| 47. | ಶಚೀಂದ್ರನಾಥ ಚಟ್ಟೋಪಾಧ್ಯಾಯ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 48. | ರಮಾಪ್ರಸಾದ ಮುಖರ್ಜಿ | : | ಪ್ರಸಿದ್ಧ ನ್ಯಾಯಮೂರ್ತಿಗಳು ಮತ್ತು 'ಬಂಗವಾಣೀ' ಪತ್ರಿಕೆಯ ಸಂಚಾಲಕರು |
| 49. | ಹುಮಾಯೂನ್ ಕಬೀರ್ | : | ಪ್ರಸಿದ್ಧ ಸಾಹಿತಿಗಳು ಮತ್ತು ರಾಜಕಾರಿಣಿಗಳು |
| 50. | ಅರುಣಕುಮಾರ ಮುಖರ್ಜಿ | : | ಪ್ರಸಿದ್ಧ ಸಾಹಿತಿಗಳು |
| 51. | ಕುಮುದಚಂದ್ರ ರಾಯ್ ಚೌಧರಿ | : | ಪ್ರಸಿದ್ಧ ಸಾಹಿತಿಗಳು |
| 52. | ಸಿ.ಎಸ್. ಚಕ್ರವರ್ತಿ (ಜರಾಸಂಧ) | : | ಪ್ರಸಿದ್ಧ ಸಾಹಿತಿಗಳು |
| 53. | ಸೋಮೇಂದ್ರನಾಥ ಗಂಗೋಪಾಧ್ಯಾಯ | : | ಮಾವ ಮಣೀಂದ್ರನಾಥರ ಮಗ |
| 54. | ಅಮಲಕುಮಾರ ಗಂಗೋಪಾಧ್ಯಾಯ | : | ಮಾವ ಗಿರೀಂದ್ರನಾಥರ ಮಗ |
| 55. | ನಳಿನೀಕಾಂತ ಸರ್ಕಾರ್ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 56. | ಶಿಶಿರಕುಮಾರ್ ಮಿತ್ರ | : | ಪ್ರಸಿದ್ಧ ಪತ್ರಕರ್ತರು |

| | | | |
|---|---|---|---|
| 57. | ಡಾ. ರಮೇಶಚಂದ್ರ ಮಜೂಮ್‌ದಾರ್ | : | ಪ್ರಸಿದ್ಧ ಇತಿಹಾಸಕಾರರು |
| 58. | ಗೋಪಾಲ್ | : | ಕೊನೆಗಾಲದ ಸೇವಕ |
| 59. | ಅನಿಲವರಣ್ ರಾಯ್ | : | ರಾಜಕೀಯ ಜೀವನದ ಒಬ್ಬ ಬಂಧುಗಳು |
| 60. | ಸುರೇಶ ಚಕ್ರವರ್ತಿ | : | ಪ್ರಸಿದ್ಧ ಪತ್ರಕರ್ತರು |

### (ಆ) ಪತ್ರವ್ಯವಹಾರದ ಮೂಲಕ ಸಂಪರ್ಕಿಸಲಾದ ವ್ಯಕ್ತಿಗಳು

| | | | |
|---|---|---|---|
| 1. | ಅಜಹರುದ್ದೀನ್ ಖಾನ್ | : | ಪ್ರಸಿದ್ಧ ಪತ್ರಕರ್ತರು |
| 2. | ವಿಭೂತಿಭೂಷಣ್ | : | ಬಾಲ್ಯದ ಆತ್ಮೀಯ ಬಂಧುಗಳು ಮತ್ತು ಪ್ರಸಿದ್ಧ ಲೇಖಕರು |
| 3. | ಗುರುದಯಾಲ್ ಮಲ್ಲಿಕ್ | : | ಪ್ರಸಿದ್ಧ ಸಂತ ಸಾಹಿತಿಗಳು |
| 4. | ಹಿಮಾಂಶುಭೂಷಣ ರಾಯ್ | : | ಬಾಲ್ಯದ ಗೆಳೆಯರೊಬ್ಬರ ಮಗ |
| 5. | ಡಾ. ಸತ್ಯೇಂದ್ರನಾಥ ಗಂಗೂಲಿ | : | ಹಾವೆಯಲ್ಲಿ ಮಾವಂದಿರು, ನಿವೃತ್ತ ಸಿವಿಲ್ ಸರ್ಜನ್ |
| 6. | ಸುರೇಂದ್ರನಾಥ ಚಟರ್ಜಿ | : | ಮುಜಫ್ಫರ ಪುರದ ಒಬ್ಬ ಒಡನಾಡಿ |
| 7. | ಬಿ.ಎಸ್. ಮುಖರ್ಜಿ | : | ರಂಗೂನಿನ ಒಬ್ಬ ಒಡನಾಡಿ |
| 8. | ಪರೇಶನಾಥ ಚಟರ್ಜಿ | : | ಮುಜಫ್ಫರಪುರದ ಒಬ್ಬ ಒಡನಾಡಿ |
| 9. | ರಿಜಿಸ್ಟ್ರಾರ್ | : | ಕಲ್ಕತ್ತಾ ವಿಶ್ವವಿದ್ಯಾಲಯ |
| 10. | ಸ್ವಾಮಿ ವೀರೇಶ್ವರಾನಂದ | : | ಮುಖ್ಯ ಕಾರ್ಯದರ್ಶಿ, ರಾಮಕೃಷ್ಣ ಮಿಶನ್, ಬೇಲೂರ್ ಮಠ |
| 11. | ಮುಖ್ಯ ಕಾರ್ಯದರ್ಶಿ | : | ಬಂಗಾಳೀ ಸಾಹಿತ್ಯ ಸಮ್ಮೇಳನ |
| 12. | ಭೂಪೇಂದ್ರಕಿಶೋರ್ ರಕ್ಷಿತ ರಾಯ್ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 13. | ಅಶೋಕ ಚಟ್ಟೋಪಾಧ್ಯಾಯ | : | ರಾಮಾನಂದ ಚಟ್ಟೋಪಾಧ್ಯಾಯ ಅವರ ಮಗ ಮತ್ತು ಪ್ರಸಿದ್ಧ ಲೇಖಕರು |
| 14. | ಧರ್ಮೇಂದ್ರ ಗೌಡ | : | ಪ್ರಸಿದ್ಧ ಪತ್ರಕರ್ತರು |
| 15. | ಡಾ. ಸುನೀತಿ ಕುಮಾರ್ ಚಟರ್ಜಿ | : | ಪ್ರಸಿದ್ಧ ಭಾಷಾ ವಿಜ್ಞಾನಿಗಳು ಮತ್ತು ಲೇಖಕರು |
| 16. | ಅನ್ನದಾಶಂಕರ್ ರಾಯ್ | : | ಪ್ರಸಿದ್ಧ ಸಾಹಿತಿಗಳು |

17. ಪುಲಿನಬಿಹಾರೀ ಸೇನ್ : ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು

## (ಇ) ಇತರ ವ್ಯಕ್ತಿಗಳು

1. ಹರಿಶಂಕರ ಶರ್ಮ : ಪ್ರಸಿದ್ಧ ಪತ್ರಕರ್ತರು
2. ಅಸಿತಕುಮಾರ್ ಹಲ್ದಾರ್ : ಪ್ರಸಿದ್ಧ ಪತ್ರಕರ್ತರು
3. ಶ್ರೀಮತಿ ಸುಜಾತಾ ಸೇನ್ : ಪ್ರಸಿದ್ಧ ಲೇಖಕಿ
4. ಶೈಲಾಜಾನಂದ ಮುಖೋಪಾಧ್ಯಾಯ : ಪ್ರಸಿದ್ಧ ಲೇಖಕಿ
5. ಜೆ.ಕೆ. ಡಾಂಗೆ : ಮರಾಠೀ ಲೇಖಕರು
6. ಕುಮುದಿನೀಕಾಂತ ಕರ್ : ರಂಗೂನಿನ ಆತ್ಮೀಯ ಸಹೋದ್ಯೋಗಿ
7. ಪ್ರಥಮ ಚೌಧರಿ : ಪ್ರಸಿದ್ಧ ಲೇಖಕರು
8. ಶ್ರೀಮತಿ ನಿರುಪಮಾ ದೇವಿ : ಕಿಶೋರಕಾಲದ ಪರಿಚಯವುಳ್ಳವರು; ಸುಪ್ರಸಿದ್ಧ ಲೇಖಕಿ
9. ಸುರೇಂದ್ರನಾಥ ಮೈತ್ರ : ಪ್ರಸಿದ್ಧ ಲೇಖಕರು
10. ಮನೋಜ ಬಸು : ಪ್ರಸಿದ್ಧ ಲೇಖಕರು
11. ನರೇಶಚಂದ್ರ ಸೇನಗುಪ್ತ : ಪ್ರಸಿದ್ಧ ಲೇಖಕರು
12. ಹರೇಕೃಷ್ಣ ಮುಖೋಪಾಧ್ಯಾಯ : ಪ್ರಸಿದ್ಧ ಲೇಖಕರು
13. ಧೀರೇಂದ್ರ ಬಂದೋಪಾಧ್ಯಾಯ : ಪ್ರಸಿದ್ಧ ಲೇಖಕರು
14. ದ್ವಿಜೇಂದ್ರನಾಥ ದತ್ತ ಮುನ್ಷೀ : ದೇವಾನಂದಪುರದ ಒಬ್ಬ ಪ್ರತಿಷ್ಠಿತ ವ್ಯಕ್ತಿ
15. ವಿಮಲ್ ಬೋಸ್ : ಪ್ರಸಿದ್ಧ ಸಿನಮಾ-ಚಿತ್ರಕಾರರು
16. ಭಗವಾನ್‌ಚಂದ್ರ ವಿನೋದ್ : ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು
17. ಡಾ. ಶಿವನಂದನ ಪ್ರಸಾದ್ : ಪ್ರಸಿದ್ಧ ಲೇಖಕರು
18. ಡಾ. ಓಂ ಪ್ರಕಾಶ್ : ರಂಗೂನಿನ ವೈದ್ಯರು
19. ನನಿ-ಗೋಪಾಲ್ ದೇ : ರಂಗೂನಿನ ಒಬ್ಬ ಅಧಿಕಾರಿ
20. ಜಗದೀಶ್ ಎಂ.ಎ. : ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು
21. ಮೋಹನಸಿಂಹ ಸೇಂಗರ್ : ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು
22. ಬಂಕಿಮಚಂದ್ರ ಬ್ಯಾನರ್ಜಿ : ಪ್ರಸಿದ್ಧ ಕಲಾವಿದರು, ಭಾಗಲ್ಪುರ

| | | |
|---|---|---|
| 23. ಯಶಪಾಲ್ ಜೈನ್ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 24. ಭೀಮಸೇನ್ ತ್ಯಾಗಿ | : | ಪ್ರಸಿದ್ಧ ಲೇಖಕರು |
| 25. ವಿಶ್ವನಾಥ ಮುಖರ್ಜಿ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 26. ವಿಷ್ಣುಕಾಂತ ಶಾಸ್ತ್ರೀ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 27. ಕಾಲಿನಾಥ ರಾಯ್ | : | ಪ್ರಸಿದ್ಧ ಪತ್ರಕರ್ತರು |
| 28. ರತನ್‌ಲಾಲ್ ಜೋಶಿ | : | ಪ್ರಸಿದ್ಧ ಪತ್ರಕರ್ತರು |
| 29. ಪೃಥ್ವೀನಾಥ ಶಾಸ್ತ್ರೀ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 30. ಕೃಷ್ಣಾಚಾರ್ಯ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 31. ಗ್ರಂಥಪಾಲರು | : | ರಾಷ್ಟ್ರೀಯ ಗ್ರಂಥಾಲಯ, ಕಲ್ಕತ್ತಾ |
| 32. ಸುಧೀರ್ ಘೋಷ್ | : | ಪ್ರಸಿದ್ಧ ಪತ್ರಕರ್ತರು |
| 33. ಸ್ವಾಮಿ ಸುಂದರಾನಂದ | : | ಪ್ರಸಿದ್ಧ ಪ್ರವಾಸಿ ಮತ್ತು ಛಾಯಾಚಿತ್ರಗ್ರಾಹಕರು |
| 34. ಜೈನೇಂದ್ರಕುಮಾರ್ | : | ಪ್ರಸಿದ್ಧ ಸಾಹಿತಿಗಳು |
| 35. ರಾಮಚಂದ್ರ ಟಂಡನ್ | : | ಪ್ರಸಿದ್ಧ ಲೇಖಕರು ಮತ್ತು ಪತ್ರಕರ್ತರು |
| 36. ಅಮರ್ ಮಜೂಮದಾರ್ | : | ಪ್ರಸಿದ್ಧ ಪತ್ರಕರ್ತರು |
| 37. ಮಾಮಾ ವಾರೇರ್‌ಕರ್ | : | ಪ್ರಸಿದ್ಧ ಮರಾಠೀ ಸಾಹಿತಿಗಳು |
| 38. ಬ್ರಹ್ಮಾನಂದ | : | ಪ್ರಸಿದ್ಧ ಲೇಖಕರು ಮತ್ತು ಅಣ್ಣಂದಿರು |
| 39. ರಾಧಾಕೃಷ್ಣ | : | ಪ್ರಸಿದ್ಧ ಲೇಖಕರು |
| 40. ಸತ್ಯೇಂದ್ರ ನಾರಾಯಣ | : | ಪ್ರಸಿದ್ಧ ರಾಜಕೀಯ ಮುಖಂಡರು ಮತ್ತು ಪತ್ರಕರ್ತರು |
| 41. ಡಾ. ವಚನದೇವ ಕುಮಾರ್ | : | ಪ್ರಸಿದ್ಧ ಲೇಖಕರು |
| 42. ಅನು ಬೆನ್ | : | ಅರವಿಂದ ಆಶ್ರಮದ ಸಾಧಕಿ |
| 43. ಸತ್ಯನಾರಾಯಣ ಗೋಯೆಂಕಾ | : | ಪ್ರಸಿದ್ಧ ಲೇಖಕರು, ಬರ್ಮಾ |
| 44. ಡಾ. ರಾಮಶರನ್ ಅಗ್ರವಾಲ | : | ಪ್ರಸಿದ್ಧ ಲೇಖಕರು, ಬಿಕಾನೇರ್ |

## ಅನುಬಂಧ-3

# ಮಹಾತ್ಮ ಗಾಂಧೀಜಿ

“ಮಹಾತ್ಮ ಗಾಂಧೀಜಿಯವರು ಇಂದು ಸರ್ಕಾರದ ಸೆರೆಮನೆಯಲ್ಲಿದ್ದಾರೆ. ಭಾರತೀಯರಿಗೆ ಈ ಸುದ್ದಿ ಎಂಥ ಆಘಾತವನ್ನುಂಟು ಮಾಡುವಂಥದು ಏನು ಎಂಬುದನ್ನು ಭಾರತೀಯರು ಮಾತ್ರ ಅರ್ಥ ಮಾಡಿಕೊಳ್ಳಬಲ್ಲರು. ಇಷ್ಟಾಗಿಯೂ, ಇಡೀ ದೇಶ ಸ್ತಬ್ಧವಾಗಿಬಿಟ್ಟಿದೆ. ತೀವ್ರ ಸ್ವರೂಪದಲ್ಲಿ ದೇಶವ್ಯಾಪಿ ಹರತಾಳ ನಡೆಯಲಿಲ್ಲ. ಶೋಕದಿಂದ ಉನ್ಮತ್ತರಾದಂಥ ನರ-ನಾರಿಯರ ಸಮೂಹಗಳು ರಸ್ತೆಗಳಲ್ಲಿ ಪ್ರತಿಭಟನೆಯ ಮೆರವಣಿಗೆಗಳನ್ನು ನಡೆಸಲಿಲ್ಲ. ಲಕ್ಷಾಂತರ, ಕೋಟ್ಯಾಂತರ ಸಭೆ-ಸಮಿತಿಗಳಲ್ಲಿ ಹೃದಯದ ಆಳವಾದ ವ್ಯಥೆಯನ್ನು ತೋಡಿಕೊಳ್ಳಲು ಯಾರೂ ಮುಂದೆ ಬರಲಿಲ್ಲ. ಏನೂ ಆಗಿಯೇ ಇಲ್ಲವೇನೋ ಎಂಬಂತೆ-ನಿನ್ನೆ ಹೇಗಿತ್ತೋ ಇಂದೂ ಹಾಗೆಯೇ ಇದೆ. ಎಲ್ಲಿಯೂ ಒಂದು ಗುಲಗಂಜಿಯಷ್ಟೂ ಏರು-ಪೇರಾಗಿಲ್ಲ ಎಂಬಂತೆ - ಸಮುದ್ರ ತೀರದಿಂದ ಹಿಡಿದು ಹಿಮಾಲಯದ ತುದಿಯವರೆಗೆ ಎಲ್ಲರೂ ತೆಪ್ಪಗಿದ್ದು ಬಿಟ್ಟಿದ್ದಾರೆ. ಹೀಗೇಕೆ ಆಯಿತು ? ಇಷ್ಟು ದೊಡ್ಡ ಅಸಂಭವ ಘಟನೆ ಹೇಗೆ ಸಂಭವಿಸಿತು ? - ಎಂಬುದೇ ನನ್ನ ಪ್ರಶ್ನೆ. ದುರುದ್ದೇಶಪೂರಿತವಾಗಿರುವ ಆಂಗ್ಲೋ ಇಂಡಿಯನ್ ಪತ್ರಿಕೆಗಳು ಮನಸ್ಸಿಗೆ ಬಂದಂತೆ ವರದಿ ಮಾಡುತ್ತಿವೆ. ಆದರೆ, ಎಂದಿನಂತೆ ಆ ಸುಳ್ಳನ್ನು ಖಂಡಿಸಲು ಯಾರೂ ಮುಂದೆ ಬಂದಿಲ್ಲ. ಅವರ ಭಾರಾಕ್ರಾಂತ ಹೃದಯದ ಗಂಭೀರತಮ ವೇದನೆ ಇಂದು ತರ್ಕ-ವಿತರ್ಕಗಳಿಂದ ದೂರವಾಗಿಬಿಟ್ಟಿದೆಯೇನೋ ಎಂದೆನಿಸುತ್ತಿದೆ.

“ಸೆರೆಮನೆಗೆ ಹೋಗುವುದಕ್ಕೆ ಮೊದಲು ಮಹಾತ್ಮಾ ಗಾಂಧೀಜಿಯವರು, ತಮಗಾಗಿ ಎಲ್ಲಿಯೂ ಯಾವುದೇ ಬಗೆಯ ಹರತಾಳವನ್ನು ಆಚರಿಸಕೂಡದೆಂದೂ, ಯಾವುದೇ ಬಗೆಯ ಪ್ರತಿಭಟನೆಯ ಸಭೆಗಳನ್ನು ಏರ್ಪಡಿಸಕೂಡದೆಂದೂ, ಯಾವುದೇ ರೀತಿಯ ಉದ್ವೇಗವನ್ನಾಗಲೀ ಲೇಶಮಾತ್ರ ಕ್ಷೋಭೆಯನ್ನಾಗಲೀ ವ್ಯಕ್ತಪಡಿಸಕೂಡದೆಂದೂ ಒತ್ತಾಯ ಪೂರ್ವಕವಾಗಿ ಹೇಳಿಹೋಗಿದ್ದಾರೆ. ಅವರ ಈ ಅಪ್ಪಣೆ ತುಂಬ ಕಠಿಣವಾಗಿದೆ. ಆದರೂ, ಇಡೀ ರಾಷ್ಟ್ರ ಅವರ ಅಪ್ಪಣೆಯನ್ನು ತಲೆಯ ಮೇಲೆ ಹೊತ್ತು ನಡೆಸಿದೆ. ಈ ಕಂಠ ತುಂಬಿ ಬರುವಿಕೆಯನ್ನು ತಡೆದುಕೊಳ್ಳುವುದು, ಸದ್ದಿಲ್ಲದೆ ಸಂಯಮದಿಂದಿರುವುದು, ತನ್ನನ್ನು ತಾನು ಮೆಟ್ಟಿನಿಲ್ಲುವ ಕಠಿಣ ಪರೀಕ್ಷೆಯನ್ನು ಎದುರಿಸುವುದು ಎಷ್ಟು ದುಸ್ಸಾಧ್ಯವಾದ ಕೆಲಸವೆಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಇಷ್ಟಾಗಿಯೂ, ತಮ್ಮ ಈ ಆಸೆಯನ್ನು

ಬಹಿರಂಗಪಡಿಸಿ ಸೆರಮನೆಗೆ ಹೋಗುವಲ್ಲಿ ಅವರಿಗೆ ಯಾವ ವಿಘ್ನವೂ ಉಂಟಾಗಲಿಲ್ಲ. ಒಮ್ಮೆ-ವಿಪತ್ತಿಗೆ ಸಿಲುಕಿರುವ, ಬಡತನದಲ್ಲಿ ತೊಳಲುತ್ತಿರುವ ಶೋಷಣೆಗೆ ಒಳಗಾಗಿರುವ, ವಂಚಿತವಾಗಿರುವ ಜನಸಮುದಾಯದ ಮಹಾ ದುಃಖವನ್ನು ಆಳರಸರ ಕಣ್ಣ ಮುಂದೆ ಇರಿಸುವ ಸಲುವಾಗಿ, ಯುವರಾಜರನ್ನು ಸ್ವಾಗತಿಸಿ ಗೌರವಿಸುವ ಸಮಾರಂಭವನ್ನು ನಿಷೇಧಿಸಬೇಕೆಂದು ಅವರು ಆದೇಶ ನೀಡಿದ್ದ ಆ ದಿನ - ಆ ಅರ್ಥಹೀನ, ಆನಂದರಹಿತ ಸಮಾರಂಭದ ತೋರ್ಕೆಯಿಂದ ಎಲ್ಲ ರೀತಿಯಲ್ಲಿಯೂ ದೂರವಾಗಿರಬೇಕೆಂದು ಅವರು ಪ್ರತಿಯೊಬ್ಬ ಭೃತೀಯನಿಗೂ ಕರೆ ನೀಡಿದ್ದರು. ಅಂದೂ ಅವರಿಗೆ ಯಾವ ವಿಧವಾದ ವಿಘ್ನ ಒದಗಿರಲಿಲ್ಲ. ಇದರ ಪರಿಣಾಮವೆಂಬಂತೆ ರಾಜರೋಷದ ಅಗ್ನಿ ಎಲ್ಲೆಲ್ಲಿ ಹಾಗೂ ಎಲ್ಲಿಯವರೆಗೂ ಹರಡಿಕೊಳ್ಳಬಹುದು ಎಂಬುದು ಅವರಿಗೆ ತಿಳಿಯದೆ ಏನೂ ಇರಲಿಲ್ಲ. ಆದರೆ, ಯಾವುದೇ ಆಶಂಕೆ, ಯಾವುದೇ ಪ್ರಲೋಭನೆ ಅವರ ತೀರ್ಮಾನವನ್ನು ಬದಲಾಯಿಸಲಾರದೆ ಹೋಯಿತು. ಇದನ್ನೇ ಗುರಿಯಾಗಿಸಿ ಕೊಂಡು ದೇಶದ ಮೇಲೆ ಅದೆಷ್ಟು ಬಿರುಗಾಳಿಗಳು - ಚಂಡಮಾರುತಗಳು ಬೀಸಿಹೋದುವು; ಅದೆಷ್ಟು ಸಿಡಿಲು ಬಡಿಯಿತು; ಅದೆಷ್ಟು ದುಃಖಸಂಕಟಗಳು ಮೇಲೆರಗಿದುವು. ಆದರೆ, ಯಾವುದನ್ನು ಅವರು ಸತ್ಯ ಮತ್ತು ಕರ್ತವ್ಯವೆಂದು ನಿಶ್ಚಯಿಸಿಕೊಂಡಿದ್ದರೋ ಅದಕ್ಕೆ ಸಂಬಂಧಿಸಿದ ಆದೇಶವನ್ನು ಯುವರಾಜನ ಆಗಮನೋತ್ಸವದ ಕೊನೆಯ ದಿವಸದವರೆಗೂ ಹಿಂದಕ್ಕೆ ಪಡೆಯಲಿಲ್ಲ. ಅದಾದ ಬಳಿಕ ಅಕಸ್ಮಾತ್ತಾಗಿ ಒಂದು ದಿನ ಚೌರಿಚೌರಾದಲ್ಲಿ ಭಯಂಕರ ದುರ್ಘಟನೆಯೊಂದು ನಡೆಯಿತು. ನಿರುಪದ್ರವಿಗಳು ಎಂಬುದಾಗಿ ದೇಶವಾಸಿಗಳ ಬಗ್ಗೆ ಅವರು ಇರಿಸಿಕೊಂಡಿದ್ದ ನಂಬಿಕೆ ತತ್ತರಿಸಿತು. ಆಗ ಇಡೀ ಜಗತ್ತಿನ ಮುಂದೆ ನಿಷ್ಕಪಟ ಭಾವದಿಂದ ಹಾಗೂ ಮುಕ್ತಕಂಠದೊಡನೆ ಈ ಸಂಗತಿಯನ್ನು ಇರಿಸಲು ಅವರಿಗೆ ಸ್ವಲ್ಪವೂ ಇಬ್ಬಂದಿಯುಂಟಾಗಲಿಲ್ಲ. ತಮ್ಮ ತಪ್ಪು ಹಾಗೂ ದೋಷಗಳನ್ನು ಮತ್ತೆ ಮತ್ತೆ ಒಪ್ಪಿಕೊಳ್ಳುತ್ತ, ವಿರೋಧಿ ರಾಜಶಕ್ತಿಯೊಂದಿಗೆ ಕೂಡಲೇ ಸಂಭವಿಸಲಿದ್ದ ತೀವ್ರ ಹೋರಾಟದ ಎಲ್ಲ ಸಂಭವಗಳನ್ನೂ ತಮ್ಮ ಕೈಯಾರೆ ತಡೆದು ನಿಲ್ಲಿಸಿದರು. ಅವರು ಒಂದಿಷ್ಟು ಅಳುಕಲಿಲ್ಲ. ಸಿಂಧ್‌ನಿಂದ ಅಸ್ಸಾಮ್‌ನವರೆಗೆ ಹಾಗೂ ಹಿಮಾಲಯದಿಂದ ದಕ್ಷಿಣದ ತುದಿಯವರೆಗೆ ಎಲ್ಲ ಅಸಹಕಾರವಾದಿಗಳ ಮುಖ ಹತಾಶೆಯಿಂದ ಮತ್ತು ನಿಷ್ಫಲ ಕ್ರೋಧದಿಂದ ಕಪ್ಪಿಟ್ಟಿತು. ಕೂಡಲೇ ದೆಹಲಿಯಲ್ಲಿ ನಡೆದ ಅಖಿಲ ಭಾರತೀಯ ಕಾಂಗ್ರೆಸ್ ಕಾರ್ಯಕಾರಿಣಿ ಸಮಿತಿಯ ಸಭೆಯಲ್ಲಿ ಅವರ ಮೇಲೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅಪವಾದ ಬಿರುಗಾಳಿಯೇ ಬೀಸಿತು. ಆದರೆ ಅದೂ ಅವರನ್ನು ಅಲುಗಾಡಿಸಲಾರದೆ ಹೋಯಿತು. ಒಂದು ದಿನ ಅವರು ವಿನಯದಿಂದ, ಆದರೆ ತುಂಬ ಸಂಕ್ಷೇಪವಾಗಿ ಹೀಗೆಂದಿದ್ದರು: "ಐ ಹ್ಯಾವ್ ಲಾಸ್ಟ್ ಆಲ್ ಫಿಯರ್ ಆಫ್ ಮ್ಯಾನ್" - ಅಂದರೆ ಜಗದೀಶ್ವರನನ್ನು ಬಿಟ್ಟು ಬೇರಾವ ಮನುಷ್ಯನಿಗೂ ನಾನು ಹೆದರಿಕೊಳ್ಳುವುದಿಲ್ಲ. ಈ ಸತ್ಯವನ್ನು ಅವರು ಪ್ರತಿಕೂಲ ರಾಜಶಕ್ತಿಯ ಎದುರಿಗೆ ಮಾತ್ರವಲ್ಲದೆ, ತಮಗೆ ಸಂಪೂರ್ಣವಾಗಿ ಅನುಕೂಲಕರವಾಗಿದ್ದ ಅನುಯಾಯಿಗಳು ಮತ್ತು ಅಭಿಮಾನಿಗಳ ಮುಂದೆಯೂ

ಸ್ಥಾಪಿಸಿ ತೋರಿಸಿದರು.

"ಆದರೆ, ಇಷ್ಟೊಂದು ದೊಡ್ಡ ಶಾಂತ ಶಕ್ತಿಯ ಹಾಗೂ ಶುದ್ಧ ಸತ್ಯನಿಷ್ಠೆಯ ಹಿರಿಮೆಯನ್ನು ಧರ್ಮಹೀನ ಉದ್ದಂಡ ರಾಜಶಕ್ತಿ ಅರ್ಥ ಮಾಡಿಕೊಳ್ಳಲಾರದೆ ಹೋಯಿತು.... (ಅನನ್ಯ ಭಾವದಿಂದ ಸತ್ಯನಿಷ್ಠರಾಗಿರುವಂಥ, ಕಾಯೇನವಾಚಾ ಮನಸಾ ಹಿಂಸೆಯನ್ನು ತ್ಯಜಿಸಿರುವಂಥ, ಸ್ವಾರ್ಥದ ಲವಲೇಶವೂ ಎಲ್ಲಿಯೂ ಇಲ್ಲದಿರುವಂಥ, ಆರ್ತರಿಗಾಗಿ ಪೀಡಿತರಿಗಾಗಿ ಸಂನ್ಯಾಸಿಯಾಗಿರುವಂಥ ವ್ಯಕ್ತಿಯನ್ನೂ ಯಾವುದೋ ಕಾನೂನಿಗೆ ವಿರುದ್ಧವಾಗಿ ಅಪರಾಧವೆಸಗಿದ ಆರೋಪಕ್ಕಾಗಿ ಸೆರಮನೆಗೆ ದೂಡುವಂಥ ಕಾನೂನು ಈ ನಿರ್ಭಾಗ್ಯ ದೇಶದಲ್ಲಿದೆ!) ಇಂದು ದೇಶದ ಹೊರ ದೇಶದ ತಲೆಯ ಮೇಲೆ ಬಿದ್ದಿದೆ. 'ಎಂದೂ ಯಾರ ಕೈಯಿಂದಲೂ ದಾನವೆಂಬಂತೆ ಸ್ವಾತಂತ್ರ್ಯವನ್ನು ಸ್ವೀಕರಿಸಬಾರದು, ಸ್ವೀಕರಿಸಿದರೂ ಅದು ನಿಲ್ಲುವುದಿಲ್ಲ, ಹೃದಯದ ರಕ್ತವನ್ನು ಬಸಿದು ಅದನ್ನು ಪಡೆದುಕೊಳ್ಳಬೇಕು' - ಅವರು ಮತ್ತೆ ಮತ್ತೆ ಹೇಳುತ್ತಿದ್ದ ಈ ಮಾತನ್ನು ನಡೆಸಿಕೊಡುವ ಅವರ ಗೈರುಹಾಜರಿಯಲ್ಲಿ ನಮ್ಮನ್ನು ಸಾರ್ಥಕಗೊಳಿಸಿಕೊಳ್ಳುವಂಥ ಒಂದು ಮಹಾ ಸದವಕಾಶ ಎಲ್ಲ ರೀತಿಯಿಂದಲೂ ಇಂದು ನಮಗೆ ಒದಗಿಬಂದಿದೆ... ಇನ್ನೊಂದು ಮಹಾಸತ್ಯವನ್ನು ಅವರು ಸ್ಪಷ್ಟಪಡಿಸಿದ್ದಾರೆ. ಯಾವುದೇ ದೇಶ ಸ್ವತಂತ್ರ, ಸ್ವಸ್ಥ ಹಾಗೂ ಸಹಜ ಸ್ಥಿತಿಯಲ್ಲಿ ಇರುವಾಗ ದೇಶದ ಆತ್ಮಬೋಧೆಯ ಸಮಸ್ಯೆಯೂ ತುಂಬ ಜಟಿಲವಾಗಿರುವುದಿಲ್ಲ ಹಾಗೂ ಸ್ವದೇಶಪ್ರೇಮದ ಪರೀಕ್ಷೆಯಲ್ಲೂ ತುಂಬ ಕಠಿಣ ಸ್ವರೂಪದ್ದಾಗಿರುವುದಿಲ್ಲ. ಆಗ ಆ ನಾಡಿನ ನೇತೃತ್ವವನ್ನು ವಹಿಸಲು ಯೋಗ್ಯರಾಗಿರುವಂಥ ವ್ಯಕ್ತಿಗಳನ್ನು ತುಂಬ ಎಚ್ಚರಿಕೆಯಿಂದ ಆಯದೆಯೂ ಬಹುಶಃ ಕಾರ್ಯನಿರ್ವಹಿಸಬಹುದು. ಆದರೆ, ಆ ದೇಶ ಎಂದಾದರೂ ಪೀಡಿತವೂ, ರೋಗಿಷ್ಠವೂ, ಮರಣಾಸನ್ನವೂ ಆಗಿಬಿಟ್ಟರೆ, ಆಗ ಈ ಬಗೆಯ ಸಡಿಲವಾದ ಕರ್ತವ್ಯ ನಿರ್ವಹಣೆಯ ಅವಕಾಶ ಮತ್ತೆ ದೊರೆಯುವುದಿಲ್ಲ. ಆಗ ಇಂಥ ದುಃಸ್ಥಿತಿಯಿಂದ ದೇಶವನ್ನು ದಾಟಿಸಿ ಕರೆದೊಯ್ಯುವ ಹೊಣೆಯನ್ನು ಹೊತ್ತಂಥ ವ್ಯಕ್ತಿಗಳು ಎಲ್ಲ ದೇಶಗಳ ಎಲ್ಲ ಜನರ ಕಣ್ಣು ಮುಂದೆ ಪರಾರ್ಥಪರತೆಯ ಅಗ್ನಿಪರೀಕ್ಷೆಯ ಮೂಲಕ ಹಾದುಹೋಗಬೇಕಾಗುತ್ತದೆ - ಮಾತುಗಳಿಂದಲ್ಲ, ಕಾರ್ಯದಿಂದ, ಜಾಣತನದ ತಂತ್ರ ಕುತಂತ್ರಗಳಿಂದಲ್ಲ, ಸರಳವಾದ ಹಾಗೂ ನೇರವಾದ ಮಾರ್ಗಗಳಿಂದ, ಸ್ವಾರ್ಥದ ಹೊರೆಯನ್ನು ಹೊತ್ತುಕೊಂಡಲ್ಲ, ಎಲ್ಲ ಚಿಂತೆ, ಎಲ್ಲ ಉದ್ವೇಗ ಹಾಗೂ ಎಲ್ಲ ಸ್ವಾರ್ಥಗಳನ್ನೂ ಜನ್ಮ ಭೂಮಿಯ ಚರಣಗಳಲ್ಲಿ ಸಂಪೂರ್ಣವಾಗಿ ಬಲಿದಾನವಾಗಿಸುವುದರ ಮೂಲಕ. ಇದಕ್ಕಿಂತ ಬೇರೆಯಾದ ಯಾವ ವಿಧಾನವನ್ನೂ ನಂಬಲಾಗುವುದಿಲ್ಲ.

"ಹಿಂದಿದ ಭಾರತದ ಸಚಿವರಾಗಿದ್ದ ಮಾಂಟೆಗೋ ಸಾಹೇಬರು ಆ ಸಲ ಭಾರತಕ್ಕೆ ಬಂದಿದ್ದಾಗ, ಈ ಬಂಗಾಳದ ಒಬ್ಬ ವಿಶ್ವವಿಖ್ಯಾತ ವ್ಯಕ್ತಿಯೇ ಅವರಿಗೊಂದು ಸುದೀರ್ಘ ಪತ್ರವನ್ನು ಬರೆದಿದ್ದರು ಹಾಗೂ ಅದಕ್ಕೆ ಸವಿಸ್ತಾರವಾದ ಉತ್ತರವನ್ನು ಪಡೆದಿದ್ದರು. ಮೊದಲಿನಿಂದ ಕೊನೆಯವರೆಗೂ ಒಳ್ಳೊಳ್ಳೆಯ ನಿಸ್ಸಾರವಾದ ಮಾತುಗಳ ಹೊರೆಯಿಂದ ತುಂಬಿದ್ದ ಆ ಭಾರೀ ಕಾಗದದ ಕುತಂತ್ರದ ಹೊರೆತು

ಬೇರೇನೂ ನನಗೆ ನೆನಪಿಲ್ಲ. ಇಂಥ ಮಾತುಗಳು ನೆನಪಿನಲ್ಲಿ ಉಳಿಯುವಂಥ ವಲ್ಲವೆಂದೂ ಹೇಳುತ್ತಾರೆ. ಆದರೆ, ಆ ಪತ್ರದ ಸ್ಥೂಲ ಆಶಯವೇನೆಂಬುದು ನನಗೆ ಚೆನ್ನಾಗಿ ನೆನಪಿದೆ. ಅವರು ಮತ್ತೆ ಮತ್ತೆ ಅದೇ ವಿಶ್ವಾಸ-ಅವಿಶ್ವಾಸದ ಚರ್ಚೆಯನ್ನೇ ಆ ನಾಲ್ಕು ಪುಟಗಳ ಪತ್ರದಲ್ಲಿ ತುಂಬಿ, 'ನಂಬಿಕೆ ಇಡದೆ ಹೋದರೆ ನಂಬಿಕೆ ದೊರೆಯುವುದಿಲ್ಲ' ಎಂಬ ಮಾತನ್ನು ಆ ಸಾಹೇಬನಿಗೆ ಮನವರಿಕೆ ಮಾಡಿಕೊಡ ಬಯಸಿದ್ದರು. ಆ ವಿದೇಶಿ ಸಾಹೇಬನಿಗೆ ಈ ಭಾರತ ಭೂಮಿಯನ್ನು ಬಿಟ್ಟು ಬೇರೆಲ್ಲಿಯೂ ಇಷ್ಟು ನೂತನವಾದ ತತ್ವದ ಮಾತು ಕೇಳಲೂ ಸಿಕ್ಕಲಾರದು ಎಂಬಂತಿತ್ತು ಆ ಒಕ್ಕಣೆ. ಆ ಸಾಹೇಬನ ವಯಸ್ಸು ಇನ್ನೂ ಚಿಕ್ಕದಾಗಿದ್ದರೂ ಅವನು ಈ ಮಾತನ್ನು ಇದೇ ಮೊದಲ ಬಾರಿಗೆ ಕೇಳಿರಲಿಲ್ಲ ವೆಂದೂ, ಅವನು ಪ್ರಾಥಮಿಕ ಅರಿವನ್ನು ಹೊತ್ತು ಇಲ್ಲಿಂದ ತೆರಳಲಿಲ್ಲವೆಂದೂ ನಾನು ನಂಬಿದ್ದೇನೆ. ಆದ್ದರಿಂದಲೇ ಆ ಸಾಹೇಬ ಕಾಗದದ ಪುಟಗಳನ್ನು ಮಾತ್ರವೇ ತುಂಬುವಂಥ ಹಾಗೂ ವಾಸ್ತವವಾಗಿ ಯಾವುದೇ ಅರ್ಥವನ್ನು ಹೊಂದಿರದಂಥ ಎಲ್ಲ ಮಾತುಗಳನ್ನೂ ಭಾಷೆಯನ್ನು ಬಳಸಬೇಕಾಗಿ ಬಂತು.

"…. ಮಹಾತ್ಮ ಗಾಂಧೀಜಿಯವರು 'ರಾಜಶಕ್ತಿ'ಯ ಹೃದಯವನ್ನು ಒತ್ತಿ ಹೇಳಿದ್ದರು. ಹೊಡೆದಾಟ-ಬಡಿದಾಟ, ಕೊಲೆ-ಹತ್ಯೆ, ಅಸ್ತ್ರ-ಶಸ್ತ್ರಗಳು ಅಥವಾ ತೋಳ್ಬಲದ ಪ್ರದರ್ಶನದ ಕಡೆಗೆ ಅವರು ಹೋಗಲೇ ಇಲ್ಲ; ಅವರ ಎಲ್ಲ ಅರಿಕೆ-ನಿವೇದನೆಗಳು, ಆರೋಪ-ಆಕ್ಷೇಪಗಳೆಲ್ಲ ಈ ಆತ್ಮವನ್ನೇ ಗುರಿಯಾಗಿರಿಸಿ ಕೊಂಡಿದ್ದುವು. ರಾಜಶಕ್ತಿಯ ವಿಷಯದಲ್ಲಿ ಹೃದಯ ಅಥವಾ ಆತ್ಮದ ಯಾವುದೇ ಜಂಜಾಟಕ್ಕೆ ಆಸ್ಪದವಿಲ್ಲದೆಯೇ ಇರಬಹುದು. ಆದರೆ, ಈ ಶಕ್ತಿಯ ಸಂಚಾಲಕರಾಗಿರುವಂಥವರಿಗೂ ಬಿಡುಗಡೆ ಎಂಬುದು ಇರುವುದಿಲ್ಲ. ಮೇಲಾಗಿ, ಸಹಾನುಭೂತಿಯೇ ಜೀವಿಗಳ ಎಲ್ಲ ಸುಖ-ದುಃಖಗಳಿಗೆ, ಎಲ್ಲ ಜ್ಞಾನಗಳಿಗೆ, ಎಲ್ಲ ಕರ್ಮಗಳಿಗೆ ಆಧಾರವಾಗಿದ್ದುದರಿಂದ, ಅದನ್ನು ಎಚ್ಚರಗೊಳಿಸುವುದಕ್ಕಾಗಿ ಮಹಾತ್ಮ ಗಾಂಧೀಜಿಯವರು ತಮ್ಮ ಪ್ರಾಣವನ್ನೇ ಪಣವಾಗಿ ಒಡ್ಡಿ ಎಲ್ಲ ಪ್ರಯತ್ನಗಳನ್ನು ನಡೆಸಿದರು. ಇಂದು ಸ್ವಾರ್ಥ ಮತ್ತು ಅನಾಚಾರಗಳಿಂದ ಈ ಸಹಾನುಭೂತಿ ಅದೆಷ್ಟೇ ಮಲಿನವಾಗಿರಲಿ, ಅದೆಷ್ಟೇ ಮುಚ್ಚಿಹೋಗಿರಲಿ ಒಂದಲ್ಲ ಒಂದು ದಿನ ನಾನೇ ಅದನ್ನು ನಿರ್ಮಲವಾಗಿಸಬಲ್ಲೆ, ಮುಕ್ತಗೊಳಿಸಬಲ್ಲೆ ಎಂಬ ಅವರ ದೃಢವಿಶ್ವಾಸ ಕ್ಷಣಮಾತ್ರವೂ ಸಡಿಲಗೊಳ್ಳಲಿಲ್ಲ. ಆದರೆ, ಲೋಭ ಮತ್ತು ಮೋಹಗಳಿಂದ ಸ್ವಾರ್ಥವನ್ನು, ಕ್ರೋಧ ಮತ್ತು ವಿದ್ವೇಷಗಳಿಂದ ಹಿಂಸೆಯನ್ನು ನಿವೃತ್ತಗೊಳಿಸ ಲಾಗುವುದಿಲ್ಲ ಅಥವಾ ದೂರವಿಡಲಾಗುವುದಿಲ್ಲ ಎಂಬುದು ಗಾಂಧೀಜಿಯವರಿಗೆ ಗೊತ್ತಿತ್ತು. ಆದ್ದರಿಂದಲೇ, ದುಃಖವನ್ನುಂಟು ಮಾಡಬಲ್ಲ, ದುಃಖವನ್ನು ಸಹಿಸುವುದಕ್ಕಾಗಿ, ಕೊಲ ಮಾಡುವುದಕ್ಕಲ್ಲ, ಅಕುಂಠಿತ ಚಿತ್ತದಿಂದ ತಮ್ಮನ್ನೇ ಬಲಿಗೊಡುವುದಕ್ಕಾಗಿ ಅವರು ಈ ಧರ್ಮಯುದ್ಧಕ್ಕೆ ಇಳಿದಿದ್ದರು. ಇದೇ ಅವರು ಕೈಗೊಂಡಿದ್ದ ತಪಸ್ಸು. ಇದನ್ನೇ ಅವರು ವೀರನ ಧರ್ಮವೆಂದು ಘೋಷಿಸಿ, ನಿಷ್ಕಪಟ ಭಾವದಿಂದ ಇದರ ಪ್ರಚಾರವನ್ನು ಕೈಗೊಂಡಿದ್ದರು. ಇಡೀ ಭೂಮಂಡಲದಲ್ಲಿ ಇಂದು ಉದ್ಧತ ಅವಿಚಾರದ ಬೀಸುಗಲ್ಲಿಗೆ ಸಿಕ್ಕಿಕೊಂಡು ಹಗಲು-ರಾತ್ರಿ ಅರೆಯಲ್ಪಟ್ಟು

ಮಾನವ ಸಾಯುತ್ತಿದ್ದಾನೆ. ಇದಕ್ಕೆ ಇರುವ ಏಕೈಕ ಪರಿಹಾರ ಗುಂಡು-ಬಂದೂಕಗಳಲ್ಲಿ, ತೋಪು-ಸಿಡಿಮದ್ದುಗಳಲ್ಲಿ ಇಲ್ಲ; ಅದಿರುವುದು ಮಾನವನ ಪ್ರೀತಿಯಲ್ಲಿ,' ಅವನ ಆತ್ಮದ ಉಪಲಬ್ಧಿಯಲ್ಲಿ. ಈ ಪರಮ ಸತ್ಯವನ್ನು ಅವರು ಮನಃಪೂರ್ವಕವಾಗಿ ನಂಬಿದ್ದರು. ಆದ್ದರಿಂದಲೇ, ಅಹಿಂಸಾವ್ರತವನ್ನು ಕ್ಷಣಮಾತ್ರದ ತಂತ್ರವೆಂದು ಭಾವಿಸದೆ, ಬಾಳಿನ ಏಕಮಾತ್ರ ಶಾಶ್ವತ ಧರ್ಮವೆಂದು ಭಾವಿಸಿ ಅಂಗೀಕರಿಸಿದ್ದರು ಹಾಗೂ ಈ ಭಾರತೀಯ ಆಂದೋಳನವನ್ನು ಅವರು ರಾಜಕೀಯ ಆಂದೋಳನವೆಂದು ಭಾವಿಸದೆ ಆಧ್ಯಾತ್ಮಿಕ ಆಂದೋಳನವೆಂದು ಭಾವಿಸಿ, ಅದನ್ನು ಮನವರಿಕೆ ಮಾಡಿಕೊಡುವ ಪ್ರಯತ್ನದ ಅಂಗವಾಗಿ, ಪ್ರತಿದಿನವೂ ಪ್ರಾಣವನ್ನೇ ಪಣವಾಗಿ ಒಡ್ಡಿ ದುಡಿದರು. ಎದುರಾಳಿಗಳು ಲೇವಡಿ ಮಾಡಿದರು; ಸ್ವಪಕ್ಷದವರೇ ಅವಿಶ್ವಾಸವನ್ನು ವ್ಯಕ್ತಪಡಿಸಿದರು. ಆದರೆ, ಯಾವುದೂ ಅವರನ್ನು ವಿಭ್ರಾಂತರನ್ನಾಗಿಸಲಿಲ್ಲ. ಆಂಗ್ಲರ ರಾಜಶಕ್ತಿಯ ವಿಷಯದಲ್ಲಿ ಗಾಂಧೀಜಿಯವರಿಗೆ ನಂಬಿಕೆ ಉಳಿದಿರಲಿಲ್ಲ. ಆದರೆ, ಮನುಷ್ಯರಾಗಿದ್ದ ಆಂಗ್ಲರ ಆತ್ಮೋಪಲಬ್ಧಿಯ ವಿಷಯದಲ್ಲಿ ಅವರ ನಂಬಿಕೆ ಇಂದೂ ಅಂದಿನಂತೆಯೇ ಸ್ಥಿರವಾಗಿದೆ, ದೃಢವಾಗಿದೆ.

"ಆದರೆ, ಈ ಅಚಂಚಲ ನಿಷ್ಕಂಪ ದೀಪಶಿಖೆಯ ಮಹಿಮೆಯನ್ನು ಅರ್ಥ ಮಾಡಿಕೊಳ್ಳುವುದು ಬಹುತೇಕ ಜನರಿಗೆ ದುಸ್ಸಾಧ್ಯವೇ ಆಗಿದೆ. ಆದ್ದರಿಂದಲೇ ಬಿಪಿನ್ ಬಾಬೂ ಅವರು (ಸುಪ್ರಸಿದ್ಧರಾದ ಬಿಪಿನ್ ಚಂದ್ರಪಾಲ್ ಅವರು) **'I would decline to gain India's freedom at the cost of Non-violence, meaning that India will ever gain freedom without non-violence'** - ಅಂದರೆ ಅಹಿಂಸೆಯನ್ನು ಬಲಿಗೊಟ್ಟು ಭಾರತದ ಸ್ವಾತಂತ್ರ್ಯವನ್ನು ಗಳಿಸಲು ನಾನು ನಿರಾಕರಿಸುತ್ತೇನೆ. ಹೀಗೆಂದರೆ, ಅಹಿಂಸೆಯ ವಿಧಾನದಿಂದಲ್ಲದೆ ಭಾರತ ಬೇರಾವ ವಿಧಾನದಿಂದಲೂ ಸ್ವಾತಂತ್ರ್ಯವನ್ನು ಗಳಿಸುವುದಿಲ್ಲ ಎಂದು ಅರ್ಥ - ಎಂಬ ಗಾಂಧೀಜಿಯವರ ಹೇಳಿಕೆಯನ್ನು ಉದ್ಧರಿಸಿ, ಗಾಂಧೀಜಿಯವರ ಗುರಿ ಸತ್ಯಾಗ್ರಹವೆ, ಭಾರತದ ಸ್ವಾತಂತ್ರ್ಯ ಅಥವಾ ಸ್ವರಾಜ್ಯ ಪ್ರಾಪ್ತಿ ಅದರ ಮೂಲ ಗುರಿಯಲ್ಲವಾದರೂ ಆ ಗುರಿಯ ಒಂದು ಅಂಗವಾದರೂ ಆಗಬಹುದೆ ಎಂಬುದನ್ನು ತಿಳಿಯಬಯಸಿದಾಗ, ಅವರಿಗೂ ಈ ದೀಪಶಿಖೆಯ ಸ್ವರೂಪ ಸ್ಪಷ್ಟವಾಗಿ ಅರಿವಾಗಿರಲಿಲ್ಲ. ಎರಡನೆಯದಾಗಿ, ಸಂಪೂರ್ಣ ಸ್ವಾತಂತ್ರ್ಯದ ವಿಷಯದಲ್ಲಿ ಕೈಹಾಕದೆ ಹೋದರೂ, ಮನುಷ್ಯನ ಪೂರ್ಣ ಸ್ವಾತಂತ್ರ್ಯ ಎಂಬುದು ಎಂಥ ಮಹತ್ತರವಾದ ಸ್ವರಾಜ್ಯ ಸಾಧನೆಯೇ ಆಗುತ್ತದೆ ಎಂಬುದನ್ನು ಅವರೂ ಅರ್ಥಮಾಡಿಕೊಳ್ಳಲಾರದೆ ಹೋದರು. ಸತ್ಯಕ್ಕೆ ಅಂಗಪ್ರತ್ಯಂಗಗಳಾಗಲೀ, ಬೇರು ಮತ್ತು ಕೊಂಬೆಗಳಾಗಲೀ ಇರುವುದಿಲ್ಲ. ಅದೊಂದು ಸಮಗ್ರವಾದ ವಸ್ತು ಹಾಗೂ ಸತ್ಯವೇ ಸತ್ಯದ ಶೇಷ. ಈ ಅಭೀಪ್ಸೆಯಲ್ಲಿಯೇ ಮಾನವ ಸಮುದಾಯದ ಎಲ್ಲ ಬಗೆಯ ಹಾಗೂ ಸರ್ವಶ್ರೇಷ್ಠವಾದ ಲಕ್ಷ್ಯದ ಪರಿಣತಿ ಅಡಗಿರುತ್ತದೆ. ಸತ್ಯದ ಮುಖಾಂತರವೇ ಅವರು ದೇಶದ ಸ್ವಾತಂತ್ರ್ಯ ಅಥವಾ ಸ್ವರಾಜ್ಯವನ್ನು ಪಡೆಯಬಯಸಿದ್ದರೇ ಹೊರತು ಕೊಲೆ-ಹತ್ಯೆಗಳ ಮೂಲಕವಲ್ಲ. ತಾವೂ ಧನ್ಯವಾಗುವ ರೀತಿಯಲ್ಲಿ ಅದನ್ನು ಪಡೆಯಬಯಸಿದ್ದರು. ಅವರ ಕ್ಷುಬ್ಧಚಿತ್ತ ಬಯಸಿದ್ದು ಜಿಪುಣನ ದಾನವನ್ನಲ್ಲ,

ದಾತಾರನ ಪ್ರಸನ್ನ ಹೃದಯದ ಸಾರ್ಥಕ ದಾನವನ್ನು, ಮೇಲೆ ಬಿದ್ದು ಕಸಿದುಕೊಂಡ ದಾನವ ನಿದರ್ಶನಗಳು ಲೋಕದಲ್ಲಿ ಎಷ್ಟೋ ಆಗಿಹೋಗಿವೆ. ಆದರೆ, ಅವುಗಳಲ್ಲಿ ಯಾವುದೂ ಸ್ಥಾಯಿಯಾಗಲಾರದೆ ಹೋಯಿತು - ದುಃಖ, ಕಷ್ಟ ಮತ್ತು ವೇದನೆಯ ಹೊರೆ ಹೆಚ್ಚುತ್ತಲೇ ನಡೆದಿದೆ, ಎಲ್ಲಿಯೂ ಒಂದು ಎಳ್ಳು ಕಾಳಿನಷ್ಟೂ ಕಡಿಮೆಯಾಗಿಲ್ಲ. ಆದ್ದರಿಂದಲೇ ಅವರು ಆ ಎಲ್ಲ ಹಳೆಯ, ಪರಿಚಿತ ಹಾಗೂ ಕ್ಷಣಿಕವಾದ ಅಸತ್ಯದ ವಿಧಾನಗಳಿಗೆ ಬೆನ್ನು ತಿರುಗಿಸಿ ಸತ್ಯಾಗ್ರಹಿಯಾಗಿ ಪರಿಣಮಿಸಿದ್ದರು; ಮಾನವ ಆತ್ಮದ ಸರ್ವಶ್ರೇಷ್ಠ ದಾನದ ಹೊರತು ಬೇರಾವುದನ್ನು ಕೈಚಾಚಿ ಸ್ವೀಕರಿಸುವುದಿಲ್ಲ ಎಂದು ಅವರು ಪ್ರತಿಜ್ಞೆ ಮಾಡಿದ್ದರು.

"ಸಂಪೂರ್ಣ ಅಂತಃಕರಣದಿಂದ ಸ್ವಾತಂತ್ರ್ಯವನ್ನು ಮತ್ತು ಸ್ವರಾಜ್ಯವನ್ನು ಪಡೆಯಬಯಸಿ, ಅವರು ಆಂಗ್ಲರ ಆಡಳಿತದೊಡನೆ ಎಲ್ಲ ಬಗೆಯ ಸಂಪರ್ಕವನ್ನೂ ಕಡಿದುಕೊಳ್ಳಲು ಸಿದ್ಧರಾಗದೆ ಹೋದಾಗ, ಅನೇಕ ಕಹಿಯಾದ ಮಾತುಗಳನ್ನು ಬೈಗುಳಗಳನ್ನು ಅವರು ಕೇಳಬೇಕಾಗಿ ಬಂತು. ಆಂಗ್ಲರು ಇಲ್ಲಿ ನಿರುಪದ್ರವ ವಿಧಾನಗಳಿಂದಲೇ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಲಿಲ್ಲ ಹಾಗೂ ಅದಕ್ಕಾಗಿ ರಕ್ತಪಾತ ಮಾಡಲು ಹಿಂದೆಗೆಯಲಿಲ್ಲ, ಹೀಗಿರುವಾಗ ನಾನು ಮಾತ್ರವೇ ನಿರುಪದ್ರವ ವಾದಿಗಳಾಗಿರುತ್ತೇವೆಂಬ ಭಾರಿ ಜವಾಬ್ದಾರಿಯನ್ನು ನಾವೇಕೆ ಹೊರಬೇಕು ಎಂಬುದು ಅನೇಕ ಕಟೂಕ್ತಿಗಳ ನಡುವೆ ಎದ್ದು ಕಾಣುತ್ತಿದ್ದಂಥ ತರ್ಕವಾಗಿತ್ತು.

"ಆದರೆ, ಗಾಂಧೀಜಿಯವರು ಇದರತ್ತ ಕಿವಿಗೊಡಲಿಲ್ಲ. ಲೋಕದಲ್ಲಿ ಯಾವುದೆಲ್ಲ ಅನ್ಯಾಯದ ವಿಧಾನದಿಂದ, ಅಧರ್ಮದ ಮಾರ್ಗದಿಂದ ನೆಲೆಗೊಂಡಿದೆಯೋ ಅದನ್ನೆಲ್ಲ ಯಾವುದೇ ರೀತಿಯಿಂದಲಾದರೂ ತೊಡೆದು ಹಾಕುವುದೇ ಧರ್ಮವೆಂಬ ತರ್ಕದಲ್ಲಿ ಸತ್ಯವಿಲ್ಲ ಎಂಬುದು ಅವರಿಗೆ ಗೊತ್ತಿತ್ತು. ಆಂಗ್ಲರ ಆಡಳಿತವನ್ನು ಒದ್ದು ಹೊರಹಾಕುವುದೇ ಸರ್ವಶ್ರೇಷ್ಠ ಧರ್ಮವಾಗಿದ್ದ ದಿವಸ ನಾವು ಅವರನ್ನು ತಡೆಯದೆ ಹೋದೆವು, ಆದ್ದರಿಂದ, ಇಂದು ಯಾವುದೇ ವಿಧಾನ ಅಥವಾ ಮಾರ್ಗದಿಂದ ಅದನ್ನು ನಾಶಮಾಡಿಬಿಡುವುದೇ ನಾಡಿನ ಏಕೈಕ ಧರ್ಮವಾಗಿದೆ ಎಂಬ ಮಾತನ್ನು ಯಾವುದೇ ರೀತಿಯಲ್ಲಿ ಒತ್ತಿ ಹೇಳುವುದು ಸಾಧ್ಯವಿಲ್ಲ. ಅನಪೇಕ್ಷಣೀಯವಾದ ಜಾರಜ ಸಂತಾನ ಜನ್ಮ ತಳೆಯುವುದೇ ಅಧರ್ಮದ ಮಾರ್ಗದ ಮೂಲಕ; ಆದ್ದರಿಂದ ಅದನ್ನು ಕೊಲ್ಲುವುದರ ಮೂಲಕವೇ ಧರ್ಮಭ್ರಷ್ಟತೆಗೆ ಪ್ರಾಯಶ್ಚಿತ್ತವನ್ನೆಸಗುವುದು ಸಾಧ್ಯ ಎಂದು ಹೇಳುವುದು ಸತ್ಯವಾಗಲಾರದು."

# ಅನುಬಂಧ-4

## ಶರತ್‌ಚಂದ್ರ ಚಟ್ಟೋಪಾಧ್ಯಾಯರ ಉಯಿಲಿನ ಪ್ರತಿ

This is the last will and testament of me Sarat Chandra Chatterji of No. 24, Aswini Datta Road, within the municipal limits of Calcutta now lying at the Park Nursing Home at Victoria Terrace in the town of Calcutta. I revoke all testamentary dispositions if any heretofore made by me.

I give devise and bequeath all my estate and effects to my wife Smt. Hiranmayee Debi of No. 24, Aswini Datta Road to be held and enjoyed by her for the term of her natural life subject nevertheless to the right of my brother to live in the premises, No. 24, Aswini Datta Road (Calcutta) with his family as he is at present doing and after my death and my wife's death my brother Prakash's son or sons, who shall survive her shall be the absolute owner.

Not withstanding anything here in before contained my moneys in the Imperial Bank shall be spent only for purpose of the marriage of my brother's daughter and if there shall be any surplus the same shall be spent for the use and benefit of my brother's children or of any of them....

In witness whereof I have set my hand to this as my last will and testament this the 11th day of January 1938.

Signed by the above named in our presence who at his request and in his presence and in the presence of each other have signed as attesting witnesses.

Sd/- N.C. Chundar, Solicitor, Calcutta.

Sd/- Umaprasad Mookerjee, Advocate, Calcutta High Court

11th January 1938. Sd/- Sarat Chandra Chatterji

---

Laser typeset at Laser Line Graphics, Bangalore and Printed at Tarang Printers, New Delhi.